# ಶ್ರೀಮದ್ಭಗವದ್ಗೀತಾ

ಹಾಗೂ

# ಶ್ರೀ ಮಲ್ಲಿಕಾರ್ಜುನ ವಚನಾಮೃತ




ಶ್ರೀ ಸಿದ್ಧೇಶ್ವರ

ಕ್ರಯ: ೨೫ ರೂ

# ಮೊದಲ ಮಾತು

## ಹಿರಿಮೆ

ಭಗವದ್ಗೀತೆ ವಿಶ್ವಮಾನ್ಯವಾದ ಪವಿತ್ರಗ್ರಂಥ. ಇದನ್ನು ಜಾಗತಿಕ ಸಂತ ಮಹಾತ್ಮರು 'ಅನಾಸಕ್ತಿಯೋಗ' 'ಸಮತಾಶಾಸ್ತ್ರ' 'ಬ್ರಹ್ಮವಿದ್ಯಾ' ಮುಂತಾದ ನಾಮಗಳಿಂದ ಹೃದಯ ತುಂಬಿ ವರ್ಣಿಸಿದ್ದಾರೆ. ಪ್ರಸ್ಥಾನತ್ರಯದಲ್ಲಿ ಶಿಖಾ ಮಣಿಯಂತಿರುವ ಈ ಹೊತ್ತಿಗೆಯು ಮಾನವಧರ್ಮದರ್ಶಿ, ವೇದ ವೇದಾಂತ ಗಳ ಸಾರ ಸರ್ವಸ್ವ! ಅನುಭವದ ನವನೀತ!! ಮಾನವ ನಿರ್ಮಿತವಾದ ವರ್ಣ ಆಶ್ರಮ ಮತ ಧರ್ಮ ಮುಂತಾದವುಗಳ ಕಕ್ಷೆಗೆ ಸಿಲುಕಿರದ ಈ ಗೀತೆ ಆತ್ಮಾ ನಂದದ ಚಿರಂತನ ಭಾಂಡಾರ, ಅನುಭಾವರಸವಾರಿಧಿ. ಇದರ ಶಬ್ದ ಶಬ್ದ ದಲ್ಲಿಯೂ ಪ್ರಶಾಂತಿಪರಿಮಳವಿದೆ; ಪ್ರತಿ ಮಂತ್ರದಲ್ಲಿಯೂ ದಿವ್ಯತೆಯ ಧ್ವನಿ ಯಿದೆ; ಇಷ್ಟೇ ಅಲ್ಲ, ಇದರಲ್ಲಿರುವ ಅಧ್ಯಾಯಗಳೆಲ್ಲ ಅಮೃತವಿದ್ಯಾರೂಪ ರತ್ನದೀವಿಗೆಗಳು!

## ವಿಷಯ

ನಮ್ಮ ಸುತ್ತೆಲ್ಲ ಬಹು ವಿಸ್ತಾರವಾಗಿ ಹರವಿ-ಹಬ್ಬಿ ನಿಂತಿರುವ ಜಗತ್ತು, ಈ ಜಗತ್ತಿನಲ್ಲಿರುವ ಅಸಂಖ್ಯ ದೇಹಗಳು, ಅವುಗಳಲ್ಲಿ ನೆಲೆಸಿದ ಮನಸ್ಸು, ಆ ಮನೋಗತ ಭಾವನೆ ವಿಚಾರಗಳು ಅಸ್ಥಿರ, ಕ್ಷಣಭಂಗುರ! ಕಾಲವೆಂಬ ಪ್ರಚಂಡ ಪ್ರವಾಹದಲ್ಲಿ ಅವೆಲ್ಲ ತೇಲಿ ತೇಲಿ ಹೋಗುತ್ತಿವೆ, ವಿನಾಶವತ್ತ. ಅಣ್ವಾದಿ ಅಜಾಂಡಾಂತವಾದ ಈ ನಶ್ವರ ವಿಶ್ವದ ಬಹಿರಂತರದಲ್ಲೆಲ್ಲ ಒಂದು ಅಪ್ರತಿಮ ಸತ್ಯ ನೆಲೆಸಿದೆ; ಅದೇ ಪರಮಾತ್ಮ, ಪರಬ್ರಹ್ಮ, ಪರಮ ಪುರುಷ, ಪರಿಪೂರ್ಣ ದೇವ. ಅವನು ಅಚಲ ಅಮೃತ ಅಚಿಂತ್ಯ ಅಖಂಡ ಹಾಗು ಅನಂತ. ಅವನು ನಿರ್ಲಿಪ್ತ ನಿರಂಜನ ನಿರಘ ನಿರುಪಮ ಹಾಗು ನಿರ್ವಿಕಾರ. ಕಣ್ಣು ಮನ ಬುದ್ಧಿ ಗಳು ಅವನನ್ನು ಗ್ರಹಿಸವು, ಭೂತಗಳು ಅವನನ್ನು ಸ್ಪರ್ಶಿಸವು, ಜಗದ್ವಿನಾಶಕ ಕಾಲವು ಅವನನ್ನು ತಲುಪದು. ಶಬ್ದ ಭಾವ ವಿಚಾರ ಎಂಬ ವೀಚಿಗಳು ಅವ ನಲ್ಲಿ ಶಾಂತ. ಅವನು ಪ್ರಕೃತಿಯಾಚೆ ವಿಸ್ತರಿಸಿದ ಚಿದಾಕಾಶ.

ಜೀವಪುರುಷರು ಅವನ ಚಿದಂಶರು. ಅಂತಃಕರಣಗತ ಚೈತನ್ಯ ಕಿರಣ ಗಳು. ದುರ್ದೈವದಿಂದ ಅವರು ತಮ್ಮ ಪಾವನ ಸ್ವರೂಪವನ್ನು ಮರೆತಿದ್ದಾರೆ. ಪ್ರಕೃತಿಯ ವರ್ಣರಂಜಿತ ರೂಪಕ್ಕೆ ಮರುಳಾಗಿದ್ದಾರೆ. ದೇಹಾತ್ಮಬುದ್ಧಿ ಹೊಂದಿದ ಅವರು ಶಬ್ದ ಸ್ಪರ್ಶ ರೂಪ ರಸ ಗಂಧಗಳ ಮೋಹ ಪಂಕದಲ್ಲಿ ಆಕಂಠ ಮುಳುಗಿದ್ದಾರೆ. ಅವರಿಗೀಗ ಸತಿ ಸುತ ಧನ ಧವಸಗಳೇ ದೈವ, ಅಧಿ ಕಾರ ಮಾನ ಗೌರವ ಕೀರ್ತಿಗಳೇ ಧ್ಯೇಯ! ಸತ್ಯ ಅಹಿಂಸೆ ಶೀಲಗಳಂಥ

ಅಮೌಲ್ಯ ಗುಣಗಳನ್ನು ಹೋಳಿಮಾಡಿಯಾದರೂ ಲೌಕಿಕ ಜೀವನವನ್ನು ಸುಂದರಗೊಳಿಸಬೇಕೆಂಬ ಹುಚ್ಚು ಲವಲವಿಕೆ ಅವರಿಗಿದೆ; ಪಾಪ, ಜೀವನಾವಧಿ ಶ್ರಮಿಸಿದರೂ ಮಾನಸಿಕ ನೆಮ್ಮದಿಯಿಲ್ಲ. ಆತ್ಮದರ್ಶನವಿಲ್ಲದ ಅವರಿಗೆ ಚಿರಂತನ ಶಾಂತಿ ಎಂಬುದು ಬರಿ ಕನಸು!!

ಅಂಥ ಮಾಯಾವೃತ ಜೀವರ ಉದ್ಧಾರಕ್ಕಾಗಿಯೇ ದಾರ್ಶನಿಕರ ಚಿದ್ಗರ್ಭದಿಂದ ಮೂಡಿ ಬಂದಳು ಗೀತೆ. ವಿಮಲ ಭಕ್ತಿರಸವನುಣಿಸಿ, ನಿಷ್ಕಾಮ ಕರ್ಮ ಕಲೆಯ ಕಲಿಸಿ, ಆತ್ಮಾನಾತ್ಮ ವಿವೇಕವಿತ್ತು ಆ ಜೀವರನ್ನೆಲ್ಲ ಪರಮಾತ್ಮನತ್ತ ಕರೆದೊಯ್ಯಬೇಕೆಂಬುದು ಅವಳ ಬಯಕೆ; ವೈಷಯಿಕ ಐಂದ್ರಿಯಿಕ ಮಾನಸಿಕ ಮಂಡಲಗಳ ದಾಂಟಿ ನಿಷ್ಪ್ರಪಂಚರೂಪ ವಿಶ್ವಚೈತನ್ಯದಲ್ಲಿ ಸಮಾಲೀನಗೊಳಿಸಬೇಕೆಂಬುದು ಆಕೆಯ ಮನೀಷೆ. ನಮ್ಮ ಕರ್ತವ್ಯ ಒಂದೇ ಒಂದು, ನಮ್ಮನ್ನೇ ನಾವು ಸಮರ್ಪಿಸಿಕೊಳ್ಳುವದು. ಆಕೆ ಈಯುವ ಉಪದೇಶಗಳನ್ನು ನಿಷ್ಕಲ್ಮಷ ಹೃದಯದಿಂದ ಆಲಿಸಿ ಅನುಸರಿಸಿದರೆ ನಮ್ಮ ಮುಕ್ತಿ ನಿಶ್ಚಿತ. ಜಾಗ್ರ ಸ್ವಪ್ನ ಸುಷುಪ್ತಿ ತುರಿಯ ಅವಸ್ಥೆಗಳ ಆಚೆಗೆ ನಿಸ್ಸೀಮವಾಗಿ ವ್ಯಾಪಿಸಿದ ಮಹಾನ್ಸತ್ಯ ನಭಸ್ಸನೇರಿ ಸ್ವಚ್ಛಂದ ವಿಹಾರ ಮಾಡಬಲ್ಲೆವು. ಅಲ್ಲಿ ತಲುಪಿದ ನಂತರ ಸುಖ ದುಃಖಗಳಿಲ್ಲ, ರಾಗ ದ್ವೇಷಗಳಿಲ್ಲ, ಮೋಹ ಅಭಿಮಾನಗಳಿಲ್ಲ, ತಾನು ಅನ್ಯವಿಲ್ಲ, ಬಂಧ ಮುಕ್ತಿಗಳಿಲ್ಲ! ಅದು ನಿರಾಲಂಬ ಅನುಭವಾವಸ್ಥೆ!! ಅಲ್ಲಿ ಪೂರ್ಣತೆಯಿದೆ! ಮಿತಿಮೇರೆಗಳಿಲ್ಲದ ಆತ್ಮವ್ಯಾಪ್ತಿಯಿದೆ!! ಅದೇ ನಮ್ಮ ಅಂತಿಮ ರೂಪ! ಅದನ್ನು ಸಂಪಾದಿಸಿದರೆ ಗೀತಾಧ್ಯಯನದ ಸಾರ್ಥಕತೆ.

## ಪ್ರಸ್ತುತ ಕೃತಿ

ಗೀತೆಯ ಭಾಷೆ ಸಂಸ್ಕೃತ, ಬೋಧಶೈಲಿ ಹೃದ್ಯ, ಉಪದೇಶ ಸುಸ್ಪಷ್ಟ ಹಾಗು ಸರ್ವಸಂತಸಮ್ಮತ. ಆಧ್ಯಾತ್ಮವಿದ್ಯೆಯ ಉತ್ತುಂಗ ಶಿಖರವನ್ನೇರಿದ ಹಲವಾರು ಅನುಭಾವಿಗಳು ಈ ಗೀತೆಯ ಮೇಲೆ ಭಾಷ್ಯ ಬರೆದಿದ್ದಾರೆ, ವ್ಯಾಖ್ಯಾನ ನೀಡಿದ್ದಾರೆ. ಪ್ರಸ್ತುತ ಕೃತಿಕೂಡ ಅಂಥದೇ ಒಂದು ವ್ಯಾಖ್ಯಾನ ಸಂಗ್ರಹ.

ಪರಮ ಪೂಜನೀಯರಾದ ಶ್ರೀ ಮಲ್ಲಿಕಾರ್ಜುನ ಮಹಾ ಶಿವಯೋಗಿಗಳು ನಾಡ ಜನತೆಯ ಜೀವನ ಪಥದಲ್ಲಿ ಆತ್ಮಪ್ರಕಾಶ ಹರಡಿದ ಗುರುಗಳು. ಅವರು ತುರಿಯ ತುರಿಯಾತೀತ ಸಮಾಧಿ ಸಾಧಿಸಿದ ಪುರುಷೋತ್ತಮ ಯೋಗಿಗಳು, ವೇದ ವೇದಾಂತವಿದ್ಯಾಸರಸ್ಸಿನಲ್ಲಿ ರಮಿಸುವ ಪರಮಹಂಸರು, ಶಾಂತಿಯನ್ನೇ ಅಂಗವಿಸಿಕೊಂಡ ಮಹಾತ್ಮರು. ಅವರ ಮಾತು ಜ್ಞಾನ-ಜೇನು! ಅವರ ಭಾವ ದಿವ್ಯ ಅವರ ಉಪದೇಶ ಸರಸ. ಸಾವಿರಾರು ಬುದ್ಧಿವಂತ ಶ್ರೋತೃಗಳ

ಎದುರು ಒಂದು ವರುಷದ ದೀರ್ಘ ಕಾಲ ಅವರು ವಿಜಯಪುರದಲ್ಲಿ ಗೀತೆಯ ಅಂತರಂಗವನ್ನೇ ಬಿಚ್ಚಿಟ್ಟರು. ಕೇಳುಗರನ್ನು ಆಗಾಗ ಭಾವಸಮಾಧಿಗೆ ಒಯ್ಯುತ್ತಿದ್ದ ಅವರ ಉಪದೇಶಗಳನ್ನು ಯಥಾಶಕ್ತಿ ಶಬ್ದಕಲಶಗಳಲ್ಲಿ ಶೇಖರಿಸಿ ಶ್ರೀ ಮಲ್ಲಿಕಾರ್ಜುನ ವಚನಾಮೃತ ಎಂಬ ನಾಮದಿಂದ ಸಹೃದಯ ಸಾಧಕರಲ್ಲಿ ಸಮರ್ಪಿಸುತ್ತಿದ್ದೇನೆ. ಆತ್ಮವಿದ್ಯಾಪ್ರೇಮಿಗಳು, ಶಾಸ್ತ್ರಕೋವಿದರು, ಅನುಭಾವಿಗಳು ಈ ಅನುಭವಾಮೃತವನ್ನು ಮನವಾರೆ ಸವಿಯುವರೆಂದು ಭಾವಿಸುತ್ತೇನೆ. ಅವರಿಗುಂಟಾದ ಸಂತಸವೇ ಈ ಕೃತಿರಚನೆಯ ಸಾಫಲ್ಯ.

## ಕೃತಜ್ಞತೆಗಳು

ಹಸ್ತ ಪ್ರತಿಯನ್ನು ಸಾದ್ಯಂತವಾಗಿ ಓದಿ ಶುದ್ಧೀಕರಿಸಿದ ಪೂಜನೀಯ ಶ್ರೀ ಲಕ್ಕಪ್ಪ ಶಿರಹಟ್ಟಿಯವರಿಗೆ, ಗ್ರಂಥ ನಿರ್ಮಾಣದ ಎಲ್ಲ ಹಂತಗಳಲ್ಲಿ ಹತ್ತು ಹಲವು ರೀತಿಯಿಂದ ಶ್ರಮಿಸಿದ ಪೂ॥ ಶ್ರೀ ಬಸವರಾಜ ಸ್ವಾಮಿಯವರಿಗೆ, ಶ್ರೀ ಗುರು ಆಶ್ರಮದ ಸಕಲ ವಟುವೃಂದಕ್ಕೆ, ಶ್ರೀ ಗುರುಗಳ ದಿವ್ಯ ಉಪದೇಶವನ್ನು ಭಕ್ತಿಭಾವದಿಂದ ಆಲಿಸಿದ ಶ್ರೋತೃವರ್ಗಕ್ಕೆ, ಹಾಗು ಅವ್ಯಾಹತವಾಗಿ ಉಪದೇಶ ಸಾಗುವಂತೆ ಯತ್ನಿಸಿದ ಪ್ರವಚನಸಂಚಾಲಕ ವೃಂದಕ್ಕೆ ಗುರುಗಳ ಮತ್ತು ಪರಮಾತ್ಮನ ಅನುಗ್ರಹಾಶೀರ್ವಾದ ಉಂಟಾಗಲೆಂದು ಪ್ರಾರ್ಥಿಸುತ್ತೇನೆ.

ಅಂಕಲಗಿಯ (ಜಿಲ್ಹಾ. ಬೆಳಗಾಂವ) ಶ್ರೀಮತಿ ಕೃಷ್ಣಮ್ಮ ಶಿವನಗೌಡ ಪಾಟೀಲ ಅವರು ತಮ್ಮ ಪತಿಯ ಹಾಗು ತಮ್ಮ ತಂದೆಯವರಾದ ಶ್ರೀ ರಾಮನಗೌಡ ಸಾತವೀರಗೌಡ ಪಾಟೀಲ (ಕರಗಾಂವ, ಜಿಲ್ಹಾ: ಬೆಳಗಾಂವ) ಅವರ ಸ್ಮರಣಾರ್ಥ ಈ ಗ್ರಂಥದ ವೆಚ್ಚ ನಿರ್ವಹಿಸಲು ನಿರ್ಧರಿಸಿದ್ದಾರೆ. ಶ್ರೀ ಚನ್ನಬಸಪ್ಪಗೌಡ ವೀರಸಂಗಪ್ಪಗೌಡ ಪಾಟೀಲ (ಹುಣಶ್ಯಾಳ) ಅವರೂ ಈ ವೆಚ್ಚದಲ್ಲಿ ಸಹಕರಿಸಲಿದ್ದಾರೆ. ಅವರಿಗೆ ದೇವನು ಕರುಣಿಸಲೆಂದು ಹಾರೈಸಿ ಪ್ರಾರ್ಥಿಸುತ್ತೇನೆ.

ಈ ಪುಸ್ತಕದ ಮೊದಲಿನ ೯೬ ಪುಟಗಳನ್ನು ಅಚ್ಚುಮಾಡಿದ ಶ್ರೀ ಶಿಸು ಸಂಗಮೇಶ ಗುರುಗಳಿಗೂ ಉಳಿದೆಲ್ಲ ಪುಟಗಳನ್ನು ಅಚ್ಚುಮಾಡಿದ ಶ್ರೀ ಸದ್ಗುರು ಶಿವಾನಂದಸ್ವಾಮಿ ಮುದ್ರಣಾಲಯದ ವ್ಯವಸ್ಥಾಪಕರಿಗೂ ಸನ್ಮಾನಪೂರ್ವಕ ಪ್ರಣಾಮಗಳು.

## ಗ್ರಂಥಋಣ

ಈ ಹೊತ್ತಿಗೆ ಬರೆಯುವಾಗ ಸಹಾಯಕವಾದ ಗ್ರಂಥಗಳು ಅನೇಕ, ಅವುಗಳಲ್ಲಿ ಅತಿ ಮುಖ್ಯವೆಂದರೆ –

(೧) ಶ್ರೀ ಮದ್ಭಗವದ್ಗೀತಾ (ಶ್ರೀಶಂಕರಭಾಷ್ಯ, ಆನಂದಗಿರಿ ವ್ಯಾಖ್ಯಾ, ನೀಲಕಂಠೀ, ಭಾಷ್ಯೋತ್ಕರ್ಷ ದೀಪಿಕಾ, ಶ್ರೀಧರೀ ಸುಬೋಧಿನೀ, ಅಭಿನವಗುಪ್ತಾ

ಚಾರ್ಯವ್ಯಾಖ್ಯಾ, ಮಧುಸೂದನೀಯ ಗೂಢಾರ್ಥ ಪ್ರದೀಪಿಕಾ ಸಹಿತಾ)

(೨) ಉಪನಿಷದಂಕ — ಕಲ್ಯಾಣಾಂಕ.
(೩) ಪಾತಂಜಲ ದರ್ಶನಪ್ರಕಾಶ — ಉದಾಸೀನ ಯತೀಂದ್ರಕೃತ.
(೪) ಶ್ರೀ ಮದ್ಭಗವದ್ಗೀತಾ — ಶ್ರೀ ಪಾದ ಸಾತವಳೇಕರ ಕೃತ.
(೫) ಗೀತಾರಹಸ್ಯ — ಶ್ರೀ ಬಾಲ ಗಂಗಾಧರ ಟಿಳಕ.
(೬) ಶ್ರೀ ಮದ್ಭಗವದ್ಗೀತಾ — ಶ್ರೀ ಗೋಯಂದಕಾ.
(೭) ಶ್ರೀ ಮದ್ಭಗವದ್ಗೀತಾ — ಸ್ವಾಮಿ ಆದಿದೇವಾನಂದ.
(೮) ಗೀತೆಯ ಗುಟ್ಟು — ಶ್ರೀ ರಂ. ರಾ. ದಿವಾಕರ.
(೯) ಗೀತಾಪ್ರವಚನಗಳು — ವಿನೋಬಾ.
(೧೦) ವಚನ ಸಾಹಿತ್ಯ ಸಂಗ್ರಹ — ಶ್ರೀ ಭೂಸನೂರಮಠ.
(೧೧) ಪುರಾಣನಾಮ ಚೂಡಾಮಣಿ — ಶ್ರೀ ಬೆನಗಲ್ ರಾಮರಾವ.
(೧೨) ಪಾತಂಜಲಯೋಗದರ್ಶನ — ಶ್ರೀ ಮಲ್ಲಿಕಾರ್ಜುನ ಶಿವಯೋಗಿ
(೧೩) ಪಂಚರತ್ನ — ಶ್ರೀ ನಿಜಗುಣ ಶಿವಯೋಗಿ.
(೧೪) Wisdom of India — Ed. Lin Yutang
(೧೫) The Bhagawadgita — S. Radhakrishnan
(೧೬) The Bhagawadgita — Swami Chidbhavananda
(೧೭) The Bhagawadgita — P. Lal.

ಈ ಎಲ್ಲ ಗ್ರಂಥಗಳಿಗೆ ನಾನು ಚಿರಋಣಿ.

–ಸಿದ್ಧೇಶ್ವರ.

——— ೦ ———

ಅಮೃತಸೇಚನಾ ಶಕ್ತಿ

# ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು.

ಕರ್ನಾಟಕ ಮಹಾರಾಷ್ಟ್ರಗಳ ಜನಾಂಗದ ಹೃದಯಭೂಮಿಗೆ ಅನುಭಾವದ ಅಮೃತವೃಷ್ಟಿಯನ್ನು ಸುರಿಸಿ ಅಲ್ಲಿ ಅಧ್ಯಾತ್ಮದ ಬೆಳೆಯನ್ನು ಬೆಳೆಸುತ್ತಿರುವ ವೇದಾಂತ ಕೇಸರಿ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳನ್ನು ಅರಿಯದವರೇ ಇಲ್ಲ. ಮಹಾನ್ ತಪಸ್ವಿಗಳೂ ಬ್ರಹ್ಮನಿಷ್ಠರೂ ಜೀವನ್ಮುಕ್ತರೂ ಆತ್ಮವಿದ್ಯಾಸಾಗರರೂ ಕರುಣಾಪೂರ್ಣರೂ ಆಗಿದ್ದ ಗದುಗಿನ ಶ್ರೀ ಶಿವಾನಂದ ಮಹಾ ಶಿವಯೋಗಿಗಳ ಅನುಭಾವ ರಸವ ಕುಡಿದು ಬೆಳೆದ ಅವರು ತ್ಯಾಗಿಗಳು, ವೀರ ವಿರಾಗಿಗಳು, ವಿನಯಶೀಲ ವಿದುಷರು, ಜನಮನದಲ್ಲಿ ಹೊಸ ಬೆಳಕು ನೀಡಿದ ಗುರುಗಳು. ಅವರಿಗೆ ತಮ್ಮದೆಂಬುವದೇನೂ ಇಲ್ಲ; ತಮಗಾಗಿ ಏನೂ ಬೇಕಿಲ್ಲ. ಮಠ ಪೀಠ ಮಾನ ಮರ್ಯಾದೆಗಳ ಆಕರ್ಷಣೆಯಿಂದ ಅವರು ಬಲು ದೂರ.

ಗುರುವಿನ ಆತ್ಮಸಂಪದವಾದ ಜ್ಞಾನವನ್ನು ಜನಾಂಗದಲ್ಲಿ ಹರಡಬೇಕೆಂಬುದೇ ಅವರ ಏಕೈಕ ಇಚ್ಛೆ. ಕಳೆದ ನಲ್ವತ್ತು ವರುಷಗಳಿಂದ ನಾಡಿನಲ್ಲೆಲ್ಲ ಸಂಚರಿಸುತ್ತಿದ್ದಾರೆ; ಉಪನಿಷತ್ತು ಗೀತೆ ಸಿದ್ಧಾಂತಶಿಖಾಮಣಿ ವಚನಶಾಸ್ತ್ರಗಳಲ್ಲಿ ಹುದುಗಿದ ರಹಸ್ಯ ತತ್ತ್ವಗಳನ್ನು ತಿಳಿ ತಿಳಿಯಾಗಿ ತಿಳಿಸುತ್ತಿದ್ದಾರೆ. ಅವರ ಪ್ರವಚನಶೈಲಿಗೆ, ವಿಷಯದ ಮಹತಿಗೆ ಹಾಗು ಅನುಭಾವಸಿದ್ಧಿಗೆ ತಲೆದೂಗಿ ಸಂತೋಷಪಟ್ಟವರು ಸಾವಿರ ಸಾವಿರ ಜನ! ಅವರದು ಸಮದೃಷ್ಟಿ. ಯಾವ ಮತವನ್ನೂ ಅವರು ಟೀಕಿಸರು. ಸಕಲ ಮತ ಧರ್ಮಗಳ ಮೂಲ ಹಿಡಿದು ಏಕತ್ವವನ್ನು ಪ್ರತಿಪಾದಿಸಿ ಆತ್ಮೈಕ್ಯವನ್ನು ಸ್ಥಾಪಿಸುತ್ತಾರೆ. ಅವರ ಆತ್ಮವಿದ್ಯಾವಿಚಾರದಲ್ಲಿ ಒಂದು ನುಡಿಯನ್ನಾದರೂ ಇದುವರೆಗೆ ಅಲ್ಲೆಂದವರಿಲ್ಲ. ಅವರು ನೀಡಿದ ಉಪದೇಶಗಳು ಗ್ರಂಥ ರೂಪದಲ್ಲಿ ಹೊರಬಂದಿವೆ.

ಸಾಮಾಜಿಕ ಜೀವನದ ಮೇಲ್ಮೆಗೂ ಶ್ರೀ ಮಲ್ಲಿಕಾರ್ಜುನ ಅಪ್ಪನವರು ಶ್ರಮಿಸುತ್ತಿದ್ದಾರೆ. ಅವರ ಪ್ರೇರಣೆಯಿಂದ ಅನೇಕ ಶಾಲೆಗಳು, ಪ್ರಸಾದನಿಲಯಗಳು, ಪ್ರವಚನ ಮಂಟಪಗಳು ಏರ್ಪಟ್ಟು ಕಾರ್ಯ ಮಾಡುತ್ತಿವೆ. ಅವರ ಸಂಕಲ್ಪದಿಂದಾಗಿ ಗದುಗಿನಲ್ಲಿ ಭವ್ಯವಾದ ಗುರುಸ್ಮಾರಕ ಮಂದಿರ ನಿರ್ಮಾಣಗೊಂಡಿದೆ. ಅವರು ಆಗಮಿಸಿ ಉಪದೇಶ ಇತ್ತರೆ ಸಾಮಾಜಿಕ ವಾತಾವರಣ ಶುದ್ಧವಾಗುತ್ತದೆ; ದ್ವೇಷಾಸೂಯೆಗಳು ದೂರವಾಗುತ್ತವೆ; ಇಬ್ಬಣಗಳು ಒಬ್ಬಣಿಗೂಡುತ್ತಿವೆ. ಇದಕ್ಕೆ ನಿದರ್ಶನಗಳು ಸಾಕಷ್ಟು. ಇದುವೇ ನಿಜವಾದ ಪವಾಡ

ವಲ್ಲದೆ ಮತ್ತೇನು? ಗುರುವನ್ನು ನೆನೆದು ವಿಶ್ವಶಾಂತಿಯನ್ನು ಬಯಸಿ ಪ್ರತಿ ವರುಷ ಶ್ರಾವಣಶುದ್ಧ ಪಂಚಮಿಯಂದು ಅವರು ಆಚರಿಸುತ್ತಿರುವ ಕೋಟಿ ಜಪಯಜ್ಞ ಎಂಬ ಸಾಮೂಹಿಕ ಮಂತ್ರ ಪಠನವು ಅದರಲ್ಲಿ ಭಾಗವಹಿಸಿದವರಿಗೆಲ್ಲ ಅಲೌಕಿಕ ಅನುಭವ ನೀಡುತ್ತಿದೆ.

ತೊರವಿ ಲಕ್ಕಪ್ಪ ಶಿರಹಟ್ಟಿ.

೧೪-೧-೭೫.

ಶ್ರೀಗಳವರ ಪ್ರೇರಣೆಯಿಂದ ಈ ಕೆಳಗಿನ ಪುಸ್ತಕಗಳು ಅಚ್ಚಾಗಿವೆ.

೧) ಪರಮಾರ್ಥ ಗೀತಾಪ್ರವಚನ
೨) ಪರಮಾನುಭವ ಬೋಧ
೩) ಯೋಗಸೂತ್ರ
೪) ಯೋಗಪ್ರವೇಶ
೫) ಪರಮಾರ್ಥಗೀತಾ (ಮರಾಠಿ)
೬) ಪರಮಾನುಭವಬೋಧ (ಮರಾಠಿ)
೭) ಈಶಾವಾಶ್ಯೋಪನಿಷತ್ತು
೮) ಕಠೋಪನಿಷತ್ತು
೯) ಸಿದ್ಧಾಂತ ಶಿಖಾಮಣಿ
೧೦) ಸಿದ್ಧಾಂತ ಶಿಖಾಮಣಿ (ಮರಾಠಿ)

# ವಿಷಯಾನುಕ್ರಮಣಿಕಾ

೨೯೦ ಐದನೆಯ ಅಧ್ಯಾಯ (ಕರ್ಮಸನ್ಯಾಸಯೋಗ).

ನಿತ್ಯಸನ್ಯಾಸಿ ೯೪-೭. ಸಾಂಖ್ಯ ಕರ್ಮ ಅಭಿನ್ನ ೯೭-೮. ನಾಲ್ಕು ಮಾರ್ಗ ೦೮-೯. ಪಂಚೀಕರಣ ೩೦೩. ಕರ್ಮಗಳಿಗೆ ಯಾರು ಹೊಣೆ? ೯-೧೧. ವಿದೇಹ ಮುಕ್ತ ಜೀವನ್ಮುಕ್ತ ೧೩- ೭. ಸಮದರ್ಶಿ ೧೭-೨೦. ಬ್ರಹ್ಮಯೋಗ ೨೧. ಕಾಮ ಕ್ರೋಧ ೨೪-೬. ಅಷ್ಟಾಂಗ ಯೋಗ ೩೦-೧.

೩೩೨ ಆರನೆಯ ಅಧ್ಯಾಯ (ಧ್ಯಾನಯೋಗ).

ಸನ್ಯಾಸ, ಯೋಗ ೩೪. ಆರುರುಕ್ಷು, ಯೋಗಾರೂಢ ೩೫-೬. ಪಂಚ ವೃತ್ತಿಗಳು ೩೮. ಯೋಗಾರೂಢ ೪೩. ಯೋಗಸಾಧನೆ ೪೬-೫೨. ನಾಲ್ಬಗೆಯ ತತ್ತ್ವಗಳು ೫೨-೩. ಮಿತಾಹಾರಾದಿ ೫೫-೮. ಸಂಯಮನಾಭ್ಯಾಸ ೫೮-೬೨. ಸಬಲ ಸಬಲತರ ಸಬಲತಮ ಮನಸ್ಸು ೬೧. ಪರಮಾನಂದ ೬೩. ಮನೋ ನಿರೋಧ ೬೪-೭೦. ಸುಖದ ಮೀಮಾಂಸೆ ೭೧-೨. ಅಂತರಾಯ ೭೨. ಸಮ ದರ್ಶಿ ೭೩-೮೧. ಜ್ಞಾನಿಗಳು ೮೦-೨. ಮನಸ್ಸು ಚಂಚಲ ೮೩. ಅಭ್ಯಾಸ ವಿರಾಗ ೮೪. ಯೋಗಭ್ರಷ್ಟ ೮೮-೯೮. ಸಪ್ತಭೂಮಿಕೆ ೮೯. ಅಧಿಕಾರಿ ೯೮. ಯೋಗಿಯೇ ಅಧಿಕ ೯೯.

೪೦೧ ಏಳನೆಯ ಅಧ್ಯಾಯ (ಜ್ಞಾನ ವಿಜ್ಞಾನಯೋಗ).

ಜ್ಞಾನ ೪೦೪-೫. ಅಪರಾ ಪರಾ ಪ್ರಕೃತಿ ೭-೧೦. ಅಭಿನ್ನನಿಮಿತ್ತೋ ಪಾದಾನ ಕಾರಣ ೧೧-೩. ಪರಮಾತ್ಮ ೧೩-೧೫. ಮಾಯೆ ೧೮. ನರಾಧಮ ೧೯. ಆರ್ತ ಅರ್ಥಾರ್ಥಿ ಜಿಜ್ಞಾಸು ಜ್ಞಾನಿ ೨೧-೭. ಷಡ್ಗುಣ ೨೪. ಅಷ್ಟ ಸಾತ್ವಿಕಭಾವ ೨೪. ಸಂಸ್ಕಾರ ೨೫-೭. ಅನ್ಯದೇವತೆ ೩೦. ಯೋಗಮಾಯೆ ೩೪.

೪೩೯ ಎಂಟನೆಯ ಅಧ್ಯಾಯ (ಅಕ್ಷರ ಬ್ರಹ್ಮಯೋಗ)

ಏಳು ಮಹತ್ವದ ವಿಷಯಗಳು ೩೯-೪೩. ದೇಹತ್ಯಾಗದ ವಿಧಾನ ೪೫-೭. ಪರಮಾತ್ಮ ೪೮-೫೬. ಷಡ್ವಿಧ ಸಮಾಧಿ ೫೯-೬೦. ಬ್ರಹ್ಮಾದಿ ಲೋಕ ೬೧. ಪ್ರಳಯ ೬೧-೨. ಆರು ಬಗೆಯ ಜೀವರು ೬೫. ಜ್ಯೋತಿರ್ಯಾನ ಧೂಮ ಯಾನ ನರಕಯಾನ ೬೬. ಶುಕ್ಲ ಕೃಷ್ಣ ಗತಿ ೬೭.

೪೭೦ ಒಂಬತ್ತನೆಯ ಅಧ್ಯಾಯ(ರಾಜವಿದ್ಯಾ ರಾಜಗುಹ್ಯಯೋಗ)

ಧ್ಯಾನ ಜ್ಞಾನ ೭೦-೧. ರಾಜವಿದ್ಯೆ ೭೨-೫. ಪರಮಾತ್ಮ ೭೫-೮೨. ಯೋಗಮಾಯಾ ಅಜಾ ಮಾಯಾ ಪ್ರಕೃತಿ ೭೮-೮೦. ಕಾರಣ ಮೀಮಾಂಸೆ ೮೧. ಕಲ್ಪ ೮೨. ಕರ್ತೃತ್ವ ೮೪. ವಿಚೇತಸರ ಸ್ವಭಾವ, ದೈವೀ ಸ್ವಭಾವ ೮೮-೯೧ ಉಪಾಸನಾಪ್ರಕಾರ ೯೧-೩. ಸರ್ವಾತ್ಮಭಾವ ೯೩-೫. ವಿಧಿ ಅವಿಧಿ ೯೮. ಭಕ್ತಿ ವಂತ ಅವಿನಾಶಿ ೫೦೪-೭. ಸರ್ವ ಸಮರ್ಪಣ ೫೦೭-೮.

೫೦೮ ಹತ್ತನೆಯ ಅಧ್ಯಾಯ (ವಿಭೂತಿಯೋಗ)

ವಾಣಿ ೯. ವೇದ ೧೮-೯. ಯಜ್ಞ ೨೧. ಸಮಾಸ ೨೪. ನಾರಿಯರ ಗುಣ ಸಂಪದ ೨೫. ಗಾಯತ್ರೀ ೨೬. ಮೌನ ೨೭.

೫೨೯ ಹನ್ನೊಂದನೆಯ ಅಧ್ಯಾಯ (ವಿಶ್ವರೂಪ ದರ್ಶನಯೋಗ)

೫೪೫ ಹನ್ನೆರಡನೆಯ ಅಧ್ಯಾಯ (ಭಕ್ತಿಯೋಗ)

ಪರಮಾತ್ಮ ೪೮-೯. ಸಾಧಕನ ಗುಣಶ್ರೀ ೪೯-೫೦. ಸರ್ವಕರ್ಮಾರ್ಪಣ ಭಕ್ತಿ ೫೧-೨. ಅಭ್ಯಾಸಯೋಗ ೫೩. ಅಭ್ಯಾಸ ಜ್ಞಾನ ಧ್ಯಾನ ಕರ್ಮ ಫಲ ತ್ಯಾಗ ಶಾಂತಿ ೫೪-೫. ಭಕ್ತನ ಲಕ್ಷಣ ೫೫-೯.

೫೬೦ ಹದಿಮೂರನೆಯ ಅಧ್ಯಾಯ (ಕ್ಷೇತ್ರ ಕ್ಷೇತ್ರಜ್ಞಯೋಗ).

ಕ್ಷೇತ್ರ ಕ್ಷೇತ್ರಜ್ಞ ೬೦-೫. ಷಡ್ಲಿಂಗ ೬೪. ಅಮಾನಿತ್ವಾದಿ ಜ್ಞಾನಸಾಧನ ೬೬-೭೧. ಜ್ಞೇಯ ೭೧-೮೦. ಪಂಚಯೋಗ ೮೨. ಸಂಬಂಧ ೮೪. ಸಮದರ್ಶಿ ೮೬. ಆತ್ಮ ೮೮-೯೦.

೫೯೦ ಹದಿನಾಲ್ಕನೆಯ ಅಧ್ಯಾಯ (ಗುಣತ್ರಯವಿಭಾಗಯೋಗ).

ಜಡ ವಿಕಾಸ ೯೩. ತ್ರಿಗುಣಗಳ ಸ್ವರೂಪ, ಕಾರ್ಯ, ಫಲ ೯೩-೬೦೫. ಲೋಭ (ಹಾಗು ಸಂಸ್ಕೃತ ಭಾಷೆ) ೬೦೦-೧. ಗುಣಗಳ ಕೋಷ್ಟಕ ೫. ಗುಣಾತೀತ ೫-೧೦.

೬೧೦ ಹದಿನೈದನೆಯ ಅಧ್ಯಾಯ (ಪುರುಷೋತ್ತಮಯೋಗ).

ಅಶ್ವತ್ಥವೃಕ್ಷ ೧೧-೫. ಮುಕ್ತಿಯ ಉಪಾಯ ೧೬. ಪರಮ ಪದ ೧೭. ಜೀವಾತ್ಮ ೧೭-೨೦. ಪರಮಾತ್ಮ ೨೧-೫. ಚತುರ್ವಿಧ ಅನ್ನ ೨೨.

೬೨೬ ಹದಿನಾರನೆಯ ಅಧ್ಯಾಯ (ದೈವಾಸುರ ಸಂಪದ್ವಿಭಾಗಯೋಗ)

ದೈವೀ ಸಂಪದ ೨೭-೩೫, ಆಸುರೀ ಸಂಪದ ೩೫-೭. ವೇದ ೩೯-೪೦. ಅಸುರರು ೪೦-೬. ಕಾಮ ಕ್ರೋಧ ಲೋಭ ೪೬-೮. ಶಾಸ್ತ್ರವಿಧಿ ೪೮-೯.

೬೫೦ ಹದಿನೇಳನೆಯ ಅಧ್ಯಾಯ (ಶ್ರದ್ಧಾತ್ರಯವಿಭಾಗಯೋಗ).

ಶ್ರದ್ಧೆ ೫೨-೪. ಆಹಾರ ೫೫. ಯಜ್ಞ ೫೭. ತಪ ೫೮. ದಾನ ೬೦ ಬ್ರಹ್ಮ ೬೩. ಓಂ, ತತ್, ಸತ್ ೬೪-೭.

೬೬೭ ಹದಿನೆಂಟನೆಯ ಅಧ್ಯಾಯ (ಮೋಕ್ಷ ಸನ್ಯಾಸಯೋಗ).

ಮಾನವರು ೬೭-೮. ಕರ್ಮ ೬೯. ತ್ಯಾಗ ೭೧. ಕರ್ಮಗಳ ಪಂಚಕಾರಣ ೭೫. ದುರ್ಮತಿ ೭೬-೭. ಜ್ಞಾನ ೮೦-೧. ಕರ್ಮ ೮೨-೩. ಕರ್ತೃ ೮೪-೫. ಬುದ್ಧಿ ೮೬-೭. ಧೃತಿ ೮೭-೮. ಸುಖ ೮೮-೯೧. ಅಷ್ಟ ಆನಂದ ೯೧. ವರ್ಣ ಹಾಗು ವರ್ಣಗಳ ವಿಮರ್ಶೆ ೯೩-೭, ಸ್ವಕರ್ಮ ೯೮. ಸ್ವಧರ್ಮ ಪರಧರ್ಮ ೯೯. ಕರ್ಮ ೭೦೦-೨. ಸಾಧಕ ೩-೬. ದೇವನು ಸೂತ್ರಧಾರಿ ೮. ಸರ್ವಾರ್ಪಣ ೧೦.

ಓಂ

ಶ್ರೀ ಸದ್ಗುರು ಶಿವಾನಂದ ಪರಬ್ರಹ್ಮಣೇ ನಮಃ

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥

ಓಂ ಶಾಂತಿಃ ಶಾಂತಿಃ ಶಾಂತಿಃ

# ಶ್ರೀ ಮದ್ಭಗವದ್ಗೀತಾ

## ಒಂದನೆಯ ಅಧ್ಯಾಯ

## ಅರ್ಜುನನ ವಿಷಾದಯೋಗ

### ಧೃತರಾಷ್ಟ್ರೋವಾಚ

ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।
ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥೧॥

ಭಾವ:- ಸಂಜಯ, ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧೋತ್ಸುಕರಾಗಿ ಸೇರಿರುವ ನನ್ನ ಮತ್ತು ಪಾಂಡುವಿನ ಮಕ್ಕಳು ಏನು ಮಾಡಿದರು? (ಯುಯುತ್ಸವಃ =ಯೋದ್ಧುಂ ಇಚ್ಛಂತಃ : ಯುದ್ಧ ಮಾಡಲು ಇಚ್ಛಿಸುವವರು ಯುಯುತ್ಸವಃ)

ವಿವರಣ : ದೇಹಲಿಯ ಉತ್ತರಕ್ಕೆ ದೃಷದ್ವತಿ ಸರಸ್ವತಿ ನದಿಗಳ ಮಧ್ಯದಲ್ಲಿ ಒಂದು ವಿಸ್ತಾರವಾದ ಪ್ರದೇಶವಿದೆ. ಕುರು ಮಹಾರಾಜನ ಕಾಲದಿಂದ ಈ ಪ್ರದೇಶವು ಕುರುಕ್ಷೇತ್ರವೆಂದು ಪ್ರಸಿದ್ಧವಾಯಿತು. ಇಲ್ಲಿ ಅನೇಕ ಮಹಾನುಭಾವರು ತಪ ಮಾಡಿದ್ದಾರೆ. ಯಾಗ ಯಜ್ಞ ನಡೆಸಿ ಅಪಾರ ಸಂಪದವನ್ನು ದಾನವಿತ್ತಿದ್ದಾರೆ. ಆಗಾಗ ಇಲ್ಲಿ ಸುತರೂ ವಾಸಿಸುತ್ತಿದ್ದರು. ಆದ್ದರಿಂದ ಇದು ಧರ್ಮಕ್ಷೇತ್ರವೆಂಬ ಅನ್ವರ್ಥಕಾಭಿದಾನ ಪಡೆಯಿತು.

ಈ ಕ್ಷೇತ್ರದ ಮಹಿಮೆ ಮಹಾಭಾರತದ ತುಂಬ ವರ್ಣಿತವಾಗಿದೆ. ವಿಶ್ವಮಾನ್ಯವಾದ ಗೀತಾಬೋಧ-ಗಂಗೆಗೆ ಜನ್ಮವಿತ್ತುದೀ ಭೂಮಿ ! ತಾತ್ವಿಕ ರಂಗದಲ್ಲಿದ್ದ ವಿವಿಧ ಸಿದ್ಧಾಂತಗಳ ಜಂಜಡವನ್ನು ಬದಿಗೆ ಸರಿಸಿ ಸಮನ್ವಯ ಧರ್ಮ ಸೌರಭವನ್ನು ಜಗತ್ತಿನಾದ್ಯಂತ ಹಬ್ಬಿ ಹರವಿದ ಈ ನೆಲ ಪರಮ ಪಾವನ !

ಕಾಲದ ದುರದೃಷ್ಟ; ಇಂಥ ವಿಮಲ ಕ್ಷೇತ್ರವು ಭಗವಂತನ ದಿವ್ಯೋಪದೇಶ ಕೇಳಿದ ಕೆಲವೇ ಕ್ಷಣಗಳಲ್ಲಿ ಮಾನವೀ ರಕ್ತಸಿಕ್ತವಾಯ್ತು ! ಹದಿನೆಂಟು ಅಕ್ಷೋಹಿಣೀ ಸೈನ್ಯ ಹದಿನೆಂಟೇ ದಿನಗಳಲ್ಲಿ ಈ ಭೂಮಿಗೊರಗಿತು

ಮಹಾಭಾರತೇತಿಹಾಸದ ಸ್ವರ್ಣ ಪುಟಗಳಲ್ಲಿ ಘೋರ ನರಹತ್ಯದ ಶಬ್ದ ಚಿತ್ರಗಳು ಮೂಡಿನಿಂತವು!

ಪ್ರಸ್ತುತ ಪ್ರಸಂಗ ಯುದ್ಧಕ್ಕೆ ಸಂಬಂಧಿಸಿದೆ. ಕೌರವ ಪಾಂಡವ ಸೈನ್ಯಗಳು ಎದುರು-ಬದುರಾಗಿ ನಿಂತಿವೆ. ಇತ್ತ ಹಸ್ತಿನಾಪುರದ ಅರಮನೆಯಲ್ಲಿ ಕುರು ಪ್ರವೀರನಾದ ಧೃತರಾಷ್ಟ್ರನು ಸಿಂಹಾಸನದ ಮೇಲೆ ಮಂಡಿಸಿದ್ದಾನೆ. ಅವನ ಪಕ್ಕದಲ್ಲಿ ಸಂಜಯನು ಕುಳಿತಿದ್ದಾನೆ. ವೇದವ್ಯಾಸರ ಅನುಗ್ರಹದಿಂದ ಸಂಜಯನಿಗೆ ದೂರಶ್ರವಣ-ದೂರದರ್ಶನ ಶಕ್ತಿ ಸಮನಿಸಿದೆ. ಸಂಜಯನ ಮೂಲಕ ಯುದ್ಧವಾರ್ತೆ ಆಲಿಸುವ ಆತುರ ಜನ್ಮಾಂಧನಾದ ಮಹಾರಾಜನಿಗೆ. ಅವನು ತನ್ನ ಇಚ್ಛೆ ತೋರ್ಪಡಿಸುತ್ತ ಪ್ರಶ್ನಿಸುತ್ತಾನೆ.

ಧೃತರಾಷ್ಟ್ರ:- "ಸಂಜಯ, ಯುದ್ಧಾಭಿಲಾಷಿಗಳಾಗಿ ನನ್ನ ಮತ್ತು ಪಾಂಡುವಿನ ಮಕ್ಕಳು ಕುರು ರಣರಂಗದಲ್ಲಿ ಸಂಧಿಸಿದ್ದಾರೆ. ಅವರೇನು ಮಾಡಿದರು? ಸವಿಸ್ತಾರವಾಗಿ ವರ್ಣಿಸು."

ವಿಮರ್ಶೆ:- ಮಹಾನ್ ತಪಸ್ವಿ, ಧರ್ಮ ದ್ರಷ್ಟಾರ ಹಾಗು ವೇದ ವಿಶಾರದರಾದ ವೇದವ್ಯಾಸರ ಕೃಪಾ ಪ್ರಸಾದದಿಂದ ಹುಟ್ಟಿದವ ಧೃತರಾಷ್ಟ್ರ. ಸಂಜಯ ವಿದುರರಂಥ ನೀತಿ ಕೋವಿದರು ಅವನ ಸಖರು. ಅವರ ಸಂಗದಿಂದ ಮಹಾರಾಜ ಧೃತರಾಷ್ಟ್ರನು ಧರ್ಮ ಪರಿಣತಿ ಪಡೆದ; ನಿಜ. ಆದರೇನು? ಅವನಂತರಂಗದಲ್ಲಿ ತನ್ನ ಮಕ್ಕಳ ಬಗ್ಗೆ ಅನುರಾಗ, ಸಹೋದರನಾದ ಪಾಂಡುವಿನ ಮಕ್ಕಳ ಬಗ್ಗೆ ಪರಕೀಯ ಭಾವ ಮಿಸುಕಿತು. "ಮಾಮಕಾಃ ಪಾಂಡವಾಶ್ಚೈವ" ಎಂಬ ಪದ ಪ್ರಯೋಗದಲ್ಲಿ ಈ ಭೇದಬುದ್ಧಿ ವ್ಯಕ್ತವಾಗಿದೆ. ಈ ದ್ವಂದ್ವ ಪದ ಸಮುದಾಯವೇ ಕರಾಳ ಭವಿಷ್ಯಕ್ಕೆ ಕಾರಣವಾಯಿತೆಂದು ಹೇಳುವದು ಅವಾಸ್ತವವೆನಿಸದು. ತಾನು ಹಿರಿಯ, ಅಖಂಡ ರಾಜ್ಯದ ಅಧಿರಾಜ. ಪಾಂಡವರು ತನ್ನ ಮೃತ ಸೋದರನ ಜಾಣ ಪುತ್ರರು. ಅವರೂ ತನ್ನ ಮಕ್ಕಳೇ ಎಂದು ಭಾವಿಸಿ ವಾತ್ಸಲ್ಯ ತೋರಿದ್ದರೆ ಯುದ್ಧವಾಗುವ ಮಟ್ಟಿಗೆ ಪರಿಸ್ಥಿತಿ ಹದಗೆಡುತ್ತಿರಲಿಲ್ಲ.

ಎಲ್ಲಿ ಭೇದ ಅಲ್ಲಿ ಕಲಹ, ಅಲ್ಲಿ ದುಃಖ. ಮಾನವ ಸಮಾಜ ಭೇದ ಜಾಲದಲ್ಲಿ ಸಿಲುಕಿ ನರಳುತ್ತಿದೆ. ದಿನ ಬೆಳಗಾದರೆ ಬಂಧುಗಳ ಬಡಿದಾಟ, ಕೋಮುಗಳ ಕಾದಾಟ, ಧರ್ಮಗಳ ಉಬ್ಬರ, ರಾಷ್ಟ್ರಗಳ ಕದನ! 'ಭೇದ' ಎಂಬೆರಡು ಅಕ್ಷರಗಳು ನಭೋ ಮಂಡಲದ ತುಂಬ ತುಂಬಿ ಧುಮು-ಧುಮಿಸುತ್ತಿವೆ. ಸಮಾಜದ ಮಹಾನ್ ಶಕ್ತಿ, ಅಪಾರ ಸಂಪದ, ಅಮೂಲ್ಯ ಸಮಯ ನ್ಯಾಯವಾದ

ವಲ್ಲಿ ಸೂರೆಯಾಗುತ್ತಿದೆ. ಹಿತಚಿಂತಕರೆನಿಸುವ ಕೆಲವು ಹಳೆಯ ಜನ ಹೊಸ ರಕ್ತದಲ್ಲಿ ಭೇದದ ಹುಳಿ ಹಿಂಡಿಯೇ ಪ್ರಾಣ ಬಿಡುತ್ತಿದ್ದಾರೆ. ಇದು ಮನು ಕುಲದ ದುರ್ವಿಧಿ.

ಗುರುಗಳ ಕರ್ತವ್ಯ ಇಲ್ಲಿದೆ. ಅವರು ತಮ್ಮ ತ್ಯಾಗ, ವಿದ್ಯೆ ಹಾಗು ಅನುಭಾವ ಶಕ್ತಿಗಳನ್ನು ನಿಯೋಗಿಸಿ ಭೇದ ಜಾಲದ ಕಟ್ಟುಗಳನ್ನು ಹರಿದು ಹಾಕಬೇಕು; ವಿಶ್ವಮಾನವ ಪ್ರಜ್ಞೆಯನ್ನು ಜಾಗೃತಗೊಳಿಸಬೇಕು. ನಾಳಿನ ಜನಾಂಗದ ಸೋದರರು ಒಂದಾಗಿ ನಿಲ್ಲುವಂತೆ, ವಿಭಿನ್ನ ಧರ್ಮದ ವ್ಯಕ್ತಿಗಳು ಭಾವೈಕ್ಯ ಹೊಂದುವಂತೆ, ವಿವಿಧ ಸಮಾಜಗಳ ಮಧ್ಯೆ ಸಹಕಾರ ಸಹಾನುಭೂತಿ ಸೌಹಾರ್ದ್ರಗಳು ನೆಲೆಯಾಗುವಂತೆ ಯತ್ನಿಸಬೇಕು. ಆಗ ಸುಮಧುರ ಸಮಾಜ! ಧರ್ಮ ರಾಜ್ಯ !! ಅಂದು ಪೃಥ್ವಿ ಧರ್ಮಕ್ಷೇತ್ರ! ಯುದ್ಧದ ಭೀತಿ ಇಲ್ಲದ ಶಾಂತಿ ನಿಲಯ !! ವಿವಿಧ ದೇಶದ ಗುರುಗಳೆಲ್ಲ ಈ ಗುರಿಯತ್ತ ಸಾಗಲಿ.

**ಸಂಜಯ ಉವಾಚ**

ದೃಷ್ಟ್ವಾತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।
ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥೨॥

ಭಾವ:- ಧೃತರಾಷ್ಟ್ರನ ಅನುಜ್ಞೆಯಂತೆ ಧರ್ಮಾತ್ಮನಾದ ಸಂಜಯನು ಯುದ್ಧರಂಗದ ವಾರ್ತೆಯನ್ನು ಬಿತ್ತರಿಸಲು ಪ್ರಾರಂಭಿಸಿದ.

ಸಂಜಯ:- "ಕೌರವೇಂದ್ರ, ಯುದ್ಧಕ್ಕಾಗಿ ವ್ಯೂಹರಚಿಸಿ ನಿಂತ ಪಾಂಡವರ ಬೃಹತ್ ಸೈನ್ಯವನ್ನು ಒಂದು ಕ್ಷಣ ಈಕ್ಷಿಸಿ ರಾಜನಾದ ದುರ್ಯೋಧನನು ದ್ರೋಣಾಚಾರ್ಯರ ಬಳಿಸಾರಿ ಈ ಕೆಳಗಿನಂತೆ ಬಿನ್ನವಿಸಿದ.

ಪಶ್ಯೈತಾಂ ಪಾಂಡು ಪುತ್ರಾಣಾಮಾಚಾರ್ಯ ಮಹತೀಂ ಚಮೂಮ್।
ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥೩॥
ಅತ್ರಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ।
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥೪॥
ಧೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್।
ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥೫॥
ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥೬॥
ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥೭॥

ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ |
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿರ್ಜಯದ್ರಥಃ ॥೮॥
ಅನ್ಯೇ ಚ ಬಹವಶ್ಶೂರಾ ಮದರ್ಥೇ ತ್ಯಕ್ತಜೀವಿತಾಃ |
ನಾನಾಶಸ್ತ್ರಪ್ರಹರಣಾಸ್ಸರ್ವೇ ಯುದ್ಧವಿಶಾರದಾಃ ॥೯॥
ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ |
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥೧೦॥
ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ |
ಭೀಷ್ಮಮೇವಾಭಿರಕ್ಷಂತು ಭವಂತಸ್ಸರ್ವ ಏವ ಹಿ ॥೧೧॥

ಭಾವ:- ದುರ್ಯೋಧನ:- "ಗುರುವರ್ಯರೆ, ದ್ರುಪದರಾಜನ ಮಗನಾದ ಧೃಷ್ಟದ್ಯುಮ್ನನು ತಮ್ಮ ಬುದ್ಧಿಮಂತ ಶಿಷ್ಯ. ಅವನಿಂದ ಸುಸಂಬದ್ಧವಾಗಿ ಅಣಿಗೊಳಿಸಲ್ಪಟ್ಟ ಈ ಪಾಂಡವರ ಮಹಾ ಸೇನೆಯನ್ನು ನೋಡಿರಿ."

"ಅವರ ಸೈನ್ಯದಲ್ಲಿ ಮಹಾನ್ ಬಾಣ ಪ್ರಯೋಗಿಗಳೂ(ಮಹೇಷ್ವಾಸಾಃ = ಇಷುಃ=ಬಾಣ. ಆಸಃ= ಆಸನ. ಬಾಣಕ್ಕೆ ಯಾವುದು ಆಸನವಾಗಿದೆಯೋ ಅದು ಇಷ್ವಾಸಃ, ಧನುಷ್. ಮಹಾನ್ ಇಷ್ವಾಸಃ ಯೇಷಾಂ ತೇ ಮಹೇಷ್ವಾಸಾಃ= ಯಾರ ಧನುಷ್ಯಗಳು ಬಹು ದೊಡ್ಡವೋ ಅವರು ಮಹಾಧನುರ್ಧಾರಿಗಳು) ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನರೂ ( ಭೀಮಾರ್ಜುನ ಸಮಾಯುಧಿ = ಯುಧಿ ಭೀಮಾರ್ಜುನಾಭ್ಯಾಂ ಸಮಾಃ ಶೂರಾಃ ಯೇ ತೇ =ಯುದ್ಧದಲ್ಲಿ ಯಾರು ಭೀಮಾರ್ಜುನರಿಗೆ ಸಮಾನರೋ ಅವರು, ) ಶೂರರೂ ಆದ ಯದುವಂಶದ ಯುಯುಧಾನ, ಮತ್ಸ್ಯದೇಶದ ವಿರಾಟರಾಜ, ಮಹಾರಥಿ ಪಾಂಚಾಲಾಧಿಪ ದ್ರುಪದ ಶಿಶುಪಾಲನ ಮಗ ಧೃಷ್ಟಕೇತು, ಯದುವಂಶದ ಚೇಕಿತಾನ, ವೀರ್ಯವಂತ ಕಾಶೀರಾಜ, ಕುಂತಿಯ ಸೋದರರಾದ ಪುರಜಿತ್ತು ಮತ್ತು ಕುಂತೀಭೋಜ, ನರಶ್ರೇಷ್ಠನಾದ ಶೈಬ್ಯ ಪರಾಕ್ರಮಶಾಲಿಗಳಾದ ಯುಧಾಮನ್ಯು ಹಾಗು ಉತ್ತಮೌಜ, ಸುಭದ್ರೆಯ ಮಗನಾದ ಅಭಿಮನ್ಯು, ದ್ರೌಪದಿಯ ಮಕ್ಕಳಾದ- ಪ್ರತಿವಿಂಧ್ಯ, ಸುತಸೋಮ, ಶ್ರುತಕರ್ಮ, ಶತಾನೀಕ, ಶ್ರುತಸೋಮ ಇವರೆಲ್ಲ ಮಹಾರಥಿಗಳು.

"ಪೂಜ್ಯ ಬ್ರಾಹ್ಮಣೋತ್ತಮರೆ, ಇನ್ನು ನಮ್ಮ ಸೇನೆಯಲ್ಲಿರುವ ಪ್ರಧಾನ ನಾಯಕರ ಹೆಸರುಗಳನ್ನು ತಮ್ಮ ಅವಗಾಹನೆಗೆ ತರಬಯಸುತ್ತೇನೆ. ತಾವು ಲಕ್ಷವೀಯಬೇಕು.

"ಅಪ್ರತಿಮ ವೀರರಾದ ತಾವು, ಅಖಂಡ ಬ್ರಹ್ಮಚರ್ಯ ತೇಜಸ್ಸಿನ

ಭೀಷ್ಮಾಚಾರ್ಯರು, ಸಮರ ವಿಜಯಿಗಳಾದ ಕೃಪಾಚಾರ್ಯರು, ತಮ್ಮ ಪುತ್ರ ಅಶ್ವತ್ಥಾಮ, ನನ್ನ ತಮ್ಮ ವಿಕರ್ಣ, ಮಹಾರಥಿಯಾದ ಸೌಮದತ್ತಿ ಮತ್ತು ಸಿಂಧೂ ದೇಶದ ದೊರೆ ಜಯದ್ರಥ ಪ್ರಮುಖರು. ಗುರುಶ್ರೇಷ್ಠರೆ, ನನಗಾಗಿ ಪ್ರಾಣತ್ಯಾಗ ಮಾಡಲೂ ಸಿದ್ಧರಾಗಿ ಕರ್ಣ ಹಾಗು ಇನ್ನೂ ಅನೇಕ ವೀರರು ನಮ್ಮಲ್ಲಿದ್ದಾರೆ. ಅವರೆಲ್ಲ ನಾನಾವಿಧ ಶಸ್ತ್ರಪ್ರಹಾರ ದಕ್ಷರು; ಯುದ್ಧ ನಿಪುಣರು.

"ಆಚಾರ್ಯರೆ, ಭೀಷ್ಮ ಪಿತಾಮಹರಿಂದ ರಕ್ಷಿತವಾದ ನಮ್ಮ ಅಪಾರ ಸೇನೆ ಸಮರ್ಥವಾಗಿದೆ; ಭೀಮನಿಂದ ರಕ್ಷಿತವಾದ ಅವರ ಸೇನೆ ಮಾತ್ರ ಅಪೂರ್ಣ, ಅಸಮರ್ಥ. ತಾವೆಲ್ಲರು ಸೇನೆಯ ಸರ್ವ ವ್ಯೂಹ ದ್ವಾರಗಳಲ್ಲಿ ನಿಂತು ಭೀಷ್ಮ ಪಿತಾಮಹರನ್ನೇ ಸಂರಕ್ಷಿಸಬೇಕು. ಅವರು ನಮ್ಮ ಯೋಧರ ಪ್ರಚೋದನಾ ಶಕ್ತಿ!"

ಟಿಪ್ಪಣಿ : ೧) ರಥಿ= ರಥದಲ್ಲಿ ಕುಳಿತು ಕಾದುವವ.
೨) ಮಹಾರಥಿ= ರಥದಲ್ಲಿ ಕುಳಿತು ೧೦೦೦೦ ಜನರೊಂದಿಗೆ ಕಾದುವವ.
೩) ಅತಿರಥಿ= ರಥದಲ್ಲಿ ಕುಳಿತು ೧೦೦೦೦ಕ್ಕಿಂತ ಹೆಚ್ಚು ಜನರೊಂದಿಗೆ ಕಾದುವವ.

ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥೧೨॥
ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।
ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥೧೩॥
ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।
ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥೧೪॥
ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥೧೫॥
ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।
ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥೧೬॥
ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥೧೭॥
ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।
ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ಪೃಥಕ್ ॥೧೮॥

ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ |
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ||೧೯||
ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ |
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ||೨೦||
ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ |

ಭಾವ:- ಸಂಜಯ ನುಡಿದ, "ಕುರುವೃದ್ಧರೆ ಹೀಗೆ ದುರ್ಯೋಧನ ರಾಜನು ದ್ರೋಣಾಚಾರ್ಯರಿಗೆ ಹೇಳಿದ ನಂತರ ಪ್ರತಾಪಶಾಲಿಯಾದ ಕುರುಶ್ರೇಷ್ಠನಾದ ಭೀಷ್ಮಪಿತಾಮಹನು ರಾಜನಿಗೆ ಹರ್ಷವುಂಟು ಮಾಡಲೆಂದು ರಣಸಿಂಹದಂತೆ ಗರ್ಜಿಸಿ ಶಂಖ ಊದಿದ. ಅವನನ್ನು ಅನುಸರಿಸಿ ಅಸಂಖ್ಯ ಶಂಖ ಭೇರಿ ನಗಾರಿ ಮೃದಂಗ ಗೋಮುಖಾದಿ ರಣವಾದ್ಯಗಳು ಒಮ್ಮೆಲೇ ಮೊಳಗಿದವು. ಆ ರಣಶಬ್ದ ಭಯಂಕರವಾಗಿತ್ತು.

"ಬಳಿಕ, ಶ್ವೇತಾಶ್ವವಾಹೀ ಮಹಾರಥದಲ್ಲಿ ಕುಳಿತಿದ್ದ ಶ್ರೀಕೃಷ್ಣ ಅರ್ಜುನರು ತಮ್ಮ ಪಾಂಚಜನ್ಯ ಮತ್ತು ದೇವದತ್ತಗಳೆಂಬ ಅಲೌಕಿಕ ಶಂಖಗಳನ್ನೂದಿದರು. ಘೋರ ಕರ್ಮ ಮಾಡಬಲ್ಲ (ಭೀಮ ಕರ್ಮಾ=ಭೀಮಂ ಘೋರಂ ಕರ್ಮ ಯಸ್ಯ ಸಃ. ಯಾವನ ಕರ್ಮಗಳು ಘೋರವೋ ಅವನು.) ದೀರ್ಘ ಉದರವುಳ್ಳ (ವೃಕೋದರಃ=ವೃಕವತ್ ಉದರಂ ಯಸ್ಯ ಸಃ, ಯಾವನ ಹೊಟ್ಟೆ ತೋಳದಂತೆ ದೊಡ್ಡದೋ ಅವನು.) ಭೀಮನು ಪೌಂಡ್ರವೆಂಬ ಮಹಾ ಶಂಖವನ್ನು ಊದಿದನು. ಕುಂತೀ ಪುತ್ರನಾದ ಧರ್ಮನು ಅನಂತ ವಿಜಯನಾಮಕ ಶಂಖವನ್ನೂ ನಕುಲ-ಸಹದೇವರು ಸುಘೋಷ, ಮಣಿಪುಷ್ಪಕ ಶಂಖಗಳನ್ನೂ ಊದಿದರು.

"ಧೃತರಾಷ್ಟ್ರ, ಶ್ರೇಷ್ಠಧನುರ್ಧಾರಿಯಾದ (ಪರಮೇಷ್ವಾಸಃ=ಪರಮಃ= ಶ್ರೇಷ್ಠಃ, ಇಷ್ವಾಸಃ=ಧನುಃ ಯಸ್ಯ ಸಃ. ಶ್ರೇಷ್ಠವಾದ ಧನುವು ಯಾವನದೋ ಅವನು) ಕಾಶೀರಾಜ, ಮಹಾರಥಿ ಶಿಖಂಡಿ, ಧೃಷ್ಟದ್ಯುಮ್ನ, ವಿರಾಟ, ಅಜೇತನಾದ ಸಾತ್ಯಕಿ, ದ್ರುಪದರಾಜ, ದ್ರೌಪದಿಯ ಮಕ್ಕಳು, ಮಹಾಶೂರನಾದ ಅಭಿಮನ್ಯು ಇವರೆಲ್ಲ ಎಲ್ಲ ಕಡೆಯಿಂದ ಬೇರೆ ಬೇರೆಯಾಗಿ ಶಂಖಗಳನೂದಿದರು. ಆ ಶಂಖಗಳ ಭೀಷಣ ಧ್ವನಿ ಆಕಾಶ ಭೂಮಿಗಳಲ್ಲಿ ಪ್ರತಿಧ್ವನಿಸಿತು; ಕೌರವರ ಹೃದಯಗಳನ್ನು ಇರಿಯಿತು.

"ಅನಂತರ, ಕಪಿಧ್ವಜನಾದ ಅರ್ಜುನನು ಯುದ್ಧಸನ್ನದ್ಧರಾದ ಕೌರವರನ್ನು ನೋಡಿ ಶಸ್ತ್ರ ಪ್ರಹಾರಕ್ಕೆ ಸಮಯ ಬಂದುದನ್ನು ಗಮನಿಸಿ ಧನು

ಷ್ಯನ್ನು ಎತ್ತಿ ಹಿಡಿದು ಶ್ರೀ ಕೃಷ್ಣನನ್ನು (ಹೃಷೀಕ=ಇಂದ್ರಿಯ, ಈಶ=ಒಡೆಯ
ಹೃಷೀಕೇಶ=ಇಂದ್ರಿಯಗಳ ಒಡೆಯ; ಅಂತರ್ಯಾಮಿ ಪರಮಾತ್ಮ) ಕುರಿತು
ಈ ಮಾತನ್ನು ಹೇಳಿದ."

### ಅರ್ಜುನ ಉವಾಚ

ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥೨೧॥
ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥೨೨॥
ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥೨೩॥

ಭಾವ:- ಅರ್ಜುನ- "ಹೃಷೀಕೇಶ, ನಾನೀಗ ಯುದ್ಧಾಕಾಂಕ್ಷಿಗಳಾಗಿ ನಿಂತಿರುವ ವೈರಿಯೋಧರನ್ನು ನೋಡಬೇಕು; ಈ ಸಮರದಲ್ಲಿ ಯಾರೊಂದಿಗೆ ಯುದ್ಧ ಮಾಡಬೇಕೆಂಬುವನ್ನು ನಿರ್ಧರಿಸಬೇಕು; ಅಲ್ಲದೆ. ದುರ್ಯೋಧನನಿಗೆ ಸಂತೋಷವೀಯಲೆಂದು ಈ ರಣ ಕ್ಷೇತ್ರದಲ್ಲಿ ಸೇರಿದ ಮಹಾನ್ ವೀರರನ್ನು ಪರಿಕಿಸಬೇಕು. ಆದುದರಿಂದ ಅಲ್ಲಿಯವರೆಗೆ ನನ್ನ ರಥವನ್ನು ಎರಡೂ ಸೇನೆಗಳ ನಡುವೆ ನಿಲ್ಲಿಸು."

### ಸಂಜಯ ಉವಾಚ

ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥೨೪॥
ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।
ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥೨೫॥

ಭಾವ:– ಸಂಜಯ– "ಕುರುವೃದ್ಧ, ಅರ್ಜುನನು (ಗುಡಾಕೇಶಃ= ಗುಡಾಕಾ = ನಿದ್ರಾ; ತಸ್ಯಾಃ ಈಶಃ =ನಿದ್ರೆಯ ಒಡೆಯನು ಗುಡಾಕೇಶ, ಅರ್ಜುನ) ಈ ಪ್ರಕಾರ ಹೇಳಲಾಗಿ, ಹೃಷೀಕೇಶನು ಎರಡೂ ಸೈನ್ಯಗಳ ಮಧ್ಯದಲ್ಲಿ ಭೀಷ್ಮ ದ್ರೋಣ ಮತ್ತು ಇತರ ರಾಜರುಗಳ ಎದುರು ತನ್ನ ಉತ್ತಮ ರಥವನ್ನು ನಿಲ್ಲಿಸಿ 'ಎಲೈ, ಅರ್ಜುನ ಕಾದಾಡಲು ಕೂಡಿದ ಈ ಎಲ್ಲ ಕೌರವರನ್ನು ನೋಡು' ಎಂದನು."

ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।
ಆಚಾರ್ಯಾನ್ಮಾತುಲಾನ್ ಭ್ರಾತೄನ್
ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ॥೨೬॥

ಶ್ವಸುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।
ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್॥೨೭॥
ಕೃಪಯಾ ಪರಯಾऽऽವಿಷ್ಟೋ ವಿಷೀದನ್ನಿದಮಬ್ರವೀತ್

**ಭಾವ:–** "ಸಂಜಯ- ನಂತರ, ಎರಡೂ ಸೈನ್ಯಗಳಲ್ಲಿದ್ದ ಪಿತೃ ಪಿತಾಮಹರನ್ನು, ಗುರುಹಿರಿಯರನ್ನು, ಸೋದರ ಸೋದರಮಾವಂದಿರನ್ನು, ಮಕ್ಕಳು ಮೊಮ್ಮಕ್ಕಳನ್ನು, ಸಮವಯಸ್ಕ ಮಿತ್ರ ಸ್ನೇಹಿತರನ್ನು ಅರ್ಜುನನು ನೋಡಿದ. ಆಗ ಆ ಅಸಮ ರಣಧೀರನ ಸಮರ್ಥ ಬಾಹುಗಳು ಎಂದಿನಂತೆ ತವಕದಿಂದ ಸ್ಪಂದಿಸುವ ಬದಲು ಅವನ ಹೃದಯ ಕರುಣಾರಸ ಪೂರಿತವಾಯ್ತು. ಆ ಜನರ ಬಗ್ಗೆ ಮರುಕು ತಲೆದೋರಿತು. ವ್ಯಥಿತನಾದ ಆತ ಭಗವಂತನಿಗೆ ನುಡಿದ-"

**ಅರ್ಜುನ ಉವಾಚ**

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್॥೨೮॥
ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥೨೯॥
ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ।
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥೩೦॥
ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।
ನ ಚ ಶ್ರೇಯೋऽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥೩೧॥
ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥೩೨॥
ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।
ತ ಇಮೇऽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥೩೩॥
ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।
ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಸ್ಸಂಬಂಧಿನಸ್ತಥಾ ॥೩೪॥
ಏತಾನ್ನ ಹಂತುಮಿಚ್ಛಾಮಿ ಘ್ನತೋऽಪಿ ಮಧುಸೂದನ ।
ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥೩೫॥
ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಸ್ಸ್ಯಾಜ್ಜನಾರ್ದನ ।
ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥೩೬॥
ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್ ।

ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥೩೭॥
ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।
ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥೩೮॥
ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।
ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥೩೯॥
ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।
ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥೪೦॥
ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥೪೧॥
ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।
ಪತಂತಿ ಪಿತರೋಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥೪೨॥
ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।
ಉತ್ಸಾದ್ಯಂತೆ ಜಾತಿದರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥೪೩॥
ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ಧನ ।
ನರಕೇಽನಿಯತಂ ವಾಸೋ ಭವತೀತ್ಯನುಶುಶ್ರುಮ ॥೪೪॥
ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।
ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥೪೫॥
ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮ ತರಂ ಭವೇತ್ ॥೪೬॥

**ಭಾವಾನುವಾದ:-** ಅರ್ಜುನ- "ಕೃಷ್ಣ, ಯುದ್ಧಕ್ಕಾಗಿ ತವಕಿಸುತ್ತಿರುವ ಈ ಸ್ವಜನರ ಕಂಡು ಮನಸ್ಸು ಭ್ರಮೆಗೊಂಡಿದೆ; ಅವಯುವಗಳು ಶಿಥಿಲಗೊಳ್ಳುತ್ತಿವೆ. ನಾಲಿಗೆ ಒಣಗುತ್ತಿದೆ. ನನ್ನ ದೇಹದಲ್ಲಿ ಕಂಪನ ರೋಮಾಂಚನಗಳುಂಟಾಗುತ್ತಿವೆ. ಗಾಂಡೀವ ಧನುವು ಕೈಯಿಂದ ಜಾರಿ ಬೀಳುತ್ತಿದೆ. ಚರ್ಮ ಸುಡುತ್ತಿದೆ. ಕೇಶವ, ನನಗೀಗ ನಿಲ್ಲುವದಕ್ಕೂ ಆಗುತ್ತಿಲ್ಲ; ಕುಸಿದು ಬೀಳುತ್ತಿರುವೆ. ಅಮಂಗಲ ಶಕುನಗಳನ್ನು ಅನುಭವಿಸುತಿದ್ದೇನೆ.

"ಕೃಷ್ಣ, ಯುದ್ಧದಲ್ಲಿ ಸ್ವಜನರನ್ನು ಕೊಂದು ನಾವು ಪಡೆಯುವ ಶ್ರೇಯವಾದರೂ ಏನು? ನನಗೆ ಜಯ ಬೇಡ; ರಾಜ್ಯ ಸುಖಗಳೂ ಬೇಡ. ಘೋರ ನರಹತ್ಯೆಯಿಂದ ದೊರೆವ ರಾಜ್ಯ ವೈಭವ ಹಾಗು ಜೀವನಧಾರಣದಿಂದೇನು ಪ್ರಯೋಜನ? ಯಾರಿಗಾಗಿ ರಾಜ್ಯ ಸುಖಭೋಗ ನಮಗೆ ಬೇಕೋ

ಅಂಥ ಈ ಆಚಾರ್ಯರು, ಪಿತರರು, ಪುತ್ರರು, ಪಿತಾಮಹರು, ಮಾವಂದಿರು, ಮೊಮ್ಮಕ್ಕಳು, ಭಾವ-ಮೈದುನಸರು, ಮತ್ತು ನೆಂಟರು ತಮ್ಮ ಪ್ರಾಣ ಧನ ತ್ಯಾಗ ಮಾಡಿ ಕದನಕ್ಕೆ ಸಿದ್ಧರಾಗಿ ನಿಂತಿದ್ದಾರೆ. ಮಾಧವ, ನಾನು ಹತ ನಾದರೂ ಸರಿಯೇ, ಮೂರು ಲೋಕಗಳ ಒಡೆತನ ದೊರೆಯದಿದ್ದರೂ ಚಿಂತೆಯಿಲ್ಲ. ನಾನು ಮಾತ್ರ ಇವರನ್ನು ವಧೆ ಮಾಡುವದಿಲ್ಲ. ಹೀಗಿದ್ದು ಈ ಕ್ಷುಲ್ಲಕ ಭೂಮಿಗಾಗಿ ಕೊಲೆ ಮಾಡಲೆ?

"ಕೃಷ್ಣ, ಈ ಕೌರವರನ್ನೆಲ್ಲ ಕೊಂದರೆ ನಮಗೆ ಬರುವ ಭಾಗ್ಯವೇನು? ಇವರು ಆತತಾಯಿಗಳು. (ಆತತಾಯಿನ್=ಅಗ್ನಿದೋ ಗರದಶ್ಚೈವ ಶಸ್ತ್ರ ಪಾಣಿರ್ಧನಾಪಹಃ । ಕ್ಷೇತ್ರ ದಾರಾಪಹರ್ತಾ ಚ ಷಡೇತೇ ಹ್ಯಾತತಾಯಿನಃ ॥ ಬೆಂಕಿ ಹಚ್ಚುವವ, ವಿಷ ಕೊಡುವವ, ಶಸ್ತ್ರಗಳಿಂದ ಹಿಂಸಿಸುವವ, ಧನ ಅಪಹರಿಸುವವ, ಪರರ ಭೂಮಿಯನ್ನು ಆಕ್ರಮಿಸುವವ, ಹಾಗು ಪರಸ್ತ್ರೀ ಯನ್ನು ಕದ್ದೊಯ್ಯುವವ ಆತತಾಯಿನ್ ಎನಿಸುತ್ತಾನೆ. ಕೌರವರು ಈ ಆರೂ ಕುಕೃತ್ಯ ಮಾಡಿದ್ದರಿಂದ ಅವರಿಗೀ ಶಬ್ದ.) ಈ ಪಾಪಿಗಳನ್ನು ಕೊಂದರೆ ನಮಗೆ ಪಾಪ ಬಂದೀತು! ಆದುದರಿಂದ ಇವರನ್ನು ಕೊಲ್ಲುವದು ತರವಲ್ಲ. ಮಾಧವ, ಸ್ವಜನಹತ್ಯದಿಂದ ನಾವೆಂತು ಸುಖಿಗಳಾದೇವು?

" ಇವರು ರಾಜ್ಯ ಲೋಭದಿಂದ ದೂಷಿತವಾದ ಮನವುಳ್ಳವರು " (ಲೋಭೋಪಹತ ಚೇತಸಃ=ರಾಜ್ಯಲೋಭೇನ ಉಪಹತಂ ಭ್ರಷ್ಟವಿವೇಕಂ ಚೇತಃ ಯೇಷಾಂ ತೇ; ರಾಜ್ಯ ಲೋಭದಿಂದ ಯಾರ ಮತಿ ಭ್ರಷ್ಟವಾಗಿ ದೆಯೋ ಅವರು.) ಕುಲನಾಶದಿಂದಾಗುವ ದೋಷವನ್ನಾಗಲಿ, ಮಿತ್ರ ದ್ರೋಹ ದಿಂದ ಒದಗುವ ಪಾಪವನ್ನಾಗಲಿ ಇವರು ಕಾಣರು. ನಾವು ಮಾತ್ರ ಹಾಗಲ್ಲ; ಎಲ್ಲವನ್ನು ಅರಿತವರಾದಾಗ ಈ ಪಾಪಕಾರ್ಯದಿಂದ ಏಕೆ ಹಿಂದೆಗೆಯಬಾರದು?

"ಜನಾರ್ದನ, ಕುಲವು ಕ್ಷಯವಾದರೆ ಶಾಶ್ವತವಾದ ಕುಲಧರ್ಮಗಳು ನಾಶವಾಗುವವು. ಧರ್ಮನಷ್ಟವಾದರೆ ಸಮಸ್ತ ಕುಲಗಳನ್ನು ಅಧರ್ಮವು ಕಬಳಿಸುವದು. ಅಧರ್ಮವು ಉದ್ರಿಕ್ತವಾಗುವದರಿಂದ ಕುಲಸ್ತ್ರೀಯರು ಕೆಟ್ಟು ಹೋಗುವರು. ವಾರ್ಷ್ಣೇಯ, ಸ್ತ್ರೀಯರು ದೂಷಿತರಾದರೆ ವರ್ಣಸಂಕರ ಉಂಟಾಗುವದು. ವರ್ಣಸಂಕರವು ಕುಲನಾಶಕರನ್ನೂ ಕುಲವನ್ನೂ ನರಕ ದಲ್ಲಿ ದೂಡುವದು. ಪಿತೃಗಳು ಶ್ರಾದ್ಧತರ್ಪಣಾದಿ ಕ್ರಿಯೆಗಳಿಲ್ಲದೆ ಪತನ ವಾಗುವರು.

"ಈ ಎಲ್ಲ ವರ್ಣ ಸಂಕರಾದಿ ದೋಷಗಳಿಂದಾಗಿ ಶಾಶ್ವತವಾದ ಜಾತಿ

ಧರ್ಮಗಳು, ಕುಲಧರ್ಮಗಳು, ಆಶ್ರಮಧರ್ಮಗಳು ನಾಶವಾಗುವವು. ಕುಲಧರ್ಮಗಳನ್ನು ನಾಶ ಮಾಡಿಕೊಂಡಿರುವ ಮನುಷ್ಯರಿಗೆ (ಉತ್ಸನ್ನ ಕುಲ ಧರ್ಮಾಣಾಂ=ಉತ್ಸನ್ನಾಃ ಕುಲಧರ್ಮಾಃ ಯೇಷಾಂ ತೇ, ತಥಾ ತೇಷಾಂ= ಯಾರ ಕುಲಧರ್ಮಗಳು ಕೆಟ್ಟಿವೆಯೋ ಅವರು ಉತ್ಸನ್ನ ಕುಲಧರ್ಮಗಳು.) ನರಕದಲ್ಲಿ ದೀರ್ಘಕಾಲ ವಾಸವುಂಟಾಗುವದೆಂದು ನಾವು ಕೇಳಿದ್ದೇವೆ."

"ಕೃಷ್ಣ, ನಾವು ರಾಜ್ಯ ಸುಖ ಬಯಸಿ ಸ್ವಜನರನ್ನು ಕೊಲ್ಲಲು ಸಿದ್ಧ ರಾಗಿದ್ದೇವೆ. ಇದರರ್ಥ ನಾವು ಮಹಾ ಪಾಪ ಮಾಡಲು ನಿಶ್ಚಯಿಸಿದ್ದೇವೆ ಎಂದೇ ಅಲ್ಲವೆ? ನಾನಂತು ಯಾವ ಪ್ರತೀಕಾರ ಮಾಡಲಾರೆ. ಬೇಕಾದರೆ, ನಿರಾಯುಧನಾದ ನನ್ನನ್ನು ಆಯುಧ ಪಾಣಿಗಳಾದ ಕೌರವರು ಕೊಲ್ಲಲಿ; ಅದ ರಿಂದ ನನಗೆ ಇನ್ನೂ ಕ್ಷೇಮವೆ ಆದೀತು ಅಲ್ಲವೆ?"

ಸಂಜಯ ಉವಾಚ

ಏವಮುಕ್ತ್ವಾಽರ್ಜುನಸ್ಸಂಖ್ಯೇ ರಥೋಪಸ್ಥ ಉಪಾವಿಶತ್ ।
ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥೪೭॥

ಭಾವ:- ಸಂಜಯ- "ಧೃತರಾಷ್ಟ್ರ, ಯುದ್ಧ ರಂಗದಲ್ಲಿ ಶೋಕ ಸಂತಪ್ತ ನಾದ ಅರ್ಜುನನು ಹೀಗೆ ನುಡಿದು ಬಿಲ್ಲು ಬಾಣಗಳ ಬಿಸುಟು ರಥದ ಮೇಲೆ ಕುಳಿತ."

ಇತಿ-

ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನಸಂವಾದೇ
ಅರ್ಜುನ ವಿಷಾದಯೋಗೋ ನಾಮ ಪ್ರಥಮೋಧ್ಯಾಯಃ

ಶ್ರೀ ಮಲ್ಲಿಕಾರ್ಜುನ ವಚನಾಮೃತ ಪ್ರಥಮ ಬಿಂದು

---

# ಎರಡನೆಯ ಅಧ್ಯಾಯ

## ಸಾಂಖ್ಯಯೋಗ

### ಸಂಜಯ ಉವಾಚ

ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।
ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥೧॥

**ಅರ್ಥ :** ಸಂಜಯನು ನುಡಿದ.

ತಥಾ=ಆ ರೀತಿ, ಕೃಪಯಾ ಆವಿಷ್ಟಂ=ದಯೆಯಿಂದ ಕೂಡಿದ. ಅಶ್ರುಪೂರ್ಣಾಕುಲೇಕ್ಷಣಂ=(ಅಶ್ರುಭಿಃ ಪೂರ್ಣೇ ಆಕುಲೇ ಈಕ್ಷಣೇ ಯಸ್ಯ ಸಃ, ತಂ= ಯಾವನ ದೃಷ್ಟಿ ಅಶ್ರುಪೂರ್ಣವಾಗಿದೆ ಹಾಗು ಮಂಜಾಗಿದೆಯೋ ಅವನು ) ಕಂಬನಿ ತುಂಬಿ ಮಂಜಾದ ಕಣ್ಣುಳ್ಳ, ವಿಷೀದಂತಂ=ಶೋಕಿಸುತ್ತಿರುವ, ತಂ= ಅರ್ಜುನನನ್ನು (ಕುರಿತು), ಮಧುಸೂದನಃ= ( ಮಧುನಾಮಕ ರಾಕ್ಷಸನನ್ನು ಕೊಂದ) ಶ್ರೀಕೃಷ್ಣನು, ಇದಂ ವಾಕ್ಯಂ=ಈ ಮಾತನ್ನು, ಉವಾಚ=ಹೇಳಿದನು.

ಭಾವ:- ಅರ್ಜುನನು ಸತಿ-ಸುತ, ಬಂಧು-ಬಾಂಧವ ವ್ಯಾಮೋಹಿ. ಅವರೆಲ್ಲ ಸಾಯುವರೆಂಬ ಕಲ್ಪನೆ ಅವನನ್ನು ನಿಃಶಕ್ತಗೊಳಿಸಿತು; ಅವನ ಹೃದಯದಲ್ಲಿ ಮೋಹಾಧಾರಿತ ದಯಾದ್ರ್ರಭಾವ ತುಂಬಿತು; ಕಣ್ಣು ಹನಿಗೊಂಡು ಮಂಜಾಯಿತು. ದುಃಖ ಒತ್ತರಿಸಿ ಬಂತು. ಅವನ ಈ ದೀನ ಸ್ಥಿತಿ ಕಂಡು ಶ್ರೀಕೃಷ್ಣನಿಗೆ ನಗು ಬಂತು. ಅವನು ನುಡಿದ:

### ಶ್ರೀ ಭಗವಾನುವಾಚ

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥೨॥

**ಅರ್ಥ :** ಶ್ರೀ ಭಗವಂತನು ನುಡಿದ.

ಅರ್ಜುನ=(ಶುದ್ಧಾಂತಃಕರಣಯುಕ್ತ) ಅರ್ಜುನನೆ, ಅನಾರ್ಯಜುಷ್ಟಂ= ( ಆರ್ಯೈಃ ಅಸೇವಿತಂ ; ಆರ್ಯರಿಗೆ ಅಯುಕ್ತವಾದ ) ಅಸುಸ್ಕೃತರಿಗೆ ಮಾತ್ರ ತಕ್ಕದಾದ, ಅಸ್ವರ್ಗ್ಯಂ=ಸ್ವರ್ಗ ಗತಿಗೆ ವಿರೋಧವಾದ, ಅಕೀರ್ತಿಕರಂ=ಅಪಕೀರ್ತಿಯನ್ನುಂಟು ಮಾಡುವ, ಇದಂ=ಈ, ಕಶ್ಮಲಂ=ಮೋಹವು, ವಿಷಮೇ= ವಿಷಮ ಸಮಯದಲ್ಲಿ, ಕುತಃ=ಹೇಗೆ, ತ್ವಾಂ=ನಿನ್ನನ್ನು, ಸಮುಪಸ್ಥಿತಂ=ಬಂದು ಸೇರಿತು?

**ವಿವರಣ :** ಭಗವಾನ್=ಭಗ+ವಾನ್.

೧) ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಶ್ರಿಯಃ ।
ವೈರಾಗ್ಯಸ್ಯಾಥ ಮೋಕ್ಷಸ್ಯ ಷಣ್ಣಾಂ ಭಗ ಇತೀರಣಾ ॥

ಭಗ ಎಂದರೆ ಸಮಗ್ರ ಐಶ್ವರ್ಯ, ಧರ್ಮ, ಯಶ, ಶ್ರೀ, ವಿರಾಗ, ಮೋಕ್ಷ ಈ ಆರು ಉಳ್ಳವನು ಭಗವಾನ್.

೨) ಉತ್ಪತ್ತಿಂ ಚ ವಿನಾಶಂ ಚ ಭೂತಾನಾಮಗತಿಂ ಗತಿಮ್ ।
ವೇತ್ತಿ ವಿದ್ಯಾಮವಿದ್ಯಾಂ ಸ ವಾಚ್ಯೋ ಭಗವಾನಿತಿ ॥

ಭೂತಗಳ ಉತ್ಪತ್ತಿ ವಿನಾಶ, ಪ್ರಾಪ್ತಿ ಅಪ್ರಾಪ್ತಿ ಹಾಗು ವಿದ್ಯೆ, ಅವಿದ್ಯೆ ಗಳನ್ನು ತಿಳಿದುಕೊಳ್ಳುವವನು ಭಗವಾನ್.

ಶ್ರೀಕೃಷ್ಣನಲ್ಲಿ ಈ ಸರ್ವ ಗುಣ ಲಕ್ಷಣಗಳು ಇದ್ದುದರಿಂದ ಅವನಿಗೆ "ಭಗವಾನ್" ಎನ್ನಲಾಗಿದೆ.

**ಭಗವಂತನು:-** "ಪಾರ್ಥ, ಇದು ವಿಷಮ ಕಾಲ. ಅನ್ಯಾಯ-ಅತ್ಯಾಚಾರಗಳನ್ನು ಸಮೂಲಾಗ್ರವಾಗಿ ಕಿತ್ತೆಸೆಯಲೇಬೇಕಾದ ಸಮಯ. ಅಧರ್ಮದೊಂದಿಗೆ ಯುದ್ಧ ಮಾಡಲೆಂದೇ ನಾವಿಷ್ಟು ಸಿದ್ಧತೆ ನಡೆಸಿದೆವು. ಇಂಥ ಸಮರ ಸಮಯದಲ್ಲಿ ಹೀಗೆ ಅಳುತ್ತ ಕೂಡುವದು ನಿನ್ನಂಥ ವೀರನಿಗೆ ತರವೆ? ಈ ಹೇಡಿಭಾವ ಅದೆಂತು ನಿನ್ನ ತಲೆ ಸೇರಿತು? ಅರ್ಜುನ, ನಿಜವಾಗಿಯೂ ನಿನ್ನ ಮನಸ್ಸು ಬಂಧು-ಬಾಂಧವರ ವ್ಯಾಮೋಹದಿಂದ ಕಲಕಿದೆ. ಈ ಪ್ರಾಪಂಚಿಕ ರತಿ ಪ್ರೇಮ ಹಾಗು ನಿಂದ್ಯವೆಂಬುದನ್ನು ತಿಳಿಯದಷ್ಟು ಮೂಢನಾದೆಯಲ್ಲ!"

"ಭಾರತ, ಪರಮಾತ್ಮನನ್ನು ಅರಿತ ಆರ್ಯರು, ವಿಷಯ ವಿಮುಖಿಗಳಾದ ಜ್ಞಾನೀ ಸಂತರು ನಿನ್ನೀ ಮೋಹಪ್ರಚೋದಿತ ದಯಾರ್ದ್ರತೆಯನ್ನು ಎಂತು ಮೆಚ್ಚಿಕೊಂಡಾರು? ನಿನ್ನ ಮತಿ ಮಂದವಾಗಿದೆ; ನಿನ್ನ ಚಿತ್ತ ಸಮತೋಲ ತಪ್ಪಿದೆ; ನಿನ್ನ ಅಪ್ರತಿಮ ಶೌರ್ಯ ಉಡುಗಿದೆ; ನೀನೀಗ ನಿರ್ವೀರ್ಯ ಮೋಹದ ಬಲೆಗೆ ಬಿದ್ದ ನಿಸ್ಸತ್ವ ಮನುಷ್ಯ! ಕ್ಷುಲ್ಲಕ ವಿಷಯಗಳಿಗಾಗಿ ಅಶ್ರು ಸುರಿಸುವ ಅಸಂಸ್ಕೃತ!!

"ಕೌಂತೇಯ, ವಿಷಯಾಭಿರತಿ ಹೋದಲ್ಲದೆ ೧) ಮೋಕ್ಷ ದೊರೆಯದು. ಸರ್ವ ವಸ್ತು ಪರಿತ್ಯಾಗ ಮಾಡಿದಲ್ಲದೆ ೨) ಸ್ವರ್ಗ ಸಿಗದು. ಪ್ರಾಪಂಚಿಕ ಆಸಕ್ತಿ ಕಡಿಮೆಯಾದಲ್ಲದೆ ೩) ಇಹಲೋಕದ ಕೀರ್ತಿ ಕೈಸಾರದು. ಮುಕ್ತಿ ಇಚ್ಛೈಸಿದ ಮಹಾತ್ಮರೆಲ್ಲ ಮನೆಯ ಹೊಸ್ತಿಲಿಗೆ ತುಳಸಿಯ ದಳವಿಟ್ಟು ನೀರು

ಬಿಟ್ಟು ಹೊರ ಹೊರಟರು; ಅಂತಸ್ಥ ರಣರಂಗದ ಮೇಲೆ ಮೋಹ – ವೈರಿ ಯೊಡನೆ ಸೆಣಸಿ, ವಿವೇಕ ಶಸ್ತ್ರದಿಂದಿರಿದು ಮುಕ್ತಿಮಂಡಲಕೇರಿದರು. ತಮ್ಮ ಗಳಿಕೆಯ ಕಣ ಕಣವನೆಲ್ಲ ದೇವ ದ್ವಿಜ ಗುರು ಪ್ರಾಜ್ಞ ಪ್ರೀತ್ಯರ್ಥ ದಾನವಿತ್ತು ಯಜ್ಞ ಮಾಡಿದ ಮಹಾನುಭಾವರು ಸ್ವರ್ಗಕ್ಕೆ ತೆರಳಿದರು. ರಾಜ್ಯ, ವೈಭವ, ಮಾನಗಳ ಭಾವ ನೀಗಿದ ಹರಿಶ್ಚಂದ್ರನಂಥ ದಾನಿಗಳ ಕೀರ್ತಿ ಅಜರಾಮರ ವಾಗಿದೆ. "

"ಪಾರ್ಥ, ನಿನಗೆ ಅನಂತ ಶಾಂತಿಯ ಮುಕ್ತಿ ಬೇಡವೆ? ಅಮಿತ ಸುಖದ ಸ್ವರ್ಗದ ಅಭಿಲಾಷೆ ನಿನಗಿಲ್ಲವೆ ? ಹೋಗಲಿ, ಅಳಿಯದಂಥ ಕೀರ್ತಿ ಯಾದರೂ ಬೇಡವೆ ? ಈ ಮೂರರಲ್ಲಿ ಯಾವುದನ್ನಾದರೂ ವರಿಸು; ಅದಕ್ಕೆ ಮೊದಲು ಈ ದುರ್ಬಲ ಹೃದಯಸ್ಥ ವ್ಯಾಮೋಹ ಬಿಟ್ಟು ಬಿಡಲೇ ಬೇಕು. ಮೋಹ ತ್ಯಾಗವಿಲ್ಲದ ಬದುಕು ಮುಡಿಹೀನ ಶೃಂಗಾರವೆಂಬುದನರಿ. "

"ಹೇಳು ಸವ್ಯಸಾಚಿಯೆ, ನಿನ್ನ ಈ ಕಣ್ಣೀರು ಯಾವುದಕ್ಕಾಗಿ? ಧರ್ಮ ಕ್ಕಾಗಿಯೆ? ಜ್ಞಾನಕ್ಕಾಗಿಯೆ? ದೇವನಿಗಾಗಿಯೆ? ಅಲ್ಲ; ಬರಿ ನಿನ್ನ ಮಡದಿ ಮಕ್ಕಳಿಗಾಗಿ! ಬಂಧು ಬಾಂಧವರಿಗಾಗಿ! ಎಷ್ಟು ಹೀನತೆಗಿಳಿದೆಯಲ್ಲ! ಮನೆ ಗಾಗಿ ದೇಹ, ಊರಿಗಾಗಿ ಮನೆ, ದೇಶಕ್ಕಾಗಿ ಊರ, ದೇವನಿಗಾಗಿ ದೇಶ ತ್ಯಜಿಸಬೇಕೆಂಬ ವೀರ ನೀತಿ ಮರೆತೇ ಹೋಯಿತೆ? ಸ್ಮರಿಸಿಕೊ; ನೀನು ಅಸಾಮಾನ್ಯ ವ್ಯಕ್ತಿ; ಸಾಕ್ಷಾತ್ ಶಿವನೊಂದಿಗೆ ಸೆಣಸಿದ ವೀರ; ಜಗತ್ ರಕ್ಷಕ ಧರ್ಮ ಪರಿಪಾಲಕ. ಧರ್ಮಕ್ಕಾಗಿ ನೀನು ಈ ಆಸಕ್ತಿ ತ್ಯಜಿಸು! ಆರ್ಯ ಜುಷ್ಟ ಮಾರ್ಗ ಹಿಡಿ! "

> ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ ತ್ವಯ್ಯುಪಪದ್ಯತೇ ।
> ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥೩॥

**ಅರ್ಥ:–** ಪಾರ್ಥ=ಕುಂತಿಯ ಪುತ್ರನೆ, ಕ್ಲೈಬ್ಯಂ=ಷಂಡತನವನ್ನು ಮಾಸ್ಮಗಮಃ=ಹೊಂದಬೇಡ, ಏತತ್=ಇದು, ತ್ವಯಿ=ನಿನ್ನಲ್ಲಿ, ನ ಉಪಪ- ದ್ಯತೇ=ಯೋಗ್ಯವಲ್ಲ, ಪರಂತಪ=ಶತ್ರು ಸಂಹಾರಕನೆ, ಕ್ಷುದ್ರಂ=ತುಚ್ಛವಾದ, ಹೃದಯ ದೌರ್ಬಲ್ಯಂ = ಮನಸ್ಸಿನ ದುರ್ಬಲತೆಯನ್ನು, ತ್ಯಕ್ತ್ವಾ = ಬಿಟ್ಟು ಉತ್ತಿಷ್ಠ=ಏಳು.

**ವಿವರಣ:–** "ಕೌಂತೇಯ, ನೀನು ಅಸಮ ಯೋದ್ಧಾ. ವೈರಿಗಳಿಗೆ, ಸಿಂಹಸ್ವಪ್ನ. ನಿನ್ನ ಗಾಂಡೀವದ ಒಂದು ಠೇಂಕಾರ ವಿರೋಧಿ ಸೈನ್ಯದಲ್ಲಿ ಹಾಹಾಕಾರವೆಬ್ಬಿಸುವುದಲ್ಲವೆ. ಅಂಥ ನಿನ್ನಲ್ಲಿ ಹೇಡಿತನವೇಕೆ? ಪುರುಷನಿಗೆ

ಶೋಭಿಸದ ಈ ಷಂಡತ್ವವೇಕೆ? ಈ ಕ್ಷುಪ್ರತೆಯ ಬಿಸಾಡು. ಈ ದೌರ್ಬಲ್ಯವನ್ನು ಈಡಾಡು, ಏಳು; ಎದ್ದೇಳು; ಎತ್ತಿಕೋ ಗಾಂಡೀವ. ಹೆದೆ ಏರಿಸು, ಹರಿತವಾದ ವಿವೇಕ ಬಾಣಗಳ ಹೂಡು. ಅರ್ಭಟಿಸು ಧರ್ಮಸಿಂಹದಂತೆ. ಉರುಳಲಿ ಮೋಹ-ಶತ್ರು-ಸೈನ್ಯ! ಮೋಹ ಶತ್ರು ಶವದ ಮೇಲೆ ಶಾಂತಿ ದೇವಾಲಯ ಕಟ್ಟಲಣಿಯಾದ ಶಿಲ್ಪಿ ನೀನು. ಏಕೆ ಹಿಂಜರಿವೆ? ನಿನ್ನ ಕರ್ತವ್ಯ ನೆರವೇರಿಸು. "

**ಅರ್ಜುನ ಉವಾಚ**

ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।
ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥೪॥

ಭಾವ : ಅರ್ಜುನ ನುಡಿದನು.

ಶತ್ರು ಸಂಹಾರಕನೆ, ಮಧುಸೂದನನೆ, ಪೂಜ್ಯರಾದ ಭೀಷ್ಮ ದ್ರೋಣರನ್ನು ನಾನು ಬಾಣಗಳಿಂದ ಎದುರಿಸಿ ಹೇಗೆ ಯುದ್ಧ ಮಾಡಲಿ?

ವಿವರಣ- "ಕೃಷ್ಣ, ನಾನು ಹೇಡಿತನದಿಂದ ಯುದ್ಧ ಮಾಡಲು ಹಿಂಜರಿಯುತ್ತಿದ್ದೇನೆಂದು ತಿಳಿಯದಿರು. ನಮ್ಮ ಸಂಸ್ಕೃತಿಯಲ್ಲಿ ಹಿರಿಯರಿಗೆ ಗುರುಗಳಿಗೆ ಉನ್ನತ ಸ್ಥಾನ. ಅವರೆದುರು ಹುಂ ಕಾರ ತ್ವಂ ಕಾರ ಸಲ್ಲದು. ಅವರೊಂದಿಗೆ ದುರುದ್ದೇಶದಿಂದ ವಾದಿಸುವದಾಗಲಿ, ಹರಟೆ ಕೊಚ್ಚುವದಾಗಲಿ ಸರಿಯಲ್ಲ. ಅವರನ್ನು ಪೂಜ್ಯ ಸ್ಥಾನದಲ್ಲಿಟ್ಟು ಮೃದು ಮಾತು, ನಯ ಆಚರಣೆ ಹಾಗು ಆದರ ಭಾವದಿಂದ ಸೇವಿಸಬೇಕು. ಇದು ನೀತಿ; ಧರ್ಮಕಟ್ಟಳೆ. ಭೀಷ್ಮ ದ್ರೋಣ ಕೃಪಾಚಾರ್ಯರು ನನ್ನ ವಿದ್ಯಾ ಗುರುಗಳು. ನನಗೆ ಬಂದ ಬಾಹು ಬಲ ಅವರಿಂದ; ಬಾಲಕನಾದಂದಿನಿಂದಲೂ ನನ್ನನ್ನು ಬೆಳೆಸಿ ಮಹಾ ಯೋಧನನ್ನಾಗಿ ಮಾಡಿದ್ದಾರೆ. ಅಂಥ ಅವರತ್ತ ಈಗ ಹರಿತವಾದ ಬಾಣಗಳನೆಂತು ಎಸೆಯಲಿ? ಅವರು ವಂದನಾರ್ಹರು, ವಧಾರ್ಹರಲ್ಲ ಎಂದು ನನ್ನ ಭಾವನೆ."

ಗುರೂನಹತ್ವಾ ಹಿ ಮಹಾನುಭಾವಾನ್
ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।
ಹತ್ವಾರ್ಥಕಾಮಾಂಸ್ತು ಗುರೂನಿಹೈವ
ಭುಂಜೀಯ ಭೋಗಾನ್ರುಧಿರಪ್ರದಿಗ್ಧಾನ್ ॥೫॥

ಅರ್ಥ:- ಮಹಾನುಭಾವಾನ್=ಮಹಾನುಭಾವರಾದ, ಗುರೂನ್=ಗುರುಗಳನ್ನು ಅಹತ್ವಾ=ಕೊಲ್ಲದೆ, ಇಹಲೋಕೇ=ಈ ಲೋಕದಲ್ಲಿ ಭೈಕ್ಷ್ಯಂಅಪಿ=

ಭಿಕ್ಷಾನ್ನವನ್ನಾದರೂ ಭೋಕ್ತುಂ=ತಿನ್ನುವದು ಶ್ರೇಯಃ=ಒಳ್ಳೆಯದು. ತು= ಆದರೆ ಅರ್ಥಕಾಮಾನ್=ಅರ್ಥ ಅಪೇಕ್ಷಿಗಳಾದ ಗುರೂನ್=ಗುರುಗಳನ್ನು ಹತ್ವಾ=ಕೊಂದು. ರುಧಿರ ಪ್ರದಿಗ್ಧಾನ್= (ರುಧಿರೇಣ ಪ್ರದಿಗ್ಧಾನ್ ಪ್ರಕರ್ಷೇಣ ಲಿಪ್ತಾನ್) ವಿಶೇಷ ರಕ್ತಲಿಪ್ತವಾದ. ಭೋಗಾನ್=ಭೋಗಗಳನ್ನು ಇಹ ಏವ=ಈ ಲೋಕದಲ್ಲಿಯೇ ಭುಂಜೀಯ=ಅನುಭವಿಸಬೇಕಾಗುವದು.

ವಿವರಣ– "ಗೋವಿಂದ. ದ್ರೋಣಾಚಾರ್ಯರು, ಭೀಷ್ಮಾಚಾರ್ಯರು ಹಾಗು ಕೃಪಾಚಾರ್ಯರು ನಮಗೆಲ್ಲ ಆದರಣೀಯ ಗುರುಗಳು. ಅವರನ್ನು ಕೊಲ್ಲುವದಕ್ಕಿಂತ ಈ ಯುದ್ಧ ಬಿಟ್ಟು ಅನ್ನಾನ್ನಗತಿಕನಾಗಿ ಭಿಕ್ಷೆ ಬೇಡುವದೇ ಉಚಿತ. ಇವರ ಪ್ರಾಣ ಹೀರಿ ರಾಜ್ಯಭೋಗ ಹಾಗು ವಿಷಯಭೋಗ ಉಣ್ಣುವದೆಂದರೆ ರಕ್ತಲಿಪ್ತ ಭೋಗ ಉಂಡಂತೆ. ಅಥವಾ. ಈ ಗುರುಗಳು ಧರ್ಮ ಹೀನರಾಗಿ ಅರ್ಥ ಕಾಮಗಳನ್ನು ಬಯಸುತ್ತಾರೆ ಎಂದಿಟ್ಟುಕೊಳ್ಳುವಾ. ಆಗಲಾದರು ಏನು ? ಅಂಥ ಅಧರ್ಮಿಗಳ ಕೊಂದು ಅವರು ಭೋಗಿಸಿದ ವೈಭವ ಉಣ್ಣುವದೂ ರಕ್ತ ಈಂಟುವದೂ ಒಂದೇ ಅಲ್ಲವೆ?"

ವಿಮರ್ಶೆ: ೧) ಗುರುತ್ವ ಎಲ್ಲರಿಗೂ ಸಿಗದು. ನಾಲ್ಕು ಅಕ್ಷರ ಕಲಿಸಿದ ಮಾತ್ರಕ್ಕೆ, ನಾಲ್ಕು ಅಕ್ಷರಗಳನ್ನು ತಿಳಿಸಿದ ಮಾತ್ರಕ್ಕೆ ಒಬ್ಬ ವ್ಯಕ್ತಿ ಗುರುವಾಗಲಾರ. ಒಂದು ಸ್ಮೃತಿ ವಚನ ಹೀಗಿದೆ.

ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ |
ಉತ್ಪಥ ಪ್ರತಿಪನ್ನಸ್ಯ ಪರಿತ್ಯಾಗೋ ವಿಧೀಯತೇ ||

"ನಾನು ಶ್ರೇಷ್ಠ ಎಂಬ ಅಭಿಮಾನದಲ್ಲಿ ಮುಳುಗಿದವ, ಕಾರ್ಯ ಅಕಾರ್ಯಗಳನ್ನು ತಿಳಿಯದವ, ಸದಾ ಕೇಡಿನ ಮಾರ್ಗದಲ್ಲಿ ನಡೆಯುವವ ಗುರುವಲ್ಲ! ಅವನನ್ನು ಪರಿತ್ಯಜಿಸಬೇಕು.' ಈ ವಚನದಂತೆ ವಿಚಾರ ಮಾಡಿದಾಗ. ದ್ರೋಣ ಭೀಷ್ಮಾದಿ ಆಚಾರ್ಯರು ಅರ್ಜುನನಿಗೆ ಶಸ್ತ್ರ ವಿದ್ಯೆ ಕಲಿಸಿದ ಗುರುಗಳೇನೋ ನಿಜ; ಆದರೆ ಅವರಲ್ಲಿ ತಾವು ಅಪ್ರತಿಮ ವೀರರೆಂಬ ಗರ್ವವಿದೆ; ಯಾವುದು ಯೋಗ್ಯ ಯಾವುದು ಅಯೋಗ್ಯ ಎಂಬ ಕಾರ್ಯ ಪ್ರಜ್ಞೆ ಇಲ್ಲ. ಎಂತಲೇ ತೆರೆದ ಸಭೆಯಲ್ಲಿ ಒಬ್ಬ ಪತಿವ್ರತೆಯ ಮಾನ ಭಂಗವಾಗುವಾಗ ತೆಪ್ಪಗೆ ಕುಳಿತರು ! ( ಇಂಥ ಅಸುರೀ ಆಚರಣೆಯು ಯಾವ ಸಭೆಗೆ ಭೂಷಣ ? ಯಾವ ಸಮಾಜಕ್ಕೆ ಒಪ್ಪಿತ ? ಯಾವ ನೀತಿಗೆ ಸಂಗತ ? ಯಾವ ತತ್ತ್ವಕ್ಕೆ ಸಮ್ಮತ ? ಈ ಘಟನೆ ಅಧಿಕಾರ ದುರುಪಯೋಗದ ಪ್ರತ್ಯಕ್ಷ ನಿದರ್ಶನ ! ) ಅಷ್ಟೇ ಅಲ್ಲ, ಆ ಆಚಾರ್ಯರು

ತಮ್ಮ ಹಿರಿತನ ಮುದಿತನ ಮರೆತು ಚಿಕ್ಕವರಾದ ಅರ್ಜುನಾದಿಗರೊಂದಿಗೆ ಕಾದಲು ನಿಂತರು. ಅವರು ತುಳಿದ ಮಾರ್ಗ ಕೆಡಕಿನದು. ಆದ್ದರಿಂದ ಅವರ ಗುರುತ್ವವ ನಿರಾಕರಿಸುವದು ಶಾಸ್ತ್ರ ಸಮ್ಮತ; ಅವರನ್ನು ಗುರುವೆಂದು ಭಾವಿಸಿ, ಅವರ ಪ್ರಾಣ ತೆಗೆಯುವದಕ್ಕಿಂತ ಭಿಕ್ಷೆ ಯೋಗ್ಯವೆಂದು ಹೇಳುವ ಅರ್ಜುನನ ಮಾತು ಅರ್ಥಹೀನ.

೨) ಮಹಾನುಭಾವ ಎಂದರೆ ಶಾಸ್ತ್ರ ಕೋವಿದ, ತಪಸ್ವಿ, ಸದಾಚಾರ ಹಾಗು ಸದ್ಭಾವಿ. ಅವರ ಮೇಲೆ ಕೈ ಎತ್ತಬಾರದು. ಇದು ವಿಧಿ. ದ್ರೋಣಾದಿ ಆಚಾರ್ಯರು ಮಾತ್ರ ಶಾಸ್ತ್ರ ಕೋವಿದರೇನೋ ನಿಜ, ಆದರೆ ತಪಸ್ವಿಗಳಲ್ಲ ಸದಾಚಾರಿ ಸದ್ಭಾವಿಗಳಲ್ಲ.

'ಹಿಮಹಾನುಭಾವಿ' ಈ ಪದಕ್ಕೆ ಇನ್ನೊಂದು ಅರ್ಥವಿದೆ. ಹಿಮ+ಹಾ +ಅನುಭಾವಿ=ಹಿಮನಾಶಕ ಸೂರ್ಯನು ಹಿಮಹಾ; ಅದರಂತೆ ಮಾನವನ ಜಾಡ್ಯವನ್ನು ನಾಶ ಮಾಡುವವ ಹಿಮಹಾ. ಆ ಹಿಮಹಾ ಕಲೆಯ ಅನುಭವವುಳ್ಳವನು ಹಿಮಹಾನುಭಾವಿ. ದ್ರೋಣಾದಿ ಆಚಾರ್ಯರು ಬುದ್ಧಿ ಜಾಡ್ಯ ತೆಗೆ ಪ್ರಚೋದನ ಇತ್ತರೇ ವಿನಃ ಅದನ್ನು ಅಳಿಸಿ ಹಾಕಲಿಲ್ಲ. ಅಷ್ಟೇ ಏಕೆ? ತಮ್ಮ ಜಾಡ್ಯವನ್ನು ನಿವಾರಿಸಿಕೊಳ್ಳುವ ಬಲವೂ ಅವರಲ್ಲಿರಲಿಲ್ಲ ಇಂಥವರಿಗೆ ಮಹಾನುಭಾವಿ ಗುರುವೆಂದು ಹೇಳುವದು ಹೇಗೆ?

೩) ಈ ಆಚಾರ್ಯರು ಅನ್ನ ವಸ್ತ್ರ ವಸತಿ ಮಾನಗಳಿಗಾಗಿ ಬಾಳಿದವರು.

"ಅರ್ಥಸ್ಯ ಪುರುಷೋಃ ದಾಸೋಃ ದಾಸಸ್ತ್ವರ್ಥೋ ನ ಕಸ್ಯಚಿತ್ ।
ಇತಿ ಸತ್ಯಂ ಮಹಾರಾಜ ಬದ್ಧೋಽಸ್ಮ್ಯರ್ಥೇನ ಕೌರವೈಃ ॥"

ಮಹಾರಾಜ, ಪುರುಷನು ಅರ್ಥದ ದಾಸ; ಅರ್ಥಮಾತ್ರ ಯಾರ ದಾಸವೂ ಅಲ್ಲ. ಇದು ಸತ್ಯ. ನಾನಾದರೋ ಕೌರವರ ಅರ್ಥದಿಂದ ಬದ್ಧನಾಗಿದ್ದೇನೆ. ಹೀಗೆ ಭೀಷ್ಮನೇ ಹೇಳಿಕೊಂಡಿದ್ದಾನೆ. ಸವಿ ಭೋಜನಕ್ಕಾಗಿ, ಅಧಿಕಾರ ಹುದ್ದೆಗಳಿಗಾಗಿ ಮರುಳಾದ ಆಚಾರ್ಯರು ಅರ್ಥ ಕಾಮಿಗಳು. ಸಂಸಾರ ಬದ್ಧರು. ಅವರೆಂದಿಗಾದರೂ ಗುರುಪದಯೋಗ್ಯರೆನಿಸಬಹುದೆ? ಧರ್ಮಕ್ಕಾಗಿ ಸಾಂಸಾರಿಕ-ಉಪಕಾರ ಮರೆತು ಹೊರ ಬರಬಲ್ಲ ವ್ಯಕ್ತಿ ಧೀರ, ಜ್ಞಾನಿ. ಅವನಿಗೆ ಯಾರ ಹಂಗಿಲ್ಲ. ಯಾರ ದಾಸನೂ ಅವನಲ್ಲ. ಅವನ ಬಾಳು ಅರ್ಥ ಹಾಗು ರಾಜ್ಯಗಳಿಗಲ್ಲ; ಧರ್ಮ ಮುಕ್ತಿಗಳಿಗಾಗಿ.

ಜಗವೆಲ್ಲ ಕಾಮದ ಕಿಂಕರ; ಧನದ ಸೇವಕ. ಮನೆ ಮಡದಿ ಮಕ್ಕಳ ದಾಸಾನುದಾಸರಾಗಿ ಜನರು ದುಡಿಯುತ್ತಿದ್ದಾರೆ. ಮನೆಯವರ ಎರಡು

ಸವಿಮಾತು, ಬಿಸಿ ಭೋಜನ ಪುರುಷರನ್ನು ಬಂಧಿಸಿದೆ. ಕಾಗೆಯಿಂದ ಬಹುಕಾಲ ಪೋಷಣೆ ಪಡೆದು (ವಸಂತ) ಸಮಯ ಬಂದಾಗ ಕಾಗೆಯು ಉಪಕಾರ ಸ್ಮರಿಸಲು ನಿಲ್ಲದೆ ಹಾರಿ ಹೋಗುವ ಕೋಗಿಲೆಯಂತೆ, ಪ್ರಾಪಂಚಿಕರ ಉಪಕಾರ ಮರೆತು ಸ್ವತಂತ್ರವಾಗಿ ಹಾರಿಹೋಗುವದು ಸಾಧಕ-ಕೋಗಿಲೆಯ ಕರ್ತವ್ಯ. ಅಂಥ ಸಾಧಕ ಜಾಣ! ಅವನಿಗೆ ಮುಕ್ತಿ ಕಾದಿದೆ.

೪) ಕೊನೆಯದಾಗಿ, ದ್ರೋಣಾದಿ ಆಚಾರ್ಯರು ಅರ್ಜುನನಿಗೆ ಆತ್ಮವಿದ್ಯೆ ನೀಡಲಿಲ್ಲ, ನೀತಿ ಧರ್ಮ ಕಲಿಸಲಿಲ್ಲ ಅವರು ಕಲಿಸಿದುದು ಶಸ್ತ್ರ ಪ್ರಯೋಗ ಕಲೆ. ಆ ಕಲೆಗೆ ತಾತ್ವಿಕ ಜಗತ್ತಿನಲ್ಲಿ ಸ್ಥಾನವಿಲ್ಲ. ಅವರಿಗೆ ದೊರೆಯುವ ಗುರುತ್ವ ಅತೀ ಸಾಮಾನ್ಯ. ಅವರೊಂದಿಗೆ ಧರ್ಮಕ್ಕಾಗಿ ಸಮರ ಮಾಡುವದು ಅಧರ್ಮವಲ್ಲ. ಅವರನ್ನು ಕೊಲ್ಲುವದೂ ಪಾಪವಲ್ಲ!!

ನ ಚೈತದ್ವಿದ್ಮಃ ಕತರನ್ನೋ ಗರೀಯೋ
ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।
ಯಾನೇವ ಹತ್ವಾ ಜಿಜೀವಿಷಾಮಃ
ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥೬॥

**ಭಾವ:-** ಅವರನ್ನು ನಾವು ಜಯಿಸುತ್ತೇವೆಯೋ, ಅವರು ನಮ್ಮನ್ನು ಜಯಿಸುತ್ತಾರೆಯೋ ಯಾರು ಬಲ್ಲರು? ಅಲ್ಲದೆ ಇವೆರಡರಲ್ಲಿ ಯಾವುದು ಶ್ರೇಷ್ಠವೆಂಬುದನ್ನು ನಾವು ಅರಿಯೆವು. ಯಾರನ್ನು ಕೊಂದು ಬದುಕಲು ನಮಗಿಷ್ಟವಿಲ್ಲವೋ ಅವರೇ ನಮ್ಮೆದುರು ನಿಂತಿದ್ದಾರೆ.

**ವಿವರಣೆ:-** "ಯಾವವ. ಹಿಂಸಾತ್ಮಕ ಯುದ್ಧ ಕ್ಷತ್ರಿಯ ಧರ್ಮ. ಅಹಿಂಸೆ ಸನ್ಯಾಸ ಧರ್ಮ. ಅವುಗಳಲ್ಲಿ ಯಾವುದು ವರಣೀಯ? ನನಗಂತು ತಿಳಿಯದು. ಹೋಗಲಿ, ನಮಗೆಯೇ ಜಯವಾದೀತು, ಅಥವಾ ಅವರಿಗೆಯೇ ಜಯವಾದೀತು ಎಂಬುದನ್ನಾದರು ಅರಿತವರಾರು? ಒಂದು ವೇಳೆ ಯಶೋಶ್ರೀ ನಮ್ಮದೆಂದೇ ಭಾವಿಸೋಣ; ಹಾಗಾದರೂ ಅದೊಂದು ಬಗೆಯ ಅಪಜಯವೇ ಸರಿ. ಏಕೆಂದರೆ, ನಮಗೆ ಇಷ್ಟರಾದ ಹಿರಿಯರನ್ನು, ಬಂಧುಬಾಂಧವರನ್ನು, ಪುತ್ರ ಪೌತ್ರರನ್ನು ಕೊಂದು ನಮ್ಮಷ್ಟಕ್ಕೆ ನಾವು ರಾಜ್ಯವಾಳುವಲ್ಲಿ ಏನರ್ಥವಿದೆ? ಬಂಧುಗಳಿಲ್ಲದ ವೈಭವ, ವಿಜಯ ಕಳಾಹೀನ! ಅದು ಗೆದ್ದು ಪಡೆವ ಸೋಲಲ್ಲವೆ?"

ಕಾರ್ಪಣ್ಯದೋಷೋಪಹತಸ್ವಭಾವಃ
ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ।

ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ ॥೭॥

ಅರ್ಥ:- ಕಾರ್ಪಣ್ಯ ದೋಷೋಪಹತಸ್ವಭಾವಃ=(ಏತಾನ್ ಹತ್ವಾಕಥಂ ಜೀವಿಷ್ಯಾಮ ಇತಿ ಕಾರ್ಪಣ್ಯಂ. ಸ್ವಕುಲಕ್ಷಯ ಕೃತಃ ದೋಷಃ. ತಾಭ್ಯಾಂ ಉಪಹತಃ ಅಭಿಭೂತಃ ಸ್ವಭಾವಃ. ಇವರನ್ನು ಕೊಂದು ಹೇಗೆ ಬದುಕಲಿ? ಎನ್ನುವದು ಕಾರ್ಪಣ್ಯ. ಸ್ವಕುಲ ಕ್ಷಯ ಮಾಡುವದು ದೋಷ. ಅವೆರಡರಿಂದ ಕೂಡಿದ ಸ್ವಭಾವ.) ದೈನ್ಯತೆ ಹಾಗು ಕುಲನಾಶ ದೋಷಗಳಿಂದ ಕೂಡಿದ ಸ್ವಭಾವವುಳ್ಳವನಾಗಿ ಧರ್ಮ-ಸಮ್ಮೂಢ ಚೇತಾಃ= (ಧರ್ಮೇ ಸಮ್ಮೂಢಂ ಚೇತೋ ಯಸ್ಯ ಸಃ : ಧರ್ಮದ ವಿಷಯದಲ್ಲಿ ಯಾವನ ಬುದ್ಧಿ ಮೂಢವಾಗಿದೆಯೋ ಅವನು.) ಧರ್ಮ ವಿಷಯಕ ಮೂಢ ಮನಸ್ಸಿನವನಾಗಿ ತ್ವಾಂ= ನಿನ್ನನ್ನು ಪೃಚ್ಛಾಮಿ= ಪ್ರಶ್ನೆಮಾಡುತ್ತೇನೆ. ಮೇ= ನನಗೆ ಯತ್=ಯಾವುದು, ಶ್ರೇಯಃ= ಶ್ರೇಯಸ್ಕರವೋ ತತ್= ಅದನ್ನು ನಿಶ್ಚಿತಂ= ನಿಶ್ಚಯ ಪೂರ್ವಕವಾಗಿ ಬ್ರೂಹಿ= ಹೇಳು ಅಹಂ= ನಾನು ತೇ= ನಿನ್ನ ಶಿಷ್ಯಃ= ಶಿಷ್ಯನು. ತ್ವಾಂ= ನಿನ್ನನ್ನೇ ಪ್ರಪನ್ನಂ= ಶರಣು ಹೊಂದಿದ ಮಾಂ= ನನ್ನನ್ನು ಶಾಧಿ= ಶಿಕ್ಷಿಸು (ಸರಿಯಾದ ಮಾರ್ಗದಲ್ಲಿ ನಡೆಸು).

ವಿವರಣೆ: ಕಾರ್ಪಣ್ಯ ಎರಡು ವಿಧ : (೧) ಲೌಕಿಕ:- ಗಳಿಸಿದುದನ್ನು ಪ್ರಸಂಗ ಬಂದರೂ ವ್ಯಯಮಾಡದೆ ಕಾಪಾಡುವದು; ವ್ಯಯಮಾಡಲೇಬೇಕಾಗಿ ಬಂದರೆ ಸಂತಾಪ ಪಡುವದು ಲೌಕಿಕ ಕಾರ್ಪಣ್ಯ. (೨) ಆಧ್ಯಾತ್ಮಿಕ:- "ಯೋವಾ ಏತದಕ್ಷರಂ ಗಾರ್ಗ್ಯವಿದಿತ್ವಾ ಏತಸ್ಮಾಲ್ಲೋಕಾತ್ಪ್ರೈತಿ ಸಃ ಕೃಪಣಃ" ಗಾರ್ಗಿಯೆ, ಯಾವನು ಈ ಅಕ್ಷರ ಸ್ವರೂಪ ಆತ್ಮನನ್ನು ತಿಳಿಯದೆ ಇಹಲೋಕ ತ್ಯಜಿಸುವನೋ ಅವನು ಕೃಪಣ. (ಯಾಜ್ಞವಲ್ಕ್ಯ). ದೈಹಿಕ, ಮಾನಸಿಕ ಶಕ್ತಿಗಳನ್ನು ತಿಲಾಂಶವೂ ಆತ್ಮ ದರ್ಶನಕ್ಕಾಗಿ ವಿನಿಯೋಗಿಸದಿರುವದು ಆಧ್ಯಾತ್ಮಿಕ ಕಾರ್ಪಣ್ಯ.

ಪ್ರಸ್ತುತ ಮಂತ್ರದಲ್ಲಿ ಬಂದ ಕಾರ್ಪಣ್ಯ ಈ ಎರಡರಿಂದ ಭಿನ್ನ. ಎಲ್ಲರೂ ಸತ್ತಾಗ ಜೀವಿಸುವದು ಹೇಗೆ? ಎಂಬ ಚಿತ್ತಾತಂಕವೇ ಇಲ್ಲಿ ಕಾರ್ಪಣ್ಯದರ್ಥ. ಅದೇ ರೀತಿ, ಕುಲಾಕುಲ ಹಾಗು ಸನಾತನ ವರ್ಣಾಶ್ರಮ ಧರ್ಮಗಳು ಹಾಳಾಗುವವಲ್ಲ ಎಂದು ಚಿಂತಿಸುವದು ದೋಷ.

ಅರ್ಜುನ ನುಡಿಯುತ್ತಿದ್ದಾನೆ- "ಮಧುಸೂದನ ನಾನಂತು ಕಾರ್ಪಣ್ಯ ಮತ್ತು ದೋಷಗಳಿಂದ ಜರ್ಜರಿತನಾಗಿರುವೆ. ನನ್ನಲ್ಲಿಯ ಶೌರ್ಯ, ಕೌಶಲ್ಯ

ಹಾಗು ಉತ್ಸಾಹಗಳು ಕ್ಷಯಿಸಿವೆ. ತಲೆ ಮಂದವಾಗಿದೆ. ಯಾವುದು ಸರಿ, ಯಾವುದು ತಪ್ಪು ತಿಳಿಯುತ್ತಿಲ್ಲ. ಗೋವಿಂದ, ನನಗೆ ಶ್ರೇಯಸ್ಕರವಾದುದನ್ನು ನಿಶ್ಚಯಪೂರ್ವಕ ಹೇಳು. ನಾನೊಬ್ಬ ನಿನ್ನ ಹಳೆಯ ಗೆಳೆಯನೆಂದು ಭಾವಿಸ ಬೇಡ. ಇದೋ ನಿನಗೆ ಶರಣಾಗಿದ್ದೇನೆ. ಶಿಷ್ಯನೆಂದು ಸ್ವೀಕರಿಸು, ಕೃಪೆ ಮಾಡು, ಮಾರ್ಗದರ್ಶಿಸು.

ವಿವೇಚನಾ: ೧)ನ ಚ ಶ್ರೇಯೋಽನು ಪಶ್ಯಾಮಿ ೨) ನ ಕಾಂಕ್ಷೇ ವಿಜಯಂ ೩) ಅಪಿತು ತ್ರೈಲೋಕ್ಯ ರಾಜ್ಯಸ್ಯ ಹೇತೋಃ ೪) ನಾಕೇ ನಿಯತಂ ವಾಸಃ ೫) ಕಿಂ ನೋ ರಾಜ್ಯೇನ ಗೋವಿಂದ ೬) ಕಿಂ ಭೋಗೈಃ ೭) ಯದ್ಯಪ್ಯೇತೇ ನ ಪಶ್ಯಂತಿ ೮) ತನ್ಮೇ ಕ್ಷೇಮತರಂ ಭವೇತ್ ೯) ಶ್ರೇಯೋಭೋಕ್ತುಂ ಭೈಕ್ಷ್ಯಮಪಿ ಇಲ್ಲಿಯ ವರೆಗೆ ಅರ್ಜುನನ ಮುಖದಿಂದ ಹೊರಬಂದ ಪ್ರಮುಖ ಮಾತುಗಳಿವು.

ಈ ಮಾತುಗಳು ಅನುಕ್ರಮವಾಗಿ ೧) ಶ್ರೇಯಾಶ್ರೇಯ ವಿವೇಕ ೨) ಐಹಿಕ ಫಲ ವಿರಾಗ ೩) ಪಾರಲೌಕಿಕ ವಿರಾಗ ೪) ಸ್ಥೂಲ ದೇಹಾತಿರಿಕ್ತ ಆತ್ಮನಲ್ಲಿ ಆಸ್ತಿಕ್ಯಭಾವ ೫) ಶಮ ೬) ದಮ ೭) ನಿರ್ಲೋಭತಾ ೮) ತಿತಿಕ್ಷಾ ೯) ಭಿಕ್ಷಾಚರ್ಯ ಈ ಒಂಭತ್ತು ಸಾಧಕ ಲಕ್ಷಣಗಳನ್ನು ಉಪಲಕ್ಷಿಸುತ್ತವೆ. ಆದುದರಿಂದ ಅರ್ಜುನ ದೈವೀಗುಣ ಸಂಪನ್ನನಾಗಿದ್ದ; ಹೀಗೆ ಕೆಲವರ ಅಭಿಪ್ರಾಯ. ಆದರಿದು ಸಮಂಜಸವಲ್ಲ. ಅವನಲ್ಲಿ ತೋರಿದ ಈ ಗುಣಗಳು ಬರಿ ಭಾಸಮಾತ್ರ; ಅವನ ವಿರಾಗ ಕ್ಷಣಿಕ; ಸ್ಮಶಾನ ವೈರಾಗ್ಯದಂತೆ! ಅರ್ಜುನನ ಹೃದಯ ಸಕಲ್ಮಷ. ಬಂಧು ಬಾಂಧವರ ಮೋಹ ಬೇರು ಬಿಟ್ಟಿದೆ. ಎಲ್ಲಿ ವ್ಯಾಮೋಹವೋ ಅಲ್ಲಿ ವಿವೇಕ ವಿರಾಗಗಳು ಅರಳಲಾರವು; ಇದು ಸಿದ್ಧಾಂತ.

ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್
ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಂ
ಅವಾಪ್ಯ ಭೂಮಾವಸಪತ್ನಮೃದ್ಧಂ
ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥೮॥

ಭಾವ:- ಈ ಭೂಮಿಯಲ್ಲಿ ಶತ್ರುಶೂನ್ಯವಾದ ಸಮೃದ್ಧ ರಾಜ್ಯವನ್ನು ಹೊಂದಿದರೂ, ದೇವತೆಗಳ ಆಧಿಪತ್ಯ ದೊರೆತರೂ ಈ ಶೋಕ ಮಾತ್ರ ನನ್ನ ಇಂದ್ರಿಯಗಳನ್ನು ಕ್ಷಯಗೊಳಿಸದೆ ಬಿಡದು. ಈ ಶೋಕ ನಿವಾರಕ ಉಪಾಯ ಯಾವುದು? ನನಗಂತು ತಿಳಿಯದು; ತಾವೇ ತಿಳಿಸಬೇಕು.

ವಿವೇಚನೆ:- ಅರ್ಜುನ- "ಜನಾರ್ದನ, ನನ್ನ ಸಂಕಲ್ಪಗಳನ್ನು ಏನೆಂದು

ಹೇಳಲಿ? ತಲೆ ತುಂಬ ಅನೇಕ ಸಂದೇಹಗಳು ತಾಂಡವಿಸುತ್ತಿವೆ. ಧರ್ಮದ ದಾರಿ ಕಾಣದು. ಸತ್ಯದ ಸುಳಿವು ಹತ್ತದು. ನನ್ನ ದೇಹ, ಮನ, ಬುದ್ಧಿ, ಇಂದ್ರಿಯಗಳನ್ನು ಈ ಸಂಶಯಭೂತ ಕಬಳಿಸುತ್ತಿದೆ. ನನ್ನ ಅಂತರಂಗದಲ್ಲಿ ಶೋಕ ಸಂತಪಿಸುತ್ತಿದೆ. ಇಹದ ನಿರಂಕುಶ ಸಾರ್ವಭೌಮತ್ವದಿಂದಾಗಲಿ, ಪರದ ಏಕಹಸ್ತಿಕ ಆಧಿಪತ್ಯದಿಂದಾಗಲಿ ನನ್ನೀ ಶೋಕ ಶಾಂತವಾಗದು.

"ಹೇಳು ಕೇಶವ, ಸ್ನೇಹ ಸೌಜನ್ಯತೆಗಳ ತುಳಿದು ಲಕ್ಷಾಂತರ ಜೀವಿಗಳ ಹರಣ ಹೀರುವ ಯುದ್ಧವಿದು ಧರ್ಮವೆ? ಮಾನವೀಯತೆಯನ್ನು ಉಪೇಕ್ಷಿಸಿ ರಣಭೈರವಿಗೆ ನರಬಲಿ ಈಯುವದು ಶಾಸ್ತ್ರಸಮ್ಮತವೆ? ಸಾಂಸಾರಿಕ ವ್ಯಾಮೋಹ ತರವಲ್ಲ ಎಂಬ ಕಾರಣವಿತ್ತು ಗುರು ಬಂಧು ಬಾಂಧವರ ಕೊರಳ ಬಿಸಿ ರಕ್ತ ಈಂಟುವದು ತತ್ತ್ವನಿಷ್ಠವೆ? ನಮ್ಮ ಸ್ವಾರ್ಥ ಸಾಧನೆಗಾಗಿ, ಧರ್ಮದ ಮುಖ ವಾಡ ಹೊದ್ದು ನಮ್ಮ ಸೋದರರ ಅಮಾನುಷ ಕೊಲೆಗೈಯುವದು ನೀತಿಯೆ?

"ಹೃಷೀಕೇಶ, ಅಹಿಂಸೆ ಸಹಾನುಭೂತಿ ಸಹನಶೀಲತೆಗಳನ್ನು ಕ್ಷತ್ರಿಯನಾದ ನಾನು ಪರಿಸಬಾರದೆ? ಹಾಗೆ ಮಾಡಿದರೆ ಅದು ಅಧರ್ಮವೆನ್ನುವಿಯಾ? ಭಗ ವಾನ್, ನನ್ನ ಚಿತ್ತ ಸ್ಥಿಮಿತ ತಪ್ಪುತ್ತಿದೆ. ಹಿಂದೆಂದೂ ತಲೆ ಎತ್ತಿರದ ಶಂಕೆ ಇಂದು ನನ್ನಲ್ಲಿ ಭೂತಾಕಾರ ತಾಳಿದೆ. ಅದರಿಂದ ಉಂಟಾದ ದುಃಖ, ಶೋಕ ಅಪಾದ ಮಸ್ತಕ ನನ್ನನ್ನು ದಹಿಸುತ್ತಿದೆ. ಸತ್ಯದರ್ಶನವಿಲ್ಲದೆ ಕಂಗೆಟ್ಟಿದ್ದೇನೆ! ನನ್ನೆಲ್ಲ ಸಂಶಯಗಳಿಗೆ ಸರಿಯಾದ ಪರಿಹಾರ ನೀಡಿ ಮಾರ್ಗ ತೋರಿಸು. ಶಾಂತಿ ಯನ್ನು ಅನುಗ್ರಹಿಸು. ನಾನಂತು ಯುದ್ಧ ಮಾಡಲಾರೆ!"

**ಸಂಜಯ ಉವಾಚ**

ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪ ।<br>
ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವಹ ॥೯॥<br>
ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।<br>
ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥೧೦॥

**ಭಾವ:–** ಸಂಜಯ ನುಡಿದ- "ಧೃತರಾಷ್ಟ್ರ, ಅರ್ಜುನನು ಈ ರೀತಿ ಕೃಷ್ಣನಿಗೆ ವಿನಂತಿಸಿ, 'ನಾನು ಯುದ್ಧ ಮಾಡಲಾರೆ' ಎಂದು ಹೇಳಿ ಸುಮ್ಮನಾದ; ಉದಾಸೀನ ಭಾವ ತಾಳಿ, ಭಗವಂತನ ಪಾದಬಳಿ ಕುಸಿದು ಕುಳಿತ. ಹೀಗೆ ಎರಡೂ ಸೇನೆಗಳ ನಡುವೆ ಹತಾಶನಾಗಿ ಕೈಚೆಲ್ಲಿ ಕುಳಿತ ಅರ್ಜುನನ ಸ್ಥಿತಿ ಕಂಡು ಶ್ರೀ ಕೃಷ್ಣನು ಮನದಲ್ಲಿಯೇ ಮರುಗಿದ. ಹೊರಗೆ ಮಾತ್ರ ತೋರಿಕೆಯ ನಗುವಿ ನೊಂದಿಗೆ ಮಾತನಾಡಲು ತೊಡಗಿದ."

**ಅನುಬಂಧ:–** ಯುದ್ಧವಿದು ನರಮೇಧ, ಹಿಂಸೆಯು ವಿಕಟ ನೃತ್ಯ. ಆದ್ದರಿಂದ ಯುದ್ಧ ಮಾಡಲಾರೆ ಎಂದು ತನ್ನ ಸಹಜ ನಿರ್ಣಯ ತಿಳಿಸಿದ್ದರೆ ಭಗವಂತನು ಮರುಕ ಪಡುವ ಪ್ರಮೇಯವೇ ಉಳಿಯುತ್ತಿರಲಿಲ್ಲ. ಅರ್ಜುನನ ಮಾತುಗಳಲ್ಲಿ ಭಗವಂತನು ದಟ್ಟವಾದ ಮೋಹ ಕಾರ್ಮೋಡಗಳನ್ನು ಕಂಡ! ವೀರ ಧೀರನಾದ, ಪುರುಷ ವ್ಯಾಘ್ರನಾದ ಪಾಂಡವನು ಬಂಧು ಬಾಂಧವರ ಪ್ರಾಪಂಚಿಕ ವ್ಯಾಮೋಹದಲ್ಲಿ ಕೊಚ್ಚಿ ಹೋಗುತ್ತಿರುವದನ್ನು ಶ್ರೀಕೃಷ್ಣನಿಂದ ಸಹಿಸಿಕೊಳ್ಳಲಾಗಲಿಲ್ಲ. ಅವನು ಅರ್ಜುನನ ಸ್ಥಿತಿ ಕಂಡು ಬಹು ಕನಿಕರಪಟ್ಟ. ತತ್ತ್ವವಿಜ್ಞಾನದ ಅಭಾವವೇ ಇದಕ್ಕೆಲ್ಲ ಕಾರಣವೆಂದು ಗ್ರಹಿಸಿದ ಗೋವಿಂದನು ಅಮರ ತತ್ತ್ವಜ್ಞಾನ ಬೋಧಿಸಲು ಮೊದಲು ಮಾಡಿದ. ಅವನ ವೈಖರಿಯಿಂದ ಉಗಮವಾದ ಆತ್ಮವಿವೇಚನಾ ಗಂಗೆ ಹದಿನೇಳು ಅಧ್ಯಾಯಗಳಲ್ಲಿ ನಿರರ್ಗಲವಾಗಿ ಹರಿದಿದ್ದಾಳೆ. ಅದರಲ್ಲಿ ಮಿಂದವರ ಮೋಹ ಮಾಲಿನ್ಯ ಮಾಯವಾಗುವದು. ಅದನ್ನು ಪಾನ ಮಾಡಿದವರ ಮನಸ್ಸು ಪವಿತ್ರ! ಬುದ್ಧಿ ಪರಿಶುದ್ಧ!

**ಶ್ರೀ ಭಗವಾನುವಾಚ**

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥೧೧॥**

**ಅರ್ಥ:–** ತ್ವಂ=ನೀನು ಅಶೋಚ್ಯಾನ್ = (ಶೋಕಸ್ಯ ಅವಿಷಯ ಭೂತಾನ್) ಶೋಕಿಸಲು ಯೋಗ್ಯವಲ್ಲದವರ ಕುರಿತು, ಅನ್ವಶೋಚಃ = (ಅನುಶೋಚಿತವಾನ್ ಅಸಿ) ಶೋಕಿಸುತ್ತೀ. ಚ=ಮತ್ತು ಪ್ರಜ್ಞಾವಾದಾನ್=(ಪ್ರಜ್ಞಾವತಾಂ ಪಂಡಿತಾನಾಂ ವಾದಾನ್ ಶಬ್ದಾನ್) ಜ್ಞಾನಿಗಳ ಮಾತುಗಳನ್ನು ಭಾಷಸೇ=ಆಡುತ್ತಿರುವೆ. ಪಂಡಿತಾಃ = ಪಂಡಿತರು ಗತಾಸೂನ್= ಸತ್ತವರನ್ನಾಗಲಿ, ಅಗತಾಸೂನ್ ಚ= ಮತ್ತು ಬದುಕಿದವರನ್ನಾಗಲಿ ಕುರಿತು ನ ಅನುಶೋಚಂತಿ= ಶೋಕಿಸುವದಿಲ್ಲ.

**ವಿವರಣೆ:–** ವಿಶ್ವವು ಅಪಾರ; ಮಾನವ ಬುದ್ಧಿಗೆ ನಿಲುಕದಷ್ಟು ವಿಸ್ತಾರ. ಅದು ಒಂದೇ ಘಟಕದಿಂದಾದ ಸೃಷ್ಟಿಯಲ್ಲ. ವಿಭಿನ್ನ ತತ್ತ್ವಗಳಿಂದ ರಚಿತ ಸಂಕಿರಣ! ಆ ತತ್ತ್ವಗಳು ಮೂರು : ೧) ಜಡ ೨) ಜಡಾಜಡ ೩) ಅಜಡ.

೧) ಜಡ :– ಭೂಮಿ ಜಲ ಅಗ್ನಿ ವಾಯು ಆಕಾಶ, ಶಬ್ದ ಸ್ಪರ್ಶ ರೂಪ ರಸ ಗಂಧ, ವಾಕ್ ಪಾಣಿ ಪಾದ ಪಾಯು ಉಪಸ್ಥ, ಶ್ರೋತ್ರ ತ್ವಕ್ ನೇತ್ರ ಜಿಹ್ವಾ ನಾಸಿಕ, ಮನ ಬುದ್ಧಿ ಚಿತ್ತ ಅಹಂಕಾರ, ಬೃಹದಹಂಕಾರ, ಮಹತ್ತು ಈ ತತ್ತ್ವ ಸಂಕುಲವು ಜಡ ಮತ್ತು ವಿಕಾರಶೀಲ. ಪ್ರಕೃತಿಯು ಇವುಗಳ ಮಹಾಜನನಿ. ಆಕೆ ತ್ರಿಗುಣಾತ್ಮಿಕಾ. ಪರಿಣಾಮಶೀಲೆ. ಆ ವಿಕೃತ ತತ್ತ್ವಗಳಾಗಲಿ ಪ್ರಕೃತಿಯಾಗಲಿ ಜ್ಞಾನವಾಹಿನಿಗಳಲ್ಲ. ಪರಮಾತ್ಮನ ಚಿತ್ ಹಾಗು ಆನಂದ ಎರಡನ್ನೂ

ಮರೆ ಮಾಡಿ ಗುಣಾವೃತ ಸತ್ತನ್ನು ಮಾತ್ರ ತೋರಿಸುತ್ತಿವೆ. ದೇವನ ವಿಮಲ ಚೈತನ್ಯವು ಅವುಗಳಲ್ಲಿ ಸ್ಫುರಿಸಿದಾಗ ಜೀವನೆಂಬ ಭಾವ ಮೂಡಿ ಬರುವುದು. ಆ ಜೀವನಿಗಾಗಿ ಈ ಜಡತತ್ತ್ವಗಳು ಸಂಕಲನಗೊಂಡು ದೇಹದಾಕಾರಗೊಳ್ಳುವವು. ಜೀವನನ್ನು ತಮ್ಮ ಭದ್ರ ಗುಣ ಬಾಹುಗಳಿಂದ ಬಂಧಿಸಿ ಬಿಡುವವು. ಆಗ ಜೀವನು ತನ್ನ ಮೂಲ ದೇವನನ್ನು ಮರೆಯುವನು; ತಾನು ದೇಹ, ಜಗತ್ತೇ ಸತ್ಯ ಸುಖಾತ್ಮಕ, ಭೋಗ ಜೀವನವೇ ಪರಮಾರ್ಥ ಎಂದು ಭ್ರಮಿಸುವನು. ಇವನಿಗೆ ಬದ್ಧ ಜೀವ ಎನ್ನುತ್ತಾರೆ.

೨) ಜಡಾಜಡ:- ಜಡ ಪ್ರಕೃತಿಗೂ ಪರಮಾತ್ಮನ ಅಚಿಂತ್ಯ ಪ್ರಭಾವ ಶಕ್ತಿಗೂ ಮಧ್ಯಂತರದಲ್ಲಿ ಒಂದು ಶುದ್ಧ ತತ್ತ್ವವಿದೆ; ಅದು ಮಾಯೆ; ಪರಿಮಲ ವಿಶ್ವಪ್ರಾಣ! ಪ್ರಕೃತಿಯಂತೆ ಜಡವೂ ಅಲ್ಲ; ದೇವ ಪ್ರಭೆಯಂತೆ ಪೂರ್ಣ ಪ್ರಕಾಶಶೀಲವೂ ಅಲ್ಲ. ಅದ್ದರಿಂದಿದು ಜಡಾಜಡ. ದೇವನ ಆನಂದ ರೂಹನ್ನು ಮಾತ್ರ ಅಚ್ಛಾದಿಸಿದ ಈ ತತ್ತ್ವ ಸತ್ತು ಹಾಗು ಚಿತ್ತುಗಳೆರಡನ್ನು ವಿಶಿಷ್ಟ ರೀತಿಯಲ್ಲಿ ಅಭಿವ್ಯಕ್ತಗೊಳಿಸಿದೆ. ಜೀವನು ಈ ಮಧ್ಯಂತರದ ತತ್ತ್ವದಲ್ಲಿ ವಾಸ ಮಾಡಿದಾಗ ಪ್ರಜ್ಞಾವಂತನಾಗುತ್ತಾನೆ. ಅವನಿಗೆ ವಿಶ್ವಾತೀತ ಅಖಂಡ ಚೇತನದ ಭಾನವೂ ಇದೆ; ಬಾಹ್ಯ ಜಗದ ಕಲ್ಪನೆಯೂ ಇದೆ. ಅವನು ವಿಷಯ ಭೋಗಗಳ ಉದಾಸೀನ ಭೋಕ್ತಾರ; ಅಂತಃಪ್ರಕಾಶದ ಆಸಕ್ತ ದ್ರಷ್ಟಾರ!

೩) ಅಜಡ:- ಮಾಯಾ ಮಂಡಲ ದಾಟಿ ಪರಾತ್ಪರ ಪರಮ ಪ್ರಭುವಿನ ಅಪ್ರತಿಮ ಸಾಮ್ರಾಜ್ಯದಲ್ಲಿ ಮೊತ್ತಮೊದಲು ನಮಗೆ ದೃಷ್ಟಿ ಗೋಚರವಾಗುವದು ಆ ದೇವನ ಅವರ್ಣನೀಯ ಪ್ರಭೆ! ಅದು ಶುದ್ಧತಮ ಶಕ್ತಿ! ಪ್ರಭುವಿನ ಸತ್ತು ಚಿತ್ತು ಆನಂದಗಳನ್ನು ಸಾವಿರುಮಡಿಯಾಗಿ ಅಭಿವ್ಯಕ್ತಗೊಳಿಸುವ ಸುಹಾಸಿನಿ! ಆಕೆಗೆ "ಅಜಾ" ಎಂದು ಅಭಿದಾನ. "ದೇವಾತ್ಮ ಶಕ್ತಿ, ಪರಾ ಶಕ್ತಿ" ಇವು ಆಕೆಯ ಭಿನ್ನ ನಾಮಗಳು. ಜೀವನು ಈ ತತ್ತ್ವಕ್ಕೆ ಬಂದಾಗ ಅವನಲ್ಲಿರುವ ಜಡ ಭೋಗದ ಮೋಹವು ನಾಶ! ಮಾಯಾಕೃತ ಭೋಕ್ತೃ ಭಾವವು ಗಲಿತ; ಆಗ ಅವನು ಸ್ವಾತ್ಮಾನಂದಿ!

ಈ ಮೂರು ತತ್ತ್ವಗಳು ಅಸ್ವತಂತ್ರ. ಅವುಗಳ ಮೂಲ ಅಧಿಷ್ಠಾನ ದೇವ. ಅವನ ಸಾನಿಧ್ಯವಿಡಿದು ಈ ತತ್ತ್ವಗಳ ತೋರಿಕೆ, ಬದುಕು ಹಾಗು ಸಾವು. ಅವನಾದರೋ ಇವುಗಳ ತುಂಬ ತುಂಬಿ ಆಚೆಗೂ ವ್ಯಾಪಿಸಿದ್ದಾನೆ. ನಿಸ್ಸೀಮನಾದ ಅವನು ಆ ತತ್ತ್ವ ವಿತತ್ತ್ವಗಳು ತೋರದ ಮುನ್ನ ನಿಸ್ತರಂಗಾಂಬುಧಿ! ಈ ವಿವರಣೆಯ ಹಿನ್ನೆಲೆಯಲ್ಲಿ ಈ ಮಂತ್ರವನ್ನು ತಿಳಿದುಕೊಳ್ಳುವಾ.

ಅಶೋಚ್ಯಾಃ- ಮೂರುವಿಧ ತತ್ತ್ವಗಳೂ ಅವುಗಳ ಸಂಘಾತದಿಂದ ರಚಿತವಾದ ದೇಹ ಮತ್ತು ವಸ್ತುಗಳೂ ಸದಾ ಪರಿಣಾಮ ಹೊಂದುತ್ತಿವೆ; ಕಾಲ ಪ್ರವಾಹ ಅವುಗಳನ್ನು ಕಬಳಿಸುತ್ತದೆ; ಆದರೇನು? ಅನಂತ ವ್ಯಾಪಕನಾದ ಪರಮಾತ್ಮನು ಅವುಗಳಲ್ಲಿ ಚಿರವಾಗಿ ನೆಲೆಸಿದ್ದಾನೆ; ಅವನಿಗೆ ಅವೆಲ್ಲ ಪವಿತ್ರ ದೇವಾಲಯಗಳು. ಆದುದರಿಂದ ಅವು "ಅಶೋಚ್ಯ"ಗಳು. ಅಂದರೆ ಅವುಗಳ ಬಗ್ಗೆ ಚಿಂತಿಸಬೇಕಿಲ್ಲ. ಇನ್ನು ದೇಹಗಳಲ್ಲಿ ಪ್ರಜ್ವಲಿಸುವ ದೇವನಂತು ದೇಹದೊಂದಿಗೆ ವಿಕಾರ ಹೊಂದುವವನಲ್ಲ; ಅವನು ಸುಸ್ಥಿರ; ಅಮರ! ಅತೀವ ಪರಿಶುದ್ಧ! ಅವನೇ ಸರ್ವಾಧಾರನಾದುದರಿಂದ ಅವನನ್ನು ಬಂಧಿಸುವ ಸಾಮರ್ಥ್ಯ ಯಾವ ತತ್ತ್ವಕ್ಕೂ ಇಲ್ಲ. ಹೀಗೆ, ಅವನೂ "ಅಶೋಚ್ಯ."

'ಅಶೋಚ್ಯಾನ್ ಅನ್ವಶೋಚಸಿ ತ್ವಂ':-"ಅರ್ಜುನ, ನೀನಾದರೋ ಚಿಂತಿಸಬಾರದ ವಿಷಯಗಳಿಗಾಗಿ ಚಿಂತಿಸುತ್ತಿರುವಿ. ನಿನ್ನ ದುಃಖಕ್ಕೆ ಏನು ಕಾರಣವಿದೆ? ಹೇಳು ನೋಡುವಾ? ಜಗದ ಜೀವರ ಬಾಳೇ ಈ ರೀತಿಯಾಗಿಬಿಟ್ಟಿದೆ. ಪಾಪ ನೀನಾದರು ಏನು ಮಾಡುವಿ? ನಿನಗೆ ನಿನ್ನ ಸ್ವರೂಪ ಜ್ಞಾನವೂ ಇಲ್ಲ; ಜಗತ್ತಿನ ತಿಳಿವೂ ಇಲ್ಲ." ಕತ್ತೆ ಸತ್ತಿತೆಂದು ಅಗಸಗಿತ್ತಿ ಅತ್ತರೆ, ಆ ಕತ್ತೆಯ ಹೆಸರಿನ ತನ್ನ ತಮ್ಮನೇ ಸತ್ತನೆಂದು ರಾಣಿ ಅತ್ತಳು; ರಾಜ ಅತ್ತ; ಪ್ರಜೆಗಳತ್ತರು; ಇಡೀ ದೇಶ ಶೋಕ ಸಾಗರದಲ್ಲಿ ತೇಲಿತು. ಹೀಗಿದೆ ಜನರ ಬುದ್ಧಿ. ನಿಷ್ಕಾರಣ ದುಃಖಿಸುವದು ಅವರಿಗೆ ರೂಢಿಯಾಗಿದೆ. ಅದೇ ರೀತಿ ಅರ್ಜುನ.

"ಪ್ರಜ್ಞಾವಾದಾನ್ ಚ ಭಾಷಸೇ"-"ಅರ್ಜುನ, ಅಲ್ಲದ ಸಲ್ಲದ ವಸ್ತುಗಳಿಗಾಗಿ ಅಳುವ ನೀನು ಮೇಲೆ ಬಲ್ಲವರಂತೆ ಪಾಂಡಿತ್ಯದ ಮಾತನಾಡುತ್ತಿರುವಿ. ನಿನಗೆ ನಿಜವಾದ ಪಂಡಿತರಾರು ಗೊತ್ತಿದೆಯೆ? "ಗತಾಸೂನ್ ಅಗತಾಸೂನ್ ನಾನು ಶೋಚಂತಿ ಯೇ ತೇ ಪಂಡಿತಾಃ" ಯಾರು ಹಿಂದಾಗಿ ಹೋದುವಕ್ಕಾಗಲಿ, ಮುಂದಾಗುವದಕ್ಕಾಗಲಿ ಚಿಂತಿಸುವದಿಲ್ಲವೊ; ಯಾರು ವಿಶ್ವ ಮತ್ತು ದೇವರ ಮೂಲ ಸ್ವರೂಪವನ್ನು ತಿಳಿದುಕೊಂಡಿದ್ದಾರೆಯೋ ಅವರೇ ಪಂಡಿತರು. ( ಪಂಡಾ=ಪವಿತ್ರ ಆತ್ಮಜ್ಞಾನ; ಅದು ಉಳ್ಳವರು ಪಂಡಿತರು ). ಪಂಡಿತರಿಗೆ ಗೊತ್ತು, ಜಗತ್ತು ನಾಶವಾಗುವದು, ದೇಹ ಸಂಪದ ಕೀರ್ತಿ ಎಲ್ಲವೂ ಕಾಲ ಗರ್ಭ ಸೇರುವದು ಎಂದು. ಅವರ ಮನಸ್ಸು ಚಿರ ಪರಮಾತ್ಮನಲ್ಲಿ ಕೇಂದ್ರೀಕೃತವಾಗಿದೆ. ನೀನೂ ಅಂಥ ಪಂಡಿತನಾಗು; ಬರಿ ಮಾತು ಬೇಡ."

ಪ್ರಶ್ನೆ:- ಜನಾರ್ದನ, ಅದೆಲ್ಲ ಸರಿ; ಎಲ್ಲ ವ್ಯಕ್ತಿಗಳು, ವಸ್ತುಗಳು ಅಶೋಚ್ಯವೆಂದೆಯಲ್ಲ; ಅದು ಹೇಗೆ? ತಿಳಿಸಿಕೊಡು.

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥೧೨॥**

**ಅರ್ಥ:-** ಅಹಂ=(ಪರಮಾತ್ಮನಾದ) ನಾನು, (ಪೂರ್ವದಲ್ಲಿ) ನತು ಆಸಂ-(ಇತಿ) ನ= ಇರಲಿಲ್ಲವೆಂಬುವದಿಲ್ಲ. ತ್ವಂ ಚ ಇಮೇ ಜನಾಧಿಪಾಃ=ನೀನು ಮತ್ತು ಈ ರಾಜರು ನ(ಆಸನ್ ಇತಿ) ನ= ಇರಲಿಲ್ಲವೆಂಬುದಿಲ್ಲ. ಅತಃ ಪರಂ= ಇನ್ನು ಮುಂದೆ ಕೂಡ, ವಯಂ ಸರ್ವೇ=ನಾವೆಲ್ಲರು ನ ಭವಿಷ್ಯಾಮಃ (ಇತಿ) ನ ಏವ=ಇರುವದಿಲ್ಲವೆಂಬುವದಿಲ್ಲವೇ ಇಲ್ಲ. ಚ=ವರ್ತಮಾನಕಾಲದಲ್ಲಂತೂ ನಾವೆಲ್ಲ ಪ್ರತ್ಯಕ್ಷವಾಗಿದ್ದೇವೆ.

**ವಿವರಣೆ:-** ಕೃಷ್ಣ- " ಪಾಂಡವ, ನಾನು ತೋರಿಕೆಯ ಈ ದೇಹವಲ್ಲ. ಅಂತಸ್ಥ ಪರಮಾತ್ಮ. ಹಿಂದೆ ಮತ್ಸ್ಯಾದಿ ಅನೇಕ ದೇಹ ಧರಿಸಿದ್ದೇನೆ. ಅವು ವಿವಿಧ ವೇಷಗಳು; ನಾನು ಆ ವೇಷಧಾರಿ ಬಹುರೂಪಿ ನಟ! ಅವು ಹುಟ್ಟಿ ಬಾಳಿ ಅಳಿದಿವೆ. ನಾನು ಅವುಗಳೊಂದಿಗೆ ಹುಟ್ಟಲಿಲ್ಲ, ಪ್ರಾಣವನ್ನಾಶ್ರಯಿಸಿ ಬಾಳಲಿಲ್ಲ, ಅಳಿಯಲಿಲ್ಲ. ನಾನು ಅನಾದಿ! ಅಖಂಡ! ಅಪಾರ! ಈ ಪ್ರಜ್ಞೆಯನ್ನು ನಾನೆಂದಿಗೂ ಕಳೆದುಕೊಂಡಿರಲಿಲ್ಲವೆಂದೇ ಮತ್ಸ್ಯಾದಿಗಳಂಥ ಕ್ಷುದ್ರ ಜನ್ಮಗಳು ಕೂಡ ನನ್ನ ಪವಿತ್ರ ಪೂಜನೀಯ ಅವತಾರಗಳೆನಿಸಿದವು!

"ಪರಂತಪ, ದೇಹದತ್ತ ನೋಡದೆ ನಿನ್ನೊಳು ಈಕ್ಷಿಸು. ನೀನೂ ನನ್ನ ಅಂಶ; ಅಷ್ಟೇ ಅಲ್ಲ ಈ ರಾಜರುಗಳೂ ನನ್ನ ಅಂಶ. ನಿಮ್ಮ ದೇಹಗಳು ಹಿಂದಿರಲಿಲ್ಲ; ಮುಂದೆ ಇಲ್ಲದಾಗುವವು. ದೇಹದ ಹೃದ್ಗುಹಾ ಚೈತನ್ಯ ಮೂರ್ತಿಗಳಾದ ನೀವು ಮಾತ್ರ ಆ ದೇಹದಂತೆ ಖಂಡಿತರಲ್ಲ; ಕಾಲಬಂಧಿತರಲ್ಲ. ನಿನ್ನ ಅಚ್ಯುತ ಅಸ್ತಿತ್ವ ಮರೆತುದರಿಂದ 'ನಾನು ಕುಂತೀಪುತ್ರ, ಕ್ಷತ್ರಿಯ, ಬಂಧು ಬಾಂಧವರೊಂದಿಗ' ಎಂಬ ಭ್ರಮೆಗೆ ಬಲಿಯಾಗಿರುವೆ; ನಿನ್ನ ಹರಿತ ಬಾಣಗಳು ಈ ರಾಜರನ್ನು ಕೊಂದು ಹಾಕುವವೆಂಬ ಮರುಕ ನಿನ್ನಲ್ಲಿ ಉಂಟಾಗಿದೆ. ಅರ್ಜುನ, ಇದೆಲ್ಲ ಬರಿ ಕಲ್ಪನೆ. ನೈಜದತ್ತ ಮುಖ ಹೊರಳಿಸು. ನಾವೆಲ್ಲ ಎಂದೆಂದಿಗೂ ಇದ್ದವರೇ; ಎಂದೆಂದಿಗೂ ಇರುವವರೇ ಎಂಬ ಸತ್ಯವನ್ನು ಕಾಣುವೆ. ಆಗ ನಿನ್ನ ವಿಷಾದ ಅಳಿಯುವದು."

ಮಣ್ಣಿನಿಂದ ಘಟದ ನಿರ್ಮಾಣ. ಮೊದಲು ಇರದೆ ಮಧ್ಯಂತರದಲ್ಲಿ ತೋರಿಬಂದ ಘಟವು ಪ್ರಾಗಭಾವ ಪ್ರತಿಯೋಗಿ. ಅದು ಸದಾ ಬಾಳುವಂಥದೂ ಅಲ್ಲ; ಕಾಲಾಂತರದಲ್ಲಿ ನಾಶವಾಗುವದು. ಆದುದರಿಂದದು ಪ್ರಧ್ವಂಸಾಭಾವ ಪ್ರತಿಯೋಗಿ. ಮಣ್ಣು ಮಾತ್ರ ಹುಟ್ಟಿಲ್ಲವಾಗಿ ಪ್ರಾಗಭಾವ ವಿಹೀನ. ಸಾಯದಾಗಿ ಪ್ರಧ್ವಂಸಾಭಾವ ವಿಹೀನ. ಅದು ಘಟದ ದೃಷ್ಟಿಯಿಂದ ಅನಾದಿ, ಅನಂತ.

ಅದರಂತೆ, ದೇಹಗಳು ಘಟ. ಅವು ಹುಟ್ಟಿವೆ; ನಾಶವಾಗುತ್ತವೆ. ಅವುಗಳ ಅಂತಸ್ಥವಾಗಿರುವ ವಿಶ್ವ ಚೇತನವು ಮಾತ್ರ ಅಮೂರ್ತ; ಅಜ; ಅಭಾವಕ್ಕೆ ಎಂದೆಂದಿಗೂ ಪ್ರತಿಯೋಗಿಯಾಗದ ಚಿರಂತನಾಸ್ತಿತ್ವ. ಘಟವಿದ್ದಾಗಲೂ ಇಲ್ಲದಾಗಲೂ ಮಣ್ಣು ಇರುವಂತೆ, ದೇಹ ಪ್ರಾಪ್ತವಾದಾಗಲೂ ದೇಹ ಅಳಿದು ಹೋದಾಗಲೂ ಆ ಚೈತನ್ಯವಸ್ತು ಅಪರಿಣಾಮಿಯಾಗಿ ನೆಲೆಸಿದೆ.

ಜೀವನೆಂದರೆ ಅಂಥ ಅನಂತ ಚೇತನದ ಮನೋಗತ ಪಡಿಮೂರ್ತಿ! ಅಂತಃಕರಣದಲ್ಲಿ ಹೊಳೆದ ಚೈತನ್ಯ ಕಿಡಿ. ಅವನು ಕಾಲ ಕಾಲಾಂತರದಿಂದ ವಿವಿಧ ಅಸಂಖ್ಯ ಜನ್ಮಗಳನ್ನು ತಾಳುತ್ತ ಬಂದಿದ್ದಾನೆ. ಅವನು ತೊಟ್ಟ ದೇಹಗಳಿಗೆ ಲೆಕ್ಕವಿಲ್ಲ. ಅವನು ಬಾರದ ಯೋನಿಗಳೇ ಉಳಿದಿಲ್ಲ ಎಂದರೆ ಅತಿಶಯೋಕ್ತಿಯಾಗದು. ಲುಪ್ತ ಶಕ್ತಿಯಿಂದಾವೃತನಾದ ಅವನು ಹಿಂದಿನ ಯೋನಿ, ದೇಹ, ಅಲ್ಲಿ ಪಡೆದ ಭೋಗ ಮರೆತು ಹೊಸ ದೇಹ ಪ್ರವೇಶಿಸುತ್ತಾನೆ. ಹೊಸ ಸಂಸಾರ ಕಟ್ಟಿಕೊಳ್ಳುತ್ತಾನೆ. ಅವನಿಗೆ ಹಳೆಯದರ ಪೂರ್ಣ ವಿಸ್ಮರಣ; ಹೊಸದರ ಪೂರ್ಣ ಅಭಿಮಾನ.

ಉದಾಹರಣೆಗಾಗಿ : ೧) ಅತ್ಯಂತ ಬಡ ಕುಟುಂಬದಲ್ಲಿ ಗಂಡನಾಗಿರುವ ಜೀವ ಆ ದೇಹ ತೊರೆದು ಪಕ್ಕದಲ್ಲೇ ಇರುವ ಸಿರಿವಂತರ ಮಗನಾಗಿ ಹುಟ್ಟುತ್ತಾನೆ; ಸುಖ ಸುಪ್ಪತ್ತಿಗೆಯಲ್ಲಿ ಬಾಳುತ್ತಾನೆ; ನೆರೆ ಮನೆಯ ಪೂರ್ವಜನ್ಮದ ವಿಧವೆ ಉಪವಾಸದಿಂದ ಮರುಗುತ್ತಿದ್ದರೂ ಅವನಿಗದು ತಿಳಿಯದು. ೨) ತಂದೆ ತೀರಿ ಆಡಾಗಿ ಹುಟ್ಟುತ್ತಾನೆ. ಮೊದಲ ಜನ್ಮದಲ್ಲಿ ತಾನೇ ಗಳಿಸಿ ಬೆಳೆಸಿದ ಧಾನ್ಯದಂಗಡಿಯಲ್ಲಿ ಪ್ರವೇಶಿಸಿ ಧಾನ್ಯ ಚೀಲದಲ್ಲಿ ಬಾಯಿ ಹಾಕುತ್ತಾನೆ. ಅದನ್ನು ನೋಡಿದ ಮಗನು ತಂದೆಯನ್ನು ಗುರುತಿಸದೆ ಆ ಆಡನ್ನು ಬಡಿಯುತ್ತಾನೆ. ಇಂಥ ಅನೇಕ ವಿಚಿತ್ರ ಘಟನೆಗಳು ಅಸಂಭವವಲ್ಲ.

ಲುಪ್ತ ಶಕ್ತಿ ಸಹಿತನಾದ ಜೀವನು ತನ್ನ ಮೂಲ ಅರಿಯದೆ ದೇಹವೇ ತಾನೆಂದು ಭಾವಿಸಿ, ತಾನು ಮೊದಲಿರಲಿಲ್ಲ, ಈಗ ಹುಟ್ಟಿ ಬಂದಿದ್ದೇನೆ, ಒಂದು ದಿನ ಸಾಯುವದೂ ನಿಶ್ಚಿತ ಎಂದು ಕಲ್ಪಿಸಿದ್ದಾನೆ. ಈ ಕಲ್ಪನೆ ಯಾರಿಗಿಲ್ಲ? ಜಗತ್ತಿನ ಬಹುಸಂಖ್ಯ ಜನರು ಇದೇ ರೀತಿ ತಿಳಿದು ಬದುಕುತ್ತಿದ್ದಾರೆ. ಆದ್ದರಿಂದಲೇ ಹುಟ್ಟೆಂದರೆ ಅವರಿಗೆ ಸಂತಸ; ಮರಣವೆಂದರೆ ಭೀತಿ; ಜೀವಿತದ ತುಂಬ ಸುಖ-ದುಃಖಗಳ ಅನುಭವ. ಇದೇ ಪ್ರಪಂಚ!

ಲುಪ್ತ ಶಕ್ತಿಯನ್ನು ಕಳಚಿ, ಅಲುಪ್ತ ಶಕ್ತಿಯನ್ನು ಅಂಗವಿಸಿಕೊಂಡವರು ಮಹಾತ್ಮರು, ಆತ್ಮಜ್ಞಾನಿಗಳು! ಅಳಿವ ದೇಹದಲ್ಲಿ ಬದುಕಿದ್ದರೂ ಅದರ

ವಿಕಾರ ಅವರಿಗಿಲ್ಲ. ದೇಹ ಸಂಬಂಧದ ಮನೆ, ಮಠ, ಮಂದಿರ, ಅರಣ್ಯಗಳ ಅಭಿಮಾನ ವಿರಹಿತರು; ಜಾತಿ ಗೋತ್ರಗಳಿಂದ ನಿರ್ಮುಕ್ತರು. ಏನೇ ಬಂದರೂ ಹೋದರೂ ತಾವು ಮಾತ್ರ ನಿತ್ಯ ನಿರಾಮಯರೆಂಬ ದೃಢ ಪ್ರಜ್ಞೆ ಅವರಿಗಿವೆ. ಆದುದರಿಂದ ಅಂಥ ಪ್ರಾಜ್ಞರು ದೇಹದ ಆಗು ಹೋಗುಗಳಿಗಾಗಿ ದುಃಖಿಸಲಾರರು.

ಅರ್ಜುನ ಪ್ರಾಜ್ಞನಲ್ಲ; ಪ್ರಜ್ಞಾವಾದಿ; ಪ್ರಾಜ್ಞರ ಮಾತನಾಡುವ ಲುಪ್ತ ಶಕ್ತಿಯ ದಾಸ! ಆದುದರಿಂದ ಬಂಧು-ಬಾಂಧವರ ವ್ಯಾಮೋಹ ತಾಳಿ ಶೋಕ ಮಾಡಿದ.

ಸಂಬಂಧ: ಅರ್ಜುನ– "ಭಗವನ್, ನೀನಂತು ಈಶ್ವರ; ನಿನಗೆ ಜನ್ಮ ಮರಣವಿರಲಿಕ್ಕಿಲ್ಲ, ನಿಜ; ಆದರೆ ಜೀವರಾದವರು ಹುಟ್ಟಿ ಸಾಯುವರೆಂಬುದನ್ನು ಅದು ಹೇಗೆ ಅಲ್ಲಗಳೆಯಬಲ್ಲೆ?"

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥೧೩॥**

ಅರ್ಥ:- ದೇಹಿನಃ = (ದೇಹಾಭಿಮಾನಿನಃ ಜೀವಸ್ಯ) ದೇಹಾಭಿಮಾನಿ ಜೀವನಿಗೆ, ಅಸ್ಮಿನ್ ದೇಹೇ = ಈ ಸ್ಥೂಲ ದೇಹದಲ್ಲಿ, ಕೌಮಾರಂ ಯೌವನಂ ಜರಾ = ಬಾಲ್ಯ, ತಾರುಣ್ಯ, ಹಾಗು ಮುಪ್ಪುಗಳು, ಯಥಾ = ಹೇಗೋ ತಥಾ = ಹಾಗೆ, ದೇಹಾಂತರ ಪ್ರಾಪ್ತಿಃ = ಮತ್ತೊಂದು ದೇಹದಪ್ರಾಪ್ತಿಯು. ತತ್ರ = ಆ ವಿಷಯದಲ್ಲಿ ಧೀರಃ = ಜ್ಞಾನಿಯು ನ ಮುಹ್ಯತಿ = (ಆತ್ಮೈವ ಮೃತಃ ಜಾತಃ ಇತಿ ನ ಮುಹ್ಯತೇ = ತಾನೇ ಹುಟ್ಟುವವ, ಸಾಯುವವನೆಂದು ತಿಳಿಯುವದಿಲ್ಲ) ಮೋಹಗೊಳ್ಳುವದಿಲ್ಲ.

ವಿವರಣೆ:– ಕೃಷ್ಣ - "ಧನಂಜಯ, ಪರಮಾತ್ಮನು ಪರಿಪೂರ್ಣ ಹಾಗು ಅದ್ವಯ. ಕಾಣುವ ದೇಹಗಳು ಪರಿಚ್ಛಿನ್ನ ಹಾಗು ಅಸಂಖ್ಯ. ಪ್ರತಿ ಜೀವಂತ ದೇಹದಲ್ಲೊಂದು ಮನಸ್ಸಿದೆ; ಅದಕ್ಕೆ ಲಿಂಗ ದೇಹವೆಂತಲೂ ನಾಮ. ಆ ಮನದಲ್ಲಿ ಪ್ರತಿಫಲಿತ ಪರಮಾತ್ಮನೇ ಜೀವ. ಮನಸ್ಸುಗಳು ಅನೇಕ; ಆದುದರಿಂದ ಜೀವರೂ ಅನೇಕ. ಅವರಿಗೆ ದೇಹಿನಃ ಎಂದು ನಾಮ ವಿಶೇಷ. ನಾನು ಆಗಲೇ ಉಪಯೋಗಿಸಿದ 'ಅಶೋಚ್ಯಾನ್' ಮತ್ತು 'ವಯಂ' ಎಂಬ ಬಹುವಚನಾರ್ಥಕ ಪದಗಳು ಪರಮಾತ್ಮನಿಗೂ ಅನ್ವಯಿಸಿಲ್ಲ; ದೇಹಗಳಿಗೂ ಸಂಬಂಧಿಸಿಲ್ಲ. ಅವು ಸೂಕ್ಷ್ಮಾಂತಃಕರಣ ವಿಶಿಷ್ಟ ಚೇತನ ಮೂರ್ತಿಗಳಾದ ಈ ಜೀವರನ್ನು ನಿರ್ದೇಶಿಸುತ್ತಿವೆ.

"ಕೌಂತೇಯ, ಜೀವರಿಗೆ ಜನ್ಮವೂ ಇಲ್ಲ, ಮರಣವೂ ಇಲ್ಲ. ಅವರು ತೊಡುವ ದೇಹಗಳಿಗೆ ಮಾತ್ರ ಎಲ್ಲ ಇದೆ. ಸ್ಥೂಲ ದೇಹದ ಮೂಲಕ

ಜೀವನು ಬಾಲ್ಯ, ಯೌವನ, ವಾರ್ಧಕ್ಯ ಅವಸ್ಥೆಗಳನ್ನು ಹೊಂದುವಂತೆ, ಲಿಂಗ ದೇಹದ ಸಹಾಯದಿಂದ ಆ ಜೀವನೇ ವಿವಿಧ ದೇಹಗಳನ್ನು ಪಡೆಯುತ್ತಾನೆ. ಅವಿದ್ಯಾವಂತರಿಗೆ ಇವರ ಅರಿವಿಲ್ಲ; ದೇಹಾತ್ಮವಾದಿಗಳಾಗಿ ನಿನ್ನಂತೆ ದುಃಖಿಸುತ್ತಾರೆ. ಬಲ್ಲಿದರು ತಮ್ಮನ್ನು ದೇಹ, ಮನಸ್ಸುಗಳಿಂದ ಬೇರ್ಪಡಿಸಿ ಸಾಕ್ಷಿ ಜ್ಯೋತಿಯಾಗಿ ದೇಹದ ಆಗು ಹೋಗುಗಳನ್ನು ನೀರಿಕ್ಷಿಸುತ್ತಾರೆ. ಅವರಿಗೆ ಈ ದೇಹದ ವಿಷಯದಲ್ಲಿ ತಿಲಮಾತ್ರವೂ ಮೋಹವಿಲ್ಲ."

ಈ ಮಂತ್ರದಲ್ಲಿ ಅರಿತುಕೊಳ್ಳಬೇಕಾದ ವಿಷಯಗಳು ನಾಲ್ಕು :- ೧) ಪರಮಾತ್ಮನ ಸಾಮಾನ್ಯ ಸ್ವರೂಪ ೨) ದೇಹಿಯ ಸ್ವರೂಪ ೩) ದೇಹದ ಸ್ವರೂಪ ೪) ದೇಹಾಂತರ ಪ್ರಾಪ್ತಿ. ಈ ನಾಲ್ಕನ್ನು ಅರಿತವ ಧೀರ, ಅರಿಯದವ ಅಜ್ಞ.

೧) ಪರಮಾತ್ಮ: 'ಏಕೋದೇವಃ ಸರ್ವಭೂತಾಂತರಾತ್ಮಾ' (ಶೃತಿ). ದೇವನು ಒಬ್ಬ; ಆ ಪರಾಶಕ್ತಿಯಿಂದ ಈ ಭೂಮಿಯವರೆಗೆ ವ್ಯಾಪಿಸಿರುವ ಸರ್ವ ತತ್ತ್ವಗಳ ಅಂತರಾತ್ಮ. ಜಡ ಹಾಗು ಅಜಡ ವಸ್ತುಗಳ ಅಂತರ್ನಿವಾಸಿ! ಅವನು ನಿಸ್ಸೀಮನಾದುದರಿಂದ ಅಖಂಡ! ನಿರ್ಲಿಪ್ತ. ಜಾಗ್ರ, ಸ್ವಪ್ನ, ಸುಪ್ತಿ, ತುರಿಯ, ತುರಿಯಾತೀತವೆಂಬ ಪಂಚ ಅವಸ್ಥೆಗಳ ಮೇಲೆ ಮಿರುಗುವ ಪರಂಜ್ಯೋತಿ!! ಅವಸ್ಥೆಗಳು ಸಾತಿಶಯ ಸೂಕ್ಷ್ಮ. ಅವನು ನಿರತಿಶಯ ಸೂಕ್ಷ್ಮ.

೨) ದೇಹ: ಇದು ಸಾಮಾನ್ಯವಾಗಿ ಎರಡು ವಿಧ: (ಅ) ಸ್ಥೂಲ (ಬ) ಸೂಕ್ಷ್ಮ (ಲಿಂಗ). ಸ್ಥೂಲ ದೇಹ ಅತೀ ಜಡ. ಭೌತ ತತ್ತ್ವಗಳ ಕೃತಿ. ಅದಕ್ಕೆ ಸ್ವಪರ ಭಾನವಿಲ್ಲ. ಈ ದೇಹದ ಒಳಗಿರುವದು ಲಿಂಗದೇಹ. ಅದು ಮನ ಬುದ್ಧಿ ಸ್ಮರಣಗಳಿಂದುಂಟಾಗಿದೆ. ಅದು ಕಾರ್ಯಶೀಲ. ಅದರ ಶಕ್ತಿ ಪಡೆದೇ ದೇಹ ಬೆಳೆಯುವದು, ಕ್ಷಯಿಸುವದು; ಇಂದ್ರಿಯಗಳು ಪ್ರಾಣಗಳು ವ್ಯವಹರಿಸುವವು. ಲಿಂಗದೇಹವು ಭಾವನೆಗಳ ತಾಣ; ಸಂಸ್ಕಾರಗಳ ಸಂಗ್ರಹ ಭೂಮಿ; ಅಹಂಕಾರದ ಕ್ರೀಡಾರಂಗ. ಸುಖ ದುಃಖ, ಮಾನ ಮೋಹ ಎಲ್ಲ ಬಾಳುವದು ಆ ದೇಹದಲ್ಲಿಯೇ. ಸ್ಥೂಲ ದೇಹವು ಕಾಲಾಂತರದಲ್ಲಿ ತನ್ನಿಂದ ತಾನೇ ನಾಶವಾಗುವದು. ಲಿಂಗ ದೇಹ ಹಾಗೆ ನಾಶವಾಗುವಂಥದಲ್ಲ. ಜೀವ ಶಿವೈಕ್ಯ ಉಂಟಾಗುವ ವರೆಗೂ ಅದು ಬಾಳುತ್ತದೆ.

೩) ದೇಹಿನ್: ಸೂಕ್ಷ್ಮ ದೇಹದಲ್ಲಿ ಮೂಡಿದ ದೇವ ಪ್ರತಿಬಿಂಬ. ದೇವನಂತೆ ಅಜಡ, ನಿತ್ಯ, ಅಖಂಡ; ಮನದ ಸಂಬಂಧದಿಂದ ಅನಿತ್ಯ ಹಾಗು ಖಂಡಿತ ಭಾವ ತಳೆದಿದ್ದಾನೆ. ಇವನು ಏಕನಲ್ಲ ಅನೇಕ.

ಒಂದು ದೃಷ್ಟಾಂತ: ಅನೇಕ ಕೊಡಗಳು. ಅವುಗಳಲ್ಲಿ ಬೇರೆ ಬೇರೆ ಬಣ್ಣದ ನೀರು ತುಂಬಿದೆ. ಸೂರ್ಯನು ಒಬ್ಬನೇ. ಅವನ ಪ್ರತಿಬಿಂಬವು ಘಟ-ಜಲದಲ್ಲಿ ಮೂಡುವದು. ಘಟ-ಜಲ ಭಿನ್ನ ಭಿನ್ನವಾದುದರಿಂದ ಅದ ರಲ್ಲಿ ಮೂಡಿವ ಸೂರ್ಯ ಛಾಯೆ ಕೂಡ ವಿವಿಧವಾಗಿ ತೋರುವದು. ಉಪಾಧಿ ಎನಿಸುವ ಜಲವೆಲ್ಲ ಆರತಾಗ ಅಲ್ಲಿರುವ ಪ್ರತಿಬಿಂಬಗಳು ಸೂರ್ಯ ನಲ್ಲಿ ಮಾಯುವಾಗುವವು. ಹಾಗೆ: ದೇಹಗಳು ಕೊಡ. ಲಿಂಗ ಶರೀರ ಎನಿ ಸುವ ಅಂತಃಕರಣವು ಜಲ. ಸತ್ವ ರಜ ತಮ ಗುಣಗಳ ತರ ತಮ ಮಿಶ್ರಣ ದಿಂದಾಗಿ ಆ ಜಲ ದೇಹದಿಂದ ದೇಹಕ್ಕೆ ಭಿನ್ನ ಭಿನ್ನವಾಗಿದೆ. ಪರಮಾತ್ಮನು ಸೂರ್ಯ; ಒಬ್ಬನೇ. ಅವನ ಜ್ಞಾನ ಪ್ರತಿಬಿಂಬವು ಅಂತಃಕರಣದಲ್ಲಿ ಮೂಡು ವದು. ಅದೇ ಜೀವ. ಅಂತಃಕರಣಗಳು ಗುಣಾನುಸಾರ ಅಸಂಖ್ಯವಾದುದ ರಿಂದ ಜೀವರೂ ಅಸಂಖ್ಯ, ಮಹಾಸಾಗರದ ಬಿಂದುಗಳಷ್ಟು! ಅಂತಃಕರಣ ಜಲ ಆರತಾಗ ಆ ಜೀವರು ಕೂಡ ಅನಂತತೆಯಲ್ಲಿ ಲೀನವಾಗುವರು.

ಜೀವರಲ್ಲಿ ಮೂರು ಬಗೆ: (ಅ) ಜಡ ಜೀವರು :- ತಮ್ಮ ಬಿಂಬ ಮರೆತು ಮನ ಹಾಗು ದೇಹ ಉಪಾಧಿಗಳಲ್ಲಿ ತಾದಾತ್ಮ್ಯ ತಳೆದವರು. ಇವರಿಗೆ ಜನ್ಮ ಮರಣಾದಿ ಭಾವವಿದೆ. ಇವರ ದೃಷ್ಟಿಯಲ್ಲಿ ಕಾಣುವದಷ್ಟೇ ಸತ್ಯ; ಉಳಿದುದೆಲ್ಲ ಅಸತ್ಯ. ಇವರ ಮತಿ ಮೂಢ; ವಿಷಯ ರತ. ಇವರಿಗೆ ಲೌಕಿಕ, ಚಾರ್ವಾಕ ಜೀವಿಗಳೆನ್ನೋಣ.

(ಬ) ಪಕ್ವ ಜೀವರು:- ತಮ್ಮ ಮೂಲ ಜ್ಞಾನ ಭಾಸ್ಕರನನ್ನು ಅರಿ ತವರು; ದೇಹಗತ ಹಾಗು ಮನೋಗತ ಗುಣಗಳು ಇವರನ್ನು ಬಾಧಿಸುವದಿಲ್ಲ. ಸದಾ ನಿರ್ಲಿಪ್ತ ಭಾವ; ಸದಾ ದಿವ್ಯಾತ್ಮ ದೃಷ್ಟಿ. ದೈಹಿಕ ಕುಂದು ಕೊರತೆ, ವೃದ್ಧಿ ಸಮೃದ್ಧಿಗಳು ಇವರನ್ನು ವಿಚಲಿತಗೊಳಿಸವು. ಏಕೆಂದರೆ ಇವರು ಉಪಾಧಿ ಕಲ್ಪನೆ ತೊರೆದು ಚಿನ್ಮಯಾತ್ಮನಲ್ಲಿ ಒಂದಾಗಿದ್ದಾರೆ. 'ನಾನು ದೇಹ ವಲ್ಲ; ಪರಮ ಆತ್ಮ, ನನಗೆ ದೇಹದ ವಿಕಾರಗಳಿಲ್ಲ; ದೇವನಂತೆ ನಿರ್ವಿಕಾರ. ಅಮರ!' ಇದು ಇವರ ದೃಷ್ಟಿ.

(ಕ) ಅಪಕ್ವ ಜೀವರು:- ಜಡರಂತೆ ಅಜ್ಞರಲ್ಲ; ಪಕ್ವ ಜೀವರಂತೆ ಪರಿ ಪೂರ್ಣ ಸುಜ್ಞರಲ್ಲ. ಇವರಲ್ಲಿ ದೇವ-ಜೀವ-ದೇಹಗಳ ಜ್ಞಾನವಿದೆ; ಆದರೆ ಜಡ ಜಗದ ವ್ಯಾಮೋಹ ಹರಿದಿಲ್ಲ. ಹಿರಿತನದ, ಜಾಣತನದ ಅಭಿಮಾನಕ್ಕೆ ವರು ಆಸ್ಪದ ಕೊಟ್ಟಿದ್ದಾರೆ. ಒಮ್ಮೆ ತತ್ತ್ವಜ್ಞಾನಿಗಳಂತೆ ಸಂತಸ ಪಡುತ್ತಾರೆ. ಮತ್ತೊಮ್ಮೆ ಲೌಕಿಕರಂತೆ ಕಣ್ಣೀರು ಸುರಿಸುತ್ತಾರೆ. ಮುಂಡಕ ಉಪನಿಷತ್ತು ಇವರನ್ನು ಹೀಗೆ ವರ್ಣಿಸಿದೆ–

ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಂ ಪಂಡಿತಂ ಮನ್ಯಮಾನಾಃ ॥
ಜಂಘನ್ಯಮಾನಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ ॥೧-೨-೮॥

ಇವರು ಅವಿದ್ಯೆಯ ಮಧ್ಯದಲ್ಲಿ ಬಾಳುತ್ತಾರೆ. ತಮಗೆ ತಾವೇ ಧೀರ ಪಂಡಿತ ಎಂದು ತಿಳಿಯುತ್ತಾರೆ. ಅಂಧನಿಂದ ಒಯ್ಯಲ್ಪಡುವ ಅಂಧರಂತೆ ಇವರು ಸಂತಾಪಪಟ್ಟು, ಜೀವನದಲ್ಲಿ ವಿವಿಧ ಪೆಟ್ಟು ತಿಂದು ಭ್ರಮಣ ಮಾಡುತ್ತಾರೆ. ಅರ್ಜುನನು ಇವರ ವರ್ಗಕ್ಕೆ ಸೇರಿದ್ದಾನೆ. ಅವನ ಮಾತಿನಲ್ಲಿ ಪಾಂಡಿತ್ಯವಿದೆ; ಹೃದಯದಲ್ಲಿ ಕಾರ್ಪಣ್ಯವಿದೆ.

೪) ದೇಹಾಂತರಪ್ರಾಪ್ತಿ:- ಸ್ಥೂಲ ದೇಹಕ್ಕೆ ಸಂಬಂಧಿಸಿ ಜೀವನು ಬಾಲ್ಯ ತಾರುಣ್ಯ ಜರಾವಸ್ಥೆ ಹೊಂದುತ್ತಾನೆ. ತಾರುಣ್ಯದಲ್ಲಿ ಅವನಿಗೆ ಬಾಲ್ಯದ ನೆನಹು (ಪ್ರತ್ಯಭಿಜ್ಞಾ=ಸ್ಮರಣ) ಇದೆ; ಜರೆಯಲ್ಲಿ ಬಾಲ್ಯ ಯೌವನದ ಸ್ಮರಣ ವಿದೆ. ಅಂದರೆ ಅವಸ್ಥೆಗಳು ಬಂದುಹೋದರೂ ಅವುಗಳನ್ನು ಅನುಭವಿ ಸಿದ ಜೀವ ಮಾತ್ರ ಒಬ್ಬನೇ. ಅವನು ಸ್ಥಿರ.

ಅವಸ್ಥಾಂತರದಂತೆಯೇ ದೇಹಾಂತರ. ಜೀವನಿಗೆ ಲಿಂಗ ದೇಹವೆಂಬು ದೊಂದು ಅಪೌಲ್ಯ ವಾಹನ. ಕರ್ಮಾನುಸಾರ ಒಂದು ದೇಹದ ಆಯು ತೀರಿದೊಡನೆ ಅವನು ತನ್ನ ವಾಹನದಲ್ಲಿ ಕುಳಿತು ದೇಹ ತ್ಯಜಿಸಿ ಹಾರಿ ಹೋಗುತ್ತಾನೆ; ಸಂಸ್ಕಾರ ಒತ್ತಡಕ್ಕೆ ಅನುಸರಿಸಿ ಹೊಸ ದೇಹದಲ್ಲಿ ಬಂದಿ ಳಿದು ಬೀಡು ಬಿಡುತ್ತಾನೆ. ಅವನು ಬಂದು ನಲೆಸಿದ್ದೇ ದೇಹದ ಹುಟ್ಟು; ಅವನು ಬಿಟ್ಟು ಹೋದಾಗ ದೇಹದ ಸಾವು. ಕಾಲ ಕಾಲಾಂತರದಿಂದ ಈ ಜೀವನ ಪ್ರಯಾಣ ಸಾಗಿದೆ. ಅವನು ಕೋಟ್ಯಂತರ ದೇಹ ಪಡೆದು ತೊರೆದಿ ದ್ದಾನೆ; ಇನ್ನೂ ಕೋಟ್ಯಂತರ ದೇಹ ಪಡೆಯಲಿದ್ದಾನೆ. ಇದರರ್ಥ ಜೀವನು ಅವಿನಾಶಿ; ದೇಹಗಳು ಮಾತ್ರ ವಿನಾಶಶೀಲ. ಜೀವನ ನೆಲೆವನೆಯಾದ ಅಂತ ರಂಗದಲ್ಲಿ ಹಿಂದಿನ ಎಲ್ಲ ಜನ್ಮಗಳ ಸಂಸ್ಕಾರಗಳಿವೆ. ಆದರೆ ಅವನಿಗವು ಸ್ಫುಟವಾಗಿ ಸ್ಮರಣೆಗೆ ಬಾರದಾಗಿವೆ. ಅದಕ್ಕೆ ಕಾರಣ ಲುಪ್ತಶಕ್ತಿಯ ಆಚ್ಛಾದನ.

ಹಿಂದೆ ನಾವು ಇದ್ದೆವೆಂದು ಹೇಳಲು ಅನೇಕ ಕಾರಣಗಳನ್ನು ಬಲ್ಲ ವರು ಕೊಡುತ್ತಾರೆ. ಒಂದೆರಡು ಇಲ್ಲಿವೆ:

೧) ಎಷ್ಟೋ ಸಲ, ಹೊಸ ಸ್ಥಾನ ನೋಡಲು ಹೋದಾಗ ಒಂದೊಮ್ಮೆ ಅವನ್ನು ನೋಡಿದಂತೆ ಅಸ್ಪಷ್ಟ ಸ್ಮರಣೆ ಮೂಡುವದು. ಇದು ಅನೇಕರ ಅನುಭವ.

೨) ಇಂದು ಜಗತ್ತಿನಲ್ಲಿ ಅನೇಕ ವಿಚಿತ್ರ ಸ್ಮರಣೆಯ ವ್ಯಕ್ತಿಗಳಿ-

ದ್ದಾರೆ. ಅವರು ಹಿಂದಿನ ಜನ್ಮದ ಐತಿಹಾಸಿಕ ಘಟನೆಗಳನ್ನೆಲ್ಲ ಯಥಾ-ವತ್ತಾಗಿ ವರ್ಣಿಸಬಲ್ಲರು.

೩) ಆದಾಗ ಹುಟ್ಟಿದ ಚಿಗರೆಯ ಮರಿ ತಾಯಿ-ಚಿಗರೆಯ ಕೋಡು, ಮುಖ, ಹೊಟ್ಟೆ, ಬಾಲಗಳಿಗೆ ಬಾಯಿ ಹಾಕದೇ, ನೇರವಾಗಿ ಕೆಚ್ಚಲಕ್ಕೇ ಬಾಯಿ ಇಡುವದು. (ಪೂರ್ವ ಸಂಸ್ಕಾರದಿಂದ)

೪) ಒಂದು ಮಗು ಬೆಳೆದು ತರುಣನಾದಾಗ ಪೂರ್ವ ಸಂಸ್ಕಾರ-ಬಲ ದಿಂದ ಪ್ರಪಂಚ ಮಾಡುತ್ತಾನೆ. ಪ್ರಪಂಚ ಮಾಡುವ ರೀತಿಯನ್ನು ಅವ ನಿಗೆ ಯಾವ ಶಾಲೆಯೂ ಕಲಿಸಲಿಲ್ಲ; ಕಲಿಸಬೇಕಿಲ್ಲ.

ಕೊನೆಯದಾಗಿ, ಪರಮಾತ್ಮ, ಜೀವಾತ್ಮ, ದೇಹಾಂತರಪ್ರಾಪ್ತಿ ಇವು ಗಳ ಸುಸ್ಪಷ್ಟ ಕಲ್ಪನೆ ಉಳ್ಳವನು ಜ್ಞಾನಿ; ದೇಹಾದಿಗಳನ್ನೆಲ್ಲ ಸಾಕ್ಷಿಯಾಗಿ ನಿಂತು ನೋಡುವವ ಧೀರ. ಅವನ ವರ್ಣನೆ ಮುಂಡಕದಲ್ಲಿ ಹೀಗಿದೆ:

ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸನ್ಯಾಸಯೋಗಾದ್ಯತಯಃ ಶುದ್ಧಸತ್ವಾಃ ॥
ತೇ ಬ್ರಹ್ಮಲೋಕೇಷು ಪರಾಂತಕಾಲೇ ಪರಾಮೃತಾಃ ಪರಿಮುಚ್ಯಂತಿ ಸರ್ವೇ ॥೩-೨-೬॥

ಧೀರರು ಉಪನಿಷದ್ವಿದ್ಯೆಯ ಪರಮ ಅರ್ಥ ಭೂತವಾದ ವಿಶ್ವಚೈತನ್ಯ ದೇವನನ್ನು ಅಪರೋಕ್ಷ ಮಾಡಿಕೊಂಡಿದ್ದಾರೆ. ಕರ್ಮಫಲಾಸಕ್ತಿತ್ಯಾಗ–ಯೋಗದಿಂದ ಅವರ ಅಂತಃಕರಣ ಶುದ್ಧವಾಗಿವೆ. ಅವರು ಮರಣ ಕಾಲ ದಲ್ಲಿ ದೇಹತ್ಯಾಗ ಮಾಡಿ ಬ್ರಹ್ಮಲೋಕಕ್ಕೆ ಹೋಗುತ್ತಾರೆ. ಪರಮ ಅಮೃತ ಸ್ವರೂಪರಾಗಿ ಮುಕ್ತರಾಗುತ್ತಾರೆ. ಅಂಥ ಧೀರರು ವಿಶ್ವ-ವಿಷಯಗಳಿಗೆ ಮರುಳಾಗುವದಿಲ್ಲ; ಜನ್ಮ-ಮರಣಗಳ ಚಕ್ರದಲ್ಲಿ ಸಿಲುಕುವದಿಲ್ಲ. ದೇಹಾದಿ ಜಡ ವಸ್ತುಗಳಿಗಾಗಿ ಅವರು ಎಂದಿಗೂ ಚಿಂತಿಸರು.

ಅರ್ಜುನ ಪ್ರಶ್ನಿಸಿದ:– ಕೃಷ್ಣ, ಗತ ಮತ್ತು ಆಗಾಮಿ ಜನ್ಮಗಳ ಬಗ್ಗೆ ನಾನು ಚಿಂತಿಸುವದಿಲ್ಲ, ಈಗಿರುವ ದೇಹಕ್ಕಾಗಿ ಚಿಂತಿಸುತ್ತಿರುವೆ. ಇದ-ಕ್ಕೇನಾದರು ಉಪಾಯ ಹೇಳಬಾರದೆ?

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಂಸ್ತಾಂಸ್ತಿತಿಕ್ಷಸ್ವ ಭಾರತ ॥೧೪॥**

**ಅರ್ಥ:–** ಕೌಂತೇಯ = ಕುಂತಿಪುತ್ರನೆ, ಮಾತ್ರಾಸ್ಪರ್ಶಾಃ ತು = ( ಮೀಯಂತೇ ಜ್ಞಾಯಂತೇ ವಿಷಯಾ ಆಭಿಃ ಇತಿ ಮಾತ್ರಾಃ ಇಂದ್ರಿಯ ವೃತ್ತಯಃ । ತಾಸಾಂ ಸ್ಪರ್ಶಾಃ ವಿಷಯೈಃ ಸಂಬಂಧಾಃ = ವಿಷಯಗಳು ಯಾವುದರಿಂದ ತಿಳಿಯಲ್ಪಡುತ್ತವೆಯೋ ಅವು 'ಮಾತ್ರಾಃ' ಇಂದ್ರಿಯ ವೃತ್ತಿಗಳು. ಅವುಗಳ ಹಾಗು ವಿಷಯಗಳ ಸಂಬಂಧಗಳೇ 'ಸ್ಪರ್ಶಾಃ') ವಿಷಯೇಂದ್ರಿಯ ಸ್ಪರ್ಶಗಳು, ಆಗಮ ಅಪಾಯಿನಃ = ಬಂದು ಹೋಗುವಂಥವುಗಳು,

( ತೇನ=ಆದ್ದರಿಂದ ) ಅನಿತ್ಯಾಃ=ಅಸ್ಥಿರ. ( ಅವು ಅನುಕೂಲ, ಪ್ರತಿಕೂಲ ಪರಿಸ್ಥಿತಿಗನುಸಾರ ) ಶೀತೋಷ್ಣ ಸುಖ ದುಃಖದಾಃ =ಶೀತ, ಉಷ್ಣಾದಿಗಳ ಮೂಲಕ ಸುಖ, ದುಃಖ ಕೊಡುವಂಥವುಗಳು. ಭಾರತ =( ಭರತ ವಂಶದಲ್ಲಿ ಹುಟ್ಟಿದ ) ಅರ್ಜುನನೆ, ತಾನ್ =ಆ ಸ್ಪರ್ಶಜನ್ಯ ಸುಖ ದುಃಖಾದಿಗಳನ್ನು, ತಿತಿಕ್ಷಸ್ವ=ಸಹಿಸಿಕೊ.

ವಿವರಣೆ:- ಪರಮಾತ್ಮನು ನಿರ್ಗುಣ, ನಿರ್ಲಿಪ್ತ. 'ಸದ್ರೂಪೇಣ ಸ್ಫುರಣ ರೂಪೇಣ ಸರ್ವಭಾಸಕಃ' ಸತ್ತು ಹಾಗೂ ಜ್ಞಾನರೂಪದಿಂದ ಅವನು ಸರ್ವವನ್ನು ಪ್ರಕಾಶಿಸುತ್ತಾನೆ; ಆದರೆ ವಿಶ್ವ ವಿಭಾಸಕ ಅನಂತಭಾಸ್ಕರನಾತ. ಆದರೂ ಬರೀ ಸಾಕ್ಷಿ!

ಪ್ರಕೃತಿಜನ್ಯ ಸರ್ವ ವಸ್ತುಗಳ ಒಳಹೊರಗೆಲ್ಲ ಆ ದಿವ್ಯ ಬೆಳಗು ಹರವಿದೆ. ಅಂತಃಕರಣಾವಚ್ಛಿನ್ನ (ಅವಚ್ಛಿನ್ನ=ಪರಿಮಿತ. ಅಂತಃಕರಣದಿಂದ ಪರಿಮಿತವಾದ ) ದಿವ್ಯ ಚೈತನ್ಯವು ಪ್ರಮಾತೃ. ಜ್ಞಾನೇಂದ್ರಿಯಾವಚ್ಛಿನ್ನ ಚೈತನ್ಯವು ಪ್ರಮಾಣ. ಸ್ಥೂಲ ವಿಷಯಾವಚ್ಛಿನ್ನ ಚೈತನ್ಯವು ಪ್ರಮೇಯ. ಮನಸ್ಸು ಇಂದ್ರಿಯಗಳ ಮೂಲಕ ಹೊರ ಹರಿದು ವಿಷಯಾಕಾರ ತಾಳಿದಾಗ, ಮನೋಗತ ಚೇತನ ಮತ್ತು ವಿಷಯಗತ ಚೇತನ ಒಂದಾಗುವವು. ಆಗ ಪ್ರಮಾತೃವಿಗೆ ಪ್ರಮೇಯದ ಜ್ಞಾನ (ಪ್ರಮಾ). ಆ ಜ್ಞಾನವು ಅನುಕೂಲವಾಗಿದ್ದರೆ ಸುಖ, ಪ್ರತಿಕೂಲವಾಗಿದ್ದರೆ ದುಃಖ ಅನುಭವಕ್ಕೆ ಬರುತ್ತವೆ.

ಮಾತ್ರಾ ಸ್ಪರ್ಶಾಃ:- ಮನೋಯುಕ್ತ ಇಂದ್ರಿಯ ವೃತ್ತಿಯು 'ಮಾತ್ರಾ'. ಪ್ರಮಾತೃವಿನ ಪ್ರೇರಣೆ ಹೊಂದಿ ಮನಸ್ಸು ಇಂದ್ರಿಯಗಳು ಸಂಪರ್ಕಗೊಳ್ಳುವದರಿಂದ ಆ ಪ್ರೇರಣೆಗೂ 'ಮಾತ್ರಾ' ಎನ್ನಬಹುದು. ಈ ಮಾತ್ರೆಗೂ ವಿಷಯಗಳಿಗೂ ಉಂಟಾಗುವ ಸಂಬಂಧವೇ 'ಸ್ಪರ್ಶಃ'; ಇವು ಅನೇಕವಿರುವದರಿಂದ 'ಮಾತ್ರಾಸ್ಪರ್ಶಾಃ' ಎನ್ನಲಾಗಿದೆ. ಈ ಮಾತ್ರಾಸ್ಪರ್ಶರೂಪ ವ್ಯವಹಾರದಲ್ಲಿ ಮನಸ್ಸು ಬಹು ಪ್ರಧಾನ ಪಾತ್ರವಾಡುತ್ತಿದೆ. ಬರೀ ಇಂದ್ರಿಯಗಳಾಗಲಿ, ಬರೀ ಪ್ರಮಾತೃವಾಗಲಿ ಪ್ರಮೇಯವನ್ನು ಸ್ಪರ್ಶಿಸಲಾರದು. ನಿದ್ರೆಯಲ್ಲಿ ಮನಸ್ಸು ಜಡವಾದಾಗ, ಸಮಾಧಿಯಲ್ಲಿ ಆತ್ಮಾಕಾರಗೊಂಡಾಗ ಇಂದ್ರಿಯಗಳಿದ್ದರೂ ವಿಷಯ ದರ್ಶನವಿಲ್ಲ; ಸುಖದುಃಖ ಭಾವನೆಗಳಿಲ್ಲ.

ಮನಸ್ಸು ಅನುಭವಗಳ ಆಗರ; ಸ್ಮರಣಗಳ ತಾಣ; ಭಾವನೆಗಳ ತವರು. ಭಕ್ತಿ. ಕ್ಷುಧೆ, ಕ್ರೋಧ, ದುರಿತ, ಲೀಲಾ, ಗಮನ, ಸುರತ, ಧನದಾಸೆ ಎಲ್ಲವೂ ಮನೋ ತರಂಗಗಳೇ. ಮಾತ್ರಾಸ್ಪರ್ಶಗಳಿಂದ ಅನುಕೂಲತೆ ಅನಾನುಕೂಲತೆಗಳನವಲಂಬಿಸಿ ಮನದ ಸರಸ್ಸಿನಲ್ಲಿ ಹಿತ ಅಹಿತ ಭಾವ ತರಂಗಗಳೇಳುವವು. ಆ ಮನಸ್ಸಿಗೂ, ಈ ಭಾವ ಲಹರಿಗಳಿಗೂ ಸಮು

ಮಾಯ ಸಂಬಂಧ! ಬಿಡಲಾರದ ಸಂಗ! ಜೀವನು (ಪ್ರಮಾತೃ ಚೇತನ) ದಿವ್ಯ ಚೇತನ ಮರೆತು ಮನಸ್ಸಿನಲ್ಲಿ ತಾದಾತ್ಮ್ಯ ಬುದ್ಧಿ ತಾಳಿದಾಗ, ಅವನು ಮನೋಗತ ಮಾತ್ರಾಸ್ಪರ್ಶಜ ಶೀತೋಷ್ಣ ಸುಖ ದುಃಖಾದಿ ಭಾವನಾ ಜಾಲದಲ್ಲಿ ಆಕಂಠ ಸಿಕ್ಕಿಕೊಳ್ಳುತ್ತಾನೆ. ಇದೇ ಸಂಸಾರ ಬಂಧನ.

ಸಂಸಾರಿ ಜೀವ ಒಮ್ಮೆ ಇಂತು ವಿಷಯ ರುಚಿಯ ಮೋಹದಲ್ಲಿ ಬಿದ್ದನೆಂದರೆ ಅದರಿಂದ ಪಾರಾಗುವದೇ ಕಷ್ಟ. ಈ ಮಾತನ್ನು ಬೆಂಬಲಿಸುವ ಒಂದು ಪ್ರಮಾಣ ವಚನ :

"ವಿಶ್ವಾಮಿತ್ರ ಪರಾಶರಃ ಪ್ರಭೃತಯೋ ವಾತಾಂಬುಪರ್ಣಾಶಿನಃ ।
ತೇಽಪಿ ಸ್ತ್ರೀಮುಖ ಪಂಕಜಂ ಸುಲಲಿತಂ ದೃಷ್ಟ್ವೈವ ಮೋಹಂಗತಾಃ ।
ಶಾಲ್ಯಾನ್ನಂ ಸಘೃತಂ ಪಯೋದಧಿಯುತಂ ಯೇ ಭುಂಜತೇ ಮಾನವಾಃ
ತೇಷಾಂ ಇಂದ್ರಿಯ ನಿಗ್ರಹೋ ಯದಿ ಭವೇದ್ವಿಂಧ್ಯಸ್ತರೇತ್ಸಾಗರೇ ॥"

ಗಾಳಿ ನೀರು ಎಲೆಗಳನ್ನು ತಿಂದು ಘೋರ ತಪ ಮಾಡಿದ ವಿಶ್ವಾಮಿತ್ರ, ಪರಾಶರ ಮುಂತಾದ ಮಹಾನುಭಾವರೇ ಸ್ತ್ರೀಯ ಸುಂದರ ಮುಖ ಕಮಲದ ದರ್ಶನ ಮಾತ್ರದಿಂದ ಮೋಹಿತರಾದರು. ಹೀಗಿರುವಾಗ, ದುಗ್ಧ ದಧಿ ಘೃತಯುಕ್ತ ಶಾಲ್ಯಾನ್ನ ಭುಂಜಿಸುವ ಸಾಮಾನ್ಯ ಜೀವರ ಪಾಡೇನು? ಒಂದು ವೇಳೆ ಇಂಥವರ ಇಂದ್ರಿಯ ನಿಗ್ರಹವಾದರೆ ವಿಂಧ್ಯಾಚಲವೇ ಸಾಗರದಲ್ಲಿ ತೇಲೀತು!! ವಿಷಯ ವ್ಯಾಮೋಹ ಅಷ್ಟು ಬಲಾಢ್ಯ. ಅದು ದೇವ-ದೇವತೆಗಳನ್ನೇ ಕಂಗೆಡಿಸಿದ ಘೋರ ಶಕ್ತಿ.

**ಅನಿತ್ಯಾಃ ಆಗಮಾಪಾಯಿನಃ :–** ಬಲ್ಲ ಬಲ್ಲಿದರನ್ನು ಮರುಳು ಮಾಡುವ ಮಾತ್ರಾಸ್ಪರ್ಶಗಳಾಗಲಿ, ಪ್ರಮೇಯ ವಸ್ತುಗಳಾಗಲಿ, ಸುಖ-ದುಃಖಾದಿ ಭಾವ ತರಂಗಗಳಾಗಲಿ ಸ್ಥಿರವಲ್ಲ. ಅವು ಬಂದುಹೋಗುವಂಥವು; ಅನಿತ್ಯ; ಕ್ಷಣಭಂಗುರ.

ಇಂದು ಕಂಡ ರೂಪು ನಾಳಿಲ್ಲ. ಈಗ ಕೇಳಿದ ಶಬ್ದ ಇನ್ನೊಂದು ಕ್ಷಣದಲ್ಲಿ ಮಾಯ. ಬಾಹ್ಯ ಜಗವೆಲ್ಲ ಪರಿವರ್ತನೆಯಾಗುತ್ತದೆ. ಋತುಗಳಂತೆ, ಸೂರ್ಯ ಚಂದ್ರರಂತೆ ಗುಣಾತ್ಮಕ ವಸ್ತುಗಳು ಹುಟ್ಟು, ವೃದ್ಧಿ, ನಾಶ ಕ್ರಮವಿಡಿದು ತಿರುಗುತ್ತಿವೆ. ಅದೇ ರೀತಿ ಮನೋ ವಿಕಾರಗಳು. ಹಿಂದಿನ ನಂಬಿಕೆ ವಿಚಾರಗಳು ಇಂದಿಲ್ಲ. ಈ ಕ್ಷಣದಲ್ಲಿದ್ದ ಶೋಕ ಮೋಹ ಕ್ರೌರ್ಯ ಧರ್ಮ ಅಧರ್ಮ ಸುಖ ಸಂತಸ ಅಸೂಯೆಗಳು ತೋರಿ, ಕೆಲವೇಳೆ ಇದ್ದು, ಹೋಗಿ ಬಿಡುವವು. ಉದಾಹರಣೆಗಾಗಿ : (೧) ಭಕ್ತಿಯಿಂದ ದೇವರಿಗೆ ಕೈಮುಗಿದು, ದೇವಾಲಯದ ಬಾಗಿಲು ದಾಟುತ್ತಿರುವಂತೆಯೇ ಕಣ್ಣನ್ನಾಕರ್ಷಿಸಿದ ವಸ್ತುಗಳನ್ನು ಕದಿಯುತ್ತೇವೆ. (೨) ಪ್ರವಚನ ಕೇಳುವ ದೃಢನಿರ್ಧಾರ ಮಾಡಿ ಮನೆ ಬಿಟ್ಟ ನಾವು ಮಾರ್ಗದಲ್ಲಿ ಕಾಫಿ ಕೆಫೆ ಕಂಡು ಅಲ್ಲಿಯೊಳು

ಹೊಕ್ಕುಬಿಡುತ್ತೇವೆ. (೩) ವಾಲ್ಮೀಕಿ ಬೇಡ. ಅತಿ ಕ್ರೂರ. ನಾರದನ ಒಂದು ಮಾತನ್ನು ಕೇಳಿದ ಮರುಕ್ಷಣವೇ ದೇವಭಕ್ತನಾದ. (೪) ಚಂಬಲ್ ಕಣಿವೆ ಯಲ್ಲಿ ಅನೇಕ ವರುಷ ರಾಕ್ಷಸೀ ಜೀವನ ಸಾಗಿಸಿದ ದರೋಡೆಖೋರರು ವಿನೋಬಾರ ಒಂದೆರಡು ಸಂದೇಶ ನುಡಿ ಕೇಳಿ ಸಯುವಿನಯದ ನಾಗರಿಕ ರಾದರು. ಮನದ ತರಂಗಗಳು ಎಷ್ಟು ಅಸ್ಥಿರ!!

ತಾನ್ ತಿತಿಕ್ಷಸ್ವ :- "ಭಾರತ, ನೀನು ಮನದೊಲವುಳ್ಳವ. ಮನವು ಇರುವವರೆಗೆ ಅನೇಕ ವಿಧ ಮಾತ್ರಾಸ್ಪರ್ಶಜನ್ಯ ಸುಖ-ದುಃಖ ಬರುವದು ಅನಿವಾರ್ಯ. ಅವುಗಳನ್ನು ನೀನು ತಪ್ಪಿಸಲಾರಿ. ಹೇಗೂ ಅವೆಲ್ಲ ಅಸ್ಥಿರ ವೆಂದು ದೃಢ ಮಾಡಿಕೊ; ಅವು ಒಂದು ಚಣ ತೋರಿ, ಅಡಗಿ ಹೋಗು-ತ್ತವೆ. ಅವುಗಳಿಗಾಗಿ ಅದೇಕೆ ಚಿಂತಿಸುವೆ? ಅವು ಬಂದಾಗ ತಾಳಿಕೊ. ಅವು ಗಳಿಗೆ ತಲೆಕೊಟ್ಟು ಗಾಸಿಗೊಳ್ಳದಿರು.

"ಬರೀ ಪಾಂಡಿತ್ಯ, ಸ್ವಬಲ ಸಾಹಸ, ಅಭ್ಯಾಸಗಳಿಂದ ಇಂದ್ರಿಯ ನಿಗ್ರಹ ಸಾಧಿಸಲಾರಿ. ಮಾತ್ರಾಸ್ಪರ್ಶಗಳ ಎದುರು ನಿನ್ನ ಮನೋಬಲ ಯಾವ ಕಾಸಿನದು? ಬಲ್ಲ ಬಲ್ಲಿದರನ್ನು ಮಂಕುಗೊಳಿಸುವ ಅದರ ಶಕ್ತಿಯ ಮುಂದೆ ನೀನೊಂದು ರವೆ. ಆದುದರಿಂದ ನಿನ್ನ ಪ್ರಾಜ್ಞತೆಯ ಅಹಂಭಾವ ತೊರೆ. ದೇವ ಗುರುಗಳಿಗೆ ನಿನ್ನನ್ನೇ ಅರ್ಪಿಸಿಕೊ. ಅವರ ಅನುಗ್ರಹದಿಂದ ನೀನು ಆ ಮಾತ್ರಾಸ್ಪರ್ಶದಿಂದುಂಟಾಗುವ ಆಘಾತಗಳನ್ನು ತಡೆದುಕೊಳ್ಳಬಲ್ಲೆ."

ವಿವರಣೆ:- ಧರ್ಮ ಅಧರ್ಮ, ಶೋಕ ಮೋಹ, ಸುಖ ದುಃಖ, ಆಸೆ ಅಸೂಯೆ ಇವು ಮನದ ಸ್ವನಿಷ್ಠ ಧರ್ಮಗಳು. ಸುಡುವ ಗುಣ ಬೆಂಕಿ ಯೊಂದಿಗೆ ಅಯುತಸಿದ್ಧವಾಗಿರುವಂತೆ ಆ ಧರ್ಮಗಳು ಮನದೊಂದಿಗೆ ಅಯುತ ಸಿದ್ಧವಾಗಿವೆ. ಜೀವನ ಮೂಲ ಸ್ವರೂಪದ ಸ್ವರೂಪ ಲಕ್ಷಣಗಳೆಂದರೆ ನಿತ್ಯತೆ, ನಿರ್ವಿಕಾರತೆ ಹಾಗು ನಿರ್ಗುಣತೆ. 'ನಾನು ಮನಸ್ಸಲ್ಲ, ನಿರ್ಮಲ ಆತ್ಮ' ಎಂದು ಅನುಭವತಃ ಅರಿತ ಮಹಾತ್ಮನನ್ನು ಮನೋಧರ್ಮಗಳು, ಮಾತ್ರಾ ಸ್ಪರ್ಶಗಳು ಬಾಧಿಸಲಾರವು. ಅವನಿಗೆ 'ತಿತಿಕ್ಷಸ್ವ' ಎಂಬ ಸದಾ ಉಪದೇಶವಿಲ್ಲ.

ದೇವನಿಲ್ಲ; ದೇಹ-ಮನ ಭಿನ್ನವಾದ ಆತ್ಮನಿಲ್ಲ; ಮುಕ್ತಿ ಬಂಧನಗಳು ಕಾಲ್ಪನಿಕ. ವಿಷಯಗಳೇ ಸತ್ಯ; ಅವುಗಳ ಉಪಭೋಗವೇ ಪರಮಾರ್ಥ. ಹೀಗೆ ತಿಳಿದು ಇಹದ ಭೋಗ ವೈಭವಗಳಿಗಾಗಿ ಹಾತೊರೆವ ಜೀವನಿಗೆ ತಿತಿಕ್ಷಸ್ವದ ಪ್ರಯೋಜನೆ ಇಲ್ಲ. ಏಕೆಂದರೆ ಈ ಶಬ್ದದ ಅರ್ಥವಾಗದಷ್ಟು ಅವನ ಬುದ್ಧಿ ಮೋಹದಿಂದ ಆವೃತವಾಗಿದೆ.

ಮೂರನೆಯ ವರ್ಗದ ಜೀವರು ಪರಿಪಕ್ವ ಜ್ಞಾನಿಗಳಲ್ಲ; ಮೂಢ ವಿಷಯಾರಾಮಿಗಳೂ ಅಲ್ಲ. ಅವರ ತಲೆಯಲ್ಲಿ ನಿತ್ಯ ಸುಖ ಶಾಂತಿಗಳ

ಅಸ್ಪಷ್ಟ ಕಲ್ಪನೆಯಿದೆ; ಅದನ್ನು ಪಡೆಯುವದು ಸರಿ ಎಂಬ ನೈತಿಕ ಬಲವೂ ಇದೆ. ಆದರೆ ಅವರ ಮನವು ಅವರನ್ನು ಸಂಸಾರದತ್ತ ಸೆಳೆದೊಯ್ಯುತ್ತಿದೆ; ವಿಷಯಾಭಿರತಿ ಅವರ ಹೃದಯದಲ್ಲಿ ಬೀಡು ಬಿಟ್ಟಿದೆ. ಅರ್ಜುನ ಇಂಥ ಒಬ್ಬ ಜೀವ; ಅಶೋಚ್ಯ ವಸ್ತುಗಳಿಗಾಗಿ ಶೋಕಿಸುತ್ತಿರುವ ಮರುಳ; ಕಿಂತು, ಅವನು 'ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ' ಎಂದು ಹೇಳಿ ಭಗವಂತನಿಗೆ ಶರಣು ಹೋದ. ಎಂತಲೇ ಅವನನ್ನು ಕುರಿತು 'ತಿತಿಕ್ಷಸ್ವ' ಎಂದು ಉಪದೇಶವಿತ್ತ ಶ್ರೀಕೃಷ್ಣ.

**ಸಂಬಂಧ:**– ಸುಖ-ದುಃಖಗಳನ್ನು ಪ್ರತೀಕರಿಸುವದಕ್ಕಿಂತ (ಸುಖ-ದುಃಖಗಳನ್ನು ಸಮೂಲಾಗ್ರ ಉಚ್ಚಾಟನೆ ಮಾಡುವೆನೆಂದು ಹುಚ್ಚು ಹವ್ಯಾಸಕ್ಕೆ ಕೈಹಾಕುವದಕ್ಕಿಂತ) ಸಹಿಸಿಕೊಳ್ಳುವದೇ ಮೇಲು; ಅದರಿಂದ ಮಹಾ ಫಲವಿದೆ. ಈ ಸಂಗತಿ ಮುಂದಿನ ಮಂತ್ರದಲ್ಲಿದೆ.

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥೧೫॥**

**ಅರ್ಥ:**– ಪುರುಷರ್ಷಭ = (ಪುರುಷ ಶ್ರೇಷ್ಠನಾದ) ಪಾರ್ಥನೆ, ಹಿ = (ತಿತಿಕ್ಷಸ್ವ) ಏಕೆಂದರೆ ಸಮದುಃಖ ಸುಖಂ = (ಸಮೇ ಸುಖ ದುಃಖೇ ಯಸ್ಯ ಸಃ : ಯಾವನಿಗೆ ಸುಖ ದುಃಖಗಳು ಸಮವೋ ಅವನು) ಸುಖ ದುಃಖಗಳನ್ನು ಸಮವೆಂದು ಭಾವಿಸುವ, ಯಂ ಧೀರಂ ಪುರುಷಂ = ಯಾವ ಜ್ಞಾನಿ ಪುರುಷನನ್ನು ಏತೇ = ಈ ಮಾತ್ರಾ ಸ್ಪರ್ಶಗಳು ನ ಹಿ ವ್ಯಥಯಂತಿ = (ನ ಅಭಿಭವಂತಿ = ಹಿಂಸಿಸುವದಿಲ್ಲ) ವ್ಯಥೆಗೊಳಿಸುವದಿಲ್ಲವೋ, ಸಃ = ಅವನು, ಅಮೃತತ್ವಾಯ = ಮೋಕ್ಷಕ್ಕೆ ಕಲ್ಪತೇ = ಯೋಗ್ಯನಾಗುತ್ತಾನೆ.

**ಭಾವ:**– ಪುರುಷರ್ಷಭ, ಸಹಿಸಿಕೊ ಏಕೆಂದರೆ, ಯಾವನನ್ನು ಈ ಮಾತ್ರಾ ಸ್ಪರ್ಶಗಳು ಘಾಸಿಗೊಳಿಸುವದಿಲ್ಲವೋ, ಯಾವನು ಸುಖ ದುಃಖಗಳನ್ನು ಸಮವೆಂದು ತಿಳಿಯುವನೋ ಅಂಥ ಧೀರ ಪುರುಷನು ಮೋಕ್ಷ ಪಡೆಯಲು ಸಮರ್ಥನಾಗುತ್ತಾನೆ.

**ವಿವರಣೆ:**– ಕೃಷ್ಣ– "ಭಾರತ, ನೀನೇನು ಸಾಮಾನ್ಯ ವ್ಯಕ್ತಿಯೆ? ಪುರುಷ ಸಿಂಹ! ರಣರಂಗದಲ್ಲಿ ಅಜೇಯ ವೀರ; ಸವ್ಯಸಾಚಿ! ಆದರೇನು? ಜೀವನವೆಂಬ ಯುದ್ಧ ಭೂಮಿಯಲ್ಲಿ ನೀನೊಬ್ಬ ಹೇಡಿ; ಕಾಮ ಕಾರ್ಪಣ್ಯ, ಮೋಹ ಮೌಢ್ಯತೆ, ದೀನತೆ ಹೀನತೆ, ಆಸೆ ಅಜ್ಞಾನಗಳೆಂಬ ಜನ್ಮಜಾತ ವೈರಿಗಳಿಂದ ಪರಾಜಿತ. ವಿಷಯಾಭಿಲಾಷೆ, ಸ್ವಜನ ಆಸಕ್ತಿ, ಜಾತಿ ವರ್ಣಾಶ್ರಮಾದಿ ಅಭಿಮಾನ ನಿನ್ನನ್ನು ಕಂಗೆಡಿಸಿವೆ. ಎಂದೇ ನಿನ್ನ ಕಣ್ಣಲ್ಲಿ ನೀರು! ನೀನೀಗ ಸಿಡಿದೆದ್ದು ನಿಲ್ಲಲೇಬೇಕು. ನಿನ್ನ ಅಂತಸ್ಥ ಸಾಮರ್ಥ್ಯವನ್ನೆಲ್ಲ ಒಟ್ಟುಗೂಡಿಸು. ಧೀರನಾಗಿ ಆ ಮೋಹ ಮಾಯೆಗಳ ದಾಳಿಯನು ಎದುರಿಸು; ವೈರಿಗಳ ಆಘಾತ ಸಹಿಸಿಕೊ. ಸುಖ ದುಃಖಗಳನ್ನು ಸಮನಾಗಿ ಭಾವಿಸು. ನಿನ್ನ ಇಂದ್ರಿಯ ಹಾಗು ಮನೋ ಪ್ರವಾಹಗಳ ಮೇಲೆ ಬಲವಾದ ನಿಗ್ರಹ ಸಾಧಿಸು. ಅಂದರೆ

ಮಾತ್ರ ನಾನು ನಿನ್ನನ್ನು ಧೀರನೆಂದು ಕೊಂಡಾಡುವೆ. ನೀನು ಅಮೃತತ್ವ ಗಳಿಸುವ ಯೋಗ್ಯತೆ ಹೊಂದುವಿ"

ಈ ಮಂತ್ರದ ವಿಷಯಗಳು: ೧) ಮಾತ್ರಾ ಸ್ಪರ್ಶಗಳು ಬಲವಂತ. ಮನುಷ್ಯನ ಮೇಲೆ ಸದಾ ದಾಳಿ ಮಾಡುತ್ತಿವೆ; ವ್ಯಥೆ ನೀಡುತ್ತಿವೆ. ೨) ಧೀರನು ಅವುಗಳಿಂದ ವ್ಯಥೆಗೊಳ್ಳುವದಿಲ್ಲ; ಅವನೇ ಮೋಕ್ಷದ ಅಧಿಕಾರಿ.

೧) ಇಂದ್ರಿಯ ಹಾಗು ವಿಷಯಗಳು ಸಂಬಂಧವಾದಾಗ ಒಂದು ಬಗೆಯ ಮಾದಕ ಸುಖ ಉಂಟಾಗುವದು. ಇದು ಕ್ಷಣಕಾಲ ಬಾಳುವದಾದರೂ ಅತ್ಯಂತ ಮನೋಹಾರಿ! ಚಿತ್ತಾಕರ್ಷಕ! ಮಹಾನ್ ಪಂಡಿತರ ಪ್ರಚಂಡ ಬುದ್ಧಿಶಕ್ತಿಯನ್ನೇ ನಿರ್ಬಲ ನಿಸ್ಸತ್ವಗೊಳಿಸುವ ಬಲ ಇದರಲ್ಲಿದೆ. ಭಯಾನಕ ಸರ್ಪ, ಭೀಮಕಾಯದ ಹಸ್ತಿ, ವರ್ಣವಿರಂಗದ ಪತಂಗ. ಜಲವಿಹಾರಿ ಮತ್ಸ್ಯ ಹಾಗು ಮಕರಂದಾಪೇಕ್ಷಿ ಭ್ರಮರಗಳನ್ನು ತನ್ನ ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬೈದು ಕರಾಳ ಮುಷ್ಟಿಯಲ್ಲಿ ಹಿಚುಕಬಲ್ಲದೀ ವಿಷಯ-ಸುಖ! ಪ್ರಪಂಚವೆಲ್ಲ ಈ ಸುಖದ ವಿರಂಗಲೀಲೆ! ಇದಕ್ಕಾಗಿ ಅಜ್ಞ, ಸುಜ್ಞ, ಕಿರಿಯ ಹಿರಿಯ, ಗೃಹಸ್ಥ ವನಸ್ಥ, ಸ್ತ್ರೀ ಪುರುಷ ತಮ್ಮ ಪ್ರಾಣ ಕಳೆದುಕೊಳ್ಳುತ್ತಿದ್ದಾರೆ. ಜಗತ್ತಿನ ಕೋಟಿ ಕೋಟಿ ಜನಾಂಗ ಈ ಮಾತ್ರಾಸ್ಪರ್ಶಗಳ ಹಿಡಿತಕ್ಕೆ ಸಿಕ್ಕು ತಡವರಿಸುತ್ತಿದೆ.

೨) ಕೊಡ ಎತ್ತುವದೇ ಇರಲಿ; ಭಾರ ಒಯ್ಯುವದೇ ಇರಲಿ; ವ್ಯಾಪಾರೋದ್ಯೋಗ ಮಾಡುವದೇ ಇರಲಿ; ಅದಕ್ಕೆಲ್ಲ ಅರ್ಹತೆ ಮುಖ್ಯ. ಇದಕ್ಕೆ 'ಅಧಿಕಾರ' ಎಂದು ನಾಮ. ಹತ್ತು ಲಕ್ಷ ಬೆಲೆಯ ಮನೆ ಮಾರುವದಿದೆ ಎಂದಿಟ್ಟುಕೊಳ್ಳಿ; ಅದನ್ನು ಕೊಳ್ಳಲು ಒಬ್ಬ ಭಿಕ್ಷುಕ ಬಂದರೆ ಜನ ಗೊಳ್ಳನೆ ನಕ್ಕುಬಿಡುತ್ತಾರೆ, ಅದೇ ಒಬ್ಬ ಆಗರ್ಭ ಸಿರಿವಂತ ಬಂದರೆ ಮಾನ ಮರ್ಯಾದೆ ಮಾಡುತ್ತಾರೆ. ಈ ವ್ಯಾವಹಾರಿಕ ಅಧಿಕಾರವು ನೀತಿ, ಧರ್ಮ, ತತ್ತ್ವಜ್ಞಾನ, ಅಧ್ಯಾತ್ಮ- ಹೀಗೆ ಎಲ್ಲ ಭೂಮಿಕೆಗಳಿಗೂ ಸಂಬಂಧಿಸಿದೆ. "ಅಥಾತೋ ಧರ್ಮ ಜಿಜ್ಞಾಸಾ" "ಅಥ ಯೋಗಾನುಶಾಸನಂ" "ಅಥಾತೋ ಬ್ರಹ್ಮ ಜಿಜ್ಞಾಸಾ" ಈ ಸೂತ್ರಗಳಲ್ಲಿರುವ ಅಥ ಶಬ್ದ ಧರ್ಮಾಧಿಕಾರ, ಯೋಗಾಧಿಕಾರ, ಜ್ಞಾನಾಧಿಕಾರ ನಿರ್ಣಾಯಕವಾಗಿದೆ ಎಂಬ ಮಾತನ್ನು ಗಮನಿಸಬೇಕು.

ನಮ್ಮ ಜೀವನ ಸರ್ವಾಂಗ ಸುಂದರವಾಗಬೇಕು; ಜನ್ಮ ಮರಣಗಳ ಭೀತಿ ಮರೆಯಾಗಬೇಕು; ಚಿರಂತನವಾದ ಸಮಾಧಾನ ಅಳವಡಬೇಕು; ಎಂಬ ಬಯಕೆ ನಮ್ಮದಾಗಿದ್ದರೆ ಬರಿ ಮಾತಿನಿಂದದು ಸಾಧ್ಯವಿಲ್ಲ. ನಮ್ಮಲ್ಲಿ 'ಅಧಿ-ಕಾರ' ಅಂಗವಿಸಬೇಕು. ಮಾತ್ರಾಸ್ಪರ್ಶಜನ್ಯ ಸುಖ ದುಃಖಗಳಿಂದ ಬಾಧೆಗೊಳ್ಳದಂತೆ ನಿಶಾಮಯನಾಗಿರುವದೇ ಆ 'ಅಧಿಕಾರ'.

ಆದರಿದು ನಾವು ಕಲ್ಪಿಸಿದಷ್ಟು ಸರಳಲ್ಲ. ಸಾಹಸ ಶೌರ್ಯಗಳ ಮೂರ್ತಿಮಂತನಾದ ಆಚಾರ್ಯ ಭೀಷ್ಮ ದ್ರೋಣ ಕೃಪರಂಥವರು ಕೂಡ ಸಿಹಿ ಭೋಜನಕ್ಕಾಗಿ ಮನಸೋತರೆಂದಾಗ ನಮ್ಮಂಥವರ ಪಾಡೇನು? ನಮ್ಮ ದೇಹ ಚಟಗಳ ತವರು; ಮನಸ್ಸು ಕಾಮ ಕ್ರೋಧಗಳ ನಿಲಯ!

ಶಿವನ ಶಾಂತಿಪ್ರಸಾದ ಗ್ರಹಿಸುವ ಹಂಬಲ ನಮ್ಮಲ್ಲಿ ಅವಶ್ಯವಾಗಿ ದ್ದರೆ, ನಮ್ಮ ಪ್ರಪ್ರಥಮ ಕರ್ತವ್ಯ ಮಾತ್ರಾಸ್ಪರ್ಶಗಳನ್ನು ನಿರ್ವೀರ್ಯಗೊಳಿ ಸುವದು. ವಿಷಯಗಳತ್ತ ಹರಿಯುವ ಇಂದ್ರಿಯಗಳು ದೇವನತ್ತ ಪ್ರವಹಿಸ ಬೇಕು. ನಮ್ಮ ಕರ್ಣ ದೇವ ನುಡಿ ಕೇಳಲಿ; ತ್ವಚ ದೇವಸ್ಪರ್ಶ ಮಾಡಲಿ; ನೇತ್ರ ದೇವ ಮೂರ್ತಿಯನ್ನು ನೋಡಲಿ; ರಸನ ದೇವ ಪ್ರಸಾದ ಸವಿಯಲಿ; ಘ್ರಾಣ ದಿವ್ಯ ಗಂಧ ಸೇವಿಸಲಿ; ಮನಸ್ಸು ಸದೈವ ದೇವನನ್ನು ಸ್ಮರಿಸಲಿ. ಬಸವಣ್ಣನವರು ಈ ಮಾತನ್ನು ಬಹು ಸುಂದರವಾಗಿ ಹೇಳಿದ್ದಾರೆ.

"ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ; ಸುತ್ತಿಸುಳಿದು ನೋಡ ದಂತೆ ಅಂಧಕನ ಮಾಡಯ್ಯಾ ತಂದೆ; ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ; ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲ ಸಂಗಮದೇವಾ"

ಇದರರ್ಥ, ನಮ್ಮ ದೇಹ ಮನ ಬುದ್ಧಿಗಳು ದೇವನಿಗಾಗಿ ಅರ್ಪಿತ ವಾಗಬೇಕು. ದೇವನನ್ನು ವರಿಸಿದ ಅವು ಇನ್ನೊಂದನ್ನು ಸ್ಪರ್ಶಿಸಬಾರದು. ಒಂದು ಕಥೆ ಹೀಗಿದೆ:

ಅರಣ್ಯದಲ್ಲಿ ಒಬ್ಬ ಅಂಧನು ರಾಧಾಕೃಷ್ಣರ ಭಜನೆ ಮಾಡುತ್ತಿದ್ದ. ಅವನ ಭಕ್ತಿ-ಗಾನ-ಮಾಧುರ್ಯ ಸೇವಿಸಿದ ರಾಧೆ ಅವನ ಸಮೀಪ ಬಂದಳು. ತನ್ನ ಪರಿಚಯ ಹೇಳಿ, ಅವನ ತಲೆಯ ಮೇಲೆ ಹಸ್ತ ಇಟ್ಟು ಹರಸಿದಳು. ಅಂಧ ಜಾಣ; ತಕ್ಷಣ ಅವಳ ಕಾಲುಗಳನ್ನು ಗಟ್ಟಿಯಾಗಿ ಹಿಡಿದು ವಂದಿಸಿದ; ಬಿಳಲೇ ಇಲ್ಲ. 'ತಾಯಿ, ನೀನೇ ರಾಧೆ ಎಂದು ನನಗೇನು ಗೊತ್ತು? ಕೃಷ್ಣ ಬಂದು ಹೇಳಿದರೆ ಬಿಟ್ಟುಬಿಡುವೆ'. ಕೃಷ್ಣನೂ ಬಂದ, ಅಂಧನ ಇಚ್ಛೆಯಂತೆ ದೃಷ್ಟಿ ಪ್ರದಾನ ಮಾಡಿದ. ಎದುರಿನಲ್ಲಿ ರಾಧಾಕೃಷ್ಣರ ಸುಂದರ ರೂಪ ಕಂಡ ಅಂಧನು ಆನಂದಾಶ್ರು ಸುರಿಸಿ ಪ್ರಾರ್ಥಿಸಿದ. 'ದೇವಾ, ನಿಮ್ಮನ್ನು ಕಂಡು ಮುಟ್ಟಿ ನನ್ನ ಕಣ್ಣು ಮೈ ಎಲ್ಲ ಪವಿತ್ರವಾಗಿವೆ. ಇನ್ನುಮೇಲೆ ಅವು ಇನ್ನೇನನ್ನೂ ನೋಡುವದು ಬೇಡ. ನಾನು ಮೊದಲಿನಂತ ಅಂಧನಾಗು ವಂತೆ ಅನುಗ್ರಹಿಸಿರಿ!' ಈ ಕಥೆ ಹೃದಯಂಗಮ!

ಅಗ್ನಿ ಅಡಿಗೆಗಾಗಿ; ಯಾರದೋ ಮನೆ ಸುಡಲು ಅಲ್ಲ. ಹಾಗೆ ದೇವನು ನಮಗೆ "ಮಾತ್ರಾ" ಇಂದ್ರಿಯಗಳನ್ನಿತ್ತುದು ವಿಷಯಾಗ್ನಿಯಲ್ಲಿ ಬಲಿಕೊಡಲು ಅಲ್ಲ, ಆತ್ಮಸಾಧನೆಗಾಗಿ! ಪರಮ ಸತ್ಯ ಸಿದ್ಧಿಗಾಗಿ! ಇದನ್ನು ಅರಿತು,

ಇಂದ್ರಿಯಗಳ ವಿಷಯಗಳ ಮೋಹಕ ಸಂಪರ್ಕ ತಪ್ಪಿಸಿ ದೇವನಿಗಾಗಿ ಮೀಸಲಿಡುವವ ಧೀರ. ಮನಸ್ಸಿನ ವಿಕೃತ ತರಂಗಗಳನ್ನು ತೊಡೆದುಹಾಕಿ ಶಾಂತಿ ಸ್ಫುರಣೆಗಳನ್ನು ಬೆಳೆಸಿಕೊಳ್ಳುವವ ಶೂರ. ಅನಿತ್ಯ ವಸ್ತುಗಳ ಗೊಡವೆ ಬಿಟ್ಟು ವಿಶ್ವಮೂಲ ಮಹಾನ್ ಅಸ್ತಿತ್ವದತ್ತ ಬುದ್ಧಿ-ದೃಷ್ಟಿ ಹರಿಸಿದವ ಜ್ಞಾನಿ! ಅವನೇ ಮುಕ್ತಿಗೆ ಅಧಿಕಾರಿ; ಹೃದ್ಯಂತರ್ಜ್ಯೋತಿಃ ಪುರುಷನ ಪ್ರಜ್ಞೆ ಗಳಿಸಿದ ಪುರುಷಶ್ರೇಷ್ಠ!! (ಧೀರ ಪುರುಷಃ).

ಅಂಥ ಧೀರ ಸಾಧಕಶ್ರೇಷ್ಠರಿಗೆ, ವಿಷಯ ವಿತೃಷ್ಣರಿಗೆ ಮಾತ್ರಾಸ್ಪರ್ಶಗಳು ಎಷ್ಟೂ ಕಷ್ಟ ಕೊಡವು. ಏಕೆಂದರೆ ಅವರ ಮನಸ್ಸು ಅತಿ ಜಾಗ್ರ ಅವಸ್ಥೆಯಲ್ಲಿದೆ. ಮಾತ್ರಾಸ್ಪರ್ಶಗಳ ರಾಜ್ಯ ಜಾಗ್ರದಲ್ಲಿ. ಮಾತ್ರಾಸ್ಪರ್ಶಗಳ ವಾಸನಾ-ರಾಜ್ಯ ಸ್ವಪ್ನದಲ್ಲಿ. ಮಾತ್ರಾಸ್ಪರ್ಶಗಳ ವಿಲಯನ ಅವಸ್ಥೆ ಸುಪ್ತಿಯಲ್ಲಿ. ಧೀರನು ಮೂರೂ ಅವಸ್ಥೆಗಳಿರುವಾಗಲೇ ಅವುಗಳ ಹಿಡಿತ ತಪ್ಪಿಸಿ ದಿವ್ಯ ಜಾಗ್ರದಲ್ಲಿ ವಿರಮಿಸುತ್ತಾನೆ.

ಸಂತ ಗೋರಾ ಕುಂಬಾರನ ಜೀವನ ಇದಕ್ಕೆ ತಕ್ಕ ಉದಾಹರಣೆ. ಮಣ್ಣು ತುಳಿಯುತ್ತಿರುವಾಗಲೇ ದೇವ ಸಾಮ್ರಾಜ್ಯದಲ್ಲಿ ಮನಸ್ಸನ್ನು ಲೀನಗೊಳಿಸಿದ. ಅವನ ಒಂದೇ ಒಂದು ಮಗು ಸರಿದು ಬಂದು ಕೆಸರಲ್ಲಿ ಬಿತ್ತು. ಸಂತನು ಅದರ ಅರಿವಿಲ್ಲದೆ ತುಳಿದೇ ತುಳಿದ. ಕೆಸರೆಲ್ಲ ರಕ್ತಮಯವಾಯ್ತು! ಆದರೂ ಅವನಿಗೆ ಭಾನ ಬರಲಿಲ್ಲ! ಹೆಂಡತಿ ಬಂದು ಕೂಗಾಟ ಮಾಡಿದಾಗ ಅವನಿಗೆ ಬಾಹ್ಯ ಅರಿವು ಬಂತು.

ಸಂತ ಮಹಾತ್ಮರು ಸಮದೃಷ್ಟಿಯವರು. ಧೀರರಾದ ಅವರಿಗೆ ಸುಖ ದುಃಖಗಳು ಸರಿಸಮ. ಲೋಕವನ್ನೇ ಕಂಗೆಡಿಸುವ ಆ ಭಾವನೆಗಳು ಅವರನ್ನು ಲೇಶಾಂಶವೂ ಸ್ಪರ್ಶಿಸಲಾರವು. ಅವರು ಅಮೃತಪಾನಿಗಳು! ಅಮರ ಆತ್ಮದ್ರಷ್ಟಾರರು.

**ಸಂಬಂಧ:–** ಅರ್ಜುನ:- ಭಗವನ್, ಮಾತ್ರಾಸ್ಪರ್ಶಗಳನ್ನು ಸಹಿಸಬೇಕು; ಅವನ್ನು ಸಹಿಸಿದ ಧೀರರೇ ಅಮೃತತ್ವಕ್ಕೆ ಯೋಗ್ಯರಾಗುತ್ತಾರೆ ಎಂಬ ತಮ್ಮ ಅಭಿಪ್ರಾಯ ಅರಿತೆ. ಆದರೆ, ಬಹು ದುಃಖವೀಯುವ, ಮಾತ್ರಾಸ್ಪರ್ಶಜವಾದ ಶೀತೋಷ್ಣಾದಿಗಳನ್ನು ಬಲವಂತವಾಗಿ ನಿಗ್ರಹಿಸಿದರೆ, ಸಹಿಸಿದರೆ ದೇಹ ನಾಶವ ಸಂಭವವಿದೆಯಲ್ಲ? ಆದಕ್ಕೇನು ಹೇಳುತ್ತೀರಿ?

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥೧೬॥**

**ಅರ್ಥ:–** ಅಸತಃ = [ಅನಾತ್ಮ ಧರ್ಮತ್ವಾತ್ ಅವಿದ್ಯಮಾನಸ್ಯ ಶೀತೋಷ್ಣಾದೇಃ ಅನಾತ್ಮ ಧರ್ಮವುಳ್ಳುದರಿಂದ ಇಲ್ಲದಿರುವ ಶೀತೋಷ್ಣಾದಿಗಳಿಗೆ ] ಅಸತ್ ವಸ್ತುವಿಗೆ,

ಭಾವಃ = [ಸತ್ತಾ] ಆತ್ಮನಲ್ಲಿ ಅಸ್ತಿತ್ವವು, ನ ವಿದ್ಯತೇ = ಇರುವದಿಲ್ಲ ಸತಃ = [ಸತ್ ಸ್ವಭಾವಸ್ಯ ಆತ್ಮನಃ :ಸತ್ ಸ್ವಭಾವವುಳ್ಳ ಆತ್ಮನಿಗೆ] ಸತ್ ವಸ್ತುವಿಗೆ, ಅಭಾವಃ = [ವಿನಾಶಃ] ನಾಶವು ನ ವಿದ್ಯತೇ = ಇರುವದಿಲ್ಲ, ತು = ಆದರೆ, ತತ್ತ್ವದರ್ಶಿಭಿಃ = [ವಸ್ತು ಯಾಥಾತ್ಮ್ಯವಿದ್ಭಿಃ] ತತ್ತ್ವದರ್ಶಿಗಳಿಂದ, ಅನಯೋಃ = [ಸತ್ ಅಸತೋಃ] = ಸತ್ತು ಅಸತ್ತುಗಳೆರಡರ ಅಂತಃ = ನಿರ್ಣಯವು ದೃಷ್ಟಃ = ತಿಳಿಯಲ್ಪಟ್ಟಿದೆ.

ವಿವರಣೆ:- ಭಗವಂತ- "ತಾತ, ವಿಶ್ವದಲ್ಲಿ ಎರಡೇ ಎರಡು ಮೂಲ ವಸ್ತುಗಳಿವೆ. ಒಂದು ಎಂದಿಗೂ ಪರಿಣಮಿಸದ ಆತ್ಮ; ಸತ್ತು. ಇನ್ನೊಂದು ಸದಾ ಪರಿಣಾಮಶೀಲವಾದ ಅನಾತ್ಮ; ಪ್ರಕೃತಿ; ಅಸತ್ತು. ಆತ್ಮನು ಚಿದಾನಂದ ಸ್ವರೂಪ; ಕಾಲಾತೀತ; ಆದುದರಿಂದ ಅಮರ. ಪ್ರಕೃತಿಯು ಜ್ಞಾನಾನಂದ ಹೀನ; ಸತ್ವಾದಿ ಗುಣಾತ್ಮಕ ಹಾಗು ಕಾಲ-ಪರಿಣಾಮಿ.

"ಸೂರ್ಯನ ಸನ್ನಿಧಿಯಲ್ಲಿ ಮೇಣ ಕರಗುವಂತೆ, ಆತ್ಮ ಪುರುಷನ ಸನ್ನಿಧಿಯಲ್ಲಿ ಪ್ರಕೃತಿಯು ವಿಕಾಸಗೊಳ್ಳುವದು; ಮಹತ್ತು ಅಹಂಕಾರ ತನ್ಮಾತ್ರೆ ಭೂತ ಬುದ್ಧಿ ಮನ ಇಂದ್ರಿಯ ಹಾಗು ದೇಹಗಳ ಆಕಾರ ತಾಳುವದು. ಕಾಲ ಸನ್ನಿಹಿತವಾದಾಗ ದೇವನ ಆಶ್ರಯದಲ್ಲಿಯೇ ಈ ಪ್ರಕೃತಿ ಮತ್ತೆ ಆಕುಂಚನ ಹೊಂದುವದು; ಅಂದರೆ ದೇಹವು ಭೂತಗಳಲ್ಲಿ, ಭೂತಗಳು ತನ್ಮಾತ್ರೆಗಳಲ್ಲಿ, ತನ್ಮಾತ್ರೆಗಳು ಅಹಂಕಾರದಲ್ಲಿ, ಅದು ಮಹತ್ತಿನಲ್ಲಿ, ಮಹತ್ತು ಪ್ರಕೃತಿಯಲ್ಲಿ ಅಡಗುವವು. ಇಂತು ಪ್ರಕೃತಿಯ ಯಾವ ಸ್ಪಷ್ಟ ಕೃತಿಯೂ ಸ್ಥಿರವಲ್ಲ; ಸತ್ಯವಲ್ಲ.

"ಅರ್ಜುನ- ಆದುದರಿಂದಲೇ, ಸರ್ವ ಅನಾತ್ಮವಸ್ತುಗಳು ನಾಶವಾಗಲೇಬೇಕು. ಅನಾತ್ಮವಸ್ತ್ವಾಧಾರ ಪುರುಷನು ಮಾತ್ರ ಎಂದಿಗೂ ವಿನಾಶ ಹೊಂದಲಾರ. ಈ ಎರಡೂ ತತ್ತ್ವಗಳ ಸ್ವರೂಪ ಅರಿತವನು ತತ್ತ್ವಜ್ಞಾನಿ. ಅವನನ್ನು ಮಾತ್ರಾಸ್ಪರ್ಶಗಳು ಹಾಗು ತಜ್ಜನ್ಯ ಶೀತೋಷ್ಣಾದಿಗಳು ಬಾಧಿಸಲಾರವು. ನೀನು ಈ ತತ್ತ್ವಜ್ಞಾನವಿಲ್ಲದ ಬರಿ ಛಲದಿಂದ ಇಂದ್ರಿಯಗಳನ್ನು ನಿಗ್ರಹಿಸಿದೆಯಾದರೆ ಆ ವಿಷಯಗಳ ಉಪಟಳ ತಪ್ಪದು. ನಿನ್ನ ಶೋಕ ನೀಗದು. ನೀನು ನಿನ್ನ ಮನವನ್ನು ನಿಗ್ರಹಿಸಿಕೊ. ನಿನ್ನ ದೇಹಗತ ಮತ್ತು ವಿಶ್ವಗತ ವಸ್ತುಗಳನ್ನು ಪರಾಮರ್ಶಿಸು. ಆತ್ಮ ಅನಾತ್ಮ ವಿವೇಚನಾ-ವಿಜ್ಞಾನಿಯಾಗು, ನಿನಗೆ ಆಗ ಬಾಧೆಯಿಲ್ಲ".

ನಾಸತೋ ವಿದ್ಯತೇ ಭಾವಃ : ಅಸತ್ ಪದ ವಸ್ತುವಿನ ಅಂತ್ಯಂತಾಭಾವ ದರ್ಶಕವಲ್ಲ. ಅದು ಪರಿಣಾಮಶೀಲತೆಯನ್ನು ನಿರ್ದೇಶಿಸುತ್ತಿದೆ. ಆತ್ಮನಿಂದ ಭಿನ್ನವಾದ, ವಿಶ್ವಮೂಲವಾದ ಪ್ರಕೃತಿಯೇ ಆ ಅಸತ್ ತತ್ತ್ವ. ಅದರ ಒಡಲಲ್ಲಿ ಸತ್ತ್ವ ರಜ ತಮ ಎಂಬ ಮೂರು ಗುಣಗಳು ಸರಿಸಮ ಪ್ರಮಾಣದಲ್ಲಿ ಅಡಗಿವೆ, ಈ ಮೂರು ಗುಣಗಳು ನಿಷ್ಕ್ರಿಯವಾಗಿ ಇರು

ವದೇ ಕಡಿಮೆ. ಅವು ಮೈಬಿಚ್ಚಿ ತಮ್ಮ ಕ್ರೀಡೆ ಪ್ರಾರಂಭಿಸಿದಾಗ ಸೃಷ್ಟಿಯ ನಿರ್ಮಾಣ. ಸದೈವ ಚಂಚಲವಾದ ಈ ಗುಣಗಳು ತಮ್ಮ ತಮ್ಮಲ್ಲಿಯೇ ಆಧಿಪತ್ಯಕ್ಕಾಗಿ ಹೆಣಗುತ್ತವೆ. ರಜ ತಮಗಳನ್ನು ದಬ್ಬಿ ಸತ್ವವು ಅಧಿಕ್ಯವಾದರೆ ಮನಸ್ಸು, ಜ್ಞಾನೇಂದ್ರಿಯ, ದೇವಲೋಕ, ಪ್ರಕಾಶಕಾಯ ಮುಂತಾದ ದ್ಯುತಿಮಾನ ವಸ್ತುಗಳು ಹುಟ್ಟುತ್ತವೆ. ತಮ ಸತ್ವಗಳಡಗಿ ರಜವು ಅಧಿಕವಾದರೆ ಕರ್ಮೇಂದ್ರಿಯಗಳು, ಪ್ರಾಣಗಳು, ಮರ್ತ್ಯಲೋಕ ಹಾಗು ಕಾರ್ಯಶೀಲ ವಿವಿಧ ಪದಾರ್ಥಗಳು ಹುಟ್ಟುತ್ತವೆ. ಸತ್ವ ರಜಗಳು ಅಡಗಿ ತಮ ಅಧಿಕವಾದರೆ ಸ್ಥೂಲದೇಹ, ಪಂಚ ತನ್ಮಾತ್ರೆಗಳು, ಪಂಚಭೂತ, ಅಧೋಲೋಕ ಇತ್ಯಾದಿ ಜಡ ಪದಾರ್ಥಗಳು ಹುಟ್ಟುತ್ತವೆ. ಹುಟ್ಟಿದ ಆ ಪದಾರ್ಥಗಳು ಗುಣಾಧಿಕ್ಯದಲ್ಲಿ ಬದಲಾವಣೆಯಾದಾಗ ಮತ್ತೆ ಅಡಗುತ್ತವೆ. ಹೀಗೆ ಹುಟ್ಟು ನಾಶ, ಅಭಿವ್ಯಕ್ತಿ ಲಯ ಅವ್ಯಾಹತವಾಗಿ ಸಾಗಿದೆ! ಸಾಮಾನ್ಯವಾಗಿ ಗುಣಾತ್ಮಕ ಪ್ರಕೃತಿ ವಿರಮಿಸುವದೇ ಇಲ್ಲ.

ಪ್ರಕೃತಿಯ ಈ ರಚನಾತ್ಮಕ-ವಿನಾಶಾತ್ಮಕ ಅಥವಾ ವಿಕಾಸಾತ್ಮಕ-ಆಕುಂಚನಾತ್ಮಕ ಸ್ವಭಾವವನ್ನು ಪರಿವರ್ತಿಸುವ ಸಾಮರ್ಥ್ಯ ಯಾರಿಗೂ ಇಲ್ಲ. ಎಂಥ ಶಕ್ತಿಮಂತರೇ ಇರಲಿ ಅವರು ಪ್ರಕೃತಿಯ ಪರಿಣಾಮ-ಪ್ರವಾಹದಿಂದ ದೈಹಿಕವಾಗಿ ಪಾರಾಗಲಾರರು. ಉದಾ: ದತ್ತಾತ್ರೇಯ, ನಾರದ, ವಿಶ್ವಾಮಿತ್ರ, ವಸಿಷ್ಠ, ನಾಲ್ವರೂ ಮಹರ್ಷಿಗಳು. ಆದರೆ ಪ್ರಕೃತಿಯ ಕೈವಾಡದಿಂದಾಗಿ ದತ್ತಾತ್ರೇಯ ಉನ್ಮತ್ತನಾದ; ನಾರದ ಗಾನಲೋಲನೆನಿಸಿದ; ವಿಶ್ವಾಮಿತ್ರ ಕ್ರೋಧಿಯಾದ; ವಸಿಷ್ಠ ಶಾಂತಿ ಮೂರ್ತಿ ಎಂದು ಖ್ಯಾತಿ ಪಡೆದ. ಎಲ್ಲ ಪ್ರಕೃತಿ ವಿಲಾಸ. ಈ ಪ್ರಕೃತಿಗೆ 'ಭಾವಃ ನ ವಿದ್ಯತೇ' ಸ್ಥಿರತೆ ಎನ್ನುವದೇ ಇಲ್ಲ.

**ಸತಃ ಅಭಾವೋ ನ ವಿದ್ಯತೇ:** ಸತ್ ಎಂದರೆ ಅನಾದಿ ಅನಂತ ಅಸ್ತಿತ್ವವುಳ್ಳ ಆತ್ಮ. ಅವನು ಪ್ರಕೃತಿಯ ಆಧಾರ! ಪ್ರಕೃತಿ ಹಾಗು ಅದರ ವಿಶಾಲ ಸೃಷ್ಟಿಗಳ ಅಂತರ್ಯದಲ್ಲೂ ಬಾಹ್ಯದಲ್ಲೂ ಪರಿಪೂರ್ಣ ವ್ಯಾಪಿಸಿದ್ದಾನೆ. ನಿರ್ಗುಣ ನಿರವಯವನಾದ ಅವನು ಅಪರಿಣಾಮಿ! ಅವನೊಂದು ಅಮರ ಜ್ಞಾನಜ್ಯೋತಿ. ಅವನು "ಜಗದಿರವನರಿವ ಬರಿಯರಿವು. ಜಾಗರಣದ ಜಡ ಭೋಗವನು ನೇತ್ರಾದಿಗಳ ಮೂಲಕ ವಿಶ್ವ ಜೀವನಾಗಿ ಅರಿವನು. ಕನಸಿನ ಕಲ್ಪನಾ ಜಗವನು ಮನೋ ಸಾಧನದಿಂದ ತೈಜಸ ಜೀವನಾಗಿ ಅರಿವನು. ನಿದ್ರೆಯ ಪರಮ ಸುಖವನ್ನು ಮಾಯಾ-ವೃತ್ತಿ ಕರಣದಿಂದ ಪ್ರಾಜ್ಞ ಜೀವ ನೆನಿಸಿ ಅರಿವನು. ಮರಹನರಿವ, ಅರಿವನರಿವ, ಅರಿವು ಮರವೆ ಸೋಂಕದ ಇರುವ ಅರಿವ ಅವನು ಅರಿವಿನ ಆಗಸ!" ಅವನು ಎಲ್ಲಿದ್ದರೂ ಸರಿ; 'ನಭ-

ಪಾವಗುಂ ಕುಂಭವಾಗದು' ಹಾಗೆ ಅವನೆಂದಿಗೂ ಮರವೆಯಾಗ; ಅಸತ್ ವಸ್ತು ವಿನ ರೂಪ ತಾಳ! ಅವನಿಗೆ 'ನ ಅಭಾವಃ ವಿದ್ಯತೇ' ಲೋಪ, ಲಯ, ಅನಭಿವ್ಯಕ್ತಿ ಎಂಬುದೇ ಇಲ್ಲ.

ಪ್ರಾಕೃತಿಕ ದೇಹಕ್ಕೆ ಬಾಲ್ಯ, ತಾರುಣ್ಯ, ಜರೆ. ಆ ದೇಹವೊಳಗಿರುವ ಆತ್ಮನಿಗೆ ಆ ಅವಸ್ಥೆಗಳಿಲ್ಲ; ಅವನು ನಿತ್ಯ ನೂತನ; ನಿರಂಜನ!

ಬಹು ಜನರಿಗೆ ಈ ಎರಡು ತತ್ತ್ವಗಳ ನಿಖರ ಪರಿಜ್ಞಾನವಿಲ್ಲ. ಇದಕ್ಕೆ ಕಾರಣ ಮೂಲಾವಿದ್ಯೆ! (ವ್ಯಾವಹಾರಿಕ ವಸ್ತುಗಳ ಅಜ್ಞಾನ ತೂಲಾವಿದ್ಯೆ. ಪಾರಮಾರ್ಥಿಕ ತತ್ತ್ವಗಳ ಅಜ್ಞಾನ ಮೂಲಾವಿದ್ಯೆ. ತೂಲಾವಿದ್ಯೆಯಿಂದ ಬಾಧೆಯಿಲ್ಲ.) ಮೂಲಾವಿದ್ಯೆ ಜೀವನನ್ನು ಭವಬದ್ಧಗೊಳಿಸಿದೆ; ಸ್ಥೂಲ ಸೂಕ್ಷ್ಮ ಕಾರಣ ದೇಹಗಳೆಂಬ ಕೋಟೆಗಳಲ್ಲಿ ಕೈದು ಮಾಡಿದೆ; ತನ್ನ ಮೂಲ ಅನಂತ ಸ್ವರೂಪದತ್ತ ದೃಷ್ಟಿಹಾಕದ ಈ ಜೀವನು ಆಯಾ ದೇಹಗಳಲ್ಲಿ ಅಭಿಮಾನ ತಾಳಿದ; ಆ ದೇಹಗಳಿಗೆ ಸಂಬಂಧಪಟ್ಟ ವಿಷಯಗಳ ಸಂಗ್ರಹಿಸಿ ಸಂಸಾರ ಕಟ್ಟಿಕೊಂಡ. ವಿಷಯ ಪ್ರಾಪ್ತಿ ಹಾಗು ಪರಿಪಾಲನೆಗಾಗಿ ತನ್ನ ದೇಹಾದಿಗಳನ್ನೆಲ್ಲ ಸರ್ವಾರ್ಪಣ ಮಾಡಲು ಸಿದ್ಧನಾದ. ತಾನು ಅಸು ನೀಗಿ ದರೂ ಚಿಂತೆಯಿಲ್ಲ ಪ್ರಪಂಚ ಸುಂದರವಾಗಬೇಕೆಂಬ ಕನಸು ಇವನದು.

ಸಾಮಾನ್ಯವಾಗಿ ನಾವೆಲ್ಲರೂ ಅವಿದ್ಯೆಯ ಘನಛಾಯೆಯಲ್ಲಿ ಬದುಕುವ ಜೀವರೇ. ಕೆಚ್ಚಲಿಗೆ ಅಂಟಿದ ಉಣ್ಣೆ ಸಿರ ಹರಿದರೂ ಕೆಚ್ಚಲನ್ನು ಬಿಡದಂತೆ ನಮ್ಮ ಸರ್ವಸ್ವ ಹಾಳಾದರೂ ನಾವು ಪ್ರಪಂಚವನ್ನು ಬಿಡೆವು. ಒಂದು ವೇಳೆ ಮಹಾತ್ಮರು ಬಂದು ಒತ್ತಾಯದಿಂದ ನಮ್ಮನ್ನೆಳೆದೊಯ್ದರೆ. ನಮ್ಮ ದೇಹ ಅವರತ್ತ ಹೋದೀತಲ್ಲದೆ, ತಲೆ, ಮನಸ್ಸು ಮಾತ್ರ ಪ್ರಪಂಚಕ್ಕೆ ಗಟ್ಟಿ ಯಾಗಿ ಅಂಟಿಕೊಂಡಿರುವವು; ನಮ್ಮ ಸುತ್ತಲಿರುವ ಜನರೆಲ್ಲ ಸಿರದುದ್ದ ಮುಳುಗಿದ ಸಂಸಾರಿಗಳು. ದೈವವಶಾತ್ ಒಬ್ಬ ವ್ಯಕ್ತಿ ಸಂಸಾರ ತೊರೆದರೆ 'ಹುಚ್ಚ, ಹೇಡಿ. ಪ್ರಪಂಚಕ್ಕೆ ಅಂಜಿ ಓಡಿದ' ಎಂದು ಅವರು ಅಣಕವಾಡದೆ ಬಿಡರು. 'ಕುಲಂ ಪವಿತ್ರಂ ಜನನೀ ಕೃತಾರ್ಥಾ ವಸುಂಧರಾ ಪುಣ್ಯವತೀ ಚ ಲೋಕೇ' ಆ ಸಂಸಾರ- ತ್ಯಾಗಿಯ ಕುಲ ಪವಿತ್ರ; ಜನನಿ ಕೃತಾರ್ಥಳು ಅವನು ಚರಿಸಿದ ಭೂಮಿ ಪಾವನ; ಎಂದು ಕೊಂಡಾಡುವವರು ಎಷ್ಟು ಜನ ಸಿಕ್ಕಾರು? ವಿಶ್ವವನ್ನೆಲ್ಲ ತನ್ನ ತರ್ಕಬದ್ಧವಾದ ವಿಚಾರ ಸರಣಿಯಿಂದ ಬೆರಗು ಗೊಳಿಸಿದ ಶಂಕರಾಚಾರ್ಯರ ತಾಯಿ ಕೂಡ ಮಗನು ಪ್ರಪಂಚ ತೊರೆದು ತತ್ತ್ವಜ್ಞಾನಿಯಾಗಬಯಸಿದಾಗ ಸಮ್ಮತಿ ನೀಡಲಿಲ್ಲ. ಮಕ್ಕಳನ್ನು ಅತಿ ಬೇಗನೆ ಪ್ರಪಂಚಕ್ಕೆ ತೊಡಗಿಸಲು ಮಾತ್ರ ಕಠೋರ ವ್ರತ ಹಿಡಿದಾರು; ಹತ್ತು ದೇವರಿಗೆ ಹರಕೆ ಹೊತ್ತಾರು. ಇದು ತಾಯಿ ತಂದೆಗಳ ರೀತಿ. ಆತ್ಮಾಶ್ಚ

ರ್ಯವೆಂದರೆ, ನಿವೃತ್ತನಾದ ಮುದುಕನೇ ಇರಲಿ, ಅವನು ಮದುವೆಯಾಗಲಿ ಚ್ಛಿಸಿದರೆ ನೂರಾರು ಜನ ಸಹಾಯ ಮಾಡುತ್ತಾರೆ; ಬೆಂಬಲ ನೀಡುತ್ತಾರೆ. ಹೀಗೆ ಜಗವೆಲ್ಲ ಮೂಲಾಜ್ಞಾನದ ಅಂಧಕಾರದಲ್ಲಿ ಬಾಳುತ್ತಿದೆ!

**ಉಭಯೋರಪಿ ಅಂತಃ ತು ಅನಯೋಃ ತತ್ತ್ವದರ್ಶಿಭಿಃ ದೃಷ್ಟಃ :–** ಅತ್ಯಂತ ಪ್ರಯಾಸಪಟ್ಟು ಮೂಲಾವಿದ್ಯೆಯ ಪರದೆ ಹರಿದು ಪ್ರಕೃತಿ ಪುರುಷರ ಸ್ವರೂಪ ನಿರ್ಣಯ ಮಾಡಿದವರು ತತ್ತ್ವದರ್ಶಿಗಳು.

ಈ ಕಾರ್ಯ ಸಹಜವಲ್ಲ. ಪ್ರಕೃತಿಭಿನ್ನ ಪುರುಷನ ಸ್ವರೂಪ ಅತ್ಯಂತ ಸೂಕ್ಷ್ಮ. ಅಲ್ಲಿ ಕಣ್ಣಿಗೆ ಕಾಣುವ ರೂಪಿಲ್ಲ, ಕಿವಿಗೆ ಕೇಳುವ ಶಬ್ದವಿಲ್ಲ; ಮನಸ್ಸಿಗೆ ಅಳವಡುವ ಭಾವಸ್ಪಂದನೆ ಕೂಡ ಅಲ್ಲಿಲ್ಲ. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಯಾವುದನ್ನು ತಲುಪಲಾರದೆ ವಚನಗಳು ಹಿಂತಿರುಗುವವೋ ಆ ಆತ್ಮನು ಮನಸ್ಸಿಗೆ ಅಪ್ರಾಪ್ಯ. ಇದು ಋಷಿವಾಣಿ. ಆ ಆತ್ಮದೇವನು ಆಕಾಶದಂತೆ ನಿರ್ಲಿಪ್ತ, ಸರ್ವವ್ಯಾಪಕ.

"ನೋಡಿಹರೆಂದು ಕಣ್ಣಿಂಗೆ ಮರೆಮಾಡಿದ; ಕೇಳಿಹರೆಂದು ಕಿವಿಗೆ ಮರೆ ಮಾಡಿದ ಮುಟ್ಟಿಹರೆಂದು ಕೈಗೆ ಮರೆಮಾಡಿದ. ಸೋಂಕಿಹರೆಂದು ತನುವಿಂಗೆ ಮರೆಮಾಡಿದ. ನೆನೆದಿಹರೆಂದು ಮನಕ್ಕೆ ಮರೆಮಾಡಿದ. ಅಂದಿಹರೆಂದು ಅಂತರಂಗದಲ್ಲಿ ಮರೆಮಾಡಿದ. ಪೂಜಿಸಿಹರೆಂದು ಕ್ರೀಗೆ ಮರೆಮಾಡಿದ. ಕೂಡಲ ಸಂಗಮದೇವರೊಡನೆ ಅಹಂಕಾರವ ಮಾಡಿ ಕೆಟ್ಟ, ಕೇಡನೇನೆಂದು ಉಪಮಿಸುವೆನು?"

ಇದು ಶರಣವಾಣಿ. 'ಯಸ್ಯಮತಂ ತಸ್ಯ ಅಮತಂ' ಅರಿತೆವೆಂದು ಹೇಳುವವರು ಅರಿತವರೇ ಅಲ್ಲ; ಈ ಅನುಭಾವ ಸತ್ಯ ಬಸವಣ್ಣನವರ ವಚನದಲ್ಲಿ ಸುಸ್ಪಷ್ಟವಾಗಿದೆ. ಆತ್ಮನು ದೇಹ, ಇಂದ್ರಿಯ, ಮನ, ಬುದ್ಧಿಗಳ ಅಂತರಂಗದಲ್ಲಿಯೇ ಇದ್ದರೂ ಆ ಇಂದ್ರಿಯಾದಿಗಳಿಂದ ಅಲಿಪ್ತ. ಆ ಆತ್ಮನನ್ನು ಕಾಣಲಾಗದು ಅಹಂಕಾರ ನಮ್ಮ ಹೃದಯದಲ್ಲಿ ಮಿಸುಕುತ್ತಿರುವವರೆಗೆ!

ಒಮ್ಮೆ ಬ್ರಹ್ಮ ಹಾಗು ವಿಷ್ಣು ಇಬ್ಬರಲ್ಲಿ ಯಾರು ಶ್ರೇಷ್ಠ ಎಂಬ ವಾದ ನಡೆಯಿತು. ಆಗ ಅವರೆದುರು ಪರಮಾತ್ಮಲಿಂಗ ಅವತರಿಸಿತು. 'ಯಾರು ಈ ಲಿಂಗದ ಶಿರ ಹಾಗು ಪಾದ ತಲುಪಿ ಬರುವರೋ ಅವರು ಶ್ರೇಷ್ಠ' ಎಂದು ಆಕಾಶವಾಣಿಯಾಯ್ತು. ವಿಷ್ಣುವು ವರಾಹ ವಾಹನವೇರಿ ಯುಗ ಯುಗಗಳವರೆಗೆ ಪ್ರಯಾಣ ಮಾಡಿದರೂ ಪಾದ ಕಾಣದೆ ತಿರುಗಿ ಬಂದ. ಬ್ರಹ್ಮ ಹಂಸ ವಾಹನವೇರಿ ಯುಗ ಯುಗಗಳವರೆಗೆ ಹಾರಿದರೂ ಶಿರ ಕಾಣದೆ ಇಳಿದು ಬಂದ.

ಆತ್ಮ ಪುರುಷನು ಹರಿಬ್ರಹ್ಮರಿಗೆ ನಿಲುಕದ ಅಚಿಂತ್ಯ ವಸ್ತು. ಕಾಣುವ ಅನಾತ್ಮ ವಿಶ್ವದ ಹಿನ್ನೆಲೆಯಲ್ಲಿ ನೆಲೆ ನಿಂತಿರುವ ಅಗಮ್ಯ ಸತ್ಯ. ಹಾಗಾದರೆ

ಋಷಿಗಳು ಅದನ್ನೆಂತು ಕಂಡರು? ಕಾಶಿಯಾತ್ರೆಗೆ ಹೊರಟವ ಪ್ರಪ್ರಥಮ ವಾಗಿ ತನ್ನೂರ ಬಿಡಬೇಕು. ಮಾರ್ಗದಲ್ಲಿ ಸಾವಿರಾರು ಗ್ರಾಮಗಳು ಬರಲಿ, ಅಲ್ಲಿ ನಿಲ್ಲದೆ ಮುಂದೆ ಮುಂದೆ ಸಾಗಬೇಕು. ಕೊನೆಗೆ ಕಾಶಿ ತಲುಪಿ ವಿಶ್ವ ನಾಥನನ್ನು ದರ್ಶಿಸುತ್ತಾನೆ. ಹಾಗೆ ಋಷಿಗಳು ಪ್ರಥಮ ಹಂತದಲ್ಲಿಯೇ ಬಾಹ್ಯ ವಸ್ತು-ವೈಭವ ತೊರೆದರು; ದೇಹ ಭಾನ ನೀಗಿದರು; ಅಂತರಂಗ ದಲ್ಲಿ ಪ್ರಯಾಣ ಆರಂಭಿಸಿದರು. ಕ್ರಮಕ್ರಮವಾಗಿ ತನ್ಮಾತ್ರೆ, ಅಹಂಕಾರ, ಮಹತ್ತೆಂಬ ಪ್ರಾಕೃತಿಕ ಮಂಡಲಗಳನ್ನು ಕಂಡರು; ಅಲ್ಲೆಲ್ಲು ನಿಲ್ಲದೆ ಅವುಗಳ ಅಭಿಮಾನ ತಾಳದೆ ಇನ್ನಷ್ಟು ಆಚೆ ನಡೆದರು. ಗುಣಸಾಮ್ಯ ಪ್ರಕೃತಿಯ ಹೃದಯಂಗಮ ದರ್ಶನವಾಯ್ತು; ಅಲ್ಲಿಯೂ ಮನ ಮುಳುಗಿಸದೆ ಅದರಾಚೆ ಹೆಜ್ಜೆ ಹಾಕಿದರು. ದಿವ್ಯ ಬೆಳಗಿನ ಅನಂತ ಚಿದಾಕಾಶ ಕಂಡು ಅದರಲ್ಲಿ ಬಯಲಾದರು. ಅದೇ ಪುರುಷ ತತ್ತ್ವ! ಅದರಲ್ಲಿ ಬಯಲಾಗಿ ಅಮರ ಅನುಭವ ಗಳಿಸಿದ ಮಹಾತ್ಮರೇ ತತ್ತ್ವದರ್ಶಿಗಳು! ಪ್ರಕೃತಿ ಪುರುಷರ ಅಂತಿಮ ಸ್ವರೂಪ ಕಂಡವ್ರಪ್ಪಾರರು!!

**ದೃಷ್ಟಃ ಪದದ ಸಾರ್ಥಕ್ಯ :–** ಸ್ವವ್ಯವಹಾರಾನುಕೂಲ ಚೇತನಯು ಕ್ತವಾದ ಮನಸ್ಸು ಅನಾವೃತ ವಿಷಯದೊಡನೆ ಕೂಡಿದಾಗ ಆ ವಿಷಯವು ದೃಷ್ಟ (ಪ್ರತ್ಯಕ್ಷ). ಆ ವಿಷಯಾವಚ್ಛಿನ್ನ ಚೇತನವು ಅಂತಃಕರಣಾವಚ್ಛಿನ್ನ ಚೇತನದೊಡನೆ ಕೂಡಿದಾಗ ಆ ವಿಷಯಜ್ಞಾನವು ಪ್ರತ್ಯಕ್ಷ. ಹಾಗೆ ಮನಸ್ಸು ಸಂಕಲ್ಪ ವಿಕಲ್ಪ ಸಂಶಯ ವಿಹೀನವಾಗಿ ಆತ್ಮಸತ್ತ ಪ್ರವಹಿಸಿದಾಗ ಸ್ವಭಾ ವತಃ ಅನಾವೃತ ಆತ್ಮಬೆಳಗು ಆ ವಿಶುದ್ಧ ಮನದಲ್ಲಿ ಅಭಿವ್ಯಕ್ತವಾಗುವದು. ಇದೇ ಆತ್ಮ ದರ್ಶನ. ಆತ್ಮನೇ "ದೃಷ್ಟಃ". ಈ ದರ್ಶನ ಹೊಂದಿದವರು ಸರ್ವಶಾಂತರು.

ಅರ್ಜುನ- ಭಗವನ್, ಸದ್ವಸ್ತುವಿನ ಸಾಮಾನ್ಯ ಸ್ವರೂಪವನ್ನು ತಾವು ವಿವರಿಸಿದಿರಿ. ನನಗೆ ಅದರ ವಿಶೇಷ ಸ್ವರೂಪವನ್ನು ತಿಳಿವ ಆಸೆ.

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥೧೭॥**

**ಅರ್ಥ:–** ಯೇನ = ಯಾವುದರಿಂದ, ಇದಂ ಸರ್ವಂ = ಇದೆಲ್ಲ (ಆಗಮ ಅಪಾಯ ಧರ್ಮಕಂ ದೇಹಾದಿಕಂ : ಬರುವ ಹೋಗುವ ಧರ್ಮವುಳ್ಳ ದೇಹಾದಿಕವು, ಅಥವಾ ವಿಯ- ದಾದಿಕಂ = ಆಕಾಶಾದಿಗಳಿಂದ ಕೂಡಿದ ಜಡ ಜಗತ್ತು), ತತಂ = ವ್ಯಾಪ್ತವಾಗಿದೆಯೋ (ಸಾಕ್ಷಿತ್ವೇನ ವ್ಯಾಪ್ತಂ : ಸಾಕ್ಷೀರೂಪದಿಂದ ವ್ಯಾಪಿಸಿದೆಯೋ) ತತ್ ತು = ಅದನ್ನು (ಸದಾತ್ಮನನ್ನು), ಅವಿನಾಶಿ = ನಾಶರಹಿತವೆಂದು, ವಿದ್ಧಿ = ತಿಳಿದುಕೊ, ಅಸ್ಯ = ಈ ಅವ್ಯಯ ಆತ್ಮನ ವಿನಾಶಂ = ವಿನಾಶವನ್ನು ಕರ್ತುಂ = ಮಾಡಲು ಕಶ್ಚಿತ್ = ಯಾವನೂ ನ ಅರ್ಹತಿ = ಸಮರ್ಥನಾಗನು.

ವಿವರಣೆ:- ೧) ತತ್ ಮತ್ತು ಸತ್ ಪದಗಳು ಏಕಾರ್ಥಕ. "ಅವೇದ್ಯತ್ವೇ ಸತಿ, ಅಬಾಧಿತ ವಿಷಯತ್ವಂ ಸತ್" ಇಂದ್ರಿಯಗಳಿಗೆ ಅವೇದ್ಯ ಹಾಗು ಕಾಲದಿಂದ ಅಬಾಧಿತವಾದುದು ಸತ್! ಭಾವ ಬುದ್ಧಿಗಳ ಕೈಗೆ ನಿಲುಕದ ಅತೀತ ವಸ್ತು!! ಭಾಷೆಯ ಶಬ್ದ ಸ್ಪಂದನ ಎಲ್ಲಿ ಹೋಗಿ ಬಯಲಾಗುವದೋ ಅದು ಅವರ್ಣನೀಯ ದಿವ್ಯ ತತ್ತ್ವ!

೨) 'ಇದಂ ಸರ್ವಂ' ಈ ಪದ ಸಮುಚ್ಚಯದ ಅರ್ಥ ವಿಶ್ವ; ಪ್ರಮಾತೃ ಪ್ರಮಾಣ ಪ್ರಮೇಯರೂಪ ಮಹಾನ್ ಜಗತ್ತು. ಇದು ಅಂತಿಮ ಕಾರ್ಯವಾದ ದೇಹದಿಂದ ಅವ್ಯಕ್ತ ಪ್ರಕೃತಿಯವರೆಗೆ ವಿಸ್ತರಿಸಿದೆ.

ಈ ವಿಶ್ವವು ಎರಡು ವಿಧ: ಅ) ವ್ಯಷ್ಟಿ ಬ) ಸಮಷ್ಟಿ. ವ್ಯಕ್ತಿಯ ದೇಹ, ಪ್ರಾಣ, ಇಂದ್ರಿಯ, ಮನಸ್ಸು, ಬುದ್ಧಿ, ಸ್ಮರಣ, ಅಹಂತೆ, ಜೀವಭಾವ ಇವೆಲ್ಲವುಗಳ ಸುಸಂಬದ್ಧ ಹೊಂದಾಣಿಕೆಯು ವ್ಯಷ್ಟಿ ವಿಶ್ವ. ಇಂಥ ಅಸಂಖ್ಯ ವ್ಯಷ್ಟಿವಿಶ್ವಗಳ ಬೃಹತ್ ಸಮುದಾಯವೇ ಸಮಷ್ಟಿವಿಶ್ವ. ಪಂಚ ಮಹಾಭೂತ, ತನ್ಮಾತ್ರೆ, ಅಹಂಕಾರ, ಮಹತ್ತು ಮತ್ತು ಪ್ರಕೃತಿಗಳು ಸಮಷ್ಟಿಯಲ್ಲಿ ಸಮಾವಿಷ್ಟವಾಗಿವೆ.

ಇವೆರಡು ವಿಶ್ವಗಳು 'ಇದಂ' ಪ್ರತ್ಯಯಕ್ಕೆ ವಿಷಯವಾಗಿವೆ. ಇವು ಸಂಪೂರ್ಣವಾಗಿ ಜಡ. ಜಡ ವಿಲಕ್ಷಣನಾದ ಆತ್ಮ ( ಸತ್ತು ) ನು ಮಾತ್ರ ಇದಂ ಪ್ರತ್ಯಯಾವೇದ್ಯ! ಅಹಂ ಪ್ರತ್ಯಯ ಪ್ರವಾಹದ ಅಂತಿಮ ಸ್ಥಾನ!! ಅವನ ಇರವಿನ ಬೆಳಗು ಮನದಲ್ಲಿ ಮೂಡಿದಾಗ ತೋರಿ ಬರುವ ವಸ್ತು-ವಿಶೇಷವೇ ಜೀವ.

ಆ ಜೀವನು ಸತ್ ಮರೆತು ಜಡ ವ್ಯಷ್ಟಿ ಜಗತ್ತಿನಲ್ಲಿ ಅಭಿಮಾನ ತಾಳಿದ. 'ನಾನು ದೇಹ' ಎಂದು ಉದ್ಗರಿಸಿದ. ಈ ಭಾವ ತರಂಗವೇ ತೂಲಾಹಂಕಾರ. ಈ ಅಹಂಕಾರ ಉದಿಸಿದೊಡನೆಯೇ ಮನೋಗತ ಕಾಮಾದಿ ವೃತ್ತಿಲಹರಿಗಳ ಭಾನ ಬಂತು. 'ಅಹಂ' 'ಇದಂ' ಎಂಬೆರಡು ಅಂತಃಕರಣದ ಪ್ರವಾಹಗಳು ಕಾಣಿಸಿಕೊಂಡವು. ಜೀವನಲ್ಲಿ ಅಹಂ ನೆಲೆಸಿತು; ಇದಂ ಹೊರಮುಖವಾಗಿ ವಿಶ್ವದತ್ತ ಹರಿಯಿತು. ವಿಶ್ವ ವಿಷಯಾಕಾರ ಹೊಂದಿತು. ಅದೇ ಮಾತ್ರಾಸ್ಪರ್ಶ; ಅದರಿಂದ ಹುಟ್ಟಿ ಬಂದವುಗಳೇ ಸುಖ ದುಃಖ! ಅವುಗಳಲ್ಲಿ ಮಮತ್ವ ಹಾಗು ಅಭಿಮಾನ ಹೊಂದಿದನು ಜೀವಾತ್ಮ!

೩) ತೇನ ತತಂ ಇದಂ ಸರ್ವಂ: ದೇಹ, ಜಗತ್ತು; ಇಂದ್ರಿಯಗಳು, ಮನಸ್ಸು ಹಾಗು ಜೀವಾತ್ಮ ಇವರೆಲ್ಲರಲ್ಲಿ ಆ ಅನುಪಮ, ಅಚಿಂತ್ಯ ಹಾಗು ಅಬಾಧಿತ ಸದಾತ್ಮನು ವ್ಯಾಪಿಸಿದ್ದಾನೆ. ಅಹಂ, ಇದಂ ವೃತ್ತಿ ಹಾಗು ವಿಷಯಗಳ ಬಾಹ್ಯಾಂತರದಲ್ಲೆಲ್ಲ ಓತಪ್ರೋತವಾಗಿ ತುಂಬಿದ್ದಾನೆ. ಆದರೂ

ಆ ಅನಾತ್ಮ ಪದಾರ್ಥಗಳಿಂದ ನಿರ್ಲಿಪ್ತ! ಅವು ಕಂಡು ಅಳಿದರೂ ಅವನು ಅವಿಕಾರಿ! ಅವನೊಂದು ಚಿನ್ಮಯ ಸಾಕ್ಷಿ ನಭ; ಪ್ರಮಾತೃ ಪ್ರಮಾಣ ಪ್ರಮೇಯಗಳ ಪರಮಾಧಾರ!

"ತ್ರೈಲೋಕ್ಯ ಸಂಪದಾಲೇಖ್ಯ ಸಮುಲ್ಲೇಖನ ಭಿತ್ತಯೇ ।
ಸಚ್ಚಿದಾನಂದ ರೂಪಾಯ ಶಿವಾಯ ಬ್ರಹ್ಮಣೇನಮಃ" ॥೧॥

ಶುದ್ಧ ಅಶುದ್ಧ ಮತ್ತು ಸಮ್ಮಿಶ್ರ ತತ್ತ್ವ ರೂಪವಾದ ಜಗತ್ತು ಅಗಾಧ ಸಂಪತ್ತು; ಅದೊಂದು ಮನೋಹರ ಚಿತ್ರ. ಈ ಭವ್ಯ ಚಿತ್ರದ ಚಿರಾಧಾರ ಭಿತ್ತಿಯೇ ಸದಾತ್ಮ. ಅವನು ಚಿದಾನಂದ ರೂಪ; ಶಿವ; ಬ್ರಹ್ಮ. ಅವನಿಗೆ ವಂದನೆ. (ಸಿದ್ಧಾಂತ ಶಿಖಾಮಣಿ ಮಂಗಲಾಚರಣ ೧).

ಉದಾಹರಣೆಯಿಂದ ಹೇಳುವದಾದರೆ: ಜಗತ್ತು ಗಡಿಗೆ; ಆತ್ಮದೇವನು ಮಣ್ಣು. ಗಡಿಗೆಯ ತುಂಬ ಹಾಗು ಗಡಿಗೆಯ ಹೊರಗೆ ಮಣ್ಣೇ ಮಣ್ಣು ವ್ಯಾಪಿಸಿರುವಂತೆ, ಜಗದ ಅಣು ಅಣುಗಳಲ್ಲಿ, ಪ್ರಕೃತಿಯ ಅಂಶ ಅಂಶಗಳಲ್ಲಿ ಆತ್ಮನು ಭರಿತನಾಗಿದ್ದಾನೆ. ಅವುಗಳ ಆಚೆಗೂ ಅನಂತವಾಗಿ ನೆಲೆಸಿದ್ದಾನೆ. ಗಡಿಗೆಯ ಯಾವ ಭಾಗ ಹಿಡಿದರೂ ಅದು ಮಣ್ಣು; ಹಾಗೆ, ಜಗತ್ತಿನ ಯಾವ ಭಾಗ ಹಿಡಿದರೂ ಅದು ಆತ್ಮವಾಸಸ್ಥಾನ; ಹೆಚ್ಚೇನು ? ಜಗದ ಅಸ್ತಿತ್ವವೇ ಆತ್ಮನ ಸತ್ ಸ್ವರೂಪ.

ಅಂಥ ಆತ್ಮನ ಶೋಧಕ್ಕಾಗಿ ಯಾತ್ರೆ ಹೋಗಬೇಕಿಲ್ಲ; ಲೋಕ ಲೋಕಾಂತರಗಳಲ್ಲಿ ಚರಿಸುವ ಅಗತ್ಯವಿಲ್ಲ. ಎಲ್ಲಿ ನಮ್ಮ ಮನವೋ, ಅದರೊಳಗೆಯೇ ಆ ಚಿನ್ಮಯ ಜ್ಯೋತಿ! ಅದನ್ನು ಮರೆತು ಎಲ್ಲೆಲ್ಲಿಯೋ ಹುಡುಕುವವರಿಗೆ ಆ ಜ್ಯೋತಿ ದರ್ಶನವಾಗದು.

ಒಬ್ಬ ಸಿರಿವಂತ ವ್ಯಾಪಾರಿ ಉಗಿಬಂಡಿಯಲ್ಲಿ ಪ್ರಯಾಣ ಮಾಡುತ್ತಿದ್ದ. ಅದೇ ಡಬ್ಬಿಯನ್ನು ಪ್ರಚ್ಛನ್ನವೇಷದ ತುಡುಗ ಪ್ರವೇಶಿಸಿದ. ರಾತ್ರಿ ಹೊತ್ತು. ಜಾಣ ವ್ಯಾಪಾರಿಯು ಸ್ವಲ್ಪ ಜೋಂಪಿನಲ್ಲಿ ಮಲಗಿರುವ ತುಡುಗನ ಜೇಬಿನಲ್ಲಿ ತನ್ನ ಹಮ್ಮಿಣಿ ಇರಿಸಿ ಗಾಢ ನಿದ್ರೆ ಹೋದ. ಕೆಲ ಸಮಯದ ನಂತರ ನಿದ್ದೆ ತಿಳಿದೆದ್ದ ತುಡುಗನು ಸಿರಿವಂತನ ಎಲ್ಲ ಸಾಮಾನುಗಳನ್ನು ಕೆದಕಿ ಹಣಕ್ಕಾಗಿ ಹುಡುಕಿದ. ಸಿಕ್ಕಲಿಲ್ಲ. ನಿರುಪಾಯ ಹಾಗು ನಿರಾಶನಾಗಿ ಕಣ್ಣು ಬಿಟ್ಟು ಮಲಗಿದ. ಜಾವು ಹರಿದಾಗ ಎದ್ದ ಸಿರಿವಂತನು ಕಳ್ಳನ ಕಿಸೆಯಿಂದಲೇ ತನ್ನ ಹಮ್ಮಿಣಿ ತೆಗೆದುಕೊಂಡು ಕಳ್ಳನಿಗೆ ನುಡಿದ, "ಪಾಪ, ಸುಮ್ಮನೆ ನಿದ್ದೆಗೆಟ್ಟೆಯಲ್ಲ? ನಿನ್ನ ಹತ್ತಿರವೇ ಇದ್ದ ಸಂಪತ್ತಿನ ಅರಿವಿಲ್ಲದೆ ಹೊರಗೆ ಹುಡುಕಿ

ಕೆಟ್ಟ!" ಈ ಕಥೆ ಮಾರ್ಮಿಕ. ತನ್ನಲ್ಲಿಯೇ ಹುಡುಕಬೇಕು, ಇಲ್ಲವಾದರೆ ನಿರಾಶೆ ನಿಶ್ಚಿತ ಎಂಬ ಬೋಧವಿಲ್ಲಿದೆ.

ಅರಿತವರು ಇದೇ ಜಾಗ್ರ ಅವಸ್ಥೆಯಲ್ಲಿದ್ದೇ ತಮ್ಮ ಮನಸ್ಸನ್ನು ಊರ್ಧ್ವ ಹಾಗು ಅಂತರ್ಮುಖಿಗೊಳಿಸುತ್ತಾರೆ. ಶಬ್ದಾದಿ ಗುಣ ಪರದೆಗಳ ಹರಿದು, ವೃತ್ತಿ ತರಂಗಗಳನ್ನೆಲ್ಲ ಪ್ರಶಾಂತಗೊಳಿಸಿ ಅನುತಾಗ ಸಕ್ಕೇರುತ್ತಾರೆ. ಅಲ್ಲಿ ಪರಮಾಸ್ತಿತ್ವದ ಪಾವನ ದರ್ಶನ! ವಿಶ್ವದ ಪರಮಾಧಾರದ ಸಾಕ್ಷಾತ್ಕಾರ! ಅವರಿಗಲ್ಲಿ ಕಾಣುವದು ಕೇವಲ ಚೈತನ್ಯಮಾತ್ರ! ಇದಂ ಪದ ವೇದ್ಯ ಜಗದ ಸುಳಿವೇ ಅಲ್ಲಿಲ್ಲ. ಅಲ್ಲಿಂದಿಳಿದು ಮತ್ತೆ ಜಾಗ್ರಕ್ಕೆ ತಲುಪಿದಾಗ ಅದೇ ಸತ್ ವಸ್ತುವಿನ ವಿರಾಟ ದರ್ಶನ ಸಮನಿಸುವದು! ಆ ದರ್ಶನವನ್ನು ಅನುಭಾವಿ ಬಸವಣ್ಣನವರು ಬಹು ಹೃದಯಂಗಮವಾಗಿ ಬಣ್ಣಿಸಿದ್ದಾರೆ.

"ಎತ್ತೆತ್ತ ನೋಡಿದಡತ್ತ ನೀನೇ ದೇವಾ ಸಕಲ ವಿಸ್ತಾರದ ರೂಹು ನೀನೇ ದೇವಾ ವಿಶ್ವತೋ ಚಕ್ಷು ನೀನೇ ದೇವಾ. ವಿಶ್ವತೋ ಮುಖ ನೀನೇ ದೇವಾ. ವಿಶ್ವತೋ ಬಾಹು ನೀನೇ ದೇವಾ ವಿಶ್ವತೋ ಪಾದ ನೀನೇ ದೇವಾ; ಕೂಡಲ ಸಂಗಮದೇವ"

ಇನ್ನೊಬ್ಬ ಶರಣರ ವರ್ಣನೆ ಇಲ್ಲಿದೆ :

"ಎಲ್ಲಿ ನೋಡಿದಡಲ್ಲಿ ನೀನೇ ದೇವಾ ಪಿಂಡಾಂಡದೊಳಗೆಲ್ಲ ನೀನೇ ದೇವಾ. ಮಹದಾಕಾಶರೂಪ ನಿರುಪಾಧಿಕ ಪರಂಜ್ಯೋತಿ ನೀನೇ ದೇವಾ. ಉಪಮಾತೀತ ವಾಙ್ಮನಕ್ಕಗೋಚರ ನೀನೇ ದೇವಾ. ಸ್ವಾನುಭೂತಿ ಸ್ವರೂಪ, ಶರಣಜನ ವಲ್ಲಭ ನೀನೇ ದೇವಾ. ನಿಜಗುರು ಸಿದ್ಧಲಿಂಗೇಶ್ವರಾ."

ತತ್ತ್ವದರ್ಶಿಯದು ದಿವ್ಯದೃಷ್ಟಿ. ಅವನು ಯಾವುದನ್ನು ನೋಡುವನೋ, ಮುಟ್ಟುವನೋ, ಭಾವಿಸುವನೋ, ಜಾನಿಸುವನೋ ಅಲ್ಲೆಲ್ಲ ಸತ್ಯ ವಸ್ತುವನ್ನೇ ಕಾಣುತ್ತಾನೆ. ಎಂಬುದು ಈ ಎರಡು ವಚನಗಳ ಭಾವ.

೪) **ತತ್ ಅವಿನಾಶಿ; ಅವ್ಯಯಂ; ತಸ್ಯ ವಿನಾಶಂ ನ ಹಿ ಕಶ್ಚಿತ್ ಕರ್ತುಮರ್ಹತಿ :** ಆ ಸತ್ಯ ವಸ್ತುವು ಅವಿನಾಶಿ; ಅಮರ. ಎಣ್ಣೆ ಆರತ ದೀಪ ನಂದುವಂತೆ, ಈ ದೇಹ ಹಾಗು ಪ್ರಾಣ ಆರತಾಗ ಆತ್ಮಜ್ಯೋತಿ ಅಡಗಿ ಹೋಗುವದಲ್ಲ. ಅದು ಸರ್ವೋಪರಿ ಮಿರುಗುವ ನಂದಾದೀಪ! ಧನ, ಕನಕ, ಕೀರ್ತಿ, ಶಕ್ತಿ, ಸೌಂದರ್ಯ, ಬುದ್ಧಿ ಏನೆಲ್ಲವನು ವ್ಯಯಗೊಳಿಸುವ ಕಾಲವು ಚೈತನ್ಯ ಪ್ರಕಾಶದ ಎದುರು ಪ್ರಶಾಂತ! ಅವ್ಯಯ, ಅವಿಕಾರಿಯಾದ ಆತ್ಮನನ್ನು ಯಾರೂ ನಾಶ ಮಾಡಲಾರರು.

ಎಲ್ಲಿಯವರೆಗೆ ಅವಿನಾಶಿ ದೇವನ ಜ್ಞಾನವಿಲ್ಲ ಅಲ್ಲಿಯವರೆಗೆ ಮಾತ್ರಾಸ್ಪರ್ಶಗಳ ಕಾಟ; ಸುಖ ದುಃಖಾದಿಗಳ ತೊಂದರೆ; ಜನ್ಮ ಮರಣಗಳ ಭೀತಿ; ರೋಗ ರುಜಾದಿಗಳ ಪೀಡೆ. ಜೀವನವೇ ದುಃಖ ಸಂತಪ್ತ. ಚಂಚಲವಾದ

ಮನಸ್ಸಿನ ತುಂಬ ನೂರಾರು ಆಶೆಗಳು. ಕೆರೆದಂತೆ ಕಜ್ಜಿಯ ತುರಿಕೆ ಹೆಚ್ಚುವ ದಿಲ್ಲವೆ? ಹಾಗೆ ಈ ಆಶೆಗಳನ್ನು ವಿಷಯೋಪಭೋಗದಿಂದ ಶಾಂತಗೊಳಿಸುವ ಪ್ರಯತ್ನ ಮಾಡಿದರೆ ಮನಸ್ಸು ಮತ್ತಷ್ಟು ಅಸಂತೃಪ್ತವಾಗುವದು; ಆಶೆಗಳು ನೂರ್ಮಡಿಸುವವು! ಈ ಸಾಂಸಾರಿಕ ತುರಿಕೆ, ದುಃಖ ಶಮನ ಮಾಡಲು ಒಂದೇ ಮಾರ್ಗ; ಸದ್ ವಸ್ತುವನ್ನು ಅರಿಯುವದು! ಇದು ದುಃಖ ನಿವಾರಣೆಯ ಉಪಾಯ ಪ್ರತ್ಯಯ.

ಭಗವಂತನು:- "ಅರ್ಜುನ, ನಿನ್ನ ದೇಹವೇನೋ ನಾಶವಾದೀತು. ಅದರೊಳಗಿರುವ ಸತ್‌ಸ್ವರೂಪ ಆತ್ಮವಸ್ತುವು ಮಾತ್ರ ಎಂದಿಗೂ ಅಳಿಯದು. ಅದು ಬರಿ ನಿನ್ನ ಅಂತರಂಗವನ್ನಷ್ಟೇ ವ್ಯಾಪಿಸಿಲ್ಲ ನನ್ನಲ್ಲೂ, ಈ ರಾಜಮಹಾರಾಜರಲ್ಲೂ ತುಂಬಿದೆ. ಜಡ ಪದಾರ್ಥಗಳಲ್ಲೆಲ್ಲ ಹರವಿ ನಿಂದಿದೆ. ಜಗತ್ತೇ ಹಾಳಾಗುತ್ತಿದ್ದರೂ ಅದು ನಿರ್ವಿಕಾರ. ಅದನ್ನು ಯಾರೂ ಇಲ್ಲದಂತೆ ಮಾಡಲಾರರು. ಸುಮ್ಮನೆ ಏಕೆ ಚಿಂತಿಸುವೆ? ಅದರಲ್ಲಿ ನಿನ್ನ ಮನಸ್ಸನ್ನು ಕೇಂದ್ರೀಕರಿಸು. ನಿಜ ಸುಖ ಪಡೆಯುವೆ."

ಅರ್ಜುನ:- "ದೇವ ನಿನ್ನ ಮಾತು ಮಧುರ; ದೇಹ ಹಾಗು ಆತ್ಮಗಳ ಬಗ್ಗೆ ಇನ್ನಷ್ಟು ತಿಳಿಯಾಗಿ ವಿವರಿಸು."

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೮॥**

**ಅರ್ಥ:**- ನಿತ್ಯಸ್ಯ = ಸದಾ ಏಕರೂಪನಾದ ಅನಾಶಿನಃ = ಅವಿನಾಶಿಯಾದ ಅಪ್ರಮೇಯಸ್ಯ = ಪ್ರಮಾಣಗಳಿಗೆ ಅವಿಷಯನಾದ, ಶರೀರಿಣಃ = ಆತ್ಮನ, ಇಮೇ ದೇಹಾಃ = ಈ ದೇಹಗಳು, ಅಂತವಂತಃ = (ಅಂತೋ ವಿನಾಶೋ ವಿದ್ಯತೇ ಯೇಷಾಂ ತೇ ಅಂತವಂತಃ ಯಾವುಗಳಿಗ ವಿನಾಶವಿದೆಯೋ ಅವು ಅಂತವಂತ ಉಕ್ತಾಃ = ಎಂದು) ಹೇಳಲ್ಪಟ್ಟಿವೆ. ಭಾರತ = (ಭರತವಂಶೋದ್ಭವನಾದ) ಅರ್ಜುನನೆ, ತಸ್ಮಾತ್ = ಆದುದರಿಂದ, ಯುದ್ಧ್ಯಸ್ವ = ಇಂಥ ನಶ್ವರ ದೇಹಗಳ ಮೋಹಾದಿಗಳೊಡನೆ ಯುದ್ಧ ಮಾಡು.

ಈ ಮಂತ್ರದಲ್ಲಿರುವ ಮುಖ್ಯ ಪದಗಳು ಎರಡು. ೧) ಶರೀರಿನ್ (ಶರೀರಿಣಃ. ಷಷ್ಠೀ ಏ. ವ.). ನಿತ್ಯ, ಅವಿನಾಶಿ, ಅಪ್ರಮೇಯ ಪದಗಳು ಅವನನ್ನು ವರ್ಣಿಸುವವು. ೨) ದೇಹಾಃ (ದೇಹಾಃ ಪ್ರಥಮಾ ಬ. ವ.). ಅಂತವಂತಃ ಇದು ದೇಹಗಳಿಗೆ ಸಂಬಂಧಿಸಿದ ಗುಣವರ್ಣನಾತ್ಮಕ ಶಬ್ದ. ಕ್ರಮವಾಗಿ ಈ ಎರಡನ್ನು ಅರಿಯುವಾ.

೧) **ಶರೀರಿನ್**:- ಪರಮಾತ್ಮನು ನಿರಂಜನ; ಸಾಕ್ಷಿ ರವಿ. ಅವನ ದಿವ್ಯ ಸಾನಿಧ್ಯದಲ್ಲಿರುವದೇ ಅವ್ಯಕ್ತ ಮಹಾನ್ ಶಕ್ತಿ. ಸೃಷ್ಟಿಯು ನಿರ್ಮಾಣವಾಗುವ ಮುಂಚೆ ಅವೆರಡೇ ವಸ್ತುಗಳು ಅವಿನಾಭಾವದಿಂದ ನೆಲೆಸಿದ್ದವು.

ಕ್ರಮೇಣ ಆ ದೇವಾತ್ಮ ಶಕ್ತಿ ತನ್ನ ಅಂತಃಸ್ವಭಾವಾನುಗುಣವಾಗಿ ಮಿಸುಗಿತು; ಬೃಹದಾಕಾರದ ಸ್ಪಂದನಾ ತೆರೆಯೊಂದು ಉಡಿಸಿ ಎಲ್ಲೆಲ್ಲೂ ತರಂಗಿಸಿತು! ಅದರಿಂದ ಮಹದಾದಿ ಮಹಾನ್ ತತ್ತ್ವಗಳು ರೂಪುಗೊಂಡವು; ಬಳಿಕ ವಿಶ್ವ ಸೃಷ್ಟವಾಯ್ತು. ಮನ ಬುದ್ಧ್ಯಾದಿಗಳು ತೋರಿದವು. ದೇಹಗಳು ಹುಟ್ಟಿಬಂದವು. ಆತ್ಮರವಿ ಮಾತ್ರ ಅವಿಕಂಪಿತ ಚಿದಾಕಾಶವಾಗಿ ಉಳಿದ.

ಆ ಸಾಕ್ಷಿ ರವಿಯ ದಿವ್ಯಪ್ರಕಾಶವು ತತ್ತ್ವ ಮಾಲೆಯಲ್ಲಿಯೇ ಬಹು ಸೂಕ್ಷ್ಮಕರಣವಾದ ಅಂತಃಕರಣದಲ್ಲಿ ನೈಸರ್ಗಿಕವಾಗಿ ಪ್ರತಿಫಲಿಸಿತು. ಆ ಪ್ರತಿಫಲನ ಪ್ರಕಾಶವೇ ಜೀವಾತ್ಮ! ಅಂತಃಕರಣವೂ ಅಜ್ಞಾನಾವೃತವಾದುದರಿಂದ ತಾನು ದೇವನ ರೂಪ ಎಂಬುದನ್ನು ಜೀವ ಮರೆತ. ಮನ, ಇಂದ್ರಿಯ, ದೇಹಗಳನ್ನೇ ತನ್ನ ನಿಲಯ ಮಾಡಿಕೊಂಡ; ಅವುಗಳಲ್ಲಿ ಅಭಿಮಾನ ತಾಳಿದ. ದೇಹ ಮನಸ್ಸಿನ ವಿಕಾರಗಳೆಲ್ಲ ಅವನಲ್ಲಿ ಆಭಾಸವಾದುದರಿಂದ ಜನ್ಮ ಮರಣ ಸುಖ ದುಃಖ ಇತ್ಯಾದಿ ಭಾವ ಪಡೆದ. ಆದುದರಿಂದ ಅವನಿಗೆ 'ಶರೀರಿನ್' ಎಂಬ ಅಭಿದಾನ ಬಂತು. ದೇಹದ ಮೂಲಕ ಕರ್ಮಮಾಡಿ ಅದರ ಸಂಸ್ಕಾರಗಳನ್ನು ಮನದಲ್ಲಿ ಸಂಗ್ರಹಿಸಿದ; ಆ ಸಂಸ್ಕಾರಾನುಸಾರ ಸಾವಿರಾರು ಲಕ್ಷಾಂತರ ದೇಹಗಳನ್ನು ಪಡೆಯುತ್ತ ಸಾಗಿದ. ದೇಹ ಬಿಟ್ಟು ತಾನಿರಲಾರೆನೆಂಬಷ್ಟು ದೇಹಾಸಕ್ತನಾದುದರಿಂದ 'ದೇಹಿನ್' ಎನಿಸಿದ.

ನಿಜವಾಗಿ ನೋಡಿದರೆ ಜೀವಾತ್ಮನು ದೇಹವೂ ಅಲ್ಲ; ಮನವೂ ಅಲ್ಲ. ಅವುಗಳಿಂದವನು ಪರಿಮಿತನಾಗಿಲ್ಲ. ಆ ರೀತಿ ಭಾಸವಾಗಿದೆ ಅಷ್ಟೇ. ವಾಸ್ತವಿಕವಾಗಿ, ಅವನು ಯಾವುದರಲ್ಲೂ ಸಿಲುಕಲಾರದ ದೇವ ಚೇತನ; ಸಾಕ್ಷಿ ಪ್ರತ್ಯಗಾತ್ಮ!! ಅವನನ್ನು ಮೂರು ಪದಗಳಿಂದ ಭಗವಂತನು ವರ್ಣಿಸಿದ್ದಾನೆ.

(ಅ) ನಿತ್ಯ:- ಕಾಲಮಿತನಲ್ಲ. ಜಡ ಹಾಗು ದೃಶ್ಯ ವಸ್ತುಗಳಿಗೆ ಆದಿಯೂ ಇದೆ, ಅಂತ್ಯವೂ ಇದೆ. ಆತ್ಮನು ಸ್ವರೂಪತಃ ಜಡ ವಿಲಕ್ಷಣ ಹಾಗು ದೃಶ್ಯಸಾಕ್ಷಿ. ಆದುದರಿಂದ ನಿತ್ಯ.

(ಬ) ಅನಾಶಿನ್:- ಕಾಲ, ದೇಶ, ಮತ್ತು ವಸ್ತು ಮಿತಿಯುಳ್ಳವುಗಳು; ಆತ್ಮನು ಸರ್ವಕಾಲ, ದೇಶ, ವಸ್ತುಗಳಲ್ಲಿ ನೆಲೆಸಿದುದರಿಂದ ಅವಿನಾಶಿ.

(ಕ) ಅಪ್ರಮೇಯ:- ಪ್ರಮಾತೃ ಜೀವಾತ್ಮನು ಪ್ರಮಾಣಗಳ ಮೂಲಕ ಯಾವ ವಸ್ತುಗಳನ್ನು ತಿಳಿದುಕೊಳ್ಳುತ್ತಾನೆಯೋ ಅವು 'ಪ್ರಮೇಯ'. ಇಂದ್ರಿಯಗಳು ಪ್ರತ್ಯಕ್ಷ ಪ್ರಮಾಣ. ಇಂದ್ರಿಯ ಹಾಗು ವ್ಯಾಪ್ತಿಜ್ಞಾನ ಅನುಮಾನ ಪ್ರಮಾಣ. ಇಂದ್ರಿಯ ಹಾಗು ಸಾದೃಶ್ಯಗಳು ಉಪಮಾನ ಪ್ರಮಾಣ. ಇಂದ್ರಿಯ ಹಾಗು ಶಬ್ದಾರ್ಥಸಂಬಂಧ ಜ್ಞಾನವು ಶಬ್ದ ಪ್ರಮಾಣ. ಪ್ರತ್ಯಕ್ಷ ಪ್ರಮಾಣಕ್ಕೆ ವಿಷಯವಾದ ಈ ಹೂವು ಪ್ರತ್ಯಕ್ಷ ಪ್ರಮೇಯ. ಅನುಮಾನ

ಪ್ರಮಾಣಕ್ಕೆ ವಿಷಯವಾದ ಪರ್ವತದ ಬೆಂಕಿ ಅನುಮಾನ ಪ್ರಮೇಯ. ಉಪ ಮಾನ ಪ್ರಮಾಣಕ್ಕೆ ವಿಷಯವಾದ ಸ್ವಗೃಹ-ಗೋಸದೃಶ-ಗವಯ ಉಪ ಮಾನ ಪ್ರಮೇಯ. ಶಬ್ದ ಪ್ರಮಾಣಕ್ಕೆ ವಿಷಯವಾಗುವ ಸ್ವರ್ಗಾದಿಲೋಕ ಗಳು ಶಬ್ದ ಪ್ರಮೇಯ. ಸಂಕ್ಷಿಪ್ತವಾಗಿ ಹೇಳಬಹುದಾದರೆ ಇಂದ್ರಿಯ ಮನಸ್ಸು ಮತ್ತು ಬುದ್ಧಿಯ ಮೂಲಕ ಯಾವುದನ್ನು ಗುರುತಿಸಬಲ್ಲೆವೋ ಅದೆಲ್ಲ ಪ್ರಮೇಯ. ಭೂಮ್ಯಾದಿ ಪ್ರಕೃತ್ಯಾಂತವಾದ ಸರ್ವ ವಿಸ್ತಾರವು ಬಾಹ್ಯಾಂ ತರ ಕರಣ ವೇದ್ಯವಾದುದರಿಂದ ಅದು ಪ್ರಮೇಯ!

ಆತ್ಮನು ಪ್ರಮಾಣಗಳ ಕಾರ್ಯಮಂಡಲದಾಚೆ ಅನಂತವಾಗಿ ವ್ಯಾಪಿಸಿ ದ್ದಾನೆ. ಪ್ರಮಾಣಗಳ ಒಳ ಹೊರಗೂ ತುಂಬಿದ್ದಾನೆ. ಅವನು ಸೂಕ್ಷ್ಮಾತಿ ಸೂಕ್ಷ್ಮ, ಕೇವಲ ಅರಿವು. ಅವನ ಅರಿವಿನ ಆಧಾರವಿಡಿದು ಮನಬುದ್ಧಿಗಳ ವ್ಯವಹಾರ. ಹೀಗಿರುವಾಗ ತಾವೇ ಜಡವಾದ ಅವು ದೇವನನ್ನೆಂತು ಕಾಣ ಬಲ್ಲವು ? ಬಲ್ಬು ಬೇರೆಲ್ಲ ಪದಾರ್ಥಗಳನ್ನು ಪ್ರಕಾಶಿಸುವದಾದರೂ ತನ್ನೊ ಳಗೆ ಹರಿಯುತ್ತಿರುವ ವಿದ್ಯುತ್ತನ್ನು ಪ್ರಕಾಶಿಸಲಾರದು. ಅಲ್ಲವೆ? ಹಾಗೆ ಆತ್ಮನು ಅದೃಶ್ಯ ವಿದ್ಯುತ್ತು. ಮನಸಾದಿಗಳು ಬಲ್ಬು!

"ಯೇನ ಇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್?
ವಿಜ್ಞಾತಾರಂ, ಅರೇ ಕೇನ ವಿಜಾನೀಯಾತ್ ?"

ಯಾವನಿಂದ ಎಲ್ಲವೂ ತಿಳಿಯಲ್ಪಡುವದೋ ಅವನನ್ನು ಅದಾರು ತಿಳಿ ದಾರು? ಸರ್ವೋಪರಿ ಜ್ಞಾನಪ್ರಕಾಶದ ವರ್ಷಾವ ಮಾಡುವ ಆತ್ಮನು ಕರ್ಣ ದಲ್ಲಿ ಪ್ರಸಾದಲಿಂಗವೆನಿಸಿ ಶಬ್ದವನ್ನು ಪ್ರಕಾಶಿಸುತ್ತಾನೆ; ತ್ವಚದಲ್ಲಿ ಜಂಗಮ ಲಿಂಗನೆನಿಸಿ ಸ್ಪರ್ಶವನ್ನು ಪ್ರಕಾಶಿಸುತ್ತಾನೆ; ನೇತ್ರದಲ್ಲಿ ಶಿವಲಿಂಗನೆನಿಸಿ ರೂಪ ವನ್ನು ಪ್ರಕಾಶಿಸುತ್ತಾನೆ. ರಸನೆಯಲ್ಲಿ ಗುರುಲಿಂಗನೆನಿಸಿ ರಸ ಸೃಷ್ಟಿಯನ್ನು ಪ್ರಕಾಶಿಸುತ್ತಾನೆ; ಘ್ರಾಣದಲ್ಲಿ ಆಚಾರ ಲಿಂಗವೆನಿಸಿ ಗಂಧ ಸೃಷ್ಟಿಯನ್ನು ಪ್ರಕಾಶಿಸುತ್ತಾನೆ. ಮನದಲ್ಲಿ ಮಹಾಲಿಂಗನೆನಿಸಿ ಇಚ್ಛೆ, ಭಾವ, ವಿಚಾರ ಗಳನ್ನು ಪ್ರಕಾಶಿಸುತ್ತಾನೆ. ಅವನು ಎಲ್ಲವನ್ನು ಕಾಣುತ್ತಾನೆ; ಅವನನ್ನು ಯಾವ ಪದಾರ್ಥವೂ ಕಾಣದು.

ಒಂದು ವೇಳೆ, ಪ್ರಮಾತೃ ಜೀವನು ಆತ್ಮ ದೇವನನ್ನು ಪ್ರಮೇಯ ಗೊಳಿಸಬೇಕೆಂದು ಹೊರಟರೆ, ತಾನೇ ಆತ್ಮನಲ್ಲಿ ಸಮರಸನಾಗುತ್ತಾನೆ; ತನ್ನ ಪ್ರಮಾಣಗಳೆಲ್ಲ ಆ ದೇವನಲ್ಲಿ ನಿರ್ಬಯಲಗೊಳ್ಳುತ್ತವೆ.

"ದೇವ ಪಹಾವಯಾಸ ಗೇಲೋ । ದೇವಚ ಹೋವುನ ಠೇಲೋ ॥"

ಎಂದಿದ್ದಾರೆ ತುಕಾರಾಮ ಸಂತರು.

೨) ದೇಹ :– ನಿತ್ಯ, ಅವಿನಾಶಿ, ಅಪ್ರಮೇಯವಾದ ಜೀವ ಚೈತನ್ಯದ ನಿಲಯವು ದೇಹ. ಇದು ಪ್ರಕೃತಿಮಡಿಲಿನಿಂದ ಹುಟ್ಟಿದೆ. ಈ ದೇಹ ಐದು

ಪ್ರಕಾರ. (ಅ) ಸ್ಥೂಲ ದೇಹ:- ಇದು ಪಂಚಭೂತ ಪಂಚತನ್ಮಾತ್ರೆಗಳಿಂದ ರಚನೆಗೊಂಡಿದೆ. ಅತೀ ಜಡ; ಶಬ್ದಾದಿ ಗುಣಾತ್ಮಕ. ಬಾಲ್ಯ ತಾರುಣ್ಯ ವೃದ್ಧಾಪ್ಯ ವಿಕಾರಯುಕ್ತ. ಆಯುರ್ಮರ್ಯಾದಿತ. ಜೀವಾತ್ಮನು ಈ ದೇಹ ದಲ್ಲಿ ವ್ಯವಹರಿಸುತ್ತಿದ್ದರೆ ಜಾಗ್ರಾವಸ್ಥೆ ಎನಿಸುತ್ತದೆ. ಜನ್ಮಾಂತರ ಎಂದರೆ ಈ ಸ್ಥೂಲ ದೇಹಾನಂತರ. ಜೀವನು ಮುಕ್ತಿ ಪಡೆಯುವ ಕಾಲಾವಧಿಯೊಳಗಾಗಿ ಕೋಟ್ಯಂತರ ಸ್ಥೂಲ ದೇಹಗಳನ್ನು ಧರಿಸುತ್ತಾನೆ; ತ್ಯಜಿಸುತ್ತಾನೆ! (ಬ) ಸೂಕ್ಷ್ಮ ದೇಹ (ಲಿಂಗ ದೇಹ):- ಇದು ಮನೋಮಯಾತ್ಮಕ. ತನ್ಮಾತ್ರೆ ಹಾಗು ಅಹಂಕಾರ ತತ್ವಗಳಿಂದ ರಚನೆಗೊಂಡಿದೆ. ಇದು ಅಸಂಖ್ಯ ಭಾವನೆ, ವಿಚಾರ, ಸಂಸ್ಕಾರಗಳ ತಾಣ. ಇದಕ್ಕೆ ಬಾಲ್ಯಾದಿ ಅವಸ್ಥೆಗಳಿಲ್ಲ. ಸ್ಥೂಲ ದೇಹದೊಂದಿಗೆ ಹುಟ್ಟುವದೂ ಇಲ್ಲ; ಸಾಯುವದೂ ಇಲ್ಲ. ಜನ್ಮ-ಜನ್ಮಾಂತರ ಪ್ರಯಾಣ ಮಾಡುವಾಗ ಜೀವನು ಈ ದೇಹವನ್ನು ವಾಹನ ಮಾಡಿಕೊಳ್ಳುತ್ತಾನೆ. ಜೀವಾತ್ಮನು ಈ ದೇಹದಲ್ಲಿ ವ್ಯವಹರಿಸುತ್ತಿದ್ದರೆ ಅದು ಸ್ವಪ್ನಾವಸ್ಥೆ. ಈ ದೇಹವು ಜೀವಶಿವೈಕ್ಯದವರೆಗೆ ಬಾಳಿಕೊಂಡಿರುವದು. (ಕ) ಕಾರಣ ದೇಹ :- ಗಾಢತಮಾಹಂಕಾರದ ರಚನೆ ಇದು. ಇಲ್ಲಿ ದಟ್ಟ-ವಾದ ಅಜ್ಞಾನಾಂಧಕಾರ ಬಿಟ್ಟು ಮತ್ತೇನಿಲ್ಲ. ಮನಸ್ಸು ಇಲ್ಲಿ ಲಯ, ಸಂಸ್ಕಾರ ಗಳ ಮಿಸುಗಿಲ್ಲ. ಲಿಂಗದೇಹದಷ್ಟೇ ಇದರ ಆಯು. ಜೀವನು ಈ ದೇಹ ದಲ್ಲಿದ್ದರೆ ಸುಪ್ತಿ ಅವಸ್ಥೆ. (ಡ) ತುರಿಯ ದೇಹ :- ಸತ್ವಾಹಂಕಾರ ಮತ್ತು ಮಹತ್ ತತ್ತ್ವಗಳಿಂದ ಸೃಷ್ಟವಾಗಿದೆ. ಮನಸ್ಸನ್ನು ಪರಿಶುದ್ಧಗೊಳಿಸಿ, ಸುಪ್ತಿ ಮಂಡಲ ಭೇದಿಸಿ, ಮೇಲ್ನಡೆದಾಗ ಜೀವಾತ್ಮನಿಗೆ ಈ ದೇಹದ ಭಾಸ ಬರುವದು. ಇಲ್ಲಿ ಕ್ಷಿಪ್ತ, ಮೂಢ, ವಿಕ್ಷಿಪ್ತ ವೃತ್ತಿಗಳಿಲ್ಲ. ಮನಸ್ಸು ಇಲ್ಲಿಗೆ ಬಂದಾಗ ಧ್ಯಾನಮಗ್ನವಾಗುತ್ತದೆ. 'ನಾನು ಸರ್ವಸಾಕ್ಷಿಕ ಈಶ' ಎಂಬ ಸತ್ವಾ ಹಂಕಾರಪ್ರಜ್ಞೆ ಜೀವನಲ್ಲಿ ತೋರಿಬರುತ್ತದೆ. ಇದಕ್ಕೆ ತುರಿಯ ಅವಸ್ಥೆ ಎಂದು ನಾಮ. (ಇ) ಉನ್ಮನಿ ದೇಹ :- ಮಹತ್ತತ್ತ್ವದಿಂದ ನಿರ್ಮಾಣ ವಾಗಿದೆ. ಧ್ಯಾನರತ ಮನಸ್ಸಿನೊಂದಿಗೆ ಜೀವಾತ್ಮನು ಪ್ರವೇಶಿಸಿದಾಗ ಆವ ನಿಗೆ ಶಿವತನ್ಮಯತೆ ಸಮನಿಸುವದು. ಮನಸ್ಸು ತನ್ನ ಧ್ಯೇಯವಾದ ಸಾಕ್ಷಿ ದೇವನಲ್ಲಿ ಲೀನವಾಗುವದು. ಅದೇ ಸಮಾಧಿ ಅವಸ್ಥೆ.

ಅಂತವಂತಃ :- ಈ ಐದೂ ದೇಹಗಳು ಅಂತವಂತ. ಸ್ಥೂಲ ದೇಹದ ನಾಶ ಸರ್ವವಿದಿತ. ಎಂದು ಹುಟ್ಟಿತೋ ಅದೇ ಕ್ಷಣದಿಂದ ಅದರ ಓಟ ಸಾವಿನತ್ತ. ಉಳಿದ ನಾಲ್ಕು ದೇಹಗಳು ತಮ್ಮಿಂದ ತಾವೆ ನಾಶವಾಗುವ ದಿಲ್ಲ; ಎಂದು ಜೀವಾತ್ಮನು ತನ್ನನ್ನರಿತನೋ ಅಂದೇ ಆ ದೇಹಗಳೆಲ್ಲ ವಿನಷ್ಟವಾಗುತ್ತವೆ. ಅವುಗಳಿಗೆ ಪ್ರಾಗಭಾವವಿದೆ; ಪ್ರಧ್ವಂಸಾಭಾವವಿದೆ. ಆವೆರಡು ಅಭಾವಗಳಿಗೆ ಪ್ರತಿಯೋಗಿಗಳಾದುದರಿಂದ ಅವು ಅಂತವಂತ.

ಭಗವಂತ:– "ಭಾರತನೆ, ನೀನು ಹಾಗು ಈ ರಾಜರು ತೊಟ್ಟಿರುವ ದೇಹಗಳು ಸುಚಿರ ಹಾಗು ನಿತ್ಯವೆಂದು ಭಾವಿಸಬೇಡ. ಅವುಗಳಲ್ಲಿರುವ ರೂಪ, ಬಲ, ಆರೋಗ್ಯ- ಎಲ್ಲವೂ ನಶ್ವರ. ಕೆಲವು ವರುಷಗಳ ಹಿಂದೆ ಹುಟ್ಟಿದ ಆ ದೇಹಗಳು ಯಾವುದೇ ಕ್ಷಣ ಮಣ್ಣುಪಾಲಾಗಬಹುದು. ಆದುದರಿಂದ ಅವುಗಳಿಗಾಗಿ ಯೋಚಿಸದಿರು.

"ಅದೇ ದೇಹಗಳ ಒಳಗೆ ಜೀವನಿದ್ದಾನೆ: ಅವನು ದೇವಾಂಶ; ಅಮೂರ್ತ! ಅವನು ದೇಹದೊಂದಿಗೆ ಹುಟ್ಟಲೂ ಇಲ್ಲ; ಸಾಯುವದೂ ಇಲ್ಲ. ಮನ, ಬುದ್ಧಿ, ಭಾವನೆಗಳೆಲ್ಲ ಅವನ ಮೇಲೆ ಆವರಿಸಿದ ಆಚ್ಛಾದನೆಗಳು. ನೀನು ಅವುಗಳ ಪರಿಮಿತಿಗೆ ಸಿಲುಕದಿರು; ಅವು ಸದೈವ ವಿಕಾರ ಶೀಲ. ನೀನು ಸದೈವ ಪ್ರಕಾಶಕ. ನೀನು ಎಲ್ಲವನ್ನು ಕಾಣುವಿ; ನಿನ್ನನ್ನು ಅವು ಗುರುತಿಸವು. ಅರ್ಜುನಾ, ಅತ್ತ ಲಕ್ಷ್ಯಕೊಡು. ಭೌತ ತತ್ತ್ವ ಸಂಕುಲವನ್ನು ದಾಟಿ ಸ್ವಾತ್ಮಾರಾಮನಾಗು !

"ಅದಕ್ಕಾಗಿ, ನಿನ್ನ ಶೌರ್ಯವನ್ನೆಲ್ಲ ವಿನಿಯೋಗಿಸು. ನಿನ್ನನ್ನು ಬಾಹ್ಯ ವಿಶ್ವದತ್ತ ಸೆಳೆದು ತರುವ ಜಡವಸ್ತು-ವಿಷಯ-ವ್ಯಾಮೋಹದೊಂದಿಗೆ ಘೋರ ಕದನ ಮಾಡು ಅಮರ ದಿವ್ಯಾತ್ಮನಾದ ನಿನ್ನನ್ನು ಕಾಲ, ದೇಶ, ವಸ್ತು ಪರಿಚ್ಛಿನ್ನತೆಗಳಿಗೆ ಸಿಲುಕಿಸುವ ಈ ದೇಹಾನುರಾಗ- ರಕ್ಕಸನನ್ನು ಈಡಾಡು! ನೀನು ನೋಡುವ ಈ ಭೋಗ ಭಾಗ್ಯ, ಬಂಧು ಬಾಂಧವರು, ಈ ವರ್ಣ ಆಶ್ರಮ, ಈ ಜಗ ಸ್ಥಿರವೆಂದು ತಿಳಿಯದಿರು. ಈ ಆಭಾಸ ಭೂತಗಳಿಗೆ ತಲೆಯೊಡ್ಡುವ ಹೇಡಿತನ ಬೇಡ. ಏಳು; ನಿನ್ನ ನೀನರಿ; ಈ ಮೋಹದ ಪ್ರಾಣ ಹೀರು!"

ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥೧೯॥

ಅರ್ಥ:- ಯಃ = ಯಾವನು, ಏನಂ = ಈ ಆತ್ಮನನ್ನು, ಹಂತಾರಂ = ಕೊಲ್ಲುವವನನ್ನಾಗಿ, ವೇತ್ತಿ = ತಿಳಿಯುತ್ತಾನೆಯೋ, ಯಃ ಚ = ಮತ್ತು ಯಾವನು, ಏನಂ = ಈ ಆತ್ಮನನ್ನು, ಹತಃ = ಕೊಲ್ಲಲ್ಪಟ್ಟವನನ್ನಾಗಿ, ಮನ್ಯತೇ = ಭಾವಿಸುತ್ತಾನೆಯೋ, ತೌ ಉಭೌ = ಆ ಇಬ್ಬರೂ, ನ ವಿಜಾನೀತಃ = ಅರಿಯರು, ಅಯಂ = ಈ ಆತ್ಮನು, ನ ಹಂತಿ = ಕೊಲ್ಲುವದಿಲ್ಲ; ನ ಹನ್ಯತೇ = ಕೊಲ್ಲಲ್ಪಡುವದೂ ಇಲ್ಲ.

ವಿವರಣೆ:– ಪ್ರಸೇನ ರಾಜನನ್ನು ಕೊಂದು ಅವನ ಅಮೌಲ್ಯ ಸ್ಯಮಂತಕ ಮಣಿಯನ್ನು ಅಪಹರಿಸಿದ ಆರೋಪ ಕೃಷ್ಣನ ಮೇಲೆ ಬಂತು. ನಿಜವಾದ ಕಳ್ಳನಾದ ಜಾಂಬವಂತನು ಸಿಕ್ಕು ಶ್ರೀ ಕೃಷ್ಣನ ಸತ್ಯ ರೂಪ ಗೊತ್ತಾದ ಮೇಲೆಯೇ ಆ ಮಿಥ್ಯಾರೋಪ ಅಡಗಿತು. ಹಾಗೆ ಆತ್ಮನ ಮೇಲೆ ಕರ್ತೃತ್ವ ಭೋಕ್ತೃತ್ವಗಳು, ಜನ್ಮ ಮರಣಗಳು, ಸುಖದುಃಖಗಳು ಆರೋ

ಪಿತವಾಗಿವೆ. ಯಾವಾಗ ಜಡ ವಿಲಕ್ಷಣನಾದ ಆತ್ಮನ ನಿಷ್ಕಲ್ಮಷ ಸ್ವರೂಪ ಜ್ಞಾನವಾಗುವದೋ ಅದೇ ಕ್ಷಣ ಆಯಾ ಆರೋಪಗಳು ಅಡಗಿ ಬಿಡುವವು. ಆತ್ಮನು ಸುನಿರ್ಮಲ ಜ್ಞಾನಜ್ಯೋತಿಯಾಗಿ ಪ್ರಕಾಶಿಸುವನು. ಈ ಮಾತನ್ನೇ ಪ್ರಸ್ತುತ ಮಂತ್ರ ವಿಸ್ತರಿಸಿದೆ.

ಏನಂ :– ಈ ಆತ್ಮನು ನಿತ್ಯ ಹಾಗು ಅಪ್ರಮೇಯ; ಅಜ ಹಾಗು ಅಮರ. ಇವನನ್ನು ಕುರಿತು ಶ್ವೇತಾಶ್ವತರ ಉಪನಿಷತ್ತು ಸುಂದರ ಮಂತ್ರವೊಂದನ್ನು ರಚಿಸಿದೆ:

"ಅಪಾಣಿಪಾದೋ ಜವನೋಗ್ರಹೀತಾ ಪಶ್ಯತ್ಯಚಕ್ಷುಃ ಶೃಣೋತ್ಯಕರ್ಣಃ ।
ಸ ವೇತ್ತಿ ವೇದ್ಯಂ ನಚ ತಸ್ಯಾಸ್ತಿವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾಂತಂ" ॥೩-೧೯॥

ಆತ್ಮನಿಗೆ ಕೈಯಿಲ್ಲ, ಹಿಡಿಯುತ್ತಾನೆ; ಕಾಲಿಲ್ಲ, ನಡೆಯುತ್ತಾನೆ; ಕಣ್ಣಿಲ್ಲ ನೋಡುತ್ತಾನೆ; ಕಿವಿಯಿಲ್ಲ, ಕೇಳುತ್ತಾನೆ; ತಿಳಿಯಬಹುದಾದುದನ್ನೆಲ್ಲ ತಿಳಿಯುತ್ತಾನೆ; ಅವನನ್ನು ತಿಳಿಯುವ ಜಾಣನೊಬ್ಬನೂ ಇಲ್ಲ. ಮಹಾತ್ಮರು ಅವನಿಗೆ ಪುರಾತನ, ಸರ್ವಮೂಲ, ಮಹಾನ್ ಪುರುಷ ಎಂದು ಕರೆದಿದ್ದಾರೆ.

ಆತ್ಮನು ಪರಿಪೂರ್ಣ. ಅವನು ಅರಿಯದ ವಸ್ತುವಿಲ್ಲ; ಹಿಡಿಯದ ಪದಾರ್ಥವಿಲ್ಲ; ಚರಿಸದ ಸ್ಥಾನವಿಲ್ಲ; ನೋಡದ ರೂಪಿಲ್ಲ; ಕೇಳದ ಶಬ್ದವಿಲ್ಲ. ಅವನ ಸಾನಿಧ್ಯದಲ್ಲಿ ವಿಶ್ವದ ವ್ಯವಹಾರ ಸಾಗಿದೆ. ಅವನು ಮಾತ್ರ ಇಷ್ಟೆಲ್ಲ ಕಾರ್ಯಗಳಿಗೆ ಕಾರಣಕನಾದರೂ, ಅಕರ್ತ! ಇಂದ್ರಿಯಾತೀತ! ಪ್ರಮಾತೃ ಭೋಕ್ತೃ ಹಾಗು ಕರ್ತೃ ಸಾಕ್ಷಿ!! ಅವನ ಸಾಕ್ಷಿ ಭಾವವನ್ನು ವರ್ಣಿಸುವ ಶ್ವೇತಾಶ್ವೇತರೋಪನಿಷತ್ತಿನ ಮಂತ್ರವಿಲ್ಲಿದೆ :

"ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನನ್ಯೋ ಅಭಿಚಾಕಶೀತಿ ॥" ॥೪-೬॥

ಎರಡು ಪಕ್ಷಿಗಳು. ಅವೆರಡಕ್ಕೆ ಅಗಲಿರದಂಥ ಗೆಳೆತನ. ಒಂದೇ ವೃಕ್ಷವನ್ನು ಆಶ್ರಯಿಸಿವೆ. ಅವೆರಡರಲ್ಲಿ ಒಂದು ಪಕ್ಷಿ ವೃಕ್ಷದ ಫಲಗಳನ್ನು ತಿನ್ನುತ್ತದೆ. ಮತ್ತೊಂದು ತಿನ್ನದೇ ಬರೀ ಪ್ರಕಾಶಿಸುತ್ತಿದೆ. ಇಲ್ಲಿ, ದೇಹವು ಗಿಡ. ಮನೋಗತ ಜೀವನೇ ವಿಷಯ ಭೋಗಿಸುವ ಪಕ್ಷಿ. ಪ್ರತ್ಯಗಾತ್ಮನೇ ಪ್ರಕಾಶಕ ಪಕ್ಷಿ; ಅವನು ದೇಹ, ಇಂದ್ರಿಯ, ವಿಷಯಭೋಗ, ಮನ ಹಾಗು ಜೀವ ಇವರೆಲ್ಲರ ಮೇಲೆ ಪ್ರಕಾಶ ಸುರಿಸುತ್ತಾನೆ. ಅವನು ಕೇವಲ ಸಾಕ್ಷಿ!

ಸ್ವಚ್ಛವಾದ ಕನ್ನಡಿ ತಾನು ಜಡವಾದರೂ ಸೂರ್ಯ ಪ್ರಕಾಶ ಗ್ರಹಿಸಿ ಉಳಿದೆಲ್ಲ ವಸ್ತುಗಳನ್ನು ಪ್ರಕಾಶಿಸುವದು. ಸೂರ್ಯನಾದರೋ ಸಾಕ್ಷಿ. ದರ್ಪಣ ಹಾಗು ಪ್ರತಿಬಿಂಬಗಳು ಅವನ ಅಂಕಿತ. ಅವು ಅವನನ್ನು ಪ್ರಕಾಶಿಸವು. ಅವನು ಸ್ವಯಂಪ್ರಕಾಶ. ಅದರಂತೆ ಆತ್ಮನು ಸ್ವಯಂ ಪ್ರಕಾಶಕ ಸೂರ್ಯ.

ಅಂತಃಕರಣವು ಜಡ ದರ್ಪಣ. ಪ್ರಮಾತೃವು ಪ್ರತಿಬಿಂಬ. ಈ ಪ್ರಮಾತೃವು ಜಾಗ್ರದಲ್ಲಿ ವಿಶ್ವಜೀವನೆನಿಸಿ ಬಾಹ್ಯ ವಿಷಯಗಳನ್ನು ಪ್ರಕಾಶಿಸುತ್ತಾನೆ; ಸ್ವಪ್ನದಲ್ಲಿ ತೈಜಸ ಜೀವನೆನಿಸಿ ಸ್ವಾಪ್ನಿಕ ಪದಾರ್ಥಗಳನ್ನು ಪ್ರಕಾಶಿಸುತ್ತಾನೆ; ಸುಷುಪ್ತಿಯಲ್ಲಿ ಪ್ರಾಜ್ಞ ಜೀವನೆನಿಸಿ ಅಜ್ಞಾನಾಂಧಕಾರಗಳನ್ನು ಪ್ರಕಾಶಿಸುತ್ತಾನೆ; ತುರಿಯ ಹಾಗು ತುರಿಯಾತೀತ ಅವಸ್ಥೆಗಳಲ್ಲಿ ಪಾರಮಾರ್ಥಿಕ ಹಾಗು ಉನ್ಮನಿ ಜೀವರೆನಿಸಿ ದೈವೀ ಭಾವನೆಗಳನ್ನು ಪ್ರಕಾಶಿಸುತ್ತಾನೆ. ಹೀಗೆ ವಿಶ್ವವನ್ನೇ ಪ್ರಕಾಶಿಸುವ ಈ ಪ್ರಮಾತೃ ಹಾಗು ಅವನ ವಾಸಸ್ಥಾನವಾದ ಅಂತಃಕರಣ ಆತ್ಮನ ಅಂಕಿತಕ್ಕೆ ಒಳಪಟ್ಟಿವೆ. ಅವುಗಳಿಗೆ ಆತ್ಮನನ್ನು ತೋರಿಸುವ ಸಾಮರ್ಥ್ಯವಿಲ್ಲ! ಅವನು ಅತೀತ ದೇವ! ಪ್ರಮಾತೃ, ಪ್ರಮಾಣ, ಪ್ರಮೇಯ, ಪ್ರಮಾ – ಇವುಗಳ ಇರುವಿಕೆ ಇಲ್ಲದಿರುವಿಕೆಯನ್ನು ಎದುರಿಟ್ಟು ಕಾಣುವ ಪ್ರತ್ಯಕ್ಚೇತನ!

ಯಃ ಏನಂ:– ಇಂಥ ಆತ್ಮನು ಕೊಲ್ಲುತ್ತಾನೆ, ಕೊಲೆಯಾಗುತ್ತಾನೆ ಎಂದು ತಿಳಿಯುವವರು ತಿಳಿಗೇಡಿಗಳು. ಗಡಿಗೆ ಒಡೆದಾಗ ಒಳಗಿರುವ ಆಕಾಶದ ಕೊಲೆಯಾಯಿತೆಂದು ಹೇಳುವದು ಅದಾವ ಜಾಣತನ? ದೇಹದಿಂದ ಕೊಲ್ಲುವ ಕಾರ್ಯ ನಡೆದಾಗ, ಅಥವಾ ದೇಹವಿದು ಕೊಲ್ಲಲ್ಪಟ್ಟಾಗ ಒಳಗಿರುವ ಪರಿಸೂಕ್ಷ್ಮ ಆತ್ಮನಿಗೆ ಅದರಿಂದ ಆಗುವ ಬಾಧೆ ಏನು? ಅಷ್ಟೇ ಅಲ್ಲ, ಕೊಲ್ಲುವ ಕೊಲ್ಲಿಸಿಕೊಳ್ಳುವ ಭಾವನೆಗಳು ಕೂಡ ಅವನಿಗೆ ಸಂಬಂಧಪಟ್ಟವುಗಳಲ್ಲ. ಅವು ಅಹಂಕಾರದ ತೆರೆಗಳು; ಮನಸ್ಸಿನ ಉದ್ರೇಕಗಳು.

ಅಹಂಕಾರ ತಲೆ ಎತ್ತಿ ಬಾಳಿರುವವರೆಗೆ ಮನೋಗತ ರಾಗದ್ವೇಷಾದಿ ತರಂಗಗಳ ಚಿನ್ನಾಟ. ವ್ಯಾಕರಣ ಶಾಸ್ತ್ರದಲ್ಲಿ ಮೊಟ್ಟಮೊದಲು ಅಹಂ ಕರ್ತೃವಿನ ಉದಯ; ಮರುಕ್ಷಣವೇ ಕರ್ಮ, ಕರಣ, ಸಂಪ್ರದಾನ, ಅಪಾದಾನ, ಸಂಬಂಧ, ಸ್ಥಾನ ಮತ್ತು ಸಂಬೋಧನ ವ್ಯವಹಾರಗಳು ಕಾಣಿಸಿಕೊಳ್ಳುವವು. ಈ ಸಪ್ತವಿಧ ಕಾರಕ ಬಳ್ಳಿಗೆ ಅಹಂಕಾರವೇ ತಾಯಿಬೇರು. ಜಗತ್ತಿನಲ್ಲಿ ರಚನೆಗೊಂಡ ಸರ್ವಶಾಸ್ತ್ರ, ವ್ಯವಹಾರ, ಧರ್ಮ, ನೀತಿ, ಜಾತಿಗಳಿಗೆಲ್ಲ ಅಧಿಷ್ಠಾನ ಶಕ್ತಿಯೇ ಈ ಅಹಂ. ಸುಖ ದುಃಖ, ಅರಿವು ಮರೆವು, ಲೋಭ ಮೋಹ, ನಲಿವು ಗೆಲವು ಅಹಂ ವೃಕ್ಷವನಾಶ್ರಯಿಸಿದ ಕಿರು ಪಲ್ಲವಗಳು.

ಈ ಅಹಂಕಾರದ ಸಂಸರ್ಗದಿಂದ ಆತ್ಮನಲ್ಲಿ ಆ ವಿವಿಧ ಭಾವನೆಗಳು ತೋರಿದವು; ಅಹಂಗತ ಕರ್ತೃತ್ವ ಭೋಕ್ತೃತ್ವಗಳು ಅವನ ಮೇಲೆ ಆರೋಪಿಸಲ್ಪಟ್ಟವು, ತಪ್ತ ಲೋಹದ ಮೇಲೆ ಕೊಡತೆಯಿಂದ ಬಡಿದಾಗ ಪೆಟ್ಟು ಅಗ್ನಿಗೆ ಬಿದ್ದಂತೆ ಕಂಡರೂ ಅದು ಅಗ್ನಿಗಲ್ಲ ಲೋಹಕ್ಕೆ. ಹಾಗೆ ಮನೋ ವಿಶಿಷ್ಟ ಆತ್ಮದ ಮೇಲೆ ಬೀಳುವ ಹಂತಾ, ಹತಃ ಮುಂತಾದ ಭಾವರೂಪ

ಆಘಾತಗಳು ಆತ್ಮನಿಗೆಂದು ಕಂಡರೂ ವಾಸ್ತವಿಕವಾಗಿ ಅವನಿಗಲ್ಲ ಅಹಂ-ಕಾರಯುಕ್ತ ಮನಸ್ಸಿಗೆ. ಅವಿವೇಕಿ ಮಾತ್ರ ಆತ್ಮನೇ ಆಘಾತಕ್ಕೆ ಒಳಗಾದ ಎಂದು ಭ್ರಮಿಸುತ್ತಾನೆ.

ಒಂದು ದೇಹ ಇನ್ನೊಂದು ದೇಹವನ್ನು ಕೊಂದಾಗ ಆತ್ಮನೇ ಕೊಂದ. ಆತ್ಮನೆ ಕೊಲ್ಲಲ್ಪಟ್ಟ ಎಂದು ತಿಳಿಯುವವರು ದೇಹಾತ್ಮವಾದಿ ಚಾರ್ವಾಕರು. ನಾನೇ ಕೊಂದೆ. ನಾನೇ ಸಾಯುವೆ ಎಂದು ಕಲ್ಪಿಸುವವರು ಅಹಂಕಾರಾತ್ಮವಾದಿ ಚಾರ್ವಾಕರು. ಇವರಿಬ್ಬರಿಗೆ ಬುದ್ಧಿ ಇಲ್ಲ. ಜಗತ್ತಿನಲ್ಲಿ ಇಂಥವರದೇ ಬಹುಮತ. ಇವರ ದೃಷ್ಟಿಯಲ್ಲಿ ಕಾಮತೃಪ್ತಿಯು ಆತ್ಮನಿಗಾಗಿ; ಕ್ರೋಧ ಲೋಭಗಳು ಆತ್ಮ ರಕ್ಷಣೆಗಾಗಿ! ಈ ಜನ ಆತ್ಮದೇವನ ಹೆಸರಿನಲ್ಲಿ ಯಾಗ ಯಜ್ಞ ನಡಿಸಿದರು; ಜಾತಿ ಪಂಗಡ ಕಟ್ಟಿದರು. ಮತ ಧರ್ಮಗಳನ್ನು ರಚಿಸಿದರು. ಸ್ವೇಚ್ಛೆಯಾಗಿ ಭೋಗ ವಿಲಾಸಗಳಲ್ಲಿ ನಿಮಗ್ನರಾದರು; ಪರಸ್ಪರರಲ್ಲಿ ದ್ವೇಷಾಗ್ನಿ ಹೊತ್ತಿಸಿದರು. ಇಂದಂತು ಧರ್ಮದ ಹೆಸರಿನಲ್ಲಿ ನಡೆಯುವ ದ್ರವ್ಯಶೋಷಣೆ ಕರಾಳ ರೂಪು ತಾಳಿದೆ. ಮನೆ, ಮಠ, ಪರಂಪರಾ, ವ್ಯಕ್ತಿ, ಭಾಷೆ, ಮತಗಳ ಅಂಧ ಅಭಿನಿವೇಶ ಕೂಡ ಧರ್ಮಕ್ಕಾಗಿಯೇ! ಜಾಗತಿಕ ಪಂಡಿತ ಪಾಮರರೆಲ್ಲ ಆತ್ಮಭಾವಿಗಳಲ್ಲ; ಅಹಂಕಾರ ಪ್ರಚೋದಿತ ಕಾಮದ ದಾಸರು! ಧಾರ್ಮಿಕರಲ್ಲ; ಅನ್ಯಾಯದ ಅನುಯಾಯಿಗಳು.

ಒಬ್ಬ ಸಿರಿವಂತ ಒಂದು ದಿನ ನಸುಕಿನಲ್ಲೆದ್ದು ಬಹಿರ್ದೆಸೆಗೆ ಹೋದ. ನೀರು ಮುಟ್ಟಿ ಎದ್ದು ನೋಡುತ್ತಾನೆ, ನೆಲ ರಕ್ತವರ್ಣ; ಕೈ ತಂಬಿಗೆ ಎಲ್ಲವೂ ಕೆಂಪು! ತನಗೇನೋ ರೋಗ ಬಂದಿದೆ; ಬರಿ ರಕ್ತ ಸುರಿದಿದೆ; ಎಂದು ಭಾವಿಸಿದ ಅವನು ಧೈರ್ಯ ಕಳೆದುಕೊಂಡು ಮೂರ್ಛೆಹೋದ. ಅನೇಕ ಉಪಚಾರದ ನಂತರ ಎಚ್ಚರಾದ. ಅವನ ಭೀತಿ ಭೂತಾಕಾರ ತಾಳಿತ್ತು. ಈ ಕ್ಷಣವೋ ಆ ಕ್ಷಣವೋ ಸಾಯುವ ಸ್ಥಿತಿಯಲ್ಲಿದ್ದ. ಅಷ್ಟರಲ್ಲಿ ಅವನ ಚಿಕ್ಕ ಮಗಳಿಂದ ಒಂದು ಸಂಗತಿ ತಿಳಿಯಿತು- ಅವನು ಒಯ್ದ ತಂಬಿಗೆಯಲ್ಲಿ ಆ ಮಗಳು ಕೆಂಪು ಬಣ್ಣ ಮಾಡಿಟ್ಟಿದ್ದಳು. ಕೂಡಲೆ ಸಿರಿವಂತ ನಕ್ಕ; ಭೀತಿ ಮಟ್ಟಮಾಯವಾಯಿತು. ಹಾಗೆ, ಮನುಷ್ಯನಿಗೆ ಆತ್ಮನಲ್ಲಿಲ್ಲದ ಈ ಅಹಂಕಾರ ರೋಗ ಅಂಟಿದೆ. ಅವನನ್ನು ಕೊಲ್ಲುತ್ತಿದೆ. ಜರಾ ಮೃತ್ಯು ಕಲ್ಪನೆ ಹುಟ್ಟಿಸಿ ಅಳಿಸುತ್ತಿದೆ. ಗುರು. ದೇವತಾ ಹಾಗು ವೇದಗಳ ಅನುಗ್ರಹದಿಂದ ಆತ್ಮನ ವಾಸ್ತವಿಕ ಸ್ವರೂಪ ತಿಳಿಯಿತೆಂದರೆ 'ಅಹಂಕಾರರೋಗ' ಅದೇ ಚಣ ಮಾಯ! ಅದರೊಂದಿಗೆ ತೋರಿದ 'ಹಂತಾ ಹತಃ' ಭಾವನೆಗಳು ಏನಪ್ಪ! ಆಗ ಆ ಪುರುಷನು ಉದ್ಗರಿಸುವ ಶಬ್ದಗಳಿವು:

"ನಾಹಂದೇಹೋ ಜನ್ಮಮರಣೌ ಕುತೋಮೇ। ನಾಹಂಪ್ರಾಣಃ ಕ್ಷುತ್ಪಿಪಾಸೇ ಕುತೋಮೇ॥
ನಾಹಂಚಿತ್ತಂ ಶೋಕಮೋಹೌ ಕುತೋಮೇ। ನಾಹಂಕರ್ತಾ ಬಂಧಮೋಕ್ಷೌ ಕುತೋಮೇ॥"

ದೇಹಕ್ಕೆ ಜನ್ಮ ಮರಣ; ಪ್ರಾಣಕ್ಕೆ ಕ್ಷುತ್ ಪಿಪಾಸೆ; ಚಿತ್ತಿಗೆ ಶೋಕ ಮೋಹ; ಕರ್ತನಿಗೆ ಬಂಧ ಮೋಕ್ಷ. ನಾನಂತು ದೇಹ, ಪ್ರಾಣ, ಚಿತ್ತು ಅಥವಾ ಕರ್ತನಲ್ಲ. ಇನ್ನು ನನಗೆಲ್ಲಿ ಆ ಜನ್ಮಾದಿಗಳು? ಹಂತಾ ಹತ ಭಾವ ಗಳು? ನಾನು ಸಾಕ್ಷಿ!!

ಭಗವಂತನು:- "ದೇಹಾದಿ ಅನಾತ್ಮ ಪದಾರ್ಥಗಳು ಮತ್ತು ಆತ್ಮನು ಕತ್ತಲೆ ಬೆಳಕಿನಷ್ಟು ಭಿನ್ನ ಎಂಬ ಸತ್ಯವನ್ನು ಮನಗಾಣು, ದೇಹ ಮನ ಬುದ್ಧಿಗಳು ಸದಾ ಒಂದಿಲ್ಲೊಂದು ಕಾರ್ಯದಲ್ಲಿ ರತವಾಗಿವೆ. ಕೊಲ್ಲುವದು, ಸಾಯುವದು ಅವುಗಳ ಕಕ್ಷೆಗೆ ಸೇರಿದ ಮಾತು. ಯಾರಲ್ಲಿ ಅವುಗಳ ಅಭಿ ಮಾನವಿದೆಯೋ ಅವರು ಶೋಕ ಪಡುತ್ತಾರೆ. ಅವರು ಅಜ್ಞರು.

"ನೀನು ಅಂಥವನಲ್ಲ; ಜಾಣ; ನನ್ನ ಮಾತಿನ ಮರ್ಮವನ್ನು ಗ್ರಹಿಸು. ನೀನು ಸರ್ವಾಂತರ್ಯಾಮಿ ಪರಮಾತ್ಮ! ನಿನ್ನ ಅಧಿಷ್ಠಾನದಲ್ಲಿ ಅಸಂಖ್ಯ ಕರ್ಮ ಗಳು ಸಾಗುತ್ತಿವೆ; ಅವುಗಳಿಗೂ ನಿನಗೂ ತಿಲಮಾತ್ರ ಸಂಬಂಧವಿಲ್ಲ. ನೀನು ನಿಷ್ಕ್ರಿಯ-ಸನ್ನಿಧಾನ ಕರ್ತೃ! ಸೂರ್ಯನಂಥ ಸಾಕ್ಷಿ ಪ್ರಕಾಶಕ!"

ಅರ್ಜುನ:- "ಕೃಷ್ಣ, ನಿನ್ನ ಮುಖದಿಂದ ಇಂಥ ಚೇತೋಹಾರಿ ತಾತ್ತ್ವಿಕ ನುಡಿಗಳನ್ನು ನಾನೆಂದಿಗೂ ಕೇಳಿರಲಿಲ್ಲ. ಇದೆಲ್ಲ ಹೊಸ ಸಂಗತಿ. ಬಹು ರಮ್ಯ. ಇನ್ನಷ್ಟು ಮತ್ತಷ್ಟು ಹೇಳು. ನಾನು ದೇಹವಲ್ಲವೆ? ನಾನು ಆತ್ಮನೋ? ಅವನು ಅಮರ ಎಂದೆಯಲ್ಲ? ಅದು ಹೇಗೆ?"

ನ ಜಾಯತೇ ಮ್ರಿಯತೇ ವಾ ಕದಾಚಿನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ॥

ಅರ್ಥ:- ಅಯಂ = ಈ ಆತ್ಮನು, ಕದಾಚಿತ್ = ಎಂದೂ, ನ ಜಾಯತೇ = ಹುಟ್ಟು ವದಿಲ್ಲ (ಜನ್ಮ ಭಾವ ವಿಕಾರ ಪ್ರತಿಷೇಧಃ); ನಮ್ರಿಯತೇ = ಸಾಯುವದಿಲ್ಲ (ವಿನಾಶ ಭಾವ ವಿಕಾರ ಪ್ರತಿಷೇಧಃ); ಭೂಯಃ ಭೂತ್ವಾ = ಮತ್ತೆ ಹುಟ್ಟಿ ಭವಿತಾ ನ = ಅಸ್ತಿತ್ವದಲ್ಲಿ ಬರು ವದಿಲ್ಲ (ಅಸ್ತಿ ಭಾವ ವಿಕಾರ ಪ್ರತಿಷೇಧಃ), ಅಯಂ = ಈತನು, ಅಜಃ = ಜನ್ಮ ರಹಿತನು; ನಿತ್ಯಃ = ನಿತ್ಯನು (ವೃದ್ಧಿ ಭಾವ ವಿಕಾರ ಪ್ರತಿಷೇಧಃ); ಶಾಶ್ವತಃ = ಶಾಶ್ವತನು (ಅಪಕ್ಷಯ ಭಾವ ವಿಕಾರ ಪ್ರತಿಷೇಧಃ); ಪುರಾಣಃ = ಸನಾತನನು (ವಿಪರಿಣಾಮ ಭಾವ ವಿಕಾರ ಪ್ರತಿ ಷೇಧಃ); ಶರೀರೇ ಹನ್ಯಮಾನೇ = ಶರೀರವು ನಾಶವಾಗುತ್ತಿದ್ದರೂ, ನ ಹನ್ಯತೇ = (ಆತ್ಮನು) ನಾಶವಾಗುವದಿಲ್ಲ.

ವಿವರಣೆ:- ಪರಮಾತ್ಮನು ತನ್ನ ಸನ್ನಿಧಾನ ಕರ್ತೃತ್ವ ಶಕ್ತಿಯಿಂದ ಈ ಕ್ಷಣಭಂಗುರವಾದ ದೇಹವನ್ನು ನಿರ್ಮಿಸಿದ; ಅದರ ಅಂತರಂಗದೊಳು ಪ್ರೇಮಸೌರಭ ಬೀರುವ ಭಾವ ಪುಷ್ಪವನ್ನು ಕರುಣಿಸಿದ. ಜೀವನು ಈ ಕುಸುಮವನ್ನು ದೇವ ಚರಣಕ್ಕರ್ಪಿಸಿ ಕೃತಾರ್ಥನಾಗಲಿ ಎಂಬುದೇ ಪರಮ ಕಾರುಣಿಕ ಪ್ರಭುವಿನ ಉದ್ದೇಶವಾಗಿತ್ತು.

ಜೀವ ಮರುಳ. ಭಾವ ಅಲರಿನ ಅಮೌಲ್ಯ ಬೆಲೆ ಅವನಿಗೆ ತಿಳಿಯ ಲಿಲ್ಲ. ಅದನ್ನೆತ್ತಿ ಮಡದಿ, ಮಕ್ಕಳು, ಧನ, ಕನಕ, ಪೀಠ, ಮಠ ಮುಂತಾದ ಕ್ಷುದ್ರ ವಿಷಯಗಳ ಪದತಲದಲ್ಲಿ ಚೆಲ್ಲಿದ. ಅಮೌಲ್ಯ ರತ್ನವನ್ನು ಕಸಬರಿಗೆ ಕೊಳ್ಳಲು ವ್ಯಯಿಸುವವನಂತೆ, ದೇವತ್ವ ಸಿದ್ಧಿಯನ್ನೇ ಅವಗತ ಮಾಡಿಕೊಡುವ ಈ ದಿವ್ಯ ಭಾವ ರತ್ನವನ್ನು ಜೀವನು ಮಾನ, ಕೀರ್ತಿಗಳಿಗಾಗಿ ವ್ಯಯಿಸಿದ.

ಲಕ್ಷಾಂತರ ವರುಷಗಳಿಂದ ಶರಾವತಿ ಭೋರ್ಗರೆದು ಹರಿದಿತ್ತು. ಜಗ ತ್ತನ್ನೇ ಬೆಳಗಬಲ್ಲ ಅಮಿತಶಕ್ತಿ ನಿರರ್ಥಕವಾಗಿ ಹರಿದು ಸಮುದ್ರ ಸೇರಿತು. ನೆರೆಹೊರೆಯ ಪ್ರದೇಶದ ಅಜ್ಞ ಜನ ಕತ್ತಲೆಯಲ್ಲೇ ಬದುಕಿದರು. ಈ ಶತ ಮಾನದ ಪೂರ್ವಭಾಗದಲ್ಲಿ ಒಬ್ಬ ಮಹಾನುಭಾವ ಬಂದ; ನೋಡಿದ; ಮರು ಗಿದ. ಅವನ ಕುಶಲ ಯೋಜನೆ ರೂಪುಗೊಂಡಿತು. ಆ ನದಿಯ ಅವ್ಯಕ್ತ ಸಾಮರ್ಥ್ಯ ತಂತಿ ತಂತಿಗಳಲ್ಲಿ ಹರಿದು ನಾಡನ್ನೆಲ್ಲ ಬೆಳಗಿತು. ಹಾಗೆ ಅಂತಸ್ಥ ಭಾವವಿಲ್ಲಿ ಶರಾವತಿ: ಅಗಣಿತ ಶಕ್ತಿಸಂಚಯದ ಭವ್ಯ ಪ್ರವಾಹ! ಅಜ್ಞ ಜೀವನಿಗೆ ಅದರ ಅರಿವಿಲ್ಲ; ತನ್ನ ಕಣ್ಣೆದುರೇ ಅದು ಹರಿದು ನುಗ್ಗಿ ಸಂಸಾರ ಸಾಗರ ಸೇರುತ್ತಿದೆ; ಮೋಹ, ಆಸಕ್ತಿ, ಉನ್ಮಾದಗಳ ರೂಪು ತಾಳುತ್ತಿದೆ. ಅದ ರತ್ತ ಅವನ ಗಮನವೆಲ್ಲಿದೆ? ತಾನು ಗಾಢ ಅಜ್ಞಾನಾಂಧಕಾರದಲ್ಲಿ ತೊಳಲು ತ್ತಿದ್ದಾನೆ. ಸುಖ ದುಃಖ ಶೋಕ ಸಂತಾಪಗಳ ಮಧ್ಯೆ ಸಿಕ್ಕು ಜರ್ಜರಿತನಾಗಿ ದ್ದಾನೆ. ಈಗ ಭಾವಪ್ರವಾಹಗತ ಅಮೂಲ್ಯ ಬಲವರಿತ ಶ್ರೀಗುರು ಮಹಾತ್ಮ ನೊಬ್ಬ ಬರಬೇಕು. ಸಮರ್ಥ ಯೋಜನೆ ರೂಪಿಸಿ ಆ ದೈವೀ ಬಲವನ್ನು ಹೊರಹೊಮ್ಮಿಸಬೇಕು; ಆಗ ಜೀವಿಯ ಅಂತರಂಗ ಒಮ್ಮೆಲೆ ಬೆಳಗುವದು; ಒಳಗಿದ್ದ ಮರೆವು, ಸಂಶಯ, ಆಸಕ್ತಿ, ಮೋಹಗಳು ವಿನಷ್ಟವಾಗುವವು. ಜೀವನು ಆತ್ಮದೇವನಲ್ಲಿ ಒಂದಾಗುವನು. •ಅದೇ ಜೀವನದ ಅಂತಿಮ ಸಿದ್ಧಿ! ಆತ್ಮಾನಾತ್ಮ ವಿವೇಚನೆಯು ಆ ಸಿದ್ಧಿಯ ಸಾಧನ. ಪ್ರಸ್ತುತ ಮಂತ್ರ ಅದ ಕ್ಕಾಗಿ ಮೀಸಲಾಗಿದೆ. ಹಾಳಾಗುವದು ದೇಹ; ಆತ್ಮನು ಷಡ್ಭಾವ ವಿಕಾರ ವಿರಹಿತ! ಎಂಬ ಪಾವನ ಉಪದೇಶವಿಲ್ಲಿದೆ:

(೧) **ವಿಕಾರಗಳು:–** ಇವು ಆರು: (ಅ) ಜಾಯತೇ (ಹುಟ್ಟುವಿಕೆ) ಬ) ಅಸ್ತಿತೇ (ಇರುವಿಕೆ) (ಕ) ವಿಪರಿಣಮತೇ (ಪರಿಣಮಿಸುವಿಕೆ) (ಡ) ವಿವ ರ್ಧತೇ (ವರ್ಧಿಸುವಿಕೆ) (ಇ) ವಿಪಕ್ಷೀಯತೇ (ಕ್ಷಯಿಸುವಿಕೆ) (ಫ) ವಿನಶ್ಯತೇ (ನಾಶವಾಗುವಿಕೆ). ಉದಾ: ದೇಹ ಹುಟ್ಟುತ್ತದೆ; ಮೊದಲಿಲ್ಲದ ಅದು ಅಸ್ತಿ ತ್ವಕ್ಕೆ ಬರುತ್ತದೆ; ಬಾಲ್ಯದಲ್ಲಿ ದಿನದಿನವೂ ಪರಿಣಾಮಗೊಳ್ಳುತ್ತದೆ; ಬೆಳೆದು ತಾರುಣ್ಯ ಪಡೆಯುತ್ತದೆ. ಆ ಬಳಿಕ ಮುಪ್ಪಿನಲ್ಲಿ ಕ್ಷಯವಾಗುತ್ತದೆ; ಕಡೆಗೆ ನಾಶವಾಗುತ್ತದೆ.

ವಿಶ್ವವೆಲ್ಲ ಹೀಗೆಯೇ ವಿಕಾರಶೀಲ. ಪೂರ್ವಕಾಲದ ಉಸುಬಿನ ಘಟಿ ಯಂತ್ರದಂತೆ ಪ್ರತಿಕ್ಷಣ ಒಂದು ಭಾಗದಲ್ಲಿ ಒಂದು ವಸ್ತು ಕಡಿಮೆಯಾಗುತ್ತಿದೆ, ಮತ್ತೊಂದು ಭಾಗದಲ್ಲಿ ಒಂದು ವಸ್ತು ನಿರ್ಮಾಣಗೊಳ್ಳುತ್ತಿದೆ. ದಿನವೂ ಲಕ್ಷಾಂತರ ಜೀವರು ಈ ಲೋಕ ಬಿಟ್ಟು ಸ್ವರ್ಗ ಹಾಗು ನರಕಗಳಿಗೆ ಹೋಗುತ್ತಾರೆ; ಅಸಂಖ್ಯ ಜೀವರು ಆ ಲೋಕ ಬಿಟ್ಟು ಮರ್ತ್ಯಕ್ಕೆ ಬರುತ್ತಾರೆ. ಸ್ವರ್ಗ ನರಕ ಮರ್ತ್ಯಗಳಲ್ಲಿ ಎಡೆಬಿಡದೆ ಚಕ್ರಾಕಾರವಾಗಿ ತಿರುಗುವ ಜೀವರ ಪಾಡು ದೇವರೇ ಬಲ್ಲ. ಒಂದರಲ್ಲಿಯೂ ಅವರ ವಾಸ ಸ್ಥಿರವಿಲ್ಲ. ಜೀವನು ಜಾಗ್ರ ಅವಸ್ಥೆಯಲ್ಲಿ ನಾಲ್ಕು ಕ್ಷಣ ನಿಲ್ಲುತ್ತಿರುವಂತೆಯೇ ಸ್ವಪ್ನ ಅವಸ್ಥೆಯಲ್ಲಿ ಪ್ರವೇಶಿಸುತ್ತಾನೆ; ಬಳಿಕ ಸುಷುಪ್ತಿಯತ್ತ ಧಾವಿಸುತ್ತಾನೆ; ಮತ್ತೆ ಜಾಗ್ರಕ್ಕೆ ಮರಳುತ್ತಾನೆ. ಜೀವನೊಬ್ಬ ಜಟಕಾದ ಕುದುರೆ. ಒಂದು ನಿಮಿಷದ ವಿಶ್ರಾಮವಿಲ್ಲ; ನಿಶ್ಚಿತವಾದ ಗೊತ್ತು ಗುರಿಯಿಲ್ಲ; ಹಗಲು ರಾತ್ರಿಗಳ ಪರಿವೆ ಇಲ್ಲ. ಇನ್ನು ಸುಖವೆಲ್ಲಿ?

ಜಗತ್ತು ಜೀವರು ಒಂದರ್ಧ ಕ್ಷಣವಾದರು ಸ್ಥಿರವಾಗಿರಬಾರದೆ? ಎವೆ ಇಕ್ಕಿ ತೆಗೆಯುವಷ್ಟರಲ್ಲಿ ಎಲ್ಲ ಬದಲು! ನಿನ್ನಿನ ಮಹಡಿ ಇಂದಿನ ಧರ್ಮಶಾಲೆ. ಇಂದಿನ ಮಿತ್ರ ನಾಳಿನ ವೈರಿ. ಒಂದು ಕ್ಷಣ ತೊಟ್ಟಿಲಲ್ಲಿ; ಮರುಕ್ಷಣ ಸ್ಮಶಾನದಲ್ಲಿ. ಮಿಂಚಿನ ಬಾಳು!

ಇಂಥ ನಶ್ವರ ಪ್ರಪಂಚದಲ್ಲಿ ಜೀವನಿಗೆ ಅದೆಷ್ಟು ಅಭಿಮಾನ! ಉಂಡು, ನೋಡಿ, ಮುಟ್ಟಿ ಬಿಟ್ಟ ವಸ್ತುವನ್ನೇ ನೂರು ಸಾವಿರ ಸಲ ಮತ್ತೆಮತ್ತೆ ಭೋಗಿಸಿದರೂ ತೃಪ್ತಿಯಿಲ್ಲ. ಅವಿಚ್ಛಿನ್ನ ಧೂಮ್ರಪಾನಿಯಂತೆ, ಜೀವನು ಅವಿಶ್ರಾಂತವಾಗಿ ವಿಷಯ ರಸ ಹೀರುತ್ತಿದ್ದಾನೆ. ಎಲುವು ಕಡೆಯುವ ನಾಯಿಗೆ ಮೃಷ್ಟಾನ್ನ ಹಿಡಿಸೀತೆ? ಕೊಳೆ ನೀರಲಾಡುವ ಬಕನಿಗೆ ಮಾನಸ ಸರದ ಸಿಹಿ ಜಲ ಸೇರೀತೆ? ಇಲ್ಲ. ಹಾಗೆ, ವಿಷಯ ಲೋಲನಾದ ಈ ಜೀವನಿಗೆ ಆತ್ಮಬೋಧಾಮೃತ ರುಚಿಸದು. ಬಾಲಕನು ಮಣ್ಣು ಬಿಡದಿದ್ದರೆ ಬೆಲ್ಲ ಸಿಗದು; ಸಿಕ್ಕರೂ ರುಚಿಯಾಗದು; ಬೆಲ್ಲ ದೊರೆಯದಿದ್ದರೆ ಮಣ್ಣು ಬಿಡಲಾರ. ಅದೇ ರೀತಿ, ಜೀವನು ಸಂಸಾರಾಸಕ್ತಿ ತೊರೆಯದಿದ್ದರೆ ಆತ್ಮಜ್ಞಾನ ಸುಧೆ ಸಿಗದು; ಸಿಕ್ಕರೂ ದಕ್ಕದು; ಆತ್ಮಜ್ಞಾನ ದೊರೆಯದಿದ್ದರೆ ಅವನು ಸಂಸಾರ ವ್ಯಾಮೋಹ ನೀಗಲಾರ. ಹಗ್ಗ ಹರಿಯದು. ಕೋಲು ಮುರಿಯದು ಎಂದಂತಾಗಿದೆ ಅವನ ಗತಿ.

(೨) ತೋರಿಕೆಗೆ ಜೀವನು ಮೋಹ ಸಾಗರದಲ್ಲಿ ಪೂರ್ತಿ ಮುಳುಗಿದಂತೆ ಕಂಡರೂ ಅವನ ಮೂಲಸ್ವರೂಪ ನಿರ್ಮಲ! ಆತ್ಮ ಚೇತನ! ಬಹಿಃಪ್ರಜ್ಞ, ಅಂತಃಪ್ರಜ್ಞ, ಉಭಯ ಪ್ರಜ್ಞನಲ್ಲದ ಕೇವಲಪ್ರಜ್ಞ. ಅವನು "ಏಕಾತ್ಮ ಪ್ರತ್ಯಯ ಸಾರ, ಪ್ರಪಂಚೋಪಶಮ, ಶಿವ ಹಾಗು ಚತುರ್ಥ." ಅವನನ್ನು ಭಗವಂತನು ಆರೇಳು ವಿಧ ಗುಣ ಲಕ್ಷಣಗಳಿಂದ ವರ್ಣಿಸಿದ್ದಾನೆ.

ಕ) ನ ಜಾಯತೇ : ಆತ್ಮನು ಅಮೂರ್ತ; ಸರ್ವ ಕಾರಣಗಳ ಅಂತಿಮ ಕಾರಣ. ಆದುದರಿಂದ ದೇಹಾದಿಗಳಂತೆ ಹುಟ್ಟುವದಿಲ್ಲ. ಅಂದರೆ ಜನ್ಮಭಾವ ವಿಕಾರರಹಿತ.

ಖ) ನ ಮ್ರಿಯತೇ: ಅಣುಗಳ ನಿಬಂಧನೆಯಿಂದ ರೂಪು ತಾಳಿದ ಪದಾರ್ಥ ಅಳಿಯುವದು; ಆತ್ಮ ಅಣುರಚಿತನಲ್ಲ; ಆಕಾಶದಂತೆ ವಿಶಾಲ; ವಿಸ್ತಾರ; ಅನಂತ! ಅಷ್ಟೇ ಏಕೆ, ಪರಿಸೂಕ್ಷ್ಮ ಮಹಾನ್ ಪ್ರಕೃತಿಗಿಂತಲೂ ಪರಿಸೂಕ್ಷ್ಮ. ಆದುದರಿಂದ ಅವನು ಎಂದಿಗೂ ಸಾಯುವದಿಲ್ಲ. ಅಂದರೆ ವಿನಾಶ- ವಿಕಾರರಹಿತ.

ಗ) ಭೂಯಃ ಭೂತ್ವಾ, ಭವಿತಾ ನ: ಒಂದು ಕಾಲದಲ್ಲಿ ಹುಟ್ಟಿ ಅಸ್ತಿತ್ವಕ್ಕೆ ಬರುವಂಥವನಲ್ಲ ಆತ್ಮ. ಅವನು ಮೊದಲಿರಲಿಲ್ಲವೆಂಬ ಮಾತೇ ಅರ್ಥಹೀನವೆಂದಾಗ ಜನಿಸುವದೆಲ್ಲಿ? ಬದುಕುವದೆಲ್ಲಿ? ಚಿರಂತನ ಸತ್ಯೆಯು ಅವನು ಅಸ್ತಿತೆ ವಿಕಾರ ವಿರಹಿತ.

ಘ) ಅಜಃ : ಪ್ರಕೃತಿಯ ಭೂರಿ ಗರ್ಭದಿಂದ ಒಡಮೂಡಿ ಬಂದ ದೇವ ದೇವತೆಗಳು, ಪಿಂಡಾಂಡ ಬ್ರಹ್ಮಾಂಡಗಳು, ಕಾಲ ಕರ್ಮಗಳು, ಸಾಕಾರ ನಿರಾಕಾರಗಳು. ಜೀವ ಈಶರು ಅಜರಲ್ಲ; ಅನಂತತೆಯ ವಿಭಿನ್ನ ಕೃತಿಗಳು; ಪ್ರಕೃತಿಯ ಕಲಾರಚನೆಗಳು. ಆತ್ಮನು ಪ್ರಕೃತಿವಿಲಕ್ಷಣ! ಕಾಲ ಪ್ರವಾಹದ ಪರಮಾಧಾರ. ಕಾಲ ಹುಟ್ಟುವ ಮುನ್ನ ಅವನ ಅಸ್ತಿತ್ವ. ಆದುದರಿಂದ ಅಜ.

ಙ) ನಿತ್ಯಃ : ಜಡ ವಸ್ತುವು ಸದಾ ಒಂದೇ ತೆರನಾಗಿರುವದಿಲ್ಲ. ಚಿಕ್ಕ ದಾಗಿದ್ದ ಅದು ಬೆಳೆಯುತ್ತ ಹೋಗುವದು. ಯಾವುದರಲ್ಲಿ ಈ ವಿವರ್ಧನೆ ಇದೆಯೋ ಅದು ಅನಿತ್ಯ. ಆತ್ಮನು ಏಕರೂಪ. ನಿತ್ಯ. ಅಂದರೆ ವಿವರ್ಧನ ವಿಕಾರ ರಹಿತ.

ಚ) ಶಾಶ್ವತಃ : ಪೂರ್ಣ ಬೆಳೆದು ನಿಂತ ದೇಹ ಕ್ಷಯವಾಗುವದು; ಹೊಚ್ಚ ಹೊಸದಾಗಿ ನಿರ್ಮಾಣವಾದ ಮಂದಿರ, ಮಠ, ಮಹಲುಗಳು ಕ್ಷಯಿ ಸುವವು. ಹಿಮಾಲಯದಂಥ ಮಹಾನ್ ಪರ್ವತಕೂಡ ದಿನದಿನವೂ ಕೊರೆದು ಹೋಗುತ್ತಿದೆ. ಆದರೆ ಆತ್ಮನು ನಿತ್ಯನೂತನ. ಶಾಶ್ವತ! ಅಂದರೆ ಕ್ಷಯ ವಿಕಾರ ವಿರಹಿತ.

ಥ) ಪುರಾಣಃ : ಮೊದಲು ಕಾಣದೆ ನಡುವೆ ತೋರುವ ವಸ್ತು ಹೊಸದು. ವಿಶ್ವ ಮೊದಲು ಇರಲಿಲ್ಲ. ಈಗ ತೋರಿದೆ. ಅದು ಹೊಸದು. ಆತ್ಮನಿಗೆ ಆದಿಯಿಲ್ಲ; ವಿಶ್ವವಿರದ ಮೊದಲೇ ಅವನಿದ್ದ. ಆದುದರಿಂದ ಪುರಾಣಃ ವಿಪರಿಣಾಮ ವಿಕಾರ ರಹಿತ.

ಇಂತು ಆತ್ಮನು ಷಡ್ಭಾವವಿಕಾರವಿಲ್ಲದವ. ಅವನಿಗೆ ವಿರುದ್ಧವಾಗಿ ದೇಹ ಸವಿಕಾರಿ. ಬಾಲತನದ ದೇಹ ಬಹು ಸುಂದರ. ತಾರುಣ್ಯದಲ್ಲಿ ಆ ಬಾಲ್ಯದ

ಸೌಂದರ್ಯ ಹೋಗಿ ಅಂಗ ಅಂಗಗಳಲ್ಲಿ ಶಕ್ತಿ ತುಂಬುವದು; ಆಗಿನ ಬುದ್ಧಿ ಹರಿತ; ಉತ್ಸಾಹ ಅದಮ್ಯ; ತಲೆಯಲ್ಲಿ ನೂರಾರು ಮಹತ್ವಾಕಾಂಕ್ಷೆಗಳು. ಕಾಲ ಸರಿದಂತೆ ದೇಹ ಗಲಿತ; ಕಣ್ಣು ಮಂದ; ಹಲ್ಲು ಶಿಥಿಲ; ಮೈತುಂಬ ನರೆ; ಶಕ್ತಿ ಮಾಯ; ಮಹತ್ವಾಕಾಂಕ್ಷೆಗಳು ಅಡಗುವವು. ದೇಹದಲ್ಲಿ ಅಭಿಮಾನ ತಾಳಿದ ಜೀವ ಚಿಂತೆಯಲ್ಲಿ ಬೇಯುವನು; ಮರಣದ ಭೀತಿಯಿಂದ ಕಂಗೆಡುವನು. ಬಾಲ್ಯವನ್ನೆಲ್ಲ ಕ್ರೀಡೆಯಲ್ಲಿ, ತಾರುಣ್ಯವನ್ನು ಕಾಮದಲ್ಲಿ ಕಳೆದ ಜೀವನೀಗ ಹಗಲು ರಾತ್ರಿ ಚಿಂತಿಸುವನು. ಅದಕ್ಕೆಲ್ಲ ಕಾರಣ ಅನಾತ್ಮ ಮೋಹ; ಆತ್ಮ ವಿಸ್ಮೃತಿ. ಅರ್ಜುನನು ತನ್ನ ಬಂಧು ಬಾಂಧವರಿಗಾಗಿ ಅಳುತ್ತಿದ್ದುದಕ್ಕೆ ಇದೇ ಕಾರಣ. ಆದುದರಿಂದಲೇ ಭಗವಂತನು ನುಡಿದ:

"ಅರ್ಜುನ, ದೇಹವೇ ಬೇರೆ, ಆತ್ಮನೇ ಬೇರೆ. ದೇಹ ನೂರು ವಿಕಾರಗಳಿಗೆ ತುತ್ತಾಗಿದೆ; ಆತ್ಮ ವಿಕಾರಗಳಿಂದ ಅಲಿಪ್ತ. ಜನ್ಮ ಮರಣಗಳಿಲ್ಲದ ನಿತ್ಯ ಅವಿನಾಶಿ ತತ್ತ್ವ! ನ ಹನ್ಯತೇ ಹನ್ಯಮಾನೇ ಶರೀರೇ- ಈ ಸಾಯುವ ದೇಹದಲ್ಲಿದ್ದರೂ ಅವನು ಸಾಯುವದಿಲ್ಲ, ಚಿಂತಿಸದಿರು, ಆ ಆತ್ಮ ಪ್ರಭುವಿನತ್ತ ಲಕ್ಷವಿಡು."

ಅರ್ಜುನ:- "ಕೃಷ್ಣ, ಅದೆಲ್ಲ ಸರಿ. ಈ ಯುದ್ಧ ರಂಗದಲ್ಲಿ ಲಕ್ಷಾಂತರ ಬಂಧು ಬಾಂಧವ ವೀರರು ಪರಸ್ಪರ ಕೊಲ್ಲುವದು ನನ್ನ ಕಣ್ಣೆದುರಿಗೇ ನಡೆಯುವಾಗ ಇದೆಲ್ಲ ಮಿಥ್ಯೆ ಎಂದು ಹೇಗೆ ನಂಬಲಿ? ನನ್ನ ಹರಿತ ಬಾಣಗಳಿಗೆ ಬಲಿಯಾಗಿ ಸಾವಿರಾರು ಜನ ಸತ್ತಾಗ ನಾನು ಕೊಂದಿಲ್ಲವೆಂದು ಅದು ಹೇಗೆ ತಿಳಿಯಲಿ?"

ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।
ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥೨೧॥

ಅರ್ಥ.- ಪಾರ್ಥ= (ಪೃಥೆಯ ಮಗನಾದ) ಅರ್ಜುನನೆ. ಯಃ= ಯಾವನು, ಏನಂ= ಈ ಆತ್ಮನನ್ನು, ಅವಿನಾಶಿನಂ= ನಾಶವಾಗದವನು, ನಿತ್ಯಂ= ಶಾಶ್ವತನು, ಅಜಂ= ಜನ್ಮ ರಹಿತನು, ಅವ್ಯಯಂ= ಕ್ಷಯ ರಹಿತನು, (ಎಂದು), ವೇದ= [ಶಾಸ್ತ್ರಾಚಾರ್ಯರಿಂದ] ತಿಳಿದಿರುವನೋ, ಸಃ ಪುರುಷಃ= ಆ ಪುರುಷನು, ಕಥಂ= ಹೇಗೆ, ಕಂ= ಯಾರನ್ನು, ಘಾತಯತಿ= ಕೊಲ್ಲಿಸುತ್ತಾನೆ? ಕಂ= ಯಾರನ್ನು ಹಂತಿ= ಕೊಲ್ಲುತ್ತಾನೆ?

ವಿವರಣೆ:- ಆತ್ಮನು ಎಂದಿಗೂ ನಾಶವಾಗುವದಿಲ್ಲ; ಯಾವಾಗಲೂ ಏಕರೂಪ; ಅವನಿಗೆ ಹುಟ್ಟು ಇಲ್ಲ; ಕ್ಷಯವಿಲ್ಲ! ಅವನ ಸುಭಗ ವರ್ಣನೆ ಮಹಾಶರಣೆ ಅಕ್ಕಮಹಾದೇವಿಯ ಒಂದು ವಚನದಲ್ಲಿ ಹೀಗಿದೆ:

"ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚಲುವಂಗಾನೊಲಿದೆನವ್ವಾ. ಎಡೆ ಇಲ್ಲದ, ಕಡೆ ಇಲ್ಲದ, ತೆರಹಿಲ್ಲದ, ಚಲುವಂಗಾನೊಲಿದೆ. ಎಲೆ ಅವ್ವಾ, ನೀನು ಕೇಳಾ ತಾಯೆ. ಭವವಿಲ್ಲದ ಭಯವಿಲ್ಲದ ನಿರ್ಭಯದ ಚಲುವಂಗಾನೊಲಿದೆ. ಕುಲಸೀಮೆ ಇಲ್ಲದ ನಿಸ್ಸೀಮ

ಚಲುವಂಗಾನೊಲಿದೆನವ್ವಾ. ಇದು ಕಾರಣ ಚೆನ್ನಮಲ್ಲಿಕಾರ್ಜುನ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು."

ಈ ಅನುಭವಪೂರ್ಣ ರೂಪಕ ವಚನದಲ್ಲಿ ಆತ್ಮನ ವಿವಿಧ ಮುಖ ವರ್ಣನೆಯನ್ನು ಕಾಣುತ್ತೇವೆ. ಅವನು ವಿಶ್ವಾಭಿರಾಮ, ನಿಸ್ಸೀಮ ನಿರಂಗ, ಅಭಯ ಅಭವ ಹಾಗು ಪರಿಪೂರ್ಣ.

ಪಾಪ, ಇಂಥ ವಿಮಲಾತ್ಮನೇ ತನ್ನ ರೂಹು ಎಂಬ ತಿಳಿವು ಜೀವನಿಗಿಲ್ಲ. ಅವನ ತಲೆ ತುಂಬ ಬರಿ ಅನಿತ್ಯ ಅಸ್ಥಿರ ಅಪವಿತ್ರವಾದ ಸ್ತ್ರೀಪುತ್ರಾದಿ ಸಾಂಸಾರಿಕ ವಿಷಯಗಳೇ ನೆಲೆಸಿವೆ. ಕಾಮ ಕ್ರೋಧಗಳಿಂದ ಅವನ ಅಂಗ ಕಾಯ್ದುಹೋಗಿದೆ. ಬುದ್ಧಿ ಸ್ಥಿಮಿತ ತಪ್ಪಿದೆ. ಸರಿ, ತಪ್ಪು ಕಾಣದಾಗಿವೆ. ರವೆ ಮಾತ್ರದ ಮಾತ್ರಾಸ್ಪರ್ಶ ಸುಖಕ್ಕಾಗಿ ದುಃಖದ ಭಯಾನಕ ಪ್ರಪಾತಕ್ಕೆ ತಲೆಯೊಡ್ಡಿದ್ದಾನೆ.

ಜೀವನು ಬಾಳ ಯಾತ್ರಿಕ. ಅಹಂಕಾರ, ಲೋಭ, ಮೋಹ, ಮಾತ್ಸರ್ಯಗಳು ನಾಲ್ದೆಸೆಯಿಂದ ನುಗ್ಗಿ ಅವನನ್ನು ಹರಿದು ತಿನ್ನಲಿಚ್ಛಿಸುತ್ತವೆ. ಕಿಂಕರ್ತವ್ಯ ಮೂಢನಾದ ಅವನು ತಳವಿಲ್ಲದ ಮೃತ್ಯು ಕೂಪದಲ್ಲಿ ತಲೆ ಕೆಳಗಾಗಿ ಹಾರುತ್ತಾನೆ. ಆದರೆ? ಕೆಳಗೊಂದು ಭಯಾನಕವಾದ ಕಾಮ ಸರ್ಪ, ಕಾಳಿಂಗ ನಾಗ! ಗಾಬರಿಯಾದ ಜೀವ ಕೈಚಾಚಿ ಆಯುಷ್ಯಬೇರು ಹಿಡಿದ. ದುರ್ದೈವ, ಆ ಬೇರಿನ ಮೇಲ್ಗಡೆ ದಿನ ರಾತ್ರಿ ಎಂಬೆರಡು ಇಲಿಗಳು ಆ ಬೇರನ್ನು ಕಟ್ ಕಟ್ ಕಡಿಯುತ್ತವೆ. ಅವನು ಹಿಡಿದ ರಭಸಕ್ಕೆ ಬೇರು ಅಲುಗಿತು. ಬೇರಿನ ಮೇಲ್ಭಾಗದಲ್ಲಿ ಇಂದ್ರಿಯ ಭೋಗಾಪೇಕ್ಷೆ ಜೇನ ಹುಟ್ಟು. ಕಷ್ಟ ಕೋಟಲೆಗಳೆಂಬ ಜೇನ್ನೊಣಗಳೆದ್ದು ಜೀವನನ್ನು ಮುತ್ತಿಕೊಂಡವು. ಇಂದ್ರಿಯ ಭೋಗದಿಂದ ಸುಖದ ಕೆಲ ಹನಿಗಳು ಕೆಳಗುರುಳಿ ಜೀವನ ತುದಿ ಮೂಗಿನ ಮೇಲೆ ಬಿದ್ದವು! ಎಲ್ಲ ಮರೆತು ಆ ಜೀವ ಆ ಎರಡು ಹನಿಗಳನ್ನು ನಾಲಿಗೆಯಿಂದ ನೆಕ್ಕುತ್ತಿದ್ದಾನೆ! ಎಂಥ ಉನ್ಮತ್ತ ಜೀವನೀತ!

ನಮ್ಮೆಲ್ಲರ ಬದುಕು ಇದೇ ರೀತಿಯದು. ಕೈಗೆ ಬಂದ ವಿಷಯ ಎಷ್ಟು ಕಾಲವಿದ್ದೀತು ಹೇಳಬರದು. ಮಾಯಾಜಾಲ! ಉದಮದದ ಯೌವನ ಅರೆ ನಿಮಿಷದ ಕನಸು. ಅದರ ಹಿಂದೆಯೇ ಯಾರಿಗೂ ಬೇಡಾದ ದಾರುಣ ಮುಪ್ಪು. ಭರ್ತೃಹರಿಯ ಒಂದು ವಚನ ನೋಡಿ; ಮುಪ್ಪಿನ ಚಿತ್ರಣ ಅಲ್ಲಿದೆ.

"ಗಾತ್ರಂ ಸಂಕುಚಿತಂ ಗತಿರ್ವಿಗಲಿತಾ ಭ್ರಷ್ಟಾ ಚ ದಂತಾವಲಿಃ ।
ದೃಷ್ಟಿರ್ನಶ್ಯತಿ ವರ್ಧತೇ ಬಧಿರತಾ ವಕ್ತ್ರಂ ಚ ಲಾಲಾಯತೇ ॥
ವಾಕ್ಯಂ ನಾದ್ರಿಯತೇ ಚ ಬಾಂಧವ ಜನೋ ಭಾರ್ಯಾ ನ ಶುಶ್ರೂಷತೇ ।
ಹಾ ಕಷ್ಟಂ ಪುರುಷಸ್ಯ ಜೀರ್ಣವಯಸಃ ಪುತ್ರೋಽಪ್ಯಮಿತ್ರಾಯತೇ ॥"

ದೇಹ ಮುದುಡಿತು; ನಡಿಗೆ ತಾಳ ತಪ್ಪಿತು; ದಂತ ಪಂಕ್ತಿ ಉದುರಿತು; ಅದೊ, ಕಣ್ಣು ಮಂದವಾಗುತ್ತಿದೆ; ಕಿವಿ ಕಿವುಡಾಗುತ್ತಿದೆ; ಮುಖದಿಂದ ಲಾಲಾ ರಸ ಸುರಿಯುತ್ತಿದೆ; ಬಂಧು ಬಾಂಧವರು ಮಾತಿನಲ್ಲಿಯೂ ಮಾನವನ್ನೀಯರು. ಹೆಂಡತಿ ಸೇವೆ ಮಾಡಳು. ಪುತ್ರ ಶತ್ರುವಾದ! ಎಂಥ ಕರಾಳ ಮುಪ್ಪಿದು!! ಹಾಲು ಕರೆವಾಗ ಪ್ರೀತಿಯಿಂದ ಹಸಿರು ಹುಲ್ಲ ಮೇಯಿಸಿ ಪೂಜಿಸಿದವರೇ ಮುಪ್ಪಿನ ಆಕಳನ್ನು ಎವೆ ಎತ್ತಿ ನೋಡರು. ತಿಂದುಳಿದ ಒಣ ನಾಲ್ಕು ದಂಟು ಹಾಕಿದರೆ ಅದೇ ಅದರ ಭಾಗ್ಯ! ಹಾಗೆ, ತಾರುಣ್ಯದಲ್ಲಿ ಸಾಕಷ್ಟು ಗಳಿಸಿ ತರು ವಾಗ ಮೆಚ್ಚಿ ಮೈದಡವಿದ ಹೆಂಡತಿ, ಪ್ರೀತಿಸಿದ ಮಕ್ಕಳು, ಪ್ರಶಂಸಿಸಿದ ಬಾಂಧವರು ಪರಾಂಬರಿಸರು. ತಾನು ಶಕ್ತಿಹೀನ - ವೃದ್ಧನಾದಾಗ, ತಿನ್ನಲು ತುತ್ತು ಅನ್ನಕ್ಕೂ ಕೊರತೆ. ಇದರ ಮುಂದಿನ ಸ್ಥಿತಿ ಅವಸಾನ; ಸ್ಮಶಾನ ವಾಸ!

ಅಹಂಕಾರ, ವ್ಯಾಮೋಹಗಳ ಕಟ್ಟು ಒಡೆದು, ಅನಿತ್ಯ ಅನಾತ್ಮ ಜಗತ್ತಿನ ಗಡಿ ದಾಟಿ, ನಿರ್ಮಲ ಆತ್ಮಾಕಾಶದಲಿ ಪ್ರವೇಶಿಸಿದ ಜ್ಞಾನಿಯ ಬದುಕು ತದ್ವಿ ರುದ್ಧ. ಜೀವನು ದುಃಖಿ; ಜ್ಞಾನಿಯು ಸದೈವ ಸಂತೋಷಿ. ಜೀವನು ಜನ್ಮ ಮರಣ ಚಕ್ರದಲ್ಲಿ ಸಿಲುಕಿದ ಗೊಂಬೆ; ಜ್ಞಾನಿಯು ಜನ್ಮ ಮರಣ ರಾಟಾಳ ನಿರೀಕ್ಷಿಸುವ ದ್ರಷ್ಟಾರ!

ಕಥಂ ಸಃ ಪುರುಷಃ ಕಂ ಘಾತಯತಿ, ಕಂ ಹಂತಿ? ಅಂಥ ದ್ರಷ್ಟಾರನು ಯಾವನನ್ನು ಕೊಲ್ಲಿಸುವದು? ಯಾವನನ್ನು ಕೊಲ್ಲುವದು? ಅದೆಲ್ಲ ಒರಿ ಭ್ರಮೆ! ಅರ್ಥವಿಲ್ಲದ ಗೇನಿಕೆ.

ಭಗವಂತ:- "ಅರ್ಜುನ, ನಿನ್ನ ಪ್ರಶ್ನೆ ಎಷ್ಟು ಬಾಲ ಬುದ್ಧಿಯದು ನೋಡು! ಕೊಲ್ಲುವ ಕೊಲ್ಲಿಸುವ ಭಾವಕ್ಕೆ ಆಶ್ರಯ ದೇಹ ಹಾಗು ಅಹಂ ಕಾರ. ಎರಡೂ ನೀನಲ್ಲ. ನೀನು ಎಂದಿಗೂ ಇಲ್ಲದಾಗವ ಅಮೃತಾತ್ಮ. ನಿನ್ನಲ್ಲಿ ನೀನು ನಿಲ್ಲು; ಆಗ ನೀನು ಯಾರನ್ನು ಕೊಲ್ಲಬಲ್ಲೆ? ಯಾರನ್ನು ಕೊಲ್ಲಿಸಬಲ್ಲೆ?"

ತಾನು, ಅನ್ಯ; ತನ್ನದು ಅನ್ಯರದು; ಈ ಭೇದಭಾವವುಳ್ಳ ದೇಹಾತ್ಮವಾದಿ ಜನರಲ್ಲಿ ಮಾತ್ರ ದ್ವೇಷ-ರೋಷ. ತನಗೆ ಬೇಡಾದ ಜನರನ್ನಾತ ಕೊಲ್ಲಲು ಇಚ್ಛಿಸುತ್ತಾನೆ. ತನ್ನಲ್ಲಿಲ್ಲದ ವಸ್ತು ಇನ್ನೊಬ್ಬರಲ್ಲಿದ್ದರೆ ಅದನ್ನು ದೋಚಲು ಎಂಥ ಕುಕೃತ್ಯಕ್ಕೂ ಹೇಸಲಾರ. ಬಹುಜನ ನೇತಾರರು ಇದೇ ವರ್ಗದವರು. ತಮ್ಮ ಮನೆ ಮಡದಿ ಮಕ್ಕಳಿಗಾಗಿ ದೇಶವನ್ನೇ ಕಬಳಿಸಲು ಇವರ ಹಂಚಿಕೆ. ಎಂತಲೇ, ಆ ಬಲಾಢ್ಯ ಅಧಿಕಾರ ಆಸನದಲ್ಲಿ ಕುಳಿತು ಸಿಕ್ಕಷ್ಟನ್ನು ಕದ್ದು ಕಿಸೆ ತುಂಬಿ ಕೊಳ್ಳುತ್ತಾರೆ; ಜನರ ಕಣ್ಣಲ್ಲಿ ಮಣ್ಣು ತೂರಿ ತಮ್ಮ ಹೊಟ್ಟೆ ಬೆಳೆಸಿಕೊಳ್ಳು ತ್ತಾರೆ. ಈ ನೇತಾರರೆಂದರೆ ಹಿತೈಷಿಯ ವೇಷದಲ್ಲಿ ಕೃಷ್ಣನನ್ನು ಕೊಲ್ಲ ಬಂದ ಪೂತನಿಯರು! ಅವರದು ತಾಯಿ ವೇಷ; ಬಡವರ ಬಗ್ಗೆ ಸಹಾನುಭೂತಿಪರ

ಮಾತು, ಹೃದಯ ಮಾತ್ರ ಹಾಲಾಹಲ. ಅವರ ಹೀನ ಕೃತ್ಯದ ಬಗ್ಗೆ ಬಸವಣ್ಣನವರು ಹೀಗೆ ಹೇಳಿದ್ದಾರೆ:

"ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ ಧರೆ ಹತ್ತಿ ಉರಿದಡೆ ನಿಲ್ಲಬಹುದೆ? ಏರಿ ನೀರುಂಬಡೆ, ಬೇಲಿ ಕೆಯ್ಯ ಮೆಯ್ವಡೆ, ನಾರಿ ತನ್ನ ಮನೆಯಲ್ಲಿ ಕಳವೊಡೆ, ತಾಯ ಮೊಲೆ ಹಾಲು ನಂಜಾಗಿ ಕೊಲುವಡೆ ಇನ್ನಾರಿಗೆ ದೂರುವೆ ಕೂಡಲ ಸಂಗಮದೇವಾ."

ನಮಗೆ ನಿಲ್ಲಲು ತಾಣವಾದ ಧರೆಯೇ ಉರಿದಾಗ ನೀರ ಹಿಡಿದಿಡಬೇಕಾದ ಏರಿ ನಿಂತ ನೀರನೆಲ್ಲ ಕುಡಿದಾಗ, ಬೆಳೆಯ ರಕ್ಷಿಸಬೇಕಾದ ಬೇಲಿ ಆ ಬೆಳೆಯನ್ನೇ ತಿಂದಾಗ, ಮನೆಯ ಯಜಮಾನಿಯಾದ ನಾರಿ ಆ ಮನೆಯಲ್ಲಿಯೇ ಕಳವು ಮಾಡಿದರೆ, ಅಮೃತಪ್ರಾಯ ತಾಯ ಮೊಲೆ ಹಾಲು ನಂಜಾಗಿ ಕೊಂದರೆ, ರಾಷ್ಟ್ರದ ಜನತೆಯನ್ನೆಲ್ಲ ಮಕ್ಕಳಂತೆ ಸಾಕಿ ಸಲುಹಿ ಅವರ ಸರ್ವಮುಖ ಏಳ್ಗೆ ಬಯಸಬೇಕಾದ ಮಹಾ ಜನರು, ಅಧಿಕಾರಿಗಳು ಆ ಜನರ ರಕ್ತವನ್ನೇ ಹೀರಲು ಪ್ರಾರಂಭಿಸಿದರೆ ಯಾರಿಗೆ ದೂರುವದು?

ಜಾಣ ವಿದ್ಯಾವಂತರೆಲ್ಲ ಒಂದಿಲ್ಲ ಒಂದು ರೀತಿಯ ಕೊಲೆಯಲ್ಲಿ ನಿರತರಾಗಿದ್ದಾರೆ. ವ್ಯಕ್ತಿ ವ್ಯಕ್ತಿ ಭೇದ, ಸಮಾಜ ಸಮಾಜ ಭೇದ, ಜಾತಿ ಜಾತಿ ಭೇದ, ಸಂಪ್ರದಾಯ ಭೇದ, ಧರ್ಮಭೇದಗಳ ಸೃಷ್ಟಿಸಿ ಅವುಗಳ ಮಧ್ಯೆ ರಣಾಂಗಣ ನಿರ್ಮಾಡಿಸುತ್ತಾರೆ; ಭಾವೈಕ್ಯ ಹಾಗು ಮಾನವತಾವಾದದ ನಿರ್ನಾಮ ಮಾಡುತ್ತಾರೆ. ಇವರು ಕೊಲೆಗಾರರು! ತಮ್ಮ ತಾವರಿಯದ ಮೂಢರು! ವಿಶ್ವವೆಲ್ಲ ದೇವನ ಸ್ವರೂಪ ಎಂಬ ವಿಚಾರವಿಲ್ಲದ ಅಪ್ರಾಜ್ಞರು! ಯಾರಿಗೆ ಆತ್ಮನ ತಿಳಿವಾಯಿತೋ, ಯಾರಿಗೆ ಪ್ರಾಪಂಚಿಕ ಭೇದರೂಪ ಮಂಜು ಕರಗಿ ದಿವ್ಯತೆಯ ದರ್ಶನ ಸಮನಿಸಿತೋ ಅವರು ಯಾರನ್ನೂ ಕೊಲ್ಲುವದಿಲ್ಲ, ಕೊಲ್ಲಿಸುವದಿಲ್ಲ! ಅವರಿಗೆ ಎಲ್ಲೆಲ್ಲೂ ಆತ್ಮದರ್ಶನ! ಯಾರನ್ನು ಕಂಡರೂ ಸಂತಸ! ಆ ಸ್ಥಿತಿ ಪಡೆಯಲು ಭಗವಂತನು ನಿರ್ದೇಶ ನೀಡುತ್ತಿದ್ದಾನೆ.

ಅರ್ಜುನ:- "ದೇವ, ಆತ್ಮನು ಸಾಯುವದಿಲ್ಲ; ಇದನ್ನು ಒಪ್ಪಿಕೊಳ್ಳುವೆ. ಈ ದೇಹ ಮಾತ್ರ ಹಾಗಲ್ಲವಲ್ಲ. ಆತ್ಮನಿಲಯವಾದ ಪವಿತ್ರ ದೇಹಗಳನ್ನು ಶಸ್ತ್ರ, ಅಸ್ತ್ರಗಳಿಂದ ತುಂಡರಿಸುವದು ನ್ಯಾಯ- ನೀತಿಯ ಕಣ್ಣಿನಲ್ಲಿ ತಪ್ಪಾಗುವದಿಲ್ಲವೆ? ನಾನು ಆತ್ಮಕ್ಕಾಗಿ ಶೋಕಿಸುವದಿಲ್ಲ, ಈ ದೇಹಗಳಿಗಾಗಿ ಶೋಕಿಸುವೆ."

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ।**
**ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥೨೨॥**

**ಅರ್ಥ:-** ಯಥಾ= ಹೇಗೆ, ನರಃ= ಮನುಷ್ಯನು ಜೀರ್ಣಾನಿ= ಹಳೆಯ ವಾಸಾಂಸಿ= ಬಟ್ಟೆಗಳನ್ನು ವಿಹಾಯ= ಬಿಟ್ಟು ಅಪರಾಣಿ= ಬೇರೆ ನವಾನಿ= ಹೊಸ (ವಸ್ತ್ರಗಳನ್ನು) ಗೃಹ್ಣಾತಿ= ಗ್ರಹಿಸುತ್ತಾನೆಯೋ, ತಥಾ= ಹಾಗೆ ದೇಹೀ= ದೇಹಧಾರಿ ಆತ್ಮನು ಜೀರ್ಣಾನಿ

ಶರೀರಾಣಿ= ನಶಿಸಿಹೋದ ದೇಹಗಳನ್ನು ವಿಹಾಯ= ಬಿಟ್ಟು ಅನ್ಯಾನಿ= ಬೇರೆ ನವಾನಿ= ಹೊಸ [ದೇಹಗಳನ್ನು] ಸಂಯಾತಿ= ಹೊಂದುತ್ತಾನೆ.

ವಿವರಣೆ:- ಶ್ರೀಕೃಷ್ಣ:- "ಅರ್ಜುನ. ಒಂದು ವ್ಯಾವಹಾರಿಕ ಉದಾಹರಣೆಯನ್ನೇ ತೆಗೆದುಕೊ. ಮನುಷ್ಯನು ಹರಿದು ಹೊಲಸಾದ ಬಟ್ಟೆ ಬಿಸಾಕಿ ಅಂದವಾದ ನವ ವಸ್ತ್ರ ತೊಟ್ಟುಕೊಳ್ಳುವದಿಲ್ಲವೆ? ಹಾಗೆ ಜೀವನು ಮುಪ್ಪಿನಿಂದ ಒಪ್ಪಗೆಟ್ಟ ವರ್ತಮಾನ ದೇಹ ತೊರೆದು ನಯನಾನಂದಕರ ನವ್ಯ ದೇಹ ಧರಿಸುತ್ತಾನೆ. ಹಳೆಯದು ಹೋಗಿ ಹೊಸದು ಸಿಗುವಾಗ ಹಳೆಯದಕ್ಕಾಗಿ ಅದಾವ ಜಾಣ ದುಃಖಿಸಬಹುದು?

"ನೀನಾದರೋ ಧೀರ; ಘೋರ ತಪಗೈದು ಶಿವನನ್ನೇ ಪ್ರತ್ಯಕ್ಷ ಕಂಡ ಮಹಾ ತಪಸ್ವಿ; ಶಾಸ್ತ್ರ ವಿಶಾರದ; ಲೋಕಾನುಭವಿ. ನೀನೇ ಹೇಳು, ಈ ಮಾಸಿದ ದೇಹಗಳು ಭೂಮಿಗುರುಳುವದನ್ನು ನೆನೆದು ದುಃಖಿಸುವದು ಸರಿಯೆ? ನಿನ್ನಂಥವನಿಗೆ ಹಳೆಯದರ ವ್ಯಾಮೋಹ ತರವೆ?"

ಹಳೆ ಮನೆಯಲ್ಲಿದ್ದು ಹೊಸ ಮನೆ ಕಟ್ಟುತ್ತಾನೆ; ಹೊಸದನ್ನು ಪ್ರವೇಶಿಸಲು ಹಳೆಯದನ್ನು ಬಿಟ್ಟು ಬಿಡುತ್ತಾನೆ. ಹಾಗೆ, ಜೀವನು ಈ ದೇಹದಲ್ಲಿದ್ದೇ ತನಗರಿಯದ ರೀತಿಯಲ್ಲಿ ಕರ್ಮಾನುಗುಣವಾಗಿ ಭಾವೀ ದೇಹ ನಿರ್ಮಿಸಿಕೊಳ್ಳುತ್ತಾನೆ; ಅದು ವಾಸಕ್ಕೆ ಸಿದ್ಧವಾದೊಡನೆ ಹಳೆಯ ದೇಹ ಬಿಟ್ಟುಕೊಡುತ್ತಾನೆ. ಇದನ್ನು ಬೆಂಬಲಿಸುವ ಬೃಹದಾರಣ್ಯಕ ವಚನ ಅವಲೋಕನೀಯ.

"ಯಥಾ ತೃಣ ಜಲಾಯುಕಾ ತೃಣಸ್ಯಾಂತಂ ಗತ್ವಾ ಅನ್ಯಂ ಆಕ್ರಮಂ ಆಕ್ರಮ್ಯ ಆತ್ಮಾನಮುಪಸಂಹರತಿ ಏವಮೇವ ಅಯಮಾತ್ಮಾ ಇದಂ ಶರೀರಂ ನಿಹತ್ಯ ಅವಿದ್ಯಾಂ ಗಮಯಿತ್ವಾ ಅನ್ಯಂ ಆಕ್ರಮಂ ಆಕ್ರಮ್ಯ ಆತ್ಮಾನಂ ಉಪಸಂಹರತಿ॥ ತದ್ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಮುಪಾದಾಯ ಅನ್ಯತ್ ನವತರಂ ಕಲ್ಯಾಣತರಂ ರೂಪಂ ತನುತೇ ಏವಮೇವ ಅಯಮಾತ್ಮಾ ಇದಂ ಶರೀರಂ ನಿಹತ್ಯ ಅವಿದ್ಯಾಂ ಗಮಯಿತ್ವಾ ಅನ್ಯತ್ ನವತರಂ ಕಲ್ಯಾಣತರಂ ರೂಪಂ ಕುರುತೇ" (೪-೪-೩.೪.)

ಹುಲ್ಲಿನ ಮೇಲಿರುವ ಕೀಡೆ ಹುಲ್ಲು ಕಡ್ಡಿಯ ಅಂತ್ಯ ಭಾಗಕ್ಕೆ ಹೋಗಿ, ಅಲ್ಲಿ ತನ್ನ ದೇಹದ ಅರ್ಧಭಾಗ ಇಟ್ಟು, ಮುಂದಿನ ಅರ್ಧಭಾಗದಿಂದ ಮತ್ತೊಂದು ಕಡ್ಡಿಯನ್ನು ಆಕ್ರಮಿಸುತ್ತದೆ. ಮುಂದಿನ ಆಧಾರ ಗಟ್ಟಿಯಾದ ಬಳಿಕ ತನ್ನ ಹಿಂದಿನ ಭಾಗವನ್ನು ಎಳೆದುಕೊಳ್ಳುತ್ತದೆ. ಅದರಂತೆ, ಜೀವಾತ್ಮನು ವರ್ತಮಾನ ದೇಹ ಬಿಡುವಾಗ ಅಜ್ಞಾತವಾಗಿ ಎರಡನೆಯ ದೇಹದ ಆಶ್ರಯ ಪಡೆದು, ಪೂರ್ವ ದೇಹದಿಂದ ಬಿಡುಗಡೆ ಹೊಂದುತ್ತಾನೆ. ಎರಡನೆಯದಾಗಿ, ಚಿತ್ರಕಾರನು ಬಣ್ಣ, ಕುಂಚ ಇತ್ಯಾದಿ ಸಾಮಗ್ರಿಗಳನ್ನು ತೆಗೆದುಕೊಂಡು ಹೊಸ ಚಿತ್ರ ಬರೆಯುವಂತೆ, ಆತ್ಮನು ತನ್ನ ಮನ, ಸ್ಮೃತಿ, ಬುದ್ಧಿ, ಅಹಂ ಗಳನ್ನು ಎತ್ತಿಕೊಂಡು ಹೊಸ ದೇಹ ಪ್ರವೇಶಿಸುತ್ತಾನೆ. ಋಷಿಗಳ ಅನುಭವದ ನುಡಿಯಿದು. ದೇಹಗಳು ಕಾಲ

ದೀದ ಕ್ಷಯವಾಗುತ್ತವೆ; ಅದೇ ರೀತಿ ಶಸ್ತ್ರಗಳಿಂದಲೂ ಬಾಧೆಗೊಳ್ಳುತ್ತವೆ. ಆತ್ಮನು ಮಾತ್ರ ನಿರ್ಲಿಪ್ತ. ಮುಂದಿನ ಮಂತ್ರದಲ್ಲಿ ಈ ಸಂಗತಿ ವಿವೃತವಾಗಿದೆ.

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ ೨೩॥

ಅರ್ಥ:- ಶಸ್ತ್ರಾಣಿ = ಶಸ್ತ್ರಗಳು ಏನಂ = ಈ ಆತ್ಮನನ್ನು ನ ಛಿಂದಂತಿ = ಛೇದಿಸಲಾರವು. ಪಾವಕಃ = ಅಗ್ನಿಯು, ನ ದಹತಿ = ಸುಡಲಾರದು. ಆಪಃ = ನೀರು ನ ಕ್ಲೇದಯಂತಿ = ನೆನೆಸದು. ಚ = ಮತ್ತು, ಮಾರುತಃ = ಗಾಳಿಯು, ನ ಶೋಷಯತಿ = ಒಣಗಿಸದು.

ವಿವರಣೆ:- ತಾತ್ತ್ವಿಕ ವಿಶ್ವದಲ್ಲಿ ವಸ್ತುಗಳು ನಾಲ್ಕಾಗಿವೆ:

ಅ) ಮನ, ಇಂದ್ರಿಯ, ಪ್ರಾಣಗಳಿಂದ ಕೂಡಿದ ವ್ಯಷ್ಟಿ ದೇಹ.

ಬ) ಭೂಮ್ಯಾದಿ ಬ್ರಿಂದ್ವಂತ ಸರ್ವ ಬೃಹದ್ ಪದಾರ್ಥಗಳಿಂದ ಕೂಡಿದ ಸಮಷ್ಟಿ ದೇಹ.

ಕ) ವ್ಯಷ್ಟಿ ದೇಹಾಭಿಮಾನಿ ಜೀವಾತ್ಮ. ತ್ವಂ ಪದದ ವಾಚ್ಯ.

ಡ) ಸಮಷ್ಟಿ ದೇಹಾಭಿಮಾನಿ ಈಶ. ತತ್ ಪದದ ವಾಚ್ಯ.

ವ್ಯಷ್ಟಿ ಮತ್ತು ಸಮಷ್ಟಿ ದೇಹಗಳೆರಡೂ ಕಾಲಮಿತ ಹಾಗು ಶಸ್ತ್ರಛೇದ್ಯ. ಜೀವನು ದೇಹದ ಅಭಿಮಾನಿಯಾದುದರಿಂದ ಅವನಿಗೆ ಕಾಲದ ಮತ್ತು ಶಸ್ತ್ರಾಸ್ತ್ರಗಳ ಭೀತಿ ಇದೆ. ಜನ್ಮ ಮರಣಗಳು, ಸುಖ ದುಃಖಗಳು ಅವನನ್ನು ಸದೈವ ಬಾಧಿಸುತ್ತಿವೆ. ಸ್ವತಃ ತಾನು ಸಾಯದಿದ್ದರೂ ಜೀವ ಸಾವಿನ ಭಾವಕ್ಕೆ ಒಳಗಾಗಿದ್ದಾನೆ.

ಈ ನಾಲ್ಕು ವಸ್ತುಗಳಿಗೆ ವಿಲಕ್ಷಣವಾದ ಮಹಾನ್ ಸತ್ಯವೇ ದೇವ. ಅವನು ಮೂರು ದೇಹ, ಮೂರು ಅವಸ್ಥೆ, ಮೂರು ಭಾವದ ಜೀವರಿಗೆ ಸಾಕ್ಷಿ ಚೇತನನಾದುದರಿಂದ ಅವನಿಗೆ ಪ್ರತ್ಯಗಾತ್ಮನೆಂಬ ಅಭಿಧಾನ; ತ್ವಂ ಪದದ ಲಕ್ಷ್ಯ. ಆ ದೇವನು ಮೂರು ಲೋಕ, ಮೂವಿಧ ಕ್ರಿಯೆ ಹಾಗು ಮೂವಿಧ ಗುಣ ಯುಕ್ತ ಈಶ ಮೂರ್ತಿಗಳಿಗೆ ಮಹಾನ್ ಸಾಕ್ಷಿಯಾದುದರಿಂದ ಅವನಿಗೆ ಪರಮಾತ್ಮನೆಂದು ಅಭಿಧಾನ; ತತ್ ಪದದ ಲಕ್ಷ್ಯ. ಪ್ರತ್ಯಗಾತ್ಮ ಪರಮಾತ್ಮರಿಬ್ಬರೂ ಅಭಿನ್ನರು. ಪ್ರತ್ಯಗಾತ್ಮಾಭಿನ್ನ ಪರಮಾತ್ಮನನ್ನು ನಿರ್ದೇಶಿಸುವ ಶಬ್ದ "ಏನಂ". ಅಂಥ ದೇವನಿಗೆ ಉಪಾಧಿ ಸಂಗವಿಲ್ಲವಾಗಿ ಅವಿಕಾರಿ. ಅವನು ಬರಿ ಬೆಳಕು! ಬರಿ ಶಾಂತಿ! ಬರಿ ಚೇತನ!!

ಆ ಪ್ರತ್ಯಗಾತ್ಮ ದೇವನ ಅಸ್ತಿತ್ವದ ಆಶ್ರಯದಲ್ಲಿಯೇ ದೇಹ ಹುಟ್ಟಿ ಅಳಿಯುವದು; ಮನಸ್ಸು ಲೋಕ ಲೋಕಾಂತರಗಳಿಗೆ ಪ್ರಯಾಣ ಮಾಡುವದು; ಅಹಂಕಾರ ಲಕ್ಷಾಂತರ ಕೋಟ್ಯಂತರ ದೇಹಗಳಲ್ಲಿ ಅಭಿಮಾನ ತಾಳುವದು; ಚಿತ್ತು ಆ ಎಲ್ಲ ದೇಹಕೃತ ಕಾರ್ಯ-ಸಂಸ್ಕಾರಗಳನ್ನು ಸೇಖರಿಸುವದು! ವಿಶ್ವ ಚಕ್ರದ ಮೂಲ ಬಿಂದುವು ಆ ದೇವ!

೧) ಶಸ್ತ್ರಾಣಿ ನ ಛಿಂದಂತಿ ಏನಂ :- ಇಂಥ ಸರ್ವ ಸಾಕ್ಷಿಕ ಆತ್ಮ-ನನ್ನು ಶಸ್ತ್ರಗಳು ಛೇದಿಸಲಾರವು. 'ಅಸ್ಥೂಲತ್ವಾತ್' ಆತ್ಮನು ಅಸ್ಥೂಲನಾದುದರಿಂದ. ಅವಯವ ಹಾಗು ಗುಣಯುಕ್ತವಾದ ಪದಾರ್ಥಗಳು ಸ್ಥೂಲ. ಉದಾ : ದೇಹಾದಿ. ಅವುಗಳನ್ನು ಕಡಿದು ಹಾಕುವ ಬಲ ಶಸ್ತ್ರಗಳಿಗಿದೆ. ಆತ್ಮನು ಇಂದ್ರಿಯಾತೀತ; ನಿರವಯುವ, ನಿರ್ಗುಣನಾಗಿ ಶಸ್ತ್ರಛೇದ್ಯನಲ್ಲ.

'ಅಶ್ವತ್ಥಾಮನು ಸತ್ತ' ಎಂಬ ಸುದ್ದಿ ಆಲಿಸಿ, ಪುತ್ರವತ್ಸಲನಾದ ದ್ರೋಣನು ದೇಹ ತ್ಯಜಿಸಿ ಸ್ವರ್ಗಕ್ಕೆ ಹೋದ. ಅಲ್ಲಿ ಅಶ್ವತ್ಥಾಮನನ್ನು ಕಾಣದೆ ಮತ್ತೆ ತನ್ನ ಮಾನವೀ ದೇಹದತ್ತ ಬಂದ. ಅಷ್ಟರಲ್ಲಿ ಶ್ರೀಕೃಷ್ಣನು ಅವನ ದೇಹವನ್ನು ತುಂಡರಿಸಿದ್ದ. ಆಚಾರ್ಯ ದ್ರೋಣನು ನಾಯಿಯ ದೇಹದಲ್ಲಿ ಹೊಕ್ಕು ದೇಹದ ತುಂಡುಗಳನ್ನು ಕೂಡಿಸಲು ಯತ್ನಿಸಿದ. ಈ ಘಟನೆ ಅರ್ಥವತ್ತಾಗಿದೆ. ಶ್ರೀಕೃಷ್ಣನು ಆಚಾರ್ಯರ ಆತ್ಮನನ್ನು ಛೇದಿಸಲಿಲ್ಲ. ಹಾಗೆ ಮಾಡಿದ್ದರೆ ದೇಹದೊಂದಿಗೆ ಆಚಾರ್ಯರು ಕೊನೆಗೊಳ್ಳುತ್ತಿದ್ದರು. ಆತ್ಮನನ್ನು ಛೇದಿಸುವ ಸಾಮರ್ಥ್ಯ ಕೇವಲ ದಾನವ ಮಾನವರಿಗಷ್ಟೇ ಅಲ್ಲ ಬ್ರಹ್ಮಾದಿಗಳಿಗೂ ಇಲ್ಲ. ಆತ್ಮನು ಶಸ್ತ್ರಗಳ ಅಂತರ್ಯದಲ್ಲಿ ನಿಸ್ಸಂಗವಾಗಿ ನೆಲೆಸಿರುವ ಅಮರ ಸತ್ಯ!

೨) ನ ದಹತಿ ಪಾವಕಃ :- ಅಣುವಿನಿಂದಾದ ಪದಾರ್ಥ ಅಗ್ನಿಗೆ ಆಹುತಿ. ಉದಾ : ಕಟ್ಟಿಗೆ, ದೇಹ ಅಣು ಘಟಿತ. ಇವುಗಳನ್ನು ಅಗ್ನಿ ದಹಿಸದೆ ಬಿಡದು. ಆತ್ಮ ಮೂರ್ತ ರೂಪನಲ್ಲ. ಅಖಂಡ; ಸೂಕ್ಷ್ಮಾತಿ ಸೂಕ್ಷ್ಮ. 'ಅನಣುತ್ವಾತ್' ಆಕಾಶದಂತೆ ಅನಣುವಾದುದರಿಂದ ಅಗ್ನಿಯು ಅವನನ್ನು ಬಾಧಿಸದು. ಅವನು ಅಗ್ನಿಯ ಅಂತರ್ಜ್ಯೋತಿ!

೩) ನ ಕ್ಲೇದಯಂತಿ ಆಪಃ :- ಸ್ಪರ್ಶಯೋಗ್ಯ ಪದಾರ್ಥಗಳ ಮೇಲೆ ನೀರಿನ ಅಧಿಕಾರ. ಈ ಕರವಸ್ತ್ರ ಸ್ಪರ್ಶ್ಯ. ಇದನ್ನು ನೀರು ತೋಯಿಸಬಲ್ಲದು. ಈ ಉಪ್ಪಿನ ಹರಳು ಸ್ಪರ್ಶ್ಯ. ಇದನ್ನು ನೀರು ಕರಗಿಸಬಲ್ಲದು. ಆತ್ಮನು 'ಅಸ್ಪರ್ಶತ್ವಾತ್' ಅಸ್ಪರ್ಶನಾದುದರಿಂದ ಅವನನ್ನು ನೀರು ನೆನೆಸದು. ಅವನು ನೀರಿನ ಅಂತಃಸತ್ವ! ನೀರು. ದ್ರವತ್ವ, ಶೀತಲತೆ ಎಲ್ಲವನ್ನು ಪ್ರಕಾಶಿಸುವ ಅಧಿಷ್ಠಾನ! ಅಚ್ಯುತ ದೀಪ!

೪) ನ ಶೋಷಯತಿ ಮಾರುತಃ :- ಹಸಿಯಾದ ವಸ್ತುವನ್ನು ಒಣಗಿಸುವದು ಗಾಳಿ. ಉದಾ : ರಾಡಿ. ಗಾಳಿ ಅಲ್ಲಿರುವ ಜಲಾಂಶ ಹೀರಿ ಮಣ್ಣನ್ನು ಹುಡಿಗೊಳಿಸುವದು. ಪುಷ್ಟವಾಗಿ ಬೆಳೆದ ದೇಹ ಗಾಳಿಯ ಹೊಡೆತಕ್ಕೆ ಸಿಕ್ಕರೆ ಒಣಗಿಬಿಡುವದು. ಆಕಾಶದಂತೆ ಆತ್ಮನು 'ಅಸ್ನೇಹಃ' ದ್ರವಹೀನ 'ಅಸ್ನೇಹತ್ವಾತ್' ಜಲಾಂಶವಿಲ್ಲವಾಗಿ ಗಾಳಿಯ ಆಟ ಅವನ ಮೇಲಾಗದು. ಅವನು ಗಾಳಿಗಿಂತ ಸೂಕ್ಷ್ಮ, ವಿಸ್ತಾರ ಹಾಗು ಹಗುರು. ಅವನು ಗಾಳಿಯ ಆತ್ಮ!

೫) ಕೊನೆಯದಾಗಿ, ಆಕಾಶ ಅವನನ್ನು ತನ್ನ ಅವಕಾಶದಲ್ಲಿ ಬಂಧಿಸ ಲಾರದು. 'ಅಜಡತ್ವಾತ್' ಯಾಕಂದರೆ ಆತ್ಮನು ಅಜಡ; ಆಕಾಶ ಜಡ. ಆತ್ಮನು ಚಿದಖಂಡ ಆಕಾಶವು ಪ್ರಕೃತಿವಿಕಾರ!

ಯಾರ ಮನಸ್ಸು ಆತ್ಮನತ್ತ ಮುಖ ಮಾಡಿದೆಯೋ ಅವರು ನಿರ್ಭೀ ತರು! ನಿಶ್ಚಿಂತರು! ಕೋಯನಾ ಭೂಕಂಪದಂಥ ಸಾವಿರಾರು ಭೂಕಂಪನಗಳಾ ದರೂ ಅವರು ಸುಸ್ಥಿರ! ಭೀಕರ ಬರಗಾಲ, ವಿಚಿತ್ರ ರೋಗ, ಸಾಗರದ ಆರ್ಭಟ ಯಾವುದೂ ಅವರನ್ನು ಅಲುಗಿಸದು. ಬಡತನ ಸಿರಿವಂತಿಕೆ, ಮಾನ ಅಪಮಾನ ಏನೇ ಬರಲಿ ಅವರು ಸದೈವ ಹಸನ್ಮುಖಿ! ಸಾಕ್ಷಿಭಾವಿ! ಅರ್ಜುನ ನನ್ನು ಅಂಥ ನಿರ್ಭಯ ಸ್ಥಾನದಲ್ಲಿ ನಿಲ್ಲಿಸಬೇಕೆನ್ನುವದು ಭಗವಂತನ ಬಯಕೆ. ಮುಂದಿನ ಮಂತ್ರಗಳೂ ಆತ್ಮನ ಅಚ್ಛೇದ್ಯತೆಯನ್ನು ವರ್ಣಿಸಿವೆ.

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಸ್ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥೨೪॥**

**ಅರ್ಥ:**- ಅಯಂ = ಈ ಆತ್ಮನು, ಅಚ್ಛೇದ್ಯಃ = ಛೇದವಾಗದವ, ಅದಾಹ್ಯಃ = ಸುಡ ದವ, ಅಕ್ಲೇದ್ಯಃ = ನೆನೆಯದವ, ಅಶೋಷ್ಯಃ ಏವ = ಒಣಗದವ, ಅಯಂ = ಈ ಆತ್ಮನು, ನಿತ್ಯಃ = ನಿತ್ಯ, ಸರ್ವಗತಃ = ಸರ್ವ ವ್ಯಾಪಿ, ಸ್ಥಾಣುಃ = ಸ್ಥಿರ, ಅಚಲಃ = ಅಚಲ, ಸನಾ ತನಃ = ಮತ್ತು ಸನಾತನನು.

**ವಿವರಣೆ:**- ಜಡ ದೇಹಕ್ಕಿಂತ ಭಿನ್ನವಾದ ಅಮರ ಆತ್ಮನ ತಾತ್ವಿಕ ಸ್ವರೂಪ - ಕಥನ ಮುಂದುವರೆದಿದೆ. ಈ ಮಂತ್ರದಲ್ಲಿ ಅವನ ಒಂಭತ್ತು ಲಕ್ಷಣಗಳನ್ನು ಚಿತ್ರಿಸಲಾಗಿದೆ.

೧) ಅಚ್ಛೇದ್ಯಃ :- ಭಯಾನಕ ಮಾರಕಾಸ್ತ್ರಗಳು ಇಂದು ನಿರ್ಮಾಣ ವಾಗಿವೆ. ಅವುಗಳ ರಾಕ್ಷಸೀ ಶಕ್ತಿಗೆ ಭೂಮಿ ಬಿರಿಯುವದು, ಸಾಗರ ಉಕ್ಕಿ ಹರಿವುದು, ಅಗ್ನಿ ವಿಕಾರ ರೂಪ ತಾಳಿ ಸಾವಿರಾರು ಮೈಲು ಪ್ರದೇಶವನ್ನು ದಹಿಸುವದು, ವಾಯುವು ದಿಕ್ಕುಗಾಣದೆ ಉನ್ಮತ್ತವಾಗಿ ಬೀಸುವುದು! ಏಕೆಂ ದರೆ ಇವೆಲ್ಲ ಸಾವಯವ, ಆತ್ಮನು ನಿರವಯವನಾದುದರಿಂದ ಮಾರಕಾಸ್ತ್ರಗಳು ಅವನಲ್ಲಿ ಪ್ರಶಾಂತ!

೨) ಅದಾಹ್ಯಃ :- ಚಿಕ್ಕದಾಗಿ ಹತ್ತಿಕೊಂಡ ಅಗ್ನಿ ಮಹಾರಣ್ಯವನ್ನೇ ಧ್ವಂಸಗೊಳಿಸುವದು. ಭೂಗರ್ಭದಿಂದ ಹೊರಚಿಮ್ಮಿ ಹರಿದು ಬಂದ ವಡ ವಾಗ್ನಿ ಕಲ್ಲು ಮಣ್ಣುಗಳನ್ನೂ ದಹಿಸುವದು; ಸಮುದ್ರದ ನೀರನ್ನೆಲ್ಲ ಆವಿ ಗೊಳಿಸುವದು. ಆತ್ಮನು ಅಗ್ನಿಯ ಪ್ರಾಣ; ಅವನ ಸಾನಿಧ್ಯದಲ್ಲಿ ಅಗ್ನಿ ಮೌನ!

೩) ಅಕ್ಲೇದ್ಯಃ :- ಜಲ ಭೂಮಂಡಲವನ್ನೇ ಆವರಿಸಿ ಜೀವಜಂತು ಗಳನ್ನು ಲಯಗೊಳಿಸಬಲ್ಲದು; ದಿಕ್ಕು ದಿಶೆಗಳ ವ್ಯಾಪಿಸಿ ಭಯಂಕರ ಪರಿಸರ

ನಿರ್ಮಿಸಬಲ್ಲದು. ಆದರೆ ಆತ್ಮನ ವಿಸ್ತಾರದಲ್ಲಿ ಅದೊಂದು ಚಿಕ್ಕ ಬಿಂದು ಮಾತ್ರ! ಅವನಿಗದು ಅಂಟದು, ನೆನೆಸದು, ಅವನು ಅಕ್ಲೇದ್ಯ.

೪) ಅಶೋಷ್ಯಃ :– ಮಹಾ ಮಹಾ ಸಾಗರಗಳನ್ನೇ ಹೀರಿ ಭೂಮಂಡಲವನ್ನು ಧೂಳಿ ಧೂಸರ ಮಾಡಬಲ್ಲ, ಜಲ ಅಗ್ನಿಗಳೊಂದಿಗೆ ಲೀಲಾಜಾಲವಾಗಿ ಆಟವಾಡುವ ವಾಯು ಆತ್ಮನ ಪದತಲದಲ್ಲಿ ನತ ಮಸ್ತಕ! ಅವನು ಅಶೋಷ್ಯ.

ನಾವು ಆಚರಿಸುವ ಕರ್ಮಗಳು ಪಂಚವಿಧ: ಅ) ಉತ್ಪಾದನ ಬ) ಗಮನ ಕ) ವಿಪರಿಣಾಮ ಡ) ಸಂಸ್ಕಾರ ಇ) ವಿನಾಶ. ಉತ್ಪಾದನ ಕರ್ಮದಿಂದ ಘಟದ ಉತ್ಪತ್ತಿ. ಗಮನ ಕರ್ಮದಿಂದ ಗ್ರಾಮದ ಪ್ರಾಪ್ತಿ. ವಿಪರಿಣಾಮ ಕರ್ಮದಿಂದ ದುಗ್ಧ ದಧಿಯಾಗುವದು. ಸಂಸ್ಕಾರ ಕರ್ಮದಿಂದ ದರ್ಪಣ ಸ್ವಚ್ಛವಾಗುವದು. ವಿನಾಶ ಕರ್ಮದಿಂದ ಘಟದ ನಾಶ. ಆತ್ಮನು ನಿತ್ಯನಾಗಿ ಉತ್ಪಾದ್ಯನಲ್ಲ; ಸರ್ವಗತನಾಗಿ ಗಮ್ಯನಲ್ಲ; ಸ್ಥಾಣುವಾಗಿ ವಿಕಾರ್ಯನಲ್ಲ; ಅಚಲನಾಗಿ ಸಂಸ್ಕಾರ್ಯನಲ್ಲ; ಹಾಗು ಸನಾತನನಾಗಿ ವಿನಾಶ್ಯನಲ್ಲ. ಈ ಐದು ಲಕ್ಷಣಗಳ ವಿವರಣೆ :

೧) ನಿತ್ಯಃ :- ಮೊದಲಿರದ ಪದಾರ್ಥವನ್ನು ಉತ್ಪಾದನಾ ಕರ್ಮದಿಂದ ಸೃಜಿಸಬಲ್ಲೆವು. ಆತ್ಮನು ಎಲ್ಲ ತತ್ತ್ವಗಳು ನಿರ್ಮಾಣವಾಗುವ ಮೊದಲೇ ಚಿರಸ್ಥಾಯಿಯಾಗಿ ನೆಲೆಸಿದವ. ಅವನು ಕಾಲ ಪರಿಚ್ಛಿನ್ನತೆ ಇಲ್ಲದ ಅಜ! ಅನಂತಾಸ್ತಿತ್ವರೂಪ!

೨) ಸರ್ವಗತಃ :– ಎದುರಿಗಿಲ್ಲದ ದೂರದ ವಸ್ತುವನ್ನು ನಡೆದೋ, ಈಜಿಯೋ, ಹಾರಿಯೋ ತಲುಪಬಹುದು. ಆತ್ಮನು ಎಲ್ಲೋ ಕಾಶಿ, ಕೇದಾರ, ರಾಮೇಶ್ವರಗಳಲ್ಲಿಲ್ಲ. "ಅತ್ಯತಿಷ್ಠತಿ ದಶಾಂಗುಲಮ್" ಅನಂತವಾದ ಹತ್ತೂ ದಿಕ್ಕುಗಳನ್ನು ದಾಟಿ ಅವನು ವಿಸ್ತರಿಸಿದ್ದಾನೆ. ಮನದಲ್ಲಿ ಮನದಾಚೆ, ಜಗದಲ್ಲಿ ಜಗದಾಚೆ ಹೀಗೆ ಎಲ್ಲೆಡೆ ವಾಸಿಸಿದ್ದಾನೆ. ಅವನು ಅಣುವಿನೊಳಗಣ ಅಣು; ಆಕಾಶದೊಳಗಣ ಆಗಸ! ಆದುದರಿಂದ ಸರ್ವಗತ!

೩) ಸ್ಥಾಣುಃ :–"ಸ್ಥಿರಃ ಸ್ವಭಾವಃ" ಸ್ಥಿರ ಸ್ವಭಾವವುಳ್ಳುದು ಸ್ಥಾಣು. ಪೂರ್ವರೂಪ ಪರಿತ್ಯಾಗಮಾಡಿ ಅನ್ಯರೂಪ ಧಾರಣೆ ಮಾಡಿದರೆ ಆ ವಸ್ತು ಅಸ್ಥಿರ; ಅದು ವಿಕಾರ ಕರ್ಮದ ಫಲ. ಅಕ್ಕಿ ಕುದಿದು ಅನ್ನವಾಗುವದು, ಬೀಜ ಮೊಳೆತು ಮರವಾಗುವದು ರೂಪಾಂತರದ ಉದಾಹರಣೆಗಳು. ಆತ್ಮನು ರೂಪ ವಿಹೀನ. ಸದಾಸ್ತಿತ್ವವುಳ್ಳ ಅವಿಚಲ ಅರಿವೇ ಅವನ ಸದ್ಯೈಕ ಸ್ವರೂಪ!

೪) ಅಚಲಃ :– "ರೂಪಾಂತರ ಆಪತ್ತಿ ಶೂನ್ಯಃ" ರೂಪಾಂತರವಾಗದುದು ಅಚಲ. ಅನ್ಯವಸ್ತುವಿನ ಸಂಯೋಗದಿಂದ ವಸ್ತುವಿನ ಸ್ವಭಾವದಲ್ಲಿ

ಬದಲಾವಣೆಯಾದರೆ ಆ ವಸ್ತು 'ಚಲ'. ದರ್ಪಣವು ಧೂಳಿನ ಸಂಬಂಧ ದಿಂದ ಪ್ರತಿಬಿಂಬ ಗ್ರಾಹಿತ್ವ ಸ್ವಭಾವವನ್ನು ಕಳೆದುಕೊಳ್ಳುವದು; ಸ್ವಚ್ಛ ವಸ್ತ್ರದ ಸಂಯೋಗದಿಂದ ಆ ದರ್ಪಣ ಶುದ್ಧವಾಗುವದು. ಈ ಶುದ್ಧೀಕರ ಣಕ್ಕೆ ಸಂಸ್ಕಾರ ಕ್ರಿಯೆ ಎನ್ನುತ್ತಾರೆ. "ಜನ್ಮನಾ ಜಾಯತೇ ಶೂದ್ರಃ. ಸಂಸ್ಕಾ ರಾತ್ ದ್ವಿಜ ಉಚ್ಯತೇ. ವೇದಾಭ್ಯಾಸಾತ್ ವಿಪ್ರೋ ಭವತಿ. ಬ್ರಹ್ಮ ಜಾನಾ ತೀತಿ ಬ್ರಾಹ್ಮಣಃ" ಮನುಷ್ಯ ಶೂದ್ರನಾಗಿ ಹುಟ್ಟುತ್ತಾನೆ; ಉಪನಯನಾದಿ ಸಂಸ್ಕಾರದಿಂದ ದ್ವಿಜನೆನಿಸುತ್ತಾನೆ. ವೇದಾಭ್ಯಾಸದ ಸಂಸ್ಕಾರದಿಂದ ವಿಪ್ರ ನಾಗುತ್ತಾನೆ. ಕೊನೆಗೆ ಬ್ರಹ್ಮಜ್ಞಾನದ ಸಂಸ್ಕಾರದಿಂದ ಬ್ರಾಹ್ಮಣನಾಗಿ ಪರಿ ವರ್ತನೆ ಹೊಂದುತ್ತಾನೆ. ಹೀಗೆ ಸಂಸ್ಕಾರಗಳಿಂದ ಬದಲಾಗುವದೆಲ್ಲ ಚಲ! ಈ ಬದಲಾವಣೆಗೆ ಇತಿ ಇಲ್ಲ.

ಆತ್ಮನು ಮೂಲತಃ ವಿಮಲ! ಅಪ್ಪಟ ಚಿನ್ನ! ಪರಿಶುದ್ಧ ಚಿದಗ್ನಿ! ಅವನನ್ನು ಸಂಸ್ಕಾರ ಕ್ರಿಯೆಗಳಿಂದ ಪರಿಶುದ್ಧ ಮಾಡುವಲ್ಲಿ ಅರ್ಥವೇ ಇಲ್ಲ. ಆದ್ದರಿಂದ ಅಚಲ.

೫) **ಸನಾತನಃ :-** ಗುಣ, ಅವಯವ, ಆದಿ, ಕಾಲಮಿತಿ, ದೇಶಮಿತಿ, ವಸ್ತುಮಿತಿ ಉಳ್ಳ ವಸ್ತು ಅರ್ವಾಚೀನ, ಅಶಾಶ್ವತ.ವಿನಾಶ ಕರ್ಮಕ್ಕೆ ವಿಷಯ. ಆತ್ಮನು ನಿರ್ಗುಣ, ನಿರವಯವ, ಅನಾದಿ, ಕಾಲ ದೇಶ ವಸ್ತು ಮಿತಿ ರಹಿತನಾದುದರಿಂದ ಪುರಾತನ! ಶಾಶ್ವತ! ಸನಾತನ!

**ಭಗವಂತ:-** "ಧನಂಜಯ, ಜಗತ್ತನ್ನು ಅಳೆಯುವ ಕಾಲ ಮುಂತಾದ ಮಾಪನಗಳಿಂದ ಆತ್ಮನನ್ನು ಅಳೆಯಲಾರೆ. ಅವನು ಅಮಿತ! ಅನಂತ! ಸದೈವ ಸ್ವತಂತ್ರ, ಅಮರ! ಅತ್ತ ಲಕ್ಷ್ಯಕೊಡು. ಸಂಸ್ಕಾರಾದಿ ಆಭಾಸ ಕರ್ಮದ ಮೇಲೆ ನಿಂತ ಜಾತಿ, ಮತ, ಆಶ್ರಮ, ವರ್ಣಗಳ ಗೊಡವೆ ಬಿಟ್ಟುಬಿಡು. ಅವು ಗಳಿಂದ ನಿನಗಾಗುವ ಲಾಭವೇನಿದೆ? ನಿನ್ನಲ್ಲುಂಟಾದ ಶೋಕಕ್ಕೆ ಭೇದಭಾವ ಹಾಗು ಪರಿಮಿತ ಜಡ ವಸ್ತುವಿನ ವ್ಯಾಮೋಹವೇ ಕಾರಣವೆಂದು ಖಚಿತ ವಾಗಿ ತಿಳಿ."

ಇದೇ ರೀತಿಯ ಉಪದೇಶ ಮುಂದಿನ ಮಂತ್ರದಲ್ಲಿ ಸಾಗಿದೆ.

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫ ॥**

**ಅರ್ಥ:-** ಅಯಂ = ಈ ಆತ್ಮನು, ಅವ್ಯಕ್ತಃ = ಚಕ್ಷುರಾದಿ ಇಂದ್ರಿಯಗಳಿಗೆ ಅವಿಷಯ, ಅಚಿಂತ್ಯಃ = ಮನಸ್ಸಿಗೆ ಅವಿಷಯ; ಅವಿಕಾರ್ಯಃ = ಕರ್ಮೇಂದ್ರಿಯಗಳಿಗೆ ಅವಿಷಯ; (ಇತಿ = ಎಂದು) ಉಚ್ಯತೇ = (ಬಲ್ಲವರಿಂದ) ಹೇಳಲ್ಪಟ್ಟಿದ್ದಾನೆ. ತಸ್ಮಾತ್ = ಆದ್ದರಿಂದ, ಏನಂ ಏವಂ ವಿದಿತ್ವಾ = ಆತ್ಮನನ್ನು ಈ ರೀತಿ ತಿಳಿದುಕೊಂಡು, ನ ಅನುಶೋಚಿತುಂ ಅರ್ಹಸಿ = ಶೋಕ ಮಾಡಲು ಅರ್ಹನಲ್ಲ.

**ವಿವರಣೆ:**-ಮೇಲಿನೆರಡು ಮಂತ್ರಗಳಲ್ಲಿ ಆತ್ಮನು ಶಸ್ತ್ರಾದಿಗಳಿಂದ ಅಭೇದ್ಯ ಎಂಬ ಮಾತನ್ನು ಪ್ರತಿಪಾದಿಸಲಾಗಿದೆ. ಈ ಮಂತ್ರದಲ್ಲಿ ಅವನು ಪ್ರಮಾಣ ಗಳಿಂದ ಅಭೇದ್ಯ ಎಂಬ ಸತ್ಯವನ್ನು ವಿವರಿಸಲಾಗಿದೆ. ಆತ್ಮನು ಪ್ರಮಾಣಾ ತೀತ ಎಂದು ಹೇಳುವದಕ್ಕೆ "ಅಪೂರ್ವತಾಲಿಂಗ" ಎನ್ನುವದು ಶಾಸ್ತ್ರೀಯ ಶಬ್ದ.

**ಅಯಂ :**- ಸವಿಕಲ್ಪ ಜ್ಞಾನಗಂಗೆ, ಮಾನಸಿಕ ಭಾವತರಂಗಮಾಲೆ ಮತ್ತು ಭೌತ ಕಾರ್ಯಶಕ್ತಿಗಳು ಯಾವ ದಿವ್ಯಚೇತನ ಸಾಗರದಲ್ಲಿ ಶಾಂತವಾಗುವವೋ ಅದು ಈ ಆತ್ಮ; ಇದೇ ದೇಹದ ತುಂಬ ವ್ಯಾಪಿಸಿ ನಿಂದ ಪುರುಷ ತತ್ತ್ವ! ಇವನೆಂಥವ?

೧) **ಅವ್ಯಕ್ತಃ :**- ಶಬ್ದಾದಿ ಗುಣಯುಕ್ತ ಜಗತ್ತು ವ್ಯಕ್ತ; ಏಕೆಂದರೆ ಅದು ಇಂದ್ರಿಯ ವೇದ್ಯ. ಆತ್ಮನಲ್ಲಿ ಶಬ್ದಾದಿ ಗುಣಗಳಿಲ್ಲ. ಅವನು ಇಂದ್ರಿಯ ಗಳಿಗೆ ವಿಷಯನಲ್ಲ. ಆದ್ದರಿಂದ ಅವ್ಯಕ್ತ.

೨) **ಅಚಿಂತ್ಯಃ :**- ಮನಸ್ಸಿಗೆ ಬುದ್ಧಿಗೆ ಗೋಚರವಾದುದು ಚಿಂತ್ಯ. ಉದಾ : ಸುಖ ದುಃಖಗಳು; ಸ್ವರ್ಗ ನರಕಗಳು; ಪ್ರತ್ಯಕ್ಷ ಪ್ರಮಾಣ ಕಕ್ಷೆಯ ಹೊರಗಿರುವ ದೂರದ ದೇಶ; ತನ್ಮಾತ್ರೆಗಳು, ಅಹಂಕಾರ, ಮಹತ್ತು, ಪ್ರಕೃತಿ ಎಲ್ಲವೂ ಮನೋಗ್ರಾಹ್ಯ. " ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ " ಮಾತು ಎಲ್ಲಿಂದ ಹಿಂತಿರುಗುವವೋ, ಮನಸ್ಸು ಸಹಿತವಾದ ಸೂಕ್ಷ್ಮ ಇಂದ್ರಿಯ ವೃತ್ತಿಗಳು ಎಲ್ಲಿಂದ ಹೊರಳುವವೋ ಅದು ಆತ್ಮ. ಅವನು ಪ್ರತ್ಯಕ್ಷ ಪ್ರಮಾಣಕ್ಕೆ ಅವೇದ್ಯನಾದಂತೆ, ಅನುಮಾನ, ಉಪಮಾನ, ಶಬ್ದ ಮುಂತಾದ ವಿಭಿನ್ನ ಪ್ರಮಾಣಗಳ ಮೇರೆ ಮೀರಿದವ; ಎಲ್ಲ ಚಿಂತಿ ಸುವ ಮನಸ್ಸು ಅವನಲ್ಲಿ ಬಯಲು. ಆದುದರಿಂದ ಅವನು ಅಚಿಂತ್ಯ.

೩) **ಅವಿಕಾರ್ಯಃ :**- ಪ್ರಕೃತಿಗತ ಸತ್ವಾದಿಗುಣಗಳೇ ಅಸ್ಥಿರವಾದುದ ರಿಂದ ಸತ್ವಾಧಿಕ್ಯದಿಂದ ತೋರಿದ ಜಾಗ್ರವಾಗಲಿ, ರಜಾಧಿಕ್ಯದಿಂದಾದ ಸ್ವಪ್ನ ವಾಗಲಿ, ತಮಾಧಿಕ್ಯದಿಂದಾದ ಸುಷುಪ್ತಿಯಾಗಲಿ ಚಿರವಾಗಿ ಬಾಳದು. ಪ್ರತಿಕ್ಷಣ ಪ್ರಕೃತಿ ಪರಿಣಮಿಸುವದು. ಪ್ರಕೃತಿಯು ಯಾರ ಹಿಡಿತಕ್ಕೂ ಸಿಗದು. "ಸ್ವಸ್ಯಾಃ ಪ್ರಕೃತೇಃ ಸದೃಶಂ ಚೇಷ್ಟತೇ ಜ್ಞಾನವಾನಪಿ " ಜ್ಞಾನಿಯಾದವನೂ ತನ್ನ ಪ್ರಕೃತಿಯ ಸ್ವಭಾವಕ್ಕೆ ಅನುಸರಿಸಿ ವ್ಯವಹರಿಸುತ್ತಾನೆ. ಮಾರುತಿ ಅಪ್ರತಿಮ ರಾಮಭಕ್ತ. ಗಿಡದಿಂದ ಗಿಡಕ್ಕೆ ನೆಗೆದಾಡುವ ಚಟ ಹೋಗಲಿಲ್ಲ. ಸಾಕ್ಷಾತ್ ವಿಷ್ಣುವಿನ ವಾಹನ ಗರುಡ. ಗಿಡದ ಮೇಲಿನ ವಸತಿ ತಪ್ಪಲಿಲ್ಲ. ಕೆಲವು ಜ್ಞಾನಿಗಳು ಸದಾ ಮೌನ; ಕೆಲವರು ಬಾಲಕ್ರೀಡೆಯವರು; ಕೆಲ ವರು ಹಾಡಿನಲ್ಲಿ ಮುಳುಗಿದರೆ, ಕೆಲವರಿಗೆ ವ್ಯವಹಾರದ ಗುಂಗು. ಎಲ್ಲವೂ ಪ್ರಕೃತಿಯ ಲೀಲೆ. ದೇವ ದೇವತೆಗಳೂ ಈ ಲೀಲೆಗೆ ಹೊರತಲ್ಲ. ಇಂಥ ಪರಿಣಾಮಶೀಲ ಪ್ರಕೃತಿ ವಿಸ್ತಾರವು "ವಿಕಾರ್ಯ"!

ಯಾವ ಆಧಾರದ ಆಶ್ರಯದಲ್ಲಿ ಪ್ರಕೃತಿ ವಿಕರಿಸುವದೋ, ಯಾವ ಪ್ರಕಾಶದಡಿಯಲ್ಲಿ ಜೀವರು ಜಾಗ್ರಾದಿ ತ್ರಿ ಅವಸ್ಥೆಗಳಲ್ಲಿ ವ್ಯವಹರಿಸುವರೋ ಅಂಥ ಆತ್ಮನು ಅಪರಿಣಾಮಿ; ತ್ರಿಗುಣಗಳ ಸಂಸರ್ಗವಿಲ್ಲದ "ಅವಿಕಾರ್ಯ"! ಅವನನ್ನು ಮಾತು ರೇಖಿಸದು; ಕೈ ಹಿಡಿಯದು! ಕಾರ್ಯ ವಿಧಾನ ಕೋಟಿಯ ಆಚೆಗೆ ಆತ್ಮನ ವಾಸ!

ಭಗವಂತ:- "ಆತ್ಮನು ಅತೀಂದ್ರಿಯ; ವಾಚಾಮಗೋಚರ; ಮನ ಬುದ್ಧಿಗತೀತ! ಈ ಮಾತನ್ನು ನಾನೇ ಕಲ್ಪಿಸಿ ಹೇಳುತ್ತೇನೆಂದಲ್ಲ; ಜಗತ್ತಿನ ಸಕಲ ಸಂತ ಮಹಾತ್ಮರು ನಿರೂಪಿಸಿದ್ದಾರೆ. ಅವರ ವಚನದಲ್ಲಿ ನಂಬಿಗೆ ಇಡು. ನೀನು ಜಡ ದೇಹಾಭಿಮಾನಿ ಜೀವನೆಂದು ಬಗೆಯದೆ ಅಕಲಂಕ ಆತ್ಮ ನೆಂದು ದೃಢವಾಗಿ ನಿರ್ಣಯಿಸು! ಅಂದರೆ, ವ್ಯಾಮೋಹದಿಂದುಂಟಾದ ಈ ಶೋಕವನ್ನು ನೀಗುವೆ."

ಜೀವನಿಗೂ ಆತ್ಮನಿಗೂ ಇರುವ ಭಿನ್ನತೆ ಏನು? ಆತ್ಮನು ಅವಿಕೃತ ಅರಿವಿನ ನೇಸರ. ಜೀವನು ಆ ನೇಸರನ ಮನೋಗತ ಪ್ರತಿಚ್ಛಾಯೆ. ಶುಭ್ರ ವರ್ಣದ ಸಾತ್ವಿಕ ಮನೋಗನ್ನಡಿಯಲ್ಲಿ ಮೂಡಿದ ಆತ್ಮಪ್ರತಿಬಿಂಬವು ವಿಶ್ವ ಜೀವ. ರಕ್ತವರ್ಣದ ರಾಜಸಿಕ ಮನೋಗನ್ನಡಿಯಲ್ಲಿ ಮೂಡಿದ ಪ್ರತಿಬಿಂಬವು ತೈಜಸ ಜೀವ. ಕೃಷ್ಣ ವರ್ಣದ ತಾಮಸಿಕ ಮನೋಗನ್ನಡಿಯಲ್ಲಿ ಮೂಡಿದ ಪ್ರತಿಬಿಂಬವು ಪ್ರಾಜ್ಞ ಜೀವ. ಮನೋದರ್ಪಣ ಸದಾ ಪರಿಣಾಮಶೀಲ. ಅದರಲ್ಲಿ ಉಂಟಾಗುವ ಸರ್ವ ವಿಕಾರಗಳು ಜೀವರಲ್ಲಿ ಭಾಸವಾಗುತ್ತವೆ. ಆದುದರಿಂದ, ತೋರಿಕೆಗಾಗಿಯಾದರೂ ಸರಿಯೇ, ಜೀವರು 'ವಿಕಾರ್ಯಾಃ'.

ಹೆಪ್ಪಿಟ್ಟ ಹಾಲ ಕಡೆದು ಮಜ್ಜಿಗೆ ಬೆಣ್ಣೆಗಳನ್ನು ಪೃಥಃಕರಿಸಿ ತೆಗೆಯುವಂತೆ ಜೀವನೆಂಬ ಸಮ್ಮಿಶ್ರ ತತ್ತ್ವವನ್ನು ವಿವೇಕದಿಂದ ಮಂಥನ ಮಾಡಿ ಮನ ಮತ್ತು ವಿಶುದ್ಧ ಆತ್ಮ ಎರಡನ್ನು ಬೇರ್ಪಡಿಸಬೇಕು. ಆಗ ಜೀವನು ಉಪಾಧಿ ವಿಹೀನನಾಗಿ ಆತ್ಮನಲ್ಲಿ ಒಂದಾಗುವನು. ಉಪಾಧಿಯ ವಿಕಾರ ಅವನನ್ನು ಸ್ಪರ್ಶಿಸದು! ಈ ಪವಿತ್ರ ತಮ ಅವಸ್ಥೆ ಪಡೆದ ಮಹಾತ್ಮರ ಮೇಲೆ ಹೊರಗಿನ ಸಮಾಜವಾಗಲಿ, ದೇಶವಾಗಲಿ, ವಿಷಯಗಳಾಗಲಿ ತಿಲಮಾತ್ರ ಪರಿಣಾಮವನ್ನು ಬೀರವು. ಉದಾ : ಸಂತ ತುಕಾರಾಮ. ಅವನದು ಮುರುಕಲು ಮನೆ; ಕೈಯಲ್ಲಿ ಒಂದು ಕಾಸಿಲ್ಲ; ಹೊಟ್ಟೆಗೆ ಸಂತೃಪ್ತ ಅನ್ನವಿಲ್ಲ; ಹರಿದ ಅರಿವೆ; ಸಣ್ಣ-ಪುಟ್ಟ ಕಾರಣಗಳಿಗಾಗಿ ತರಾಟೆಗೆ ತೆಗೆದುಕೊಳ್ಳುವ ಮಡದಿ; ಮೆಚ್ಚದ ಮಕ್ಕಳು; ಮಾನ ಮರ್ಯಾದೆ ಕಳೆವ ಜನ; ಇಷ್ಟೆಲ್ಲ ಸಾಂಸಾರಿಕ ತಾಪ. ಆದರೆ ತುಕಾರಾಮನಿಗೆ ಅದರ ಕಾವು ತಟ್ಟಲಿಲ್ಲ. ಅವನ ಮನ ಪ್ರಶಾಂತ

ವಾಗಿತ್ತು. ಹೆಂಡತಿ ಬಾರಿಗೆಯಿಂದ ಒಡೆಯುವ ತಾಳದಲ್ಲಿಯೇ ದೇವಭಜನೆ ಮಾಡುತ್ತಿದ್ದ!!

ನಾವು ಆತ್ಮಸ್ಥರಲ್ಲ ಜೀವಭಾವಿಗಳು. ಚಿಕ್ಕ ಚಿಕ್ಕ ಮಾತಿಗಾಗಿ ಮನಸ್ತಾಪ ಮಾಡಿಕೊಳ್ಳುತ್ತೇವೆ; ಮಡದಿ ಮಕ್ಕಳನ್ನು ಸಲುಹಲು ನಿರ್ಲಜ್ಜ ರೀತಿಯಲ್ಲಿ ಸಮಾಜವನ್ನು ಶೋಷಿಸಲೂ ನಾವು ಸಿದ್ಧ. ನಮ್ಮ ಮುಖದ ಮೇಲಣ ನಗು ಕೇವಲ ತೋರಿಕೆಯದು; ಒಳ ಮನಸ್ಸಿನಲ್ಲಿ ಹಾಲಾಹಲ. "ಸಂಸಾರ ಭಾಂಡದಲ್ಲಿ ಬಿದ್ದು ಕುದಿಯಬೇಡ, ಮಡದಿ ಮಕ್ಕಳಿಗಾಗಿ ಪುರುಷತ್ವದ ಹೋಳಿ ಮಾಡದಿರು. ಧರ್ಮ ಜಾತ್ಯಾದಿಗಳ ಕವಾಟ ತೆಗೆದೊಗೆ. ಮಾನ ಕೀರ್ತಿ ಪ್ರತಿಷ್ಠೆಗಳ ಹವ್ಯಾಸ ಬಿಟ್ಟುಬಿಡು. ಆತ್ಮನತ್ತ ಮುಖ ಹೊರಳಿಸು." ಎಂದು ಎಚ್ಚರಿಸುವ ಋಷಿ ವಾಕ್ಯಗಳು ನಮಗೆ ವಿಷ!

ಎಲ್ಲವೂ ಮೂರು ನಿಮಿಷದ ಕನಸು. ಹುಟ್ಟು, ಬದುಕು, ಸಾವು; ಅಳು, ನಗೆ; ಆಶೆ, ಆಕಾಂಕ್ಷೆ; ಎಲ್ಲವೂ ಕನಸಿನ ಕಲ್ಪನೆಗಳು. "ದೀರ್ಘ ಸ್ವಪ್ನಮಿದಂ ವಿದ್ಧಿ" ಸಂಸಾರವೆಂಬುದು ದೀರ್ಘ ಸ್ವಪ್ನವೆಂದು ತಿಳಿ. ವರಜಾಗ್ರ ಅವಸ್ಥೆಗೇರು. ಆತ್ಮ ದರ್ಶನ ಪಡೆ. ಇದು ಬಲ್ಲವರ ಹಿತಮಾತು. ಈ ಮಾತ ನಾಲಿಸಿದರೆ ನಮ್ಮ ಶೋಕ ನಿಲ್ಲುವದು. ಅಂತರಂಗ ಅರಳುವದು. ದಿವ್ಯ ಆನಂದ ಸಮನಿಸುವದು. ಇದೇ ಗೀತಾ ಬೋಧೆಯ ಉದ್ದೇಶ.

ಅರ್ಜುನ:– "ಭಗವನ್, ನಿನ್ನ ಅಭಿಪ್ರಾಯದಲ್ಲಿ ಆತ್ಮನು ಅಜರ ಅಮರನಿರಬಹುದು. ಆದರೆ ಅನೇಕ ವಿದುಷರು ಆತ್ಮನು ಜನ್ಮ ಮರಣ ಉಳ್ಳವ ಎಂದು ಹೇಳುವರಲ್ಲ? ಅವರ ಅಭಿಮತವನ್ನು ಒಪ್ಪಿಕೊಂಡರೆ ನಾನು ಬಂಧು ಬಾಂಧವರ ಮರಣಕ್ಕಾಗಿ ಶೋಕಿಸುವದು ಸರಿ ಎನಿಸುವದಿಲ್ಲವೆ?"

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ ॥೨೬॥**

ಅರ್ಥ:– ಅಥ ಚ = ಒಂದು ವೇಳೆ, ತ್ವಂ = ನೀನು ಏನಂ = ಈ ಆತ್ಮನನ್ನು, ನಿತ್ಯಜಾತಂ = ಸದಾ ಹುಟ್ಟುವವನೆಂದು, ವಾ ನಿತ್ಯಂ ಮೃತಂ = ಸದಾ ಸಾಯುವವನೆಂದು, ಮನ್ಯಸೇ = ತಿಳಿಯುವಿಯಾದರೆ, ತಥಾಪಿ = ಆಗಲೂ ಕೂಡ, ಶೋಚಿತುಂ ನ ಅರ್ಹಸಿ = ಶೋಕ ಮಾಡಲು ಅರ್ಹನಲ್ಲ.

ವಿವರಣೆ:– ಭಗವಂತ:- ಕೌಂತೇಯ, ದೇಹವೇ ಆತ್ಮ. ದೇಹದ ಹುಟ್ಟಿನೊಂದಿಗೆ ಆತ್ಮನ ಹುಟ್ಟು; ಅದರ ಮರಣದೊಂದಿಗೆ ಅವನ ಮರಣ. ಆತ್ಮನ ಈ ಜನ್ಮ ಮರಣ ಪ್ರವಾಹ ಎಂದಿನಿಂದಲೂ ಸಾಗುತ್ತಬಂದಿದೆ ಎಂಬ ದೇಹಾತ್ಮವಾದ ಕೂಡ ಶೋಕಕ್ಕೆ ಆಸ್ಪದ ನೀಡದು. ಸಾವು ಹುಟ್ಟು ಅನಿವಾರ್ಯ ಎಂದಾಗ ಅಳುವು ಏಕೆ? ದೇಹ ಬಾಳಿರುವವರೆಗೆ ಸಾಲವಾದರೂ ಚಿಂತೆಯಿಲ್ಲ ಉಂಡುಟ್ಟು ಸುಖದಿಂದ ಬಾಳಬೇಕು! ಅಲ್ಲವೆ?"

ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ ।
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥೨೭॥

**ಅರ್ಥ:–** ಜಾತಸ್ಯ ಹಿ = ಹುಟ್ಟಿದವನಿಗಂತೂ ಮೃತ್ಯುಃ ಧ್ರುವಂ = ಮರಣ ನಿಶ್ಚಿತ ಚ = ಮತ್ತು, ಮೃತಸ್ಯ = ಸತ್ತವನಿಗೆ, ಜನ್ಮಧ್ರುವಂ = ಹುಟ್ಟು ನಿಶ್ಚಿತ. ತಸ್ಮಾತ್ = ಆದ್ದರಿಂದ, ಅಪರಿಹಾರ್ಯೇಽರ್ಥೇ = ಅಪರಿಹಾರ್ಯ ವಿಷಯದಲ್ಲಿ ತ್ವಂ = ನೀನು, ಶೋಚಿತುಂ = ಶೋಕಿಸಲು, ನ ಅರ್ಹಸಿ = ಅರ್ಹನಲ್ಲ.

**ವಿವರಣೆ:–** ಭಗವಂತ:- "ಭಾರತ, 'ನಾ ಭುಕ್ತಂ ನ ಕ್ಷೀಯತೇ ಕರ್ಮ' ಭೋಗಿಸದೆ ಕರ್ಮ ಹಿಂಗದು. ಹಿಂದಿನ ಕರ್ಮ ಉಣ್ಣಲು ಇಂದು ಹುಟ್ಟಿದ್ದೇವೆ; ಈಗಿನ ಕರ್ಮ ಉಪಭೋಗಿಸಲು ಮುಂದೆ ಹುಟ್ಟಿಯೇ ಹುಟ್ಟುತ್ತೇವೆ. ಹುಟ್ಟಿದವನಿಗೆ ಸಾವು; ಸತ್ತವನಿಗೆ ಹುಟ್ಟು; ಬಿಡಲಾರದ ನಿಯತಿ! ಹಿಂದೆ ಇದ್ದೆವು; ಈಗ ಇದ್ದೇವೆ; ಮುಂದೆ ಇದ್ದೇ ಇರುವೆವು; ಎಂದಾಗ ಏಕೆ ಚಿಂತೆ ? ಊರಿಗೊಂದು ಸ್ಮಶಾನಭೂಮಿ ಸಿದ್ಧಗೊಳಿಸಿದ ನಾವು ಸಾವಿಗೇಕೆ ಅಳಬೇಕು? ಸ್ಮಶಾನದ ಕರೆ ಬಂದರೆ ನಗು ನಗುತ್ತ ಸಾಗಬೇಕು. ನಮ್ಮ ಮಡದಿ, ಮಕ್ಕಳು, ಬಂಧು, ಬಾಂಧವರಿಗೆ ಕರೆ ಬಂದರೆ ಪ್ರಸನ್ನತೆಯಿಂದ ಕಳುಹಬೇಕು ! ಯಾಕೆಂದರೆ ಮರಣ ತಪ್ಪಿಸಲು ಯಾರಿಂದಲೂ ಆಗದು."

ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।
ಅವ್ಯಕ್ತ ನಿಧನಾನ್ಯೇವ ತತ್ರ ಕಾ ಪರಿದೇವನಾ ॥೨೮॥

**ಅರ್ಥ:–** ಭಾರತ = ಅರ್ಜುನ, ಭೂತಾನಿ = ದೇಹಗಳು, ಅವ್ಯಕ್ತಾದೀನಿ = ಅವ್ಯಕ್ತ ಪ್ರಕೃತಿ ಮೂಲವುಳ್ಳವುಗಳು (ಅವ್ಯಕ್ತಂ ಪ್ರಧಾನಂ ತದೇವ ಆದಿಃ ಉತ್ಪತ್ತೇಃ ಪೂರ್ವರೂಪಂ ಯೇಷಾಂ ತಾನಿ : ಉತ್ಪತ್ತಿ ಪೂರ್ವದಲ್ಲಿ ಯಾವುಗಳು ಅವ್ಯಕ್ತ-ಪ್ರಧಾನರೂಪ ವಾಗಿದ್ದವೋ ಅವು ಅವ್ಯಕ್ತಾದೀನಿ.) ವ್ಯಕ್ತ ಮಧ್ಯಾನಿ = ಮಧ್ಯದಲ್ಲಿ ವ್ಯಕ್ತವಾದವುಗಳು (ವ್ಯಕ್ತಂ ಮಧ್ಯಂ ಜನ್ಮ ಮರಣಾಂತರಾಲ ಸ್ಥಿತಿ ಲಕ್ಷಣಂ ಯೇಷಾಂ ತಾನಿ : ಜನ್ಮ ಮರಣ ಗಳ ಮಧ್ಯಂತರದಲ್ಲಿ ಯಾವುಗಳಿಗೆ ವ್ಯಕ್ತ ರೂಪವಿದೆಯೋ ಅವು). ಅವ್ಯಕ್ತ ನಿಧನಾನಿ ಏವ = ಹಾಗು, ಅವ್ಯಕ್ತದಲ್ಲಿಯೇ ಲಯವಾದಂಥವುಗಳು (ಅವ್ಯಕ್ತೇ ನಿಧನಂ ಲಯಃ ಯೇಷಾಂ ತಾನಿ! ಅವ್ಯಕ್ತದಲ್ಲಿ ಯಾವುಗಳಿಗೆ ಲಯವಿದೆಯೋ ಅವು). ತತ್ರ = ಆ ವಿಷಯದಲ್ಲಿ ಕಾ ಪರಿದೇವನಾ = ಶೋಕವೇಕೆ?

**ವಿವರಣೆ:–** ಭಗವಂತ:– ಪಾರ್ಥ, ವೃಕ್ಷ ಮೊದಲು ಬೀಜದಲ್ಲಿ ಅವ್ಯಕ್ತ ವಾಗಿತ್ತು; ಮಧ್ಯದಲ್ಲಿ ವ್ಯಕ್ತವಾಯಿತು; ಕೊನೆಗೆ ಆ ಬೀಜದಲ್ಲೇ ಲಯವಾಗುವದು. ಅದರಂತೆ, ಸರ್ವ ಚರಾಚರ ಪ್ರಾಣಿ-ದೇಹಗಳು ಪೂರ್ವದಲ್ಲಿ ಅವ್ಯಕ್ತ ಪ್ರಕೃತಿ ಗರ್ಭಸ್ಥವಾಗಿದ್ದವು. ಈಗ ಮಧ್ಯದಲ್ಲಿ ಮಾತ್ರ ತೋರಿಬಂದಿವೆ. ಕಡೆಗೆ ಮತ್ತೆ ಅದೇ ಪ್ರಕೃತಿಯಲ್ಲಿ ಅಡಗಿ ಬಿಡುವವು. ಹೀಗಿರುವಾಗ ಚಿಂತೆಗೆ ಸಂತಾಪಕ್ಕೆ ಆಸ್ಪದವೆಲ್ಲಿದೆ? ನೀನು ಬಯಸು ಅಥವಾ ಬಯಸದಿರು ಅಭಿವ್ಯಕ್ತಿ, ಲಯ,

ಎಂಬ ಚಕ್ರ ಅವ್ಯಾಹತವಾಗಿ ತಿರುಗುತ್ತಿದೆ. ನಿನ್ನ ಕೈಯಲ್ಲಿ ಏನಿದೆ ಎಂದು ಖೇದ ಪಡುವೆ ?

" ಕುರುನಂದನ, ಇಂತು, ಆತ್ಮದೃಷ್ಟಿಯಿಂದಲೂ ವಿಲಾಪ ನಿರರ್ಥಕ, ದೇಹ ದೃಷ್ಟಿಯಿಂದಲೂ ಅರ್ಥಹೀನ, ಆದುದರಿಂದ ಈ ವಿಷಾದಕ್ಕೆ ಅನುವು ನೀಡಬೇಡ?

ಅರ್ಜುನ:- " ದೇವ, ನಿನ್ನ ಮಾತುಗಳು ಸಮಂಜಸ. ಕಿಂತು ಮಹಾ ಮಹಾ ವಿದ್ವಾಂಸರೂ ದೇಹನಾಶದ ಪ್ರಸಂಗಬಂದಾಗ ದುಃ ಖಿ ಸು ವ ರ ಲ್ಲ ಅದೇಕೆ ? "

ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ ತಥೈವ ಚಾನ್ಯಃ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನಚೈವಕಶ್ಚಿತ್ ೨೯

ಅರ್ಥ:- ಕಶ್ಚಿತ್= ಒಬ್ಬನು ಏನಂ= ಈ ಆತ್ಮನನ್ನು ಆಶರ್ಯವತ್= ಅಚ್ಚರಿ ಎಂಬಂತೆ ಪಶ್ಯತಿ= ನೋಡುತ್ತಾನೆ. ತಥಾ ಏವಚ= ಹಾಗೆಯೇ, ಅನ್ಯ= ಮತ್ತೊಬ್ಬನು ಆಶ್ಚರ್ಯವತ್= ಅಚ್ಚರಿ ಎಂಬಂತೆ ವದತಿ = ಹೇಳುತ್ತಾನೆ. ಅನ್ಯಃಚ = ಇನ್ನೊಬ್ಬನು ಏನಂ= ಇವನನ್ನು ಆಶ್ಚರ್ಯವತ್= ಅಚ್ಚರಿ ಎಂಬಂತೆ ಶೃಣೋತಿ= ಕೇಳುತ್ತಾನೆ. ಕಶ್ಚಿತ್= ಮಗುದೊಬ್ಬನು ಶ್ರುತ್ವಾಅಪಿ= ಕೇಳಿದರೂ ನಏವ ವೇದ = ತಿಳಿಯಲೇ ಇಲ್ಲ.

ವಿವರಣೆ:- ಆಗಮ ನಿಗಮಗಳನ್ನು ಅಭ್ಯಸಿಸಿ ಅವುಗಳಲ್ಲಿ ನಿರೂಪಿತ ವಾದ ತತ್ತ್ವಗಳನ್ನು ಸಲೀಸಾಗಿ ಅರಗಿಸಿಕೊಂಡ ಪಂಡಿತರು, ಜೀವನವನ್ನೇ ವಿದ್ಯೆಗಾಗಿ ನಿವೇದಿಸಿದ ಮೇಧಾವಿಗಳು, ಆಯುಷ್ಯದ ತುಂಬ ದೇವನ ಸ್ವರೂಪ ಚಿಂತನದಲ್ಲಿ ಮುಳುಗಿದ ಮಹಾನುಭಾವರು ಹಾಗೂ ಮಾತು ಮನಸ್ಸಿನಲ್ಲಿ ಪವಿತ್ರ ಮಹಾ ವಾಕ್ಯಗಳನ್ನೇ ರೂಢಿಸಿಕೊಂಡ ಪುರುಷರು ಕೂಡ ಸಂಸಾರದ ಸಂತಾಪಗಳಿಂದ ದುಃಖಿಸುವರೇಕೆ? ಕೊನೆಯುಸಿರೆಳೆಯುವಾಗಲೂ ಮಠ, ಮಡದಿ, ಮರ್ಯಾದೆಗಳಿಗಾಗಿ ಕಣ್ಣೀರು ಸುರಿಸುವರೇಕೆ? ಆಧ್ಯಾತ್ಮಿಕ ಉದ್ಗ್ರಂಥ ರಚಿಸಿ, ನಿರರ್ಗಳವಾಗಿ ಉಪದೇಶ ಮಾಡಬಲ್ಲ ಮಹಾ ಮಹಿಮರು ಭೌತಿಕ ಗಳಿಕೆ ಉಳಿಕೆಗಳಿಗಾಗಿ ದಿನವಿಡಿ ಶ್ರಮಿಸುವದೇಕೆ? ವೇದಾಂತದ ನುಡಿಗಳನ್ನೇ ಹಾಸಿ ಹೊದ್ದು ಬದುಕುತ್ತಿರುವ ವ್ಯಕ್ತಿಗಳು ಹೇಯ ವಿಷಯಗಳಿಗಾಗಿ ತೊಳಲುವರಲ್ಲ? ಇದಕ್ಕೆಲ್ಲ ಏನು ಕಾರಣ?

ಬಲ್ಲವರು ಮೂರು ಕಾರಣ ಕೊಡುತ್ತಾರೆ. (೧) ಭೂತ ಪ್ರತಿಬಂಧಕ (೨) ವರ್ತಮಾನ ಪ್ರತಿಬಂಧಕ (೩) ಭಾವೀ ಪ್ರತಿಬಂಧಕ. (೧) ಬಿಟ್ಟು ಬಂದ ಮಡದಿ ಮಕ್ಕಳ ಸ್ಮರಣೆ; ಹಿಂದಿನ ಧನ, ಧಾನ್ಯ, ವಸ್ತು, ಒಡವೆ, ಸ್ಥಾನಮಾನ, ವಿಷಯೋಪಭೋಗಗಳ ನೆನಹು ಭೂತ ಪ್ರತಿಬಂಧಕ (೨) ವಿಲಾಸೀ ಜನರ ಸಂಗ, ವಿಷಯಾಸಕ್ತಿ, ತರ್ಕ, ಅಭಿಮಾನ ಚಪಲತೆಗಳು ವರ್ತಮಾನ ಪ್ರತಿಬಂಧಕ (೩) ಮುಂದೆ ಪ್ರಖ್ಯಾತನಾಗಬೇಕು, ಸ್ವರ್ಗಾದಿ ಸುಖ ಲೋಕಗಳಿಗೆ ಹೋಗ

ಬೇಕು ಎಂಬ ಮುಂತಾದ ಆಕಾಂಕ್ಷೆಗಳು ಭಾವೀ ಪ್ರತಿಬಂಧ. ಈ ಮೂರು ಪ್ರತಿಬಂಧಕಗಳು ಮನದ ಹೊಯ್ದಾಟಕ್ಕೆ ಹಾಗು ವಿಕ್ಷೋಭಕ್ಕೆ ಕಾರಣ. ಮನಸ್ಸೇ ವಿಕಾರ ಹೊಂದಿ ಕಲುಷಿತಗೊಂಡಾಗ ತತ್ತ್ವ ಸಾಕ್ಷಾತ್ಕಾರ ಹೇಗೆ ಸಮನಿಸೀತು? ಅಶೌಚ್ಯವಾದ ಆನಂದ ಸ್ಥಿತಿ ಹೇಗೆ ದೊರೆತೀತು?

ಎಲ್ಲಿ ಮನಸ್ಸಿನ ಸ್ಥಿರತೆ, ಅಲ್ಲಿ ಜ್ಞಾನಾಭಿವ್ಯಕ್ತಿ. ಎಲ್ಲಿ ಮನೋರಥ, ಅಲ್ಲಿ ಅಜ್ಞಾನದ ವಿಸ್ತಾರ. ಈ ಮಾತಿಗೆ ಒಂದು ದೃಷ್ಟಾಂತ: ಬಹು ಏಕಾಂತವಾದ ಒಂದು ಮಾವಿನ ಬನದಲ್ಲಿ, ವಿಶಾಲ ವೃಕ್ಷದ ಕೆಳಗೆ ಒಬ್ಬ ಅನುಭವಿ ಗುರು ಉಚ್ಚತಮ ತತ್ತ್ವೋಪದೇಶ ನೀಡುತ್ತಿದ್ದ. ಕೇಳುವ ಶಿಷ್ಯ ಎದುರಿಗೆ ಮಂಡಿಸಿದ್ದ. ಅವನ ಲಕ್ಷ್ಯ ಮಾತ್ರ ಪೊದರಿನಲ್ಲಿ ಹೋಗುತ್ತಿದ್ದ ಇಲಿಯತ್ತ ಇತ್ತು. ಅವನ ಚಿತ್ತು ಅದನ್ನೇ ಚಿಂತಿಸುತ್ತಿತ್ತು. ಕಾಕತಾಲಿ ಎಂಬಂತೆ, ಅದೇ ಗಿಡದ ಮೇಲೆ ಒಬ್ಬ ತುಡುಗ ಅಡಗಿ ಕುಳಿತಿದ್ದ. ಗುರುವಿನ ಬೋಧವನ್ನು ಬಹು ಮನವಿತ್ತು ಕೇಳುತ್ತಿದ್ದ. ಉಪದೇಶ ಮುಗಿಸಿ, "ತಿಳಿಯಿತೆ?" ಗುರು ಕೇಳಿದ. ಶಿಷ್ಯನ ಉತ್ತರ "ಎಲ್ಲ ಹೋಗಿದೆ; ಬಾಲ ಸ್ವಲ್ಪ ಉಳಿದಿದೆ" ಎಂದು! ಅದೇಕ್ಷಣ ತುಡುಗ ಇಳಿದು ಬಂದು ನಮಸ್ಕರಿಸಿ. "ಧನ್ಯನಾದೆ! ತಮ್ಮ ಅಮೃತ ನುಡಿಗಳು ನನ್ನಲ್ಲಿ ದಿವ್ಯ ಜ್ಯೋತಿಯನ್ನು ಬೆಳಗಿಸಿವೆ!" ಎಂದು ನಿವೇದಿಸಿದ! ಶಿಷ್ಯ ಗುರೂಪದೇಶ ಪಡೆದು ಕೇಳಲೇದೇ ಅಲ್ಲಿ ಕುಳಿತವ. ಏಕಾಂತವಾದ ವನ! ಆದರೆ ಅವನಿಗೆ ತಿಳಿಯಲಿಲ್ಲ. ವರ್ತಮಾನ ಪ್ರತಿಬಂಧಕವು ಅವನ ಮನಸ್ಸನ್ನು ಅಲುಗಿಸಿತು. ಎಂದಿಗೂ ಶಾಸ್ತ್ರಕೇಳದ ತುಡುಗ ಹೀನ ಸಂಸ್ಕಾರದವ; ಆದರೆ ಮನಸ್ಸು ಸ್ಥಿರಗೊಳಿಸಿ ಕೇಳಿದ್ದರಿಂದ ಉಪದೇಶ ಅವನಿಗೆ ಫಲಿಸಿತು. ಆತ್ಮ ದರುಶನವಾಯ್ತು.

ಒಟ್ಟಾರೆ. ನಿರಾಮಯ ನಿಶ್ಚಿಂತ ಮನವಿಲ್ಲದವರಿಗೆ ಆತ್ಮ ಸಾಕ್ಷಾತ್ಕಾರ ಇಲ್ಲ; ಪ್ರಪಂಚದ ಕಾಟ ತಪ್ಪಿಲ್ಲ. ಅವರು ಓದಿದರೂ, ಹೇಳಿದರೂ, ಕೇಳಿದರೂ ಯಾವುದೋ ಅಚ್ಚರಿಯ ತತ್ತ್ವಮೆಂದೇ ಬಗೆಯುತ್ತಾರೆ. ಭಗವಂತನು ಪ್ರಸ್ತುತ ಮಂತ್ರದಲ್ಲಿ ಇದೇ ಸಂಗತಿಯನ್ನು ಸುಂದರವಾಗಿ ಚಿತ್ರಿಸಿದ್ದಾನೆ.

(೧) ಆಶ್ಚರ್ಯವತ್ ಪಶ್ಯತಿ ಕಶ್ಚಿತ್ ಏನಂ:- "ಆಶ್ಚರ್ಯ" ಇದು ಅರ್ಥಪೂರ್ಣ ಪದ. ಇಲ್ಲದ ವಸ್ತುವು ಅನಿರೀಕ್ಷಿತವಾಗಿ ತೋರಿದಾಗ ಅಚ್ಚರಿ ಉಂಟುಮಾಡುವದು. ಉದಾ: ಜಾದೂಗಾರ ಬರಿಗೈಯನ್ನು ಆಕಾಶದಲ್ಲಿ ಬೀಸಿ ಒಂದು ಹಕ್ಕಿಯನ್ನು ಹಿಡಿದು ತೋರಿಸಿದಾಗ, ಖಾಲಿ ಟೋಪಿಯಿಂದ ನೀರು ಹರಿದಾಗ, ಜಾದುಗಾರನ ಕಣ್ಸನ್ನೆಯಿಂದ ಒಬ್ಬ ವ್ಯಕ್ತಿ ಆಕಾಶದಲ್ಲಿ ತೇಲಿದಾಗ, ತಲೆಬುರುಡೆ ಮಾತನಾಡಿದಾಗ "ಆಶ್ಚರ್ಯ" "ಅದ್ಭುತ!" ಎನ್ನುತ್ತೇವೆ. ಹಾಗೆ ಕೆಲವರು ಆತ್ಮನನ್ನು ಅಂಥ ಯಾವುದೋ ಅಚ್ಚರಿಯ ವಸ್ತುವೆಂದು ಕಾಣುತ್ತಾರೆ, ಕೇಳುತ್ತಾರೆ, ಹೇಳುತ್ತಾರೆ! ಎಂದು ಭಾವ.

'ದೃಶ್' "ಪಶ್ಯತಿ" (ನೋಡುತ್ತಾನೆ) ಎಂಬ ಪದವು ಅಪರೋಕ್ಷ ದರ್ಶನ ನಿರ್ದೇಶಕವಿದೆ. ಗುರು ಶ್ರುತಿಗಳು ಆತ್ಮನನ್ನು ಕಣ್ಣುಮುಂದೆ ಕಟ್ಟುವಂತೆ ವರ್ಣಿಸಿದಾಗ, ಆ ವರ್ಣನೆಯ ಮೂಲಕ ಆತ್ಮವಸ್ತುವಿನ ಶಾಬ್ದಿಕದರ್ಶನ ವಾಗುವದಕ್ಕೂ "ಪಶ್ಯ" ಪದ ಉಪಯೋಗಿಸಲ್ಪಟ್ಟಿದೆ. ಪಶ್ಯತಿ ಪದ ತ್ರಿಪುಟಿ ಘಟಿತ. ದೃಷ್ಟಾ, ದರ್ಶನ, ದೃಶ್ಯ ಇವು ತ್ರಿಪುಟಿಯ ಘಟಕಗಳು. ಜೀವಾತ್ಮನು ದೃಷ್ಟಾ, ಮನೋವೃತ್ತಿಯು ದರ್ಶನ, ಆತ್ಮನು ದೃಶ್ಯ. ಈ ಮೂರರ ಬಗ್ಗೆಯೂ ಅಚ್ಚರಿ ಪಟ್ಟುಕೊಳ್ಳುವ ಬಗೆಯನ್ನು ತಿಳಿದುಕೊಳ್ಳುವಾ.

"ಆತ್ಮನು ನಿತ್ಯ. ನಿರಘ. ನಿರಂಜನ. ಅವ್ಯಕ್ತ, ಅಚಿಂತ್ಯ, ಅವಿಕಾರಿ. ವಿಶ್ವ ವೆಲ್ಲ ಅವನೇ. ಬರಿ ಸಂಕಲ್ಪ ಮಾತ್ರದಿಂದ ವಿಶ್ವವನ್ನು ಸೃಷ್ಟಿಸಿ ಅದರಲ್ಲಿ ಪ್ರವೇ ಶಿಸಿ ನಾಮ ರೂಪುಗಳನುಂಟು ಮಾಡಿದ. ಅವನು ಸರ್ವಮೂಲ. ವಿಶ್ವಾಭರಣದ ಅಮೂಲ್ಯ ಸ್ವರ್ಣ! ಜಗತ್ತು ನಾಮ ಮಾತ್ರ; ಅವನು ಸತ್ಯ!" ಇದು ಗುರು, ಶಾಸ್ತ್ರಗಳ ಉಪದೇಶ ಸಾರ. ಇದನ್ನು ಕೇಳಿದ ವ್ಯಕ್ತಿ ಮೂರು ಬಗೆಯಾಗಿ ಅಚ್ಚರಿ ಪಡುತ್ತಾನೆ.

ಅ) ದೃಶ್ಯದ ಬಗೆಗೆ ಅಚ್ಚರಿ: "ಆತ್ಮನು ಜ್ಞಾನಘನ! ನಿರಂಜನ ಬ್ರಹ್ಮ! ವಿಶ್ವವ್ಯಾಪಿ! ಒಳಹೊರಗೆಲ್ಲ ತುಂಬಿದ ದಿವ್ಯಾಗಸ! ಕೇವಲ ಸತ್ಯ! ನನಗೆ ಅವನು ಅಪರೋಕ್ಷನೆ? ನನ್ನ ಅನುಭವಕ್ಕೆ ಬರದಿದ್ದರೂ ಅವನು ನಾನೇ? ಎಂಥ ವಿಚಿತ್ರ ಈ ಆತ್ಮ! ತಾನು ಅಜಡ; ಜಡ ಸೃಷ್ಟಿಯ ಆಧಾರ! ತಾನು ಅವಿಕಾರಿ, ಆದರೂ ವಿಕಾರದ ಪರಮಾಶ್ರಯ! ತಾನು ಕಾಲಾತೀತ; ಆದರೆ ಕಾಲ ಪ್ರವಾಹದ ಆಧಾರ ಭೂಮಿ! ಇಂಥವನು ದೃಶ್ಯವೆಂಬುದು ಕೌತುಕವಲ್ಲವೆ?"

ಬ) ದರ್ಶನದ ಬಗೆಗೆ ಅಚ್ಚರಿ : "ಮನಸ್ಸು ಜಡ; ಭಾವನೆಗಳ ಸರಸ್ಸು; ವಿಚಾರ ತರಂಗಗಳ ಸಾಗರ. ಆತ್ಮನಾದರೋ ಅಜಡ; ಭಾವ ವಿಚಾರಗಳಿಗೆ ಅತೀತ! ಕಲ್ಪನೆಗೆ ಅವಿಷಯ. ಹೀಗಿದ್ದು ಈ ಮನಸ್ಸು ನಿರ್ಭಾವ, ನಿರ್ವಿಚಾರ, ನಿಷ್ಕ್ರಿಯವಾಗಬೇಕು! ಅನಂತ ಅಮರ ಅಗಮ್ಯ ಆತ್ಮನ ಆಕಾರಗೊಳ್ಳಬೇಕು! ನಿರಾಕಾರದ ಆಕಾರವಾಗಬೇಕು! ಓ, ಎಂಥ ವಿಸ್ಮಯಕರ ಸಂಗತಿ ಇದು!"

ಕ) ದೃಷ್ಟನ ಬಗೆಗೆ ಅಚ್ಚರಿ: "ಜೀವನು ಪರಾಧೀನ, ಪರಿಚ್ಛಿನ್ನ, ಸಂಸಾರಿ. ಅಜ್ಞ, ವಿಕಾರಿ. ಆತ್ಮನು ಸ್ವತಂತ್ರ, ಸರ್ವವ್ಯಾಪಿ, ಸಾಕ್ಷಿ, ಸರ್ವಜ್ಞ ಹಾಗು ನಿರ್ವಿಕಾರಿ! ಅಂಥ ಆತ್ಮನೇ ಈ ಜೀವನು? ಈ ಅಜ್ಞ ಆ ಸರ್ವಜ್ಞನನ್ನು ಅರಿಯಬೇಕೆ? ಎಂಥ ಆಶ್ಚರ್ಯದ ಸಂಗತಿ!?"

ವೇದ ಉಪನಿಷತ್ತುಗಳನೋದಿ, ಅರ್ಥಯಿಸಿಕೊಂಡು ಈ ಮೂರು ಬಗೆ ಯಲ್ಲಿ ಅಚ್ಚರಿ ಪಡುವವರು ಅನೇಕರು. ಇವರೆಲ್ಲ ಆತ್ಮನನ್ನು ಅಪರೋಕ್ಷವಾಗಿ ತಿಳಿಯದವರು. ಅವನನ್ನು ಪವಿತ್ರ ಗ್ರಂಥಗಳಲ್ಲಿ, ಗುರು ವಚನದಲ್ಲಿ ಕಂಡು ಆಶ್ಚರ್ಯ ಪಡುತ್ತಾರೆ; ಅಂದರೆ ಅವನನ್ನು ಅಚ್ಚರಿಯಿಂದ ಕಾಣುತ್ತಾರೆ.

(೨) ಆಶ್ಚರ್ಯವದ್ವದತಿ ತಥೈವ ಚಾನ್ಯಃ :- 'ವದತಿ' ಪದದಲ್ಲಿ ವಕ್ತಾ, ವಚನ, ವಾಚ್ಯ ಎಂಬ ಮೂರು ಘಟಕಗಳಿವೆ. ಆ ಮೂರರ ವಿಷಯ ವಾಗಿ ಕೆಲವರು ಅಚ್ಚರಿ ಪಡುತ್ತಾರೆ.

(ಅ) ವಾಚ್ಯ ಸಂಬಂಧದ ಅಚ್ಚರಿ, "ಆತ್ಮನು "ಯತೋ ವಾಚೋ ನಿವರ್ತಂತೇ" ಯಾವುದನ್ನು ಕಾಣದೆ ಮಾತುಗಳು ಹಿಂತಿರುಗುವವೋ ಅಲ್ಲಿ ರುವ ಸತ್ಯ ವಸ್ತು. ಅಂಥವನನ್ನು ವಾಚ್ಯನೆಂದು ಬಣ್ಣಿಸುವದು ನಿಜಕ್ಕೂ ಅಚ್ಚರಿ."

(ಬ) ವಚನ ಸಂಬಂಧ ಅಚ್ಚರಿ: "ವಚನವು ಜಡ ತಾಲ್ವಾದಿ ಅಷ್ಟ ಸ್ಥಾನವರ್ತಿವಾಕ್ಕಿನಿಂದ ಹುಟ್ಟಿದ ಸ್ಥೂಲ ಶಬ್ದ ತರಂಗವೇಳ ಬರಿ ಜಾಗ್ರಕ್ಕೆ ಸಿಮಿತವಾಗಿದೆ. ಆತ್ಮನು ತುರಿಯ, ತುರಿಯಾತೀತಗಳಾಚೆ ದಿವ್ಯಾಂತರಾಳದಲ್ಲಿ ಪ್ರಜ್ವಲಿಸುವ ತತ್ತ್ವ! ಹೀಗಿರುವಾಗ ಈ ಜಾಗ್ರದ ಶಬ್ದ ಅವನನ್ನು ವರ್ಣ ಸುವದೆಂದರೇನು? ಆತ್ಮನು ಪರವಾಣಗತೀತವಾದ ನಿಶ್ಶಬ್ದ ನಿಜ. ಅಂಥವ ನನ್ನು ವಾಯುಸ್ಪಂದನಾಜನ್ಯವಾದ ಸಾಮಾನ್ಯ ವಚನವು ರೇಖಿಸುವದೆಂದರೆ ನಂಬಲಾಗದ ಅಚ್ಚರಿಯ ಮಾತು!"

ಕ) ವಕ್ತಾ ಸಂಬಂಧದ ಅಚ್ಚರಿ: ನಿರವಯವ ನಿರಾಮಯ ನಿರತಿಶಯ ಆತ್ಮನ ದರ್ಶನವಾದ ಬಳಿಕ ಜೀವ ದೃಷ್ಟಾರನು ಬಯಲು! ಹೀಗಿರುವಾಗ ಆ ಆತ್ಮನನ್ನು ಕಂಡು, ಕೆಳಗಿಳಿದು ಬಂದು ಶಬ್ದಗಳಲ್ಲಿ ಹೇಳುವದೆಂದರೆ ಸಹಜ ಸಂಗತಿಯೆ? ಈ ಹೇಳುವ ವಕ್ತಾ ಅದು ಹೇಗೆ ಉಳಿದ ? ಬೆಂಕಿಯಲ್ಲಿ ಪೂರ್ಣ ಸುಟ್ಟು ಹೋದ ಕಟ್ಟಿಗೆಯ ಗೊಂಬೆ ಮತ್ತೆ ಹೊರಬಂದು ಬೆಂಕಿಯ ಸ್ವರೂಪ ನಿವೇದಿಸುವದೆಂದು ಹೇಳುವದೂ ಜೀವನು ವಕ್ತೃವಾಗಿ ಆತ್ಮ ಮಹಿ ಮೆಯ ಕಥನ ಮಾಡುವದೂ ಅಷ್ಟೇ ಕುತೂಹಲದ ಮಾತು!

ಹೀಗೆ ಮೂರು ರೀತಿಯಲ್ಲಿ ಆಶ್ಚರ್ಯ ಪಡುವವರಿಗೂ ಆತ್ಮನ ತಿಳಿವಾ ಗಿಲ್ಲ. ಅವರು ಆತ್ಮ ಕಥನವನ್ನೆಲ್ಲ ವಿಚಿತ್ರವಾದ ವಿಷಯವೆಂದೇ ಭಾವಿಸುತ್ತಾರೆ.

೩) ಆಶ್ಚರ್ಯವತ್ ಚೈನಮನ್ಯಃ ಶೃಣೋತಿ:- ಶೃಣೋತಿ ಪದಕ್ಕೂ ಮೂರಂಗಗಳು; ಶ್ರೋತಾ ಶ್ರವಣ ಶ್ರಾವ್ಯ. ಶ್ರೋತಾ ಜೀವಾತ್ಮ; ಶ್ರವಣ ಇಂದ್ರಿಯ; ಶ್ರಾವ್ಯ ಆತ್ಮ. ಇಲ್ಲಿಯೂ ಮೂರುವಿಧ ಅಚ್ಚರಿಗಳಿವೆ.

ಅ) ಶ್ರಾವ್ಯ ವಿಷಯಕ ಅಚ್ಚರಿ: "ಆತ್ಮನು ಅತೀಂದ್ರಿಯ; ಕೇವಲಾ-ಸ್ತಿತ್ವ, ಗುಣಗಳಿಲ್ಲದ ಚಿದ್ಬಯಲು. ಅವನನ್ನು ಶ್ರವಣೇಂದ್ರಿಯ ಗ್ರಹಿಸೀತೆ? ಮೂರ್ತ ವಸ್ತುಗಳ ಬಗ್ಗೆ ಕೇಳಬಹುದು; ಸಂಸ್ಕಾರಗಳ ಬಗ್ಗೆ ಆಲಿಸಬಹುದು; ಸ್ವರ್ಗ ನರಕಗಳ ಕಥೆಯೂ ಶ್ರಾವ್ಯವಾದೀತು. ಆದರೆ ಲೋಕಾತೀತ, ಸಂಸ್ಕಾರಾ ಸಂಸ್ಪೃಷ್ಟ, ಅಮೂರ್ತ ಮಹಾ ವಸ್ತುವನ್ನು ಶ್ರಾವ್ಯವೆಂದು ಹೇಳುವದು ತೀರ ಅಚ್ಚರಿ!"

ಬ) ಶ್ರವಣ ವಿಷಯಕ ಅಚ್ಚರಿ: "ಜಡವಾದ ಶ್ರವಣೇಂದ್ರಿಯ ಜಡ ಶಬ್ದಗ್ರಾಹಿ. ಸ್ವಪ್ನ ಸುಪ್ತಿ ಮಂಡಲಗಳನ್ನೇ ಗ್ರಹಿಸದ ಇದು ಸರ್ವೋಪರಿ ರಾರಾಜಿಸುವ ನಿಶ್ಶಬ್ದ ಪರವಸ್ತುವಿನನ್ನು ಶಬ್ದ ಮೂಲಕ ಪರಿಗ್ರಹಿಸಬಲ್ಲುದೆ? ಹೀಗಿದ್ದು ನಾನು ಆತ್ಮ ವಿಷಯ ಕೇಳುವೆನೆಂದು ನುಡಿಯುವದು ಅಚ್ಚರಿಯ ಮಾತು."

ಕ) ಶ್ರಾವಕನ ವಿಷಯವಾಗಿ ಆಚ್ಚರಿ:- "ಕೇಳುವವ ಜೀವ. ಇವನು ಬದ್ಧ ಸಂಸಾರಿ. ಬಂಧು ಬಾಂಧವರ ವ್ಯಾವಹಾರಿಕ ಶಬ್ದ ಆಲಿಸುವಲ್ಲಿ ರತನಾದ ಈ ಜೀವನು ಅವ್ಯವಹಾರಿಕ ಚಿದ್ಭಯಲ ಆತ್ಮನ ಬಗ್ಗೆ ಕೇಳುವನೆನ್ನುವದು ನಂಬಲಾಗದಂಥ ವಿಸ್ಮಯ!"

ಹೀಗೆ ಅಚ್ಚರಿಯಿಂದ ಕೇಳುವವರಿಗೂ ಆತ್ಮ ಜ್ಞಾನವಿಲ್ಲ.

ಳ) ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್:- ಕೇಳಿ ನೋಡಿ ಮಾತ ನಾಡಿ ಯಾವನೂ ತನ್ನ ಸ್ವರೂಪವೇ ಆತ್ಮವೆಂಬ ಅರಿವ ಪಡೆಯಲಾರ. "ನಾನು ನೋಡಿದೆ; ನಾನು ಉಪದೇಶಿಸಿದೆ. ನಾನು ಕೇಳಿದೆ" ಎನ್ನುವವರಾರೂ ನೋಡಿಲ್ಲ; ಉಪದೇಶಿಸಿಲ್ಲ; ಕೇಳಿಲ್ಲ! "ನಾಯಮಾತ್ಮಾ ಪ್ರವಚನೇನ ಲಭ್ಯಃ" ಈ ಆತ್ಮನು ಪ್ರವಚನದಿಂದ ಲಭ್ಯನಲ್ಲ.

ಭಗವಂತ:- "ಅರ್ಜುನ, ಜಗತ್ತಿನಲ್ಲಿ ಸಹಸ್ರಾರು ಪಂಡಿತರಿದ್ದಾರೆ; ಹೇಳುವ ಗುರುಗಳಿದ್ದಾರೆ. ಕೇಳುವ ಭಕ್ತರಿದ್ದಾರೆ. ಆದರೆ ಅವರು ಆತ್ಮನನ್ನು ಸಾಕ್ಷಾತ್ ತಮ್ಮ ರೂಪೇದೇ ಕಾಣಲಿಲ್ಲ, ಹೇಳಲಿಲ್ಲ ಹಾಗು ಕೇಳಲಿಲ್ಲ! ಯಾವುದೋ ಅದ್ಭುತ ಅಚ್ಚರಿ ವಸ್ತುವಿನ ಕಥೆಯೆಂದೇ ನೋಡಿದರು, ಹೇಳಿದರು, ಕೇಳಿದರು! ಆದುದರಿಂದಲೇ, ನೋಡಿಯೂ ಅವರು ನೋಡಲಿಲ್ಲ; ಹೇಳಿಯೂ ಅರಿಯಲಿಲ್ಲ; ಕೇಳಿಯೂ ತಿಳಿಯಲಿಲ್ಲ! ಆದುದರಿಂದಲೇ ಅವರೆಲ್ಲ ಸಾಂಸಾರಿಕ ವಿಷಯಗಳಿಗಾಗಿ ಶೋಕ ಮಾಡುತ್ತಾರೆ. ಅವರಂತೆ ನೀನಾಗಬೇಡ. ಸಲ್ಲದ ಸಂಗತಿಗಳಿಗಾಗಿ ದುಃಖಿ ಸಬೇಡ. ಏಕೆಂದರೆ .."

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ।**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥೩೦॥**

ಅರ್ಥ:- ಭಾರತ= ಅರ್ಜುನ, ಅಯಂ ದೇಹೀ= ಈ ಆತ್ಮನು ಸರ್ವಸ್ಯ ದೇಹೇ= ಎಲ್ಲರ ದೇಹದಲ್ಲಿಯೂ ನಿತ್ಯಂ= ಸದಾ ಅವಧ್ಯಃ= ಅವಿನಾಶಿಯು. ತಸ್ಮಾತ್= ಆದ್ದರಿಂದ ತ್ವಂ= ನೀನು, ಸರ್ವಾಣಿ ಭೂತಾನಿ= ಎಲ್ಲ ಪ್ರಾಣಿಗಳನ್ನು ಕುರಿತು ಶೋಚಿತುಂ= ಚಿಂತಿ ಸಲು ನ ಅರ್ಹಸಿ= ಅರ್ಹನಾಗಲಾರೆ.

ವಿವರಣೆ:- ಭಗವಂತ:- "ಭಾರತ, ಚರಾಚರ ಜೀವಿಗಳು ಅಗಣಿತ. ಅವುಗಳಲ್ಲಿ ಆಕಾಶದಂತೆ ವ್ಯಾಪಿಸಿ ನಿಂತ ಆತ್ಮನು ಅದ್ವಯ. ಆ ದೇಹಗಳು ಅಣು

ಸಂಕಲಿತ; ಸಾವಯವ; ಆದುದರಿಂದ ವಧ್ಯ! ಆತ್ಮನು ಅನಣು; ನಿರವಯವ; ಆದುದರಿಂದ ಅವಧ್ಯ! ಅವನು ಅಮೃತ; ಸುಖ ದುಃಖ ಭಾವ ಪರಿಧಿಯಾಚೆಗಿನ ಶಾಂತ ಸಾಗರ! ಅವನು ನಿತ್ಯ. ಜೀವಿಗಳೆಂದರೆ ದೇಹಗಳಲ್ಲ; ಆತ್ಮನ ಚಿದಂಶರು. ದೇಹದತ್ತ ನೋಡಬೇಡ; ಆತ್ಮನತ್ತ ಲಕ್ಷಿಸು. ಎಲ್ಲ ಜೀವರು ನಿತ್ಯ, ನಿರಾಮಯು ರೆಂಬ ಸತ್ಯಜ್ಞಾನ ಪಡೆ. ಆಗ ಯಾವ ಪ್ರಾಣಿಯ ಬಗ್ಗೆಯೂ ಚಿಂತಿಸಲಾರೆ."

ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ಕ್ಷತ್ರಿಯಸ್ಯ ನವಿದ್ಯತೇ ॥೩೧॥

ಅರ್ಥ:- ಸ್ವಧರ್ಮಂ = ಸ್ವಧರ್ಮವನ್ನು, ಅಪಿ ಅವೇಕ್ಷ್ಯ ಚ = ನೋಡಿದರೂ ಕೂಡ, ವಿಕಂಪಿತುಂ = ಭಯದಿಂದ ಕಂಪಿಸಲು, ನ ಅರ್ಹಸಿ = ಯೋಗ್ಯನಲ್ಲ, ಹಿ = ಏಕೆಂದರೆ, ಧರ್ಮ್ಯಾತ್ ಯುದ್ಧಾತ್ = ಧರ್ಮಯುದ್ಧಕ್ಕಿಂತ; ಕ್ಷತ್ರಿಯಸ್ಯ = ಕ್ಷತ್ರಿಯನಿಗೆ, ಅನ್ಯಃ ಶ್ರೇಯಃ = ಬೇರೆ ಶ್ರೇಯಸ್ಸು ನ ವಿದ್ಯತೇ = ಇರುವದಿಲ್ಲ.

ವಿವರಣೆ:- ನಮ್ಮ ನಮ್ಮ ಸ್ವಭಾವ ಹಾಗು ಪರಿಸರಕ್ಕೆ ಅನುಗುಣ ವಾಗಿ ನಮಗೆಲ್ಲ ಒಂದೊಂದು ಕಾಯಕ ನಿರ್ದಿಷ್ಟವಾಗಿದೆ. ನಮ್ಮಲ್ಲಿ ಒಬ್ಬ ವ್ಯಾಪಾರಿ, ಇನ್ನೊಬ್ಬ ವೈದ್ಯ, ಮತ್ತೊಬ್ಬ ವಿಶ್ವಕರ್ಮ. 'ನನ್ನದು ಪ್ರವಚನ ಕಾಯಕ. ನಿಮ್ಮದು ಕೇಳುವ ಕಾಯಕ.' ಹೀಗೆ ವ್ಯಕ್ತಿಗೊಂದು ಕಾಯಕ. ತನ್ನ ಕಾಯಕವನ್ನು ತಾನು ಚ್ಯುತಿ ಬರದಂತೆ ಪ್ರಾಮಾಣಿಕವಾಗಿ ನಿರ್ವ ಹಿಸುವಲ್ಲಿಯೇ ತನ್ನ ಶ್ರೇಯ ಅಡಗಿದೆ.

ಪೂರ್ವ ಕಾಲದಲ್ಲಿ ತಾರಕಾಕ್ಷ ವಿದ್ಯುನ್ಮಾಲಿಗಳು ಜಗತ್ತಿಗೇ ಕಂಟಕರಾಗಿ ಕಾಡುತ್ತಿದ್ದಾಗ ಬ್ರಹ್ಮಾದಿ ತ್ರಿಮೂರ್ತಿಗಳು ತಮ್ಮ ಕೆಲಸ ಬರಿ ಜಪ ತಪ ಸಮಾಧಿಗಳೆಂದು ಬಗೆದು ಕಣ್ಮುಚ್ಚಿ ಕುಳಿತಿರದೆ ಸೆಣಸಿದರು. ಜಗತ್ತನ್ನು ಸಂಕಷ್ಟದಿಂದ ಪಾರು ಮಾಡಿದರು.

ಭಗವಂತ-"ಅರ್ಜುನ, ಆತ್ಮಾನಾತ್ಮವಿಚಾರ ಬಿಟ್ಟುಬಿಡೋಣ; ಸಾಮಾನ್ಯ ವರ್ಣಧರ್ಮಾನುಸಾರವಾದರೂ ವಿಚಾರ ಮಾಡು. ನೀನಂತು ಕ್ಷತ್ರಿಯ. ಅಧರ್ಮವನ್ನು ಎದುರಿಸಿ ಧರ್ಮವನ್ನು ಕಾಪಾಡುವದು ನಿನ್ನ ಪ್ರತಿಜ್ಞಾ ಬದ್ಧ ಕರ್ತವ್ಯ! ನೀನೀಗ ಈ ಕರ್ತವ್ಯ ಪಾಲಿಸಲೇಬೇಕಲ್ಲ! ವರ್ಣ ಧರ್ಮ ಪರಿಪಾಲನೆಯಲ್ಲಿಯೇ ನಿನ್ನ ಶ್ರೇಯ ಅಡಗಿದೆ ಎಂಬುದನ್ನು ಮರೆಯದಿರು. ಯುದ್ಧರಂಗದಿಂದ ಹಿಂದೆಗೆದು ಓಡದಿರು!"

ಕಾಮ ಕ್ರೋಧಾದಿ ಆಸುರೀ ಶಕ್ತಿಗಳು ಮನೋಬುದ್ಧಿಗತ ವಿವೇಕದ ಮೇಲೆ ದಾಳಿ ಇಟ್ಟಾಗ ಅವುಗಳೊಂದಿಗೆ ಕಾದಿ ವಿವೇಕ ಹಾಗು ಮನೋ ಪಾವಿತ್ರ್ಯ ಕಾಪಾಡುವದು ಮನುಷ್ಯನ ಕ್ಷಾತ್ರ ಧರ್ಮ. ಹೀಗೆ ಮಾಡುವಲ್ಲಿಯೇ ಅವನ ಶ್ರೇಯವಿದೆ. ಈ ಧರ್ಮದಿಂದ ಅವನು ಚ್ಯುತನಾದರೆ ಅಂತರಂಗ

ಕಾಮದ ತಾಪದಿಂದ ಬೆಂದುಹೋಗುವದು; ಬುದ್ಧಿಯು ಮೋಹದಿಂದ ಆಚ್ಛಾದಿತವಾಗುವದು. ವ್ಯಕ್ತಿಯು ದುಷ್ಟ ಶಕ್ತಿಗಳ ದಾಸನಾಗುವನು. ಇದೇ ಅಧಃಪತನ. ಸಾಧಕ ಜೀವನು ಯಾವಾಗಲು ಜಾಗ್ರತನಾಗಿದ್ದು ಒಳಗಿರುವ ಹೃದಯ ಪರಿಶುದ್ಧಿಯನ್ನು ಕಾಪಾಡಬೇಕು; ಎನ್ನುವದೇ ಈ ಮಂತ್ರದ ಬೋಧ.

ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥೩೨॥

ಅರ್ಥ:– ಪಾರ್ಥ = ಅರ್ಜುನ, ಯದೃಚ್ಛಯಾ ಉಪಪನ್ನಂ= ತಾನಾಗಿಯೇ ಬಂದಿರುವ, ಚ= ಮತ್ತು ಅಪಾವೃತ ಸ್ವರ್ಗದ್ವಾರಂ= ತೆರೆದ ಸ್ವರ್ಗದ ಬಾಗಿಲಿನಂತಿರುವ, ಈದೃಶಂ ಯುದ್ಧಂ = ಇಂಥ ಯುದ್ಧವನ್ನು, ಸುಖಿನಃ ಕ್ಷತ್ರಿಯಾಃ (ಏವ) = ಭಾಗ್ಯಶಾಲಿ ಕ್ಷತ್ರಿಯರೇ ಲಭಂತೇ= ಪಡೆಯುತ್ತಾರೆ.

ವಿವರಣೆ:– ಭಗವಂತ:- " ಪಾರ್ಥ, ಇದು ಬಯಸಿದ ಸಮರವಲ್ಲ; ತಾನಾಗಿ ಬಂದಿದೆ. ಅಧರ್ಮ, ಅತ್ಯಾಚಾರ, ಅಮಾನುಷ ಕೃತ್ಯಗಳಲ್ಲಿ ರತರಾದ ಕೌರವರನ್ನುಮೆಟ್ಟಿ ಧರ್ಮಪ್ರತಿಷ್ಠಾಪನೆ ಮಾಡುವ ಉದ್ದೇಶ ಈ ಯುದ್ಧಕ್ಕಿದೆ.

ಈ ಪವಿತ್ರ ಯುದ್ಧವನ್ನು ಪಡೆಯುವವರು ನಿಜವಾಗಿಯೂ ಭಾಗ್ಯಶಾಲಿ ಕ್ಷತ್ರಿಯರು! ನೀನೀಗ ಹಿಂದೆಗೆಯದಿರು; ಇದರಲ್ಲಿ ನಿನ್ನ ಶ್ರೇಯವಿದೆ. ಅಪರೂಪವಾಗಿ ಬರುವ ಇಂಥ ಸನ್ನಿವೇಶಗಳನ್ನು ಕಳೆದುಕೊಳ್ಳುವದು ಬುದ್ಧಿವಂತಿಕೆ ಅಲ್ಲ. ಅಲ್ಲದೆ .."

ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।
ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥೩೩॥

ಅರ್ಥ:– ಅಥ= ಒಂದು ವೇಳೆ, ತ್ವಂ= ನೀನು, ಇಮಂ= ಈ ಧರ್ಮ್ಯಂ= ಧರ್ಮಯುಕ್ತವಾದ, ಸಂಗ್ರಾಮಂ= ಯುದ್ಧವನ್ನು ನ ಕರಿಷ್ಯಸಿ ಚೇತ್= ಮಾಡದಿದ್ದರೆ, ತತಃ= ಆಗ ಸ್ವಧರ್ಮಂ= ಸ್ವಧರ್ಮವನ್ನು ಕೀರ್ತಿಂ ಚ= ಮತ್ತು ಕೀರ್ತಿಯನ್ನು ಹಿತ್ವಾ= ಕಳೆದುಕೊಂಡು, ಪಾಪಂ= ಪಾಪವನ್ನು ಅವಾಪ್ಸ್ಯಸಿ= ಹೊಂದುತ್ತಿ.

ವಿವರಣೆ:– ಭಗವಂತ:- "ಕೌಂತೇಯ, ಒಂದು ವೇಳೆ ನೀನು ಈ ಧರ್ಮ ಸಮರದಿಂದ ಹಿಂದೆಗೆದೆಯಾದರೆ ಕ್ಷತ್ರಿಯ ಧರ್ಮವನ್ನೇ ಕೊಲೆಗೈದ ಘೋರ ಪಾಪ ನಿನ್ನ ತಲೆಗೆ ಬರುವದು. ರಾಷ್ಟ್ರದ ಲಕ್ಷಾಂತರ ಪ್ರಜೆಗಳನ್ನು ರಕ್ಷಿಸುವ ಹೊಣೆಹೊತ್ತ ಮುಖಂಡನು ಕಷ್ಟದ ಸಮಯದಲ್ಲಿಯೇ ಕೈಬಿಟ್ಟರೆ ಆಗುವ ಅನಾಹುತ ಅಪಾರ. ರಾಷ್ಟ್ರವೇ ನಿರ್ನಾಮವಾದೀತು!

"ಅರ್ಜುನ, ನೀನೊಬ್ಬ ಸಾಮಾನ್ಯ ಪ್ರಜೆಯಲ್ಲ ಮನಬಂದಂತೆ ವ್ಯವಹರಿಸಲು. ಪ್ರಜಾವರ್ಗದ ಹಿತಾಹಿತ ನಿನ್ನ ಕೈಯಲ್ಲಿದೆ. ಸನಾತನ ನೈತಿಕ ಧರ್ಮವನ್ನು ಕಾಪಾಡುವ ಭಾರ ನಿನ್ನಮೇಲಿದೆ. ನೀನು ಈ ಕ್ಷಣದಲ್ಲಿ ತಪ್ಪಿ ಹೆಜ್ಜೆ ಇಟ್ಟರೆ ಸರ್ವ ವಿನಾಶ ಕಟ್ಟಿಟ್ಟದ್ದು. ನಿನ್ನ ಆಚಂದ್ರಾರ್ಕವಾಗಿ ಬಾಳಬೇಕಾದ

ಸಂಕಲಿತ; ಸಾವಯುವ; ಆದುದರಿಂದ ವಧ್ಯ! ಆತ್ಮನು ಅಣು; ನಿರವಯುವ; ಆದುದರಿಂದ ಅವಧ್ಯ! ಅವನು ಅಮೃತ; ಸುಖ ದುಃಖ ಭಾವ ಪರಿಧಿಯಾಚೆಗಿನ ಶಾಂತ ಸಾಗರ! ಅವನು ನಿತ್ಯ. ಜೀವಿಗಳೆಂದರೆ ದೇಹಗಳಲ್ಲ; ಆತ್ಮನ ಚಿದಂಶರು. ದೇಹದತ್ತ ನೋಡಬೇಡ; ಆತ್ಮನತ್ತ ಲಕ್ಷಿಸು. ಎಲ್ಲ ಜೀವರು ನಿತ್ಯ, ನಿರಾಮಯು ರೆಂಬ ಸತ್ಯಜ್ಞಾನ ಪಡೆ. ಆಗ ಯಾವ ಪ್ರಾಣಿಯ ಬಗ್ಗೆಯೂ ಚಿಂತಿಸಲಾರೆ."

ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।
ಧರ್ಮ್ಯಾದ್ಧಿಯುದ್ಧಾಚ್ಛ್ರೇಯೋಽನ್ಯತ್ಕ್ಷತ್ರಿಯಸ್ಯ ನವಿದ್ಯತೇ ॥೩೧॥

ಅರ್ಥ:- ಸ್ವಧರ್ಮಂ = ಸ್ವಧರ್ಮವನ್ನು, ಅಪಿ ಅವೇಕ್ಷ್ಯ ಚ = ನೋಡಿದರೂ ಕೂಡ, ವಿಕಂಪಿತುಂ = ಭಯದಿಂದ ಕಂಪಿಸಲು, ನ ಅರ್ಹಸಿ = ಯೋಗ್ಯನಲ್ಲ. ಹಿ = ಏಕೆಂದರೆ, ಧರ್ಮ್ಯಾತ್ ಯುದ್ಧಾತ್ = ಧರ್ಮಯುದ್ಧಕ್ಕಿಂತ, ಕ್ಷತ್ರಿಯಸ್ಯ = ಕ್ಷತ್ರಿಯನಿಗೆ, ಅನ್ಯಃ ಶ್ರೇಯಃ = ಬೇರೆ ಶ್ರೇಯಸ್ಸು ನ ವಿದ್ಯತೇ = ಇರುವದಿಲ್ಲ.

ವಿವರಣೆ:- ನಮ್ಮ ನಮ್ಮ ಸ್ವಭಾವ ಹಾಗು ಪರಿಸರಕ್ಕೆ ಅನುಗುಣ ವಾಗಿ ನಮಗೆಲ್ಲ ಒಂದೊಂದು ಕಾಯಕ ನಿರ್ದಿಷ್ಟವಾಗಿದೆ. ನಮ್ಮಲ್ಲಿ ಒಬ್ಬ ವ್ಯಾಪಾರಿ, ಇನ್ನೊಬ್ಬ ವೈದ್ಯ, ಮತ್ತೊಬ್ಬ ವಿಶ್ವಕರ್ಮ. 'ನನ್ನದು ಪ್ರವಚನ ಕಾಯಕ. ನಿಮ್ಮದು ಕೇಳುವ ಕಾಯಕ.' ಹೀಗೆ ವ್ಯಕ್ತಿಗೊಂದು ಕಾಯಕ. ತನ್ನ ಕಾಯಕವನ್ನು ತಾನು ಚ್ಯುತಿ ಬರದಂತೆ ಪ್ರಾಮಾಣಿಕವಾಗಿ ನಿರ್ವ ಹಿಸುವಲ್ಲಿಯೇ ತನ್ನ ಶ್ರೇಯ ಅಡಗಿದೆ.

ಪೂರ್ವ ಕಾಲದಲ್ಲಿ ತಾರಕಾಕ್ಷ ವಿದ್ಯುನ್ಮಾಲಿಗಳು ಜಗತ್ತಿಗೇ ಕಂಟಕರಾಗಿ ಕಾಡುತ್ತಿದ್ದಾಗ ಬ್ರಹ್ಮಾದಿ ತ್ರಿಮೂರ್ತಿಗಳು ತಮ್ಮ ಕೆಲಸ ಬರಿ ಜಪ ತಪ ಸಮಾಧಿಗಳೆಂದು ಬಗೆದು ಕಣ್ಮುಚ್ಚಿ ಕುಳಿತಿರದೆ ಸೆಣಸಿದರು. ಜಗತ್ತನ್ನು ಸಂಕಷ್ಟದಿಂದ ಪಾರು ಮಾಡಿದರು.

ಭಗವಂತ-"ಅರ್ಜುನ, ಆತ್ಮಾನಾತ್ಮವಿಚಾರ ಬಿಟ್ಟುಬಿಡೋಣ; ಸಾಮಾನ್ಯ ವರ್ಣಧರ್ಮಾನುಸಾರವಾದರೂ ವಿಚಾರ ಮಾಡು. ನೀನಂತು ಕ್ಷತ್ರಿಯ. ಅಧರ್ಮವನ್ನು ಎದುರಿಸಿ ಧರ್ಮವನ್ನು ಕಾಪಾಡುವದು ನಿನ್ನ ಪ್ರತಿಜ್ಞಾ ಬದ್ಧ ಕರ್ತವ್ಯ! ನೀನೀಗ ಈ ಕರ್ತವ್ಯ ಪಾಲಿಸಲೇಬೇಕಲ್ಲ! ವರ್ಣ ಧರ್ಮ ಪರಿಪಾಲನೆಯಲ್ಲಿಯೇ ನಿನ್ನ ಶ್ರೇಯ ಅಡಗಿದೆ ಎಂಬುದನ್ನು ಮರೆಯದಿರು. ಯುದ್ಧರಂಗದಿಂದ ಹಿಂದೆಗೆದು ಓಡದಿರು!"

ಕಾಮ ಕ್ರೋಧಾದಿ ಆಸುರೀ ಶಕ್ತಿಗಳು ಮನೋಬುದ್ಧಿಗತ ವಿವೇಕದ ಮೇಲೆ ದಾಳಿ ಇಟ್ಟಾಗ ಅವುಗಳೊಂದಿಗೆ ಕಾದಿ ವಿವೇಕ ಹಾಗು ಮನೋ ಪಾವಿತ್ರ್ಯ ಕಾಪಾಡುವದು ಮನುಷ್ಯನ ಕ್ಷಾತ್ರ ಧರ್ಮ. ಹೀಗೆ ಮಾಡುವಲ್ಲಿಯೇ ಅವನ ಶ್ರೇಯವಿದೆ. ಈ ಧರ್ಮದಿಂದ ಅವನು ಚ್ಯುತನಾದರೆ ಅಂತರಂಗ

ಕಾಮದ ತಾಪದಿಂದ ಬೆಂದುಹೋಗುವದು; ಬುದ್ಧಿಯು ಮೋಹದಿಂದ ಆಚ್ಛಾದಿತವಾಗುವದು. ವ್ಯಕ್ತಿಯುಂ ದುಷ್ಟ ಶಕ್ತಿಗಳ ದಾಸನಾಗುವನು. ಇದೇ ಅಧಃಪತನ. ಸಾಧಕ ಜೀವನಂ ಯಾವಾಗಲು ಜಾಗ್ರತನಾಗಿದ್ದು ಒಳಗಿರುವ ಹೃದಯ ಪರಿಶುದ್ಧಿಯನ್ನು ಕಾಪಾಡಬೇಕು; ಎನ್ನುವದೇ ಈ ಮಂತ್ರದ ಬೋಧ.

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥೩೨॥**

**ಅರ್ಥ:-** ಪಾರ್ಥ= ಅರ್ಜುನ, ಯದೃಚ್ಛಯಾ ಉಪಪನ್ನಂ= ತಾನಾಗಿಯೇ ಬಂದಿರುವ, ಚ= ಮತ್ತು, ಅಪಾವೃತ ಸ್ವರ್ಗದ್ವಾರಂ= ತೆರೆದ ಸ್ವರ್ಗದ ಬಾಗಿಲಿನಂತಿರುವ, ಈದೃಶಂ ಯುದ್ಧಂ = ಇಂಥ ಯುದ್ಧವನ್ನು, ಸುಖಿನಃ ಕ್ಷತ್ರಿಯಾಃ (ಏವ) = ಭಾಗ್ಯಶಾಲಿ ಕ್ಷತ್ರಿಯರೇ ಲಭಂತೇ= ಪಡೆಯುತ್ತಾರೆ.

**ವಿವರಣೆ:-** ಭಗವಂತ:- " ಪಾರ್ಥ, ಇದು ಬಯಸಿದ ಸಮರವಲ್ಲ; ತಾನಾಗಿ ಬಂದಿದೆ. ಅಧರ್ಮ, ಅತ್ಯಾಚಾರ, ಅಮಾನುಷ ಕೃತ್ಯಗಳಲ್ಲಿ ರತರಾದ ಕೌರವರನ್ನುಮೆಟ್ಟಿ ಧರ್ಮಪ್ರತಿಷ್ಠಾಪನೆ ಮಾಡುವ ಉದ್ದೇಶ ಈ ಯುದ್ಧಕ್ಕಿದೆ.

ಈ ಪವಿತ್ರ ಯುದ್ಧವನ್ನು ಪಡೆಯುವವರು ನಿಜವಾಗಿಯೂ ಭಾಗ್ಯಶಾಲಿ ಕ್ಷತ್ರಿಯರು! ನೀನೀಗ ಹಿಂದೆಗೆಯದಿರು; ಇದರಲ್ಲಿ ನಿನ್ನ ಶ್ರೇಯವಿದೆ. ಅಪರೂಪವಾಗಿ ಬರುವ ಇಂಥ ಸನ್ನಿವೇಶಗಳನ್ನು ಕಳೆದುಕೊಳ್ಳುವದು ಬುದ್ಧಿವಂತಿಕೆ ಅಲ್ಲ. ಅಲ್ಲದೆ .."

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥೩೩॥**

**ಅರ್ಥ:-** ಅಥ= ಒಂದು ವೇಳೆ, ತ್ವಂ= ನೀನು, ಇಮಂ= ಈ ಧರ್ಮ್ಯಂ= ಧರ್ಮಯುಕ್ತವಾದ, ಸಂಗ್ರಾಮಂ= ಯುದ್ಧವನ್ನು ನ ಕರಿಷ್ಯಸಿ ಚೇತ್= ಮಾಡದಿದ್ದರೆ, ತತಃ= ಆಗ ಸ್ವಧರ್ಮಂ= ಸ್ವಧರ್ಮವನ್ನು ಕೀರ್ತಿಂ ಚ= ಮತ್ತು ಕೀರ್ತಿಯನ್ನು ಹಿತ್ವಾ= ಕಳೆದುಕೊಂಡು, ಪಾಪಂ= ಪಾಪವನ್ನು ಅವಾಪ್ಸ್ಯಸಿ= ಹೊಂದುತ್ತಿ.

**ವಿವರಣೆ:-** ಭಗವಂತ:- "ಕೌಂತೇಯ, ಒಂದು ವೇಳೆ ನೀನು ಈ ಧರ್ಮ ಸಮರದಿಂದ ಹಿಂದೆಗೆದೆಯಾದರೆ ಕ್ಷತ್ರಿಯ ಧರ್ಮವನ್ನೇ ಕೊಲೆಗೈದ ಘೋರ ಪಾಪ ನಿನ್ನ ತಲೆಗೆ ಬರುವದು. ರಾಷ್ಟ್ರದ ಲಕ್ಷಾಂತರ ಪ್ರಜೆಗಳನ್ನು ರಕ್ಷಿಸುವ ಹೊಣೆಹೊತ್ತ ಮುಖಂಡನು ಕಷ್ಟದ ಸಮಯದಲ್ಲಿಯೇ ಕೈಬಿಟ್ಟರೆ ಆಗುವ ಅನಾಹುತ ಅಪಾರ. ರಾಷ್ಟ್ರವೇ ನಿರ್ನಾಮವಾದೀತು!

"ಅರ್ಜುನ, ನೀನೊಬ್ಬ ಸಾಮಾನ್ಯ ಪ್ರಜೆಯಲ್ಲ ಮನಬಂದಂತೆ ವ್ಯವಹರಿಸಲು. ಪ್ರಜಾವರ್ಗದ ಹಿತಾಹಿತ ನಿನ್ನ ಕೈಯಲ್ಲಿದೆ. ಸನಾತನ ನೈತಿಕ ಧರ್ಮವನ್ನು ಕಾಪಾಡುವ ಭಾರ ನಿನ್ನಮೇಲಿದೆ. ನೀನು ಈ ಕ್ಷಣದಲ್ಲಿ ತಪ್ಪಿ ಹೆಜ್ಜೆ ಇಟ್ಟರೆ ಸರ್ವ ವಿನಾಶ ಕಟ್ಟಿಟ್ಟದ್ದು. ನಿನ್ನ ಆಚಂದ್ರಾರ್ಕವಾಗಿ ಬಾಳಬೇಕಾದ

ಕೀರ್ತಿ ಮಣ್ಣುಗೂಡುವದು. ನಿನ್ನ ಹೇಡಿತನ ಹುಚ್ಚತನದ ಪರಮಾವಧಿ. ಪಾಪದ ದಾರಿ ತುಳಿಯುತ್ತಿರುವಿ. ಎಚ್ಚರಿಕೆ ಇರಲಿ."

ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।
ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥೩೪॥

ಅರ್ಥ:- ಅಪಿ ಚ= ಮತ್ತು, ಭೂತಾನಿ= ಜನರು ತೇ= ನಿನ್ನ ಅವ್ಯಯಾಂ= ಅಳಿಯದ, ಅಕೀರ್ತಿಂ= ಅಪಕೀರ್ತಿಯನ್ನು, ಕಥಯಿಷ್ಯಂತಿ= ಹೇಳುವರು. ಸಂಭಾವಿತಸ್ಯ= ಸ್ವಾಭಿಮಾನಿಗೆ ಅಕೀರ್ತಿಃ= ಅಪಕೀರ್ತಿಯು ಮರಣಾತ್ ಚ= ಮರಣಕ್ಕಿಂತಲೂ ಅತಿರಿಚ್ಯತೇ= ಹೆಚ್ಚು.

ವಿವರಣೆ:- ಭಗವಂತ:- "ಪಾರ್ಥ, ನೀನು ರಣಾಂಗಣದಿಂದ ಪಲಾಯನ ಮಾಡಿದರೆ ಅಕ್ಷಯವಾದ ಅಪಕೀರ್ತಿಯನ್ನು ಹೊಂದುವೆ. ರಣಹೇಡಿ, ಸ್ವಧರ್ಮ ನಾಶಕ, ಸಮಾಜ ವಿಘಾತಕ, ನಂಬಿದವರ ಕೈಬಿಟ್ಟ ದ್ರೋಹಿ ಎಂದು ಅನಂತ ಕಾಲದವರೆಗೆ ಜನ ಆಡಿಕೊಳ್ಳುತ್ತಾರೆ. ಈ ಅಪಕೀರ್ತಿಗೆ ತುತ್ತಾಗಬೇಡ. ಆತ್ಮಾಭಿಮಾನಿಯಾದ ನಿನಗೆ ಅಪಕೀರ್ತಿಯು ಮರಣಕ್ಕಿಂತ ಕೀಳು."

ಸಾಮಾನ್ಯವಾಗಿ ಅಪಕೀರ್ತಿ ನಾಶವಾಗುವದೇ ಇಲ್ಲ. ಉದಾ: ೧) ಇಂದ್ರ ಅಹಲ್ಯೆಯನ್ನು ಕೆಡಿಸಿ ಸಹಸ್ರಾರು ವರುಷ ಕಳೆದರೂ ಇಂದಿಗೂ ಜನ ಅವನನ್ನು ದೂಷಿಸುತ್ತಾರೆ. ೨) ರಾವಣ ಸೀತಾಪಹರಣ ಮಾಡಿದ ಕುಂದನ್ನು ಆಡದವರಾರು? ಯುಗ ಯುಗ ಉರುಳಿದರೂ ಲೋಕ ಅದನ್ನು ಮರೆಯದು.

ನೀತಿ ಶೀಲಗಳ ಮೇಲೆಯೇ ಜೀವನ ಸಾಗಿಸಿದ ಜನರು ಸಂಭಾವಿತರು. ಅವರಿಗೆ ಪಾವಿತ್ರ್ಯವೇ ಸಂಪದ; ಕೀರ್ತಿಯೇ ಉಸಿರು. ಯಾವಾಗ ಕೀರ್ತಿ ಹೋಯಿತೋ ಆಗಲೇ ಅವರು ಸತ್ತರೆಂದೇ ಅರ್ಥ. ಏಕೆಂದರೆ ಜಾಣ ಸದ್ಗುಣಗೆ ಅಪಕೀರ್ತಿ ಸಾವಿಗಿಂತ ಕಡೆ.

ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।
ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಂ॥೩೫॥

ಅರ್ಥ:- ಮಹಾರಥಾಃ= ಮಹಾರಥರು, ತ್ವಾಂ= ನಿನ್ನನ್ನು ಭಯಾತ್ ಉಪರತಂ (ಇತಿ)= ಭಯದಿಂದ ಹಿಂಜರಿದನೆಂದು ಮಂಸ್ಯಂತೇ= ತಿಳಿಯುತ್ತಾರೆ. ಚ= ಮತ್ತು ತ್ವಂ= ನೀನು ಯೇಷಾಂ= ಈ ಶೂರರಿಗೆ ಬಹುಮತಃ ಭೂತ್ವಾ= ಬಹು ಮಾನ್ಯನಾಗಿದ್ದು ಲಾಘವಂ ಯಾಸ್ಯಸಿ= ಕೀಳುತನ ಹೊಂದುವಿ.

ವಿವರಣೆ:- ಭಗವಂತ:- "ಕಾಂತೇಯ, ನೀನು ಮೂಲೋಕ ವೀರ; ಮಹಾರಥಿಕ; ಸವ್ಯಸಾಚಿ. ಇಂದ್ರಕೀಲದಲ್ಲಿ ತಪ ಮಾಡಿ ಕಿರಾತ-ಶಿವನೊಂದಿಗೆ ಯುದ್ಧಗೈದು ಗೆದ್ದ ಕಲಿ; ಪಾಶುಪತಾಸ್ತ್ರ ಧರಿಸಿದ ಧೀರ! ಈ ಉಭಯ ಸೈನ್ಯದ ಮಹಾರಥಿಕರ ದೃಷ್ಟಿಯಲ್ಲಿ ನೀನು ಅಜೇಯ ಯೋದ್ಧ; ರಣಸಿಂಹ. ಹೀಗಿರುವಾಗ, ನೀನು ಶಸ್ತ್ರತ್ಯಾಗ ಮಾಡಿದರೆ 'ಯುದ್ಧಕ್ಕೆ ಹೆದರಿ, ಸಾವಿಗೆ

ಅಂಜಿ ಓಡಿಹೋದ' ಎಂದು ಅವರೆಲ್ಲ ಅಣಕವಾಡದೆ ಬಿಡುವರೆ? ಯಾರಿಂದ ಪ್ರಶಂಸೆಗೊಳ್ಳುತ್ತಿರುವೆಯೋ ಅವರ ಮಧ್ಯದಲ್ಲಿಯೇ ಕೀಳುತನ ಪಡೆಯು ವದು ಕ್ಷತ್ರಿಯನಿಗೆ ಅತಿ ನಿಂದ್ಯ!"

ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ ।
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥೩೬॥

ಭಾವ:- ಭಗವಂತ:- "ನಿನ್ನ ಶತ್ರುಗಳು (ಅಹಿತಾಃ) ನಿನ್ನ ಸಾಮರ್ಥ್ಯ ವನ್ನು ನಿಂದಿಸುತ್ತಾರೆ. ಆಡಬಾರದ ಮಾತುಗಳನ್ನು (ಅವಾಚ್ಯವಾದಾನ್) ಆಡುತ್ತಾರೆ. ಇದಕ್ಕಿಂತ ಹೆಚ್ಚು ದುಃಖ ಯಾವುದು?"

ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ ।
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥೩೭॥

ಭಾವ:- ಭಗವಂತ:- "ಸಖನೆ, ಒಂದು ವೇಳೆ, ನೀನು ಸಮರಾಂಗಣದಲ್ಲಿ ಕಾದುತ್ತ ಪ್ರಾಣ ತ್ಯಜಿಸಿದರೆ ವೀರಸ್ವರ್ಗದ ಸರ್ವ ಸುಖಗಳನ್ನು ಅನುಭವಿ ಸುವಿ. ಗೆದ್ದು ಉಳಿದರೆ ಸಮಸ್ತ ಭೂಮಂಡಲದ ಚಕ್ರಾಧಿಪತಿಯಾಗಿ ಸುಖಿ ಸುವಿ. ಅದುದರಿಂದ ಹೀಗೆ ಭೀರುವಾಗಿ ಕುಳ್ಳಿರಬೇಡ; ನಿನ್ನ ಸಮರ್ಥ ಶಸ್ತ್ರದೊಂದಿಗೆ ಏಳು. ವಿಲಂಬವೇಕೆ? ಇದೋ ಈ ರಣದೇವತೆಯು ಕೊರ ಳಿಗೆ ನಿನ್ನ ಇಷುಮಾಲೆಯು ತೊಡಿಸು."

ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥೩೮॥

ಅರ್ಥ:- ಸುಖದುಃಖೇ = ಸುಖದುಃಖಗಳನ್ನು ಲಾಭಾಲಾಭೌ = ಲಾಭಹಾನಿ ಗಳನ್ನು ಜಯಾಜಯೌ= ಜಯ ಅಪಜಯಗಳನ್ನು ಸಮೇಕೃತ್ವಾ= ಸಮಮಾಡಿ, ತತಃ= ಅನಂತರ ಯುದ್ಧಾಯ= ಯುದ್ಧ ಮಾಡಲು ಯುಜ್ಯಸ್ವ= ಸನ್ನದ್ಧನಾಗು; ಏವಂ= ಈ ರೀತಿ ಮಾಡಿದರೆ, ಪಾಪಂ ನ ಅವಾಪ್ಸ್ಯಸಿ= ಪಾಪವನ್ನು ಹೊಂದಲಾರಿ.

ವಿವರಣೆ:- ಭಗವಂತ:- "ಭಾರತ, ಯುದ್ಧ ನಿನ್ನ ಧರ್ಮ. ಅದನ್ನು ಪರಿಪಾಲಿಸು; ಅದೇ ಪಾವನ ಕರ್ತವ್ಯ. ಅದರಿಂದ ದೊರೆಯಲಿರುವ ಜಯ ಅಪಜಯ, ಲಾಭ ಹಾನಿ ಹಾಗು ಸುಖ ದುಃಖಗಳತ್ತ ಲಕ್ಷ್ಯಹರಿಸದಿರು. ಅವು ಅಮುಖ್ಯ. ಕರ್ತವ್ಯ ಧರ್ಮವೊಂದೇ ಮುಖ್ಯ. ಅದನ್ನು ನೆರವೇರಿಸುವುದರಿಂದ ಪಾಪದ ತಿಲಾಂಶವೂ ನಿನಗೆ ಲೇಪಿಸದು. ಏಕೆ ಹಿಂಜರಿವೆ? ಏಳು; ಅಣಿ ಯಾಗು! ಪೃಥ ನಿಷ್ಠೆಯ ಭಾವದಿಂದ ವೈರಿಗಳನ್ನು ಎದುರಿಸು."

ಜಯದಿಂದ ಲಾಭ; ಹಾನಿಯಿಂದ ದುಃಖ. ಇದು ಸಹಜ. ನಮಗೆಲ್ಲ ಸುಖ, ಲಾಭ, ಜಯ ಮುಖ್ಯ. ಅವುಗಳನ್ನು ಈಯುವ ಕಾರ್ಯಗಳಲ್ಲಿಯೇ ನಮಗೆ ಅಭಿರತಿ. "ಫಲಂ ಅನುದ್ದಿಶ್ಯ ಮಂದೋಽಪಿ ನ ಪ್ರವರ್ತತೇ" ಫಲದ ಉದ್ದೇಶವಿಲ್ಲದೆ ಮಂದ ಮನುಷ್ಯ ಕೂಡ ಕಾರ್ಯ ಪ್ರವರ್ತನಾಗ. ಎಂಬ

ಜಾಣ್ಣುಡಿ ಶತಧಾ ಸತ್ಯ. ಯಾವ ಕಾರ್ಯದಿಂದ ವ್ಯಾವಹಾರಿಕ ಲಾಭವಿಲ್ಲವೋ ಅಂಥ ಕಾರ್ಯ ಪವಿತ್ರವಿದ್ದರೂ ಅದು ನಮಗೆ ಸೇರದು. ಉದಾ: ಶಾಸ್ತ್ರ ಪ್ರವಚನದ ಶ್ರವಣ, ಇದರಷ್ಟು ಪಾವನ ಕ್ರಿಯೆ ಇನ್ನೊಂದಿಲ್ಲ ಎಂದು ಖಚಿತವಾಗಿ ಹೇಳಬಹುದು. ಇದು ಮನಸ್ಸನ್ನು ವಿಮಲಗೊಳಿಸುವದು; ವಿಷಯ ವ್ಯಾಮೋಹವನ್ನು ನಾಶಮಾಡುವದು. ದೇವನತ್ತ ನಮ್ಮನ್ನು ಕರೆದೊಯ್ಯುವದು. ಅಧ್ಯಾತ್ಮಜ್ಞಾನವಾಹೀ ವಚನಗಳನ್ನು ಆಲಿಸಿದಾಗ ಆರೋಗ್ಯ, ಧನ, ಧಾನ್ಯ, ವಸ್ತ್ರ, ವಾಹನಗಳು ದೊರೆಯುವವೆಂಬ ಭರವಸೆ ಇಲ್ಲ; ಕೀರ್ತಿ ಮಾನ ಅಧಿಕಾರಗಳು ಹೆಚ್ಚುವವೆಂದು ಖಚಿತವಿಲ್ಲ. ಅದೂ ಅಲ್ಲದೆ, ಕೇಳುವ ಕಾಲಾವಧಿಯಲ್ಲಿಯೇ ವ್ಯವಹಾರದಲ್ಲಿ ನಷ್ಟವಾಗಬಹುದು; ಇದ್ದುಬಿದ್ದ ಒಂದು ಮನೆ ಬಿದ್ದುಹೋಗಬಹುದು; ಮಡದಿ ಮಕ್ಕಳು ರೋಗದಿಂದ ಬಳಲಬಹುದು. ಹೀಗಾದಾಗ, ಶಾಸ್ತ್ರ ಕೇಳುವವರಾರು?

ನಮ್ಮ ಪೂಜೆ, ಅಧ್ಯಯನ, ಜಪ, ತಪ, ವ್ರತ ನಿಯಮಗಳಿಂದ ಸಂಪತ್ತು ಉಕ್ಕುತ್ತ ಬಂದರೆ, ರೋಗ ಮಾಯವಾದರೆ, ಸಮಾಜದಲ್ಲಿ ಮಾನ ಹೆಚ್ಚಿದರೆ ಆ ಕ್ರಿಯೆಗಳನ್ನು ಬಿಡದೆ ಆಚರಿಸುತ್ತೇವೆ. "ಈ ಪುರಾಣ ಪಠಣದಿಂದ ಧನ ಧಾನ್ಯ ಸುಖ ಸಮೃದ್ಧಿಯಕ್ಕುಂ" ಎಂದು ಅಭಯವೀಯುವ ಪುರಾಣಗಳನ್ನು ತಪ್ಪದೆ ಪಠಿಸುತ್ತೇವೆ ಸಂಸಾರ ಭಾವವನ್ನೇ ತೆಗೆದು ಹಾಕುವ ಉಪನಿಷತ್ತು ಸೂತ್ರ ಸಾಹಿತ್ಯ ಹಾಗು ಭಾಷ್ಯಗಳು ಅದಾರಿಗೆ ಹಿಡಿಸಬಹುದು?

ಕರ್ಮವು ಪವಿತ್ರವಾಗಿದ್ದರೆ ಅದರಿಂದ ಜಯ ಲಾಭ ಸುಖ ದೊರೆಯಲಿ ಬಿಡಲಿ ಅತ್ತ ಮನಸ್ಸು ಹಾಕದೆ ಆ ಕರ್ಮರತನಾಗಬೇಕು. ಈ ಕರ್ಮ ನಮ್ಮ ಕರ್ತವ್ಯ; ಅದರ ಫಲ ದೇವನಿಗೆ ಕೂಡಿದ್ದು! "ಹುಟ್ಟಿಸಿದ ದೇವ ತಾ ಹುಲ್ಲು ಮೇಯಿಸುವನೆ?" ಈ ಭಾವ ಅಗತ್ಯ. ನಾವು ಬಡವರಾದರೆ ಅದರಲ್ಲಿಯೇ ಸಂತೋಷ ಪಡೋಣ. ಸಿರಿ ತಾನಾಗಿಯೇ ಬಂದರೆ ದೇವ ಕರುಣೆ ಎಂದು ಸ್ವೀಕರಿಸಿ ಜನತೆಯ ಸೇವೆ ಗೈಯೋಣ. ಯಾವುದಕ್ಕೂ ಮ್ಲಾನತೆ ಬೇಡ. ನಮಗೆ ಪ್ರಾಪಂಚಿಕ ಜಯವೇ ಬೇಕು, ಸುಖವೇ ಬೇಕು ಎಂದರೆ ಅದು ಅಸಾಧ್ಯ. ಮಾನವರಾದ ನಮಗೆ ಕರ್ಮಾಸಕ್ತಿ ಬೇಕಲ್ಲದೆ ಫಲಾಭಿರತಿಯಲ್ಲ. ಹರಿಶ್ಚಂದ್ರ ಸತ್ಯ ವಚನ ನುಡಿವಲ್ಲಿ ಆಸಕ್ತಿ ತೋರಿದ; ರಾಜ್ಯಭೋಗ ಕೈಬಿಟ್ಟರೂ ಅತ್ತ ನೋಡಲಿಲ್ಲ. ಅದು ಕಾರ್ಯ ಕೌಶಲ್ಯ; ಕರ್ಮಯೋಗಿಯ ಬಾಳು. ಹೀಗೆ ಫಲಾಭಿಲಾಷಾ ರಹಿತನಾಗಿ, ಕರ್ಮಪ್ರೇಮಿಯಾಗಿ ದುಡಿದರೆ, ಆ ದುಡಿತಕ್ಕೆ ಪಾಪವುಂಟೆ! ದೇವಕೃಪೆ, ಮನೋಶಾಂತಿ ತಾನಾಗಿ ಸಮನಿಸುವವು.

ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು|
ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ||೩೯||

ಅರ್ಥ:- ಪಾರ್ಥ = ಅರ್ಜುನ. ಏಷಾ = ಈ ಸಾಂಖ್ಯೇ ಬುದ್ಧಿಃ = ಸಾಂಖ್ಯ ತತ್ತ್ವಜ್ಞಾನವು [ (೧) ಸಮ್ಯಕ್ ಖ್ಯಾಯತೇ ಪ್ರಕಾಶತೇ ವಸ್ತುತತ್ತ್ವಂ ಅನಯಾ ಇತಿ ಸಂಖ್ಯಾ. - ಯಾವುದರಿಂದ ವಸ್ತುವಿನ ಯಥಾರ್ಥ ಸ್ವರೂಪವು ಪೂರ್ಣವಾಗಿ ಪ್ರಕಾಶಿತ ವಾಗುವದೋ ಅದು ಸಂಖ್ಯಾ ಅಥವಾ ಸಮ್ಯಗ್‌ಜ್ಞಾನ. (೨) ತಸ್ಮಿನ್ ಪ್ರಕಾಶಮಾನ ಆತ್ಮ ತತ್ತ್ವಂ ಸಾಂಖ್ಯಂ. – ಸಮ್ಯಗ್ಜ್ಞಾನದಲ್ಲಿ ಪ್ರಕಾಶಿತವಾಗುವ ಆತ್ಮ ತತ್ತ್ವವು ಸಾಂಖ್ಯ. (೩) ತಸ್ಮಿನ್ ಕರಣೀಯಾ ಬುದ್ಧಿಃ - ಆ ಸಾಂಖ್ಯ ತತ್ತ್ವದಲ್ಲಿ ಪಡೆಯಲು ಯೋಗ್ಯವಾದ ಸಾಧನವು ಬುದ್ಧಿ.] ತೇ = ನಿನಗೆ, ಅಭಿಹಿತಾ = ಹೇಳಲ್ಪಟ್ಟಿತು. ತು = ಆದರೆ ಇನ್ನು, ಯೋಗೇ ಇಮಾಂ ಶೃಣು = ಕರ್ಮಯೋಗ ವಿಷಯಕ ಜ್ಞಾನವನ್ನೀಗ ಕೇಳು (ಅಂತಃಕರಣ ಶುದ್ಧಿಯ ಮೂಲಕ ಆತ್ಮಸಾಕ್ಷಾತ್ಕಾರಕ್ಕೆ ಕಾರಣವಾದುದು ಕರ್ಮ ಯೋಗ). ಬುದ್ಧ್ಯಾಯುಕ್ತಃ = ಕರ್ಮಯೋಗನಿಷ್ಠ ಬುದ್ಧಿಯಿಂದ ಕರ್ಮಬಂಧಂ ಪ್ರಹಾಸ್ಯಸಿ = ಕರ್ಮಬಂಧನವನ್ನು ನೀಗುವಿ.

ಭಾವ:- ಇಲ್ಲಿಯವರೆಗೆ ಸಾಂಖ್ಯ ವಿಚಾರವನ್ನು ನುಡಿದೆ. ಇನ್ನು ಮೇಲೆ ಕರ್ಮಯೋಗ ವಿಚಾರವನ್ನು ವಿವರಿಸುವೆ. ಈ ಕರ್ಮಯೋಗ ಸಾಧನೆಯ ಮೂಲಕ ಕರ್ಮಬಂಧನದಿಂದ ಮುಕ್ತನಾಗುವಿ.

ವಿವರಣೆ:- ಪರಮ ಸಚ್ಚಿದಾನಂದನಾದ ಆತ್ಮನು ಸಾಂಖ್ಯ; ಅವನ ಸ್ವರೂಪಜ್ಞಾನವು ಸಂಖ್ಯಾ; ಅದಕ್ಕೆ ಉಪನಿಷದ್ ವಿದ್ಯೆ ಎಂತಲೂ ಹೆಸರು. ಅದು ಅನಿತ್ಯ ಅನಾತ್ಮವಸ್ತುಗಳ ವ್ಯಾಮೋಹವನ್ನು ತೊಳೆದು ಹಾಕಿ, ಆತ್ಮ ಜ್ಞಾನಾನಂದ ಸುಧೆಯನ್ನು ಕೊಡುವದು. ಅದನ್ನು ಉಂಡವರು ಋಷಿಗಳು, ಅಥವಾ ತತ್ತ್ವದರ್ಶಿಗಳು. ಅವರಿಗೆ ಬಂಧನ ಇಲ್ಲ; ಶೋಕವಿಲ್ಲ. ನಿರಾಮಯ ನಿಶ್ಚಿಂತರು. ಅರ್ಜುನನನ್ನು ಆ ಸ್ಥಿತಿಗೆ ತಲುಪಿಸುವ ಉದ್ದೇಶದಿಂದ ಭಗವಂತನು ಇಲ್ಲಿಯವರೆಗೆ ಸಾಂಖ್ಯಬುದ್ಧಿ ಅರ್ಥಾತ್ ಆತ್ಮವಿಚಾರವನ್ನು ಹೃದಯಂಗಮವಾಗಿ ನಿರೂಪಿಸಿದ.

ಆದರೆ ಪಾವನತಮವಾದ ಈ ಸಾಂಖ್ಯಯೋಗ ಎಲ್ಲರಿಗೂ ಸಹಜ ಸಾಧ್ಯವಲ್ಲ. ಸಾಮಾನ್ಯವಾಗಿ ಎಲ್ಲ ಜೀವಿಗಳ ಹೃದಯ ಜಾತಿ ಗೋತ್ರ ಸಂಪ್ರದಾಯಗಳ ಅಭಿನಿವೇಶದಿಂದ ಮುಚ್ಚಿಹೋಗಿದೆ; ಮಾಯಾ ಪ್ರಪಂಚ ಅವರನ್ನು ಆವರಿಸಿ ಬಿಟ್ಟಿದೆ. "ಜಗವ ಸುತ್ತಿಪ್ಪುದು ನಿನ್ನಯ ಮಾಯೆ" ಎಂಬ ಬಸವಣ್ಣನವರ ನುಡಿ ಸತ್ಯಪರಿಸ್ಥಿತಿಯ ಚಿತ್ರವಾಗಿದೆ. ಭೌತ ವಿಷಯಗಳೆಂಬ ಬೃಹದಾಕಾರದ ಅತ್ಯುನ್ನತ ಬೆಟ್ಟಗಳು ಜೀವರ ಸುತ್ತೆಲ್ಲ ಹಬ್ಬಿಕೊಂಡಿವೆ. ಆ ಬೆಟ್ಟಗಳಾಚೆ ಸಾಂಖ್ಯ ಸೂರ್ಯ! ಬೆಟ್ಟಗಳ ಸೊಬಗಿನ ಪಂಜರದಲ್ಲಿಯೇ ಮನ ಮುಳುಗಿರುವವರೆಗೆ ಆ ಸೂರ್ಯದರ್ಶನ ಹೇಗೆ ಸಾಧ್ಯವಾದೀತು? ಮಡದಿ ಮಕ್ಕಳಿಗಾಗಿ, ಸ್ಥಾನ ಮಾನಗಳಿಗಾಗಿ ಬಡಿದಾಡುವ ಜನತೆಗೆ ಜ್ಞಾನ ಬೆಳಗಿನ ಆನಂದ ಹೇಗೆ ದೊರೆತೀತು?

ಸುತ್ತಲಿದ್ದ ವಿಷಯ ಬೆಟ್ಟಗಳ ದಾಟಿ, ಸಾಂಸಾರಿಕ ಅಭಿಲಾಷಾ ಪರದೆ!

ಯನ್ನು ಹರಿದು ಆತ್ಮನತ್ತ ನೋಡಬೇಕಾದರೆ ಮನಸ್ಸು ಸಮರ್ಥವಾಗಬೇಕು ಆ ಸಾಮರ್ಥ್ಯ ನೀಡಬಲ್ಲ ದೈವೀ ಸಾಧನೆಯೇ ಕರ್ಮಯೋಗ! ಅಂತರಂಗಸ್ಥ ಆಸುರೀ ಶಕ್ತಿಗಳನ್ನು ಮುರಿದು ಹಾಕಿ ಸಂಖ್ಯಾವತರಣೆಗೆ ಸ ಯೋಗ್ಯ ಭೂಮಿಕೆ ನಿರ್ಮಿಸುವ ಕಲೆಯೇ ಕರ್ಮಕೌಶಲ್ಯ!!

ಸಾಂಖ್ಯ ಮತ್ತು ಕರ್ಮಯೋಗಗಳು ಪರಸ್ಪರ ವಿರುದ್ಧವಲ್ಲ, ಆದರೆ ಪೂರಕ ಎಂಬ ಸಂಗತಿಯನ್ನಿಲ್ಲಿ ಸುಸ್ಪಷ್ಟವಾಗಿ ಗಮನಿಸಬೇಕು. ಕರ್ಮಯೋಗ ಅಡಿಪಾಯ; ಸಾಂಖ್ಯಯೋಗ ಅದರ ಮೇಲೆ ರಚಿತವಾದ ಸುಂದರ ಮಹಲು. ಕರ್ಮಯೋಗ ಕೈಗೋಲು; ಸಾಂಖ್ಯಯೋಗ ಕೈದೀಪ. ಜ್ಞಾನಿಯಾಗುವ ಮನುಷ್ಯ ಮೊದಲು ಕರ್ಮಯೋಗಿಯಾಗಲೇಬೇಕು. ಇದು ಅನಿವಾರ್ಯ. ಯಾವನಿಗೆ ನೀತಿ ನಿಯಮ. ಸದಾಚಾರ ಸದ್ವ್ಯವಹಾರ, ಶಾಂತಿ ಸೈರಣೆ, ಶುಚಿ ಶೀಲಗಳಿಲ್ಲವೋ ಆವನು ಎಂದೆಂದಿಗೂ ಜ್ಞಾನಿಯಾಗಲಾರ! ಜ್ಞಾನಿ ಯಾದವರು ಅನೀತಿ ಪಥದಲ್ಲಿ ನಡೆಯಬಹುದು ಎಂಬ ಮಾತನ್ನು ಮಾನವೀ ವಿವೇಕ ಎಂದಿಗೂ ಒಪ್ಪದು! ಆದುದರಿಂದಲೇ ಗೀತೆಯ ತುಂಬ ಸಾಂಖ್ಯ ಕರ್ಮಯೋಗಗಳ ಸಮ ಸಮ ಉಪದೇಶವನ್ನು ಕಾಣುತ್ತೇವೆ.

ಭಗವಂತ:– "ಭರತೋತ್ತಮ, ನಿನ್ನ ವಿಷಾದ ಪೂರಿತ ಮಾತು ಕೇಳಿ ನನಗೆ ಕನಿಕರವೆನಿಸುತ್ತದೆ. ನಿನ್ನ ಕಾರ್ಪಣ್ಯ ಅಳಿದು ಚಿರಸೌಖ್ಯ ದೊರೆಯ ಬೇಕೆಂದು ನನ್ನ ಬಯಕೆ. ಅದಕ್ಕಾಗಿ ಸರ್ವ ಮುನಿ ಮಾನ್ಯವಾದ ಸಾಂಖ್ಯ ಜ್ಞಾನವಿತ್ತೆ. ಅದು ನಿನಗೆ ಕ್ಲಿಷ್ಟವೆನಿಸುವದಲ್ಲವೆ? ಹಾಗಾದರೆ, ಅದರ ಪೂರ್ವ ಭಾವಿಯಾಗಿ ಕರ್ಮಯೋಗ ವಿವೇಚಿಸುವೆ. ಈ ಕರ್ಮಯೋಗವನ್ನು ಹೃದಯ ತುಂಬಿ ಕೇಳು. ಜಗತ್ತಿನ ಬಹುಜನರಿಗೆ ಕೇಳುವದಕ್ಕೂ ಸಿಗುತ್ತಿಲ್ಲ. 'ಶ್ರವ ಣಾಯಾ ಅಪಿ ಬಹುಭಿಃ ನ ಲಭ್ಯಃ'. ನೀನು ಪುಣ್ಯವಂತ. ಅಲಭ್ಯವಾದ ವಿಷಯ ಆಲಿಸುವ ಅಮೂಲ್ಯ ಲಾಭ ನಿನ್ನದಾಗಿದೆ. ಅತ್ತ ಇತ್ತ ಮನಸ್ಸು ಹರಿಯದೆ ಶ್ರವಣ ಮಾಡು; ಕೇಳಿದುದನ್ನು ಮನದಲ್ಲಿ ಮೆಲಕುಹಾಕು (ಮನನ); ಬಳಿಕ ಅದನ್ನು ಹೃದಯದಲ್ಲಿ ಭದ್ರಪಡಿಸಿಕೊ (ನಿಧಿಧ್ಯಾಸ). ನಿನ್ನ ಚಿತ್ತವೆಲ್ಲ ನನ್ನ ದೈವೀ ಮಾತುಗಳಿಂದ ತುಂಬಿ ಬಿಡಲಿ. ಆಗ ನಿನ್ನಲ್ಲಿ ಮೊದಲಿದ್ದ ಹೀನಭಾವ ನೆಗಳು ತಾವಾಗಿಯೇ ಪಲಾಯನ ಮಾಡುವವು. ನಿನ್ನ ಅಂತರಂಗ ಶುದ್ಧವಾ ಗುವದು. ಮನದ ಸ್ಥಿರತೆ ಅಳವಡುವದು; ಆಗ ಅಚಲಮನೋಗತ ದೃಷ್ಟಾ ಜೀವಾತ್ಮನು "ತದಾ ದ್ರಷ್ಟುಃ ಸ್ವರೂಪೇ ಅವಸ್ಥಾನಂ" ತನ್ನ ಅಪಾರ ವಿಶ್ವ ಚೇತನ ಸ್ವರೂಪದಲ್ಲಿ ಒಂದಾಗುವನು. ಅದೇ ಸಾಂಖ್ಯ ದರ್ಶನ! ಯೋಗ ವೀಧಿಯಿಂದ ಸಮನಿಸಿದ ಆತ್ಮಸಾಕ್ಷಾತ್ಕಾರ.

"ಪಾರ್ಥ, ಆ ಅವಸ್ಥೆಗೆ ಬಂದು ತಲುಪಿದೆಯೆಂದರೆ ನಿನ್ನ ಸಂಕುಚಿತ

ದೃಷ್ಟಿ ಅಳಿದು 'ಈಶಾವಾಸ್ಯಮಿದಂ ಜಗತ್ ಸರ್ವಂ' ಎಲ್ಲವೂ ಈಶನಿಂದ ವ್ಯಾಪಿಸಿದೆ ಎಂಬ ಭಾಸ ಬರುವದು. ನಿನ್ನೆದುರಿಗಿರುವ ಈ ವೈರಿಗಳು ಅಮರ ಆತ್ಮ ಸ್ಫುರಣಗಳಾಗಿ ತೋರುವರು. ಆಗೆಲ್ಲಿ ಶೋಕ? ನೀನು ನನಗೆ ಸಂಪೂರ್ಣ ಶರಣು ಹೋಗಿರುವೆ ಅಲ್ಲವೆ? ಹಾಗಾದರೆ ನನ್ನ ಉಪದೇಶ ಗ್ರಹಿಸು. ಕರ್ಮಯೋಗ ಅನುಷ್ಠಿಸಿ ಕರ್ಮಬಂಧನರೂಪ ಪ್ರಪಂಚದಿಂದ ಪಾರಾಗುವಿ!"

ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥೪೦॥

ಅರ್ಥ:- ಇಹ= ಈ ಕರ್ಮಯೋಗದಲ್ಲಿ ಅಭಿಕ್ರಮನಾಶಃ = ಆರಂಭ ಮಾಡಿದ ಕರ್ಮದ ನಾಶವು ನ ಅಸ್ತಿ = ಇರುವದಿಲ್ಲ. ಚ = ಮತ್ತು ಪ್ರತ್ಯವಾಯಃ = ವಿಘ್ನವು ನ ವಿದ್ಯತೇ = ಇರುವದಿಲ್ಲ. ಅಸ್ಯ ಧರ್ಮಸ್ಯ= ಈ ಕರ್ಮಯೋಗ ಧರ್ಮದ ಸ್ವಲ್ಪಂ ಅಪಿ= ಸ್ವಲ್ಪ ಆಚರಣೆಯಾದರೂ(ಅದು) ಮಹತಃ ಭಯಾತ್= ಮಹಾ ಭಯದಿಂದ ತ್ರಾಯತೇ = ಸಂರಕ್ಷಿಸುತ್ತದೆ

ವಿವರಣೆ:- ಕರ್ತೃತ್ವದ ದುರಭಿಮಾನ ಹಾಗು ಫಲದ ಅಭ್ಯಾಸಕ್ತಿಗಳಿಲ್ಲದೆ ಕಾರ್ಯ ಮಾಡುವದು ಕರ್ಮಯೋಗ! ಇದರ ಗುರಿ ವಿಷಯ ಪ್ರಾಪ್ತಿ ಅಲ್ಲ; ಆತ್ಮದರ್ಶನ! ಉದಾ: "ನನ್ನದು ಉಪದೇಶ ಕ್ರಿಯೆ. ನಿಮ್ಮದು ಕೇಳುವ ಕ್ರಿಯೆ. ನನ್ನ ಕರ್ಮದ ಹಿಂದೆ ಯಾವುದೇ ಫಲದ ಉದ್ದೇಶವಿಲ್ಲ. ನಿಮ್ಮ ಮನದಲ್ಲಿಯೂ ಕೂಡ ಸಾಂಸಾರಿಕ ಫಲಾಪೇಕ್ಷೆಯಿಲ್ಲ. ನಾನು ಆತ್ಮಾನಂದಕ್ಕಾಗಿ ಹೇಳುತ್ತೇನೆ. ನೀವು ಸ್ವಸಂತೋಷಕ್ಕಾಗಿ ಕೇಳುತ್ತೀರಿ. ಆದ್ದರಿಂದ ಇವೆರಡು ಕರ್ಮಗಳು ಕರ್ಮಯೋಗವೆನಿಸುತ್ತವೆ."

ಈ ನಿಷ್ಕಾಮ ಕರ್ಮಯೋಗದ ಬಗ್ಗೆ ಮೂರು ಮಾತುಗಳನ್ನು ಭಗವಂತ ಹೇಳಿದ್ದಾನೆ. (೧) ಈ ಕರ್ಮಗಳು ನಾಶವಾಗುವದಿಲ್ಲ. ಮಾಡಿದ ಕರ್ಮವು ನಮ್ಮ ಸ್ಥಿರಾಸ್ತಿ. ಅದು ಸ್ವಲ್ಪಿದ್ದರೂ ಸರಿಯೇ, ನಮ್ಮ ಚಿತ್ತದಲ್ಲಿ ಸುರಕ್ಷಿತವಾಗಿ ಉಳಿಯುವದು. ಬೀಜ ಬಿತ್ತಿ ಅಲಕ್ಷಿಸಿದರೆ ಆ ಸಸಿಗಳು ಒಣಗಿ ಹೋಗುವಂತೆ ನಿಷ್ಕಾಮ ಕರ್ಮ ಮಾಡಿ ನಂತರ ಕೆಲಕಾಲ ಅಲಕ್ಷಿಸಿದರೆ ಆ ಕರ್ಮ ಸಂಸ್ಕಾರ ಅಳಿಯುವದಿಲ್ಲ. ೨) ಈ ಕರ್ಮದಲ್ಲಿ ನಿರತರಾದವರಿಗೆ ವಿಘ್ನ ಬರುವದು ಕಡಿಮೆ. ಉದಾ: ವಿನೋಬಾ ಭಾವೆಯವರು ಐವತ್ತು ಅರವತ್ತು ವರುಷಗಳಿಂದ ಒಂದು ದುಡ್ಡಿನ ಆಸೆ ಮಾಡದೆ, ಮಾನ-ಮರ್ಯಾದೆ ಬಯಸದೆ, ಕೀರ್ತಿಗಾಗಿ ಹಂಬಲಿಸದೆ, ಬಡವರ ಹಿತಕ್ಕಾಗಿ ದುಡಿಯುತ್ತಿದ್ದಾರೆ. ಫಲದ ಸಂಬಂಧವೇ ಇಲ್ಲದ ಇಂಥ ಕರ್ಮಕುಶಲರಿಗೆ ಅಡೆತಡೆ ಆತಂಕ ಉಂಟು ಮಾಡುವವರಾರು? ಎಲ್ಲಿ ಫಲದ ಸಂಗ ಇದೆ ಅಲ್ಲಿ ಸ್ಪರ್ಧೆ ಹಾಗು ಆತಂಕ. ಎಲ್ಲಿ ವಿಷಯಗಳ ಗಳಿಕೆಯಾಗದೋ ಅಂಥ ಜನ, ಜನಾರ್ದನ ಸೇವೆಗೆ ಕರೆದರೂ ಜನ ಬರಲಾರರು. ನಿಮ್ಮಿಂದ ಏನೂ ಬೇಡ; ಬರಿ ಸೇವೆ ಮಾಡುವೆ

ನೆಂದು ಹೊರಟರೆ ಯಾರು ಬೇಡ ಎಂದಾರು? ೩) ಫಲಾಕಾಂಕ್ಷಾ ವಿರಹಿತ ಕರ್ಮವನ್ನು ನಾವು ಅತ್ಯಲ್ಪ ಮಾಡಿದರೂ ಅದರ ಪರಿಣಾಮ ಅಪಾರ. ಅದು ನಮ್ಮ ಹೃದಯವನ್ನೇ ಶುದ್ಧಗೊಳಿಸುವದು. ಚಿಕ್ಕದಾಗಿ ಹೊತ್ತಿದ ಕಿಡಿ ಅರಣ್ಯವನ್ನೇ ಸುಟ್ಟು ಹಾಕುವಂತೆ, ಅಲ್ಪ ಪ್ರಮಾಣದಲ್ಲಿ ಮಾಡಲ್ಪಟ್ಟ ಕರ್ಮರೂಪ ಕಿಡಿ ಅಂತರಂಗದ ಕಾಮಾದಿ ಘೋರಾರಣ್ಯವನ್ನೇ ಭಸ್ಮ ಮಾಡು ವದು. ಕೊನೆಗೆ ಆತ್ಮ ಸಾಕ್ಷಾತ್ಕಾರಕ್ಕೆ ಮಾರ್ಗವಾಗುವದು.

ಭಗವಂತ:- "ಕೌಂತೇಯ, ಕರ್ಮಯೋಗ ಅಸಾಮಾನ್ಯ ದೇವ ಪಥ. ಈ ಪಥದಲ್ಲಿ ಸಾಗಲು ಸಿದ್ಧನಾಗು. ನೀನು ನಡೆದಷ್ಟು ಮಾರ್ಗ ನಿನ್ನದು. ಒಂದು ಹೆಜ್ಜೆ ಹಾಕಿದರೂ ಚಿಂತೆಯಿಲ್ಲ; ಅಷ್ಟು ದೇವನಿಗೆ ಸಮೀಪನಾಗುವೆ. ಜೀವನದ ಇನ್ನುಳಿದ ಸರ್ವ ವೀಥಿಗಳಲ್ಲಿ ಕಂಟಕಗಳಿಗೇನು ಕಡಿಮೆಯಿಲ್ಲ. ಧನ. ಕನಕ, ಸ್ವರ್ಗ ಸಿದ್ಧಿ ಮುಂತಾದವುಗಳನ್ನು ಬಯಸಿ ನೀನು ಹೊರಟರೆ ನಿನಗೆ ನೂರು ಸಾವಿರ ಜನ ವೈರಿಗಳಾದಾರು! ಏನನ್ನೂ ಬಯಸದೆ ಹೃದಯಶುದ್ಧಿ ಯನ್ನೇ ಗುರಿಯಾಗಿಟ್ಟುಕೊಂಡು ಕರ್ಮಮಾಡುವೆಯಾದರೆ ನಿರ್ವಿಘ್ನವಾಗಿ ಮುಂದುವರೆವೆ. ಅರ್ಜುನಾ ಸ್ವಲ್ಪಾದರೂ ಇಂಥ ಕರ್ಮ ಗೈ. ನಿನ್ನ ಶೋಕ ನಾಶವಾಗುವದು. ಸಂಸಾರವೆಂಬ ಮಹಾಭಯದಿಂದ ಪಾರಾಗುವಿ

> ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ |
> ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥೪೧॥

ಅರ್ಥ:- ಕುರುನಂದನ= ಪಾರ್ಥ, ಇಹ= ಈ ಕರ್ಮಮಾರ್ಗದಲ್ಲಿ ವ್ಯವಸಾಯಾತ್ಮಿಕಾ ಬುದ್ಧಿಃ= (ದೇವಧ್ಯಾನ, ಜ್ಞಾನ ರೂಪ) ಉದ್ಯಮದಲ್ಲಿ ನಿರತವಾದ ಬುದ್ಧಿಯು ಏಕಾ ಹಿ= ಏಕ ಮುಖಿ. ಅವ್ಯವಸಾಯಿನಾಂ= (ವಿಷಯ ಸಂಗ್ರಹ-ರೂಪ) ಉದ್ಯಮದಲ್ಲಿ ನಿರತರಾದವರ ಬುದ್ಧಿಯು, ಬಹುಶಾಖಾಃ= ಬಹುಮುಖಗಳು ಚ= ಮತ್ತು ಅನಂತಾಃ [ಕರ್ಮ, ಗುಣ, ಫಲ ಭೇದದಿಂದ] ಅಸಂಖ್ಯವಾಗಿವೆ.

ವಿವರಣೆ:- ಆತ್ಮನನ್ನು ಆರು ವಿಧವಾಗಿ ವರ್ಣಿಸುತ್ತಾರೆ: ೧) ಉಪ ಕ್ರಮೋಪಸಂಹಾರ ಲಿಂಗ: ಆತ್ಮನು ವಿಶ್ವದ ಆದಿ ಹಾಗು ಅಂತ! ಅವನಿಂದ ಮೂಡಿಬಂದ ಚರಾಚರ ವಿಸ್ತಾರವು ಕೊನೆಗೆ ಅವನಲ್ಲಿಯೇ ಲೀನವಾಗುವದು. ೨) ಅಭ್ಯಾಸಲಿಂಗ: ಜೀವನು ಪರಿಪೂರ್ಣ ಸ್ವಾತಂತ್ರ್ಯ ಅನುಭವಿಸಬೇಕಾದರೆ ಆ ಆತ್ಮನನ್ನೇ ತನ್ನ ಮನ ಬುದ್ಧಿಗಳಿಂದ ಧ್ಯಾನಿಸಬೇಕು. ೩) ಫಲಲಿಂಗ: ಪ್ರಪಂಚದಲ್ಲಿರುವ ವಸ್ತುಗಳು ಅಸಂಖ್ಯ. ಅವುಗಳಲ್ಲಿ ಒಂದನ್ನು ತಿಳಿದರೆ, ತಿಳಿಯಬೇಕಾದುದು ತೀರದು. ಯಾಕೆಂದರೆ ಪ್ರತಿವಸ್ತು ವಿಭಿನ್ನ! ಆತ್ಮನು ಹಾಗಲ್ಲ. ಅವನು ಸರ್ವ ವಸ್ತುಗಳಲ್ಲಿ ತುಂಬಿಕೊಂಡಿರುವ ವಿಶ್ವಾಂತರ್ಯಾಮಿ! ಅವನನ್ನು ಅರಿತುಬಿಟ್ಟರೆ ಎಲ್ಲ ಅರಿತಂತೆಯೇ. ೪) ಅಪೂರ್ವತಾ ಲಿಂಗ: ಆತ್ಮನು ಪಾರಮಾರ್ಥಿಕ ಸತ್ತೆಯ ಸತ್ಯ! ವ್ಯಾವಹಾರಿಕ ಮತ್ತು ಪ್ರಾತಿಭಾ

ಸಿಕ ಸತ್ತೆಯಲ್ಲಿ ಮಾತ್ರ ವ್ಯವಹರಿಸಬಲ್ಲ ಮನಸ್ಸು ಹಾಗು ಇಂದ್ರಿಯಗಳು ಆ ತೃತೀಯ ಸತ್ತೆಯಲ್ಲಿ ಪ್ರವೇಶಿಸಲಾರವು. ಆದುದರಿಂದ ಆತ್ಮನು ಪ್ರಮಾಣಾತೀತ. ೫) ಅರ್ಥವಾದ ಲಿಂಗ: ಜಗತ್ತು ಹೇಯ, ವಿನಾಶಶೀಲ, ದುಃಖಪೂರ್ಣ; ಆದರೆ ಆತ್ಮನು ಜ್ಞೇಯ, ಅವಿನಾಶಿ ಮತ್ತು ಅನಂತ ಸುಖಸಾಗರ! ೬) ಉಪಪತ್ತಿ ಲಿಂಗ: ಮಣ್ಣಿನಿಂದಾದ ಗಡಿಗೆ ಮಣ್ಣೇ. ಹಾಗೆ ಆತ್ಮನಿಂದ ರೂಪುಗೊಂಡ ಜಗತ್ತೆಲ್ಲ ಆತ್ಮನೇ!

ಹೀಗೆ ಆರು ಬಗೆಯಲ್ಲಿ ಉಪದೇಶಿಸಲ್ಪಡುವ ದಿವ್ಯ ಆತ್ಮಚೈತನ್ಯವನ್ನು ನಮ್ಮಂತರಂಗ ದರ್ಪಣದಲ್ಲಿ ಪರಿಗ್ರಹಿಸಬೇಕಾದರೆ ಅಂತರಂಗವು ಶುಚಿಯಾಗಬೇಕಲ್ಲವೆ? ಹಾಗೆ ಶುಚಿ ಮಾಡುವ ವಿಧಾನವೇ ಕರ್ಮಯೋಗ. ಅದರಲ್ಲಿ ನಡೆವ ಉದ್ಯಮ ಎಂಥದು? ಕರ್ಮಯೋಗಿಯ ವ್ಯವಸಾಯವೇನು?

ಬುದ್ಧಿಃ ವ್ಯವಸಾಯಾತ್ಮಿಕಾ ಚ ಏಕಾ ಇಹ :- ಕರ್ಮಯೋಗಿಯ ಬುದ್ಧಿ ಸದಾ ವ್ಯವಸಾಯಾತ್ಮಿಕ; ಅಂದರೆ ಆತ್ಮದೇವನೇ ಜೀವನದ ಚರಮ ಧ್ಯೇಯ; ದಿವ್ಯ ಶಾಂತಿಯ ತಾಣ; ಪರಮಾಶ್ರಯ! ಎಂಬ ಏಕ ನಿಷ್ಠೆ ತಾಳಿ, ಆ ಪಾವನ ಚೈತನ್ಯ ರವಿಯನ್ನೇ ಸದೈವ ಅನುಸಂಧಾನಿಸುತ್ತಿದೆ! ಬಾಹ್ಯ ಜಗದಲ್ಲಿರುವ ಅಗಣಿತ ವಿಷಯಗಳು ದೇವಚಿಂತನಾಶೀಲ ಹಾಗು ದೇವ ಜ್ಞಾನರತವಾದ ಬುದ್ಧಿಯನ್ನು ತಮ್ಮತ್ತ ಸೆಳೆಯಲಾರವು. ಆದುದರಿಂದ ಆ ಬುದ್ಧಿಗೆ "ಏಕಾ" ಏಕರೂಪ, ಆತ್ಮಮುಖಿ ಎಂದು ವರ್ಣಿಸಲಾಗಿದೆ.

ಸನಾದಿ ಊದುವ ಮನುಷ್ಯ ಉಸಿರಾಡಿಸುತ್ತಿರುವಂತೆಯೇ ಶ್ರುತಿ ನಾದವನ್ನು ಅನಿರ್ಗಲವಾಗಿ ಹೊರಡಿಸುತ್ತಾನೆ. ಅದೇ ರೀತಿ, ಕರ್ಮಯೋಗಿಯು ದೈಹಿಕವಾಗಿ ಭೌತ ಜಗತ್ತಿನಲ್ಲಿ ದುಡಿಯುತ್ತಿರುವ ಸಮಕಾಲದಲ್ಲಿಯೇ ತನ್ನ ಮನಸ್ಸನ್ನು ದೇವನತ್ತ ಹರಿಸುತ್ತಾನೆ. ಸಾಂಸಾರಿಕ ಉಸಿರಾಟ ಸಾಗಿದ್ದರೂ ಅವನ ದಿವ್ಯ ಚಿಂತನಾಶ್ರುತಿಗೆ ಭಂಗ ಬರದು. ಅವನ ದೇಹೇಂದ್ರಿಯಗಳು ಈ ಜಗದಲ್ಲಿ; ಅವನ ಅಂತಃಕರಣವೃತ್ತಿ ದೇವರಾಜ್ಯದಲ್ಲಿ! ಇದೇ ವ್ಯವಸಾಯಾತ್ಮಿಕ ಬುದ್ಧಿಯ ಕಲೆ! ಈಶ್ವರಾರ್ಪಣ ಭಾವದಿಂದ ಜರುಗಿಸುವ ಕರ್ಮಕೌಶಲ್ಯ!

ಸಾಂಖ್ಯಯೋಗಿ ಬ್ರಹ್ಮಾಕಾರ ವೃತ್ತಿಯವ. ಕರ್ಮಯೋಗಿ ಬ್ರಹ್ಮ ಚಿಂತನದೊಂದಿಗೆ ಕರ್ಮ ಹಾಗು ದೇವ ಪ್ರೇಮಗಳನ್ನು ಸಮನ್ವಯಗೊಳಿಸಿದ ಮಹಾತ್ಮ. ಇಬ್ಬರದೂ ವ್ಯವಸಾಯಾತ್ಮಿಕ ಬುದ್ಧಿ. ಒಬ್ಬನ ಬುದ್ಧಿ ಬ್ರಹ್ಮದಲ್ಲಿ ನಿಶ್ಚಲವಾಗಿ ನಿಂತಿದೆ; ಇನ್ನೊಬ್ಬನ ಬುದ್ಧಿ ಬ್ರಹ್ಮ ಚಿಂತನದಲ್ಲಿ ಮಗ್ನವಾಗಿದೆ. ಅಷ್ಟೇ ಅಲ್ಲ, ಅದೇ ಕಾಲಕ್ಕೆ ಕರ್ಮ ಯೋಗಿಯ ದೇಹದಿಂದ ಅನೇಕ ವೈವಿಧ ಕಾರ್ಯಗಳು ಸರ್ವಾರ್ಪಣ ಭಾವದಿಂದ ಸಾಗುತ್ತವೆ. ಇದೇ ಕರ್ಮ ಯೋಗಿಯ ವೈಶಿಷ್ಟ್ಯ. ಕರ್ಮಯೋಗಿ ದೇವನನ್ನು ನೆರೆ ನಂಬಿದ ನಿರ್ಭೀತ! ಅಕ್ಕಮಹಾ

ದೇವಿಯು ಎರಡು ವಚನಗಳಲ್ಲಿದು ವ್ಯಕ್ತವಾಗಿದೆ:

"ಕಿಡಿ ಕಿಡಿ ಕಿದರಿದಡೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದಡೆ ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದಡೆ ಎನಗೆ ಪುಷ್ಪವೆಂಬೆನು. ಚೆನ್ನಮಲ್ಲಿಕಾರ್ಜುನಯ್ಯಾ ಶಿರ ಹರಿದು ಬಿದ್ದಡೆ ಪ್ರಾಣ ನಿನಗರ್ಪಿತವೆಂಬೆನು."

"ಹಸಿವಾದಡೆ ಭಿಕ್ಷಾನ ಗಳುಂಟು. ತೃಷೆಯಾದಡೆ ಕೆರೆ ಹಳ್ಳ ಬಾವಿಗಳುಂಟು; ಶಯನಕ್ಕೆ ಪಾಳು ದೇಗುಲಗಳುಂಟು. ಚೆನ್ನಮಲ್ಲಿಕಾರ್ಜುನಯ್ಯ ಆತ್ಮ ಸಂಗಾತಕ್ಕೆ ನೀನೆನಗುಂಟು."

ಕರ್ಮಯೋಗಿಯು ತನಗಾರೂ ಇಲ್ಲವೆಂದು ಮರಗುವವನಲ್ಲ. ಕಷ್ಟ ಕೋಟಲೆಗಳು ಬಂದರೆ ವಿಕಂಪಿಸುವವನಲ್ಲ. ದೇವನೇ ರಕ್ಷಕ, ನಿಯಾಮಕ, ಸ್ನೇಹಿ ಎಂದು ನಂಬಿ ಜೀವಿಸುವ ಅವನಿಗೆ ಯಾರ ಹಂಗೂ ಇಲ್ಲ!

ಬಹುಶಾಖಾ ಹಿ ಅನಂತಾಶ್ಚ ಅವ್ಯವಸಾಯಿನಾಂ ಬುದ್ಧಯಃ :– ದೇವನನ್ನರಿಯದ, ಈಶ್ವರಾರ್ಪಣ ಭಾವವಿಲ್ಲದ ಅಜ್ಞ ಸಂಸಾರಿಗಳು ಮಾತ್ರ ಅವ್ಯವಸಾಯಿಗಳು. ಒಂದೂ ಕಾರ್ಯವನ್ನು ಪೂರ್ತಿಗೊಳಿಸದ ಚಂಚಲರು. ಇವರು ಬದುಕಿನಾದ್ಯಂತ ಶ್ರಮಿಸಿದರೂ ಆ ಶ್ರಮ ವ್ಯರ್ಥ! ಅನಿತ್ಯ ಅಸತ್ಯ ವಿಷಯೋಪಭೋಗಕ್ಕಾಗಿ ಮೀಸಲಾದ ಇವರ ವ್ಯವಸಾಯವು ಹೊಳೆಯಲ್ಲಿ ಹುಣಿಸೆ ತೊಳೆದಂತೆ ನಿರರ್ಥಕ. ಇವರು ಸಂಶಯಾತ್ಮರು; ನೀತಿ ಧರ್ಮಗಳಲ್ಲಿ ಅಶ್ರದ್ಧರು.

ಇವರ ಕಾಮನೆಗಳು ಅನೇಕ; ಆ ಕಾಮನಾ ಪೂರ್ತಿಗಾಗಿ ಗೈಯುವ ಕರ್ಮಗಳನೇಕ; ಪಡೆವ ಫಲಗಳೂ ವಿವಿಧ. "ಅಗ್ನಿಹೋತ್ರಂ ಜುಹುಯಾತ್ ಸ್ವರ್ಗಕಾಮಃ", "ದಧ್ನೇಂದ್ರಿಯ ಕಾಮೋ ಜುಹುಯಾತ್" ಸ್ವರ್ಗಕಾಮಿಯು ಅಗ್ನಿಹೋತ್ರ ಮಾಡಬೇಕು. ಇಂದ್ರಿಯ ಸುಖಕಾಮಿಯು ಮೊಸರಿನಿಂದ ಹವನ ಮಾಡಬೇಕು. ಇಂಥ ಕಾಮನಾ ವಾಕ್ಯಗಳು ಇವರಿಗೆ ಅತಿಪ್ರಿಯ. ಎಂತಲೇ ಇವರ ಬುದ್ಧಿ ಶಾಖೆ ಶಾಖೆಗಳಾಗಿ ಹಬ್ಬಿದೆ; ಬಗೆಬಗೆಯ ವಿಷಯಗಳತ್ತ ಹರಿದಿದೆ. ಹತ್ತು ಮುಖದಲ್ಲಿ ಮನ ಹರಿಬಿಡುವ ಇವರಿಗೆ ಎಲ್ಲಿ ಸಮಾಧಾನ? ಎರಡು ಬುಟ್ಟಿಗಳಲ್ಲಿ ಎರಡು ಕಾಲಿಟ್ಟು ನದಿ ದಾಟಬಯಸಿದ ಮಂಗ ಮಧ್ಯದಲ್ಲಿ ಮುಳುಗಿ ಸಾಯುವಂತೆ ವಿಷಯಾರಾಮಿ ಜನ ತಮಗಿದ್ದ ಒಂದು ಮನಸ್ಸನ್ನು ತರ ತರದ' ವಿಷಯಗಳತ್ತ ಹರಿಸಿ ದಡ ಕಾಣದೆ ಶಾಂತಿ ಪಡೆಯದೆ ಭವಸಾಗರದಲ್ಲಿ ಮುಳುಗಿಬಿಡುತ್ತಾರೆ.

ಭಗವಂತ:- "ಪರಂತಪ, ಹತ್ತು ಇಂದ್ರಿಯಗಳ ಹರಿ ಹಿಡಿದು ಹಾಳಾಗಿ ಹೋಗುವ ನಿನ್ನ ಮನೋಗತ ಶಕ್ತಿಯನ್ನು ಪ್ರತ್ಯಾಹರಣ ಮಾಡು; ಅಂತರಂಗದಲ್ಲಿ ನೆಲೆಸಿದ ಆತ್ಮಪ್ರಭುವಿನ ಧ್ಯಾನ, ಚಿಂತನ, ಜ್ಞಾನಗಳಲ್ಲಿ ಸಮರ್ಪಿಸು. ಆತ್ಮನೇ ವಿಶ್ವನಿಯಂತಾರ; ಅವನೇ ಅಂತಿಮ ಶರಣ್ಯ ಎಂಬುದನ್ನು ಬಲವಾಗಿ ನಂಬು. ಅವನಿಗೆ ನಿನ್ನ ಸರ್ವಸ್ವವನ್ನು ಅರ್ಪಿಸು. ಎಲ್ಲವೂ ಅವನದೆಂದು ಭಾವಿಸಿ ಅವನಿಗಾಗಿ ಅಸಂಖ್ಯ ಕರ್ಮ ಎಸಗು. ಆ ಕರ್ಮಗಳು

ನಿನ್ನನ್ನು ಬಾಧಿಸವು. ಇದೇ ಕರ್ಮಯೋಗದ ಗುಟ್ಟು; ನಿಶ್ಚಿಂತ ನಿರಾಮಯವಾಗಿ ಬಾಳುವ ವಿಧಾನ!"

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥೪೨॥
ಕಾಮಾತ್ಮಾನಃ ಸ್ವರ್ಗಪರಾ ಜನ್ಮ ಕರ್ಮಫಲಪ್ರದಾಮ್ ।
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥೪೩॥
ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥೪೪॥

ಅರ್ಥ:– ಪಾರ್ಥ = ಅರ್ಜುನ, ವೇದವಾದರತಾಃ = (ಕಾಮ್ಯ ಕರ್ಮ ಪ್ರಶಂಸಕ) ವೇದ ವಾಕ್ಯಗಳಲ್ಲಿ ರತಿಯುಳ್ಳ, (ವೇದೇ ಯೇ ಅರ್ಥವಾದಾಃ ತೇಷು ಏವ ರತಾಃ), ನ ಅನ್ಯತ್ ಅಸ್ತಿ ಇತಿ ವಾದಿನಃ = (ಸ್ವರ್ಗಕ್ಕಿಂತ) ಬೇರೇನೂ ಇಲ್ಲವೆಂದು ವಾದಿಸುವ, ಅವಿಪಶ್ಚಿತಃ = ಮೂಢರು, ಯಾಂ ಇಮಾಂ = ಯಾವ ಈ, ಪುಷ್ಪಿತಾಂ ವಾಚಂ = ಪುಷ್ಪಲತೆಯಂತೆ ಮನೋಹರವಾದ ಮಾತುಗಳನ್ನು, (ಪುಷ್ಪಿತ–ಲತಾವತ್ ಆಪಾತ ರಮಣೀಯಾಂ ವಾಚಾಂ) ವದಂತಿ = ಆಡುತ್ತಾರೆ ॥೪೨॥ ಕಾಮಾತ್ಮಾನಃ = ಕಾಮಾಕುಲ ಚಿತ್ತರಾದ, ಸ್ವರ್ಗ ಪರಾಃ = ಸ್ವರ್ಗವೇ ಶ್ರೇಷ್ಠವೆಂದು ಭಾವಿಸುವ, (ಸ್ವರ್ಗಃ ಏವ ಪರಮ ಪುರುಷಾರ್ಥಃ ಯೇಷಾಂ ತೇ), ಆ ಮೂಢರು, ಜನ್ಮಕರ್ಮ ಫಲಪ್ರದಾಂ = ಜನ್ಮ ಕರ್ಮ ಮತ್ತು ಫಲ ದಾಯಕವಾದ, ಭೋಗೈಶ್ವರ್ಯಗತಿಂ ಪ್ರತಿ ಕ್ರಿಯಾ ವಿಶೇಷ-ಬಹುಲಾಂ = ಭೋಗ ಐಶ್ವರ್ಯಪ್ರಾಪ್ತಿಸಾಧನಭೂತ, ವಿವಿಧ ವಿಶಿಷ್ಟ ಕ್ರಿಯಾಬೋಧಕವಾದ, [ಭೋಗೈಶ್ವರ್ಯ ಗತಿಂ ಪ್ರತಿ ಪ್ರಾಪ್ತಿಂ ಪ್ರತಿ ಸಾಧನಭೂತಾ ಯೇ ಕ್ರಿಯಾ ವಿಶೇಷಾಃ ತೇ ಬಹುಲಾ ಯಸ್ಯಾಃ] ಸವಿಮಾತುಗಳನ್ನು ಆಡುತ್ತಾರೆ. ॥೪೩॥ ತಯಾ = ಆ ರಮಣೀಯ ಮಾತಿನಿಂದ, ಅಪಹೃತ ಚೇತಸಾಂ = ಆಕರ್ಷಿತ ಮನಸ್ಸುಳ್ಳ, [ಪುಷ್ಪಿತಯಾ ವಾಚಾ ಅಪಹೃತಂ ಆಕೃಷ್ಟಂ ಚೇತಃ ಯೇಷಾಂ], ಭೋಗೈಶ್ವರ್ಯ ಪ್ರಸಕ್ತಾನಾಂ = ಭೋಗೈಶ್ವರ್ಯದಲ್ಲಿ ಆಸಕ್ತರಾದ ಅವಿಪಶ್ಚಿತರಿಗೆ, ಸಮಾಧೌ = ಸಮಾಧಿಯ ವಿಷಯದಲ್ಲಿ, ವ್ಯವಸಾಯಾತ್ಮಿಕಾ ಬುದ್ಧಿಃ = ಏಕಾಗ್ರ ಬುದ್ಧಿಯು [ಬುದ್ಧ್ಯೇಕಾಗ್ರತೆಯು] ನ ವಿಧೀಯತೇ = ಸಾಧ್ಯವಾಗುವದಿಲ್ಲ. ॥೪೪॥

ಭಾವ:- ಕಾಮ್ಯಕರ್ಮಪರ ವೇದವಾಕ್ಯಗಳಲ್ಲಿ ಪ್ರೀತಿಯುಳ್ಳ ಹಾಗು ಕಾಮಾತುರರಾದ ಮೂಢ ಜನರು ಸ್ವರ್ಗವೇ ಪರಮ ಪುರುಷಾರ್ಥ ಎಂದು ಭಾವಿಸುತ್ತಾರೆ. ಅವರು ಜನ್ಮ, ಕರ್ಮ, ಹಾಗು ಭೋಗೈಶ್ವರ್ಯ ಪ್ರದಾಯಕ ವಿಶಿಷ್ಟ ಕರ್ಮಪರವಾದ ರಮಣೀಯ ಮಾತುಗಳನ್ನೇ ಆಡುತ್ತಾರೆ. ಭೋಗೈಶ್ವರ್ಯಗಳಿಗೆ ಆಕರ್ಷಿತರಾದ ಅವಿವೇಕಿಗಳ ಬುದ್ಧಿಯು ವ್ಯವಸಾಯಾತ್ಮಿಕವಲ್ಲ. ಆದ್ದರಿಂದ ಆ ಬುದ್ಧಿಯು ಸಮಾಧಿ - ಅವಸ್ಥೆ ಪಡೆಯಲಾರದು.

ವಿವರಣೆ:- ವೇದದಲ್ಲಿ ಎರಡು ವಿಭಾಗ (೧) ಪೂರ್ವಭಾಗ (೨) ಉತ್ತರ ಭಾಗ (ಉಪನಿಷತ್ತು ಅಥವಾ ವೇದಾಂತ). ಪೂರ್ವ ಭಾಗ ಕಾಮ್ಯ ಕರ್ಮಪರ. ಉತ್ತರ ಭಾಗ ಆತ್ಮಜ್ಞಾನಪರ. ವೇದಾಂತ ಜ್ಞಾನವನ್ನು ಮೈಗೂಡಿಸಿದವ ಸಾಂಖ್ಯಯೋಗಿ. ಪೂರ್ವವೇದ ನಂಬಿ ಕಾಮ್ಯ ಕರ್ಮಗಳಲ್ಲಿ ಆಸಕ್ತ

ತಾಳಿದವ ಭೋಗಿ. ಆತ್ಮನಲ್ಲಿ ಮನ ನಿಲಿಸಿ, ನಿಷ್ಕಾಮ ಕರ್ಮಗಳಲ್ಲಿ ತೊಡಗಿದವ ಕರ್ಮಯೋಗಿ. ಸಾಂಖ್ಯ ಹಾಗು ಕರ್ಮಯೋಗಿಗಳು ವಿಪಶ್ಚಿತ್ತರು; ಅವರಿಗೆ ಮೋಕ್ಷದ ಸೌಖ್ಯ ಕರತಲಾಮಲಕ. ಭೋಗಿಗಳು ಅವಿಪಶ್ಚಿತ್ತರು. ಅವರಿಗೆ ಶಾಂತಿಯಿಲ್ಲ. ಈ ಭೋಗಿಗಳ ಬಗ್ಗೆ ಭಗವಂತನು ನಿರೂಪಿಸುತ್ತಾನೆ.

ಭೋಗವಾದಿಗಳು ಎಂಥವರು?

(ಅ) ಅವಿಪಶ್ಚಿತ್ತರು : "ವಿಶೇಷೇಣ ಪಶ್ಯತಿ ಇತಿ ವಿಪಶ್ಚಿತ್" ಅಮರ ಆತ್ಮನ ಯಥಾರ್ಥ ಸ್ವರೂಪವನ್ನು ಕಂಡವರು ವಿಪಶ್ಚಿತರು. ಉದಾ: ಜ್ಞಾನ ಯೋಗಿ ಅಲ್ಲಮ, ಕರ್ಮಯೋಗಿ ಬಸವಣ್ಣ, ಹಾಗೂ ರಾಮಕೃಷ್ಣ ಪರಮಹಂಸ ಮುಂತಾದವರು ವಿಪಶ್ಚಿತರು. ಸತ್ಯ ವಸ್ತು ಜ್ಞಾನಹೀನರು ಅವಿಪಶ್ಚಿತ್ತರು. ಇವರು ವೇದ ಪಂಡಿತರಿರಬಹುದು ಆದರೆ ವೇದದ ಅಂತಿಮ ಮಥಿತಾರ್ಥ ವಿಹೀನರು. ವೇದಗಳು ಇವರ ನಾಲಿಗೆಯ ಮೇಲೆ ಉಲಿಯುತ್ತಿದ್ದರೂ ಆತ್ಮನ ಬಗ್ಗೆ ಯತ್ಕಿಂಚಿತ್ ಕಲ್ಪನೆ ಕೂಡ ಇವರಲ್ಲಿಲ್ಲ. ಇವರು ಅಜ್ಞರು, ಮೂಢರು.

(ಬ) ವೇದವಾದರತಾಃ :– ಅರ್ಥವಾದ ಎನ್ನುವದೊಂದು ಶಿಕ್ಷಣ ವಿಧಾನ. ಏನಾದರೂ ಫಲದ ಆಶೆ ಹಚ್ಚಿ ಒಳ್ಳೆಯದರತ್ತ ಮನಸ್ಸನ್ನು ಆಕರ್ಷಿಸುವ ಪದ್ಧತಿ. ಉದಾ: ಶಾಲೆ ಕಲಿತರೆ ಸಾಹೇಬನಾಗುವಿ. ಪಾಠ ಓದಿದರೆ ಪೇಡೆ ಕೊಡುವೆ. ಹೀಗೆ ತನ್ನ ಚಿಕ್ಕ ಬಾಲಕನನ್ನು ಕುರಿತು ಅವನ ತಾಯಿಯು ನುಡಿಯುತ್ತಾಳೆ. ತಾಯಿಯ ಮಾತಿನ ನಿಜವಾದ ಉದ್ದೇಶ ಮಗನನ್ನು ವಿದ್ಯಾವಂತನನ್ನಾಗಿ ಮಾಡುವದೇ ಆಗಿದೆ. ಅದೇ ರೀತಿ ವಿಷಯಮಗ್ನ ಜೀವಿಗಳ ಮನಸ್ಸನ್ನು ಪರಮಾತ್ಮನತ್ತ ಸೆಳೆಯಲು ವೇದ ಈ ಅರ್ಥವಾದವನ್ನು ಬಳಸಿದೆ. ಭೋಗ ಐಶ್ವರ್ಯಗಳ ಆಸೆಗಾದರೂ ವೇದ ಓದಲಿ, ದೇವರನ್ನು ಪೂಜಿಸಲಿ, ಗುರುಗಳ ಆದೇಶ ಕೇಳಲಿ, ಅದೇ ಮುಂದೆ ಅವರನ್ನು ಆತ್ಮಮುಖಿಗಳನ್ನಾಗಿ ಪರಿವರ್ತಿಸುವದು; ಇದು ವೇದಗಳ ಅಂತರ್ಗತ ಹೇತು. ವೇದದಲ್ಲಿ ಬರುವ ಅರ್ಥವಾದದ ಕೆಲ ಉದಾಹರಣೆ ಕೊಡಬಹುದು. ೧) ಅಕ್ಷಯ್ಯಂ ಹ ವೈ ಚಾತುರ್ಮಾಸ್ಯ ಯಾಜಿನಃ ಸುಕೃತಂ ಭವತಿ. (ಶತಪಥ ೧-೬-೩೧) ಚಾತುರ್ಮಾಸ ಪೂರ್ಣಯಜ್ಞ ಮಾಡುವವರಿಗೆ ಅಕ್ಷಯ ಪುಣ್ಯ ದೊರೆಯುತ್ತದೆ. ೨) ಅಪಾಮ ಸೋಮಮಮೃತಾ ಅಭೂಮ (ತೈತ್ತಿರಿಯ ೩-೨-೫ ಋಕ್. ೬-೪-೧೧) ನಾವು ಸೋಮಪಾನ ಮಾಡಿದೆವು. ಅಮೃತರಾದೆವು. ಇವು ಅರ್ಥವಾದದ ಮಾತುಗಳೆಂದು ಅರಿಯದ ಅಜ್ಞರು ಯಜ್ಞದಿಂದಲೇ ಸ್ವರ್ಗೀಯ ಸುಖ; ಮೋಕ್ಷ. ಸೋಮಪಾನದಿಂದಲೇ ಅಮೃತತ್ವ ಎಂದು ತಪ್ಪಾಗಿ ಅರ್ಥಮಾಡಿ, ಬರಿ ಭೋಗಕ್ಕಾಗಿ ಆಯಾ ವೈದಿಕ ಕಾರ್ಯಗಳಲ್ಲಿ ತೊಡಗಿದರು. ಇವರಿಗೆ ವೇದವಾದಿಗಳೆಂದು ನಾವು...

ಕ) ಕಾಮಾತ್ಮಾನಃ :- ಭೋಗಿಗಳು ಕಾಮದ ದಾಸರು. ಉದಾ: ೧) ನಹುಷ ರಾಜ. ಶತಯಾಗ ಮಾಡಿ ಸ್ವರ್ಗಕ್ಕೆ ಹೋದ, ಇಂದ್ರ ಪದವಿಗೇರಿದ. ಆದರೆ ಅವನು ಕಾಮಾತುರತೆಯಿಂದಾಗಿ ಮತ್ತೆ ಸರ್ಪಯೋನಿ ಸೇರಿದ. ೨) ಪಾಂಡುರಾಜ ಕಾಮದ ಕಾವಿಗೆ ಸಿಕ್ಕು ಜೀವ ಕಳೆದುಕೊಂಡ. ಜಗತ್ತಿನ ಬಹುಜನ ಕಷ್ಟ ಪಡುವದು ಕೇವಲ ಕಾಮ ತೃಪ್ತಿಗಾಗಿ!

(ಡ) ಸ್ವರ್ಗ ಪರಾಃ–ಭೋಗಿಗಳಿಗೆ ಪರಮ ಪುರುಷಾರ್ಥವೆಂದರೆ ಸ್ವರ್ಗ! ಅವರ ಬದುಕು ಸ್ವರ್ಗಸುಖ ಪಡೆಯಲೆಂದೇ. ಇರುವಷ್ಟು ಕಾಲ ಯಜ್ಞ ಯಾಗ ದಾನ ಪೂಜೆ ಆಚರಿಸಿ ಸ್ವರ್ಗವೇರುವ ಯೋಜನೆ ಹಾಕಿಕೊಳ್ಳುತ್ತಾರೆ.

(ಇ) ನ ಅನ್ಯತ್ ಅಸ್ತಿ ಇತಿ ವಾದಿನಃ–ಕೊನೆಯದಾಗಿ, ಇವರ ದೃಷ್ಟಿಯಲ್ಲಿ ಸ್ವರ್ಗವೊಂದನ್ನು ಬಿಟ್ಟರೆ ಇನ್ನಾವ ಸುಖವೂ ಇಲ್ಲ ! ಇಂದ್ರಿಯ ತೃಪ್ತಿಯೇ ಪರಮ ತೃಪ್ತಿ. ಅದರ ಮುಂದೆ ತುರಿಯ ತುರಿಯಾತೀತ ಅವಸ್ಥೆಗಳಲ್ಲಿ ದೊರೆವ ಆತ್ಮಾನಂದ ನೀರಸ !

ಈ ಭೋಗಿಗಳ ಮಾತು ಎಂಥವು ?

(ಕ) ಪುಷ್ಪಿತಾಂ:– ಪುಷ್ಪಗಳಿಂದಾವೃತವಾದ ಬಳ್ಳಿ ಎಷ್ಟು ರಮಣೀಯವೋ ಅಷ್ಟೇ ಆಹ್ಲಾದಕರ ಅವರ ನುಡಿ. ಅವರ ಮಾತಿನಲ್ಲಿ ವಿಷಪೂರಿತ ಜೇನಿದೆ. ಕೇಳಲು ಸರಸ; ಸವಿ. ಒಂದೆರಡನ್ನು ಉದಾಹರಿಸಬಹುದು.

"ಬೆಚ್ಚನ್ನ ಮನೆಯಾಗಿ, ವೆಚ್ಚಕ್ಕೆ ಧನವಾಗಿ, ಇಚ್ಛೆಗೆ ನಡೆವ ಸತಿಯಾಗೆ. ಕೈಲಾಸಕ್ಕೆ । ಕಿಚ್ಚನಿಕ್ಕೆಂದ ಸರ್ವಜ್ಞ." "ಎತ್ತುಗಳು ಈರಡಾಗಿ, ಪುತ್ರರೈವರು ಆಗಿ, ಉತ್ತಮದ ಸತಿಯು ತನಗೊಬ್ಬಳಾದೊಡು ನಿತ್ಯದಲಿ ಸಗ್ಗ ಸರ್ವಜ್ಞ"

ಈ ಇಂಥ ಸುಲಲಿತ ಮಾತ ಕೇಳಿ ಮುದುಕರೂ ಮದುವೆಯಾದರೆ, ವಿರಕ್ತರು ಗೃಹಸ್ಥರಾದರೆ, ದೇವಭಕ್ತರು ಪತ್ನಿಭಕ್ತರಾದರೆ. ಸ್ವಾಮಿಗಳು ಕಾಮಿಗಳಾದರೆ ಆಶ್ಚರ್ಯವೇನಲ್ಲ !!

(ಖ) ಜನ್ಮಕರ್ಮ ಫಲಪ್ರದಾಂ:– ಹೊಸ ದೇಹ ಪ್ರಾಪ್ತಿಯು ಜನ್ಮ; ವರ್ಣಾಶ್ರಮಾದಿಗಳಿಗೆ ಸಂಬಂಧಿಸಿದ ಕರ್ತವ್ಯಗಳು ಕರ್ಮ; ಆಯು ಭೋಗ ಹಾಗೂ ಪುನರ್ಜನ್ಮಗಳೇ ಆ ಕರ್ಮ ಫಲ. ಈ ಘೋರರ ರಾಟಾಳದಲ್ಲಿ ಸಿಲುಕಿಸುವ ಸಾಮರ್ಥ್ಯ ಭೋಗಿಗಳ ಮಾತಿನಲ್ಲಿದೆ; ಜಗದಲ್ಲಿ ಬಹುಜನ ಬ್ರಹ್ಮಚಾರಿಗಳು, ತತ್ತ್ವಜ್ಞಾನಿಗಳು, ಸತ್ಯದರ್ಶಿ ಸಂತ ಮಹಂತರು ಇಲ್ಲದಿರುವದೇ ಇದಕ್ಕೆ ನಿದರ್ಶನ !

(ಗ) ಭೋಗೈಶ್ವರ್ಯಗತಿಂ ಪ್ರತಿ ಕ್ರಿಯಾವಿಶೇಷ ಬಹುಲಾಂ:-ಅಮೃತಪಾನ, ಪಾರಿಜಾತ ಪರಿಮಲ, ರಂಭೆ ಉರ್ವಶ್ಯಾದಿಯರ ಸಂಗ ಇವೇ ಮುಂತಾದವುಗಳು ಸ್ವರ್ಗೀಯ ಭೋಗ. ವಿವಿಧ ವಸ್ತು ವೈಡೂರ್ಯಗಳಿಂದಲಂಕೃತವಾದ ಭವ್ಯ ಭವನ, ಲತಾಮಂಟಪ, ಪರಿಚಾರಿಕಾಮೇಳ ಮುಂತಾದವು

ಸ್ವರ್ಗೀಯ ಐಶ್ವರ್ಯ. ಅಗ್ನಿಹೋತ್ರ, ದರ್ಶಪೂರ್ಣಮಾಸ,ಜ್ಯೋತಿಷ್ಟೋಮ ಇತ್ಯಾದಿಗಳು ಆ ಭೋಗೈಶ್ವರ್ಯಪ್ರಾಪಕ ವಿಶಿಷ್ಟ ಕ್ರಿಯೆಗಳು. ಭೋಗಿಗಳ ಮಾತು ಈ ಕ್ರಿಯಾಪ್ರಚೋದಕವಾಗಿವೆ.

ತಯಾ ಅಪಹೃತ ಚೇತಸಾಂ, ಭೋಗೈಶ್ವರ್ಯ ಪ್ರಸಕ್ತಾನಾಂ ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ:– ಹೀಗೆ ರಸ ರಸಿತವಾದ ಭೋಗಿಗಳ ಮಾತು ಭೋಗವಿಲಾಸಿಗಳ ಮನಸ್ಸನ್ನು ತನ್ನತ್ತ ಜಗ್ಗಿಕೊಳ್ಳುವದು; ಅಷ್ಟೇ ಅಲ್ಲ ಈ ಸಕ್ಕರೆಯ ನುಡಿಗೆ ಬಲ್ಲ ಬಲ್ಲಿದರ ತಲೆ ತೂಗುವದು ! ಸಿರಿವಂತ ಸ್ಫುರದ್ರೂಪಿ ವಧು ; ಲಕ್ಷದ ವರದಕ್ಷಿಣೆ ; ಪರದೇಶದ ಕಾರು, ರಾಜಧಾನಿಯಲ್ಲಿ ಮುಗಿಲೆತ್ತರದ ಬಂಗಲೆ– ಇಂಥ ಶಬ್ದ ಕೇಳಿದಾಗ ಯಾವ ವಿದ್ವಾವಂತ ಮರುಳಾಗಲಿಕ್ಕಿಲ್ಲ ? ಯಾವ ಪಂಡಿತ, ವಿರಕ್ತರ ಬಾಯಿಗೆ ನೀರು ಬರಲಿಕ್ಕಿಲ್ಲ ?

ಭೋಗಪರ ಮಾತಿನಿಂದಾಗಿ ವಿವೇಕ ನಿಶ್ಚೇಷ್ಟಿತವಾಗುವದು; ಮನಸ್ಸು ಚಂಚಲಿಸುವದು. ಹೃದಯದ ತುಂಬ ಮನೆ, ಮಡದಿ, ವ್ಯವಹಾರ, ಐಶ್ವರ್ಯಗಳೇ ತುಂಬಿಕೊಳ್ಳುವವು. ಹೀಗಾದಾಗ ದೇವಪ್ರೇಮ ಹೇಗೆ ಉಂಟಾಗಬೇಕು? ಸಮಾಧಿ ಅವಸ್ಥೆಯಲ್ಲಿ ಮನಸ್ಸು ಹೇಗೆ ಪ್ರವೇಶಿಸಬೇಕು.? ಅಷ್ಟು ದೂರ ಏಕೆ ? ಆತ್ಮ, ದೇವ, ಸಾಧನ, ಶಾಸ್ತ್ರ, ಗುರು ಎಂಬ ಶಬ್ದ ಕಿವಿಗೆ ಬಿದ್ದರೂ ಸಹನವಾಗದು ! ಆದುದರಿಂದಲೇ ಇಂದು ಶಾಸ್ತ್ರ ಓದುವವರು ಕೇಳುವವರು ಬಹುತರವಾಗಿ ತರುಣರಲ್ಲ, ಸುಶಿಕ್ಷಿತರಲ್ಲ; ತಲೆ ನೆರೆತು, ನಡೆಗೆಟ್ಟು, ಕಷ್ಟಪಡುವ ಮುದುಕರು ! ಉಳಿದವರಿಗೆ ತತ್ತ್ವವಿಚಾರವೆನ್ನುವದು ಅಪಥ್ಯ.

ಭಗವಂತ:-"ಭಾರತ, ಅವ್ಯವಸಾಯಿಗಳಾದ ಸಂಸಾರಿ ಜೀವರಿಗೆ ಸತ್ಯಾಡ ತಿಳಿವಿಲ್ಲ. ಅವರ ಮಾತಿನಲ್ಲಿ ಮೋಹಕತೆ ಇದೆ; ಮನದಲ್ಲಿ ವಿಷಯಾಭಿರತಿ ಇದೆ. ಸ್ವರ್ಗಪರ ವೇದ ವಾಕ್ಯಗಳಿಂದ ಆಕರ್ಷಿತವಾದ ಅವರ ಬುದ್ಧಿ ಸಾರಾಸಾರ ವಿವೇಚನಾ ಶಕ್ತಿಯನ್ನು ಕಳೆದುಕೊಂಡಿದೆ. ಇಂಥವರಿಗೆ ಸತ್ಯವಸ್ತುವಿನ ಸಾಕ್ಷಾತ್ಕಾರ ಆಗುವ ಬಗೆಯಾದರೂ ಹೇಗೆ ?

ಅರ್ಜುನ:–"ಮಾಧವ, ವೇದಗಳು ಋಷಿ ನಿರ್ಮಿತ. ಸ್ವರ್ಗಾದಿ ಸುಖಗಳು ಹೇಯವೆಂದು ಅವರಿಗೆನಿಸಿದ್ದರೆ ಅವರೇಕೆ ಅವುಗಳನ್ನು ವರ್ಣಿಸುತ್ತಿದ್ದರು ? ಸ್ವರ್ಗಪ್ರದಾಯಕ ವಿವಿಧ ಯಜ್ಞ ಯಾಗಾದಿಗಳ ಬಗ್ಗೆ ಅದೇಕೆ ವಿವರಿಸುತ್ತಿದ್ದರು ?

ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥೪೫॥

ವೇದಾಃ = ವೇದಗಳು, ತ್ರೈಗುಣ್ಯ ವಿಷಯಾಃ –(ಸತ್ವ ರಜ ತಮವೆಂಬ) ತ್ರಿಗುಣಾ

ತಕ್ಕ ಸಾಂಸಾರಿಕ ವಿಷಯುಗಳನ್ನು ವರ್ಣಿಸುವಂಥವುಗಳು. ನಿಸ್ತ್ರೈಗುಣ್ಯೋ ಭವ = ನೀನು ತ್ರಿಗುಣರೂಪ ಸಂಸಾರ ರಹಿತನಾಗು. ನಿರ್ದ್ವಂದ್ವಃ = ದ್ವಂದ್ವವಿಲ್ಲದವನೂ ನಿತ್ಯ ಸತ್ವಸ್ಥಃ = ನಿತ್ಯಸತ್ವಸ್ಥನೂ, ನಿರ್ಯೋಗ ಕ್ಷೇಮಃ = ಯೋಗ ಕ್ಷೇಮ ರಹಿತನೂ ಆತ್ಮ ವಾನ್ = ಆತ್ಮನಿಷ್ಠನೂ (ಆಗು).

ವಿವರಣೆ:–ಆತ್ಮಜ್ಯೋತಿಯನ್ನು ತನ್ನಲ್ಲಿ ಪರಿಗ್ರಹಿಸಬಲ್ಲ ಶುದ್ಧ ಮನೋವೃತ್ತಿಯೇ ವ್ಯವಸಾಯಾತ್ಮಿಕ ಮತಿ. ಇದರಿಂದ ಸಮಾಧಿ ಸಿದ್ಧಿ, ಸ್ಥಿತಪ್ರಜ್ಞ ಅವಸ್ಥೆಯ ಅನುಭವ. ಆತ್ಮ ಪ್ರಕಾಶವನ್ನು ಗ್ರಹಿಸಲು ಅಸಮರ್ಥವಾದ ಅಶುದ್ಧ ಮನೋವೃತ್ತಿಯೇ ಅವ್ಯವಸಾಯಾತ್ಮಿಕ ಮತಿ. ಇದನ್ನುಳ್ಳವರು ಆತ್ಮವಿಮುಖರು, ಭೋಗರತರು. ಬಹು ಚಂಚಲ ಚಿತ್ತದ ಈ ಭೋಗವಿಲಾಸಿ ಜೀವರು ಸ್ಥಿರ ಪ್ರಜ್ಞರಾಗಬೇಕಾದರೆ ಕ್ರಮಬದ್ಧವಾದ ಸಾಧನ ಮಾಡಬೇಕು. ಆ ಸಾಧನೆಯ ಸಂಕ್ಷೇಪ ವಿವರಣ ಇಲ್ಲಿದೆ.

ತ್ರೈಗುಣ್ಯವಿಷಯಾ ವೇದಾಃ, ನಿಸ್ತ್ರೈಗುಣ್ಯೋ ಭವ :– ಸತ್ವ ರಜ ತಮಗಳು ವಿಶ್ವದ ಮೂಲ ಗುಣಗಳು. ಊರ್ಧ್ವಲೋಕ ಮಧ್ಯಲೋಕ, ಅಧೋಲೋಕ ಹಾಗು ಅವುಗಳಲ್ಲಿರುವ ಅಗಣಿತ ಪದಾರ್ಥಗಳು ಈ ಪ್ರಾಕೃತಿಕ ತ್ರಿಗುಣಗಳಿಂದ ನಿರ್ಮಾಣಗೊಂಡಿವೆ; ಆದ್ದರಿಂದ ಇವುಗಳಿಗೆ 'ತ್ರೈಗುಣ್ಯ ಎಂಬ ವಿಶೇಷಣ; ಸಂಸಾರ ಎನ್ನುವದು ಪರ್ಯಾಯ ನಾಮ. ಸಂಸಾರವು ಅನಾತ್ಮ, ಅನಿತ್ಯ ಮತ್ತು ಪರಿಚ್ಛಿನ್ನ. ಇದರಲ್ಲಿ ಸಾಮರಸ್ಯ ಹೊಂದಿದ ಜೀವಪುರುಷನು 'ಸಾಂಸಾರಿಕ ಜೀವ'. ಈತ ಪುಣ್ಯಮಾಡಿ ಸ್ವರ್ಗಕ್ಕೆ, ಪುಣ್ಯ-ಪಾಪ ಮಾಡಿ ಮರ್ತ್ಯಕ್ಕೆ ಹಾಗು ಪಾಪ ಮಾಡಿ ಅಧೋಲೋಕಕ್ಕೆ ಗಮಿಸುತ್ತಾನೆ; ಗುಣಬದ್ಧನಾಗಿ ಕೋಟಿ ಕೋಟಿ ವರುಷಗಳ ಕಾಲ ಲೋಕಲೋಕಾಂತರಗಳಲ್ಲಿ ಚರಿಸುತ್ತಾನೆ; ಹಲ ವಿಧದ ಭೋಗಗಳನ್ನು ಭುಂಜಿಸುತ್ತಾನೆ. ಆದರೆ ಸತ್ಯ ಸುಖವಾಗಲಿ ಸರ್ವತಂತ್ರ ಸ್ವಾತಂತ್ರ್ಯವಾಗಲಿ ಇವನಿಗೆ ಸಮನಿಸದು.

ಜೀವನನ್ನು ಪೂರ್ಣ ಭವಬದ್ಧಗೊಳಿಸುವ ಸಂಸಾರವನ್ನೇ ವೇದ ಬಣ್ಣಿಸುತ್ತವೆ; ಸ್ವರ್ಗದ ಸುರಮ್ಯ ಚಿತ್ರವನ್ನು ರೇಖಿಸುತ್ತವೆ; ಆ ಸ್ವರ್ಗ ಪಡೆಯಲು ಬೇಕಾದ ಪುಣ್ಯ ಕರ್ಮಗಳ ಕುರಿತು ವಿವರಿಸುತ್ತವೆ. ಅದೇ ರೀತಿ

ರಾಜಸಿಕ ತಾಮಸಿಕ ಕರ್ಮಗಳಿಂದ ಪ್ರಾಪ್ತವಾಗುವ ವಿಷಯುಗಳ ಬಗ್ಗೆಯೂ ಪ್ರತಿಪಾದಿಸುತ್ತವೆ.

ಸಂಸಾರ-ಸುಖವನ್ನು ರಸರಸಿತವಾಗಿ ಚಿತ್ರಿಸುವಲ್ಲಿ ವೇದಗಳ ಉದ್ದೇಶ ವೇನಿದೆ? ಜೀವನು ಸಾಂಸಾರಿಕ ಪಂಕದಲ್ಲಿ ಮುಳಗಿರಬೇಕೆಂದೆ? ಎಂದಿಗೂ ಸಾಧ್ಯವಿಲ್ಲ. ವಾತ ಪಿತ್ತ ಕಫಗಳನ್ನು ಸಾದ್ಯಂತವಾಗಿ ವಿಶ್ಲೇಷಿಸುವ ಆಯುರ್ವೇದದ ಗುರಿ ವ್ಯಕ್ತಿಯು ಈ ಮೂರರ ವಿಕಾರಗಳಿಂದ ಮುಕ್ತನಾಗಿ ಆರೋಗ್ಯ ಸೌಖ್ಯ ಪಡೆಯಬೇಕೆಂದಲ್ಲವೆ? ಹಾಗೆ ಜೀವನು ತ್ರಿಗುಣಾತ್ಮಕ ವಿಷಯುಗಳಿಂದ ಪಾರಾಗಿ ಆತ್ಮನಿಷ್ಠನಾಗಬೇಕೆಂದು ವೇದಗಳು ಉದ್ದೇಶಿಸಿವೆ. ಅಜ್ಞ ಮನುಷ್ಯ ವೇದಗಳ ಅಂತರ್ಯ ಗ್ರಹಿಸದೆ ಸ್ವರ್ಗಾದಿ ಭೋಗಗಳೇ ಪರಮಾರ್ಥ ಎಂದು ಭ್ರಮಿಸಿದ.

"ಅರ್ಜುನ, ನೀನು ಮಾತ್ರ ತ್ರಿಗುಣಾತ್ಮಕ ಸಂಸಾರದಲ್ಲಿ ಸಿಲುಕಬೇಡ. ತ್ರಿಗುಣಗಳಿಂದ ಪಾರಾಗು. ಇಹ ಪರ ಐಶ್ವರ್ಯಗಳು ಕ್ಷಣಭಂಗುರ. ಅವುಗಳಲ್ಲಿ ವಿರಕ್ತಿ ತಾಳು."

ನಿರ್ದ್ವಂದ್ವಃ:– " ಮಾನ ಅಪಮಾನ, ಜಯ ಅಪಜಯ, ಲಾಭ ಹಾನಿ ಇಂಥ ಎಲ್ಲ ದ್ವಂದ್ವಗಳ ಭಾವ ಮೀರು, ಗುಣದ್ವಂದ್ವಗಳ ಪರಿಧಿಯಿಂದ ದೂರಾಗು, ನಿರ್ದ್ವಂದ್ವತೆ ಸಾಧಿಸಬೇಕಾದರೆ,

ನಿತ್ಯಸತ್ವಸ್ಥಃ– "ನೀನು ನಿತ್ಯಸತ್ವಸ್ಥನಾಗುವದು ಅವಶ್ಯ. ವಿಕಾರಶೀಲವಾದ ಸಂಸಾರಕ್ಕೆ ಪ್ರೇರಕವಾದ ತಮ ರಜ ಸತ್ವ ಗುಣಗಳ ದಾಟು. ತುರಿಯ ಮಂಡಲ ಏರು. ಅದೇ ನಿತ್ಯ ಸತ್ವಸ್ಥಿತಿ; ಪರಮಾತ್ಮನು ಪ್ರಕಟವಾಗುವ ತಾಣ; ಈಶ್ವರನ ಪವಿತ್ರ ಕರುಣಾ ಪ್ರಸಾದ ದೊರೆಯುವ ಸ್ಥಾನ.

ನಿರ್ಯೋಗಕ್ಷೇಮ ಆತ್ಮವಾನ್ ಭವಃ– "ಅಪ್ರಾಪ್ತಪ್ರಾಪ್ತಿರೂಪ ಯೋಗ, ಪ್ರಾಪ್ತವಸ್ತು ರಕ್ಷಣಾರೂಪ ಕ್ಷೇಮ ಇವೆರಡಕ್ಕೆ ತೊಡಗಬೇಡ. ಯೋಗ ವಿಯೋಗಗಳು ಸೃಷ್ಟಿಯ ಅನಿವಾರ್ಯ ಸಂಗತಿಗಳು. ನಮ್ಮ ಪ್ರಾರಬ್ಧಾನುಸಾರ ಹತ್ತು ಹಲವು ಭೋಗಗಳು ಬರಲಿ; ನೀನು ಅವುಗಳನ್ನು ಪರಿ-

ಪಾಲಿಸಬೇಕಿಲ್ಲ; ಇಲ್ಲವೆ ಹೊರದೂಡಬೇಕಾದ ಅಗತ್ಯವೂ ಇಲ್ಲ. ಪ್ರಾರಬ್ಧಾನುಸಾರ ನಿನ್ನನ್ನು ಅರಸಿ ಬಂದು, ಕೆಲ ಸಮಯ ಇದ್ದು, ಮಾಯವಾಗುವವು. ಆದುದರಿಂದ, ನೀನು ಅವುಗಳ ಯೋಗಕ್ಕಾಗಿ ಹಂಬಲಿಸಬೇಡ; ವಿಯೋಗವಾದಾಗ ದುಃಖಿಸಬೇಡ. ಧನ ಧಾನ್ಯ ಮಡದಿ ಮನೆಗಳ ಯೋಗ ಹಾಗು ಜೋಪಾನಗಳಲ್ಲಿ ಕುಳಿತಿರುವಾದರೆ ಪುರುಷಾರ್ಥ ಸಿದ್ಧಿಸದು; ನಿನ್ನ ಶೋಕ ನೀಗದು.

"ನಿನ್ನ ಮೂಲ ಸ್ವರೂಪ ಪವಿತ್ರ ಆತ್ಮ ! ಅವನತ್ತ ಹೊರಳು; ತದೇಕ ಚಿತ್ತನಾಗು. ಅವನಲ್ಲಿಯೇ ವಾಸಿಸು. ಜೀವಭಾವವನ್ನು ಅವನ ಚರಣದಲ್ಲಿ ಸಮರ್ಪಿಸು."

ವಿವರಣೆ:- ಪರಮ ಆತ್ಮ ಪ್ರಭುವು ಚಿರಂತನ ಸತ್ಯ; ಶಾಂತಿಸಾಗರ ಅನಂತ ಜ್ಞಾನಾಕಾಶ ! ಅವನ ದಿವ್ಯ ದರ್ಶನ ಹಾಗು ಅವನೊಂದಿಗೆ ಸಾಮರಸ್ಯ ಹೊಂದುವದೇ ಜೀವ ಪುರುಷನ ಬದುಕಿನ ಹೇತು. ಅದನ್ನು ಸಾಧಿಸಿ, ಬಳಿಕ ಪ್ರಪಂಚದಲ್ಲಿ ವ್ಯವಹರಿಸಿದರೆ ಅದು ಸಾರ್ಥಕ. ಆತ್ಮಗಳಿಕೆಯಿಲ್ಲದ ಸಮೃದ್ಧ ಸಂಸಾರ ನಿರರ್ಥಕ.

"ಶರೀರಂ ಸರೂಪಂ ತಥಾ ವಾ ಕಲತ್ರಂ। ಧನಂ ಮೇರು ತುಲ್ಯಂ ಯಶಶ್ಚಾರು ಚಿತ್ರಮ್॥
ಗುರೋರಂಘ್ರಿಪದ್ಮೇ ಮನಶ್ಚೇನ್ನಲಗ್ನಂ । ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥"

ಸುಂದರ ಶರೀರ, ಅಂಥವಳೇ ಆದ ಮಡದಿ, ಪರ್ವತದಷ್ಟು ಧನ, ಬಹುಮುಖದ ಯಶ, ಆಕರ್ಷಕ ವ್ಯಕ್ತಿತ್ವ ಏಸಿದ್ದರೇನು ? ಗುರು ಪರಮಾತ್ಮನ ಪಾದಪಂಕಜದಲ್ಲಿ ಮನವು ಸ್ಥಿರವಾಗಿರದಿದ್ದರೆ ಏನು ಪಡೆದೇನು ಲಾಭ? ಆತ್ಮದೇವನ ಧ್ಯಾನ ಚಿಂತನಗಳಿಗೆ ಅಡೆ ತಡೆಯಾಗುವ ಐಶ್ವರ್ಯ ನಿರುಪಯುಕ್ತ. ಆದುದರಿಂದಲೇ, ಲಕ್ಷ್ಮೀದೇವಿಯು ವರಬೇಡುವಂತೆ ಒತ್ತಾಯ ಮಾಡಿದಾಗ, 'ಯಾರ ಜಿಹ್ವೆಯಲ್ಲಿ ವಿಠಲ ಎಂಬ ನಾಮವಿದೆ ಅವರತ್ತ ನೀನು ಅಪ್ಪಿ ತಪ್ಪಿಯೂ ಸುಳಿಯಬೇಡ' ಎಂದರು ಸಂತ ತುಕಾರಾಮರು.

ನಾವು ಅಪಾರ ಸಂಪದ ಗಳಿಸುತ್ತೇವೆ. ಆ ಸಂಪದ ವರ್ಧಿಸಿದಂತೆ ಆತ್ಮನಿಂದ ಬಹುದೂರ ಸಾಗುತ್ತೇವೆ. ಗುರು ದೇವತೆಗಳು, ಶಾಸ್ತ್ರ ಧರ್ಮಗಳು ಮರೆತು ಹೋಗುತ್ತವೆ. ಈ ಘೋರ ತಪ್ಪಿಗಾಗಿ ಮುಪ್ಪಿನ ಕಾಲದಲ್ಲಿ ಪರಿತಪಿಸುತ್ತೇವೆ. ಮಹಡಿ ಮನೆ, ಜಾಣಮಕ್ಕಳು, ಮನೆತುಂಬ ಧನ ಧಾನ್ಯ; ಇಷ್ಟಿದ್ದರೂ ಪರಾಧೀನ. ಮುಪ್ಪಿನ ಕಾಲದಲ್ಲಿ ಒಂದು ತುತ್ತು ರೊಟ್ಟಿಗಾಗಿ ನಾಯಿಯಂತೆ ಕಾದು ಕುಳ್ಳಿರಬೇಕು. ಹೊಟ್ಟೆಕಟ್ಟಿ ಸಂಪಾದಿಸಿದ ಸಿರಿಯನ್ನು ಮಕ್ಕಳು ಯಥೇಚ್ಛವಾಗಿ ಹಾಳು ಮಾಡುವದನ್ನು ಕಣ್ಣಾರೆ ಕಂಡು ಮರುಗಬೇಕು.

ಇಂಥ ಸಾಂಸಾರಿಕ ಪರಿತಾಪ ತಪ್ಪಬೇಕಾದರೆ ಭಗವಂತನ ಆರು ಸಲಹೆಗಳನ್ನು ಪರಿಪಾಲಿಸುವದು ಅವಶ್ಯ. ೧)ವೇದಗಳು ತ್ರಿಗುಣಾತ್ಮಿಕವಾಗಿವೆ ಎಂದು ತಿಳಿದುಕೊ ೨)ತ್ರಿಗುಣಗಳ ಅಭಿಮಾನ ತೊರೆ ೩)ಸುಖ ದುಃಖಾದಿ ದ್ವಂದ್ವಗ

ಳನ್ನು ಸಹನ ಮಾಡಿಕೊಳ) ಮನಸ್ಸನ್ನು ದೇವನಲ್ಲಿ ಸ್ಥಿರಗೊಳಿಸು ೫)ಭೌತ್ರ ಸಂಪತ್ತಿನ ವಿಷಯದಲ್ಲಿ ಯೋಗ-ಕ್ಷೇಮ ಭಾವನೆ ತಾಳಬೇಡ ೬)ಅಪ್ರಮತ್ತನಾಗು.

ಅರ್ಜುನ: "ಗೋವಿಂದ, ವೇದಗಳು ಸನಾತನ, ಬ್ರಹ್ಮನ ನಿಶ್ವಾಸದಿಂದ ವ್ಯಕ್ತವಾಗಿವೆ. ಅವುಗಳಲ್ಲಿ ಹೇಳಿದುದೆಲ್ಲ ಪವಿತ್ರ. ಹೀಗಿರುವಾಗ ವೇದ ನಿರೂಪಿತ ಯಜ್ಞ, ಹೋಮ, ಅರ್ಚನೆಗಳ ನೆರವೇರಿಸಿ ಇಹ ಪರ ಭೋಗಗಳನ್ನು ಪಡೆವರೆ ಅವರಲ್ಲೇನು ಹಾನಿ? ಅಲ್ಲದೆ, ವೇದೋಕ್ತ ಫಲ ಪರಿತ್ಯಾಗಮಾಡಿ ನಿಷ್ಕಾಮಭಾವದಿಂದ ದೇವನನ್ನು ಆರಾಧಿಸುವದು ಕುಬುದ್ಧಿಯಲ್ಲವೆ?"

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥೪೬॥**

**ಅರ್ಥ:–** ಸರ್ವತಃ =ಎಲ್ಲ ಕಡೆಗಳಲ್ಲಿ (ವ್ಯಾಪಿಸಿರುವ) ಸಂಪ್ಲುತೋದಕೇ = ಮಹಾಸಾಗರದಲ್ಲಿ, ಯಾವಾನರ್ಥಃ= ಎಷ್ಟು ಪ್ರಯೋಜನವೋ, ವಿಜಾನತಃ ಬ್ರಾಹ್ಮಣಸ್ಯ= ಆತ್ಮಜ್ಞಾನಿಯಾದ ಬ್ರಾಹ್ಮಣನಿಗೆ ತಾವಾನ್ ಅರ್ಥಃ= ಅಷ್ಟು ಪ್ರಯೋಜನವಿದೆ. ಉದಪಾನೇ= ಚಿಕ್ಕ ಜಲಾಶಯಗಳಲ್ಲಿ ಯಾವಾನ್ ಅರ್ಥಃ= ಎಷ್ಟು ಪ್ರಯೋಜನವೋ, ಸರ್ವೇಷು ವೇದೇಷು= ಸರ್ವ ವೇದಗಳಲ್ಲಿ (ಕರ್ಮಠರಿಗೆ) ತಾವ ನ್ ಅರ್ಥಃ= ಅಷ್ಟೇ ಪ್ರಯೋಜನ.

**ವಿವರಣೆ:–** ಹೊಂಡ, ಬಾವಿ, ಕೆರೆ ಇತ್ಯಾದಿ ಚಿಕ್ಕ ಜಲಾಶಯಗಳಿಗೆ ಉದಪಾನ ಎನ್ನುತ್ತಾರೆ. ಅವುಗಳಲ್ಲಿ ಒಂದು ಕುಡಿಯಲು ಯೋಗ್ಯ ಮತ್ತೊಂದು ಸ್ನಾನಕ್ಕೆ ಯೋಗ್ಯ; ಇನ್ನೊಂದು ಬಟ್ಟೆಹಿಂಡಲು ಯೋಗ್ಯ; ಒಂದರಲ್ಲಿಯೇ ಇವೆಲ್ಲ ಕಾರ್ಯಗಳು ಸಾಧ್ಯವಾಗವು. ದಿಕ್ಕು ದಿಗಂತಗಳಲ್ಲಿ ವ್ಯಾಪಿಸಿದ ಮಹಾಸಾಗರ ಹಾಗಲ್ಲ. ನಮ್ಮೆಲ್ಲ ಪ್ರಯೋಜನಗಳು ಅಲ್ಲಿ ಸಿದ್ಧಿಸುತ್ತವೆ. ಅಲ್ಲಿರುವ ವ್ಯಕ್ತಿಗೆ ಉದಪಾನಗಳ ಅಗತ್ಯವೇನಿದೆ ? ಮೇಲಾಗಿ, ಉದಪಾನಗಳು ಅಸ್ಥಿರ; ಕಾಲ ಬಂದಾಗ ಒಣಗಿ ಹೋಗುತ್ತವೆ. ಸಾಗರ ಮಾತ್ರ ಸ್ಥಿರ! ಎಂದಿಗೂ ಒಣಗದ ನಿತಾಂತ ಜಲನಿಧಿ!

ಅದೇ ರೀತಿ, ವೇದಾಗಮೋಕ್ತ ವಿಭಿನ್ನ ಕರ್ಮಗಳು ಉದಪಾನ. ಒಂದು ಕರ್ಮದಿಂದ ಪುತ್ರಪ್ರಾಪ್ತಿ; ಒಂದು ಕರ್ಮದಿಂದ ದ್ರವ್ಯ ಸಿದ್ಧಿ; ಮತ್ತೊಂದರಿಂದ ಕೀರ್ತಿ; ಇನ್ನೊಂದರಿಂದ ಸ್ವರ್ಗಸುಖ. ಹೀಗೆ, ಎಷ್ಟು ಬಗೆಯ ಫಲಗಳೋ ಅಷ್ಟು ಪ್ರಕಾರದ ಕರ್ಮಗಳು. ಈ ಕರ್ಮಾಚರಣೆ ನಿರಾಯಾಸವೂ ಅಲ್ಲ. ಮದುವೆ ಮುಂಜಿವೆ, ಹವ್ಯ ಕವ್ಯ, ಯಜ್ಞ-ಯಾಗ ಆಚರಿಸುವಾಗ ನಾವು ಪಡುವ ಸಾಹಸ ಅಸದಳ. ದೇಹ ದಂಡಿಸುತ್ತೇವೆ; ಮನಸ್ಸನ್ನು ಕೊರಗಿಸುತ್ತೇವೆ; ಗಳಿಸಿದ ದುಡ್ಡನ್ನೆಲ್ಲ ಸೂರೆ ಮಾಡುತ್ತೇವೆ; ಜನರ ನಿಂದೆ ಅಪವಾದಗಳನೆಲ್ಲ ಸಹಿಸಿಕೊಳ್ಳುತ್ತೇವೆ. ಮನೆತೊರೆದು ದೇಶವನ್ನೆಲ್ಲ ಅಲೆದಾಡುತ್ತೇವೆ; ಗುಡ್ಡ ಗಹ್ವರ ಸೇರಿ ಘೋರ ತಪ ಮಾಡುತ್ತೇವೆ. ಇಷ್ಟೆಲ್ಲ ಆದಬಳಿಕ, ದೊರೆವ ಫಲ ಎಂಥದು? ಕ್ಷಣ ಭಂಗುರವಾದ ಕಿಂಚಿತ್ ಸುಖ!

ನಮ್ಮ ಪ್ರಯಾಸ ಪರ್ವತದಷ್ಟು; ಗಳಿಕೆ ಇಲಿಯಷ್ಟು! ಸಕಾಮ ಕರ್ಮದ ಹಾಡೇ ಇಷ್ಟು. ತಾಯಿಯಿಲ್ಲದ ಮಗು ಹಾಲಿಗಾಗಿ ಬಟ್ಟು ಚೀಪುವದೂ, ಅವ್ವ ಪಸಾಯಿ ಸಕಾಮಿಗಳು ಆನಂದ ಬಯಸಿ ಸಂಸಾರ ಮಾಡುವದೂ, ಅಷ್ಟೇ! ದುಃಖ ತೀರಲಿಲ್ಲ, ಆನಂದ ನಿರ್ಝರಣೆ ಚಿಮ್ಮಲಿಲ್ಲ!

ಪರಮಾತ್ಮನೇ ನಿಸ್ಸೀಮ ಜ್ಞಾನಾನಂದ ಸಾಗರ. ಗುರುವಿನ ದಯೆ, ಉಪನಿಷತ್- ಅಧ್ಯಯನ, ಮನಶ್ಶುದ್ಧಿರೂಪ ಯೋಗ, ನಿಷ್ಕಾಮನಾರೂಪ ಕರ್ಮಯೋಗ, ಹಾಗೂ ಸಾಂಖ್ಯವಿಜ್ಞಾನಯೋಗಗಳ ಸಹಾಯದಿಂದ ಸಾಧಕನು ಆ ಸಾಗರದ ದಡ ಸೇರಿದನಾಯ್ತು; ಜೀವ ಭಾವ ಹಿಂಗಿ ಆತ್ಮಜ್ಞಾನಿಯಾಗು ತ್ತಾನೆ. ಆಗ ಅವನ ಅಂತರಂಗದಲ್ಲಿ ದಿವ್ಯ ಆನಂದದ ಚಿಲುಮೆ ಚಿಮ್ಮುವದು! ಧರ್ಮದ ಮಳೆ ಸುರಿಯುವದು! ಶಾಂತಿಯ ತಂಬೆಲರು ತೀಡುವದು! ಅವನ ಸಂತಸಕ್ಕೆ ಯಾವುದು ಸರಿ? ಯಾವುದು ಸಾಟಿ? "ಆಗಮ, ಪುರಾಣ, ವೇದಗಳಲ್ಲಿ ವಿಧಿಸಿದ ಜ್ಯೋತಿಷ್ಟೋಮಾದಿ ಯಜ್ಞ, ಸುವರ್ಣಾದಿ ದಾನ, ಗಾಯತ್ರ್ಯಾದಿ ಮಂತ್ರಜಪ, ನೀತಿ, ಯೋಗ, ಪೂಜನಾದಿಗಳಿಂದ ಒದಗುವ ಪುಣ್ಯಫಲ(ಸುಖ)ವು ನಿಷ್ಕಾಮ ಬ್ರಹ್ಮಜ್ಞಾನಿ ಪಡೆದ ಆನಂದದ ಕೋಟ್ಯಂಶಕ್ಕೂ ಸಮನಲ್ಲ." "ಏತಸ್ಯೈವಾನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ" (ಬೃ.ಉ: ೪-೩-೩೨) ಇವನ ಆನಂದದ ಒಂದು ತಿಲಾಂಶವನ್ನು ಆಶ್ರಯಿಸಿ ಪ್ರಾಣಿಗಳು ಜೀವನ ಧಾರಣ ಮಾಡುತ್ತವೆ. ಲೌಕಿಕ, ಪಾರಲೌಕಿಕ ಸುಖಗಳು ಬ್ರಹ್ಮಾನಂದದ ಒಂದೊಂದು ಜಲಬಿಂದುಗಳು! ಅಂಥ ಅಮರ ಆನಂದದಲ್ಲಿ ತೇಲುವ ಬ್ರಹ್ಮ ಜ್ಞಾನಿಗೆ ವೈದಿಕ ಕರ್ಮಗಳಿಂದ ಏನು ಲಾಭ ?

ಭಗವಂತ:-"ಪಾರ್ಥ, ವೈದಿಕ ಕರ್ಮಫಲಗಳಾದ ಸ್ವರ್ಗಾದಿ ಸುಖ ಕ್ಷಣಿಕ ಹಾಗು ಕೇವಲ ಆಭಾಸ! ವಿಶ್ವದ ಆದ್ಯಂತಗಳಲ್ಲಿ ತುಂಬಿನಿಂದ ಪರಮಾತ್ಮನು ಅಮರ; ಅಪರಿಚ್ಛಿನ್ನ ಆನಂದಘನ! ಅವನಲ್ಲಿ ಬೆರೆತ ಬ್ರಹ್ಮಜ್ಞಾನಿಗೆ ಕ್ಷಣಭಂಗುರ ವೈದಿಕ ಫಲಗಳಿಂದಾವ ಪ್ರಯೋಜನ? ವೇದಾಗಮಗಳಲ್ಲಿ ಸರ್ವ ಕರ್ಮಮಾಡಿ ಸರ್ವಫಲ ಪಡೆದೆ ಎಂದುಕೋ; ಆಗ ನೀನು ಅನುಭವಿಸುವ ಆ ಸುಖ ಬ್ರಹ್ಮ ಜ್ಞಾನಿ ಪಡೆವ ಸುಖದ ಯತ್ಕಿಂಚಿತ್ ಅಂಶ ಮಾತ್ರಕ್ಕೂ ಸಮವಾಗದು. ಅದು ದರಿಂದ ಇಹ ಪರಗತಿಯ ಹವ್ಯಾಸ ತೊರೆ, ನಿನ್ನನೀ ಅರಿತುಕೊ. ಅದಕ್ಕಾಗಿಯೇ ಈ ಅನಾಸಕ್ತ ಕರ್ಮ ಯೋಗ!"

ಅರ್ಜುನ:-" ಕೇಶವ, ನಿನ್ನ ಮಾತಿನಂತೆ, ಸಮಸ್ತ ಕರ್ಮಫಲಗಳು ಪರ ಮೇಶ್ವರಾರಾಧನೆಯೆಂದು ವರಿಂದಲೇ ದೊರೆಯುತ್ತವೆ. ಹಾಗಾದಲ್ಲಿ ಈ ಘೋರ ಕರ್ಮಗಳಲ್ಲಿ ನಾನೇಕೆ ತೊಡಗಬೇಕು? ಕರ್ಮಸನ್ಯಾಸಹೊಂದಿ ದೇವಚಿಂತನ ದಲ್ಲಿ ತಲ್ಲೀನನಾಗುವದು ಒಳ್ಳೆಯದಲ್ಲವೆ?"

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣೀ॥೪೭॥**

**ಅರ್ಥ:-** ತೇ =ನಿನಗೆ, ಕರ್ಮಣಿ ಏವ ಅಧಿಕಾರಃ =ಕರ್ಮಮಾಡುವಲ್ಲಿಯೇ ಅಧಿಕಾರ. ಕದಾಚನ ಮಾ ಫಲೇಷು = ಫಲದಲ್ಲಿ ಎಂದಿಗೂ ಇಲ್ಲ. ಕರ್ಮಫಲಹೇತುಃ ಮಾ ಭೂಃ = ಕರ್ಮಫಲದಲ್ಲಿ ಪ್ರವೃತ್ತಿಯುಳ್ಳವನಾಗಬೇಡ. ಅಕರ್ಮಣಿ ತೇ ಸಂಗಃ ಮಾ ಅಸ್ತು = ಕರ್ಮ ಮಾಡದಿರುವಲ್ಲಿ ನಿನಗೆ ಪ್ರೀತಿ ಬೇಡ.

**ವಿವರಣೆ:-** ಮನುಷ್ಯ ಮಾತ್ರಕ್ಕೆ ನಿಯಾಮಕರು ಮೂವರು: (೧)ತತ್ತ್ವ ದರ್ಶಿಯಾದ ಗುರು, ಸಂತ, ಮಹಾತ್ಮ. (೨)ಶ್ರುತಿರೂಪ ಶಬ್ದ ಪ್ರಮಾಣ(೩) ಸರ್ವಾಂತರ್ಯಾಮಿಯಾದ ಪರಮಾತ್ಮ. ಅವರೆಲ್ಲರ ಇಚ್ಛೆಯೊಂದೇ: ಮನುಕುಲ ಚಿರಸುಖಿಯಾಗಬೇಕು. ಅದಕ್ಕಾಗಿ, ಅವರು ಹೆಣೆದ ಸರಸ ಸೂತ್ರವೆಂದರೆ "ಕುರ್ವನ್ನೇವೇಹ ಕರ್ಮಾಣಿ ಜಿಜಿವಿಷೇತ್ ಶತಂ ಸಮಾಃ." (ಈಶ. ಉ.) ಫಲದ ಆಶೆ ಬಿಟ್ಟು ಕರ್ಮ ಮಾಡು; ಬಹುಕಾಲ ಜೀವಿಸು! ಈ ಸೂತ್ರ ಸುಧಾಪೂರ್ಣ! ಇದನ್ನು ಅನುಸರಿಸಿ ಬದುಕುವ ಮಾನವ ಕೃತಾರ್ಥ! ಈ ಸುಗಮ ಸೂತ್ರದ ಪ್ರತಿಪಾದನೆಯನ್ನೀಗ ನೋಡಲಿದ್ದೇವೆ.

ಅಮೃತದಾಯಿನಿ ಕರ್ಮಸೂತ್ರಕ್ಕೆ ನಾಲ್ಕು ಪಾದಗಳು: (೧) ಕರ್ಮಣಿ ಏವ ಅಧಿಕಾರಃ (೨) ಫಲೇಷು ಕದಾಚನ ನ (೩) ಕರ್ಮಫಲ ಹೇತುಃ ಮಾ (೪) ಅಕರ್ಮಣಿ ಸಂಗಃ ನ ಅಸ್ತು. ಒಂದೊಂದಾಗಿ ಅರ್ಥ ಮಾಡಿಕೊಳ್ಳುವಾ.

(೧) ಕರ್ಮಣಿ (ಏವ) ಅಧಿಕಾರಃ :-ದೇಹ ಬಾಳಿರುವವರೆಗೆ ತನ್ನ ಗುಣ ಸ್ವಭಾವ ಹಾಗು ಶಕ್ತ್ಯಾನುಸಾರ ತನ್ನ ಹಿತಕ್ಕಾಗಿ ಹಾಗು ಸಮಾಜದ ಹಿತ ಕ್ಕಾಗಿ ಪ್ರತಿ ಮನುಷ್ಯ ಕರ್ಮ ಮಾಡಲೇಬೇಕು. ಕರ್ಮದಿಂದಲೇ ದೈಹಿಕ ಆರೋಗ್ಯ, ಮಾನಸಿಕ ನೆಮ್ಮದಿ ಹಾಗು ಸಮಷ್ಟಿದೇವನ ಸೇವೆ. ಕರ್ಮಮಾಡುವ ಅಧಿಕಾರವನ್ನು ಯಾವನೂ ಕಸಿದುಕೊಳ್ಳಲಾರ; ಏಕೆಂದರೆ ಅದು ದೇವದತ್ತ.

(೨) ಫಲೇಷು ಅಧಿಕಾರಃ ನ :-ತಾನು ಆಚರಿಸಿದ ಕರ್ಮದ ಫಲ ಬೇಡುವ ಹಕ್ಕು ಮಾತ್ರ ಕರ್ತೃವಿಗಿಲ್ಲ, ಫಲಾಶೆಯೊಂದು ಕರ್ಮಕ್ಕೆ ಅಂಟುವ ಕಲಂಕ. ಅದು ಮನುಷ್ಯನ ಮನಸ್ಸನ್ನು ಕೆಡಿಸುವದು; ಬುದ್ಧಿಯನ್ನು ವ್ಯಗ್ರಗೊಳಿಸು ವದು, ಸಮಾಜದ ಸಾಂಗತ್ಯವನ್ನು ಕದಡಿಸುವದು. ಮೇಲಾಗಿ ಮನುಷ್ಯನ ಬುದ್ಧಿ ಅಷ್ಟು ಚುರುಕಲ್ಲ; ಯಾವುದು ಒಳಿತು ಯಾವುದು ಕೆಡಕು ಅದಕ್ಕೆ ಸ್ಪಷ್ಟ ವಾಗಿ ತಿಳಿಯದು. ಸರ್ವಶಾಸ್ತ್ರ ಪಾರಂಗತನಾದ ರಾವಣ ತಪಮಾಡಿದ; ಒಲಿದ ಶಿವನು "ಏನು ಬೇಕು?"ಎಂದು ಕೇಳಿದಾಗ ರಾವಣ ಬೇಡಿದ್ದೇನು? "ಶಿವನ ಹೆಂಡತಿಯನ್ನು"! ಭಸ್ಮಾಸುರ ಘೋರ ತಪಗೈದು ಯಾಚಿಸಿದುದು "ದಗ್ಧಹಸ್ತ" ! ಇಂಥ ಅನೇಕ ಕಥೆಗಳನ್ನು ನೋಡಿದಾಗ ಫಲಬೇಡುವ ಯೋಗ್ಯತೆ ಮಾನವನಲ್ಲಿಲ್ಲ ಎಂಬ ಸತ್ಯ ಕಂಡುಬರುತ್ತಿದೆ.

ಬೇಡುವ ಚಟಕ್ಕೆ ಕೊನೆಯೂ ಇಲ್ಲ. ಇಂದು ಮನೆ ಬೇಕು, ನಾಳೆ ಮಡದಿ ನಾಡದು ಮಗ, ಮತ್ತೆ ಮರುದಿನ ಸಂಪದ, ಬಳಿಕ ಅಧಿಕಾರ, ಮಾನ, ಕೀರ್ತಿ... ಒಂದೇ ಎರಡೇ? ನಿಲುಕಡೆಯಿಲ್ಲದ ಆಶೆಗಳು. ಬೇಡಿದ ಫಲ ದೊರೆತರೂ ಬೇಡುವ ಬಯಕೆ ಹಿಂಗದಾಗಿ ಶಾಂತಿ ಸಮಾಧಾನ ಎಲ್ಲಿ ಸಿಕ್ಕೀತು? ಆದುದರಿಂದ, ಬೇಡಬೇಡ; ಬರೀ ದುಡಿ; ನಿನಗೆ ಬೇಕಾದ ಮನೋ ನಿಶ್ಚಿಂತತೆ ಹಾಗು ಅಮರ ಸುಖಗಳನ್ನು ದೇವನು ತಾನಾಗಿಯೇ ಈಯುತ್ತಾನೆ– ಎಂದವು ಶಾಸ್ತ್ರ ನುಡಿಗಳು. ಎಲ್ಲ ಭಾರವನ್ನು ದೇವರ ಮೇಲೆ ಹಾಕಿ ನಿಶ್ಚಿಂತತೆಯಿಂದ ದುಡಿಯುವದು ಬಹು ಹಗುರಾದ ಕೆಲಸ.

೩) ಕರ್ಮಫಲಹೇತುಃ ಮಾ ಭೂಃ :– ಕರ್ಮ ಮಾಡಿ ಫಲ ಬೇಡಬಾರದಲ್ಲವೆ? ಅದೇರೀತಿ ಫಲದ ಹೇತುವಿಟ್ಟು ಕರ್ಮ ಮಾಡಬಾರದು. ಸತ್ಯ, ದಾನ, ಬ್ರಹ್ಮಚರ್ಯ, ಪೂಜನ, ಸೇವೆ ಮುಂತಾದ ಸತ್ಕರ್ಮಗೈಯಬೇಕು; ಅದರ ಹಿಂದೆ ಸ್ವರ್ಗಾದಿ ಭೋಗವೈಭವ ಪಡೆಯುವ ಉದ್ದೇಶ ಬೇಡ. ಉದ್ದೇಶ ಭಾವನೆ ಕರ್ಮ ಪಾವಿತ್ರ್ಯತೆಗೆ ಕುಂದು. ಇಂದ್ರ-ಪದವಿ ಆಶಿಸಿ ನೂರು ಯಜ್ಞ ಮಾಡಿದ ನಹುಷ ಪಡೆದುದೇನು? ಹಾವಿನ ಜನ್ಮ! ಕಾಮನೆ ಜನ್ಮಕ್ಕೆ ಕಾರಣ. ಸಾತ್ವಿಕ ಕಾಮನೆಯಿಂದ ದೇವತೆಗಳ ಜನ್ಮ; ರಾಜಸಿಕ ಕಾಮನೆಯಿಂದ ಮರ್ತ್ಯ ಜನ್ಮ; ತಾಮಸಿಕ ಕಾಮನೆಯಿಂದ ಕ್ರಿಮಿ ಕೀಟಾದಿ ಜನ್ಮ. ಎಲ್ಲಿ ಜನ್ಮ ಅಲ್ಲಿ ಮರಣ ಭಯ! ಎಲ್ಲಿ ಭಯ ಅಲ್ಲಿ ದುಃಖ! ನಮಗೆ ಪರಿತಾಪ ಬೇಡಲ್ಲವೆ? ಹಾಗಾದರೆ ಜನ್ಮವೂ ಬೇಡ, ಜನ್ಮ ಕಾರಣವಾದ ಫಲ ಹೇತುವೂ ಬೇಡ. ನಿರಾಮಯರಾಗಿ, ಪರ್ಯಾಪ್ತಕಾಮರಾಗಿ ಶ್ರಮಿಸಬೇಕು.

೪) ಅಕರ್ಮಣಿ ಮಾ ಸಂಗಃ ಅಸ್ತು:– ಕರ್ಮದ ಆಚರಣೆ ಇಷ್ಟು ಕಠಿಣವಾಗಿದ್ದರೆ, ಅಂಥ ಕರ್ಮವನ್ನಾದರು ಏಕೆ ಮಾಡಬೇಕು? ಕರ್ಮತ್ಯಾಗ ಮಾಡಿದರಾಗದೆ? ಎಂಬ ಭಾವ ಜೀವರಲ್ಲಿ ಏಳುವದು ಸಹಜ. ಆದರೆ ಅಕರ್ಮವು ನಿಂದ್ಯ. ಅದರಿಂದ ಪುರುಷತ್ವದ ಹಾನಿ; ಮಾನವನ ಮಹಾನ್ ಪಾಪ. ಜೀವನ ಸಾಗಿರುವವರೆಗೂ ಕರ್ಮ ಸಾಗಲೇಬೇಕು. ಶಾಸ್ತ್ರಕಾರರು ಹೀಗೆ ವಿಧಿಸಿದ್ದಾರೆ:

"ಶೈಶವೇಽಭ್ಯಸ್ತ ವಿದ್ಯಾನಾಂ । ಯೌವನೇ ವಿಷಯೈಷಿಣಾಮ್ ॥
ವಾರ್ಧಕ್ಯೇ ಮುನಿವೃತ್ತೀನಾಂ । ಯೋಗೇನಾಂತೇ ತನುತ್ಯಜಾಮ್॥

ಬಾಲತನದಲ್ಲಿ ವಿದ್ಯೆ ಗಳಿಸಬೇಕು; ಯೌವನದಲ್ಲಿ ವಿಷಯೋಪಭೋಗ ಹಾಗು ಸಮಾಜಸೇವೆ ಮಾಡಬೇಕು; ವಾರ್ಧಕ್ಯದಲ್ಲಿ ಜಪತಪ, ಅಧ್ಯಯನ ಅಧ್ಯಾಪನ, ಶ್ರವಣ ಮನನಗಳಲ್ಲಿ ಮುಳುಗಬೇಕು. ಕಡೆಯದಾಗಿ ದೇವಚಿಂತನದಲ್ಲಿ ಮನ ನಿಲ್ಲಿಸಿ ಪ್ರಾಣ ಬಿಡಬೇಕು. ಇದು ಕಡ್ಡಾಯ ನಿಯಮ.

ಹೀಗೆ ನಾಲ್ಕಂಗಗಳಿಂದ ಪರಿಪೂರ್ಣವಾದ ಕರ್ಮಯೋಗವು ಮನುಷ್ಯ ಜೀವನನ್ನೆತ್ತಿ ದೇವಸಾಮ್ರಾಜ್ಯದಲ್ಲಿ ಒಂದುಗೂಡಿಸುವ ಅತುಲ ಸಾಮರ್ಥ್ಯ ಹೊಂದಿದೆ.

ಭಗವಂತ:- "ತಾತ, ನಿನ್ನ ಮೈಯಲ್ಲಿ ಅನ್ನದ ಕಾವು ಇರುವವರೆಗೆ, ಇಂದ್ರಿಯಗಳಲ್ಲಿ ಶಕ್ತಿ ಸಂಚರಿಸುವವರೆಗೆ ಹಾಗು ಬುದ್ಧಿಯು ಹದನಾಗಿರುವ ವರೆಗೆ ಕರ್ಮಗಳನ್ನು ತ್ಯಜಿಸಲಾರೆ. ನಿನ್ನ ಸ್ಥಾನಮಾನ, ಗುಣ ಸ್ವಭಾವಾನುಸಾರ ದುಡಿಯಲೇಬೇಕು! ಅದು ದೇವನ ಆಣತಿ; ಸೃಷ್ಟಿಯ ನಿಯಮ! ದುಡಿಯುವ ಹಕ್ಕು ನಿನಗಿದೆ. ಇಷ್ಟೇ, ಆ ದುಡಿತದ ಹಿಂದೆ ಫಲದ ಹೇತು ಬೇಡ; ದುಡಿತದ ನಂತರ ಫಲಾಪೇಕ್ಷೆ ಮಾಡದಿರು. ನನ್ನ ಮೇಲೆ ಸಂಪೂರ್ಣ ಹೊರೆ ಹಾಕಿ, ಮನಸೋಕ್ತ ಕಾರ್ಯಮಾಡು. ಆ ಕಾರ್ಯದ ಬಾಧೆ ನಿನಗಾಗದು. ಏಳು; ಈ ಅಕರ್ಮ ತರವಲ್ಲ. ನಿನ್ನ ಪವಿತ್ರ ಕರ್ತವ್ಯಕ್ಕಾಗಿ ನಡು ಕಟ್ಟು!"

ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।
ಸಿದ್ಧ್ಯಸಿದ್ಧ್ಯೋಃ ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ॥೪೮॥

ಅರ್ಥ:- ಧನಂಜಯ = (ರಾಜಭಾಂಡಾರಗಳನ್ನು ವಶಪಡಿಸಿಕೊಳ್ಳುವ) ಅರ್ಜುನ, ಸಂಗಂ ತ್ಯಕ್ತ್ವಾ = ಕರ್ತೃತ್ವಾಭಿನಿವೇಶ ಬಿಟ್ಟು, ಸಿದ್ಧಿ ಅಸಿದ್ಧ್ಯೋಃ = ಸಿದ್ಧಿ ಅಸಿದ್ಧಿಗಳಲ್ಲಿ, ಸಮೋಭೂತ್ವಾ = ಸಮಭಾವ ತಾಳಿ, ಯೋಗಸ್ಥಃ = ಕರ್ಮಯೋಗದಲ್ಲಿ ನಿಷ್ಠೆ ತಾಳಿ, ಕರ್ಮಾಣಿ ಕುರು= ಕರ್ಮಗಳನ್ನು ಮಾಡು. ಸಮತ್ವಂ (ಈ ಬಗೆಯ) ಸಮತ್ವವು ಯೋಗ ಉಚ್ಯತೇ = ಯೋಗವೆನಿಸುತ್ತದೆ.

ವಿವರಣೆ:- "ಧನಂಜಯ, ಎಲ್ಲವೂ ದೇವನ ಸೊತ್ತೆಂದು ಪರಿಭಾವಿಸುವದು ಯೋಗ. ಈ ಭಾವ ಹೊಂದಿ ಯೋಗಸ್ಥನಾಗು. ನಾನು ಮಾಡುವೆ ಎಂಬ ಅಹಂ ಬುದ್ಧಿಯನ್ನು ಬೀಸಾಡು. ನೀನು ಮಾಡಿದ ಕರ್ಮಗಳಿಂದ ಸುಖ ಬರಲಿ ದುಃಖ ಬರಲಿ, ಯಶ ದೊರೆಯಲಿ ಅಪಯಶವಾಗಲಿ ಅವೆರಡನ್ನು ಸಮವೆಂದು ಕಾಣು. ಈ ಸಮಬುದ್ಧಿಯ ಕರ್ಮಾಚರಣೆಯೇ ಕರ್ಮಯೋಗ ಅಥವಾ ಸಮತ್ವಯೋಗ.

(೧) ಯೋಗಸ್ಥಃ:- ಯೋಗ ಶಬ್ದದ ಅರ್ಥ ದ್ವಿನಿಷ್ಠ ಸಂಬಂಧ; ಇದು ಎರಡು ಬಗೆ: (ಅ) ತಾತ್ಪೂರ್ತಿಕ ಯೋಗ. ಉದಾ:- ಹಸ್ತ ಹಸ್ತ ಸಂಯೋಗ. ಪಕ್ಷಿ ವೃಕ್ಷ ಸಂಯೋಗ ಇತ್ಯಾದಿ. ಈ ಯೋಗ ನಿತ್ಯವಲ್ಲ. ಈ ಯೋಗ ಹೊಂದಿದ ವಸ್ತುಗಳು ತಮ್ಮತನವನ್ನು ಕಳೆದುಕೊಳ್ಳುವದಿಲ್ಲ. (ಬ) ತಾದಾತ್ಮ್ಯಯೋಗ. ಉದಾ:- ಸಮುದ್ರಯೋಗ, ಒಮ್ಮೆ ಕೂಡಿದರೆ ಬೇರ್ಪಡಿಸಬರದು. ಇದು ನಿತ್ಯ. ಎರಡೂ ವಸ್ತುಗಳು ಇಲ್ಲಿ ಒಂದಾಗಿ ಹೋಗುತ್ತವೆ.

ಜೀವ ದೇವರ, ವಿಶ್ವ ವಿಶ್ವಾತ್ಮರ ಮಧ್ಯೆ ತಾತ್ಪೂರ್ತಿಕ ಯೋಗವಿಲ್ಲ; ತಾದಾತ್ಮ್ಯ ಯೋಗವಿದೆ. ಈ ಯೋಗದ ಅರಿವ ಪಡೆಯುವದೆಂದರೆಯೇ

ಯೋಗಸ್ಥನಾಗುವದು. ಯೋಗಸ್ಥನಾದ ಸಾಂಖ್ಯಯೋಗಿಗೆ ವಿಶ್ವಾತ್ಮನೇ ತಾನಾಗಿರುವ ಅನುಭವ! ಯೋಗಸ್ಥನಾದ ಕರ್ಮಯೋಗಿಗೆ ವಿಶ್ವವೆಲ್ಲ ಪರಮಾತ್ಮ ಸಂಪದ! ಕೇವಲ ದೇವನನ್ನೇ ಕಾಣುವ ಸಾಂಖ್ಯಯೋಗಿಯು ಅವತಾರಿ; ಎಲ್ಲವೂ ದೇವನ ಸಿರಿ ಎಂದು ನೋಡುವ ಕರ್ಮಯೋಗಿಯು ಮಹಾಪುರುಷ.

**(೨) ಸಂಗಂ ತ್ಯಕ್ತ್ವಾ ಕುರು ಕರ್ಮ:-** ಸಂಗ ಎಂದರೆ ಕರ್ತೃತ್ವದ ಅಭಿಮಾನ. ಯೋಗಸ್ಥ ಕರ್ಮಯೋಗಿ ಕರ್ತೃತ್ವದ ಅಭಿಮಾನವಿಲ್ಲದೆ ಕರ್ಮ ಮಾಡುತ್ತಾನೆ; ಅದೇ ರೀತಿ ಸಾಧಕ ಎಲ್ಲವೂ ಪರಮಾತ್ಮನದೆಂದು ಭಾವಿಸಿ, ನಾನು ಮಾಡುತ್ತೇನೆ ಎಂಬ ಕ್ಷುದ್ರ ಕಲ್ಪನೆ ನೀಗಿ ಕರ್ಮಮಾಡಬೇಕು.

ಕರ್ತೃತ್ವದ ಅಭಿಮಾನ ಸಾಮಾನ್ಯವಲ್ಲ; ಅದು ಜಗತ್ತನ್ನೇ ವ್ಯಾಪಿಸಿದೆ. ಪಂಡಿತರೂ ಪಾಮರರೂ ಅದರ ದಾಸರಾಗಿದ್ದಾರೆ. "ಭೂತಳದಲ್ಲಿಯ ಎಲ್ಲ ವಸ್ತು ತಿಳಿಯಬಹುದು; ಬಿಡಬಹುದು. ಅಹಂಕಾರ ಬಿಡುವದು ; ಅರಿದು. ಪ್ರಕೃತಿ ಮಹತ್ತು ಅಹಮು ಕರಣ ಪ್ರಾಣ ಭೂತವಿಕೃತಿ. ವಿಶ್ವ ತೈಜಸ ಪ್ರಾಜ್ಞ ಸಕಲೇಶ ಸೂತ್ರಾತ್ಮ ವೈಶ್ವಾನರ ಸಾಕ್ಷಿಕ ಬ್ರಹ್ಮರನು ಶ್ರುತಿ ಗುರುಗಳ ಮೂಲಕ ತಿಳಿಯಬಹುದು. ಧನ ಕನಕ ವಸ್ತ್ರ ಭೂಷಣ ಗಂಧಮಾಲ್ಯ ವಾಹನ ರಮ್ಯವಾಸ ವನಿತಾದಿ ವಸ್ತುಗಳನ್ನು ತೃಣವೆಂದು ಬಿಡಬಹುದು. ಜ್ಞಾನಿ ತರಹರಿ ಶಾಸ್ತ್ರ ಸುಗುಣಿ ವಿಜಿತೇಂದ್ರಿಯ ಅನೂನಮತಿ ಯೋಗಿ ಮುನಿ ವಿಮಲ ಅತಿಮಹಿಮ ದಾನಿ ಎಂದು ಜನ ತನ್ನ ಬಣ್ಣಿಸಿದರೆ ಅಭಿಮಾನಪಡದಿರುವದು ಅಚ್ಚರಿ" ಮೈ ಮುದುರಿ, ಕಳೆಗುಂದಿ, ಸಾಯುವ ಅವಸ್ಥೆಯಲ್ಲಿದ್ದರೂ "ನಾನು ಕಟ್ಟಿದೆ; ನಾನು ಗಳಿಸಿದೆ" ಎಂಬ ಅಹಂಕಾರ ಹೊರಹೊಮ್ಮುತ್ತಲೇ ಇರುವದು. ಒಂದು ವೇಳೆ ಫಲದಾಸೆ ಬಿಡುವದು ಸಾಧ್ಯವೆನ್ನಿ; ಕರ್ಮಕರ್ತೃತ್ವಾಭಿಮಾನ ಬಿಡುವದು ಕಠಿಣ. ನಾನಾರೆಂಬುದನ್ನು ತಿಳಿಯಬಹುದು; ನಾನು ತಿಳಿದೆನೆಂಬ ತಿಳಿವಿನ ಭಾವ ಅಡಗುವದು ದುಸ್ಸಾಧ್ಯ. ಉದಾ:- (ಅ) ಸೌಂದರ ನಂಬಿ ಮಹಾ ಭಕ್ತ; ದೇವನು ಅವನಿಗೆ ದಿನವೂ ಪ್ರತ್ಯಕ್ಷನಾಗುತ್ತಿದ್ದ. ತಾನು ದೇವಸ್ನೇಹಿ ಎಂಬ ಗರ್ವ ತಲೆ ಎತ್ತಿತು; ಮೆರೆ ಖಿಂಡದೇವರೂಪ ಅನುಭಾವಿ ಗುರುವನ್ನು ಲೆಕ್ಕಿಸಲಿಲ್ಲ. ದೇವದರ್ಶನ ಸರಳವಾಯಿತಾದರೂ ಗರ್ವಹೀನನಾಗುವದು ಅವನಿಗೆ ಕಷ್ಟವಾಯ್ತು. (ಬ) ರಾಮದಾಸಸಂತರ ಶಿಷ್ಯ ಶಿವಾಜಿ. ರಾಯಗಡ ಕಿಲ್ಲೆ ಕಟ್ಟುತ್ತಿದ್ದಾಗ 'ನಾನು ಸಾವಿರಾರು ಜನರಿಗೆ ಅನ್ನವಿತ್ತು ರಕ್ಷಿಸುತ್ತಿದ್ದೇನೆ'....ಎಂದು ಗರ್ವಿಸಿತು ಅವನ ಮನ. ಅಂಥ ವೀರ, ಧೀರ, ಗುರುಪುತ್ರರಿಗೇ ಜಯಿಸಲಸಾಧ್ಯವಾದ ಈ ಗರ್ವ ಸಾಮಾನ್ಯರನ್ನು ಹೇಗೆ ಬಿಟ್ಟೀತು?

ಆದರೂ, ಆ ಕರ್ತೃತ್ವಾಭಿನಿವೇಶವನ್ನು ತೆಗೆದು ಹಾಕಲೇ ಬೇಕಲ್ಲವೇ? ವಿನಯ, ಗುರು-ದೇವ ಭಕ್ತಿ ಹಾಗು ತಿಳುವಳಿಕೆಗಳಿಂದದು ಸಾಧ್ಯ.

೩) ಸಿದ್ಧಿ ಅಸಿದ್ಧ್ಯೋಃ ಸಮೋಭೂತ್ವಾ ಕುರು ಕರ್ಮ:- ಕರ್ಮದ ಪ್ರತಿಫಲ ಹಿತವೇ ಬರಲಿ, ಅಹಿತವೇ ಬರಲಿ; ಅದರತ್ತ ಏಕೆ ಲಕ್ಷ ಕೊಡಬೇಕು? ಹಿತಾಹಿತಗಳೆರಡೂ ಕ್ಷಣಿಕ; ಅರ್ಥಹೀನ. ಎರಡರ ಬೆಲೆಯೂ ಅಷ್ಟೇ. ಹೀಗೆ ನೋಡುವದು ಸಮದೃಷ್ಟಿ.

೪) ಸಮತ್ವಂ ಯೋಗ ಉಚ್ಯತೇ:— ದೇವರ ರಾಜ್ಯದಲ್ಲಿ ನಾನೊಬ್ಬ ಸಾಮಾನ್ಯ ಸೇವಕ; ನನ್ನಿಂದ ಜರಗುವ ಕಾರ್ಯಗಳಿಗೆ ಕರ್ತೃ ನಾನಲ್ಲ, ಅಂತ ರ್ಯಾಮಿಯಾದ ದೇವ! ಕರ್ಮಫಲಗಳಾದ ಸಿದ್ಧಿ ಅಸಿದ್ಧಿಗಳು ದೇವನ ಆಶೀ ರ್ವಾದಗಳು. ಸಿದ್ಧಿಯಾದರೆ ಸುಖವಿಲ್ಲ; ಅಸಿದ್ಧಿಯಾದರೆ ದುಃಖವಿಲ್ಲ. ಈ ಬುದ್ಧಿಯಿಂದ ದುಡಿಯುವದೇ ಸಮತ್ವಯೋಗ! ಕರ್ಮಯೋಗ!

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥೪೯॥**

**ಅರ್ಥ:-** ಧನಂಜಯ = ಅರ್ಜುನ, ಕರ್ಮ = ಕಾಮ್ಯಕರ್ಮವು ಬುದ್ಧಿಯೋ ಗಾತ್= ನಿಷ್ಕಾಮ ಕರ್ಮಯೋಗಕ್ಕಿಂತ, ದೂರೇಣ ಹಿ ಅವರಂ = ಅತ್ಯಂತ ತುಚ್ಛ. ಬುದ್ಧೌ ಶರಣಮನ್ವಿಚ್ಛ= ಕರ್ಮಯೋಗರೂಪ ಬುದ್ಧಿಯನ್ನು ಆಶ್ರಯಿಸು. ಫಲಹೇತವಃ = ಫಲ ಉದ್ದೇಶಿಸಿ ಕರ್ಮ ಮಾಡುವವರು ಕೃಪಣಾಃ =ದೀನರು.

**ವಿವರಣೆ:— ಬುದ್ಧಿಯೋಗ:—** ಪರಮಾತ್ಮನು ವಿಶ್ವ-ವಿಸ್ತಾರ; ಸರ್ವಾಂತ ರ್ಯಾಮಿ;ಸರ್ವ ಕರ್ಮಗಳ ಸನ್ನಿಧಾನ ಕರ್ತಾರ; ನಿತ್ಯ; ಎಂಬ ತಿಳಿವು "ಬುದ್ಧಿ". ಈ ತಿಳಿವಿನಿಂದ ಕರ್ಮ ಆಚರಿಸುವದು "ಬುದ್ಧಿಯೋಗ". ಆಭರಣಗಳಿಗೆ ಬೆಲೆ ಮಂಗಲ ಸೂತ್ರದಿಂದ. ಅದೇ ರೀತಿ, ಕರ್ಮಗಳ ಮೌಲ್ಯ ದೇವಬುದ್ಧಿಯಿಂದ. "ನಿತ್ಯದಲ್ಲಿ ಆಚರಿಸುವ ನಿಷ್ಕಾಮಕರ್ಮದಿಂದ ತುಂಗಧರ್ಮವಿವರ್ಧನ. ಮಂಗ ಲಮಯ ಧರ್ಮದಿಂದ ದುಷ್ಕೃತಿಭಂಗ. ಅದರಿಂದ ಚಿತ್ತನಿರ್ಮಲ. ಅದರಿಂದ ಸಂಸೃತಿ ಮೊತ್ತ ದೋಷದರುಶನ. ಅದರಿಂದ ವೈರಾಗ್ಯ. ಅದರಿಂದ ಮುಕ್ತಿಯ ಒಲವು. ಅದರಿಂದ ಕರ್ಮದ ಉಪರತಿ. ಅದರಿಂದ ಸುಜ್ಞಾನ. ಅದರಿಂದ ಮರವೆ ಅಳಿವುದು. ಅದರಿಂದ ಭೇದಬುದ್ಧಿ ಕೆಡುವದು. ಅದರಿಂದ ಹಾನೋ ಪಾದಾನವುಳ್ಳ ವಿಷಯ-ವಿಕೃತಿ ಹೋಗುವದು. ಆಗ ರಾಗ ವೈರಗಳು ತೊಲ ಗುವವು. ಅದರಿಂದ ಮಾಡಬೇಕು ಮಾಡಬಾರದೆಂಬ ವಿಧಿನಾಶ. ಆಗ ಪುಣ್ಯ-ಪಾಪ— ಕರ್ಮವಿಲಯ. ಅವು ಹೋದಾಗ ದೇಹಭಾವನಾಶ. ಆಗ, ಸಂಸೃತಿಯ ನಿರಾಕರಣ. ಸಹಜ ಅವಸ್ಥೆ ಪ್ರಾಪ್ತಿ, ಅಲ್ಲಿ ಅವರ್ಣನೀಯಸುಖ."

ಸಕಾಮ ಕರ್ಮದಲ್ಲಿ ವ್ಯವಸಾಯಾತ್ಮಿಕ ಬುದ್ಧಿ ಇಲ್ಲ. ಅಂಕುಶವಿಲ್ಲದ ಆನೆ ಗುರಿ ತಲುಪಿಸದು; ತಿಳಿವಿಲ್ಲದೆ ಮಾಡಿದ ಸಕಾಮಕರ್ಮಗಳು ಶಾಂತಿ

ನೀಡವು. ಸಕಾಮಿಯು ಕ್ಷುಲ್ಲಕ ವಿಷಯ ಪ್ರಾಪ್ತಿಗಾಗಿ ಯಜ್ಞ ಮಾಡುತ್ತಾನೆ. ನೂರಾರು ನಿಷ್ಪಾಪಿ ಪ್ರಾಣಿಗಳ ಬಲಿ ಕೊಡುತ್ತಾನೆ. ಅವನಲ್ಲಿ ದಯೆಯಿಲ್ಲ; ಪರೋಪಕಾರ ಬುದ್ಧಿಯಿಲ್ಲ. ಅವನ ಒಳಗೆಲ್ಲ ಗರ್ವಧೂಮ್ರ ತುಂಬಿದೆ; ವಿವೇಕ ದೃಷ್ಟಿಹೀನನಾದ ಅವನು ಸಂಸಾರ ಮಹಾಕಂದರದಲ್ಲಿ ಬಿದ್ದಿದ್ದಾನೆ. ಅವನನ್ನು ದುಃಖ, ಭಯ, ಚಿಂತೆಗಳು ಆವರಿಸಿವೆ.

ನಿಷ್ಕಾಮ ಕರ್ಮವು ಮೋಚಕ; ಶಾಂತಿದಾಯಕ ಹಾಗು ಪವಿತ್ರ. ಸಕಾಮ ಕರ್ಮವು ಬಂಧಕ, ಅಶಾಂತಿದಾಯಕ ಹಾಗು ಅಪವಿತ್ರ. ಒಂದು ತಾರಕ; ಮತ್ತೊಂದು ಮಾರಕ! ಅವೆರಡಕ್ಕೆ ಅಜಗಜಾಂತರ. ನಿಷ್ಕಾಮದ ಎದುರು ಸಕಾಮ ಅತಿ ಕೀಳು!

**ಕೃಪಣಾಃ ಫಲಹೇತವಃ**:-ಫಲಹೇತುವಿನಿಂದ ಶ್ರಮಿಸುವವರು ಕೃಪಣರು! ಲೋಭಿಗಳು! ಇವರ ದೃಷ್ಟಿ ಬರಿ ಭೋಗ ಸಂಗ್ರಹದ ಮೇಲೆ; ಸರ್ವಜ್ಞ ಕವಿಯು ಇವರನ್ನು ವರ್ಣಿಸಿದ ರೀತಿ ಹೀಗಿದೆ :

"ಉಣ್ಣದೊಡವೆಯ ಗಳಿಸಿ । ಮಣ್ಣೊಳಗೆ ಬಚ್ಚಿಟ್ಟು ॥
ಚೆನ್ನಾಗಿ ನೆಲವ ಸಾರಿಸಿದವನ ಬಾಯೊಳಗೆ । ಮಣ್ಣು ಕಾಣಯ್ಯ ಸರ್ವಜ್ಞ"

ಸಾಮಾನ್ಯವಾಗಿ ಧನಲೋಭಿಗಳೆಲ್ಲ ಹೀಗೆಯೆ. ತಮ್ಮ ಹತ್ತಿರ ಕೋಟ್ಯಂತರ ಧನವಿದೆ ಎಂಬ ಭಾವನೆಯೊಂದೇ ಅವರ ಪಾಲಿನ ಸಂತಸ. ಅದನ್ನು ಉಣಲಿಲ್ಲ, ಸುಖ ಪಡಲಿಲ್ಲ. ಇವರು ಲೌಕಿಕ ಕೃಪಣರು!

"ಯೋವಾ ಏತದಕ್ಷರಂ ಅವಿದಿತ್ವಾ ಗಾರ್ಗಿ ಅಸ್ಮಾತ್ ಲೋಕಾತ್ಪ್ರೈತಿ ಸಃ ಕೃಪಣಃ" (ಬೃ. ಉ. ೩-೮-೧೦) ಹೇ ಗಾರ್ಗಿಯೆ, ಅಕ್ಷರರೂಪನಾದ ಪರಬ್ರಹ್ಮನನ್ನು, ಸರ್ವಾಂತರ್ಯಾಮಿ, ಪರಮ-ಪ್ರಭುವನ್ನು ತಿಳಿಯದೆ ಈ ಲೋಕ ತ್ಯಜಿಸುವವನು ತಾತ್ವಿಕ ದೃಷ್ಟಿಯಿಂದ ಕೃಪಣ! ಶರೀರ ಇಂದ್ರಿಯ ಮನಸ್ಸುಗಳು ಮಾನವ ಪಡೆದ ಸಂಪತ್ತು. ಅವುಗಳ ಸಹಾಯದಿಂದ ಆತ್ಮ ದರ್ಶನ ಸಾಧ್ಯ; ಅಮರ ಆನಂದದ ಪ್ರಾಪ್ತಿ. ಆದರೆ ಬುದ್ಧಿಹೀನ ಜೀವರು ಈ ಸಂಪದವನ್ನು ಮಣ್ಣು ಮನೆಗಳ ಸಂಪಾದನೆಗೆ ವ್ಯಯಿಸಿ ಸಾಯುತ್ತಾರೆ! ಇವರಂಥ ಪಾಪಿ ಇನ್ನಾರು? ಇವರು ಆತ್ಮ ವಂಚಕರು! ಹೀನರು.

ಭಗವಂತ:- "ಧನಂಜಯ, ದೇವನೇ ನಿಯಾಮಕನೆಂದು ಭಾವಿಸಿ, ಕರ್ತೃತ್ವಾಭಿಮಾನವಿರಹಿತನಾಗಿ, ನಿಷ್ಕಲ್ಮಷ ಬುದ್ಧಿಯಿಂದ ಮಾಡುವ ಕರ್ಮ ಯೋಗಕ್ಕೆ ಸಕಾಮ ಕರ್ಮವು ಯಾವ ಗಿಡದ ಎಲೆ? ಭವಕಾರಿಯಾದ ಸಕಾಮ ಹೇಯ. ಸಕಾಮಿಗಳು ದೀನರು; ಭಿಕ್ಷುಕರು!

"ನೀನು ಮಾತ್ರ ಎಲ್ಲಕ್ಕೂ ಪರಮಾತ್ಮನೇ ಆಧಾರ ಎಂಬ ಪಾವನ ಬುದ್ಧಿಯನ್ನು ಪಡೆ. ಅದಕ್ಕೆ ಅನುಸರಿಸಿ ಕರ್ಮ ಮಾಡುತ್ತ ಬಾಳು. ಕರ್ಮ

ಕರ್ಮಗಳು ಬಾಧಕ. ನಿಷ್ಕಾಮವು ತಾರಕ.

ಮಂತ್ರಪಾದಿಯು ನೀರಲ್ಲಿ ಮುಳುಗಿದರೂ ನೆನೆಯುವದಿಲ್ಲ; ಬೆಂಕಿಯಲ್ಲಿ ನಡೆದರೂ ಸುಟ್ಟುಕೊಳ್ಳುವದಿಲ್ಲ; ಆಕಾಶದಲ್ಲಿ ಹಾರಿದರೂ ಬೀಳುವದಿಲ್ಲ; ಅದೆಲ್ಲ ಅವನ ಮಂತ್ರಕೌಶಲ್ಯ ಅಲ್ಲವೆ? ಹಾಗೆ ಸಾಧಕನು ಜೀವನವಿಡಿ ನಿಷ್ಕಾಮಕರ್ಮ ಮಾಡಿದರೂ ಆ ಕರ್ಮಗಳಿಂದ ಬದ್ಧನಾಗುವದಿಲ್ಲ. ಇದೇ ನಿಷ್ಕಾಮ ಕರ್ಮದ ಅಪ್ರತಿಮ ಕುಶಲತೆ!

ತಸ್ಮಾತ್ ಯೋಗಾಯ ಯುಜ್ಯಸ್ವ:- "ಆದ್ದರಿಂದ ಅರ್ಜುನ, ಸಕಾಮ ಕರ್ಮಗಳ ಗೊಡವೆ ಬಿಟ್ಟುಬಿಡು. ನೀನೂ ಕುಶಲ ಕರ್ಮಯೋಗಿಯಾಗು."

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥೫೧॥**

**ಅರ್ಥ:–** ಬುದ್ಧಿಯುಕ್ತಾಃ= ವ್ಯವಸಾಯಾತ್ಮಿಕ ಬುದ್ಧಿಯುಕ್ತರಾದ ಮನೀಷಿಣಃ ಹಿ = ಜ್ಞಾನಿಗಳು ಕರ್ಮಜಂ ಫಲಂ = ಕರ್ಮಜನ್ಯಫಲವನ್ನು ತ್ಯಕ್ತ್ವಾ= ತ್ಯಜಿಸಿ ಜನ್ಮಬಂಧ ವಿನಿರ್ಮುಕ್ತಾಃ =ಜನ್ಮಬಂಧವಿಲ್ಲದವರಾಗಿ, ಅನಾಮಯಂ= ಅಕ್ಷಯವಾದ ಪದಂ= ಪರಮ ಸ್ಥಾನವನ್ನು ಗಚ್ಛಂತಿ =ಹೊಂದುತ್ತಾರೆ.

**ವಿವರಣೆ:-** "ಜ್ಞಾನಾದೇವತು ಕೈವಲ್ಯಂ" "ಜ್ಞಾನದಿಂದಲೇ ಕೈವಲ್ಯ. ಇದು ಶ್ರುತಿ ಘೋಷಣೆ. ಆದರೆ ಆ ಅಧ್ಯಾತ್ಮಜ್ಞಾನ ತನ್ನಿಂದ ತಾನೇ ಉಂಟಾಗದು. ಅದನ್ನು ಗುರು ಮಹಾತ್ಮರಿಂದ ಹೃದಯಭಾಂಡದಲ್ಲಿ ಪರಿಗ್ರಹಿಸಬೇಕು. ಅನುಭಾವದುಗ್ಧವನ್ನು ಸ್ವೀಕರಿಸುವ ಆ ಭಾಂಡ ಹೊಲಸಾಗಿದ್ದರೆ ಮಾತ್ರ ಆ ದುಗ್ಧ ಹುಳಿಯುವದು; ಅಹಂಕಾರವೆಂಬ ವಾಸನೆ ಹೊರಹೊಮ್ಮುವದು. ಜಾಣ ಸಾಧಕನ ಪ್ರಪ್ರಥಮ ಕರ್ತವ್ಯ ತನ್ನ ಅಂತರಂಗವನ್ನು ಕರ್ಮಯೋಗದಿಂದ ವಿಮಲಗೊಳಿಸುವದು.

ಮತ್ತೊಂದು ರೂಪಕದಿಂದ ಹೇಳಬಹುದಾದರೆ- ತಮೋ ಹೃದಯಿಗೆ ನೀಡಿದ ಜ್ಞಾನವು ಕಾದ ಕಬ್ಬಿಣದ ಮೇಲೆರೆದ ನೀರಿನಂತೆ ಕೂಡಲೇ ಆವಿಯಾಗಿ ಹೋಗುವದು. ರಾಜಸ ಹೃದಯಿಗೆ ನೀಡಿದ ಜ್ಞಾನವು ಎಲೆಯ ಮೇಲಿನ ಜಲಬಿಂದುವಿನ ಹಾಗೆ ಕೆಲ ಕಾಲ ಮುತ್ತಿನಂತೆ ತೋರಿ ಪತನವಾಗುವದು. ರಾಜಸಿಕರು ಕೆಲ ಸಮಯ ಜ್ಞಾನಿಗಳಂತೆ ಕಾಣಬಲ್ಲರು; ಆದರೆ ಸಾಂಸಾರಿಕ ಝಂಝಾ ಮಾರುತ ಬೀಸಿದಾಗ ಅವರ ಮನ ಕಂಪಿಸುವದು; ಆತ್ಮವಿದ್ಯೆ ಕೈಬಿಡುವದು; ಸಾಮಾನ್ಯ ಪ್ರಾಪಂಚಿಕ ಮೋಹಿಗಳಂತೆ ವರ್ತಿಸುವರು. ಸತ್ವ ಹೃದಯಿಯು ಹದಗೊಂಡ ಸಿಂಪು. ಗುರು ಶ್ರುತಿ ಪ್ರಮಾಣಾಧಾರಿತ ಜ್ಞಾನಜಲಬಿಂದು ಬೀಳುವದೇ ತಡ ಆ ಜ್ಞಾನವು ಹೊಳೆವ ಅನುಭಾವ-ಮುತ್ತಾಗಿ ಪರಿಣಮಿಸುವದು!

ಫಲ ಸುಖವಾಗಿದ್ದರೆ ಉನ್ಮಾದಗೊಳ್ಳಬೇಡ. ಕರ್ಮಫಲ ಅಹಿತವಾಗಿದ್ದರೆ ಅಥವಾ ದೊರೆಯದಿದ್ದರೆ ಕುಂದಬೇಡ. ಮನಃಸ್ಥಿರತೆ ಕಾಯ್ದುಕೊ. ನಿನಗೆ ಸಮಾಧಾನ ನಿಶ್ಚಿತವಾಗಿಯೂ ದೊರೆಯುವದು."

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತ ದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್॥೫೦॥**

**ಅರ್ಥ:-** ಇಹ= ಇಹದಲ್ಲಿ ಬುದ್ಧಿಯುಕ್ತಃ= ಕರ್ಮಯೋಗಿಯು,ಸುಕೃತ ದುಷ್ಕೃತೇ =ಸ್ವರ್ಗ ಪ್ರಾಪಕ ಪುಣ್ಯಕರ್ಮ ಹಾಗು ನರಕ ಪ್ರಾಪಕ ಪಾಪಕರ್ಮಗಳೆರಡನ್ನು ಜಹಾತಿ = ಬಿಡುತ್ತಾನೆ. ತಸ್ಮಾತ್ = ಆದ್ದರಿಂದ, ಯೋಗಾಯ= ಬುದ್ಧಿಯುಕ್ತ ಕರ್ಮಯೋಗಕ್ಕಾಗಿ ಯುಜ್ಯಸ್ವ= ಯತ್ನಿಸು, ಕರ್ಮಸು = ಕಾಮ್ಯಾದಿ ಸರ್ವಕರ್ಮಗಳಲ್ಲಿ ಯೋಗಃ= ಸಮತ್ವ ಬುದ್ಧಿಯುಕ್ತ ಕರ್ಮಯೋಗವು, ಕೌಶಲಂ = ತಾರಕ ಚಾತುರ್ಯ ಉಳ್ಳದು.

**ವಿವರಣೆ:-** **ಬುದ್ಧಿಯುಕ್ತಃ :-** ಸರ್ವಜೀವರ ಹೃದಯಾಂತರಾಳದಲ್ಲಿ ಅಮೃತಸ್ವರೂಪಿ ಆತ್ಮನು ನೆಲೆಸಿದ್ದಾನೆ. ಅವನು ಅರಿವಿನ ಆಗಸ; ಆನಂದದ ಅಬ್ಧಿ. ಕ್ಷಯ-ನಾಶವಿಲ್ಲದ ಪರಿಪೂರ್ಣ ಇರವು. 'ನೆಲದ ಮರೆಯಲ್ಲಿ ನಿಧಾನ' ಶಿಲೆಯ ಮರೆಯಲ್ಲಿ ಪಾವಕ, ಫಲದ ಮರೆಯಲ್ಲಿ ರುಚಿ ಅಡಗಿರುವಂತೆ ಭಾವದ ಮರೆಯಲ್ಲಿ ಆತ್ಮಪುರುಷನು ಅಡಗಿದ್ದಾನೆ. ಭಾವಶುದ್ಧವಾದ ತಕ್ಷಣ ಆತ್ಮ ಪ್ರಜ್ಞಾದೀಪ ಪ್ರಕಾಶಿಸುವದು. ಈ ಆತ್ಮ ಪ್ರಜ್ಞೆಯೇ ಬುದ್ಧಿ. ಈ ಬುದ್ಧಿ ಯುಳ್ಳವನು ಬುದ್ಧಿಯುಕ್ತ, ಕರ್ಮಯೋಗಿ.

**ಸುಕೃತ ದುಷ್ಕೃತೇ ಜಹಾತಿ:-** ಪುಣ್ಯಕರ್ಮ ಸ್ವರ್ಗದಾಯಕ. ಪಾಪ ಕರ್ಮವು ನರಕದಾಯಕ. ಜ್ಞಾನಾನಂದಘನ ಆತ್ಮನೇ ವಿಶ್ವದಲ್ಲೆಲ್ಲ ವಾಸಿಸಿ ದ್ದಾನೆ ಎಂಬ ಬುದ್ಧಿಯುಳ್ಳ ಕರ್ಮಯೋಗಿಗೆ ಸ್ವರ್ಗದ ಬಯಕೆ ಇಲ್ಲ; ನರಕದ ಭೀತಿಯಿಲ್ಲ. ಆದುದರಿಂದ ಪಾಪ ಹಾಗು ಪುಣ್ಯ ಕರ್ಮಗಳೆರಡನ್ನೂ ಅವನು ಬಿಟ್ಟುಬಿಡುತ್ತಾನೆ. ಅವು ಅವನನ್ನು ಬಂಧಿಸಲಾರವು.

**ಕರ್ಮಸು ಯೋಗಃ ಕೌಶಲಂ:-** ಕರ್ಮಗಳಲ್ಲಿ ಪ್ರಾಮುಖ್ಯವಾಗಿ ಆರುಬಗೆ.(೧) ಸ್ವರ್ಗದಾಯಕ ಕಾಮ್ಯ. (೨) ನರಕದಾಯಕ ನಿಷಿದ್ಧ (೩) ಜಾತಿ ದಾಯಕ ನಿತ್ಯ. (೪) ಪುತ್ರಪ್ರದಾಯಕ ನೈಮಿತ್ತಿಕ. (೫)ಪಾಪನಾಶಕ ಅರ್ಚನಾ. (೬) ಮೋಕ್ಷ ಪ್ರದಾಯಕ ನಿಷ್ಕಾಮ. ಅವುಗಳಲ್ಲಿ ಸಮತ್ವ ಬುದ್ಧಿಯುಕ್ತ ನಿಷ್ಕಾಮ ಕರ್ಮಯೋಗವು ಅತ್ಯಂತ ಶ್ರೇಷ್ಠ ಮತ್ತು ವಿಲಕ್ಷಣ. ಏಕೆಂದರೆ ಉಳಿದ ಐದೂ ಕರ್ಮಗಳಲ್ಲಿರದ ಅಸಾಮಾನ್ಯ ಸಾಮರ್ಥ್ಯ ಅದರಲ್ಲಿದೆ. ಉಳಿದ ಕರ್ಮಗಳನ್ನು ಆಚರಿಸುತ್ತ ಹೋದಂತೆ ಸಾಂಸಾರಿಕ ಬಂಧನ ಸಡಿಲಾಗುವ ಬದಲು ಇನ್ನಷ್ಟು ಹೆಚ್ಚುವದು. ನಿಷ್ಕಾಮ ಕರ್ಮವು ಹಾಗಲ್ಲ. ಅದು ಮನ ಶ್ಶುದ್ಧೀಕರ; ಭಾವಗತ ರಾಗಾದಿದೋಷಹಾರಕ; ದಿವ್ಯ ಆತ್ಮಜ್ಞಾನ ಪ್ರದಾ ಯಕ. ಕರ್ಮಯೋಗಿ ಭವಸಾಗರದಿಂದ ಸಹಜವಾಗಿ ಪಾರಾಗುತ್ತಾನೆ. ಉಳಿದ

ಕರ್ಮಗಳು ಬಾಧಕ. ನಿಷ್ಕಾಮವು ತಾರಕ.

ಮಂತ್ರವಾದಿಯು ನೀರಲ್ಲಿ ಮುಳುಗಿದರೂ ನೆನೆಯುವದಿಲ್ಲ; ಬೆಂಕಿಯಲ್ಲಿ ನಡೆದರೂ ಸುಟ್ಟುಕೊಳ್ಳುವದಿಲ್ಲ; ಆಕಾಶದಲ್ಲಿ ಹಾರಿದರೂ ಬೀಳುವದಿಲ್ಲ; ಅದೆಲ್ಲ ಅವನ ಮಂತ್ರಕೌಶಲ್ಯ ಅಲ್ಲವೆ? ಹಾಗೆ ಸಾಧಕನು ಜೀವನವಿಡಿ ನಿಷ್ಕಾಮಕರ್ಮ ಮಾಡಿದರೂ ಆ ಕರ್ಮಗಳಿಂದ ಬದ್ಧನಾಗುವದಿಲ್ಲ. ಇದೇ ನಿಷ್ಕಾಮ ಕರ್ಮದ ಅಪ್ರತಿಮ ಕುಶಲತೆ!

ತಸ್ಮಾತ್ ಯೋಗಾಯ ಯುಜ್ಯಸ್ವ:- "ಆದ್ದರಿಂದ ಅರ್ಜುನ, ಸಕಾಮ ಕರ್ಮಗಳ ಗೊಡವೆ ಬಿಟ್ಟುಬಿಡು. ನೀನೂ ಕುಶಲ ಕರ್ಮಯೋಗಿಯಾಗು."

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥೫೧॥**

ಅರ್ಥ:- ಬುದ್ಧಿಯುಕ್ತಾಃ= ವ್ಯವಸಾಯಾತ್ಮಿಕ ಬುದ್ಧಿಯುಕ್ತರಾದ ಮನೀಷಿಣಃ ಹಿ = ಜ್ಞಾನಿಗಳು ಕರ್ಮಜಂ ಫಲಂ = ಕರ್ಮಜನ್ಯಫಲವನ್ನು ತ್ಯಕ್ತ್ವಾ= ತ್ಯಜಿಸಿ ಜನ್ಮಬಂಧ ವಿನಿರ್ಮುಕ್ತಾಃ =ಜನ್ಮಬಂಧವಿಲ್ಲದವರಾಗಿ, ಅನಾಮಯಂ= ಅಕ್ಷಯವಾದ ಪದಂ= ಪರಮ ಸ್ಥಾನವನ್ನು ಗಚ್ಛಂತಿ =ಹೊಂದುತ್ತಾರೆ.

ವಿವರಣೆ:- "ಜ್ಞಾನಾದೇವತು ಕೈವಲ್ಯಂ" "ಜ್ಞಾನದಿಂದಲೇ ಕೈವಲ್ಯ. ಇದು ಶ್ರುತಿ ಘೋಷಣೆ. ಆದರೆ ಆ ಅಧ್ಯಾತ್ಮಜ್ಞಾನ ತನ್ನಿಂದ ತಾನೇ ಉಂಟಾಗದು. ಅದನ್ನು ಗುರು ಮಹಾತ್ಮರಿಂದ ಹೃದಯಭಾಂಡದಲ್ಲಿ ಪರಿಗ್ರಹಿಸಬೇಕು. ಅನುಭಾವದುಗ್ಧವನ್ನು ಸ್ವೀಕರಿಸುವ ಆ ಭಾಂಡ ಹೊಲಸಾಗಿದ್ದರೆ ಮಾತ್ರ ಆ ದುಗ್ಧ ಹುಳಿಯುವದು; ಅಹಂಕಾರವೆಂಬ ವಾಸನೆ ಹೊರಹೊಮ್ಮುವದು. ಜಾಣ ಸಾಧಕನ ಪ್ರಪ್ರಥಮ ಕರ್ತವ್ಯ ತನ್ನ ಅಂತರಂಗವನ್ನು ಕರ್ಮಯೋಗದಿಂದ ವಿಮಲಗೊಳಿಸುವದು.

ಮತ್ತೊಂದು ರೂಪಕದಿಂದ ಹೇಳಬಹುದಾದರೆ- ತಮೋ ಹೃದಯಿಗೆ ನೀಡಿದ ಜ್ಞಾನವು ಕಾದ ಕಬ್ಬಿಣದ ಮೇಲೆರೆದ ನೀರಿನಂತೆ ಕೂಡಲೇ ಆವಿಯಾಗಿ ಹೋಗುವದು. ರಾಜಸ ಹೃದಯಿಗೆ ನೀಡಿದ ಜ್ಞಾನವು ಎಲೆಯ ಮೇಲಿನ ಜಲಬಿಂದುವಿನ ಹಾಗೆ ಕೆಲ ಕಾಲ ಮುತ್ತಿನಂತೆ ತೋರಿ ಪತನವಾಗುವದು. ರಾಜಸಿಕರು ಕೆಲ ಸಮಯ ಜ್ಞಾನಿಗಳಂತೆ ಕಾಣಬಲ್ಲರು; ಆದರೆ ಸಾಂಸಾರಿಕ ಝುಂಝಾ ಮಾರುತ ಬೀಸಿದಾಗ ಅವರ ಮನ ಕಂಪಿಸುವದು; ಆತ್ಮವಿದ್ಯೆ ಕೈಬಿಡುವದು; ಸಾಮಾನ್ಯ ಪ್ರಾಪಂಚಿಕ ಮೋಹಿಗಳಂತೆ ವರ್ತಿಸುವರು. ಸತ್ವ ಹೃದಯಿಯು ಹದಗೊಂಡ ಸಿಂಪು. ಗುರು ಶ್ರುತಿ ಪ್ರಮಾಣಾಧಾರಿತ ಜ್ಞಾನಜಲಬಿಂದು ಬೀಳುವದೇ ತಡ ಆ ಜ್ಞಾನವು ಹೊಳೆವ ಅನುಭಾವ-ಮುತ್ತಾಗಿ ಪರಿಣಮಿಸುವದು !

**ನಿಷ್ಕಾಮ ಕರ್ಮದ ಮಹಿಮೆ ಹಾಗು ಸ್ವರೂಪ:-**

**ಬುದ್ಧಿಯುಕ್ತಾಃ ಹಿ ಮನೀಷಿಣಃ :-** "ಅವಶ್ಯಂ ಅನುಭೋಕ್ತವ್ಯಂ ಶುಭಾಶುಭ ಕರ್ಮ ಫಲಮ್" ಕರ್ಮದ ಫಲ ಶುಭವಿರಲಿ ಅಥವಾ ಅಶುಭವಿರಲಿ ಅವನ್ನು ಅನುಭವಿಸಲೇಬೇಕು. ಸತ್ವ ಕರ್ಮದಿಂದ ಇಷ್ಟ ಭೋಗೈಶ್ವರ್ಯಗಳ ಉಪಭೋಗ. ರಾಜಸಿಕ ಕರ್ಮದಿಂದ ಇಷ್ಟಾನಿಷ್ಟ ಭೋಗೋಪ-ಭೋಗ. ತಾಮಸ ಕರ್ಮದಿಂದ ಅನಿಷ್ಟಫಲಭೋಗ. ಈ ಮೂರೂ ಭೋಗಗಳು ಜನ್ಮ ಕಾರಕಗಳೇ ವಿನಃ ಜನ್ಮ-ಮರಣ ಮೋಚಕಗಳಲ್ಲ. ತೋರಿಕೆಗೆ ಭೋಗಗಳು; ಅಂತರ್ಯದಲ್ಲಿ ಹಾಗು ಪರಿಣಾಮದಲ್ಲಿ ಹಾಲಾಹಲಗಳು. ಇದನ್ನು ಅರಿತು ಫಲಾಭಿಲಾಷೆ ಇಲ್ಲದವರಾಗಿ ಕೇವಲ ಪರಮಾತ್ಮಪ್ರಿತ್ಯರ್ಥ ಕರ್ಮಮಾಡುವ ಕುಶಲರೇ ಬುದ್ಧಿಯುಕ್ತ ಕರ್ಮಯೋಗಿಗಳು.

ಅವರು ಮನೀಷಿಣಃ, ಜ್ಞಾನಿಗಳು; ತತ್ತ್ವಮಸಿ (ನೀನೆ ಆ ಪರಮಾತ್ಮ); ಅಯಮಾತ್ಮಾಬ್ರಹ್ಮ (ಈ ಜೀವನ ಮೂಲರೂಪನಾದ ಆತ್ಮನೇ ಬ್ರಹ್ಮ); ಪ್ರಜ್ಞಾನಮಾನಂದಂ ಬ್ರಹ್ಮ (ಜ್ಞಾನಾನಂದ ರೂಪವು ಬ್ರಹ್ಮ); ಅಹಂ ಬ್ರಹ್ಮಾಸ್ಮಿ (ನಾನು ಬ್ರಹ್ಮನಿರುವೆ); ಈ ಮಹಾವಾಕ್ಯಗಳ ಅಂತರ್ಯ ಗ್ರಹಿಸಿದ ಅನುಭಾವಿಗಳು. ಸರ್ವ ಜೀವರ ಹಾಗು ಸರ್ವ ಪದಾರ್ಥಗಳ ಪರಮ ಮೂಲ ದೇವನತ್ತ ಲಕ್ಷ ಹರಿಸಿದ ಅವರಿಗೆ ಜೀವಭೇದವಾಗಲಿ, ವಸ್ತುಭೇದವಾಗಲಿ ಕಾಣದು. ಅವರ ದೃಷ್ಟಿ ಸಮ! ವಿದ್ಯಾವಿನಯ ಸಂಪನ್ನ ಬ್ರಾಹ್ಮಣ, ಪವಿತ್ರಳಾದ ಗೋಮಾತೆ, ಅಪವಿತ್ರ ಶ್ವಾನ, ಹೇಯನಾದ ಶ್ವಪಚ, ಪಶು-ಪಕ್ಷಿ, ಮಾನವ ದಾನವ, ದೇವ ರಾಕ್ಷಸ ಎಲ್ಲರಲ್ಲಿ ಅವರಿಗೆ ದೇವನ ಅಸ್ತಿತ್ವದರ್ಶನ!

**ಕರ್ಮಜಂ ಫಲಂ ತ್ಯಜಂತಿ:-** ದೇವನನ್ನು ಅರಿತ ಅಂಥ ಕರ್ಮ ಯೋಗಿಗಳು ಕ್ರಿಯಾಹೀನರಾಗಿ ಬಾಳುವದಿಲ್ಲ. ತಮ್ಮ ಪಾಲಿನ ಸರ್ವಕರ್ಮಗಳನ್ನು ಅತಿ ನಿಷ್ಠೆಯಿಂದ ಆಚರಿಸುತ್ತಾರೆ. ವಿಶ್ವಾತ್ಮನಿಗಾಗಿ ತಮ್ಮ ಬಾಳನ್ನೇ ಸಮರ್ಪಿಸುತ್ತಾರೆ. ಅವರಿಗೆ ತಮ್ಮ ಕರ್ಮಫಲದ ಲಾಲಸೆ ಇಲ್ಲ. ಬರುವ ಫಲಗಳೇನಾದರು ಇದ್ದರೆ ವಿಶ್ವಹಿತಕ್ಕಾಗಿ ತ್ಯಜಿಸುತ್ತಾರೆ. ಈ ಮಹಾನ್ ತ್ಯಾಗದಿಂದ ಅವರು ಗಳಿಸುವದೇನು?

**ಜನ್ಮ ಬಂಧ ವಿನಿರ್ಮುಕ್ತಾಃ (ಭವಂತಿ) :-** ಮುಕ್ತಿ, ನಿರ್ಮುಕ್ತಿ ಹಾಗು ವಿನಿರ್ಮುಕ್ತಿಗಳು ಬೇರೆ ಬೇರೆ. ದುಃಖದ ತೋರಿಕೆಯ ಕಾರಣಗಳಾದ ರೋಗ ರುಜಾದಿಗಳನ್ನು ನಾಶ ಮಾಡಿ ಪಡೆಯುವದು ಮುಕ್ತಿ. ದುಃಖದ ಅಂತರಿಕ ಕಾರಣವಾದ 'ಅಹಂ' ಭಾವ ಕೆಡಿಸಿ ಪಡೆಯುವದು ನಿರ್ಮುಕ್ತಿ. ಅಹಂಕಾರದ ಮೂಲ ಬೀಜವಾದ ಮೂಲಾವಿದ್ಯೆಯನ್ನೇ ನಾಶಪಡಿಸಿ ಪಡೆಯುವದು ವಿನಿರ್ಮುಕ್ತಿ. ಔಷಧಿ ಸೇವನೆಯಿಂದ ರೋಗ ಮುಕ್ತನಾಗುವದು ಮುಕ್ತಿಯ ಉದಾಹರಣೆ. ಇದು ಅತೀ ತಾತ್ಪೂರ್ತಿಕ. ಒಂದು ರೋಗ ಹೋಗುವದರೊಳಗೆಯೆ

ಮತ್ತೊಂದು ರೋಗ ಆಗಮಿಸುವದು, ಒಂದು ಸಾಂಸಾರಿಕ ಕೊರತೆ ನೀಗುವಷ್ಟ ರಲ್ಲಿ ಮತ್ತೊಂದು ಉಲ್ಬಣಿಸುವದು. ನಿರ್ಮುಕ್ತಿ ಮಾತ್ರ ಹೆಚ್ಚುಕಾಲ ಬಾಳು ವಂಥದು. ಆದರೆ ಅದು ನಿತ್ಯವಲ್ಲ. ಅಹಂಕಾರಕ್ಕೂ ಕಾರಣವಾದ ಸಂಸಾರ ಗ್ರಂಥಿ (ಮೂಲಾವಿದ್ಯೆ) ನಾಶವಾದಾಗ ಸಮನಿಸುವ ವಿನಿರ್ಮುಕ್ತಿಯು ನಿತ್ಯ! ಮನೀಷಿಗಳು ಸಂಸಾರ ಗ್ರಂಥಿಯನ್ನೇ ನಾಶಮಾಡಿದ್ದಾರೆ. ಆದುದರಿಂದ ಅದರ ಮೇಲೆ ತೋರಿದ ಅಹಂಕಾರ, ಅದರಿಂದ ಉಂಟಾದ ದೇಹಾಭಿಮಾನ, ಆ ಅಭಿಮಾನವನ್ನು ಆಶ್ರಯಸಿದ ಜನ್ಮ ಬಂಧ ಅವರಿಗಿಲ್ಲ. ಅವರು ಹೀಗೆ ಆಧಿ ವ್ಯಾಧಿಗಳ, ಜರಾ ಮರಣಗಳ ದುಃಖದಿಂದ ವಿನಿರ್ಮುಕ್ತರಾಗಿದ್ದಾರೆ.

(ತೇ)ಪದಂ ಅನಾಮಯಂ ಗಚ್ಛಂತಿ:- ಸ್ಥೂಲ ದೇಹಕ್ಕೆ ಪೀಡೆ ಕೊಡುವ ಹಸಿವು ತೃಷೆ ರುಜೆಗಳು, ಸೂಕ್ಷ್ಮ ದೇಹಕ್ಕೆ ಪೀಡೆ ಉಂಟು ಮಾಡುವ ಕಾಮ ಕ್ರೋಧ ಲೋಭ ಮೋಹಗಳು, ಕಾರಣ ದೇಹಕ್ಕೆ ಅಂಟಿಕೊಂಡ ನಿದ್ರಾ ಆಲಸ್ಯ ಪ್ರಮಾದ ಅಜ್ಞಾನಗಳು ಆಮಯ ಶಬ್ದಕ್ಕೆ ಅರ್ಥ. ಪರಮಾತ್ಮನು ಈ ಸ್ಥೂಲಾದಿ ದೇಹಗಳಿಗೆ ವಿಲಕ್ಷಣ; ಜಾಗ್ರದಾದಿ ಅವಸ್ಥೆಗಳಿಗೆ ಅತೀತ. ಸೂಕ್ಷ್ಮಕ್ಕೆ ಸೂಕ್ಷ್ಮ. ದೇಹವನ್ನು ಆಶ್ರಯಿಸಿದ ಆಮಯಗಳು ಅವನನ್ನು ಸ್ಪರ್ಶಿಸವು. ಅವನು ನಿರಾಮಯ ! ಅನಾಮಯ! ಬುದ್ಧಿವಂತ ಕರ್ಮಯೋಗಿ ಗಳು ಆ ಸ್ಥಾನಕ್ಕೆ ಹೋಗುತ್ತಾರೆ. ಚಿರಂತನ ಸುಖ ಅನುಭವಿಸುತ್ತಾರೆ,

ಅರ್ಜುನ:– "ಭಗವನ್, ಆ ದಿವ್ಯ ಅನಾಮಯ ಪದದ ಹಿರಿಮೆ ಕೇಳಿದೆ, ಆ ಪದದಲ್ಲಿ ಎಂದು ನಿಂತೇನು? ಎಂದು ಆತುರನಾಗಿದ್ದೇನೆ. ದೇವಾ, ಅದಕ್ಕಾಗಿ ಮಾರ್ಗ ತೋರು."

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥೫೨॥**

**ಅರ್ಥ:**- ಯದಾ= ಯಾವಾಗ, ತೇ ಬುದ್ಧಿಃ= ನಿನ್ನ ಬುದ್ಧಿಯು ಮೋಹಕಲಿಲಂ= ಮೋಹರೂಪ ರಾಡಿಯನ್ನು, ವ್ಯತಿತರಿಷ್ಯತಿ= ಪೂರ್ಣವಾಗಿ ದಾಟುವದೋ, ತದಾ= ಆಗ ಶ್ರೋತವ್ಯಸ್ಯ= ಕೇಳಬೇಕಾದ, ಶ್ರುತಸ್ಯ ಚ= ಮತ್ತು ಕೇಳಲಾದ (ಅರ್ಥೇಷು = ವಿಷಯ ಗಳಲ್ಲಿ) ನಿರ್ವೇದಂ= ವೈರಾಗ್ಯವನ್ನು ಗಂತಾಸಿ= ಹೊಂದುವೆ.

**ವಿವರಣೆ:**- ಮೋಹಕಲಿಲಂ:- 'ದೇಹಾದಿಷು ಆತ್ಮಬುದ್ಧಿಃ ಮೋಹಃ' ದೇಹ ಇಂದ್ರಿಯ, ಮನ ಮುಂತಾದ ಅನಾತ್ಮ ವಸ್ತುಗಳಲ್ಲಿ ಆತ್ಮಭಾವವೇ ಮೋಹ. ಜೀವಪುರುಷನ ಮನಸ್ಸಿಗೆ ಮೆತ್ತಿದ ಕಲ್ಮಷ. ಜಗತ್ತೆಲ್ಲ ಈ ಮೋಹರೂಪ ಪಂಕದಲ್ಲಿ ಹೂತು ಹೋಗಿದೆ! ಅವರಿಗೆ ಹಿತಾಹಿತದ ವಿವೇಕವಿಲ್ಲ, ನಿತ್ಯಾನಿತ್ಯ ವಸ್ತು ವಿವೇಚನಾ ಬುದ್ಧಿಯಿಲ್ಲ. ವಿಷಮ ಜ್ವರದಿಂದ ಅದಾಗ ಚೇತರಿಸಿಕೊಂಡ ರೋಗಿ ತಿಂಡಿ ತಿನಿಸುಗಳಿಗಾಗಿ ಹಾತೊರೆವಂತೆ ಸಂಸಾರಿಗಳು ಮದುವೆ ಮಕ್ಕಳಿಗಾಗಿ ಹಪಾಪಿಸುತ್ತಾರೆ. ದುಡ್ಡಿಗಾಗಿ ಬಾಯಿ ಬಿಡುತ್ತಾರೆ.

ತೇ ಬುದ್ಧಿಃ ಯದಾ (ತತ್) ಕಲಿಲಂ ವ್ಯತಿತರಿಷ್ಯತಿ, ತದಾ ನಿರ್ವೇದಂ ಗಂತಾಸಿ ಶ್ರೋತವ್ಯಸ್ಯ ಚ ಶ್ರುತಸ್ಯಚಃ-

"ಅರ್ಜುನ, ನಿನ್ನ ಬುದ್ಧಿಯು ಈ ಮೋಹ ರಾಡಿಯಿಂದ ಪಾರಾಗಬೇಕು; ನಿನ್ನ ಹೃದಯದಿಂದ ಕಾಮಾದಿಗಳು ಕಾಲ್ದೆಗೆಯಬೇಕು, ಆತ್ಮ ಅನಾತ್ಮ ವಿವೇಕ ನಿನ್ನಲ್ಲಿ ಉದಿಸಬೇಕು. ಆಗ ಪ್ರಪಂಚ ವ್ಯಾಮೋಹ ವಿನಷ್ಟ. ಕೇಳಲಾದ ಕೇಳ ಬೇಕಾದ, ನೋಡಲಾದ, ನೋಡಬೇಕಾದ ಉಪಭುಕ್ತವಾದ ಉಪಭೋಗಿಸ ಬೇಕಾದ ಯಾವ ವಿಷಯವೂ ನಿನ್ನನ್ನು ಆಕರ್ಷಿಸಲಾರದು. ನೀನು ಸರ್ವ ಅನಾತ್ಮ ಪದಾರ್ಥಗಳಲ್ಲಿ ವೈರಾಗ್ಯ ತಾಳುವಿ! ನಿತ್ಯ ಸಾಕ್ಷಿಯಾದ ಆತ್ಮಪುರುಷ ನಲ್ಲಿ ಅಭಿರತಿ ಹೊಂದುವಿ!"

ವಿವರಣ:- ಆತ್ಮ:- ಆತ್ಮನು ನಿಗೂಢಗಳಲ್ಲಿ ನಿಗೂಢ; ಗಹನಕ್ಕೆ ಗಹನ. ಕಣ್ಣು ಅವನನ್ನು ಕಾಣದು. ಮನಸ್ಸು ನೆನೆಯದು. ಬುದ್ಧಿ ಚಾನಿಸದು. ಪ್ರತ್ಯಕ್ಷ ಅನುಮಾನ ಉಪಮಾನ 'ಪ್ರಮಾಣಗಳಿಗೆ ಅವನು ಅವಿಷಯ. ಏಕೆ? 'ಶಾಸ್ತ್ರಯೋನಿತ್ವಾತ್' ಕೇವಲ ಶಾಸ್ತ್ರ ಸಂವೇದ್ಯನಾದುದರಿಂದ (ಬ್ರಹ್ಮಸೂತ್ರ). ತಮ್ಮಲ್ಲಿ ತಾವು ಮುಳುಗಿದ ಋಷಿಗಳು ಅನುಭವ ಪ್ರಮಾಣದ ಸಹಾಯದಿಂದ ಆತ್ಮದರ್ಶನ ಪಡೆದರು; ಶಬ್ದಗಳಲ್ಲಿ ಆತ್ಮಸ್ವರೂಪ ವಿವರಿಸಿದರು. ಈ ಶಬ್ದ ಗಳೇ ಮಂತ್ರಗಳು; ಶಾಸ್ತ್ರಗಳು. ಈ ಶಾಸ್ತ್ರಗಳನ್ನು ಅರ್ಥವತ್ತಾಗಿ ಅರಗಿಸಿ ಕೊಂಡಾಗ ಸಾಧಕನೂ ಆತ್ಮನನ್ನು ಕಾಣಬಲ್ಲ.

ಆತ್ಮನು ನಿತ್ಯ ಹಾಗು ವಿಶ್ವದ ಅಂತಿಮ ಮಹಾನ್ ಸತ್ತೆಯಾದುದರಿಂದ ಅವನನ್ನು ತಿಳಿದಾಗ ತಿಳಿಯಬೇಕಾದುದೇನೂ ಉಳಿಯದು. "ಯೇನ ವಿಜ್ಞಾ ನೇನ ಸರ್ವಂ ವಿಜ್ಞಾತಂ ಭವತಿ" ಯಾವುದರ ತಿಳಿವಾದಾಗ ಸರ್ವವೂ ತಿಳಿ ಯಲ್ಪಡುವದೋ (ಅದು ಆತ್ಮ); ಎಂದಿತು ಶ್ರುತಿ. ಆತ್ಮ ಜ್ಞಾನಿಯು ಶಾಶ್ವತ ಆನಂದದ ರಸಾಸ್ವಾದನ ಮಾಡುತ್ತಾನೆ. ಆ ಭೋಗದ ಎದುರು ವಿಷಯ ಭೋಗದ ಕ್ಷಣಿಕ ಸುಖವು ಕ್ಷುದ್ರ, ಆದುದರಿಂದ ಮನೀಷಿಗೆ ಪ್ರಪಂಚದ ಬಗ್ಗೆ ಪೂರ್ಣವಿರಕ್ತಿ!

ಆತ್ಮ ವಿದ್ಯೆಗೆ ವ್ಯತಿರಿಕ್ತವಾದ ನೂರು ವಿದ್ಯೆ ಗಳಿಸಿದರೇನು? ಅದರಿಂದ ಆಗುವ ಲಾಭ ಅಪ್ರಯೋಜಕ. 'ಏನು ಕಲಿತರೇನು? ಯತ್ನದಲಿ ಏನು ಮಾಡಿ ದಡೇನು? ಸ್ವಾನುಭವ ಸುಜ್ಞಾನವಿಲ್ಲದಿರೆ ಕಾನನದ ಬೆಳದಿಂಗಳಂದದಿ ವ್ಯರ್ಥ.' 'ನೂರನೋದಿ ನೂರ ಕೇಳಿದರೇನು? ಆಶೆ ಹರಿಯದು, ರೋಷ ಬಿಡದು' ನಾರದ ಮಹರ್ಷಿ ನಾಲ್ಕುವೇದ, ಆರು ಉಪವೇದ, ಇತಿಹಾಸ ಪುರಾಣಗಳನ್ನು ಓದಿದ; ವ್ಯಾಕರಣ, ಶ್ರಾದ್ಧ ಕಲ್ಪ, ತರ್ಕಶಾಸ್ತ್ರ, ನೀತಿಶಾಸ್ತ್ರ, ಭೂತವಿದ್ಯೆ ಕ್ಷತ್ರವಿದ್ಯೆ, ನಕ್ಷತ್ರವಿದ್ಯೆ, ಹೀಗೆ ಹಲವಾರು ವಿದ್ಯೆಗಳನ್ನು ಕೈವಶಮಾಡಿಕೊಂಡ.

ಅವನ ಮನಸ್ಸಿಗೆ ಅದರಿಂದ ಸಮಾಧಾನ ದೊರೆಯಲಿಲ್ಲ. ಸನತ್ಕುಮಾರರನ್ನು ಕುರಿತು ಹೀಗೆ ಬಿನ್ನವಿಸಿದ; 'ಗುರುಗಳೆ' ನಾನು ಬರಿ ಶಾಬ್ದವೇದಿ, ಶೋಕದಿಂದ ತತ್ತರಿಸಿದ್ದೇನೆ. ನನ್ನನ್ನು ಕಾಪಾಡಿರಿ. ಶೋಕ-ವಿನಾಶಕ ಆತ್ಮಜ್ಞಾನ ಉಪದೇಶಿಸಿರಿ ' ಎಂದು.

ಲೌಕಿಕ ವಿದ್ಯೆಗಳು ಮೋಹ ಪ್ರಚೋದಕ. ನಮ್ಮ ಬುದ್ಧಿ ಅವುಗಳಿಂದ ದೂರಾಗಬೇಕು; ಆತ್ಮನತ್ತ ಹೊರಳಬೇಕು. ಆತ್ಮದರ್ಶನ ಪಡೆಯಬೇಕು. ಅದರಿಂದ ಮೋಹನಾಶ; ಚರಾಚರ ವಸ್ತು ಪ್ರಪಂಚದತ್ತ ಪರಮ ವಿರಕ್ತಿ! ಅದರಿಂದ ಪರಮಾನಂದ! ಆ ಪರಮಾನಂದ ಪಡೆವ ಅತುಲೇಚ್ಛೆ ಅರ್ಜುನನಿಗೆ, ಅದನ್ನು ತಿಳಿದ ಭಗವಂತನು ಆನಂದ ಪಡೆವ ವಿಧಾನ ಹೇಳುತ್ತಾನೆ.

ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।
ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥೫೩॥

**ಅರ್ಥ:**-ಯದಾ= ಯಾವಾಗ, ಶ್ರುತಿವಿಪ್ರತಿ ಪನ್ನಾ= (ನಾನಾ ಲೌಕಿಕ ವೈದಿಕ ಭೋಗಪರ)ಶ್ರುತಿ ಶ್ರವಣದಿಂದ ವಿಕ್ಷಿಪ್ತವಾದ, ತೇ ಬುದ್ಧಿಃ= ನಿನ್ನ ಬುದ್ಧಿಯು ಸಮಾಧೌ= ಪರಮಾತ್ಮನಲ್ಲಿ (ಸಮಾಧೀಯತೇ ಚಿತ್ತಂ ಅಸ್ಮಿನ್ ಇತಿ ಸಮಾಧಿಃ ಪರಮೇಶ್ವರಃ ತಸ್ಮಿನ್: ಚಿತ್ತವನ್ನು ಯಾವುದರಲ್ಲಿ ಲೀನ ಮಾಡಲಾಗುತ್ತದೆಯೋ ಅವನು ಸಮಾಧಿ; ಅರ್ಥಾತ್ ಪರಮೇಶ್ವರ. ಅವನಲ್ಲಿ) ನಿಶ್ಚಲಾ = (ಅಸಂಭಾವನಾ ವಿಪರೀತ ಭಾವನಾರಹಿತವಾಗಿ) ಅವಿಕಂಪಿತವಾಗಿ, ಅಚಲಾ= (ಲಯ, ಪ್ರಮಾದ ದೋಷ ರಹಿತವಾಗಿ) ಸುಸ್ಥಿರವಾಗಿ ಸ್ಥಾಸ್ಯತಿ ನಿಲ್ಲುವದೋ ತದಾ= ಆಗ ಯೋಗಂ= ಯೋಗವನ್ನು (ಯೋಗ ಫಲವಾದ ತತ್ತ್ವ ಜ್ಞಾನವನ್ನು ) ಅವಾಪ್ಸ್ಯಸಿ ಹೊಂದುವಿ.

**ವಿವರಣೆ:**- ಶ್ರುತಿ ವಿಪ್ರತಿಪನ್ನಾ ತೇ ಬುದ್ಧಿಃ :–ಶ್ರುತಿ ಎಂದರೆ ವೇದ. ವೇದಗಳ ಬಹುಭಾಗ ಇಹಪರ ಭೋಗ ವರ್ಣನೆಗೆ ಮೀಸಲಾಗಿದೆ, ಬ್ರಹ್ಮಚರ್ಯಾದಿ ಆಶ್ರಮ, ಬ್ರಾಹ್ಮಣಾದಿ ವರ್ಣಗಳ ಬಗ್ಗೆ ಕೂಲಂಕಷ ವಿವರಣೆ ಅದರಲ್ಲಿದೆ. " ಅಪುತ್ರಸ್ಯ ಗತಿರ್ನಾಸ್ತಿ " ಮಕ್ಕಳಿಲ್ಲದವರಿಗೆ ಗತಿ ಇಲ್ಲ. ಎಂಬಿತ್ಯಾದಿ ಅನೇಕ ಸಾಂಸಾರಿಕ ಮಾತುಗಳು ವೇದದ ತುಂಬ ಹರಡಿಕೊಂಡಿವೆ. ಇಂಥ ನುಡಿ ಕೇಳಿದ ಬುದ್ಧಿಯಲ್ಲಿ ಸಾವಿರಾರು ಆಶೆ-ಆಮಿಷಗಳೇಳುವವು. ಕಾಮ ಕ್ರೋಧ ಅಭಿಮಾನ ಹಾಗು ಮಾತ್ಸರ್ಯವೆಂಬ ಬಿರುಗಾಳಿಗೆ ಸಿಕ್ಕು ಆ ಬುದ್ಧಿ ಪ್ರಕ್ಷುಬ್ಧಗೊಳ್ಳುವದು. ಆದರ ವಿವೇಚನಾ ಸಾಮರ್ಥ್ಯ ಮಾಯವಾಗುವು. ಆತ್ಮಾನಾತ್ಮ ಪ್ರಜ್ಞೆ ಲಯಗೊಳ್ಳುವದು. ಜೀವ, ಜಗತ್ತು, ದೇವರು, ಜೀವನ, ಧ್ಯೇಯ ಮುಂತಾದವುಗಳ ಬಗ್ಗೆ ನೂರಾರು ಸಂಶಯಗಳೆದ್ದು ಆ ಬುದ್ಧಿ ವಿಕ್ಷಿಪ್ತಗೊಳ್ಳುವದು. ಅಂಥ ಬುದ್ಧಿಗೆ ' ಶ್ರುತಿ ವಿಪ್ರತಿಪನ್ನಾ ' ಅನ್ನುತ್ತಾರೆ.

ಇಂಥ ಶ್ರುತಿವಿಪ್ರತಿಪನ್ನರಿಗೆ ಎಲ್ಲಿ ಶಾಂತಿ? ಸದಾ ಚಂಚಲವಾಗಿರುವ ಅವರ ಮನಸ್ಸಿಗೆಲ್ಲಿ ವಿಶ್ರಾಮ? ಮನೋಗುಹೆಯಲ್ಲಿ ಅಡಗಿರುವ ದಿವ್ಯ ಆತ್ಮದರ್ಶನ ಅವರಿಗೆಂತು ಸಾಧ್ಯ? ಹೊರಗನ್ನು ನೋಡಿ ನಾಮರೂಪುಗಳಿಗೆ

ಷ್ಠಿತರಾಗುವ ಆ ಜನರಿಗೆ ನಾಮರೂಪಾಶ್ರಯವಸ್ತುವಿನ ಭಾವ ಬರುವದೆಂತು? ಜಾತಿ ವರ್ಣಾದಿಗಳ ಬಲೆಯಲ್ಲಿ ಬಹು ಬಂಧಿತರಾಗಿರುವ ಅವರಿಗೆ ಸರ್ವತಂತ್ರ ಸ್ವತಂತ್ರ ಅವಸ್ಥೆಯ ಅನುಭವ ಹೇಗೆ ಸಮನಿಸೀತು? ಆದುದರಿಂದ ಭಗವಂತನು ಅರ್ಜುನನಿಗೆ ಹೀಗೆ ಉಪದೇಶಿಸುತ್ತಾನೆ.

ಭಗವಂತ:- "ತೇ ಬುದ್ಧಿಃ ಯದಾ ನಿಶ್ಚಲಾ ಸ್ಥಾಸ್ಯತಿ ತದಾ ಯೋಗಂ ಅವಾಪ್ಸ್ಯಸಿ." ಪಾರ್ಥ, ನೀನು ಈ ಮುಂಚೆ ಅನೇಕರಿಂದ ಬಹು ಬಗೆಯ ಮಾತುಗಳನ್ನು ಕೇಳಿರುವೆ. ಇಹಪರಭೋಗ ಸಂಬಂಧದ ವೇದವಚನಗಳನ್ನು ಆಲಿಸಿರುವೆ. ಅದರಿಂದ ನಿನ್ನ ಬುದ್ಧಿ ವಿಕ್ಷಿಪ್ತವಾಗಿದೆ. ಬಂಧು ಬಾಂಧವರ ವರ್ಣ ಆಶ್ರಮಗಳ ವ್ಯಾಮೋಹದಿಂದ ಆವೃತವಾಗಿದೆ. ಹೀಗಿರುವಾಗ ನಿನ್ನ ಶೋಕ ಹೇಗೆ ನಿಂತೀತು?

"ಭಾರತ, ನಿನ್ನ ಬುದ್ಧಿ ಅಚಲವಾಗಲಿ. ಲಯ ಪ್ರಮಾದ ದೋಷಗಳಿಗೆ ಎಳ್ಳಷ್ಟೂ ಅವಕಾಶವನ್ನು ಕೊಡದಿರು. (ನೈರಂತರ್ಯಾದರಾಸತ್ಕಾರಾಸೇವಿತೋ ದೃಢಭೂಮಿರಭ್ಯಾಸಃ) ನಿರಂತರವಾಗಿ ಆದರದಿಂದ ಹಾಗು ಅಸತ್ಕಾರದಿಂದ ಆತ್ಮನನ್ನು ಸೇವಿಸು. ನಿನ್ನ ಬುದ್ಧಿಯು ಆತ್ಮನತ್ತ ಅವ್ಯಾಹತವಾಗಿ ಪ್ರವಹಿಸಲಿ, ಇದು ಅಭ್ಯಾಸ. ಇದರ ಬಲದಿಂದ ನಿನ್ನ ಮನ ಆತ್ಮನಲ್ಲಿ ಸ್ಥಿರಗೊಳ್ಳುವದು. ಅದೇ ಸಮಾಧಿ ಅವಸ್ಥೆ; ಪರಮ ಆತ್ಮನೇ ಸಮಾಧಿ ಸ್ಥಾನ.

"ಧನಂಜಯ, ಹೀಗೆ ಬಾಹ್ಯಜಗದಿಂದ ಪರಾವೃತ್ತವಾದ ಬುದ್ಧಿಯು ಪರಮಾತ್ಮನ ಆಕಾರಗೊಳ್ಳುವದಕ್ಕೆ ಸಾಧನಯೋಗವೆಂದು ನಾಮ. ಆ ಬುದ್ಧಿಗತ ಜೀವನು ಪರಮಾತ್ಮನಲ್ಲಿ ಸಮರಸಗೊಳ್ಳುವದಕ್ಕೆ ಯೋಗಫಲ ಎನ್ನುತ್ತಾರೆ. ನೀನು ಆ ಅಮರ ಯೋಗಫಲ ಪಡೆಯಲೇಬೇಕು. ಅದರಿಂದಲ್ಲದೆ ನಿನ್ನ ಶೋಕ ಹೇಗೆ ನಾಶವಾದೀತು?"

ಅರ್ಜುನ:- "ದೇವ, ಬಂಧುಬಾಂಧವರ ಮೋಹ ನನ್ನನ್ನು ಜರ್ಜರಿತಗೊಳಿಸಿದೆ; ಶೋಕ ನನ್ನನ್ನು ದಹಿಸುತ್ತಿದೆ. ನನ್ನ ಜೀವ ಹಿಂಡುವ ಈ ಶೋಕದಿಂದ ಮುಕ್ತಮಾಡು. ಪ್ರಭುವೆ, ವಿವರಿಸು; ಸ್ಥಿರಸೌಖ್ಯ ನೀಡುವ ಆ ಸಮಾಧಿ ಸಾಧನೆಯ ಬಗ್ಗೆ ವಿಶದವಾಗಿ ಅರುಹು. ನಾನು ಅತ್ಯಂತ ಕುತೂಹಲಿಯಾಗಿದ್ದೇನೆ."

ಅರ್ಜುನ ಉವಾಚ :

ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥೫೪॥

ಅರ್ಥ:- ಕೇಶವ =ಕೇಶಿ ರಾಕ್ಷಸ ಸಂಹಾರಕನೆ, ಸಮಾಧಿಸ್ಥಸ್ಯ ಸ್ಥಿತಪ್ರಜ್ಞಸ್ಯ= ಸಮಾಹಿತ ಸ್ಥಿತಪ್ರಜ್ಞನ ಭಾಷಾ ಕಾ= ಲಕ್ಷಣವೇನು? ಸ್ಥಿತ ಧೀಃ= ಉತ್ಥಾನಸ್ಥಿತಪ್ರಜ್ಞನು ಕಿಂ ಪ್ರಭಾಷೇತ= ಏನನ್ನು ಮಾತನಾಡುತ್ತಾನೆ (ಎಂಥ ವಿಚಾರ ವ್ಯಕ್ತಮಾಡುತ್ತಾನೆ) ಕಿಂ ಆಸೀತ

ಹೇಗೆ ಕುಳಿತುಕೊಳ್ಳುತ್ತಾನೆ? (ಹೇಗೆ ಜೀವಿಸುತ್ತಾನೆ) ಕಿಂ ವ್ರಜೇತ?=ಹೇಗೆ ನಡೆಯುತ್ತಾನೆ? (ಹೇಗೆ ವರ್ತಿಸುತ್ತಾನೆ?)

"ದೇವ, ಪ್ರಾಕೃತಿಕ ವಿಶ್ವವನ್ನು ದಾಟಿ ಪರಮಾತ್ಮನಲ್ಲಿ ಮನ ಮುಳುಗಿಸಿದ ಸಮಾಹಿತ ಸ್ಥಿತಪ್ರಜ್ಞನ ಲಕ್ಷಣಗಳೇನು? ಆ ಬ್ರಾಹ್ಮೀಸ್ಥಿತಿಯ ಅನುಪಮ ಅನುಭವ ಪಡೆದು ಉತ್ಥಾನನಾದ ಸ್ಥಿತಪ್ರಜ್ಞನು ಹೇಗೆ ಮಾತನಾಡುತ್ತಾನೆ? ಮಾತಿನಲ್ಲಿ ಎಂಥ ಭಾವ ತೋರುತ್ತಾನೆ? ಅವನು ಪ್ರಕಟ ಪಡಿಸುವ ವಿಚಾರಗಳು ಎಂಥವು? ಅವನು ಹೇಗೆ ಕುಳಿತುಕೊಳ್ಳುತ್ತಾನೆ? ಹೇಗೆ ಜೀವಿಸುತ್ತಾನೆ? ಅವನು ಲೋಕದಲ್ಲಿ ವ್ಯವಹರಿಸುವ ರೀತಿಯಾವುದು? ಸವಿಸ್ತರವಾಗಿ ವರ್ಣಿಸಲು ಬಿನ್ನಹ."

ಸಮಾಹಿತ ಅವಸ್ಥೆ ಪವಿತ್ರತಮ. ಅದು ಸಾಧನೆಯ ಧ್ಯೇಯ. ಸರ್ವಶಾಸ್ತ್ರಗಳ ಫಲ. ಅಲ್ಲಿ ಜೀವ-ದೇವರ ಭೇದವಿಲ್ಲ. ಕಾಲ ಕರ್ಮಗಳ ಸುಳಿವಿಲ್ಲ ಈ ಅವಸ್ಥೆ ತಲುಪಿದವ ಮಹಾತ್ಮ, ಸಂತ, ಋಷಿ! ಪತಿಯ ಎದುರಿನಲ್ಲಿ ಸತಿ ತಲೆ ತಗ್ಗಿಸುವಂತೆ ಆ ಸಂತನ ಎದುರು ಶಾಸ್ತ್ರಗಳು ಮೌನ! ದ್ವೈತಾದ್ವೈತ ತರ್ಕವು ನಿರ್ವಿತರ್ಕ!

ಅರ್ಜುನನು ತತ್ತ್ವಜ್ಞಾನ ಕ್ಷೇತ್ರದಲ್ಲಿ ಅರಿಯದ ಬಾಲಕ. ಅವನನ್ನು ಸಮಾಹಿತಗೊಳಿಸುವದು ಭಗವಂತನ ಇಚ್ಛೆ. ಅದಕ್ಕಾಗಿ ಗೀತೆಯ ತುಂಬ ಶ್ರೀಕೃಷ್ಣನ ಪ್ರಯತ್ನ ಸಾಗಿದೆ. ಐವತ್ತೈದನೆಯ ಮಂತ್ರದಲ್ಲಿ ಸಮಾಹಿತ ಸ್ಥಿತಪ್ರಜ್ಞನ ಲಕ್ಷಣಕಥನವಿದೆ. ಐವತ್ತಾರನೆಯ ಮಂತ್ರದಿಂದ ಈ ಅಧ್ಯಾಯದ ಅಂತ್ಯದವರೆಗೂ ಉತ್ಥಾನ ಸ್ಥಿತಪ್ರಜ್ಞನ ಬಣ್ಣನೆ ಇದೆ.

ಶ್ರೀ ಭಗವಾನುವಾಚ :

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥೫೫॥**

**ಅರ್ಥ:—** ಪಾರ್ಥ=ಅರ್ಜುನ, ಯದಾ=ಯಾವಾಗ, ಮನೋಗತಾನ್=ಮನಸ್ಸಿನಲ್ಲಿರುವ ಸರ್ವಾನ್ ಕಾಮಾನ್= (ಶುಭಾಶುಭ) ಸಕಲ ಕಾಮನೆಗಳನ್ನು ಪ್ರಜಹಾತಿ = ತ್ಯಾಗ ಮಾಡುವನೋ, (ಹಾಗು)ಆತ್ಮನಿ ಏವ=ತನ್ನಲ್ಲಿಯೇ, ಆತ್ಮನಾ ತುಷ್ಟಃ=ತನ್ನಿಂದ ಸಂತುಷ್ಟನಾಗುವನೋ, ತದಾ=ಆಗ ಸ್ಥಿತಪ್ರಜ್ಞಃ=ಸ್ಥಿತ ಪ್ರಜ್ಞನೆಂದು, ಉಚ್ಯತೇ=ಹೇಳಲ್ಪಡುತ್ತಾನೆ.

**ವಿವರಣೆ:—** ಸರ್ವಾನ್ ಕಾಮಾನ್:— ಮನದಲ್ಲಿ ಉದಿಸುವ ಕಾಮನೆಗಳು ಎರಡು ವಿಧ : ಅಶುಭ, ಶುಭ. ಅಶುಭವು ಮತ್ತೆ ಎರಡು ವಿಧ: ಇಹ, ಪರ. ಅವುಗಳ ಸಂಕ್ಷೇಪ ವಿವರ:

(೧) ಇಹ ಲೋಕ ಕಾಮನೆ:- ಇಹಲೋಕದ ಭೋಗ ವಿಷಯಗಳ ಇಚ್ಛೆ. ಉದಾ: ಪತ್ನಿ ಕಾಮನಾ, ಪುತ್ರ ಕಾಮನಾ, ಗೃಹ- ಕ್ಷೇತ್ರ ಕಾಮನಾ ಕಾಂಚನ-ಕೀರ್ತಿ ಕಾಮನಾ ಇತ್ಯಾದಿ.

(೨) ಪರಲೋಕ ಕಾಮನೆ:- ಇಹದಲ್ಲಿ ಯಾವುದಾದರು ರೀತಿಯಲ್ಲಿ ಧನ ಸಂಗ್ರಹಿಸಿ ಜ್ಯೋತಿಷ್ಟೋಮಾದಿ ಯಜ್ಞ ಆಚರಿಸಬೇಕು; ಪುಣ್ಯ ಸಂಚಯ ಮಾಡಿ ಸ್ವರ್ಗೀಯ ಭೋಗೈಶ್ವರ್ಯ ಉಪಯೋಗಿಸಬೇಕು ಎಂಬ ಕಾಮನೆ.

ಶುಭ ಕಾಮನೆಯಲ್ಲೂ ಎರಡು ವಿಧ:

೧) ದುರಿತ ಪರಿಹಾರ ಕಾಮನೆ:- ಬಾಹ್ಯಾಂತರ ಪೂಜೆಯಿಂದ ಪಾಪ ಕಳೆದುಕೊಂಡು ಪರಿಶುದ್ಧನಾಗಬೇಕೆಂಬ ಪ್ರಬಲ ಇಚ್ಛೆ.

ಆತ್ಮ ಕಾಮನೆ:- ಆತ್ಮ ಶಕ್ತಿ. ಆತ್ಮನು ಜ್ಞಾನ ದೀಪ. ಜಾಗ್ರಾದಿ ಅವಸ್ಥೆಗಳ ಮೇಲೆ ಸಾಕ್ಷಿಯಾಗಿ ಪ್ರಕಾಶಿಸುವ ಸತ್ಯ ಸೂರ್ಯ. ವಿಶ್ವ, ತೈಜಸ ಪ್ರಾಜ್ಞ ಜೀವರಿಗೆ ವಿಲಕ್ಷಣನಾದ ಅನಂತ ಚೇತನ. ಜಾಗ್ರ, ಸ್ವಪ್ನ, ಸುಪ್ತಿ ಸೃಷ್ಟಿಗಳ ಭಾವಾಭಾವಗಳನ್ನು ಗುರುತಿಸುವವನು ಪ್ರತ್ಯಗಾತ್ಮ! ಅವನನ್ನು ತನ್ನ ಆತ್ಮ ಸ್ವರೂಪನೆಂದು ಪ್ರೀತಿಸುವುದು ಆತ್ಮ ಕಾಮನಾ.

ಭಗವಂತ:- ಅರ್ಜುನ ಈ ನಾಲ್ಕೂ ಕಾಮನೆಗಳು ಹೃದ್ಗತ. ಇವುಗಳನ್ನು ತೊರೆದು ಮನಸ್ಸು ಧ್ಯೇಯ ಪ್ರತ್ಯಗಾತ್ಮನಲ್ಲಿ ಒಂದಾದಾಗ ಮನೋಗತ ಜೀವ ಚೇತನವು (ದೃಷ್ಟಾ) ಪರಬ್ರಹ್ಮ ಚೈತನ್ಯದಲ್ಲಿ ( ಸ್ವರೂಪೇ) ಏಕರಸ ( ಅವಸ್ಥಾನಂ ) ವಾಗುವುದು. ಆಗ ಜೀವ ಬಯಲು; ಬುದ್ಧಿ ಭಾವಗಳು ಬಯಲು: ಕೇವಲ ಅವಿಕಂಪಿತ ಅಮೋಘ ಶಾಂತಿ! ನೀರಿನಲ್ಲಿ ನೀರು, ಅಗ್ನಿಯಲ್ಲಿ ಅಗ್ನಿ, ವಾಯುವಿನಲ್ಲಿ ವಾಯು ಬೆರತಂತೆ ತನ್ನ ಮೂಲ ಸ್ವರೂಪದಲ್ಲಿ ತಾನು ಬೆರೆತು ಸಂತುಷ್ಟನಾದ ಸಂತನೆ ಸಮಾಹಿತ ಸ್ಥಿತಪ್ರಜ್ಞ"

ವಿವರಣೆ:- ಸಮಾಹಿತ ಸ್ಥಿತಪ್ರಜ್ಞಾವಸ್ಥೆಯ ಹಿರಿಮೆ ಗರಿಮೆಗಳನ್ನು ತಿಳಿಯ ಬೇಕಾದರೆ ಸಾಧನೆ- ಶ್ರೇಣಿಯ ಸ್ಥೂಲ ಜ್ಞಾನ ಬೇಕು. ಪಾರಿಭಾಷಿಕ ಭಾಷೆಯಲ್ಲಿ ಈ ಸಾಧನ ಶ್ರೇಣಿಗೆ ಸಪ್ತ ಭೂಮಿಕಾ ಪ್ರಕರಣವೆನ್ನುತ್ತಾರೆ.

೧) ಸುಖೇಚ್ಛಾ:- ವೈಷಯಿಕ ಕಪಟ ಸುಖಗಳಿಗೆ ಬೇಸತ್ತು ಜೀವನು ಅಳಿಯದ ಪವಿತ್ರ ಸುಖಕ್ಕಾಗಿ ಹಾತೊರೆಯುತ್ತಾನೆ. (೨) ವಿಚಾರಣಾ:- ಅವನು ಗುರುವಿನ ಸಾನಿಧ್ಯ ಸೇರಿ ಆತ್ಮ ಅನಾತ್ಮಗಳ ವಿಚಾರಣೆಗೆ ತೊಡಗುತ್ತಾನೆ. (೩) ತನುಮಾನಸ:- ಗುರುವಿನ ಮಾರ್ಗದರ್ಶನದಂತೆ ಮನೋಗತ ಕಾಮನೆಗಳನ್ನು ತೊಳೆದುಹಾಕಿ ಮನಸ್ಸನ್ನು ಬಹು ಸೂಕ್ಷ್ಮಗೊಳಿಸುತ್ತಾನೆ. ( ಈ ಮೂರು ಭೂಮಿಕೆಗಳು ಅಭ್ಯಾಸಕ್ಕೆ ಸಂಬಂಧಪಟ್ಟಿವೆ.)

೪) ಸತ್ವಾಪತ್ತಿ:- ಸಾಧಕನ ವಿಮಲ ಮನದಲ್ಲಿ ಪರಮಾತ್ಮನ ಸತ್-ಪ್ರಕಾಶವು ಜಾಜ್ವಲ್ಯಮಾನವಾಗಿ ಪ್ರತಿಬಿಂಬಿಸುತ್ತದೆ. ( ಇದು ಆತ್ಮಸಾಕ್ಷಾತ್ಕಾರ ಭೂಮಿಕೆ. ) ೫) ಅಸಂಸಕ್ತಿ:- ಸಾಧಕನ ಮನಸ್ಸು ಆತ್ಮಾನಂದದ ನಿಬ್ಬೆರಗಿನಲ್ಲಿ ರಮಿಸುತ್ತದೆ. ಅವನಿಗೆ ಬಾಹ್ಯ ಪ್ರಪಂಚದ ಭಾವವಿಲ್ಲ. ( ಇದು

ಸಮಾಹಿತ ಅವಸ್ಥೆ. ಈ ಭೂಮಿಕೆಯವನು ತನ್ನಿಂದ ತಾನೇ ಉತ್ಥಾನನಾಗುತ್ತಾನೆ). ೬) ಪದಾರ್ಥಾಭಾವನೆ:- ಆತ್ಮಸ್ವರೂಪದಲ್ಲಿ ಬಹುಗಾಢವಾಗಿ ಸಾಮರಸ್ಯ ಹೊಂದಿದ ಸಮಾಹಿತಾವಸ್ಥೆ. ಈ ಅವಸ್ಥೆ ಪಡೆದ ಸಮಾಹಿತನು ಭಕ್ತರ, ಶಿಷ್ಯರ ಆಗ್ರಹದಿಂದ ಉತ್ಥಾನನಾಗುತ್ತಾನೆ. (ಐದು, ಆರನೆಯ ಭೂಮಿಕೆಯುವರಿಬ್ಬರೂ ಉತ್ಥಾನಸ್ಥಿತಪ್ರಜ್ಞರು. ಐವತ್ತಾರನೆಯ ಮಂತ್ರದಿಂದ ಈ ಅಧ್ಯಾಯದ ಕೊನೆಯುವರೆಗೆ ಇವರ ಸ್ತುತಿ ಇದೆ.) ೭) ತುರಿಯ:- ಸಮಾಹಿತನು ದೇವನಲ್ಲಿ ಪೂರ್ಣವಿಲೀನ, ಎಂದಿಗೂ ಉತ್ಥಾನಗೊಳ್ಳುವದಿಲ್ಲ. ಅವನ ದೇಹ ಸಂರಕ್ಷಣ ಎಳೆಯ ಶಿಶುವಿನಂತೆ. ಅವನೇ ಈಗ ಸಮಾಹಿತ ಸ್ಥಿತಪ್ರಜ್ಞನು ಐವತ್ತೈದನೆಯ ಮಂತ್ರ ಅವನನ್ನು ಕೊಂಡಾಡಿದೆ.

ಮೊದಲಿನ ಮೂರು ಭೂಮಿಕೆ ಸಾಧಿಸಿದ ಅಭ್ಯಾಸಿಯು ಇಹಪರ ಕಾಮನೆಗಳನ್ನು ತ್ಯಜಿಸಿ ಬಾಹ್ಯಾಂತರ ಅರ್ಜನೆಗೆ ತೊಡಗಿದ್ದಾನೆ. ಅವನಲ್ಲಿ ಆತ್ಮಕಾಮನೆ ಅಂಕುರಿಸಿದೆ. ನಾಲ್ಕು ಐದನೆಯ ಭೂಮಿಕೆಯವರಲ್ಲಿ ಆತ್ಮಕಾಮನೆ ಬಲಿಯುತ್ತಿದೆ. ಆರನೆಯವನಲ್ಲಿ ಅದು ಪರಿಪಕ್ವವಾಗಿದೆ, ಏಳನೆಯ ಭೂಮಿಕೆಯ ಸಮಾಹಿತನಲ್ಲಿ ಮಾತ್ರ ಆತ್ಮಕಾಮನೆ ಕೂಡ ಶಾಂತ. ಸಮಾಹಿತ ಸ್ಥಿತಪ್ರಜ್ಞನ ಕುರಿತು ಬೃಹದಾರಣ್ಯ ಉಪನಿಷತ್ತು ಇಂತು ಹೇಳಿದೆ:

"ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿಶ್ರಿತಾಃ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ॥" ೪-೪-೭

ಈ ಯೋಗಿಯು(ಸಾಧಕನ)ಹೃದಯದಲ್ಲಿ ನೆಲೆಸಿರುವ ಸಕಲ ಕಾಮನೆಗಳು ಯಾವಾಗ ಕಳಚಿ ಬೀಳುವವೋ ಆಗ ಅವನು ಅಮೃತನಾಗುತ್ತಾನೆ. ಬ್ರಹ್ಮನೊಂದಿಗೆ ಸಮರಸನಾಗುತ್ತಾನೆ.

ಮುಂದಿನ ಮಂತ್ರಗಳಲ್ಲಿ ಉತ್ಥಾನ ಸ್ಥಿತಪ್ರಜ್ಞನ ಬಗ್ಗೆ ಹೇಳಲಾಗುವದು.

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥೫೬॥**

**ಅರ್ಥ:-** ದುಃಖೇಷು= ದುಃಖಗಳಲ್ಲಿ ಅನುದ್ವಿಗ್ನಮನಾಃ = ಉದ್ವೇಗವಿಲ್ಲದ ಮನಸ್ಸುಳ್ಳವನೂ (ಅಕ್ಷುಭಿತಂ ಮನೋ ಯಸ್ಯ ಸಃ ಅನುದ್ವಿಗ್ನಮನಾಃ =ಯಾವನ ಮನ ಕ್ಷೋಭೆಯಾಗಿಲ್ಲವೋ ಅವನು)ಸುಖೇಷು ವಿಗತಸ್ಪೃಹಃ= ಸುಖಗಳಲ್ಲಿ ಸ್ಪೃಹೆ ಇಲ್ಲದವನೂ (ಆದ) ಮುನಿಃ=ಮುನಿಯು ಸ್ಥಿತಧೀಃ=ಸ್ಥಿತಪ್ರಜ್ಞನೆಂದು ಉಚ್ಯತೇ=ಹೇಳಿಸಿಕೊಳ್ಳುತ್ತಾನೆ.

**ವಿವರಣೆ:-** "ಉತ್ಪನ್ನಾತ್ಮಪ್ರಬೋಧಸ್ಯ ಹ್ಯದ್ವೇಷ್ಟೃತ್ವಾದಯೋ ಗುಣಾಃ।
ಭವಂತ್ಯಯತ್ನತಸ್ತಸ್ಯ ನ ತು ಸಾಧಕರೂಪಿಣಃ ॥"

ಆತ್ಮಜ್ಞಾನ ಸಂಜನಿಸಿದ ಸ್ಥಿತಪ್ರಜ್ಞ ಮಹಾತ್ಮನಲ್ಲಿ ಅದ್ವೇಷ್ಟಾ ಮೈತ್ರಿ ಕರುಣಾ ಮುಂತಾದ ದೈವೀ ಗುಣಗಳು ಅಪ್ರಯತ್ನತಃ ಪ್ರಕಟವಾಗುತ್ತವೆ. ಸಾಧಕರಿಗೆ ಹಾಗಲ್ಲ. ಈ ಋಷಿ ನಿರೂಪಿಸುವಂತೆ, ಸಮಾಧಿ ಪುರುಷನು

ಸಾಧಿಸಬೇಕಾದುದೇನೂ ಇಲ್ಲ. ಅವರು ಪರಿಪೂರ್ಣರು. ಅವರ ಜೀವನ ಕಂಡು ಸಾಧಕರು ಪ್ರಯತ್ನಪೂರ್ವಕ ಸದ್ಗುಣ ಪಡೆಯಬೇಕು; ಅವರಂತೆ ತಾವೂ ಅರಿತು ಅನುಭವಿಗಳಾಗಬೇಕು. ಈ ಉದ್ದೇಶದಿಂದಲೇ ಸಮಾಹಿತ ಹಾಗು ಉತ್ಥಾನ ಸ್ಥಿತಪ್ರಜ್ಞರ ಉಪದೇಶ ಇಲ್ಲಿ ಸಾಗುತ್ತಿದೆ.

ಹಿಂದಿನ ಮಂತ್ರದಲ್ಲಿ ಸಮಾಹಿತ ಸ್ಥಿತಪ್ರಜ್ಞನ ಬಗ್ಗೆ ತಿಳಿದುಕೊಂಡೆವು. ಇನ್ನು ಮೇಲೆ ಉತ್ಥಾನ ಸ್ಥಿತಪ್ರಜ್ಞನ ಚಾರಿತ್ರ್ಯ ಅರಿಯುವಾ.

ಸಮಾಹಿತ ಅವಸ್ಥೆಯಿಂದ ವ್ಯಾವಹಾರಿಕ ಪ್ರಜ್ಞಾಸ್ಥರಕ್ಕೆ ಅವತರಿಸಿದ ಯೋಗಿಯೇ ಉತ್ಥಾನ ಸ್ಥಿತಧೀ. ಇವನ ಮನ ಬುದ್ಧಿಗಳು ಪ್ರಸಾದೀಕೃತ. ಇವನ ಅಂಗ ಅಂಗಗಳಲ್ಲೆಲ್ಲ ಲಿಂಗ ನೆಲೆಸಿವೆ. ಇವನ ದೇಹ ದೇವನಿಲಯ. ಇಂಥ ಉತ್ಥಾನ ಸ್ಥಿತಪ್ರಜ್ಞನ ಬಗ್ಗೆ ಅರ್ಜುನ ಮೂರು ಪ್ರಶ್ನೆ ಕೇಳಿದ: [೧]. ಕಿಂ ಪ್ರಭಾಷೇತ [೨] ಕಿಂ ಆಸೀತ [೩] ಕಿಂ ವ್ರಜೇತ. ಮೊದಲನೆಯ ಪ್ರಶ್ನೆಯ ಉತ್ತರ ಈ ಮಂತ್ರದಲ್ಲಿದೆ.

ಸ್ಥಿತಪ್ರಜ್ಞನ ಬಗ್ಗೆ ಉಪದೇಶಿಸುವ ವ್ಯಕ್ತಿ ಸಾಮಾನ್ಯನಲ್ಲ. ಅವನೊಬ್ಬ ಮಹಾತ್ಮ. ಅವನೂ ಮಹತ್ಸಾಧನೆ ಮಾಡಿ ಅನುಭವತಃ ಹೇಳುವವರೂ, ಪರಿಸರ ಮರೆತು ಬೋಧ ವಿಷಯದಲ್ಲಿ ಪೂರ್ಣ ಬೆರೆತು ಕೇಳುವವರೂ ಸ್ಥಿತ ಪ್ರಜ್ಞರೇ.

ಉತ್ಥಾನ ಸ್ಥಿತ ಪ್ರಜ್ಞನ ಗುಣವರ್ಣನೆ.

೧) ದುಃಖೇಷು ಅನುದ್ವಿಗ್ನ ಮನಾಃ ಸುಖೇಷು ವಿಗತಸ್ಪೃಹಃ:– ಬದುಕಿನಾದ್ಯಂತ ಸಾಮಾನ್ಯ ಜೀವಿಗಳು ಅನುಭವಿಸುವ ದುಃಖ ಮತ್ತು ಸುಖ ಮೂರು ಮೂರು ತೆರ.

ಅ) ಆಧ್ಯಾತ್ಮಿಕ ದುಃಖ:– ದೈಹಿಕ ಹಾಗು ಮಾನಸಿಕ ತೊಂದರೆಗಳು. ಉದಾ: ಜ್ವರ, ಕ್ಷಯ, ಏಡಿಗ್ರಂಥಿ ಇತ್ಯಾದಿ ರೋಗಗಳು, ಹಸಿವು ತೃಷೆಗಳು ದೈಹಿಕ. ಕಾಮಾದಿ ವಿಕಾರಗಳು ಮಾನಸಿಕ.

ಬ) ಆಧಿದೈವಿಕ ದುಃಖ:– ಅತಿ ಶೀತ, ಅತಿ ಉಷ್ಣ, ತಿವೃಷ್ಟಿ, ಅನಾವೃಷ್ಟಿ, ಭೂಕಂಪ, ಜ್ವಾಲಾಮುಖಿ ಮುಂತಾದ ನಿಸರ್ಗದಿಂದುಂಟಾಗುವ ತೊಂದರೆಗಳು.

ಕ) ಆಧಿಭೌತಿಕ ದುಃಖ:- ಹುಲಿ, ಕರಡಿ, ಸಿಂಹ, ನಾಯಿ, ನರಿ, ತಗಣಿ, ಕ್ರಿಮಿ ಕೀಟಕಗಳಿಂದ ಉಂಟಾಗುವ ತೊಂದರೆಗಳು.

ಅ) ಆಧ್ಯಾತಿಕ ಸುಖ:– ಶಾರೀರಿಕ ಆರೋಗ್ಯ ಮತ್ತು ಮಾನಸಿಕ ನೆಮ್ಮದಿಗಳಿಂದ ಉಂಟಾಗುವ ಸಂತಸ.

ಬ) ಆಧಿಭೌತಿಕ ಸುಖ:- ಆಕಳು, ಎಮ್ಮೆ, ಕುದುರೆ, ಆನೆ ಮುಂತಾದ ಸಾಧು ಪ್ರಾಣಿಗಳಿಂದ ಒದಗುವ ಸುಖ.

ಕ) ಆಧಿದೈವಿಕ ಸುಖ:- ಅನುಕೂಲದ ಮಳೆ ಬೆಳೆ; ಹಿತವಾದಗಾಳಿ ಬಿಸಿಲು; ಕನಕ ಕಾಂಚನ ಪ್ರಾಪ್ತಿ; ಇವುಗಳಿಂದ ದೊರೆಯುವ ಆನಂದ.

ಉತ್ಥಾನ ಸ್ಥಿತಪ್ರಜ್ಞನು ವಿಮಲ ಮನಸ್ಸಿನ ಯೋಗಿ; ಆತ್ಮಾನಂದದ ನಿಬ್ಬೆರಗಿನಲ್ಲಿ ವಿರಮಿಸಿದ ಪರಮಪುರುಷ. ಆ ಅಮರ ಸುಖದ ನೆನಹು ಅವನ ಚಿತ್ತದಲ್ಲಿ ಸ್ಥಿರವಾಗಿ ಉಳಿದಿದೆ; ಆದುದರಿಂದ, ಈ ತ್ರಿವಿಧ ದುಃಖಗಳು ಬಂದರೆ ಅವನು ಕ್ಷೋಭೆಗೊಳ್ಳುವದಿಲ್ಲ; ತ್ರಿವಿಧ ಸುಖಗಳು ಬಂದರೆ ಹರ್ಷಾವಿಷ್ಟನಾಗುವದಿಲ್ಲ. ರೋಗ ರುಜಿನಗಳಿಗೆ, ವ್ಯಸನ ವ್ಯಥೆಗಳಿಗೆ, ಹಾನಿ ಹಳಿವುಗಳಿಗೆ, ಅಹಿತ ಅನ್ಯಾಯಗಳಿಗೆ ಅವನು ಉದಾಸೀನ! ಲಾಭ, ಜಯ, ಮಾನ, ಸ್ಥಾನ, ಕೀರ್ತಿ, ಪ್ರಶಂಸೆಗಳಲ್ಲಿ ಅನಾಸಕ್ತ! ಅವನ ದೃಷ್ಟಿಯಲ್ಲಿ ಅವೆರಡೂ ಸಮ!

೨) ವೀತರಾಗಭಯಕ್ರೋಧಃ :–ಸಂಸಾರ ಯಾವಾಗಲು ಅನುಕೂಲವಾಗಿರಬೇಕೆಂಬ ಆಶೆಯು ರಾಗ. ತಾನಿರದಿರೆ ಪ್ರಪಂಚ ಕೆಟ್ಟೀತಲ್ಲ ಎಂಬ ಮನೋದುಗುಡವು ಭಯ. ತಾನು ಗಳಿಸಿದ ಸಂಪದಕ್ಕೆ ಪ್ರತಿಬಂಧಕ ತಂದೊಡ್ಡುವವರ ಬಗೆಗೆ ಉದಿಸುವ ದ್ವೇಷವು ಕ್ರೋಧ.

ಸ್ಥಿತಪ್ರಜ್ಞ ಆತ್ಮಾನುರಾಗಿ. ಅಖಂಡ ಸತ್ತು, ಪರಿಪೂರ್ಣಜ್ಞಾನ ಹಾಗು ಅವಿರಳ ಆನಂದಗಳು ಅವನ ಅಮರ ಸಂಪತ್ತು. ಆದುದರಿಂದ ಈ ಲೌಕಿಕ ವಿಷಯಗಳಲ್ಲಿ ಅವನಿಗೆ ರಾಗವಿಲ್ಲ; ಇವು ನಾಶವಾದಾವಲ್ಲ ಎಂಬ ಭೀತಿಯಿಲ್ಲ; ಇವುಗಳಿಗಾಗಿ ಅವನೆಂದೂ ಕ್ರುದ್ಧನಾಗುವದಿಲ್ಲ! ಅವನು ವಿಶ್ವಪ್ರೇಮಿ! ಜನ್ಮ ಮರಣ ಭಾವವಿರಹಿತ ನಿರ್ಭೀತ! ಅಜಾತ ಶತ್ರು!

೩) ಸ್ಥಿತಧೀಃ ಮುನಿಃ ಉಚ್ಯತೇ:– ಅಂಥ ಸ್ಥಿತಧೀಯು ಮುನಿಯಾಗಿದ್ದಾನೆ. ಅವನ ಮಾತು, ವಿಚಾರ ಹಾಗು ಭಾವಗಳಲ್ಲಿ ಸಮತೆ ಹಾಗು ಸಂತೋಷ ನೆಲೆಸಿವೆ. ಅವನು ನುಡಿದರೆ ನುಡಿಯೆಲ್ಲ ಮಂತ್ರ; ಅವನು ತೋರುವ ಭಾವ ಆನಂದಭರಿತ! ಅವನು ಹೊರಹೊಮ್ಮಿಸುವ ವಿಚಾರ ದೈವಿಕ!!

ಸಾಧಕನು ಉತ್ಥಾನ ಸ್ಥಿತಪ್ರಜ್ಞನ ಜೀವನವನ್ನು ಯಥಾವತ್ತಾಗಿ ನಿರೀಕ್ಷಿಸಬೇಕು. ಅವನಂತೆಯೇ ತಾನೂ ದುಃಖಗಳನ್ನು ಉದಾಸೀನಭಾವದಿಂದ, ಸುಖಗಳನ್ನು ನಿಸ್ಪೃಹವೃತ್ತಿಯಿಂದ ಬರಮಾಡಿಕೊಳ್ಳಬೇಕು.ಪ್ರಪಂಚದಲ್ಲಿ ವಿರಕ್ತಿ ತಾಳಿ, ಮರಣ ವಿಷಯದಲ್ಲಿ ನಿರ್ಭೀಕನಾಗಿ ಬದುಕಬೇಕು. ಯಾರ ಬಗ್ಗೆಯೂ ದ್ವೇಷ, ವೈರ, ಹೇಯಬುದ್ಧಿ ತಾಳದೆ ವಿಶ್ವಪ್ರೇಮಿಯಾಗಲು ಹೆಣಗಬೇಕು.

ಮುಂದಿನ ಮಂತ್ರದಲ್ಲಿ ಇದೇ ವಿಷಯ ( ಕಿಂ ಪ್ರಭಾಷೇತ ಎಂಬ ಪ್ರಶ್ನೆಯ ಉತ್ತರ ) ಮುಂದೆ ಸಾಗಿದೆ.

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೫೭॥**

**ಅರ್ಥ:**– ಯಃ = ಯಾವನು, ಸರ್ವತ್ರ ಅನಭಿಸ್ನೇಹಃ = ಸರ್ವ ವಸ್ತುಗಳಲ್ಲಿ ಆಸಕ್ತಿರಹಿತನಾಗಿ, ತತ್‌ತತ್ ಶುಭಾಶುಭಂ ಪ್ರಾಪ್ಯ = ಆಯಾ ಪ್ರಿಯ ಅಪ್ರಿಯ ವಿಷಯ ಗಳನ್ನು ಪಡೆದು, ನ ಅಭಿನಂದತಿ=ಸಂತೋಷಿಸುವದಿಲ್ಲವೋ, ನ ದ್ವೇಷ್ಟಿ =ದ್ವೇಷಿಸುವದಿಲ್ಲವೋ ತಸ್ಯ= ಅವನ ಪ್ರಜ್ಞಾ ಪ್ರತಿಷ್ಠಿತಾ= ಪ್ರಜ್ಞೆಯು ಸ್ಥಿರವಾಗಿದೆ.

**ವಿವರಣೆ:- ಸರ್ವತ್ರ:**– ಶುಭಾಶುಭ:- ಮನೆ ಮಾರು ಮಡದಿ ಮಕ್ಕಳು ಧನ ಮಾನ ಕೀರ್ತಿಗಳು ದೊರೆತರೆ ಶುಭ. ಕಟ್ಟಿದ ಮನೆ ಬಿದ್ದರೆ, ನೆಚ್ಚಿದ ಮಡದಿ ತೀರಿದರೆ, ಪ್ರೀತಿಯ ಮಕ್ಕಳು ನಡತೆಗೆಟ್ಟರೆ, ದೊರೆತ ಧನ ಹಾಳಾದರೆ, ಪಡೆದ ಮಾನ ಕೀರ್ತಿಗಳು ಮಾಸಿದರೆ ಅಶುಭ. ಜೀವನವೆಂದರೆ ಶುಭಾಶುಭಗಳಸಮ್ಮಿಶ್ರ. ಬರೀ ಶುಭ, ಬರೀ ಅಶುಭ ಎಂದಿಗೂ ದೊರೆಯುವು. ನಮ್ಮ ಒಂದು ಕ್ಷಣ ಸಮೃದ್ಧಿಯದು, ಇನ್ನೊಂದು ಕ್ಷಣ ದುರ್ಭಿಕ್ಷೆಯದು! ನಿನ್ನೆ ಎತ್ತರದ ಮಹಲಿ ನಲ್ಲಿ ಹಂಸತೂಲಿಕಾತಲ್ಪದ ಮೇಲೆ ಮಲಗಿದ ಧನಿಕ ಇಂದು ಅದೇ ಮನೆಯ ಎದುರು ತಿರುಪೆ ಬೇಡುತ್ತಾನೆ. ಇದು ವಿಶ್ವದ ನಿಯತಿ! ಯಾರೂ ಬದಲಿಸರು!

ಪ್ರಾರಬ್ಧಾನುಸಾರ ಸ್ಥಿತಪ್ರಜ್ಞನಿಗೂ ಶುಭಾಶುಭ ಪ್ರಸಂಗಗಳು ಒದಗು ತ್ತವೆ. ಆದರೆ ಆವನು ಶಿವನಸರಿತ ಸಂತ; ಅಹಂ ಭಾವವಿಲ್ಲದ ಋಷಿ; ಶುಭದ ಸುಖವಾಗಲಿ, ಅಶುಭದ ದುಃಖವಾಗಲಿ ಅವನಿಗೆ ಸ್ಪರ್ಶಿಸದು. ಅವನು ಜಂಜಡ ಮಯ ಪ್ರಪಂಚದಲ್ಲಿರುವಾಗಲೇ ತನ್ನ ಮನಸ್ಸನ್ನು ಸಹಜವಾಗಿ ಆತ್ಮನತ್ತ ಹರಿ ಸುತ್ತಾನೆ! ಆತ್ಮಾನಂದ ಊಟಿ ಸುಖಿಸುತ್ತಾನೆ. ಅವನ ಹೊರ ಪ್ರಪಂಚ ನಾಟ ಕೀಯ; ನೋಟಕ್ಕೆ ಮಾತ್ರ. ಮಕ್ಕಳ ಆಟವನ್ನಿಲ್ಲಿ ನೆನೆಸಿಕೊಳ್ಳಬಹುದು. ಆಟದ ಕಾಲದಲ್ಲಿ ಗಂಡ, ಹೆಂಡತಿಯರಾಗಿ ವರ್ತಿಸುವ ಅವರು ಆಟ ಮುಗಿದಾಗ ತಾವು ತಾವೇ. ಹಾಗೆ, ಸಂತನ ಪ್ರಪಂಚ. ಅವನು ಪತಿಯಾಗಿರಬಹುದು; ಪಿತನಾಗಿರ ಬಹುದು ಇಲ್ಲವೆ ಬಂಧುವಾಗಿರಬಹುದು. ಆ ಭಾವಗಳು ತೋರಿಕೆಗಾಗಿ. ತನ್ನಲ್ಲಿ ತಾನು ಮಾತ್ರ ನಿರಂಜನ!

ಒಂದು ಕಥೆ ಹೀಗಿದೆ. ರಾಜ ಸಾಯುತ್ತಾನೆ; ಪಟ್ಟದ ಆನೆ ಒಬ್ಬ ಸಂತನ ಕೊರಳಿಗೆ ಮಾಲೆ ಹಾಕುತ್ತದೆ. ಜನ ಬಹು ಬಗೆಯಿಂದ ಪ್ರಾರ್ಥಿಸಿ ಅವನನ್ನು ರಾಜ ಸಿಂಹಾಸನದ ಮೇಲೆ ಕೂಡ್ರಿಸುತ್ತಾರೆ. ಸಂತ ತನ್ನ ಕೈಪ, ದಂಡ, ಕಮಂಡ ಲಗಳನ್ನು ಸಿಂಹಾಸನದ ಮಗ್ಗುಲದಲ್ಲಿ ಭದ್ರಪಡಿಸಿಟ್ಟುಕೊಳ್ಳುತ್ತಾನೆ. ಅನಾ ಸಕ್ತನಾದ ಸಂತನ ರಾಜ್ಯದಲ್ಲಿ ನ್ಯಾಯ, ಪ್ರಾಮಾಣಿಕತೆ ಹಾಗು ಶಾಂತಿ ನೆಲೆಸು ತ್ತವೆ. ಜನ ಬಹು ಸಂತೋಷ ಪಡುತ್ತಾರೆ. ಪರಕೀಯ ರಾಜನೊಮ್ಮೆ ಮುತ್ತಿಗೆ ಹಾಕುತ್ತಾನೆ. ಈ ಸಮಾಚಾರ ಕೇಳಿದ ಸಂತರಾಜನು, "ಆಳುವೆನೆಂದು ಬಂದವ ಆಳಿಕೊಳ್ಳಲಿ" ಎಂದು ನುಡಿದು, ತನ್ನ ಹಳೆಯ ಕೈಪ ಕಮಂಡಲ ದಂಡಧಾರಿ ಯಾಗಿ ವೈರಿಗಳ ಮಧ್ಯ ನಡೆದು ಹೋಗುತ್ತಾನೆ. ಸಂತ-ರಾಜನ ನಿಸ್ಪೃಹತೆ

ಕಂಡು ಪರಕೀಯ ರಾಜ ವಂದಿಸಿ, ಪಶ್ಚಾತ್ತಾಪ ವ್ಯಕ್ತಪಡಿಸುತ್ತಾನೆ. ಕ್ಷಮೆ ಯಾಚಿಸಿ ತನ್ನ ರಾಜ್ಯಕ್ಕೆ ತಿರುಗುತ್ತಾನೆ. ಇತ್ತ ಸಂತ—ರಾಜ ಮತ್ತೆ ಸಿಂಹಾಸನ ವೇರುತ್ತಾನೆ.

ಸಂತನು ರಾಜನಾದರೆ ಸಂತೋಷ ಪಡಲಿಲ್ಲ; ರಾಜ್ಯ ತೊರೆಯುವಾಗ ವಿಷಾದ ಪಡಲಿಲ್ಲ. ಅವನ ಮನಸ್ಸು ಸುಖ ದುಃಖಗಳ ಮಧ್ಯೆ ಸಮತೋಲ ವಾಗಿದೆ. ಒಬ್ಬರನ್ನು ಪ್ರೇಮಿಸಬೇಕು; ಇನ್ನೊಬ್ಬರನ್ನು ದ್ವೇಷಿಸಬೇಕು: ಒಂದನ್ನು ಮೆಚ್ಚಬೇಕು; ಇನ್ನೊಂದನ್ನು ನಿಂದಿಸಬೇಕು; ಎಂಬ ಭಾವ ಅವನಿಗೆ ಬರದು! ಆದುದರಿಂದ ಅವನ ಮಾತು, ಭಾವ, ವಿಚಾರಗಳು ಸಹಜ ಹಾಗು ವಿಶ್ವದಷ್ಟು ವಿಶಾಲ!

ಸಾಧಕ ಶಿವನನ್ನು ಕಂಡವನಲ್ಲ: ವಿಶ್ವವು ಈಶಾವಾಸ್ಯ ಎಂದು ಅನು ಭವತಃ ಅರಿತವನಲ್ಲ. ಅವನಲ್ಲಿ ಅಹಂ ಭಾವವಿದೆ. ಹೀಗಿದ್ದರೂ ಅವನು ಪ್ರಾರ ಬ್ಧಾನುಸಾರ ಶುಭಾಶುಭ ಸಂಗತಿಗಳು ಘಟಿಸಿದಾಗ, ಸಪ್ರಯತ್ನಿಕವಾಗಿ ತನ್ನ ಮನದ ಸ್ಥಿಮಿತ ಕಾಪಾಡಿಕೊಳ್ಳಬೇಕು. ರಾಗ ದ್ವೇಷಗಳೆರಡನ್ನೂ ತ್ಯಜಿಸಿ ಸರ್ವ ಪ್ರಸಂಗಗಳಲ್ಲಿ ಉದಾಸೀನ ವೃತ್ತಿ ತಾಳಬೇಕು.

ಸಾಮಾನ್ಯ ಜೀವರ ಜೀವನವೇ ಬೇರೆ. ಅವರ ಮನಸ್ಸು ಚಂಚಲ; ಆಸೆ ಗಳ ಕಣಜ; ನೂರಾರು ಭಾವನೆಗಳ ತಾಣ. ಪ್ರಾರಬ್ಧಾನುಸಾರ ಶುಭ ಬಂದಾಗ ಉಬ್ಬುವದು; ಅಶುಭ ಬಂದಾಗ ಕುಗ್ಗುವದು.

ಸಂಬಂಧ: ಮುಂದಿನ ಮಂತ್ರ, "ಕಿಂ ಆಸೀತ" ಪ್ರಶ್ನೆಗೆ ಉತ್ತರಿಸಿದೆ.

ಯದಾ ಸಂಹರತೇ ಚಾಯಂ ಕೂರ್ಮೋಂಗಾನೀವ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾಪ್ರತಿಷ್ಠಿತಾ ॥೫೮॥

ಅರ್ಥ:— ಕೂರ್ಮಃ = ಆಮೆಯು. ಅಂಗಾನಿ ಇವ = ತನ್ನ ಅಂಗಗಳನ್ನು ಒಳ ಎಳೆದುಕೊಳ್ಳುವಂತೆ ಅಯಂ= ಈ ಯಾವ ಯೋಗಿಯು ಸರ್ವಶಃ = ಎಲ್ಲೆಡೆಯಿಂದ. ಇಂದ್ರಿ ಯಾಣಿ = ಇಂದ್ರಿಯಗಳನ್ನು ಇಂದ್ರಿಯಾರ್ಥೇಭ್ಯಃ= ಇಂದ್ರಿಯಗಳ ವಿಷಯಗಳಿಂದ ಸಂಹ ರತೇ= ಎಳೆದುಕೊಳ್ಳುವನೋ, ತಸ್ಯ ಪ್ರಜ್ಞಾ= ಅವನ ಪ್ರಜ್ಞಾ ಪ್ರತಿಷ್ಠಿತಾ= ಸ್ಥಿರವಾಗಿದೆ.

ವಿವರಣೆ:— ಇಂದ್ರಿಯ ನಿಗ್ರಹವಿಲ್ಲದೆ ಸಮಾಧಿ ಸಾಧನ ಮಾಡುವ ದೆಂದರೆ ನೀರಿಳಿಯದ ಗಂಟಲಲ್ಲಿ ಕಡಬು ತುರುಕಿದಂತೆ. ಕರ್ಮೇಂದ್ರಿಯ —ಜ್ಞಾನೇಂದ್ರಿಯ ನಿಗ್ರಹವು ಸಾಧನೆಯ ಪ್ರಥಮ ಹಂತ; ಮನೋನಿರೋಧ ದ್ವಿತೀಯ ಹಂತ, ಬುದ್ಧಿಯ ನಿಶ್ಚಲತೆ ತೃತೀಯ ಹಂತ; ಮೊದಲನೆಯದು ಸ್ಥೂಲ ಸಾಧನೆ; ಎರಡನೆಯದು ಸೂಕ್ಷ್ಮ ಸಾಧನೆ; ಮೂರನೆಯದು ಪರಮ ಸೂಕ್ಷ್ಮ ಸಾಧನೆ.

ಈ ಮೂರು ಸಾಧನೆಗಳಲ್ಲಿ ಪಳಗಿ, ಅನಂತ ದೇವನಲ್ಲಿ ಬೆರೆತು, ಆತ

ಸೌಖ್ಯ ಅನುಭವಿಸಿ ಉತ್ಥಾನನಾದ ಮಹಾನ್‌ಯೋಗಿಯೇ ಉತ್ಥಾನಸ್ಥಿತಪ್ರಜ್ಞ. ತಾನು ಅರಿತ ಜ್ಞಾನಿ ಎಂಬ ಅಹಂಕಾರ ತಾಳಿ, ಅವನು ವಿಷಯಗಳ ಮಧ್ಯೆ ತನ್ನ ಇಂದ್ರಿಯಗಳನ್ನು ಸ್ವೇಚ್ಛೆಯಾಗಿ ಹರಿಬಿಡುವದಿಲ್ಲ. ಅತಿ ಸಹಜವಾಗಿ ಇಂದ್ರಿಯಗಳನ್ನು ನಿಗ್ರಹಿಸುವ ಕಲೆ ಅವನಿಗಿದೆ. ಭಗವಂತ ಒಂದು ದೃಷ್ಟಾಂತವಿತ್ತು ಈ ಮಾತನ್ನು ಸ್ಪಷ್ಟಗೊಳಿಸುತ್ತಾನೆ.

ಕೂರ್ಮಃ ಅಂಗಾನಿ ಇವ:— ಹೊರಗಿನ ತೊಂದರೆಗಳೇನೂ ಇಲ್ಲದ ನಿರ್ಜನ ಸ್ಥಾನದಲ್ಲಿ ಆಮೆ ತನ್ನ ಅಂಗಗಳನ್ನು ಬಿಚ್ಚಿ ಹಾಯಾಗಿ ಆಡಿಕೊಂಡಿರುತ್ತದೆ. ಪರಿಸರದ ಏಕಾಂತತೆಗೆ ಸ್ವಲ್ಪ ಭಂಗ ಬಂದರೂ ಅತಿ ಸಹಜವಾಗಿ ತನ್ನೆಲ್ಲ ಅಂಗಗಳನ್ನು ಒಳಗೆಳೆದುಕೊಳ್ಳುತ್ತದೆ. ಆಗ ಎಂಥ ಪ್ರಾಣಿಯೂ ಅದನ್ನು ತುಳಿದು ನಾಶಮಾಡಲಾರದು; ಹಾಗೆ ಸ್ಥಿತಪ್ರಜ್ಞನು ಪ್ರಪಂಚದ ಅಸಂಖ್ಯ ವಿಷಯಗಳಿಂದ ಬಾಧೆಯುಂಟಾಗುವದೆಂಬ ಸಂವೇದನೆ ಬಂದ ತಕ್ಷಣ ಅತಿ ಸಹಜವಾಗಿ ಇಂದ್ರಿಯಗಳನ್ನು ಇಂದ್ರಿಯಗಳ ವಿಷಯಗಳಿಂದ ನಿಗ್ರಹಿಸುತ್ತಾನೆ. ವಿಶ್ವದ ಸೌಂದರ್ಯ ಕಂಡರೂ ಅವನ ಕಣ್ಣಲ್ಲಿ ಕಾಮವಿಲ್ಲ. ಪ್ರಾರಬ್ಧಾನುಸಾರ ಭೋಗಗಳ ನಡುವೆ. ಬಾಳಿದರೂ ಭೋಗಲಾಲಸೆಯಿಲ್ಲ. ಆದ್ದರಿಂದ ಸ್ಥಿತಪ್ರಜ್ಞನು ಕಣ್ಣಿದ್ದು ಕುರುಡ; ಕಿವಿಯಿದ್ದು ಕಿವುಡ; ಕಾಲಿದ್ದು ಹೆಳವ; ಉಣ್ಣುವ-ರುಚಿಸುವ ನಾಲಿಗೆಯಿದ್ದರೂ ಉಪವಾಸಿ. ಅವನ ಮೇಲೆ ಬಾಹ್ಯಾಂತರ ಕಾರಣಗಳಿಂದ ಎಂಥ ಘೋರ ಆಘಾತವಾದರೂ ಅದರ ನೋವು ಅವನಿಗಾಗದು. ಅಷ್ಟು ಶಾಂತ! ಅಷ್ಟು ಸ್ಥಿರ! ಏಕೆಂದರೆ ಅವನ ಪ್ರಜ್ಞೆ ಪ್ರತಿಷ್ಠಿತ!

ಸಾಧಕನಿಗೆ ಹಾಗೆಲ್ಲ ಸಾಧ್ಯವಿಲ್ಲ. ಅವನು ಬಹು ಪ್ರಯಾಸಪಟ್ಟು ಇಂದ್ರಿಯಗಳ ನಿಗ್ರಹಮಾಡಬೇಕು. ಇಂದ್ರಿಯಗಳ ಪ್ರವೃತ್ತಿ ವಿಷಯಗಳತ್ತ. ದೇವನ ಕರುಣೆ, ಗುರು ಅನುಗ್ರಹಗಳಿಲ್ಲದೆ ಅವುಗಳ ಮೇಲೆ ಅಧಿಕಾರ ಸಂಪಾದಿಸುವದು ಕಷ್ಟ. ನಿಗ್ರಹ ಶಕ್ತಿಗಾಗಿ ಸಾಧಕ ಪ್ರಾರ್ಥಿಸಬೇಕು. ಅಂಥ ಒಂದು ಪ್ರಾರ್ಥನೆ ಇಲ್ಲಿದೆ.

"ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ॥
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿರ್ವ್ಯಶೇಮ । ದೇವಹಿತಂ ಯದಾಯುಃ ॥
ಸ್ವಸ್ತಿ ನ ಇಂದ್ರಃ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ ॥
ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ । ಸ್ವಸ್ತಿ ನೋಬೃಹಸ್ಪತಿರ್ದಧಾತು ॥ "

(ಪ್ರ, ಉ. ಶಾಂತಿಮಂತ್ರ)

ದೇವಗಣವೆ, ಯಜನ ಮಾಡುತ್ತಿರುವ ನಾವು ನಮ್ಮೆರಡೂ ಕಿವಿಗಳಿಂದ ಕಲ್ಯಾಣಮಯ ವಚನ ಕೇಳಲಿ; ನಮ್ಮೆರಡೂ ಕಣ್ಣುಗಳಿಂದ ಕಲ್ಯಾಣ-ರೂಪವನ್ನೇ ನೋಡಲಿ; ಸ್ಥಿರವಾದ ಅಂಗಗಳಿಂದ ದೇಹಗಳಿಂದ ಭಗವಂತನ ಸ್ತುತಿಮಾಡುವ ನಾವು ದೇವ ಪ್ರಿತ್ಯರ್ಥವಾದ ಆಯುಷ್ಯವನ್ನು ಉಪಭೋಗಿ

ಸುಮಂತಾಗಲಿ; ಎಲ್ಲೆಡೆ ವ್ಯಾಪಿಸಿರುವ ಇಂದ್ರನು ನಮಗಾಗಿ ಕಲ್ಯಾಣ ಮಾಡಲಿ. ವಿಶ್ವದ ಜ್ಞಾನವುಳ್ಳ ಸೂರ್ಯನು ನಮಗಾಗಿ ಕಲ್ಯಾಣ ಉಂಟುಮಾಡಲಿ. ಅರಿಷ್ಟಗಳನ್ನು ನಾಶಮಾಡುವ ಗರುಡನು ನಮಗೆ ಕಲ್ಯಾಣಮಾಡಲಿ. ಬೃಹಸ್ಪತಿಯು ನಮಗಾಗಿ ಕಲ್ಯಾಣ ಉಂಟು ಮಾಡಲಿ.

ಇಂದ್ರಿಯಗಳನ್ನು ನಿಗ್ರಹಿಸದ ಯಾವ ಸಾಧಕನೂ ಪ್ರಗತಿ ಹೊಂದಲಾರ; ದೇವ ದರುಶನ ಪಡೆಯಲಾರ. ದೇವಾಲಯ ಪ್ರವೇಶಿಸಿದ ವ್ಯಕ್ತಿ ಅಲ್ಲಿರುವ ಜನರತ್ತ. ಚಿತ್ರಗಳತ್ತ ಗೋಡೆ ಪಟ ನಕ್ಷೆಗಳತ್ತ ತನ್ನ ಮನ ಹಾಗು ಕಣ್ಣುಗಳನ್ನು ಹರಿಬಿಟ್ಟರೆ ದೇವನನ್ನು ಹೇಗೆ ಕಾಣಬಲ್ಲ? ಅತ್ತಿತ್ತ ನೋಡದೆ ನೇರವಾಗಿ ಗರ್ಭಗುಡಿಯ ದೇವನತ್ತ ಲಕ್ಷ ಹರಿಸಬೇಕೆಂಬ ಸಂದೇಶ ಬೀರಲೆಂದೇ ಪ್ರತಿ ದೇವಾಲಯದ ಗರ್ಭಗುಡಿಯ ಎದುರಿನ ಮಂಟಪದಲ್ಲಿ ಆಮೆಯ ಶಿಲಾಕೃತಿ ಕೆತ್ತಲಾಗಿದೆ. "ಅತ್ತಿತ್ತ ಇಂದ್ರಿಯ ಹರಿಬಿಡಬೇಡ; ನಿನ್ನ ಅಂಕಿತದಲ್ಲಿಟ್ಟುಕೊ. ಅಂದರೆ ಮಾತ್ರ ಆತ್ಮ ಪ್ರಭುವಿನ ದರ್ಶನ ಹೊಂದಬಲ್ಲೆ" ಎಂಬ ಸಂದೇಶ ಆಮೆಯದು. ಸಾಧಕನು ಆಮೆಯ ಚಿತ್ರ ನೆನಿಸಿ ಬಾಳಬೇಕು. ಸಾಧನೆ ಮಾಡಬೇಕು.

ಅರ್ಜುನ:- ದೇವ, ಮೂಢರು ರೋಗಿಗಳು ವ್ರತ ಪ್ರತಿಪಾಲಕರು ಕೂಡ ಇಂದ್ರಿಯ ನಿಗ್ರಹ ಮಾಡುತ್ತಾರೆ. ಸ್ಥಿತ ಪ್ರಜ್ಞನು ನಿಗ್ರಹಿ ಎಂದು ಹೇಳುವಲ್ಲಿ ಅಂಥ ವೈಶಿಷ್ಟ್ಯ ಏನಿದೆ ?

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
ರಸವರ್ಜಂ ರಸೋऽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥೫೯॥

ಅರ್ಥ:- ನಿರಾಹಾರಸ್ಯ = ನಿರಾಹಾರಿಯಾದ (ಇಂದ್ರಿಯೈಃ ವಿಷಯಾಣಾಂ ಆಹರಣಂ ಗ್ರಹಣಂ ಆಹಾರಃ; ವಿಷಯಗ್ರಹಣಂ ನ ಕುರ್ವತಃ ನಿರಾಹಾರಃ = ಇಂದ್ರಿಯಗಳಿಂದ ವಿಷಯಗಳ ಗ್ರಹಣವು (ಸ್ವೀಕಾರವು) ಆಹಾರ. ವಿಷಯಗ್ರಹಣ ಮಾಡದವನು ನಿರಾಹಾರಿಯು), ದೇಹಿನಃ = ದೇಹಾಭಿಮಾನಿ ಅಜ್ಞನ, ವಿಷಯಾಃ= (ಶಬ್ದಾದಿ) ವಿಷಯಗಳು, ರಸವರ್ಜ್ಯಂ ವಿನಿವರ್ತಂತೇ= ಅಭಿಲಾಷೆಯನ್ನುಹಿಂದೆಬಿಟ್ಟು ಹೋಗುತ್ತವೆ. ಪರಂದೃಷ್ಟ್ವಾ = ಪರಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡಾಗ ಅಸ್ಯ= ಇವನ ರಸಃ ಅಪಿ= ಆ ವಿಷಯದ ತೃಷ್ಣೆಕೂಡ ನಿವರ್ತತೇ = ಹೋಗಿಬಿಡುತ್ತದೆ. (ನಿರಾಹಾರಿಯು ಆಮೆಯಂತೆ ಇಂದ್ರಿಯಗಳನ್ನಷ್ಟೇ ಒಳಸೆಳೆದುಕೊಳ್ಳುತ್ತಾನೆ. ಸ್ಥಿತಪ್ರಜ್ಞನು ಮಾತ್ರ ಇಂದ್ರಿಯಗಳನ್ನೂ ವಿಷಯಾಭಿಲಾಷೆಯನ್ನೂ ಸೆಳೆದುಕೊಳ್ಳುತ್ತಾನೆ. )

ವಿವರಣೆ:- ವಿಷಯಾ ವಿನಿವರ್ತಂತೇ:- ಜಡರು, ವ್ರತಶೀಲರು, ರೋಗಿಗಳು ಮತ್ತು ಕಾಷ್ಟತಪಸ್ವಿಗಳು ವಿಷಯಗಳನ್ನು ಉಪಭೋಗಿಸುವದಿಲ್ಲ. ಅವರು ಅನ್ನ ನೀರು ಬಿಡುತ್ತಾರೆ; ಕಣ್ಣು ಕಿವಿಗಳ ಮೇಲೆ ನಿರ್ಬಂಧನ ಹೇರುತ್ತಾರೆ; ಸ್ತ್ರೀ ಧನಗಳನ್ನು ದೂರಿಡುತ್ತಾರೆ. ಆದರೇನು? ಬಿಟ್ಟ ವಿಷಯಗಳ

ಆಸಕ್ತಿರೂಪ ರಸಮಾತ್ರ ಅವರ ಮನದಲ್ಲಿ ದ್ರವಿಸುತ್ತದೆ! ಉದಾ:– ಚಿಕ್ಕಬಾಲಕನನ್ನು ಧರ್ಮಪೀಠವೇರಿಸುತ್ತಾರೆ. ಅವನು ತಾರುಣ್ಯ ಅವಸ್ಥೆ ಪಡೆಯುತ್ತಾನೆ. ಧರ್ಮನಿಯಮದಂತೆ ಸ್ತ್ರೀ, ಧನ, ಸಂಗೀತ, ಭರ್ಜರಿ ವಸ್ತ್ರ ಮುಂತಾದ ಭೋಗವಸ್ತುಗಳು ಆವನ ಸಮೀಪ ಇಲ್ಲ. ಈ ಅರ್ಥದಲ್ಲಿ ಅವನು ನಿರಾಹಾರಿ. ಆದರೆ ಅವನ ಮನದಲ್ಲಿ ಮಾತ್ರ ಅವುಗಳ ಭೋಗ-ಪಿಪಾಸೆ ಅದಮ್ಯವಾಗಿ ಬೆಳೆಯುತ್ತದೆ. ಕುಳಿತರು, ನಿಂತರು, ಧ್ಯಾನಿಸಿದರು ಅದೇ ವಿಷಯಗಳು ಮನೋರಂಗದ ಮೇಲೆ ಮೂಡುತ್ತವೆ. ಈ ರಸ-ಆಸಕ್ತಿ ಅತ್ಯಂತ ಪ್ರಬಲವಾದರೆ ಆ ಯುವಕನು ಧರ್ಮಪೀಠದ ನಿಯಮ ಮುರಿದು ವಿಷಯೋಪಭೋಗ ಮಾಡುತ್ತಾನೆ. ಆಗ, ಅವನನ್ನು ಪೀಠವೇರಿಸಿದ ಜನ ಆಡಿಕೊಳ್ಳುತ್ತಾರೆ. ಆದರೆ, ತಪ್ಪು ಯಾರದು? ಹುಡುಗನದಲ್ಲ; ನಿರಾಹಾರವೇ ಧರ್ಮಾಧಿಕಾರಿಯ ಲಕ್ಷಣವೆಂದು ತಿಳಿದ ಜನರದು. ಆ ಜನರ ರೀತಿಯೆಂದರೆ, ಬೆಕ್ಕಿಗೆ ಅಹಿಂಸಾಬೋಧೆ ಮಾಡಿ ಅದರ ಎದುರು ಇಲಿಗಳ ಹಿಂಡುಬಿಟ್ಟಂತೆ. ಪೀಠವೇರಿಸಿದವರು ಅವನ ಸುತ್ತ ಜ್ಞಾನ ವಿರಾಗಗಳ ಪರಿಸರ ನಿರ್ಮಿಸುವ ಬದಲು ಮಾನ ಮರ್ಯಾದೆ ಹಾಗು ಭೋಗೈಶ್ವರ್ಯಗಳ ಪರಿಸರ ರಚಿಸುತ್ತಾರೆ. ಪಾಪ, ಆ ತರುಣನು ಆಸಕ್ತಿಯ ಒತ್ತಡಕ್ಕೆ ಸಿಕ್ಕು ಪೇಚಾಡುತ್ತಾನೆ.

ಬರಿ ನಿರಾಹಾರ ಮುಖ್ಯವಲ್ಲ; ಭೋಗಲಾಲಸೆಯ ವಿನಾಶ ಅಗತ್ಯ. ಒಂದೆರಡು ದಿನ ಆಹಾರವಿಲ್ಲದೆ ಹೊಟ್ಟೆ ಭಾರೀ ಹಸಿದಿರಬೇಕು; ಎದುರಿನಲ್ಲಿ ಚಿನ್ನದ ತಟ್ಟೆ; ಅದರಲ್ಲಿ ಉಗಿಹಾಯುವ ಹೋಳಿಗೆ, ಮಧುರ ವಾಸನೆಯ ಹೆರೆತ ತುಪ್ಪ, ಕಸ್ತೂರಿಯ ಹಾಲು, ಹಪ್ಪಳ, ಉಪ್ಪಿನಕಾಯಿ ಇಷ್ಟೆಲ್ಲ ಇದ್ದಾಗ ಮನಸ್ಸು ಅನಾಸಕ್ತವಾದರೆ ಅದು ನಿಗ್ರಹ. ಹಾಗೆ ನಿಗ್ರಹಿಸಿದವನು ಧೀರ. "ನ ವಿಜಯಾತ್ ರಣೇಶೂರಃ" ರಣದಲ್ಲಿ ಗೆದ್ದವ ಶೂರನಲ್ಲ. ವಿಷಯಗಳ ರಣಾಂಗಣದಲ್ಲಿ ವಿಜಯಿಯಾದವ ಶೂರ! ಸ್ಥಿತಪ್ರಜ್ಞನು ಹಾಗಿದ್ದಾನೆ.

ರಸಃಅಪಿ ಅಸ್ಯಪರಂ ದೃಷ್ಟ್ವಾ:–ಪರಮ ಪ್ರಭು ಪರಮಾತ್ಮನನ್ನು ಕಂಡು ಸಮ್ಯಕ್ ಜ್ಞಾನ ಪಡೆದವನು ಸ್ಥಿತಪ್ರಜ್ಞ. ಅವನಿಗೆ ದೇಹದ ವ್ಯಾಮೋಹವಿಲ್ಲ. ಅವನು ನಿರಾಹಾರಿ! ವಿಷಯ ಸಂಪರ್ಕದ ಬಲೆಗೆ ಬೀಳದ ಜಾಣ. ಏಕೆಂದರೆ ಅವನು 'ನ ಅನ್ಯತ್ ಪಶ್ಯತಿ' ಆತ್ಮಾತಿರಿಕ್ತವಾಗಿ ಏನನ್ನೂ ನೋಡುವದಿಲ್ಲ. ಅವನು ಆತ್ಮರತ, ಆತ್ಮತೃಪ್ತ, ಆತ್ಮಸಂತುಷ್ಟ. ಮತ್ತೊಂದು ವಸ್ತುವನ್ನು ನೋಡಿ, ಮುಟ್ಟಿ, ಉಪಭೋಗಿಸಬೇಕೆಂಬ ಲಾಲಸೆಗೆ ಅವನಲ್ಲಿ ಸ್ಥಾನವಿಲ್ಲ. ಅವನು ನಿರ್ಲಿಪ್ತ! ನಿರಾಮಯ!! ಆದುದರಿಂದ ಜಡ. ರೋಗಿ ಮುಂತಾದ ನಿರಾಹಾರಿಗಳ ರೀತಿಯೇ ಬೇರೆ; ಸ್ಥಿತಪ್ರಜ್ಞನ ಸ್ಥಿತಿಯೇ ಬೇರೆ.

ಸ್ಥಿತ ಪಜ್ಞನಿಗೆ ಸಹಜ ಸಾಧ್ಯವಾದ ಅನಾಸಕ್ತಿಯನ್ನು ಸಾಧಕ ಶ್ರಮ

ಪಟ್ಟು ಸಂಪಾದಿಸಬೇಕು. "ಸುಂದರ ವಿಷಯಗಳು ಹಸ್ತಗತವಾದರೂ ಅವು ನನಗೆ ಬೇಡ. ದೇವನ ಕೃಪೆಯೊಂದೇ ಸಾಕು! ನನ್ನ ದೇಹಾದಿಗಳನ್ನು ದೇವನಿಗಾಗಿಯೇ ವಿನಃ ಕ್ಷುದ್ರ ಪ್ರಾಪಂಚಿಕ ವಸ್ತುಗಳಿಗಾಗಿ ವಿನಿಯೋಗಿಸಲಾರೆ" ಎಂಬ ಮನೋನಿಗ್ರಹ ಹಾಗೂ ಛಲ ಬೆಳೆಸಿಕೊಳ್ಳಬೇಕು.

ಸಂಬಂಧ:—ಶಾಸ್ತ್ರಗಳು, ಗುರುಗಳು, ಮಹಾತ್ಮರು ಸಾವಿರಾರು ವರ್ಷಗಳಿಂದ ಇಂದ್ರಿಯ ನಿರೋಧ ಹಾಗೂ ವಿರತಿಗಳನ್ನು ಜನರಿಗೆ ಘಂಟಾಘೋಷವಾಗಿ ಉಪದೇಶಿಸಿದರೂ ಅವರು ವಿಷಯಗಳಿಂದ ಏಕೆ ಹಿಮ್ಮುಖವಾಗುತ್ತಿಲ್ಲ?

ಯತತೋಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥೬೦॥

ಅರ್ಥ:- ಕೌಂತೇಯ = (ಕುಂತೀ ಪುತ್ರ) ಅರ್ಜುನ, ಹಿ = ನಿಜವಾಗಿ, ಇಂದ್ರಿಯಾಣಿ = ಇಂದ್ರಿಯಗಳು ಪ್ರಮಾಥೀನಿ = ಪ್ರಕ್ಷೋಭಕಾರಿಗಳು. ಯತತಃ = ಪ್ರಯತ್ನಶೀಲನಾದ ವಿಪಶ್ಚಿತಃ = ವಿವೇಕಿಯಾದ, ಪುರುಷಸ್ಯ = ಪುರುಷನ ಮನಃ ಅಪಿ = ಮನಸ್ಸನ್ನು ಕೂಡ, ಪ್ರಸಭಂ = ಬಲತ್ಕಾರದಿಂದ, ಹರಂತಿ = ಹರಣ ಮಾಡುತ್ತವೆ.

ವಿವರಣೆ:- ಇಂದ್ರಿಯಾಣಿ ಪ್ರಮಾಥೀನಿ:- ಇಂದ್ರಿಯಗಳು ಸೌಮ್ಯ—ಶಾಂತವಲ್ಲ. ಸದಾ ಉದ್ರೇಕಕಾರಿ, ಅತ್ಯಂತ ರಭಸದಿಂದ ನುಗ್ಗುವ ಭಯಂಕರ ಪ್ರವಾಹಗಳು. ಅವುಗಳ ಸೆಳೆತಕ್ಕೆ ಜೀವ ಸಿಗುವದೆಂದರೆ ಹತ್ತು ಹುಲಿಗಳ ನಡುವೆ ಬಡ ಚಿಗರೆ ಸಿಕ್ಕಂತೆ. ಇಂದ್ರಿಯಗಳು ಪ್ರಕ್ಷುಬ್ಧವಾದರೆ ಧರ್ಮ—ಪ್ರಜ್ಞೆ ಕುಂದುವದು; ಕೃತಜ್ಞತೆ, ಮನೋದಾರ್ಢ್ಯ, ವಿರಾಗಭಾವಗಳು ತತ್ತರಿಸುವವು. ವಿಶ್ವಾಮಿತ್ರನಂಥ ಘೋರ ತಪಸ್ವಿಗಳನ್ನೇ ಮಂಕುಗೊಳಿಸುವ ಇಂದ್ರಿಯ ಸಾಮರ್ಥ್ಯವನ್ನು ಅಷ್ಟು ಇಷ್ಟು ಎಂದು ವರ್ಣಿಸುವದೇ ಕಷ್ಟ.

ಹರಂತಿ ಪ್ರಸಭಂ ಮನಃ :- ಪುರುಷ ಪ್ರಕಾಂಡ ಪಂಡಿತನಾಗಿರಲಿ, ಭಗೀರಥನಂತೆ ಸಾಹಸಿಯಾಗಿರಲಿ, ವೇದ ವೇದಾಂತಗಳನ್ನು ಅರಗಿಸಿಕೊಂಡ ವಿದುಷನಾಗಿರಲಿ, ಇಲ್ಲವೆ ಮನೆ ಮಡದಿ ಎಲ್ಲವನ್ನು ಪರಿತ್ಯಜಿಸಿದ ವೀರ ಸನ್ಯಾಸಿಯೇ ಇರಲಿ ಅವನ ಮನಸ್ಸನ್ನು ಕ್ಷಣಾರ್ಧದಲ್ಲಿ ಅಪಹರಿಸುವ ಬಲವಿದೆ ಇಂದ್ರಿಯಗಳಲ್ಲಿ. ದೇವ ದೇವತೆಗಳು ಸಹ ಇಂದ್ರಿಯ ದಾಸರು.

ಗಣಪತಿ ಪರಮೇಶ್ವರನ ಪುತ್ರ; ಸಾಕ್ಷಾತ್ ಜ್ಞಾನ ದೇವತೆ; ಕವಿಗಳ ಕವಿ ವೇದಮೂರ್ತಿ. ಒಮ್ಮೆ ಶಿವನಿಗೂ ದಕ್ಷಬ್ರಹ್ಮನಿಗೂ ವಿರಸ ಉಂಟಾಯಿತು. ತಾಯಿಯ ಅಪ್ಪಣೆ ಪಡೆದು ಗಣಪತಿ ದಕ್ಷಬ್ರಹ್ಮನಿಗೆ ಬುದ್ಧಿ ಹೇಳಲು ಹೊರಟ. ದಕ್ಷಬ್ರಹ್ಮನ ನಿವಾಸದ ಸುತ್ತೆಲ್ಲ ಮೋದಕ—ಘೃತಗಳ ಸೌರಭ ಹರಡಿಕೊಂಡಿತ್ತು. ಅದರ ವಾಸ ಬಡಿದ ತಕ್ಷಣ ಗಣಪತಿ ತಾನು ಬಂದ ಕಾರಣ ಮರೆತ.

ಅಜ್ಞನ ಆದರಾತಿಥ್ಯ ಹೊಂದಿ ಮೃಷ್ಟಾನ್ನ ಭೋಜನದಲ್ಲಿ ಮಗ್ನನಾಗಿ "ಅಂಥಂಥವರನ್ನು ವಿಮೂಢಗೊಳಿಸಿದ ಇಂದ್ರಿಯಗಳ ಎದುರು ಸಾಮಾನ್ಯನ ಶಕ್ತಿ ಎಷ್ಟರದು? "ಬಲವಾನ್ ಇಂದ್ರಿಯಗ್ರಾಮಃ ವಿದ್ವಾಂಸಮಪಿ ಕರ್ಷತಿ" ಬಲವಂತವಾದ ಇಂದ್ರಿಯ ಸಮೂಹ ವಿದ್ವಾಂಸನನ್ನೂ ಹಿಡಿದೆಳೆಯುತ್ತದೆ.

ತಂದೆ, ತಾಯಿ, ಗುರುಗಳ ಕೃಪೆಯಿಂದ ವಿದ್ಯೆ ಪಡೆದು ಜಾಣನಾದ ಮಗ ಲಗ್ನವಾದೊಡನೆ ಅವರನ್ನು ಮರೆತು ಬಿಡುತ್ತಾನೆ. ಜನತೆಗಾಗಿ ಶ್ರಮಿಸುವೆನೆಂದು ಆರಿಸಿ ಹೋದ ವ್ಯಕ್ತಿ ಅಧಿಕಾರ ಮತ್ತು ಧನಗಳ ಬೆನ್ನುಹತ್ತಿ ಜನಹಿತವನ್ನೇ ಮರೆಯುತ್ತಾನೆ. ಜನರಿಗೆ ದಿವ್ಯ ಸೌಖ್ಯದ ಮಾರ್ಗ ತೋರಿಸುವೆನೆಂದು ಪಣ ತೊಟ್ಟು ಧರ್ಮ ಪೀಠವೇರಿದ ಗುರುವು ಮಾನ ಕೀರ್ತಿಗಳ ಮೋಹದಲಿ ಸಿಕ್ಕು ಧರ್ಮ ಬುದ್ಧಿಯನ್ನೇ ಬಲಿಕೊಡುತ್ತಾನೆ. ಇವೆಲ್ಲ ಇಂದ್ರಿಯ ಪ್ರಾಬಲ್ಯದ ಉದಾಹರಣೆಗಳು. ಬಲ್ಲಬಲ್ಲವರ ಮನಸ್ಸೂ ಇಂದ್ರಿಯಗಳನ್ನು ಮೀರಿ ನಿಂತಿಲ್ಲ. ಎಂಥ ಪ್ರಸಂಗಬಂದರೂ ಮನದ ಶಾಂತತೆಯನ್ನು ಕಾಯ್ದುಕೊಂಡೇನು ಎಂಬ ಆತ್ಮವಿಶ್ವಾಸ ಯಾರಿಗಿದೆ? ಆದರೂ ಸಾಧಕ ಪ್ರಯತ್ನಿಸಿದರೆ ನಿಗ್ರಹ ಅಸಾಧ್ಯವಲ್ಲ. ಅದರ ಬಗ್ಗೆ ಮುಂದಿನ ಮಂತ್ರ.

ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೧॥

ಅರ್ಥ:- ತಾನಿ ಸರ್ವಾಣಿ =ಆ ಎಲ್ಲ ಇಂದ್ರಿಯಗಳನ್ನು ಸಂಯಮ್ಯ= ವಶೀಕರಿಸಿ, ಯುಕ್ತಃ=ಸಮಾಧಿ ನಿಷ್ಠನೂ ಮತ್ಪರಃ =ನನ್ನಲ್ಲಿ ಪ್ರೀತಿಯುಳ್ಳವನೂ[(೧)ಅಹಂ ಏವ ಪ್ರತ್ಯಗಾತ್ಮಾ ಪರಃ ಸ್ತ್ರ್ಯಾದಿಭ್ಯೋ ಬಾಹ್ಯೇಭ್ಯೋ ದೇಹೇಂದ್ರಿಯಾದಿಭ್ಯಃ ಅಂತರೇಭ್ಯಶ್ಚ ಉತ್ಕೃಷ್ಟಃ ಪ್ರಿಯತಮಃ ಯಸ್ಯ ಸಃ ಮತ್ಪರಃ =ಪ್ರತ್ಯಗಾತ್ಮನಾದ ನಾನೇ ಯಾವನ ದೃಷ್ಟಿಯಲ್ಲಿ ಬ್ಯಾಹ ಸ್ತ್ರೀ, ದೇಹ, ಇಂದ್ರಿಯಾದಿಗಳಿಗಿಂತ ಹಾಗು ಅಂತರಿಕ ಕರಣಾದಿಗಳಿಗಿಂತ ಅತ್ಯಂತ ಶ್ರೇಷ್ಠನೋ, ಪ್ರಿಯತಮನೋ ಅಂಥವನು ಮತ್ಪರಃ. (೨) ಅಹಂ ವಾಸುದೇವಃ ಸರ್ವಪ್ರತ್ಯಗಾತ್ಮಾ ಪರಃ ಯಸ್ಯ, ನ ಅನ್ಯಃ ಅಹಂ ತಸ್ಮಾತ್= ವಾಸುದೇವನಾದ ನಾನೇ ಸರ್ವ ಜೀವರ ಸಾಕ್ಷಿ ಪ್ರತ್ಯಗಾತ್ಮ; ಅನ್ಯವಲ್ಲ. ಎಂದು ತಿಳಿದವನು ಮತ್ಪರಃ] ಆಸೀತ = ಆಗಿರಬೇಕು. ಹಿ= ಏಕೆಂದರೆ ಯಸ್ಯ ಇಂದ್ರಿಯಾಣಿ= ಯಾವನ ಇಂದ್ರಿಯಗಳು ವಶೇ= ವಶದಲ್ಲಿರುವವೋ ತಸ್ಯ ಪ್ರಜ್ಞಾ =ಅವನ ಪ್ರಜ್ಞೆ ಪ್ರತಿಷ್ಠಿತಾ= ಸ್ಥಿರವಾಗಿದೆ.

ವಿ:— "ಓಂ ಪರಾಂಚಿಖಾನಿ ವ್ಯತೃಣತ್ ಸ್ವಯಂಭೂಸ್ತಸ್ಮಾತ್ಪರಾಙ್ಪಶ್ಯತಿ ನಾಂತರಾತ್ಮನ್॥
ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತ ಚಕ್ಷುರಮೃತತ್ವಮಿಚ್ಛನ್ ॥ "

(ಕಠ ಉ. ೨-೧-೧)

ಸ್ವಯಂಭು ಪರಮಾತ್ಮನು ಇಂದ್ರಿಯಗಳನ್ನು ಬಹಿರ್ಮುಖವಾಗಿ ರಚಿಸಿದ; ಆದುದರಿಂದ ಜೀವನು ಹೊರಗೆ ನೋಡುತ್ತಾನೆ. ಅಂತರಾತ್ಮನನ್ನು ನೋಡುವದಿಲ್ಲ. ಯಾವನೋ ಒಬ್ಬ ವಿವೇಕಿ ಅಮೃತತ್ವ ಇಚ್ಛಿಸಿ ಇಂದ್ರಿಯ

ಕರಣಗಳನ್ನು ನಿರೋಧಿಸಿ ಪ್ರತ್ಯಗಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ.

"ಸಕಲೇಂದ್ರಿಯಗಳಲ್ಲಿ ವಿಕರಿಸುವ ಮನವ ಸೆಳೆದು ನಿಂದಾತನೆ ಸುಖಿ.
ಪಂಚೇಂದ್ರಿಯಂಗಳಿಚ್ಛೆಯಲ್ಲಿ ಕೀಳುಮನಂಗೊಂಡು ಸುಳಿವಾತ ದುಃಖಿ.
ಮನಸ್ಸು ಬಹಿರ್ಮುಖವಾದರೆ ಮಾಯಾ ಪ್ರಪಂಚಿ. ಮನವು ಅಂತರ್ಮುಖ
ವಾದರೆ ಸೌರಾಷ್ಟ್ರಸೋಮೇಶ್ವರಲಿಂಗದಲ್ಲಿ ಅಭೇದ್ಯ."

ಅದಕ್ಕಾಗಿ ಬಾಲ್ಯದಿಂದಲೂ ಮಹಾತ್ಮರ ಸಂಗಬೇಕು. ಆ ಸಂಗದಿಂದ ಆಹಾರಶುದ್ಧಿ; ಅದರಿಂದ ತತ್ತ್ವಶುದ್ಧಿ; ಅದರಿಂದ ಬುದ್ಧಿ ನಿರ್ಮಲ ಹಾಗು ಸ್ಮೃತಿ ವಿಮಲ! ಅಂಥ ಸ್ಮೃತಿ ಹಾಗು ಬುದ್ಧಿಗಳೇ ಆತ್ಮಸಾಧನೆಯ ಸಾಧನಗಳು. ಅವುಗಳಿಂದ ಶಿವಸಮರತಿ. ಜೀವಬ್ರಹ್ಮರ ಯೋಗ! ಆದ್ದರಿಂದಲೇ ಭಗವಂತ ಹೇಳುತ್ತಾನೆ.

ತಾನಿ ಸರ್ವಾಣಿ ಸಂಯಮ್ಯ:- ಆ ವಿಷಯಮುಖ ಇಂದ್ರಿಯಗಳನ್ನೆಲ್ಲ ತನ್ನ ವಶದಲ್ಲಿಟ್ಟುಕೊಳ್ಳಬೇಕು. ಯಾವಾಗ? ಮುಪ್ಪಿನಲ್ಲಲ್ಲ. ಭರ್ಜರಿ ತಾರುಣ್ಯದಲ್ಲಿ! ಗುರುವಿನ ಪವಿತ್ರ ಸಾನಿಧ್ಯದಲ್ಲಿ ಕುಳಿತು ಅವರ ಅಮೃತ ವಚನೋಪದೇಶಗಳನ್ನು ಮನಸೋಕ್ತ ಆಲಿಸಬೇಕು. ನೀತಿ, ಧರ್ಮ, ಆತ್ಮ, ದೇವ ಇಂಥ ಸುನಿರ್ಮಲ ತತ್ತ್ವಗಳ ಜ್ಞಾನವನ್ನೇ ಹೃದಯದಲ್ಲಿ ತುಂಬಿಕೊಳ್ಳಬೇಕು. ಆಗ ಮಲಿನ ಸಂಸ್ಕಾರಗಳು ಹೋಗಿ ವಿಮಲ ಸಂಸ್ಕಾರಗಳು ಮೂಡುವವು. ಬಾಹ್ಯದ ಸರ್ವ ಇಂದ್ರಿಯಗಳು ತನ್ನ ಅಂಕಿತದಲ್ಲಿ ಬರುವವು. ನಂತರ,

ಯುಕ್ತ ಆಸೀತ:-ಮನೋ ನಿಗ್ರಹಿಯಾಗಬೇಕು; ಮನಸ್ಸು ಜ್ಞಾನೇಂದ್ರಿಯಗಳ ರಾಜ. ಮನವಿರಲಿ ಇಲ್ಲದಿರಲಿ ಕರ್ಮೇಂದ್ರಿಯಗಳು ರೂಢಿಯಿಂದ ಕಾರ್ಯ ಮಾಡುವಂತೆ, ಜ್ಞಾನೇಂದ್ರಿಯಗಳು ಮಾಡಲಾರವು. ಅವು ಮನದ ಮೇಲೆ ಸಂಪೂರ್ಣ ಅವಲಂಬಿಸಿವೆ. ಇಂಥ ಮನಸ್ಸನ್ನು ಬಾಹ್ಯ ವಿಷಯ ಚಿಂತನಗಳಿಂದ ದೂರ ಸೆಳೆದು, ಅಂತರಂಗಸ್ಥ ಪರಾತ್ಪರ ಅಂತರಾತ್ಮ ಚೈತನ್ಯದಲ್ಲಿ ಸ್ಥಿರಗೊಳಿಸಬೇಕು. ಇತರ ವೃತ್ತಿ ತರಂಗಗಳಡಗಿ, ಮನದ ತುಂಬ ಆತ್ಮ ಪ್ರಕಾಶ ಮಾತ್ರ ಪ್ರಕಟವಾದರೆ ಮನಸ್ಸು ಆತ್ಮಲೀನ! ಅದೇ ಯುಕ್ತ ಸ್ಥಿತಿ.

ಮತ್ಪರಃ ಆಸೀತ:- ಮಮ ಪರಃ; ಮತ್ ಶಬ್ದ ಪರಮಾತ್ಮನ ವಾಚಕ. ಅವನು ವಿಶ್ವವ್ಯಾಪಿಯಾದರೂ ವಿಶ್ವಾತೀತ; ಜೀವರಲ್ಲಿ ಹಾಸುಹೊಕ್ಕಾಗಿ ನೆಲೆಸಿದ್ದರೂ ಜೀವಸಾಕ್ಷಿ; ಪ್ರತ್ಯಗಾತ್ಮ. ತತ್ತ್ವವಿತತ್ತ್ವಗಳ ಆಚೆಗೆ ಅನಂತವಾಗಿ ವಿಸ್ತರಿಸಿರುವ ಅವನು ಪರಾತ್ಪರ! ಸ್ತ್ರೀ ಪುತ್ರ ಧನ ಭೂಮಿ ಅನಿತ್ಯ; ದೇಹ ಇಂದ್ರಿಯ ಮನಸ್ಸುಗಳೂ ಕ್ಷಣಿಕ; ಜೀವಾತ್ಮ-ಭಾವಕೂಡ ನಾಶವಂತ. ಆತ್ಮನೋರ್ವನೇ ನಿತ್ಯ! ಎಂದು ಅರಿತು ಅನಿತ್ಯ ವಸ್ತುಗಳ ಪ್ರೇಮ ನೀಗಿ, ಆ ಆತ್ಮ ವಸ್ತುವಿನಲ್ಲಿಯೇ ಪ್ರೇಮಧಾರೆ ಎರೆದವನು "ಮತ್ಪರಃ".ಅಂಥ ದಿವ್ಯ ವಸ್ತುವೇ ನಾನೆಂದು ಅಭಿನ್ನ ಭಾವತಾಳಿ ಸಂತಸ ಪಡುವವನು "ಮತ್ಪರಃ". ಸಾಧಕ

ಮೊದಲು ಇಂದ್ರಿಯಗಳನ್ನು ವಶೀಕರಿಸಿ ನಂತರ ಮನದ ನಿಗ್ರಹ ಸಾಧಿಸಿ, ಕಡೆಗೆ "ಮತ್ಪರ" ನಾಗಬೇಕು.

ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾಃ– ಇಂತು ಯಾವನ ಇಂದ್ರಿಯಗಳು ವಶವಾಗಿವೆಯೋ ಅವನು ಸ್ಥಿತಪ್ರಜ್ಞ; ಯಾವನ ಮನಸ್ಸು ನಿಸ್ತರಂಗಿತವಾಗಿದೆಯೋ ಅವನು ಸ್ಥಿತಧೀ; ಯಾವನು ದೇವನೇ ತಾನಾಗಿದ್ದಾನೆಯೋ ಅವನ ಬುದ್ಧಿ ಪ್ರತಿಷ್ಠಿತವಾಗಿದೆ.

ಸಂಬಂಧ:– ಅರ್ಜುನ:- "ವಾಸುದೇವ, ಬಾಹ್ಯಾಂತರ ಇಂದ್ರಿಯ ಸಂಯಮ ಸಾಧಿಸಿದ ಯೋಗಿಯೇ ಸ್ಥಿತಪ್ರಜ್ಞ ಎಂಬುದನ್ನರಿತೆ. ಒಂದು ವೇಳೆ ಬ್ಯಾಹ ಇಂದ್ರಿಯಗಳನ್ನಷ್ಟೇ ನಿಗ್ರಹಿಸಿ ಮನಸ್ಸನ್ನು ಸಂಯಮಗೊಳಿಸದಿದ್ದರೆ ಏನಾಗುವದು? "

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೆ ॥೬೨॥

ಅರ್ಥ:-ವಿಷಯಾನ್ =ವಿಷಯಗಳನ್ನು ಧ್ಯಾಯತಃ = ಧ್ಯಾನಿಸುವ, ಪುಂಸಃ= ಪುರುಷನಿಗೆ, ತೇಷು= ಆ ವಿಷಯಗಳಲ್ಲಿ ಸಂಗಃ=ಆಸಕ್ತಿಯು ಉಪಜಾಯತೇ=ಹುಟ್ಟುತ್ತದೆ, ಸಂಗಾತ್=ಆಸಕ್ತಿಯಿಂದ, ಕಾಮಃ=ಕಾಮನೆ ಸಂಜಾಯತೇ=ಹುಟ್ಟುತ್ತದೆ. ಕಾಮಾತ್= ಕಾಮದಿಂದ, ಕ್ರೋಧಃ=ಕ್ರೋಧವು ಅಭಿಜಾಯತೇ=ಹುಟ್ಟುತ್ತದೆ,

ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್‌ಸ್ಮೃತಿವಿಭ್ರಮಃ
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥೬೩॥

ಅರ್ಥ:- ಕ್ರೋಧಾತ್=ಕ್ರೋಧದಿಂದ, ಸಂಮೋಹಃ=(ಕಾರ್ಯಾಕಾರ್ಯ ವಿವೇಕಾ ಭಾವರೂಪ) ಮೋಹವು, ಭವತಿ =ಉಂಟಾಗುತ್ತದೆ. ಸಂಮೋಹಾತ್= ಸಮ್ಮೋಹದಿಂದ, ಸ್ಮೃತಿ ವಿಭ್ರಮಃ =ಸ್ಮೃತಿ ಭ್ರಮೆಯು; ಸ್ಮೃತಿ ಭ್ರಂಶಾತ್= ಸ್ಮೃತಿ ಭ್ರಮೆಯಿಂದ ಬುದ್ಧಿನಾಶಃ= ಬುದ್ಧಿನಾಶವು. ಬುದ್ಧಿನಾಶಾತ್= ಬುದ್ಧಿನಾಶದಿಂದ ಪ್ರಣಶ್ಯತಿ= (ಅವನು) ಸಂಪೂರ್ಣ ಪತನ ಹೊಂದುತ್ತಾನೆ.

ವಿವರಣೆ:– ಭಗವಂತ:– "ಪಾರ್ಥ ಎದ್ದರೂ ಕುಳಿತರೂ ಭೋಗ ವಿಷಯಗಳನ್ನೇ ಚಿಂತಿಸುವ ಮನುಷ್ಯನಲ್ಲಿ ಆ ವಿಷಯಗಳ ಬಗ್ಗೆ ಬಲಾಢ್ಯವಾದ ಆಸಕ್ತಿ–ಅನುರಾಗ ಬೆಳೆಯುವದು. ಅನುರಾಗ ವರ್ಧಿಸಿದಾಗ ಅದು ತೃಷ್ಣೆ ಯಾಗಿ ಪರಿವರ್ತನೆ ಹೊಂದುವದು. ಧರ್ಮ ನೀತಿ ಎಲ್ಲ ಬಿಟ್ಟು ಹೇಗಾದರು ಮಾಡಿ ವಿಷಯಾರ್ಜನೆ ಮಾಡಲು ಯತ್ನಿಸುವನು. ವಿಷಯಗಳು ದೊರೆತಂತೆಲ್ಲ ಆ ಕಾಮನೆ ಮತ್ತಷ್ಟು ಹೆಚ್ಚುವದು. ವಿಷಯ ಪ್ರಾಪ್ತಿ ಹಾಗು ಭೋಗಕ್ಕೆ ಅನೇಕ ಪ್ರತಿಕೂಲಗಳು ಘಟಿಸುವವು. ಆಗ ಕಾಮನಾವಿಷ್ಟ ಮನುಷ್ಯ ಕ್ರುದ್ಧ ನಾಗುವನು. ಕ್ರೋಧ ದುರ್ಗುಣಗಳ ರಾಜ; ಸ್ವಪರ ನಾಶಕ. ಭಯಾನಕ ವಶ ವಾಗ್ನಿ. ಅದು ಮನುಷ್ಯನ ವಿವೇಚನಾಶಕ್ತಿಯನ್ನೇ ದಗ್ಧಗೊಳಿಸುವದು; ಆಗ

ಮನಸ್ಸು ಸಂಮೋಹಿತ ಹಾಗು ಭ್ರಾಂತಗೊಳ್ಳುವದು; ಕರ್ತವ್ಯ ಅಕರ್ತವ್ಯ ಪ್ರಜ್ಞೆ ಅಡಗುವದು. ಅದರೊಂದಿಗೆ, ಸ್ಮರಣಶಕ್ತಿ ನಾಶವಾಗುವದು; ಗುರೂಪದೇಶ ಸಂಪೂರ್ಣವಾಗಿ ಮರೆತು ಬಿಡುವದು. ಸ್ಮೃತಿ-ಭ್ರಂಶವಾದೊಡನೆ ಬುದ್ಧಿ ಅಳಿಯುವದು. ಕೊನೆಗೆ ಆ ವ್ಯಕ್ತಿ ಮಾನವತೆಯಿಂದ ಪತನಗೊಳ್ಳುವನು. ಅರ್ಜುನ, ಇಂದ್ರಿಯ ನಿಗ್ರಹಿಸಿ, ಮನ ನಿಗ್ರಹಿಸದವನ ಅಧಃಪತನವಿದು!"

ಸಂಕ್ಷೇಪವಾಗಿ ಹೇಳಬೇಕಾದರೆ ವಿಷಯ-ಚಿಂತನದಿಂದ ಗುರು ಶಾಸ್ತ್ರೋಪದೇಶವ ಸ್ಮರಣನಾಶ; ಸ್ಮರಣನಾಶದಿಂದ ವ್ಯಕ್ತಿವಿನಾಶ! ಮನುಷ್ಯನನ್ನು ತಾರಿಸುವದು ಸ್ಮರಣ. ಬಲ್ಲವರ ಮುತ್ತಿನಂಥ ನುಡಿಗಳನ್ನು ಹೆಜ್ಜೆಹೆಜ್ಜೆಗೆ ನೆನೆಸುವವ ನಿರಾಂತಕವಾಗಿ ಸಂಸಾರ ಸಾಗರ ದಾಟುತ್ತಾನೆ. ಸಂಸಾರದಲ್ಲಿದ್ದರೂ ನಿರ್ಲಿಪ್ತನಾಗಿ ಬದುಕುತ್ತಾನೆ. ಅವನಿಗೆ ಪ್ರಾಪಂಚಿಕ ತಾಪವು ಕಷ್ಟಕೊಡದು. ಹರಿಶ್ಚಂದ್ರರಾಜನು ರಾಜ್ಯ, ಸಂಪದ, ಅಧಿಕಾರ ಎಲ್ಲ ಕಳೆದುಕೊಂಡ. ಪ್ರೀತಿಯ ಹೆಂಡತಿಯನ್ನು ನಾಲ್ಕು ಕಾಸಿಗೆ ಮಾರಿದ. ಕೊನೆಗೆ ಹೊಲೆಯಾಳಾದ. ಆದರೆ ಗುರುಶಾಸ್ತ್ರಶಂಸಿತ ಸತ್ಯವನ್ನು ಮಾತ್ರ ಆವನು ಮರೆಯಲಿಲ್ಲ. ಆ ಸತ್ಯದ ಸ್ಮೃತಿ ಅವನನ್ನು ಅಜರಾಮರವಾಗಿಸಿತು.

ಸಾಮಾನ್ಯವಾಗಿ ಮಹಾಜನರಿಗೂ ಕೂಡ ಈ ಸ್ಮರಣೆಯನ್ನು ಕಾಪಾಡಿಕೊಳ್ಳುವದು ಕಷ್ಟ. ಭೀಷ್ಮ ದ್ರೋಣರಂಥ ಮಹಾನುಭಾವರು ಶಾಂತಿಯನ್ನು ಮರೆತು ಯುದ್ಧರಂಗಕ್ಕಿಳಿದರು. ಧರ್ಮ ಅರ್ಜುನರಂಥ ಧರ್ಮಾತ್ಮರು ಸುಶೀಲತೆ ಮರೆತು ಜೂಜಾಡಿದರು; ಧರ್ಮಪತ್ನಿಯನ್ನೇ ಪಣಕ್ಕೆ ಹಚ್ಚಿ ಕಳೆದುಕೊಂಡರು! ಮಹಾಭಾರತದ ಘೋರಯುದ್ಧ ನಡೆದು ಲಕ್ಷಾಂತರ ವೀರಯೋಧರು ರಣದೇವತೆಗೆ ಬಲಿಯಾದುದು ವಿಸ್ಮರಣೆಯಿಂದ!

ಸಮಾಧಿಯ ಅಂಚಿನವರೆಗೆ ಬಂದತಪಸ್ವಿಗಳು, ಯೋಗಿಗಳು, ಜ್ಞಾನಿಗಳು, ಕೂಡ ಸ್ಮೃತಿ ತಪ್ಪಿ ವಿನಾಶದ ಹಾದಿ ಹಿಡಿಯುತ್ತಾರೆ; ದೇವನ ನಿತ್ಯತೆ ಪರಿಪೂರ್ಣತೆಗಳ ಮರೆತು ಕ್ಷುದ್ರ ಸಾಂಸಾರಿಕ ಕಾರ್ಯಗಳಿಗೆ ಕೈಹಾಕುತ್ತಾರೆ. ಆ ಕಾರ್ಯ ಪೂರ್ತಿಯಾಗಿ ಜನ ಕೊಂಡಾಡಿದರೆ ತಮ್ಮ ಜನ್ಮಸಾರ್ಥಕವೆಂದು ಬಗೆಯುತ್ತಾರೆ. ಇಲ್ಲವಾದರೆ ದುಃಖದಿಂದ ಕುಂದುತ್ತಾರೆ.

ಇನ್ನು ಸಾಮಾನ್ಯರ ಗತಿ ದೇವರೇ ಬಲ್ಲ. ಆವರೆದುರಿನಲ್ಲಿಯೇ "ಪಡೆದವರು ಒಡನಾಡಿಗಳು ಮಡದಿ ಮಕ್ಕಳು ಬಂಧುಗಳು ಕಡುಜಾಣರು ಸಾಯುತ್ತಿದ್ದರೂ" ಭೋಗವಾಸನೆ ಕ್ಷಯಿಸದು; ಮರಣದ ಅರಿವಾಗದು. ತಾವು ಅಮರರೆನ್ನುವಂತೆ ಭೋಗ ಸಂಗ್ರಹಕ್ಕೆ ಹಾಗು ಉಪಭೋಗಕ್ಕೆ ತೊಡಗುತ್ತಾರೆ. "ಬಲಿ ವಾಲಿ ಕರ್ಣ ಕೌರವ ರಾಮ ರಾವಣ ನಳ ನಹುಷ ಭೀಮ ಬಲಭದ್ರ ಸಗರ ಪಾರ್ಥ ಕೀಚಕ ಶಿಶುಪಾಲ ದಶರಥ" ಮುಂತಾದ ವೀರರು ಜ್ಞಾನಿಗಳು ಸಾವ

ನಪ್ಪಿದುದನರಿತೂ ದೇವನ ಸ್ಮರಣವಾಗದು. "ಅಜಾನನ್ ಪತತಿ ಶಲಭಃ" ಪತಂಗ ಹುಳ ತಿಳಿಯದೆ ದೀಪದಲ್ಲಿ ಬಿದ್ದರೆ ಜನರು ತಿಳಿದೂ ತಿಳಿದೂ ಮರೆತು ಭೋಗದ ಗಾಳಕ್ಕೆ ಸಿಲುಕುತ್ತಾರೆ. ಉದಾ: ಮದ್ಯಪಾನದಿಂದಲೇ ದೇಶ ಕೆಟ್ಟಿತ್ತು ಎಂಬ ಸಂಗತಿ ಗೊತ್ತಿದ್ದರೂ ಇಂದಿನ ಮುಖಂಡರು ಪಾನ ಪ್ರತಿಬಂಧ ತೆಗೆದರು. ಎಲ್ಲಿಯೋ ಮರೆಯಲ್ಲಿ ಮಾರಾಟವಾಗುತ್ತಿದ್ದ ಸೆರೆ ದೇವಾಲಯಗಳ ನೆರೆಯಲ್ಲೇ ಬಂತು.

ಸಂಬಂಧ:- ಇಂದ್ರಿಯಗಳು ಸ್ವಭಾವತಃ ವಿಷಯೋನ್ಮುಖಿ. ಅವುಗಳನ್ನು ತಡೆಯುವದು ಅಸಾಧ್ಯ. ಹೀಗಿರುವಾಗ ಅವುಗಳನ್ನು ತಡೆಯುವದೆಂತು? ಸ್ಥಿತ ಪ್ರಜ್ಞನಾಗುವದಾದರು ಹೇಗೆ?

**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥೬೪॥**

ಅರ್ಥ:- ತು= ಆದರೆ ರಾಗದ್ವೇಷ ವಿಯುಕ್ತೈಃ=ಆಸಕ್ತಿ ಹಾಗು ದ್ವೇಷ ಭಾವ ಗಳಿಂದ ಬಿಡಲ್ಪಟ್ಟ ಆತ್ಮವಶ್ಯೈಃ =ತನ್ನ ವಶದಲ್ಲಿರುವ, ಇಂದ್ರಿಯೈಃ=ಇಂದ್ರಿಯಗಳಿಂದ, ವಿಷಯಾನ್ =ವಿಷಯಗಳನ್ನು, ಚರನ್ =ಅನುಭವಿಸುತ್ತಿರುವ, ವಿಧೇಯಾತ್ಮಾ = ಮನ ಸ್ಸನ್ನು ನಿಗ್ರಹ ಮಾಡಿರುವ, (ಯೋಗಿಯು) ಪ್ರಸಾದಂ= ಪ್ರಸನ್ನತೆಯನ್ನು ಅಧಿಗಚ್ಛತಿ = ಹೊಂದುತ್ತಾನೆ.

ವಿವರಣೆ:-"ವ್ರಜೇತ ಕಿಂ?" ಎಂಬ ಪ್ರಶ್ನೆಯ ಉತ್ತರವಿಲ್ಲಿದೆ. ಉತ್ಥಾನ ಸ್ಥಿತಪ್ರಜ್ಞನು ನಡೆಯುವ ರೀತಿ, ಬಾಳುವ ಬಗೆಗಳನ್ನು ಈ ಮಂತ್ರದಲ್ಲಿ ವಿವರಿಸಲಾಗಿದೆ.

ರಾಗ, ದ್ವೇಷ. ಈರ್ಷಾ, ಪರಾಪಕಾರ ಚಿಕೀರ್ಷಾ, ಅಸೂಯಾ, ಅಮರ್ಷ ಇವು ಆರು ಚಿತ್ತ ಮಲಗಳು. ಇವುಗಳಿಂದ ಆರು ಬಗೆಯ ಕಾಲುಷ್ಯಗಳು ಹುಟ್ಟುತ್ತವೆ.

೧) **ರಾಗ ಕಾಲುಷ್ಯ:-** ಸ್ರಕ್ಚಂದನ ವನಿತಾದಿ ವಿಷಯಗಳನ್ನು ಅನುಭವಿಸಿ ಇಂದ್ರಿಯ ಸುಖ ಪಡೆದ ನಂತರ ಆ ಸುಖವು ಸದಾ ದೊರೆಯಲಿ; ವನಿತಾದಿ ವಿಷಯಗಳು ಹಾಗೂ ಭೋಗ ಸಾಧನಗಳಾದ ಇಂದ್ರಿಯಗಳು ಯಾವಾಗಲು ಇರಲಿ; ಎಂಬ ರಾಜಸ ವೃತ್ತಿ ವಿಶೇಷವು ಹುಟ್ಟುತ್ತದೆ. ಇದೇ ರಾಗಕಾಲುಷ್ಯ.

ವಿಷಯಗಳಾಗಲಿ, ಇಂದ್ರಿಯಗಳಾಗಲಿ ನಾವು ಬದುಕಿರುವಷ್ಟು ಕಾಲ ಸ್ಥಿರವಾಗಿ ಮತ್ತು ಸಶಕ್ತವಾಗಿ ಉಳಿದಾವು ಎಂದು ಭರವಸೆ ಇಲ್ಲ. ಎಲ್ಲವೂ ಕಾಲದ ಕೈಯಲ್ಲಿ ವಯಸ್ಸು ಹೆಚ್ಚಿದಂತೆ ಇಂದ್ರಿಯಗಳು ಶಿಥಿಲವಾಗುತ್ತವೆ. ಭೋಗ್ಯ ವಸ್ತುಗಳು ಪ್ರತಿಕೂಲವಾಗುತ್ತವೆ; ಇಲ್ಲವೆ ನಾಶವಾಗುತ್ತವೆ. ಅವುಗಳ ಆಸಕ್ತಿ ಮಾತ್ರ ಉಳಿಯುವದು, ಅದು ಚಿತ್ತವನ್ನು ವಿಕ್ಷಿಪ್ತಗೊಳಿಸು ವದು.

(೨) ದ್ವೇಷ ಕಾಲುಷ್ಯ:— ಅನುಭವಿಸಿದಾಗ ದುಃಖ ಕೊಡುವ ವಿಷಯು ಗಳ ಕುರಿತು ಅನಿಷ್ಟ ಚಿಂತನ ಮಾಡುತ್ತೇವೆ. ಆ ದುಃಖ ಹಾಗು ದುಃಖದಾಯಿ ವಿಷಯುಗಳು ನಾಶವಾಗಲಿ ಎಂದು ಚಿಂತಿಸುತ್ತೇವೆ; ಇಂಥ ತಾಮಸ ವೃತ್ತಿ ವಿಶೇಷ ಅನಿಷ್ಟ ಚಿಂತನೆಯೇ ದ್ವೇಷ ಕಾಲುಷ್ಯ.

ದುಃಖಕರ ವಸ್ತುಗಳು ಅಸಂಖ್ಯ. ಅವುಗಳನ್ನು ಪೂರ್ಣ ನಾಶ ಮಾಡು ವದು ಯಾರಿಗೂ ಸಾಧ್ಯವಿಲ್ಲ. ಎಂಥ ವ್ಯಕ್ತಿಯಾದರೂ ಸರಿ, ಅವುಗಳ ಮಧ್ಯೆಯೇ ಬದುಕಬೇಕಲ್ಲವೆ? ಊರಲ್ಲಿದ್ದರೆ ಕಳ್ಳಕಾಕರ ಭಯ; ಅರಣ್ಯದಲ್ಲಿದ್ದರೆ ಸರಿಸೃಪಗಳ ಭಯ, ಅವೆಲ್ಲ ನಾಶವಾಗಲಿಲ್ಲ; ದ್ವೇಷ ತಪ್ಪಲಿಲ್ಲ.

(೩) ಈರ್ಷಾ ಕಾಲುಷ್ಯ:- ಅನ್ಯರ ಗುಣಾಧಿಕ್ಯ, ಧನಾಧಿಕ್ಯ ಮುಂತಾದ ವುಗಳನ್ನು ನೋಡಿದಾಗ ಒಂದು ಬಗೆಯ ಸಂತಾಪ ಉತ್ಪನ್ನವಾಗುತ್ತದೆ. ಆ ಚಿತ್ತಪ್ರಕ್ಷೋಭಕಾರಿ ವೃತ್ತಿವಿಶೇಷವೇ ಈರ್ಷಾ ಕಾಲುಷ್ಯ ಎನಿಸಿದೆ.

ಒಬ್ಬರ ಭೋಗ ಇನ್ನೊಬ್ಬರಿಗೆ ಬರದು. ವಿಶ್ವವಿಜೇತ ಪೈಲ್ವಾನನನ್ನು ನೋಡಿ, ಅಂತರ್ರಾಷ್ಟ್ರೀಯ ಮೇಧಾವಿಗಳನ್ನು ಕಂಡು ನಾನೂ ಹಾಗಾಗಬೇಕೆಂದು ಆಶೆ ಉದಿಸುತ್ತದೆ. ತನಗಿಂತ ಬಲಾಢ್ಯರನ್ನು ಬುದ್ಧಿಮಂತರನ್ನು ಸಂಧಿಸಿದಾಗ ಹೊಟ್ಟೆಯುರಿಯುತ್ತದೆ. ಆದರೆ ನೋಡಿದುದೆಲ್ಲ ನಾವಾಗ ಬಲ್ಲೆವೆ? ಇದು ದೇವರಿಗೂ ಅಸಾಧ್ಯ. ಪಾರ್ವತಿ ಅಷ್ಟೈಶ್ವರ್ಯದ ಮಹಲಿನಲ್ಲಿ ವಿರಮಿಸು ತ್ತಿದ್ದರೂ ಶಂಕರನಿಗೆ ಸ್ಮಶಾನ ವಸತಿ ತಪ್ಪಲಿಲ್ಲ. ನಮ್ಮ ನಮ್ಮ ತಾಟಿನಲ್ಲಿದ್ದುದ ಬಿಟ್ಟು ಅನ್ಯರ ಭೋಗೋಪಭೋಗ ಸಲಕರಣೆಗಳಿಗಾಗಿ ಹಾತೊರೆಯುವ ದೆಂದರೆ ಹುಲಿಯ ಬಣ್ಣಕ್ಕಾಗಿ ನರಿ ಮೈಸುಟ್ಟುಕೊಂಡಂತೆ. ಹಾಸಿಗೆ ಇದ್ದಷ್ಟು ಕಾಲು ಚಾಚುವ ಮನಸ್ಸಿಲ್ಲದ ಮನುಷ್ಯನು ಈರ್ಷಾ ರೂಪ ಕಾಲುಷ್ಯ ವೃತ್ತಿ ವಿಶೇಷದಿಂದ ಉದ್ವಿಗ್ನಗೊಳ್ಳುತ್ತಾನೆ.

(೪) ಪರಾಪಕಾರ ಚಿಕೀರ್ಷಾ ಕಾಲುಷ್ಯ:— ಅನ್ಯರಿಗೆ ಅಪಕಾರ ಮಾಡ ಬೇಕೆಂಬ ಪ್ರಬಲೇಚ್ಛೆ. ತಾವಷ್ಟೇ ಧನಿಕರಾಗಬೇಕು, ಸುಜ್ಞರಾಗಬೇಕು ಎಂದು ಬಯಸುವ ಈ ಪರಾಪಕಾರಿ ಜನರು ಉಳಿದವರು ಉನ್ನತಿ ಹೊಂದುವದನ್ನು ಸಹಿಸಲಾರರು. ಏಕಲವ್ಯನ ಜಾಣ್ಮೆಕಂಡು ಅಸಂತುಷ್ಟರಾದವರು ಅವನ ಹೆಬ್ಬೆರಳನ್ನೇ ಕಡಿಸಿದರು.

(೫) ಅಸೂಯಾ ಕಾಲುಷ್ಯ:- ಒಳ್ಳೆಯವರ ಮೇಲೆ ದೋಷಾರೋಪ ಮಾಡುವದು ಅಸೂಯೆ. ವ್ರತಾಚಾರಿಗಳನ್ನು ಡಂಬೀ ಪಾಷಂಡಿ ಎಂದು ಜರೆ ಯುತ್ತೇವೆ. ನಮಗೆ ವಿದ್ಯಾ ಬುದ್ಧಿ ಸಿರಿ ಸೌಂದರ್ಯ ಅಧಿಕಾರಗಳಲ್ಲಿ ಸರಿಸಮ ನಾಗಿ ಯಾರಾದರು ನಿಂತರೆ ನಮಗೆ ಹೇಳಬರದಷ್ಟು ತಾಪ. ಇಬ್ಬರು ಯೋಗಿ ಗಳು, ಪಂಡಿತರು, ಕಲಾವಂತರು, ಸಪತ್ನಿಯರು ಕೂಡಿ ಬಾಳರು. ವಿರೋಧಿಗಳ

ಮನೆ ಎದುರೇ ಪಟಾಕ್ಷಿ ಪನಿವಾರ ಹಾರಿಸುವದು, ಬಾರಿಸುವದು ಅಸೂಯಾ ಕೃತ್ಯಗಳ ಮಾದರಿ. ಕುಂತಿಯ ವೈಭವ ಕಂಡು ಸಹಿಸದ ಗಾಂಧಾರಿ ಮಣ್ಣಿನ ಆನೆಯ ಮೇಲೆ ಗಜಗೌರಿ ಪೂಜೆ ಹಾಗು ಮೆರವಣಿಗೆ ಮಾಡಿದುದನ್ನು ಕಂಡ ಕುಂತಿದೇವಿ ಮಗನ ಕೈಯಿಂದ ಇಂದ್ರನ ಐರಾವತವನ್ನೇ ತರಿಸಿ ಊರಲ್ಲಿ ಗಜಗೌರಿಯನ್ನು ಮೆರೆಸಿದಳು. ಅದೂ ಗಾಂಧಾರಿಯ ಮನೆಯ ಎದುರಿಗೇ. ಈ ಅಸೂಯೆಯ ಪ್ರದರ್ಶನ ವಿನಾಶಕ್ಕೆ ನಾಂದಿಯಾಯ್ತು.

(೬) ಅಮರ್ಷ ಕಾಲುಷ್ಯ:– ಕುತ್ಸಿತ ವಚನಗಳಿಂದ ತನ್ನ ಅಪಮಾನ ಮಾಡಿದವರ ಮೇಲೆ ಸೇಡು ತಿರಿಸಿಕೊಳ್ಳುವ ಛಲ ತೊಡುತ್ತೇವೆ. ಅದು ಅಮರ್ಷ. ಶಠಸ್ಯ ಶಾಠ್ಯಂ. ಸೇರಿಗೆ ಸವ್ವಾಸೇರು. ಎಂಬ ತತ್ತ್ವ ಇದರಲ್ಲಿದೆ.

ಮನದ ಏಕಾಗ್ರತೆಗೆ ಭಂಗ ತರುವ ಈ ಆರೂ ದೋಷಗಳು ಅಳಿಯ ಬೇಕಾದರೆ ಮೈತ್ರಿ, ಕರುಣಾ, ಮುದಿತಾ, ಉಪೇಕ್ಷಾ, ಎಂಬ ದೈವೀ ಗುಣಗಳನ್ನು ಆಶ್ರಯಿಸಬೇಕಾದುದು ಅತ್ಯಗತ್ಯ.

೧) ಮೈತ್ರಿ:– ಸುಖೀ ಜನರೊಂದಿಗೆ ಸ್ನೇಹದಿಂದ ವರ್ತಿಸುವದು ಮೈತ್ರಿ. ನಮ್ಮ ಮಗ ಪ್ರಧಾನಿಯಾದರೆ, ನಾವೇ ಪ್ರಧಾನಿಯಾದಷ್ಟು ಸಂತೋಷಿಸು ತ್ತೇವೆ; ಅವನೊಂದಿಗೆ ಈರ್ಷೆ ಹೊಂದುವದಿಲ್ಲ, ಅದೇ ರೀತಿ, ಯಾರೇ ಆವರು ಉತ್ಕರ್ಷ ಹೊಂದಿದರೆ ಅವರನ್ನು ಪ್ರೀತಿಸಬೇಕು. ಹಾಗೆ ಮಾಡಿದರೆ ಅವರ ಗಳಿಕೆಯ ಮೇಲೆ ರಾಗವಾಗಲಿ ಈರ್ಷ್ಯೆಯಾಗಲಿ ಉದಿಸಲಾರವು. ಅಂದರೆ ಸುಖ ಪಡುವವರೆಲ್ಲರು ನಮ್ಮ ಮಿತ್ರರೆಂಬ ಭಾವವು ಸುಖಾಸಕ್ತಿರೂಪ ರಾಗವನ್ನು ಅಳಿಸಿಹಾಕುವದು; ರಾಗ ಅಳಿದುದರಿಂದ ಈರ್ಷೆಯೂ ಬಾಳದು.

೨) ಕರುಣಾ:– ದುಃಖಿ ಜೀವಿಗಳನ್ನು ಕಂಡಾಗ ಉಂಟಾಗುವ ದಯಾ ಭಾವನೆಯು ಕರುಣೆ. ಕೂಸು ಅಳುತ್ತಿದ್ದರೆ ತಾಯಿ ಮರಗುತ್ತಾಳೆ; ಮಿತ್ರರ ದುಃಖದಲ್ಲಿ ನಾವೂ ಭಾಗಿಯಾಗುತ್ತೇವೆ. ಹಾಗೆ, ಜಗತ್ತಿನ ಯಾವುದೇ ಜೀವ ದುಃಖಿಯಾಗಿದ್ದರೆ ಅದರ ಬಗ್ಗೆ ನಮ್ಮಲ್ಲಿ ಕನಿಕರ ಭಾವ ಉದಿಸಬೇಕು. ಸಾಧ್ಯ ವಾದ ರೀತಿಯಲ್ಲಿ ಅದಕ್ಕೆ ಸಹಾಯ ಮಾಡಬೇಕು. "ಸರ್ವೇ ಜನಾಃ ಸುಖಿನೋ ಭವಂತು" ಎಲ್ಲರೂ ಸುಖಿಗಳಾಗಲಿ ಎನ್ನುವ ಸಹೃದಯತೆ ಬೆಳೆದು ಬರಬೇಕು. ಇದರಿಂದ ದ್ವೇಷ ಮತ್ತು ಪರಾಪಕಾರ ಚಿಕೀರ್ಷಾ ಕಾಲುಷ್ಯಗಳು ಅಳಿಯುತ್ತವೆ.

೩) ಮುದಿತಾ:- ಸದ್ಗುಣಿ, ಪರೋಪಕಾರಿ, ಹಾಗು ಜ್ಞಾನಿಯಾದ ವ್ಯಕ್ತಿಯನ್ನು ನೋಡಿ ಸಂತೋಷ ಪಡುವದು ಮುದಿತಾ. ಇದರಿಂದ ಅಸೂಯಾ ದೋಷದ ನಾಶ.

೪) ಉಪೇಕ್ಷಾ:– ದುರ್ಜನರು ನಿಂದೆ ಮಾಡಿದಾಗ ಅಪಮಾನಪಡಿಸಿ ದಾಗ, ಹಿಂಸೆ ಕೊಟ್ಟಾಗ ಮೌನವಾಗಿ ಸಹಿಸಿ ಅವರಿಗೆ ಪ್ರತಿ ಕೇಡು ಬಗೆಯ

ದಿರುವದು ಉಪೇಕ್ಷಾ; ಉದಾಸೀನತೆ. ಮಹಾವೀರ ತೀರ್ಥಂಕರರು ತಪಸ್ಸು ಮಾಡುವಾಗ ಕುತ್ಸಿತ ಜನ ಅವನನ್ನು ಜರೆದರು ಹಾಗು ಅವನ ಕಿವಿಯಲ್ಲಿ ಕಟ್ಟಿಗೆ ಚುಚ್ಚಿದರು. ತೀರ್ಥಂಕರರ ಪ್ರಸನ್ನ ಮುಖದ ಮೇಲೆ ಅಸಂತೋಷದ ಛಾಯೆ ಕೂಡ ಮೂಡಲಿಲ್ಲ. ಉಪೇಕ್ಷಾ ಪ್ರತಿಷ್ಠಾಪನೆಯಾದಾಗ ಅಮರ್ಷ ದೋಷ ನಾಶ.

ಹೀಗೆ, ಈ ನಾಲ್ಕು ದೇವಗುಣಗಳ ಮೂಲಕ ಆರು ಚಿತ್ತ ಕಾಲುಷ್ಯಗಳು ಇಲ್ಲದಾಗುತ್ತವೆ. ಮನಸ್ಸು ಅತ್ಯಂತ ಪರಿಶುದ್ಧಗೊಳ್ಳುತ್ತದೆ. ಈ ಶಾಂತಿಯೇ ಪ್ರಸಾದ. ಇದು ಸ್ಥಿತಪ್ರಜ್ಞನ ಸಂಪತ್ತು.

ರಾಗ ದ್ವೇಷವಿಯುಕ್ತೈಃ:- ಸ್ಥಿತಪ್ರಜ್ಞನು ವಿಧೇಯಾತ್ಮಾ; ಯಾರ ಬಗೆಗೂ ಅಸೂಯೆಯಿಲ್ಲ; ಪರಾಪಕಾರ ಬುದ್ಧಿಯಿಲ್ಲ; ಒಳ್ಳೆಯದಲ್ಲದೆ ಕೆಟ್ಟದ್ದೇನೂ ಕಾಣದು; ಅವನ ದೃಷ್ಟಿಯಲ್ಲಿ ಜೀವ ಜಂತುಗಳೆಲ್ಲ ಮಿತ್ರರು! ಅವರ ಸುಖದಲ್ಲಿ ತನ್ನ ಸುಖವನ್ನು ಕಾಣಿಸಿಕೊಳ್ಳುತ್ತಾನೆ. ಅವರಿಂದ ತನಗುಂಟಾದ ತೊಂದರೆಗಳನ್ನು ಉಪೇಕ್ಷಿಸುತ್ತಾನೆ; ಕರುಣಾಪೂರ್ಣ ಹೃದಯಿಯಾದ ಅವನು ದುಃಖಿತರ ಬಂಧು. ಮನಸ್ಸು ಅವನ ಅಂಕಿತದಲ್ಲಿದೆ; ಅದನ್ನು ಅವಲಂಬಿಸಿದ ಇಂದ್ರಿಯಗಳು ಕೂಡ ಅವನ ವಶವಾಗಿವೆ. ವಿಷಯಗಳ ಮಧ್ಯೆ ಲೋಕದವರಂತೆಯೇ ವ್ಯವಹರಿಸುತ್ತಾನೆ; ಆದರೆ ರಾಗ ದ್ವೇಷವಿರಹಿತನಾಗಿ. ಆದುದರಿಂದ ಭೋಗಗಳು ಅವನನ್ನು ಉದ್ವಿಗ್ನಗೊಳಿಸಲಾರವು. ಶಾಂತಿ ನಿರ್ಮಾಲ್ಯ ಅವನಂತರಂಗದಲ್ಲಿ ಅವತರಿಸಿದೆ.

ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।
ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥೬೫॥

ಅರ್ಥ:- ಪ್ರಸಾದೇ= ಚಿತ್ತ ಪ್ರಸನ್ನತೆಯಾಗಲು, ಅಸ್ಯ= ಇವನ, ಸರ್ವದುಃಖಾನಾಂ =ಸಕಲದುಃಖಗಳ, ಹಾನಿಃ =ನಾಶವು ಉಪಜಾಯತೇ= ಉಂಟಾಗುತ್ತದೆ. ಹಿ= ಏಕೆಂದರೆ ಪ್ರಸನ್ನ ಚೇತಸಃ ಬುದ್ಧಿಃ= ಶುದ್ಧ ಚಿತ್ತ ಉಳ್ಳವನ ಬುದ್ಧಿಯು ಪರ್ಯವತಿಷ್ಠತೇ = ಸುಸ್ಥಿರವಾಗುತ್ತದೆ.

ವಿವರಣ:- ಶಾಂತಿ ನಿರ್ಮಾಲ್ಯವೆಂಬ ಪ್ರಸಾದ ದೊರೆತೊಡನೆ ರಾಗ ದ್ವೇಷಾದಿ ಚಿತ್ತ ದೋಷಗಳಿಂದುಂಟಾಗುವ ಹಾನಿಯು ಇಲ್ಲದಾಗುವದು; ನಿಷ್ಕಲ್ಮಷ ಚಿತ್ತವು ಪರಿಶುಭ್ರ ಕನ್ನಡಿಯಂತೆ ಹೊಳೆಯುವದು; ಆಗ ಬುದ್ಧಿಯು ಆತ್ಮಚೇತನದಲ್ಲಿ ಸುಸ್ಥಿರವಾಗುವದು. ಇದೇ ಸಂಗತಿಯನ್ನು ವ್ಯತಿರೇಕ ಮುಖದಿಂದ ಮುಂದಿನ ಮಂತ್ರ ವಿವರಿಸುತ್ತಿದೆ.

ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।
ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥೬೬॥

ಅರ್ಥ:- ಅಯುಕ್ತಸ್ಯ = ಇಂದ್ರಿಯವಶವಿಲ್ಲದವನಿಗೆ, ಬುದ್ಧಿಃ = ಆತ್ಮಪ್ರಜ್ಞೆಯು ನ ಅಸ್ತಿ= ಇರುವದಿಲ್ಲ. ಅಯುಕ್ತಸ್ಯ= ಅಯುಕ್ತನಾದವನಿಗೆ, ಭಾವನಾ = ಆತ್ಮಭಾವನೆ

(ಧ್ಯಾನ) ನ= ಇರುವದಿಲ್ಲ. ಅಭಾವತಃ ಚ= ಮತ್ತು ಧ್ಯಾನಶೀಲನಲ್ಲದವನಿಗೆ ಶಾಂತಿಃ= ಶಾಂತಿಯು (ಆತ್ಮದಲ್ಲಿ ಚಿತ್ತೋಪರತಿಯು) ನ =ಇಲ್ಲ. ಅಶಾಂತಸ್ಯ= ಅಶಾಂತಗೆ ಸುಖಂ= ಮೋಕ್ಷಾನಂದವು ಕುತಃ= ಎಲ್ಲಿ?

ವಿವರಣೆ:- ಮಾನವರಲ್ಲಿ ಮೂರು ವೃತ್ತಿಯ ಜನರಿದ್ದಾರೆ :-

೧) ಮೂಢ ವೃತ್ತಿಯವರು:- ವಿಷಯ-ಸುಖ—ಇಂದ್ರಿಯಗಳ ಬೆನ್ನು ಹತ್ತಿದವರು. ತಾನು, ಜಗತ್ತು, ದೇವರು ಇತ್ಯಾದಿ ವಿಷಯಗಳ ಸಾಮಾನ್ಯ ತಿಳಿವು ಕೂಡ ಇವರಿಗಿಲ್ಲ. ಎದ್ದರೂ ಕುಳಿತರೂ ಭೋಗ ಚಿಂತನೆ.

೨) ಘೋರ ವೃತ್ತಿಯವರು:- ಮೂಢರಿಗಿಂತ ಒಳ್ಳೆಯವರು. ಮನಸ್ಸೆಲ್ಲ ಸ್ವಚ್ಛಂದನಾದಿ ಭೋಗ್ಯ ವಸ್ತುಗಳಲ್ಲಿ. ಇವರು ಪುರಾಣ,ಕೀರ್ತನೆ, ಭಜನೆಗಳಲ್ಲಿ ಅಭಿರುಚಿ ತಾಳಿದ್ದರೂ ಉದ್ದೇಶ ಆತ್ಮಸಾಕ್ಷಾತ್ಕಾರವಲ್ಲ. ತಮ್ಮಂಥ ಜಾಣರು, ಧನಿಕರು ಹಿರಿಯರು ಉಪಸ್ಥಿತರಿದ್ದರೆ ಆ ಪ್ರವಚನಾದಿ ಸಭೆಗಳಿಗೆ ಭೂಷಣ ಎಂದು ಅವರ ಭಾವನೆ. ಮೂಢರು ತಾಮಸಿಕರು; ಇವರು ರಾಜಸಿಕರು.

೩) ಶಾಂತವೃತ್ತಿಯವರು:- ಸಾತ್ವಿಕರು. ಸತ್ಯ ತಿಳಿದುಕೊಳ್ಳಬೇಕು, ಶಾಂತಿ ಪಡೆಯಬೇಕು ಎಂಬ ಆತುರ ಉಳ್ಳವರು. ಆದುದರಿಂದ ಗುರುಗಳ ಸಾನಿಧ್ಯ ಸೇರುತ್ತಾರೆ. ಅವರ ಅನುಭಾವ ವಚನಗಳನ್ನು ಪ್ರೇಮದಿಂದ ಆಲಿಸುತ್ತಾರೆ. ಕೇಳಿದ ಅಮೂಲ್ಯ ಮಾತುಗಳನ್ನು ಅರಗಿಸಿಕೊಳ್ಳುತ್ತಾರೆ. ಇವರಿಗೆ ಇಂದ್ರಿಯಗಳಲ್ಲಿ ಅರತಿ; ಭೋಗ ಚಿಂತನದಲ್ಲಿ ವಿರತಿ. ಆದುದರಿಂದ ಇವರಿಗೆ ಜ್ಞಾನ ಸಿದ್ಧಿ; ಅಖಂಡ ಶಾಂತಿ!

ಶಾಂತವೃತ್ತಿಯವರು ಯುಕ್ತರು; ಉಳಿದೆರಡು ವೃತ್ತಿಯವರು ಅಯುಕ್ತರು. ಪ್ರಸ್ತುತ ಮಂತ್ರವು ಅಯುಕ್ತರ ಬಗ್ಗೆ ವಿವರಿಸುತ್ತಿದೆ.

ಅಯುಕ್ತಸ್ಯ ಬುದ್ಧಿಃ ನಾಸ್ತಿ :— ಮಾನ ಮರ್ಯಾದೆ, ಸುಖ ದುಃಖ, ಕುಂದು ಕೊರತೆ, ಲಾಭ ನಷ್ಟ ಇವುಗಳಿಂದ ತ್ರಸ್ತನಾದ ಅಯುಕ್ತನ ಮನಸ್ಸು ಚಂಚಲ; ಆತ್ಮಬೋಧ ಶ್ರವಣ ಮಾಡಲು ಕುಳಿತರೂ ಮನಸ್ಸು ಏಕಾಗ್ರತೆಯಿಂದ ಆಲಿಸದು; ವಿಷಯವನ್ನು ತಿಳಿದುಕೊಳ್ಳದು. ಆದುದರಿಂದ ಅಯುಕ್ತನಿಗೆ ಆತ್ಮಪ್ರಜ್ಞೆ, ಆತ್ಮಬುದ್ಧಿ ಅಳವಡದು.

ಅಯುಕ್ತಸ್ಯ ನ ಚ ಭಾವನಾ :— ಭಾವನಾ ಎಂದರೆ ಧ್ಯಾನ; ಅನುಭಾವಿ ಗುರುವು ದೊರೆತಾಗ ಬಾಳೆಯ ಬನಹೊಕ್ಕ ಮಂಗಗಳಂತೆ ಗುರೂಪದಿಷ್ಟ ತತ್ತ್ವಗಳನ್ನೆಲ್ಲ ಗಬ ಗಬನೆ ಕಿವಿಯ ಮೂಲಕ ಮನದಲ್ಲಿ ಶೇಖರಿಸಬೇಕು. ಇದು ಶ್ರವಣ. ಬಳಿಕ ನಿವಾಂತ ಸ್ಥಾನದಲ್ಲಿ ಕುಳಿತು ಆ ಶೇಖರಿಸಿದ ಸಂಗತಿಗಳನ್ನು ಮೆಲುಕು ಹಾಕಬೇಕು. ಇದು ಮನನ. ಮಣ್ಣು ಹಳ್ಳಗಳಿಂದ ಧಾನ್ಯ ಬೇರ್ಪಡಿಸುವದೊಂದು ಕಲೆಯಿದೆಯಷ್ಟೆ? ಹಾಗೆ ಆತ್ಮ ಅನಾತ್ಮಗಳನ್ನು ಪೃಥಃ ಕರಿಸುವ ಸುಂದರ ಕಲೆ ಈ ಮನನ. ನಂತರ ಅನಾತ್ಮ ವಸ್ತು-ಭಾವನೆಗಳನ್ನು

ಜೆಲ್ಲಿ ಆತ್ಮ ವಸ್ತುವಿನಲ್ಲಿ ಮನಸನ್ನು ನಿಲ್ಲಿಸಬೇಕು. ಇದು ನಿದಿಧ್ಯಾಸ. ಇದೇ ಧ್ಯಾನ! ಭಾವನೆ! ಅಯುಕ್ತನಿಗೆ ಆತ್ಮಭಾವನೆ, ಆತ್ಮಚಿಂತನೆ ಅಂಗ ವಿಸದು!

**ಅಭಾವಯತಃ ನ ಚ ಶಾಂತಿಃ :–** ತ್ರಿವಿಧ ದೇಹಭಾವ ಹಾಗು ತ್ರಿವಿಧ ಜೀವಭಾವಗಳಳಿದು ಧ್ಯಾನರತ ಚಿತ್ತವು ಆತ್ಮನಲ್ಲಿ ತಲ್ಲೀನವಾದಾಗ ಪರಮ ಶಾಂತಿ! ಅಲ್ಲಿ ಅಹಂ ಮಮಗಳಿಲ್ಲ. ಬರಿ ಆತ್ಮನ ಅಸ್ತಿತ್ವದ ಅರಿವಿದೆ. ಅಯುಕ್ತ ನಾದರೋ ಜೀವಭಾವಿ, ದೇಹಪ್ರೇಮಿ! ಇಂದ್ರಿಯಾರಾಮಿಯಾದ ಅವನು ಒಂದು ನಿಮಿಷಕೂಡ ಆತ್ಮನ ಬಗ್ಗೆ ಚಿಂತನೆ ಮಾಡಲಾರ! ಆದುದರಿಂದ ದಿವ್ಯಶಾಂತಿ ಅವನಿಗಿಲ್ಲ.

**ಅಶಾಂತಸ್ಯ ಕುತಃ ಸುಖಂ? :–** ಪರಮಾತ್ಮನೋರ್ವನೆ ಅಖಂಡ ಆನಂದ ಸಾಗರ. ಯುಕ್ತನಾಗಿ ಜೀವನು ಆವನಲ್ಲಿ ಸಮರಸನಾದರೆ ಆ ಆನಂದದ ಆವಿರ್ಭಾವ. ಅಯುಕ್ತನಿಗೆ ಆತ್ಮ ಜ್ಞಾನವಿಲ್ಲ; ಆತ್ಮಧ್ಯಾನವಿಲ್ಲ; ಶಾಂತಿಯಿಲ್ಲ: ಎಂತಲೇ ಸುಖವಿಲ್ಲ. ಮಕ್ಕಳ ಆಯುಷ್ಯವನ್ನು ಪಡೆದು ಸಾವಿರಾರು ವರುಷ ಇಂದ್ರಿಯ ಭೋಗದಲ್ಲಿ ಮುಳುಗಿದ್ದ ಯಯಾತಿ ರಾಜ ಕೊನೆಗೆ ಉದ್ಗರಿಸು ತ್ತಾನೆ: "ಭೋಗಾ ನ ಭುಕ್ತಾ ವಯಮೇವ ಭುಕ್ತಾಃ" ನಾವು ಭೋಗಗಳನ್ನು ಭೋಗಿಸಲಿಲ್ಲ. ನಮ್ಮನ್ನೇ ಭೋಗಗಳು ಭೋಗಿಸಿದವು.

**ಸಂಬಂಧ :–** ಇದೇ ವಿಷಯ ಮುಂದುವರೆದಿದೆ.

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥೬೭॥**

**ಅರ್ಥ :–** ಹಿ= ಏಕೆಂದರೆ, ಯತ್ ಮನಃ = ಯಾವ ಮನಸ್ಸು ಚರತಾಂ ಇಂದ್ರಿ ಯಾಣಾಂ = (ವಿಷಯಗಳಲ್ಲಿ ಸ್ವೈರವಾಗಿ) ಚರಿಸುತ್ತಿರುವ ಇಂದ್ರಿಯಗಳಲ್ಲಿ (ಯಾವು ದಾದರು ಒಂದು ಇಂದ್ರಿಯವನ್ನು) ಅನುವಿಧೀಯತೇ = ಅನುಸರಿಸುತ್ತದೋ. ತತ್ = ಅದು, ವಾಯುಃ = ವಾಯುವು ಅಂಭಸಿ = ನೀರಿನಲ್ಲಿ ನಾವಂ ಇವ = ದೋಣಿಯನ್ನು (ಸೆಳೆದೊಯ್ಯುವಂತೆ) ಅಸ್ಯ = ಅಯುಕ್ತನ, ಪ್ರಜ್ಞಾಂ = ಬುದ್ಧಿಯನ್ನು, ಹರತಿ = ಅಪಹರಿಸುತ್ತದೆ (ವಿಕ್ಷಿಪ್ತಗೊಳಿಸುತ್ತದೆ.)

**ವಿವರಣೆ :–** ಶಬ್ದಾರಣ್ಯ, ಸ್ಪರ್ಶಾರಣ್ಯ, ರೂಪಾರಣ್ಯ, ರಸಾರಣ್ಯ ಹಾಗು ಗಂಧಾರಣ್ಯ ಎಂದು ಪ್ರಪಂಚದಲ್ಲಿ ಐದು ಭಯಾನಕ ಅರಣ್ಯಗಳಿವೆ. ಅವುಗಳಲ್ಲಿ ರಾಗ, ದ್ವೇಷ ಮುಂತಾದ ಅಸಂಖ್ಯ ಕ್ರೂರ ಮೃಗಗಳು ವಾಸ ಮಾಡಿವೆ. ಇಂದ್ರಿಯಗಳೆಂಬ ಕುದುರೆಗಳನ್ನು ಸ್ವೈರವಾಗಿ ಹರಿಬಿಟ್ಟ ಜೀವ ಯಾತ್ರಿಕನು ಆ ಘೋರ ಅರಣ್ಯಗಳನ್ನು ಸೇರಿ ಭಯಂಕರ ಪ್ರಾಣಿಗಳ ಬಾಯಿಗೆ ತುತ್ತಾಗುತ್ತಾನೆ. ಅಲ್ಲೆಲ್ಲಿ ಸುಖ? ಭಗವಂತನು ಬೇರೊಂದು ಉಪಮೆಯಿಂದ ವಿವರಿಸುತ್ತಾನೆ.

ವಾಯುರ್ನಾವಮಿವ :- ಮಹಾನ್ ಸಾಗರ! ನಡು ಮಧ್ಯದಲ್ಲಿ ಜೀವ ನೌಕೆ. ಅದಕ್ಕೆ ಹುಟ್ಟಿಲ್ಲ, ಚುಕ್ಕಾಣಿಯಿಲ್ಲ. ನಾವಿಕ ಸೆರೆಕುಡಿದು ಉನ್ಮತ್ತನಾಗಿದ್ದಾನೆ. ಚಂಡಮಾರುತ ರಭಸದಿಂದ ಬೀಸಲು ಪ್ರಾರಂಭಿಸಿತೆನ್ನಿ. ಆಗ ಸಮುದ್ರವನ್ನೇ ಆಲ್ಲೋಲ ಕಲ್ಲೋಲಗೊಳಿಸುವ ಆ ಬಿರುಗಾಳಿ ನೌಕೆಯನ್ನು ಸಿಕ್ಕ ಸಿಕ್ಕ ದಿಕ್ಕಿನಲ್ಲಿ ಸೆಳೆದೊಯ್ಯುವದು. ಕೊನೆಗೆ ನೌಕೆಯು ತೆರೆಗಳ, ಬರ್ಫಪರ್ವತಗಳ ಆಘಾತಕ್ಕೆ ಸಿಕ್ಕು ಚೂರು ಚೂರಾಗಿ ಒಡೆದು ಹೋಗುವದು. ಹಾಗೆ ಮನಸ್ಸು ನೌಕೆ; ಸುಸಾರವೇ ವಿಸ್ತಾರ ಶರಧಿ. ಜೀವ ನಾವಿಕ; ವಿವೇಕಬುದ್ಧಿ-ಚುಕ್ಕಾಣಿ ಮುರಿದು ಹೋಗಿದೆ. ವಿಷಯ ವ್ಯಾಮೋಹದಿಂದ ಜೀವ ಉನ್ಮತ್ತ. ಪಂಚೇಂದ್ರಿಯಗಳಲ್ಲಿ ಯಾವುದಾದರೊಂದು ಇಂದ್ರಿಯ ಹಾಗೂ ಆ ಇಂದ್ರಿಯಾನುಭವಜನ್ಯ ವಾಸನೆಗಳ ಜುಂಜಾವಾತ ಸುಯ್ಯನೆ ಬೀಸುವದು. ಆಗ ಜೀವನ ಮನೋ ನೌಕೆ ಗೊತ್ತು ಗುರಿಯಿಲ್ಲದೆ ಎತ್ತೆತ್ತಲೋ ತೂರಲ್ಪಡುವದು. ಕಾಮಾದಿ ಭಯಾನಕ ಹೊಡೆತಕ್ಕೆ ಸಿಲುಕಿ ಕಡೆಗೊಮ್ಮೆ ಮುಳುಗುವದು. ಇದು ಅಯುಕ್ತ ಜನರ ಜೀವನದ ರೀತಿ.

ಸ್ಥಿತಪ್ರಜ್ಞನ ನೌಕೆ ತನ್ನ ಗಮ್ಯ ಸ್ಥಾನವನ್ನು ತಲುಪಿದೆ. ಅದೂ ಸುರಕ್ಷಿತವಾಗಿ. ಅದಕ್ಕೆ ಕಾರಣ ಅವನ ನಿರ್ಮಲ ಮನಸ್ಸು, ನಿಶ್ಚಲಬುದ್ಧಿ ಹಾಗು ರಾಗ ದ್ವೇಷವಿಹೀನ ಭಾವ! ಜನಕ ಮಹಾರಾಜನ ಜೀವನವು ಸ್ಥಿತಪ್ರಜ್ಞ ಜೀವನದ ಸುಂದರ ಮಾದರಿ. ಒಮ್ಮೆ ಗುರು-ಯಾಜ್ಞವಲ್ಕ್ಯರ ಎದುರು ಆತ್ಮೋಪದೇಶ ಕೇಳಲು ಕುಳಿತಿದ್ದ. ಯಾರೋ ಸುದ್ದಿ ತಂದರು: "ಮಿಥಿಲಾ ಪಟ್ಟಣ ಅಗ್ನಿಗೆ ಆಹುತಿಯಾಗುತ್ತಿದೆ! ಭಯಂಕರ ಅಗ್ನಿಯ ಕರಾಳ ನಾಲಿಗೆಗಳು, ಮಹಾರಾಜ, ತಮ್ಮ ಅರಮನೆಯತ್ತ ಚಾಚಿ ಕೊಳ್ಳುತ್ತಿವೆ!" ಈ ಸುದ್ದಿ ಕಿವಿಗೆ ಬಿದ್ದ ಮರುಕ್ಷಣವೇ ಶಿಷ್ಯರೆಲ್ಲ ಗಾಬರಿಯಿಂದ ಓಡಿ ಹೋದರು. ಜನಕ ಮಹಾರಾಜ ಮಾತ್ರ ಶಾಂತನಾಗಿ ನುಡಿದ: "ಮಿಥಿಲಾಯಾಂ ಪ್ರದಗ್ಧಾಯಾಂ ನ ಮೇ ಕಿಂಚನ ದಹ್ಯತಿ": ಮಿಥಿಲೆಯೇ ಉರಿದು ಹೋದರೂ ನನ್ನ ಒಂದು ಕೇಶಕೂಡ ಸುಡದು!! ಎಂಥ ಸುಸ್ಥಿರ ಪ್ರಜ್ಞೆ!

ತಸ್ಮಾದಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೮॥

ಅರ್ಥ:- ಮಹಾಬಾಹೋ =(ದೊಡ್ಡ ಬಾಹುಗಳುಳ್ಳ) ಅರ್ಜುನ, ತಸ್ಮಾತ್ =(ಇಂದ್ರಿಯ ನಿಗ್ರಹವಿಲ್ಲದವನ ಬುದ್ಧಿ ಹಾಳಾಗುವದು) ಆದುದರಿಂದ, ಇಂದ್ರಿಯಾರ್ಥೇಭ್ಯಃ= ಇಂದ್ರಿಯ-ವಿಷಯಗಳಿಂದ, ಯಸ್ಯ =ಯಾವನ, ಇಂದ್ರಿಯಾಣಿ =ಇಂದ್ರಿಯಗಳು, ಸರ್ವಶಃ ನಿಗೃಹೀತಾನಿ =ಸರ್ವ ರೀತಿಯಲ್ಲಿ ನಿಗ್ರಹೀತವಾಗಿರುವವೋ ತಸ್ಯ= ಅವನ ಪ್ರಜ್ಞಾ= ಪ್ರಜ್ಞೆಯು ಪ್ರತಿಷ್ಠಿತಾ= ಸ್ಥಿರವಾಗಿದೆ.

ವಿವರಣೆ:- ಭಗವಂತ:- "ಧನಂಜಯ, ನಾನು ನಿರೂಪಿಸಿದುದನೆಲ್ಲ

ಮತ್ತೊಮ್ಮೆ ನಿನ್ನ ಸ್ಮರಣೆಗೆ ತಂದು ಕೊಡುವೆ. ಇಂದ್ರಿಯಗಳು ನಮ್ಮನ್ನು ಸಾಂಸಾರಿಕ ಕಂದರಕ್ಕೆ ನೂಕುತ್ತವೆ. ಶಾಂತಿ ಪಡೆಯಲಿಚ್ಛಿಸುವ ಸಾಧಕನು ಆ ಇಂದ್ರಿಯಗಳನ್ನು ಸಂಪೂರ್ಣವಾಗಿ ನಿರೋಧಿಸಬೇಕು. ಮನಸ್ಸನ್ನು ನಿಷ್ಕಲ್ಮಷಗೊಳಿಸಿ ಆತ್ಮಧ್ಯಾನಕ್ಕೆ ಹಚ್ಚಬೇಕು. ಅದು ಸುಸ್ಥಿರತೆ ಪಡೆದರೆ ಅವರಲ್ಲಿ ಆತ್ಮಜ್ಞಾನಪ್ರಕಾಶಾವತರಣ! ಆಗ ಸಾಧಕನು ಸ್ಥಿತಪ್ರಜ್ಞ!"

ಇದೇ ಸಂದರ್ಭದಲ್ಲಿ ಕಠೋಪನಿಷತ್ತಿನ ಕೆಲವು ಮಾತುಗಳು ಮನನೀಯ:

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವಚ ॥೩॥
ಇಂದ್ರಿಯಾಣಿ ಹಯಾನ್ಯಾಹುರ್ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥೪॥
ಯಸ್ತ್ವ ವಿಜ್ಞಾನವಾನ್ಭವತ್ಯಯುಕ್ತೇನ ಮನಸಾ ಸದಾ ।
ತಸ್ಯೇಂದ್ರಿಯಾಣ್ಯವಶಾನಿ ದುಷ್ಟಾಶ್ವಾ ಇವ ಸಾರಥೇಃ ॥೫॥
ಯಸ್ತು ವಿಜ್ಞಾನವಾನ್ಭವತಿ ಯುಕ್ತೇನ ಮನಸಾ ಸದಾ ।
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥೬॥
ಯಸ್ತ್ವವಿಜ್ಞಾನವಾನ್ಭವತ್ಯಮನಸ್ಕಃ ಸದಾ ಶುಚಿಃ ।
ನ ಸ ತತ್ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥೭॥
ಯಸ್ತು ವಿಜ್ಞಾನವಾನ್ಭವತಿ ಸಮನಸ್ಕಃ ಸದಾಶುಚಿಃ ।
ಸತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥೮॥
ವಿಜ್ಞಾನ ಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥೯॥

(ಅ ೧, ವ ೩)

ಆತ್ಮನನ್ನು ರಥಿಕನೆಂದು, ಶರೀರವನ್ನು ರಥವೆಂದು, ಬುದ್ಧಿಯನ್ನು ಸಾರಥಿ ಎಂದು, ಮನಸ್ಸನ್ನು ಕಡಿವಾಣವೆಂದು ತಿಳಿ ॥೩॥ ಇಂದ್ರಿಯಗಳು ಕುದುರೆಗಳು. ವಿಷಯಗಳು ಇಂದ್ರಿಯ ಮಾರ್ಗಗಳು. ಶರೀರ ಇಂದ್ರಿಯ ಮನಸ್ಸುಗಳಿಂದ ಕೂಡಿದ ಜೀವಾತ್ಮನು ಸಂಸಾರಿ. ಇದು ಬಲ್ಲವರ ಮಾತು. ॥೪॥ ಯಾವನ ಮನಸ್ಸು ಅನಿಗ್ರಹಿತವೋ, ಯಾವನ ಸಾರಥಿ ಅವಿಚಾರಿಯೋ, ಅವನ ಇಂದ್ರಿಯಗಳು ತುಂಟು ಕುದುರೆಗಳಂತೆ ಅವಶ ॥೫॥ ಯಾವನ ಮನಸ್ಸು ನಿಗ್ರಹೀತವಾಗಿದೆಯೋ, ಯಾವನ ಸಾರಥಿ ವಿವೇಕಿಯೋ ಅವನ ಇಂದ್ರಿಯಗಳು ಒಳ್ಳೆಯ ಕುದುರೆಗಳಂತೆ ವಶ ॥೬॥ ಯಾವನ ಸಾರಥಿ ಅವಿವೇಕಿಯೋ, ಯಾವನ ಮನಸ್ಸು ಅಸಂಯತವೋ, ಅಶುಚಿಯೋ ಅವನು ಆ ಮುಕ್ತಿ ಪದವನ್ನು ಹೊಂದುವದಿಲ್ಲ, ಮತ್ತು ಸಂಸಾರವನ್ನು ಹೊಂದುತ್ತಾನೆ. ॥೭॥ ಯಾವನ ಸಾರಥಿ ವಿವೇಕಿಯೋ ಯಾವನ ಮನಸ್ಸು ಸಂಯಮಿತವೋ, ಶುಚಿಯೋ ಅವನು ಅಮರ ಪದ ಪಡೆಯುತ್ತಾನೆ. ॥೮॥ ವ್ಯವಸಾಯಾತ್ಮಿಕ ಬುದ್ಧಿ ಎಂಬ ಸಾರಥಿ

ಯುಳ್ಳ ಜೀವನು ವಿಶುದ್ಧ ಮನವೆಂಬ ಲಗಾಮಿನಿಂದ ಇಂದ್ರಿಯ ಕುದುರೆಗಳನ್ನು ದೇವ ಮಾರ್ಗದಲ್ಲಿ ನಡೆಸಿ ಸಂಸಾರದ ಕೊನೆಯನ್ನು ತಲುಪುತ್ತಾನೆ; ಹಾಗು ವಿಷ್ಣು ಪದವನ್ನು ಹೊಂದುತ್ತಾನೆ. ॥೬೮॥

**ಸಂಬಂಧ:-** ಇಂದ್ರಿಯ ನಿಗ್ರಹ ಮಾಡಿ ಸ್ವರೂಪಾನುಭೂತಿ ಗಳಿಸಿದವನು ಸ್ಥಿತಪ್ರಜ್ಞ. ನಿಗ್ರಹವಿಲ್ಲದ ಭೋಗಿಯು ಚಂಚಲ ಪ್ರಜ್ಞ. ಇವರಿಬ್ಬರ ಮಧ್ಯದ ಅಂತರವೇನು?

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥೬೯॥**

**ಅರ್ಥ:-** ಸರ್ವ ಭೂತಾನಾಂ= ಸರ್ವ ಪ್ರಾಣಿಗಳಿಗೆ, ಯಾ= ಯಾವುದು, ನಿಶಾ = ರಾತ್ರಿಯೋ, ತಸ್ಯಾಂ= ಅದರಲ್ಲಿ ಸಂಯಮೀ =ಸಂಯಮಶೀಲ ಯೋಗಿಯು ಜಾಗರ್ತಿ = ಎಚ್ಚರಿರುತ್ತಾನೆ. ಯಸ್ಯಾಂ= ಯಾವುದರಲ್ಲಿ ಭೂತಾನಿ= ಪ್ರಾಣಿಗಳು ಜಾಗ್ರತಿ =ಎಚ್ಚರಿರುತ್ತವೆಯೋ ಪಶ್ಯತಃ ಮುನೇಃ= ಆತ್ಮದರ್ಶಿ ಮುನಿಗೆ ಸಾ ನಿಶಾ =ಅದು ರಾತ್ರಿಯು.

**ವಿವರಣೆ:- ಯಾ ನಿಶಾ:-** ಸೂರ್ಯನನ್ನು ಅವಲಂಬಿಸಿದ ಹಗಲು ರಾತ್ರಿಗಳು ಸಾಧಕವೂ ಅಲ್ಲ, ಬಾಧಕವೂ ಅಲ್ಲ. ಹಾಡು ಹಗಲೇ ಪಾಪ ಮಾಡಬಹುದು; ಸರಿ ರಾತ್ರಿಯ ಕರಾಳ ಕತ್ತಲೆಯಲ್ಲೂ ಪುಣ್ಯ ಮಾಡಬಹುದು; ಪಾಪ ಪುಣ್ಯ ಕ್ರಿಯೆಗಳಿಗೆ ಹಾಗು ಹಗಲು ರಾತ್ರಿಗಳಿಗೆ ಯಾವ ಸಂಬಂಧವೂ ಇಲ್ಲ. ಆದುದರಿಂದ ರಾತ್ರಿ ಜಾಗರಣ ಮಾಡುವವರು ಯೋಗಿಗಳೆಂದಾಗಲಿ, ಹಗಲು ಜಾಗರಣವಿರುವವರು ಭೋಗಿಗಳೆಂದಾಗಲಿ ಹೇಳುವದು ಸರಿಯಲ್ಲ.

ನಿಜವಾದ ಹಗಲು ರಾತ್ರಿಗಳಾವವು? ಆತ್ಮಸ್ವರೂಪದ ಅಖಂಡ ಜ್ಞಾನ ಪ್ರಕಾಶವು ಹಗಲು. ಆತ್ಮ ಸ್ವರೂಪವನ್ನು ಮರೆ ಮಾಚಿಸುವ ಅಜ್ಞಾನಾಂಧಕಾರವು ರಾತ್ರಿ. ಹಗಲು ಆತ್ಮದರ್ಶನ; ರಾತ್ರಿ ಸಂಸಾರ ದರ್ಶನ. ಹಗಲಿನಲ್ಲಿ ಸಂಸಾರ ಕಾಣದು; ರಾತ್ರಿಯಲ್ಲಿ ಆತ್ಮನು ಕಾಣ! ಸಂಸಾರ ಕಾಣುವವರು ನಿಶಾಚರರು; ಆತ್ಮದರ್ಶಿಗಳು ದೇವತೆಗಳು!

ಆತ್ಮವಿದ್ಯಾರೂಪ ಹಗಲು, ಆತ್ಮನ ಆವರಕ ಅವಿದ್ಯಾರೂಪ ರಾತ್ರಿಗಳ ವಿಶೇಷ ವಿವರ:-

ಅವಿದ್ಯೆ ವಿಶ್ವದ ಜನನಿ; ಜೀವ ಭಾವನೆಯ ಮಾತೆ! ಜಗತ್ತು, ಜೀವರು, ಕರ್ಮ ಸಿದ್ಧಾಂತ, ಬಂಧನ ಇತ್ಯಾದಿ ಸಾಂಸಾರಿಕ ಕಲ್ಪನೆಗಳೆಲ್ಲ ಅವಿದ್ಯಾಗರ್ಭದಿಂದ ಹೊರಬಂದಿವೆ. ಈ ಅವಿದ್ಯೆಯ ರೂಪುಗಳು ಐದು:-

**(ಅ) ತಮ:.** ಅವಿದ್ಯೆಯು ತಮ ರೂಪದಿಂದ ಜೀವ ಚೇತನವನ್ನು ಮುಚ್ಚಿ ಹಾಕಿ 'ಪ್ರಾಕೃತಿಕ ತತ್ತ್ವ ಪುಂಜವಾದ ದೇಹವೇ ತಾನು; ದೇಹ ಭಿನ್ನ ಆತ್ಮವಿಲ್ಲ' ಎಂಬ ಭಾವ ಹುಟ್ಟಿಸುತ್ತದೆ.

**(ಬ) ಮೋಹ:-** ಇದು ಅವಿದ್ಯೆಯ ದ್ವಿತೀಯ ರೂಪ. ಗುರು ಹಾಗು

ಶಾಸ್ತ್ರ ಶ್ರವಣ, ಮನನ, ನಿಧಿಧ್ಯಾಸಗಳನಾಚರಿಸಿ ಅಪರೋಕ್ಷ ಜ್ಞಾನ ಮಾಡಿ ಕೊಂಡೆವೆಂದು ಧೈರ್ಯದಿಂದ ಸಾರುವ ಧೀರರನ್ನೇ ಮುಸುಕಿ ಬಿಡುವ ಸಾಮರ್ಥ್ಯ ಇದಕ್ಕಿದೆ. ಮಹಾ ಮಹಾ ತಪಸ್ವಿಗಳೆದುರು ಅಣಿಮಾ, ಗರಿಮಾ, ಲಘಿಮಾ ಮಹಿಮಾ, ಪ್ರಾಕಾಮ್ಯ, ಪ್ರಾಪ್ತ್ಯ, ವಶಿತ್ವ, ಈಶಿತ್ವ ಎಂಬ ಮಹಾನ್ ಸಿದ್ಧಿಗಳ ತೋರಿ ಮರುಳು ಮಾಡುವದು. ತಪಸ್ವಿಗಳು ಪಾರಮಾರ್ಥ ಸಾಧನೆ ಮರೆತು ಜನಾನುರಾಗಕರ ಸಿದ್ಧಿ ವ್ಯಾಮೋಹಿಗಳಾಗಿ ಆತ್ಮಪಥಭ್ರಷ್ಟರಾಗುವರು.

(ಕ) ಮಹಾಮೋಹ:- ಅವಿದ್ಯೆಯ ತೃತೀಯ ರೂಪ. ಆತ್ಮನ ಭಾನವೇ ಬರವಷ್ಟು ಗಾಢವಾಗಿ ಆಚ್ಛಾದಿಸಿದೆ; ಇದು ವಿಶ್ವ ವ್ಯಾಪಿಯಾದ ಅಂಧಕಾರ. ಇದರಲ್ಲಿ ಸಿಕ್ಕ ಜೀವರು ಬಲಿದ ಲೌಕಿಕರು! ಅವರಿಗೆ ಸತಿ ಪುತ್ರಾದಿಗಳೇ ಬ್ರಹ್ಮ!

ಡ) ತಾಮಿಶ್ರ:– ಅವಿದ್ಯೆಯ ನಾಲ್ಕನೆಯ ರೂಪ. ಇಹ ಪರ ಭೋಗ ವಿಷಯಗಳನ್ನು ಕಷ್ಟ ಪಟ್ಟು ಗಳಿಸುವಾಗ ಅನೇಕ ಪ್ರತಿ ಸ್ಪರ್ಧಿಗಳಿಂದ ಪ್ರತಿ ರೋಧ ಉಂಟಾಗುತ್ತದೆ. ಆಗ ಮನದಲ್ಲಿ ದ್ವೇಷ ಜ್ವಾಲೆಗಳೇಳುತ್ತವೆ. ಈ ದ್ವೇಷದ ಜನನಿಯೇ ತಾಮಿಶ್ರ.

ನಾರದ ಹಾಗು ಪರ್ವತರಾಜರಿಬ್ಬರೂ ಕಾಶೀ ರಾಜನ ಮಗಳ ಸೌಂದರ್ಯ ಕಂಡು ಮರುಳಾದರು. ಆ ಇಬ್ಬರಲ್ಲೂ ಪರಸ್ಪರ ಮಾತ್ಸರ್ಯ, ದ್ವೇಷ ಹುಟ್ಟಿ ಕೊಂಡವು. ಕಡೆಗೆ ಇಬ್ಬರೂ ತಪಶ್ಚರ್ಯಕ್ಕೆ ಕುಳಿತರು ಬೇರೆ ಬೇರೆ ಸ್ಥಾನಗಳಲ್ಲಿ. ಪರಮಾತ್ಮನು ನಾರದನಿಗೆ ಕಾಣಿಸಿಕೊಂಡ, ಅಭೀಷ್ಟವೇನೆಂದು ಕೇಳಿದ. "ಮಹಾ ದೇವ, ಕಾಶೀ ರಾಜನ ಮಗಳ ಸ್ವಯಂವರ ನಡೆಯಲಿದೆ. ಆ ಕಾಲಕ್ಕೆ ರಾಜ ಪುತ್ರಿಯ ಕಣ್ಣಿಗೆ ಪರ್ವತ ರಾಜನ ಮುಖ ಕರಡಿಯಂತೆ ಕಾಣುವಂತಾಗಲಿ" ಹೀಗೆ ನಾರದ ವಿನಂತಿಸಿದ. "ತಥಾಸ್ತು!" ಎಂದ ದೇವ. ನಂತರ ಶಿವನು ಪರ್ವತ ರಾಜನಿಗೆ ಪ್ರತ್ಯಕ್ಷನಾದ; ಅಭೀಷ್ಟ ಕೇಳಿದ. ಅದಕ್ಕೆ ಪರ್ವತರಾಜ "ದೇವ, ಜಗ ತ್ಪತೆ, ಕಾಶೀ ರಾಜನ ಮಗಳಿಗೆ ನಾರದನ ಮುಖ ಮಂಗನಂತೆ ಕಾಣಲಿ" ಎಂದು ಬೇಡಿದ. "ತಥಾಸ್ತು!" ಎಂದು ಹೇಳಿ ಶಿವನು ಅಂತರ್ಧಾನನಾದ. ಇತ್ತ ಸ್ವಯಂ ವರಕ್ಕೆ ಹೋದ ನಾರದ, ಪರ್ವತರಾಜರ ವಿಕೃತ ಮುಖ ಕಂಡು ರಾಜ ಪುತ್ರಿ ಅಸಹ್ಯ ಪಟ್ಟು ನಕ್ಕಳು. ಇದು ತಾಮಿಶ್ರದ ಉದಾಹರಣೆ.

ಇ) ಅಂಧ ತಾಮಿಶ್ರ:– ಅವಿದ್ಯೆಯ ಪಂಚಮ ರೂಪ. ದೊರೆತ ಸಿದ್ಧಿ ಗಳು ಕಲ್ಪಾಂತ್ಯದಲ್ಲಿ ಕೈಬಿಟ್ಟು ಹೋಗುವವಲ್ಲ ಎಂಬ ಕಳವಳಕ್ಕೆ ಕಾರಣ ಅಂಧ ತಾಮಿಶ್ರ.

ಪರ್ವತದ ತುದಿಯ ಮೇಲಿರುವ ಬಂಡೆ ಆಯ ತಪ್ಪಿತೆಂದರೆ ಕೆಳಗಿನ ಆಳ ವಾದ ಕೊಳ್ಳದತ್ತ ರಭಸದಿಂದ ಉರುಳುವದು. ಹಾಗೆ ಅವಿದ್ಯಾಂಧಕಾರದಲ್ಲಿ ಕಾಲಿಟ್ಟ ಜೀವ ಆತ್ಮಶಿಖರದಿಂದ ತಲೆಕೆಳಗಾಗಿ ಉರುಳುವನು; ತಮ, ಮೋಹ,

ಮಹಾಮೋಹ, ತಾಮಿಶ್ರ, ಅಂಧತಾಮಿಶ್ರ ಎಂಬ ಉತ್ತರೋತ್ತರ ಗಾಡಾಂಧಕಾರದ ಕಂದರಗಳಲ್ಲಿ-ಕ್ಷಣ ಕ್ಷಣಕ್ಕೂ ವರ್ಧಿಸುವ ವೇಗದಿಂದ-ನುಗ್ಗಿ, ಪತನ ಹೊಂದಿ ವಿನಾಶದ ಕೊಳ್ಳ ಸೇರುವನು.

ಪತನ ಹೊಂದುವ ಇಂಥ ಜೀವರೇ ನಿಶಾಚರರು. ವಿಶ್ವದ ತುಂಬ ತುಂಬಿದ ಆತ್ಮ ಪ್ರಕಾಶದ ಕಿಂಚಿತ್ ಭಾನ ಕೂಡ ಇವರಿಗಿಲ್ಲ. ಇವರು ಜಾತಿ ಧರ್ಮಗಳ ವಿವಿಧ ಸಿದ್ಧಾಂತಗಳ ಭೇದ ಬಲೆಗೆ ಸಿಲುಕಿದ್ದಾರೆ. ನಿಚ್ಚಳವಾದ ಆತ್ಮ ಸೂರ್ಯನ ದಿವ್ಯ ಬೆಳಗಿನಲ್ಲಿಯೇ ಅದರ ತಿಲ ಮಾತ್ರವೂ ಭಾನವಿಲ್ಲದೆ ಮಲಗಿದ್ದಾರೆ. ಇವರನ್ನು ಅವಿದ್ಯೆಯು ಹಾಸಿ ಹೊಚ್ಚಿ ಮಲಗಿಸಿದೆ. ಬ್ರಹ್ಮ ಹರಿ ಹರರು ಕೂಡ ನಿದ್ರಾವಶರು; ಅವಿದ್ಯಾಂಧಕಾರದಲ್ಲಿ ಎಚ್ಚರಾಗಿ ಮಾನ, ಸ್ಥಾನ, ಪ್ರತಿಷ್ಠೆಗಳಿಗಾಗಿ ಘೋರ ಕಾಳಗ ಮಾಡಿದರು. " ಜಗವ ಸುತ್ತಿರ್ಪುದು ನಿನ್ನಯ ಮಾಯೆ " ಜಗವೆಲ್ಲ ನಿನ್ನ ಮಾಯೆಯನ್ನಾಶ್ರಯಿಸಿ ಬಾಳುತ್ತಿದೆ. ಈ ನುಡಿ ಸತ್ಯಕ್ಕೆ ಕನ್ನಡಿ!

**ತಸ್ಯಾಂ ( ನಿಶಾಯಾಂ ) ಜಾಗರ್ತಿ ಸಂಯಮಿ :-** ಜೀವಿಗಳೇ ಆ ಮಾಯಾಂಧಕಾರ ವಾಸಿಗಳು. ಆತ್ಮನತ್ತ ಕಣ್ಣು ಮುಚ್ಚಿದ್ದಾರೆ. ಮಾಯಾ ವಿಸ್ತಾರದಲ್ಲಿ ರಮಮಾಣರಾಗಿದ್ದಾರೆ. ಅವಿದ್ಯಾಪ್ರೇರಿತ ನಿದ್ರಾ ಮಂಘರಿನಲ್ಲಿ ತೇಲುತ್ತಿರುವ ಅವರಿಗೆ ಸತ್ಯ ದೇವನ ಅಸ್ಪಷ್ಟ ಕಲ್ಪನೆ ಕೂಡ ಇಲ್ಲ! ಸಂಯಮಿ ಮಾತ್ರ ಎಚ್ಚರಾಗಿದ್ದಾನೆ; ಅವಿದ್ಯಾ ಕ್ಷೇತ್ರಗಳಾದ ಜಾಗ್ರ ಸ್ವಪ್ನ ಸುಪ್ತಿ ಮಂಡಲಗಳ ದಾಂಟಿ ವಿಶಿಷ್ಟ ಜಾಗ್ರದಲ್ಲಿ ನಿಂತಿದ್ದಾನೆ. ತನ್ನೆದುರಿನಲ್ಲೇ ವಿಶ್ವ ಚೈತನ್ಯ ಭಾಸ್ಕರನ ಪ್ರಕಾಶಮಯ ಸ್ವರೂಪನ್ನು ಅವಲೋಕಿಸುತ್ತಿದ್ದಾನೆ. ಅವನಿಗೆ ಎಲ್ಲೆಲ್ಲೂ ಬೆಳಕು! ಈ ಅವನ ವಿಶಿಷ್ಟ ಜಾಗ್ರದಲ್ಲಿ ದೇವ ಚೈತನ್ಯವು ತನ್ನ ಅರಿವಿನ ಅನಂತ ರೂಪ ಎಂಬ ಭಾನವಿದೆ. ಇದೂ ಕೂಡ ಅಡಗಿದಾಗ ಪರ ಜಾಗ್ರ! ಬರೀ ಅರಿವಿನ ಇರವು! ಈ ಅವಸ್ಥೆ ತಲುಪುವವರು ಎಷ್ಟು ಜನ! ಜಗತ್ತೆಲ್ಲ ಗಾಢವಾಗಿ ಮಲಗಿರುವಾಗ ಎಚ್ಚರಾಗಿ ದಿವ್ಯಾಸ್ತಿತ್ವಾನಂದ ಸಾಗರದಲ್ಲಿ ವಿಹರಿಸುವ ವೀರರರೆಷ್ಟು ಮಂದಿ ? ಎಲ್ಲೋ ಒಬ್ಬಿಬ್ಬರು! ಆದರೆ ಅವರ ಹಿರಿಮೆ ಅಗಾಧ! ದೇವನಿಗಿಂತ ಅವರು ಹಿರಿಯರು. ಬಸವಣ್ಣನವರು ಹೇಳುತ್ತಾರೆ: "ನಿನ್ನ ಸುತ್ತಿರ್ಪುದು ಎನ್ನ ಮನ. ಜಗಕ್ಕೆ ನೀನು ಬಲ್ಲಿದ; ನಿನಗೆ ನಾನು ಬಲ್ಲಿದ!"

ದುರ್ದೈವ! ಎಲ್ಲಿ, ಯಾವ ವಿಷಯದಲ್ಲಿ ಯೋಗಿಯು ಎಚ್ಚರಾಗಿದ್ದಾನೆಯೋ ಅಲ್ಲಿ ನಾವೆಲ್ಲರು ಮಲಗಿದ್ದೇವೆ. ಏಳಿ; ಎಚ್ಚರಾಗಿ! ಎಂದು ಋಷಿ ಮುನಿಗಳು ಅದೆಷ್ಟೋ ಎಬ್ಬಿಸಿದರೂ ನಮ್ಮ ನಿದ್ರೆ ಸರಿಯುವದು ದುಸ್ತರ!

**ಯಸ್ಯಾಂ (ನಿಶಾಯಾಂ) ಭೂತಾನಿ ಜಾಗ್ರತಿ ಸಾ ನಿಶಾ ಪಶ್ಯತಃ ಮುನೇಃ:-** ತಿಳಿದ ಮುನಿಗೆ ಮಾಯಾ ಪ್ರಂಪಚವೆಲ್ಲ ತೋರಿಕೆ, ಅಸತ್ಯ; ಆತ್ಮವಸ್ತು ಮಾತ್ರ ಸತ್ಯ. ತಿಳಿಯದ ಜೀವರಿಗೆ ಅವಿದ್ಯಾ ನಿರ್ಮಿತ ಅನಾತ್ಮ ಹಾಗು ಅನಿತ್ಯ

ಸಂಸಾರವು ಸತ್ಯ. ಗೂಗಿ ಮುಂತಾದ ನಿಶಾ-ಪ್ರಾಣಿಗಳಿಗೆ ಹಾಡು ಹಗಲಿನಲ್ಲಿಯೂ ಕತ್ತಲೆ ಕಾಣುತ್ತದೆ. ಇಲಿ ಬೆಕ್ಕು ಮುಂತಾದ ಪ್ರಾಣಿಗಳಿಗೆ ಕಾಡ ಕತ್ತಲೆಯಲ್ಲಿಯೂ ಪ್ರಕಾಶ ಕಾಣುತ್ತದೆ. ಹಾಗೆಯೇ ಮನುಷ್ಯರು! ಮಾತು ಮನಂಗಳಿಂದತ್ತತ್ತ ಮೀರಿದ ಮಹಾನ್ ಜ್ಯೋತಿ ಝಗ ಝಗಾಯಮಾನವಾಗಿ ಸರ್ವ ದಿಕ್ಕಿನಲ್ಲಿ ವ್ಯಾಪಿಸಿ ಹೊಳೆಯುತ್ತಿದ್ದರೂ ಅದನ್ನು ಕಾಣದೆ ಅವಿದ್ಯಾ ಕತ್ತಲೆಯನ್ನೇ ಕಾಣುವ ಜನರು 'ಗೂಗೆ' ಯ ವರ್ಗಕ್ಕೆ ಸೇರಿದ್ದಾರೆ. ಅವರು ಧರ್ಮ, ಮತ, ಪಕ್ಷ ಪಂಗಡ ಸಂಪ್ರದಾಯ ಸಿದ್ಧಾಂತಗಳ ರಚಿಸಿ ಭೀಕರ ಬಡಿದಾಟ, ನಿಂದೆ, ಕಟು ವಿಮರ್ಶೆಗಳಲ್ಲಿ ತೊಡಗಿದ್ದಾರೆ. ಧರ್ಮಗಳಿಂದ ಶಾಂತಿ ಸಂಸ್ಥಾಪಿಸುವ ಬದಲು ಅಶಾಂತಿ ವರ್ಷಾವಕ್ಕೆ ಅವಕಾಶ ಕಲ್ಪಿಸಿದ್ದಾರೆ. ಸಮಾಜವನ್ನು ಛಿನ್ನವಿಚ್ಛಿನ್ನ ಗೊಳಿಸಿದ್ದಾರೆ. ತಮ್ಮ ತಮ್ಮ ಗುಂಪುಗಳನ್ನೆತ್ತಿ ಕಟ್ಟಿ ಇನ್ನೊಬ್ಬರನ್ನು ತುಳಿ ಯುವ ರಾಕ್ಷಸೀ ಕೃತ್ಯಕ್ಕಿಳಿದಿದ್ದಾರೆ. ಕಲಿತ ಪಂಡಿತರು ಕೂಡ ಸತ್ಯ ಪೂಜಕರಲ್ಲ; ಖಂಡನ ಮಂಡನಾ ಕುಶಲರಾದ ಸಂಪ್ರದಾಯಾರಾಧಕರು! ಈ ಭೇದ ನಿಷ್ಠ ಬದುಕೇ ಅವರ ಜಾಗ್ರ! ಧನ ಸಂಗ್ರಹ, ಕೀರ್ತಿ ಲಾಲಸೆ, ಇಹ ಪರ ಭೋಗೋಪ ಭೋಗಗಳೇ ಅವರ ಜಾಗ್ರದ ವ್ಯವಹಾರಗಳು.

ಇಂಥ ಭಯಾನಕ ಕಲಹಕಾರಿ ಜಾಗ್ರದಲ್ಲಿ ಸಂಯಮಿ ಮಲಗಿದ್ದಾನೆ. ಭೋಗ ಜೀವಿಗಳಿಗೆ ಕಾಣುವ ವಸ್ತುಗಳೊಂದೂ ಅವನಿಗೆ ಕಾಣವು! ಯಾಕೆಂದರೆ ಅವನು ಪಶ್ಯತಃ= ಸತ್ಯದರ್ಶಿ! ಸಾಂಸಾರಿಕವಾಗಿ ಮಲಗಿದ್ದಾನೆ! ಪಾರಮಾರ್ಥಿಕ ವಾಗಿ ಎಚ್ಚರಾಗಿದ್ದಾನೆ!

ಸಂಬಂಧ:– ವಿಷಯ ದೃಷ್ಟಿಯೇ ಇಲ್ಲವೆಂದಾಗ ಸಂಯಮಿಯು ಅವು ಗಳ ಉಪಭೋಗ ಹೇಗೆ ಮಾಡುತ್ತಾನೆ?

**ಆಪೂರ್ಯಮಾಣಮಚಲಪ್ರತಿಷ್ಠಂ ।**
**ಸಮುದ್ರಮಾಪಃ ಪ್ರವಿಶಂತಿ ಯದ್ವತ್ ॥**
**ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ ।**
**ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥೭೦॥**

**ಅರ್ಥ:**– ಆಪೂರ್ಯಮಾಣಂ = (ಸದೈವ) ಎಲ್ಲ ಕಡೆಯಿಂದಲೂ ತುಂಬಿರುವ, ಅಚಲ ಪ್ರತಿಷ್ಠಂ =ಸ್ಥಿರವಾಗಿರುವ, ಸಮುದ್ರಂ= ಸಾಗರವನ್ನು ಆಪಃ= ನದಿಗಳು, ಯದ್ವತ್ =ಹೇಗೆ ಪ್ರವಿಶಂತಿ= ಪ್ರವೇಶಿಸುವವೋ ತದ್ವತ್ =ಅದೇ ರೀತಿ, ಸರ್ವೇ ಕಾಮಾಃ= ಸರ್ವ ಕಾಮನೆಗಳು ಯಂ ಪ್ರವಿಶಂತಿ =ಯಾವನನ್ನು ಪ್ರವೇಶಿಸವೋ ಸಃ= ಅವನು, ಶಾಂತಿಂ = ಶಾಂತಿಯನ್ನು ಆಪ್ನೋತಿ= ಹೊಂದುತ್ತಾನೆ. ಕಾಮಕಾಮೀ= ಕಾಮ ಭೋಗ ಬಯಸು ವವನು ನ =ಹೊಂದಲಾರ.

**ವಿವರಣೆ:**- ಆತ್ಮದರ್ಶಿ ಸ್ಥಿತಪ್ರಜ್ಞನಲ್ಲಿ ಇನ್ನೂ ಅಹಂಕಾರ ತೋರು ತ್ತಿದೆ; ಆದರೆ ಬಾಧಿತಾನುವೃತ್ತಿಯಿಂದ; ಸ್ವೈಜವಾಗಿ ಅಲ್ಲ. ಅವನ ಅಹಂ ಭಾವ

ನೆಯು ಶುಕ್ತಿಯೆಂದು ಗೊತ್ತಾದ ನಂತರ ಕಾಣುವ ರಜತದಂತೆ ಕೇವಲ ತೋರಿಕೆ; ಬೆಂದ ಸುಲಿಯಂತೆ, ದಗ್ಧ ಬೀಜವಂತೆ ನಿರುಪಯುಕ್ತ. ಯೋಗಿಯಲ್ಲಿ ಹೊತ್ತಿಕೊಂಡ ಜ್ಞಾನಾಗ್ನಿಯಿಂದ ಅವನ ಆಗಾಮಿಕರ್ಮ ಹಾಗು ಸಂಚಿತ ಕರ್ಮಗಳು ಪೂರ್ತಿಯಾಗಿ ವಿನಾಶ. ಪ್ರಾರಬ್ಧವೊಂದೇ ಬಾಳಿದೆ. ಪ್ರಾರಬ್ಧಾನುಸಾರ ಅವನಿಗೆ ವಿಷಯಗಳ ಪ್ರಾಪ್ತಿ ಹಾಗು ಸುಖ ದುಃಖಗಳ ಅನುಭವ. ಆದರೆ, ಆ ಯೋಗಿ ಅವುಗಳತ್ತ ಉದಾಸೀನ. ಅವನಿಗೆ ಲಾಭ ಹಾನಿ, ಸುಖ ದುಃಖಗಳಲ್ಲಿ ಸಮದೃಷ್ಟಿ! ಅವನು ಜೀವಿಸುವ ರೀತಿ ಈ ಮಂತ್ರದಲ್ಲಿದೆ.

**ಆಪೂರ್ಯಮಾಣಂ ಅಚಲ ಪ್ರತಿಷ್ಠಂ** :- ಸಮುದ್ರ ದಿಕ್ ದಿಗಂತಗಳಲ್ಲಿ ವಿಸ್ತರಿಸಿದೆ. ಅದು ಸದಾಪೂರ್ಣ! ಅದರ ಜಲಪಾತಳಿ ಅಚಲ. ಲಕ್ಷಾಂತರ ನದಿಗಳು ಸಾವಿರ ಸಾವಿರ ವರುಷ ಹರಿದು ಬಂದು ಕೂಡಿದರೂ ಸಾಗರದಲ್ಲಿ ರವ ಮಾತ್ರ ಬದಲಾವಣೆಯಿಲ್ಲ. ನದಿಗಳು ತುಂಬಿ ಬಂದರೆ ಅದಕ್ಕೆ ಹರ್ಷವಿಲ್ಲ; ನದಿಗಳು ಒಣಗಿದರೆ ದುಃಖದಿಂದ ಅದು ಕೃಶವಾಗುವದಿಲ್ಲ. ಅಷ್ಟೇ ಏಕೆ ? ಆ ನದಿಗಳು ತನ್ನಲ್ಲಿ ಬಂದು ಕೂಡುತ್ತವೆ ಎಂಬ ಭಾನಕೂಡ ಅದಕ್ಕಿಲ್ಲ. ಸಮುದ್ರವು ಹರ್ಷಾಮರ್ಷವಿಹೀನ ! ಆತ್ಮ ನಿಷ್ಠ ! ಸ್ವಪ್ರತಿಷ್ಠಿತ !

**ತದ್ವತ್ ಕಾಮಾ ಯಂ...** :- ಸ್ಥಿತ ಪ್ರಜ್ಞನು ಸಾಗರದಂತೆ; ವಿಶ್ವವ್ಯಾಪಿ! ಅವನ ಬುದ್ಧಿ ಅಚಲ ! ಕೊರತೆ ಕುಂದು ಕಾರ್ಪಣ್ಯ ಅವನಿಗೆ ಸ್ಪರ್ಶಿಸಲಾರವು. ಭೋಗ-ನದಿಗಳು ಪ್ರತಿನಿತ್ಯ ಅಸಂಖ್ಯ ಸುಖ ದುಃಖ-ಜಲ ತಂದು ಸುರಿಯುತ್ತವೆ. ಸ್ಥಿತಪ್ರಜ್ಞನು ಅವುಗಳಿಂದ ಹರ್ಷಪಡುವದಿಲ್ಲ; ಭೋಗ ಕಡಿಮೆಯಾದರೆ ದುಃಖಪಡುವದಿಲ್ಲ; ಕೃಶನಾಗುವದಿಲ್ಲ. ಶಿವನು ಪಾರ್ವತಿಯೊಂದಿಗೆ ಕುಳಿತು ಮೃಷ್ಟಾನ್ನ ಉಣ್ಣುವಾಗ ಎಷ್ಟು ಸಂತೋಷದಿಂದಿದ್ದನೋ ತಿರಿದುಣ್ಣುವಾಗಲೂ, ಕಾಲಕೂಟ ವಿಷಪಾನ ಮಾಡುವಾಗಲೂ ಅಷ್ಟೇ ಸಂತೋಷಿಯಾಗಿದ್ದ, ಅವನು ಸ್ಥಿತಪ್ರಜ್ಞ.

ಅಂತ ಯೋಗಿಗಳು ಭೋಗದ ಬೆನ್ನು ಹತ್ತಿ ಹೋಗುವದಿಲ್ಲ; ಭೋಗಗಳೇ ಅವರ ಬೆನ್ನು ಹತ್ತಿ ಬರುತ್ತವೆ. ಆದರೇನು? ಯೋಗಿಗಳಿಗೆ ಅವುಗಳ ಬಗ್ಗೆ ಪೂರ್ಣ ಉಪೇಕ್ಷೆ. ಅವರ ಅಂತರಂಗದಿಂದ ಕಾಮನೆಗಳೇ ಕಾಲ್ತೆಗೆದಿವೆ. ಕಲ್ಯಾಣದ ಬಸವಣ್ಣ ರಾಜಭೋಗಿ; ಅಲ್ಲಮಪ್ರಭು ಭಿಕ್ಷಾಭೋಗಿ. ರಾಮಚಂದ್ರ ರಾಜಗೃಹನಿವಾಸಿ; ವಸಿಷ್ಠ ಆಶ್ರಮವಾಸಿ. ಕಿಂತು, ಒಬ್ಬರ ಭೋಗವನ್ನೊಬ್ಬರು ಆಶಿಸಲೇ ಇಲ್ಲ.

**ಸಃ ಶಾಂತಿಮಾಪ್ನೋತಿ** :– ಸರ್ವ ವಿಧ ಭೋಗಗಳು ತಾವಾಗಿಯೇ ಬಂದರೂ ಯಾವನ ಅಂತರಂಗದಲ್ಲಿ ಕಾಮನೆ ವಿಳದೋ ಅಂಥ ಸ್ಥಿತಪ್ರಜ್ಞನು ಶಾಂತಿ ಪಡೆಯುತ್ತಾನೆ. ಆ ಶಾಂತಿಗೆ ಅಳಿವಿಲ್ಲ; ಕೊರತೆಯಿಲ್ಲ!

**ನ ತು ಕಾಮ ಕಾಮೀ**:- ಚಂಚಲ ಪ್ರಜ್ಞರು ಮಾತ್ರ. ಕಾಮಕಾಮಿಗಳು; ಭೂಮಿ, ಧನ, ಸ್ತ್ರೀ, ಅಧಿಕಾರ ಮುಂತಾದವುಗಳ ಕಂಡು ಅವುಗಳ ಬೆನ್ನು ಹತ್ತಿ

ಓಡುವ ಅಜ್ಞರು. ಸುಶಿಕ್ಷಿತ ಅಶಿಕ್ಷಿತ ಎಂಬ ಭೇದವಿಲ್ಲದೆ ಸಾಮಾನ್ಯವಾಗಿ ಎಲ್ಲರೂ ವಿಷಯ ಮುಖಿಗಳು. ವಿಷಯಗಳಿಗಾಗಿ ಪ್ರಾಣ ತೇಯುತ್ತಾರೆ; ಅಳುತ್ತಾರೆ; ನೀತಿ ಜ್ಞಾನಗಳನ್ನೂ ಬಲಿಕೊಡುತ್ತಾರೆ. ಹೆಂಡತಿಯ ಸುಖಕ್ಕಾಗಿ ತಾಯಿ ತಂದೆಯರನ್ನು ಹೊರ ಅಟ್ಟುವ ಮಗ, ಸ್ವಾರ್ಥ ಸಾಧನೆಗಾಗಿ ರಾಷ್ಟ್ರ ಸುಲಿಯುವ ಧ.ರೀಣ, ಇವರೆಲ್ಲ ಚಂಚಲ ಪ್ರಜ್ಞರು. ಸ್ಥಿರಪ್ರಜ್ಞರಲ್ಲ. ಇವರು ಸತ್ಯ ಅಹಿಂಸೆಯ ಭಕ್ತರಲ್ಲ; ಪತ್ನೀಭಕ್ತರು; ಭೂಮಿ ಧನ ಕೀರ್ತಿಗಳ ಆರಾಧಕರು!

ಅವರ ಬುದ್ಧಿಗೆ ನೂರು ಶಾಖೆ. ಇಂದು ಮಾನ, ನಾಳೆ ಕೀರ್ತಿ, ನಾಡಮು ಅಧಿಕಾರ ಹೀಗೆ ಅವರ ಆಶೆ ಹತ್ತು ದಿಕ್ಕುಗಳಲ್ಲಿ ಚಲಿಸುತ್ತದೆ. ಮನೆಯ ಮೂಲೆ ಮೂಲೆಯಲ್ಲೆಲ್ಲ ರಾಶಿ ರಾಶಿ ಧನ ಬಿದ್ದಿದ್ದರೂ ಧನಿಕನಿಗೆ ಸಮಾಧಾನವಿಲ್ಲ. ನೂರಾರು ಪತ್ನಿಯರಿದ್ದರೂ ಪುರುಷನಿಗೆ ನೆಮ್ಮದಿಯಿಲ್ಲ. ಮೂರು ನೂರು ಸ್ತ್ರೀಯರೊಂದಿಗೆ ಬಾಳಿದ ನಿರ್ಘಾಮ ಅಸಂತುಷ್ಟನಾಗಿದ್ದ; ಅರಮನೆಯಲ್ಲಿ ಸುಡದಷ್ಟು ಧನವಿದ್ದರೂ ತಾನು ಬಡವನೆಂದು ಮರುಗಿದ. ಇದು ಕಾಮುಕಾಮಿಗಳ ಗತಿ! ಮೃಗಜಲದ ಬೆನ್ನು ಹತ್ತಿ ಓಡುವ ಮೃಗಗಳಿವರು! ಇವರಿಗೆಲ್ಲಿಂದ ಶಾಂತಿ? ಎಲ್ಲಿ ವಿಶ್ರಾಂತಿ!

> ವಿಹಾಯ ಕಾಮಾನ್ಯಃ ಸರ್ವಾನ್ಪುಮಾಂಶ್ಚರತಿ ನಿಸ್ಪೃಹಃ।
> ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥೭೧॥

**ಅರ್ಥ:**-ಯಃ ಪುಮಾನ್=ಯಾವ ಪುರುಷನು, ಸರ್ವಾನ್ ಕಾಮಾನ್ ವಿಹಾಯ=ಸರ್ವಕಾಮನೆಗಳನ್ನು ತ್ಯಜಿಸಿ (ಉಪೇಕ್ಷಿಸಿ), ನಿಸ್ಪೃಹಃ=ನಿರಾಶಿಯು, ನಿರ್ಮಮಃ=ನಿರ್ಮಮನು, ನಿರಹಂಕಾರಃ=ನಿರಹಂಕಾರಿಯು (ಆಗಿ) ಚರತಿ=ಚರಿಸುವನೋ ಸಃ=ಅವನು, ಶಾಂತಿಂ=ಶಾಂತಿಯನ್ನು ಅಧಿಗಚ್ಛತಿ=ಹೊಂದುತ್ತಾನೆ.

**ವಿವರಣೆ:**–ಆಶೆ, ಆಮಿಷ ಹಾಗು ಕಾಮನೆಗಳು ಮನದ ಆಳದಲ್ಲಿ ಶೇಖರವಾಗಿವೆ. ತತ್ತ್ವಗಳ ಪರಿಜ್ಞಾನ, ಮತ್ತು ಅಮರ ಆತ್ಮ ಪ್ರಭುವಿನ ಆನಂದಾನುಭೂತಿಯ ತಿಳಿವು ಮೂಡಿದಾಗ ಆ ಸಂಚಯವಾದ ಸರ್ವ ಕಾಮನೆಗಳು ಅಳಿಯುವವು; ನಿಸ್ಪೃಹತೆ ಅಳವಡುವದು. ಅಂದರೆ ಸ್ಥಿತಪ್ರಜ್ಞನು ಹೆಚ್ಚಿನ ಭೋಗ ವೈಭವವ ಬೇಡಲಾರ; ಇದ್ದುದರಲ್ಲಿಯೂ ಆಸಕ್ತನಾಗಲಾರ. ಅಲಿಪ್ತ! ಸರ್ವ ಬಾಹ್ಯಾಂತರ ವ್ಯವಹಾರಗಳಿಗೆ ಕಾರಣವಾದ ಅಹಂ-ಸ್ಪಂದನೆ ಅವನಲ್ಲಿರದಾಗಿ ನಿರಹಂಕಾರಿ; ಅಹಂ ಭಾವವನ್ನು ಆಶ್ರಯಿಸಿದ ಮಮ ಭಾವ ವಿಹೀನನಾದುದರಿಂದ ನಿರ್ಮಮ; ನಿರಾಮಯ. ಅಂಥ ಸ್ಥಿತಪ್ರಜ್ಞನು ಪರಮ ಶಾಂತಿಯನ್ನು ಹೊಂದುತ್ತಾನೆ.

> ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।
> ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥೭೨॥

ಓಂ ತತ್ಸದಿತಿಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಸಾಂಖ್ಯಯೋಗೋ ನಾಮ ದ್ವಿತಿಯೋಧ್ಯಾಯಃ

ಅರ್ಥ:- ಪಾರ್ಥ=ಅರ್ಜುನ, ಏಷಾ =ಇದು, ಬ್ರಾಹ್ಮೀಸ್ಥಿತಿಃ= ಬ್ರಹ್ಮನಿಗೆ ಸಂಬಂಧಿಸಿದ ಸ್ಥಿತಿಯು. ಏನಾಂ= ಇದನ್ನು ಪ್ರಾಪ್ಯ = ಹೊಂದಿ, ನ ವಿಮುಹ್ಯತಿ= ಸ್ಥಿತಪ್ರಜ್ಞನು ಮರುಳಾಗುವದಿಲ್ಲ. ಅಂತಕಾಲೇಽಪಿ=ಕೊನೆಯ ಕಾಲದಲ್ಲಿಯೂಅಸ್ಯಾಂ ಸ್ಥಿತ್ವಾ=ಈ ಸ್ಥಿತಿಯಲ್ಲಿ ನಿಂತು ಬ್ರಹ್ಮ ನಿರ್ವಾಣಂ ಋಚ್ಛತಿ =ಬ್ರಹ್ಮ ನಿರ್ವಾಣ ಹೊಂದುತ್ತಾನೆ.

ವಿವರಣೆ:- ಭಗವಂತ:– "ಪಾರ್ಥ, ನಾನು ಇಲ್ಲಿಯ ವರೆಗೆ ಉಪದೇಶಿಸಿದುದು ಬ್ರಹ್ಮಲೀನ ಅವಸ್ಥೆ! ಭಾವ ನಿರ್ಭಾವಗಳಾಚೆಗಿನ ಅಮರ ಸ್ಥಿತಿ! ರಾಗ ದ್ವೇಷ, ಅಹಂ ಮಮ ಎಂಬ ಭಾವಭೇದಗಳಿಲ್ಲದ ಸ್ಥಿತಪ್ರಜ್ಞನ ಬದುಕು! ಅದನ್ನು ಪಡೆದ ಮಹಾನ್ ಯೋಗಿ ನಿರ್ಮೋಹಿ. ಅವನ ಅಂಗ ಶಿವಾಲಯ; ಇಂದ್ರಿಯಗಳು ಲಿಂಗಮಯ. ಅವನಿಗೆ ಕರ್ಮ ಬಂಧನವಿಲ್ಲ; ಭೋಗ ಆಮಯವಿಲ್ಲ. ನಿಶ್ಚಿಂತ ನಿರ್ಲೇಪ ಪುರುಷ. ಅವನು ಸಾಂಸಾರಿಕ ವಸ್ತುಗಳಿಗೆ ಮೋಹಿತನಾಗಲಾರ. ದೇಹ ಬಿಡುವ ಕ್ಷಣದಲ್ಲಿಯೂ ಬ್ರಹ್ಮಲೀನ ಸ್ಥಿತಿಯಲ್ಲಿ ನಿಂತು ದಿವ್ಯ ಚಿದಾಕಾಶದಲ್ಲಿ ವಿಲಯನ ಹೊಂದುತ್ತಾನೆ.

"ಅರ್ಜುನ, ಅದೇ ಮಾನವನ ಧ್ಯೇಯ! ಆದರ್ಶ! ಆ ಸ್ಥಿತಧೀ ಅವಸ್ಥೆಗಾಗಿ ಯತ್ನಿಸು. ಕರ್ಮ ಯೋಗದಲ್ಲಿ ಪರಿಣತಿ ಪಡೆ; ಹೃದಯ ನಿರ್ಮಲಗೊಳಿಸಿಕೊ. ಆತ್ಮ ಅನಾತ್ಮವಿಭಜಿಸು . ಆತ್ಮನನ್ನೇ ನೆರೆ ನಂಬು. ಕಾಮನಾ ಗ್ರಂಥಿಗಳನ್ನು ದಹಿಸು. ಅಹಂಕಾರ ನೀಗು. ಕಡೆಗೆ ದೇವನೊಂದಿಗೆ ಸಾಮರಸ್ಯ ಹೊಂದುವೆ; ಶೋಕ ನೀಗುವೆ" !

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಎರಡನೆಯ ಬಿಂದುವು

*†*

# ಮೂರನೆಯ ಅಧ್ಯಾಯ

## ಅರ್ಜುನ ಉವಾಚ

ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ।
ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥೧॥

ಅರ್ಥ:– ಜನಾರ್ದನ= ಕೃಷ್ಣ, ಕರ್ಮಣಃ= ಕರ್ಮಕ್ಕಿಂತ ಬುದ್ಧಿಃ= ಜ್ಞಾನವು (ಮೋಕ್ಷದ ಅಂತರಂಗ ಸಾಧನವಾದುದರಿಂದ) ಜ್ಯಾಯಸೀ= ಉತ್ತಮವೆಂದು ತೇ =ನಿನ್ನ ಮತಾ= ಅಭಿಪ್ರಾಯ ಚೇತ್= ಇದ್ದರೆ, ತತ್= ಹಾಗಿದ್ದ ಪಕ್ಷದಲ್ಲಿ ಕೇಶವ =ಕೃಷ್ಣ, ಮಾಂ= ನನ್ನನ್ನು ಘೋರೇ ಕರ್ಮಣಿ =ಘೋರವಾದ _(ಈ ಯುದ್ಧದಲ್ಲಿ) ಕಿಂ ನಿಯೋಜಯಸಿ= ಏಕೆ ತೊಡಗಿಸುತ್ತಿ?

ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ।
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥೨॥

ಅರ್ಥ:- ವ್ಯಾಮಿಶ್ರೇಣೇವ= (ಒಮ್ಮೆ ಜ್ಞಾನ ಪ್ರಶಂಸಾ, ಒಮ್ಮೆ ಕರ್ಮ ಪ್ರಶಂಸಾ ದಿಂದ) ಸಮ್ಮಿಶ್ರವಾದಂತಿರುವ ವಾಕ್ಯೇನ =ಮಾತಿನಿಂದ, ಮೇ =ನನ್ನ. ಬುದ್ಧಿಂ =ಮತಿ ಯನ್ನು. ಮೋಹಯಸಿ ಇವ= ಭ್ರಾಂತಗೊಳಿಸುವಂತೆ ಇರುವಿ. ಯೇನ =ಯಾವುದರಿಂದ, ಅಹಂ =ನಾನು ಶ್ರೇಯಃ= ಮೋಕ್ಷವನ್ನು ಆಪ್ನುಯಾಂ= ಹೊಂದಬಹುದೋ ತತ್ ಏಕಂ= ಅದೊಂದನ್ನೇ ನಿಶ್ಚಿತ್ಯ= ನಿರ್ಣಯಿಸಿ, ವದ =ಹೇಳು.

ವಿವರಣೆ :-ಉಪದೇಶಕರು ಎರಡು ವಿಧ: ೧)ಸಾಮಾನ್ಯ ೨)ಅಸಾಮಾನ್ಯ. ಸಾಮಾನ್ಯ ಉಪದೇಶಕನ ಮನಸ್ಸು ದೇವನಷ್ಟು ವಿಶಾಲವಾಗಿಲ್ಲ. ಅದು ಜಾತಿ, ಮತ, ಸಂಪ್ರದಾಯ, ಧರ್ಮ, ದೇಶ ಮುಂತಾದ ಸೀಮಿತ ಭಾವನೆಗಳಿಂದ ಕಲು ಷಿತವಾಗಿದೆ. ಅವನಲ್ಲಿ ತನ್ನ ಜಾಣ್ಮೆ, ಪಾಂಡಿತ್ಯ, ಭಾಷಣ ಕಲೆಗಳ ಬಗ್ಗೆ ಅಭಿ ನಿವೇಶ ಇದೆ. ಶ್ರೋತೃವೃಂದವನ್ನು ತನ್ನ ಸರಸ ಮಾತಿನಿಂದ ಮಂತ್ರಮುಗ್ಧ ಮಾಡಬಲ್ಲ ಅವನು ಅನಿರ್ಗಲವಾಗಿ ಬ್ರಹ್ಮಸ್ವರೂಪ ವಿವರಿಸುತ್ತಾನೆ; ಆದರೆ ಕೊನೆಯಲ್ಲಿ ತನ್ನ ಜಾತ್ಯಾದಿ ಅಭಿಮಾನವನ್ನು ಹೊರ ಹಾಕುತ್ತಾನೆ. ಪ್ರಸಂಗ ಬಂದಂತೆ ಜ್ಞಾನ, ಭಕ್ತಿಗಳಿಗಿಂತ ಕರ್ಮವೇ ಅಧಿಕ, ಕರ್ಮ ಭಕ್ತಿಗಳಿಗಿಂತ ಜ್ಞಾನವೇ ಅಧಿಕ!ಜ್ಞಾನ ಕರ್ಮಗಳಿಗಿಂತ ಭಕ್ತಿಯೇ ಅಧಿಕ ಎಂಬ ವಾದ ಎಬ್ಬಿಸು ತ್ತಾನೆ. ಅಂಥ ಉಪದೇಶಕನಿಂದ ಅಶಾಂತಿ ಹೆಚ್ಚೀತಲ್ಲದೆ ಶಾಂತಿ ದೊರೆಯದು; ಕೇಳುವವರ ಚಿತ್ತ ವಿಭ್ರಮೆ ಗೊಂಡೀತಲ್ಲದೆ ಸತ್ಯ ಕಾಣದು; ವಿಕಲ್ಪ ಮರೆ ಯಾಗವು; ಸಂದೇಹಗಳು ಅಳಿಯವು.

ಅಸಾಮಾನ್ಯ ಉಪದೇಶಕನು ದೇವದರ್ಶಿ. ಅವನ ಮನಸ್ಸು ದೇವನಷ್ಟು ವಿಶಾಲ; ಅವನು ನಿರಭಿಮಾನಿ; ವರ್ಣಾಶ್ರಮಾದಿ ಅಭಿನಿವೇಶ ವಿರಹಿತ. ವಿಕಲ್ಪ ರಹಿತವಾದ ಹಾಗು ವಾದ ವಿವಾದಗಳಿಗೆ ಆಸ್ಪದ ವೀಯದ ಅವನ ಮಾತು ವೇದ; ಅದೇ ಆಗಮ, ಉಪನಿಷತ್ತು!

ಶ್ರೀ ಕೃಷ್ಣನು ಸಾಮಾನ್ಯ ಗುರುವಲ್ಲ, ಅಸಾಮಾನ್ಯ ಉಪದೇಶಕ! ವೈಶ್ವಿಕ ಗುರು! ಅರಿವಿನ ಆಚಾರ್ಯ!! ಹಿಂದೆ ಅರವತ್ತು ಮಂತ್ರಗಳಲ್ಲಿ ಅವನು ನೀಡಿದ ಬೋಧೆ ಪರಮಪಾವನ; ಶ್ರೇಯೋದಾಯಿ. ಒಂದು ಧರ್ಮ, ಕುಲ, ಸಿದ್ಧಾಂತ ಶ್ರೇಷ್ಠವೆಂದು ಹೇಳುವ ಒಂದು ಶಬ್ದ ಕೂಡ ಅವನ ಮುಖದಿಂದ ಹೊರಬಂದಿಲ್ಲ. ಉಪದೇಶಿಸುವಲ್ಲಿ ಅವನ ಉದ್ದೇಶಗಳು ಎರಡೇ ಎರಡು: (೧) ಅನಾಸಕ್ತ ಕರ್ಮ ದಿಂದ ಹೃದಯ ಶುದ್ಧ ಮಾಡುವದು. (೨) ಪ್ರತ್ಯಗಾತ್ಮಾಭಿನ್ನ ಪರಬ್ರಹ್ಮನ ಸ್ವರೂಪದ ಜ್ಞಾನವೀಯುವದು. ಇವೆರಡರಿಂದ ಮೋಕ್ಷ; ಬ್ರಾಹ್ಮೀ ಸ್ಥಿತಿ !

ಭಗವಂತನದು ಅಸಂದಿಗ್ಧ ಉಪದೇಶ. ಆದರೆ ಆಧ್ಯಾತ್ಮಿಕ ರಂಗದಲ್ಲಿ ಹೊಸ ಬನಾದ ಅರ್ಜುನನಿಗೆ ಉಪದೇಶಾಂತರಂಗವನ್ನು ನಿರ್ಧಿಷ್ಟವಾಗಿ ತಿಳಿದುಕೊಳ್ಳ

ಲಾಗಲಿಲ್ಲ. ಪ್ರಶ್ನಿಸಿದ:

**ಜ್ಯಾಯಸೀ ಚೇತ್... :-** ಮಾಧವ, ಪ್ರಾರಂಭದಲ್ಲಿ ನೀನು ಸಾಂಖ್ಯ ಜ್ಞಾನವನ್ನು ಕೊಂಡಾಡಿದೆ; ಏಷಾ ತೇ ಅಭಿಹಿತಾ ಸಾಂಖ್ಯೇ ಬುದ್ಧಿಃ ಯೋಗೇತು ಇಮಾಂ ಶೃಣು ಎಂಬ ಹಲ ಕೆಲವು ಮಾತುಗಳಿಂದ ಕರ್ಮದ ವರ್ಣನೆ ಮಾಡಿದೆ. ಸ್ಥಿತಪ್ರಜ್ಞನ ಗುಣ ಲಕ್ಷಣ ಹಾಗು ಜೀವನದ ರೀತಿಯನ್ನು ವಿವರಿಸುತ್ತ ಏಷಾ ಬ್ರಾಹ್ಮೀ ಸ್ಥಿತಿಃ ಎಂಬ ನಿರ್ಣಯಾತ್ಮಕ ನುಡಿ ನುಡಿದೆ. ನಿನ್ನ ಮಾತನಾಲಿಸಿದಾಗ ಸಾಂಖ್ಯ ಬುದ್ಧಿಯೇ ಸರ್ವಶ್ರೇಷ್ಠ; ಬ್ರಾಹ್ಮೀ ಸ್ಥಿತಿಯ ಸಾಕ್ಷಾತ್ ಸಾಧನ ಎಂಬ ಭಾವ ನನ್ನಲ್ಲುಂಟಾಗಿದೆ.

" ಯದುಕುಲ ಭಾನುವೆ, ಕರ್ಮಕ್ಕಿಂತಲೂ ಜ್ಞಾನಯೋಗವು ಸೂಕ್ಷ್ಮ ಹಾಗು ಆಂತರಿಕ ಸಾಧನ ಮೋಕ್ಷಕ್ಕೆ; ಅಲ್ಲವೆ ? ಹಾಗಿರುವಾಗ, ಈ ಭಯಂಕರ ವಾದ, ಬಹು ಘೋರವಾದ ನರಹತ್ಯ ಕ್ರಿಯೆಗೆ ನನ್ನನ್ನೇಕೆ ಪ್ರೇರಿಸುವೆ?

**ವ್ಯಾಮಿಶ್ರೇಣೇವ:–** ದೇಹೀ ನಿತ್ಯಂ ಮುಂತಾದ ವಾಕ್ಯಗಳಿಂದ ಜ್ಞಾನ ಪ್ರಶಂಸೆ ಮಾಡುತ್ತಿ. ಮತ್ತೆ ಕೆಲವೆಡೆ ಧರ್ಮ್ಯಾತ್ ಹಿ ಯುದ್ಧಾತ್ ಎಂಬಿತ್ಯಾದಿ ವಾಕ್ಯಗಳಿಂದ ವರ್ಣಧರ್ಮರೂಪ ಕರ್ಮದ ಪ್ರಶಂಸೆ ಮಾಡುತ್ತಿ. ನಿನ್ನ ವಾಕ್ಯಗಳು ವ್ಯಾಮಿಶ್ರವಾಗಿವೆ; ಸಂದಿಗ್ಧವೆನಿಸುತ್ತಿವೆ. ಮಾಧವ, ಇಂಥ ಸಂದೇಹಾಸ್ಪದ ಮಾತುಗಳಿಂದ ನನ್ನ ಬುದ್ಧಿಯನ್ನು ನೀನು ಭ್ರಮೆಗೊಳಿಸು ವಂತಿದೆ. ನೀನು ಆತ್ಮೀಯ; ನನ್ನ ಸ್ನೇಹಶೀಲ ಮಾರ್ಗದರ್ಶಕ. ನನ್ನನ್ನು ಕಿಂಕರ್ತವ್ಯ ಮೂಢನನ್ನಾಗಿ ಮಾಡುವ ಉದ್ದೇಶ ನಿನ್ನದಿರಲಾರದು. ನಿನ್ನ ಪ್ರಾಮಾಣಿಕತೆಯಲ್ಲಿ ನನ್ನದು ಪೂರ್ಣ ನಂಬಿಗೆ. ನನ್ನ ಬುದ್ಧಿಭ್ರಮೆಗೆ ನನ್ನ ಮತಿ-ನಿರ್ಬಲತೆಯೇ ಕಾರಣವೆಂದುಕೊಳ್ಳುವೆ. ಈಗ ಹೇಳು, ಅವೆರಡರಲ್ಲಿ (ಕರ್ಮ, ಜ್ಞಾನಗಳಲ್ಲಿ) ಯಾವುದು ನನ್ನ ಶ್ರೇಯಕ್ಕೆ ಕಾರಣ! ನಿಶ್ಚಯಿಸಿ ಹೇಳು."

**ವಿವರಣ:-** ಅರ್ಜುನನ ಪ್ರಶ್ನೆಗಳನ್ನು ವಿಮರ್ಶಿಸಿದಾಗ ಕೆಲವು ಸಂಗತಿಗಳು ಸ್ಪಷ್ಟವಾಗುತ್ತವೆ.

(ಅ) ಗುರುವಿನ ಹೊಣೆ ಬಹು ದೊಡ್ಡದು. ಅವನ ಬೋಧನಾಕಾರ್ಯ ತಂತಿಯ ಮೇಲೆ ನಡೆದಷ್ಟು ಬಿಗಿ. ತಾನಾಡುವ ಪ್ರತಿ ಶಬ್ದ, ವಾಕ್ಯಗಳ ಮೇಲೆ ಅವನಿಗೆ ಲಕ್ಷವಿರಬೇಕು; ತಾನು ಪ್ರತಿಪಾದಿಸುವ ವಿಷಯವನ್ನು ನಿಃಸಂದಿಗ್ಧ ರೀತಿಯಲ್ಲಿ ಮಂಡಿಸಬೇಕು. ಅದಕ್ಕೆಂದೇ ಸರ್ವಜ್ಞ ಕವಿ ಹೇಳಿದ:

"ಹಿರಿತನವು ಹೆಡ್ಡಂಗೆ, ದೊರೆತನವು ಮಡ್ಡಂಗೆ, ಗುರುತನವು ಶುದ್ಧ।
ದಡ್ಡಂಗೆ ಇವು ಮೂರು ಯಾತಕ್ಕು ಬೇಡ ಸರ್ವಜ್ಞ."

ಕೇಳುವವರು ಜಾಣರಾಗಿದ್ದರೆ ಆ ಮಾತು ಬೇರೆ. ಹೃದಯ ಶುದ್ಧಿಯುಳ್ಳ ವಿವೇಕಿ ಶಿಷ್ಯರು ಕೇಳುಗರಾಗಿ ದೊರೆತರೆ ಗುರುಗಳ ಸುದೈವ. ಆದರೆ ಅದು ಕಷ್ಟ. ಹತ್ತು ಜನ ಕೇಳುಗರಲ್ಲಿ ಹತ್ತು ಬಗೆಯ ಬುದ್ಧಿ; ನೂರು ವಿಧ ವಿಚಾರ! ಸಾವಿರ

ಭಾವದಿಂದ ಕೇಳುತ್ತಾರೆ. ಅವರೆಲ್ಲರಿಗೆ ಸಮಾಧಾನವಾಗುವಂತೆ ಹೇಳಬೇಕು! ತನ್ನ ಇಂಗಿತವು ಸರಿಯಾಗಿ ಅರ್ಥವಾಗುವಂತೆ ಮಾತನಾಡಬೇಕು!

(ಬ) ಕೇಳುವವನಿಗೂ ಒಂದು ಕರ್ತವ್ಯವಿದೆ. ಪೂರ್ವಗ್ರಹ-ಅಭಿಮತಗಳನ್ನು ಅವನು ಬಿಡಬೇಕು. ಅತ್ಯಂತ ಏಕಾಗ್ರ ಮನದಿಂದ ಗುರುವಾಕ್ಯ ಆಲಿಸಬೇಕು. ಗುರುವಿನ ಉದ್ದೇಶವನ್ನು ಅರ್ಥ ಮಾಡಿಕೊಳ್ಳಬೇಕು. ಅಷ್ಟೇ ಅಲ್ಲ. ಪರಿಶುದ್ಧ ಹೃದಯಿಯಾಗಿ ನಿರ್ಮಲ ಬುದ್ಧಿಯಿಂದ ಗುರೂಪದಿಷ್ಟ ಸಂಗತಿಗಳನ್ನು ಸವಿಮರ್ಶತಃ ಪರಿಗ್ರಹಿಸಬೇಕು. ಕೇಳಿದ ಸಂಗತಿಗಳನ್ನು ಯಥಾವತ್ತಾಗಿ ಮನನ ಮಾಡಬೇಕು. ಗುರುವು ಯಾವ ಮಟ್ಟದಲ್ಲಿ ನಿಂತು ಹೇಳುವನೋ ತನ್ನ ಮನಸ್ಸನ್ನು ಆ ಮಟ್ಟಕ್ಕೇರಿಸಿ ಆಲಿಸುವ ಕಲೆಯನ್ನು ಅವಗತ ಮಾಡಿಕೊಳ್ಳಬೇಕು. ಅಂದರೆ ಮಾತ್ರ ತಪ್ಪು ತಿಳುವಳಿಕೆಗೆ ಆಸ್ಪದವಾಗದು. ತಪ್ಪು ತಪ್ಪಾಗಿ ತನ್ನ ಮನ ಬಂದಂತೆ ತಿಳಿದುಕೊಳ್ಳುವದಕ್ಕಿಂತ ಸ್ಪಷ್ಟವಾಗಿ ಪ್ರಶ್ನೆ ಕೇಳುವದು ಸರಿ.

ಶ್ರೀ ಭಗವಾನುವಾಚ

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್॥೩॥**

ಭಾವ:– ಲೋಕದಲ್ಲಿ ಎರಡು ವಿಧ ನಿಷ್ಠೆ(ನಂಬಿಗೆ)ಗಳಿವೆ. ೧) ಸಾಂಖ್ಯರಿಗಾಗಿ ಜ್ಞಾನಯೋಗನಿಷ್ಠೆ ೨) ಯೋಗಿಗಳಿಗಾಗಿ ಕರ್ಮಯೋಗನಿಷ್ಠೆ; ಹೀಗೆ ನನ್ನಿಂದ ಈ ಹಿಂದೆ ಹೇಳಲ್ಪಟ್ಟಿದೆ.

ವಿವರಣೆ:-"ಸಾಂಖ್ಯ ಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ" ಜ್ಞಾನಯೋಗವೇ ಶ್ರೇಷ್ಠ; ಕರ್ಮಯೋಗವೇ ಶ್ರೇಷ್ಠ ಎಂಬ ವಾದ ಬಹು ಹಿಂದಿನಿಂದ ನಡೆದು ಬಂದಿದೆ. ಹೀಗೆ ವಾದ ಮಾಡುವವರು ಬಾಲರು, ಬಲ್ಲಿದರಲ್ಲ; ಎಂದಿದ್ದಾನೆ ಭಗವಂತ. ಜ್ಞಾನ ಹಾಗು ಕರ್ಮ ಯೋಗಗಳು ಪರಸ್ಪರ ವಿರೋಧವೂ ಅಲ್ಲ, ಭಿನ್ನವೂ ಅಲ್ಲ. ಒಂದಕ್ಕೊಂದು ಅಗಲದಂತೆ ಹೊಂದಿವೆ; ಅವೆರಡೂ ಪರಸ್ಪರ ಪೂರಕ ಸಾಧನಗಳು. ಅವುಗಳ ಗುರಿಯೂ ಒಂದೇ.

ಜಗದ ಜನರಲ್ಲಿ ಎರಡು ವರ್ಗ: ರಾಗಿ, ವಿರಾಗಿ. ರಾಗಿಯ ಹೃದಯ ಅಶುದ್ಧ. ವಿರಾಗಿಯ ಹೃದಯ ಶುದ್ಧ. ದುಡಿದು ಫಲಕ್ಕಾಗಿ ಆಶಿಸುವವ ರಾಗಿ. ದುಡಿದು ಫಲಾಶೆಯ ಕಲ್ಪನೆ ಕೂಡ ಇಲ್ಲದಿರುವವ ವಿರಾಗಿ. ರಾಗಿ ಆಸಕ್ತ. ವಿರಾಗಿ ಅನಾಸಕ್ತ. ರಾಗಿ ಅಸುರ: ವಿರಾಗಿ ದೇವ. ರಾಗಿಗೆ ಹೃದಯ ಶುದ್ಧಿಕರ "ಕರ್ಮಯೋಗ" ಅವಶ್ಯ. ವಿರಾಗಿಗೆ ಮೋಕ್ಷದಾಯಕ "ಜ್ಞಾನಯೋಗ" ಅವಶ್ಯ ಎಂದು ಸ್ಥೂಲವಾಗಿ ಹೇಳಬಹುದು.

ಆದರೆ, ಬರೀ ಜ್ಞಾನ, ಬರೀ ಕರ್ಮ ಬದುಕೀತೆಂದು ಭಾವಿಸುವದು ಮಾತ್ರ ತಪ್ಪು. ಅವೆರಡು ಒಂದೇ ನಿಷ್ಠೆಯ ಎರಡು ಮೈ; ಸಮಪ್ರಧಾನ ಸಾಧನಗಳು. ಎರಡೂ ಹೊಂದಿ ಹೊಂದಿಯೇ ಸಾಗಬೇಕು. ಸಾಂಖ್ಯರಲ್ಲಿಹಾಗು ಕರ್ಮಯೋಗಿಗಳಲ್ಲಿ ಅವೆರಡು ಹೇಗೆ ಸಮುಚ್ಚಯವಾಗಿವೆ ಎಂಬುದನ್ನು ಅರಿಯೋಣ.

(೧) ಸಾಂಖ್ಯಯೋಗ:- ಅವನು ಜ್ಞಾನಯೋಗಿಯಾದರೂ ಜ್ಞಾನಾನು ಕೂಲವಾದ ಮೂರು ಪವಿತ್ರ ಕರ್ಮಗಳನ್ನು ಆಚರಿಸುತ್ತಾನೆ: (ಅ) ಶ್ರವಣ:- ಗುರುವು ಆತ್ಮಬೋಧೆ ನೀಡುತ್ತಾನೆ. ಅದನ್ನು ಏಕಾಗ್ರತೆಯಿಂದ ಆಲಿಸಬೇಕು; ಗುರುವಿನ ಸುಸ್ಪಷ್ಟ ಅಭಿಪ್ರಾಯಗಳನ್ನು ಯಥಾವತ್ತಾಗಿ ಮನದಲ್ಲಿ ಚಿತ್ರಿಸಿಕೊ ಳ್ಳಬೇಕು. ಇದೇ ಶ್ರವಣ. ಇದು ಹಗುರಾದ ಕ್ರಿಯೆಯಲ್ಲ. ತಾಸು ಬಿಟ್ಟು ಒಂದರ್ಧ ತಾಸು ಹೆಚ್ಚು ಕೇಳಿದರೆ ಮನಸ್ಸು ದಣಿಯುತ್ತದೆ; ಗ್ರಹಣ ಶಕ್ತಿ ಕಡಿಮೆಯಾಗುತ್ತದೆ; ಬಳಲಿದ ಕೇಳುಗ ಶಬ್ದಗಳತ್ತ ಉದಾಸೀನ ಭಾವ ತಾಳು ತ್ತಾನೆ. ಹೀಗಿದ್ದರೂ ಕಷ್ಟ ಸಾಧ್ಯವಾದ ಈ ಶ್ರವಣ ಕ್ರಿಯೆಯು ಅಜ್ಞಾನಾವರಣ ವನ್ನು ನಾಶಮಾಡಿ, ಬಳಿಕ ಸಾಧಕನ ಮುಖವನ್ನು ಆತ್ಮನತ್ತ ತಿರುಗಿಸುತ್ತದೆ. (ಬ) ಮನನ:-ಶ್ರವಣದಲ್ಲಿ ಬಾಹ್ಯ ಇಂದ್ರಿಯ ಮತ್ತು ಮನದ ದುಡಿಮೆ ಇದೆ. ಮನನದಲ್ಲಿ ಬರಿ ಮನದ ದುಡಿಮೆ ಇದೆ. ಮನನವೆಂದರೆ ಶ್ರುತವಿಷಯದ ಮರು ಚಿಂತನೆ! ಉಪದೇಶಾರ್ಥದ ಪರಿಗ್ರಹಣ! ಮಹಾ ವಾಕ್ಯಗಳ ಸ್ಥಿರೀಕರಣ! ಈ ಕ್ರಿಯೆ ಶ್ರವಣಕ್ಕಿಂತ ಹತ್ತುಪಾಲು ಬಿಗಿ. ಇದರಿಂದ ಪ್ರತಿಪಾದಕ, ಪ್ರತಿಪಾದನ, ಪ್ರತಿಪಾದ್ಯಗಳ ಬಗೆಗಿನ ಸಂದೇಹಗಳು ಅಳಿಯುತ್ತವೆ. ಒಟ್ಟಿನಲ್ಲಿ, ಸಂದೇಹ ಗಳೊಂದಿಗೆ ನಡೆಸುವ ಆತ್ಮಸಾಧಕ ಅನಾತ್ಮ ಬಾಧಕ ಯುಕ್ತಿಗಳ ಅವ್ಯಾಹತ ಬೌದ್ಧಿಕ ಯುದ್ಧವೇ ಮನನ! (ಕ) ನಿಧಿಧ್ಯಾಸನ:– ಮನನಕ್ಕೆ ಗೋಚರವಾದ ಚಿನ್ಮಯಾತ್ಮನತ್ತ ಮನಸ್ಸನ್ನು ಹರಿಸುವದು ಹಾಗು ಆತ್ಮನಲ್ಲಿ ಸ್ಥಿರಗೊಳಿಸುವದು ನಿಧಿಧ್ಯಾಸ. ಮನನಕ್ಕಿಂತ ಕಠಿಣವಾದ ದುಡಿಮೆಯಿದು. ಇಲ್ಲಿ ಎರಡು ಕಾರ್ಯ ಸಾಗಿವೆ. ಒಂದು:ಅನಾತ್ಮ ವೃತ್ತಿಗಳನ್ನು ತೊಡೆದು ಹಾಕುವದು; ಎರಡು: ಆತ್ಮಾ ಕಾರ ವೃತ್ತಿ ಪ್ರವಾಹವನ್ನು ಸ್ಥಿರಗೊಳಿಸುವದು.

ಈ ಮೂರು ಕ್ರಿಯೆಗಳಲ್ಲಿ ಶ್ರವಣವು ಶ್ರೇಷ್ಠ, ಸೂಕ್ಷ್ಮ; ಮನನವು ಶ್ರೇಷ್ಠತರ, ಸೂಕ್ಷ್ಮತರ; ನಿಧಿಧ್ಯಾಸನವು ಶ್ರೇಷ್ಠತಮ, ಸೂಕ್ಷ್ಮತಮ. ಶ್ರವಣ ಕಾರ್ಯದಿಂದ ಶ್ರವಣಾಖ್ಯ ಸಮಾಧಿ. ಮನನದಿಂದ ಸವಿಕಲ್ಪ ಸಮಾಧಿ. ನಿಧಿ ಧ್ಯಾಸನದಿಂದ ನಿರ್ವಿಕಲ್ಪ ಸಮಾಧಿ! ಕೊನೆಗೆ ಆ ನಿಧಿಧ್ಯಾಸ ಕರ್ಮವು ಪರಿಪಕ್ವ ವಾದಾಗ ಆತ್ಮಜ್ಞಾನ; ಆತ್ಮದರ್ಶನ. ಆ ದರ್ಶನದ ಭಾನ ಕೂಡ ಮರೆಯಾಗಿ ಬಿಟ್ಟರೆ ಉಳಿವ ಉಳಿಮೆ ಕೇವಲ ಚಿದಾತ್ಮ! ಅಮರ ಬ್ರಹ್ಮ! ಅಲ್ಲಿ ನಿಂತಾಗ ಕರ್ಮವೂ ಇಲ್ಲ; ಜ್ಞಾನವೂ ಇಲ್ಲ. ನಿರ್ಭಾವ ಸ್ಥಿತಿ. ಅಲ್ಲಿಯವರೆಗೆ ಸಾಧಕನು (ಸಾಂಖ್ಯ ಯೋಗಿಯು) ಜ್ಞಾನ ಕರ್ಮಗಳೆರಡನ್ನೂ ಆಧರಿಸಿಯೇ ಸಾಗುತ್ತಾನೆ ಎಂಬ ಮಾತನ್ನು ಸ್ಮರಿಸಬೇಕು. ಜ್ಞಾನ ಕರ್ಮಗಳು ಅವನ ಎರಡು ಬಲಿಷ್ಠ ಪಕ್ಕಗಳು.

(೨) ಕರ್ಮಯೋಗ:– ಸಾಧಕನಿಲ್ಲಿ ಕರ್ಮಯೋಗಿಯಾದರೂ ಜ್ಞಾನ

ಪಥದಲ್ಲಿಯೇ ನಡೆಯುತ್ತಾನೆ. ಮೊದಲು ವಸ್ತುವಿನ ಸಾಮಾನ್ಯಜ್ಞಾನ; ನಂತರ ಅದರಡಿಯಲ್ಲಿ ಕರ್ಮಸಾಧನೆ. "ಪರಮಾತ್ಮನು ಅವಿನಾಶಿ, ಅನಂತ! ಜಗದ್ರಕ್ಷಕ. ನಮ್ಮ ಸಂಕಷ್ಟಗಳನ್ನು ಪಾರು ಮಾಡುವ ಏಕೈಕ ಸುಹೃದ. ನಮ್ಮ ಬದುಕು ಅವನ ಕೃಪಾ ಪ್ರಸಾದದಿಂದ. ಅವನು ನಮ್ಮ ಪ್ರಾಣದ ಪ್ರಾಣ; ಮನಸ್ಸಿನ ಮಾಲಿಕ" ಇದು ಜ್ಞಾನ; ರಾಗಿ ಪುರುಷನು ತನ್ನ ಸಂಪಾದನೆಯನ್ನೆಲ್ಲ ಅವನಡಿಗೆ ಸಮರ್ಪಿಸುವದು ಕರ್ಮ. ಕರ್ಮ ಫಲಾಶಾತ್ಯಾಗ ಕರ್ಮಯೋಗದ ಪ್ರಥಮ ಹಂತ. ಕರ್ಮ ಕಲ್ಪನಾ ತ್ಯಾಗ ದ್ವಿತೀಯ ಹಂತ. ಕರ್ತೃಭಾವತ್ಯಾಗ ತೃತೀಯ ಹಂತ. ಮೂರು ಹಂತಗಳನೇರಿದಾಗ ಕರ್ಮದ ಪರ್ಯವಸಾನ ಅವಸ್ಥೆ. ಅಲ್ಲಿಗೆ ರಾಗ ಅಳಿಯುವದು. ಆತ್ಮಜ್ಞಾನ ಅಳವಡುವದು. ಬ್ರಾಹ್ಮೀ ಸ್ಥಿತಿ ಸಮನಿಸುವದು.

ಇಂತು, ಸಾಂಖ್ಯಯೋಗಿಯ ಜ್ಞಾನಮಾರ್ಗದಲ್ಲಿ ಶ್ರವಣಾದಿ ಕರ್ಮಗಳು ಅನುಗೊಂಡಿವೆ; ಕರ್ಮಯೋಗಿಯ ಕರ್ಮ ಮಾರ್ಗದಲ್ಲಿ ದೇವನ ಜ್ಞಾನ ನೆಲೆಸಿದೆ. ಕರ್ಮ ಹೀನ ಜ್ಞಾನಯೋಗಿಗೆ ಆತ್ಮದರ್ಶನವಾಗದು; ಜ್ಞಾನಹೀನ ಕರ್ಮಯೋಗಿಗೆ ಆತ್ಮ ಪಥ ದೊರೆಯದು! ಜಗತ್ತಿನಲ್ಲಿ ಸಾವಿರಾರು ಪಂಡಿತರಿದ್ದಾರೆ; ಹೃದಯ ಶುದ್ಧಿಕರ ಕರ್ಮ ಮಾಡರಾಗಿ ಅವರು ಆಶಾದಾಸರು; ಅವರಿಗೆಲ್ಲಿ ಆತ್ಮಸುಖ? ಯಾವುದಕ್ಕಾಗಿ ದುಡಿಯಬೇಕೆಂಬ ಜ್ಞಾನವಿಲ್ಲದೆ ಒಂದು ದುಡ್ಡಿಗೋ, ಒಂದು ತುತ್ತು ಅನ್ನಕ್ಕೋ ಬದುಕಿನಾದ್ಯಂತ ಶ್ರಮಿಸುತ್ತಾರೆ; ಅವರ ದುಡಿಮೆ ವ್ಯರ್ಥ, ಅವರ ಜೀವನ ನಿರರ್ಥಕ. ಏಕನಾಥ ಮೊದಲು ವ್ಯಾಪಾರಿ. ಒಂದು ದಿನ ಒಂದು ಪೈಯ ಲೆಖ್ಖಕೂಡಿ ಬಾರದಾದಾಗ ರಾತ್ರಿತುಂಬ ಕಷ್ಟಪಟ್ಟ. ಅದು ಜ್ಞಾನರಹಿತ ಕರ್ಮಿಗಳ ಮಾದರಿ. ಈ ಎಲ್ಲ ಸಂಗತಿಗಳ ಹಿನ್ನೆಲೆಯಲ್ಲಿ ಪ್ರಸ್ತುತ ಮಂತ್ರವಿದೆ.

ಭಗವಂತ:- "ಪಾರ್ಥ, ಜ್ಞಾನ ಹಾಗು ಯೋಗಗಳು ಬ್ರಾಹ್ಮೀ ಸ್ಥಿತಿಯ ಎರಡು ಸಾಧನಾ ಮುಖಗಳು, ನಿಷ್ಠೆಗಳು ಎಂದು ಹೇಳಿದ್ದೇನೆಯೇ ವಿನಃ ಅವೆರಡು ಬೇರೆ ಬೇರೆ ಎಂದು ನಾನು ಹೇಳಿಯೇ ಇಲ್ಲವಲ್ಲ?

"ಅರ್ಜುನ, ನನ್ನಲ್ಲಿ ವಿಶ್ವಾಸವಿಡು. ನಿನ್ನ ನಿಷ್ಪಾಪ ಹೃದಯದಲ್ಲಿ, ನಿಷ್ಕಲ್ಮಷ ಮನಸ್ಸಿನಲ್ಲಿ ಜ್ಞಾನ–ಯೋಗ, ಕರ್ಮ-ಯೋಗಗಳ ಬಗ್ಗೆ ಸಂದೇಹ–ಕಲಂಕ ಎಬ್ಬಿಸುವದು ನನ್ನ ಉದ್ದೇಶವಿಲ್ಲ. ನನಗೆ ಸಂದಿಗ್ಧವಿದ್ದ ತತ್ತ್ವಗಳನ್ನು ತಿಳಿಸುತ್ತಿರುವನೆಂಬ ಭಾವನೆ ಮಾಡಿಕೊಳ್ಳಬೇಡ. ಸ್ಥಿತಪ್ರಜ್ಞನ ಬ್ರಾಹ್ಮೀ ಸ್ಥಿತಿಯ ದಿವ್ಯಾನುಭವ ಪಡೆದು ಆನಂದಿಸುವ ನನ್ನ ಮನಸ್ಸು ಸರ್ವ ಸಂದೇಹ ರಹಿತವಾಗಿದೆ. ನನ್ನ ಮಾತು ಸುಸ್ಪಷ್ಟ. ಸ್ವಲ್ಪ ಚಿತ್ತವಿಟ್ಟು ಆಲಿಸು. ಮಾತಿನ ಅರ್ಥ ಮಾಡಿಕೊ. ......

"ಸಾಂಖ್ಯ ಹಾಗೂ ಕರ್ಮಯೋಗಗಳು ಭಿನ್ನವಲ್ಲ. ಇಷ್ಟೇ. ಕರ್ಮ ಯೋಗ ಸಾಂಖ್ಯಯೋಗದ ಕ್ರಿಯಾಭಾಗ; ಸಾಂಖ್ಯಯೋಗವು ಕರ್ಮಯೋಗದ ಜ್ಞಾನ-ಫಲಭಾಗ! ಕೆಲವು ಸಾಧಕರಿಗೆ ಜ್ಞಾನ ವಿಭಾಗ ಹೆಚ್ಚು ಇಷ್ಟ; ಕೆಲವರಿಗೆ ಕರ್ಮಯೋಗ ವಿಭಾಗವು ಹೆಚ್ಚು ಇಷ್ಟ. ಆದರೆ ಅವರ ಉದ್ದೇಶ ಹಾಗು ಸಾಧ್ಯ ಮಾತ್ರ ಒಂದೇ- ಬ್ರಾಹ್ಮೀಸ್ಥಿತಿ!"

ತಾತ್ಪರ್ಯ:–ಮಲಿನ ಮನಸ್ಸಿನವರು ಪರಮಾತ್ಮನ ಪರೋಕ್ಷಜ್ಞಾನ ಹೊಂದಿ ಸರ್ವಾರ್ಪಣಾರೂಪ ಕರ್ಮಯೋಗ ಆಚರಿಸಬೇಕು. ಅದರಿಂದ ಚಿತ್ತ ಶುದ್ಧಿ; ಚಿತ್ತ ಶುದ್ಧಿಯಿಂದ ಆತ್ಮದರ್ಶನ. ನಿರ್ಮಲ ಮನಸ್ಸಿನವರು ಶ್ರವಣಾದಿ ಕರ್ಮಗಳ ಸಹಾಯದಿಂದ ಆತ್ಮ ಸಾಕ್ಷಾತ್ಕಾರ ಹೊಂದಬೇಕು. ಆತ್ಮ ಪರಮಾತ್ಮಾಭಿನ್ನ ಪರಮ ಜ್ಞಾನ ಸಾಗರದಲ್ಲಿ ವಿಹರಿಸಬೇಕು.

ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।
ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥೪॥

ಭಾವ:- ಪುರುಷನು ಕರ್ಮಗಳನ್ನು ಮಾಡದೆ, ಆತ್ಮಜ್ಞಾನವನ್ನು ಹೊಂದುವದಿಲ್ಲ; ಮತ್ತು ಕರ್ಮತ್ಯಾಗ ಮಾಡುವದರಿಂದಲೂ ಸಿದ್ಧಿಯನ್ನು ಹೊಂದುವದಿಲ್ಲ.

ವಿವರಣೆ:–ಕರ್ಮವನ್ನು ತ್ಯಜಿಸಿದರೆ ಮಾತ್ರ ಮುಕ್ತಿ ಎಂಬ ವಾದವನ್ನು ಭಗವಂತನು ತಳ್ಳಿಹಾಕುತ್ತಾನೆ.

ನ ಕರ್ಮಣಾಂ ಅನಾರಂಭಾತ್... :– ಮನೆ ಬಿಟ್ಟು, ಮಡದಿ ಮಕ್ಕಳ ತೊರೆದು, ವಸ್ತ್ರ ಒಡವೆಗಳ ಕಳಚಿ ನಿಂತ ಸನ್ಯಾಸಿಗಳು ಕರ್ಮವನ್ನು ಹೀಗಳೆಯುತ್ತಾರೆ; ಶರೀರ, ಮನ, ಬುದ್ಧಿಗಳ ದುಡಿತವೆಂದರೆ ಅವರಿಗೆ ವಿಷದಷ್ಟು ಕಹಿ. ದುಡಿಯದೆ ಬಂದ ಭೋಗವುಂಟು, ಬುದ್ಧಿಯನ್ನು ನಿಷ್ಕ್ರಿಯಗೊಳಿಸಿ ಕಲ್ಪನಾ ಲೋಕದಲ್ಲಿ ವಾಸಿಸುವದು ಅವರಿಗೆ ಸಕ್ಕರೆಯಷ್ಟು ಸಿಹಿ. ಮೇಲಾಗಿ, ಅವರಲ್ಲಿ ಭಾರೀ ಅಭಿಮಾನ. ಎಲ್ಲ ಕರ್ಮಶೀಲರನ್ನು ಕೀಳಾಗಿ ಕಾಣುತ್ತಾರೆ; ತಾವೇ ಜಾಣರು, ಪವಿತ್ರರು, ಪೂಜ್ಯರು ಎಂದು ಭಾವಿಸುತ್ತಾರೆ. ಅವಿಧೇಯತೆ ಮತ್ತ ಅಹಂಕಾರಗಳು ರಕ್ತಗತವಾಗಿವೆ. ಇಂಥ ಕರ್ಮ ಸನ್ಯಾಸಿಗಳಿಗೆ ಆತ್ಮ-ಸಾಕ್ಷಾತ್ಕಾರ ರೂಪ ಸಿದ್ಧಿ ಸಮನಿಸದು.

ಬದುಕಿನಲ್ಲಿ ಆನಂದ ದೊರೆಯಬೇಕಾದರೆ ದುಡಿತ ಮುಖ್ಯ. ದಿನದ ತುಂಬ ಬೆವರು ಸುರಿಸಿ ದುಡಿದು ಊಟ ಮಾಡಿದರೆ ಉಂಡ ಅನ್ನ ಬಾಯಿಗೆ ರುಚಿ, ಹೊಟ್ಟೆಗೆ ಹಿತ; ನೀಡುವವರೂ ಪ್ರೀತಿ; ವಾತ್ಸಲ್ಯದಿಂದ ನೀಡುತ್ತಾರೆ. ವಯಸ್ಸಿಗೆ ತಕ್ಕಂತೆ ದುಡಿಮೆ ಬಹು ವಿಧ. ಬ್ರಹ್ಮಚಾರಿಯು ಕಷ್ಟಪಟ್ಟು ವಿದ್ಯೆ ಗಳಿಸಬೇಕು; ಗೃಹಸ್ಥನು ಶ್ರಮ ಮಾಡಿ ತಾಯಿ ತಂದೆ ಹೆಂಡತಿ ಮಕ್ಕಳು ಸಮಾಜ ಹಾಗು ಧರ್ಮಗಳ ರಕ್ಷಿಸಬೇಕು; ವಾನಪ್ರಸ್ಥನು ವಿಷಯಗಳಿಂದ ಹಿಮ್ಮುಖನಾಗಿ

ಶಾಸ್ತ್ರಾಧ್ಯಯನ, ಅಧ್ಯಾಪನ, ಚಿಂತನಗಳಲ್ಲಿ ಮನ ಮುಳುಗಿಸಬೇಕು; ಸನ್ಯಾಸಿಯು ಮನಸ್ಸನ್ನು ದೇವ ಧ್ಯಾನದಲ್ಲಿ ತನ್ಮಯಗೊಳಿಸಿ, ಬಾಹ್ಯ ಪ್ರಪಂಚ ಮರೆತು ಆತ್ಮನಲ್ಲಿ ಲೀನನಾಗಬೇಕು. ಅವು ಅವರವರ ಯುಕ್ತ ಕರ್ಮಗಳು,

ಇನ್ನು ಏನಾದರು ಮಾಡುವದೂ ಕರ್ಮವಲ್ಲ. ಬರಿ ಧನ, ಕನಕ, ಕೀರ್ತಿಗಳಿಗಾಗಿ ಮಾಡಿದ ಶ್ರಮ ವ್ಯರ್ಥ. ಅಂಥ ಕರ್ಮ ಮಾಡುವದರಿಂದ ಪ್ರಯೋಜನವಂತಿರಲಿ ಹಾನಿಯೇ ಹೆಚ್ಚು. ಯಾವ ಕರ್ಮಗಳು ದೇವನಿಗಾಗಿ, ಸಮಾಜ ಹಿತಕ್ಕಾಗಿ, ಜ್ಞಾನವೃದ್ಧಿಗಾಗಿ ಇವೆಯೋ ಅವು ಮುಕ್ತಿಕಾರಿ. ಅವುಗಳನ್ನು ಪರಿತ್ಯಜಿಸುವದು ಜಾಣತನವಲ್ಲ.

ಕೇವಲ ಶಾಬ್ದಿಕ ಜ್ಞಾನದಿಂದ ಸಾಧಿಸುವದಾದರು ಏನು ? " ನೂರು ಓದಿ ನೂರು ಕೇಳಿದರೇನು ? ಆಶೆ ಹರಿಯದು; ರೋಷ ಬಿಡದು " ಒಬ್ಬ ಗೀತಾ ಪಂಡಿತ. ರಾಜನಿಗೆ ಗೀತಾ ಹೇಳಿ ಏನಾದರು ಪಡೆಯಬೇಕೆಂದು ನಿರ್ಧರಿಸಿದ. ರಾಜನ ಹತ್ತಿರ ಹೋಗಿ, " ಮಹಾರಾಜ, ತಮಗೆ ಗೀತೋಪದೇಶ ಮಾಡಬೇಕೆಂದು ನನ್ನ ಆಶೆ " ಎಂದು ವಿನಂತಿಸಿದ. " ಈಗ ಬೇಡ; ಇನ್ನೊಂದು ವರುಷ ಎಡೆ ಬಿಡದೆ ಓದು; ತಿಳಿದುಕೊ- ನಂತರ ಬಾ. " ಎಂದ ರಾಜ. ಇದೇ ರೀತಿ ಎರಡು ಮೂರು ನಾಲ್ಕು ಹತ್ತು ಸಲ ನಡೆಯಿತು. ಪಂಡಿತ ಓದುತ್ತಲೇ ಹೋದ " ವೀತರಾಗ ಭಯಕ್ರೋಧಃ... " ಮುಂತಾದ ವಚನಗಳು ಅವನ ಮನಸ್ಸನ್ನು ಆಕರ್ಷಿಸಿದವು. ಅವುಗಳ ಮೇಲೆ ಗಾಢವಾಗಿ ಚಿಂತಿಸಿದ. ಕಡೆಗೆ, ಅವನಲ್ಲಿದ್ದ ರಾಗ ಭಯಾದಿಗಳು ಸಡಿಲಾದವು; ಗೀತಾ ತಾತ್ಪರ್ಯ, ಗೀತಾ ಅಂತಸ್ಸಾರ ಅಂಗವಿಸಿತು. ಆ ವರುಷ ರಾಜನತ್ತ ಹೋಗಬೇಕೆಂಬುದೇ ವಿಸ್ಮರಣವಾಯ್ತು. ರಾಜ ತಾನಾಗಿಯೇ ಬಂದ. ಪಂಡಿತ–ಅನುಭಾವಿಯ ಬಳಿ ಕುಳಿತು ತತ್ತ್ವ ಬೋಧಾಮೃತ ಸವಿದ.

ಈ ಕಥೆ ನಿರ್ದೇಶಿಸುವಂತೆ, ಕೇವಲ ಶಾಸ್ತ್ರಜ್ಞಾನ ಫಲಕಾರಿಯಲ್ಲ. ಅದರೊಂದಿಗೆ ಮನಶ್ಶುದ್ಧೀಕರಣ ಕರ್ಮ ನಡೆಯಬೇಕು. ಆ ಕರ್ಮ ಪರಿಪಕ್ವ ಸ್ಥಿತಿಗೆ ಬಂದರೆ ಆತ್ಮಜ್ಞಾನ ( ನೈಷ್ಕರ್ಮ್ಯ ) ! ವಿಮಲ ಆತ್ಮ ದರ್ಶನ ! ವಿಮುಕ್ತಿ !!

**ಭಗವಂತ:-** " ಪಾರ್ಥ, ಕರ್ಮವನ್ನು ಜರೆಯಬೇಡ; ಕರ್ಮ ಸನ್ಯಾಸ ಮಾಡಬೇಡ. ಪವಿತ್ರ ಕರ್ಮಾಚರಣೆಯಿಲ್ಲದೆ ದೇವ ದರ್ಶನವಿಲ್ಲ; ಆತ್ಮವಿಜ್ಞಾನ ವಿಲ್ಲ. ನಿನಗೆ, ನಿನ್ನವರಿಗೆ ಹಾಗು ವಿಶ್ವಕ್ಕೆ ಕಲ್ಯಾಣ ಬಯಸುವೆಯಾದರೆ ಅವಿರತ ವಾಗಿ ಕರ್ಮಮಾಡು. ಸಿದ್ಧಿಯು ನಿನ್ನ ಕೈವಶವೆಂದು ತಿಳಿ. "

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥೫॥**

**ಭಾವ:–** ಯಾವನೂ ಎಂದಿಗೂ ( ಯಾವ ಅವಸ್ಥೆಯಲ್ಲಿಯೂ ) ಒಂದು ಕ್ಷಣಕೂಡ

ಕೆಲಸ ಮಾಡವೆ ಇರಲಾರ. ಏಕೆಂದರೆ ಪ್ರತಿಯೊಬ್ಬನು ಪ್ರಾಕೃತಿಕ ಸತ್ವಾದಿ ಗುಣಗಳಿಂದ, ವಶನಾಗಿ, ಕರ್ಮ ಮಾಡುತ್ತಾನೆ.

ವಿವರಣೆ:– ಕರ್ಮ ಮಾಡಿದಾಗ ಒಂದಿಲ್ಲೊಂದು ದೋಷ ಅಂಟಿಯೇ ಅಂಟುವದು. ಕರ್ಮದೋಷವು ಜನ್ಮ ಮರಣಕ್ಕೆ ಕಾರಣ; ಅದೇ ಭವ ಬಂಧನ. ಭವದಿಂದ ಮುಕ್ತನಾಗಬೇಕಾದರೆ ಕರ್ಮದೋಷ ನಿಲ್ಲಬೇಕು; ಆದುದರಿಂದ ಕರ್ಮವನ್ನು ಪ್ರಾರಂಭಿಸಬಾರದು; ಪ್ರಾರಂಭ ಮಾಡಿದ್ದರೆ ಅವನ್ನು ತ್ಯಜಿಸಬೇಕು. ಈ ವಾದವು ಭಗವಂತನಿಗೆ ಅಸಮ್ಮತ. ಏಕೆಂದರೆ:

ನ ಹಿ ಕಶ್ಚಿತ್ಕ್ಷಣಮಪಿ... :- ಚರ ಅಚರ ಎರಡೂ ವಿಶ್ವಗಳು ಕರ್ಮ ಮಾಡದೆ ಒಂದೂ ಕ್ಷಣ ಬಾಳಲಾರವು. ಭೂಮಿ ಧರಿಸುತ್ತಿದೆ; ಜಲ ಹರಿಯುತ್ತಿದೆ; ಅಗ್ನಿ ಸುಡುತ್ತಿದೆ; ವಾಯು ಚಲಿಸುತ್ತಿದೆ; ಆಕಾಶ ಅವಕಾಶ ನೀಡುತ್ತಿದೆ. ತನ್ಮಾತ್ರೆಗಳು ಅಹಂಕಾರ ಮಹತ್ತುಗಳೂ ಸಂಕೋಚ ವಿಕಾಸ ಹಾಗು ಸಮ್ಮಿಶ್ರಣ ಕಾರ್ಯದಲ್ಲಿ ತೊಡಗಿವೆ. ವಿಶ್ವಜನನಿಯಾದ ಪ್ರಕೃತಿಯಂತು ವಿರಾಮವಿಲ್ಲದೆ ತತ್ತ್ವಗಳನ್ನು ನಿರ್ಮಿಸುತ್ತಿದೆ; ಹಾಗು ನಿಯತವಾಗಿ ಅಸಂಖ್ಯ ಪದಾರ್ಥಗಳನ್ನು ತನ್ನ ಗರ್ಭದಲ್ಲಿ ಸೆಳೆದುಕೊಳ್ಳುತ್ತಿದೆ.

ಸೂಕ್ಷ್ಮಾಣುವಿನಿಂದ ಮನುಷ್ಯನ ವರೆಗಿರುವ ಪ್ರಾಣಿಗಳು ಚರ ಜೀವಿಗಳು. ಅವು ತಮ್ಮ ದೇಹ ರಚನೆ, ಪರಿಸರ, ಸ್ವಭಾವ ಹಾಗು ಬೇಡಿಕೆಗಳ ಅನುಸಾರ ಚಿತ್ರ ವಿಚಿತ್ರ ಕಾರ್ಯಗಳನ್ನು ಮಾಡುತ್ತಲೇ ಇವೆ. ಕಾರ್ಯ ಮಾಡುವದೇ ಬದುಕು; ಕಾರ್ಯ ನಿಂತರೆ ಅದು ಸಾವು. ಜ್ಞಾನೇಂದ್ರಿಯ, ಕರ್ಮೇಂದ್ರಿಯ. ಮನ, ಬುದ್ಧಿ, ಚಿತ್ತ ಎಲ್ಲ ಸಾಧನೆಗಳು ಪ್ರತಿ ನಿಮಿಷ ತಪ್ಪದೆ ಒಂದಿಲ್ಲೊಂದು ಕಾರ್ಯ ನಿರ್ವಹಿಸುತ್ತಿವೆ. ಒಂದೇ ಮಾತಿನಲ್ಲಿ ಹೇಳುವದಾದರೆ ವಿಶ್ವವು ಪರಿವರ್ತನಶೀಲ !! ಪರಿಣಾಮಶೀಲವಾದ ಗುಣಗಳಿಂದ ಆಳಲ್ಪಡುವ ಜಗತ್ತೆಲ್ಲ ಅಸ್ಥಿರ !

ಮನುಷ್ಯ ಅತ್ಯಂತ ಬುದ್ಧಿ ಜೀವಿ. ನಿಜ; ಅವನಲ್ಲಿ ದೇವನನ್ನೇ ಕಾಣಬಲ್ಲ ಮಹಾನ್ ಶಕ್ತಿ ಹುದುಗಿದೆ ಎಂಬ ಮಾತನ್ನು ಒಪ್ಪಲೇ ಬೇಕು. ಅವನು ಭೌತ ಮಂಡಲ, ತನ್ಮಾತ್ರಾ ಮಂಡಲ, ಅಹಂಕಾರ ಮಂಡಲ ಹಾಗು ಮಹತ್ ಮಂಡಲ ಮೀರಿ ಅನಂತ ಚಿದಾಕಾಶದಲ್ಲಿ ದೃಷ್ಟಿ ಬೀರಬಲ್ಲ ! ಆದರೇನು ? ದೇಹದೊಂದಿಗೆ ಬಾಳಿರುವ ವರೆಗೆ ಅವನು ಕಾರ್ಯ ಮಾಡುವದನ್ನು ಯಾವ ರೀತಿಯಿಂದಲೂ ತಪ್ಪಿಸಲಾರ. ಅವನ ದೇಹ, ಮನಸ್ಸುಗಳು ಪ್ರಾಕೃತಿಕ ಗುಣಗಳ ಆಧಿಪತ್ಯಕ್ಕೆ ಒಳಗಾಗಿವೆ. ಆದುದರಿಂದ ಮನುಷ್ಯನು ಗುಣಗಳ ಆಧೀನ. ಆಯಾ ಗುಣಾಧಿಕ್ಯಕ್ಕೆ ಸರಿಯಾಗಿ ಕರ್ಮ ಮಾಡಲೇಬೇಕು. ಅದು ವಿಶ್ವ ನಿಯತಿ.

ಸಾತ್ವಿಕ ಗುಣಕ್ಕೆ ವಶನಾದ ಮನುಷ್ಯನು ಯಮ, ನಿಯಮ, ಪ್ರತ್ಯಾಹಾರ,

ಧಾರಣ, ಧ್ಯಾನಗಳನ್ನಾಚರಿಸುತ್ತಾನೆ; ಜಾಗ್ರ ಸ್ವಪ್ನ ಸುಪ್ತಿ ಅವಸ್ಥೆಗಳ ಭೇದಿಸಿ ತುರಿಯಕ್ಕೇರುವ ಸಾಧನೆ ಮಾಡುತ್ತಾನೆ; ಮನಸ್ಸು ಅತ್ಯಂತ ಶುದ್ಧವಾದ ನಂತರ ಅಂತರ್ಜ್ಯೋತಿರಾತ್ಮನ ದಿವ್ಯ ಪ್ರಕಾಶವನ್ನು ಮನಸ್ಸರಸಿನಲ್ಲಿ ಪರಿಗ್ರಹಿಸುವ ಅಪ್ರತಿಮ ಸಾಹಸ ಮಾಡುತ್ತಾನೆ; ಕಡೆಗೆ ಆತ್ಮನಲ್ಲಿ ಸಾಮರಸ್ಯ ಹೊಂದಿ ಅಕ್ಷಯ ಆನಂದ ಭೋಗಿಸುತ್ತಾನೆ. ಅವನು ಉತ್ಥಾನನಾದರೆ ಪೂರ್ವ ದಂತೆ ತನ್ನ ಇಂದ್ರಿಯ, ಮನಸ್ಸುಗಳಿಂದ ವ್ಯವಹರಿಸುತ್ತಾನೆ; ಆದರೆ ಆಗ ಅವ ನಲ್ಲಿ ರಾಗ ದ್ವೇಷಗಳಿಲ್ಲ; ಬುದ್ಧಿಯಲ್ಲಿ ಆತ್ಮ ಬೆಳಕು ಸದಾ ಮಿನುಗುತ್ತಿದೆ. ಅವನು ಮಾತನಾಡಿದುದು ಮಂತ್ರ; ನಡೆದುದು ಮಾರ್ಗ; ನೋಡಿ ಮುಟ್ಟಿದುದು ಪಾವನ!

ರಾಜಸಿಕ ಗುಣಕ್ಕೆ ವಶನಾದ ಮನುಷ್ಯನು ಶಬ್ದ ಸ್ಪರ್ಶಾದಿ ಪಂಚ ವಿಷಯಗಳಲ್ಲಿ ವಿಹರಿಸುತ್ತಾನೆ; ಮನಸ್ಸು ಬಂದರೆ, ದೇವನುತಿ ಭಜನೆ ಪೂಜೆಗ ಳಲ್ಲಿ ತೊಡಗುತ್ತಾನೆ. ದಾನ ಧರ್ಮ ಪರೋಪಕಾರಗಳೆಂದರೆ ಅವನಿಗೆ ಉತ್ಸಾಹ. ಕೀರ್ತಿ, ಮಾನ, ಪ್ರತಿಷ್ಠೆಗಾಗಿ ದುಡಿಯುವಲ್ಲಿ ಅವನಿಗೆ ಅತ್ಯಂತ ಆಸಕ್ತಿ !

ತಾಮಸಿಕ ಗುಣಕ್ಕೆ ವಶನಾದ ಮನುಷ್ಯನು ಕೇವಲ ವಿಷಯಲೋಲುಪ; ಕಾಮ ಕ್ರೋಧ ಪರಾಯಣ. ಹಗಲು ರಾತ್ರಿಯ ಪರಿವೆಯಿಲ್ಲದೆ ಹೆಂಡತಿ ಮಕ್ಕಳಿ ಗಾಗಿ ದೇಹ ಸವೆಸುತ್ತಾನೆ. ಸಂಚಯವೆಂದರೆ ಪ್ರಾಣ ಕಳೆದುಕೊಳ್ಳುತ್ತಾನೆ. ಅವನ ಬುದ್ಧಿ, ಮನಸ್ಸು ಮತ್ತು ಸಕಲ ಇಂದ್ರಿಯಗಳು ವಿಷಯ ಶೇಖರಣೆಗಾ ಗಿಯೇ ದುಡಿಯುತ್ತಿವೆ.

ಭಗವಂತ:– " ಧನಂಜಯ, ದೇವನಲ್ಲಿ ತಾದಾತ್ಮ್ಯ ಹೊಂದಿದ ಸ್ಥಿತ ಪ್ರಜ್ಞನಿಗೆಯೇ ಕರ್ಮ ತಪ್ಪದೆಂದಾಗ ಸಾಧಕರ ಹಾಗು ಸಾಮಾನ್ಯ ಜೀವಿಗಳ ಮಾತೇನು ? ಕರ್ಮವು ಜಗತ್ತಿನ ವಿಧಿ! ನೀನಂತು ಸಾಂಸಾರಿಕ ಮನುಷ್ಯ, ಪ್ರಾಕೃತಿಕ ಗುಣಗಳ ಕೈಯಲ್ಲಿಯ ಗೊಂಬೆ. ಕರ್ಮ ಮಾಡುವದನ್ನು ಹೇಗೆ ತಪ್ಪಿಸ ಬಲ್ಲ ? ಸುಮ್ಮನೆ ದುಡಿ; ನಿನ್ನ ಸ್ವಭಾವಾನುಸಾರ ಶ್ರಮಿಸು. ಇಷ್ಟೇ, ಕರ್ಮ ಮಾಡುವಾಗ ಪರಮಾತ್ಮನ ಅರಿವಿರಲಿ; ಅನಾಸಕ್ತ ಭಾವವಿರಲಿ. "

ಸಂಬಂಧ:– ಕರ್ಮೇಂದ್ರಿಯಗಳನ್ನು ಮಾತ್ರ ನಿಷ್ಕ್ರಿಯಗೊಳಿಸಿ ಮನ ಸ್ಸಿನಲ್ಲಿ ವಿಷಯಗಳನ್ನು ಧೇನಿಸುವವ ವಿಮೂಢ. ಅವನ ಬಗ್ಗೆ ಮುಂದಿನ ಮಂತ್ರ-

ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥೬॥

ಭಾವ:- ಯಾವನು ಕರ್ಮೇಂದ್ರಿಯಗಳನ್ನು ನಿಗ್ರಹಿಸಿ ಮನಸ್ಸಿನಿಂದ (ಶಬ್ದಾದಿ ವಿಷ ಯಗಳನ್ನು-) ಸ್ಮರಿಸುತ್ತಿರುವನೋ ಅವನು ಮೂಢನು, ಡಾಂಭಿಕನು ( ಎಂದು ) ಹೇಳ ಲ್ಪಡುತ್ತಾನೆ.

ವಿವರಣ :- ಭಗವಂತ:- " ಕುರುನಂದನ, ಕರ್ಮೇಂದ್ರಿಯ ನಿಗ್ರಹಿಸಿ

ಮನಸ್ಸಿನಲ್ಲಿ ವಿಷಯಭೋಗ ಚಿಂತನ ಮಾಡುವ ಮನುಷ್ಯ ಒಳ್ಳೆಯವನೆಂದು ಸರ್ವಥಾ ಭಾವಿಸದಿರು. ಅವರು ಲೋಕದ ಕಣ್ಣಿಗೆ ಸಂತರೇ ವಿನಃ ಅಂತರಾತ್ಮನಿಗಲ್ಲ. ಅವರು ಕಪಟಿಗಳು, ಢಾಂಭಿಕರು. ಸತ್ಯವರಿಯದ ವಿಮೂಢಾತ್ಮರು."

ಸಾಮಾನ್ಯವಾಗಿ ಪರಿಸ್ಥಿತಿಯ ಒತ್ತಡದಿಂದ ವಿರಕ್ತರಾದವರು, ಯಾವುದೊ ಒಂದು ಹೃದ್ಗತ ಆಕಾಂಕ್ಷೆ ಪೂರೈಸಿಕೊಳ್ಳಲು ಸನ್ಯಾಸ ಸ್ವೀಕರಿಸಿದವರು ಹಾಗು ವ್ರತಾಚಾರಿಗಳು ಕರ್ಮೇಂದ್ರಿಯಗಳನ್ನು ನಿಗ್ರಹಿಸುತ್ತಾರೆ. ಜ್ಞಾನೇಂದ್ರಿಯಗಳನ್ನು ವಿಷಯಗಳಿಂದ ದೂರಿಡುತ್ತಾರೆ. ಸುಂದರ ಸ್ತ್ರೀ, ಸವಿ ಭಕ್ಷ್ಯ, ಸಿನೇಮಾ, ವೈಷಯಿಕ ಗಾನ ಇತ್ಯಾದಿ ಉಪಭೋಗಗಳ ಭೋಗಿಸುವದಿಲ್ಲ. ಇಷ್ಟಕ್ಕೆ ಅವರನ್ನು ವಿರಕ್ತರು, ಜ್ಞಾನಿಗಳು, ಅಕರ್ಮಿಗಳು ಎಂದು ಹೇಳುವದು ಸಾಧ್ಯವಿಲ್ಲ; ಸಮಂಜಸವೂ ಅಲ್ಲ. ಏಕೆಂದರೆ, ಅವರ ಮನಸ್ಸು—ಇಂದ್ರಿಯಗಳ ರಾಜ—ಹರಿದಾಡುತ್ತಿದೆ. ಇಂದ್ರಿಯ ವಿಷಯೋಪಭೋಗ ಚಿಂತನದಲ್ಲಿ ತಲ್ಲೀನವಾಗಿದೆ. ಕನಸಿನ ತುಂಬ ವಿಷಯಗಳನ್ನೇ ಕಾಣುತ್ತಾರೆ.

ಬಹು ವರುಷಗಳ ಕಾಲ ವಿಷಯಗಳ ರುಚಿಯುಂಡ ಗೃಹಸ್ಥರ ಮನಸ್ಸು ಸುದೈವದಿಂದ ಇಂದ್ರಿಯಗಳ ವಿಷಯಕ್ಕೆ ಹೇಸಬಹುದು. ದೇವನ ಕಾರುಣ್ಯಕ್ಕಾಗಿ ಅವರ ಹೃದಯ ಹಾತೊರೆಯಬಹುದು. ಆದರೆ ಹೊರ ವಿಷಯ ಸಂಪರ್ಕವಿಲ್ಲದ ಸನ್ಯಾಸಿಯು ಮಾತ್ರ ಮಾನಸಿಕ ವಿಷಯಾಸಕ್ತಿಯನ್ನು ಬಿಟ್ಟು ಕೊಡುವದು ಕಷ್ಟ; ಆದುದರಿಂದಲೇ, ಬಹು ಜನ ಸನ್ಯಾಸಿಗಳು, ಸ್ವಾಮಿಗಳು ಅನೀತಿ ಕಾರ್ಯಪಸಗುತ್ತಾರೆ; ಧನ ಭೂಮಿಗಳಿಗಾಗಿ ಪರದಾಡುತ್ತಾರೆ; ಮಾನ ಪ್ರತಿಷ್ಠೆಗಳಿಗಾಗಿ ದೇಶ ದೇಶ ಸಂಚರಿಸುತ್ತಾರೆ.

ಅದೂ ಅಲ್ಲದೆ, ಇಂದ್ರಿಯಗಳು ವಿಷಯಗಳೊಂದಿಗೆ ನೇರ ಸಂಬಂಧ ಬೆಳೆಸಿದಾಗಲೇ ಪಾವಿತ್ರ್ಯ ನಾಶವೆಂದಲ್ಲ. ಮಾನನಿಧಿ ಕುಸ್ತಿ ಆಳು ಪೂರ್ಣ ಅಂಗಾತಾಗಿ ಬೀಳ ಬೇಕಿಲ್ಲ; ಭೂಮಿಗೆ ಸ್ವಲ್ಪ ಮೈ ತಾಗಿದರೂ ಸೋತಂತೆಯೇ. ಹಾಗೆ ವಿರಕ್ತನು ಮನದಲ್ಲಿ ವಿಷಯಗಳನ್ನು ನೆನೆಸಿದರೂ ಸಾಕು; ಅವನ ಪಾವಿತ್ರ್ಯ ಕ್ಷಯವಾದಂತೆಯೇ ಸರಿ. ವಿಷಯ ವಾಸನೆಯು ವಿಷಯ ಸ್ಪರ್ಶಕ್ಕಿಂತ ಭಯಾನಕ ವಿನಾಶಕಾರಿ. ವ್ಯಕ್ತಿಯ ಪತನವು ಬಾಹ್ಯ ಆಚಾರದ ಮೇಲೆ ಅಷ್ಟಾಗಿ ಅವಲಂಬಿಸಿಲ್ಲ; ಮನೋಗತ ಆಕಾಂಕ್ಷೆ ಹಾಗು ಕಾಮನೆಗಳ ಮೇಲೆ ಅವಲಂಬಿಸಿದೆ. ದೇವನಿಗೆ ಕಾಣುವದು ಹೊರ ವ್ಯವಹಾರವಲ್ಲ, ಒಳ ವ್ಯವಹಾರ ! ಜನರ ಕಣ್ಣಿಗೆ ಮಣ್ಣುಗ್ಗಿ ಮನದಲ್ಲಿ ಭೋಗಿಗಳಾಗಿ ಮಿಡುಕುವ ತೋರಿಕೆಯ ವಿರಾಗಿಗಳು ವಿರಕ್ತರಲ್ಲ ವಂಚಕರು, ಸಜ್ಜನರಲ್ಲ ದುರ್ಜನರು, ಆತ್ಮ ವಿಚಾರಿಗಳಲ್ಲ ಆತ್ಮಘಾತಕರು ! ಅವರಿಗೆ ಆತ್ಮಜ್ಞಾನ ಸಮನಿಸದಾಗಿ ವಿಮೂಢರು !

"ದುಡ್ಡು ಮುಟ್ಟಬೇಡಿ. ಭೂಮಿ ಸೀಮೆಗಳಿಗಾಗಿ ಕದನ ಮಾಡದಿರಿ

ಎಲ್ಲವೂ ದೇವರ ಸೊತ್ತು. ಎಲ್ಲರನ್ನು ಪ್ರೀತಿಸಿರಿ. ಸಿಟ್ಟು ಅಸೂಯೆ ಬೇಡ. ಸದಾ ದೇವ ಧ್ಯಾನ ನಡೆಯಲಿ." ಎಂದು ಆದೇಶವಿಯುವ ಅನೇಕ ವ್ಯಕ್ತಿಗಳು ಏನು ಮಾಡುತ್ತಾರೆ? ಧರ್ಮ, ದೇವರ ಹೆಸರಿನಲ್ಲಿ ಹಣ ಸಂಗ್ರಹಿಸುತ್ತಾರೆ; ಭೂಮಿಗಾಗಿ ನ್ಯಾಯ ಆಡುತ್ತಾರೆ; ಒಳ್ಳೆಯವರನ್ನು ಕಂಡಾಗ ಕ್ರೋಧ ಕಾರುತ್ತಾರೆ; ಅಸಂಸ್ಕೃತ ನಿಷ್ಪಾಪಿ ಜನರನ್ನು ಮನಬಲ್ಲಂತೆ ಶೋಷಿಸುತ್ತಾರೆ. ಅಧಿಕಾರ ಮಾನಗಳ ಭಕ್ತರಾದ ಈ ಜನ ಕಪಟಿಗಳಲ್ಲದೆ ಮತ್ತೇನು?

ಸಬಂಧ:– ಹಾಗಾದರೆ ಸಜ್ಜನರು ಯಾರು ?

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ।
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥೭॥

ಭಾವ:- ಆದರೆ, ಯಾವನು ಇಂದ್ರಿಯಗಳನ್ನು ಮನಸ್ಸಿನಿಂದ ನಿಗ್ರಹಿಸಿ ಅನಾಸಕ್ತನಾಗಿ ಕರ್ಮೇಂದ್ರಿಯಗಳ ಮೂಲಕ ಕರ್ಮಯೋಗವನ್ನು ಆರಂಭಿಸುತ್ತಾನೆಯೋ ಅವನು ವಿಶಿಷ್ಟನಾಗುತ್ತಾನೆ (ಚಿತ್ತ ಶುದ್ಧಿಯ ಮೂಲಕ ಜ್ಞಾನವಂತನಾಗುತ್ತಾನೆ.)

ವಿವರಣೆ:- ಭಗವಂತ:– "ಆದರೆ, ಅರ್ಜುನ, ಸಜ್ಜನ ಸಾಧಕನ ರೀತಿ ಬೇರೆ. ಅವನು ಮನಸ್ಸಹಿತ ಜ್ಞಾನೇಂದ್ರಿಯಗಳನ್ನು ತನ್ನ ಅಂಕಿತದಲ್ಲಿಟ್ಟುಕೊಳ್ಳುತ್ತಾನೆ. ಕರ್ಮೇಂದ್ರಿಯಗಳಿಂದ ಅನಾಸಕ್ತ ಕರ್ಮಗಳನೆಸಗುತ್ತಾನೆ. ಸಿಂದೀ ಮಾರುವ ಈಳಿಗರು ಸಿಂದಿ ಗಿಡಗಳ ಗುಂಪಿನಲ್ಲಿ ಬಾಳುತ್ತಾರೆ; ಸಿಂದೀ ತಯಾರಿಕೆಯಲ್ಲಿ ನಿಪುಣರಾದ ಅವರು ಗಿಡ ಬೆಳೆಸುವದರಿಂದ ಪ್ರಾರಂಭಿಸಿ ಸಿಂದಿ ಮಾರುವವರೆಗಿನ ಸಕಲ ಕಾರ್ಯಗಳನ್ನು ಮಾಡುತ್ತಾರೆ. ಕಿಂತು, ಒಂದು ಗುಟುಕು ಸಿಂದಿಯನ್ನೂ ಅವರು ಕುಡಿಯುವದಿಲ್ಲ. ಹಾಗೆ ಸಾಧಕನು ವಿಷಯಗಳ ನಡುವೆ ಬದುಕಿರಬಹುದು; ಅವನ ಕರ್ಮೇಂದ್ರಿಯಗಳು ದಿನವಿಡಿ ಕರ್ಮದಲ್ಲಿ ತೊಡಗಿರಬಹುದು; ಮನೋಯುಕ್ತ ಜ್ಞಾನೇಂದ್ರಿಯಗಳು ಮಾತ್ರ ಅಂತರ್ಮುಖವಾದುದರಿಂದ ಸಾಧಕನು ಅಲಿಪ್ತನಾಗಿಯೇ ಉಳಿಯುತ್ತಾನೆ: ವಿಷಯವಾಸನಾ ಸರೆ ಅವನ ಹೃದಯವನ್ನು ಪ್ರವೇಶಿಸುವದಿಲ್ಲ. ಆದುದರಿಂದ ಅವನು ಸರ್ವಶ್ರೇಷ್ಠ; ಸ್ಥಿತಪ್ರಜ್ಞನಾಗುವ ಯೋಗ್ಯತೆಯುಳ್ಳವ."

ಸಂಬಂಧ :- ಅರ್ಜುನನು ನಿತ್ಯ ಕರ್ಮಯೋಗಿಯಾಗಬೇಕೆಂದು ಭಗವಂತನು ಆದೇಶ ನೀಡುತ್ತಾನೆ.

ನಿಯತಂ ಕುರು ಕರ್ಮ ತ್ವಂ ಕರ್ಮಜ್ಯಾಯೋಹ್ಯಕರ್ಮಣಃ ।
ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥೮॥

ಭಾವ:- ನೀನು ಸಂಧ್ಯೋಪಾಸನಾದಿ ನಿತ್ಯ ಕರ್ಮ ಮಾಡು; ಏಕೆಂದರೆ ಅಕರ್ಮಕ್ಕಿಂತ (ಕರ್ಮ ಮಾಡದಿರುವದಕ್ಕಿಂತ) ಕರ್ಮವು (ಕರ್ಮ ಮಾಡುವದು) ಉತ್ತಮ. ಮತ್ತು ನೀನು ಕರ್ಮ ಮಾಡದಿದ್ದರೆ (ಅಕರ್ಮನಾದರೆ) ಜೀವನದ ನಿರ್ವಾಹ ಕೂಡ ಸಾಧ್ಯವಾಗಲಿಕ್ಕಿಲ್ಲ.

ವಿವರಣೆ:– ಕರ್ಮಯೋಗದಲ್ಲಿ ಇಂದ್ರಿಯ ನಿರೋಧ ಹಾಗು ಮನದ

ಸಂಯಮನ ಮುಖ್ಯ. ಅವುಗಳ ಅರ್ಥ ಅರಿಯುವಾ.

ಇಂದ್ರಿಯ ನಿರೋಧವೆಂದರೇನು ? ಇಂದ್ರಿಯಗಳ ನಾಶವೆ ? ಅಥವಾ ಇಂದ್ರಿಯಗಳನ್ನು ಪೂರ್ಣವಾಗಿ ನಿಷ್ಕ್ರಿಯಗೊಳಿಸುವದೆ ? ಅಲ್ಲ. ಅವುಗಳಿಂದ ಪಾಪಕಾರ್ಯಗಳು ಜರುಗದಂತೆ ದಕ್ಷತೆ ವಹಿಸುವದು ನಿಜವಾದ ನಿಗ್ರಹ. ದುರ್ವಿಷಯಗಳಿಂದ ಅವುಗಳನ್ನು ವಿಮುಖ ಮಾಡಿ ದೇವಶಬ್ದಾದಿ ವಿಷಯಗಳಲ್ಲಿ ತೊಡಗಿಸುವದು ಸರಿಯಾದ ಸಂಯಮ. ಭರತನ ಚರಿತೆ ಇಂದ್ರಿಯ ನಿಗ್ರಹದ ಯುಕ್ತ ಉದಾಹರಣೆ.

"ರಾಮ, ಹದಿನಾಲ್ಕು ವರುಷ ವನಕ್ಕೆ ಹೋಗು "ಎಂದು ತಂದೆ ಆಜ್ಞಾಪಿಸಿದ ಮರುಕ್ಷಣವೇ ಶ್ರೀರಾಮ ಮಂದಸ್ಮಿತನಾಗಿ ರಾಜ್ಯ ತೊರೆದು ವನಕ್ಕೆ ಹೋದ. ತಮ್ಮನಾದ ಭರತ ಅಯೋಧ್ಯೆಗೆ ಬಂದು ನಡೆದುದನ್ನೆಲ್ಲ ಕೇಳಿ ಖಿನ್ನನಾದ. ರಾಮನು ಏರಬೇಕಾದ ಪೀಠದಲ್ಲಿ ತಾನೆಂದಿಗೂ ಕೂಡಲಾರೆ ಎಂದು ಛಲ ತೊಟ್ಟ. ರಾಮನನ್ನು ಸಂಧಿಸಿ, ಅವನ ಅನುಗ್ರಹ ಪಡೆದು ರಾಮನ ಪಾದುಕೆಗಳನ್ನೇ ಪೀಠದ ಮೇಲಿಟ್ಟ ! ಹದಿನಾಲ್ಕು ವರುಷಗಳ ದೀರ್ಘಕಾಲ ಅರಮನೆಯಲ್ಲಿಯೇ ವನವಾಸಿಯಂತೆ ಬಾಳಿದ. ರಾಜಗೃಹದಲ್ಲಿ ಸಕಲೈಶ್ವರ್ಯವಿತ್ತು. ಗಾಯಕ ಗಾಯಕಿಯರು, ನೃತ್ಯಕಲಾ ಕುಶಲೆಯರು, ಪರಾಕಿಗಳು, ವಿವಿಧ ಭಕ್ಷ್ಯ ಭೋಜ್ಯಗಳು ಹೀಗೆ ಭೋಗ ಪರಿಸರ ಭರತನ ಸುತ್ತ ದಟ್ಟವಾಗಿ ವ್ಯಾಪಿಸಿತ್ತು. ಹೀಗಿದ್ದರೂ ಅವನು ಗಾನ ಕೇಳಲಿಲ್ಲ; ನೃತ್ಯ ನೋಡಲಿಲ್ಲ; ಸಿಹಿ ಸಿಹಿ ಮೃಷ್ಟಾನ್ನ ಸವಿಯಲಿಲ್ಲ; ಸುಪ್ಪತ್ತಿಗೆಯ ಮೇಲೆ ಮಲಗಲಿಲ್ಲ. ಅವನ ಇಂದ್ರಿಯಗಳು ರಾಮ ಪಾದುಕೆಯ ಮೇಲೆ ಸ್ಥಿರವಾಗಿದ್ದವು. ಪಾದುಕೆಗಳ ಮುಟ್ಟಿ, ನೋಡಿ, ಮೂಸಿಸಿ ಆನಂದ ಪಡುತ್ತಿದ್ದ. ಅವನ ಮನದಲ್ಲಿ ರಾಮನ ಮೂರ್ತಿ ತುಂಬಿಕೊಂಡಿತ್ತು. ರಾಮನು ವನದಲ್ಲಿದ್ದು ಸನ್ಯಾಸಿಯಾದರೆ, ಭರತ ಮನೆಯೊಳಗಿದ್ದು ವೀರ ಸಂನ್ಯಾಸ ಜೀವನ ನಡೆಸಿದ. ಇದೇ ನಿಜ ಸಂಯಮನ.

ಸಂಯಮನ ಪೂರ್ವಕ ಅನಾಸಕ್ತನಾಗಿ ದುಡಿಯುವದು ಕರ್ಮಯೋಗ. ಭರತನು ಅನಾಸಕ್ತ ಕರ್ಮಯೋಗಿ. ಎಲ್ಲವೂ ಪ್ರಭು ರಾಮನದೆಂದು ದುಡಿದ. ಒಂದು ಪಡಿ ಕಾಳಿಗೂ ಆಸೆ ಪಡಲಿಲ್ಲ; ಒಂದು ಬಿಡಿ ಕಾಸಿಗೆ ಮನವೆಳಸಲಿಲ್ಲ. ತಾನಾಗಿಯೇ ಒಲಿದು ಬಂದ ರಾಜ್ಯಲಕ್ಷ್ಮಿಯನ್ನು ಸವಿನಯದಿಂದ ರಾಮದೇವನ ಚರಣಗಳಲ್ಲಿ ಸಮರ್ಪಿಸಿದ. ತಾನು ಸಾಮಾನ್ಯ ಸೇವಕನಾಗಿ ಬಾಳಿದ! ಪರಮ ಶಾಂತಿ ಅವನ ಅಂತಃಕರಣದಲ್ಲಿ ನೆಲೆಸಿತು.

ಆಸಕ್ತ ದುಡಿಮೆಯು ಚಿಂತೆ ಹಾಗು ಅವನತಿಗೆ ಹೇತು; ಅನಾಸಕ್ತ ದುಡಿಮೆಯು ಸಾವಧಾನತೆ ಹಾಗು ಆತ್ಮೋದ್ಧಾರಕ್ಕೆ ಕಾರಣ. ಗುಮಾಸ್ತ ಮಾಲಕನಿಗಾಗಿ ದಿನವಿಡಿ ದುಡಿಯುತ್ತಾನೆ; ಲಕ್ಷಾಂತರ ಹಣದ ವ್ಯವಹಾರ ಮಾಡುತ್ತಾನೆ.

ಆದರೆ ಆ ಹಣದ ವಿಷಯದಲ್ಲಿ ಅವನು ಅನಾಸಕ್ತ ! ಆದುದರಿಂದಲೇ ಮಾಲಕನಿಗಿರುವ ಹಣದ ವ್ಯಾಮೋಹ ಅವನಿಗೆ ಇಲ್ಲ. ಗುಮಾಸ್ತನು ದುಡಿಮೂ ನಿಶ್ಚಿಂತ-ಮಾಲಿಕ ದುಡಿಯದಿದ್ದರೂ ಚಿಂತಿತ !

ಎಲ್ಲಿ ಇಂದ್ರಿಯ ಲಾಲಸೆ ಇದೆ, ಅಲ್ಲಿ ಕರ್ಮ ಪಾವಿತ್ರ್ಯವಿಲ್ಲ. ಭೋಗಕ್ಕೆ ಮನಸೋತ ಮನುಷ್ಯನಿಂದ ವೈಯಕ್ತಿಕ ಲಾಭವೂ ಇಲ್ಲ, ಸಾಮಾಜಿಕ ಹಿತವೂ ಇಲ್ಲ. ಉದಾ:- ಭಾರತ ದೇಶದಲ್ಲಿ ಸಾವಿರಾರು ಜನ ಸಂಸ್ಥಾನಿಕರು ಬಾಳಿದರು. ಕೆಲವರು ಸ್ತ್ರೀ ಲೋಲರು, ಕೆಲವರು ಶಬ್ದ ಮರುಳರು, ಇನ್ನು ಕೆಲವರು ರಸಾಸಕ್ತರು, ಮತ್ತೆ ಕೆಲವರು ಯುದ್ಧ ಪ್ರಿಯರು ! ಕೆಲವರಿಗೆ ಐಶ್ವರ್ಯದ ಮದ, ಕೆಲವರಿಗೆ ಅಧಿಕಾರದ ಹಮ್ಮು. ಅವರ ಭಾಂಡಾರದಲ್ಲಿ ಅಪಾರ ಹಣವಿತ್ತು. ಅವರ ದೇಹದಲ್ಲಿ ಅಪಮ್ಯ ಶಕ್ತಿ ಉತ್ಸಾಹಗಳಿದ್ದವು. ಅವರ ಮಾತಿಗೆ ಸರಿಯಾಗಿ ನಡೆವ ಲಕ್ಷಾಂತರ ಯೋಧರಿದ್ದರು. ಆದರೆ, ಆ ರಾಜರಿಂದ ಸಮಾಜದೇಳ್ಗೆಯ ಒಂದು ಪುಟ್ಟ ಕಾರ್ಯವೂ ಆಗಲಿಲ್ಲ! ಆತ್ಮ ಸಾಧನೆಯ ಕ್ಷೇತ್ರದಲ್ಲಿ ಅವರೊಂದು ಹೆಜ್ಜೆಯನ್ನಿಡಲೂ ಅಶಕ್ತರಾದರು! ಇದನ್ನೆಲ್ಲ ಲಕ್ಷಿಸಿಯೇ ಭಗವಂತನು ಅರ್ಜುನನಿಗೆ ಉಪದೇಶಿಸುತ್ತಾನೆ.

"ಅರ್ಜುನ, ನಿಯಮಿತವಾಗಿ ಅನಾಸಕ್ತ ಬುದ್ಧಿಯಿಂದ ಕರ್ಮಮಾಡು. ನಿನ್ನ ಹಾಗು ರಾಷ್ಟ್ರದ ಏಳ್ಗೆಗಾಗಿ ದೇಹ ಮನ ಬುದ್ಧಿಗಳನ್ನು ದುಡಿಸು. ಆಲಸಿಯಾಗದಿರು. ಕರ್ಮ ಜೀವನದಂಥ ಪವಿತ್ರ ಹಾಗು ಸುಖ ಜೀವನ ಇನ್ನೊಂದಿಲ್ಲ. ಕರ್ಮದಿಂದ ದೇಹದ ವ್ಯವಹಾರ, ಇಂದ್ರಿಯಗಳ ಸಂಚಲನ; ಜಗತ್ತಿನ ಬದುಕೇ ಕರ್ಮಾಧಾರಿತ!"

ಕರ್ಮವು ನಿತ್ಯ, ನೈಮಿತ್ತಿಕ, ಕಾಮ್ಯವೆಂದು ಮೂರು ಪ್ರಕಾರ ೧)ನಿತ್ಯ ಕರ್ಮ:- ಸ್ನಾನ ಸಂಧ್ಯಾವಂದನೆ ಪೂಜೆಗಳು ವೈಯಕ್ತಿಕ ನಿತ್ಯಕರ್ಮ; ವಿದ್ಯಾದಾನ, ಅನ್ನದಾನ, ಆರೋಗ್ಯ ರಕ್ಷಣ, ವಿದ್ಯುತ್ ಪೂರೈಕೆ ವಾಹನ ಸೌಕರ್ಯ, ಯಂತ್ರೋದ್ಯಮ ಮುಂತಾದವು ಸಾಮಾಜಿಕ ನಿತ್ಯಕರ್ಮ. ಈ ಕರ್ಮದಿಂದ ದೈಹಿಕ ಮಾನಸಿಕ ಆರೋಗ್ಯಸಿದ್ಧಿ; ಸಮಾಜ ಸಮೃದ್ಧಿ. ೨)ನೈಮಿತ್ತಿಕ ಕರ್ಮ:-ವ್ರತ, ಉಪವಾಸ ಇತ್ಯಾದಿ ವೈಯಕ್ತಿಕ ನೈಮಿತ್ತಿಕ ಕರ್ಮ; ಅತಿವೃಷ್ಟಿ ಅನಾವೃಷ್ಟಿ ಭೂಕಂಪ ಜ್ವಾಲಾಮುಖಿ ಬಿರುಗಾಳಿ ಯುದ್ಧ ಇತ್ಯಾದಿ ಪ್ರಸಂಗಗಳು ಒದಗಿದಾಗ ಸಮಯೋಚಿತ ಪರಿಹಾರ ಕಲ್ಪಿಸುವದು ಸಾಮಾಜಿಕ ನೈಮಿತ್ತಿಕ ಕರ್ಮ. ಈ ಕರ್ಮದಿಂದ ಬಾಹ್ಯ ದುಃಖ ನಿವಾರಣೆ ೩) ಕಾಮ್ಯ ಕರ್ಮ:- ಪತ್ನಿ ಪುತ್ರ ಧನ ಬಯಸಿ ವಿಶಿಷ್ಟ ಕಾರ್ಯ ಮಾಡುವದು ವೈಯಕ್ತಿಕ ಕಾಮ್ಯಕರ್ಮ. ಮಾನವ ಕುಲದ ಏಳ್ಗೆ ಬಯಸಿ ವಿಶಿಷ್ಟ ಕಾರ್ಯ ಮಾಡುವದು ಸಾರ್ವತ್ರಿಕ ಕಾಮ್ಯ ಕರ್ಮ. ಈ ಕರ್ಮದಿಂದ ಸರ್ವಮುಖಿ ಸಮೃದ್ಧಿ,

ಯಾವುದರಿಂದ ನಮ್ಮೆಲ್ಲರ ಕಲ್ಯಾಣವಿದೆಯೊ ಅಂಥ ನಿಯತಕರ್ಮಗಳನ್ನು ಆಚರಿಸದೆ ಆಲಸಿಗಳಾದರೆ ಆರೋಗ್ಯ ಹಾನಿ, ಮನಸ್ಸಿನ ಸ್ವಾಸ್ಥ್ಯ ವಿನಾಶ, ಹಾಗು ಸಮಾಜ ವಿಚ್ಛೇದ. ವಯಸ್ಸು ಯಾವುದಿದ್ದರೇನು? ಕರ್ಮ ಮಾಡಿದಲ್ಲದೆ ಬಾಳು ರಸಮಯವಾಗದು. ಮುಪ್ಪಿನ ಛಾಯೆ ಬಿದ್ದಾಗ ದುಡಿತ ಬಿಡುವವರು ಅದೆಷ್ಟೋ ಜನ. ಸಾಕಿ ಸಲಹುವ ಪ್ರೀತಿಯ ಮಕ್ಕಳು, ಪ್ರೀತಿಯ ಸೊಸೆಯಂದಿರು, ಸಾಕಷ್ಟು ಧನ, ಸೇವಕರು, ಇಷ್ಟರ ಮೇಲೆ "ನೀವೇನು ದುಡಿಯಬೇಡಿ. ಸುಮ್ಮನೆ ಉಂಡುಟ್ಟು ಸುಖ ಪಡೆಯಿರಿ" ಎಂದು ಬಿನ್ನವಿಸುವ ವಿನಂತಿಯ ಮಾತುಗಳು. ಇಷ್ಟಿದ್ದರೆ ದುಡಿಯುವ ಮನಸ್ಸು ಮಾಡುವವರೇ ವಿರಳ. ಅವರ ಅವಯವಗಳಲ್ಲಿ ಶಿಥಿಲತೆ, ಮನದಲ್ಲಿ ನಿರುತ್ಸಾಹ, ದೇಹದಲ್ಲಿ ನಿಶ್ಶಕ್ತಿ ಮತ್ತಷ್ಟು ವರ್ಧಿಸುವವು. ದೈಹಿಕ ತೊಂದರೆಗಳು ಹೆಚ್ಚುವವು. ಮಕ್ಕಳ ಸೊಸೆಯಂದಿರ ಪ್ರೇಮ ಕಡಿಮೆಯಾಗುತ್ತ ಬರುವದು. ತುತ್ತು ಅನ್ನಕ್ಕೂ ಕೈ ಚಾಚುವ ಪ್ರಸಂಗ ಉಂಟಾಗುವದು. ಆಗ ಜೀವನ ನೀರಸವೆನಿಸದಿದ್ದೀತೆ?

ದುಡಿದು ತರುತ್ತಿರುವವರೆಗೆ ನಮ್ಮನ್ನು ಎಲ್ಲರೂ ಪ್ರೀತಿಸುತ್ತಾರೆ. ಒಂದು ದಿನ ವಿಶ್ರಮಿಸಿದರೂ ಸಾಕು, ಹಡೆದ ತಾಯಿಯೇ ತಾಟಿನಲ್ಲಿ ಅನ್ನ ನೀಡಿ, ಇಂದು ನೀನು ರಿಣಗೂಳು ತಿನ್ನುತ್ತಿ ಎಂದು ಜರೆಯುತ್ತಾಳೆ; ಇನ್ನು ಉಳಿದವರು ಏನೆಂದಾರು? ನಮ್ಮ ಹೊಟ್ಟೆಗಾಗಿ ತುತ್ತು ಅನ್ನ ಗಳಿಸಲು ಎರಡು ರಟ್ಟೆ ಕೊಟ್ಟಿದ್ದಾನೆ ದೇವ; ಪರಮಾತ್ಮನ ಲೀಲಾ ವಿಸ್ತಾರ ನೋಡಲು ಎರಡು ಕಣ್ಣು ಕೊಟ್ಟಿದ್ದಾನೆ; ತತ್ತ್ವ ಚಿಂತನೆಗಾಗಿ ಮನಸ್ಸನ್ನಿತ್ತಿದ್ದಾನೆ. ಅವುಗಳ ಉಪಯೋಗ ಅದೇ ರೀತಿ ಮಾಡುವದು. ಯೋಗ್ಯ. ಯಾವುದೇ ನಿರ್ಬಲ ಕಾರಣಕ್ಕಾಗಿ ಪರಾವಲಂಬನೆಯು ಅತಿ ಗರ್ಹ್ಯ.

ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ
ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥೯॥

ಭಾವ:– ಯಜ್ಞಾರ್ಥಾತ್ ಕರ್ಮಣಃ ಅನ್ಯತ್ರ = ದೇವ ಪ್ರೀತ್ಯರ್ಥ ಕರ್ಮಗಳಿಗಿಂತ ಭಿನ್ನ ಕರ್ಮಗಳಲ್ಲಿ ( ತೊಡಗಿದರೆ ) ಅಯಂ ಲೋಕಃ = ಈ ಜನಾಂಗವು ಕರ್ಮಬಂಧನಃ = ಕರ್ಮದಿಂದ ಬಂಧಿಸಲ್ಪಡುತ್ತದೆ. ಕೌಂತೇಯ = ಕುಂತೀ ಪುತ್ರನೆ, ತದರ್ಥಂ = ಆದಕಾರಣ ( ದೇವನಿಗಾಗಿ ) ಮುಕ್ತಸಂಗಃ = ಅನಾಸಕ್ತನಾಗಿ ಸಮಾಚರ = ಕರ್ಮಮಾಡು.

ವಿವರಣೆ:- " ಕರ್ಮವೆಂದರೆ ಬಂಧನ " ಇದು ಸ್ಮೃತಿ ವಾಕ್ಯ. ಇದನ್ನು ಓದಿ, ಕೇಳಿ ತಿಳಿದ ಅನೇಕ ಜನ ಸ್ನಾನ, ಸಂಧ್ಯಾವಂದನೆ, ಶಿವಾರಾಧನೆ, ಸಮಾಜ ಸೇವೆ ಮುಂತಾದ ಕಾರ್ಯಗಳನ್ನು ಪರಿತ್ಯಜಿಸಿ ಯಥೇಷ್ಟ ಭೋಜನ, ಮಾದಕ ಪೇಯ ಸೇವನ. ಇಂದ್ರಿಯ ವಿಲಾಸಗಳಲ್ಲಿ ಮಗ್ನರಾಗುತ್ತಾರೆ. ಏಕೆಂದರೆ ಅವರ ದೃಷ್ಟಿಯಲ್ಲಿ ದೇವ-ಧರ್ಮ-ಕರ್ಮಗಳು ಮಾತ್ರ ನಿಂದ್ಯ ಹಾಗು ಬಾಧಕ !! ಉಳಿದ ವೈಷಯಿಕ ಕರ್ಮಗಳು ಸಹಜ.

ಋಷಿಗಳ ಅಭಿಪ್ರಾಯ ಹಾಗಿರುವದು ಸಾಧ್ಯವೆ? ಮನಶ್ಶುದ್ಧಿಕರ ಕರ್ಮಗಳಿಂದ ಜನರನ್ನು ಪರಾವೃತ್ತಗೊಳಿಸಿ ಮಲಿನ ಕರ್ಮಾಚರಣೆಗೆ ಪ್ರೋತ್ಸಾಹಿಸುವದು ಅವರ ಹೇತುವಾಗಿರಲಾರದು. ಏಕೆಂದರೆ ಸಂತರು ಲೋಕಹಿತೈಷಿಗಳು! ಮಾನವ ಕುಲದ ಅನಿಮಿತ್ತ ಬಂಧುಗಳು! ವಿಶ್ವಾತ್ಮದರ್ಶಿಗಳು. ಹಾಗಾದರೆ ಅವರ ಮಾತಿನ ತಿರುಳೇನು?

ಕರ್ಮ ಎರಡು ಪ್ರಕಾರ: ಪ್ರರ್ವಕ, ನಿವರ್ತಕ. ೧) ಪ್ರವರ್ತಕ:-ಅವಿದ್ಯಾ ಪಾಪಕರ್ಮ. ಬಂಧಕ. ಇದರಲ್ಲಿ ಎಂಟು ಉಪಭೇದಗಳು. ಅ) ಅಹಂಭಮ್ರ:- ಪರಮಾತ್ಮ ಮಂಡಲದಿಂದ ಜೀವನನ್ನು ಪತನ ಗೊಳಿಸುವ "ಅಹಂ" ಸ್ಪಂದನೆ. ಇದು ಜೀವನುಗೈದ ಪ್ರಪ್ರಥಮ ಕರ್ಮ. ಆ) ಅಜ್ಞಭ್ರಮೆ:– ತನ್ನ ಮೂಲ ದೇವನನ್ನು ಮರೆತು ಅನಾತ್ಮವಸ್ತುಗಳತ್ತ ಹೊರಳುವದು ಇ) ಕರಣಭ್ರಮೆ:- ಕರಣಗಳಲ್ಲಿ ಅಹಂ ಭ್ರಮೆ ತಲೆದೋರಿದಾಗ "ನಾನು ಮನಸ್ಸಿನ ಮೂಲಕ ಸಂಕಲ್ಪಿಸುತ್ತೇನೆ. ನಾನು ಬುದ್ಧಿಯ ಮೂಲಕ ತಿಳಿಯುತ್ತೇನೆ. ನಾನು ಚಿತ್ತದ ಮೂಲಕ ಸ್ಮರಿಸುತ್ತೇನೆ" ಎಂಬಿತ್ಯಾದಿ ಭಾವನೆಗಳು ಉದಿಸುತ್ತವೆ. ಈ ಭಾವನೆಗಳಲ್ಲಿ ತೊಡಗುವದೇ ಕರಣಭ್ರಮೆ. ಈ) ಇಂದ್ರಿಯ ಭ್ರಮೆ:- ಅಹಂ ಭಾವವು ಚಕ್ಷುರಾದಿ ಇಂದ್ರಿಯಗಳಲ್ಲಿ ಅವತರಿಸಿದಾಗ 'ನಾನು ನೋಡುತ್ತೇನೆ' ಎಂಬಿತ್ಯಾದಿ ಭಾವನೆಗಳು ತೋರುತ್ತವೆ. ಅವು ಇಂದ್ರಿಯ ಭ್ರಮೆ. ಉ) ದೇಹಭ್ರಮೆ:- ಅಹಂ ಕಾರವು ದೇಹದಲ್ಲಿ ಮೂಡಿದಾಗ "ಅಹಂ ದೇಹಃ" ಎಂಬ ದೇಹಾತ್ಮಸ್ಫುರಣ ಉಂಟಾಗುತ್ತದೆ. ಅದುವೇ ದೇಹಭ್ರಮೆ. (ಊ, ಋ, ೠ.) ಮೂರವಸ್ಥೆಯ ಭ್ರಮೆ:- ಅಹಂಕಾರವು ಜಾಗ್ರದಲ್ಲಿ ಅವತರಿಸಿದಾಗ ತದ್ವಿಶಿಷ್ಟನಾದ ವಿಶ್ವಜೀವ ತಾನೆಂಬ ಭ್ರಮೆ, ಸ್ವಪ್ನದಲ್ಲಿ ಅವತರಿಸಿದಾಗ ತದ್ವಿಶಿಷ್ಟನಾದ ತೈಜಸ ಜೀವ ತಾನೆಂಬ ಭ್ರಮೆ, ಮತ್ತು ನಿದ್ರೆಯಲ್ಲಿ ಅವತರಿಸಿದಾಗ ತದ್ವಿಶಿಷ್ಟನಾದ ಪ್ರಾಜ್ಞ ಜೀವ ತಾನೆಂಬ ಭ್ರಮೆ ಉದಿಸಿ ಆಯಾ ಅವಸ್ಥಾಂತರ ಕರ್ಮಗಳಲ್ಲಿ ಜೀವನನ್ನು ತೊಡಗಿಸಿತು. ಇದು ಜಾಗ್ರಾದಿ ಮೂರು ಅವಸ್ಥೆಗಳಲ್ಲಿಯ ಭ್ರಮಮಾತ್ಮಕ ಕರ್ಮ.

ಇಂತು, ಜೀವನು ಸ್ವರೂಪದಿಂದ ಪತನ ಹೊಂದಿ ಅಹಂಕಾರ, ಅಜ್ಞಾನ, ಮನ ಬುದ್ಧಿ ಚಿತ್ತು, ಜ್ಞಾನೇಂದ್ರಿಯ ಕರ್ಮೇಂದ್ರಿಯ, ದೇಹ ಹಾಗು ಜಾಗ್ರಾದಿ ಅವಸ್ಥೆಗಳಲ್ಲಿ ಬೆರೆತು ಒಂದಾದ. ಆಯಾ ತತ್ತ್ವಗಳ ಕಾರ್ಯದಲ್ಲಿ ತೊಡಗಿದ. ಮಾಡಿದ ಕಾರ್ಯಗಳ ಅಭಿಮಾನ ತಾಳಿ ಕರ್ಮಫಲದ ಬಲೆಯಲ್ಲಿ ಸಿಲುಕಿದ. ಎಂದೆಂದಿಗೂ ಆತ್ಮದ ಅರಿವಾಗದಷ್ಟು ಕೀಳು ವಿಷಯಗಳ ವ್ಯಾಮೋಹದಲ್ಲಿ ಹೂತುಹೋದ. ಇದೆಲ್ಲ ಪ್ರವರ್ತಕ ಕರ್ಮದ ಫಲ.

೨) ನಿವರ್ತಕ ಕರ್ಮ:– ವಿದ್ಯಾರೂಪ. ಪುಣ್ಯಕರ್ಮ. ವಿಮುಕ್ತಿಕಾರಕ.

ತಾರಕ. ಜೀವನು ಆತ್ಮಾನಾತ್ಮ ವಿವೇಚನೆಯ ಪಡೆದು, ಅನಾತ್ಮವಸ್ತು ವ್ಯಾಮೋಹ ತೊರೆದು, ಆತ್ಮನತ್ತ ಮುಖ ಮಾಡುತ್ತಾನೆ. ಆ ಸರ್ವ ಕರ್ಮ ಕರ್ತೃತ್ವ ಭಾವನೆಗಳನ್ನು ಆತ್ಮನಲ್ಲಿ ಸಮರ್ಪಿಸುತ್ತಾನೆ. ಹೀಗೆ ಮಾಡುವದು ನಿವರ್ತಕ ಕರ್ಮ. ಇದರಿಂದ ಬಂಧನ ನಾಶ. ಮೋಕ್ಷ ಪ್ರಾಪ್ತಿ.

"ಕರ್ಮದಿಂದ ಬಂಧನ" ಎಂದು ಹೇಳಿದ ಋಷಿಗಳ ಅಭಿಪ್ರಾಯ "ಪ್ರವರ್ತಕ ಕರ್ಮದಿಂದ ಬಂಧನ" ಎಂದು. ನಿವರ್ತಕ ಕರ್ಮಮಾತ್ರ ಅನಿವಾರ್ಯ; ಅದು ಜ್ಞಾನದಾಯಿ; ಶಾಂತಿ ಕಾರಿ. ಅಂಥ ಪಾವನ ಕರ್ಮವನ್ನು ಬಿಟ್ಟು ಆತ್ಮ ಸಾಕ್ಷಾತ್ಕಾರ ಮಾಡಿಕೊಂಡೇವೆಂದು ಹೇಳುವದು ಅಸಂಬದ್ಧ. ಆದುದರಿಂದ ಭಗವಂತ ಹೇಳುತ್ತಾನೆ.

"ಅರ್ಜುನಾ ಲೋಕವೆಲ್ಲ ಯಜ್ಞಾರ್ಥವಲ್ಲದ (ದೇವ ಪ್ರೀತ್ಯರ್ಥವಲ್ಲದ) ಪ್ರವರ್ತಕ ಕರ್ಮಗಳ ಎಸಗಿ ಕರ್ಮ ಬಂಧನದಲ್ಲಿ ಸಿಲುಕಿದೆ. ಜೀವನಿಗೆ 'ನಾನು ಮಾಡುತ್ತೇನೆ' ಎಂದು ಹೇಳುವಲ್ಲಿ ಬಹು ಹೆಮ್ಮೆ. ಆತ್ಮ ಪ್ರಶಂಸೆಗೆ ಅವನು ತಲೆದೂಗುತ್ತಾನೆ. ತನ್ನ ಬುದ್ಧಿವಂತಿಕೆ, ಕಾರ್ಯಚಾತುರ್ಯ. ಉನ್ನತ ಸ್ಥಾನ, ಕೀರ್ತಿಗಳನದೆಷ್ಟು ವಿಧದಲ್ಲಿ ಕೊಂಡಾಡಿದರೂ ಅವನಿಗೆ ಸಾಕಿಲ್ಲ. ಇಂಥ ಜೀವರು ಎಷ್ಟು ಪಂಡಿತರಾದರೇನು? ಕರ್ಮ ಸಂಕೋಲೆಗೆ ಸಿಕ್ಕು ಬಿದ್ದಿದ್ದಾರೆ.

"ಪಾರ್ಥ, ನೀನು ಅಂಥ ಬಾಧಕ ಕರ್ಮಗಳಲ್ಲಿ ತೊಡಗಬೇಡ. ಎಲ್ಲವೂ ದೇವನದು; ತಾಯಿ ತಂದೆ, ಮಡದಿ ಮಕ್ಕಳು, ಮನೆ ಮಂದಿರ, ಗುರು ಶಿಷ್ಯ, ಮತ ಧರ್ಮ, ಶಾಸ್ತ್ರ ಶಿಕ್ಷಣ ಎನೆಲ್ಲ ದೇವನ ಸೊತ್ತು; ನಿನ್ನಂತರಂಗದ ಕಾರ್ಯ ಪ್ರಕಾಶಕನು ದೇವ; ನಿನ್ನ ಜಾಗ್ರಾದಿ ಅವಸ್ಥೆಗಳ ಸಾಕ್ಷಿ ಪ್ರಕಾಶಕನು ಪ್ರಭು; ಜಾಗ್ರ ಸ್ವಪ್ನ ಸುಪ್ತಿ, ಎಂಬ ನೈಸರ್ಗಿಕ ಹಾಗು ತುರ್ಯ, ತುರ್ಯಾತೀತ ಎಂಬ ಪ್ರಯತ್ನಸಾಧ್ಯ ಅವಸ್ಥೆಗಳೆಲ್ಲ ದೇವದತ್ತ. ನಿನ್ನ ಕಾರ್ಯಗಳು ದೇವ ಕಾರ್ಯ; ದೇವ ನಡೆಸಿದಾಗ ನಡೆವೆ, ನುಡಿಸಿದಾಗ ನುಡಿವೆ; ಅರುಹಿದಾಗ ತಿಳಿವೆ; ಎಂಬ ವಿಮಲ ಪರಿಪ್ರಜ್ಞೆ ನಿನಗಿರಲಿ. ಆ ಪ್ರಜ್ಞೆಯಿಂದ ಬದುಕು; ಅನಾಸಕ್ತನಾಗಿ ವ್ಯವಹರಿಸು. ನಿನ್ನನ್ನು ಕರ್ಮ ಜಾಲವು ಬಾಧಿಸದು. ನೀನಹೆ ಮುಕ್ತ."

ಸಂಬಂಧ:- ಪ್ರಜಾಪತಿಯ ವಚನವೂ ಕೂಡ ಕರ್ಮ ಶೀಲನು ಶ್ರೇಷ್ಠನೆಂದು ಹೇಳಿದೆ. ಈ ಸಂಗತಿ ಮುಂದಿನ ನಾಲ್ಕು ಮಂತ್ರಗಳಲ್ಲಿದೆ.

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟ ಕಾಮಧುಕ್ ॥೧೦॥**

ಭಾವ:– ಹಿಂದೆ, ಬ್ರಹ್ಮ ದೇವನು ಯಜ್ಞಗಳೊಂದಿಗೆ ಪ್ರಜೆಗಳನ್ನು ಸೃಷ್ಟಿಸಿ, ನುಡಿದನು. "ಈ ಯಜ್ಞದಿಂದ ವೃದ್ಧಿ ಹೊಂದಿರಿ. ಇದು ನಿಮಗೆ ಇಷ್ಟವನ್ನು ಪೂರೈಸುವ ಕಾಮಧೇನುವು ಆಗಲಿ" ಎಂದು.

ವಿವರಣೆ:– ಪ್ರಥಾ...:– ಮೊದಲು, ಚರ, ಅಚರ, ಚರಾಚರ ಸೃಷ್ಟಿಯು ಹುಟ್ಟುವ ಮುನ್ನ, ಲೋಕಾದಿ ಲೋಕಂಗಳು ತೋರದ ಮುನ್ನ, ಕಾಲ ಕಲ್ಪಿತಗಳು ರೂಪುಗೊಳ್ಳದ ಮುನ್ನ, ಆದಿ ಅನಾದಿ ಎಂಬ ಭೇದ ತಲೆದೋರದ ಮುನ್ನ, ಆಗ ಪರಮಾತ್ಮನೊಬ್ಬನೇ ಇದ್ದ; ತನ್ನ ತಾನರಿಯದಂತೆ. ಅವನ ಅಮರ ಬೆಳಗೇ ಗಟ್ಟಿಗೊಂಡು ಹಿರಣ್ಯ ಗರ್ಭವೆನಿಸಿತು. ಅಖಂಡಾಸ್ತಿತ್ವ, ನಿಸ್ತರಂಗ ಮಹಾಜ್ಞಾನ, ಅವಿಕೃತಾನಂದ ಆ ಹಿರಣ್ಯ ಗರ್ಭನಲ್ಲಿ ಕಂಪಿಸಿದವು; ಅಭಿವ್ಯಕ್ತವಾದವು. ಮುಂಬರುವ ಸೃಷ್ಟಿಗೆ ಕಾರಣನಾಗಲಿರುವವರಿಂದ ಅವನಿಗೆ ಪ್ರಜಾಪತಿ ಎಂದು ನಾಮಕರಣ ಮಾಡಿದರು ಋಷಿಗಳು. (ಪ್ರಜಾನಾಂ ಚರಾಚರ ಸರ್ವ ವಸ್ತೂನಾಂ ಪತಿಃ ಅಧಿಪತಿಃ = ಪ್ರಜಾಪತಿಃ )

ಪ್ರಜಾಪತಿ ಏಕಾಂಗಿಯಲ್ಲ; ಅವನ ಅಂಗವೇ ಆಗಿ ಒಬ್ಬ ಸತಿ ಇದ್ದಾಳೆ; ಅವಳು ಪರಾಶಕ್ತಿ. ಅವರಿಬ್ಬರಿಗೆ ಅವಿನಾಭಾವ ಸಂಬಂಧ. ಅವನು ಲೀಲಾ ಮೂರ್ತಿ; ಅವಳು ಲೀಲಾ ವಿಲಾಸ ಭೂಮಿ ! ಅವನು ಬ್ರಹ್ಮನಾಗಿ ಸೃಷ್ಟಿಸುತ್ತಾನೆ; ವಿಷ್ಣುವಾಗಿ ಸಂರಕ್ಷಿಸುತ್ತಾನೆ; ರುದ್ರನಾಗಿ ಸಂಹರಿಸುತ್ತಾನೆ; ಈಶ್ವರನಾಗಿ ಪೂಜೆಗೊಳ್ಳುತ್ತಾನೆ; ಸದಾಶಿವನಾಗಿ ಅನುಗ್ರಹಿಸುತ್ತಾನೆ. ಅವನ ದೇವತಾಶಕ್ತಿ ಕೂಡ ಕ್ರಮವಾಗಿ ಸರಸ್ವತಿ, ಲಕ್ಷ್ಮೀ, ರುದ್ರಾಣಿ, ಅಂಬಿಕೆ ಹಾಗು ಉನ್ಮನಿ ರೂಪ ತಾಳಿ ಆಯಾ ದೇವತೆಗಳ ಅರ್ಧಾಂಗಿ ಎನಿಸಿ ಅವರ ಕಾರ್ಯದಲ್ಲಿ ಪ್ರಧಾನ ಪಾತ್ರ ಆಡುತ್ತಾಳೆ. ಅವರಿಬ್ಬರ ಲೀಲಾ ವಿನೋದದಿಂದ ಆಕಾಶಾದಿ ಭೂತಗಳ ಉದಯ. ಅಸಂಖ್ಯ ಲೋಕಂಗಳ ತೋರಿಕೆ, ದೇವ ದೇವತೆಗಳ ಯಕ್ಷ ರಾಕ್ಷಸರ ಜೀವ ಜಂತುಗಳ ಹಾಗು ಬುದ್ಧಿವಂತ ಮಾನವರ ನಿರ್ಮಾಣ !

ಪ್ರಜಾಪತಿ ಕರುಣಾ ಹೃದಯಿ. ಮಾನವನಿಗೆ ಬಹು ಅಮೂಲ್ಯವಾದ ದೇಹವಿತ್ತ; ಅದಕ್ಕೆ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳನ್ನು ಅಳವಡಿಸಿದ ! ಅಗಾಧ ಕಾರ್ಯಸಾಮರ್ಥ್ಯದ ಮನಸ್ಸನ್ನು ಆ ದೇಹಾಂತರಂಗದಲ್ಲಿ ಹರಿಬಿಟ್ಟ; ವಿಶ್ವದ ರಹಸ್ಯವನ್ನೇ ಭೇದಿಸಬಲ್ಲ ಬುದ್ಧಿಯನ್ನು ಆ ಮನಸ್ಸಿಗೆ ಜೋಡಿಸಿದ; ನೂರಾರು ವರುಷಗಳ ಅನುಭವವನ್ನು ಯಥಾವತ್ತಾಗಿ ತನ್ನಲ್ಲಿ ಹುದುಗಿಸಿಟ್ಟುಕೊಳ್ಳುವ ಸ್ಮೃತಿಯನ್ನು ಅನುಗ್ರಹಿಸಿದ. ಅಷ್ಟೇ ಅಲ್ಲ, ಅದೇ ದೇಹದಲ್ಲಿ, ಮನ ಬುದ್ಧ್ಯಾದಿಗಳಾಚೆ ತಾನೇ ಜಾಜ್ವಲ್ಯಮಾನನಾಗಿ ವಿರಾಜಿಸಿದ! ಮನೋರಥವೇರಿದ ಜೀವನು ತನ್ನತ್ತ ಬರಲಿ ಎಂಬರ್ಥದ ಒಂದು ಅವಿಸ್ಮರಣೀಯ ಸಂದೇಶ ನೀಡಿದ; ಅವನ ಸಂದೇಶ ಮಾನವ ಕುಲಕ್ಕೆಯೇ ಅನ್ವಯಿಸಿದೆ.

" ಮಾನವರೆ, ನಿಮಗೆ ಅವಶ್ಯವಾದುದನ್ನೆಲ್ಲ ದಯಪಾಲಿಸಿದ್ದೇನೆ. ನೀವು ಸಂಸಾರ ಪ್ರವಾಹದಲ್ಲಿ ಸಿಕ್ಕು ಹಾಳಾಗಬಾರದೆಂದು ನನ್ನ ಮನೀಷೆ. ನೀವು ನಿಮ್ಮ ನಿಜ ವಸ್ತು ಅರಿಯಬೇಕು; ವಿವಿಧ ದುಃಖಗಳಿಂದ ಮುಕ್ತರಾಗಬೇಕು. ಅದಕ್ಕೆ

ಸಮರ್ಥ ಉಪಾಯವೆಂದರೆ ಯಜ್ಞ. ಇದೋ ನಿಮ್ಮೊಂದಿಗೆ ಅವುಗಳನ್ನು ಸೃಷ್ಟಿಸಿದ್ದೇನೆ. ಕಾಲು, ಕೈ, ಬಾಯಿ, ಕಣ್ಣು, ಕಿವಿ, ನಾಲಿಗೆ, ಮನ, ಬುದ್ಧಿ, ಭಾವಗಳು ಆ ಯಜ್ಞದ ಸಾಧನಗಳು. ಜೀವಮಾನದ ತುಂಬ ಪವಿತ್ರ ಭಾವದಿಂದ ಆ ಸಾಧನಗಳನ್ನು ಉಪಯೋಗ ಮಾಡಿಕೊಳ್ಳಿ; ನೀವು ನಿರ್ವಹಿಸಿದ ಎಲ್ಲ ಕಾರ್ಯಗಳನ್ನು, ಆ ಕಾರ್ಯದ ಫಲಗಳನ್ನು ದೇವನಾದ ನನಗೆ ಅರ್ಪಿಸಿರಿ. ಅದುವೇ ಪರಮ ಪಾವನ ಯಜ್ಞ.

"ಪ್ರಸವಿಷ್ಯಧ್ವಂ: ಆ ಯಜ್ಞರೂಪ ಕರ್ಮಗಳಿಂದ ಸರ್ವಮುಖಿ ಸಮೃದ್ಧಿ ಪಡೆಯಿರಿ. ಬರೀ ಭೋಗ ಸುಖವಲ್ಲ, ಅಮರ ಆನಂದವನ್ನು ಅನುಭವಿಸಿರಿ. ಯಜ್ಞದ ಆಚರಣೆಯಲ್ಲಿಯೇ ನಿಮ್ಮ ಹಿತವಿದೆ, ಏಳ್ಗೆ ಇದೆ ಹಾಗು ನಿಮ್ಮ ಮುಕ್ತಿ ಇದೆ ! ನೀವು ಬಯಸಿದುದನ್ನು ನೀಡುವ ಈ ಯಜ್ಞದಿಂದ ದಿವ್ಯ ಶಾಂತಿ ಹೊಂದಿರಿ! "

ಭಗವಂತನು ಅರ್ಜುನನಿಗೆ ಪ್ರಜಾಪತಿಯ ಸಮಯೋಚಿತ ಸಂದೇಶವನ್ನು ಪುನರುಚ್ಚರಿಸುತ್ತಿದ್ದಾನೆ.

**ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥೧೧॥**

**ಭಾವ:-** ಈ ಯಜ್ಞದ ಮೂಲಕ ದೇವತೆಗಳನ್ನು ತುಷ್ಟಿಪಡಿಸಿರಿ; ಆ ದೇವರುಗಳು ನಿಮ್ಮನ್ನು ಪೋಷಿಸಲಿ; ಪರಸ್ಪರವಾಗಿ ತೃಪ್ತಿಪಡಿಸುವ ( ನೀವು ) ಪರಮ ಶ್ರೇಯಸ್ಸನ್ನು ಹೊಂದುವಿರಿ.

**ವಿವರಣೆ:- ಪ್ರಜಾಪತಿ:–** " ಜೀವಿಗಳೆ, ನಿಮ್ಮ ಪ್ರತಿ ಇಂದ್ರಿಯದ ಮೇಲೆ ಒಬ್ಬೊಬ್ಬ ಅಧಿದೇವತೆಯನ್ನು ಸ್ಥಾಪಿಸಿದ್ದೇನೆ. ಆ ದೇವತೆಗಳು ಸಂಪ್ರೀತರಾಗುವ ರೀತಿಯಲ್ಲಿ ಇಂದ್ರಿಯಗಳನ್ನು ಬಳಸಿರಿ. ನಿಮ್ಮ ಕಾಲು ತೀರ್ಥ ಕ್ಷೇತ್ರಗಳ ಯಾತ್ರೆ ಮಾಡಲಿ; ನಿಮ್ಮ ಕೈ ದಾನವೀಯಲಿ; ಮುಖವು ಭಜನೆ ಕೀರ್ತನಗಳಲ್ಲಿ ಪಳಗಲಿ; ಕಣ್ಣು ನನ್ನ ವಿರಾಟ ರೂಹನ್ನು ಕಂಡು ಆನಂದಿಸಲಿ; ಕಿವಿ ನನ್ನ ಬಗೆಗೆ ಶ್ರವಣ ಮಾಡಲಿ; ಮನಸ್ಸು ಸದಾ ನನ್ನನ್ನೇ ನೆನೆಯಲಿ; ಬುದ್ಧಿ ನನ್ನ ಸ್ವರೂಪ ಕುರಿತು ವಿಚಾರಿಸಲಿ; ಚಿತ್ತದಲ್ಲಿ ಆತ್ಮವಸ್ತು-ಸ್ಮರಣೆ ಇರಲಿ; ನಿಮ್ಮ ಭಾವದ ತುಂಬ ಆತ್ಮ ಪ್ರಕಾಶ ವ್ಯಾಪಿಸಿರಲಿ, ಅಂದರೆ ಮಾತ್ರ ಆಯಾ ದೇವತೆಗಳಿಗೆ ಸಂತಸ. ಅವರು ಜ್ಞಾನ ಆನಂದಗಳನ್ನು ಅನುಗ್ರಹಿಸುತ್ತಾರೆ; ನಿಮ್ಮನ್ನು ಪ್ರಪಂಚದಲ್ಲಿ ಸಿಲುಕದಂತೆ ಕಾಪಾಡುತ್ತಾರೆ.

" ನೀವು ಹಾಗು ಅಧಿದೇವತೆಗಳು ಪರಸ್ಪರ ಹೊಂದಿ ಕೊಂಡಿರ್ರಿ. ನಿಮ್ಮ ಕರ್ಮಗಳನ್ನೆಲ್ಲ ಅವರಿಗೆ ನಿವೇದಿಸಿರಿ; ಅವರು ನಿಮಗೆ ಆತ್ಮಿಕ ಸಮಾಧಾನ ನೀಡಲಿ. ಹೀಗಾದರೆ ಬ್ರಹ್ಮನಾದ ನಾನು ನಿಮ್ಮ ಹೃದಯದಲ್ಲಿ ಅಭಿವ್ಯಕ್ತ

ನಾಗುವೆ. ಪರಮ ಶ್ರೇಯವಾದ ಮೋಕ್ಷವೀಯುವೆ."

ಇಂದ್ರಿಯ-ವೃತ್ತಿ-ಪ್ರಕಾಶಕ ಆತ್ಮ ಬೆಳಗೇ ಅಧಿದೇವತೆ. ಇಂದ್ರಿಯಗಳು ಹನ್ನೊಂದು. ಅದರಂತೆ ಅಧಿದೇವರೂ ಹನ್ನೊಂದು. ಆ ದೇವತೆಗಳು ಮಾರ್ಗ ದರ್ಶಕರು; ಗುರುಗಳು! "ನೀನು ಜೀವನಲ್ಲ, ಆತ್ಮದೇವ. ನಿನ್ನ ನೀನು ಅರಿಯ ಬೇಕಾದರೆ ಈ ಇಂದ್ರಿಯಗಳನ್ನು ಅಂತರ್ಮುಖಿಗೊಳಿಸು; ಮನಸ್ಸನ್ನು ಹಂತ ಹಂತವಾಗಿ ಊರ್ಧ್ವ ಮಂಡಲಕ್ಕೇರಿಸು. ಕೊನೆಗೆ ಆತ್ಮ ಸೂರ್ಯನ ದರ್ಶನ ವಾಗುವದು" ಇದು ಅಧಿದೈವ ಗುರುಗಳ ಮೌನ ಸಂದೇಶ. ಈ ದೇವ ಸಂದೇಶವ ಕೇಳುತ್ತ ಜೀವರು ಸಮಾಹಿತರಾಗಬೇಕು. ಜೀವರಿಗೆ ಬೋಧಿಸುತ್ತ ಆ ಅಧಿದೈವ ಗುರುಗಳು ಶಾಂತರಾಗುತ್ತಾರೆ. ಮಗು ಹಾಲು ಕುಡಿಯುತ್ತ ಕುಡಿಯುತ್ತ ನಿದ್ರೆ ಹೋಗುತ್ತದೆ; ತಾಯಿ ಹಾಲು ಕುಡಿಸುತ್ತ ಕುಡಿಸುತ್ತ ನಿದ್ರೆ ಹೋಗುತ್ತಾಳೆ. ಅದೇ ರೀತಿ ಜೀವರ ಮತ್ತು ದೇವತೆಗಳ ಸಂಬಂಧವಿರಬೇಕು. ಅಂದರೆ ಮಾತ್ರ ಮುಕ್ತಿ ಪ್ರಾಪ್ತಿ.

ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥೧೨॥

ಭಾವ:- ಯಜ್ಞಗಳಿಂದ ತುಷ್ಟಿ ಪಡೆದ ದೇವತೆಗಳು, ನಿಮಗೆ ಇಷ್ಟ ಭೋಗಗಳನ್ನು ನಿಶ್ಚಿತವಾಗಿಯೂ ಅನುಗ್ರಹಿಸುತ್ತಾರೆ. ಅವರಿಂದ ಅನುಗೃಹಿತವಾದ(ಭೋಗಗಳನ್ನು) ಅವರಿಗೆ ಕೊಡದೆ ಯಾವನು ಅನುಭವಿಸುತ್ತಾನೆಯೋ ಅವನು ಕಳ್ಳನೇ (ಸರಿ).

ವಿವರಣೆ:– ಪ್ರಜಾಪತಿ:- "ಮಾನವರೆ, ಕೆಲವರನ್ನು ಹೊರತು ಪಡಿಸಿ ದರೆ, ಸಾಮಾನ್ಯವಾಗಿ ನೀವೆಲ್ಲ ಭೋಗ ವಾಂಛಿತರು. ನೀವು ಜೀವನದ ಅಂತ್ಯದ ವರೆಗೆ ಬಿಟ್ಟೂ ಬಿಡದೆ ಯಜ್ಞ ಕರ್ಮಗಳನ್ನು ಆಚರಿಸಿರಿ. ದೇವತೆಗಳು ಪ್ರೀತ ರಾಗಿ ನಿಮಗೆ ಇಷ್ಟವಾದ ಭೋಗ ವೈಭವಗಳನ್ನು ಮನಸೋಕ್ತ ನೀಡುತ್ತಾರೆ. ಹಾಗೆ ದೇವತಾನುಗ್ರಹದಿಂದ ಪಡೆದ ಭೋಗಗಳನ್ನು ಮತ್ತೆ ಅವರಿಗೆ ನಿವೇದಿಸಿ ಉಪಭೋಗಿಸಿರಿ. ಹಾಗೆ ಮಾಡದೆ ನೀವೇ ಭುಂಜಿಸಿದರೆ ನೀವು ಕಳ್ಳರೇ ಸೈ"

ಇದು ಪ್ರಜಾಪತಿಯ ಗಡುಸಾದ ಆಜ್ಞೆ. ಇದರ ಭಾವ ಹೀಗಿದೆ.

ಧನ, ಭೂಮಿ, ವಿದ್ಯೆ ಎಲ್ಲವನ್ನು ಪರಮಾತ್ಮನು ನಮ್ಮ ಕೈಗಿತ್ತು ಹರಿದು ಹಂಚಿ ಸುಖದಿಂದ ಬಾಳಿರೆಂದು ಅನುಜ್ಞೆ ನೀಡಿದ. ಅವನ ಆಜ್ಞೆ ಮೀರಿ ಸ್ವೇಚ್ಛೆ ಯಾಗಿ ವರ್ತಿಸಿದರು ಅನೇಕ ಜನ. ಅವರಿಗೆ ದೇವನ ಅರಿವಿಲ್ಲ, ತಮ್ಮ ಅಂತ ರಾತ್ಮನ ತಿಳಿವಿಲ್ಲ. ಸಮಾಜ-ಹಿತ-ಬುದ್ಧಿ ಇಲ್ಲ. ಅವರು ಬಡ ಹಾಗು ನಿಷ್ಪಾಪ ಜನತೆಯನ್ನು ಸುಲಿದರು; ಇಂದಿಗೂ ಸುಲಿಯುತ್ತಿದ್ದಾರೆ. ಈಗ (೧೯೭೨) ಬರ ಗಾಲ! ಅದರ ಕರಾಳ ಲಾಸ್ಯಕ್ಕೆ ಲಕ್ಷಾಂತರ ಜನ ತುತ್ತಾಗಿದ್ದಾರೆ. ಆ ಜನರು ಅನ್ನ ಅನ್ನ ಎಂದು ಅರಚುತ್ತಿರುವಾಗ, ಸ್ವಾರ್ಥಿ ಸಿರಿವಂತರು ತಮ್ಮ ದಾಸ್ತಾನು ಗಳನ್ನು ಪೂರ್ತಿ ತುಂಬಿ ಬಾಗಿಲಿಗೆ ಸೀಲ ಹಾಕಿದ್ದಾರೆ. ಸಾವಿರಾರು ಜೀವರ

ಸಮರ್ಥ ಉಪಾಯವೆಂದರೆ ಯಜ್ಞ. ಇದೋ ನಿಮ್ಮೊಂದಿಗೆ ಅವುಗಳನ್ನು ಸೃಷ್ಟಿಸಿದ್ದೇನೆ. ಕಾಲು, ಕೈ, ಬಾಯಿ, ಕಣ್ಣು, ಕಿವಿ, ನಾಲಿಗೆ, ಮನ, ಬುದ್ಧಿ, ಭಾವಗಳು ಆ ಯಜ್ಞದ ಸಾಧನಗಳು. ಜೀವಪೂನದ ತುಂಬ ಪವಿತ್ರ ಭಾವದಿಂದ ಆ ಸಾಧನಗಳನ್ನು ಉಪಯೋಗ ಮಾಡಿಕೊಳ್ಳಿ; ನೀವು ನಿರ್ವಹಿಸಿದ ಎಲ್ಲ ಕಾರ್ಯ ಗಳನ್ನು, ಆ ಕಾರ್ಯದ ಫಲಗಳನ್ನು ದೇವನಾದ ನನಗೆ ಅರ್ಪಿಸಿರಿ. ಅದುವೇ ಪರಮ ಪಾವನ ಯಜ್ಞ.

"ಪ್ರಸವಿಷ್ಯಧ್ವಂ: ಆ ಯಜ್ಞರೂಪ ಕರ್ಮಗಳಿಂದ ಸರ್ವಮುಖಿ ಸಮೃದ್ಧಿ ಪಡೆಯಿರಿ. ಬರೀ ಭೋಗ ಸುಖವಲ್ಲ, ಅಮರ ಆನಂದವನ್ನು ಅನುಭವಿಸಿರಿ. ಯಜ್ಞದ ಆಚರಣೆಯಲ್ಲಿಯೇ ನಿಮ್ಮ ಹಿತವಿದೆ, ಏಳ್ಗೆ ಇದೆ ಹಾಗು ನಿಮ್ಮ ಮುಕ್ತಿ ಇದೆ ! ನೀವು ಬಯಸಿದುದನ್ನು ನೀಡುವ ಈ ಯಜ್ಞದಿಂದ ದಿವ್ಯ ಶಾಂತಿ ಹೊಂದಿರಿ! "

ಭಗವಂತನು ಅರ್ಜುನನಿಗೆ ಪ್ರಜಾಪತಿಯ ಸಮಯೋಚಿತ ಸಂದೇಶವನ್ನು ಪುನರುಚ್ಚರಿಸುತ್ತಿದ್ದಾನೆ.

**ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥೧೧॥**

**ಭಾವ:-** ಈ ಯಜ್ಞದ ಮೂಲಕ ದೇವತೆಗಳನ್ನು ತುಷ್ಟಿ ಪಡಿಸಿರಿ; ಆ ದೇವರುಗಳು ನಿಮ್ಮನ್ನು ಪೋಷಿಸಲಿ; ಪರಸ್ಪರವಾಗಿ ತೃಪ್ತಿಪಡಿಸುವ ( ನೀವು ) ಪರಮ ಶ್ರೇಯಸ್ಸನ್ನು ಹೊಂದುವಿರಿ.

**ವಿವರಣೆ:- ಪ್ರಜಾಪತಿ:–** " ಜೀವಿಗಳೆ, ನಿಮ್ಮ ಪ್ರತಿ ಇಂದ್ರಿಯದ ಮೇಲೆ ಒಬ್ಬೊಬ್ಬ ಅಧಿದೇವತೆಯನ್ನು ಸ್ಥಾಪಿಸಿದ್ದೇನೆ. ಆ ದೇವತೆಗಳು ಸಂಪ್ರೀ ತರಾಗುವ ರೀತಿಯಲ್ಲಿ ಇಂದ್ರಿಯಗಳನ್ನು ಬಳಸಿರಿ. ನಿಮ್ಮ ಕಾಲು ತೀರ್ಥ ಕ್ಷೇತ್ರ ಗಳ ಯಾತ್ರೆ ಮಾಡಲಿ; ನಿಮ್ಮ ಕೈ ದಾನವೀಯಲಿ; ಮುಖವು ಭಜನೆ ಕೀರ್ತನ ಗಳಲ್ಲಿ ಪಳಗಲಿ; ಕಣ್ಣು ನನ್ನ ವಿರಾಟ ರೂಪನ್ನು ಕಂಡು ಆನಂದಿಸಲಿ; ಕಿವಿ ನನ್ನ ಬಗೆಗೆ ಶ್ರವಣ ಮಾಡಲಿ; ಮನಸ್ಸು ಸದಾ ನನ್ನನ್ನೇ ನೆನೆಯಲಿ; ಬುದ್ಧಿ ನನ್ನ ಸ್ವರೂಪ ಕುರಿತು ವಿಚಾರಿಸಲಿ; ಚಿತ್ತದಲ್ಲಿ ಆತ್ಮವಸ್ತು-ಸ್ಮರಣೆ ಇರಲಿ; ನಿಮ್ಮ ಭಾವದ ತುಂಬ ಆತ್ಮ ಪ್ರಕಾಶ ವ್ಯಾಪಿಸಿರಲಿ, ಅಂದರೆ ಮಾತ್ರ ಆಯಾ ದೇವತೆ ಗಳಿಗೆ ಸಂತಸ. ಅವರು ಜ್ಞಾನ ಆನಂದಗಳನ್ನು ಅನುಗ್ರಹಿಸುತ್ತಾರೆ; ನಿಮ್ಮನ್ನು ಪ್ರಪಂಚದಲ್ಲಿ ಸಿಲುಕದಂತೆ ಕಾಪಾಡುತ್ತಾರೆ.

" ನೀವು ಹಾಗು ಅಧಿದೇವತೆಗಳು ಪರಸ್ಪರ ಹೊಂದಿ ಕೊಂಡಿರ್ರಿ. ನಿಮ್ಮ ಕರ್ಮಗಳನೆಲ್ಲ ಅವರಿಗೆ ನಿವೇದಿಸಿರಿ; ಅವರು ನಿಮಗೆ ಆತ್ಮಿಕ ಸಮಾಧಾನ ನೀಡಲಿ. ಹೀಗಾದರೆ ಬ್ರಹ್ಮನಾದ ನಾನು ನಿಮ್ಮ ಹೃದಯದಲ್ಲಿ ಅಭಿವ್ಯಕ್ತ

ನಾಗುವೆ. ಪರಮ ಶ್ರೇಯವಾದ ಮೋಕ್ಷವೀಯುವೆ."

ಇಂದ್ರಿಯ-ವೃತ್ತಿ-ಪ್ರಕಾಶಕ ಆತ್ಮ ಬೆಳಗೇ ಅಧಿದೇವತೆ. ಇಂದ್ರಿಯಗಳು ಹನ್ನೊಂದು. ಅದರಂತೆ ಅಧಿದೇವರೂ ಹನ್ನೊಂದು. ಆ ದೇವತೆಗಳು ಮಾರ್ಗ ದರ್ಶಕರು; ಗುರುಗಳು! "ನೀನು ಜೀವನಲ್ಲ, ಆತ್ಮದೇವ. ನಿನ್ನ ನೀನು ಅರಿಯ ಬೇಕಾದರೆ ಈ ಇಂದ್ರಿಯಗಳನ್ನು ಅಂತರ್ಮುಖಗೊಳಿಸು; ಮನಸ್ಸನ್ನು ಹಂತ ಹಂತವಾಗಿ ಊರ್ಧ್ವ ಮಂಡಲಕ್ಕೇರಿಸು. ಕೊನೆಗೆ ಆತ್ಮ ಸೂರ್ಯನ ದರ್ಶನ ವಾಗುವದು" ಇದು ಅಧಿದೈವ ಗುರುಗಳ ಮೌನ ಸಂದೇಶ. ಈ ದೇವ ಸಂದೇಶವ ಕೇಳುತ್ತ ಜೀವರು ಸಮಾಹಿತರಾಗಬೇಕು. ಜೀವರಿಗೆ ಬೋಧಿಸುತ್ತ ಆ ಅಧಿದೈವ ಗುರುಗಳು ಶಾಂತರಾಗುತ್ತಾರೆ. ಮಗು ಹಾಲು ಕುಡಿಯುತ್ತ ಕುಡಿಯುತ್ತ ನಿದ್ರೆ ಹೋಗುತ್ತದೆ; ತಾಯಿ ಹಾಲು ಕುಡಿಸುತ್ತ ಕುಡಿಸುತ್ತ ನಿದ್ರೆ ಹೋಗುತ್ತಾಳೆ. ಅದೇ ರೀತಿ ಜೀವರ ಮತ್ತು ದೇವತೆಗಳ ಸಂಬಂಧವಿರಬೇಕು. ಅಂದರೆ ಮಾತ್ರ ಮುಕ್ತಿ ಪ್ರಾಪ್ತಿ.

ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥೧೨॥

ಭಾವ:- ಯಜ್ಞಗಳಿಂದ ತುಷ್ಟಿ ಪಡೆದ ದೇವತೆಗಳು, ನಿಮಗೆ ಇಷ್ಟ ಭೋಗಗಳನ್ನು ನಿಶ್ಚಿತವಾಗಿಯೂ ಅನುಗ್ರಹಿಸುತ್ತಾರೆ. ಅವರಿಂದ ಅನುಗೃಹಿತವಾದ(ಭೋಗಗಳನ್ನು) ಅವರಿಗೆ ಕೊಡದೆ ಯಾವನು ಅನುಭವಿಸುತ್ತಾನೆಯೋ ಅವನು ಕಳ್ಳನೇ (ಸರಿ).

ವಿವರಣೆ:- ಪ್ರಜಾಪತಿ:- "ಮಾನವರೆ, ಕೆಲವರನ್ನು ಹೊರತು ಪಡಿಸಿ ದರೆ, ಸಾಮಾನ್ಯವಾಗಿ ನೀವೆಲ್ಲ ಭೋಗ ವಾಂಛಿತರು. ನೀವು ಜೀವನದ ಅಂತ್ಯದ ವರೆಗೆ ಬಿಟ್ಟೂ ಬಿಡದೆ ಯಜ್ಞ ಕರ್ಮಗಳನ್ನು ಆಚರಿಸಿರಿ. ದೇವತೆಗಳು ಪ್ರೀತ ರಾಗಿ ನಿಮಗೆ ಇಷ್ಟವಾದ ಭೋಗ ವೈಭವಗಳನ್ನು ಮನಸೋಕ್ತ ನೀಡುತ್ತಾರೆ. ಹಾಗೆ ದೇವತಾನುಗ್ರಹದಿಂದ ಪಡೆದ ಭೋಗಗಳನ್ನು ಮತ್ತೆ ಅವರಿಗೆ ನಿವೇದಿಸಿ ಉಪಭೋಗಿಸಿರಿ. ಹಾಗೆ ಮಾಡದೆ ನೀವೇ ಭುಂಜಿಸಿದರೆ ನೀವು ಕಳ್ಳರೇ ಸೈ"

ಇದು ಪ್ರಜಾಪತಿಯ ಗಡುಸಾದ ಆಜ್ಞೆ. ಇದರ ಭಾವ ಹೀಗಿದೆ.

ಧನ, ಭೂಮಿ, ವಿದ್ಯೆ ಎಲ್ಲವನ್ನು ಪರಮಾತ್ಮನು ನಮ್ಮ ಕೈಗಿತ್ತು ಹರಿದು ಹಂಚಿ ಸುಖದಿಂದ ಬಾಳಿರೆಂದು ಅನುಜ್ಞೆ ನೀಡಿದ. ಅವನ ಆಜ್ಞೆ ಮೀರಿ ಸ್ವೇಚ್ಛೆ ಯಾಗಿ ವರ್ತಿಸಿದರು ಅನೇಕ ಜನ. ಅವರಿಗೆ ದೇವನ ಅರಿವಿಲ್ಲ, ತಮ್ಮ ಅಂತ ರಾತ್ಮನ ತಿಳಿವಿಲ್ಲ. ಸಮಾಜ-ಹಿತ-ಬುದ್ಧಿ ಇಲ್ಲ. ಅವರು ಬಡ ಹಾಗು ನಿಷ್ಪಾಪ ಜನತೆಯನ್ನು ಸುಲಿದರು; ಇಂದಿಗೂ ಸುಲಿಯುತ್ತಿದ್ದಾರೆ. ಈಗ (೧೯೭೨) ಬರ ಗಾಲ! ಅದರ ಕರಾಳ ಲಾಸ್ಯಕ್ಕೆ ಲಕ್ಷಾಂತರ ಜನ ತುತ್ತಾಗಿದ್ದಾರೆ. ಆ ಜನರು ಅನ್ನ ಅನ್ನ ಎಂದು ಅರಚುತ್ತಿರುವಾಗ, ಸ್ವಾರ್ಥಿ ಸಿರಿವಂತರು ತಮ್ಮ ದಾಸ್ತಾನು ಗಳನ್ನು ಪೂರ್ತಿ ತುಂಬಿ ಬಾಗಿಲಿಗೆ ಸೀಲ ಹಾಕಿದ್ದಾರೆ. ಸಾವಿರಾರು ಜೀವರ

ಸಮರ್ಥ ಉಪಾಯವೆಂದರೆ ಯಜ್ಞ. ಇದೋ ನಿಮ್ಮೊಂದಿಗೆ ಅವುಗಳನ್ನು ಸೃಷ್ಟಿಸಿದ್ದೇನೆ. ಕಾಲು, ಕೈ, ಬಾಯಿ, ಕಣ್ಣು, ಕಿವಿ, ನಾಲಿಗೆ, ಮನ, ಬುದ್ಧಿ, ಭಾವಗಳು ಆ ಯಜ್ಞದ ಸಾಧನಗಳು. ಜೀವಮಾನದ ತುಂಬ ಪವಿತ್ರ ಭಾವದಿಂದ ಆ ಸಾಧನಗಳನ್ನು ಉಪಯೋಗ ಮಾಡಿಕೊಳ್ಳಿ ; ನೀವು ನಿರ್ವಹಿಸಿದ ಎಲ್ಲ ಕಾರ್ಯಗಳನ್ನು, ಆ ಕಾರ್ಯದ ಫಲಗಳನ್ನು ದೇವನಾದ ನನಗೆ ಅರ್ಪಿಸಿರಿ. ಅದುವೇ ಪರಮ ಪಾವನ ಯಜ್ಞ.

"ಪ್ರಸವಿಷ್ಯಧ್ವಂ: ಆ ಯಜ್ಞರೂಪ ಕರ್ಮಗಳಿಂದ ಸರ್ವಮುಖ ಸಮೃದ್ಧಿ ಪಡೆಯಿರಿ. ಬರೀ ಭೋಗ ಸುಖವಲ್ಲ, ಅಮರ ಆನಂದವನ್ನು ಅನುಭವಿಸಿರಿ. ಯಜ್ಞದ ಆಚರಣೆಯಲ್ಲಿಯೇ ನಿಮ್ಮ ಹಿತವಿದೆ, ಏಳ್ಗೆ ಇದೆ ಹಾಗು ನಿಮ್ಮ ಮುಕ್ತಿ ಇದೆ ! ನೀವು ಬಯಸಿದುದನ್ನು ನೀಡುವ ಈ ಯಜ್ಞದಿಂದ ದಿವ್ಯ ಶಾಂತಿ ಹೊಂದಿರಿ! "

ಭಗವಂತನು ಅರ್ಜುನನಿಗೆ ಪ್ರಜಾಪತಿಯ ಸಮಯೋಚಿತ ಸಂದೇಶವನ್ನು ಪುನರುಚ್ಚರಿಸುತ್ತಿದ್ದಾನೆ.

**ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥೧೧॥**

**ಭಾವ:-** ಈ ಯಜ್ಞದ ಮೂಲಕ ದೇವತೆಗಳನ್ನು ತುಷ್ಟಿ ಪಡಿಸಿರಿ; ಆ ದೇವರುಗಳು ನಿಮ್ಮನ್ನು ಪೋಷಿಸಲಿ; ಪರಸ್ಪರವಾಗಿ ತೃಪ್ತಿಪಡಿಸುವ ( ನೀವು ) ಪರಮ ಶ್ರೇಯಸ್ಸನ್ನು ಹೊಂದುವಿರಿ.

**ವಿವರಣೆ:- ಪ್ರಜಾಪತಿ:–** " ಜೀವಿಗಳೆ, ನಿಮ್ಮ ಪ್ರತಿ ಇಂದ್ರಿಯದ ಮೇಲೆ ಒಬ್ಬೊಬ್ಬ ಅಧಿದೇವತೆಯನ್ನು ಸ್ಥಾಪಿಸಿದ್ದೇನೆ. ಆ ದೇವತೆಗಳು ಸಂಪ್ರೀತರಾಗುವ ರೀತಿಯಲ್ಲಿ ಇಂದ್ರಿಯಗಳನ್ನು ಬಳಸಿರಿ. ನಿಮ್ಮ ಕಾಲು ತೀರ್ಥ ಕ್ಷೇತ್ರಗಳ ಯಾತ್ರೆ ಮಾಡಲಿ; ನಿಮ್ಮ ಕೈ ದಾನವೀಯಲಿ; ಮುಖವು ಭಜನೆ ಕೀರ್ತನಗಳಲ್ಲಿ ಪಳಗಲಿ; ಕಣ್ಣು ನನ್ನ ವಿರಾಟ ರೂಹನ್ನು ಕಂಡು ಆನಂದಿಸಲಿ; ಕಿವಿ ನನ್ನ ಬಗೆಗೆ ಶ್ರವಣ ಮಾಡಲಿ; ಮನಸ್ಸು ಸದಾ ನನ್ನನ್ನೇ ನೆನೆಯಲಿ; ಬುದ್ಧಿ ನನ್ನ ಸ್ವರೂಪ ಕುರಿತು ವಿಚಾರಿಸಲಿ; ಚಿತ್ತದಲ್ಲಿ ಆತ್ಮವಸ್ತು-ಸ್ಮರಣೆ ಇರಲಿ; ನಿಮ್ಮ ಭಾವದ ತುಂಬ ಆತ್ಮ ಪ್ರಕಾಶ ವ್ಯಾಪಿಸಿರಲಿ, ಅಂದರೆ ಮಾತ್ರ ಆಯಾ ದೇವತೆಗಳಿಗೆ ಸಂತಸ. ಅವರು ಜ್ಞಾನ ಆನಂದಗಳನ್ನು ಅನುಗ್ರಹಿಸುತ್ತಾರೆ; ನಿಮ್ಮನ್ನು ಪ್ರಪಂಚದಲ್ಲಿ ಸಿಲುಕದಂತೆ ಕಾಪಾಡುತ್ತಾರೆ.

" ನೀವು ಹಾಗು ಅಧಿದೇವತೆಗಳು ಪರಸ್ಪರ ಹೊಂದಿ ಕೊಂಡಿರ್ರಿ. ನಿಮ್ಮ ಕರ್ಮಗಳನೆಲ್ಲ ಅವರಿಗೆ ನಿವೇದಿಸಿರಿ; ಅವರು ನಿಮಗೆ ಆತ್ಮಿಕ ಸಮಾಧಾನ ನೀಡಲಿ. ಹೀಗಾದರೆ ಬ್ರಹ್ಮನಾದ ನಾನು ನಿಮ್ಮ ಹೃದಯದಲ್ಲಿ ಅಭಿವ್ಯಕ್ತ

ನಾಗುವೆ. ಪರಮ ಶ್ರೇಯವಾದ ಮೋಕ್ಷವೀಯುವೆ."

ಇಂದ್ರಿಯ-ವೃತ್ತಿ-ಪ್ರಕಾಶಕ ಆತ್ಮ ಬೆಳಗೇ ಅಧಿದೇವತೆ. ಇಂದ್ರಿಯಗಳು ಹನ್ನೊಂದು. ಅದರಂತೆ ಅಧಿದೇವರೂ ಹನ್ನೊಂದು. ಆ ದೇವತೆಗಳು ಮಾರ್ಗ ದರ್ಶಕರು; ಗುರುಗಳು! "ನೀನು ಜೀವನಲ್ಲ, ಆತ್ಮದೇವ. ನಿನ್ನ ನೀನು ಅರಿಯ ಬೇಕಾದರೆ ಈ ಇಂದ್ರಿಯಗಳನ್ನು ಅಂತರ್ಮುಖಗೊಳಿಸು; ಮನಸ್ಸನ್ನು ಹಂತ ಹಂತವಾಗಿ ಊರ್ಧ್ವ ಮಂಡಲಕ್ಕೇರಿಸು. ಕೊನೆಗೆ ಆತ್ಮ ಸೂರ್ಯನ ದರ್ಶನ ವಾಗುವದು" ಇದು ಅಧಿದೈವ ಗುರುಗಳ ಮೌನ ಸಂದೇಶ. ಈ ದೇವ ಸಂದೇಶವ ಕೇಳುತ್ತ ಜೀವರು ಸಮಾಹಿತರಾಗಬೇಕು. ಜೀವರಿಗೆ ಬೋಧಿಸುತ್ತ ಆ ಅಧಿದೈವ ಗುರುಗಳು ಶಾಂತರಾಗುತ್ತಾರೆ. ಮಗು ಹಾಲು ಕುಡಿಯುತ್ತ ಕುಡಿಯುತ್ತ ನಿದ್ರೆ ಹೋಗುತ್ತದೆ; ತಾಯಿ ಹಾಲು ಕುಡಿಸುತ್ತ ಕುಡಿಸುತ್ತ ನಿದ್ರೆ ಹೋಗುತ್ತಾಳೆ. ಅದೇ ರೀತಿ ಜೀವರ ಮತ್ತು ದೇವತೆಗಳ ಸಂಬಂಧವಿರಬೇಕು. ಅಂದರೆ ಮಾತ್ರ ಮುಕ್ತಿ ಪ್ರಾಪ್ತಿ.

**ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥೧೨॥**

**ಭಾವ:-** ಯಜ್ಞಗಳಿಂದ ತುಷ್ಟಿ ಪಡೆದ ದೇವತೆಗಳು, ನಿಮಗೆ ಇಷ್ಟ ಭೋಗಗಳನ್ನು ನಿಶ್ಚಿತವಾಗಿಯೂ ಅನುಗ್ರಹಿಸುತ್ತಾರೆ. ಅವರಿಂದ ಅನುಗ್ರಹಿತವಾದ(ಭೋಗಗಳನ್ನು) ಅವರಿಗೆ ಕೊಡದೆ ಯಾವನು ಅನುಭವಿಸುತ್ತಾನೆಯೋ ಅವನು ಕಳ್ಳನೇ (ಸರಿ).

**ವಿವರಣೆ:–** **ಪ್ರಜಾಪತಿ:-** "ಮಾನವರೆ, ಕೆಲವರನ್ನು ಹೊರತು ಪಡಿಸಿ ದರೆ, ಸಾಮಾನ್ಯವಾಗಿ ನೀವೆಲ್ಲ ಭೋಗ ವಾಂಛಿತರು. ನೀವು ಜೀವನದ ಅಂತ್ಯದ ವರೆಗೆ ಬಿಟ್ಟೂ ಬಿಡದೆ ಯಜ್ಞ ಕರ್ಮಗಳನ್ನು ಆಚರಿಸಿರಿ. ದೇವತೆಗಳು ಪ್ರೀತ ರಾಗಿ ನಿಮಗೆ ಇಷ್ಟವಾದ ಭೋಗ ವೈಭವಗಳನ್ನು ಮನಸೋಕ್ತ ನೀಡುತ್ತಾರೆ. ಹಾಗೆ ದೇವತಾನುಗ್ರಹದಿಂದ ಪಡೆದ ಭೋಗಗಳನ್ನು ಮತ್ತೆ ಅವರಿಗೆ ನಿವೇದಿಸಿ ಉಪಭೋಗಿಸಿರಿ. ಹಾಗೆ ಮಾಡದೆ ನೀವೇ ಭುಂಜಿಸಿದರೆ ನೀವು ಕಳ್ಳರೇ ಸೈ"

ಇದು ಪ್ರಜಾಪತಿಯ ಗಡುಸಾದ ಆಜ್ಞೆ. ಇದರ ಭಾವ ಹೀಗಿದೆ.

ಧನ, ಭೂಮಿ, ವಿದ್ಯೆ ಎಲ್ಲವನ್ನು ಪರಮಾತ್ಮನು ನಮ್ಮ ಕೈಗಿತ್ತು ಹರಿದು ಹಂಚಿ ಸುಖದಿಂದ ಬಾಳಿರೆಂದು ಅನುಜ್ಞೆ ನೀಡಿದ. ಅವನ ಆಜ್ಞೆ ಮೀರಿ ಸ್ವೇಚ್ಛೆ ಯಾಗಿ ವರ್ತಿಸಿದರು ಅನೇಕ ಜನ. ಅವರಿಗೆ ದೇವನ ಅರಿವಿಲ್ಲ, ತಮ್ಮ ಅಂತ ರಾತ್ಮನ ತಿಳಿವಿಲ್ಲ. ಸಮಾಜ-ಹಿತ-ಬುದ್ಧಿ ಇಲ್ಲ. ಅವರು ಬಡ ಹಾಗು ನಿಷ್ಪಾಪ ಜನತೆಯನ್ನು ಸುಲಿದರು; ಇಂದಿಗೂ ಸುಲಿಯುತ್ತಿದ್ದಾರೆ. ಈಗ (೧೯೭೨) ಬರ ಗಾಲ! ಅದರ ಕರಾಳ ಲಾಸ್ಯಕ್ಕೆ ಲಕ್ಷಾಂತರ ಜನ ತುತ್ತಾಗಿದ್ದಾರೆ. ಆ ಜನರು ಅನ್ನ ಅನ್ನ ಎಂದು ಅರಚುತ್ತಿರುವಾಗ, ಸ್ವಾರ್ಥಿ ಸಿರಿವಂತರು ತಮ್ಮ ದಾಸ್ತಾನು ಗಳನ್ನು ಪೂರ್ತಿ ತುಂಬಿ ಬಾಗಿಲಿಗೆ ಸೀಲ ಹಾಕಿದ್ದಾರೆ. ಸಾವಿರಾರು ಜೀವರ

ಜತರ ಸೇರಬೇಕಾದ ಧವಸ ಭೂಮಿಗತವಾಗಿದೆ. ಧನ ಧಾನ್ಯಗಳಂತೆಯೇ ವಿದ್ಯೆ ಭೂಮಿ ವೈಭವಗಳ ಸ್ಥಿತಿ. ಅವು ಕೆಲವೇ ಅನುಕೂಲವುಳ್ಳ ಜನರ ಖಾಸಗಿ ಸೊತ್ತಾಗಿವೆ. ಹಂಚಲು ಕೊಟ್ಟ ಪನಿವಾರವನ್ನು ಕಟ್ಟಿಕೊಂಡು ಮನೆಗೆ ಹೋಗುವವ ಹೇಗೆ ಕಳ್ಳನೋ, ಅದೇ ರೀತಿ ಸರ್ವ ಜನರಿಗಿತ್ತು ಊಟ ಮಾಡೆಂದು ದೇವನು ಸಂಪದ ಕೊಟ್ಟಾಗ ಅದನ್ನು ಯಾರಿಗೂ ತೋರಿಸದೆ ಬಚ್ಚಿಡುವವ ಕಳ್ಳ! ವಿದ್ಯೆ ನೀಡದ ಅಧ್ಯಾಪಕ, ರಾಷ್ಟ್ರದ ಭಾಂಡಾರವನ್ನು ಪ್ರಜೆಗಳ ಹಿತಕ್ಕಾಗಿ ವಿನಿಯೋಗಿಸದ ರಾಜಪುರುಷ, ದೀನ ಮಾನವರಲ್ಲಿ ಧರ್ಮಜ್ಯೋತಿ ಹೊತ್ತಿಸದ ಧಾರ್ಮಿಕ ಮುಂತಾದವರು ಪರಮಾತ್ಮನ ದೃಷ್ಟಿಯಲ್ಲಿ ಅಕ್ಷಮ್ಯ ಅಪರಾಧಿಗಳು!!

ಸಂಗ್ರಹವು ಕಲಹಕ್ಕೆ ತಾಯಿಬೇರು; ಅಪ್ರಾಮಾಣಿಕತೆ, ಸಹಾನುಭೂತಿ ಇಲ್ಲದ ಹೃದಯ, ಆಕುಂಚನ ಬುದ್ಧಿಗಳು ಆ ಬೇರಿಗೊದಗಿಸುವ ಜಲ. ಸಂಗ್ರಹ ಬೆಳೆದಂತೆಲ್ಲ ಸಮಾಜದಲ್ಲಿ ವಿಷಮತಾ ಜ್ವಾಲೆ ಹರವಿಕೊಳ್ಳುವದು. ಸಮಾಜವಾದ, ಕಮ್ಯುನಿಝಂ ಮುಂತಾದ ಕ್ರಾಂತಿ ಪದ್ಧತಿಗಳು ಬೆಳೆದು ಬಂದುದೇ ಆ ಮಾತಿಗೆ ಸಾಕ್ಷಿ. ಜನತೆಯ ಬಾಯಿ ಬಡೆದು, ಹೊಟ್ಟೆ ತುಳಿದು ಧಾನ್ಯ ಶೇಖರ ಮಾಡುತ್ತಿರುವವರೆಗೆ. ಜನರನ್ನು ಅಜ್ಞಾನಾಂಧಕಾರದಲ್ಲಿ ನೂಕಿ ವಿದ್ಯಾನಿಧಿ ಬಯಚಿಟ್ಟುಕೊಂಡಿರುವವರೆಗೆ ಜಗತ್ತಿನಲ್ಲೆಲ್ಲ ಹೊಗೆಯಾಡುತ್ತಿರುವ ಅಂತಃಕಲಹಗಳು ನಿಲ್ಲವು! ಯಾವುದೇ ದಿನ, ಯಾವುದೇ ಮೂಲೆಯಲ್ಲಿ ಕ್ರಾಂತಿ ಕಿಡಿಗಳು ಹಾರಬಹುದು. ಅಷ್ಟು ತಪ್ತವಾಗಿದೆ ಜನ!

ಕಲಹ ಬೇಡೆನ್ನುವ ಜಾಣರೀಗ ಗಾಂಧೀಜಿಯವರಂತೆ ಸಾದಾ ಜೀವನಕ್ಕೆ ಮೊರೆಹೋಗಬೇಕು; ತನಗೆ ಸಾಕಾಗಿ ಉಳಿದ ಭೋಗ ಸಂಪದವನ್ನೆಲ್ಲ ಲೋಕಕ್ಕೆ ನೀಡಿ ಬಿಡಬೇಕು. ಅದೇ ಬದುಕಿನ ಕೌಶಲ್ಯ. ತನ್ನ ಅರಮನೆ ಹೊಕ್ಕು ಹೆಂಡತಿಯ ಆಭರಣ ಕದಿಯ ಬಂದ ತುಡುಗನ ಕಂಡು ಬಸವಣ್ಣ "ಹಗಲುಗಳ್ಳನ ಮನೆಗೆ ಜಗಗಳ್ಳ ಬಂದಿರುವ. ಇಲ್ಲವೆನಬೇಡ ಕೊಡು ಮರುಳೆ. ನಮ್ಮಯ್ಯನ ಕೈಯ ನೊಂದಿತ್ತು ಬಿಡೆ ಮರುಳೆ." ಎಂದು ತನ್ನ ಹೆಂಡತಿಯನ್ನೇ ಜಬರಿಸಿದ. ಇದು ಲೋಕೋತ್ತರ ವ್ಯಕ್ತಿಗಳ ನೀತಿ. ಈ ನೀತಿಯನ್ನು ನಮ್ಮ ಇಂದಿನ ಮುಖಂಡರು ಸಿರಿವಂತರು ಪಂಡಿತರು ಪಾಲಿಸಿದರೆ! ದುರ್ದೈವ ನಮ್ಮದು; ನಮ್ಮ ಕಲ್ಯಾಣದ ಮಾತನಾಡಿ ಆರಿಸಿ ದೇಹಲಿಗೋ ಬೆಂಗಳೂರಿಗೋ ಹೋದ ನೇತಾರರು ಯಥೇಚ್ಛ ತಿಂದು ತೇಗಿ ಹೊಟ್ಟೆ ಭಿರಿವಂತಾದಾಗ ತಿರುಗಿ ಬರುತ್ತಾರೆ!! ಇಂಥ ಕೃತಘ್ನರಿಂದ ಯಾವ ಸುಧಾರಣೆಯಾದೀತು?

ಸಮಾಜ ವಿಘಾತಕರಾದ ಈ ಎಲ್ಲ ಕಳ್ಳರನ್ನು ಶಿಕ್ಷಿಸದಿಹನೆ ದೇವ? ಇಂದಿಲ್ಲ ನಾಳೆ ತುಳಿಯಲ್ಪಟ್ಟವರೆಲ್ಲ ಒಂದಾಗುತ್ತಾರೆ. ಸಂಚಯಶೀಲ ಸ್ವಾರ್ಥಿ

ಪಾಪಿಗಳನ್ನು ಉಚ್ಚಾಟನೆಗೊಳಿಸುತ್ತಾರೆ. ಆಗ ಮರುಗುವದಕ್ಕಿಂತ ಈಗಲೇ ಏಕೆ ಕಣ್ಣು ತೆರೆಯಬಾರದು? ಭಗವಂತನ ಎಚ್ಚರಿಕೆಯ ಮಾತುಗಳನ್ನು ಏಕೆ ಅನುಸರಿಸಬಾರದು? ಕದನಕ್ಕೆ ಕ್ರಾಂತಿಗೆ ಆಸ್ಪದ ನೀಡದೆ ಪ್ರೇಮ, ಸಹಕಾರ ಹಾಗು ಉದಾರತೆಗಳಿಂದ ಜಗವನ್ನೆಲ್ಲ ಸುಖನಿಲಯವನ್ನಾಗಿ ಪರಿವರ್ತಿಸ ಬೇಕು. ಅದೇ ಪ್ರಜಾಪತಿಯ ಇಂಗಿತ.

ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವ ಕಿಲ್ಬಿಷೈಃ ।
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮ ಕಾರಣಾತ್ ॥೧೩॥

ಅರ್ಥ:- ಯಜ್ಞಶಿಷ್ಟಾಶಿನಃ ಸಂತಃ=ಯಜ್ಞದ ಶೇಷ ಪ್ರಸಾದ ಭುಂಜಿಸುವವರು ( ವೈಶ್ವದೇವಾದಿ ಯಜ್ಞ ಅವಶಿಷ್ಟಂ ಯೇ ಅಶ್ನಂತಿ ತೇ ), ಸರ್ವಕಿಲ್ಬಿಷೈಃ=(ಕಂಡನೀ ಪೇಷಿ ಣ್ಯಾದಿ) ಸರ್ವದೋಷಗಳಿಂದ, ಮುಚ್ಯಂತೇ=ಮುಕ್ತರಾಗುತ್ತಾರೆ; ತು=ಆದರೆ, ಯೇ ಪಾಪಾಃ =ಯಾವ ಪಾಪಿಗಳು, ಆತ್ಮಕಾರಣಾತ್=ತಮ್ಮ ಹೊಟ್ಟೆಗಾಗಿ, ಪಚಂತಿ=( ಭೋಗಗಳನ್ನು ) ಉಣ್ಣುತ್ತಾರೆಯೋ ತೇ=ಅವರು, ಅಘಂ=ಪಾಪವನ್ನು, ಭುಂಜತೇ=ಉಣ್ಣುತ್ತಾರೆ.

ವಿವರಣೆ:- ಪಾಪ (ಕಿಲ್ಬಿಷ) ಮಾಡುವದು ಸುಲಭ ಮತ್ತು ಸರಸ. ಒಂದು ಬಗೆಯ ಆಸುರೀ ಆನಂದ ಅದರಲ್ಲಿದೆ. ಸಾಮಾನ್ಯವಾಗಿ, ಸರ್ವಜನರು ಪಾಪ ವಿರೋಧಿಯಾದ ಧರ್ಮದಲ್ಲಿ ಅನಾಸಕ್ತರು. ಒಂದು ಸಂಸ್ಕೃತ ಸುಭಾ ಷಿತ ಹೀಗಿದೆ:

" ಧರ್ಮಂ ಪ್ರಸಂಗಾದಪಿ ನಾಚರಂತಿ । ಪಾಪಂ ಪ್ರಯತ್ನೇನಾಪಿ ಸಮಾಚರಂತಿ ॥ "

ತಾನಾಗಿಯೇ ಪ್ರಸಂಗ ಬಂದಾಗಲು ಕೂಡ ಜನರು ಧರ್ಮ ಆಚರಿಸರು; ಪಾಪವನ್ನು ಮಾತ್ರ ಪ್ರಯತ್ನದಿಂದಲಾದರೂ ಸರಿಯೆ, ಆಚರಿಸುತ್ತಾರೆ. ಕೊಳಚೆ ಪ್ರದೇಶಕ್ಕೆ ಹೊಂದಿಕೊಂಡ ಮನುಷ್ಯನಿಗೆ ಆ ಕೊಳಚೆಯ ಕಲ್ಪನೆಯೂ ಬರದು. ಹಾಗೆ, ಅನಾಯಾಸವಾಗಿ ಪಾಪದ ಮಧ್ಯೆ ಬದುಕಿದ ಮನುಷ್ಯನಿಗೆ ಪಾಪ ಕಾಣಿಸದು. ಕೆಲವು ಸಲವಂತು, ಪಾಪಾಚರಣೆ ಮನೆತನದ ಕಸಬಾಗಿ ಬಿಡುವದು. ಉದಾ:- ಕಟುಕರು, ಕಳ್ಳರು, ಠಗೆಗಾರರು, ಬೇಟೆಗಾರರು. ಆ ಮನೆ ತನಗಳ ಜನರಿಗೆಲ್ಲ ಹಾಗೇ ಮಾಡುವಲ್ಲಿ ಅಭಿಮಾನವಿದೆ ಆನಂದವೂ ಇದೆ. ನಿಂದೆ, ಆತ್ಮಸ್ತುತಿ, ಅಸತ್ಯಭಾಷಣ, ಇಂದ್ರಿಯ ವಿಲಾಸಗಳನ್ನು ರೂಢಿಸಿ ಕೊಂಡವನಿಗೆ ತಾನು ಪಾಪ ಮಾಡುತ್ತಿರುವೆನೆಂಬ ಭಾವ ಕೂಡ ಬರದು! ಪಾಪ ಭೀರುಗಳು ಮಾತ್ರ ಅತೀ ವಿರಳ.

" ವೇದ ಶಾಸ್ತ್ರದ ವಿಪ್ರಶಕ್ತಿಯು । ಮೇದಿನೀ ಪತಿ ವೈಶ್ಯವಸ್ತುವ ।
ಪಾದಜನುಪಚರಿಯ ಶಕ್ತಿಯು ಸೂಳೆ ಚಲುವಿಕೆಯು ॥
ಆದಿತೇಯರು ಸ್ವಪ್ರಭಾವವ । ಕಾದ ಹೊಟ್ಟೆಗೆ ಕ್ರಯವ ಮಾಳ್ಪರು ।
ಬೋಧವಿರಹಿತರಾದ ಶಿಶ್ನೋದರ ಪರಾಯಣರು ॥ "

೧) ವೇದಶಾಸ್ತ್ರ ಪಾರಂಗತನಾದ ಭೂಸುರ, ೨)ರಾಷ್ಟ್ರ ರಕ್ಷಣಾ ಸಮ

ರ್ಥನಾದ ಕ್ಷತ್ರಿಯ, ೩) ಸಮಾಜ ಪೋಷಕನಾದ ವೈಶ್ಯ, ೪) ಸೇವಾ ತತ್ಪರನಾದ ಅಂತ್ಯಜ ಹಾಗು ಸ್ವರ್ಗ ಸುಖಭೋಗಿಯಾದ ದೇವತೆಗಳೂ ಕಾಮಪಾರಾಯಣರೇ. ಸುರ ಸುಂದರ ವೇಶ್ಯೆಯಂತೆ ಇವರೆಲ್ಲ ಕಾದ ಹೊಟ್ಟೆಗೆ ಕ್ರಯವ ಮಾಳ್ಪರು! ಹಿರಿಯರು, ನೂರು ವರುಷ ಬಾಳಿದ ವೃದ್ಧರು, ಶಾಸ್ತ್ರ ಕೋವಿದ ವಿದುಷರು ಆತ್ಮವಿಮರ್ಶೆ ಮಾಡಿನೋಡಲಿ. "ಅವರಿಂದ ಜಗ ತ್ತಿಗಾಗಲಿ, ಸಮಾಜಕ್ಕಾಗಲಿ ಏನು ಲಾಭವಾಗಿದೆ? ತಮಗಾಗಿ ಅವರೇನು ಸಾಧಿಸಿದ್ದಾರೆ?"

ಮನುಷ್ಯನ ಅಂತರಂಗವು ಅಸಂಖ್ಯ ಪಾಪಗಳಿಂದ ಮಲಿನವಾಗಿದೆ. ಅವನು ತಲೆ ತಲೆಮಾರಿನಿಂದ ಋಣದ ಭಾರಕ್ಕೆ ಒಳಗಾಗಿದ್ದಾನೆ. ಸಮಾಜ ಜೀವನದಲ್ಲಿ ಋಣವು ಪ್ರಧಾನ ಪಾತ್ರ ಆಡುತ್ತಿದೆ. "ಋಣಾನುಬಂಧ ರೂಪೇಣ ಪಶು ಪತ್ನಿಸುತಾಲಯಾಃ" ಪಶು, ಪತ್ನಿ, ಪುತ್ರ, ಗೃಹ ಎಲ್ಲವೂ ಋಣಸಂಬಂ ಧದಿಂದ ಪ್ರಾಪ್ತ. ತಂದೆ ತಾಯಿ ಹೀಗೆ ಏನೇನೋ ಆಗಿ ಬಂದು ಋಣ ತೀರಿಸುತ್ತೇವೆ; ನಮ್ಮಲ್ಲಿ ಕೆಲವರು ಬೇಡ ಬಂದವರು; ಕೆಲವರು ಋಣ ಕೊಡಲು ಬಂದವರು. ನಮಗಾಗಿ ಯಾರಿಲ್ಲ! ಒಂದು ಉದಾಹರಣೆ:

ಆಗರ್ಭ ಸಿರಿವಂತ. ಅವನಿಗೊಬ್ಬ ಮಗ. ಜಾತಕ ನೋಡಿದ ಪಂಡಿತ ಹೇಳಿದ, "೧೦೦೦೦ ದ ಋಣ ತೀರಿಸಲು ಬಂದ ಬಾಲಕನೀತ. ಋಣ ಮುಟ್ಟಿಸಿದ ತಕ್ಷಣ ಪ್ರಾಣ ತ್ಯಜಿಸುತ್ತಾನೆ." ಕಾಲಾಂತರದಲ್ಲಿ ತಂದೆ ಅದನ್ನು ಮರೆತ. ಮಗ ಬೆಳೆದು, ಕಲಿತು ಜಾಣ ವಕೀಲನಾದ. ಕೆಲವೇ ದಿನಗಳಲ್ಲಿ ೧೦೦೦೦ ಗಳಿಸಿದ. ತಂದೆಯ ಬಳಿ ಬಂದು, "ಅಪ್ಪಾ, ಇದು ನನ್ನ ಪ್ರಥಮ ಗಳಿಕೆ; ನಿನಗೆ ಅರ್ಪಿಸು ತ್ತೇನೆ. ಸ್ವೀಕರಿಸು." ಎಂದು ಹಣ ನೀಡಿದ. ನಮಿಸಿದ. ಆನಂದ ತುಂದಿಲನಾದ ತಂದೆ ಆಶೀರ್ವದಿಸಲು ಕೈ ಎತ್ತಿದ ಮರುಕ್ಷಣವೇ ಮಗ ಭೂಮಿಗೆ ಉರುಳಿದ!

ಎಲ್ಲರ ಬದುಕೂ ಹೀಗೆಯೇ. ನಾವು ಮಾಡುವ ಪ್ರತಿಕಾರ್ಯದ ಹಿಂದೆ ಋಣದ ಸೂತ್ರ ಇದೆ. ಪತಿ ಎನ್ನುವವ ಏನೇನೋ ಮಾಡಿ ಯಾರದೋ ಜೀವಕ್ಕೆ ಗಾಳ ಹಾಕಿ ಧನ ತರುತ್ತಾನೆ. ಹೆಂಡತಿಯ ಮುಂದಿಟ್ಟು ತನ್ನ ಶೌರ್ಯ ಕೊಚ್ಚಿಕೊಳ್ಳುತ್ತಾನೆ. ತನ್ನ ಗಂಡ ಋಣ ಹೊತ್ತು ತಂದಿದ್ದಾನೆ ಎಂದರಿಯದ ಪತ್ನಿ ಮನವಾರೆ ಪತಿಯನ್ನು ಕೊಂಡಾಡುತ್ತಾಳೆ. ಋಣದ ನಿಯತಿಯ ಅರಿತ ವ್ಯಕ್ತಿಗಳು ಹಾಗೆ ಮಾಡರು. ಉದಾ: ಆಯ್ದಕ್ಕಿ ಮಾರಯ್ಯನ ಹೆಂಡತಿ ಲಕ್ಕಮ್ಮ ನೊಮ್ಮೆ ಪತಿ ಹೆಚ್ಚಿಗೆ ಅಕ್ಕಿ ತಂದಾಗ "ಈಸಕ್ಕಿಯ ಆಸೆ ನಿಮಗೇಕೆ? ಒಯ್ದು ಸುರಿದು ಬನ್ನಿ. ಎಂದಿನಂದದಿ ನಮ್ಮ ಕಾಯಕವೇ ನಮಗೆ ಸಾಕು." ಎಂದು ಹೇಳಿ ದಳು. ಇಂಥ ಸತಿಯರು ಬಹು ವಿರಳ.

ಸಂತ ಮಹಾಂತರೂ ಈ ಋಣ ಸೂತ್ರದಿಂದ ಮುಕ್ತರಲ್ಲ. ಅವರು ಅರಿ

ತವರಾದುದರಿಂದ ಋಣ ಭಾರ ಉಂಟಾಗದಂತೆ ಜಾಗ್ರತೆಯಿಂದ ಬಾಳುತ್ತಾರೆ. ತಮ್ಮ ತಪ, ಸೇವೆಗಳ ಒಂದು ಭಾಗವನ್ನು ಅನ್ನವಿತ್ತು ಉಪಕರಿಸಿದವರಿಗಾಗಿ ಮೀಸಲಿಡುತ್ತಾರೆ; ಮತ್ತೊಂದು ಭಾಗವನ್ನು ಮಾನವರ ಕಲ್ಯಾಣಕ್ಕಾಗಿ, ಮೂರನೆಯ ಭಾಗವನ್ನು ಆತ್ಮ ಶಾಂತಿಗಾಗಿ ತರ್ಪಿಸುತ್ತಾರೆ. ಹೀಗಿರುವಾಗ, ಸಾಮಾನ್ಯ ವಿರಾಗಿಗಳ ಮಾತೇನು? ಋಣ ತತ್ವ್ತವನ್ನು ಉದಾಸೀನ ಮಾಡಿ ತಾವು ವಿರಾಗಿಗಳೆಂಬ ಅಭಿಮಾನ ತಾಳಿ ಗೃಹಸ್ಥರಿಂದ ಯಥೇಚ್ಛ ಭೋಗೋಪಭೋಗ ಮಾಡಿದರೆ ನರಕ ತಪ್ಪದು. "ಭಿಕ್ಷದ ಅನ್ನ ಮೋಕ್ಷಕ್ಕೆ ಸಾಧನ. ಕುಕ್ಷಿಗೆ ತಿರಿದುಂಡರೆ ನರಕ ತಪ್ಪದು" ಎಂದಿದ್ದಾರೆ ಬಲ್ಲವರು. "ಭುಂಜತೇ ತೇ ತು ಅಘಂ ಪಾಪಾಃ" ಕರ್ಮ ಮಾಡದೆ ಬಾಳುವ ಹೀನರು ಬರಿ ಪಾಪವನ್ನೇ ಉಣ್ಣುತ್ತಾರೆ; ಎಂದ ಭಗವಂತ.

ಯಜ್ಞಶಿಷ್ಟಾಶಿನಃ ಸಂತಃ...:— "ಕಂಡನೀ ಪೇಷಿಣೀ ಚುಲ್ಲೀ ಉದಕುಂಭೀ ಚ ಮಾರ್ಜನೀ। ಪಂಚಸೂನಾ ಗೃಹಸ್ಥಸ್ಯ ತಾಭಿಃ ಸ್ವರ್ಗಂ ನ ವಿಂದತಿ॥" ಕುಟ್ಟುವ ಒನಿಕೆ, ಬೀಸುವ ಕಲ್ಲು, ಒಲೆ ನೀರಿನಕೊಡ ಹಾಗು ಕಸಗೂಡಿಸುವ ಬಾರಿಗೆ ಈ ಐದು ಗೃಹಸ್ಥರಿಗೆ ಪಾಪ ಸ್ಥಾನಗಳು. ಅವುಗಳಿಂದಾಗಿ ಅವರು ಸ್ವರ್ಗವನ್ನು ಪಡೆಯಲಾರು॥ ಎಂಬ ವಚನದಸ್ವಯ ನಮ್ಮ ದೈನಂದಿನ ಜೀವನದಲ್ಲಿ ಘಟಿಸುವ ಆ ಎಲ್ಲ ಪಾಪ ಕಳೆದುಕೊಳ್ಳಲು ಹಾಗು ಋಣ ಮುಕ್ತರಾಗಲು ಪಂಚ ವಿಧ ಯಜ್ಞಗಳನ್ನಾಚರಿಸುತ್ತಾರೆ. ಆ ಯಜ್ಞಗಳ ವಿವರ:

(೧) ಬ್ರಹ್ಮಯಜ್ಞ:— ಬ್ರಹ್ಮಚರ್ಯ ವ್ರತ ಪಾಲಿಸಿ ಗುರು ಸಾನಿಧ್ಯದಲ್ಲಿದ್ದು ಅಧ್ಯಯನ ಮಾಡಿ, ಬಳಿಕ ತಾನು ಕಲಿತುದನ್ನು ಇನ್ನೊಬ್ಬರಿಗೆ ಕಲಿಸಬೇಕು; ಅದು ಬ್ರಹ್ಮಯಜ್ಞ ಅಥವಾ ಋಷಿ ಯಜ್ಞ; ಆದರಿಂದ ಗುರು ಋಣ ಮುಕ್ತಿ. ಕಲಿತುದನ್ನು ಕಲಿಸದವ ಪಾಪಿ, " ಕೇಳಿ ಹರಿಶಾಸ್ತ್ರ ಹೇಳದವ ಹೊಲೆಯ. " ಕ್ಷುಲ್ಲಕ ಸಿನೇಮಾ ನೋಡಿ ಬಂದ ವ್ಯಕ್ತಿ ಭೆಟ್ಟಿಯಾದವರಿಗೆಲ್ಲ ಆ ಚಿತ್ರದ ಬಗ್ಗೆ ಹೇಳಿ ಅವರನ್ನು ಆ ಚಿತ್ರ ನೋಡುವಂತೆ ಪ್ರೇರಿಸುತ್ತಾನೆ. ಹೀಗಿರುವಾಗ, ದೇವನೊಲುಮೆ ನೀಡುವ ಅಧೀತ ವಿದ್ಯೆಯನ್ನು ಪರರಲ್ಲಿ ಹೇಳದಿರೆ ಅದೊಂದು ಪ್ರಮಾದವಲ್ಲವೇ ?

ಪ್ರಸಂಗಾನುಸಾರ ಈ ವಿದ್ಯೆಯನ್ನಿತ್ತರೆ ಒಂದೊಂದು ಜೀವನವೇ ಸುಭಗ ಸುಂದರಗೊಳ್ಳುತ್ತದೆ. ವ್ಯಕ್ತಿ- ವ್ಯಕ್ತಿಗಳ ಮಧ್ಯದ ದ್ವೇಷ ವಿನಾಶಕ ಬಲ ಇದರಲ್ಲಿದೆ. ನಾರದರ ಒಂದು ಕಿವಿ ಮಾತು ರಾಮ ಹಾಗು ಪರಶುರಾಮರ ಮಧ್ಯ ನಡೆದ ಭಯಂಕರ ಕಾಳಗವನ್ನು ನಿಲ್ಲಿಸಿತು; ಇಬ್ಬರಲ್ಲೂ ಪರಸ್ಪರ ಆತ್ಮೀಯತೆಯನುಂಟುಮಾಡಿತು. ಜಯಪ್ರಕಾಶ ನಾರಾಯಣರ ಉಪದೇಶವು ನೂರಾರು ಜನ ದರೋಡೆಗಾರರನ್ನು ಪರಿವರ್ತಿಸಿತು. ಸಮಯೋಚಿತವಾಗಿ ಉಪಯೋಗಿ

ಸಿದ ಉಪದೇಶ ಶಾಂತಿದಾಯಕ!

೨) ದೇವಯಜ್ಞ:- ದೇಹಗತ ತತ್ತ್ವಗಳ ಮೇಲೆ ಅಧಿದೇವತೆಗಳಿದ್ದಾರೆ. ಅವರ ಕೃಪೆಯಿಂದಲೇ ನಮ್ಮ ಇಂದ್ರಿಯಗಳು ವ್ಯವಹರಿಸುತ್ತವೆ. ಆ ದೇವತೆಗಳ ಉಪಕಾರ ಸ್ಮರಿಸಿ, ಅವರಿಗೆ ಮಂತ್ರ ಜಪ ತರ್ಪಣವೀಯಬೇಕು; ಸಂತೋಷ ಪಡಿಸಬೇಕು. ಅದೇ ದೇವಯಜ್ಞ.

೩) ಪಿತೃಯಜ್ಞ:- ಮಾತಾಪಿತರ ಋಣ ನಮ್ಮ ಮೇಲಿದೆ. ನಾಲ್ಕು ಮಕ್ಕಳಿಗೆ ಜನ್ಮವಿತ್ತರೆ ಅಥವಾ ಅವರ ತೈಲ ಚಿತ್ರ ಪೂಜಿಸಿದರೆ ಈ ಋಣ ತೀರದು. ಅವರು ಬದುಕಿರುವಷ್ಟು ಕಾಲ ಅವರ ಮನಸ್ಸಿಗೆ ಹಿತವಾಗುವ ರೀತಿಯಲ್ಲಿ ಉಪಚರಿಸುವದು ಪಿತೃಯಜ್ಞ.

೪) ಭೂತಯಜ್ಞ:- ಎತ್ತು, ಎಮ್ಮೆ, ಕುರಿ, ಆಡು, ಕುದುರೆ, ನಾಯಿ ಎಲ್ಲ ಪ್ರಾಣಿಗಳು ಒಂದಿಲ್ಲೊಂದು ರೀತಿಯಿಂದ ಮನುಷ್ಯನ ಸೇವೆ ಮಾಡುತ್ತವೆ. ಅವುಗಳಿಗೆ ಹೊಟ್ಟೆ ತುಂಬ ಅನ್ನ ಹಾಕುವದು, ಪ್ರೀತಿಯಿಂದ ಸಾಕಿ ಸಲುಹುವದು ಭೂತಯಜ್ಞ.

೫) ಅತಿಥಿ ಯಜ್ಞ:- ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳ ನೋಡಿ ಬರುವ ಬೀಗರು ಬಂಧುಗಳು ಗೆಳೆಯರು ಅಧಿಕಾರಿಗಳು ಅತಿಥಿಗಳಲ್ಲ. ಕಷ್ಟದಲ್ಲಿದ್ದ ಜೀವ, ಬೆಂದ ಹೊಟ್ಟೆಯ ಬಡವ, ವಿದ್ಯಾರ್ಥಿ ಮನೆಯವರೆಗೆ ಬಂದರೆ ಅವರು ಅತಿಥಿಗಳು. ಅವರನ್ನು ಉಪಚರಿಸುವದು ಅತಿಥಿಯಜ್ಞ.

ಈ ಪಂಚವಿಧ ಯಜ್ಞಗಳ ಜೀವಾಳ ತ್ಯಾಗ; ವಸ್ತು ತ್ಯಾಗ ಹಾಗು ವಸ್ತು ವ್ಯಾಮೋಹ ತ್ಯಾಗ! ಬರೀ ವಸ್ತು ತ್ಯಾಗದಿಂದ ಭವಿತನ ನೀಗದು:

> "ಹೊನ್ನು ಭಕ್ತನೆಂಬೆನೆ; ಹೊನ್ನಿನೊಳಗಣ ಮುದ್ರೆ ಭವಿ. ಹೆಣ್ಣು ಭಕ್ತನೆಂಬೆನೆ; ಹೆಣ್ಣಿನೊಳಗಣ ವಿರಹ ಭವಿ. ಮಣ್ಣು ಭಕ್ತನೆಂಬೆನೆ; ಮಣ್ಣಿನೊಳಗಣ ಬೆಳಸು ಭವಿ. ಈ ತ್ರಿವಿಧ ಭವಿಯ ಕಳೆದು ಪ್ರಸಾದ ಮಾಡಿಕೊಳ್ಳಬಲ್ಲರೆ ಕೂ.ಚ.ಸಂಗಯ್ಯನಲ್ಲಿ ಅಚ್ಚಪ್ರಸಾದಿ ಎಂಬೆ"

ಹೊನ್ನು ಹೆಣ್ಣು ಮಣ್ಣು ಭವಿಯಲ್ಲ; ಅವುಗಳ ಆಸಕ್ತಿ ಭವಿ. ಹೊನ್ನ ಹೆಣ್ಣ ಮಣ್ಣ ಬಿಟ್ಟವ ಭವಿತನ ನೀಗಲಾರ; ಹೊನ್ನಿನ ಲೋಭ, ಹೆಣ್ಣಿನ ವಿರಹ, ಮಣ್ಣಿನ ಆಸಕ್ತಿ ತೊರೆದವ ಮಾತ್ರ ಭಕ್ತ; ಅವನ ಭವಿತನ ನೀಗಿದೆ. ಭಕ್ತನಾಗಿ ಉಪಭೋಗಿಸುವವನು ಪ್ರಸಾದಿ! ಹೀಗೆ ಆಸಕ್ತಿ ತ್ಯಾಗಮಾಡಿ ಭೋಗಿಸುವದಕ್ಕೆ 'ಯಜ್ಞಶಿಷ್ಟ ಅಶನ' ಎನ್ನುತ್ತಾರೆ. ತ್ಯಾಗಪೂರ್ವಕ ಭೋಗಿಸುವವರು "ಯಜ್ಞಶಿಷ್ಟಾಶಿನಃ."

ನಾವು ಮಾಡುವ ಮಾಡುತ್ತಿರುವ ಮಾಡಿದ ಪಾಪವು ಗಣನೆಗೆ ನಿಲುಕದು. ಸಾಕ್ಷಾತ್ ಶಾರದೆ ಕಲ್ಪವೃಕ್ಷವನ್ನು ಲೇಖನಿ ಮಾಡಿ, ಸಮುದ್ರವನ್ನು ಶಾಯಿ ಮಾಡಿ, ಭೂಮಂಡಲವೆಂಬ ಹಾಳೆಯ ಮೇಲೆ ಬರೆದರೂ ತೀರದಷ್ಟು ನಮ್ಮ

ಪಾಪ ರಾಶಿ. ಅದರ ಕಲ್ಪನೆಯೇ ನಮಗಿಲ್ಲ. ಜನತೆಗೆ ತಿಳಿಯದ ರೀತಿಯಲ್ಲಿ ಮಾಡಿದ ದುಷ್ಕೃತ್ಯಗಳು ಪಾಪವಲ್ಲ ಎಂಬುದು ನಮ್ಮ ಭಾವ! ಜನರು ನೋಡದಿದ್ದರೇನಾಯ್ತು? ಮನಸ್ಸು ನೋಡುತ್ತಿಲ್ಲವೆ? "ಮನಕಂಜಿ ನಡೆಯದೆ, ಜನಕಂಜಿ ನಡೆದರೆ ಮನದಾಣ್ಮ ಗುರುಸಿದ್ಧ ಮರೆಯಾಗುವನಲ್ಲ!"

ಭಗವಂತ:- "ಪಾರ್ಥ, ದೇವನ ಕಾರುಣ್ಯದಿಂದ ದೊರೆತ ಭೋಗಭಾಗ್ಯಗಳನ್ನು ಸ್ವಾರ್ಥಕ್ಕಾಗಿ ಭುಂಜಿಸುವವರು ಪಾಪಿಗಳು; ಅವರು ಪಾಪಗಳನ್ನೇ ಉಣ್ಣುತ್ತಿದ್ದಾರೆ. ಕಾಲ ಕರ್ಮ ಹಾಗು ಮಾಯೆಯಿಂದ ಅವರು ಬದ್ಧರು. ದುಡಿತದಿಂದ ದೊರೆತ ಸಂಪದವನ್ನು ದೇವರಿಗೆ ಜನತೆಗೆ ನೀಡಿ ಶೇಷ ಪ್ರಸಾದ ಭುಂಜಿಸುವವರು ಪುಣ್ಯಾತ್ಮರು. ಸರ್ವ ಋಣಗಳಿಂದ ಅವರು ಮುಕ್ತರಾಗುತ್ತಾರೆ. ಜನ್ಮ ಮರಣ ಹಾಗು ಮಾಯೆ ಮೋಹಗಳ ಬಂಧನದಿಂದ ಪಾರಾಗುತ್ತಾರೆ. ಇದು ಪ್ರಜಾಪತಿಯ ಆದೇಶ.

ಸಂಬಂಧ:- ಇನ್ನು ಜಗಚ್ಚಕ್ರ ನಡೆಯಬೇಕಾದರೂ ಕರ್ಮ ಮಾಡಲೇಬೇಕು.

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನ ಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥೧೪॥**

ಭಾವ:-ಅನ್ನದಿಂದ ಪ್ರಾಣಿಗಳು ಹುಟ್ಟುತ್ತವೆ. ಮಳೆಯಿಂದ ಅನ್ನವು ಉತ್ಪನ್ನವಾಗುತ್ತದೆ, ಯಜ್ಞದಿಂದ ಮಳೆಯು ಬರುತ್ತದೆ. ಯಜ್ಞವು ಕರ್ಮದಿಂದ ಉಂಟಾಗುತ್ತದೆ.

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥೧೫॥**

ಅರ್ಥ:- ಕರ್ಮ=ಕರ್ಮವು, ಬ್ರಹ್ಮೋದ್ಭವಂ=ವೇದರೂಪ ಬ್ರಹ್ಮದಿಂದ ಉಂಟಾಗುತ್ತದೆ ಎಂದು, ವಿದ್ಧಿ=ತಿಳಿ. ಬ್ರಹ್ಮ=ಬ್ರಹ್ಮವು ಅಕ್ಷರ ಸಮುದ್ಭವಂ=ಅಕ್ಷರದಿಂದ ಹುಟ್ಟುತ್ತದೆ. ತಸ್ಮಾತ್=ಆದುದರಿಂದ ಸರ್ವಗತಂ= ಸರ್ವವ್ಯಾಪಿಯಾದ, ಬ್ರಹ್ಮ= ಬ್ರಹ್ಮವು, ನಿತ್ಯಂ = ಸದಾ. ಯಜ್ಞೇ= ಯಜ್ಞದಲ್ಲಿ ಪ್ರತಿಷ್ಠಿತಂ= ನೆಲೆಸಿದೆ.

ವಿವರಣೆ:- " ಉದ್ಯಮಿಯು ಪುರುಷಸಿಂಹ" ಎಂಬ ಮಾತು ಶತಧಾ ಸತ್ಯ. ಮನುಷ್ಯನು ವ್ಯಾವಹಾರಿಕ ಪಾರಮಾರ್ಥಿಕ ಕ್ಷೇತ್ರಗಳೆರಡರಲ್ಲೂ ಜಯಶೀಲನಾಗಬೇಕಾದರೆ ದುಡಿಯಬೇಕು. ಸದಾ ಸತ್ಕರ್ಮಗಳನಾಚರಿಸಬೇಕು. ಯಾಕೆಂದರೆ, ವ್ಯಷ್ಟಿ ಹಾಗು ಸಮಷ್ಟಿ ಚಕ್ರಗಳೆರಡೂ ಸುರಕ್ಷಿತವಾಗಿ ಚಲಿಸುವಂತೆ ಮಾಡುವ ಶಕ್ತಿ ಕರ್ಮದಲ್ಲಿದೆ. ಈ ಮಾತಿನ ವಿಸ್ತಾರ ಪ್ರಸ್ತುತ ಮಂತ್ರಗಳಲ್ಲಿವೆ.

ಅನ್ನಾದ್ಭವಂತಿ ಭೂತಾನಿ:- ಅಸಂಖ್ಯ ವಿಧ ಜೀವಜಂತುಗಳು, ಪ್ರಾಣಿ ಪಶು-ಪಕ್ಷಿ ಮೃಗ-ಮಾನವರು ಅನ್ನದಿಂದ ಹುಟ್ಟಿದ್ದಾರೆ. ಅನ್ನವು ರಕ್ತವೀರ್ಯಗಳ ರೂಪ ತಾಳಿ, ಅವೆರಡರ ಸಂಘಟನೆಯಿಂದ ದೇಹ ನಿರ್ಮಾಣವಾಗುತ್ತದೆ.

ಪರ್ಜನ್ಯಾದನ್ನ ಸಂಭವಃ:– ಅನ್ನ ಆಕಾಶದಿಂದ ಬೀಳುವದಿಲ್ಲ. ಮೇಘ ರಾಜ ಕೃಪೆಮಾಡಿ ಮಳೆ ಸುರಿಸಿದಾಗ ಬಾಯಾರಿ ಬಿರಿದ ಭೂಮಿ ಅರಳುವದು. ಬೀಜಗಳು ಅಂಕುರಿಸಿ ವಿವಿಧ ಬೆಳೆಗಳು ಬೆಳೆದು ನಿಲ್ಲುವವು. ಮಳೆ ಅನ್ನದ ಆಧಾರ. ಅನ್ನವಿರದೆ ನಾಲ್ಕು ದಿನ ಬದುಕೇವು; ಆದರೆ ನೀರಿಲ್ಲದೆ ಒಂದು ದಿನ ಬದುಕಲಾರೆವು.

ಯಜ್ಞಾತ್ ಭವತಿ ಪರ್ಜನ್ಯಃ:– ಮಳೆ ತಾನಾಗಿಯೇ ಬರದು. ಅದು ಯಜ್ಞಜನ್ಯ. ಈ ಯಜ್ಞ ಎರಡು ವಿಧ. ೧) ನೈಸರ್ಗಿಕ ಯಜ್ಞ:- ಸೂರ್ಯನ ಉಷ್ಣ ಕಿರಣಗಳು ಸಮುದ್ರದಲ್ಲಿ ಹವನವಾಗುವದು. ೨) ಮಾನವೀಯ ಯಜ್ಞ:- ಕಾಮನೆಯಿಂದಲೋ ನಿಷ್ಕಾಮನೆಯಿಂದಲೋ ಸತ್ಕರ್ಮ ಮಾಡಿದಾಗ ಮನ ದಲ್ಲಿ ಒಂದು ವಿಶಿಷ್ಟ ಧರ್ಮ-ಸಂಸ್ಕಾರ ಉದಿಸುತ್ತದೆ, ಅದು ಯಜ್ಞ. ಒಬ್ಬ ವ್ಯಕ್ತಿಯ ಧರ್ಮ ವಿಶೇಷವು ಪರ್ಜನ್ಯಕ್ಕೆ ಕಾರಣವಾಗದು. ಸಾಮೂಹಿಕ ಧರ್ಮ ವಿಶೇಷವು ಬೆಳೆದಾಗ ಮಾತ್ರ ಪವಿತ್ರ ಪರ್ಜನ್ಯ ತರುವ ಸಾಮರ್ಥ್ಯ ಅದಕ್ಕೆ ಬರುವದು. ಒಟ್ಟಿನಲ್ಲಿ ಎರಡೂ ಬಗೆಯ ಯಜ್ಞಗಳಿಂದಾಗಿ ಮೇಘ ರಾಜ ಸಮೃದ್ಧ ಜಲ ವರ್ಷಾವ ಮಾಡುತ್ತಾನೆ.

ಯಜ್ಞಃ ಕರ್ಮ ಸಮುದ್ಭವಃ:–ಭೂಕಂಪ, ಜ್ವಾಲಾಮುಖಿ, ಅತಿವೃಷ್ಟಿ, ಅನಾವೃಷ್ಟಿ ನಿಂತು ಸುಖದ ವಾತಾವರಣ ನಿರ್ಮಾಣಗೊಳ್ಳುವದಕ್ಕೆ ಮೇಘ ರಾಜನ ಕೃಪೆ ಎಂದು ನಾಮ. ಅದು ಯಜ್ಞದಿಂದ ಪ್ರಾಪ್ಯ. ಆ ಯಜ್ಞ ಬರೀ ಸಂಕಲ್ಪ ಮಾತ್ರವಲ್ಲ; ಕರ್ಮ ಜನ್ಯ. ದೇಶದ ತುಂಬ ವ್ಯಾಪಕವಾಗಿ ಅನ್ನದಾನ, ಭೂದಾನ, ಧನದಾನ, ವಿದ್ಯಾದಾನಗಳು ನಡೆಯುವದು ಕರ್ಮ; ನಾಡಿನ ಮೂಲೆಮೂಲೆಗಳಲ್ಲಿ ಭಜನ, ಕೀರ್ತನ, ಪ್ರವಚನಗಳ ಗುಂಜಾರವ ಹರಡಿಕೊಳ್ಳುವದು ಕರ್ಮ. ಇಂಥ ಮಹಾನ್ ಕರ್ಮಗಳಿಂದ ಸುಭಿಕ್ಷೆ, ರಾಷ್ಟ್ರದ ಏಳ್ಗೆ.

ನಮ್ಮದು ವಿಶಾಲ ರಾಷ್ಟ್ರ. ಇಲ್ಲಿ ವಿವಿಧ ಧರ್ಮ, ಭಾಷೆ, ಸಂಪ್ರ ದಾಯ, ಕುಲಗಳ ಜನ ಬಾಳುತ್ತಿದ್ದಾರೆ. ಅವರ ಮಧ್ಯ ಮೇಲಿಂದ ಮೇಲೆ ದ್ವೇಷಜ್ವಾಲೆ ಆಡುತ್ತಿದೆ, ಅಲ್ಲಲ್ಲಿ ದಿನನಿತ್ಯ ಕಲಹಗಳು ಸಾಗಿವೆ. ಕಾಲು ಶತಮಾನದಲ್ಲಿಯೇ ಮೂರು ಯುದ್ಧ ಮಾಡಬೇಕಾಯ್ತು. ಇದಕ್ಕೆಲ್ಲ ಕಾರಣ ನಮ್ಮ ಜನರಲ್ಲಿ ಹರವಿದ ಅಧರ್ಮ ಪ್ರಣಾಲಿಗಳು. ಸತ್ಯ ಅಹಿಂಸಾ ಪರೋ ಪಕಾರ ದಯಾ ದಾನ ಸಹಾನುಭೂತಿ ತಾಳ್ಮೆಗಳಂಥ ಧರ್ಮವಿಶೇಷರೂಪ ಯಜ್ಞಗಳು ಎಲ್ಲೆಡೆಗೆ ಸಾಗಿದರೆ ದೇಶದ ಸಮಸ್ಯೆ ಪರಿಹಾರಗೊಳ್ಳುತ್ತದೆ. ನೇತಾರರು ಬುದ್ಧಿವಂತರಾಗಿ ಆಳಬೇಕು. ಜನರಲ್ಲಿ ದೇವಧರ್ಮ ಸಂಬಂಧದ ಕರ್ಮಗಳ ಬಗ್ಗೆ ಪ್ರೇಮ ಬೆಳೆಯುವಂತೆ ಪ್ರೋತ್ಸಾಹಿಸಬೇಕು. ಆಗ ದೇಶ

ಸುಭಿಕ್ಷವಾಗುವದು.

**ಕರ್ಮ ಬ್ರಹ್ಮೋದ್ಭವಂ ವಿದ್ಧಿ:–** ದೇವಧರ್ಮಕರ್ಮಗಳ ನಿಖರ ವಿವರಣೆ ವೇದಗಳಲ್ಲಿದೆ. ವೇದಗಳು ಬ್ರಹ್ಮನ ಉಚ್ಛ್ವಾಸಗಳಾದುದರಿಂದ ಅವುಗಳಿಗೂ ಬ್ರಹ್ಮ ಎಂದು ರೂಢನಾಮ. (ಪ್ರಮಾಣವಚನ: ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ಯದೃಗ್ವೇದೋಯಜುರ್ವೇದಃ ಸಾಮವೇದಃ ಬೃ. ಉ. ೧–೪–೧೧. ಈ ಮಹಾನ್ ವಿಶ್ವಾಧಾರನಾದ ಪರಮಾತ್ಮನ ನಿಶ್ವಾಸಗಳೇ ಋಕ್, ಯಜುಸ್ ಹಾಗು ಸಾಮವೇದಗಳು.) ಧರ್ಮ ನಿರೂಪಕ ವೇದಾಭ್ಯಾಸ, ಶ್ರವಣ ಹಾಗು ಪಠನ-ಪಾಠನದಿಂದ ಕರ್ಮಗಳಜ್ಞಾನ; ಅದರಿಂದ ಕರ್ಮ ಮಾಡಬೇಕೆಂಬ ಪ್ರೇರಣೆ! ಹೀಗೆ ಕರ್ಮಗಳಿಗೆ ಕಾರಣ ಬ್ರಹ್ಮ; ಬ್ರಹ್ಮ ನಿಶ್ವಾಸವಾದುದೇ ವೇದ!

**ಬ್ರಹ್ಮಾಕ್ಷರ ಸಮುದ್ಭವಂ:–** ವೇದ(ಬ್ರಹ್ಮ)ವು ಅಕ್ಷರದಿಂದ ಹುಟ್ಟಿದೆ. ಅಕ್ಷರಕ್ಕೆ ಎರಡರ್ಥ: ೧) ಸರ್ವಗ, ಸರ್ವಜ್ಞ. ಪರಿಪೂರ್ಣನಾದ ಅವಿನಾಶ ದೇವ. ೨) ಆ ದೇವನ ಸಾಕ್ಷಾತ್ಕಾರ ಪಡೆದುಕೊಂಡ ಸಂತರು; ಸ್ಥಿತಪ್ರಜ್ಞರು. ಆ ಸಂತರ ಮುಖ ಕಮಲದಿಂದ ವೇದ ಉದಿಸಿದೆ. ಅವರು ವೇದಕ್ಕೆ 'ಆದ್ಯರು.' ಅವರು ಪಂಡಿತರಲ್ಲ, ಅನುಭಾವಿಗಳು. ಅವರ ವಚನಗಳಾದ ವೇದಗಳು ಶಬ್ದ ಜಾಲಗಳಲ್ಲ, ಅನುಭೂತಿಯ ಶಬ್ದ-ರಸ-ಜೇನ ಬಿಂದುಗಳು.

**ತಸ್ಮಾತ್ ಸರ್ವಗತಂ ಬ್ರಹ್ಮ:–** ಆದುದರಿಂದ ಸರ್ವಾಂತರ್ಯಾಮಿಯಾದ ಪರಮಾತ್ಮನು ಸದೈವ ವೇದಗಳಲ್ಲಿ, ಕರ್ಮಗಳಲ್ಲಿ, ಯಜ್ಞ ಜಲ ಅನ್ನ ಹಾಗು ಸಕಲ ಭೂತಗಳಲ್ಲಿ ಹಾಸುಹೊಕ್ಕಿನಂತೆ ವ್ಯಾಪಿಸಿ ನಿಂತಿದ್ದಾನೆ. ಕರ್ಮದಿಂದ ದೇವದರ್ಶನ ಎಂಬ ತತ್ತ್ವವಿಲ್ಲಿ ವ್ಯಕ್ತವಾಗಿದೆ.

**ಭಗವಂತ:–** " ಅರ್ಜುನ, ಜಗತ್ತಿನ ಜೀವ ರಾಶಿಗಳನ್ನು ಕಾಪಾಡುವ ಸಾಮರ್ಥ್ಯ ಅನ್ನಕ್ಕಿದೆ. ಅನ್ನ ಜಲವರ್ಷಾವದಿಂದ; ಜಲವರ್ಷಾವಕ್ಕೆ ಕಾರಣ ಯಜ್ಞ; ಆ ಯಜ್ಞಕ್ಕೆ ಕರ್ಮ ಕಾರಣ. ಕರ್ಮಗಳಿಗೆ ವೇದ ಮೂಲ; ವೇದಗಳಿಗೆ ಅಕ್ಷರ ದೇವನು ಆಶ್ರಯ! ಹೆಚ್ಚೇನು ಪರಮಾತ್ಮನು ವಿಶ್ವದ ತುಂಬ ವ್ಯಾಪಿಸಿದ್ದಾನೆ. ಜೀವ ಮತ್ತು ಜಗತ್ ರಕ್ಷಕ ಕರ್ಮಗಳಲ್ಲಿ ಅವನು ಬಹು ಸ್ಫುಟವಾಗಿ ವಾಸಿಸಿದ್ದಾನೆ. ಆದ್ದರಿಂದ ಕರ್ಮಗಳು ಕೀಳೆಂದು ಭಾವಿಸಬೇಡ. ಅವು ದೇವ ಸ್ಪಂದನೆಗಳು; ದೇವಾನುಗ್ರಹ ಪರಿಗ್ರಾಹಕ ಕ್ರಿಯೆಗಳು! ಅವುಗಳಿಂದಲ್ಲದೆ ಜಗತ್ತು ಬದುಕದು."

**ಸಂಬಂಧ:–** ಪುರುಷಾರ್ಥ ಸಿದ್ಧಿಗಾಗಿಯೇ ದೇವನು ಕರ್ಮಾದಿಗಳ ಚಕ್ರ ಪ್ರಾರಂಭಿಸಿದ್ದಾನೆ. ಅವನ ಅನುಜ್ಞೆಯಂತೆ ಕರ್ಮ ಮಾಡದವ ವ್ಯರ್ಥಜೀವಿ, ಎನ್ನುತ್ತಾನೆ ಶ್ರೀ ಕೃಷ್ಣ.

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥೧೬॥

ಭಾವ:—ಅರ್ಜುನ, ಈ ಪ್ರಕಾರ ಸಾಗಿದ ಜಗಚ್ಚಕ್ರವನ್ನು ಯಾವನು ಇಲ್ಲಿ ಅನುಸರಿಸುವದಿಲ್ಲವೋ ಅವನು ಪಾಪಾಯುಷಿ; ಇಂದ್ರಿಯ ವಿಲಾಸಿ; ಅವನು ವ್ಯರ್ಥವಾಗಿ ಜೀವಿಸುತ್ತಾನೆ.

ವಿವರಣೆ:— ಅಕ್ಷರ ರೂಪ ಪರಮಾತ್ಮ; ಅವನಲ್ಲಿ ಬೆರೆತ ಸಂತರು ವಿಶ್ವೇದೇವರು. ಅವರಿಂದ ವೇದಗಳು. ವೇದಗಳಿಂದ ಸತ್ಕರ್ಮ; ಸತ್ಕರ್ಮಗಳಿಂದ ತ್ಯಾಗ ರೂಪ ಯಜ್ಞ; ಅದರಿಂದ ಜಲ; ಅದರಿಂದ ಅನ್ನ. ಅನ್ನದಿಂದ ಜೀವಿಗಳ ಜೀವನ. ಜೀವರು ಅನ್ನವನ್ನು ದೀನ ದಲಿತರಿಗೆ ನೀಡಬೇಕು. ಈ ದಾನರೂಪಯಜ್ಞ ಕರ್ಮದಿಂದ ವೇದ ದ್ರಷ್ಟಾರನು ತೃಪ್ತ; ಮೂಲನಾದ ಪರಮಾತ್ಮನು ಸಂತುಷ್ಟ! ಇದುವೇ ಸೃಷ್ಟೀಶನ ಧರ್ಮಚಕ್ರ. ಸೃಷ್ಟಿಯ ಕಾಲದಲ್ಲಿ ಈ ಚಕ್ರವನ್ನು ಅವನು ಪ್ರವರ್ತನಗೊಳಿಸಿದ. ಜೀವ ಜಂತುಗಳೆಲ್ಲರಲ್ಲಿ ಅತ್ಯಂತ ಜಾಣನಾದ ಮನುಷ್ಯ ಈ ಚಕ್ರವನ್ನು ಅನುಸರಿಸಿ ಬದುಕಬೇಕು. ಅಂದರೆ ಮಾತ್ರ ಅವನಿಗೆ ಮುಕ್ತಿ ಎಂದು ಪರಮಾತ್ಮನು ಆದೇಶವಿತ್ತ.

ಸ್ವಾಮಿಯ ಅಪ್ಪಣೆಯನ್ನು ಅವಿರೋಧವಾಗಿ ಸ್ವೀಕರಿಸಿ ಕಾರ್ಯ ಮಾಡುವ ಭೃತ್ಯನಂತೆ, ದೇವನ ಆಜ್ಞೆಯನ್ನು ಶಿರಸಾವಹಿಸಿ ಅದರಂತೆ ಆಚರಿಸುವ ಮನುಷ್ಯ ಉತ್ತಮ. ಮಿತ್ರರಂತೆ, ದೇವನ ಆದೇಶಗಳಾದ ವೇದಗಳಲ್ಲಿರುವ ಮಾತುಗಳನ್ನು ವಿಮರ್ಶೆಗೆ ಒಳಪಡಿಸಿ, ಅಯೋಗ್ಯವೆನಿಸಿದ ಸಂಗತಿಗಳನ್ನು ಬಿಟ್ಟು ಯೋಗ್ಯ ಅಭಿಮತಗಳನ್ನು ರೂಢಿಗೊಳಿಸುವವನು ಮಧ್ಯಮನು. ವೇದಗಳಿಗೂ ತನಗೂ ಕಾಂತ-ಕಾಂತಾ ಸಂಬಂಧ ಏರ್ಪಡಿಸಿ ಮನರಂಜನೆಗಾಗಿ ಅಧ್ಯಯನ ಮಾಡುವವನು ಕನಿಷ್ಠನು. ಉತ್ತಮನಿಗೆ ವೇದಗಳ ಪೂರ್ಣ ಲಾಭ; ಅವನು ದೇಹಭಾವ ನೀಗಿ, ಮಾಯಾ ಮಂಡಲ ದಾಟಿ ಆತ್ಮಲೀನನಾಗುತ್ತಾನೆ. ಮಧ್ಯಮನು ಸಾಧನಾ ಮಾರ್ಗದಲ್ಲಿ ಬಹು ದೂರ ಸಾಗುತ್ತಾನೆ. ಕಾಲಾಂತರದಲ್ಲಿ ಮುಕ್ತನಾಗುತ್ತಾನೆ. ಕನಿಷ್ಠನು ಸಾಧನೆ ಮಾಡುವದಿಲ್ಲ; ಆದರೂ ಅವನು ಕಲಿತ ವೇದ ವಿದ್ಯೆ ಒಂದಿಲ್ಲ ಒಂದು ಕಾಲದಲ್ಲಿ ಅವನಿಗೆ ಆತ್ಮ ದರ್ಶನ ಮಾಡಿಕೊಡುವದು.

ಭಗವಂತ:— "ಅರ್ಜುನ, ಯಾರು ಧರ್ಮಚಕ್ರದ ಕ್ರಮ ಮೀರಿ ವರ್ತಿಸುವರೋ, ಸತ್ಕರ್ಮಹೀನರಾದ ಅವರು ದುರ್ದೈವಿಗಳು. ಅವರ ಆಯು ಪಾಪದ್ದು. ಇಂದ್ರಿಯ ಭೋಗವಿಲಾಸದಲ್ಲಿ ರಮಿಸುವ ಆ ಜನ ನಾಸ್ತಿಕರು! ಅವರಿಂದ ಯಾರಿಗೂ ಹಿತವಿಲ್ಲ. ಅರ್ಜುನ, ನಾಸ್ತಿಕನಾಗಬೇಡ. "ಗುರು-ವೇದ ತೋರಿದ ಮಾರ್ಗ ಹಿಡಿ. ಯಥೇಚ್ಛವಾಗಿ ಧರ್ಮ ಆಚರಿಸು. ಅದರಿಂದ ನಿನಗೆ ಆನಂದ ಸಿದ್ಧಿಸುವದು."

ಸಂಬಂಧ:—ಆತ್ಮಲೀನರಾದ ಮಹಾತ್ಮರಿಗೆ ಮಾತ್ರ ಕರ್ಮಗಳು ನಿರುಪ

ಯುಕ್ತ; ವಿಧೀಯಮಾನವಲ್ಲ. ಏಕೆಂದರೆ ಅವರ ಜೀವನವೇ ಧರ್ಮ! ಮುಂದಿನ ಎರಡು ಮಂತ್ರ ಇದನ್ನು ಪ್ರತಿಪಾದಿಸಿವೆ.

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥೧೭॥

ಭಾವ:– ಆದರೆ ಯಾವ ಮನುಷ್ಯನು ಆತ್ಮನಲ್ಲಿ ಪ್ರೀತಿಯುಳ್ಳವನೂ ಆತ್ಮನಲ್ಲಿ ತೃಪ್ತಿಯುಳ್ಳವನೂ ಆತ್ಮನಲ್ಲಿಯೇ ಸಂತುಷ್ಟನೂ ಇರುವನೋ ಅವನಿಗೆ ಕರ್ತವ್ಯವು ಇರುವದಿಲ್ಲ.

ವಿವರಣೆ:– ಶಬ್ದಾದಿ ಗುಣಮಯವಾದ ಜಗತ್ತು ಮಾಯಾಕೃತ. ಅದರ ವಿಸ್ತಾರ ಅಪಾರ. ಪ್ರತಿಕ್ಷಣ ಕೋಟಿ ಕೋಟಿ ಹೊಸ ಹೊಸ ವಸ್ತುಗಳು ಆಕಾರ ರೂಪಗಳು ತೋರಿಬರುತ್ತಿವೆ; ಅಸಂಖ್ಯ ಪದಾರ್ಥಗಳು ಮಾಯವಾಗುತ್ತಿವೆ. ಅವುಗಳನ್ನೆಲ್ಲ ನೋಡುವದಾಗಲಿ, ಕೇಳುವದಾಗಲಿ, ಎಣಿಸುವದಾಗಲಿ, ಮನುಷ್ಯನಿಗೆ ಅಸಾಧ್ಯ. ನೂರಾರು ಬ್ರಹ್ಮರ ಆಯುಷ್ಯ ಪಡೆದು ಶಬ್ದಸ್ಪರ್ಶಾದಿ ಭೋಗಗಳನ್ನು ಭೋಗಿಸಿದರೂ ಭೋಗದ ಮಹಾನ್ ರಾಶಿಯಲ್ಲಿ ಒಂದು ಕಣ ಕೂಡ ತೀರದು. ಲಕ್ಷಾಂತರ ವರುಷಗಳಲ್ಲಿ ನಾವು ಉಣ್ಣುವ ಭೋಗವೆಂದರೆ ಹಿಮಾಲಯ ಪರ್ವತದಿಂದ ಒಂದು ಹಿಡಿಗೆ ಮಣ್ಣು ಹೊತ್ತು ಹಾಕಿದಂತೆ ಅಷ್ಟೇ. ನಿಜವಾಗಿ ನೋಡಿದರೆ:

ಭೋಗಾ ನ ಭುಕ್ತಾ ವಯಮೇವ ಭುಕ್ತಾಃ । ತಪೋ ನ ತಪ್ತಂ ವಯಮೇವ ತಪ್ತಾಃ॥
ಕಾಲೋ ನ ಯಾತೋ ವಯಮೇವ ಯಾತಾಃ ತೃಷ್ಣಾ ನ ಜೀರ್ಣಾ ವಯಮೇವಜೀರ್ಣಾಃ॥

ಭೋಗಗಳನ್ನು ನಾವು ಉಣ್ಣಲಿಲ್ಲ. ನಮ್ಮನ್ನೇ ಅವು ಉಂಡವು. ನಾವು ತಪ ಮಾಡಲಿಲ್ಲ; ತಪವೇ ನಮ್ಮನ್ನು ತಪಿಸಿತು. ಕಾಲವು ಹೋಗಲಿಲ್ಲ; ನಾವೇ ಹೋದೆವು. ಭೋಗಾಸೆ ಅಳಿಯಲಿಲ್ಲ, ನಾವೇ ಜೀರ್ಣರಾದೆವು! (ಭರ್ತೃಹರಿ ವೈ. ಶ. ೧೨). ಈ ಸತ್ಯ ಸಂಗತಿಯನ್ನು ಮರೆತು ಭೋಗಜೀವನಕ್ಕೆ ಮಾರು ಹೋದವನು ಪಾಮರ! ಅವನಿಗೆ ದೇವ ಜೀವರ ಅರಿವಿಲ್ಲ.

" ಜ್ಞಾನದಭ್ಯಾಸವನು ಮಾಡದ। ಮಾನವನೆ ತಿಳಿ ಹೀನ ಕುಲದವ ।
ತಾನೆ ಬ್ರಹ್ಮವದೆಂದು ಕಾಣದ ನರನೆ ಪಾಮರನು ॥
ಸ್ವಾನುಭವವಿಲ್ಲದಿಹ ಮನುಜನು । ತಾನೆ ದನುಜನು ಗುರುಪದಾಬ್ಜ।
ಧ್ಯಾನ ನಿಷ್ಠೆಯು ಭಕ್ತಿಯಿಲ್ಲದ ಮರ್ತ್ಯನವ ವ್ಯರ್ಥ॥"

ಗುರುಪದ ಧ್ಯಾನ ನಿಷ್ಠೆಯಿಲ್ಲದ, ಸತ್ಯ ತತ್ತ್ವದ ತಿಳಿವಿಲ್ಲದ ಇಂದ್ರಿಯಾರಾಮಿಯು ಹೀನ, ದನುಜ; ಅವನ ಆಯು ವ್ಯರ್ಥ. ಸ್ವಾನುಭವ ಸುಜ್ಞಾನವಿಲ್ಲದ ಅವನೇ ಬಲಿದ ಲೌಕಿಕ! ಅವನಿಗೆ ಸ್ರಕ್ಚಂದನಾದಿಗಳಲ್ಲಿ ಪ್ರೀತಿ; ಷಡ್ರಸೋಪೇತ ಮೃಷ್ಟಾನ್ನದಲ್ಲಿ ತೃಪ್ತಿ; ಧನ ಧಾನ್ಯ ದಾರಾ ಪುತ್ರಾದಿಗಳಲ್ಲಿ ಸಂತುಷ್ಟಿ!

ಆತ್ಮಸಾಗರದಲ್ಲಿ ವಿಹರಿಸುವ ಪುರುಷನ ಜೀವನ ಮಾತ್ರ ಬೇರೆ. ವಿಶ್ವಾಂತರ್ಯಾಮಿ ಪರಮ ಪ್ರಭುವಿನ ಚಿದಸ್ತಿತ್ವವನ್ನೇ ಎಲ್ಲೆಲ್ಲೂ ಈಕ್ಷಿಸುವ ಅವನಿಗೆ ನೋಡಬೇಕಾದ. ಕೇಳಬೇಕಾದ, ನೆನೆಸಬೇಕಾದ ವಸ್ತುವೇನೂ ಉಳಿದಿಲ್ಲ. ಅವನು ಕೇವಲ ಆತ್ಮಪ್ರೀತ, ಆತ್ಮತೃಪ್ತ, ಆತ್ಮ ಸಂತುಷ್ಟ! ಅವನ ಸ್ಥಿತಿಯು ಬಣ್ಣನೆ ಇಲ್ಲಿದೆ.

**ಯಸ್ತು ಆತ್ಮರತಿಃ :-** ಸಾಮಾನ್ಯ ಜೀವನು ಒಮ್ಮೆಲೇ ಸತ್ಯದರ್ಶಿಯಾಗಲಾರ. ಹಂತ ಹಂತವಾಗಿ ಸಾಧನೆ ಮಾಡಬೇಕು. ಈ ಹಂತಗಳು ಮೂರು: ೧) ಮುಮುಕ್ಷುತ್ವ ೨) ಅಭ್ಯಾಸ ೩) ಅನುಭವ. ಈ ಮೂರನ್ನು ಸಾಧಿಸಿದ ನಂತರ ಆರೂಢ!

**೧) ಮುಮುಕ್ಷುತ್ವ:-** ವಿವೇಕ ವಿರಾಗಗಳಿಂದ ಕೂಡಿದ ಮುಕ್ತಿ-ಅಭಿಲಾಷೆ. ಪ್ರಾಕೃತಿಕ ಜಗತ್ತು ಅನಿತ್ಯ ಅಸತ್ಯ; ಅಪ್ರಾಕೃತ ಆತ್ಮನು ನಿತ್ಯ ಸತ್ಯ; ಜಗತ್ತಿನ ಭೋಗ ಸುಖ ಕ್ಷಣಿಕ; ಆತ್ಮಾನಂದವು ಅಮರ. ಈ ವಿವೇಚನೆಯು ವಿವೇಕ. ಭೋಗಗಳೆಲ್ಲ ಮಾಯೆಯ ಕೈಮಾಟ; ನಂಜುವೆರಸಿದ ಸವಿಯೂಟ. ಕನಸು. ಬಿಸಿಲ್ಗುದುರೆ, ಕಾಮನಬಿಲ್ಲು, ಸುಳಿಗಾಳಿ ಹಾಗು ಮಿಂಚಿನಂತೆ ಒಂದು ಕ್ಷಣ ಆಕರ್ಷಕವಾಗಿ ತೋರುವ ಇಂದ್ರಿಯ ಭೋಗಗಳ ಪಡೆವಾಗಲೂ ದುಃಖ. ಅಂತ್ಯದಲ್ಲೂ ದುಃಖ, ಮಧ್ಯಂತರದಲ್ಲಿ ಒಂದು ನಿಮಿಷ ಮಾತ್ರ ಸುರುಚಿ! ಇವುಗಳನ್ನು ಉಂಡು ಯಾವ ಮನುಷ್ಯನೂ ಆತ್ಯಂತಿಕಸುಖ ಹೊಂದಿಲ್ಲ. ಸಾಕ್ಷಾತ್ ದೇವಾಧಿದೇವನಾದ ಶಿವನು ಪ್ರಾಪಂಚಿಕ ಭೋಗಗಳ ಭಯಾನಕತೆ ಕಂಡು ಸ್ಮಶಾನ ಸೇರಿದ: ಎಂತಲೇ ಸ್ಮಶಾನದಲ್ಲಿ ಕಾಲಿಟ್ಟ ತಕ್ಷಣ ಭೋಗ ವಸ್ತುಗಳು ಕಳಾಹೀನವಾಗಿ ಕಾಣುತ್ತವೆ. ಆದರೆ, ಆ ಸ್ಮಶಾನ ಭೂಮಿ ಬಿಟ್ಟು ಜನಸ್ಥಲಕ್ಕೆ ಬಂದೊಡನೆಯೇ ಮತ್ತೆ ಮನೆ, ಹೊಲ, ಮಡದಿ ಕಣ್ಣ ಮುಂದೆ ಮಾಯೆಯ ಚಿಗುರಿಗಳಾಗಿ ಮಿಂಚುವವು. ಭೋಗಾಸಕ್ತಿಯು ಪುಟಿದೇಳುವದು. ಮನುಷ್ಯ ಮೋಹಪಂಕದಲ್ಲಿ ಸಿಲುಕಿಕೊಳ್ಳುವ. ಆದುದರಿಂದಲೇ ಅವನಿಗೆ ಶಾಂತಿಯಿಲ್ಲ. ಶಂಕರನಿಗೆ ಶಾಂತಿಯಿದೆ, ಹೀಗೆಲ್ಲ ಚಿಂತಿಸಿ ವಿಷಯಗಳಲ್ಲಿ ನಿರ್ಮೋಹಿತನಾಗುವದೇ ವಿರಾಗ!

"ಭೋಗೇ ರೋಗ ಭಯಂ ಕುಲೇ ಚ್ಯುತಿಭಯಂ ವಿತ್ತೇ ನೃಪಾಲಾದ್ಭಯಮ್॥
ಮೌನೇ ದೈನ್ಯಭಯಂ ಬಲೇ ರಿಪು ಭಯಂ ರೂಪೇ ಜರಾಯಾ ಭಯಮ್॥
ಶಾಸ್ತ್ರೇ ವಾದಭಯಂ ಗುಣೇ ಖಲ ಭಯಂ ಕಾಯೇ ಕೃತಾಂತಾದ್ಭಯಮ್॥
ಸರ್ವಂ ವಸ್ತು ಭಯಾನ್ವಿತಂ ಭುವಿ ನೃಣಾಂ ವೈರಾಗ್ಯಮೇವಾಭಯಮ್॥"

ಭೋಗದಲ್ಲಿ ರೋಗ ಭಯ; ಕುಲದಲ್ಲಿ ಚ್ಯುತಿಯಾಗುವ ಭಯ; ಧನದಲ್ಲಿ ರಾಜಭಯ; ಮೌನದಲ್ಲಿ ದೀನತೆಯ ಭಯ, ಬಲದಲ್ಲಿ ಶತ್ರು ಭಯ; ಸೌಂದರ್ಯದಲ್ಲಿ ವೃದ್ಧಾಪ್ಯದ ಭಯ; ಶಾಸ್ತ್ರಗಳಲ್ಲಿ ವಾದ ಭಯ; ಗುಣಗಳಲ್ಲಿ ದುಷ್ಟರ

ಭಯ; ದೇಹದಲ್ಲಿ ಸಾವಿನ ಭಯ; ಜಗತ್ತಿನ ಸರ್ವ ವಸ್ತುಗಳು ಭಯಾನ್ವಿತ. ಮನುಷ್ಯನಿಗೆ ಒಂದೇ ಒಂದು ಅಭಯರತ್ನವೆಂದರೆ ವೈರಾಗ್ಯ!

ಈ ವೈರಾಗ್ಯ ರತ್ನವನ್ನು ಅಂಜಲಿಗಳಲ್ಲಿ ಹಿಡಿದು ದೇವದಾರ್ಶನಿಕರಾದ ಗುರುಗಳ ಹತ್ತಿರ ಸಾಗಿ, ಅವರ ಪದತಲಗಳಲ್ಲಿ ಅರ್ಪಿಸಿ ಮುಕ್ತಿಗಾಗಿ ಪ್ರಾರ್ಥಿಸುವ ಪುಣ್ಯವಂತನೇ ಮುಮುಕ್ಷು. ಅವನಲ್ಲಿ ವಿಷಯ ರತಿಯಿಲ್ಲ; ಆತ್ಮರತಿ ಉದಿಸಿದೆ,

೨) ಅಭ್ಯಾಸ:- ಹೃದಯ ಪರಿಶೋಧನಾ ಕ್ರಿಯೆ. ಗುರುವಿನ ಪವಿತ್ರ ಸನ್ನಿಧಾನದಲ್ಲಿ ಸಾಧಕನು ತನ್ನಂತರಂಗದ ಕಾಮಾದಿ ಕಲ್ಮಷಗಳನ್ನೆಲ್ಲ ತೊಳೆದು ಪರಮಾತ್ಮನತ್ತ ಯಾತ್ರೆ ಪ್ರಾರಂಭಿಸುತ್ತಾನೆ. ಬಹಿರ್ಮುಖವಾಗಿದ್ದ ಅವನ ಮನಸ್ಸು ಅಂತರ್ಮುಖಿಗೊಳ್ಳುತ್ತದೆ; ಅವನ ಬುದ್ಧಿ ಭಾವಗಳಲ್ಲೆಲ್ಲ ದೇವನ ಪ್ರಕಾಶ ಮೂಡಲು ಪ್ರಾರಂಭಿಸುತ್ತದೆ. ಇಂಥ ಅಭ್ಯಾಸ ಮಾಡುವ ಸಾಧಕನಿಗೆ ಅಭ್ಯಾಸಿ ಎನ್ನುತ್ತಾರೆ. ಇವನೂ ಆತ್ಮರತಿಯುಳ್ಳವ.

೩) ಅನುಭವ:- ಅಭ್ಯಾಸಿಯು ತನ್ನ ವಿಮಲ ಮನದ ಸಹಾಯದಿಂದ ಅನಾತ್ಮ ತತ್ತ್ವಮಂಡಲವನ್ನು ದಾಟಿ ಆತ್ಮರಾಜ್ಯದಲ್ಲಿ ಪ್ರವೇಶಿಸುತ್ತಾನೆ. ಆಗ ಜೀವಭಾವ ಮರೆಯಾಗಿ ಪ್ರತ್ಯಗಾತ್ಮಭಾವ ಸಮನಿಸುತ್ತದೆ. ಜೀವ ಶಿವರು ಅಭಿನ್ನರೆಂಬ ಅನುಭವ ಉಂಟಾಗುತ್ತದೆ. ಈ ಅನುಭವವುಳ್ಳವ ಅನುಭವಿ. ಇವನು ಆತ್ಮತೃಪ್ತ.

೪) ಆರೂಢಾವಸ್ಥೆ:- ಅನುಭವಿಯ ಸಾಮರಸ್ಯ ಪ್ರಜ್ಞೆಕೂಡ ಅಡಗಿ, ಪ್ರತ್ಯಗಾತ್ಮಾಭಿನ್ನ ಪರಬ್ರಹ್ಮ ಚಿದಾಕಾಶದಲ್ಲಿ ಮಹಾ ಮೌನ ತಾಳಿ ನಿಲ್ಲುವ ಅವಸ್ಥೆ. ಇಲ್ಲಿಗೆ ಸಾಧನೆಯ ಪರ್ಯವಸಾನ! ಈ ಅವಸ್ಥೆ ಪಡೆದವನೇ ಆರೂಢ; ನಿರ್ಭಾವ ಸಂತ; ತ್ರಿಪುಟಿ ತೆರೆಯಿಲ್ಲದ ನಿಸ್ತರಂಗ ಮಹಾತ್ಮ! ಅವನು ಆತ್ಮರತ; ಆತ್ಮತೃಪ್ತ; ಆತ್ಮಸಂತುಷ್ಟ! ಇಂಥ ಪಾವನ ಅವಸ್ಥೆಯನ್ನು ಪ್ರವೇಶಿಸಿ ದೇವೋನ್ಮಾದದಲ್ಲಿ ಮಗ್ನಳಾಗಿದ್ದ ಅಕ್ಕಮಹಾದೇವಿ ನುಡಿಯುತ್ತಾಳೆ:

> "ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚಲುವಂಗೆ ಆನೊಲಿದೆನವ್ವಾ; ಎಡೆ ಇಲ್ಲದ, ಕಡೆಯಿಲ್ಲದ, ತೆರಹಿಲ್ಲದ, ಕುರುಹಿಲ್ಲದ, ಚಲುವಂಗಾನೊಲಿದೆ ಎಲೆ ಅವ್ವಾ. ನೀನು ಕೇಳಾ ತಾಯೆ, ಭವವಿಲ್ಲದ, ಭಯವಿಲ್ಲದ, ನಿರ್ಭಯದ ಚಲುವಂಗೆ ಒಲಿದೆ ನಾನು. ಕುಲ, ಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು."

ಮಹಾವೀರ, ಬುದ್ಧ ಮುಂತಾದವರು ಆ ನಿರ್ಭಯಲ ಅವಸ್ಥೆಯಲ್ಲಿ ವಿರಮಿಸಿದ ಮಹಾತ್ಮರು. ಅವರು ಹಿಂದೆ ಬಿಟ್ಟುಹೋದ ರಾಜ್ಯಗಳನ್ನೆಂದಿಗೂ ನೆನೆಸಲಿಲ್ಲ. ಭೋಗ ವೈಭವಗಳನ್ನು ಮತ್ತೆ ಆಶಿಸಲಿಲ್ಲ. ತಮ್ಮ ಜೀವನಾದ್ಯಂತ ಆತ್ಮಾರಾಮರಾಗಿ ಆನಂದಿಸಿದರು.

**ತಸ್ಯ ಕಾರ್ಯಂ ನ ವಿದ್ಯತೇ:–** ಆತ್ಮರತ, ಆತ್ಮತೃಪ್ತ, ಆತ್ಮಸಂತುಷ್ಟನಾದ ಮಹಾತ್ಮನು ಮಾಡಲೇಬೇಕಾದ ಒಂದೂ ಕರ್ತವ್ಯವಿಲ್ಲ. ವಿಧೀಯಮಾನ ಅವಸ್ಥೆಯೇ ಅವನದಲ್ಲ. ಅಂದರೆ ಆತ್ಮಸ್ಥನಾದ ಅವನ ದೇಹ, ಇಂದ್ರಿಯ, ಮನ, ಬುದ್ಧಿಗಳೆಲ್ಲವೂ ದೇವನಿಲಯಗಳು. ಆದುದರಿಂದ ಅವನ ನೋಟ ಪಾವನ, ಮಾತು ವೇದ, ನಡೆ ಧರ್ಮ! ಅನೀತಿ ಅಧರ್ಮ, ಅನಾಚಾರ ಅವನ ಸನಿಹದಲ್ಲೂ ಸುಳಿಯವು.

"ನಿಜವನರಿದ ಯೋಗಿಗಾವ ಕರ್ಮದ ಕಾಟ। ಭಜನೆಯಿಂದಾವ ಪುಣ್ಯದೊಳೊಡಗೂಟ॥ಪ॥ ಕನಸಿನೊಳರಸಿಂಗೆ ಬಡತನವಾಗೆ ತ। ಜ್ಜನಿತ ದುಃಖವನೆಚ್ಚರೊಳು ನೀಗಿದಂತೆ। ತನಗೆ ಸಂಸೃತಿ ಮಾಯಾವಿಕೃತಿಯಿಂ ತೋರೆ ಮ। ತ್ತನುಭವದಿಂದರಿದೊಡೆ ಪುಸಿಯೆಂದು ॥೧॥ ಧರೆ ಮೊದಲಾದಖಿಳಾವರಣಾತೀತ। ಪರಮನೀ ದೇಹಾದಿಗಳಿಗನ್ಯ ಜೀವ। ಎರಡಾಗಿ ತೋರೆ ತದ್ಗತ ಗುಣನೇತಿಯಿಂ। ಪರಿ ಭಾವಿಸಿದೊಡೇಕ ಬೋಧ ರೂಪೆಂದು ॥೨॥ ರವಿಯಂತೆ ಕರ್ಮಸಾಕ್ಷಿಕನಾಗಿ ಬಂಧವಿ। ಲ್ಲ ವಿರಳನಾಗಿ ಬೇರೈದಲಿಂಬಿಲ್ಲ। ಹವಣಿಸಲಿಲ್ಲ ಖಂಡಿತ ಮಾಗಿ ತನಗೆ ಸಂ। ಭವವಿಲ್ಲ ಗುರು ಶಂಭುಲಿಂಗ ತಾನಾಗಿ" ॥೩॥

**ಸಂಬಂಧ:-** ಆತ್ಮಾರಾಮಿಗೆ ಕರ್ಮ ಮಾಡಲೇಬೇಕೆಂಬ ನಿಯಮ ಏಕೆ ಇಲ್ಲ?

> **ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
> **ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥೧೮॥**

**ಅರ್ಥ:-** ಇಹ =ಈ ಲೋಕದಲ್ಲಿ, ತಸ್ಯ= ಅವನಿಗೆ ಕೃತೇನ= ಕರ್ಮಾನುಷ್ಠಾನದಿಂದ ನ ಏವ ಅರ್ಥಃ =ಪ್ರಯೋಜನವೇನೂ ಇಲ್ಲ. ಅಕೃತೇನ= ಕರ್ಮಾಚರಣೆಯಾಗದಿದ್ದರೆ ಕಶ್ಚನ ನ= ಯಾವ ಹಾನಿಯೂ ಇಲ್ಲ. ಸರ್ವಭೂತೇಷು ಚ =ಸರ್ವ ಪ್ರಾಣಿಗಳಲ್ಲಿಯು ಅಸ್ಯ = ಇವನಿಗೆ, ಕಶ್ಚಿತ್ = ಯಾವುದೊಂದೂ, ಅರ್ಥವ್ಯಪಾಶ್ರಯಃ ನ= ಪ್ರಯೋಜನಕ್ಕಾಗಿ ಆಶ್ರಯವಿಲ್ಲ.

**ವಿವರಣೆ:–** ಜ್ಞಾನೀ ಪುರುಷನು ಕೃತಕೃತ್ಯ; ಅವನಲ್ಲಿ ವಿಷಯಾಶೆಯಿಲ್ಲ, ಅಹಂಕಾರವಿಲ್ಲ. ಆದುದರಿಂದ ಕರ್ಮ ಬಂಧನವು ಇಲ್ಲ.

**ನೈವ ತಸ್ಯ ಕೃತೇನಾರ್ಥಃ :–** ಕರ್ಮ ದ್ವಿವಿಧ. ೧) ನಿಷಿದ್ಧ ೨) ವಿಹಿತ. ನಿಷಿದ್ಧ ಏಕ ಪ್ರಕಾರ. ವಿಹಿತ ಪಂಚ ಪ್ರಕಾರ. ಅವುಗಳ ಸಂಕ್ಷಿಪ್ತ ವಿವರಣೆ:

೧) **ನಿಷಿದ್ಧ ಕರ್ಮ:-** ವೇದ, ಆಗಮ, ಸ್ಮೃತಿ, ಗುರುಗಳು ನಿಂದಿಸಿದ, ಸಮಾಜ ಮತ್ತು ಸಂತರು ಮೆಚ್ಚದ ಕರ್ಮ. ಉದಾ: ಮದ್ಯ ಸೇವನೆ, ಮಾಂಸ ಭಕ್ಷಣೆ, ಬ್ರಹ್ಮಹತ್ಯೆ, ಪರಸ್ತ್ರೀ ಗಮನ ಇತ್ಯಾದಿ. ಈ ಕರ್ಮದಿಂದ ವ್ಯಕ್ತಿಗೂ ಹಿತವಿಲ್ಲ; ಸಮಾಜಕ್ಕೂ ಹಿತವಿಲ್ಲ.

೨) **ವಿಹಿತ ಕರ್ಮ:-** ವೇದ ನುತ, ಸಂತಜನಸಮ್ಮತ, ಸಮಾಜ ಪ್ರಶಂಸಿತ, ಸ್ವಪರಹಿತ ಸಾಧಕ ಕರ್ಮ. ಇದರ ಉಪಭೇದಗಳು ಐದು:

ಅ) ನಿತ್ಯ ಕರ್ಮ:- ದೇಹ ಶುದ್ಧಿ, ಮನಶ್ಶುದ್ಧಿ ಹಾಗು ಸ್ಥಾನ ಶುದ್ಧಿಗಾಗಿ ಅಗತ್ಯವಾದ ಆಚರಣೆ. ಉದಾ: ಸ್ನಾನ, ಸಂಧ್ಯಾವಂದನ, ಉದ್ಯಮ, ಅಧ್ಯಯನ, ಅರ್ಚನ, ಸಮ್ಮಾರ್ಜನ ಮುಂ. ನಿತ್ಯದಲ್ಲಿ ಆಚರಿಸಬೇಕಾದ ಈ ಕರ್ಮಗಳು ವಿವಿಧ ಜನಾಂಗಗಳಲ್ಲಿ ಭಿನ್ನ ಭಿನ್ನವಾಗಿವೆ. ಈ ಕರ್ಮದ ಫಲ ಒಳ್ಳೆಯ ಜನ್ಮದ ಪ್ರಾಪ್ತಿ.

ಬ) ನೈಮಿತ್ತಿಕ ಕರ್ಮ:- ದೇಶ, ಕಾಲಗಳಿಗೆ ಸಮುಚಿತವಾದ ಆಚರಣೆ. ಉದಾ: ಯಜ್ಞ, ಶ್ರಾದ್ಧ, ಏಕಾದಶಿ, ಜಾತಕರ್ಮ, ಅತಿಥಿ ಸತ್ಕಾರ, ಉಪವಾಸ ಮುಂ. ಈ ಕರ್ಮದ ಫಲ ಇಹ ಪರ ಸೌಖ್ಯ.

ಕ) ಕಾಮ್ಯ ಕರ್ಮ:- ಭೋಗ ಐಶ್ವರ್ಯ ಅಧಿಕಾರಾದಿಗಳ ಬಯಸಿ ಮಾಡುವ ಕರ್ಮ. ಉದಾ: ಸ್ವರ್ಗಕಾಮೇಷ್ಟಿ, ಪುತ್ರ ಕಾಮೇಷ್ಟಿ, ಆಯುಃ ಕಾಮೇಷ್ಟಿ, ಕನಕ ಕಾಮೇಷ್ಟಿ ಮುಂತಾದವು.

(ಡ) ಪ್ರಾಯಶ್ಚಿತ್ತ ಕರ್ಮ:- ಪಾಪ ಪರಿಹಾರಾರ್ಥವಾದ ಕರ್ಮ. ಎರಡು ಬಗೆ: (೧) ಸಾಧಾರಣ ಪ್ರಾಯಶ್ಚಿತ್ತ:- ಜ್ಞಾತಾಜ್ಞಾತ ಸರ್ವ ಪಾಪ ವಿನಾಶಕ. ಉದಾ: ಈಶ್ವರಾರಾಧನೆ, ಮಂತ್ರಜಪ, ತೀರ್ಥಸ್ನಾನ, ಕ್ಷೇತ್ರದರ್ಶನ ಮುಂ. (೨) ಅಸಾಧಾರಣ ಪ್ರಾಯಶ್ಚಿತ್ತ:- ಜ್ಞಾತಪಾಪ ವಿನಾಶಕ. ಉದಾ: ಸಂನ್ಯಾಸಿಯು ಧನ ಮುಟ್ಟಿದರೆ ಮೂರು ದಿನ ಉಪವಾಸ ಇರಬೇಕು.

(ಇ) ಉಪಾಸನಾ ಕರ್ಮ ( ನಿಷ್ಕಾಮ ಕರ್ಮ ) :- ಪರಪದವೀಯುವ ಹಾಗು ದೇವ ಕರುಣೆಯ ಕೊಡಮಾಡುವ ಕರ್ಮ. ಉದಾ: ಶಾಸ್ತ್ರ ಶ್ರವಣ, ಅಧ್ಯಯನ, ಸಂಯಮನ ಮುಂ. ಇದು ಮುಕ್ತಿಕಾರಕ.

ರಾಗಿಯು ನಿಷಿದ್ಧ ಕರ್ಮ ಬಿಟ್ಟು ಉಳಿದೆಲ್ಲ ಕರ್ಮ ಆಚರಿಸಿದರೆ, ವಿರಾಗಿಯು ನಿಷಿದ್ಧ ಹಾಗು ಕಾಮ್ಯಗಳ ಬಿಟ್ಟು ಉಳಿದೆಲ್ಲ ಕರ್ಮಗಳನಾಚರಿಸುತ್ತಾನೆ.

ತಸ್ಯ:- ಆತ್ಮನ ಅನಂತ ಚೇತನಾಕಾಶ ವಿಹಾರಿಯಾದ ಮಹಾತ್ಮನಿಗೆ ಜಡ ಅಜಡ, ಸ್ವ ಪರ, ಪುಣ್ಯ ಪಾಪ ಇಂಥ ಒಂದೂ ಭೇದ ಕಾಣದು. ಎಲ್ಲವೂ ದೇವ ರೂಪ. ಅವನ ದೃಷ್ಟಿಯಲ್ಲಿ ಜನ್ಮ ಮರಣಗಳೇ ಇಲ್ಲ. ಆದುದರಿಂದ ಅವನಿಗೆ ಶ್ರೇಷ್ಠ ಜನ್ಮಪ್ರದ ನಿತ್ಯಕರ್ಮವಿಲ್ಲ; ತಾನೇ ಅನಂತ ಜೀವರ ಸಾಕ್ಷಿ ಸೂರ್ಯನಾದುದರಿಂದ ಇಹ ಪರ ಭೋಗ ಜನ್ಮಪ್ರದ ನೈಮಿತ್ತಿಕ ಕರ್ಮವಿಲ್ಲ; ನಿಃಕಲಂಕ, ನಿಃಕಾಮನಾದುದರಿಂದ ಕಾಮ್ಯ ಕರ್ಮವಿಲ್ಲ; ನಿರಾಮಯ ನಿರಂಜನ ಮೂರ್ತಿಯಾದುದರಿಂದ ಪಾಪಧ್ವಂಸಕ ಪ್ರಾಯಶ್ಚಿತ್ತ ಕರ್ಮವಿಲ್ಲ; ಸದೈವ ಮುಕ್ತನಾದುದರಿಂದ ಮುಕ್ತಿಪ್ರದ ಉಪಾಸನಾ ಕರ್ಮದ ಅಗತ್ಯವಿಲ್ಲ.

ಮಹಾತ್ಮನ ಬಾಳಿನಲ್ಲೆಲ್ಲ ಆತ್ಮ ಬೆಳಗಿದೆ; ತನ್ನ ನೈಜ ರೂಪು ನಿತ್ಯ ಜ್ಯೋತಿ; ಎಂಬ ಅಮಲ ಅರಿವಿದೆ. ಆತ್ಮನಿಗೆ ಮುಕ್ತಿಯಲ್ಲ. ಮನಸ್ಸಿಗೆ ಮುಕ್ತಿ.

ಮನಸ್ಸಿನ ತಾಣದಲ್ಲಿ ನಿಂತವನಿಗೆ ಕರ್ಮ. ಮಹಾತ್ಮನು ಮನೋ ಮೇರೆ ದಾಟಿ ಆತ್ಮನಲ್ಲಿ ಅವಸ್ಥಾನ ಹೊಂದಿದವ. ಅವನು ನಿತ್ಯ ಮುಕ್ತನಾದುದರಿಂದ ಕರ್ಮದ ಹಂಗಿಲ್ಲ. ಬಾಹ್ಯ ಸಂಸಾರಾದಿಗಳ ಭಾನವಿಲ್ಲ.

**ಅಸ್ಯ ಸರ್ವಭೂತೇಷು ವ್ಯಪಾಶ್ರಯಃ ನ...:–** ವಿಷಯಗಳೇ ಸುಖ ವೆಂದು ತಿಳಿದವ ಅವುಗಳನ್ನು ಆಶ್ರಯಿಸಲು ಬಯಸುತ್ತಾನೆ; ಅವುಗಳ ಪ್ರಾಪ್ತಿ ಗಾಗಿ ಹೆಣಗುತ್ತಾನೆ. ಅನೇಕ ಪ್ರತಿಬಂಧಗಳನ್ನೆದುರಿಸಿ ಗಾಸಿಗೊಳ್ಳುತ್ತಾನೆ. ಉದಾ: ಸೀತಾದೇವಿಯ ಪ್ರಾಪ್ತಿಗಾಗಿ ರಾಮ-ರಾವಣರ ಘೋರ ಯುದ್ಧ ನಡೆ ಯಿತು. ತೃಷ್ಣಪ ಬ್ರಾಹ್ಮಣ ಇಂದ್ರಪದವಿ ಬಯಸಿ ಶತಯಾಗ ಮಾಡುವದನ್ನು ತಿಳಿದ ಇಂದ್ರ ಕ್ರುದ್ಧನಾಗಿ ಅನೇಕ ಪ್ರತಿಬಂಧನೆಗಳ ನಿರ್ಮಿಸಿದ; ಬ್ರಾಹ್ಮಣನನ್ನು ಪತನಗೊಳಿಸಿದ. ಸಂತರಿಗೆ ಭೋಗ ವಿಷಯಗಳಲ್ಲಿ ಲಾಲಸೆಯೇ ಇಲ್ಲ. ಅವರು ಆಶ್ರಯಿಸುವದು ಪರಮಾತ್ಮನನ್ನು ಮಾತ್ರ. ಅಂಥವರಿಗೆ ಜಗತ್ತೆಲ್ಲ ಮಿತ್ರ! ಆತ್ಮರೂಪ !!

ಪ್ರಾಕೃತಿಕ ಭೋಗ ವಿಸ್ತಾರವನ್ನೇ ಬೀಸಾಡಿದ ಸಂತನು ಮೂರು ಲೋಕ ಗಳಿಗೆ ಪೂಜ್ಯ. ಅವನ ಅಲಭ್ಯ ದರ್ಶನಕ್ಕಾಗಿ ದೇವ ದೇವತೆಗಳೇ ಕೈಮುಗಿದು ನಿಲ್ಲುವರೆಂದಾಗ ದಾನವ ಮಾನವರ ಪಾಡೇನು? ಅವನಿಗೆ ಯಾರಿಂದ ಏನಾಗ ಬೇಕಾಗಿದೆ? ವಿಶ್ವವೇ ಅವನೆದುರು ಯಾಚಕ! ಅವನೋರ್ವನೇ ಜಗದಾಣ್ಮ! ನಿರಂಜನ, ನಿರಾಭಾರಿ! ಅವನಿಂದ ವಿಶ್ವಕ್ಕೆ ಮಹತ್ಪ್ರಯೋಜನೆ ಇದೆ; ಅವನಿಗೆ ಮಾತ್ರ ವಿಶ್ವದ ಜನರಿಂದ ಕಿಂಚಿನ್ಮಾತ್ರವೂ ಪ್ರಯೋಜನವಿಲ್ಲ.

**ಸಂಬಂಧ:–**"ಅರ್ಜುನ ಇಂಥ ಜ್ಞಾನಿಗೆ ಮಾತ್ರ ಕರ್ಮದ ನಿಯತಿಯಿಲ್ಲ. ನೀನಿನ್ನೂ ಜ್ಞಾನಿಯಲ್ಲ; ಕರ್ಮ ಮಾಡು!" ಈ ಆದೇಶ ಮುಂದಿನ ಮಂತ್ರದಲ್ಲಿದೆ.

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥೧೯॥**

**ಭಾವ:–** ಆದ್ದರಿಂದ, ಫಲಾಸಕ್ತಿ ಇಲ್ಲದೆ, ಯಾವಾಗಲು ಕರ್ಮಗಳನ್ನು ಆಚರಿಸು. ಏಕೆಂದರೆ, ಅನಾಸಕ್ತನಾದ ಪುರುಷನು ಕರ್ಮವನ್ನು ಆಚರಿಸುತ್ತ ಮೋಕ್ಷವನ್ನು ಹೊಂದುತ್ತಾನೆ.

**ವಿವರಣೆ:– ಭಗವಂತ:-** "ಧನಂಜಯ, ದೇವನಲ್ಲಿ ಸಾಮರಸ್ಯ ಹೊಂದಿದ ಮಹಾಂತರಿಗೆ ಪುಣ್ಯ, ಪಾಪ ಕರ್ಮಗಳ ಲೇಪವಿಲ್ಲ. ನೀನು ಆ ಪಾವನ ಅವಸ್ಥೆ ಯನ್ನು ಇನ್ನೂ ತಲುಪಿಲ್ಲ. ನಿನಗೆ ಜಗತ್ತಿನ ಭಾನ ಇದೆ; ಬೇಕು ಬೇಡೆಂಬ ಬುದ್ಧಿ ಇದೆ. ನಿನ್ನ ಮನಸ್ಸು ಪರಿಶುದ್ಧವಲ್ಲ. ಆದುದರಿಂದ ಕರ್ಮ ತ್ಯಜಿಸುವ ಅಧಿಕಾರ ನಿನಗಿಲ್ಲ.

" ಇಂದ್ರಿಯ ವಿಲಾಸಿಯಾಗದಿರು. ಸಂತತ ಸತ್ಕರ್ಮಗಳನ್ನು ಎಸಗು. ಹೇಗೆ ? ಅಹಂಕಾರವಿಲ್ಲದೆ; ಫಲದ ಆಸಕ್ತಿ ಇಲ್ಲದೆ ! ನಿನಗಾಗಿ ಏನನ್ನೂ ಬೇಡ

ಬೇಡ. ಯಾವುದರ ಬಗ್ಗೆಯೂ ಅಭಿನಿವೇಶ ತಾಳಬೇಡ. ಪರಮಾತ್ಮನ ಜಗವಿದು; ಎಲ್ಲ ಅವನ ಸಿರಿ-ಸಂಪದ. ನೀನು ಅವನ ದಾಸ. ಅವನ ಆಜ್ಞೆ ಎಂದು, ಅವನಿಗಾಗಿಯೇ ದುಡಿ; ನಿನ್ನ ಕರ್ತೃತ್ವ ಭಾವವನ್ನು ಕರ್ಮದ ಅಭಿಮಾನವನ್ನು ಅವನಡಿಗೆ ನೀಡು. ಈ ರೀತಿ ನಿರಭಿಮಾನಿಯಾಗಿ ನಿರಾಸಕ್ತನಾಗಿ ಕರ್ಮ ಮಾಡಿದರೆ ಪುರುಷನು ಮುಕ್ತಿ ಹೊಂದುತ್ತಾನೆ. "

ಸಂಬಂಧ:- ಭಗವಂತನು ತನ್ನ ಮಾತಿಗೆ ಪ್ರಮಾಣಗಳನೀಯುತ್ತಾನೆ.

ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।
ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥೨೦॥

ಭಾವ:— ಜನಕ ಮೊದಲಾದವರು ಕರ್ಮಾಚರಣೆಯಿಂದಲೇ ಪರಮ ಸಿದ್ಧಿಯನ್ನು (ಮುಕ್ತಿಯನ್ನು) ಪಡೆದರು. ಲೋಕ ಸಂಗ್ರಹದ ದೃಷ್ಟಿ ಇಟ್ಟಾದರೂ ಈ ರೀತಿ ಕರ್ಮ ಮಾಡಲು ನೀನು ಅರ್ಹನು.

ವಿವರಣೆ:- ಆಕಾಶದಿಂದ ಇಳಿದು ಬರುವ ಜಲ ಸ್ವಚ್ಛ ಶೀತಲ. ಆದರೆ ಬೇರೆ ಬೇರೆ ಭೂ ಗುಣಧರ್ಮಗಳ ಸಂಪರ್ಕದಲ್ಲಿ ಬಂದಾಗ ಅದು ಸಿಹಿ, ಸವಳು, ಕೆಂಪು, ಕಪ್ಪು ಮುಂತಾದ ಗುಣ ಪಡೆಯುತ್ತದೆ. ಹಾಗೆ, ಮೂಲತಃ ಕರ್ಮವು ಪವಿತ್ರ; ಆದರೆ ವಿವಿಧ ಕರ್ತೃಗಳ ವಿಭಿನ್ನ ಭಾವ ಭೂಮಿಯಲ್ಲಿ ಹರಿದು ಬರುವಾಗ ಅದು ಸುಕರ್ಮ, ದುಷ್ಕರ್ಮ, ಬಾಧಕ ಕರ್ಮ, ವಿಮೋಚಕ ಕರ್ಮ ಹೀಗೆ ಅನೇಕ ರೂಪ ತಾಳುತ್ತದೆ. ಅನಾಸಕ್ತ ಹೃದಯದ ಮನುಷ್ಯನ ಕರ್ಮಗಳು ನಿಷ್ಕಲ್ಮಷ. ಆಸಕ್ತ ಹೃದಯದವನ ಕರ್ಮಗಳು ಸದೋಷ ! ಕರ್ಮ ಮಾಡಿದ ಮಾನವರು ಭವಬಂಧನಕ್ಕೆ ಸಿಲುಕಿದ್ದಾರೆ. ನಿರ್ದೋಷ ಕರ್ಮ ಮಾಡಿದ ಮಹಾತ್ಮರು ಮಾತ್ರ ವಿಮುಕ್ತರಾದರು. ಅಂಥವರು ಯಾರು ಯಾರು ?

ಜನಕಾದಯಃ ಕರ್ಮಣೈವ ಹಿ ಸಂಸಿದ್ಧಿಂ ಆಸ್ಥಿತಾಃ- ಜನಕ, ಅಜಾತಶತ್ರು ಮುಂತಾದ ರಾಜರು ಸಾಮ್ರಾಟರು; ಅಧಿಕಾರ ಗಾದಿಯ ಮೇಲೆ ಕುಳಿತು ಸುಖಭೋಗಗಳ ಮಧ್ಯ ಪವಡಿಸಿ ಆಳಿದ ಅಧಿಪರು. ಅವರು ಗೈದ ಜನಹಿತ ಕರ್ಮಗಳಿಗೆ ಲೆಕ್ಕವಿಲ್ಲ. ಆದರೆ ಒಂದು ಕರ್ಮಕ್ಕೂ ಅಂಟಿಕೊಳ್ಳಲಿಲ್ಲ; ಒಂದರಲ್ಲೂ ಅಭಿನಿವೇಶ ತಾಳಲಿಲ್ಲ. ವಿಶ್ವವೇ ಪರಮಾತ್ಮನ ನಿವಾಸ; ಜಡ ಜಗತ್ತು, ಜೀವ ಜನಾಂಗವೆಲ್ಲ ಅವನ ಸಾಕಾರ ರೂಪ; ಕರ್ತೃ ಕರಣ ಕಾರ್ಯಗಳು ಅವನಿಗೆ ಅಭಿನ್ನ: ಎಂಬ ಭಾವದಿಂದವರು ಬಾಳಿದರು. ಆದುದರಿಂದ ಅವರ ಮಾನಸಿಕ ಸ್ಥಿತಪ್ರಜ್ಞೆಗೆ ಭಂಗ ಬರಲಿಲ್ಲ.

ತಮ್ಮ ತಾವರಿತ ಸುಜ್ಞರಿಗೆ ವಾಸ್ತವಿಕವಾಗಿ ಕರ್ಮದ ಗೊಡವೆಯೇ ಇಲ್ಲ. ಆದರೂ ಅವರು ಕರ್ಮಶೀಲರು. ಸ್ವಾರ್ಥ ಸಾಧನೆಗಾಗಿ ಅಲ್ಲ, ಲೋಕ ಸಂಗ್ರಹಕ್ಕಾಗಿ! ಅವರ ಜೀವನ ದೇವ ಸೇವಾರ್ಪಿತ ! ಅವರ ದೇಹ ಮನಸ್ಸುಗಳು ದೇವ

ನಿಗಾಗಿ ಕಾರ್ಯ ಮಾಡುತ್ತಾರೆ. ಅವರ ದೃಷ್ಟಿಯಲ್ಲಿ ಸಮಾಜ ಸೇವೆ ಅಷ್ಟೇನು ಮುಖ್ಯವಲ್ಲದಿದ್ದರೂ, ದೇವ ಸೇವಕರಾದ ಅವರಿಂದ ಸಹಜವಾಗಿಯೇ ಸಮಾಜ ಸೇವೆ ನಡೆಯುವದು. ಸಮಾಜ ಸೇವೆಯನ್ನೇ ಪ್ರಧಾನ ಗುರಿಯನ್ನಾಗಿ ಮಾಡಿ ಕೊಂಡ ಜನರು ಮಾತ್ರ ಅಹಂಭಾವಿಗಳು; ಮಮಕಾರ ಪೀಡಿತರು; ಅವರಲ್ಲಿ ಸ್ಪೃಹೆ ಇದೆ.

ಜನಾರ್ದನ ಸೇವೆಗೂ ಜನತಾ ಸೇವೆಗೂ ಧೂಮ ಅಗ್ನಿಗಳ ಸಂಬಂಧ. ಧೂಮವಿರುವಲ್ಲಿ ಅಗ್ನಿ ಇದೆ; ಅಗ್ನಿ ಇರುವಲ್ಲೆಲ್ಲ ಧೂಮವಿಲ್ಲ. ಹಾಗೆ ಜನಾರ್ದನನ ಸೇವೆ ಮಾಡುವವರಿಂದ ಜನತಾ ಸೇವೆ ವಿವಿಧ ರೂಪದಲ್ಲಿ ಘಟಿಸಿಯೇ ತೀರುವದು; ಆದರೆ ಸಮಾಜ ಸೇವಕರಿಂದ ಜನಾರ್ದನನ ಸೇವೆ ಆಗಿಯೇ ಆಗುವದೆಂದು ಹೇಳಲಾಗದು. ಉದಾ: ಮಹಾತ್ಮಾ ಗಾಂಧಿ, ವಿನೋಬಾ ಭಾವೆ ಜನಾರ್ದನ ಸೇವಕರು. ತಮ್ಮ ಬಾಳನ್ನು ದೇವನಿಗಾಗಿ ಅರ್ಪಿಸಿದ ಸತ್ಪುರುಷರು. ಅವರಿಂದ ಎಂದೆಂದಿಗೂ ಮರೆಯಾಗದಂಥ ಲೋಕ ಸೇವೆ ಘಟಿಸಿತು. ಅವರನ್ನು ಅನುಕರಿಸಿ ಸಾವಿರಾರು ಜನರು ಸಮಾಜ ಸೇವೆಗೆ ನಿಂತರು; ಮಡದಿ ಮಕ್ಕಳ ತೊರೆದು ದೇಶಕ್ಕಾಗಿ ಪ್ರಾಣ ನೀಗಲೂ ಸಿದ್ಧರಾದರು. ಇದು ಸ್ವಾತಂತ್ರ್ಯ ಪೂರ್ವದ ಮಾತು. ಸ್ವಾತಂತ್ರ್ಯ ನಂತರ ಅದೇ ಸೇವಕರ ಕೈಯಲ್ಲಿ ರಾಜ್ಯ ಸೂತ್ರಗಳು ಬಂದವು. ಅಲ್ಲಿಯವರೆಗೆ ಸುಪ್ತವಿದ್ದ ಅಹಂಕಾರ ಮಮಕಾರ ಆಶೆಗಳು ಭುಗಿಲ್ಲೆಂದು ಎದ್ದವು; ಭ್ರಷ್ಟಾಚಾರ, ಲಂಚಗುಳಿತನ, ಸ್ವಜನ ಹಿತಸಾಧನೆಗಳಂಥ ಹೀನ ಕೃತಿಗಳಿಗವರು ಇಳಿದರು! ನಾನು ನನ್ನದು ಎಂಬೆರಡು ಕಾಯಿಗಳನ್ನು ಪ್ರಭು ಚರಣಗಳಲ್ಲಿ ಸಮರ್ಪಿಸಿ, ಸ್ವಾರ್ಥ ಹಾಗು ಆಶೆಗಳನ್ನು ಸಮೂಲಾಗ್ರ ಕಿತ್ತುಹಾಕಿ ವಿಶ್ವವೆಲ್ಲ ಮೂರ್ತ ದೇವನೆಂಬ ಅರಿವ ಪಡೆದು ಜ್ಞಾನಿಗಳಾದ ಮಹಾಂತರ ಲೋಕ ಸೇವೆಯ ರೀತಿ ಜಗತ್ತಿನ ನೇತಾರರಿಗೊಂದು ಅಪೂರ್ವ ಆದರ್ಶ! ಹನ್ನೆರಡನೆಯ ಶತಮಾನದ ಮಹಾನ್ ದೃಷ್ಟಾರನಾದ ಬಸವಣ್ಣನ ಜೀವನವೂ ಅಂಥದೇ.

"ನಾನು ಆರಂಭ ಮಾಡುವೆನಯ್ಯಾ ಗುರು ಪೂಜೆಗೆಂದು. ನಾನು ಬೆವಹಾರ ಮಾಡುವೆನಯ್ಯಾ ಲಿಂಗಾರ್ಚನೆಗೆಂದು. ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು. ನಾನಾವ ಕರ್ಮಂಗಳ ಮಾಡಿದರೆಯೂ ಆ ಕರ್ಮ ಫಲಭೋಗವ ನೀ ಕೊಡುವೆಯೆಂಬುದ ನಾ ಬಲ್ಲೆ. ನೀ ಕೊಟ್ಟ ದ್ರವ್ಯ ನಿಮಗಲ್ಲದೆ ಮತ್ತೊಂದ ಕ್ರಿಯೆ ಮಾಡೆನು. ನಿಮ್ಮ ಸೊಮ್ಮಿಂಗೆ ಸಲಿಸುವೆನು. ನಿಮ್ಮಾಣೆ ಕೂಡಲ ಸಂಗಮ ದೇವ!"

ಮನುಷ್ಯನು ಮೇಘದಿಂದೊಂದು ಜಲಬಿಂದು ಬೀಳುವಂತೆ ಭೂಮಿಗೆ ಬೀಳಲಿಲ್ಲ. ಅವನ ಹುಟ್ಟಿಗೆ ಉದ್ದೇಶ ಇದೆ– ದೇವದರ್ಶನ, ದೇವಸಾಮರಸ್ಯ! ಆ ಉದ್ದೇಶ ಮರೆತು ಸಿರಿವಂತನೋ ಕೀರ್ತಿವಂತನೋ ಪಂಡಿತನೋ ಅಧಿಕಾರಿಯೋ ಆಗಿ ಅದೆಷ್ಟು ಮೆರೆದರೂ ಅದು ನಿರರ್ಥಕ. ಹೊಳೆಯಲ್ಲಿ ಹುಣಸೆ ತೊಳೆದಂತೆ!

ನದಿಗಳು ಪೂರ್ವ ಪಶ್ಚಿಮ ದಕ್ಷಿಣ ಉತ್ತರ ಹೀಗೆ ಯಾವ ಮುಖವಾಗಿಯೇ ಹರಿಯಲಿ. ಮಹಾಸಾಗರ ಸೇರುವದೇ ಅವುಗಳ ಗುರಿ. ಹಾಗೆ ಜ್ಞಾನಿಗಳ ಕರ್ಮ ಪ್ರವಾಹಗಳು ಯಾವರೀತಿ ಹರಿದರೂ ದೇವ ಸಾಗರದಲ್ಲಿ ಒಂದಾಗುತ್ತವೆ. "ಸರ್ವಾಣಿ ಕರ್ಮಾಣಿ ಜ್ಞಾನೇ ಪರಿಸಮಾಪ್ಯಂತೇ"! ಜನಕ ಮುಂತಾದ ಮಹಾ ಕ್ಷತ್ರಿಯರ ಕರ್ಮಗಳು ಪರಮಾತ್ಮ ಮುಖವಾಗಿ ಸಾಗಿದುದರಿಂದ ಅವರು 'ಸಂಸಿದ್ಧಿಂ ಆಸ್ಥಿತಾಃ' ಪರಿಪೂರ್ಣತೆ ಹೊಂದಿದರು. ಆದ್ದರಿಂದ ಕರ್ಮವು ಹೀನ ವಲ್ಲ; ವಿಶ್ವಾತ್ಮನ ದಿವ್ಯ ಪ್ರಜ್ಞೆಯನ್ನು ಜಾಗ್ರುತಗೊಳಿಸುವ ಮಹತ್ಸಾಧನೆ !

ಭಗವಂತ:- " ಲೋಕ ಸಂಗ್ರಹಮೇವಾಪಿ ಸಂಪಶ್ಯನ್... ಅರ್ಜುನ, ನಿನ್ನನ್ನು ನೀನು ಆತ್ಮ ಸಂತುಷ್ಟಜ್ಞಾನಿ ಎಂದು ಭಾವಿಸಿದೆಯಾದರೂ ನೀನು ಕರ್ಮ ಮಾಡಲೇ ಬೇಕು. ನಿನಗಾಗಿ ಅಲ್ಲ ಜನತೆಗಾಗಿ, ಲೋಕ ಹಿತಕ್ಕಾಗಿ. ನಿನ್ನಂಥವರಿಂದಲ್ಲದೆ ಸಮಾಜ ಕಲ್ಯಾಣ ಇನ್ನಾರಿಂದ ಸಾಧ್ಯ ? ಜ್ಞಾನಿಯ ಜೀವ ನ್ಮುಕ್ತ ಬದುಕು ಲೋಕ ಸಂಗ್ರಹಕ್ಕಾಗಿ ಎಂಬುದನ್ನು ಮರೆಯಬೇಡ. "

ಧನ ಧಾನ್ಯಾದಿ ಜಡ ವಸ್ತುಗಳನ್ನು ಸಂಗ್ರಹಿಸುವದು ಬಲು ಹಗುರು. ದುಡಿತ, ಕಳವು, ಭಿಕ್ಷೆಗಳಿಂದ ಅದು ಸಾಧ್ಯ. ಆದರೆ ಹತ್ತು ಹಲವು ಬಗೆಯ ಜನರನ್ನು ಸಂಗ್ರಹಿಸುವದು ಕಷ್ಟ; ಅವರ ಮನಸ್ಸನ್ನು ಗೆಲ್ಲುವದು ಸಾಮಾನ್ಯ ವ್ಯಕ್ತಿಗೆ ಆಗದ ಮಾತು. ಅಹಂ ಮಮಗಳಿಲ್ಲದ ನಿರಪೇಕ್ಷ ದೇವಪುರು ಷನೇ ಆ ಕಾರ್ಯಕ್ಕೆ ಸಮರ್ಥ. ಅವನು ವಿಶ್ವದ ಜೀವ ಜಂತುಗಳ ಮೇಲೆ ಆತ್ಮ ಪ್ರೇಮವರ್ಷಾವ ಮಾಡುತ್ತಾನೆ; ಅವರ ಅಂತಃಕರಣದಲ್ಲಿ ಸ್ನೇಹಾನುರಾಗ ಉದಿ ಸುವಂತೆ ಪ್ರೇರಿಸುತ್ತಾನೆ; ತನ್ನ ದೇಹೇಂದ್ರಿಯಗಳನ್ನು ಅವರ ಸೇವೆಗಾಗಿ ತರ್ಪಣ ಮಾಡುತ್ತಾನೆ. ಆಗ ಜನ ಯಾವ ಭೇದಭಾವವಿಲ್ಲದೆ ಅವರತ್ತ ಸಾಗಿ ಬರುತ್ತದೆ. ಅದು ಲೋಕ ಸಂಗ್ರಹ.

ಶಾಸ್ತ್ರೀಯ ಶಬ್ದಗಳಲ್ಲಿ ಹೇಳುವದಾದರೆ, "ದುರ್ಮಾರ್ಗ ಪ್ರವೃತ್ತಿ ನಿರಾ ಕರಣಮೇವ ಲೋಕ ಸಂಗ್ರಹಮ್" ಜನತೆಯ ದುರ್ಮಾರ್ಗ ಪ್ರವೃತ್ತಿಯನ್ನು ನಿವಾರಿಸುವದು ಲೋಕ ಸಂಗ್ರಹ. ಸಾಮಾನ್ಯವಾಗಿ ಜನತೆ ದುಷ್ಟ ಮಾರ್ಗದಲ್ಲಿ ಸಾಗುತ್ತಿದೆ. ಕೊಲೆ ಸುಲಿಗೆ ಕಳವು ಪರಸ್ತ್ರೀಗಮನ ಹಿಂಸೆಗಳು ಶಾರೀರಿಕ ದುಷ್ಕರ್ಮ. ಅಸತ್ಯಭಾಷಣ ಅನುಚಿತನುಡಿ ನಿಷ್ಠುರ ಮಾತು ವಾಚಿಕ ದುಷ್ಕರ್ಮ. ಅನಿಷ್ಟ ಚಿಂತನೆ, ಅನ್ಯಧನಾಕಾಂಕ್ಷೆ, ಪರ ಸ್ತ್ರೀ ವ್ಯಾಮೋಹ ಮಾನಸಿಕ ದುಷ್ಕರ್ಮ. ಈ ಮೂರು ದುಷ್ಕರ್ಮಗಳಲ್ಲಿ ಜನರಿಗೆ ಅತ್ಯಂತ ಪ್ರೀತಿ. ಕೆಡಕು ಮಾಡುವ ದೆಂದರೆ ಅವರಿಗೊಂದು ಸಂತಸದ ಕ್ರೀಡೆ. ಇಷ್ಟರ ಮೇಲೆ, ಇಂದ್ರಿಯಕ್ಕೊಂದು ಚಟ. ಅಸಂಸ್ಕೃತರು ಇಲ್ಲವೆ ಸುಸಂಸ್ಕೃತರು ಯಾರೂ ಚಟದ ದವಡೆಯಿಂದ ಪಾರಾಗಿಲ್ಲ. ಹೀಗೆ ಹೀನಾಯ ಮಾನವಾದ ರೀತಿಯಲ್ಲಿ ಜನರ ಬಾಹ್ಯಾಂತರ

ಶಕ್ತಿಗಳು ಹಾಳಾಗುತ್ತಿವೆ. ಈ ಅಪವ್ಯಯ ನಿಲ್ಲಿಸಿ, ಜನರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರಿಸುವದಕ್ಕೆ ಲೋಕ ಸಂಗ್ರಹವೆಂದು ನಾಮ.

ಲೋಕ ಸಂಗ್ರಾಹಕ ವ್ಯಕ್ತಿ ಎಲ್ಲ ರೀತಿಯಿಂದ ಶುದ್ಧನಾಗಿರುವದು ಅವಶ್ಯ: ಏಕೆಂದರೆ, ಕ್ರಿಯಾಹೀನ ಹಾಗು ಆಚಾರಹೀನ ಮಾತು ಎಷ್ಟೇ ಪ್ರಭಾವ ಪೂರ್ಣವಾಗಿದ್ದರೂ ಅದು ನಿಶ್ಶಕ್ತ, ನಿರುಪಯುಕ್ತ. ಬಾಯಲ್ಲಿ ಸಿಗಾರೇಟ ಹಿಡಿದು "ಸೇದ ಬೇಡಿ; ಅದರಿಂದ ಆರೋಗ್ಯ ನಾಶ" ಎಂದು ಹೇಳಿದರೆ ಕೇಳುಗರ ಮೇಲೆ ಹೇಗೆ ಪರಿಣಾಮವಾದೀತು? ಸೆರೆಯ ಅಮಲಿನಲ್ಲಿಯೇ "ಸೆರೆ ರಾಷ್ಟ್ರ ಘಾತುಕ; ಕುಡಿಯ ಬೇಡಿ;" ಎಂದು ಉಪದೇಶ ನೀಡಿದರೆ ಯಾರು ಕೇಳುವವರು?. ಗಾಂಧೀಜಿಯವರ ಇಚ್ಛೆಗನುಸರಿಸಿ ಬಂದ ಪಾನಪ್ರತಿಬಂಧಕಾಜ್ಞೆ ಮುರಿದು ಬಿದ್ದುದೇ ಇದಕ್ಕೆ ನಿದರ್ಶನ.

" ಪರೋಪದೇಶ ಪಾಂಡಿತ್ಯಂ" ನಿಷ್ಪ್ರಯೋಜಕ. " ಅನುಭವವಿಲ್ಲದ ಜ್ಞಾನ ಶ್ವಾನ ವಮನ " ಆಚರಣೆಯಲ್ಲಿ ಬಾರದ ಜ್ಞಾನ ಶ್ವಾನದ ವಮನ; (ದಾಸ ಬೋಧ). ಮೊದಲು ತಾನು ಮಾಡಬೇಕು; ನಂತರ ಮತ್ತೊಬ್ಬರಿಗೆ ಹೇಳಬೇಕು. ಅದೇ ಸುಧಾರಣೆಯ ಸರಿಯಾದ ಮಾರ್ಗ. ಮಕ್ಕಳು ಒಳ್ಳೆಯವರಾಗಲೆಂದು ಬಯಸುವ ತಾಯಿ ತಂದೆಗಳು ಮೊದಲು ತಾವು ಒಳ್ಳೆಯವರಾಗಬೇಕು. ದುರ್ದೈವದಿಂದ, ತಾವು ಯಥೇಚ್ಛವಾಗಿ ತಿಂದು, ತೇಗಿ, ನಿದ್ರಿಸಿ, ವ್ಯವಹರಿಸಿ ಮಕ್ಕಳಿಗೆ ಮಿತಾಹಾರ, ಮಿತನಿದ್ರಾ, ಮಿತ ವ್ಯವಹಾರದ ಉಪದೇಶ ಮಾಡುವ ಪಾಲಕರೇ ಬಹಳ. ತಮ್ಮನ್ನು ತಾವು ಪರೀಕ್ಷಿಸುವ, ಶುದ್ಧೀಕರಿಸುವ ವ್ಯಕ್ತಿಗಳು ಸಿಗುವದು ದುರ್ಲಭ. ತಮ್ಮ ತಾಟಿನಲ್ಲಿ ಕತ್ತೆ ಸತ್ತು ಬಿದ್ದಿರುವಾಗ ಮುಂದಿಯ ತಾಟಿನಲ್ಲಿಯ ನೊಣ ಹೊಡೆಯುವ ಹವ್ಯಾಸ, ಹುಚ್ಚು ಮನುಷ್ಯನಲ್ಲಿದೆ. ಅಹಂಕಾರಿ, ಆತ್ಮ ಪ್ರಶಂಸಕ, ಕಠೋರ ಭಾಷಣ ಕರ್ತ, ಚಿಂತಾಮಗ್ನ ಭೋಗಲೋಲ, ಛಲವಾದಿ, ಪರನಿಂದಕ, ದ್ವೇಷಿ, ಸಹನಶೀಲರಹಿತರಿಂದ ಲೋಕ ಸಂಗ್ರಹವಾದೀತೆಂದು ತಿಳಿಯುವದು ಮರುಳತನ.

ಹೃದಯದಲ್ಲಿ ವಿಶ್ವಪ್ರೇಮ, ಬುದ್ಧಿಯಲ್ಲಿ ಆತ್ಮನ ಅರಿವು, ಮಾತಿನಲ್ಲಿ ನಯ, ವಿನಯ, ಕ್ಷಮೆ, ನೋಟದಲ್ಲಿ ಕಾರುಣ್ಯ, ದೇಹದಲ್ಲಿ ಪಾವಿತ್ರ್ಯಗಳನ್ನು ಪ್ರತಿಷ್ಠಿತಗೊಳಿಸಿದ ಮಹಾಂತರು ಮಾತ್ರ ಲೋಕ ಸಂಗ್ರಹ ಮಾಡಬಲ್ಲರು. ಅವರ ಮಾತು ಎಲ್ಲರಿಗೂ ಹೃದ್ಯ; ಅವರಿಂದ ದುಷ್ಕರ್ಮ ಪ್ರವೃತ್ತಿ ಅಳಿಯುವದು.

ಭಗವಂತನ ಈ ಮಂತ್ರದಿಂದ ರಾಷ್ಟ್ರ ಧುರೀಣರು ಪಾಠ ಕಲಿಯಬೇಕು. ಜನರನ್ನು ಶೋಷಿಸುವ, ತನ್ನವರಿಗಾಗಿ ರಾಷ್ಟ್ರವನ್ನೇ ಬಲಿಕೊಡುವ ವಂಚನಾ ವೃತ್ತಿಯನ್ನು ಬಿಟ್ಟುಕೊಡಬೇಕು. ಯಕ್ಷನಾದ ಕುಬೇರ ಕೈ ಬಾಯಿ ಮನಗಳಿಂದ

ಶುದ್ಧ; ಎಂತಲೇ ದೇವತೆಗಳ ಖಜಾಂಚಿಯಾದ. ಅವನ ಸ್ಥಾನಕ್ಕೆ ಇಂದಿಗೂ ಭಂಗ ಬಂದಿಲ್ಲ. ಹಾಗೆ ನಾಡ ನೇತಾರರು ಸ್ವಾರ್ಥ ತ್ಯಾಗಮಾಡಿ ವಿಮಲ ವ್ಯಕ್ತಿಗಳಾಗಿ ನಿಲ್ಲಬೇಕು. ಜನಾರ್ದನನ ವಿಶ್ವವಿರಾಟ ದರ್ಶನ ಹೊಂದಿ ವಿಶ್ವ ಮಾನವ ಪ್ರೇಮವನ್ನು ಅಂಗವಿಸಿಕೊಳ್ಳಬೇಕು. ಆದರಿಂದ ಲೋಕ ಸಂಗ್ರಹ! ದೇವ ಸೇವೆ!

**ಸಂಬಂಧ:**– ಭಗವಂತನ ಈ ಉಪದೇಶ ಮುಂದುವರೆದಿದೆ.

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಾಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥೨೧॥**

**ಭಾವ:**- ಬಲ್ಲವನು ಯಾವುದನ್ನು ಆಚರಿಸುತ್ತಾನೆಯೋ, ಅದನ್ನೇ ಇತರರು (ಆಚರಿಸುತ್ತಾರೆ). ಆ ಬಲ್ಲಿದನು ಯಾವುದನ್ನು ಪ್ರಮಾಣವಾಗಿ ಮಾಡುತ್ತಾನೆಯೋ, ಅದನ್ನು ಜನವೂ ಅನುಸರಿಸುತ್ತದೆ.

**ವಿವರಣೆ:–ಶ್ರೇಷ್ಠಃ :**- ನಿತ್ಯಸತ್ಯವಾದ ಆತ್ಮನು ಪರಿಪೂರ್ಣ, ನಿರಂಜನ, ನಿಷ್ಕಲಂಕ, ನಿರ್ವಿಕಾರ. ವಿಶ್ವ ಅಳಿದರೂ ಅವನಿಗೆ ಕೊನೆಯಿಲ್ಲ. ಅವನ ಅಪಾರ ವ್ಯಾಪ್ತಿಯಲ್ಲಿ ವಿಶ್ವ ಯತ್‌ಕಿಂಚಿತ್ ! ಆದುದರಿಂದ ಆತ್ಮನು ಸರ್ವಶ್ರೇಷ್ಠ ಅಮರ ತತ್ತ್ವ ! ವಿಶ್ವದ ವ್ಯಾಮೋಹ ಪರೆ ಹರಿದು ಆತ್ಮನನ್ನು ಕಂಡು, ಅವನಲ್ಲಿ ಸಮರಸನಾದವನು ಶ್ರೇಷ್ಠನು. ಅವನು ಸುಜ್ಞಾನಿ, ದಿವ್ಯಾನುಭಾವಿ. ಅವನ ಹೃದಯ ಮಧು ಮಧುರ, ಕಾರುಣ್ಯ ರಸಪೂರ್ಣ. ಆತ್ಮಸಾಗರದಲ್ಲಿ ತಾನುಂಡ ಘನಶಾಂತಿ-ಓದನವನ್ನು ಅಜ್ಞಜೀವಿಗಳಿಗೆಲ್ಲ ಉಣಬಡಿಸಬೇಕೆಂಬ ದಯಾ ಭಾವ ಅವನದು. ಈ ಭಾವವೇ ಅವನ ಉತ್ಥಾನಕ್ಕೆ ಕಾರಣ.

ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನು? ಕೋಳಿ ಒಂದು ಗುಟುಕು ಕಂಡರೆ ಕರೆಯದೆ ತನ್ನ ಕುಲವೆಲ್ಲವ? ಶಿವ ಭಕ್ತನಾಗಿ ಭಕ್ತಿ ಪಕ್ಷವಿಲ್ಲದಿರೆ ಕಾಗಿ ಕೋಳಿಯಿಂದ ಕರಕಷ್ಟ ಕೂಡಲ ಸಂಗಮ ದೇವಾ."

ದೊರೆತ ದೈವೀ ಭಾಗ್ಯವನ್ನು ಮಾನವ ಕುಲಕ್ಕೆ ಹರಿದು ಹಂಚಿ ತಿನ್ನದವ ಕಾಗಿ ಕೋಳಿಗಳಿಗಿಂತ ಕರಕಷ್ಟ. ಸಮನಿಸಿದ ಆತ್ಮಾನಂದವನ್ನು ದೇವ ವಿದ್ಯೆಯನ್ನು ಮಾನವ ಮಾತ್ರಕ್ಕೆಲ್ಲ ನೀಡಿ ಸಂತೋಷಿಸುವ ಕರುಣಾ ಮೂರ್ತಿ ಸಂತನು ಸರ್ವಶ್ರೇಷ್ಠ; ಎಂಬುದು ಬಸವಣ್ಣನ ಹೃದ್ಗತ. ಶ್ರೀ ರಾಮಕೃಷ್ಣ ಪರಮಹಂಸರ ಕೃಪಾಶೀರ್ವಾದದಿಂದ ವಿವೇಕಾನಂದರಿಗೆ ಸಮಾಧಿ ಸುಖ ಲಭಿಸಿತು. "ಎಂಥ ಅದ್ಭುತ ಸುಖ! ಇದನ್ನು ಜಗತ್ತಿನಾದ್ಯಂತ ಹರಡಬೇಕು!" ಎಂದು ನಿಶ್ಚಯಿಸಿ ವಿವೇಕಾನಂದರು ವಿಶ್ವ ಪರ್ಯಟನ ಮಾಡಿದರು. ಅದು ಲೋಕ ಕಲ್ಯಾಣದ ಕಳಕಳಿ.

ಪೂರ್ವದ ಋಷಿ ಮುನಿಗಳು, ಸಂತ ಶರಣರು ದಯಾ ಮೂರ್ತಿಗಳಾಗಿದ್ದರು. ಬಂದ ಅಸಂಖ್ಯ ಕಷ್ಟ ಸಹಿಸಿ ಆತ್ಮಾನಂದದಾಯಿನೀ ವಿದ್ಯಾಶ್ರೀಯನ್ನು ಮನೆ ಮನೆಗೆ ತಲುಪಿಸಲು ಶ್ರಮಿಸಿದರು. ಜನರು ತಿಳಿವವರಲ್ಲ, ಅಜ್ಞರು.

ಅವರ ಮಾತೊಂದು ತೆರ, ಮನವೊಂದು ತೆರ, ಮತಿಯೊಂದು ತೆರ. ಸದಾ ದುಃಖ ಪೂರ್ಣ ವಿಷಯಗಳತ್ತ ಅವರ ಲಕ್ಷ. ಅವರಿಗೆ ಆತ್ಮ ವಿದ್ಯೆ ಸೇರದು. ಸಂತರೆಂದರೆ ಆಗದು. ಮಗು ಎಷ್ಟು ದೂರ ಸರಿದರೇನು? ಛಲ ಮಾಡಿದರೇನು? ತಾಯಿಯ ಕರುಳು ಕೇಳೀತೆ? ಅಮೃತದಂಥ ಮೊಲೆಹಾಲುಣಿಸದೆ ಅವಳಿಗೆ ಸಮಾಧಾನ ವಿಲ್ಲ. ಹಾಗೆಯೇ ಹಿಂದಿನ ಹಾಗು ಇಂದಿನ ಸಂತರ ರೀತಿ. ಜನತೆ ಅದೆಷ್ಟೇ ಅವ ಹೇಳನ ಮಾಡಲಿ, ತಿರಸ್ಕಾರ ಪೂರ್ವಕ ವರ್ತಿಸಲಿ; ಬಲ್ಲವರು ಶತ ಪ್ರಯತ್ನದಿಂದ ಜನತೆಗೆ ವಿದ್ಯಾಮೃತ ಪಾನ ಮಾಡಿಸಿದರು; ಇಂದಿಗೂ ಮಾಡಿಸುತ್ತಿದ್ದಾರೆ. ಜನ ರನ್ನು ಕಂಡರೆ ಸಂತರಿಗೆ ಎಲ್ಲಿಲ್ಲದ ಸಂತೋಷ. ಜನರು ಅರಿತವರಾಗಬೇಕು, ಪ್ರಾಪಂಚಿಕ ಬಂಧನಗಳಿಂದ ವಿಮುಕ್ತರಾಗಬೇಕು, ಶಾಂತಿ ಸ್ಥೈರಣೆಯ ವಾತಾ ವರಣ ವಿಶ್ವವನ್ನು ವ್ಯಾಪಿಸಬೇಕು ಎಂದು ಹಗಲಿರುಳೂ ಚಿಂತಿಸುವ ಆ ಸಂತ ರಿಗೆ ಶ್ರೇಷ್ಠರು ಎಂದಿದ್ದಾನೆ ಕೃಷ್ಣ.

ಶ್ರೇಷ್ಠಃ :–ಮತ್ತೂ ಒಂದು ರೀತಿಯಿಂದ ಈ ಪದದರ್ಥ ಅರಿಯುವಾ. ಶ್ರೇಷ್ಠ ಎಂದರೆ ಹಿರಿಯ; ಜ್ಞಾನ ಹಾಗು ಅನುಭವಗಳಿಂದ ವೃದ್ಧ! ಲೋಕವನ್ನು ಸಂಕಷ್ಟಗಳಿಂದ ಪಾರು ಮಾಡುವ ಬಲವುಳ್ಳ ಧೀರ. ಅವನ ಬುದ್ಧಿಗಣ್ಣು ತೀಕ್ಷ್ಣ. ಯಾವುದು ದುಃಖದಾಯಿ, ಯಾವುದು ಸುಖದಾಯಿ ಅವನಿಗೆ ಗೊತ್ತು. ಯಾವು ದರಿಂದ ದುಃಖ ನಿವಾರಣೆಯೋ, ಅಮರ ಸುಖ ಪ್ರಾಪ್ತಿಯೋ ಅಂಥ ಸಾಧನದ ವಿಷಯದಲ್ಲಿ ಅವನಿಗೆ ಸುಸ್ಪಷ್ಟ ಜ್ಞಾನವಿದೆ; ಅಷ್ಟೇ ಅಲ್ಲ, ಜೀವನವಿಡಿ ಸಾಧನಾ ಮಾರ್ಗಕ್ರಮಿಸಿ ಅನುಪಮಾತ್ಮಾನಂದ ವಾರಿಧಿಯನ್ನೀಂಟಿದ ಅನುಭವ ಅವನ ಸಂಪದ.

"ಫಲ ಸಾಧನತಾಂಶೇ ಭ್ರಾಂತಿ ರಹಿತತ್ವಂ ಶಿಷ್ಟತ್ವಂ." ಫಲ ಮತ್ತು ಆ ಫಲ ಸಾಧಕ ಸಾಧನಾ ವಿಷಯದಲ್ಲಿ ಯಾವುದೇ ಬಗೆಯ ಭ್ರಾಂತಿ ಇಲ್ಲದಿರುವದು ಶಿಷ್ಟತ್ವ. ಅಂದರೆ ನಿತ್ಯ ಸುಖವಾದ ಮುಕ್ತಿಯು ಫಲ. ನಿಷ್ಕಾಮ ಕರ್ಮ, ನಿಷ್ಕಾಮ ಭಕ್ತಿ ಮತ್ತು ನಿಷ್ಕಾಮ ಜ್ಞಾನಗಳು ಸಾಧನ. ಈ ವಿಷಯದಲ್ಲಿ ನಿಸ್ಸಂದಿಗ್ಧನಾಗಿ ರುವವ ಶಿಷ್ಟ, ಶ್ರೇಷ್ಠ. "ವೇದ ಪ್ರಾಮಾಣ್ಯಾಭ್ಯುಪ ಗಂತೃತ್ವಂ ಶಿಷ್ಟತ್ವಂ" ವೇದ ಪ್ರಮಾಣದ ಅಂಗೀಕಾರವು ಶಿಷ್ಟತ್ವಂ. ಅಂದರೆ ತತ್ತ್ವಮಸ್ಯಾದಿ ಮಹಾವಾಕ್ಯ ಪ್ರತಿಪಾದಕ ವೇದಗಳಿಗೆಯೇ ಪ್ರಾಮಾಣ್ಯತೆ ನೀಡಿ ಅವು ತೋರಿದ ಮಾರ್ಗದಲ್ಲಿ ಸಾಗಿದವ ಶಿಷ್ಟ.

ಯದ್ಯದಾಚರತಿ ಶ್ರೇಷ್ಠಃ...:– ಸಣ್ಣವರು ಹಿರಿಯರನ್ನು ಅನುಕರಿಸು ತ್ತಾರೆ; ಇದು ಲೋಕದ ಸರ್ವೇ ಸಾಮಾನ್ಯ ನೀತಿ. ಮಗ ತಂದೆಯನ್ನು, ಮಗಳು ತಾಯಿಯನ್ನು, ಶಿಷ್ಯ ಗುರುವಿನನ್ನು ಅನುಸರಿಸುವದು ನಮಗೆಲ್ಲ ಪರಿಚಿತ. ಸಂತನು ಮಾತ್ರ ಒಂದು ಮನೆ, ಒಂದುಮಠದ ಮಟ್ಟಿಗೆ ಹಿರಿಯನಲ್ಲ; ಮಾನವ ಮಾತ್ರಕ್ಕೆ

ಅವನು ಆದರ್ಶ! ಅವನು ಹೇಗೆ ಆಚರಿಸುತ್ತಾನೆಯೋ ಜಗತ್ತು ಹಾಗೆಯೇ ಆಚರಿಸುತ್ತದೆ. ಅವನು ಸತ್ಯ ಅಹಿಂಸಾ ಪಥಿಕನಾದರೆ ಜಗತ್ತೇ ಆ ಸತ್ಯ ಅಹಿಂಸೆಗಳನ್ನು ಕೊಂಡಾಡುತ್ತದೆ.

**ಸ ಯತ್ ಪ್ರಮಾಣಂ ಕುರುತೇ...:–** ಸಂತನು ತನ್ನ ಜೀವನದಿಂದ ಯಾವುದನ್ನು 'ಪ್ರಮಾಣ' 'ಆದರ್ಶ' ಎಂದು ಸಿದ್ಧ ಪಡಿಸುವನೋ ಜನಾಂಗ ಆ ಆದರ್ಶವನ್ನೇ ತಮ್ಮ ಬಾಳಿನಲ್ಲಿ ರೂಢಿಸಿಕೊಳ್ಳಲು ಹೆಣಗುತ್ತದೆ. ಆದುದರಿಂದ, ಸಮಾಜ ಮುಖಂಡರು, ಹಿರಿಯರು ಆದರ್ಶ ಜೀವನ ಸಾಗಿಸಬೇಕು; ಅನಾಸಕ್ತ ಬುದ್ಧಿಯಿಂದ ಲೋಕ ಹಿತ ಕಾರ್ಯಗಳನ್ನೆಸಗಬೇಕು. ತಮ್ಮ ವಿಮಲ ಆಚರಣೆಯ ಮೂಲಕ ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ, ದಯಾ, ದಾನ, ಸ್ವಾಧ್ಯಾಯ ಇತ್ಯಾದಿ ಅಮೂಲ್ಯ ತಾರಕ-ಪಾಠಗಳನ್ನು ಕಲಿಸಿಕೊಡಬೇಕು. ಸಂತರು ಬಹು ಜಾಗರೂಕತೆಯಿಂದ ಜೀವಿಸಬೇಕೆಂಬ ಸಂದೇಶ ಇಲ್ಲಿದೆ.

(೧) ಸಂತರ ಚಾರಿತ್ರ್ಯವನ್ನು ಎಲ್ಲ ಜನರು ಅನುಸರಿಸುವದಿಲ್ಲ. ಬಹು ಜನರಿಗೆ ಅವರ ಚಾರಿತ್ರ್ಯ ತಿಳಿಯದು; ತಿಳಿದವರಲ್ಲಿ ಬಹುಜನ ತಮಗದು ಅಸಾಧ್ಯವೆಂದು ಭಾವಿಸುತ್ತಾರೆ. ಸಾಧ್ಯವಿದ್ದರೂ ಬಹುಜನ ಆ ಸಂತರ ರಾಜ ಮಾರ್ಗದಲ್ಲಿ ನಡೆಯಲು ಮನಸ್ಸು ಮಾಡುವದಿಲ್ಲ. ಉದಾ: ಗಾಂಧೀಜಿ ಭಾರತದ ಹಿರಿಯ ಸಂತರು. ಅವರು ಚಿನ್ನದಂಥ ಸ್ವಚ್ಛ ಬಾಳನ್ನು ಬಾಳಿದರು. ಅವರ ಹೆಸರು ಹೇಳಿ ಬದುಕುತ್ತಿರುವ ಮುಂದಾಳುಗಳಲ್ಲಿ ಅದೆಷ್ಟು ಜನ ಅವರ ತತ್ತ್ವಗಳನ್ನು ಪಾಲಿಸುತ್ತಿದ್ದಾರೆ? ಎಲ್ಲೋ ಒಬ್ಬಿಬ್ಬರು!

(೨) ಕೆಲವು ಸಲ ಸಂತರ ಚಾರಿತ್ರ್ಯ ಲೋಕಕ್ಕೆ ಮರುಳಾಗಿ ಕಾಣುವದು. ಎಟುಕದ ದ್ರಾಕ್ಷಿ ಹುಳಿ ಎಂದ ನರಿಯಂತೆ, ಸಂತರ ಬಾಳಿನ ಸಿದ್ಧಾಂತಗಳನ್ನು ಅಳವಡಿಸಿ ಕೊಳ್ಳಲಸಮರ್ಥರಾದ ನಾವು ಅವರ ಜೀವನವೇ ಮರುಳು ಜೀವನ ವೆಂದು ಹೀಗಳೆಯುತ್ತೇವೆ. ಉದಾ: ತುಕಾರಾಮ ತ್ಯಾಗಜೀವಿ. ಜನ ಮಾತ್ರ ಹುಚ್ಚ ಎಂದಿತು. ಏಕೆಂದರೆ ಅವನ ತ್ಯಾಗವನ್ನು ಅಂಗವಿಸಿಕೊಳ್ಳುವ ಬಲ ಅವರಿಗಿರಲಿಲ್ಲ.

(೩) ಇನ್ನು ಕೆಲವು ಸಲ ಸಂತರ ಮಾತು ಹಿಡಿಸದು. ಉದಾ: "ಬೀಡಿ ಸೇದಬೇಡಿ; ಸೆರೆ ಬಿಟ್ಟು ಬಿಡಿ; ಪ್ರಪಂಚದಿಂದ ನಿವೃತ್ತರಾಗಿರಿ. ಎಂದು ಹೇಳಿದರೆ ನಿಮಗೆ ಸೇರುತ್ತವೆಯೆ? ಇಲ್ಲ. ಕೃಷ್ಣ ದೇವನ ಅವತಾರಿ. ತತ್ತ್ವಜ್ಞಾನದ ಸಾಗರ. ಜಗತ್ತಿಗೆಯೇ ಮಾರ್ಗದರ್ಶನ ಮಾಡಬಲ್ಲ ಹಿರಿಯ. ಅವನ ೧೬೦೦೦ ಪತ್ನಿಯರು ಹಾಗು ೬೪೦೦೦ ಮಕ್ಕಳೇ ಅವನ ಮಾತನಾಲಿಸಲಿಲ್ಲ.

(೪) ಒಂದು ವಿಚಿತ್ರ ಸಂಗತಿ ಹೀಗಿದೆ: ಸಂತರಲ್ಲಿ ಪ್ರಾರಬ್ಧದ ವಶದಿಂದ ಅಪ್ಪಿ ತಪ್ಪಿ ಏನಾದರೂ ದೋಷವಿದ್ದರೆ ಅದನ್ನು ಮಾತ್ರ ಆ ಕೂಡಲೇ ಪ್ರಮಾಣ

ಬದ್ಧವೆಂದು ಭಾವಿಸುತ್ತೇವೆ. ಶಿವನು ಎರಡು ಲಗ್ನವಾದ; ಒಬ್ಬಳನ್ನು ತಲೆಯ ಮೇಲೆ ಕೂಡ್ರಿಸಿಕೊಂಡ. ಮತ್ತೊಬ್ಬಳನ್ನು ತೊಡೆಯ ಮೇಲೆ ಕೂಡ್ರಿಸಿಕೊಂಡ. ಅನೇಕ ಸುಶಿಕ್ಷಿತರಿಗೆ ಅದೇ ಆದರ್ಶವಾಯ್ತು. ಶಿವನ ಅನಾಸಕ್ತ ಸ್ಮಶಾನ ಜೀವನವನ್ನು ಮಾತ್ರ ಅವರು ನೆನೆಯಲಿಲ್ಲ. ವ್ಯಸನಕ್ಕೆ ಆಸ್ಪದ ನೀಯುವಂಥದನ್ನು ಬೇಗನೆ ಅನುಕರಿಸುತ್ತೇವೆ.

(೫) ಅನೇಕ ಜನ ಅನಾಸಕ್ತ ಮಹಾತ್ಮರು ಆಗಿ ಹೋಗಿದ್ದಾರೆಯಷ್ಟೆ! ಅವರ ಕಾರ್ಯನಿಷ್ಠೆ, ವಿಶಾಲ ಭಾವ, ತತ್ತ್ವದರ್ಶಿತ್ವಗಳನ್ನು ಮರೆತ ಅವರ ಅನುಯಾಯಿಗಳು ಹಾಗು ಪರಂಪರಾಧಿಕಾರಿಗಳು ನಿಕೃಷ್ಟ ಜೀವನ ಸಾಗಿಸುತ್ತಾರೆ. ಮೊದಲಿನ ಮಹಾತ್ಮರು ಪರಿಶುದ್ಧರಾಗಿದ್ದರೆ ? ಎಂಬ ಸಂಶಯ ಬರುವಷ್ಟು ಕೀಳು ಬದುಕನ್ನು ನಡೆಸುತ್ತಾರೆ. ಹೀಗಾಗಿ, ನವ ಪೀಳಿಗೆಯು ಆ ಮೂಲ ಪುರುಷರಲ್ಲಿ ಹಾಗು ಅವರಿಂದ ಉಪದಿಷ್ಟವಾದ ತತ್ತ್ವಗಳಲ್ಲಿ ವಿಶ್ವಾಸ ಕಳೆದುಕೊಂಡರೆ ಅದರಲ್ಲೇನು ಅಚ್ಚರಿ?

(೬)ಮಹಾತ್ಮರು ಸ್ಥಿರಪ್ರಜ್ಞರು. ಲೋಕ ಅವರನ್ನು ಅನುಕರಿಸಲಿ ಅಥವಾ ಅನುಕರಿಸದಿರಲಿ; ಅವರು ಮಾತ್ರ ತಮ್ಮ ಧರ್ಮ ಮಾರ್ಗದಿಂದ ವಿಚಲಿತರಾಗರು! ಅವರಿಗೆ ಅಂತರಾತ್ಮನ ಮೆಚ್ಚಿಗೆ ಮುಖ್ಯ; ಜನಮೆಚ್ಚಿಗೆಯಲ್ಲ. ಅವರು ತಮ್ಮ ಜೀವನದುದ್ದಕ್ಕೂ ವಿಶ್ವಮಾನ್ಯವಾದ ಆಚಾರ ನೀತಿಗಳನ್ನು ತತ್ತ್ವಸಿದ್ಧಾಂತಗಳನ್ನು ಅಭಿವ್ಯಕ್ತಗೊಳಿಸುತ್ತಾರೆ. ಅಂಥ ನಿರಾಮಯ ಜೀವನದಿಂದ ಒಂದಿಲ್ಲ ಒಂದು ಕಾಲದಲ್ಲಿ ಕೆಲವು ಜನರಾದರೂ ಪ್ರೇರಣೆ ಪಡೆಯುತ್ತಾರೆ; ಅಮೃತತತ್ತ್ವ ಗಳಿಸುತ್ತಾರೆ. ಈ ಅರ್ಥದಲ್ಲಿ ಯದ್ಯದಾಚರತಿ ಎಂಬ ಮಾತನ್ನು ಗ್ರಹಿಸಬೇಕು.

ಭಗವಂತ:– "ಅರ್ಜುನ, ನೀನೂ ಒಬ್ಬ ಸಮಾಜದ ನೇತಾರ. ನಿನ್ನನ್ನೇ ನಂಬಿ ಅಸಂಖ್ಯ ಜನ ಬಾಳುತ್ತಾರೆ. ನೀನು ದಾರಿ ತಪ್ಪಿ ಅವರನ್ನು ಪತನಗೊಳಿಸಬೇಡ. ಶ್ರೇಷ್ಠ ಪುರುಷನಿಗೆ ಬೇಕಾದ ಸುಜ್ಞಾನ, ಸದ್ಭಾವಗಳನ್ನು ಪಡೆ. ಸದಾ ಸತ್ಕರ್ಮಿಯಾಗಿ ಜೀವಿಸು. ನಿನ್ನ ಅನುಯಾಯಿಗಳು ಪವಿತ್ರ ಜೀವನ ನಡೆಸು ವಂಥ ಪಾತವೀಯುವದು ನಿನ್ನ ಕರ್ತವ್ಯ."

ಸಂಬಂಧ:- ಭಗವಂತನು ತನ್ನ ಉದಾಹರಣೆ ಇತ್ತು ಉಪದೇಶಿಸುತ್ತಾನೆ.

ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥೨೨॥

ಭಾವ:- ಅರ್ಜುನ, ಮೂರು ಲೋಕಗಳಲ್ಲಿ ನನಗೆ ಕಿಂಚಿತ್ ಕರ್ತವ್ಯವಿಲ್ಲ, ಮತ್ತು ನಾನು ಹೊಂದಿರದ ಅಥವಾ ಹೊಂದ ಬೇಕಾದ ವಸ್ತುವೇ ಇಲ್ಲ. ಆದರೂ ಕರ್ಮ ಮಾಡುತ್ತೇನೆ.

ವಿವರಣೆ:- ಭಗವಂತ:– " ಪಾರ್ಥ, ನನ್ನತ್ತ ನೋಡು, ನಾನು ಅಖಂಡಾನಂದ ಘನ. ಸರ್ವ ವಿಶ್ವದ ಅಂತರ್ಜ್ಯೋತಿ. ನಾನೇ ವಿಶ್ವ ಸಂಪದದ ಸೃಷ್ಟಾರ,

ಪಾಲಕ ಹಾಗು ಯಜಮಾನ. ಸರ್ವಜ್ಞ, ಸರ್ವಕರ್ತ, ಸರ್ವಶಕ್ತನಾದ ನನಗೆ ಪಡೆಯಬೇಕಾದುದೂ ಇಲ್ಲ; ಮಾಡಬೇಕಾದ ಕರ್ತವ್ಯ ಕರ್ಮವೂ ಇಲ್ಲ. ಆದರೂ ನಾನು ಪ್ರತಿಕ್ಷಣ ಕರ್ಮ ಮಾಡುತ್ತಿದ್ದೇನೆ. ಏಕೆ? ಲೋಕ ಸಂಗ್ರಹಕ್ಕಾಗಿ! ನಿನಗಾಗಿ, ಈ ಜನತೆಗಾಗಿ, ಸಮಗ್ರ ಜೀವಜಂತುಗಳಿಗಾಗಿ, ಅಷ್ಟೇ ಏಕೆ ಜಗತ್ತಿಗಾಗಿ ಕರ್ಮದಲ್ಲಿ ನಿರತನಾಗಿದ್ದೇನೆ. ”

(೧) ತಾಯಿ ಪಥ್ಯ ಮಾಡುವದು ತನಗಾಗಿ ಅಲ್ಲ, ಮಗುವಿಗಾಗಿ. ಹಾಗೆ ಪರಮಾತ್ಮನು ತಾನು ಪರಿಪೂರ್ಣನಾದರೂ ಜೀವಿಗಳ ಉದ್ಧಾರಕ್ಕಾಗಿ ದುಡಿಯುತ್ತಾನೆ. ಗುರು ಸಂತ ಶರಣರ ರೂಪದಲ್ಲಿ ಅವತರಿಸಿ, ಶುದ್ಧ ಆಚಾರ ಶುದ್ಧ ಭಾವ ಶುದ್ಧ ವಿಚಾರಗಳ ಬಾಳನ್ನು ಬಾಳುತ್ತಾನೆ. ಲೋಕಕ್ಕೆ ಆದರ್ಶ ತೋರುತ್ತಾನೆ.

(೨) ಪಾಲಕರು ಸುಶೀಲರಾಗಿ ವರ್ತಿಸಿದರೆ ಮಕ್ಕಳು ಸುಶೀಲತೆ ಕಲಿಯುತ್ತಾರೆ; ಪಾಲಕರು ದೇವ-ಗುರುಗಳಿಗೆ ವಂದಿಸಿದರೆ ಅರ್ಚಿಸಿದರೆ ಮಕ್ಕಳು ಅನುಕರಣ ಮಾಡುತ್ತಾರೆ. ಪಾಲಕರಲ್ಲಿ ಅಗಾಧ ಶಕ್ತಿ ಇದೆ. ಮದಾಲಸಾ ಎಂಬ ರಾಣಿ ತನ್ನ ಎಲ್ಲ ಮಕ್ಕಳನ್ನು ಬಾಲತನದಲ್ಲೇ ಜಗನ್ಮಾನ್ಯ ಜ್ಞಾನಿಗಳನ್ನಾಗಿ ಪರಿವರ್ತಿಸಿದಳು. ಹಿರಿಯರು, ಮಹಾಪುರುಷರು ಪರರಿಗಾಗಿ ಸದಾ ಲಲಿತ ಜೀವನ ಸಾಗಿಸಲೇ ಬೇಕು; ಪುರುಷಾರ್ಥಪರ ಧರ್ಮಾಚರಣೆ ಗೈಯಬೇಕು.

೩) ಪ್ರಾರಬ್ಧ ಬಲವಂತ. ಜ್ಞಾನಿಗಳನ್ನು ಸಹ ಅದು ಸನ್ಮಾರ್ಗ ಚ್ಯುತಗೊಳಿಸುವದು; ಲೋಭ ಅಸೂಯೆಗಳಿಗೆ ಸಿಲುಕಿಸುವದು; ಕಾಮ ಕ್ರೋಧಗಳ ಬಾಯಿಗೆ ನೂಕುವದು. ಈ ಪ್ರಾರಬ್ಧದ ಕಾಳ ಹಸ್ತದಿಂದ ಪಾರಾಗಿ ಬಾಳಬೇಕಾದರೆ ಜ್ಞಾನಿ, ಸಿದ್ಧ, ಮಹಾತ್ಮರು ಕೂಡ ಸದಾ ಸದಾಚಾರ, ಸದ್ಭಕ್ತಿ, ಸುಜ್ಞಾನ ಹಾಗು ದಾಸೋಹಗಳಲ್ಲಿ ನಿರತನಾಗಿರುವದವಶ್ಯ. ಇಂತು ಜೀವನ್ಮುಕ್ತಿ ಸುಖಕ್ಕಾಗಿಯೂ ಕರ್ಮ ಮಾಡಬೇಕು; ಸಮಾಜ ಹಿತಕ್ಕಾಗಿಯೂ ಕರ್ಮ ಮಾಡಬೇಕು.

**ಸಂಬಂಧ:–** ಕರ್ಮ ಮಾಡದಿದ್ದರೆ ಏನಾಗುವದು?

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೨೩॥**

**ಭಾವ:–** ಒಂದು ವೇಳೆ, ನಾನು ಜಾಗರೂಕತೆಯಿಂದ ಕರ್ಮದಲ್ಲಿ ಪ್ರವೃತ್ತನಾಗದಿದ್ದರೆ ನನ್ನ ಮಾರ್ಗವನ್ನೇ ಮನುಷ್ಯರೆಲ್ಲ ಸರ್ವ ರೀತಿಯಿಂದ ಅನುಸರಿಸುತ್ತಾರೆ.

**ವಿವರಣೆ:–** ಭಗವಂತ:- “ಅರ್ಜುನ, ಸದಾ ಜಾಗರೂಕತೆಯಿಂದ ನಾನು ಕರ್ತವ್ಯಕರ್ಮ ಮಾಡದಿದ್ದರೆ ನನ್ನನ್ನೇ ನಂಬಿದ ಮಾನವಕುಲಕೋಟಿ ನನ್ನ ಮಾರ್ಗ ತುಳಿಯುವದು, ಆಲಸ್ಯ ನಿಷ್ಕ್ರಿಯತೆಗಳು ಪ್ರಪಂಚವನ್ನೇ ಹಾಳುಗೆಡುಹುವವು, ಧರ್ಮ ಅಳಿಯುವದು. ಶಾಂತಿ ಮಣ್ಣುಗೂಡುವದು.’

ಬದ್ಧವೆಂದು ಭಾವಿಸುತ್ತೇವೆ. ಶಿವನು ಎರಡು ಲಗ್ನವಾದ; ಒಬ್ಬಳನ್ನು ತಲೆಯ ಮೇಲೆ ಕೂಡ್ರಿಸಿಕೊಂಡ. ಮತ್ತೊಬ್ಬಳನ್ನು ತೊಡೆಯ ಮೇಲೆ ಕೂಡ್ರಿಸಿಕೊಂಡ. ಅನೇಕ ಸುಶಿಕ್ಷಿತರಿಗೆ ಅದೇ ಆದರ್ಶವಾಯ್ತು. ಶಿವನ ಅನಾಸಕ್ತ ಸ್ಮಶಾನ ಜೀವನವನ್ನು ಮಾತ್ರ ಅವರು ನೆನೆಯಲಿಲ್ಲ. ವ್ಯಸನಕ್ಕೆ ಆಸ್ಪದ ವೀಯುವಂಥದನ್ನು ಬೇಗನೆ ಅನುಕರಿಸುತ್ತೇವೆ.

(೫) ಅನೇಕ ಜನ ಅನಾಸಕ್ತ ಮಹಾತ್ಮರು ಆಗಿ ಹೋಗಿದ್ದಾರೆಯಷ್ಟೆ! ಅವರ ಕಾರ್ಯನಿಷ್ಠೆ, ವಿಶಾಲ ಭಾವ, ತತ್ತ್ವದರ್ಶಿತ್ವಗಳನ್ನು ಮರೆತ ಅವರ ಅನುಯಾಯಿಗಳು ಹಾಗು ಪರಂಪರಾಧಿಕಾರಿಗಳು ನಿಕೃಷ್ಟ ಜೀವನ ಸಾಗಿಸುತ್ತಾರೆ. ಮೊದಲಿನ ಮಹಾತ್ಮರು ಪರಿಶುದ್ಧರಾಗಿದ್ದರೆ ? ಎಂಬ ಸಂಶಯ ಬರುವಷ್ಟು ಕೀಳು ಬದುಕನ್ನು ನಡೆಸುತ್ತಾರೆ. ಹೀಗಾಗಿ, ನವ ಪೀಳಿಗೆಯು ಆ ಮೂಲ ಪುರುಷರಲ್ಲಿ ಹಾಗು ಅವರಿಂದ ಉಪದಿಷ್ಟವಾದ ತತ್ತ್ವಗಳಲ್ಲಿ ವಿಶ್ವಾಸ ಕಳೆದುಕೊಂಡರೆ ಅದರಲ್ಲೇನು ಅಚ್ಚರಿ?

(೬)ಮಹಾತ್ಮರು ಸ್ಥಿರಪ್ರಜ್ಞರು. ಲೋಕ ಅವರನ್ನು ಅನುಕರಿಸಲಿ ಅಥವಾ ಅನುಕರಿಸದಿರಲಿ; ಅವರು ಮಾತ್ರ ತಮ್ಮ ಧರ್ಮ ಮಾರ್ಗದಿಂದ ವಿಚಲಿತರಾಗರು! ಅವರಿಗೆ ಅಂತರಾತ್ಮನ ಮೆಚ್ಚುಗೆ ಮುಖ್ಯ; ಜನಮೆಚ್ಚುಗೆಯಲ್ಲ. ಅವರು ತಮ್ಮ ಜೀವನದುದ್ದಕ್ಕೂ ವಿಶ್ವಮಾನ್ಯವಾದ ಆಚಾರ ನೀತಿಗಳನ್ನು ತತ್ತ್ವಸಿದ್ಧಾಂತಗಳನ್ನು ಅಭಿವ್ಯಕ್ತಗೊಳಿಸುತ್ತಾರೆ. ಅಂಥ ನಿರಾಮಯ ಜೀವನದಿಂದ ಒಂದಿಲ್ಲ ಒಂದು ಕಾಲದಲ್ಲಿ ಕೆಲವು ಜನರಾದರೂ ಪ್ರೇರಣೆ ಪಡೆಯುತ್ತಾರೆ; ಅಮೃತತ್ತ್ವ ಗಳಿಸುತ್ತಾರೆ. ಈ ಅರ್ಥದಲ್ಲಿ ಯದ್ಯದಾಚರತಿ ಎಂಬ ಮಾತನ್ನು ಗ್ರಹಿಸಬೇಕು.

ಭಗವಂತ:– "ಅರ್ಜುನ, ನೀನೂ ಒಬ್ಬ ಸಮಾಜದ ನೇತಾರ. ನಿನ್ನನ್ನೇ ನಂಬಿ ಅಸಂಖ್ಯ ಜನ ಬಾಳುತ್ತಾರೆ. ನೀನು ದಾರಿ ತಪ್ಪಿ ಅವರನ್ನು ಪತನಗೊಳಿಸಬೇಡ. ಶ್ರೇಷ್ಠ ಪುರುಷನಿಗೆ ಬೇಕಾದ ಸುಜ್ಞಾನ, ಸದ್ಭಾವಗಳನ್ನು ಪಡೆ. ಸದಾ ಸತ್ಕರ್ಮಿಯಾಗಿ ಜೀವಿಸು. ನಿನ್ನ ಅನುಯಾಯಿಗಳು ಪವಿತ್ರ ಜೀವನ ನಡೆಸುವಂಥ ಪಾಠವೀಯುವದು ನಿನ್ನ ಕರ್ತವ್ಯ."

ಸಂಬಂಧ:- ಭಗವಂತನು ತನ್ನ ಉದಾಹರಣೆ ಇತ್ತು ಉಪದೇಶಿಸುತ್ತಾನೆ.

ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥೨೨॥

ಭಾವ:- ಅರ್ಜುನ, ಮೂರು ಲೋಕಗಳಲ್ಲಿ ನನಗೆ ಕಿಂಚಿತ್ ಕರ್ತವ್ಯವಿಲ್ಲ, ಮತ್ತು ನಾನು ಹೊಂದಿರದ ಅಥವಾ ಹೊಂದ ಬೇಕಾದ ವಸ್ತುವೇ ಇಲ್ಲ. ಆದರೂ ಕರ್ಮ ಮಾಡುತ್ತೇನೆ.

ವಿವರಣೆ:- ಭಗವಂತ:– " ಪಾರ್ಥ, ನನ್ನತ್ತ ನೋಡು, ನಾನು ಅಖಂಡಾನಂದ ಘನ. ಸರ್ವ ವಿಶ್ವದ ಅಂತರ್ಜ್ಯೋತಿ. ನಾನೇ ವಿಶ್ವ ಸಂಪದದ ಸೃಷ್ಟಾರ,

ಪಾಲಕ ಹಾಗು ಯಜಮಾನ, ಸರ್ವಜ್ಞ, ಸರ್ವಕರ್ತ, ಸರ್ವಶಕ್ತನಾದ ನನಗೆ ಪಡೆಯಬೇಕಾದುದೂ ಇಲ್ಲ; ಮಾಡಬೇಕಾದ ಕರ್ತವ್ಯ ಕರ್ಮವೂ ಇಲ್ಲ. ಆದರೂ ನಾನು ಪ್ರತಿಕ್ಷಣ ಕರ್ಮ ಮಾಡುತ್ತಿದ್ದೇನೆ. ಏಕೆ? ಲೋಕ ಸಂಗ್ರಹಕ್ಕಾಗಿ! ನಿನಗಾಗಿ, ಈ ಜನತೆಗಾಗಿ, ಸಮಗ್ರ ಜೀವಜಂತುಗಳಿಗಾಗಿ, ಅಷ್ಟೇ ಏಕೆ ಜಗತ್ತಿಗಾಗಿ ಕರ್ಮದಲ್ಲಿ ನಿರತನಾಗಿದ್ದೇನೆ."

(೧) ತಾಯಿ ಪಥ್ಯ ಮಾಡುವದು ತನಗಾಗಿ ಅಲ್ಲ, ಮಗುವಿಗಾಗಿ. ಹಾಗೆ ಪರಮಾತ್ಮನು ತಾನು ಪರಿಪೂರ್ಣನಾದರೂ ಜೀವಿಗಳ ಉದ್ಧಾರಕ್ಕಾಗಿ ದುಡಿಯುತ್ತಾನೆ. ಗುರು ಸಂತ ಶರಣರ ರೂಪದಲ್ಲಿ ಅವತರಿಸಿ, ಶುದ್ಧ ಆಚಾರ ಶುದ್ಧ ಭಾವ ಶುದ್ಧ ವಿಚಾರಗಳ ಬಾಳನ್ನು ಬಾಳುತ್ತಾನೆ. ಲೋಕಕ್ಕೆ ಆದರ್ಶ ತೋರುತ್ತಾನೆ.

(೨) ಪಾಲಕರು ಸುಶೀಲರಾಗಿ ವರ್ತಿಸಿದರೆ ಮಕ್ಕಳು ಸುಶೀಲತೆ ಕಲಿಯುತ್ತಾರೆ; ಪಾಲಕರು ದೇವ-ಗುರುಗಳಿಗೆ ವಂದಿಸಿದರೆ ಅರ್ಚಿಸಿದರೆ ಮಕ್ಕಳು ಅನುಕರಣ ಮಾಡುತ್ತಾರೆ. ಪಾಲಕರಲ್ಲಿ ಅಗಾಧ ಶಕ್ತಿ ಇದೆ. ಮದಾಲಸಾ ಎಂಬ ರಾಣಿ ತನ್ನ ಎಲ್ಲ ಮಕ್ಕಳನ್ನು ಬಾಲತನದಲ್ಲೇ ಜಗನ್ಮಾನ್ಯ ಜ್ಞಾನಿಗಳನ್ನಾಗಿ ಪರಿವರ್ತಿಸಿದಳು. ಹಿರಿಯರು, ಮಹಾಪುರುಷರು ಪರರಿಗಾಗಿ ಸದಾ ಲಲಿತ ಜೀವನ ಸಾಗಿಸಲೇ ಬೇಕು; ಪುರುಷಾರ್ಥಪರ ಧರ್ಮಾಚರಣೆ ಗೈಯಬೇಕು.

೩) ಪ್ರಾರಬ್ಧ ಬಲವಂತ. ಜ್ಞಾನಿಗಳನ್ನು ಸಹ ಅದು ಸನ್ಮಾರ್ಗ ಚ್ಯುತಗೊಳಿಸುವದು; ಲೋಭ ಅಸೂಯೆಗಳಿಗೆ ಸಿಲುಕಿಸುವದು; ಕಾಮ ಕ್ರೋಧಗಳ ಬಾಯಿಗೆ ನೂಕುವದು. ಈ ಪ್ರಾರಬ್ಧದ ಕಾಳ ಹಸ್ತದಿಂದ ಪಾರಾಗಿ ಬಾಳಬೇಕಾದರೆ ಜ್ಞಾನಿ, ಸಿದ್ಧ, ಮಹಾತ್ಮರು ಕೂಡ ಸದಾ ಸದಾಚಾರ, ಸದ್ಭಕ್ತಿ, ಸುಜ್ಞಾನ ಹಾಗು ದಾಸೋಹಗಳಲ್ಲಿ ನಿರತನಾಗಿರುವದವಶ್ಯ. ಇಂತು ಜೀವನ್ಮುಕ್ತಿ ಸುಖಕ್ಕಾಗಿಯೂ ಕರ್ಮ ಮಾಡಬೇಕು; ಸಮಾಜ ಹಿತಕ್ಕಾಗಿಯೂ ಕರ್ಮ ಮಾಡಬೇಕು.

**ಸಂಬಂಧ:**– ಕರ್ಮ ಮಾಡದಿದ್ದರೆ ಏನಾಗುವದು?

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೨೩॥**

**ಭಾವ:**– ಒಂದು ವೇಳೆ, ನಾನು ಜಾಗರೂಕತೆಯಿಂದ ಕರ್ಮದಲ್ಲಿ ಪ್ರವೃತ್ತನಾಗದಿದ್ದರೆ ನನ್ನ ಮಾರ್ಗವನ್ನೇ ಮನುಷ್ಯರೆಲ್ಲ ಸರ್ವ ರೀತಿಯಿಂದ ಅನುಸರಿಸುತ್ತಾರೆ.

**ವಿವರಣೆ:**– ಭಗವಂತ:- "ಅರ್ಜುನ, ಸದಾ ಜಾಗರೂಕತೆಯಿಂದ ನಾನು ಕರ್ತವ್ಯಕರ್ಮ ಮಾಡದಿದ್ದರೆ ನನ್ನನ್ನೇ ನಂಬಿದ ಮಾನವಕುಲಕೋಟಿ ನನ್ನ ಮಾರ್ಗ ತುಳಿಯುವದು, ಆಲಸ್ಯ ನಿಷ್ಕ್ರಿಯತೆಗಳು ಪ್ರಪಂಚವನ್ನೇ ಹಾಳುಗೆಡುಹುವವು, ಧರ್ಮ ಅಳಿಯುವದು, ಶಾಂತಿ ಮಣ್ಣುಗೂಡುವದು.'

(೧)ಆಲಸ್ಯೋ ಹಿ ಮನುಷ್ಯಾಣಾಂ ಶರೀರಸ್ಥೋ ಮಹಾನ್ ರಿಪುಃ:- ಮನುಷ್ಯನ ದೇಹದಲ್ಲಿ ಮಡಗಿದ ಮಹಾ ರಿಪುವು ಆಲಸ್ಯ. ಬಾಲಕ ವಿದ್ಯಾ ವಿಹೀನನಾಗುವದು, ಯುವಕ ಸಾಂಸಾರಿಕ ಸಂಕಷ್ಟಗಳಿಗೆ ಸಿಲುಕುವದು ಹಾಗು ವೃದ್ಧ ಚಿಂತೆಯಿಂದ ನವೆಯುವದು ಆಲಸ್ಯದ ಪರಿಣಾಮ. ಆಲಸ್ಯದಿಂದಾಗಿ ಮನೆಗಳು ಹಾಳಾಗಿವೆ; ರಾಜ್ಯಗಳು ಉರುಳಿವೆ. ಪಂಡಿತರು ಆಲಸ್ಯದ ದಾಸರಾದುದರಿಂದ ಧರ್ಮ ಗ್ಲಾನಿಯುಂಟಾಗಿದೆ, ತತ್ತ್ವಜ್ಞಾನದ ಅಮೂಲ್ಯ ಹೊತ್ತಿಗೆಗಳಾದ ವೇದೋಪನಿಷತ್ತುಗಳು ಮೂಲೆಗುಂಪಾಗಿವೆ. ಭೂ ಪರಿಸರದಿಂದ ಆಲಸ್ಯವು ಉಚ್ಚಾಟನೆಗೊಂಡಾಗ ಮಾತ್ರ ಸರ್ವತೋಮುಖ ಏಳ್ಗೆ ಸಾಧ್ಯ.

೨) ತಂದ್ರಾ:- ಮನುಷ್ಯನಿಗಿರುವ ಇಂದ್ರಿಯಂಗಳ ಶಕ್ತಿ ಅಪಾರ. ಪ್ರತಿ ಸೃಷ್ಟಿ ಮಾಡಬಲ್ಲ ಬಲ ಅವುಗಳಲ್ಲಿದೆ. ಹಾಗಿದ್ದರೂ ಅವುಗಳನ್ನು ಉಪಯೋಗಿಸದೆ ವ್ಯರ್ಥ ಜೀವನ ಸಾಗಿಸುವದು ತಂದ್ರಾ.

೩) ಲೋಕ ಪಾಲಕರಾದ ದೇವರು, ಗುರುಗಳು, ಸಂತರು ಆಲಸ್ಯ ಹಾಗು ತಂದ್ರೆಗಳಿಗೆ ಅವಕಾಶವಿತ್ತರೆ ಸರ್ವನಾಶ ನಿಶ್ಚಿತ; ಲೋಕದಲ್ಲಿ ಅರಾಜಕತೆ ಹರಡುವದು; ಅಧರ್ಮ ಅನ್ಯಾಯ ಅತ್ಯಾಚಾರಗಳು ತಾಂಡವಿಸುವವು. ಶಾಂತಿ ಸೌಖ್ಯಗಳು ಮರೆಯಾಗುವವು, ಆದುದರಿಂದ ಅವರು ಸದಾ ಜಾಗ್ರತರಾಗಿ ದುಡಿಯಲೇಬೇಕು, ಅದೇ ಲೋಕಕ್ಕೆ ತಾರಕ.

**ಉತ್ಸೀದೇಯುರಿಮೇ ಲೋಕಾಃ ನ ಕುರ್ಯಾಂ ಕರ್ಮ ಚೇದಹಂ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥೨೪॥**

ಅರ್ಥ:- ನಾನು ಕರ್ಮವನ್ನು ಮಾಡದಿದ್ದರೆ ಈ ಲೋಕಗಳು ನಾಶವಾಗುವವು; ನಾನು ವರ್ಣಸಂಕರದ ಕರ್ತೃವಾಗುವೆ; ಈ ಪ್ರಜೆಗಳನ್ನು ನಾಶ ಮಾಡಿದ ದೋಷಕ್ಕೆ ಗುರಿಯಾಗುವೆ.

ವಿವರಣೆ:-ಕರ್ಮ ಚ್ಯುತನಾಗುವದು ಆಲಸ್ಯದಿಂದ; ಈ ಆಲಸ್ಯವು ದೇಹದಲ್ಲಿ ಬೀಡು ಬಿಟ್ಟರೆ ರೋಗಗಳ ಉತ್ಪತ್ತಿ; ಮನದಲ್ಲಿ ಮನೆಮಾಡಿದರೆ ಚಿಂತೆ ಭ್ರಾಂತಿಗಳ ಉದಯ; ಬುದ್ಧಿಯಲ್ಲಿ ಸೇರಿದರೆ ಸ್ತ್ಯಾನ(ಜಡತೆ)ದ ತೋರಿಕೆ! ರೋಗಗಳಿಂದ ದೇಹ ಹಾಳು. ಚಿಂತೆ ಭ್ರಾಂತಿಗಳಿಂದ ಮನಸ್ಸಿನ ಶಾಂತಿ ನಾಶ. ಸ್ತ್ಯಾನದಿಂದ ಬುದ್ಧಿಮಾಂದ್ಯತೆ! ಆಯುಷ್ಯ ಅಪಹಾರಕವೀ ಆಲಸ್ಯ. " ಕ್ಷಣತ್ಯಾಗೇ ಕುತೋ ವಿದ್ಯಾ? ಕಣ ತ್ಯಾಗೇ ಕುತೋ ಧನಂ" ಕಣ ಕಣಗಳನ್ನು ಬಿಟ್ಟುಕೊಟ್ಟರೆ ಧನ ಸಂಚಯವಾಗದು. ಅದೇ ರೀತಿ, ಕ್ಷಣ ಕ್ಷಣಗಳು ಆಲಸ್ಯಕ್ಕೆ ಆಹುತಿಯಾದರೆ ವಿದ್ಯೆ ಅಂಗವಿಸದು.

ಆಲಸ್ಯ ಅಳಿದಾಗ ವಿದ್ಯಾಸಿರಿ, ಧನಸಿರಿ, ಶಾಂತಿಸಿರಿ; ಶಿಕ್ಷಣ ರಾಜಕೀಯ ವ್ಯವಹಾರ ಧರ್ಮ ಯೋಗ ಹೀಗೆ ಸರ್ವ ರಂಗಗಳ ಅಭ್ಯುದಯ ಸಾಧ್ಯ. ದೇವ

ನನ್ನು ಅರಸುವ ಸಾಧಕರಂತೂ ಈ ಆಲಸ್ಯದ ವಿಷಯದಲ್ಲಿ ಸದಾ ಜಾಗ್ರತರಿರಬೇಕು.

" ವಿರತಿ ಬಲಿಯಲಿ ಬೇಕು ಜನಗಳ । ಪರಿಚರಿಲ್ಲಿರ ಬೇಕು ಮಾತಿನ ।
ಪರಿಯ ಬಿಟ್ಟಿರ ಬೇಕು ಬಹು । ಪ್ರಶಾಂತವಿರಬೇಕು ॥
ಹಿರಿದಶನವನು ಮುಟ್ಟದಿರಬೇ । ಕ್ಕಿರುವ ನಿದ್ರೆಯ ತಗ್ಗಿಸಲಿ ಬೇ ।
ಕ್ಕರೆಯಬೇಕು ಪ್ರಪಂಚ ವಾಸನವೆಲ್ಲ ಕೇಳೆಂದ ॥ " (ಶ್ರೀ ಚಿದಾನಂದರು)

ಸಾಧಕರಿಗೆ ಇವು ಅನಿವಾರ್ಯ ನಿಯಮಗಳು. ಅವರು ಸ್ವಲ್ಪ ಆಲಸ್ಯಕ್ಕೆ ಎಡೆ ಕೊಟ್ಟರೂ ಬಾಯಿರುಚಿ, ತನಿ ನಿದ್ರೆ, ಪ್ರಪಂಚ ವಾಸನೆ, ಮಾತಿನ ಸವಿ ಹಾಗು ಜನಸಂಗ-ರತಿಗಳು ಅವರನ್ನು ಬಲಿ ತೆಗೆದುಕೊಳ್ಳುವವು.

"ಉದ್ಯೋಗಿನಂ ಲಕ್ಷ್ಮೀಃ ಸಮಾವಿಶತಿ" ಉದ್ಯೋಗಶೀಲನನ್ನು ಲಕ್ಷ್ಮಿಯು ಆಶ್ರಯಿಸುತ್ತಾಳೆ. ದುಡಿಪವನಿಗೆ ದಾರಿದ್ರ್ಯವಿಲ್ಲ; ಸಂಕಟಗಳಿಲ್ಲ. ಅವನು ಇಚ್ಛಿಸಿದರೆ ಶಿವಾಜಿಯಂತೆ ರಾಜ್ಯಕಟ್ಟಬಲ್ಲ; ಸುಭಾಸನಂತೆ ಸಾಹಸಿಯಾಗಬಲ್ಲ; ಗಾಂಧಿಯಂತೆ ಮಹಾತ್ಮನಾಗಬಲ್ಲ; ಜಗತ್ತನ್ನೇ ಅಚ್ಚರಿಗೊಳಿಸುವಷ್ಟು ಬುದ್ಧಿವಂತನಾಬಗಲ್ಲ. "ಉದ್ಯಮೇನ ಹಿ ಸಿದ್ಧ್ಯಂತಿ ಕಾರ್ಯಾಣಿ ನ ಮನೋರಥೈಃ" ಉದ್ಯಮದಿಂದ ಕಾರ್ಯಗಳು ಸಿದ್ಧಿಸುತ್ತವೆ. ಬರಿ ಮನೋರಥಗಳಿಂದಲ್ಲ. ಇಂಥ ಸರ್ವಸಿದ್ಧಿಪ್ರದಾಯಕ ಉದ್ಯೋಗವನ್ನು ಬಿಟ್ಟುಕೊಟ್ಟರೆ ಏನಾದೀತು?

ಫಲವತ್ತಾದ ಭೂಮಿಯಲ್ಲಿ ಕಸವನ್ನು ಸ್ವಲ್ಪ ಬೆಳೆಯಬಿಟ್ಟರೂ ಅದು ಹಬ್ಬಿ ಭೂಮಿಯನ್ನೆಲ್ಲ ಆವರಿಸುವದು; ಭೂಮಿಯ ಕಸುವನ್ನು ಹಾಳು ಮಾಡುವದು. ಆಗ ಎಂಥ ಬೀಜ ಬಿತ್ತಿದರೂ ಅದು ಸರಿಯಾಗಿ ಫಲಕೊಡದು. ಜೀವನವೇ ಸುಕ್ಷೇತ್ರ. ಆಲಸ್ಯ ಕಸ. ಅದು ಬೆಳೆದರೆ, ಶಾಂತಿ ವಿದ್ಯೆಗಳಂಥ ಪೈರು ಬಾರದು. ಸಮಾಜದಲ್ಲೂ ಹಾಗೆಯೇ. ಪಾಂಡವರ ಹಾಗು ಕೌರವರ ಮಧ್ಯ ತಲೆದೋರಿದ ದ್ವೇಷವನ್ನು ಭೀಷ್ಮ ದ್ರೋಣಾದಿಗಳು ಆಗಲೇ ಚಿವುಟಿ ಹಾಕಿದ್ದರೆ ಯುದ್ಧದ ಪ್ರಸಂಗವೇ ಬರುತ್ತಿರಲಿಲ್ಲ. ಏನೋ ಒಂದು ವಿಧದ ಆಲಸ್ಯ ಆ ಆಚಾರ್ಯರಲ್ಲಿ ಕಾಣಿಸಿಕೊಂಡಿತು. ಬೆಳೆದು ನಿಂತಿತು. ಆದರ ಪರಿಣಾಮ ಕುರುವಂಶದ ಅಳಿಗಾಲ!

**ಭಗವಂತ:–** " ಧನಂಜಯ, ನಾನು ದೇವರು. ಲೋಕಾದಿ ಲೋಕಂಗಳ ಪತಿ. ಜೀವರೆಲ್ಲ ನನ್ನನ್ನೇ ಅವಲಂಬಿಸಿದ್ದಾರೆ, ನಾನು ಕುಳಿತರೆ ಕೂಡ್ರುತ್ತಾರೆ. ನಿಂತರೆ ನಿಲ್ಲುತ್ತಾರೆ, ಮಲಗಿದರೆ ಮಲಗುತ್ತಾರೆ. ನನ್ನ ಕಾರ್ಯ ಶಕ್ತಿಯ ನೆಳಲಲ್ಲಿ ಬ್ರಹ್ಮಾಂಡ ತಿರುಗುತ್ತಿದೆ. ನಾನು ಒಂದು ವೇಳೆ ಆಲಸ್ಯದಿಂದ ನಿಷ್ಕ್ರಿಯನಾದರೆ ವಿಶ್ವಕ್ಕೆ ವಿಶ್ವವೇ ನಿಂತುಬಿಡುವದು. ಜೀವರು ನಿರ್ನಾಮಗೊಳ್ಳುವರು. ಮಾನವ ಸಮಾಜವು ವರ್ಣ ಸಂಕರ ಕಂದರದಲ್ಲಿ ಬಿದ್ದು ನಾಶವಾಗುವದು!

" ಪಾರ್ಥ, ಸಂತರು ಋಷಿಗಳು ನೇತಾರರು ಸರ್ವ ಲೋಕೋಪಕಾರಕ್ಕಾಗಿ

ಭುವಿಯಲ್ಲಿ ಅವತರಿಸಿದ ನನ್ನ ಚೇತನಾಂಶರು. ನನ್ನದೂ ಒಂದು ಅವತಾರ. ನೀನೂ ಅವತಾರಿಯೇ ಎಂದು ಕೊ. ನಮ್ಮ ನಮ್ಮ ಕರ್ತವ್ಯ ಕರ್ಮಗಳನ್ನು ನೆರವೇರಿಸದಿದ್ದರೆ ಲೋಕ ವಿನಾಶದ ಘೋರ ಪಾಪಕ್ಕೆ ನಾವೇ ಹೊಣೆಗಾರರಾಗುತ್ತೇವೆ. ಆದುದರಿಂದ ಜಾಗ್ರತನಾಗಿ ದುಡಿ; ನಾನೂ ದುಡಿಯುತ್ತಿರುವೆ. ಗೃಹಪಾಲಕ, ಸಮಾಜ ಸೇವಕ, ರಾಷ್ಟ್ರನಾಯಕ; ಧರ್ಮದ ಅಧ್ವರ್ಯು, ಸತ್ಯದರ್ಶಿ ದಾರ್ಶನಿಕ ಇವರೆಲ್ಲ ಒಂದು ಚಣದ ವಿಲಂಬವಿಲ್ಲದೆ ದುಡಿಯಲಿ. ದುಡಿದೇ ಬದುಕುವ ನೀತಿ ರೂಢಮೂಲವಾಗಬೇಕು. ಆಗ ಜಗಚ್ಛಾಂತಿ!"

ಸಂಬಂಧ:— ಆತ್ಮಜ್ಞಾನಿಗಳೂ ಕೂಡ ಜನ ಹಿತಕ್ಕಾಗಿ ಕರ್ಮ ಮಾಡಲೇಬೇಕು.

ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।
ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕ ಸಂಗ್ರಹಮ್ ॥೨೫॥

ಭಾವ:— ಅರ್ಜುನ, ಕರ್ಮದಲ್ಲಿ ಆಸಕ್ತರಾದ ಅಜ್ಞಾನಿಗಳು ಹೇಗೆ ಕರ್ಮ ಮಾಡುತ್ತಾರೆಯೋ, ಹಾಗೆ ಅನಾಸಕ್ತನಾದ ಜ್ಞಾನಿಯು ಲೋಕ ಸಂಗ್ರಹ ಬಯಸಿ ಕರ್ಮ ಮಾಡಬೇಕು.

ವಿವರಣೆ:- ಭಗವಂತ:- "ಭರತ ಶ್ರೇಷ್ಠ, ಭೋಗ ವೈಭವಗಳಿಗಾಗಿ ಅಜ್ಞರು ದುಡಿಯುವಂತೆ, ಜ್ಞಾನಿಗಳೂ ದುಡಿಯಬೇಕು. ಹೇಗೆ ? ಇಂದ್ರಿಯ ವಿಷಯಗಳಲ್ಲಿ ಆಸಕ್ತಿ ಇಲ್ಲದೆ; ಜನ ಹಿತ ಬಯಸಿ ! ಇದು ಪರಮಾತ್ಮನಾದ ನನ್ನಿಂದ ವಿಧಿಸಲ್ಪಟ್ಟಿದೆ."

ಸಕ್ತಾಃ ಕರ್ಮಣಿ:- ಕರುಣಿಸು ನೀನೆನ್ನ ಕರಣ ನಿಕರದೊಳು । ಪರ ಪುಣ್ಯವಗಲದಂತೆಲೆ ದೇವ । ಶರಣ ಸಹಜ ಭಾವ । ಗಿರಿಜೆಯ ಸುಖಜೀವ ॥ ಬೇಗ ಕರುಣಿಸು ॥ಪ॥ ಸತಿ ಮೊದಲಾದ ಸಂಪದವನೆಳಸಿ ಮಂದ । ಮತಿ ಕಂಡ ಕೆಲಸವನಲಸದೆ । ಕ್ಷಿತಿಯೊಳೆಸಗುವಂತೆ ಗುರು ಸೇವೆಯೊಳಗಭಿ ।। ರತಿಯ ನೆನ್ನೊಡಲಿಗೀಯಖಿಳೇಶ । ನುತಗುಣ ನಿಧಿಕೋಶ । ಜಿತ ಪಂಚವಿಧ ಪಾಶ ॥ ಬೇಗ ಕರುಣಿಸು ॥೧॥ ಜನರೊಲಿವಭಿಮಾನದೊಳು ವಾದಿ ಬಹುತರ್ಕ । ವನೆ ಬಿಡದೋದಿ ಬಳಲುವಂತೆ । ಮನುಗಳ ಜಪವೆನ್ನ ಮೇಲ್ನುಡಿಯೊಳಗನು ॥ ದಿನವಿರೆ ಮಾಡು ಪಾವನಶೀಲ । ಮುನಿಕುಲ ನುತಿಲೋಲ। ವಿನಮಿತ ಸುರಜಾಲ ॥ ಬೇಗ ಕರುಣಿಸು ॥೨॥ ಸಲೆ ಸಮರತಿಯೊಳೊಲಿಸಿ ಮೆಚ್ಚಿಸಿದ ನೊಮ್ಮೆ । ತೊಲಗಿದಿನಿಯಳು ಧ್ಯಾನಿಸುವಂತೆ । ನೆಲಸಿ ತತ್ವಾನುಭಾವನೆಯನ್ನು ಮನದೊಳು । ಚಲಿಸ ದೋಲಿರಿಸು ಭಾವಜಭಂಗ । ವಿಲಸಿತ ವಿಮಲಾಂಗ । ಸುಲಭನೆ ಶಂಭುಲಿಂಗ ॥ ಬೇಗ ಕರುಣಿಸು ॥೩॥

ನಿದ್ರೆ ತಡೆದು, ಹೊಟ್ಟೆ ಕಟ್ಟಿ, ಬೆವರು ಸುರಿಸಿ ಈ ಅಜ್ಞಾನಿ ಜನ ಶ್ರಮಿಸುವದು ಏತಕ್ಕೆ ? ಅಶಾಶ್ವತ ವಸ್ತು ಪ್ರಾಪ್ತಿಗಾಗಿ. ಸತ್ಯವರಿತ ಮಹಾತ್ಮರೂ ದುಡಿಯಬೇಕು, ದುಡಿಯುತ್ತಾರೆ. ಸ್ವಾರ್ಥಕ್ಕಲ್ಲ. ಪರಹಿತಕ್ಕಾಗಿ! ಶಾಶ್ವತ ದೇವನ ಸೇವೆಗಾಗಿ! ಉದಾ: ಗಾಂಧೀಜಿ. ಅರ್ಧಹೊಟ್ಟೆ ಉಂಡರು, ಅರ್ಧ ಬಟ್ಟೆ ತೊಟ್ಟರು; ಬಂಗೀ ಬಳಿದರು. ಸ್ವಾರ್ಥದ ಲವಲೇಶವಿಲ್ಲದ ಅವರ ಕಾರ್ಯ ಸೇವೆ

ಎನಿಸಿತು. ಅವರಿಗೆ ಸಾತ್ವಿಕ ಆನಂದ ನೀಡಿತು. ಹಣಕ್ಕಾಗಿ ಸಾವಿರಾರು ಜನ ಬಂಗೀ ಬಳಿಯುತ್ತಾರೆ. ಆದರೆ ಅವರ ಕರ್ಮ ಸೇವೆಯಲ್ಲ; ಬಿಡಲಾರದ ಹೊರೆ! ಆ ಕರ್ಮದಿಂದ ಅವರಿಗೆ ಸಂತೋಷ ದೊರೆಯಲಿಲ್ಲ.

**ಅಸಕ್ತಃ ವಿದ್ವಾನ್:**– ತಿಳಿದವನು ಪ್ರತಿಫಲದ ಆಸೆ ಮಾಡದೆ ಕರ್ಮ ಮಾಡುತ್ತಾನೆ. ಜಾತಿ ಗೋತ್ರ ಪಂಥ ಪಂಗಡಗಳತ್ತ ಲಕ್ಷಿಸದೆ ಮಾನವನ ಸೇವೆ ಗೈಯುತ್ತಾನೆ. "ಲೋಕ ಹಸಿವಿನಿಂದ ಬಳಲಬಾರದು. ಎಲ್ಲೆಡೆ ಸುಖದ ಸ್ಮಿತಮುಖಿಗಳು ಕಾಣುವಂತಾಗಬೇಕು." ಇದು ಅವನ ಅಂತರ್ಗತ ಇಚ್ಛೆ. "ಸರ್ವಭೂತಹಿತೇರತಃ" ಅವನು ಸರ್ವಭೂತ ಹಿತೈಷಿ.

ಪ್ರತಿಫಲದ ಆಶೆಯಿಂದ ಮಾಡಿದ ಕರ್ಮವು ಅದು ಸೇವೆಯಲ್ಲ; ಆ ಕರ್ಮ ಕರ್ತನು ಲೋಕ ಸಂಗ್ರಹಿಯಲ್ಲ. "ನಾನೀಗ ಉಪದೇಶಿಸುತ್ತಿರುವೆ. ಈ ಕ್ರಿಯೆಯು ಹಿಂದೆ ನಿಮ್ಮಿಂದ ಏನಾದರು ದೊರೆಯಬೇಕೆಂಬ ಉದ್ದೇಶ ಹುದುಗಿದ್ದರೆ ಈ ಆತ್ಮ ಬೋಧೆ ವ್ಯರ್ಥ! ಆ ಉದ್ದೇಶವಿಲ್ಲವೆಂದೇ ವರುಷಾವಧಿ ಬಹಳ ಆನಂದದಿಂದ ಕೇಳುತ್ತೀರಿ." ದೇಶ ಸೇವೆಗೆ ಕೈ ಹಾಕಿದ ಹಿರಿಯರು ಧನ, ಅಧಿಕಾರ, ಪ್ರತಿಷ್ಠೆ ಗಳ ದಾಸರಾಗದೆ ರಾಷ್ಟ್ರ ಹಿತ ಚಿಂತಕರಾಗಬೇಕು. ದೇಶವೇ ತಮ್ಮ ಮನೆ ಎಂಬ ಭಾವ ತಾಳಬೇಕು. ಹಾಗಾದಲ್ಲಿ, ಅವರ ಕಾರ್ಯಗಳು ಲೋಕ ಹಿತ ಉಂಟು ಮಾಡಬಲ್ಲವು.

**ಸಂಬಂಧ:**- ಬಲ್ಲಿದನಾದವ ಕರ್ಮಶೀಲರ ಮನಸ್ಸನ್ನು ಕೆಡಿಸಬಾರದು. ತಾನೂ ಕರ್ಮ ಆಚರಿಸಿ ಕರ್ಮ ಶ್ರದ್ಧೆ ತೋರಬೇಕು.

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ಸರ್ವ ಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ ॥೨೬॥**

**ಅರ್ಥ:**- ಕರ್ಮಸಂಗಿನಾಂ=ಕರ್ಮದಲ್ಲಿ ಆಸಕ್ತರಾದ, ಅಜ್ಞಾನಾಂ=ಅಜ್ಞಾನಿಗಳಲ್ಲಿ ಬುದ್ಧಿಭೇದಂ=ಬುದ್ಧಿ ಚಾಂಚಲ್ಯವನ್ನು ನ ಜನಯೇತ್=ಉಂಟು ಮಾಡಬಾರದು. ವಿದ್ವಾನ್ =ಜ್ಞಾನಿಯು ಯುಕ್ತಃ= (ಸಮತ್ವ ಬುದ್ಧಿ) ಯೋಗ ಯುಕ್ತನಾಗಿ, ಸರ್ವಕರ್ಮಾಣಿ= ಸರ್ವ ಕರ್ಮಗಳನ್ನು ಸಮಾಚರನ್=ಆಚರಿಸುತ್ತ, (ಅವರಿಂದ) ಜೋಷಯೇತ್ =ಮಾಡಿಸಬೇಕು. (ಜುಷ್–ಜೋಷಯೇತ್= ಅಜ್ಞರಲ್ಲಿ ಕರ್ಮರತಿ ಉದಿಸುವಂತೆ ಮಾಡಬೇಕು. )

**ವಿವರಣೆ:**– **ಭಗವಂತ:**– " ಭರತಸತ್ತಮ, ಕರ್ಮವು ಕೀಳೆಂದು ಎಂದಿಗೂ ಭಾವಿಸಬೇಡ, ಪಂಡಿತ, ಯೋಗಿ, ಸಮಾಹಿತ–ಜ್ಞಾನಿ, ಮಹಾತ್ಮ ಯಾರಿದ್ದರೂ ಸರಿಯೇ. ಅವರು ಸತ್ಕರ್ಮಾಸಕ್ತರ ಬುದ್ಧಿಯನ್ನು ಜ್ಞಾನಬೋಧೆಯಿಂದ ಕೆಡಿಸಬಾರದು. ತಾವು ತಪ್ಪದೆ ಮನಸೋಕ್ತ ನಿತ್ಯ ನೈಮಿತ್ತಿಕಾದಿ ಕರ್ಮಗಳನ್ನು ಆಚರಿಸಬೇಕು. ಇನ್ನೊಬ್ಬರಿಗೆ ಕರ್ಮಾನುಷ್ಠಾನಕ್ಕೆ ಪ್ರೋತ್ಸಾಹ ನೀಡಬೇಕು. ಅದುವೇ ನಿಜವಾದ ಗುರುಗಳ ಕರ್ತವ್ಯ; ಸಂತರ ನೀತಿ."

ಭಗವಂತನ ಈ ನುಡಿ ಅತ್ಯಂತ ಉಚಿತ ಹಾಗು ಮನನೀಯ. ಪರಮಾ

ತ್ಮನು ವಿಶ್ವವ್ಯಾಪಿ, ಅಚ್ಛೇದ್ಯ, ಅಶೋಷ್ಯ, ಅಕ್ಲೇದ್ಯ, ನಿತ್ಯ, ಸರ್ವಗತ, ಸ್ಥಾಣು, ಅಚಲ. ಅವನೇ ತಾನೆಂದು ಅರಿತ ಅನುಭಾವಿಯು ಜ್ಞಾನಿ, ವಿದ್ವಾಂಸ. ದೇವನ ತಿಳಿವಿಲ್ಲದ ಜಡ ಬುದ್ಧಿಯ ಜನರು ಅಜ್ಞಾನಿಗಳು. ಅಜ್ಞರ ಹೃದಯ ದಲ್ಲಿ ಅಂಧಕಾರ ತುಂಬಿದೆ; ವಿಷಯ ವ್ಯಾಮೋಹ ನೆಲೆಸಿದೆ. ಸ್ವಾರ್ಥ ಬುದ್ಧಿ ತಲೆ ಎತ್ತಿದೆ. ಈ ಜನ ಹೇಡಿಗಳಲ್ಲ, ಕರ್ಮಶೀಲರು; ಆದರೆ ಯಾವುದು ಪವಿತ್ರ ಕರ್ಮ ಯಾವುದು ನೀಚ ಕರ್ಮ ಅವರಿಗೆ ತಿಳಿಯದು. ಜ್ಞಾನಿ ಮಹಾತ್ಮನು ಅಜ್ಞಾನಿಗ ಳನ್ನು ಪೂರ್ಣ ಕರ್ಮಹೀನರನ್ನಾಗಿ ಪರಿವರ್ತಿಸಬಾರದು. ಅವರು ನಿಷಿದ್ಧ ಕರ್ಮ ಗಳಿಂದ ನಿವೃತ್ತರಾಗಿ ವಿಹಿತ ಕರ್ಮಗಳಲ್ಲಿ ತೊಡಗುವಂತೆ ಪ್ರೋತ್ಸಾಹಿಸಬೇಕು. ಇದೇ ಬಲ್ಲವರ ಲೋಕಸಂಗ್ರಹ ಕಾರ್ಯ.

ಒಂದು ವೇಳೆ, ಮಂದ ಮತಿಗಳಿಗೆ "ನೀವು ಬ್ರಹ್ಮರೂಪರು. ಪಾಪ ಪುಣ್ಯಗಳಿಂದ ನಿರ್ಲಿಪ್ತರು, ಸದಾ ಮುಕ್ತರು" ಎಂದು ಭೋಧಿಸಿದರೆ ವಿರೋ ಚನ ಸಿದ್ಧಾಂತಿಯಂತೆ ವಿಕೃತಾರ್ಥ ಮಾಡಿಕೊಂಡು ಹೀನ ಕೃತ್ಯಕ್ಕಿಳಿಯುತ್ತಾರೆ. ಈ ಕಡೆ ಕರ್ಮ ಶ್ರದ್ಧೆಯ ಹಾನಿ. ಆ ಕಡೆ ನೈಜ ಜ್ಞಾನದ ಅಪ್ರಾಪ್ತಿ ! ಉಭಯ ಭ್ರಷ್ಟರಾದ ಅವರು ತ್ರಿಶಂಕು ಸ್ವರ್ಗದಲ್ಲಿ ಬಾಳಬೇಕಾಗುತ್ತದೆ.

ಪ್ರಮಾಣ: ಅಜ್ಞಸ್ಯಾರ್ಧ ಪ್ರಬುದ್ಧಸ್ಯ ಸರ್ವಂ ಬ್ರಹ್ಮೇತಿ ಯೋ ವದೇತ್।
ಮಹಾನಿರಯ ಜಾಲೇಷು ಸ ತೇನ ನಿಯೋಜಿತಃ॥

ಅಪ್ರಬುದ್ಧರಾದ ಅಜ್ಞರಿಗೆ ಸರ್ವವು ಬ್ರಹ್ಮವೆಂದು ಹೇಳಿದವನು ಅವರನ್ನೆಲ್ಲ ನರಕ ಕೂಪದಲ್ಲಿ ದೂಡುತ್ತಾನೆ. ಉಪದೇಶಕನು ಒಂದು ಮಾತನ್ನು ಲಕ್ಷ್ಯದಲ್ಲಿಡ ಬೇಕು. ವ್ಯಕ್ತಿಗಳಲ್ಲಿ ನೀತಿ ಸೌಧ ಕಟ್ಟುವದು ಬಹು ಕಷ್ಟ. ಅದಕ್ಕೆ ವರುಷ ವರುಷಗಳೇ ಬೇಕು. ಕಟ್ಟಿದ ಸೌಧವನ್ನು ಕೆಡುವುವದು ಕಷ್ಟವಲ್ಲ; ಒಂದು ನಿಮಿಷಾರ್ಧ ಸಾಕು. ಜೀವನಾವಧಿ ದುಡಿದು ಸದಾಚಾರಿಗಳಾದ ಜನರನ್ನು ಪತ ನಗೊಳಿಸುವದೂ, ದೀರ್ಘ ಕಾಲದ ಸಚ್ಚಾರಿತ್ರ್ಯವನ್ನು ದುರ್ಬೋಧದಿಂದ ಕೆಡಿ ಸುವದೂ ಒಂದೇ.

ಜನರು ಸಾಮಾನ್ಯವಾಗಿ ಕರ್ಮ ಪ್ರೇಮಿಗಳು. ಫಲ ಪ್ರಾಪ್ತಿಗಾಗಿ ನಿತ್ಯ ನೈಮಿತ್ತಿಕ ಕಾಮ್ಯ ಮುಂತಾದ ಕರ್ಮ ಎಸಗುವದೆಂದರೆ ಅವರಿಗೆ ಎಲ್ಲಿಲ್ಲದ ಉತ್ಸಾಹ. ಬುದ್ಧಿವಂತನಾದ ಜ್ಞಾನಯೋಗಿಯು ಅವರ ಉತ್ಸಾಹಕ್ಕೆ ತಣ್ಣೀ ರೆರಚುವದು ಘೋರ ಅಪಚಾರ. ಅದಕ್ಕೆ ಬದಲಾಗಿ, ತಾನೂ ಅಷ್ಟೇ ನಿಷ್ಠೆ ಯಿಂದ ಕರ್ಮ ಆಚರಿಸಿ ಕರ್ಮಶೀಲರಿಗೆ ಇನ್ನಷ್ಟು ಉತ್ತೇಜನವೀಯಬೇಕು.

ಆಚಾರಹೀನ ಉಪದೇಶ ನಿರರ್ಥಕ. ತಾನು ಪರಸ್ತ್ರೀ ಗಮನಿ, ಪರವಿತ್ತಾ ಪಹಾರಿ, ಪರ ನಿಂದಕನಾಗಿ "ಪರರ ಹೆಣ್ಣು, ಪರರ ಹೊನ್ನು ನರಕವೆಂದು ತಿಳಿ ಯಿರೊ" ಎಂದು ಉಪದೇಶಿಸಿದರೆ ಕೇಳುವವರಾದರು ಹೇಗೆ ನಂಬಬೇಕು? ಇತ

ರರಿಗೆ ಬೇಡವಾದುದು ತನಗೇಕೆ ಬೇಕು? ಇತರರಿಗೆ ನರಕವಾದುದು ತನಗೆ ಸುರುಚಿ ಭೋಜ್ಯವಾಗಬಹುದೆ? ಬೋಧಕನ ಮಾತು ಮಂತ್ರವಾಗಬೇಕಾದರೆ ಸುಶೀಲತೆ ಅವನ ಮೈಗೂಡುವದವಶ್ಯ.

"ಸಮಾಚರೇತ್" ವಿವೇಕಿ–ವಿದುಷನು ಬರಿ ತೋರಿಕೆಗಾಗಿ ಕರ್ಮ ಮಾಡಬೇಕೆಂದಲ್ಲ. ಹಾರ್ದಿಕವಾಗಿ ಕರ್ಮ ನಿರ್ವಹಿಸಬೇಕು. ಸಮಯಾನುಸಾರ ಮಾತ್ರ ಧರ್ಮ ಚಿಹ್ನಗಳನ್ನು ಧರಿಸುವವರು, ವಿಶಿಷ್ಟ ಸಮಾರಂಭಗಳಲ್ಲಿ ಖಾದಿ ಧರಿಸುವವರು– ಇವರೆಲ್ಲ ಆಯಾ ತತ್ತ್ವಗಳ ನಿಷ್ಠೆಯುಳ್ಳವರಲ್ಲ. ಅದೆಲ್ಲ ನಾಟಕೀಯ. ವಿದ್ವಾನನು ತನಗೆ ಹಿತವಿರಲಿ ಬಿಡಲಿ ಜನತೆಯ ಕಲ್ಯಾಣಕ್ಕಾಗಿ ಯೋಗ್ಯ ಕರ್ಮಗಳನ್ನು ಬಹು ನಿಷ್ಠೆಯಿಂದ ಸಮ್ಯಕ್ ರೀತಿಯಲ್ಲಿ ಆಚರಿಸಬೇಕು. ಅಂದರೆ ಮಾತ್ರ ಸಾಮಾನ್ಯರಲ್ಲಿ ಕರ್ಮಪ್ರೇಮ ಉದಿಸುವದು.

ಆತ್ಮಜ್ಞಾನ ಪರಮಶ್ರೇಷ್ಠ ನಿಜ. ಅವನ್ನು ಪಡೆದಾಗ "ತಸ್ಯಕಾರ್ಯಂ ನ ವಿದ್ಯತೇ"! ಆದರೆ ಆ ವಿದ್ಯೆ ಕೈವಶವಾಗಲು ಹೃದಯ ಶುದ್ಧಿ ಮುಖ್ಯ. ಹೃದಯ ಶುದ್ಧಿಯು ಉಪದೇಶ ಜನ್ಯವಲ್ಲ; ಸತ್ಕರ್ಮ ಸಾಧ್ಯ. ಶ್ರೀ ನಿಜಗುಣ ಶಿವಯೋಗಿಗಳ ವಚನ ಹೀಗಿದೆ:

ಮುನ್ನವೆ ಭಕ್ತಿ ಕ್ರಿಯೆಯಿಂ। ದನ್ನರೆ ಪರಿಶುದ್ಧಮಾದ ಬುದ್ಧಿಯನುಳ್ಳ ಸ।
ಮುನ್ನತಸದ್ಗುಣ ಗಣ ಸಂ। ಪನ್ನರ್ಗೆ ನಿಜಸ್ವರೂಪಮಿದರೋಳ್ ಸಾಧ್ಯಂ॥"

ಭಕ್ತಿ ಕ್ರಿಯೆಯಿಂದ ಬುದ್ಧಿ ಶುದ್ಧಿ; ಅದರಿಂದ ಸದ್ಗುಣ ಗಣ ಸಂಪದ ಪ್ರಾಪ್ತಿ; ಅದರಿಂದ ನಿಜ ಸ್ವರೂಪ ಸಿದ್ಧಿ! ಮನಸ್ಸೇ ಕಲ್ಮಷವಾದ ಜನತೆಗೆ ಬ್ರಹ್ಮಜ್ಞಾನ ಪೀಯೂಷ ನೀಡುವದೆಂದರೆ "ನೀರಿಳಿಯದ ಗಂಟಲೋಳ್ ಕಡುಬು ತುರುಕಿದಂತೆ."

ಅಲ್ಲದೆ, ಕ್ರಿಯಾಹೀನ ಜ್ಞಾನ ಯಾವ ಪ್ರಯೋಜನಕ್ಕೆ ಬಂದೀತು ? ಅದರಿಂದ ತನಗೂ ಲಾಭವಿಲ್ಲ, ಮಾನವ ಕುಲಕ್ಕೂ ಶ್ರೇಯವಿಲ್ಲ. ಕರ್ಮವು ದೇವನಿಗೆ ಅತಿ ಮೆಚ್ಚಿನದು. ಅದರಿಂದಲೇ ಸುಖ ! ದಿವ್ಯಾನಂದ ! ಎಲ್ಲಿ ನೋಡಿದಲ್ಲಿ ಲಿಂಗಾರ್ಚನ, ಗುರುಪೂಜೆ, ದೇವತಾರಾಧನ, ಜಂಗಮ ದಾಸೋಹ, ಯಜ್ಞ, ಸಂಧ್ಯಾವಂದನ, ದಾನ, ಜಪ, ತಪ, ಯೋಗಾಭ್ಯಾಸ, ಹೋಮ-ಹವನ ನಡೆಯಲು ಪ್ರಾರಂಭಿಸಿದರೆ ಯಾರಿಗೆ ಸಂತಸವಾಗಲಿಕ್ಕಿಲ್ಲ ? ಜ್ಞಾನನಿಧಿ ಗುರುವು ಕರ್ಮ ಆಚರಿಸಿದಾಗ ಅವನಿಗೆ ದೊರೆವ ಫಲವೇ ಈ ಜಾಗತಿಕ ಧರ್ಮ ಸಮಾರಾಧನ ! ಗುರುವಿನ ಹೊಣೆ ದೊಡ್ಡದು. ಫಲದಾಶೆ ತೋರಿಸಿಯಾದರೂ ಸರಿ, ಜನರನ್ನು ಸತ್ಕರ್ಮದಲ್ಲಿ ಪ್ರೇರೇಪಿಸಬೇಕು. ಇದೇ ಲೋಕ ಸಂಗ್ರಹ ಕಾರ್ಯ.

**ಸಂಬಂಧ:-** ಅಜ್ಞಾನಿ, ಜ್ಞಾನಿ ಇಬ್ಬರೂ ಒಂದೇ ಬಗೆಯ ಕರ್ಮಗಳಲ್ಲಿ ತೊಡಗಿದರೆ ಅವರಿಬ್ಬರಲ್ಲಿ ಏನು ಭೇದ ಉಳಿಯಿತು ? ಮುಂದಿನ ಎರಡು ಮಂತ್ರಗಳಲ್ಲಿ ಉತ್ತರವಿದೆ.

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥೨೭॥**

**ಭಾವ:**– ನಿಜವಾಗಿ ನೋಡಿದರೆ ಪ್ರಕೃತಿಯ ಗುಣಗಳಿಂದ ಸರ್ವ ಕರ್ಮಗಳು ಮಾಡಲ್ಪಡುತ್ತವೆ. ಅಹಂಕಾರದಿಂದ ಮೂಢವಾದ ಮನಸ್ಸುಳ್ಳವನು ಮಾತ್ರ ತಾನೇ ಕರ್ತನು ಎಂದು ತಿಳಿಯುತ್ತಾನೆ.

**ವಿವರಣೆ:- ಪ್ರಕೃತೇಃ ಕ್ರಿಯಮಾಣಾನಿ...:**– ಪ್ರಕೃತಿಯು ತ್ರಿಗುಣಾತ್ಮಿಕಾ: ಸತ್ವ, ರಜ, ತಮವೆಂಬ ಬಲಾಢ್ಯ ಸೃಜನ ಶಕ್ತಿಗಳು ಅದರ ಗರ್ಭವಲ್ಲಿವೆ. ಪ್ರಾಕೃತಿಕ ಸತ್ವ ಶಕ್ತಿಯಿಂದ ಮನ ಬುದ್ಧ್ಯಾದಿ ಅಂತಃಕರಣಗಳ ನಿರ್ಮಾಣ; ರಜ ಶಕ್ತಿಯಿಂದ ಜ್ಞಾನೇಂದ್ರಿಯಗಳ ನಿರ್ಮಾಣ; ತಮ ಶಕ್ತಿಯಿಂದ ಸ್ಥೂಲ ದೇಹದ ನಿರ್ಮಾಣ. ಅಂತಃಕರಣಗಳಿಂದ ನಡೆಯುವ ವಿವಿಧ ಕಾರ್ಯಗಳಿಗೆ ಸತ್ವ ಗುಣಶಕ್ತಿಯು ಕಾರಣ; ಜ್ಞಾನೇಂದ್ರಿಯಗಳಿಂದ ಸಾಗುವ ವಿಭಿನ್ನ ಕರ್ಮಗಳಿಗೆ ಸತ್ವಮಿಶ್ರಿತ ರಜೋ ಗುಣಶಕ್ತಿಯು ಕಾರಣ; ದೇಹದಿಂದ ಘಟಿಸುವ ಅಸಂಖ್ಯ ವ್ಯವಹಾರಗಳಿಗೆ ತಮೋಗುಣಶಕ್ತಿಯು ಕಾರಣ. ಇದು ನಿಜ ಸ್ಥಿತಿ. ಇದನ್ನು ಅರಿತವರು ಜ್ಞಾನಿಗಳು. ಅಹಂಕಾರ ವಿರಹಿತ ವಿದುಷರು.

ಇದರ ಅರಿವಿಲ್ಲದ ಜೀವನು ಅಂತಃಕರಣಗಳಲ್ಲಿ ತಾದಾತ್ಮ್ಯಹೊಂದಿ ತಾನೇ ಸಂಕಲ್ಪಿಸುವವ ನಿರ್ಧರಿಸುವವ ಸ್ಮರಿಸುವವ ಎಂದು ಅಹಂಕರಿಸುತ್ತಾನೆ. ಜ್ಞಾನೇಂದ್ರಿಯಗಳಲ್ಲಿ ತಾದಾತ್ಮ್ಯ ಹೊಂದಿ ತಾನೇ ಕೇಳುವವ ಮುಟ್ಟುವವ ನೋಡುವವ ಎಂದು ಅಭಿಮಾನ ಪಡುತ್ತಾನೆ. ದೇಹದಲ್ಲಿ ತಾದಾತ್ಮ್ಯ ಹೊಂದಿ ದೈಹಿಕ ಕಾರ್ಯಗಳಲ್ಲಿ ಗರ್ವ ತಾಳುತ್ತಾನೆ. ಅಜ್ಞಾನಿಗೆ ನಾನು ಎನ್ನುವದೇ ಜಪ್ಯ ಮಂತ್ರ.

**ಭಗವಂತ:**–"ಅರ್ಜುನ, ಅಹಂಕಾರಪಿತ್ತ ನೆತ್ತಿಗೇರಿದ ವಿಮೂಢರು ಕರ್ಮ ಮಾಡುವದೇನೋ ಸರಿ; ಆದರೆ ಆ ಕರ್ಮಜಾಲ ಅವರನ್ನು ಬಂಧಿಸುತ್ತದೆ. ಏಕೆಂದರೆ ದೇಹಾದಿಗಳಿಂದ ಉಂಟಾದ ಕರ್ಮಗಳಿಗೆ ತಾವೇ ಕಾರಣ ಎಂದು ಅವರ ಅರ್ಥಹೀನ ತಿಳುವಳಿಕೆ. ನಿಜಸ್ಥಿತಿ ಹಾಗಿಲ್ಲ. ದೇಹಾದಿಗಳಿಂದ ಸಂಘಟಿಸುವ ಸರ್ವ ಕರ್ಮಗಳಿಗೆ ಮೂಲ ಕಾರಣಗಳು ಪ್ರಾಕೃತಿಕ ಗುಣಗಳು. ಜೀವನು ಯಾವ ಬಗೆಯಿಂದಲೂ ಕರ್ತೃವಲ್ಲ. ಅವನು ನಿಷ್ಕ್ರಿಯನಾದ ದೇವನ ಅಂಶ. ಹೀಗೆ ಅರಿತ ಮಹಾನುಭಾವರೆ ಬುದ್ಧಿವಂತರು. ಅವರಿಗೆ ಕರ್ಮಬಂಧನವಿಲ್ಲ."

**ಸಂಬಂಧ:**– ಬುದ್ಧಿವಂತ ಕರ್ಮಯೋಗಿಗಳು ನಿರ್ಲಿಪ್ತರು.

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮ ವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥೨೮॥**

**ಅರ್ಥ:**– ಮಹಾಬಾಹೋ = ವಿಶಾಲ ಬಾಹುವೆ, ತು = ಆದರೆ, ಗುಣಕರ್ಮ

ವಿಭಾಗಯೋಃ ತತ್ತ್ವವಿತ್=ಗುಣ ಕರ್ಮ ವಿಭಾಗ ತತ್ತ್ವ ತಿಳಿದವನು, (ಗುಣೇಭ್ಯಃ ಆತ್ಮನಃ ವಿಭಾಗಃ, ನ ಮೇ ಕರ್ಮಾಣೀತಿ; ಕರ್ಮಭ್ಯಃ ಅಪಿ ಆತ್ಮನಃ ವಿಭಾಗಃ; ತಯೋಃ ಗುಣಕರ್ಮ ವಿಭಾಗಯೋಃ ಯಃ ತತ್ತ್ವಂ ವೇತ್ತಿ ಸಃ=ಗುಣಗಳಿಂದ ಆತ್ಮನು ಬೇರೆ. ಕರ್ಮಗಳಿಂದಲೂ ಆತ್ಮ ಬೇರೆ, ಈ ಎರಡೂ ಗುಣ ವಿಭಾಗ ಮತ್ತು ಕರ್ಮ ವಿಭಾಗಗಳ ಸ್ವರೂಪವನ್ನು ಯಾವನು ತಿಳಿಯುತ್ತಾನೆಯೋ ಅವನು ಗುಣಕರ್ಮ ವಿಭಾಗಯೋಃ ತತ್ತ್ವವಿತ್) ಗುಣಾಃ ಗುಣೇಷು ವರ್ತಂತ ಇತಿ= ಗುಣಗಳು ಗುಣಗಳಲ್ಲಿ ವರ್ತಿಸುತ್ತವೆ ಎಂದು, ಮತ್ವಾ= ತಿಳಿದು ನ ಸಜ್ಜತೇ= ಆಸಕ್ತನಾಗುವದಿಲ್ಲ.

**ವಿವರಣೆ:– ತತ್ತ್ವವಿತ್ತು ಗುಣಕರ್ಮ ವಿಭಾಗಯೋಃ...:–** ವಿಶ್ವದಲ್ಲಿ ಮೂರೇ ಮೂರು ತತ್ತ್ವಗಳಿವೆ. (೧) ಪ್ರಕೃತಿ (೨) ಪುರುಷ (೩) ಜೀವ. ಪ್ರಕೃತಿ:– ತ್ರಿಗುಣಾತ್ಮಿಕಾ ಹಾಗು ಕ್ರಿಯಾತ್ಮಿಕಾ. ತ್ರಿಗುಣಗಳಿಂದ ಮಹತ್ತು, ಅಹಂಕಾರ, ತನ್ಮಾತ್ರೆ, ಭೂತಗಳು, ಬಾಹ್ಯಾಂತರ ಇಂದ್ರಿಯ ಹಾಗು ಜಡ ದೇಹ ನಿರ್ಮಾಣ. ಈ ಎಲ್ಲ ಸೃಷ್ಟ ವಸ್ತುಗಳು ಸತ್ವಾದಿ ಗುಣಸಾಮರ್ಥ್ಯದಿಂದ ಪ್ರೇರಿತ ವಾಗಿ ಬಗೆ ಬಗೆಯ ಕಾರ್ಯ ಮಾಡುತ್ತಿವೆ. ಅಂದರೆ ಪ್ರಾಕೃತಿಕ ವಿಶ್ವವು ಗುಣ ಕ್ರಿಯಾತ್ಮಿಕ! ಪುರುಷ:– ಅಜಡ. ಪ್ರಕೃತಿಗಿಂತ ಪರ. ಗುಣಕ್ರಿಯಾ ವಿಲಕ್ಷಣ. ಸರ್ವ ಸಾಕ್ಷಿಕ. ಸರ್ವ ನಿಯಾಮಿಕ. ಅವನಲ್ಲಿ ಇಂದ್ರಿಯ ವೇದ್ಯ ಶಬ್ದಾದಿ ಗುಣ ಗಳಿಲ್ಲ; ಸತ್ವಾದಿ ಪ್ರಾಕೃತಿಕ ಶಕ್ತಿಗಳಿಲ್ಲ; ನಿರ್ಲಿಪ್ತ, ಸ್ವಯಂಪ್ರಕಾಶ, ಚಿದ್ಘನ. ಜೀವ:– ಅಜಡ ಪುರುಷ ಹಾಗು ಜಡ ಪ್ರಕೃತಿ ಎರಡರ ಸಾಂಗತ್ಯದಿಂದ ಜೀವ ಎಂಬ ಭಾವ ಉದಯ. ಇವನು ಜಡಾಜಡ, ಸಂಕರ ಸಮ್ಮಿಶ್ರ. ಇವ ನಲ್ಲಿ ಆತ್ಮಸ್ವರೂಪದ ಅರಿವಿದೆ; ಪ್ರಕೃತಿಯ ಜಡತೆಯೂ ಇದೆ. ಪ್ರಕೃತಿ ಹಾಗು ಪುರುಷರಲ್ಲಿ ಬಂಧನ ಹಾಗು ಮುಕ್ತಿಗಳ ಕಲ್ಪನೆಯಿಲ್ಲ. ಜೀವನಲ್ಲಿ ಈ ದ್ವಿವಿಧ ಕಲ್ಪನೆಗಳು ಮೂಡಿ ಬಂದವು. ಅಜ್ಞಾನ ಆವರಣ ವಿಕ್ಷೇಪಗಳು ಜೀವನ ದೃಷ್ಟಿ ಯನ್ನು ಆವರಿಸಿವೆ. ಆ ಆವರಕಗಳಿಂದ ಶೋಕ-ಸಂತಾಪ. ಅದೇ ಬಂಧನ ಪ್ರಪಂಚ. ಹಾಗು ತನ್ನ ಸ್ವರೂಪ ಅರಿತು ದೇವ ಪುರುಷನಲ್ಲಿ ಸಾಮರಸ್ಯ ಹೊಂದಿದರೆ ಅದೇ ಮುಕ್ತಿ.

ಪ್ರಕೃತಿ ವಿವಿಧ ಗುಣ ರೂಪಿಣಿ; ಜೀವನು ವಿವಿಧ ಭಾವ ರೂಪನು. ಅವ ರಿಬ್ಬರನ್ನು ಪ್ರಕಾಶಿಸುವ ಸಾಕ್ಷಿ ಚಿದ್ವಸ್ತುವು ಅಖಂಡ! ನಿತ್ಯ ನಿರಾಮಯ!! " ತತ್ತ್ವಂ ಯಾಥಾತ್ಮ್ಯಂ ವೇತ್ತೀತಿ ತತ್ತ್ವವಿತ್ " ಜೀವ ಹಾಗು ಜಡ ವಿಲಕ್ಷ ಣವಾದ ಗುಣ ಕ್ರಿಯಾ ವಿಭಿನ್ನವಾದ ದೇವನನ್ನು ಯಥಾವತ್ತಾಗಿ ಜಾನಿಸಿದ ವನೇ ತತ್ತ್ವವಿಜ್ಞಾನಿ ! ಅರಿತ ಅನುಭಾವಿ !

**ಗುಣಾಃ ಗುಣೇಷು ವರ್ತಂತೇ...:–** ತತ್ತ್ವವಿತ್ತರು ಬದುಕಿರುವಷ್ಟು ಕಾಲ ಅಸಂಖ್ಯ ಕರ್ಮಗಳನ್ನು ಆಚರಿಸುತ್ತಾರೆ. ಆದರೆ ಆ ಎಲ್ಲ ಕರ್ಮಗಳಿಗೆ ತಾವು ಕಾರಣವಲ್ಲ, ಗುಣಗಳೇ ಕಾರಣ; ಗುಣಗಳು ಇಂದ್ರಿಯಾದಿ ತತ್ತ್ವಗಳಲ್ಲಿ

ಸೇರಿಸಿ ವ್ಯವಹರಿಸುತ್ತವೆ ಎಂದು ಭಾವಿಸುತ್ತಾರೆ. ತಾವು ನಿರ್ಲಿಪ್ತರಾಗಿ ಬಾಳುತ್ತಾರೆ. ಆದುದರಿಂದ ಲೋಕ ಸಂಗ್ರಾಹಕವಾದ ಅವರ ಕರ್ಮಗಳು ಅವರನ್ನು ಬಾಧಿಸುವದಿಲ್ಲ. ಅವರು ಅಹಂಕಾರ ವಿಹೀನರಾದುದರಿಂದ ಆ ಕರ್ಮಗಳಲ್ಲಿ ಬದ್ಧರಾಗುವದಿಲ್ಲ.

ತಾತ್ಪರ್ಯ:- ಭ್ರಮಾತ್ಮಕ ಕರ್ತೃಭಾವವು ದುರ್ಗಂಧ-ಮಾಲಿನ್ಯ. ಅವರಲ್ಲಿ ವಿರಮಿಸುವವ ಅವಿಪಶ್ಚಿತ್ತನು. ಒಂದು ದೃಷ್ಟಾಂತದಿಂದ ಅವನ ಪರಿಸ್ಥಿತಿ ಅರಿಯಬಹುದು. ಬೈಲು ಕೆರೆ; ಬರಿ ರಾಡಿ. ಅದರಲ್ಲಿ ಉರುಳಾಡಿ ಹೊರಳಾಡಿ, ಮುಳುಗಿ ಎದ್ದು, ಕಡೆಗೆದ್ದು ಬಂದು ತನ್ನ ಈ ನವ್ಯ ವಿಚಿತ್ರ ಸೌಂದರ್ಯ ತೋರಿಸುವದು ಕೋಣ. ಹಾಗೆ ಪ್ರಪಂಚವು ಕೆರೆ. ವಿಷಯ ವ್ಯಾಮೋಹವು ದುರ್ಗಂಧದ ರಾಡಿ. ಅದರಲ್ಲಿ ಉರುಳಿ ಹೊರಳಿ ಮೈ ಮಾತು ಮನಗಳಿಗೆ ಅಹಂಕಾರ, ಅಭಿಮಾನ, ವ್ಯಾಮೋಹ ಕಲ್ಮಷ ಹಚ್ಚಿಕೊಂಡು ಆನಂದ ಪಡುವವ ಅಜ್ಞ; ಕೋಣನಂಥ ಮಾನವ. ಇಂದ್ರಿಯಾರಾಮಿಯಾಗಿ ಮೃತ್ಯು ಛಾಯೆಯಲ್ಲಿ ಬದುಕುವ ಅವನಿಗೆ ಎಲ್ಲಿ ಸಮಾಧಾ..?

ಇನ್ನು ವೃಷಭ ಶುಚಿಯಾದ ಪ್ರಾಣಿ. ಹೊಲಸೆಂದರೆ ಆಗಿ ಬರದು. ಅದಕ್ಕೆ ಕುಡಿಯಲು ತಿಳಿಯಾದ ನೀರುಬೇಕು. ತಿನ್ನಲು ಮೃದುವಾದ ಹುಲ್ಲುಬೇಕು. ಸಿಕ್ಕಲ್ಲಿ ಸಿಕ್ಕತ್ತ ನೋಡದು. ಮೂಸಿಸದು. ರಮಣೀಯ ನಿಸರ್ಗವು ಅದರ ಆವಾಸ. ಅಂತಲೇ ಶಿವನು ತನ್ನ ವಾಹನ ಮಾಡಿಕೊಂಡ. ಹಾಗೆ, ಮೋಹ ತೊರೆದು, ವಿಷಯರತಿ ತ್ಯಜಿಸಿ ಸದಾ ವಿಶ್ವವ್ಯಾಪಕ ಆತ್ಮನತ್ತ ಲಕ್ಷವಿಟ್ಟು ದುಡಿಯುವವನು ವೃಷಭನಂಥ ವ್ಯಕ್ತಿ.

ಸಂಬಂಧ:– ಜ್ಞಾನಿಗಳು ಅಜ್ಞ ಕರ್ಮಿಗಳ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕು?

ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ।
ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನವಿಚಾಲಯೇತ್ ॥೨೯॥

ಅರ್ಥ:- ಪ್ರಕೃತೇಃ = ಪ್ರಕೃತಿಯ ಗುಣಸಮ್ಮೂಢಾಃ = ಗುಣಗಳಿಂದ ಭ್ರಮೆ ಹೊಂದಿದವರು, ಗುಣ ಕರ್ಮಸು= ಗುಣ ಕರ್ಮಗಳಲ್ಲಿ ಸಜ್ಜಂತೇ= ಆಸಕ್ತರಾಗುತ್ತಾರೆ. ಕೃತ್ಸ್ನವಿತ್= ಎಲ್ಲ ತಿಳಿದವನು, ತಾನ್= ಆ ಅಕೃತ್ಸ್ನವಿದಃ= ಅಲ್ಪಜ್ಞರಾದ, ಮಂದಾನ್ = ಮಂದ ಮತಿಗಳನ್ನು, ನ ವಿಚಾಲಯೇತ್ =ಅಲ್ಲಾಡಿಸಬಾರದು.

ವಿವರಣ:– ಪ್ರಕೃತೇಃ ಗುಣಸಮ್ಮೂಢಾಃ...:– ಪ್ರಾಕೃತಿಕ ಗುಣಗಳಲ್ಲಿ ವ್ಯಾಮೋಹಿತರಾದವರು. ಅವರಿಗೆ ಆತ್ಮಭಾನವಿಲ್ಲ. ಜಡತತ್ತ್ವಗಳ ಗುಣಧರ್ಮಗಳನ್ನು ತಮ್ಮ ಮೇಲೆ ಆರೋಪ ಮಾಡಿಕೊಂಡು 'ನಾನು ಕೃಶ; ನಾನು ಸ್ಥೂಲ.' 'ನಾನು ಬುದ್ಧಿವಂತ; ನಾನು ಬುದ್ಧಿಹೀನ' 'ನಾನು ಚಂಚಲ; ನಾನು ಧೀರ' ನಾನು ಪತಿ, ಪಿತ, ತಾತ, ಸಿರಿವಂತ' ಹೀಗೆ ಭಾವ ತಾಳುತ್ತಾರೆ. ಆಯಾ ಭಾವ

ನೆಗೆ ತಕ್ಕಂತೆ ಬಹು ಬಗೆಯ ಕರ್ಮ ಮಾಡುತ್ತಾರೆ. ಆತ್ಮನ ಅರಿವಿರದ ಅವರಿಗೆ 'ಅಕೃತ್ಸ್ನವಿತ್' ಎಂದಿದ್ದಾನೆ ಭಗವಂತ.

ಕೃತ್ಸ್ನವಿತ್:– 'ಆತ್ಮನೋ ವಾ ಅರೆ, ದರ್ಶನೇನ, ಶ್ರವಣೇನ, ಮತ್ಯಾ ವಿಜ್ಞಾನೇನ ಇದಂ ಸರ್ವಂ ವಿಜ್ಞಾತಂ'(ಶ್ರುತಿ)ದರ್ಶನದಿಂದ, ಶ್ರವಣದಿಂದ, ಮತಿಯಿಂದಆತ್ಮನನ್ನು ತಿಳಿದಾಗ ಸರ್ವವೂ ವಿಜ್ಞಾತವಾಯಿತೆಂಬರ್ಥ. ಮಹಾನುಭಾವರು ಸರ್ವಮೂಲ ದೇವನನ್ನು ಸಾಕ್ಷಾತ್ಕರಿಸಿಕೊಂಡುದರಿಂದ ಅವರಿಗೆ'ಕೃತ್ಸ್ನವಿತ್' ಎನ್ನುತ್ತಾನೆ ಭಗವಂತ. ಆತ್ಮವೊಂದನ್ನು ಬಿಟ್ಟು ಏನೆಲ್ಲ ತಿಳಿದವರೂ ಅವರು ಕೃತ್ಸ್ನವಿದರಲ್ಲ, ಅಕೃತ್ಸ್ನವಿದರು.

ಅಕೃತ್ಸ್ನವಿದಃ ಮಂದಾನ್ ಕೃತ್ಸ್ನವಿತ್ ನ ವಿಚಾಲಯೇತ್:-ಬಲ್ಲಿದನು ಅರ್ಥಾಮರ್ಥ ತಿಳಿದ ಅಜ್ಞಾನಿಗಳ ಶೀಲಕ್ಕೆ ಚ್ಯುತಿ ಬರದಂತೆ ಒಂದು ಅನುವಿನಿಂದ ಪರಮಾರ್ಥ ಮಾರ್ಗದಲ್ಲಿ ನಡೆಸಿಕೊಂಡು ಹೋಗಬೇಕು. ಸಂತ ಶರಣರ ಪುರಾಣ ಪುಣ್ಯ ಕಥೆ ಹೇಳಿ ಕರ್ಮ ವಿಶ್ವಾಸ ಹೆಚ್ಚಿಸಿ ಹೃದಯ ಶುದ್ಧಿಗೆ ದಾರಿ ಮಾಡಿಕೊಡಬೇಕು. ಹೊಸದಾಗಿ ಶಾಲೆಗೆ ಬರುವ ಬಾಲಕನಿಗೆ ಬೀಜ ಗಣಿತ ಹೇಳಿದರೆ ಆತ ವಿಭ್ರಮನಾಗುತ್ತಾನೆ; ಶಾಲೆಯ ಪ್ರೀತಿಯನ್ನು ಕಳೆದುಕೊಳ್ಳುತ್ತಾನೆ. ಅದರಂತೆ, ಸಾಮಾನ್ಯ ಮನುಷ್ಯನಿಗೆ ' ಪ್ರಾಣಲಿಂಗ ಪೂಜೆಯ ಮಾಡು!' ಎಂದು ಅಂತರಾತ್ಮಾರ್ಚನೆಯ ಭವ್ಯ ವಿಧಾನ ವಿವರಿಸಿದರೆ ಆತ ಪೂಜಾರ್ಚನೆಯಲ್ಲಿ ಅಭಿರುಚಿಯನ್ನೇ ಕಳೆದುಕೊಳ್ಳುತ್ತಾನೆ. ಅದುದರಿಂದ ಬಲ್ಲ ಮಹಾತ್ಮನು ಅನುವಿನಿಂದ ಅಜ್ಞರನ್ನು ಕರೆದೊಯ್ಯಬೇಕು.

ಭಗವಂತ:– ಅರ್ಜುನ, ಆತ್ಮನನ್ನರಿಯದೆ ಪ್ರಕೃತಿ–ಗುಣಗಳಲ್ಲಿ ಅಭಿಮಾನ ತಾಳಿದ ಜನರು ಕರ್ಮ ಪ್ರೇಮಿಗಳು: ಕರ್ತವ್ಯ ನೆರವೇರಿಸುವಲ್ಲಿ ಉತ್ಸುಕರು. ಅವರ ಮನಸ್ಸನ್ನು ಬಲ್ಲಿದನು ಕೆಡಿಸಲಾಗದು. ಜ್ಞಾನಿ ಗುರುವು ಆ ಜನರನ್ನು ಕರ್ಮಗಳ ಮೂಲಕವೇ ಆತ್ಮ ಪ್ರಭುವಿನತ್ತ ಕರೆದು ಒಯ್ಯಬೇಕು. ರಾಷ್ಟ್ರ, ಧರ್ಮ, ಸಮಾಜಗಳ ನೇತಾರನಾದ ವಿದುಷನು ಪ್ರತಿಕ್ಷಣ ಕರ್ಮನಿರತನಾಗಿರಬೇಕು. ಸತ್ಯ ಅಹಿಂಸಾ ಪರೋಪಕಾರ ದಾನ ದಯೆಗಳಂಥ ಸದ್ಗುಣ ಸತ್ಕರ್ಮಗಳಲ್ಲಿ ಅಭಿರತಿ ತಾಳಬೇಕು. ನಿಸ್ವಾರ್ಥ ಸೇವೆಯಲ್ಲಿ ಬದುಕನ್ನು ಸವೆಸಬೇಕು. ನೀನೂ ಒಬ್ಬ ರಾಷ್ಟ್ರ ನಾಯಕ. ನಿನ್ನ ನೀ ಅರಿ. ಜನತೆಯ ನೀತಿ ಭಕ್ತಿಯನ್ನು ಕೆಡಿಸಬೇಡ. ಅವರಿಗೆ ಪ್ರಚೋದನೆ ದೊರೆವ ರೀತಿಯಲ್ಲಿ ಆಚಾರಬದ್ಧನಾಗು. ಅದರಿಂದ ನಿನಗೂ ಹಿತ; ಜಗಕ್ಕೂ ಹಿತ."

ಸಂಬಂಧ:– ಜೀವನವೇ ಹೋರಾಟ. ಆತ್ಮಲೀನನಾಗುವವರೆಗೆ ಇದು ಸಾಗಬೇಕು. ಈ ಹೋರಾಟ ಹೇಗೆ ನಡೆಸಬೇಕು? ಭಗವಂತ ಉತ್ತರಿಸುತ್ತಾನೆ.

ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮ ಚೇತಸಾ ।

ಸಲೆಸಿ ವ್ಯವಹರಿಸುತ್ತನೆ ಎಂದು ಭಾವಿಸುತ್ತಾರೆ. ತಾವು ನಿರ್ಲಿಪ್ತರಾಗಿ ಬಾಳು ತ್ತಾರೆ. ಆದುದರಿಂದ ಲೋಕ ಸಂಗ್ರಾಹಕವಾದ ಅವರ ಕರ್ಮಗಳು ಅವರನ್ನು ಬಾಧಿಸುವದಿಲ್ಲ. ಅವರು ಅಹಂಕಾರ ವಿಹೀನರಾದುದರಿಂದ ಆ ಕರ್ಮಗಳಲ್ಲಿ ಬದ್ಧರಾಗುವದಿಲ್ಲ.

ತಾತ್ಪರ್ಯ:- ಭ್ರಮಾತ್ಮಕ ಕರ್ತೃಭಾವವು ದುರ್ಗಂಧ-ಮಾಲಿನ್ಯ. ಅವ ರಲ್ಲಿ ವಿರಮಿಸುವವ ಅವಿಪಶ್ಚಿತ್ತನು. ಒಂದು ದೃಷ್ಟಾಂತದಿಂದ ಅವನ ಪರಿಸ್ಥಿತಿ ಅರಿಯಬಹುದು. ಬೈಲು ಕೆರೆ; ಬರಿ ರಾಡಿ. ಅದರಲ್ಲಿ ಉರುಳಾಡಿ; ಹೊರಳಾಡಿ, ಮುಖ ಎದ್ದಿ, ಕಡೆಗೆದ್ದು ಬಂದು ತನ್ನ ಈ ನವ್ಯ ವಿಚಿತ್ರ ಸೌಂದರ್ಯ ತೋರಿ ಸುವದು ಕೋಣ. ಹಾಗೆ ಪ್ರಪಂಚವು ಕೆರೆ. ವಿಷಯ ವ್ಯಾಮೋಹವು ದುರ್ಗಂಧದ ರಾಡಿ. ಅದರಲ್ಲಿ ಉರುಳಿ ಹೊರಳಿ ಮೈ ಮಾತು ಮನಗಳಿಗೆ ಅಹಂಕಾರ, ಅಭಿ ಮಾನ, ವ್ಯಾಮೋಹ ಕಲ್ಮಷ ಹಚ್ಚಿಕೊಂಡು ಆನಂದ ಪಡುವವ ಅಜ್ಞ; ಕೋಣ ನಂಥ ಮಾನವ. ಇಂದ್ರಿಯಾರಾಮಿಯಾಗಿ ಮೃತ್ಯು ಛಾಯೆಯಲ್ಲಿ ಬದುಕುವ ಅವ ನಿಗೆ ಎಲ್ಲಿ ಸಮಾಧಾ..?

ಇನ್ನು ವೃಷಭ ಶುಚಿಯಾದ ಪ್ರಾಣಿ. ಹೊಲಸೆಂದರೆ ಆಗಿ ಬರದು. ಅದಕ್ಕೆ ಕುಡಿಯಲು ತಿಳಿಯಾದ ನೀರುಬೇಕು. ತಿನ್ನಲು ಮೃದುವಾದ ಹುಲ್ಲುಬೇಕು. ಸಿಕ್ಕಲ್ಲಿ ಸಿಕ್ಕತ್ತ ನೋಡದು. ಮೂಸಿಸದು. ರಮಣೀಯ ನಿಸರ್ಗವು ಅದರ ಆವಾಸ. ಅಂತಲೇ ಶಿವನು ತನ್ನ ವಾಹನ ಮಾಡಿಕೊಂಡ. ಹಾಗೆ, ಮೋಹ ತೊರೆದು, ವಿಷಯರತಿ ತ್ಯಜಿಸಿ ಸದಾ ವಿಶ್ವವ್ಯಾಪಕ ಆತ್ಮನತ್ತ ಲಕ್ಷವಿಟ್ಟು ದುಡಿಯುವವನು ವೃಷಭನಂಥ ವ್ಯಕ್ತಿ.

ಸಂಬಂಧ:– ಜ್ಞಾನಿಗಳು ಅಜ್ಞ ಕರ್ಮಿಗಳ ವಿಷಯದಲ್ಲಿ ಹೇಗೆ ನಡೆದು ಕೊಳ್ಳಬೇಕು?

**ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನವಿಚಾಲಯೇತ್ ॥೨೯॥**

ಅರ್ಥ:- ಪ್ರಕೃತೇಃ = ಪ್ರಕೃತಿಯ ಗುಣಸಮ್ಮೂಢಾಃ = ಗುಣಗಳಿಂದ ಭ್ರಮೆ ಹೊಂದಿದವರು, ಗುಣ ಕರ್ಮಸು= ಗುಣ ಕರ್ಮಗಳಲ್ಲಿ ಸಜ್ಜಂತೇ= ಆಸಕ್ತರಾಗುತ್ತಾರೆ. ಕೃತ್ಸ್ನವಿತ್= ಎಲ್ಲ ತಿಳಿದವನು, ತಾನ್= ಆ ಅಕೃತ್ಸ್ನವಿದಃ= ಅಲ್ಪಜ್ಞರಾದ, ಮಂದಾನ್ = ಮಂದ ಮತಿಗಳನ್ನು, ನ ವಿಚಾಲಯೇತ್ =ಅಲ್ಲಾಡಿಸಬಾರದು.

ವಿವರಣ:– ಪ್ರಕೃತೇಃ ಗುಣಸಮ್ಮೂಢಾಃ...:– ಪ್ರಾಕೃತಿಕ ಗುಣಗಳಲ್ಲಿ ವ್ಯಾಮೋಹಿತರಾದವರು. ಅವರಿಗೆ ಆತ್ಮಭಾನವಿಲ್ಲ. ಜಡತತ್ತ್ವಗಳ ಗುಣಧರ್ಮ ಗಳನ್ನು ತಮ್ಮ ಮೇಲೆ ಆರೋಪ ಮಾಡಿಕೊಂಡು 'ನಾನು ಕೃಶ; ನಾನು ಸ್ಥೂಲ.' 'ನಾನು ಬುದ್ಧಿವಂತ; ನಾನು ಬುದ್ಧಿಹೀನ' 'ನಾನು ಚಂಚಲ; ನಾನು ಧೀರ' ನಾನು ಪತಿ, ಪಿತ, ತಾತ, ಸಿರಿವಂತ' ಹೀಗೆ ಭಾವ ತಾಳುತ್ತಾರೆ. ಆಯಾ ಭಾವ

ನೆಗೆ ತಕ್ಕಂತೆ ಬಹು ಬಗೆಯ ಕರ್ಮ ಮಾಡುತ್ತಾರೆ. ಆತ್ಮನ ಅರಿವಿರದ ಅವರಿಗೆ 'ಅಕೃತ್ಸ್ನವಿತ್' ಎಂದಿದ್ದಾನೆ ಭಗವಂತ.

ಕೃತ್ಸ್ನವಿತ್:– 'ಆತ್ಮನೋ ವಾ ಅರೆ, ದರ್ಶನೇನ, ಶ್ರವಣೇನ, ಮತ್ಯಾ ವಿಜ್ಞಾನೇನ ಇದಂ ಸರ್ವಂ ವಿಜ್ಞಾತಂ'(ಶ್ರುತಿ)ದರ್ಶನದಿಂದ, ಶ್ರವಣದಿಂದ, ಮತಿಯಿಂದಆತ್ಮನನ್ನು ತಿಳಿದಾಗ ಸರ್ವವೂ ವಿಜ್ಞಾತವಾಯಿತೆಂಬರ್ಥ. ಮಹಾನುಭಾವರು ಸರ್ವಮೂಲ ದೇವನನ್ನು ಸಾಕ್ಷಾತ್ಕರಿಸಿಕೊಂಡುದರಿಂದ ಅವರಿಗೆ'ಕೃತ್ಸ್ನವಿತ್' ಎನ್ನುತ್ತಾನೆ ಭಗವಂತ. ಆತ್ಮವೊಂದನ್ನು ಬಿಟ್ಟು ಏನೆಲ್ಲ ತಿಳಿದರೂ ಅವರು ಕೃತ್ಸ್ನವಿದರಲ್ಲ, ಅಕೃತ್ಸ್ನವಿದರು.

ಅಕೃತ್ಸ್ನವಿದಃ ಮಂದಾನ್ ಕೃತ್ಸ್ನವಿತ್ ನ ವಿಚಾಲಯೇತ್:-ಬಲ್ಲಿದನು ಅರ್ಧಮರ್ಧ ತಿಳಿದ ಅಜ್ಞಾನಿಗಳ ಶೀಲಕ್ಕೆ ಚ್ಯುತಿ ಬರದಂತೆ ಒಂದು ಅನುವಿನಿಂದ ಪರಮಾರ್ಥ ಮಾರ್ಗದಲ್ಲಿ ನಡೆಸಿಕೊಂಡು ಹೋಗಬೇಕು. ಸಂತ ಶರಣರ ಪುರಾಣ ಪುಣ್ಯ ಕಥೆ ಹೇಳಿ ಕರ್ಮ ವಿಶ್ವಾಸ ಹೆಚ್ಚಿಸಿ ಹೃದಯ ಶುದ್ಧಿಗೆ ಹಾದಿ ಮಾಡಿಕೊಡಬೇಕು. ಹೊಸದಾಗಿ ಶಾಲೆಗೆ ಬರುವ ಬಾಲಕನಿಗೆ ಬೀಜ ಗಣಿತ ಹೇಳಿದರೆ ಆತ ವಿಭ್ರಮನಾಗುತ್ತಾನೆ; ಶಾಲೆಯ ಪ್ರೀತಿಯನ್ನು ಕಳೆದುಕೊಳ್ಳುತ್ತಾನೆ. ಅದರಂತೆ, ಸಾಮಾನ್ಯ ಮನುಷ್ಯನಿಗೆ ' ಪ್ರಾಣಲಿಂಗ ಪೂಜೆಯ ಮಾಡು!' ಎಂದು ಅಂತರಾತ್ಮಾರ್ಚನೆಯ ಭವ್ಯ ವಿಧಾನ ವಿವರಿಸಿದರೆ ಆತ ಪೂಜಾರ್ಚನೆಯಲ್ಲಿ ಅಭಿರುಚಿಯನ್ನೇ ಕಳೆದುಕೊಳ್ಳುತ್ತಾನೆ. ಅದುದರಿಂದ ಬಲ್ಲ ಮಹಾತ್ಮನು ಅನುವಿನಿಂದ ಅಜ್ಞರನ್ನು ಕರೆದೊಯ್ಯಬೇಕು.

ಭಗವಂತ:– ಅರ್ಜುನ, ಆತ್ಮನನ್ನರಿಯದೆ ಪ್ರಕೃತಿ–ಗುಣಗಳಲ್ಲಿ ಅಭಿಮಾನ ತಾಳಿದ ಜನರು ಕರ್ಮ ಪ್ರೇಮಿಗಳು: ಕರ್ತವ್ಯ ನೆರವೇರಿಸುವಲ್ಲಿ ಉತ್ಸುಕರು. ಅವರ ಮನಸ್ಸನ್ನು ಬಲ್ಲಿದನು ಕೆಡಿಸಲಾಗದು. ಜ್ಞಾನಿ ಗುರುವು ಆ ಜನರನ್ನು ಕರ್ಮಗಳ ಮೂಲಕವೇ ಆತ್ಮ ಪ್ರಭುವಿನತ್ತ ಕರೆದು ಒಯ್ಯಬೇಕು. ರಾಷ್ಟ್ರ, ಧರ್ಮ, ಸಮಾಜಗಳ ನೇತಾರನಾದ ವಿದುಷನು ಪ್ರತಿಕ್ಷಣ ಕರ್ಮನಿರತನಾಗಿರಬೇಕು. ಸತ್ಯ ಅಹಿಂಸಾ ಪರೋಪಕಾರ ದಾನ ದಯೆಗಳಂಥ ಸದ್ಗುಣ ಸತ್ಕರ್ಮಗಳಲ್ಲಿ ಅಭಿರತಿ ತಾಳಬೇಕು. ನಿಸ್ವಾರ್ಥ ಸೇವೆಯಲ್ಲಿ ಬದುಕನ್ನು ಸವೆಸಬೇಕು. ನೀನೂ ಒಬ್ಬ ರಾಷ್ಟ್ರ ನಾಯಕ. ನಿನ್ನ ನೀ ಅರಿ. ಜನತೆಯ ನೀತಿ ಭಕ್ತಿಯನ್ನು ಕೆಡಿಸಬೇಡ. ಅವರಿಗೆ ಪ್ರಚೋದನೆ ದೊರೆವ ರೀತಿಯಲ್ಲಿ ಆಚಾರವಿಡ್ಡನಾಗು. ಅದರಿಂದ ನಿನಗೂ ಹಿತ; ಜಗಕ್ಕೂ ಹಿತ."

ಸಂಬಂಧ:– ಜೀವನವೇ ಹೋರಾಟ. ಆತ್ಮಲೀನನಾಗುವವರೆಗೆ ಇದು ಸಾಗಬೇಕು. ಈ ಹೋರಾಟ ಹೇಗೆ ನಡೆಸಬೇಕು? ಭಗವಂತ ಉತ್ತರಿಸುತ್ತಾನೆ.

ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮ ಚೇತಸಾ ।

ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥೩೦॥

ಭಾವ:-ಆತ್ಮನಲ್ಲಿ ಲಕ್ಷವಿರಿಸಿ, ಸರ್ವ ಕರ್ಮಗಳನ್ನು ನನ್ನಲ್ಲಿ ಅರ್ಪಿಸಿ, ಆಶೆಯಿಲ್ಲದವನೂ ಮಮತ್ವವಿಲ್ಲದವನೂ ಶೋಕವಿಲ್ಲದವನೂ ಆಗಿ ಕರ್ಮ ಮಾಡು.

ವಿವರಣೆ:- ತತ್ತ್ವದರ್ಶಿಯು ಪರಹಿತಕ್ಕಾಗಿ ಕರ್ಮ ಮಾಡುತ್ತಾನೆ. ಅಜ್ಞನು ಹೃದಯ ಶುದ್ಧಿಗಾಗಿ ಕರ್ಮ ಮಾಡುತ್ತಾನೆ. ಮಾಡಿದ ಕರ್ಮಗಳು ಯಾವ ರೀತಿಯಿಂದಲೂ ಬಾಧಕವಾಗಬಾರದಷ್ಟೆ? ಅದಕ್ಕಾಗಿ ಭಗವಂತನು ಪಂಚಕರ್ಮ ಸೂತ್ರಗಳನ್ನು ಸೂಚಿಸಿದ್ದಾನೆ. (೧)ಕರ್ಮಗಳ ಅರ್ಪಣೆ. (೨)ದೇವ ಚಿಂತನೆ; ಕರ್ತೃ ಭಾವಾರ್ಪಣೆ. (೩) ನಿರಾಶೆ (ನಿಸ್ಪೃಹತೆ) (೪) ನಿರ್ಮಮತ್ವ. (೫) ವಿಶೋಕಭಾವ.

(೧)ಕರ್ಮಾರ್ಪಣೆ; " ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯ" :- ಪರಮಾತ್ಮನಿಂದ ದೇಹ ಇಂದ್ರಿಯ ಮನಸ್ಸುಗಳ ಉತ್ಪತ್ತಿ. ಅವನೇ ನಿಯಂತಾರ. ಅವನ ಅನುಗ್ರಹಸೂತ್ರವಿಡಿದು ನಾವೆಲ್ಲ ಕರ್ಮಗಳನ್ನು ಆಚರಿಸುತ್ತೇವೆ. ಅವನ ದಯೆಯಿಂದ ಘಟಿಸಿದ ಕರ್ಮಗಳನ್ನು ಹಾಗು ಅವನ ಕೃಪೆಯಿಂದ ದೊರೆತ ಅಥವಾ ದೊರೆವ ಕರ್ಮ-ಫಲಗಳನ್ನು ಅವನಿಗೆಯೇ ಅರ್ಪಿಸಬೇಕು.

(೨) ದೇವ ಚಿಂತನ, ಕರ್ತೃ ಭಾವಾರ್ಪಣ; " ಅಧ್ಯಾತ್ಮ "ಚೇತಸಃ":- " ಆತ್ಮಾನಂ ಅಧಿಕೃತ್ಯ ವರ್ತತೇ ಇತಿ ಅಧ್ಯಾತ್ಮ." ತನಗೆ ಪರಮಾಧಾರವಾಗಿ ಇರುವ ವಸ್ತುವು ಅಧ್ಯಾತ್ಮ; ವಿಮಲ ಆತ್ಮದೇವ, ಅವನು ಸರ್ವತತ್ತ್ವಗಳ ಆಶ್ರಯ. ವಿದ್ಯುತ್ತಿನ ಸನ್ನಿಧಿಯಲ್ಲಿ ನೀರು ಕಾಯುವದು, ಬಲ್ಬು ಉರಿಯುವದು, ಪಂಖ ಬೀಸುವದು, ಧ್ವನಿ ವರ್ಧಿಸುವದು, ಆಕಾಶವಾಣಿ ಹಾಡುವದು. ಹಾಗೆ ದೇವನ ಸಾನಿಧ್ಯದಲ್ಲಿ ನಮ್ಮ ಬಾಹ್ಯಾಂತರ ಇಂದ್ರಿಯಗಳು ದುಡಿಯುತ್ತವೆ. ಜೀವರಾದ ನಾವು ಕರ್ಮ ಫಲ ಪಡೆಯುತ್ತೇವೆ; ಮರುಳರಾದ ನಾವು ದೇವನ ಲೀಲೆ ಮರೆತು ಕರ್ತೃ ಭೋಕ್ತೃ ಭಾವ ತಾಳುತ್ತೇವೆ. ಈ ಕರ್ತೃ ಹಾಗು ಭೋಕ್ತೃ ಭಾವಗಳೆರಡನ್ನೂ ಆದಿ ದೇವನಲ್ಲಿ ಸಮರ್ಪಿಸಿ, ನಮ್ಮ ಮನಸ್ಸನ್ನು ಅವನಲ್ಲಿ ಸ್ಥಿರೀಕರಿಸಬೇಕು. ಅಂತರಂಗದ ತುಂಬ ದೇವನ ಅನಂತ ಚೇತನವು ಮೂಡಿ ನಿಲ್ಲಬೇಕು. ಚಿತ್ತು ಇನ್ನೇನನ್ನೂ ನೆನೆಯದೆ ಸರ್ವ ಕಾರಣನಾದ ದೇವನನ್ನೇ ಸ್ಮರಿಸಬೇಕು. ಇದರಿಂದ ಭೃತ್ಯಭಾವ ಸಿದ್ಧಿ.

೩) ನಿರಾಶಿಃ (ನಿಸ್ಪೃಹಃ):- ಕರ್ಮಗಳಾಗಲಿ, ಕರ್ಮಫಲಗಳಾಗಲಿ ಸ್ಥಿರವಲ್ಲ. ದೇವನೋರ್ವನೇ ನಿತ್ಯ ಶಿವರೂಪ. ಅವನ ಕೃಪೆಗಿಂತ ಅಮೌಲ್ಯ ಸಂಪದ ವಿನ್ನೊಂದಿಲ್ಲ. ಇದನ್ನರಿತು, ಭೌತಿಕ ಭೋಗ ವೈಭವಗಳ ಸ್ಪೃಹೆ ನೀಗಿ, ದೇವಾನುಗ್ರಹವನ್ನೇ ಬಯಸುವದು ನಿರಾಶಿತ್ವ. ದೇವನಿಗೆ ಗೊತ್ತು ನಮಗೇನು ಅವಶ್ಯ ಎಂಬುದು! ಎಲ್ಲ ಭಾರ ಅವನ ಮೇಲೆ ಹಾಕಿ ನಿರಾಶೆಯಿಂದ ಕರ್ಮ ಎಸಗಬೇಕು.

೪) ನಿರ್ಮಮಃ :– ವಿಶ್ವವೇ ದೇವನ ಸೊತ್ತು. ನಮ್ಮ ದೇಹಾದಿಗಳೆಲ್ಲ ಅವನ ವಸ್ತುಗಳು. ಅವನು ಮಾಲಿಕ. ನಾವು ದೇವ ಸೇವಕರು! ಅವನು ಪೂಜ್ಯ, ನಾವು ಪೂಜಕರು. ಅಹಂ ಮಮ ಭ್ರಮೆ ನಮ್ಮ ಮತಿಗೆ ಆವರಣವಾದಾಗ ದೇವನ ಸರ್ವ ಸ್ವಾಮಿತ್ವ ಮರೆತು ಬಿಡುತ್ತೇವೆ. ಧನ ವನಿತೆ ಗೃಹ ತನು ನಮ್ಮದೆಂದು ತಿಳಿ ಯುತ್ತೇವೆ. ಆದರೆ ಅವು ನಮ್ಮವೆ? ನಾವು ಈ ಜಗತ್ತನ್ನು ಬಿಟ್ಟು ಹೋಗುವಾಗ ಒಯ್ಯ ಬಲ್ಲೆವೆಯೇ ಅಥವಾ ಚಿರಕಾಲ ಬಾಳುವಂತೆ ಮಾಡುವ ಬಲ ನಮಗಿ ದೆಯೆ? ಇಲ್ಲ, ಅವು ಯಾರದೋ ಸಂಪದ. ಆದ್ದರಿಂದ ನಮ್ಮ ಇಚ್ಛೆಯಂತೆ ಅವು ಬದುಕವು.

ಸತಿ, ಸುತ, ಗೃಹ, ಎಲ್ಲ ನಾಟಕೀಯ. ರಂಗಸ್ಥಳದ ಮೇಲೆ ಮಾತ್ರ! ರಂಗ ಪರದೆಯ ಹಿಂದೆ ನಾವು ನಾವೇ; ನಾವು ಸ್ವತಂತ್ರರು. ಯಾರಿಗೆ ಯಾರಿಲ್ಲ. ವ್ಯಾವ ಹಾರಿಕ ಜೀವನವೆಂಬ ಸ್ಟೇಜಿನ ಮೇಲೆ ನಾಲ್ಕು ದಿನ ನಾವು ಪರಸ್ಪರ ಸಂಬಂಧಿ ಕರು; ಮೋಹ ಪರದೆಯ ಹಿಂದೆ ಹೋದರೆ ನಾವು ಏಕಾಂಗಿ; ಎಲ್ಲ ಸಂಬಂಧ ಗಳು ಮಾಯ! ಯಾವ ವಸ್ತುಗಳೂ ನಮ್ಮವಲ್ಲ. ಹೀಗಿದ್ದರೂ ಮಮತ್ವವು ಸದ್ದಿಲ್ಲದೆ ಮನದಲ್ಲಿ ಸೇರುತ್ತದೆ. ನಮ್ಮ ಬುದ್ಧಿಯ ಕಣ್ಣನ್ನು ಮುಚ್ಚಿ ಬಿಡುತ್ತದೆ.

ಮಮಕಾರ ಮನುಷ್ಯನಲ್ಲಿ ಬೇರು ಬಿಟ್ಟಿದೆ. ಮನೆಯ ಹಿರಿತನ ವಹಿಸಿದವ ಆ ಮನೆ, ಮನೆಯ ಜನ ಸದೈವ ತನ್ನದು ತನ್ನವರು ಎಂದೇ ಭಾವಿಸುತ್ತಾನೆ. ಪೀಠವೇರಿದ ಗುರು, ಗದ್ದುಗೆ ಏರಿದ ರಾಜ ಆ ಪೀಠ, ಆ ಅಧಿಕಾರಗಳಲ್ಲಿ ಆಸಕ್ತಿ ತಾಳುತ್ತಾರೆ. ದೇಹ ಬಿಟ್ಟು ಹೋಗುವಾಗ ನಿರುಪಾಯರಾಗಿ ಎಲ್ಲ ತೊರೆಯು ತ್ತಾರೆ! ಮುಂಜನೆಂಬ ಮಹಾ ರಾಜನ ಅತಿಶಯ ಮಮತೆ ಕಂಡು ಹೇಸಿಕೊಂಡ ಅವರ ಅಣ್ಣನ ಮಗನಾದ ಕುಮಾರ ಭೋಜನು ಆ ರಾಜನನ್ನು ಈ ರೀತಿ ಮೂದಲಿಸುತ್ತಾನೆ:

"ಮಾಂಧಾತಾಚ ಮಹೀಪತಿ ಸ್ತ್ರೀಭುವನಾಲಂಕಾರ ಭೂತೋಗತಃ ।
ಸೇತುರ್ಯೇನ ಮಹೋದಧೌ ವಿರಚಿತೌ ಕ್ವಾಸೌ ದಶಾಸ್ಯಾಂತಕಃ॥
ಅನ್ಯೇಚಾಪಿ ಯುಧಿಷ್ಠಿರ ಪ್ರಭೃತಯೋ ಯಾತಾ ದಿವಂ ಭೂಪತೇ।
ನೈಕೇನಾಪಿ ಸಮಂಗತಾ ವಸುಮತಿ ಮುಂಜ ತ್ವಯಾ ಯಾಸ್ಯತಿ"॥

ಕೃತಯುಗದ ಪ್ರಖ್ಯಾತರಾಜ ಮಾಂಧಾತ; ಸಮುದ್ರಕ್ಕೆಯೇ ಸೇತು ಬಂಧನ ಮಾಡಿದ ಸಾಮ್ರಾಟ ರಾಮ; ಸುವರ್ಣ ಸಾಮ್ರಾಜ್ಯ ರಚಿಸಿದವ ರಾವಣ. ಅವರಲ್ಲಿ ಒಬ್ಬರೊಂದಿಗೂ ಹೋಗದ ಈ ಭೂಮಿ, ಮುಂಜ, ಬಹುತರ ನಿನ್ನೊಂ ದಿಗೆ ಬಂದೀತು! ಬಾಯಿಯಲ್ಲಿಯ ಲಾಲಾರಸ ನಮ್ಮದೆಂದು ಅದೆಷ್ಟು ಕಾಲ ಇಟ್ಟುಕೊಂಡಿರಬಲ್ಲೆವು? ಅದರಂತೆಯೇ ಭೋಗ ಸಂಪದ. ನಮಗೆ ಗೊತ್ತಾಗ ದಂತೆ ನಮ್ಮ ಕೈಬಿಡುವದು. ಆದುದರಿಂದ ಮಮಕಾರವಿಲ್ಲದೆ ಕರ್ಮ ಎಸಗಬೇಕು.

(೫) ವಿಶೋಕಃ; ವಿಗತ ಜ್ವರಃ :- ಸಂಸಾರವೆಂದರೆ ಹರ್ಷಶೋಕಗಳ

ಸರಪಳಿ. ಒಂದು ಕ್ಷಣ ಹರ್ಷ. ಮತ್ತೊಂದು ಕ್ಷಣ ಶೋಕ. ಒಮ್ಮೆ ಹರ್ಷದ ಅಮಲೇರಿದರೆ, ಮತ್ತೊಮ್ಮೆ ಶೋಕದ ಜ್ವರ ಏರುವದು. ಈ ಜ್ವರದಿಂದ ಜೀವ ತಲ್ಲಣಿಸುತ್ತಾನೆ. ಜ್ವರ ಮಿತಿ ಮೀರಿದಾಗ ಆತ್ಮ ಹತ್ಯೆಗೂ ಸಿದ್ಧನಾಗುತ್ತಾನೆ. ಉಳ್ಳವರೂ ಇಲ್ಲದವರೂ, ಸುಶಿಕ್ಷಿತರೂ ಅಶಿಕ್ಷಿತರೂ ಚಿಂತಾಜ್ವರದಿಂದ ಬಳಲುತ್ತಿದ್ದಾರೆ. ಚಿಂತೆ ಎಂಬ ಕಾಕಧೂಮ್ರ ಮನಶ್ಚಕ್ಷುವಿನಲ್ಲಿ ತುಂಬಿದಾಗ ಬುದ್ಧಿ ಮಂದವಾಗುವದು; ಸತ್ಯ ಅಸತ್ಯಗಳ ವಿವೇಕ ಅಳಿಯುವದು, ಮೋಕ್ಷ ಮಾರ್ಗ ತೋರದು. ಸಾಧಕ, ಕರ್ಮಯೋಗಿ ಚಿಂತೆ ತೊರೆದು ನಿರಾಮಯನಾಗಿ ಕರ್ಮ ನಿರ್ವಹಿಸಬೇಕು.

ಭಗವಂತ:- " ಧನಂಜಯ, (೧) ಕರ್ಮಗಳನ್ನು ನನಗೆ ಅರ್ಪಿಸು; (೨) ನಿನ್ನ ಮನಸ್ಸು ನನ್ನಲ್ಲಿ ಸ್ಥಿರವಾಗಿ ನಿಲ್ಲಲಿ; (೩) ಆಶೆ ಪಡದಿರು; (೪) ಮಮ ರೂಪ ಭಾವ ಬಿಟ್ಟುಕೊಡು; (೫) ನಿಶ್ಚಿಂತನಾಗಿರು. ಈ ಪಂಚಕರ್ಮ ಸೂತ್ರಗಳನ್ನು ಸ್ಮರಣೆಯಲ್ಲಿಡು. ಗೃಹಸ್ಥ, ಕ್ಷತ್ರಿಯ, ಸಂನ್ಯಾಸಿ, ಹೀಗೆ ನೀನು ಏನಾದರೂ ಆಗಿರು. ಸೂತ್ರದನ್ವಯದಂತೆ ಸದಾ ಕರ್ಮ ಜೀವನ ಸಾಗಿಸು. ಆ ಕರ್ಮಗಳು ನಿನ್ನನ್ನು ಲವಮಾತ್ರವೂ ಬಾಧಿಸಲಾರವು. ನೀನು ಜೀವನ ಸಮರದಲ್ಲಿ ಜಯಶೀಲನಾಗುವೆ. "

ಸಂಬಂಧ:- ಭಗವಂತನ ಅಪ್ಪಣೆಯನ್ನು ಪರಿಪಾಲಿಸಿದವರಿಗೆ ದೊರೆವ ಫಲವೇನು?

ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ॥೩೧॥

ಭಾವ:- ಅಲ್ಲದೆ, ಯಾವ ಮನುಷ್ಯರು ಶ್ರದ್ಧಾನ್ವಿತರೂ ಅಸೂಯಾರಹಿತರೂ (ಆಗಿ) ನನ್ನ ಈ ಮತವನ್ನು ನಿತ್ಯದಲ್ಲಿ ಅನುಷ್ಠಾನ ಮಾಡುತ್ತಾರೆಯೋ ಅವರು ಕರ್ಮಗಳಿಂದ ಮುಕ್ತರಾಗುತ್ತಾರೆ.

ವಿವರಣೆ:- ಭಗವಂತ:- "ಅರ್ಜುನಾ, ನಾನು ಪರಮ ದೇವ. ಜಗಜ್ಜೀವ ಹಿತೈಷಿ. ಕರುಣಾ ಮೂರ್ತಿ. ಜೀವರ ಏಳ್ಗೆಗಾಗಿಯೇ ಈ ಕರ್ಮ ಕುಶಲತೆಯನ್ನು ವಿವರಿಸಿದ್ದೇನೆ. ನನ್ನ ಮಾತಿನಲ್ಲಿ ಯಾರು ಅಚಲ ಶ್ರದ್ಧೆ ತಾಳುವರೋ, ಉಪೇಕ್ಷಾ ರೂಪ ಅಸೂಯೆಯನ್ನು ತ್ಯಜಿಸಿ ಸದೈವ ಕರ್ಮ ಆಚರಿಸುವರೋ ಹಾಗು ತಮ್ಮ ಕರ್ಮಗಳ ಸರ್ವ ಹೊಣೆಗಾರಿಕೆಯನ್ನು ನನ್ನ ಮೇಲೆ ಹಾಕಿ ನಿಶ್ಚಿಂತರಾಗಿ ಬಾಳುವರೋ ಅವರು ಸಕಲ ಪಾಪಗಳಿಂದ ಮುಕ್ತರಾಗುತ್ತಾರೆ. ಕರ್ಮ ಕೋಟಲೆಗಳಿಂದ ಬಿಡುಗಡೆ ಹೊಂದುತ್ತಾರೆ.

ಸಂಬಂಧ:– ಒಂದು ವೇಳೆ ಭಗವಂತನ ಅಭಿಮತವನ್ನು ಉಪೇಕ್ಷಿಸಿದರೆ ಆಗುವ ಹಾನಿ ಏನು?

ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತೀ ಮೇ ಮತವ್।
ಸರ್ವಜ್ಞಾನ ವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ॥೩೨॥

**ಅರ್ಥ:-** ತು= ಆದರೆ, ಯೇ= ಯಾರು, ಅಭ್ಯಸೂಯಂತಃ =ಅಸೂಯಾಪರರಾಗಿ, ಏತತ್ ಮೇ ಮತಂ= ಈ ನನ್ನ ಅಭಿಮತವನ್ನು, ನ ಅನುತಿಷ್ಠಂತಿ= ಅನುಷ್ಠಿಸುವದಿಲ್ಲವೋ ತಾನ್= ಅವರನ್ನು, ಸರ್ವಜ್ಞಾನ ವಿಮೂಢಾನ್= ಕರ್ತೃ, ಕರ್ಮ, ಕರಣ, ಫಲ ಹಾಗು ಪ್ರೇರಕ ವಿಷಯಕ ಜ್ಞಾನ ಹೀನರೆಂದು (ಸರ್ವಸ್ಮಿನ್ ಕರ್ಮಣಿ ಬ್ರಹ್ಮವಿಷಯೇ ಚ ಯತ್ ಜ್ಞಾನಂ ತತ್ರ ವಿಮೂಢಾನ್= ಸರ್ವ ಕರ್ಮಗಳ ವಿಷಯಕ ಹಾಗು ಬ್ರಹ್ಮ ವಿಷಯಕವಾದ ಜ್ಞಾನ ವಿಹೀನರು), ಅಚೇತಸಃ= ವಿವೇಕ ಶೂನ್ಯರೆಂದೂ, ನಷ್ಟಾನ್= ಪುರುಷಾರ್ಥ ಭ್ರಷ್ಟ ರೆಂದೂ ವಿದ್ಧಿ= ತಿಳಿ.

**ವಿವರಣೆ:-** **ಯೇ ತು ಏತದಭ್ಯಸೂಯಂತಃ ...:-** ಸತ್ಯ ಸಂಗತಿಯನ್ನು ತನಗೆ ಆಗದವರು ಹೇಳಿದರೆಂಬ ಒಂದೇ ಒಂದು ಕಾರಣದಿಂದ ಅಲ್ಲಗಳೆಯುವಿಕೆ ಅಸೂಯೆ. ತನಗೆ ಅಸಾಧ್ಯವಾದುದನ್ನು ಬಲ್ಲವರು ವಿವರಿಸಿದರೆ ಅವರ ಮಾತನ್ನು ಜರೆಯುವದು ಅಸೂಯೆ. ಪರಮಾತ್ಮನ ಆದೇಶಗಳನ್ನು ಉಪೇಕ್ಷಿಸುವದು ಅಸೂಯೆ. ಅಸೂಯಾಪರರ ಹೃದಯ ಮಲಿನ, ಪ್ರಕ್ಷುಬ್ಧ ! ಅವರ ಬುದ್ಧಿ ನಿರ್ವೀರ್ಯ; ನಿಃಸತ್ವ ! ಅವರು ವಿಮೂಢರು. ವಿವೇಕ ಶೂನ್ಯರು. ಅವರಿಗೆ ಭಗವಂತನಲ್ಲಿ ಶ್ರದ್ಧೆ ಇಲ್ಲ.

ಅಸೂಯಾ ಹೃದಯಿಗಳು ತತ್ತ್ವಜ್ಞಾನವನ್ನು ಹಸ್ತನೆಲ್ಲಿಗೊಳಿಸಿರಬಹುದು; ವೇದ ವೇದಾಂತ ಗಳನ್ನು ಕಂಠಸ್ಥ ಮಾಡಿರಬಹುದು; ನಿರರ್ಗಲವಾಗಿ ಉಪನ್ಯಾಸ ನೀಡಬಹುದು. ಆದರೆ ಅದನ್ನವರು ಮನರಂಜನೆಗಾಗಿ ಬಳಸುತ್ತಾರೆಯೇ ವಿನಃ ಅನುಷ್ಠಾನಕ್ಕೆ ತರುವದಿಲ್ಲ. ಸಾರ್ವಜನಿಕ ವೇದಿಕೆಯಿಂದ ಸರ್ವಧರ್ಮ ಸಮಾನತೆ, ಪ್ರಪಂಚ ವೈಭವದಲ್ಲಿ ನಿಸ್ಪೃಹತೆ, ವಿಶ್ವವ್ಯಾಪಕ ಶಾಂತಿ ಮುಂತಾದ ಹಿರಿಯ ಮಾತುಗಳನ್ನು ಹೇಳುವ ಅವರು ವೈಯಕ್ತಿಕ ಜೀವನದಲ್ಲಿ ಮಠ, ಪೀಠ. ಭೂಮಿ ಧನ. ಅಧಿಕಾರಗಳಿಗಾಗಿ ಸುದೀರ್ಘ ಕದನ ಮಾಡುತ್ತಾರೆ. ತಾವು ಹೇಳಿದ ಮಾತು ಗಳಲ್ಲೇ ತಮಗೆ ಅಶ್ರದ್ಧೆ ! ಇಂಥವರಿಂದ ಯಾರ ಏಳ್ಗೆಯಾದೀತು ?

**ಭಗವಂತ:-** " ಅರ್ಜುನ, ಅಧ್ಯಾತ್ಮ ವಿದ್ಯೆ ಹಾಗು ಆತ್ಮ ಸಾಧನಗಳೇ ಮನುಕುಲದ ತಾರಕ ಸೂತ್ರಗಳು. ದೇವನಿಂದ, ಸಾಧು ಸಂತರಿಂದ ಹೊರಬೀಳುವ ಪ್ರತಿಶಬ್ದ ಪವಿತ್ರ. ಅದರಿಂದ ಆತ್ಮಹಿತ, ಲೋಕ ಕಲ್ಯಾಣ. ಆದರೆ ಯಾರು ಆ ದಿವ್ಯ ಉಪದೇಶಗಳನ್ನು ಅಸೂಯಾಸಂವಿಷ್ಟರಾಗಿ ಪಾಲಿಸುವದಿಲ್ಲವೋ. ಕರ್ತೃ, ಕರ್ಮ, ಕರ್ಮಫಲ, ಪ್ರೇರಕದೇವ ಈ ಸರ್ವಜ್ಞಾನವಿಹೀನರಾದ ಅವರು ಮೂಢರು, ಆತ್ಮಘಾತಕರು, ಅವಿವೇಕಿಗಳು, ಎಂದು ತಿಳಿ. "

**ಸಂಬಂಧ:-** **ಅರ್ಜುನ:-**"ಕೃಷ್ಣ, ಇಂದ್ರಿಯ ನಿಗ್ರಹ ಹಾಗು ಮನಸ್ಸಂಯಮಪೂರ್ವಕ ಮಾಡಿದ ನಿಷ್ಕಾಮಕರ್ಮರೂಪ ಧರ್ಮವು ಮುಕ್ತಿ ಫಲದಾಯಕ

ವಾಗಿದ್ದರೂ ಲೋಕದ ಬಹು ಜನ ಆ ಸ್ವಧರ್ಮಾನುಷ್ಠಾನವನ್ನು ಮಾಡುವ ದಿಲ್ಲವೇಕೆ ?

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥೩೩॥**

**ಅರ್ಥ:-** ಜ್ಞಾನವಾನ್ ಅಪಿ= (ಗುಣ–ದೋಷ) ಜ್ಞಾನವುಳ್ಳವನು ಕೂಡ, ಸ್ವಸ್ಯಾಃ=ತನ್ನ, ಪ್ರಕೃತೇಃ ಸದೃಶಂ= (ಪ್ರಾಕೃತಿಕ) ಸ್ವಭಾವಾನುಸಾರ (ಪ್ರಕೃತಿಃ=ಪ್ರಾಚೀನ ಕರ್ಮ ಸಂಸ್ಕಾರಾಧೀನ ಸ್ವಭಾವಃ : ಪೂರ್ವಕರ್ಮಗಳಿಂದುಂಟಾದ ಸಂಸ್ಕಾರದಿಂದ ಸ್ವಭಾವ ಹುಟ್ಟುತ್ತದೆ. ಆ ಸ್ವಭಾವನುಸಾರ) ಚೇಷ್ಟತೇ= ವರ್ತಿಸುತ್ತಾನೆ. ಭೂತಾನಿ= ಪ್ರಾಣಿಗಳು, ಪ್ರಕೃತಿಂ ಯಾಂತಿ= ಪ್ರಕೃತಿಯನ್ನು ಹೊಂದುತ್ತವೆ (ಸ್ವಭಾವಾನುಗುಣವಾಗಿ ಬಾಳುತ್ತವೆ). ನಿಗ್ರಹಃ ಕಿಂ ಕರಿಷ್ಯತಿ = (ಹೀಗಿರುವಾಗ) ನಿಗ್ರಹವು ಏನು ಮಾಡೀತು ?

**ವಿವರಣೆ:–** ಭಗವಂತ:- " ಭರತೋತ್ತಮ, ನಿನ್ನ ಪ್ರಶ್ನೆ ಸಮಂಜಸವಾಗಿದೆ. ಪೂರ್ವಕೃತ ಕರ್ಮಗಳಿಂದ ಸಂಸ್ಕಾರಗಳುದಯ. ಆ ಸಂಸ್ಕಾರಗಳಿಂದ ಸ್ವಭಾವದ ರಚನೆ. ಸರ್ವ ಚರಾಚರ ಜೀವಿಗಳು ತಮ್ಮ ತಮ್ಮ ಸ್ವಭಾವದ ಭದ್ರ ಬಂಧನದಲ್ಲಿ ಸಿಲುಕಿವೆ. ಸ್ವಭಾವ ನಡೆಸಿದಂತೆ ಬಾಳುತ್ತವೆ. ಸಾರಾಸಾರ ವಿವೇಕ ಉಳ್ಳ ಮನುಷ್ಯ ಕೂಡ ಇದಕ್ಕೆ ಹೊರತಲ್ಲ. ಅವನು ಸ್ವಭಾವದ ಕೈಯೊಳಗಿನ ಗೊಂಬೆ. ಸ್ವಭಾವದ ದಾಸ ! ಹೀಗಿರುವಾಗ, ಪಾಪ, ಇಂದ್ರಿಯ ನಿಗ್ರಹ ತಾನೆ ಏನು ಮಾಡೀತು ? ಅದು ಸಾಧ್ಯವಾದರೂ ಎಲ್ಲಿದೆ? ಆದ್ದರಿಂದ, ಪಾರ್ಥ, ಜನ ಚಿರಂತನ ಸುಖ ಬಯಸುವರೇನೋ ನಿಜ; ಅವರು ಆಧ್ಯಾತ್ಮಿಕ ಮಾತುಗಳನ್ನು ಕಲಿಯಬಲ್ಲರು. ಆದರೇನು ? ಸ್ವಭಾವ ಅವರನ್ನು ತನ್ನದೇ ಆದ ದಾರಿಯಲ್ಲಿ ಸೆಳೆದೊಯ್ಯುವದು. "

**(೧) ಪ್ರಕೃತಿಂ ಯಾಂತಿ ಭೂತಾನಿ :–** ಭೂತಾನಿ: ಜೀವಿಗಳು, ಅರಿವಿನ ಪ್ರಾಣಿಗಳು; ಕ್ರಿಮಿ ಕೀಟ, ಪಶುಪಕ್ಷಿ, ದಾನವ ಮಾನವ, ಯಕ್ಷ ರಾಕ್ಷಸ, ದೇವ ದೇವತೆಗಳು. ಅವರೆಲ್ಲ ತಮ್ಮ ತಮ್ಮ ಕರ್ಮಸೃಷ್ಟ ಸ್ವಭಾವದಂತೆಯೇ ಬಾಳ ಬಟ್ಟೆಯಲ್ಲಿ ನಡೆಯುತ್ತಾರೆ. ಅವರ ಕಣ್ಣು, ಕಿವಿ, ನಾಲಿಗೆ, ಮನ, ಬುದ್ಧಿಗಳು ಪ್ರಾಕೃತಿಕ ಸ್ವಭಾವದ ತಾಳಕ್ಕೆ ಸರಿಯಾಗಿ ಕುಣಿಯುತ್ತವೆ. ಸ್ವಭಾವವು ಭಯಂಕರ ವೇಗದಿಂದ ಹರಿಯುತ್ತಿರುವ ಪ್ರವಾಹ. ಭೂತಗಳು ( ಜೀವರು ) ಆ ಪ್ರವಾಹ ಗತ ಕಾಷ್ಟ. ಸ್ವಭಾವದ ರಭಸ ಅಬ್ಬರಗಳ ಎದುರು ಜೀವಿಗಳ ಶಕ್ತಿ ಯಾವ ಕಾಸಿಗೆ ಸಮ ! ಅದು ನಡೆಸಿದಂತೆ ನಡೆಯುತ್ತಾರೆ. ಅದು ನುಡಿಸಿದಂತೆ ನುಡಿಯುತ್ತಾರೆ. ಸ್ವಾತಂತ್ರ್ಯ ಬರಿ ಕನಸು.

**(೨) ಜ್ಞಾನವಾನ್ ಅಪಿ ಸ್ವಸ್ಯಾಃ...:-** ಪ್ರಾಕೃತಿಕ ಸ್ವಭಾವವು ಅತ್ಯಂತ ಸಬಲ. ಅದು ತನ್ನ ಇಚ್ಛಿತ ದಿಕ್ಕಿನಲ್ಲಿ ವ್ಯಕ್ತಿಯನ್ನು ನಡೆಸುತ್ತದೆ. ವಿಶಿಷ್ಟ ಕರ್ಮಗಳಲ್ಲಿಯೇ ಅವನನ್ನು ತೊಡಗಿಸುತ್ತದೆ. ಅರಿತ ಮಹಾನುಭಾವನೂ ಆ ಸ್ವಭಾವ

ಶಕ್ತಿಗೆ ಒಳಗು. ಆದ್ದರಿಂದಲೇ ಅಲ್ಲವೇ, ಅದೇ ವಿಮಲ ನಿರ್ವಾಣ ಪಡೆವ ಸಹ ಸ್ರಾರು ಸಂತರ ಬಾಳ ರೀತಿ ಭಿನ್ನ ಭಿನ್ನವಾಗಿದ್ದುದು? ಆ ಸಂತರ ಆಚಾರ ಭಿನ್ನ ವಿಚಾರ ಭಿನ್ನ, ಸ್ವಭಾವ ಭಿನ್ನ ! ಉದಾ: ವಶಿಷ್ಟ, ದುರ್ವಾಸ, ನಾರದ, ಜನಕ, ಶಂಕರ, ಐವರೂ ಆತ್ಮಜ್ಞಾನಿಗಳು. ಕಿಂತು, ವಶಿಷ್ಠ ಕರ್ಮಶೀಲ, ಶಾಂತಸ್ವಭಾವಿ. ದುರ್ವಾಸ ಕಠೋರ. ನಾರದ ಗಾನಲೋಲ. ಜನಕ ರಾಜಭೋಗಿ. ಶಂಕರಾ ಚಾರ್ಯ ವೀರ ಸನ್ಯಾಸಿ! ಆಧುನಿಕ ಕಾಲದಲ್ಲಿ, ಬಸವಣ್ಣ ದಾಸೋಹಿ, ಅಲ್ಲಮ ಪ್ರಭು ನಿರಾಭಾರಿ ಜಂಗಮ. ತುಕಾರಾಮ ಬಡಗೃಹಸ್ಥ. ರಾಮದಾಸ ರಾಜ ಗುರು. ಅವರೆಲ್ಲರ ಜೀವನ ಒಂದೇ ವಿಧ ಇಲ್ಲದಿರುವದಕ್ಕೆ ಅವರ ಸ್ವಭಾವ ಭಿನ್ನತೆಯೇ ಕಾರಣ.

(೩) ನಿಗ್ರಹಃ ಕಿಂ ಕರಿಷ್ಯತಿ:– ಸ್ವಭಾವದ ಮುಂದೆ ನಿಗ್ರಹ ಏನು ಮಾಡೀತು ?

(೪) ಒಂದು ಸಂದೇಹ:– ಪರಮಾತ್ಮನು ಸರ್ವಶಕ್ತ. ಸರ್ವ ಕರ್ತಾರ. ಸರ್ವ ಜೀವರ ಹೃನ್ಮಂದಿರಗತ ಅಂತರ್ಯಾಮಿ. ಹೀಗಿದ್ದರೂ ಜೀವರು ಸಾಮಾನ್ಯ ಜಡ ಪ್ರಕೃತಿಯ ಕೈಗೊಂಬೆಗಳೇಕಾಗಬೇಕು? ಆತ್ಮನ ಶಕ್ತಿ ಪ್ರಕೃತಿಯ ಶಕ್ತಿಗಿಂತ ಕಡಿಮೆಯೆ ? ಸ್ವಭಾವದ ಮುಂದೆ ಆತ್ಮನು ನಿರ್ಬಲನೆ? ಮಾನವ ಕುಲವೇ ಸ್ವಭಾವ ಪ್ರೇರಿತವಾಗಿ ವಿಷಯ-ವಡವಾಗ್ನಿಯಲ್ಲಿ ಬಿದ್ದು ಹುರಿದು ಹೋಗು ವಾಗ ಅಂತರ್ಯಾಮಿ ದೇವನು ಅದೇಕೆ ಸುಮ್ಮನೆ ಕುಳಿತಿದ್ದಾನೆ ? ದೇವನು ಸರ್ವಕರ್ತ, ದಯಾಘನ ಎಂಬ ಮಾತಿಗೇನರ್ಥ ?

ಸಮಾಧಾನ:- (ಅ) ತಾತ್ತ್ವಿಕ:- ವಾಸ್ತವಿಕವಾಗಿ ದೇವನು ಸರ್ವಕರ್ತ ನಲ್ಲ, ದಯಾಘನನಲ್ಲ. ಅವನು ನಿರ್ಗುಣ, ನಿಷ್ಕ್ರಿಯ, ನಿರ್ವಿಕಾರ, ನಿರಂಜನ! ಕೇವಲಾಧಿಕರಣ. ಅವನು ಮನ ಮಾತಿಗತೀತ. ಅವನು ಕೇವಲ ಪ್ರಕಾಶಕ! ಪ್ರಕೃತಿಯ ಕಾರ್ಯಗಳಲ್ಲಿ ಆತ ಯಾವ ವಿಧದಲ್ಲೂ ಭಾಗ ತೆಗೆದುಕೊಳ್ಳಲಾರ. ಜೀವರ ಹೃದ್ಗುಹೆಯಲ್ಲಿ ನೆಲೆಸಿದ ಆತ ವಿಮಲ ಜ್ಞಾನ ಬೆಳಗನ್ನು ಎಲ್ಲೆಡೆ ಹರಡುವನಲ್ಲದೆ ಇನ್ನೇನೂ ಮಾಡಲಾರ. ಆದ್ದರಿಂದ ಸಂದೇಹ ಅನವಶ್ಯಕ. ಬ) ವ್ಯಾವಹಾರಿಕ: ಅಂತಃಕರಣ ವಿಶಿಷ್ಟ ದೇವಾಂಶವೇ ಜೀವ. ಬಾಹ್ಯಾಂತರ ಇಂದ್ರಿಯ, ಮನೋಗತ ಸಂಸ್ಕಾರ ಮತ್ತು ಕರ್ಮ ಇವುಗಳನ್ನು ಆಳುವಂಥದು ಇಚ್ಛಾ ಹಾಗು ಕ್ರಿಯಾತ್ಮಕವಾದ ಪ್ರಕೃತಿಯು. ಎಲ್ಲಿಯ ವರೆಗೆ ಮನಸ್ಸಿದೆ, ದೇಹವಿದೆ ಅಲ್ಲಿಯ ವರೆಗೆ ಪ್ರಕೃತಿಯ ಆಳಿಕೆ. ಜ್ಞಾನಿಗಳು ಆತ್ಮದರ್ಶಿಗಳೇನೋ ನಿಜ; ಅವರಿಗಿನ್ನೂ ಮನಸ್ಸಿದೆ, ದೇಹವಿದೆ. ಅವರು ತಾತ್ತ್ವಿಕವಾಗಿ ಪರಬ್ರಹ್ಮ ಲೀನರು. ಪ್ರಾಕೃತಿಕವಾಗಿ ದೇಹ ಬಾಳಿಗರು. ಅವರ ಮನ ಸಂಸ್ಕೃತ, ಸತ್ವತಪ್ತ. ಆ ಮನದ ಸ್ವಭಾವಾನುಸಾರ ಆ ಸಂತರು ಸಾತ್ವಿಕ ಪರಹಿತ ಕಾರ್ಯಗಳಲ್ಲಿ

ತೊಡಗುತ್ತಾರೆ. ಆ ಕಾರ್ಯಗಳ ಅಭಿಮಾನ ಮಾತ್ರ ಅವರಲ್ಲಿಲ್ಲ. ಪ್ರಾರಬ್ಧಾನುಸಾರ ಅವರು ಜೀವಿಸುತ್ತಾರೆ ಅಷ್ಟೇ! ವಾಸ್ತವಿಕವಾಗಿ ಅವರು ನಿರ್ಮುಕ್ತ ದೇವರು.

ಸಂಬಂಧ:– ಅರ್ಜುನ:– " ದೇವ, ಪ್ರಕೃತಿ ಅಗಾಧ! ವಿಶ್ವವನ್ನೇ ಅಲುಗಾಡಿಸಬಲ್ಲ ಅದು ಅಜೇಯ; ಎಂದು ಭಗವಂತನಾದ ನಿನ್ನದೇ ಅಭಿಪ್ರಾಯವಿದ್ದರೆ ಇಂದ್ರಿಯ ನಿಗ್ರಹ ಮಾಡೆಂದು ಹೇಳುವ ನಿನ್ನ ಉಪದೇಶಕ್ಕೆ ಏನಿದೆ ಅರ್ಥ? ಸಾಧಕನಾದರೋ ನಿಶ್ಯಕ್ತ. ದೇವನನ್ನರಿದು ಅವನಲ್ಲಿ ಬೆರೆಯದ ಸಾಮಾನ್ಯ ಜೀವಿ. ಸ್ವಭಾವವು ಅವನನ್ನು ತರಗೆಲೆಯಂತೆ ಬೇಕಾದತ್ತ ಹಾರಿಸಬಲ್ಲದು. ಅಂದ ಬಳಿಕ ಸಾಧಕ ಯಾವ ಸಾಧನೆ ಮಾಡಬೇಕು ? ಸಾಧನೆ ಮಾಡಿ ಏನು ಲಾಭ ?

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।
ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ॥೩.೪॥

ಭಾವ:–ಪ್ರತಿಯೊಂದು ಜ್ಞಾನೇಂದ್ರಿಯದ ವಿಷಯದಲ್ಲಿ ರಾಗ ಮತ್ತು ದ್ವೇಷಗಳು ನೆಲೆಸಿವೆ. ಅವೆರಡರ ವಶಕ್ಕೆ ಹೋಗಬಾರದು. ಏಕೆಂದರೆ, ಅವೆರಡು ಇವನ (ಸಾಧಕನ) ಶತ್ರುಗಳಾಗಿವೆ.

ವಿವರಣೆ:– ಭಗವಂತ:– " ಕುಂತೀಪುತ್ರ, ಬಾಹ್ಯ ಜಗತ್ತಿನಲ್ಲೆಲ್ಲ ಶಬ್ದ ಸ್ಪರ್ಶ ರೂಪ ರಸ ಗಂಧ ಎಂಬೈದು ಮೋಹಕ ವಿಷಯಗಳು ಹರಡಿಕೊಂಡಿವೆ. ದೇಹದಲ್ಲಿ ಆ ವಿಷಯಗಳನ್ನು ಅರಿಯಬಲ್ಲ ಶ್ರೋತ್ರ, ತ್ವಚ, ನೇತ್ರ, ರಸನ, ಘ್ರಾಣ ಎಂಬೈದು ಇಂದ್ರಿಯಗಳು ರೂಪಿಸಲ್ಪಟ್ಟಿವೆ. ದೇಹದ ಅಂತರಂಗದಲ್ಲಿ ಇಂದ್ರಿಯ ಅಧಿರಾಜನೆನಿಸುವ ಮನಸ್ಸು ನೆಲೆಸಿದೆ. ಯಾವಾಗ ಮನೋಯುಕ್ತವಾದ ಪಂಚೇಂದ್ರಿಯಗಳು ತಮ್ಮ ತಮ್ಮ ಸ್ವಭಾವಾನುಸಾರ ಬಾಹ್ಯ ವಿಷಯಗಳನ್ನು ಸಂಧಿಸುವವೋ ಆಗ ಆ ವಿಷಯಗಳು ಅನುಕೂಲವಾಗಿದ್ದರೆ ರಾಗ ಭಾವ, ಪ್ರತಿಕೂಲವಾಗಿದ್ದರೆ ದ್ವೇಷ ಭಾವ ತಲೆ ಎತ್ತುತ್ತವೆ.

"ಅರ್ಜುನ, ಆ ರಾಗ ದ್ವೇಷಗಳೆರಡೂ ಸತ್ಯ ಮಾರ್ಗದಿಂದ ಸಾಧಕನನ್ನು ಪತನಗೊಳಿಸುವ ವೈರಿಗಳು; ಅಂತರಾತ್ಮನತ್ತ ಹೋಗ ಬಯಸುವ ದೇವಯಾತ್ರಿಕನನ್ನು ಮೋಹಾಂಧಕಾರದ ಬಲೆ ಬೀಸಿ ಹೊರದಬ್ಬುವ ಶತ್ರುಗಳು. ಅವುಗಳ ಬಲೆಗೆ ಬೀಳಬಾರದು. ರಾಗ ದ್ವೇಷಗಳು ಮನದಲ್ಲಿ ತಾಂಡವಿಸದಂತೆ ಜಾಗ್ರತೆ ವಹಿಸಬೇಕು. ಇಂದ್ರಿಯಗಳ ಮೂಲಕ ವಿಷಯಗಳತ್ತ ಧಾವಿಸುವ ಮನಸ್ಸನ್ನು ಪ್ರಯತ್ನಪೂರ್ವಕ ನಿರೋಧಿಸಿ ದೇವಯಾತ್ರೆ ಮುಂದುವರಿಸಬೇಕು.

"ಪಾರ್ಥ, ಸ್ವಭಾವವು ಅಜೇಯವೆಂದು ನಾನು ವರ್ಣಿಸಿದ ಮಾತ್ರಕ್ಕೆ ಆ ಸ್ವಭಾವ ಸಾಮರ್ಥ್ಯವನ್ನು ಮೀರಲು ಬಾರದೆಂದು ತಿಳಿಯಬೇಡ. ಕರ್ಮ

ಯೋಗದಂಥ ಕೆಲವು ಸುಫಲಪ್ರ ಉಪಾಯಗಳಿಂದ ಎಂಥ ಸ್ವಭಾವವನ್ನೂ ಪರಿವರ್ತಿಸಬಹುದು. ಎಲ್ಲದಕ್ಕೂ ಯತ್ನ, ಜ್ಞಾನ ಹಾಗು ಸತ್ಸಂಗ ಮುಖ್ಯ."

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ**:-ಇಂದ್ರಿಯ-ಇಂದ್ರಿಯಾರ್ಥಗಳಲ್ಲಿ ರಾಗ ದ್ವೇಷಗಳು ನೆಲೆಸಿವೆ: ಈ ವಿಷಯದಲ್ಲಿ ಒಂದು ಸುಂದರವಾದ ರೂಪಕ ಕಥೆ ಛಾಂದೋಗ್ಯ ಉಪನಿಷತ್ತಿನಲ್ಲಿದೆ. ಪ್ರಜಾಪತಿಯ ಸಂತಾನವಾದ ದೇವತೆಗಳು ಹಾಗು ಅಸುರರು ಪರಸ್ಪರ ಯುದ್ಧದಲ್ಲಿ ತೊಡಗಿದ್ದರು. ಆಗ ದೇವತೆಗಳು ಓಂಕಾರೋಪಾಸನಾರೂಪ ಯಜ್ಞ ಮಾಡಿದರು. ಅಸುರರು ಸೋಲಬೇಕೆನ್ನುವದೇ ಆ ಯಜ್ಞದ ಉದ್ದೇಶವಾಗಿತ್ತು. ಆದರೆ ದೇವತೆಗಳು ನಾಸಿಕದಲ್ಲಿರುವ ಘ್ರಾಣೇಂದ್ರಿಯರೂಪ ಪ್ರಾಣವನ್ನು ಓಂಕಾರರೂಪ ಉದ್ಗೀಥ ಮಾಡಿ ಉಪಾಸಿಸ ತೊಡಗಿದಾಗ ಅಸುರರು ಆ ಘ್ರಾಣೇಂದ್ರಿಯವನ್ನು ರಾಗ ದ್ವೇಷರೂಪ ಪಾಪದಿಂದ ಯುಕ್ತ ಮಾಡಿದರು. ಆದುದರಿಂದಲೇ ಆ ಇಂದ್ರಿಯದ ಮೂಲಕ ಜೀವನು ಒಳ್ಳೆಯ ಹಾಗು ಕೆಟ್ಟ ಎರಡೂ ಬಗೆಯ ಗಂಧವನ್ನು ಗ್ರಹಿಸುತ್ತಾನೆ. ಇದೇ ರೀತಿ ದೇವತೆಗಳು ಸರ್ವ ಜ್ಞಾನೇಂದ್ರಿಯಗಳಲ್ಲಿ ಹಾಗು ಮನಸ್ಸಿನಲ್ಲಿ ಓಂಕಾರ ಸ್ಥಾಪಿಸಿ ಉಪಾಸನೆ ಮಾಡಲು ಪ್ರಯತ್ನಿಸಿದರು. ಅಸುರರು ಅವುಗಳಲ್ಲಿ ರಾಗ ದ್ವೇಷಗಳನ್ನು ಸ್ಥಾಪಿಸಿ ಓಂಕಾರೋಪಾಸನೆಯನ್ನು ವಿಫಲಗೊಳಿಸಿದರು; ಒಳ್ಳೆಯ ಹಾಗು ಕೆಟ್ಟ ವಿಷಯಗಳೆರಡನ್ನೂ ಆ ಇಂದ್ರಿಯ ಮನಸ್ಸುಗಳು ಗ್ರಹಿಸುವಂತೆ ಮಾಡಿದರು.

ಸ್ವಭಾವವು ದುರತಿಕ್ರಮ ಎಂಬ ಮಾತೇನು ಅಸತ್ಯವಲ್ಲ. ಆದರೆ ಸಾಹಸಪೂರ್ಣ ಪ್ರಯತ್ನದಿಂದ ಎಂಥ ಪ್ರಕೃತಿಯನ್ನೂ ಪರಿವರ್ತಿಸಬಹುದು. ಪ್ರಕೃತಿಯ ಪರಿವರ್ತನೆಗೆ ಸಂತರು ಮೂರು ಉಪಾಯ ಹೇಳಿದ್ದಾರೆ ಅವು:

(೧) **ಆಪ್ತೋಪದೇಶ–ಶ್ರವಣ**:- ಉಪದೇಶದಲ್ಲಿ ಅಪ್ರತಿಮ ಶಕ್ತಿ ಇದೆ. ಭೋಗಶೀಲ ದೇವತೆಗಳು ದಮನ ಶೀಲರಾಗುವದು, ಸಂಚಯವೃತ್ತಿಯ ಮನುಷ್ಯರು ದಾನಶೀಲರಾಗುವದು, ಹಿಂಸಾ ಸ್ವಭಾವದ ದಾನವರು ದಯಾಶೀಲರಾಗುವದು ಉಪದೇಶದಿಂದಲೇ. ಭಯಂಕರ ಘೋರ ಕೃತ್ಯಗಳಲ್ಲಿ ತೊಡಗಿದ ಬೇಡನು ವಾಲ್ಮೀಕಿ ಋಷಿಯಾದುದು ನಾರದರ ಉಪದೇಶಾಮೃತ ಕಾಂತಿ! ಮನುಷ್ಯನನ್ನು ದೇವರನ್ನಾಗಿಸುವ ಬಲ ಅದರಲ್ಲಿದೆ; ಜಗತ್ತನ್ನೇ ಸ್ವರ್ಗವನ್ನಾಗಿಸುವ ಮಹಾ ಸಾಮರ್ಥ್ಯ ಬೋಧನೆಯಲ್ಲಿ ಹುದುಗಿದೆ. ಸಮಾಜ ನೇತಾರರಿಗಂತು ಉಪದೇಶವೇ ತಾರಕ. ಅವರು ಭಯ ಭಕ್ತಿಯಿಂದ ವೇದ ವೇದಾಂತ ವಚನಗಳನ್ನು, ಗುರೂಕ್ತ ಅಮೌಲ್ಯ ನುಡಿಗಳನ್ನು ಆಲಿಸಿದರೆ ಅವರ ಹೃದಯ ಅರಳುವದು. ಪಕ್ಷಪಾತ ಬುದ್ಧಿ ಅಳಿಯುವದು; ಸಮತ್ವ ದೃಷ್ಟಿ ಸಮನಿಸುವದು. ದಯೆ ಸತ್ಯ ಅಸ್ತೇಯದಂಥ ದೈವೀ ಗುಣಗಳು ಪ್ರಾಪ್ತವಾಗುವವು. ಹೀಗಾದಾಗ ಮಾತ್ರ ಆ ನೇತಾ

ರರು ಜಗತ್ತನ್ನೇ ಪರಿವರ್ತಿಸಬಲ್ಲರು. ಇನ್ನು ಸಾಮಾನ್ಯ ಜೀವರಿಗಂತು ಎಡೆ ಬಿಡದೆ ಶ್ರವಣಬೇಕು. ಜಲಸ್ನಾನ ದೈಹಿಕ ಮಲನಿವಾರಕವಾದರೆ ಬೋಧ–ಸ್ನಾನ ಮಾನಸಿಕ ಮಲ ನಿವಾರಕ.

(೨) ಸತ್ಸಂಗ:– ವೀರ ವಿರಾಗಿಗಳ, ಸಂತ ಮಹಂತರ, ಋಷಿ ಮುನಿಗಳ ಸಂಗದಲ್ಲಿ ಸದಾ ಪಾವಿತ್ರ್ಯ ವ್ಯಾಪಿಸಿದೆ. ವಿಷಯ ವಾಸನೆ, ಭೋಗ ವೈಭವದ ದುರ್ಗಂಧ, ರಾಗ ದ್ವೇಷಗಳ ಧೂಮ್ರ ಅವರ ಸನಿಹದಲ್ಲಿ ಸುಳಿಯವು. ಬಲ್ಲವರ ಸಾಮಿಪ್ಯವೆಂದರೆ ಕಾಮಧೇನು. ಅವರ ಕೃಪಾಛತ್ರದಲ್ಲಿ ನಾವು ಬದುಕಿದರೆ ನಮ್ಮ ಅಂತರಂಗದಲ್ಲಿದ್ದ ರಾಗ ದ್ವೇಷ, ದುಷ್ಟವಾಸನೆ ಪ್ರಾಕೃತಿಕ ಸ್ವಭಾವ ನಿರ್ಬಲವಾಗುವವು.

೩) ಯತ್ನ:– ಬರೀ ಶ್ರವಣ, ಬರೀ ಸತ್ಸಂಗ ಪ್ರಯೋಜನಕಾರಿಯಲ್ಲ. ಅವುಗಳೊಂದಿಗೆ ಯತ್ನ ಸಾಗಬೇಕು. ಬಲ್ಲವರು ತೋರಿದ ವೀಥಿಯಲ್ಲಿ ತಪ್ಪದೆ ನಡೆಯಲು ಶ್ರಮಿಸಬೇಕು. ನಮ್ಮ ಪ್ರಾಕೃತಿಕ ಸ್ವಭಾವ-ಪ್ರವಾಹದ ವಿರುದ್ಧ ವಾಗಿ ಈಜಲು ಕಲಿಯಬೇಕು. ಶ್ರವಣ ಸತ್ಸಂಗಗಳು ಸಹಾಯಕ ಸಂಗಡಿಗಳು. ಹೀಗೆ ಮಾಡಿದಾಗ, ಆತ್ಮಸಾಧನಾ ಮಾರ್ಗದ ರಾಗದ್ವೇಷಾದಿ ಪ್ರತಿಬಂಧಕಗಳು ತಮ್ಮಷ್ಟಕ್ಕೆ ತಾವೇ ಹಿಂದಾಗುವವು. ಹೊರಮುಖವಾದ ಸ್ವಾಭಾವಿಕ ಮನೋ ಪ್ರವಾಹ ಊರ್ಧ್ವಮುಖವಾಗುವದು. ಇದೇ ಸ್ವಭಾವ ಪರಿವರ್ತನ.

ಸಂಬಂಧ:– ಅರ್ಜುನ:– "ದೇವ ನೀನು ಹೇಳಿದಂತೆ ಸ್ವಭಾವಾನುಸಾರ ಬಾಳುವದು ಪಶುತ್ವ. ಜಾಣನಾದ ಮನುಷ್ಯ ಮಾತ್ರ ಆ ಸ್ವಭಾವವನ್ನು ಅತಿ ಕ್ರಮಿಸಬೇಕು; ನಿತ್ಯದ ಕರ್ತವ್ಯ ಕರ್ಮರೂಪ ಧರ್ಮದಲ್ಲಿ ತಲ್ಲೀನನಾಗಬೇಕು. ಈ ಮಾತು ನನಗೆ ಸಮ್ಮತ. ಆದರೆ, ಯುದ್ಧದಂಥ ಕರ್ತವ್ಯಗಳಿಗಿಂತ ಅಹಿಂಸಾ ಸತ್ಯ ಮುಂತಾದ ಕರ್ತವ್ಯ ಧರ್ಮಗಳು ಸರ್ವ ಶ್ರೇಷ್ಠ. ಈ ಸಮಾಜ ರಕ್ಷಣಾ ತ್ಮಕ ಕರ್ಮಗಳ ಬಿಟ್ಟು ನಾನೇಕೆ ಅಹಿಂಸಾದಿ ಸಾತ್ವಿಕ ಧರ್ಮಾಚರಣೆಯಲ್ಲಿ ತೊಡಗಬಾರದು? ಅದರಿಂದ ಏನಿದೆ ಹಾನಿ?"

ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥೩೫॥

ಅರ್ಥ:– ಸು ಅನುಷ್ಠಿತಾತ್= ಸುಗಮವಾಗಿ ಆಚರಿಸಲಿಕ್ಕೆ ಶಕ್ಯವಾದ, ಪರ ಧರ್ಮಾತ್= ಪರಧರ್ಮಕ್ಕಿಂತ, ವಿಗುಣಃ (ಅಪಿ) = ಸರ್ವಾಂಗ ಪೂರ್ಣವಲ್ಲದ್ದರೂ. ಸ್ವಧರ್ಮಃ=ಸ್ವಧರ್ಮವು, ಶ್ರೇಯಾನ್=ಒಳ್ಳೆಯದು. (ಶ್ರೇಷ್ಠವಾದುದು). ಸ್ವಧರ್ಮೇ= ಸ್ವಧರ್ಮದಲ್ಲಿ ನಿಧನಂ=ಮರಣವು, ಶ್ರೇಯಃ=ಯೋಗ್ಯ. ಪರಧರ್ಮಃ= ಪರಧರ್ಮವು, ಭಯಾವಹಃ = ಭಯಾನಕವಾದುದು.

ವಿವರಣೆ:– ಸ್ವಧರ್ಮ:– ಸತ್ಯ ಪ್ರೇಮ ವಿರಾಗ ಶಾಂತಿ ಶ್ರದ್ಧೆಗಳನ್ನು ಅಂಗವಿಸಿಕೊಂಡು ಬಾಳುವದು ಸ್ವಧರ್ಮ. ಈ ಧರ್ಮಜೀವನವು ಪವಿತ್ರ

ದೇವ ಮಾನ್ಯ, ಮುಕ್ತಿ ಕಾರಕ.

ಪರಧರ್ಮಃ:- ಆಶೆ ಆಮಿಷಗಳ ದಾಸನಾಗಿ, ಅಹಂಕಾರ ಮಮಕಾರ ಭಾವ ತಾಳಿ ಬದುಕುವದು ಪರಧರ್ಮ. ಇದು ಅಪವಿತ್ರ; ಭಯಕಾರಕ.

"ಶ್ರದ್ಧಾ ಹಾನಿಸ್ತಥಾಸೂಯಾ ದುಷ್ಟಚಿತ್ತತ್ವ ಮೂಢತೇ
ಪ್ರಕೃತೇರ್ವಶವರ್ತಿತ್ವಂ ರಾಗದ್ವೇಷೌ ಚ ಪುಷ್ಕಲೌ
ಪರಧರ್ಮ ರುಚಿತ್ವಂ ಚೇತ್ಯುಕ್ತಾ ದುರ್ಮಾರ್ಗ ವಾಹಕಾಃ"

ಅಶ್ರದ್ಧೆ, ಮಾತ್ಸರ್ಯ, ದುರ್ಮನ, ಮೂರ್ಖತೆ, ಇಂದ್ರಿಯದಾಸ್ಯತ್ವ, ರಾಗ-ದ್ವೇಷಗಳು; ಇವು ದುರ್ಮಾರ್ಗದಲ್ಲಿ ಎಳೆದೊಯ್ಯುತ್ತವೆ. ಇವುಗಳಲ್ಲಿ ಆಸಕ್ತನಾಗುವದು ಪರಧರ್ಮರುಚಿತ್ವ.

ಸ್ವಧರ್ಮಃ ಶ್ರೇಯಾನ್...:- ಸ್ವಧರ್ಮವು ವಿಗುಣವಾದರೂ-ಅಂದರೆ ಅನಾಕರ್ಷಕ ಮತ್ತು ಆಚರಿಸಲು ಕಷ್ಟಕರವಾದರೂ ಶ್ರೇಷ್ಠ; ಮೋಕ್ಷಕಾರಿ. ಪರಧರ್ಮವು ಸ್ವನುಷ್ಠಿತಾತ್-ಅಂದರೆ ಆಕರ್ಷಕ ಮತ್ತು ಆಚರಿಸಲು ಸುಲಭವಾದರೂ ಭಯಾನಕ; ಮೃತ್ಯುಮುಖಿ.

ಗಂಗಾಜಲ ಒಂದು ಬೊಗಸೆಯಷ್ಟೇ ದೊರೆಯಲಿ, ಅದು ಹೃದ್ಯ, ಪಾವನ. ತ್ರಿಳಿಗೊಂಡ ಬಚ್ಚಲ ನೀರು ಸಾಕು ಬೇಕಷ್ಟು ದೊರೆತರೂ ಅದು ನಿಷಿದ್ಧ, ಅನಾರೋಗ್ಯಕರ. ಕುಲಾಂಗನೆಯು ಆಕರ್ಷಕವಿರದಿದ್ದರೂ ಆಕೆ ಸುಸ್ಪರ್ಶ್ಯೆ, ವೇಶ್ಯಾಂಗನೆ ಎಷ್ಟೇ ನಮೂನ ಮನೋಹರವಿದ್ದರೂ ಆಕೆ ಅಸ್ಪೃಶ್ಯೆ. ಆಕಳು ಕ್ಷೀಣವಾದರೇನು? ಅದು ಪೂಜ್ಯ. ಎಮ್ಮೆ ಎಷ್ಟು ಕೊಬ್ಬಿದರೇನು ? ಅದು ಅಪೂಜ್ಯ. ಅದೇ ರೀತಿ ಸ್ವಧರ್ಮವನ್ನು ಅಲ್ಪ ಪ್ರಮಾಣದಲ್ಲಿ ಅನುಷ್ಠಾನ ಮಾಡಿದರೂ 'ತ್ರಾಯತೇ ಮಹತೋ ಭಯಾತ್' ಘೋರ ಸಂಸಾರ ಭಯದಿಂದ ತಾರಿಸುತ್ತದೆ. ಪರಧರ್ಮವನ್ನು ಜೀವನದ ತುಂಬ ಆಚರಿಸಿದರೂ ಅದರಿಂದ ಇನ್ನಷ್ಟು ದುಃಖವೇ ವಿನಃ ಸುಖವಿಲ್ಲ. ಭೋಗಿಯಾಗಿ ನೂರು ವರುಷ ಜೀವಿಸುವದಕ್ಕಿಂತ ಇಂದ್ರಿಯ ನಿಗ್ರಹರೂಪ ಸ್ವಧರ್ಮಯೋಗಿಯಾಗಿ ಒಂದೇ ಒಂದು ದಿನ ಬದುಕುವದು ಲೇಸು. ಇದು ಬಲ್ಲವರ ನುಡಿ.

ಪರಧರ್ಮಾನುಷ್ಠಾನಕ್ಕೆ ಪ್ರಚೋದಿಸುವ ಸಾಮಗ್ರಿಗಳು ಬಹಳ. ನಮ್ಮ ಸುತ್ತೆಲ್ಲ ಭೋಗ ವಸ್ತುಗಳು ಹರಡಿವೆ. ಹೋದಲ್ಲೆಲ್ಲ ರುಚಿ ರುಚಿ ಖಾದ್ಯದ ಹಾಟೇಲುಗಳು; ಕಣ್ಣಿಗೆ ಹಬ್ಬ ನೀಡುವ ಸಿನೀಮಾ ಮಂದಿರಗಳು; ನೃತ್ಯವಾಟಿಕೆಗಳು; ವೇಶ್ಯಾ ಸದನಗಳು; ಕಾಮ ಪ್ರಚೋದಕ ಲತಾ ಮಂಟಪಗಳು. ಹೆಜ್ಜೆ ಹೆಜ್ಜೆಗೆ ಮದ್ಯದಂಗಡಿ, ಸಿಗಾರ ಪಾನ ಕ್ಲಬ್ಬುಗಳು !

ಸ್ವಧರ್ಮ ಪ್ರಚೋದಕ ಸಾಮಗ್ರಿಗಳು ಮಾತ್ರ ವಿರಳ ! ನಾವು ನಡೆದು ಹೋದಲ್ಲೆಲ್ಲ ದೇವಾಲಯ, ಮಂತ್ರಾಲಯ, ಧ್ಯಾನಮಂದಿರಗಳಿಲ್ಲ: ನಾಡಿನ

ತುಂಬ ಹುಡುಕಿದರೂ ಸದ್ಗುರುಗಳು ದೊರೆಯುವದು ಅಪರೂಪ. ಪುರಾಣ ಪ್ರವಚನಗಳಿಗೆ ದುರ್ಭಿಕ್ಷೆ ಇದೆ. ಮಂತ್ರ ಘೋಷ, ವೇದ ಪಠಣಗಳಂತು ಕೇಳಿ ಬರುವದೇ ಇಲ್ಲ. ಆದುದರಿಂದ ಸರ್ವಾಂಗ ಪೂರ್ತ ಸ್ವಧರ್ಮಾನುಷ್ಠಾನ ಅಷ್ಟು ಸಹಜವಲ್ಲ. ಕಿಂತು, ಕಿಂಚಿನ್ಮಾತ್ರ ಆಚರಿತ ಸ್ವಧರ್ಮವೇ ಸೇವ್ಯ. ಹೇರಳವಾಗಿ ಸಿಕ್ಕುವದೆಂಬ ಕಾರಣದಿಂದ ಕಸ ತಿನ್ನುವದೂ ವಿಪುಲವಾಗಿ ಲಭ್ಯವೆಂದು ವಿಷಯ ಭೋಗರೂಪ ಪರಧರ್ಮ ಆಚರಿಸುವದೂ ಒಂದೇ.

ಪರಧರ್ಮ ಅತ್ಯಂತ ಆಕರ್ಷಕ. ಭೋಗ ಜೀವನ ಬಹು ಆಹ್ಲಾದಕರ. ಅವರ ಮಾಟಕ್ಕೆ ಮರುಳಾಗದವರೇ ಕಡಿಮೆ. ಮಗ್ಗುಲಲ್ಲಿ ನವವಧು, ನಯನ ಮನೋಹರ ರೂಪು, ಮೈತುಂಬ ಭರ್ಜರಿ ಉಡುಗೆ, ಸುತ್ತೆಲ್ಲ ನಾದ ಮಾಧುರ್ಯ ಸುಗಂಧ ಪನ್ನೀರ ಸಿಂಚನ, ಕೈಯಲ್ಲಿ ಅಕ್ಷತೆ ಹಿಡಿದು ನಿಂತ ನೂರಾರು ರಮಣಿ ಯರು, ಯುವಕರು. ಇದನ್ನೆಲ್ಲ ಕಲ್ಪಿಸಿದಾಗ ಯಾರ ಮನ ಮರುಳಾಗಲಿಕ್ಕಿಲ್ಲ? ಇಂಥ ಅವಕಾಶವಿದೆ ಬನ್ನಿ ಎಂದರೆ ಕುರುಡ, ಕುಂಟ, ಮೂಕ, ಭಿಕ್ಷುಕ, ಸನ್ಯಾಸಿ, ವೃದ್ಧ ಎಲ್ಲರೂ ಧಾವಿಸಿಯಾರು. ಕ್ಯಾಬರೆ ನೃತ್ಯಕ್ಕೆ ಬನ್ನಿ, ಮುಕ್ತದ್ವಾರ, ಎಂದರೆ ಸಾಯುವ ಮುದುಕರೂ ಓಡಿ ಬಂದಾರು !

ದೇಶದ ತುಂಬ ಪರಧರ್ಮಿಗಳೇ ( ಅನಾತ್ಮ ವ್ಯಾಮೋಹಿಗಳೇ ) ಪರಡಿ ದ್ದಾರೆ. ಪರಧರ್ಮ ಬೋಧಕರಿಗೆ ಕೊರತೆ ಇಲ್ಲ. ಮಕ್ಕಳು ಬೆಳೆದು ದೊಡ್ಡವರಾ ದರೆಂದರೆ ಅವರನ್ನು ಭೋಗ ಕಂದರದಲ್ಲಿ ನೂಕಲು ಎಳೆಯರಿಂದ ಹಿಡಿದು ಮುದುಕರವರೆಗಿನ ಎಲ್ಲರೂ ಯತ್ನಿಸುತ್ತಾರೆ. ಆತ್ಮ ಜ್ಞಾನಿಗಳಾಗಲಿ ಎಂದು ಬಯಸುವ ಗುರು ಹಿರಿಯರು ಇಲ್ಲದಾಗಿದ್ದಾರೆ. ಹೀಗೆ ಪರಧರ್ಮ ವಿಶ್ವವ್ಯಾಪಕ; ಸ್ವಧರ್ಮ ಯತ್ಕಿಂಚಿತ್. "ತಮಂಧ ಘನ, ಜ್ಯೋತಿ ಕಿರಿದೆನ್ನಬಹುದೆ?" " ಆನೆ ಹೋದ ಮಾರ್ಗದಲ್ಲಿ ಲಕ್ಷ ಕುರಿಗಳೂ ಹೋದವೆಂದು ಹೇಳಬಹುದೆ?" ಜ್ಯೋತಿಯ ಕಾಂತಿಯೇ ಬೇರೆ; ತಮಂಧದ ತೋರಿಕೆಯೇ ಬೇರೆ. ಆನೆಯ ಗಾಂಭೀರ್ಯವೇ ಬೇರೆ; ಕುರಿಗಳ ಕೀಳ್ತನವೇ ಬೇರೆ. ಸ್ವಧರ್ಮವು ಕಿಂಚಿತ್ತೇನೋ ಸರಿ; ಅದು ಪವಿತ್ರ ಭಾಸ್ಕರ ! ಪರಧರ್ಮ ಸರ್ವತ್ರ ಪಸರಿಸಿದ್ದರೂ ಅದು ಗಾಢಾಂಧಕಾರ ! ಭಾಸ್ಕರನ ಎದುರು ಅದಕ್ಕೆಲ್ಲಿ ಅವಕಾಶ?

ಸ್ವಧರ್ಮೇ ನಿಧನಂ ಶ್ರೇಯಃ:-ಸ್ವಧರ್ಮವನ್ನು ಪೂರ್ತಿಯಾಗಿ ಆಚರಿ ಸುವದು ಸಾಧ್ಯವಾಗಲಿಕ್ಕಿಲ್ಲ. ಸ್ವಧರ್ಮ ಆಚರಿಸುವಾಗ ದೇಹ ಬಿದ್ದುಹೋದರೆ ಅದರಿಂದ ಹಾನಿಯೂ ಇಲ್ಲ. ಈಗ ಅಲ್ಪವಾಗಿರುವ ಸ್ವಧರ್ಮವು ಮುಂದಿನ ಜನ್ಮದಲ್ಲಿ ತತ್ತ್ವಸಾಕ್ಷಾತ್ಕಾರ ಮಾಡಿಕೊಡುವದು. ಇದು ಖಚಿತ. ರಾಗ ದ್ವೇಷ ಗಳೆಂಬ ಪರಧರ್ಮಬಲಿಗೆ ಬಿದ್ದು ವಿಷಯೋಪಭೋಗದಲ್ಲಿ ರಮಮಾಣನಾಗಿ ಸತ್ತರೆ ನರಕ ತಪ್ಪದು. ಆದುದರಿಂದ ಆ ಪರಧರ್ಮವು 'ಭಯಾವಹ'ಭಯಕರ.

ಭಗವಂತ:– "ಅರ್ಜುನ, ನನ್ನ ಮಾತಿನ ಇಂಗಿತ ಅರಿತುಕೊ. ಚಿಂತೆ ಮೋಹ ಶೋಕಗಳ ಸಮುದಾಯವೇ ಪರಧರ್ಮ; ಅದು ಸಹಜ ಮತ್ತು ಸುಲಭ. ಆದರೆ ಶ್ರೇಯಸ್ಕರವಲ್ಲ. ವಿಮಲ ಆತ್ಮನತ್ತ ನಿನ್ನನ್ನು ಕರೆದೊಯ್ಯುವ ಶಮ ದಮ ವಿವೇಕ ವಿರಾಗ ಆರ್ಜನ ಅನುಸಂಧಾನ ಅರ್ಪಣ ಮುಂತಾದ ದೈವೀ ಗುಣಸಮೂಹವು ಸ್ವಧರ್ಮ. ಅದು ಸಹಜ ಸುಲಭವಲ್ಲದಿದ್ದರೂ ಸರ್ವಶ್ರೇಷ್ಠ! ನೀನು ಭಯಾವಹವಾದ ವಿನಾಶಕಾರಿಯಾದ ಪರಧರ್ಮಕ್ಕೆ ಮನವೆಳಸಬೇಡ. ಆತ್ಮನಿಷ್ಠನಾಗು, ಸ್ವಧರ್ಮ ಪರಿಪಾಲಿಸು; ಪಾವನ ಕರ್ಮಯೋಗ ಸಾಧಿಸು. ಕರ್ಮ ಮಾಡುತ್ತಿರುವಾಗಲೇ ನಿನ್ನ ದೇಹ ಪಾತವಾದರೆ ಚಿಂತಿಸಬೇಡ. ಅದು ಯತ್ಕಿಂಚಿತ್ ಅನುಷ್ಠಿತವಾದರೂ ನಿನ್ನನ್ನು ಮುಂದೆ ಕಾಪಾಡುವದು. ಅದ್ದರಿಂದ ನಿನ್ನ ಕರ್ತವ್ಯ ಕರ್ಮ ಬಿಟ್ಟು ವ್ಯಾಮೋಹಾಧಾರಿತ ಅನ್ಯ ಕರ್ಮಗಳಿಗೆ ಕೈ ಹಾಕದಿರು."

ಸಂಬಂಧ:– ಭಗವಂತನ ಮಾತುಗಳನ್ನು ಆಲಿಸಿದ ಅರ್ಜುನನ ಮನದಲ್ಲಿ ಒಂದು ಸಮಯೋಚಿತ ಸಂದೇಹ ಕಾಣಿಸಿಕೊಂಡಿತು. ಅದನ್ನಾತ ವ್ಯಕ್ತ ಮಾಡುತ್ತಾನೆ.

ಅರ್ಜುನ ಉವಾಚ

ಅಥ ಕೇನ ಪ್ರಯುಕ್ತೋऽಯಂ ಪಾಪಂ ಚರತಿ ಪೂರುಷಃ ।
ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥೩೬॥

ಅರ್ಥ:-ವಾರ್ಷ್ಣೇಯ= ವೃಷ್ಣೀ ವಂಶದಲ್ಲಿ ಹುಟ್ಟಿದ ಕೃಷ್ಣನೆ, ಅಥ =(ಸ್ವಧರ್ಮವೇ ಶ್ರೇಷ್ಠ ಎನ್ನುವದು ಖಚಿತ ಎಂದು ನಿನ್ನ ಅಭಿಮತವಲ್ಲವೆ?) ಹಾಗಿದ್ದರೆ, ಅಯಂ= ಈ ಪೂರುಷಃ= ಪುರುಷನು, ಅನಿಚ್ಛನ್ ಅಪಿ= ಇಚ್ಛಿಸದಿದ್ದರೂ ಕೇನ= ಯಾವುದರಿಂದ, ಪ್ರಯುಕ್ತಃ= ಪ್ರೇರಿತನಾಗಿ ಬಲಾತ್= ಬಲಾತ್ಕಾರದಿಂದ, ನಿಯೋಜಿತಃ ಇವ= ನಿಯುಕ್ತನಾದವನಂತೆ ಪಾಪಂ ಚರತಿ= ಪಾಪ ಆಚರಿಸುತ್ತಾನೆ?

ವಿವರಣೆ:- ಅರ್ಥ ಪೂರ್ಣ ಸಂದೇಹವಿದು. ಇದು ಪಾಪ ಕೃತ್ಯ; ಮಾಡಬಾರದು; ಮಾಡಿದರೆ ಘೋರ ನರಕ; ಎಂಬ ಮಾತು ಎಲ್ಲರಿಗೂ ಹೊಳೆಯುತ್ತದೆ. ದುಃಖಕರ ನರಕ ಸೇರುವ ಇಚ್ಛೆ ಕೂಡ ಯಾರಿಗೂ ಇಲ್ಲ. ಆದರೇನು, ಅದನ್ನೆಲ್ಲ ಉದ್ದೇಶ ಪೂರ್ವಕ ಮರೆತು ಯಾವುದೋ ಅದಮ್ಯ ಅದೃಶ್ಯ ಶಕ್ತಿಯಿಂದ ಪ್ರೇರಿತನಾಗಿ ಆ ಪಾಪ ಕೃತ್ಯಕ್ಕೆ ಕೈ ಹಾಕುತ್ತಾನೆ! ಏಕೆ?

ಈ ಶಿವಾನುಭವ ಮಂಟಪಕ್ಕೆಂದೇ ನಿರ್ಧರಿಸಿ ಹೊರಟ ಮನುಷ್ಯ ತನಗೆ ತಿಳಿಯದಂತೆ ನಾಟಕ ಗೃಹದತ್ತ ಸಾಗುತ್ತಾನೆ. ಹಾಲು ಕುಡಿದು ಶಕ್ತಿವಂತನಾಗಬೇಕೆಂದು ಬಯಸಿದವ ಸೆರೆಯಂಗಡಿಯಲ್ಲಿ ಹೆಜ್ಜೆ ಇಡುತ್ತಾನೆ. ಅಪಥ್ಯ ಪದಾರ್ಥ ತಿಂದರೆ ರೋಗ ಹತ್ತು ಮಡಿ ಹೆಚ್ಚುವದೆಂದು ಗೊತ್ತಿದ್ದರೂ ಯಾರೂ ಇಲ್ಲದ ಸಮಯ ನೋಡಿ ರೋಗಿಯು ಕದ್ದು ತಿನ್ನುತ್ತಾನೆ. ಹೀಗೆಲ್ಲ ಮಾಡಿಸುವ ಆ

ಸೈತಾನ ಶಕ್ತಿ ಯಾವುದು?

ಸಹನೆ, ಸಂತೋಷ. ಬಂಧು ಪ್ರೇಮಗಳ ಮೇಲೆ ವ್ಯಾಖ್ಯಾನ ನೀಡ ಬಲ್ಲ ಜಾಣ ಮಗ ತಿಳಿದೂ ತಿಳಿದೂ ಹೆಂಡತಿಯ ಮಾತಿಗೆ ಕಿವಿಕೊಟ್ಟು ಅಣ್ಣ ತಮ್ಮಂದಿರೊಂದಿಗೆ ಜಗಳಾಡುತ್ತಾನೆ. ತಾಯಿ ತಂದೆಗಳನ್ನು ಭಿಕ್ಷುಕರಂತೆ ಹೊರ ದಬ್ಬುತ್ತಾನೆ. ಹೆಂಡತಿಯ ತವರಿನ ಹೊಲೆಯಾಳು ಬಂದರೂ ಪ್ರೀತಿಯಿಂದ ಉಪಚರಿಸುತ್ತಾನೆ! ಕಾರಣವೇನು?

ಸಾಮಾನ್ಯ ಜನರ ಮಾತಂತಿರಲಿ. ಮೇಧಾವಿಗಳೂ ಹಾಗೆಯೇ. ಯಾಚನೆ, ಸಂಗ್ರಹ, ಅಧಿಕಾರ ದಾಹ, ಅನೀತಿಗಳ ಮೇಲೆ ತಾಸು ತಾಸು ಪ್ರವಚನ ಮಾಡುವ ಗ್ರಂಥ ರಚಿಸುವ ಜನರು ತುತ್ತು ಅನ್ನಕ್ಕಾಗಿ ಕೈಯೊಡ್ಡುತ್ತಾರೆ. ಕಾಸು ಕಾಸಿ ಗಾಗಿ ಬಾಯಿ ಬಿಡುತ್ತಾರೆ, ಅನ್ಯಾಯ ಮಾರ್ಗದಿಂದಲಾದರೂ ಸರಿಯೆ ಹೇರಳ ವಾಗಿ ಧನ ಸಂಗ್ರಹಿಸುತ್ತಾರೆ. ಅಧಿಕಾರಕ್ಕಾಗಿ ಪರದಾಡುತ್ತಾರೆ! ತಿಳಿಯು ತ್ತಿದ್ದರೂ ಅವರು ಹೀಗೇಕೆ ಜೀವಿಸುತ್ತಾರೆ?

ಇನ್ನೊಬ್ಬರನ್ನು ಕೀಳು ದೃಷ್ಟಿಯಿಂದ ಕಾಣುವದು, ಆತ್ಮ ಪ್ರಶಂಸೆಗೆ ಕಿವಿಗೊಡುವದು, ಪರ ಧನ ಪರಸ್ತ್ರೀಯರ ಮೇಲೆ ಕಣ್ಣು ಹಾಯಿಸುವದು, ಇತ ರರ ತಪ್ಪೆಣಿಸುವದು, ಪಾಪವೆಂದು ಅಂತರಾತ್ಮ ಹೇಳುತ್ತಿದೆ. ಹಾಗಿದ್ದೂ ನಾವು ಅವುಗಳಲ್ಲಿ ಪ್ರವೃತ್ತರಾಗುವೆವಲ್ಲ? ನಮ್ಮ ಮನಸ್ಸಿರದಿದ್ದರೂ ಬಲಾತ್ಕಾರದಿಂದ ಪಾಪ ಕೆಲಸಕ್ಕೆ ಹಚ್ಚುವ ಆ ಅದೃಶ್ಯ ಬಲ ಯಾವುದು?

**ಸಂಬಂಧ:**– ಅರ್ಜುನನ ಪ್ರಶ್ನೆಗೆ ಕೃಷ್ಣನು ಉತ್ತರಿಸುತ್ತಾನೆ.

ಶ್ರೀ ಭಗವಾನುವಾಚ–

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ॥**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥೩೭॥**

**ಅರ್ಥ:**- ಏಷಃಕಾಮಃ= ಈ ಕಾಮವು ಏಷಃ ಕ್ರೋಧಃ= ಈ ಕ್ರೋಧವು, ರಜೋ ಗುಣ ಸಮುದ್ಭವಃ= ರಜೋ ಗುಣದಿಂದ ಹುಟ್ಟಿದೆ. (ಇದು) ಮಹಾಶನಃ= ಸರ್ವಗ್ರಾಸಿಯು ಅಶಾಮ್ಯವು) ಮಹಾಪಾಪ್ಮಾ= ಮಹಾ ಪಾಪಿಯು (ಅತ್ಯುಗ್ರವು).

**ವಿವರಣೆ:**– ಭಗವಂತ:– "ಮಹಾಬಾಹುವೆ, ನಿನ್ನದು ಉಚಿತ ಪ್ರಶ್ನೆ. ಜಗತ್ತಿನ ಮಹಾ ಮಹಾ ಜನರನ್ನು ತನ್ನ ಬೆರಳ ಮೇಲಾಡಿಸುವ ಒಂದು ರಾಕ್ಷಸೀ ಶಕ್ತಿ ಇದೆ. ಅದೇ ರಜೋಗುಣಗರ್ಭದಿಂದ ಉದಿಸಿದ ಕಾಮ! ಕ್ರೋಧ! ಇವೆ ರಡು ಅತ್ಯುಗ್ರ; ಸದಾ ಅತೃಪ್ತ. ಈ ಎರಡೂ ದಾಹಗಳನ್ನು ಶಮನಗೊಳಿಸುವದು ದೇವ ದೇವತೆಗಳಿಗೂ ಸಾಧ್ಯವಿಲ್ಲ. ಉಪಭೋಗ ಹೆಚ್ಚಿದಂತೆ ಕಾಮ ವರ್ಧಿಸು ವದು; ಕ್ರೋಧ ಉಲ್ಬಣಿಸುವದು. ಪಾರ್ಥ, ಜಾಣ ಜಾಣರ ಪ್ರಜ್ಞೆಯನ್ನು ಕಲಕಿ, ಅವರನ್ನು ಪಾಪ ಕಾರ್ಯಗಳಿಗೆ ಒತ್ತಾಯದಿಂದ ಹಚ್ಚುತ್ತಿವೆ ಈ ಕಾಮ

ಕ್ರೋಧಗಳು. ಇವು ಸತ್ಯ ಮಾರ್ಗದ ವೈರಿಗಳು!"

(೧) ಪ್ರಕೃತಿಯ ಗುಣಗಳು ಮೂರು: ಸತ್ವ, ರಜ, ತಮ. ಏಕಾಗ್ರ, ನಿರುದ್ಧ ಎಂಬ ಧ್ಯಾನ ಸಮಾಧಿ ವೃತ್ತಿಗಳು ಸತ್ವ ಗುಣಜನ್ಯ. ಮೌಢ್ಯತೆ ತಮೋ ಗುಣಜನ್ಯ. ಕಾಮವು ರಜೋಗುಣ ಜನ್ಯ. ಕ್ರೋಧ ಲೋಭ, ಮೋಹ, ಮದ, ಮತ್ಸರಗಳು ಕಾಮದ ವಿಭಿನ್ನ ರೂಪುಗಳು. ಕಾಮವು ಪಾಪಮೂಲ. ಮೌಢ್ಯತೆ ಈ ಕಾಮದ ಸಹಕಾರಿ. ಕಾಮವೆಂಬ ಝಂಝಾ ಮಾರುತ ಬೀಸಿದರೆ ಏಕಾಗ್ರ ನಿರುದ್ಧ ವೃತ್ತಿಗಳು ಕೂಡ ಕಂಪಿಸುವವು. ಧ್ಯಾನ ಸಮಾಧಿಗಳಲ್ಲಿ ಆನಂದಿಸುವ ಪುರುಷ ನೈಸರ್ಗಿಕಾವಸ್ಥೆಗೆ ಪತನಗೊಳ್ಳುವನು. ಸಾಧಕನ ದೃಷ್ಟಿ ಯಲ್ಲಿ ಈ ಕಾಮವೊಂದು ಶತ್ರು!

ಜೀವ ಜಂತುವೆಲ್ಲ ಕಾಮದ ಬೊಂಬೆಗಳು. ಆಬಾಲವೃದ್ಧರು ಕಾಮದ ದಾಸರು. ಅವರಿಗೆ ಕಾಮ ಜೀವನವೇ ಪುರುಷಾರ್ಥ! ಕಾಮ ರಕ್ಕಸನು ಯುವ ಕನ ದೇಹಬಲ, ಬುದ್ಧಿಬಲ, ಸೌಂದರ್ಯ ವಯಸ್ಸುಗಳನ್ನು ಹರಿದು ಹರಿದು ತಿನ್ನುತ್ತಾನೆ. ವ್ಯಕ್ತಿ ಹಾಗು ಸಮಾಜವನ್ನು ಈ ಕಾಮನು ನಿರ್ವೀರ್ಯಗೊಳಿಸು ತ್ತಿದ್ದಾನೆಂಬ ಅರಿವು ಕೂಡ ಜನತೆಗಿಲ್ಲ.

(೨) ಬಹುರೂಪಿಯಾದ ಕಾಮವು "ಮಹಾಶನಃ ಮಹಾ ಪಾಪ್ಮಾ" ಸದಾ ಅತೃಪ್ತ! ಪಾಪ ಪ್ರಚೋದಕ!.

"ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ॥"

ವಿಷಯೋಪಭೋಗದಿಂದ ಕಾಮವು ಶಮನವಾಗದು. ಹವಿಸ್ಸು, ಕಾಷ್ಟ, ಘೃತ, ಕರ್ಪೂರ ಹಾಕುತ್ತ ಹೋದಂತೆ ಅಗ್ನಿಯು ಜ್ವಾಲೆಯಾಡುವದು. ಹಾಗೆ ಭೋಗ ದಿಂದ ಕಾಮ ಪ್ರಜ್ವಲಿಸುವದು. ಹುರುಕ ಕೆರೆದು ತೃಪ್ತಿ ಪಡೆಯಬಯಸುವ ಭಸ್ಮಾಸುರನಂತೆ ಕಾಮಿಯ ಬಾಳು. ತೃಪ್ತಿ ದೊರೆಯುವ ಬದಲು ಮೈ ಮನ ಗಳಲ್ಲಿ ಉರಿ ಹತ್ತಿಕೊಳ್ಳುವದು. ಬಾಲಕನಿರುವಾಗ ಹೊತ್ತಿದ ಕಾಮಾಗ್ನಿ ಸಾವಿನ ಕೊನೆಯ ಕ್ಷಣದವರೆಗೂ ನಿಗಿನಿಗಿಸುವದು.

ಜಗತ್ತಿನ ಕೋಟ್ಯಂತರ ಜನ, ಲಕ್ಷಾವಧಿ ವರುಷಗಳಿಂದ ಕಾಮತೃಪ್ತಿಗಾಗಿ ಶ್ರಮಿಸುತ್ತಿದ್ದಾರೆ. ಒಬ್ಬರಿಗಾದರು ಸಮಾಧಾನ ಉಂಟಾಗಿದೆಯೇ? ಇಲ್ಲ. ಹದಿ ನಾರು ಸಾವಿರ ಗೋಪಿಯರೊಂದಿಗೆ ರಮಿಸಿದ ಕೃಷ್ಣನಿಗೆ ಕಾಮವು 'ಮಹಾಶನಃ' ಎಂದು ಕಾಣ ಬಂದುದು ಅರ್ಥವತ್ತಾಗಿದೆ. ದ್ರೌಪದಿಗೆ ಐವರು ಪತಿಯರು! "ಷಷ್ಠೋsಪಿ ಮಹ್ಯಂ ರೋಚತೇ" ಆರನೆಯವನಿಗಾಗಿ ಮನಸ್ಸು ಹರಿಯುತ್ತಿದೆ ಎಂದಳು ದ್ರೌಪದಿ; ಅಚ್ಚರಿಗೊಂಡ ಕೃಷ್ಣನು "ಇದೇನು ದ್ರೌಪದಿ? ಮಹಾ ಪತಿವ್ರತೆ ಎಂದು ಖ್ಯಾತಿ ಪಡೆದ ನೀನು ಇಂಥ ಪಾಪ ಕಲ್ಪನೆ ಮಾಡುವದೆ?"

ಎಂದಾಗ ದ್ರೌಪದಿ ನುಡಿಯುತ್ತಾಳೆ: "ಪುರುಷಾಣಾಂ ಅಭಾವೇನ ಸರ್ವಾಃ ನಾರ್ಯಾಃ ಪತಿವ್ರತಾಃ" ಪುರುಷರೇ ಇಲ್ಲವಾದ ಬಳಿಕ ಸ್ತ್ರೀಯರೆಲ್ಲ ಪತಿವ್ರತೆಯರಾಗುತ್ತಾರೆ! ಆಕೆಯ ಮಾತು ಕಟು ಸತ್ಯ! ಗೃಹಸ್ಥಾಶ್ರಮದ ನಿರ್ಮಾಣ ಪ್ರಾಯಃ ವಂಶದೇಳ್ಗೆಯ ಬದಲು ಕಾಮ ಶಾಂತಿಗಾಗಿ! ಬಿಸಿಲ ಬೇಗೆ ತಡೆಯದೆ ಅಗ್ನಿ ಹೊಕ್ಕಂತಾಗಿದೆ ನಮ್ಮ ಬದುಕು!

ಕಾಮ ಪಾಪದ ತವರು. ಕಾಮುಕ ಕುರುಡ, ಅವಿವೇಕಿ. ಎಂಥ ಹೀನ ಕಾರ್ಯವೂ ಅವನಿಂದ ಜರುಗಬಹುದು. ಉದಾ: ಪರಮಾತ್ಮನ ಲಗ್ನ ನಡೆದಿತ್ತು. ಬ್ರಹ್ಮದೇವ ಋತ್ವಿಜ. ನವ ದಂಪತಿಗಳು ಯಜ್ಞ ಕುಂಡದ ಸುತ್ತ ಪ್ರದಕ್ಷಿಣೆ ಹಾಕುವ ಸಮಯ. ಬ್ರಹ್ಮನ ದೃಷ್ಟಿ ಪಾರ್ವತಿಯ ಸ್ವರ್ಣವರ್ಣದ ಕಾಲುಗಳ ಕಡೆಗೆ ಹರಿಯಿತು. ತತ್ಕ್ಷಣ ಕಾಮ ಅವನನ್ನು ಪ್ರವೇಶಿಸಿತು. ಅವನ ಮನಸ್ಸು ವಿಪ್ಲವಿಸಿತು; ದೇಹ ಕಂಪಿಸಿತು! ಅವನನ್ನು ನಿರ್ವೀರ್ಯಗೊಳಿಸಿ ಪಲಾಯನ ಮಾಡಿತು!!

ಕಾಮ ಹೊಲೆಗಾಮ. ವಸತಿ ಹೊಲಸು ಕೇರಿ. ಅವನ ತಿರುಗಾಟ ಬ್ರಾಹ್ಮಣಾದಿ ಸರ್ವವರ್ಣದವರ ಮನೋ ಮಂದಿರದಲ್ಲಿ. ಅವನ ಬಲೆಗೆ ಬೀಳದವರು ಅತಿ ವಿರಳ. ದೇವ ದೇವತೆಗಳು ಕಾಮ ಭಕ್ತರು. ಸ್ವರ್ಗಾಧಿಪತಿ ಇಂದ್ರನನ್ನು ಅಹಲ್ಯೆಯ ಮನೆಗೆ ನಡು ರಾತ್ರಿ ತಂದವ ಕಾಮ. ದಶಾವತಾರಿಯೆನಿಸಿದ ವಿಷ್ಣುವು ಜಲಂಧರ ರಾಕ್ಷಸನ ಹೆಂಡತಿ ವೃಂದೆಯನ್ನು ವಂಚಿಸಿ ಅಪಹರಿಸಿದುದು ಕಾಮ ಕೀಟಲೆಯಿಂದ. ರಾಮ, ಕೃಷ್ಣ, ವಿಷ್ಣು, ಶಿವ, ಬ್ರಹ್ಮ, ಇಂದ್ರರಂಥ ದೇವ ದೇವತೆಗಳೇ ಕಾಮನ ಕಡೆಬೆರಳ ತುದಿಯಲ್ಲಿ ಲಾಸ್ಯವಾಡುವಾಗ ಸಾಮಾನ್ಯವಾಗಿ ಮಾನವರೆಲ್ಲ ಕಾಮನಿಗೆ ಸೋತಿದ್ದಾರೆ ಎಂದು ಹೇಳಿದರೆ ಆಶ್ಚರ್ಯ ಎಲ್ಲಿ?

ಬಹುದಿನ ಹೊಲಸಿನಲ್ಲಿ ಬದುಕಿದರೆ ಹೊಲಸೇ ಕಾಣದು. ಉದಾ: ಪೂರ್ವದಲ್ಲಿ ಚಹಾ ಸಿಗಾರೇಟುಗಳು ಅಸಹ್ಯವೆನಿಸಿದ್ದವು. ಅವುಗಳನ್ನು ಉಪಯೋಗಿಸುವ ಜನ ಸಮಾಜದೆದುರು ಬರಲು ಅಂಜುತ್ತಿದ್ದರು. ಕಾಲಕ್ರಮದಲ್ಲಿ ರೂಢಿ ಹೆಚ್ಚಿತು. ಅವುಗಳನ್ನು ಪಾನ ಮಾಡುವವರೇ ಶಿಷ್ಟರೆನಿಸಿದರು! ಆ ಅಸಹ್ಯ ಚಟಗಳಿಲ್ಲದವರೇ ತಲೆ ಮರೆಸಿಕೊಳ್ಳುವ ಪ್ರಸಂಗ ಬಂದಿದೆ! ಒಂದು ಕಾಲದಲ್ಲಿ ಸಿಂದಿಯ ಗಿಡದ ಯಾವ ಭಾಗ ತಗುಲಿದರೂ ಅಷ್ಟು ಚರ್ಮ ಸುಟ್ಟು ಬಿಸಬೇಕೆಂಬ ಪ್ರಥೆ ಇತ್ತು. ಇಂದು ಅದೇ ವೃಕ್ಷದ ರಸ ಅಮೃತ! ಅದರ ಸ್ಪರ್ಶ ದರ್ಶನ ಪಾವನ! ಅದೇ ರೀತಿ ಕಾಮ. ಅವನ ಕಲ್ಪನೆ ಕೂಡ ಅಪವಿತ್ರವೆಂದು ಬಗೆದರು ಋಷಿಗಳು. ಆದರೆ ಅವನ ಕರಾಳ ಹಸ್ತದಲ್ಲಿ ಸಿಲುಕಿದ ಜನ ಹೆಚ್ಚಿದರು; ಕಾಮ ಕಾಲುಷ್ಯ ಕ್ಷೇತ್ರದಲ್ಲಿಯೇ ಸಂತತವಾಗಿ ಚರಿಸಿದರು. ಕಾಮ ಅವರ ಬುದ್ಧಿಗೆ ಒಗ್ಗಿತು. ಕಾಮ ಜೀವನವೇ ಶಿಷ್ಟಜೀವನವೆನಿಸಿತು! ಕಾಮದ ಪಿಪಾಸೆ

ಇಂದು ಕ್ಷಣ ಕ್ಷಣಕ್ಕೂ ಹೆಚ್ಚುತ್ತಿದೆ. ಅದರ ಗುಲಾಮರಾದ ಜನರು ವಿವೇಕ ಕಳೆದುಕೊಂಡಿದ್ದಾರೆ. ಅನೀತಿ ವೀಥಿಯೇ ನೀತಿ ಪಥವೆಂದು ಭಾವಿಸಿದ್ದಾರೆ ! ಹೀಗೆ ಕಾಮನು ಜೀವ ಜನಾಂಗವನ್ನೆಲ್ಲ ಪಾಪ–ಕೂಪದಲ್ಲಿ ದೂಡುತ್ತಿದ್ದಾನೆ. ಆದ್ದರಿಂದ ಅವನಿಗೆ ' ಮಹಾಪಾಪ್ಮಾ ' ಎಂದು ನಾಮ.

" ಆತ್ಮೈವ ಜಾಯತೇ ಪುತ್ರ ರೂಪೇಣ " ತಾನೇ ಹೆಂಡತಿಯಲ್ಲಿ ಪುತ್ರ ರೂಪದಿಂದ ಹುಟ್ಟುತ್ತಾನೆ! ಆಗ ತಾನು ಮಗ, ಹೆಂಡತಿಯು ತಾಯಿ; ಕಾಮದ-ದಾಸನಿಗೆ ಈ ಶ್ರುತಿ ಮಾತಿನ ಸ್ಮರಣೆಯೇ ಬಾರದು. ಜೀವನದ ಪೂರ್ಣ ಭಾಗ ವನ್ನು ಕಾಮ ಕೂಪದಲ್ಲಿ ಕಳೆದ ತಂದೆ, ಅಜ್ಜಂದಿರೇ ಮುಂದಿನ ಮಕ್ಕಳಿಗೆ ಆದರ್ಶ ಎನಿಸುತ್ತಾರೆ ! ಎಂಥ ದುರ್ಭಾಗ್ಯ !

(೩) ಈ ಎಲ್ಲ ಕಾರಣಕ್ಕಾಗಿ ಕಾಮನು ಮಹಾನ್ ವೈರಿ. ವ್ಯಕ್ತಿಯ ಅಂತ ಸ್ಸತ್ವ ಹಾಳುಮಾಡುವ, ಸಮಾಜದ ದೈವೀ ಪ್ರಗತಿಗೆ ಕುಠಾರವೆತ್ತುವ ಜೀವನನ್ನು ಘಮಾತ್ಮಕ ಜಗತ್ತಿನಲ್ಲಿ ತೇಲಿಸುವ ಈ ಕಾಮ ಮನುಕುಲದ ಪರಮ ಶತ್ರು!

(೪) ಇದರರ್ಥ ಕಾಮವು ನಿರುಪಯುಕ್ತವೆಂದಲ್ಲ. ಅದು ಹಿತ ಮಿತ ವಾಗಿ ಉಪಯೋಗವಾದರೆ ಮನು ಕುಲದ ಬಂಧು. ಅದು ಬಾಹ್ಯದತ್ತ ಪ್ರವಹಿ ಸನೆ ಅಂತರ್ಮುಖವಾಗಿ ಹರಿದರೆ ಆತ್ಮ ಸಾಧಕ! ಆತ್ಮ ಕಾಮನೆಯಿಂದ ವಿಮಲ ಮುಕ್ತಿ.

ಸಂಬಂಧ:– ಕಾಮನು ಜ್ಞಾನಾಚ್ಛಾದಕ; ಈ ಮಾತಿನ ವಿವರಣ.

ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥೩೮॥

ಭಾವ:– ಹೇಗೆ, ಧೂಮದಿಂದ ಅಗ್ನಿಯು ಧೂಳಿನಿಂದ ಕನ್ನಡಿಯು, ಮತ್ತು ಜರಾಯು ಪರೆಯಿಂದ ಗರ್ಭವು ಮುಚ್ಚಲ್ಪಟ್ಟಿದೆಯೋ, ಹಾಗೆ ಆ ಕಾಮನಿಂದ, ಈ ವಿಮಲ ಜ್ಞಾನವು ಆವರಿಸಿದೆ.

ವಿವರಣೆ:– ಎಲ್ಲರಲ್ಲೂ ಆತ್ಮನ ಅರಿವಿನ ಬೆಳಗು ವ್ಯಾಪಿಸಿದೆ. ಕೈ ಕಾಲು ತಲೆ ಮನಗಳ ತುಂಬ ಜ್ಞಾನ ನೆಲೆಸಿದೆ. ಕಾಮವೆಂಬ ಮಾಲಿನ್ಯ ಈ ಸರ್ವವ್ಯಾಪಿ ಜ್ಞಾನವನ್ನೇ ಆವರಿಸಿ ಜೀವನಿಗೆ ಅದರ ಭಾವ ಬರದಂತೆ ಮಾಡುತ್ತದೆ. ಈ ಮಾತನ್ನು ಮೂರು ಉಪಮೆಗಳಿಂದ ವಿವರಿಸಲಾಗಿದೆ.

೧) ಧೂಮೇನ ವಹ್ನಿಃ ಯಥಾ ಆವ್ರಿಯತೇ:– ಅಗ್ನಿಯಿಂದ ಹೊರಟ ಧೂಮ ಅಗ್ನಿಯನ್ನೇ ಆವರಿಸುತ್ತದೆ. ಅಗ್ನಿಯು ಸ್ವಲ್ಪ ಮಟ್ಟಿಗೆ ಕಾಣದಾದರೂ ಅಗ್ನಿಯ ಉಷ್ಣತೆ ಮಾತ್ರ ಪ್ರಖರವಾಗಿ ಹೊರಹೊಮ್ಮುತ್ತದೆ. ಅದರ ಕಾವಿನಲ್ಲಿ ಅಡಿಗೆ ಮಾಡುತ್ತೇವೆ; ಧೂಮದ ಧೂಸರದಲ್ಲಿ ಕಣ್ಣೀರನ್ನು ಸುರಿಸುತ್ತೇವೆ. ಅದೇ ರೀತಿ, ಬಹು ಜೀವರ ಅಂತರಂಗಸ್ಥ ಚಿದಗ್ನಿ ಅಲ್ಲಿಂದಲೇ ಎದ್ದ ಕಾಮಧೂಮವು

ದಿಂದ ಆವರಿಸಲ್ಪಟ್ಟಿದೆ. ಅಂಥ ಜನರು ಜ್ಞಾನಾಗ್ನಿಯ ಮೇಲೆ ಸಂತೋಷವೆಂಬ ಪಾಕ ಮಾಡುತ್ತಾರೆ. ಕಾಮದುರಿಯಿಂದ ಕಣ್ಣೀರಿಡುತ್ತಾರೆ. ಅಂದರೆ, ಆ ವರ್ಗದ ಜನರು ತಿಳಿವುಳ್ಳ ಕಾಮುಕರು. ತಿಳಿವಿನಿಂದ ಪ್ರೇರಿತರಾಗಿ ಪ್ರವಚನಕ್ಕೆ ಬರುತ್ತಾರೆ; ಒಂದು ತಾಸು ಮುಗಿದ ಮರುಕ್ಷಣ ಮನೆಗೆ ಧಾವಿಸಿ ನೂರೆಂಟು ವ್ಯಾವಹಾರಿಕ ತೊಡಕುಗಳಲ್ಲಿ ಬಿದ್ದು ಚಿಂತಿಸುತ್ತಾರೆ. ಅವರ ಪ್ರಾಪಂಚಿಕ ಶೋಕವೂ ನಿಲ್ಲದು, ಪಾರಮಾರ್ಥಿಕ ಒಲವೂ ತಪ್ಪದು. ಅಳು—ನಗು, ಪ್ರಪಂಚ—ಪರಮಾರ್ಥ ಎರಡನ್ನು ಹೊಂದಿಸುತ್ತಾರೆ. ಒಂದನ್ನೂ ಬಿಡುವ ಮನಸ್ಸಿಲ್ಲದ ಆ ಜನರ ಹೃದಯಸ್ಥ ಕಾಮ-ಧೂಮ್ರವು "ಸ್ಥೂಲ" ವೆನಿಸುತ್ತದೆ.

**(೨) ಆದರ್ಶಃ ಮಲೇನ ಆವ್ರಿಯತೇ:**— ಕನ್ನಡಿಯು ಧೂಳಿನಿಂದ ಆಪ್ತವಾಗಿರುತ್ತದೆ. ಆಗ ಪ್ರತಿಬಿಂಬವು ಕಾಣದು. ಹಾಗೆ, ಕಾಮಧೂಳಿ ಆತ್ಮಜ್ಞಾನ ದರ್ಪಣವನ್ನು ಮುಚ್ಚಿಬಿಡುತ್ತದೆ. ಅಂಥ ಮನುಷ್ಯ ಅಜ್ಞಾನಿ; ಅವನಲ್ಲಿ ಆತ್ಮನತ್ತ ಒಲವಿಲ್ಲ. ಸ್ವಲ್ಪ ಪ್ರಯತ್ನ ಮಾಡಿದರೆ ಅವನು ಭಜನ ಕೀರ್ತನ ಪೂಜಾದಿಗಳಲ್ಲಿ ತೊಡಗುತ್ತಾನೆ. ಕಾಲಾಂತರದಲ್ಲಿ ಶ್ರುತ ವಚನಗಳನ್ನು ತಿಳಿಯಕೊಳ್ಳುತ್ತಾನೆ. ಆತ್ಮಾನಂದವನ್ನು ಅನುಭವಿಸುತ್ತಾನೆ, ಆ ಧೂಮಕ್ಕಿಂತ ಈ ಧೂಳಿ ಝಾಡಿಸುವದು ಕಷ್ಟ. ಗಾಳಿ ಹಾಕಿದರೆ ಧೂಮ ಹೋದೀತು. ತಿಕ್ಕಿದಲ್ಲದೆ ಧೂಳಿ ಹಾರದು. ಆದ್ದರಿಂದ ಇಲ್ಲಿರುವ ಕಾಮ ಧೂಳಿಯು "ಸ್ಥೂಲತರ."

**(೩) ಯಥೋಲ್ಬೇನ ಆವೃತಃ ಗರ್ಭಃ:**— ಗರ್ಭಃ= ಪಿಂಡ. ಅವಯವಗಳು ಮೂರ್ತಗೊಂಡ ಗರ್ಭಸ್ಥ ದೇಹ. ಅದನ್ನು ಜರಾಯು ಎಂಬ ಪರದೆ ಆಚ್ಛಾದಿಸಿರುತ್ತದೆ. ಒಳಗಿನ ಪಿಂಡದ ಅವಯವಗಳು ಎಷ್ಟೂ ಕಾಣವು. ಹಾಗೆ ಕೆಲವರ ಜ್ಞಾನಪಿಂಡವು ಕಾಮ ಪರದೆಯಿಂದ ಪೂರ್ತಿ ಮುಚ್ಚಿಹೋಗಿದೆ. ಅವರು ಜಡರು. ಆತ್ಮವಿದ್ಯಾ ಶ್ರವಣ ಅವರಿಗೆ ಹಿಡಿಸದು. ಸಂತ ಶರಣರೆಂದರೆ ಅವರಿಗೆ ದ್ವೇಷ. ಅವರನ್ನು ಯಾವ ರೀತಿಯಿಂದಲೂ ಪರಿವರ್ತಿಸಲು ಬರದು. ಅವರಲ್ಲಿರುವ ಕಾಮವಷೆ " ಸ್ಥೂಲತಮ " ಎನಿಸುತ್ತದೆ. ದರ್ಪಣದ ಧೂಳ ಒರೆಸುವದು ಹಗುರು; ಈ ಪರದೆ ಹರಿಯುವದು ಕಷ್ಟ.

ಭಗವಂತ:— "ಕುಂತೀಪುತ್ರ ಕಾಮವು ಸಾಮಾನ್ಯವಲ್ಲ. ಅದು ಮೂರು ವಿಧದಲ್ಲಿ ರೂಪ ತಾಳಿ, ಜೀವರ ಹೃದಯ ಗುಹೆಯನ್ನು ಮುಸುಕಿದೆ. ಆತ್ಮನನ್ನರಿಯ ಬಯಸುವ ನೀನು ಕಾಮನನ್ನು ವೈರಿ ಎಂದೇ ಭಾವಿಸು. "

ಸಂಬಂಧ:- ಕಾಮದ ವಿವರಣೆ ಮುಂದೆ ಸಾಗಿದೆ.

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥೩೯॥**

**ಅರ್ಥ:**— ನಿತ್ಯ ವೈರಿಣಾ=ನಿತ್ಯ ವೈರಿಯಾದ ದುಷ್ಪೂರೇಣ= ಅಶಮನೀಯವಾದ

ಅನಲೇನ= ಅಗ್ನಿ ಸದೃಶವಾದ ಏತೇನ ಕಾಮರೂಪೇಣ= ಈ ಕಾಮನಿಂದ ಜ್ಞಾನಿನಃ ಜ್ಞಾನಂ =ಜ್ಞಾನಿಗಳ ಜ್ಞಾನವು ಆವೃತಂ =ಆವೃತವಾಗಿದೆ.

**ವಿವರಣೆ:–** (೧) ಕಾಮನು ವೈರಿ:-ಯಾರಿಗೆ ? ಅರಿತವರಿಗೆ; ಭೋಗಿಗಲ್ಲ. ವಿಷಯ ವಿಲಾಸಿಯು ಕಾಮನನ್ನು ಕಂಡರೆ ಅತ್ಯಂತ ಸಂತೋಷ ಪಡುತ್ತಾನೆ. ಕಾಮನು ತನ್ನ ದೇಹದಲ್ಲಿ ಕುಳಿತು ಯಥೇಷ್ಟ ಭೋಗಿಸುವಷ್ಟು ಕಾಲದಲ್ಲಿ ಭೋಗಿಗೆ ಜಗತ್ತೇ ಕಾಣದು! ದೇವ ಗುರು ಶಾಸ್ತ್ರ ಯಾವುದೂ ತೋರದು. ಆದರೆ ಅದೇ ಕಾಮನು ಕ್ರೋಧ ಮೋಹಗಳ ವಿರೂಪ ಹೊಂದಿ, ಸ್ಮೃತಿಭ್ರಂಶ ಹಾಗು ಬುದ್ಧಿ ನಾಶ ಮಾಡಿ, ಕಡೆಗೆ ವ್ಯಕ್ತಿಯನ್ನು ನಿಸ್ಸತ್ವಗೊಳಿಸಿ ಬಿಟ್ಟು ಹೋಗುವವನನ್ನು ಕಂಡಾಗ ಆ ಜೀವನಿಗೆ ಗೊತ್ತಾಗುವದು "ಕಾಮನು ಮಿತ್ರನಲ್ಲ, ವೈರಿ!" ಎಂದು. ಒಳಗೆ ವಿಷ ತುಂಬಿಕೊಂಡ ಕಾಮನು ನೋಡಲು ಬಹು ಸುಂದರ. ಕೇಳಿದರೆ ಕಿವಿಯನ್ನು, ಮುಟ್ಟಿದರೆ ಮೈಯನ್ನು, ನೋಡಿದರೆ ಕಣ್ಣನ್ನು, ನೆನೆಸಿ ದರೆ ಮನಸ್ಸನ್ನು ಮರುಳುಗೊಳಿಸುವನು. ಅವನು ಗೋಮುಖ ವ್ಯಾಘ್ರ, ಚರ್ಮಾಂಬರಧಾರಿಯಾದ .ಚೋರ, ಮಂತ್ರ ನುಡಿವ ವಂಚಕ! ಭೀಮನಿಗೆ ಸ್ತ್ರೀ ವೇಷ ತೊಡಿಸಿ, ಕೀಚಕನ ಕಣ್ಣಿನಲಿ ದ್ರೌಪದಿಯ ಭ್ರಮೆ ಹುಟ್ಟಿಸಿ ಅವನನ್ನು ಹಿಚುಕಿ ಕೊಲ್ಲಿಸಿದ ಘಾತುಕ!

೨) ಕಾಮನು ಸದಾ ಅತೃಪ್ತ:- ಅವನು ದುಷ್ಪೂರ ಹಾಗು ಅನಲ! ತೀರಲಾರದ ಹಸಿವೆ ಅವನಿಗೆ.

"ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರೀಯಃ॥
ನಾಲಮೇಕಸ್ಯ ತತ್ಸರ್ವಮಿತಿ ಮತ್ವಾ ಶಮಂ ವ್ರಜೇತ್॥–॥"

ಭೂಮಂಡಲದಲ್ಲಿರುವ ಧಾನ್ಯ, ಗೋದಿ, ಬಂಗಾರ, ಪ್ರಾಣಿ, ಸ್ತ್ರೀ ಒಂದೊಂದಲ್ಲ, ಎಲ್ಲವನ್ನು ತಂದು ಕಾಮನ ತಾಟಿನಲ್ಲಿ ಸುರುವಿದರೂ ಅವನ ಹಸಿವು ಹಿಂಗದು. ಇದನ್ನರಿತು ಶಾಂತನಾಗಬೇಕು.

**ಭಗವಂತ:–** "ಪಾರ್ಥ, ಜ್ಞಾನಿ ಜ್ಞಾನಿಗಳ ಜ್ಞಾನವನ್ನು ಮುಸುಕಿಬಿಡುವ ಕಾಮ ಮನುಷ್ಯನ ಮಹಾವೈರಿ. ಅವನು ಮೃದು ಮಾತು, ಸುಗಂಧ-ಸೌರಭ, ತಾಳವಿಡಿದ ನಲು ಹೆಜ್ಜೆಗಳಿಂದ ನರ ಬೇಂಟೆಯಾಡುವ ಚತುರ ಹಿಂಸಕ. ಕಾಮನ ನೆನಹಿನಲ್ಲಿಯೇ ಹುಟ್ಟಿ, ಅವನ ನೆನೆಯುತ್ತಲೇ ಸಾಯುತ್ತೇವೆ. ಅವನದು ತೀರದ ಹಸಿವು! ತೃಪ್ತಿಯಾಗದ ತೃಷೆ! ಪೂರ್ತಿಗೊಳ್ಳದ ಜಠರ! ನೀನು ಅವನನ್ನು ಸಂತೃಪ್ತ ಗೊಳಿಸುವ ಹವಣಿಕೆ ಬಿಟ್ಟು ಬಿಡು. ಅವನ ವಿಷಯದಲ್ಲಿ ಸದಾ ಜಾಗ್ರತನಾಗಿರು."

**ಸಂಬಂಧ:–** ಕಾಮದ ನಿವಾಸ ಎಲ್ಲಿ?

**ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥೪೦॥**

**ಅರ್ಥ:**– ಇಂದ್ರಿಯಾಣಿ= ಇಂದ್ರಿಯಗಳು, ಮನಃ = ಮನಸ್ಸು, ಬುದ್ಧಿಃ = ಬುದ್ಧಿಯು, ಅಸ್ಯ= ಈ ಕಾಮನ, ಅಧಿಷ್ಠಾನಂ =ಆಶ್ರಯವೆಂದು ಉಚ್ಯತೇ= ಹೇಳಲ್ಪಡುತ್ತದೆ. ಏಷಃ= ಇವನು ಏತೈಃ =ಇವುಗಳಿಂದ (ಈ ಸ್ಥಾನಗಳಲ್ಲಿ ಕುಳಿತೇ). ಜ್ಞಾನಂ ಆವೃತ್ಯ= ಜ್ಞಾನವನ್ನು ಮುಚ್ಚಿ ದೇಹಿನಂ= ಜೀವನನ್ನು ವಿಮೋಹಯತಿ= ವಿಶೇಷವಾಗಿ ಮೋಹಗೊಳಿಸುತ್ತಾನೆ.

**ವಿವರಣೆ:-** ಮುಕ್ತಿ ಮಾರ್ಗಗಾಮಿಗಳನ್ನು ಕಂಗೆಡಸುವ ಭಯಾನಕ ರಕ್ಕಸ ಈ ಕಾಮ. ಈತ ಕೆಲವು ಆಯುಕಟ್ಟಿನ ಸ್ಥಾನಗಳನ್ನು ಹಿಡಿದುಕೊಂಡು, ದೇವ ಯಾತ್ರಿಕರ ಮೇಲೆ ಆಗಾಗ ದಾಳಿ ಮಾಡುತ್ತಾನೆ. ದೇವಯಾತ್ರಿ ನಿರಾತಂಕವಾಗಿ ದೇವನತ್ತ ಸಾಗಬೇಕಾದರೆ ಆ ಆಯುಕಟ್ಟಿನ ಸ್ಥಾನಗಳನ್ನು ತನ್ನ ವಶಪಡಿಸಿ, ಆ ಕಾಮನನ್ನು ಅಲ್ಲಿಂದ ಉಚ್ಛಾಟನ ಗೊಳಿಸಬೇಕು. ಹಾಗಾದರೆ. ಆ ಸ್ಥಾನಗಳು ಯಾವವು?

**ಇಂದ್ರಿಯಾಣಿ ಮನೋ ಬುದ್ಧಿಃ :**– ಜೀವನ ನಿಲಯವಾದ ದೇಹದಲ್ಲಿ ಅತ್ಯಮೌಲ್ಯವಾದ ಬಾಹ್ಯಾಂತರ ಇಂದ್ರಿಯಗಳು ಇವೆ. ಶೋತ್ರ ತ್ವಚಾದಿಗಳು ಬಾಹ್ಯೇಂದ್ರಿಯ; ಮನೋ ಬುದ್ಧ್ಯಾದಿಗಳು ಅಂತರಿಂದ್ರಿಯ. ದೇವ ದರ್ಶನಕ್ಕೆ ನಮ್ಮನ್ನು ಕರೆದೊಯ್ಯಬಲ್ಲ ಈ ಸಾಧನಗಳು ಪವಿತ್ರ. ಇವುಗಳನ್ನು ತನ್ನ ವಶಕ್ಕೆ ತೆಗೆದುಕೊಂಡರೆ ಸಾಧಕ ನಿರ್ವಿಘ್ನವಾಗಿ ದಿವ್ಯ ಯಾತ್ರೆ ಮಾಡುತ್ತಾನೆ. ಕೊನೆಗೆ ಪರಮಾತ್ಮನನ್ನು ಕಂಡು, ಅಲ್ಲಿಯೇ ಸಾಮರಸ್ಯ ಹೊಂದುತ್ತಾನೆ.

ಕಾಮ ರಾಕ್ಷಸ ರಣಚತುರ. ಜೀವರನ್ನು ತನ್ನಳವಿಗೆ ಹಾಕಿಕೊಳ್ಳುವ ಕುಶಲತೆ ಅವನಲ್ಲಿದೆ. ಆತ ಮೊಟ್ಟ ಮೊದಲು ಕಣ್ಣು ಕಿವಿ ನಾಲಿಗೆ ಚರ್ಮಗಳ ಮೂಲಕ ಸದ್ದಿಲ್ಲದೆ ಒಳಗೆ ನುಸುಳುತ್ತಾನೆ; ಅತ್ಯಂತ ಮಹತ್ವದ ಸ್ಥಾನಗಳಾದ ಮನ ಬುದ್ಧಿಗಳಲ್ಲಿ ಪ್ರವೇಶಿಸುತ್ತಾನೆ. ಯೌವನ ಮೊಳಕೆಯೊಡೆಯುತ್ತಿರುವಂತೆಯೇ ಮನ ಬುದ್ಧಿಗಳ ಮೇಲೆ ತನ್ನ ಏಕಚಕ್ರಾಧಿಪತ್ಯ ಸ್ಥಾಪಿಸುತ್ತಾನೆ. ತನ್ನ ನೆಲೆವನೆಗಳಾದ ಮನ ಬುದ್ಧಿಗಳೇ ಹೀಗೆ ಕಾಮ ವಶವಾದುದರಿಂದ ಜೀವನು ನಿರುಪಾಯನಾಗಿ ಕಾಮದ ದಾಸ್ಯತ್ವವಹಿಸುತ್ತಾನೆ. ಎಲ್ಲಿಯವರೆಗೆ ದಾಸ್ಯತ್ವವೋ ಅಲ್ಲಿಯವರೆಗೆ ಪ್ರಗತಿ ಬರಿ ಕನಸು. ಆಂಗ್ಲರ ಗುಲಾಮರಾಗಿರುವವರೆಗೆ ನಮ್ಮ ಏಳ್ಗೆಗಾಗಿ ಒಂದು ಪುಟ್ಟ ಯೋಜನೆ ಮಾಡುವದೂ ಸಾಧ್ಯವಾಗಲಿಲ್ಲ. ನೂರಾರ ವರುಷ ಹೋರಾಡಿದಾಗ ಆ ಜನ ಭಾರತದಿಂದ ಕಾಲ್ದೆಗೆದರು. ನಮ್ಮ ಭವಿಷ್ಯವನ್ನು ನಾವೇ ಕಟ್ಟಬಲ್ಲ ಬಲ ಪಡೆದೆವು. ಅದೇ ರೀತಿ, ಮನ ಬುದ್ಧಿ ಎಂಬ ಜೀವ ನಿವಾಸಗಳು ಜೀವನ ಆಧೀನಕ್ಕೆ ಬರುವ ವರೆಗೆ ಮುಕ್ತಿ ಎಂಬುದು ಶಬ್ದ ಮಾತ್ರ. ಕಾಮನನ್ನು ಹೊಡೆದಟ್ಟಲು ಜನ್ಮ ಜನ್ಮಗಳ ಪ್ರಯತ್ನ ಸಾಗಬೇಕು.

ಆಂಗ್ಲರು ಕೇವಲ ಮೂರು ನೂರೇ ವರುಷ ನಮ್ಮನ್ನಾಳಿದರೆ, ಈ ಕಾಮ ಲಕ್ಷ ಲಕ್ಷ ಜನ್ಮಗಳಿಂದ ನಮ್ಮ ಮೇಲೆ ಆಳಿಕೆ ನಡೆಸಿದ್ದಾನೆ. ಅವನ ನಯವಾದ

ಅಡಳಿತಕ್ಕೆ ನಾವು ಮಾರುಹೋಗಿದ್ದೇವೆ. ನಾವು ಪರಾವಲಂಬಿಗಳು, ಪಾರತಂತ್ರ್ಯರು ಎಂಬ ಭಾವನೆಯೇ ಅಡಗಿ ಹೋಗಿದೆ. ಎಂದೇ, ಶಿವಯೋಗಿಗಳು ಹೀಗೆ ಹೇಳಿದ್ದಾರೆ:

"ಅನಿಮಿತ್ಯ ವೈರಿಗಳೆನಿಪ ಕಾಮಾದಿಗಳಿಗೆ।
ತನುವನೇಕವನಿತ್ತೆ ಭವ ಭವಂಗಳಲಿ॥
ನಿನಗೊಂದು ದೇಹವಿದನು ಕೊಟ್ಟು ತಪವಾಂತು।
ಘನ ಶಂಭುಲಿಂಗವಾಗಿರಲೊಲ್ಲೆ ಮನುಜ॥"

ಕಾಮ ಅನಿಮಿತ್ಯ ವೈರಿ. ಭೂಮಿಯನ್ನು ಕುಟ್ಟಿ ಪುಡಿಮಾಡಿದಾಗ ಉಂಟಾಗುವ ಕಣಗಳೆಷ್ಟೋ ಅಷ್ಟು ದೇಹಗಳನ್ನು ಜೀವನು ಕಾಮಪದತಲದಲ್ಲಿ ಅರ್ಪಿಸಿದ. ಸರ್ವದಾತಾರ, ಸರ್ವರಕ್ಷಕ, ಸರ್ವ ದಯಾಘನನಾದ ದೇವನಿಗೆ ಮಾತ್ರ ಒಂದೂ ದೇಹವನ್ನು ಮೀಸಲಿರಿಸಲಿಲ್ಲ. ಹಿರಿಯರು, ಶಿಕ್ಷಿತರು, ಜಾಣರು ಜೀವನದಲ್ಲಿ ಮಾಡುವ ಉದ್ಯೋಗ ಎರಡೇ ಎರಡು: (೧) ಮೊದಲು ತಮ್ಮ ಅಂತಃಸಂಪದವನ್ನು ಕಾಮನಿಗೆ ನೀಡುವದು. (೨) ಬಳಿಕ ತಮ್ಮ ಮಕ್ಕಳು ಮರಿಗಳ ಪ್ರಾಣವನ್ನು ಕಾಮ ರಿಪುವಿಗೆ ಎರವು ಮಾಡುವದು. ಪರಾಧೀನ ಜೀವನವೇ ಸಾರ್ಥಕ ಜೀವನವೆಂಬಷ್ಟು, ಜನರ ತಿಳುವಳಿಕೆ ಜಡವಾಗಿದೆ.

ಕಾಮನು ಚತುರ ವಂಚಕ. ಎಲ್ಲಿ ನೆಲೆಸಿ ಅಧಿಕಾರ ನಡೆಸಿದರೆ ಜೀವರ್ಕಳು ಬಲಿಬಿದ್ದಾರು ಅವನಿಗೆ ಗೊತ್ತು. ಅವನು ಆಕ್ರಮಿಸಿದ ಬಿಡಾರಗಳನ್ನೇ ನೋಡಿರಿ: ಅವು ಎಷ್ಟು ಸೂಕ್ಷ್ಮ! ಎಷ್ಟು ಬಲಾಢ್ಯ!! ಜೀವನನ್ನು ಗೆಲ್ಲುವ ಅವನ ಕುಶಲತೆ ಅಗಾಧ! ಶ್ರೋತ್ರ, ಕವಚ, ನೇತ್ರ, ರಸನ, ನಾಸಿಕ ಎಂಬ ಬಾಹ್ಯ ಬಿಡಾರಗಳಲ್ಲಿ ಕುಳಿತು ಕ್ರಮವಾಗಿ ಮಂಜುಳ ಶಬ್ದ, ಹಿತವಾದ ಸ್ಪರ್ಶ, ಮನೋಹರ ರೂಪ, ಮಧು ಮಧುರ ರಸ, ವಿಭಿನ್ನ ಮಾದಕ ಸುಗಂಧಗಳ ಹೀರಿ ಜೀವ ಯಾತ್ರಿಕ ನೆದುರು ಸುರಿಯುತ್ತಾನೆ. ಮರುಳು ಜೀವ ತನ್ನ ಅಮೋಘ ಸ್ವರೂಪ ಮರೆತು ವಿಷಯ ಭೋಗದಲ್ಲಿ ಮಗ್ನನಾಗುತ್ತಾನೆ.

ನಂತರ, ಚಾಣಾಕ್ಷ ಕಾಮ ಮನೋ ಮಂಡಲವೇರಿ ಸತಿ ಸುತ ದ್ರವ್ಯ ಮುಂತಾದ ವೈಭವಗಳ ಸಂಕಲ್ಪ ಲೋಕ ಸೃಷ್ಟಿಸಿ ಜೀವನನ್ನು ಅಲ್ಲಿ ಬಂಧಿಸುತ್ತಾನೆ. ಬಳಿಕ ಆ ಕಾಮನು ಚಿತ್ತ ಸ್ಥಿರವೇರಿ, ಅಲ್ಲಿರಬಹುದಾದ ಪವಿತ್ರ ಸ್ಮರಣೆಗಳನ್ನೆಲ್ಲ ಕಿತ್ತುಹಾಕಿ, ಕಾಮ-ಕ್ರೀಡೆಗಳ ವಿಭಿನ್ನ ಸಂಸ್ಮರಣೆಗಳನ್ನಷ್ಟೇ ಪ್ರಚೋದಗೊಳಿಸಿ ಜೀವನನ್ನು ಕಾಮ-ಕ್ರೀಡಾ-ಸ್ಮರಣವೆಂಬ ಕಾರಾಗೃಹದಲ್ಲಿ ನೂಕುತ್ತಾನೆ. ಅಷ್ಟಕ್ಕೆ ಬಿಡದೆ, ಬುದ್ಧಿ ಅಹಂಕಾರ ಮಂಡಲಗಳನ್ನು ಆಕ್ರಮಿಸಿ, ಮೋಹ ಧೂಮ್ರದಿಂದ ಅವೆರಡನ್ನು ಆವೃತಗೊಳಿಸಿ ಜೀವನನ್ನು ಅಂಧಕಾರದಲ್ಲಿ ದೂಡುತ್ತಾನೆ. ಹೀಗೆ, ಕಾಮನ ಕೈಗೆ ಸಿಕ್ಕ ಚೇತನಾಂಶ ಜೀವನು ತಾನು ಪರಮಾತ್ಮನೆಂಬ ಭಾವ ಬಿಟ್ಟು; ಸಾರಾಸಾರ ನಿತ್ಯಾನಿತ್ಯ ವಸ್ತುವಿವೇಚನಾ ವಿವೇಕ ಕಳೆದು

ಕೊಂಡ; ಜಡ ಪದಾರ್ಥಗಳಲ್ಲಿ ಅಹಂ ಬುದ್ಧಿ ತಾಳಿದ: ಸುಖಕ್ಕಾಗಿ ಹಾತೊರೆದು ಕಾಮು ನಡೆಸಿದಂತೆ ನಡೆದ . ನುಡಿಸಿದಂತೆ ನುಡಿದ, ಮಾಡಿಸಿದಂತೆ ಮಾಡಿದ! ಇದೇ ಪತನ!

ಏತೈಃ ಏಷಃ ಜ್ಞಾನಮಾವೃತ್ಯ...:– ಇಂತು, ಇಂದ್ರಿಯ ಮನ ಬುದ್ಧಿಗಳಲ್ಲಿ ಕುಳಿತೇ ಕಾಮರಕ್ಕಸನು (ಈ ಹಿಂದೆ ಹೇಳಿದಂತೆ) ಮೂರು ವಿಧದಿಂದ ಆತ್ಮಜ್ಞಾನವನ್ನು ಮರೆ ಮಾಡಿದ; (೧)ಧೂಮವು ಅಗ್ನಿಯನ್ನು (೨) ಧೂಳಿಯು ದರ್ಪಣವನ್ನು (೩) ಜರಾಯುವು ಪಿಂಡವನ್ನು ಆಚ್ಛಾದಿಸಿದಂತೆ ಕಾಮನು (೧) ಆತ್ಮಪ್ರಜ್ಞಾಗ್ನಿಯನ್ನು (೨) ದೇವ ನಿಲಯವಾದ ಹೃದಯ ದರ್ಪಣವನ್ನು ಹಾಗು (೩) ಅಂತಸ್ಥ ಚೈತನ್ಯ ಪಿಂಡವನ್ನು ಆಚ್ಛಾದಿಸಿದ. ಮೊದಲನೆಯದು ಸಾತ್ವಿಕಾವರಣ; ಜೀವನಿಗೆ ಇಲ್ಲಿ ಅಸ್ಪಷ್ಟ ಆತ್ಮಭಾನವಿದ್ದರೂ ಪ್ರಾಪಂಚಿಕ ಬಂಧನದಿಂದ ಕಳವಳಿಸುತ್ತಿದ್ದಾನೆ. ಎರಡನೆಯದು ರಜಾವರಣ; ಇಲ್ಲಿ ಜೀವನು ಭೂತ ವಸ್ತು ಜ್ಞಾನ (ಅತೀತ ದರ್ಶನ), ಭವಿಷ್ಯ ವಸ್ತು ಜ್ಞಾನ (ಅನಾಗತ ದರ್ಶನ) ಹಾಗು ದೂರದ ರಹಸ್ಯ ವಸ್ತು ಜ್ಞಾನ (ವಿಪ್ರಕೃಷ್ಟ ದರ್ಶನ) ಕಳೆದುಕೊಂಡ; ಆಶಾ ಭ್ರಾಂತಿ ಮದ ಮೋಹಗಳಿಂದ ವಂಚಿಸಲ್ಪಟ್ಟ. ಮೂರನೆಯದು ತಾಮಸಿಕ ಆವರಣ; ಇಲ್ಲಿ ಜೀವ ಮೂಢನಾದ; ಆತ್ಮನ ಪೂರ್ಣಭಾನವನ್ನೇ ಕಳೆದುಕೊಂಡ.

ದೇಹಿನಂ ವಿಮೋಹಯತಿ:– ಆತ್ಮ ಪ್ರಕಾಶವನ್ನು ಮರೆಮಾಡಿದ ಕಾಮನು ಸಾಮಾನ್ಯ ದೇಹಿಯನ್ನು ಸ್ಥೂಲ ಭೋಗ ವಿಷಯಗಳಿಂದ ಮೋಹಗೊಳಿಸುತ್ತಾನೆ; ಸಮಾಧಿ ಸುಖ ಅನುಭವಿಸಿ ಉತ್ಥಾನನಾದ ಪ್ರಜ್ಞಾವಂತ ಜೀವಿಯನ್ನು ಸೂಕ್ಷ್ಮ ವೈಭವಗಳಿಂದ ವಿಮೋಹಗೊಳಿಸುತ್ತಾನೆ! ಅಕ್ಕನ ವಚನವಿಲ್ಲಿ ಗಮನೀಯ:

> "ಬಿಟ್ಟೆನೆಂದರೆ ಬಿಡದೀ ಮಾಯೆ, ಬಿಡದಿದ್ದರೆ ಬೆಂಬತ್ತಿತು ಮಾಯೆ. ಯೋಗಿಗೆ ಯೋಗಿಣಿಯಾಯಿತು ಮಾಯೆ. ಸವಣಗೆ ಸವಣಿನಿಯಾಯಿತ್ತು ಮಾಯೆ. ಯತಿಗೆ ಪರಾಕಿಣಿಯಾಯಿತು ಮಾಯೆ. ನಿನ್ನ ಮಾಯೆಗೆ ನಾನಂಜುವಳಲ್ಲ, ಚೆನ್ನಮಲ್ಲಿಕಾರ್ಜುನ ದೇವಾ ನಿಮ್ಮಾಣೆ."

ಸಂಸಾರ ತ್ಯಜಿಸಿ ಘೋರಾರಣ್ಯ ಸೇರಿ ಆತ್ಮ ಚಿಂತನೆಗೆ ಕುಳಿತ ಯೋಗಿಗಳ ಮುಂದೆ ಕಾಮ ರೂಪ ಮಾಯೆಯು ಯೌಗಿಕ ಶಕ್ತಿಯಾಗಿ ಮೋಹಿಸುವದು. ಜೀವ ಶಿವ ಸಮರತಿ ಹೊಂದಿದ ಮಹಾ ಸಿದ್ಧ ಪುರುಷನ ಎದುರು ಜೈಕಾರ, ಮಾನ ಪ್ರಶಂಸೆಗಳಾಗಿ ತೋರಿ ವಿಮೋಹಿಸುವದು. ಉತ್ಥಾನ ಯೋಗಿಯ ಸಮ್ಮುಖದಲ್ಲಿ ಸಹಸ್ರಾರು ಜನಾಂಗ ಕೈಮುಗಿದು ತಮ್ಮ ವಿನಯ–ಭಕ್ತಿ ಅರ್ಪಿಸಿದಾಗ ಈ ಕಾಮ ಆ ಯೋಗಿಯ ಮನದಲ್ಲಿ ಅಹಂಕಾರ ರೂಪದಿಂದ ಹೆಡೆ ಎತ್ತಿ ಆಡುವದು.

"ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ, ಹೊಗಳಿ ಹೊಗಳಿ. ಎನ್ನ ಹೊಗಳತೆ ಎನ್ನನಿಮ್ಮೈಗೊಂಡಿತ್ತಲ್ಲ. ಅಯ್ಯೋ ನಿಮ್ಮ ಮನ್ನಣೆಯೇ ಮಸೆದಲುಗಾಗಿ ತಾಗಿತ್ತಲ್ಲಾ! ಅಯ್ಯೋ! ನೊಂದೆನು ಸೈರಿಸಲಾರೆನು. ಕೂಡಲ ಸಂಗಮದೇವಾ, ನೀನೆನಗೆ ಒಳ್ಳಿದನಾದರೆ ಎನ್ನ ಹೊಗಳತೆಗೆ ಅಡ್ಡಬಾರಾ, ಧರ್ಮೀ."

ಕಾಮನ ಬಿಸಿ ಭಕ್ತಿ ಭಾಂಡಾರಿ ಬಸವಣ್ಣನವರಿಗೂ ತಾಕದೆ ಬಿಟ್ಟಿಲ್ಲ. ಹೊಗಳಿಕೆಗೆ ಒಲಿದು ಘಾಸಿಯಾದ ಬಸವಣ್ಣನವರು ಕಣ್ಣೀರ ಸುರಿಸಿ ದೇವನಲ್ಲಿ ಪ್ರಾರ್ಥಿಸಿದ್ದಾರೆ. ಇನ್ನು ನಮ್ಮಂಥ ಸಾಮಾನ್ಯರ ಪಾಡೇನು ? ಸ್ವಲ್ಪಕಾಲ ಪ್ರಪಂಚಮಾಡಿ ವನಸೇರಿ ದೇವಸಾನಿಧ್ಯ ಹೊಂದಬೇಕು-ಅದು ಸಂತರ ಆದೇಶ. ದುರ್ವಿಧಿ, ಕಾಮನ ಕೈವಾಡದಿಂದಾಗಿ ನಮ್ಮ ಹೆಣಕೂಡ ಮನೆ ಬಿಟ್ಟು ಹೊರಗೆ ಬರದಾಗಿದೆ.

ಕಾಮನ ಹೆಜ್ಜೆಗೆ ಗುರುತಿಲ್ಲ ಹಾಗು ಸಪ್ಪಳಿಲ್ಲ. ಸದ್ದಿಲ್ಲದೆ ಒಳ ಸುಳಿದು ಕಣ್-ಕಟ್ಟುತ್ತಾನೆ. ಎಂದೇ, ಪ್ರಪಂಚ ಸೃಷ್ಟಾರನಾದ ಬ್ರಹ್ಮ ತನ್ನ ಮಗಳನ್ನೇ ಮದುವೆಯಾದ; ನೊಸಲಗಣ್ಣಿನ ಶಿವ ತನ್ನ ಹೆಂಡತಿಯನ್ನು ತಲೆಗೇರಿಸಿದ. ಈ ಕಾರಣದಿಂದಾಗಿ ಕಾಮನು ವಿಮೋಹಕ; ವಿಶ್ವಸಂಮೋಹಕ ಎನಿಸಿದ್ದಾನೆ.

**ಸಂಬಂಧ:**– ಕಾಮ ವೈರಿಯ ನೆಲೆ ಕಲೆಗಳನ್ನು ಶಕ್ತಿ-ಸಾಮರ್ಥ್ಯಗಳನ್ನು ವಿಸ್ತರಿಸಿದ ಭಗವಂತ ಅರ್ಜುನನಿಗೆ ಕಾಮಜಯ ಯುಕ್ತಿಯನ್ನು ಅರುಹುತ್ತಾನೆ.

ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।
ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥೪೧॥

**ಅರ್ಥ:**– ತಸ್ಮಾತ್– ಆದುದರಿಂದ, ತ್ವಂ= ನೀನು, ಆದೌ= ಮೊದಲು, ಇಂದ್ರಿಯಾಣಿ= ಇಂದ್ರಿಯಗಳನ್ನು ನಿಯಮ್ಯ= ವಶ ಮಾಡಿಕೊಂಡು, ಜ್ಞಾನ ವಿಜ್ಞಾನನಾಶನಂ= ಜ್ಞಾನ ಮತ್ತು ವಿಜ್ಞಾನಗಳನ್ನು (ಜ್ಞಾನಂ ಶಾಸ್ತ್ರಾಚಾರ್ಯೋಪದೇಶಜಂ, ವಿಜ್ಞಾನಂ ನಿದಿಧ್ಯಾಸನಜಂ: ಶಾಸ್ತ್ರ ಆಚಾರ್ಯರ ಉಪದೇಶದಿಂದ ಹುಟ್ಟುವದು ಜ್ಞಾನ. ನಿದಿಧ್ಯಾಸನದಿಂದ ಹುಟ್ಟುವ ಅನುಭೂತಿಯು ವಿಜ್ಞಾನ.) ನಾಶಮಾಡುವ, ಏನಂ= ಈ ಪಾಪ್ಮಾನಂ= ಪಾಪಿಯನ್ನು ಪ್ರಜಹಿ= ಗೆಲ್ಲು.

**ವಿವರಣೆ:**- ಭಗವಂತ:– "ಅರ್ಜುನ, ಕಾಮನು ಸಕಲ ದುರಿತ ಪ್ರೇರಕ, ಸರ್ವಾನರ್ಥಕಾರಕ. ಅನುಭಾವಿ ಗುರುವಿನಿಂದ ಹಾಗು ಪವಿತ್ರ ಶಾಸ್ತ್ರ ಗ್ರಂಥಗಳಿಂದ ಗಳಿಸಿದ ಆತ್ಮವಿದ್ಯೆಯನ್ನು ಅವನು ನಾಶ ಪಡಿಸುತ್ತಾನೆ. ನಿರಂತರ ಅಸತ್ಕಾರ ಆದರ ಭಾವದಿಂದ, ಸತತಾಭ್ಯಾಸದಿಂದ ಪಡೆದ ಆತ್ಮಾನುಭೂತಿಯನ್ನು ಶಿಥಿಲಗೊಳಿಸುತ್ತಾನೆ. ಸಾಧನಾ ಶ್ರೇಣಿಯನೇರಿದ ಸಾಧಕನನ್ನು ಕೆಳಗೆ ಉರುಳಿಸುವ ಈ ಪಾಪಿ ಕಾಮನನ್ನು ನೀನು ಗೆಲ್ಲಲೇಬೇಕು. ಅವನೊಂದಿಗೆ ಘೋರ ಯುದ್ಧ ಮಾಡು. ನಿನ್ನೆಲ್ಲ ಸಾಮರ್ಥ್ಯ ಒಟ್ಟುಗೂಡಿಸಿ ಅವನನ್ನು ನಿನ್ನ ಅಂತರಂಗದಿಂದ ಹೊರದೂಡು.

"ಆದಕ್ಕಾಗಿ ಮೊದಲು, ಇಂದ್ರಿಯ ಮನ ಬುದ್ಧಿಗಳನ್ನು ನಿನ್ನ ಅಂಕಿತದಲ್ಲಿಟ್ಟುಕೊ. ಅಲ್ಲ ಸಲ್ಲದ್ದನ್ನು ನಿನ್ನ ನೇತ್ರ ನೋಡದಿರಲಿ, ಕಿವಿ ಕೇಳದಿರಲಿ, ಮೈ ಮುಟ್ಟದಿರಲಿ, ಮನ ನೆನೆಯದಿರಲಿ. ಕಾಮದಿಂದ ಉದ್ರೇಕಗೊಳ್ಳದಂತೆ ಜಾಗ್ರತೆ ತಾಳು. ವ್ರತ ಉಪವಾಸಗಳನ್ನು ಹಿತವಾಗಿ ಆಚರಿಸು. ಕಾಮನ ಚೋದನಾಶೀಲವಾದ ರಸನೆಯ ಬಗ್ಗೆ ಅಲಕ್ಷ ಮಾಡಬೇಡ; ನಿನ್ನ ಆಹಾರದಲ್ಲಿ ಪಥ್ಯವಿರಲಿ. ಸದಾ ಕಾಮಾರಿಯಾದ ಪರಮಾತ್ಮನನ್ನೇ ಧ್ಯಾನಿಸು. ಗುರು ಶಾಸ್ತ್ರಗಳ ಸಂಪರ್ಕ ತಪ್ಪಿಸಿಕೊಳ್ಳಬೇಡ. ನಿನ್ನ ಬುದ್ಧಿ ಸುಸ್ಥಿರಗೊಳ್ಳಲಿ. ಆಗ ಮಾತ್ರ, ನೀನು ಕಾಮನನ್ನು ಪೂರ್ಣವಾಗಿ ಜಯಿಸಬಲ್ಲೆ."

ಭಗವಂತನ ಉಪದೇಶದಂತೆಯೇ ಶ್ರೀ ನಿಜಗುಣ ಶಿವಯೋಗಿಗಳು ಸಾಧಕನಿಗೆ ಹೀಗೆ ಆದೇಶವಿತ್ತಿದ್ದಾರೆ:

"ಬಿಡಬೇಕು ಬಲು ಹಿಂದೆ ಬರಿದೆ ತನ್ನರವನು। ಕೆಡಿಸುವ ಕಾಮವಿಧನು ಕಂಡಯೋಗಿ ಸುಗುಣ ಸಂತತಿಯನು ನಿಗಮಾದಿ ವಿಧಿಯನು। ಮಿಗೆ ತಪವನು ತನಗಹ ಸಿದ್ಧಿಗಳನು ॥ಪ॥ ಜಗದ ಪೂಜ್ಯತೆಯನು ಸೊಗಸುವೀ ತನುವನು। ಬಗೆಯೆ ಕಾಮವೆ ಬಣ್ಣವಳಿಪುದರಿಂದೆ॥೧॥ ಹಿರಿಯರೊಲವನು ರಾಜರ ಮನ್ನಣೆಯನು ಸ। ತ್ಪುರುಷರ ಭಯಭಕ್ತಿಯನು ಲೋಕದವರ॥ ವರ ವಂದನೆಯನು ತನ್ನುರು ತೇಜವನು ಕಷ್ಟ। ತರದ ಕಾಮವೆ ಕಡೆಗಾಣಿಪುದರಿಂದ ॥೨॥ ತನಗೆ ಮುಂದೊದಗುವ ಮುನಿದೇವ ಗಣ ಪದ। ವನು ರುದ್ರೇಶ್ವರ ಸದಾಶಿವ ಭಾವನೆಯನು॥ ಘನ ಶಂಭುಲಿಂಗವಾಗಿಹ ಮುಕ್ತಿ ಸುಖವನು। ಜನಿಸಿದೀ ಕಾಮವಿಲ್ಲೆನಿಪುದರಿಂದ ॥೩॥ "

ಸಂಬಂಧ:– ಕಾಮನನ್ನು ಸಮೂಲಾಗ್ರ ನಾಶ ಮಾಡುವ ಉಪಾಯವೆಂದರೆ ಆತ್ಮ ಚಿಂತನೆ. ಅದರ ಬಗ್ಗೆ ಮುಂದಿನ ಮಂತ್ರದಲ್ಲಿ ಹೇಳಲಾಗಿದೆ.

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥೪೨॥

ಭಾವ:– ಇಂದ್ರಿಯಗಳು (ದೇಹಾದಿಗಳಿಗಿಂತ) ಶ್ರೇಷ್ಠ; ಇಂದ್ರಿಯಗಳಿಗಿಂತ ಮನಸ್ಸು ಶ್ರೇಷ್ಠ; ಮನಸ್ಸಿಗಿಂತ ಬುದ್ಧಿಯು ಶ್ರೇಷ್ಠ; ಎಂದು ಹೇಳುತ್ತಾರೆ, ಆದರೆ ಯಾವನು ಬುದ್ಧಿಗಿಂತಲೂ ಶ್ರೇಷ್ಠನೋ ಅವನು ಆತ್ಮನು.

ವಿವರಣೆ:– ಇಂದ್ರಿಯಾಣಿ ಪರಾಣಿ:- ಬಾಹ್ಯ ಪದಾರ್ಥಗಳು ಮತ್ತು ದೇಹವು ಜಡ, ಸ್ಥೂಲ. ಶ್ರೋತ್ರಾದಿ ಇಂದ್ರಿಯಗಳು ಅವುಗಳಿಗಿಂತ ಸೂಕ್ಷ್ಮ. ದೇಹದ ಮರೆಯಲ್ಲಿ ನಿಂತು ವಿಶ್ವದ ಶಬ್ದ ಸ್ಪರ್ಶಾದಿ ವಿಷಯಗಳನ್ನು ಪ್ರಕಾಶಪಡಿಸುತ್ತವೆ. ಸೂರ್ಯನಿರಬಹುದು, ನಿಸರ್ಗವು ವಿವಿಧ ವರ್ಣಗಳಿಂದ ಶೋಭಿಸುತ್ತಿರಬಹುದು, ಕಣ್ಣೊಂದು ಇರದಿದ್ದರೆ ಅವುಗಳಿಗೇನು ಬೆಲೆ. ಕಣ್ಣಿನಂತೆಯೇ ಉಳಿದ ಇಂದ್ರಿಯಗಳು. ಈ ಕಾರಣಕ್ಕಾಗಿ ಇಂದ್ರಿಯಗಳು ಶ್ರೇಷ್ಠ.

ಇಂದ್ರಿಯೇಭ್ಯಃ ಪರಂ ಮನಃ :– ಇಂದ್ರಿಯಗಳು ಸ್ವತಂತ್ರವಾಗಿ

ಕಾರ್ಯ ಮಾಡುವದಿಲ್ಲ. ಉದಾ: ನಿದ್ರೆಯಲ್ಲಿ ದೇಹ ಜೀವಂತ ಇವೆ; ಇಂದ್ರಿಯ ಗಳೂ ಸುಸ್ಥಿತಿಯಲ್ಲಿವೆ. ಆದರೆ ಬಾಹ್ಯ ವಿಷಯಗಳ ಭಾನ ಬರದು. ಇಂದ್ರಿಯ ಎಂದರೆ ವಿದ್ಯುತ್ ಬುರುಡೆ; ವಿದ್ಯುಚ್ಚಾಲಿತ ಧ್ವನಿವರ್ಧಕ. ಅದೃಶ್ಯವಾದ ವಿದ್ಯುತ್ ಅವುಗಳಲ್ಲಿ ಹರಿದಾಗ ಬುರುಡೆ ಮಿನುಗುವದು; ಧ್ವನಿವರ್ಧಕ ಹಾಡು ವದು. ಹಾಗೆ ಅದೃಶ್ಯವಾದ ಮನೋ ವಿದ್ಯುತ್ತು ಪ್ರಚಲನವಾದಾಗ ಕಣ್ಣು ಕಾಣುವದು, ಕಿವಿ ಕೇಳುವದು, ರಸನ ರುಚಿಸುವದು. ನಿದ್ರೆಯಲ್ಲಿ ಮನದ ಚಲನ ವಿಲ್ಲವಾಗಿ ಇಂದ್ರಿಯ ಕಾರ್ಯವಿಲ್ಲ. ಇಂತು ತಾನು ಮರೆಯಲ್ಲಿದ್ದು ಇಂದ್ರಿಯ ಗಳಿಗೆ ಅವ್ಯಕ್ತ ಶಕ್ತಿ ನೀಡುವದರಿಂದ ಮನಸ್ಸು ಇಂದ್ರಿಯಗಳಿಗಿಂತ ಶ್ರೇಷ್ಠ.

**ಮನಸಸ್ತು ಪರಾಬುದ್ಧಿಃ** :– ಮನಸ್ಸು ಸಂಕಲ್ಪ ವಿಕಲ್ಪಕಾರಿ. ಬುದ್ಧಿ ನಿರ್ಣಾಯಕ ತತ್ತ್ವ. ಮನದ ಚಲನವಲನವು ಬುದ್ಧಿಯ ಚಾಲನೆಯ ಆದೇಶವನ್ನು ಅವಲಂಬಿಸಿದೆ. ಬುದ್ಧಿ ಮಾರ್ಗದರ್ಶಕ; ಮನಸ್ಸು ಮಾರ್ಗ–ಯಾತ್ರಿಕ. ಬುದ್ಧಿ ಆಳರಸ, ಮನಸ್ಸು ಸೇನಾಪತಿ. ಹೀಗಾಗಿ, ಬುದ್ಧಿಯು ಮನಸ್ಸಿಗಿಂತ ಶ್ರೇಷ್ಠ.

**ಸಃ ಬುದ್ಧೇಃ ಪರತಃ**:- ಪ್ರಾಕೃತಿಕ ಸೃಷ್ಟಿಯಲ್ಲಿ ಬುದ್ಧಿಯಷ್ಟು ಸೂಕ್ಷ್ಮ ತತ್ತ್ವ ಮತ್ತೊಂದಿಲ್ಲ ನಿಜ, ಆದರೆ ಅಂಥ ಬುದ್ಧಿ ಕೂಡ ಜಡ-ವಿನ್ಯಾಸವೇ. ಅದು ಪರಿಚ್ಛಿನ್ನ, ಪರಿಣಾಮಶೀಲ, ಸಾದಿ ಹಾಗು ಸಾಂತ. ಈ ಬುದ್ಧಿ ತತ್ತ್ವ ದಾಚೆ ಅನಂತತೆಯಲ್ಲಿ ಆತ್ಮರವಿ ಪ್ರಕಾಶಿಸುತ್ತಿದ್ದಾನೆ. ಅವನ ಪ್ರಕಾಶ ಕಟ್ಟಿ ಕೊಂಡೇ ಬುದ್ಧಿಚಂದ್ರನು ಪ್ರಾಪಂಚಿಕ ವಸ್ತುಗಳನ್ನು ಬೆಳಗುತ್ತಾನೆ; ಇಂದ್ರಿಯ ಮನಸ್ಸುಗಳನ್ನು ಪ್ರಕಾಶಿಸುತ್ತಾನೆ. ಆತ್ಮರವಿಯು ಕೇವಲ ಸಾಕ್ಷಿ; ಮನ ಬುದ್ಧಿ ಗಗಮ್ಯ! ಆದ್ದರಿಂದ ಪರತಃ, ಪರಾತ್ಪರ! ಸರ್ವ ಶ್ರೇಷ್ಠ!

ಅಂಥ ವಿಮಲ ಚೇತನಾತ್ಮನು ಜೀವನಿಗೆ ಕಾಣುತ್ತಿಲ್ಲ; ಏಕೆಂದರೆ ಸ್ಥೂಲ ವಾದ ಇಂದ್ರಿಯ ವ್ಯಾಮೋಹ, ಸೂಕ್ಷ್ಮವಾದ ಮನದ ವ್ಯಾಮೋಹ ಹಾಗು ಸೂಕ್ಷ್ಮತಮವಾದ ಬುದ್ಧಿ-ವ್ಯಾಮೋಹ ಜೀವನನ್ನು ಆವರಿಸಿದೆ. ಈ ಮೂರು ವಿಧ ವ್ಯಾಮೋಹ ಪರದೆ ಹರಿದು ಜೀವನು ಪರಮ ಆತ್ಮದೇವನ ದರ್ಶನ ಹಾಗು ಅವನೊಂದಿಗೆ ಸಾಮರಸ್ಯ ಪಡೆಯುವದಕ್ಕೆ ನಿರ್ವಿಕಲ್ಪ ಸಮಾಧಿ ಯೋಗ ಎಂದು ನಾಮ. ಇದಕ್ಕೆ ಆತ್ಮಸಾಕ್ಷಾತ್ಕಾರದ ಅಭ್ಯಾಸ ಎಂತಲೂ ಕರೆ ಯುತ್ತಾರೆ. ಇದನ್ನು ಹೇಗೆ ಅನುಷ್ಠಾನಿಸಬೇಕು ?

" ಯಚ್ಛೇದ್ವಾಙ್ಮನಸೀ ಪ್ರಾಜ್ಞಃ ತದ್ಯಚ್ಛೇತ್ ಜ್ಞಾನ ಆತ್ಮನಿ ।
ಜ್ಞಾನಮಾತ್ಮನಿ ಮಹತಿ ತದ್ಯಚ್ಛೇಚ್ಛಾಂತ ಆತ್ಮನಿ ॥"

ಸಾಧಕನು ವಾಕ್ ಮುಂತಾದ ಕರ್ಮೇಂದ್ರಿಯಗಳನ್ನು ಕರ್ಣಾದಿ ಜ್ಞಾನೇಂದ್ರಿಯಗಳನ್ನು ಮನಸ್ಸಿನಲ್ಲಿ, ಮನಸ್ಸನ್ನು ಆತ್ಮ ಬುದ್ಧಿಯಲ್ಲಿ, ಆ ಬುದ್ಧಿಯನ್ನು ಮಹತ್ ಆತ್ಮನಲ್ಲಿ ಆ ಮಹದಾತ್ಮಭಾವವನ್ನು ಶಾಂತ ದೇವನಲ್ಲಿ ಸಮರ್ಪಿಸಬೇಕು. ಈ ಶ್ರುತಿ ವಚನ ಸಾಧನೆಯ ರೂಪ–ರೇಷೆಯನ್ನು ರೇಖಿ

ಸಿದೆ. ಇದರ ವಿವರ:

(೧) ಇಂದ್ರಿಯಗಳ ಅರ್ಪಣ ಮನಸ್ಸಿನಲ್ಲಿ :– ಇಂದ್ರಿಯಗಳು ಉದ್ರಿಕ್ತ ಕುದುರೆಗಳು. ಹತ್ತು ದಿಕ್ಕಿನಲ್ಲಿ ಹರಿದು ಸ್ವೇಚ್ಛೆಯಿಂದ ವಿಷಯಗಳ ಸಂಪರ್ಕ ಬೆಳೆಸುತ್ತವೆ. ಮನಸ್ಸೆಂಬ ಲಗಾಮನ್ನು ಜಗ್ಗಿ ಇಂದ್ರಿಯಗಳನ್ನು ನಿಲ್ಲಿಸಬೇಕು. ಇದು ಇಂದ್ರಿಯಾರ್ಪಣ.

(೨) ಮನಸ್ಸಿನ ಅರ್ಪಣ ಆತ್ಮ ಬುದ್ಧಿಯಲ್ಲಿ :– ಮನಸ್ಸು ವಾಸನೆಯ ಕಣಜ. ಬಾಹ್ಯ ವಿಷಯ–ರಸ ಸಂಪರ್ಕ ತಪ್ಪಿದರೂ ಅನುಭೂತ ವಿಷಯವಾಸ ನಾರಸವನ್ನು ಮತ್ತೆ ಮತ್ತೆ ಈಂಟುವದು ಮನದ ಸ್ವಭಾವ. ವಾಸನೆಗಳು ತೆರೆ ತೆರೆಯಾಗಿ ಏಳುತ್ತಿರುವವರೆಗೆ ಮನಸ್ಸು ಚಂಚಲ; ಹೃದಯ ಕಲುಷಿತ. ಜೀವ ಬಂಧಿತ, ಚಿಂತೆ ವ್ಯಥೆಗಳು ಜೀವನನ್ನು ಹಿಂಡುವವು. ಕಾಮನು ವಿಕಟಾಟ್ಟಹಾಸ ದಿಂದ ಮನೋರಂಗದ ಮೇಲೆ ನರ್ತಿಸುವನು. ಸಾಧಕನು ಈ ಮನದ ಚಂಚಲತೆ ಯನ್ನೀಗ ನಿಲ್ಲಿಸಬೇಕು. ಹೇಗೆ? ಪ್ರತ್ಯಗಾತ್ಮನೇ ತಾನೆಂಬ ಆತ್ಮಬುದ್ಧಿಯಲ್ಲಿ ಅದನ್ನು ಸಮರ್ಪಿಸಿ ! ಅಂದರೆ ದೇಹಾದಿ ವಿಲಕ್ಷಣವಾದ ವಿಮಲಬುದ್ಧಿ ಪ್ರತಿ ಫಲಿತ ಅಮರ ಚೇತನದ ಚಿಂತನೆಗೆ ತೊಡಗಿಸಬೇಕು ಮನಸ್ಸನ್ನು.

(೩) ಬುದ್ಧಿಯ ಅರ್ಪಣ 'ಮಹತಿ ಆತ್ಮನಿ' ಪ್ರತ್ಯಗಾತ್ಮಾಭಿನ್ನ ಪರ ಬ್ರಹ್ಮನಲ್ಲಿ :– ದೇಹ ಇಂದ್ರಿಯ ಮನಸ್ಸು–ಇವುಗಳ ಕೂಟ ವ್ಯಷ್ಟಿವಿಶ್ವ. ಜಾಗತಿಕ ದೇಹ, ಇಂದ್ರಿಯ ಮನಸ್ಸುಗಳ ಕೂಟ ಸಮಷ್ಟಿ ವಿಶ್ವ. ವ್ಯಷ್ಟಿವಿಶ್ವದ ಅಭಿಮಾನಿ ಜೀವನು. ಸಮಷ್ಟಿ ವಿಶ್ವದ ಅಭಿಮಾನಿ ಈಶನು. ಜೀವಸಾಕ್ಷಿ ಚೇತ ನವು ಪ್ರತ್ಯಗಾತ್ಮ. ಈಶ ಸಾಕ್ಷಿ ಚೇತನವು ಪರಬ್ರಹ್ಮ. ಜೀವನು ತ್ವಂ ಪದ ವಾಚ್ಯ, ಈಶನು ತತ್ ಪದ ವಾಚ್ಯ. ಪ್ರತ್ಯಗಾತ್ಮನು ತ್ವಂ ಪದ ಲಕ್ಷ್ಯ. ಪರ ಬ್ರಹ್ಮನು ತತ್ ಪದ ಲಕ್ಷ್ಯ. ತ್ವಂ ಪದ ವಾಚ್ಯಸ್ಫುರಣೆಯುಳ್ಳ ಬುದ್ಧಿ. ಜೀವ ಬುದ್ಧಿಯು ತ್ವಂ ಪದ ಲಕ್ಷ್ಯ–ಸ್ಫುರಣೆಯುಳ್ಳ ಬುದ್ಧಿ ಆತ್ಮಬುದ್ಧಿ. ಅದರಲ್ಲಿ ಮನಸ್ಸುಹವಿಗೊಂಡಾಗ ಸರ್ವಸಂಕಲ್ಪಗಳ ಲಯ.

"ನಾನು ಪ್ರತ್ಯಗಾತ್ಮ" ಎಂಬ ಸಂವೇದನೆಯುಳ್ಳ ಆತ್ಮ ಬುದ್ಧಿಯನ್ನು "ಮಹತಿ ಆತ್ಮನಿ" ಪರಬ್ರಹ್ಮದಲ್ಲಿ ಪರಿಲಯಗೊಳಿಸಬೇಕು. ಆಗ ಪ್ರತ್ಯಗಾತ್ಮ ಸಂವೇದನೆ ಮಾಯವಾಗಿ "ಪ್ರತ್ಯಗಾತ್ಮಾಭಿನ್ನ ಪರಬ್ರಹ್ಮ" ನಾನೆಂಬ ಪರಮ ಪಾವನ ಭಾವ ಸ್ಪಂದಿಸುವದು.

೪) ಮಹತ್ ಆತ್ಮನ ಅರ್ಪಣ ಶಾಂತ ಆತ್ಮನಲ್ಲಿ:– ಮಹದಾತ್ಮ ಭಾವ ಸ್ಪಂದನೆ ಪಡೆದಾಗ ಸಾಧನೆಗೆ ಪರಾಕಾಷ್ಠೆ! ಅಲ್ಲಿಗೆ ಮನಸ್ಸು ವಿಶ್ವರೂಪ; ಅಹಂ ಕಾರ ತನ್ನೆಲ್ಲ ಪರಿಚ್ಛಿನ್ನ ಮೇರೆಗಳನ್ನು ಕಳೆದುಕೊಂಡಿದೆ. ಹೊರ ಜಗದ ಭ್ರಮೆ ಇಲ್ಲ; ಒಳ ಜಗದ ಮಿಸುಕಿಲ್ಲ, ಬುದ್ಧಿಯ ಕ್ರೀಡೆ ನಿಂತಿದೆ. ಕೇವಲ "ಬ್ರಹ್ಮಾಸ್ಮಿ

ಎಂಬ ವಿನಿರ್ಮಲ ಪರಾಹಂ–ಸ್ಪಂದನೆ! ಈ (ಮಹದಾತ್ಮ) ಸ್ಪಂದನೆ ಅನಂತ ಚಿದಾಕಾಶದಲ್ಲೆಲ್ಲ ಧುಮು ಧುಮಿಸುತ್ತಿದೆ. ಬಳಿಕ ದಿವ್ಯ ಸ್ಪಂದನೆ ಮಂದಮಂದ ವಾಗುತ್ತಿದೆ. ಕೊನೆಗೆ ನಿಶ್ಶಬ್ದ!! ಮಹಾ ಮೌನ!! ಅಖಂಡ ಶಾಂತತೆ!!! ಅದೇ ಆ ಮಹದಾತ್ಮ ಬುದ್ಧಿಯ ಪರ್ಯವಸಾನ; ಶಾಂತ ದೇವನಲ್ಲಿ ಸರ್ವ ಸಮರ್ಪಣ! ಜಗತ್ತು ಲಯ; ದೇಹ ಲಯ; ಕರ್ಮ ನಿಷ್ಕರ್ಮ. ವಾಣಿ ಮೌನ. ನೋಟ ಸ್ಪರ್ಶ ಶಬ್ದಗಳು ಶೂನ್ಯ! ಕೇವಲ ಸರ್ವಶೂನ್ಯ ನಿರಾಲಂಬ ಸ್ಥಿತಿ!!

ಭಗವಂತ:- "ಅರ್ಜುನ, ನೀನು ಇಂದ್ರಿಯಾತೀತ, ಮನಸ್ಸಿಗತೀತ, ಬುದ್ಧಿಗತೀತ, ಆತ್ಮಭಾವನೆಗೂ ಅತೀತ! ನೀನು ನೀನೇ! ನೀನು ಚಿದಾಕಾಶ, ನಿರಾಲಂಬ, ಮಹಾ ಶೂನ್ಯ ಸತ್ಯ! ಅಲ್ಲಿ ನಿಲ್ಲಲು ಸಿದ್ಧನಾಗು! ದೇಶದ ಹಿರಿತನ, ದೇಹದ ಹಿರಿತನ ಕ್ಷುಲ್ಲಕ ಕಲ್ಪನೆಗಳು. ಅವುಗಳನ್ನು ಪರಿತ್ಯಜಿಸು. ಕಾಮಾದಿಗಳನ್ನು ಹೃನ್ಮಂದಿರದಿಂದ ಹೊರದೂಡು: ಹಂತ ಹಂತವಾಗಿ ಮೇಲೇರು, ಇಂದ್ರಿಯ ಮನ ಬುದ್ಧಿ ಆತ್ಮ ಪರಿಧಿಗಳ ದಾಟು. ಮೌನ ಅನಂತತೆಯಲ್ಲಿ ಬೆರೆತುಬಿಡು. ಅಲ್ಲಿಗೆ ಕರ್ಮಯೋಗದ ಕೊನೆ, ಜ್ಞಾನಯೋಗದ ಅಂತ್ಯ! ಅರ್ಜುನಾ ಇದೋ ಈ ಕ್ಷಣವೇ ಅತ್ತ ಹೆಜ್ಜೆ ಹಾಕು!"

ಸಂಬಂಧ:– ಭಗವಂತನ ಆದೇಶ ಮುಂದುವರೆದಿದೆ.

ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ।
ಜಹಿಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥೪೩॥

ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಕರ್ಮಯೋಗೋ ನಾಮ ತೃತೀಯೋಧ್ಯಾಯಃ

ಭಾವ:– ಅರ್ಜುನ, ಈ ಪ್ರಕಾರವಾಗಿ ಬುದ್ಧಿಗಿಂತ ಶ್ರೇಷ್ಠವಾದುದನ್ನು ತಿಳಿದು ಆತ್ಮಬುದ್ಧಿಯಿಂದ (ಆತ್ಮನಾ), ಮನಸ್ಸನ್ನು (ಆತ್ಮಾನಂ) ನಿಲ್ಲಿಸಿ ದುರ್ಜಯವಾದ ಕಾಮರೂಪ ಶತ್ರುವನ್ನು ನಾಶ ಮಾಡು.

ವಿವರಣೆ:– ಭಗವಂತ:- "ಅರ್ಜುನ, ಪರಾತ್ಪರ ದಿವ್ಯ ಆತ್ಮ ಚೇತನವನ್ನು ಅರಿತುಕೊ. ನಿನ್ನ ಮನಸ್ಸನ್ನು, ನಿನ್ನ ಬುದ್ಧಿಯನ್ನು ಅದರಲ್ಲಿ ನೆಲೆಗೊಳಿಸು. ಆಗ ಸಾಮಾನ್ಯ ಜನರಿಗೆ ದುರ್ಜಯವೆನಿಸಿದ ಕಾಮರಿಪು ತನ್ನಿಂದ ತಾನೆ ನಾಶ ಹೊಂದುತ್ತಾನೆ. ನೀನಾಗ ಚರಮ ಶಾಂತಿ ಅನುಭವಿಸುವೆ."

ತಾತ್ಪರ್ಯ:– ಕರ್ಮ ಅನಿವಾರ್ಯ. ಕಾಮ ವಿರಹಿತ ಕರ್ಮದಿಂದಲೇ ಅಂತರಂಗಶುದ್ಧಿ; ಆತ್ಮವಿದ್ಯಾ ಸಿದ್ಧಿ. ಕರ್ಮಯೋಗಿಯು ಕರ್ಮ ಮಾಡುತ್ತ ಮಾಡುತ್ತ ಭೌತ, ಮಾನಸಿಕ, ಬೌದ್ಧಿಕ, ಪ್ರಾಕೃತಿಕ ಮಂಡಲ ಮೀರಿ ಸರ್ವ ಶೂನ್ಯ ಚಿದಾಕಾಶದಲ್ಲಿ ಬಯಲಾಗಬೇಕು.

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಮೂರನೆಯ ಬಿಂದುವು

§*§

# ನಾಲ್ಕನೆಯ ಅಧ್ಯಾಯ

## ಜ್ಞಾನಯೋಗ

### ಶ್ರೀ ಭಗವಾನುವಾಚ

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥೧॥**

**ಅರ್ಥ:-** ಇಮಂ= ಈ ಅವ್ಯಯಂ= ಅವ್ಯಯವಾದ, ಯೋಗಂ= ಯೋಗವನ್ನು (ಅವ್ಯಯ ಫಲದಾಯಕವಾದ ಆತ್ಮಾನುಭಾವರೂಪ ಯೋಗವನ್ನು) ಅಹಂ = ನಾನು (ಮೊದಲು) ವಿವಸ್ವತೇ= ಆದಿತ್ಯನಿಗೆ ಪ್ರೋಕ್ತವಾನ್ =ಹೇಳಿದೆನು. ವಿವಸ್ವಾನ್ =ಸೂರ್ಯನು, ಮನವೇ =ಮನುಋಷಿಗೆ ಪ್ರಾಹ = ಹೇಳಿದನು. ಮನುಃ= ಮನುವು ಇಕ್ಷ್ವಾಕವೇ = ಇಕ್ಷ್ವಾಕುವಿಗೆ ಅಬ್ರವೀತ್= ಹೇಳಿದನು.

**ವಿವರಣೆ:- ಸಂಬಂಧ:–** ಕರ್ಮಶುದ್ಧಿಯಿಂದ ಮನೋ ನಿರ್ಮಾಲ್ಯ. ಶುಚಿಯಾದ ಮನಸ್ಸಿನಲ್ಲಿ ಆತ್ಮಜ್ಞಾನಾವತರಣ, ಸಾಂಖ್ಯ ಸಿದ್ಧಿ ! ಅದರಿಂದ ಪ್ರಜ್ಞಾಸ್ಥಿರತೆ. ಅದೇ ಜೀವನದ ಪರಮೋನ್ನತ ಗಳಿಕೆ. ಇಷ್ಟು ೨–೩ ನೆಯ ಅಧ್ಯಾಯಗಳ ಅಂಶ.

ದೇಹಾತ್ಮ ಬುದ್ಧಿ, ಜನ್ಮ ಮರಣ ಕಲ್ಪನೆ, ಸಾಂಸಾರಿಕ ಬಂಧನ ಜೀವನನ್ನು ಸುತ್ತುವರೆದಿವೆ. ಸ್ವರೂಪತಃ ವಿಮುಕ್ತ ಚೇತನನಾದ ಜೀವನು ಹೀಗೆ ಅನಾತ್ಮ ಕಲ್ಪನೆಗಳ ಜಾಲದಲ್ಲಿ ಸಿಲುಕಿಕೊಳ್ಳಲು ಪ್ರಧಾನ ಕಾರಣ ಅವಿದ್ಯೆ. ಅದನ್ನು ಅಳಿಸಿದರೆ, ಸಾಂಖ್ಯ ಬುದ್ಧಿ ಸಮನಿಸಿದರೆ ಜೀವ-ಪರಮರ ಐಕ್ಯ, ವಿಮಲಯೋಗ. ಇದೇ ಪ್ರಸ್ತುತ ಅಧ್ಯಾಯದ ವಿಷಯ.

**ಅವ್ಯಯಯೋಗ:-** ಮನುಷ್ಯ ಬಯಸುವದೇನು? ಧನ ಕನಕ ಕಾಮಿನಿ ಅಧಿಕಾರಗಳಲ್ಲ. ಮೋಕ್ಷ ! ಆತ್ಯಂತಿಕ ದುಃಖ ನಿವಾರಣ ಹಾಗು ಅಕ್ಷಯ ಶಾಂತಿ ಪ್ರಾಪ್ತಿ !! ಯಾವ ಸಾಧನೆಯಿಂದ ಈ ಅಕ್ಷಯ, ಅಮರ, ಅವ್ಯಯ ಶಾಂತಿ ದೊರೆಯುವದೋ ಆ ಸಾಧನೆಗೆ ಅವ್ಯಯಯೋಗ ಎನ್ನುತ್ತಾರೆ.

**ಇಮಂ ವಿವಸ್ವತೇ ಪ್ರೋಕ್ತವಾನ್ ಅಹಂ:–** ಸರ್ವ ಸಾಕ್ಷಿಕ, ಸತ್ಯಜ್ಞಾನ ವಾರಿಧಿ, ದಯಾಘನನಾದ ಪರಮಾತ್ಮನು ಈ ಅಪ್ರತಿಮ ವಿದ್ಯೆಯನ್ನು, ಅವ್ಯಯಯೋಗವನ್ನು ಪ್ರಪ್ರಥಮದಲ್ಲಿ ಜಗತ್ಪ್ರಕಾಶಕನಾದ ಸೂರ್ಯದೇವನಿಗೆ ಕರುಣಿಸಿದ. ಅವನಿಗೆಯೇ ಏಕೆ?

ಸೂರ್ಯ ಜಗದ ಚಕ್ಷು. ಪರಮ ಪರಿಶುದ್ಧ ದೇಹಿ. ಕಾರ್ಯನಿಷ್ಠ ಕರ್ಮಯೋಗಿ. ಎಂಥ ತೊಂದರೆ ಬಂದರೂ ಒಂದು ಕ್ಷಣಕೂಡ ವಿಲಂಬವಿಲ್ಲದ ಕರ್ತವ್ಯ ಪಾಲಕ. ಮಹಾನ್ ಆಗಸದಲ್ಲಿ ಜಾಜ್ವಲ್ಯಮಾನನಾಗಿ ಕಂಗೊಳಿಸುವ ಸಾಮ್ರಾಟ! ಮನುಕುಲ ಹಾಗು ಜೀವ ಜಂತುಗಳೆಲ್ಲ ಅವನ ಆಧಿಪತ್ಯಕ್ಕೆ ಒಳಗಾಗಿವೆ. ಭಗವಂತನ ಉಪದೇಶ ಪಡೆಯಲು ಇವನಿಗಿಂತ ಯೋಗ್ಯ ಅಧಿಕಾರಿ ಯಾರಿದ್ದಾರೆ? ಆತ್ಮವಿದ್ಯೆ ಎಷ್ಟು ಹಿರಿದೋ ಅಷ್ಟೇ ಮಹತ್ತರ ಇವನ ವ್ಯಕ್ತಿತ್ವ.

ಆತ್ಮವಿದ್ಯೆ ಗಾಳಿಯಲ್ಲಿ ತೂರಿಬಿಡುವ ಕ್ಷುಲ್ಲಕ ಸಂಪದವಲ್ಲ. ಅಯೋಗ್ಯ ವ್ಯಕ್ತಿಗಳಿಗೆ ಅದನ್ನು ನೀಡಿವರೆ ಆಗುವ ಲಾಭವೇನು? ದಿನವಿಡಿ, ತುತ್ತು ಅನ್ನ, ನಾಲ್ಕಡಿ ಬಟ್ಟೆ, ಹೆಂಡತಿ, ಭೂಮಿ, ಗುಡಿಸಲುಗಳಿಗಾಗಿ ಕಂಗೆಟ್ಟ ಜನತೆಯು ಈ ಬೋಧಾಮೃತದ ಬೆಲೆಯುನರಿಯುಬಹುದೆ? ವಿಷಯಾಸಕ್ತರಿಗೆ ಪರಮವಿದ್ಯೆ ನೀಡುವದೂ ಹೊಳೆಯಲ್ಲಿ ಜೇನುತುಪ್ಪ ಸುರಿಯುವದೂ ಒಂದೇ.

ಆತ್ಮ ವಿದ್ಯೆ ಪಡೆಯಲು ಯೋಗ್ಯತೆ ಅಗತ್ಯ. ತೇಜಸ್ವಿ ಓಜಸ್ವಿಗಳಾದ ನಿರ್ಮಲಾಂತಃಕರಣದ ವ್ಯಕ್ತಿಗಳೇ ನಿಜವಾದ ಅಧಿಕಾರಿಗಳು ಈ ವಿದ್ಯಾಸಂಪಾದನೆಗೆ. ಊರಿನ, ನಾಡಿನ, ದೇಶದ ಆಡಳಿತ ಸೂತ್ರ ಹಿಡಿದ ಸಮರ್ಥ ಮುಂದಾಳುಗಳು ಹಾಗು ಜನಬಲ ಧನಬಲ ಬುದ್ಧಿಬಲವುಳ್ಳ ಕಾರ್ಯಶೀಲ ಜಾಣರು ತಕ್ಕ ವ್ಯಕ್ತಿಗಳು. ಅರಿತ ಅನುಭಾವಿಗಳು, ಮಹಾ ಪುರುಷರು, ಗುರುಗಳು ತಾವು ಪಡೆದ ಜ್ಞಾನ ರತ್ನವನ್ನು ಭಿಕ್ಷುಕರ, ದೀನ ದಲಿತರ ಪರಟೆಗೆ ಹಾಕದೆ, ಇಂಥ ನೇತಾರರ ಹೃದಯದಲ್ಲಿ ನ್ಯಸ್ತಗೊಳಿಸಬೇಕು. ಏಕೆಂದರೆ, ಈ ಧುರೀಣರು ಜ್ಞಾನಿಗಳಾದರೆ ದೇಶಕ್ಕೆಲ್ಲ ಕಲ್ಯಾಣ; ತಮ್ಮ ಅಧಿಕಾರ ಧನ ಜನ ಪಾಂಡಿತ್ಯ ವಾಗ್ವೈಖರಿಗಳನ್ನೆಲ್ಲ ಉಪಯೋಗಿಸಿ ಜೀವ ಜನಾಂಗವನ್ನು ಅಧ್ಯಾತ್ಮ ಮಾರ್ಗಕ್ಕೆ ಹಚ್ಚಬಲ್ಲರು. ದೇಶ ವಿದೇಶಗಳ ಅಧ್ಯಕ್ಷರು, ಪ್ರಧಾನಿಗಳು, ರಾಜರು ಆತ್ಮಿಕ ಶಾಂತಿ ಪಡೆದು ದೇವದೂತರಾದರೆ ಯುದ್ಧವಿಲ್ಲ, ವೈರವಿಲ್ಲ, ಬಡತನ ಅಜ್ಞಾನಗಳಿಲ್ಲ! ವಿಶ್ವ ಸಂಸ್ಥೆಯ ತುಂಬ ಆಧ್ಯಾತ್ಮ ವಿದ್ಯಾ ಗುಂಜಾರವ ಕೇಳಿ ಬರಬೇಕು. ಹಾಗೆ ಮಾಡುವದೇ ಗುರುಗಳ ಹೊಣೆ. ಈ ಆದರ್ಶಪಾಠ ಈಯಲೆಂದೇ ಭಗವಂತನು ತನ್ನ ರಹಸ್ಯ ಜ್ಞಾನ ಸ್ವೀಕಾರಕ್ಕೆ ಸೂರ್ಯನನ್ನು ಆರಿಸಿದ.

ವಿವಸ್ವಾನ್ ಮನವೇ ಪ್ರಾಹ:– ಆತ್ಮವಿದ್ಯೆ ಅಸಾಮಾನ್ಯ ಒಂದು ಜಾತಿ ಸಂಪ್ರದಾಯ ಮತದ ಸೊತ್ತಲ್ಲ ಅದು. ಅದು ದೇಶ ಸಮಾಜಗಳಿಗೆ ಸೀಮಿತವಲ್ಲ. ಮಾನವ ನಿರ್ಮಿತ ಧರ್ಮ ಹಾಗು ವಿಚಾರ ಪ್ರಣಾಲಿಗಳು ಕಾಲಾಂತರದಲ್ಲಿ ಅಳಿಸಿ ಹೋಗುವಂತೆ ಆತ್ಮಜ್ಞಾನ ಮರೆಯಾಗುವಂಥದಲ್ಲ. ಅದು ಅಪರಿಣಾಮಿ. ವಿಶ್ವವಿಸ್ತಾರದ ಅಮರ ಜ್ಞಾನ!

ಸೂರ್ಯನು ಅದನ್ನು ಅಂಗವಿಸಿಕೊಂಡ. ಜಗತ್ತಿನ ಆಗು ಹೋಗುಗಳಿಗೆ ಮನ ಹಾಕದೆ ಪ್ರಶಾಂತ ಚಿತ್ತನಾದ. ಸ್ಥಿತಪ್ರಜ್ಞ ಅವಸ್ಥೆ ಹೊಂದಿದ. ಸುಖ ದುಃಖ, ಲಾಭ ಹಾನಿ, ವಂದನೆ ದೂಷಣೆಗಳಲ್ಲಿ ಸಮಭಾವ ತಾಳಿ ತನ್ನ ಪಾಲಿನ ನಿತ್ಯ ಕರ್ಮದಲ್ಲಿ ನಿರತನಾದ. ಅವನೊಬ್ಬ ಮಹಾ ಕರ್ಮಯೋಗಿ! ಕರ್ತೃತ್ವ ಭಾವ ವಿರಹಿತ ಸಂತ! ಕರುಣಾ ಮಯಿಯಾದ ಅವನು ಪಡೆದ ಶಾಂತಿ ವಿದ್ಯೆಯನ್ನು ತನ್ನಷ್ಟಕ್ಕೆ ತಾನಿಟ್ಟುಕೊಳ್ಳದೆ ತನ್ನ ಪುತ್ರನಾದ ಮನುವಿಗೆ ಅರುಹಿದ. ಆ ಮನುಋಷಿ ಇಕ್ಷ್ವಾಕು ರಾಜನಿಗೆ ತಿಳಿಸಿದ.

ಒಂದು ಸಂಗತಿಯನ್ನು ಇಲ್ಲಿ ಗಮನಿಸಬೇಕು. ವ್ಯಾವಹಾರಿಕ ರೀತಿಯಲ್ಲಿ ಭಗವಂತನಾದ ಕೃಷ್ಣನು ಚಂದ್ರ ವಂಶದವ. ಆದರೆ ಸೂರ್ಯ ವಂಶದ ಜ್ಞಾನ ನಿಷ್ಠೆಯನ್ನು ಹೃದಯ ತುಂಬಿ ಕೊಂಡಾಡುತ್ತಾನೆ! ಇದು ಬಲ್ಲತನದ ಲಕ್ಷಣ. ಬಲ್ಲವರ ದೃಷ್ಟಿಯಲ್ಲಿ ಜಾತಿ ಮತ ಪಕ್ಷ ಪಂಗಡಗಳಿಗೆ ಅರ್ಥವಿಲ್ಲ; ಅವರು ಗುಣ ಗ್ರಾಹಿಗಳು; ಜ್ಞಾನಾನುರಾಗಿಗಳು. ಎಂಬ ಅಂಶವಿಲ್ಲಿ ಗಮನೀಯ. ಸಮಾಜದಲ್ಲಿ ಈ ಹಿರಿತನದ ಬುದ್ಧಿ ಕಡಿಮೆ. ಬಹು ಜನರು ಸ್ವಕುಲ ಗೋತ್ರವಂಶ ಮುಂತಾದ ಪ್ರಶಂಸೆ ಮಾಡುವರಲ್ಲದೆ, ಇನ್ನೊಬ್ಬರ ಕುಲ ಗೋತ್ರಾದಿಗಳ ಬಗ್ಗೆ ತಿಲ ಮಾತ್ರವೂ ಆದರ ಭಾವ ತೋರರು. ತತ್ತ್ವಜ್ಞಾನ ರಂಗದಲ್ಲೂ ಈ ಆಕುಂಚನ ಬುದ್ಧಿ ಕಾಲುಹಾಕಿದೆ. ಅದ್ವೈತಿಗಳಿಗೆ ದ್ವೈತ ಹಿಡಿಸದು; ದ್ವೈತಿಗಳಿಗೆ ಅದ್ವೈತ ಸೇರದು. ಒಂದು ಧರ್ಮಕ್ಕೆ ಅಂಟಿದವರಿಗೆ ಇನ್ನೊಂದು ಧರ್ಮ ಹೇಯವಾಗಿ ಕಾಣುತ್ತಿದೆ. ಪರಸ್ಪರರ ಸದ್ಗುಣಗಳನ್ನು ಕೊಂಡಾಡುವ ವಿಶಾಲ ಮನಸ್ಸು ಅವರದಾಗಲಿಲ್ಲ. ಕೀಳು ಭಾವದ ಜನತೆಯಿಂದಾಗಿ ಅಮರ ಜ್ಞಾನ ಸುಧಾಭಾಂಡಗಳಾದ ದಿವ್ಯ ಗ್ರಂಥಗಳು ಕೂಡ ಒಂದೊಂದು ಗುಂಪಿನ ತಿಜೋರಿಯಲ್ಲಿ ಬಹು ಕಾಲ ನವೆಯಬೇಕಾಯ್ತು.

ಕೀಳುಕುಲದವರು ಮಾಡಿದರೆಂದು ಬೆಲ್ಲ ಕಹಿಯಾದೀತೆ? ಮೇಲು ಜಾತಿಯವರು ನೆಟ್ಟ ಬೇವಿನ ಸಸಿ ಸಿಹಿ ಫಲವಿತ್ತೀತೆ ? ಒಳ್ಳೆಯದು ಎಲ್ಲಿದ್ದರೂ ಒಳ್ಳೆಯದೇ. ಕೆಟ್ಟದ್ದು ಎಲ್ಲಿದ್ದರೂ ಕೆಟ್ಟದ್ದೇ. ನಮಗೆ ಹಿತವೀಯುವ ವಚನಗಳು ಯಾರ ಮುಖದಿಂದ ಬಂದರೂ ಸೇವ್ಯ. ತತ್ತ್ವ ವಿದ್ಯಾಬೋಧೆ ಯಾವುದೇ ವ್ಯಕ್ತಿಯಿಂದ ದೊರೆಯಲಿ ಅದು ಗ್ರಾಹ್ಯ. ವಿಶ್ವವು ದೇವ ನಿಲಯ. ಉಪದೇಶ ಹೊತ್ತಿಗೆಗಳು ದೇವ ವಚನ ಭಾಂಡಾರಗಳು. ಅವುಗಳ ಮೇಲೆ ಯಾರ ಹಕ್ಕೂ ಇಲ್ಲ. ಎಲ್ಲರಿಗೆ ಸೇರಿದ ಸಂಪದವದು. ನಮ್ಮ ನಮ್ಮ ಆಕುಂಚನ ಭಾವ ಹರಿಯಲಿ. ದೇವ ವಿದ್ಯೆಯು ಮಾನವ ಕುಲದ ಬೃಹತ್ ಆಸ್ತಿಯಾಗಲಿ. ಆ ಮುಖವಾಗಿ ಗುರುಗಳು ದುಡಿಯಬೇಕು. ಭಿನ್ನ ಭೇದಗಳೆಂಬ ಕೋಟೆಗಳ ಕೆಡಹಿ ಜಗತ್ತೆಲ್ಲ ಒಂದು, ಜಗದ ಜನರೆಲ್ಲ ದೇವ ವಂಶಿಯವರು, ದೊರೆವ ಸಂಪದಕ್ಕೆ ಎಲ್ಲರೂ ಒಡೆಯರು ಎಂಬ ಭಾವವ ಬಿತ್ತರಿಸಬೇಕು. ದೇವನು ಸರ್ವವ್ಯಾಪಿ, ಸರ್ವಾಂತರ್ಯಾಮಿ; ಜಗತ್ತು ಜೀವರು ಅವನ ಸಾಕಾರ ರೂಪ! ಬಂಧನ ಭೀತಿ ಮರಣ ಎಲ್ಲವೂ ಭ್ರಮೆ; ಇಂಥ ದೇವದತ್ತ ಮಹಾ ಪ್ರಜ್ಞೆಯನ್ನು ಮನೆ ಮನೆಗೆ ಮುಟ್ಟಿಸಬೇಕು. ಭಗವಂತನು ಹಾಕಿದ ಪ್ರಥೆ ಅವಿಚ್ಛಿನ್ನವಾಗಿ ಸಾಗಬೇಕಲ್ಲವೆ?

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥೨॥**

**ಅರ್ಥ:-** ಪರಂತಪ= ಶತ್ರು ಸಂಹಾರಕ, ಏವಂ= ಈ ರೀತಿ ಪರಂಪರಾಪ್ರಾಪ್ತಂ=

ಪರಂಪರೆಯಿಂದ ಬಂದ, ಇಮಂ= ಈ ಯೋಗವನ್ನು ರಾಜರ್ಷಯಃ=ರಾಜರ್ಷಿಗಳು ವಿದುಃ =ತಿಳಿದಿದ್ದರು. ಸಃ ಯೋಗಃ=ಆ ಯೋಗವು ಮಹತಾ ಕಾಲೇನ=ದೀರ್ಘಕಾಲದಿಂದ, ಇಹ= ಇಲ್ಲಿ, ನಷ್ಟಃ =ಮರೆಯಾಯಿತು.

**ವಿವರಣೆ:- ಭಗವಂತ:-** " ಭರತೋತ್ತಮ, ಸನಾತನ ಯೋಗ ವಿದ್ಯೆಯು ಈ ರೀತಿಯಾಗಿ ಮನುಕುಲಕ್ಕೆ ದೊರೆಯಿತು. ಬಹುಕಾಲ ಪರಂಪರಾಗತವಾಗಿ ಸಾಗಿತು. ಶೌರ್ಯ ಔದಾರ್ಯವುಳ್ಳ ಸಾರ್ವಭೌಮ ರಾಜರು, ಸೂಕ್ಷ್ಮ ತತ್ತ್ವಾವ ಲೋಕನ ಮಾಡಬಲ್ಲ ಋಷಿಗಳು ಆ ವಿದ್ಯೆಯನ್ನು ಮೈಗೂಡಿಸಿಕೊಂಡರು. ಅನೇಕ ಶತಮಾನಗಳು ಗತಿಸಿದವು. ರಾಜ್ಯಗಳು ಸಮಾಜಗಳು ಬದಲಾದವು. ಯೋಗ್ಯ ಉಪದೇಶಕರು ಇಲ್ಲವಾದರು. ಯೋಗ್ಯ ಅಧಿಕಾರಿಗಳ ಅಭಾವ ತಲೆ ದೋರಿತು. ಉಪದೇಶಕ್ಕೆ ತಕ್ಕದಾದ ಪವಿತ್ರ ವಾತಾವರಣ ಕೂಡ ದೊರೆಯ ಲಿಲ್ಲ. ಹೀಗಾಗಿ, ಅನೂಚಾನವಾಗಿ ಸಾಗಿ ಬರುತ್ತಿದ್ದ ಜ್ಞಾನ ಪ್ರವಾಹ ಅಡಗಿತು! ನಾಶವಾಯಿತೆಂದಲ್ಲ, ಗುಪ್ತ ಗಾಮಿನಿಯಾಯ್ತು, ಸರಸ್ವತಿ ನದಿಯಂತೆ."

ಸಾಮಾನ್ಯವಾಗಿ, ಆತ್ಮವಿದ್ಯಾ ಪ್ರಸಾರಕ್ಕೆ ಅನುಕೂಲತೆಗಳು ಕಡಿಮೆ; ಪ್ರತಿಕೂಲತೆಗಳೇ ಬಹಳ. ದೇವಾಧಿ ದೇವತೆಗಳು ಕೂಡ ಆತಂಕ ಒಡ್ಡಲು ಹಿಂಜರಿಯುವದಿಲ್ಲ. ಉದಾಃ ಒಮ್ಮೆ ದಧ್ಯಂಗ ಋಷಿಗಳು ಶೌನಕಾದಿ ಮುನಿಗ ಳಿಗೆ ಉಪದೇಶ ನೀಡುತ್ತ, "ದೇವೇಂದ್ರನು ಇಂದ್ರಾಣಿಯೊಂದಿಗೆ ರಮಿಸುವದೂ ಶ್ವಾನ ಶ್ವಾನಿನಿಯೊಂದಿಗೆ ರಮಿಸುವದೂ ಒಂದೇ. ಭೋಗ ಜೀವನ ಸರ್ವಥಾ ಹೇಯ," ಎಂದು ನುಡಿದರು. ಅವರ ಮಾತು ಧರ್ಮ ಸಮ್ಮತವಾಗಿತ್ತು. ಆದರೆ ಇಂದ್ರನು ಅದನ್ನು ಕೇಳಿ ಸಹನೆ ಕಳೆದುಕೊಂಡ. " ಇನ್ನೊಮ್ಮೆ ಇಂಥ ಅವಹೇಳನಾತ್ಮಕ ಉಪಮೆ ಇತ್ತರೆ ನಿನ್ನ ತಲೆಯನ್ನು ಸಹಸ್ರ ಹೋಳುಮಾಡುವೆ. ಎಚ್ಚರ " ಎಂದು ಅರ್ಭಟಿಸಿದ. ಅಷ್ಟಕ್ಕೆ ಉಪದೇಶ ನಿಂತಿತು. ನೂರಾರು ವರುಷ ಲುಪ್ತವಾಯ್ತು ಈ ವಿರಾಗ ವಿದ್ಯೆ !

ಮಾನವ ಸಮಾಜವಂತು ಆತ್ಮ ತತ್ತ್ವಾನುಬದ್ಧ ಜೀವನಕ್ಕೆ ಬದ್ಧ ವಿರೋಧಿ. ಸಿನಿಮಾ ಮಂದಿರಗಳ ಬೆಳೆಸಲು, ಹಾಟೇಲ ಸೆರೆಯಂಗಡಿ ತೆರೆಯಲು, ಸಿಗಾರೇಟ ಬೀಡಿ ಪ್ರಚಾರ ಮಾಡಲು ಯಾರ ಅಭ್ಯಂತರವೂ ಇಲ್ಲ. ಸರಕಾರ ಕೂಡ ಪ್ರೋತ್ಸಾಹವೀಯುತ್ತದೆ. ಆದರೆ ಹೃದಯ ಶುದ್ಧಿಕರವಾದ, ಶಾಂತಿಪ್ರದಾ ಯಕವಾದ ದೇವಜ್ಞಾನಪರ ಪ್ರವಚನಗಳಿಗೆ ಯಾರು ಬೆಂಬಲಿಸುತ್ತಾರೆ ? ಕೇಳು ವವರನ್ನು ನಿಂದಿಸುತ್ತಾರೆ, ಹೇಳುವವರನ್ನು ಜರೆಯುತ್ತಾರೆ. ಶ್ರವಣಕ್ಕಾಗಿ ಪ್ರಶಾಂತ ಮಂದಿರ, ನಿರಾತಂಕ ಸ್ಥಾನ ದೊರೆಯುವದೂ ಕಷ್ಟ. ಸುತ್ತೆಲ್ಲ ಚೀರಾಟ, ವಾಹನಗಳ ಓಡಾಟ, ರೇಡಿಯೋಗಳ ಕಿರುಚಾಟ; ಹತ್ತೆಂಟು ಬಗೆಯ ಗದ್ದಲದ ಮಧ್ಯೆ ಈ ಅಪೂರ್ವ ವಿದ್ಯಾ ವಿತರಣೆ ಹೇಗೆ ಸಾಗೀತು ? ಸಂಕಷ್ಟಗಳು ಅತಿ ಹೆಚ್ಚಾದಾಗ, ಹೇಳಿ ಕೇಳುವವರಿಗೆ ಪ್ರೋತ್ಸಾಹವೇ ಇಲ್ಲದಾಗ ಆತ್ಮ ವಿದ್ಯೆ ಅನಿ

ವಾರ್ಯವಾಗಿ ಲುಪ್ತವಾಗದೇನು ಮಾಡೀತು ? ಸರಕಾರದ ಸಾವಿರಾರು ಕೋಟಿ ಧನ ನಿರರ್ಥಕ ವ್ಯಯವಾಗುತ್ತಿದೆಯಾದರೂ ಆತ್ಮಮೂಲ್ಯ ಶಾಂತಿ ವಿದ್ಯಾ ಪ್ರಸಾರಕ್ಕೆ ಒಂದಂಶ ಕೂಡ ವಿನಿಯೋಗವಾಗುತ್ತಿಲ್ಲ ! ನಾಗರಿಕರ ದುರ್ಗುಣ ಗಳನ್ನು ಕಳೆದು ಹಾಕಿ, ನೀತಿ, ಸಹಕಾರ, ಸಾವಧಾನತೆ, ಸಂತುಷ್ಟಿ, ಉದಾರತೆ ಗಳನ್ನು ಅಳವಡಿಸಿಕೊಡುವ ಯತ್ನವೇ ಇಲ್ಲದಾಗ ಪ್ರಗತಿ, ಸುಧಾರಣೆ ಹೇಗೆ ಸಾಧ್ಯ? ನಿರ್ಮಲ ಚಾರಿತ್ರ್ಯಯುತ್ತ ದೃಷ್ಟಿ ಹರಿಸದೆ ರಾಷ್ಟ್ರ ಕಟ್ಟುವದು, ರಾಷ್ಟ್ರೀಯ ಸಮಸ್ಯೆಗಳನ್ನು ಬಿಡಿಸುವದು ಎಂದಿಗಾದರೂ ಶಕ್ಯವಾದೀತೆ ?

**ಸ ಏವಾಯಂ ಮಯಾತೇऽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋऽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥೩॥**

**ಅರ್ಥ:-** (ನೀನು) ನನ್ನ ಭಕ್ತನೂ ಮಿತ್ರನೂ ಇರುತ್ತಿ ಎಂದು (ತಿಳಿದೇ) ಆ ಲುಪ್ತ ವಾದ ಈ ಪುರಾತನಃ ಯೋಗ =ಪುರಾತನ ಯೋಗವು, ತೇ= ನಿನಗೆ, ಮಯಾ= ನನ್ನಿಂದ, ಪ್ರೋಕ್ತಃ=ಹೇಳಲ್ಪಟ್ಟಿತು. ಹಿ=ಏಕೆಂದರೆ, ಏತತ್= ಈ ಯೋಗವು, ಉತ್ತಮಂ= ಶ್ರೇಷ್ಠವು. ರಹಸ್ಯಂ= ರಹಸ್ಯ ಪೂರ್ಣವು.

**ವಿವರಣೆ:- ಭಗವಂತ:-** " ತಾತ, ನೀನು ನನ್ನ ಭಕ್ತ. ಸ್ನೇಹಿತ. ನಮ್ಮಿಬ್ಬರಲ್ಲಿರುವ ಪ್ರೇಮ ಅಪಾರ. ಆದುದರಿಂದಲೇ ಬಹುಕಾಲ ಅಡಗಿ ಹೋಗಿದ್ದ ಸರ್ವಶ್ರೇಷ್ಠ ರಹಸ್ಯಯೋಗವನ್ನು ನಿನಗೆ ಹೇಳಿದೆ. ಈ ಜ್ಞಾನವನ್ನು ನಿನ್ನ ಮನಸ್ಸಿನಲ್ಲಿ ಭದ್ರಪಡಿಸಿಕೊ. ನೀನು ರಾಜ; ಲೋಕ ಪಾಲಕ. ಧೀರ ವೀರನಾದ ನಿನ್ನಿಂದಲೇ ಮತ್ತೆ ಈ ಪುರಾತನ ವಿದ್ಯೆ ಪ್ರವಾಹಗೊಂಡು ಹರಿಯುವಂತಾಗಲಿ ಎಂಬುದು ನನ್ನ ಮನೀಷೆ. ಹಾರ್ದಿಕ ಅಭಿಲಾಷೆ. "

**ಸಂಬಂಧ:-** ತನ್ನ ಸಾರಥ್ಯ ಮಾಡುತ್ತಿರುವ ಕೃಷ್ಣನು ' ಸೂರ್ಯನಿಗೆ ಉಪದೇಶಿಸಿದೆ ' ಎಂದು ಹೇಳಿದಾಗ ಅರ್ಜುನನಿಗೆ ಅತ್ಯಂತ ಅಚ್ಚರಿ ಎನಿಸಿತು. ಅವನು ಪ್ರಶ್ನಿಸಿದ:

**ಅರ್ಜುನ ಉವಾಚ**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥೪॥**

**ಅರ್ಥ:-** ಭವತಃ= ತಮ್ಮ ಜನ್ಮ= ಜನ್ಮವು ಅಪರಂ= ಇತ್ತೀಚಿನದು. ವಿವಸ್ವತಃ = ಸೂರ್ಯನ, ಜನ್ಮ= ಜನ್ಮವು ಪರಂ =ಹಿಂದಿನದು, ತ್ವಂ= ನೀನು, ಆದೌ= ಮೊದಲು, ಪ್ರೋಕ್ತವಾನ್ =ಉಪದೇಶ ಮಾಡಿದೆ, ಇತಿ ಏತತ್= ಎಂಬುವ ಮಾತನ್ನು ಕಥಂ =ಹೇಗೆ ವಿಜಾನೀಯಾಂ =(ನಾನು) ತಿಳಿದುಕೊಳ್ಳುವದು ?

**ವಿವರಣೆ:- ಅರ್ಜುನ:-** "ಯಾದವ, ನಿನ್ನ ಮಾತು ಕೇಳಿ ಕೌತುಕವೆನಿಸುತ್ತಿದೆ. ಸೂರ್ಯ ದೇವ ಇಂದು ನಿನ್ನೆ ಜನಿಸಿದವನಲ್ಲ; ಲಕ್ಷ ಲಕ್ಷ ವರುಷಗಳ ಹಿಂದೆ ಮೂಡಿಬಂದವ. ನೀನಾದರೋ ನಮ್ಮೆಲ್ಲರೊಂದಿಗೆ ಮೊನ್ನೆ ಮೊನ್ನೆ

ಗೋಕುಲದಲ್ಲಿ ಹುಟ್ಟಿ ಬೆಳೆದೆ. ಇದು ಸರ್ವವಿದಿತ ಸಂಗತಿ ಇರುವಾಗ ಆ ಸೂರ್ಯನಿಗೆ ಉಪದೇಶಿಸಿದೆ ಎಂದೆಯಲ್ಲ? ಇದನ್ನು ನಂಬುವದಾದರು ಹೇಗೆ?"

ಸಂಬಂಧ:- ಉಚಿತವಾದ ಅರ್ಜುನನ ಪ್ರಶ್ನೆಗೆ ಭಗವಂತ ಉತ್ತರ ನೀಡುತ್ತಾನೆ.

ಶ್ರೀ ಭಗವಾನುವಾಚ

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥೫॥

ಅರ್ಥ:- ಮೇ =ನನ್ನ ಚ ತವ =ಮತ್ತು ನಿನ್ನ, ಜನ್ಮಾನಿ= ಜನ್ಮಗಳು ಬಹೂನಿ = ಅನೇಕ. ವ್ಯತೀತಾನಿ= ಕಳೆದಿವೆ. ಅಹಂ= ನಾನು ತಾನಿ ಸರ್ವಾಣಿ= ಅವನ್ನೆಲ್ಲ ವೇದ= ತಿಳಿಯುತ್ತೇನೆ. ತ್ವಂ= ನೀನು ನ ವೇತ್ಥ ತಿಳಿಯುತ್ತಿಲ್ಲ.

ವಿವರಣೆ:– ಭಗವಂತ:– " ಅನಘ, ಈಗ ಪಡೆದ ಜನ್ಮವೇ ನಮ್ಮ ಪ್ರಪ್ರಥಮ ಜನ್ಮವಲ್ಲ. ಅಸಂಖ್ಯ ಜನ್ಮಗಳು ಕಳೆದಿವೆ. ಆಯಾ ಜನ್ಮದಲ್ಲಿ ವಿವಿಧ ಕಾರ್ಯಗಳನ್ನು ಎಸಗಿದ್ದೇವೆ. ಇಷ್ಟೇ ನಿನಗೆ ಅವುಗಳ ಸ್ಮರಣೆಯಿಲ್ಲ; ನಾನು ಮಾತ್ರ ಎಲ್ಲವನ್ನು ಅರಿಯುತ್ತೇನೆ. ನಿನ್ನನ್ನು ಲುಪ್ತ ಶಕ್ತಿ ಆವರಿಸಿದೆ; ನಾನು ಅಲುಪ್ತಶಕ್ತಿಯೊಂದಿಗ ! ನೀನು ಸಾಮಾನ್ಯ ಜೀವಿ; ನಾನು ಸ್ವರೂಪ ಪ್ರಜ್ಞೆಯುಳ್ಳ ಪುರುಷೋತ್ತಮ. ನೀನು ಕರ್ಮಾನುಗುಣವಾಗಿ ಹುಟ್ಟಿದವ; ನಾನಾದರೋ ಲೋಕ ಕಲ್ಯಾಣಕ್ಕಾಗಿ ದಿವ್ಯಚೇತನಾಸ್ಥರದಿಂದ ನೇರವಾಗಿ ಅವತರಿಸಿದವ. ನೀನು ಲೌಕಿಕ ಬದುಕಿಗಾಗಿ ಹುಟ್ಟಿದವ. ನಾನು ಲೀಲಾ ಮೂರ್ತಿ! ನಾನು ಪಡೆದ ದೇಹ, ಗೈದ ಕಾರ್ಯಗಳನ್ನೆಲ್ಲ ಕೇವಲ ಸಾಕ್ಷಿ ಭಾವದಿಂದ ನೋಡುವ ದಿವ್ಯ ದೃಷ್ಟಿ ನನಗಿದೆ. ನೀನು ಕಿಂಚಿಜ್ಞ, ಅತೃಪ್ತ, ಆದಿಬೋಧ, ಪರತಂತ್ರ, ಲುಪ್ತಸ್ಮರಣೆಯುಳ್ಳವ ಹಾಗು ಪರಿಚ್ಛಿನ್ನಭಾವಿ. ನಾನು ಸರ್ವಜ್ಞ, ನಿತ್ಯತೃಪ್ತ, ಅನಾದಿಬೋಧ, ಸರ್ವಸ್ವತಂತ್ರ, ಅಲುಪ್ತ ಸ್ಮರಣೆಯುಳ್ಳವ ಹಾಗು ಅಖಂಡ ಭಾವಿ! ನಿನಗೆ ನಿನ್ನಂತರಂಗಸ್ಥ ಚಿನ್ಮಯ ರವಿಯ ಭಾನ ಇಲ್ಲ; ನಿನ್ನ ಬುದ್ಧಿಗಣ್ಣು ಮಂದ; ಸಾಂಸಾರಿಕ ಭೋಗಾಸಕ್ತಿಗೆ ನೀನು ಗುಲಾಮ; ನಿನ್ನ ಹೃದಯ ಅವಿದ್ಯಾಂಧಕಾರದಿಂದ ವ್ಯಾಪಿಸಿದೆ. ನಾನು ಜ್ಞಾನ ಭಾಸ್ಕರ; ಸಾಂಸಾರಿಕ ಭೋಗ ವೈಭವಗಳ ಮಧ್ಯೆಯೂ ನಿರ್ಲಿಪ್ತ; ನನ್ನಂತರಂಗದಲ್ಲೆಲ್ಲ ಶುದ್ಧ ವಿದ್ಯೆ ಬೆಳಗುತ್ತಿದೆ. ಆದ್ದರಿಂದ ಅರ್ಜುನ, ನಾನು ಪೂರ್ವಕಾಲದಲ್ಲಿ ನಡೆದುದನ್ನೆಲ್ಲ ಹೇಳಬಲ್ಲೆ. ಆಗ ನಾನು ಬೋಧಿಸಿದ ಪರಮ ಮಂಗಲ ಜ್ಞಾನವನ್ನು ಸಾಂಗವಾಗಿ ನಿನಗೆ ಬಿತ್ತರಿಸಬಲ್ಲೆ."

ಭಗವಂತನ ಈ ಮಾತುಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕಾದರೆ ಕೆಲವು ಸಂಗತಿಗಳು ಗಮನಾರ್ಹ.

(೧) ತಾತ್ತ್ವಿಕ ದೃಷ್ಟಿಯಲ್ಲಿ ಶ್ರೀಕೃಷ್ಣ, ಆದಿತ್ಯ, ಮನು, ಇಕ್ಷ್ವಾಕು ಹಾಗು ರಾಜರುಗಳ ಅರ್ಥ :–1)ವಿಶ್ವವಿಲಾಸ ಮೂಡಿಬಾರದ ಮುನ್ನ ವಿಶ್ವಾಧಾರ ಪರಾತ್ಪರ ನಿರಾಲಂಬ ವಸ್ತುವೊಂದೇ ಅನಂತವಾಗಿ ನೆಲೆಸಿತ್ತು. ಅವರಲ್ಲಿ ಸತ್ತು ಚಿತ್ತು ಆನಂದ ನಿತ್ಯ ಪೂರ್ಣತೆಯ ಭಾವವಿರಲಿಲ್ಲ. ಅದು ನಿರ್ವಿಕಲ್ಪ, ನಿರ್ಲಕ್ಷಣ, ನಿರ್ವಿಕಾರ, ನಿರಂಜನ! ಅದುವೇ ಪುರುಷೋತ್ತಮನಾದ "ಶ್ರೀಕೃಷ್ಣ." 2) ಪುರುಷೋತ್ತಮನಲ್ಲಿ ಅವಿನಾಭಾವದಿಂದ ಒಂದು ದಿವ್ಯಸತ್ತೆ ಇದೆ; ಅದು ಪರಶಕ್ತಿ. ಈ ಅವ್ಯಕ್ತ ಪರಶಕ್ತಿ ಕಾಲಾಂತರದಲ್ಲಿ ವಿಕಸನಗೊಂಡಿತು. ಆಗ ಮಹತ್ತೆಂಬ ಬೃಹತ್ತತ್ತ್ವ ರೂಪು ತಾಳಿತು. ಈ ಮಹತ್ತಿನಲ್ಲಿ ಪುರುಷೋತ್ತಮನ ನಿತಾಂತ ಪ್ರಕಾಶ ಮಿನುಗಿತು. "ನಾನು ಸಚ್ಚಿದಾನಂದಘನ" ಎಂಬ ಸ್ವಪ್ರಜ್ಞೆ ಉಲಿಯಿತು. ಈ ಭಾವ – ಚೇತನವೇ "ಆದಿತ್ಯ." ಭಾವೀ ವಿಶ್ವಪ್ರಕಾಶಕ ಪ್ರಭಾಪುಂಜ. " ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ "–ಬ್ರಹ್ಮನನ್ನು ಹುಟ್ಟಿಸಿ ಅವನಿಗೆ ವೇದ ವಿದ್ಯೆಯನ್ನು ಅನುಗ್ರಹಿಸಿದೆ–ಎಂಬ ಶ್ರುತಿ ಮತದಂತೆಯೇ, ಪುರುಷೋತ್ತಮನು ತನ್ನಲ್ಲಿ ಅಡಗಿದ್ದ ಸ್ವರೂಪ–ವಿದ್ಯೆಯನ್ನು ಆದಿತ್ಯನಿಗೆ ಅನುಗ್ರಹಿಸಿದ. ಅಂದರೆ, ಆದಿತ್ಯನಲ್ಲಿ ಆತ್ಮಪ್ರಜ್ಞಾ ಪ್ರಕಾಶ ಸದೈವ ಸ್ಫುರಿಸುವಂತೆ ಮಾಡಿದ. ಪರಮ ಪುರುಷನಲ್ಲಿ ಅವ್ಯಕ್ತವಾಗಿ ನೆಲೆಸಿದ್ದ ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧಕತ್ವ, ಸ್ವತಂತ್ರತ್ವ, ಅಲುಪ್ತತ್ವ ಹಾಗು ಅನಂತತ್ವಗಳು ಅನುಪಮ ಆದಿತ್ಯನಲ್ಲಿ ಅಭಿವ್ಯಕ್ತವಾದವು ! ಆದುದರಿಂದ ಆದಿತ್ಯನು ಸರ್ವವಿತ್, ಸದಾನಂದ; ಸ್ವತಂತ್ರ ಹಾಗು ಸ್ವಪ್ರಕಾಶ; ಅಖಂಡ ಹಾಗು ಅನಂತ!

3)ಅವ್ಯಕ್ತ ಶಕ್ತಿಯ ವಿಕಾಸ ಮುಂದುವರೆಯಿತು.ಮಹತ್ತಿನ ಮಹಾಗರ್ಭದಿಂದ ಬೃಹತ್ ಅಹಂಕಾರ ಹೊರ ಹೊಮ್ಮಿತು. ಆ ಅಹಂಕಾರದಲ್ಲಿಯೂ ಪುರುಷೋತ್ತಮನ ವಿನಿರ್ಮಲ ಚೇತನ ಪ್ರಕಾಶ ಪ್ರತಿ–ಫಲಿಸಿತು. ಅದುವೇ "ಮನು." ಆದಿತ್ಯನಲ್ಲಿ ಅಭಿವ್ಯಕ್ತವಾದ 'ಸ್ವಪ್ರಜ್ಞೆ' ಮನು ಋಷಿಯ ಅಂತಃಪ್ರಜ್ಞೆಯಲ್ಲಿ ಅವತರಿಸಿತು. ಅದರೊಂದಿಗೆ ಇತರ ಪ್ರಜ್ಞೆಯ ಭಾನವೂ ಬಂತು. ನಂತರ ಈ ಬೃಹದಹಂಕಾರವೆಂಬ ಮನುವಿನ ಗರ್ಭದಿಂದ ಮನಸ್ಸು, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಮೂಡಿದವು. 4)ಪರಿಶುದ್ಧ ಮನವೇ "ಇಕ್ಷ್ವಾಕು" ರಾಜ. 5)ಇಂದ್ರಿಯಗಳು ಇತರ "ರಾಜರು." ಮನುವಿನ ಸ್ವಪರ ಪ್ರಜ್ಞೆ ಮನಸ್ಸಿನಲ್ಲಿ ಪ್ರಕಟವಾಯ್ತು, ಇತರ ಇಂದ್ರಿಯಗಳಲ್ಲಿ ತೋರಿತು. ಇದು ಪುರುಷೋತ್ತಮ-ಪ್ರಜ್ಞೆ ಎಂಬ ಆತ್ಮವಿದ್ಯೆ ಮೇಲಿನಿಂದ ಕೆಳಗಿನವರೆಗೂ ಹರಿದು ಬಂದ ಸುಂದರ ಕ್ರಮ.

ಆದರೆ, ಕಾಲಾಂತರದಲ್ಲಿ ವಿಷಯಗಳ ಸಂಪರ್ಕವೇ ಮನ-ಇಂದ್ರಿಯಗಳಿಗೆ

ಹೆಚ್ಚಾದ್ದರಿಂದ ಆತ್ಮಪ್ರಜ್ಞೆ ಅಥವಾ ಸ್ವಪ್ರಜ್ಞೆ ಅಡಗಿತು. ಕೇವಲ ಅನಾತ್ಮಪ್ರಜ್ಞೆ ಅಂದರೆ ಇತರ ಪ್ರಜ್ಞೆಯೊಂದೇ ಉಳಿಯಿತು. ಈ ಇತರ ಪ್ರಜ್ಞೆಯುಳ್ಳವರೇ ಇಂದಿನ ಜೀವರು. ಇತರ ಪ್ರಜ್ಞೆಯ ಆಕರ್ಷಣೆಯನ್ನು ಬದಿಗೆ ಸರಿಸಿ ಆತ್ಮಪ್ರಜ್ಞೆ ಪಡೆದವರು ಮಾತ್ರ ಮಹಾತ್ಮರು.

(೨) ಜೀವರು ಅವಿದ್ಯಾಂಧಕಾರದಿಂದ ಆಚ್ಛಾದಿಸಲ್ಪಟ್ಟಿದ್ದಾರೆ. ದೇಹಾದಿಗಳಲ್ಲಿ ಆತ್ಮಬುದ್ಧಿ ಹೊಂದಿದ ಅವರು ಜಾಗ್ರ ಸ್ವಪ್ನ ಸುಷ್ಪಿ-ಪ್ರಿಯರು. ಅಹಂಕಾರ, ವಿಷಯ ವ್ಯಾಮೋಹ, ಚಿಂತೆಗಳೇ ಅವರ ಸಂಪದ. ಅವರ ಹೃದಯ ಅತ್ಯಂತ ಮಲಿನವಾದುದರಿಂದ ಅವರಿಗೆ ಪೂರ್ವಕಾಲದ ಅರಿವಿಲ್ಲ. ಭವಿಷ್ಯದ ಪರಿವೆ ಇಲ್ಲ. ದಿವ್ಯಾತ್ಮ ಚೇತನಾಂಶ ತಮ್ಮಲ್ಲಿದೆ ಎಂಬ ಕಲ್ಪನೆ ಕನಸು ಮನಸಿನಲ್ಲೂ ಬರದು.

ಅವಿದ್ಯಾ ಉಪಾಧಿ ನೀಗಿ, ವಿದ್ಯಾ ಮಂಡಲ ಪ್ರವೇಶಿಸಿದವರು ಮಹಾತ್ಮರು. ತುರಿಯ ತುರಿಯಾತೀತ ಅವಸ್ಥೆಗಳೆಂದರೆ ಅವರಿಗೆ ಅಚ್ಚು ಮೆಚ್ಚು. ಅಲ್ಲಿ ನಿಂತು ಪುರುಷೋತ್ತಮನ ಸಾಕ್ಷಾತ್ಕಾರ ಪಡೆಯುತ್ತಾರೆ. ಅವ್ಯಕ್ತ ಶಕ್ತಿಯ ವಿವಿಧ ವಿಕಸಿತ-ತತ್ತ್ವಗಳನ್ನೆಲ್ಲ ಈಕ್ಷಿಸುತ್ತಾರೆ. ಅವರಿಗೆ ಭೂತಪ್ರಜ್ಞೆ ಇದೆ; ಭವಿಷ್ಯದ ತಿಳಿವಿದೆ. ಶ್ರೀ ಕೃಷ್ಣನೆಂದರೆ ಇಂಥ ಒಬ್ಬ ಅವತಾರಿ ಮಹಾತ್ಮ. ಅರ್ಜುನನೆಂದರೆ ಸಾಮಾನ್ಯ ಜೀವ. ಅವನಿಗೆ ಹಿಂದಿನ ಜನ್ಮಗಳ ಭಾನ ಇಲ್ಲ.

(೩) ಬಹು ಜನ್ಮಗಳು ಯಾರಿಗೆ ? ವಿವಿಧ ಜನ್ಮಗಳನ್ನು ಹೊಂದುವವರು ಯಾರು? ಆತ್ಮನು ನಿತ್ಯಮುಕ್ತ ತ್ರಿಕಾಲಾಬಾಧ್ಯ ನಿರ್ವಿಕಾರಿಯಾದುದರಿಂದ ಅವನು ಬೇರೆ ಬೇರೆ ಜನ್ಮ ಪಡೆಯುವದಿಲ್ಲ. ಒಮ್ಮೆ ಹುಟ್ಟಿ ಒಮ್ಮೆಯೇ ಸಾಯುವ ದೇಹ ಕೂಡ ಮತ್ತೆ ಮತ್ತೆ ಹುಟ್ಟಿ ಬರಲಾರದು. ಆತ್ಮ ಮತ್ತು ದೇಹಗಳಿಂದ ಭಿನ್ನವಾಗಿ ಒಂದು "ಲಿಂಗಶರೀರ" ಇದೆ. ಅದಕ್ಕೆ "ಮನೋಮಯ ತನು "ವೆಂತಲೂ ನಾಮ. ಅದು ಸೂಕ್ಷ್ಮ. ದೇಹದಂತೆ ನಾಶವಾಗುವಂಥದಲ್ಲ. ದೇಹದಷ್ಟು ಪೂರ್ಣ ಜಡವೂ ಅಲ್ಲ. ಅದರಲ್ಲಿ ಅಸಂಖ್ಯ ವಾಸನೆಗಳು ತಲೆ-ತಲಾಂತರದಿಂದ ಸಂಗ್ರಹವಾಗುತ್ತವೆ. ಅಂಥ ವಾಸನೆಗಳಿಂದಾಗಿ ಲಿಂಗದೇಹವು ವಿಭಿನ್ನ ಸ್ಥೂಲ ದೇಹಗಳನ್ನು ಪಡೆಯುತ್ತದೆ. ಲಿಂಗದೇಹ-ವಿಶಿಷ್ಟ-ಚೇತನವಾದ ಜೀವನು ಆಯಾ ದೇಹಗಳಲ್ಲಿ ಅಭಿನಿವೇಶ ತಾಳಿ ಅಸಂಖ್ಯ ಕರ್ಮಗಳನ್ನು ಆಚರಿಸುತ್ತಾನೆ. ಹೀಗೆ ಅವನ ಬಾಳು ಲಕ್ಷಾಂತರ ವರುಷಗಳಿಂದ ಸಾಗಿದ್ದರೂ ಅದರ ಪರಿವೆ ಅವನಿಗಿಲ್ಲ. ಅವನ ಅಂತರ್ದೃಷ್ಟಿ ಮಂದವಾಗಿದೆ. ತಾನಾರು ? ವಿಶ್ವದ ಮೂಲವಾವುದು? ಎಂಬುದನು ಅರಿತುಕೊಳ್ಳವಷ್ಟು ಸಾಮರ್ಥ್ಯ ಉಳಿದಿಲ್ಲ. ಈ ನಿಶ್ಶಕ್ತ ಜೀವನು ಬಂಧಿತ.

ಲಿಂಗದೇಹವನ್ನು ಆತ್ಮ ಚಿಂತನೆಯಿಂದ ಶುದ್ಧೀಕರಿಸಿದ ಜೀವನ ಅಂತ

ದೃಷ್ಟಿ ಅರಳುತ್ತದೆ. ಅವನ ಸುತ್ತೆಲ್ಲ ಹರವಿದ ಅವಿದ್ಯಾ ನಿಳೆ ಹರಿಯುತ್ತದೆ. ಸೌಮ್ಯ ಚೇತನ ಪ್ರಕಾಶ ಅಲ್ಲೆಲ್ಲ ಹರಡುತ್ತದೆ. ಆಗ ಲಿಂಗದೇಹಸ್ಥ ಪೂರ್ವಸ್ಮರಣೆಗಳೆಲ್ಲ ಸುಸ್ಪಷ್ಟವಾಗಿ ತೋರುತ್ತವೆ. ಈ ದರ್ಶನ ಹೊಂದಿದ ಜೀವನು ವಿದ್ಯಾನಿಧಿ; ಸ್ವಪರ ಪ್ರಜ್ಞಾವಂತ. ಆದುದರಿಂದ ಭವ ಬಂಧಿತನಲ್ಲ, ಮುಕ್ತ. ಅವನ ಜೀವಪ್ರಭೆಯು ವಿಶ್ವವ್ಯಾಪಕ ಪುರುಷ ಪ್ರಭೆಯಲ್ಲಿ ವಿಲಯನ ಹೊಂದಿದೆ.

(೪) ಸಂಸಾರದಲ್ಲಿ ಗರಹೊಡೆದು ಹೋದ ಸಾಮಾನ್ಯ ಜೀವರ ಸ್ಥಿತಿ ಬಹು ಚಿಂತಾಜನಕ. ಅವರಿಗೆ ಅಧಿಕಾರ, ವಿದ್ಯೆ, ಸಿರಿ, ಶಕ್ತಿ ಏನೆಲ್ಲ ಇದೆ. ತಮ್ಮತನದ ಅರಿವು ಮಾತ್ರ ಇಲ್ಲ. ಇಂಥ ಜೀವನವು ಜೀವನವೆ ?

"ಹೊನ್ನಿಗಾಗಿ ಸತ್ತವರು ಕೋಟಿ, ಹೆಣ್ಣಿಗಾಗಿ ಸತ್ತವರು ಕೋಟಿ. ನಿನಗಾಗಿ ಸತ್ತವರನೊಬ್ಬರನು ಕಾಣೆ ಗೋಹೇಶ್ವರ."

ಭೌತ ವಸ್ತುಗಳಿಗಾಗಿ ಲಕ್ಷಾಂತರ ಜನ್ಮ ತರ್ಪಿಸಿದ ನಾವು ಒಂದಾದರು ಜನ್ಮವನ್ನು ಆತ್ಮ-ಜ್ಞಾನಕ್ಕಾಗಿ ಮೀಸಲಿರಿಸಬಾರದೆ ? 'ಶಿವನನ್ನೊಲಿಸಲು ಬಂದ ಪ್ರಸಾದ ಕಾಯ'ಗಳು ಕಾಮ ಕಡಾಯಿಯಲಿ ಬೆಂದು ಹೋಗುತ್ತಿವೆ! ಕಳೆದ ಜನ್ಮಗಳ ಭಾನವಿಲ್ಲವಾಗಿ ವರ್ತಮಾನ ದೇಹದ ವ್ಯಾಮೋಹ ಹೆಚ್ಚಿದೆ. ಅದನ್ನು ಬಿಡುವಾಗ ಕಣ್ಣೀರ ಹರಿಸುತ್ತಾನೆ.

ಬ್ಯಾಂಕಿನ ಮೇಲಾಧಿಕಾರಿ ದಿನವೂ ಲಕ್ಷಾಂತರ ರೂಪಾಯಿಗಳ ವಿನಿಮಯ ಮಾಡುತ್ತಾನೆ. ವರ್ಗವಾದರೆ, ಆ ಹಣವನ್ನೆಲ್ಲ ಬಿಟ್ಟು ಹೋಗಬೇಕಾಯಿತಲ್ಲ ಎಂದು ಚಿಂತಿಸುವನೇ ? ಇಲ್ಲ. ಆ ದುಡ್ಡಿನ ವ್ಯಾಮೋಹ ಅವನಿಗಿಲ್ಲ. ತನ್ನ ವೇತನದಲ್ಲಿ ಆತ ಸಂತುಷ್ಟ. ಹಾಗೆ ಒಂದೊಂದು ದೇಹವೆಂದರೆ ಒಂದೊಂದು ಬ್ಯಾಂಕು. ದೇವರು ನಮ್ಮನ್ನು ಆಯಾ ದೇಹಗಳ ಅಧಿಕಾರಿಗಳನ್ನಾಗಿ ನೇಮಿಸುತ್ತಾನೆ. ವರ್ಗಮಾಡುತ್ತಾನೆ. ಆಗ ನಾವು ಬಿಡಬೇಕಾದ ದೇಹದ ಬಗ್ಗೆ ಅದೇಕೆ ಶೋಕಿಸಬೇಕು ? ದೇಹ ವ್ಯಾಮೋಹ ನಮ್ಮ ಅಂತಃಪ್ರಜ್ಞೆಯನ್ನೇ ಹೀರುತ್ತಿದೆ. ಸಾವಿನ ಭೀತಿ, ಧನದ ಗರ್ವ, ಸಂಗ್ರಹ ವೃತ್ತಿ, ವಂಚನೆ ಏನೆಲ್ಲ ದೇಹ ಮೋಹದ ಪರಿಣಾಮ. ಮಗುವೊಂದು ಮಲ-ಮೂತ್ರದೊಡನೆ ಪೋಜಿನಿಂದ ಆಡಿ ಆನಂದ ಪಡುವಂತೆ ಮನುಷ್ಯ ವನಿತೆ, ವಸ್ತು, ವಾಹನ, ಭೂಮಿ, ಕೀರ್ತಿ, ಧನಗಳೊಂದಿಗೆ ಆಡಿ ರಾಕ್ಷಸೀ ಆನಂದ ಪಡುತ್ತಿದ್ದಾನೆ. ತನ್ನ ಹೊಲ ಹಣ್ಣು ಕಾಯಿಗಳಿಂದ ತುಂಬಿ ನಿಂತಿರುವಾಗ ನೆರೆಹೊಲದ ಸವತೆಯಕಾಯಿ-ಕದಿಯಲು ಹವಣಿಸುವ ಮನುಷ್ಯನಂತೆ ನಮ್ಮ ಬಾಳು. ನಮ್ಮೊಳಗೆಯೇ ದೇಹ ಇಂದ್ರಿಯ ಮನಗಳಾಚೆ ಅವ್ಯಯ ಸೌಖ್ಯ ನೆಲೆಸಿದೆ; ಅದನ್ನು ಅನುಭವಿಸುವದ ಬಿಟ್ಟು ನಮ್ಮಿಂದನ್ಯವಾದ ಹೆಂಡತಿ ಮಕ್ಕಳಲ್ಲಿ ಸುಖ ಬಯಸುತ್ತಿದ್ದೇವೆ. ಇದೆಲ್ಲದರ ಮೂಲ ಕಾರಣ 'ಅವಿದ್ಯೆ!'

ಸಂಬಂಧ:— ಅರ್ಜುನ:- "ಭಗವಂತನೆ, ನೀನು ಹೇಳುವದನ್ನೆಲ್ಲ ಕೇಳಿದೆ. ಅವಿದ್ಯಾವೃತ ಜೀವನಿಗೆ ಪೂರ್ವದ ನೆನಹಿಲ್ಲ. ವಿದ್ಯಾಯುಕ್ತ ಮಹಾತ್ಮನಿಗೆ ಪೂರ್ವ ಜನ್ಮಗಳ ನೆನಹಿದೆ ಎಂಬುದು ನಿನ್ನ ಉಪದೇಶದ ಸಾರ. ಕೃಷ್ಣ, ನೀನು ಪುರುಷೋತ್ತಮ, ವಿಶ್ವದ ಆದ್ಯಂತಗಳಲ್ಲಿ ವ್ಯಾಪಿಸಿದ ವಿಶ್ವಪ್ರಭು; ಎಂಬ ಮಾತನ್ನು ನಾನೇನು ಅಲ್ಲಗಳೆಯುವದಿಲ್ಲ. ಒಂದು ಸಂದೇಹ ನನ್ನ ತಲೆಯಲ್ಲಿ ಮೂಡಿದೆ. ನೀನು ಅನಾದಿಯಾದರೆ ಜನ್ಮ ನಿನಗೆ ಹೇಗೆ ಬಂತು? ನೀನು ಅವಿನಾಶಿಯಾದರೆ ಪುನರ್ಜನ್ಮ ನಿನಗೆಂತು? ನನ್ನ ನಿನ್ನ ಅನೇಕ ಜನ್ಮಗಳು ಕಳೆದು ಹೋಗಿವೆ ಎಂಬ ನುಡಿಯ ಅಭಿಪ್ರಾಯವೇನು? ಪುಣ್ಯ ಪಾಪ ಕರ್ಮ ಬಂಧ ರಹಿತನಾದ ದೇವಾಧಿದೇವನೇ ನೀನಿರುವಾಗ ಸಾಮಾನ್ಯ ಜೀವಿಗಳ ಹಾಗೆ ಅದೆಂತು ಹುಟ್ಟಿ ಬಲ್ಲೆ?"

ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್।
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥೬॥

ಭಾವ:— ನಾನು ಜನ್ಮರಹಿತನು ಅವ್ಯಯಾತ್ಮನು ಹಾಗು ಪ್ರಾಣಿಗಳ ನಿಯಾಮಕನು ಆಗಿದ್ದರೂ ನನ್ನ ಪ್ರಕೃತಿಯನ್ನು ಆಶ್ರಯಿಸಿ ನನ್ನ ಮಾಯೆಯಿಂದ ಅವತರಿಸುತ್ತೇನೆ.

ವಿವರಣೆ:— ಭಗವಂತ:- "ಧನಂಜಯ, ನಿಜವಾಗಿಯೂ ನಾನು ಅಜ, ಅವ್ಯಯ ಹಾಗು ಸರ್ವ ನಿಯಂತಾರ. ಅವಿಕೃತ ಪರಮ ವಸ್ತು. ಅವಿದ್ಯಾ ಅಸ್ಮಿತಾದಿ ಕ್ಲೇಶಗಳಿಲ್ಲದ, ಪುಣ್ಯ ಪಾಪ ಮಿಶ್ರ ಶುಭ ಅಶುಭ ಶುಭಾಶುಭ ಧರ್ಮ ಅಧರ್ಮ ಧರ್ಮಾಧರ್ಮ ಎಂಬ ವಿವಿಧ ವಾಸನೆಗಳ ಸೋಂಕಿಲ್ಲದ ಸರ್ವೇಶ್ವರ. ನಾನು ಈ ದೇಹವಲ್ಲ, ಈ ಮನ ಬುದ್ಧಿಗಳಲ್ಲ. ಎಲ್ಲ ತತ್ತ್ವಗಳಲ್ಲಿ ಓತಪ್ರೋತವಾಗಿ ತುಂಬಿದ ಅಖಂಡ ದೇವ. ಈ ಸ್ವರೂಪದಲ್ಲಿ ನಾನಂತು ದೇಹ ಧರಿಸಲಾರೆ ನಿಜ. ಆದರೆ, ನನ್ನದೇ ಆದ ಒಂದು ದಿವ್ಯ ಮಾಯಾ ಶಕ್ತಿ ಇದೆ; ನನ್ನ ಸಾನಿಧ್ಯದಲ್ಲಿ ಬೃಹತ್ ಸೃಷ್ಟಿಯನ್ನು ರಚಿಸಬಲ್ಲ ಪ್ರಕೃತಿ ಇದ್ದಾಳೆ. ಜ್ಞಾನ-ಬಲ-ಕ್ರಿಯಾ ಶಕ್ತ್ಯಾತ್ಮಕಳಾದ ಆಕೆಯ ಮೂಲಕ ನಾನು ನನ್ನ ಸ್ವರೂಪಕ್ಕೆ ತಿಲಮಾತ್ರವೂ ಬಾಧೆ ಬರದಂತೆ ಅವತಾರ ತಾಳುತ್ತೇನೆ. ಅದರರ್ಥ ಹುಟ್ಟುತ್ತೇನೆಂದಲ್ಲ, ಬೇರೆ ಬೇರೆ ದೇಹಗಳಲ್ಲಿ ಅಭಿವ್ಯಕ್ತನಾಗುತ್ತೇನೆ. ಹಾಗೆ ಅಭಿವ್ಯಕ್ತನಾದಾಗಲೂ ಆ ದೇಹಾದಿಗಳ ಬಾಧೆ ಮಾತ್ರ ನನಗಿಲ್ಲ."

(೧) ಮೊದಲು ಅನುಭವ, ಅದರಿಂದ ಸಂಸ್ಕಾರ, ನಂತರ ಸ್ಮೃತಿ. ಇದು ಕ್ರಮ. ಅನುಭವದ ಕ್ಷಣಬೇರೆ, ಸ್ಮೃತಿಯ ಕ್ಷಣ ಬೇರೆ. ಆ ಎರಡೂ ಕ್ಷಣಗಳಲ್ಲಿರುವ ವ್ಯಕ್ತಿಮಾತ್ರ ಒಂದೇ. ಉದಾ: ವೃದ್ಧನು ಬಾಲ್ಯದ ಘಟನೆಯನ್ನು ನೆನೆಸಿಕೊಳ್ಳುತ್ತಾನೆ. ಆ ಘಟನೆ ನಡೆದಾಗ ವೃದ್ಧಾವಸ್ಥೆ ಇಲ್ಲ; ಸ್ಮರಿಸಿಕೊಳ್ಳುವಾಗ ಬಾಲ್ಯಾವಸ್ಥೆಯಿಲ್ಲ. ಅವೆರಡರ ಮಧ್ಯ ಅನೇಕ ದಶವರುಷಗಳ ಅಂತರ. ಆ

ಎರಡೂ ಅವಸ್ಥೆಗಳಲ್ಲಿರುವ ಪಿಂಡ (ವ್ಯಕ್ತಿ) ಮಾತ್ರ ಒಂದೇ. ಆದ್ದರಿಂದ ಬಾಲ್ಯದ ನೆನಹು ಮುಪ್ಪಿನಲ್ಲಿ ಸಾಧ್ಯವಾಗಿದೆ. ಮೊದಲು ಅನುಭವಿಸಿದ ಜೀವನೇ ಅನುಭವದ ಸಂಸ್ಕಾರ ಹೊಂದುತ್ತಾನೆ; ಅವನೇ ಸ್ಮರಣೆ ಮಾಡುತ್ತಾನೆ.

ಅದೇ ರೀತಿ, ದೇಹಾಂತರದ ಸ್ಮರಣೆ. ಶ್ರೀಕೃಷ್ಣನು ಯಾವುದೋ ಪೂರ್ವ-ದೇಹದಲ್ಲಿದ್ದು ಸೂರ್ಯನಾರಾಯಣನಿಗೆ ಬೋಧಿಸಿದ. ಅವನೇ ಲಕ್ಷಾಂತರ ವರುಷಗಳು ಉರುಳಿದ ಬಳಿಕ ಆ ಹಳೆಯ ಜನ್ಮದ ಅನುಭವವನ್ನು ಸ್ಮರಿಸಿ ಅರ್ಜುನನಿಗೆ ಹೇಳಿದ. ಅಂದರೆ ದೇಹಗಳನೇಕ ಅಳಿದರೂ ಅವುಗಳಲ್ಲೆಲ್ಲ ಅಚ್ಯುತವಾಗಿ ನೆಲೆಸಿರುವ ಚೇತನಾವಿಶಿಷ್ಟ—ಮಹತ್ ಪಿಂಡ ಮಾತ್ರ ಅದ್ವಯ. ಆ ಮಹಾಪಿಂಡಸ್ಥ ಭಗವಂತನೇ ಮೊದಲು ಉಪದೇಶಿಸಿದ, ಕಾಲಾಂತರದಲ್ಲಿ ತಾನು ಹೇಳಿದ್ದ ಮಾತುಗಳನ್ನೇ ಮತ್ತೆ ಅರ್ಜುನನಿಗೆ ಪುನರಾವರ್ತನ ಮಾಡಿದ.

ಈ ಮಹತ್ ಪಿಂಡ ಯಾವುದು?

(೨) ನಿರ್ಮಿತ ವಸ್ತು ಕಾರ್ಯ. ನಿರ್ಮಿಸಿದ ಮೂಲ ವಸ್ತು ಕಾರಣ. ಕಾರಣವು ಆಧಾರ; ಕಾರ್ಯವು ಆಧೇಯ. ಕಾರ್ಯವು ತೋರಿ ಅಡಗುವದು; ಕಾರಣವು ಸ್ಥಿರ. ಉದಾ: ಆಭರಣವು ಕಾರ್ಯ; ಸುವರ್ಣವು ಕಾರಣವಸ್ತು. ಒಂದು ಆಭರಣ ಮುರಿದು ಮತ್ತೊಂದು ಆಭರಣ ಮಾಡಿದರೂ ಆ ಆಭರಣಗಳ ಆತ್ಮವಾದ ಸುವರ್ಣ ಮಾತ್ರ ಹಾಗೆಯೇ ಇರುವದು. ತರಂಗಗಳು ಎದ್ದು, ಅಡಗಿ, ಮತ್ತೆ ಎದ್ದರೂ ನೀರು ಮಾತ್ರ ಎರಡೂ ಬಗೆಯ ತರಂಗಗಳಿಗೆ ಏಕರೂಪ, ಆಶ್ರಯ ಹಾಗು ಆತ್ಮವಾಗಿದೆ. ಅದರಂತೆ, ಪಂಚಭೂತ ಪಂಚ ತನ್ಮಾತ್ರೆ ಏಕಾದಶ ಇಂದ್ರಿಯಗಳು ಅಹಂಕಾರ ಇವು ಕಾರ್ಯ. ದೇಹಗಳು ಈ ಕಾರ್ಯಗಳ ವಿವಿಧ ಪುಂಜಗಳು. ಇವೆಲ್ಲವುಗಳಿಗೆ ಮಹಾಕಾರಣ ವಸ್ತುವೊಂದಿದೆ. ಅದೇ ಪ್ರಕೃತಿಯ ಎರಡನೆಯ ರೂಪವಾದ 'ಮಹತ್ತತ್ತ್ವ'. ಭೂಮ್ಯಾದಿ ಮನದವರೆಗಿನ ತತ್ತ್ವಗಳು ಅಶುದ್ಧ; ಅಹಂಕಾರವು ಸಮ್ಮಿಶ್ರ; ಮಹತ್ತತ್ತ್ವವೇ ಶುದ್ಧ! ಶುದ್ಧ ಮಹತ್ ಸಾಗರದಲ್ಲಿ ಅಶುದ್ಧ ಹಾಗು ಮಿಶ್ರ ತತ್ತ್ವಗಳು ತೆರೆಯಾಗಿ ತೇಲಿವೆ; ಅವು ಕೆಲ ಕಾಲ ಬಾಳಿ ಅಳಿಯುತ್ತವೆ; ಮತ್ತೆ ಹೊಸ ತತ್ತ್ವಗಳು ತೋರಿಬರುತ್ತವೆ. ಲಕ್ಷಾಂತರ, ಕೋಟ್ಯಂತರ ದೇಹಗಳು ಆಗಾಗ ಕಾಣಬರುವ ಗುರುಳೆಗಳು. ಒಂದು ಕ್ಷಣ ಕಂಡು, ಒಂದು ಕ್ಷಣ ಬೆಳೆದು, ಮೂರನೆಯ ಕ್ಷಣ ಅಡಗುತ್ತವೆ. ಆ ಮಹತ್ತು ಮಾತ್ರ ಸುಸ್ಥಿರಾಬ್ಧಿ. ಆಭರಣರೂಪ ಚರಾಚರ ವಿಶ್ವಗಳ ಆಧಾರ ಸ್ವರ್ಣ! ಅದರಲ್ಲಿ ಪುರುಷ ಚೈತನ್ಯದ ಸ್ಫುರಣ ಮಾತ್ರ ಸದಾ ಇದೆ. ಈ ಚೇತನಾಯುಕ್ತ ಮಹತ್ತೇ "ಮಹತ್ ಪಿಂಡ" ! ಶ್ರೀಕೃಷ್ಣನು ಈ ಸ್ಥಾನದಲ್ಲಿ ನಿಂತು ಮಾತನಾಡುತ್ತಿದ್ದಾನೆ. ಆದ್ದರಿಂದ ಎಲ್ಲ ಜನ್ಮಗಳ, ದೇಹಗಳ ಸ್ಮರಣೆ ಇದೆ. ಅರ್ಜುನನಿಂದು ವಿಶಿಷ್ಟ ದೇಹದಲ್ಲಿ ನಿಂತು ಬಾಳುತ್ತಿರುವದರಿಂದ ಅವನಿಗೆ

ಪೂರ್ವಸ್ಮರಣವಿಲ್ಲ,

೩) ಒಂದು ಸಮಸ್ಯೆ:- ಪುನರ್ಜನ್ಮಕ್ಕೆ ಲಿಂಗ ದೇಹ ಅವಶ್ಯ. ಮಹತ್ತತ್ತ್ವ ವೇರಿದ ಮಹಾನುಭಾವನ ಲಿಂಗ ದೇಹ ಮಾತ್ರ ಮಹತ್ತಿನಲ್ಲಿ ಅಡಗಿದೆ. ಆದ್ದರಿಂದ ಅವನಿಗೆ ಪುನರ್ಜನ್ಮವಿಲ್ಲ. ಶ್ರೀ ಕೃಷ್ಣನೂ ಅಂಥ ಒಬ್ಬ ಮಹತ್ತತ್ತ್ವಸ್ಥ ಮಹಾತ್ಮ. ಹೀಗಿದ್ದೂ ಅನೇಕ ಜನ್ಮಗಳನ್ನು ಹೇಗೆ ಪಡೆದ? ಸಮಾಧಾನ: ಮಹಾತ್ಮರಲ್ಲಿ ಎರಡು ವಿಧ; ಅನವತಾರಿ ಮಹಾತ್ಮರು ಹಾಗು ಅವತಾರಿ ಮಹಾತ್ಮರು. ಭೌತ ಹಾಗು ಮನೋ ಮಂಡಲ ದಾಟಿ ಮಹತ್ತತ್ತ್ವವನ್ನೇರಿ ದೇವನಲ್ಲಿ ಬಯಲಾಗುವವರು ಮತ್ತೆಂದೂ ಮನಸ್ಸು ಹಾಗು ದೇಹಸ್ಥರಗಳಿಗೆ ಇಳಿದು ಬಾರದ್ದರಿಂದ ಅನವತಾರಿ ಮಹಾತ್ಮರೆನಿಸುತ್ತಾರೆ. ಲೋಕ ಕಲ್ಯಾಣದ ಅತುಲ ಇಚ್ಛೆ ಇಟ್ಟುಕೊಂಡೇ ಸಾಧನೆ ಮಾಡಿ, ಪರಮ ಸೂಕ್ಷ್ಮವಾದ ಮಹತ್ತನ್ನೇರಿ, ಆತ್ಮಾನುಭೂತಿ ಪಡೆದವರು ಲೋಕ ಕಲ್ಯಾಣಪರ ಸಂಸ್ಕಾರದಿಂದಾಗಿ ಮತ್ತೆ ಈ ಮಾನಸಿಕ ಮತ್ತು ದೈಹಿಕ ಮಂಡಲಗಳಿಗೆ ಅವತರಿಸಿ ಬರುವದರಿಂದ ಅವರಿಗೆ ಅವತಾರಿ ಮಹಾತ್ಮರೆಂದು ಹೆಸರು. ಅವರ ಲಿಂಗದೇಹ ಬಹುಕಾಲ ಬಾಳುತ್ತದೆ. ಜನರ ಹಿತಕ್ಕಾಗಿ ಅನೇಕ ಜನ್ಮಗಳನ್ನು ತೊಡುತ್ತಾರೆ. ಶ್ರೀ ಕೃಷ್ಣ ಪರಮಾತ್ಮನು ಅವತಾರಿ ಮಹಾತ್ಮನು ಆದುದರಿಂದಲೇ ಅನೇಕ ಜನ್ಮಗಳನ್ನು ಪಡೆದೆ ಎಂದು ಹೇಳಿದ್ದಾನೆ.

೪) ದೇವ ಲೀಲೆ:– ಮಾಯಾವಿಯು ಸ್ವಸ್ಥಾನದಿಂದ ಕದಲದೆ ಅದೃಶ್ಯನಾಗುತ್ತಾನೆ. ತನ್ನ ಮಾಯಾಶಕ್ತಿಯಿಂದ ದೂರದಲ್ಲಿ ತನ್ನಂಥ ಇನ್ನೊಬ್ಬ ಮಾಯಾವಿಯನ್ನು ಸೃಷ್ಟಿಸುತ್ತಾನೆ. ಹಾಗು ಆ ಎರಡನೆಯ ಮಾಯಾವಿಯು ಸೂತ್ರವೊಂದನ್ನು ಹಿಡಿದು ಆಕಾಶಕ್ಕೇರಿ ಹೋದಂತೆ ತೋರಿಸುತ್ತಾನೆ. ಕೊನೆಗೆ ಎಲ್ಲ ಮರೆಯಾದ ಬಳಿಕ ತಾನೊಬ್ಬನೇ ನಿಂತಲ್ಲಿಯೇ ವ್ಯಕ್ತನಾಗುತ್ತಾನೆ. ಅದೇ ರೀತಿ, ಪುರುಷೋತ್ತಮನಾದ ಭಗವಂತನು ತನ್ನ ಮಹಾಮಾಯಾ ಶಕ್ತಿಯಿಂದ ತಾನು ಅದೃಶ್ಯನಾಗಿ, ವ್ಯಷ್ಟಿ ಸಮಷ್ಟಿಗಳ ನಿರ್ಮಿಸಿ, ಅವುಗಳಲ್ಲಿ ಯಾವುದೋ ಒಂದು ದೇಹದೊಳು ತಾನೇ ಪ್ರವೇಶಿಸಿ ಬಾಲ್ಯಾದಿ ಅವಸ್ಥೆ ಹಾಗು ಜನ್ಮಾಂತರ ದೇಹಗಳನ್ನೇರುತ್ತಿರುವಂತೆ ತೋರಿಸುತ್ತಾನೆ. ಇದು ಲೀಲೆ. ಲೀಲೆ ಸಾಕಾದಾಗ, ಜೀವ ಈಶ್ವರ ಜಡ ದೇಹ ವಿಶ್ವಗಳನ್ನು ಅಡಗಿಸಿ ತನ್ನಲ್ಲಿ ತಾನೇ ಪ್ರಕಾಶಿಸುತ್ತಾನೆ! ಆದುಗೆಲ್ಲ ಮಾಯೆ–ಮಾಟ! ಪರಮಾತ್ಮನು ಇಲ್ಲದಂತೆ ಆಗಲೂ ಇಲ್ಲ, ಜಗತ್ತಿನಲ್ಲಿ ಅವತರಿಸಿ ತೋರಲೂ ಇಲ್ಲ; ಅವನಿಗೆ ಅನ್ಯವಾಗಿ ಜಗತ್ತು ಅಸ್ತಿತ್ವ ಪಡೆಯಲೂ ಇಲ್ಲ! ಅವನು ಅವನೇ!

ಸಂಬಂಧ:– ಅರ್ಜುನ:– " ಭಗವನ್, ನೀನು ಪುರುಷೋತ್ತಮ; ಪ್ರಕೃತಿಯು ನಿನ್ನದೇ ಆದ ಮಹಾಮಾಯೆ. ಆಕೆಯ ಮೂಲಕ ಪ್ರಕಟವಾಗುವಿಯು

ಎರಡೂ ಅವಸ್ಥೆಗಳಲ್ಲಿರುವ ಪಿಂಡ (ವ್ಯಕ್ತಿ) ಮಾತ್ರ ಒಂದೇ. ಆದ್ದರಿಂದ ಬಾಲ್ಯದ ನೆನಹು ಮುಪ್ಪಿನಲ್ಲಿ ಸಾಧ್ಯವಾಗಿದೆ. ಮೊದಲು ಅನುಭವಿಸಿದ ಜೀವನೇ ಅನುಭವದ ಸಂಸ್ಕಾರ ಹೊಂದುತ್ತಾನೆ; ಅವನೇ ಸ್ಮರಣೆ ಮಾಡುತ್ತಾನೆ.

ಅದೇ ರೀತಿ, ದೇಹಾಂತರದ ಸ್ಮರಣೆ. ಶ್ರೀಕೃಷ್ಣನು ಯಾವುದೋ ಪೂರ್ವ-ದೇಹದಲ್ಲಿದ್ದು ಸೂರ್ಯನಾರಾಯಣನಿಗೆ ಬೋಧಿಸಿದ. ಅವನೇ ಲಕ್ಷಾಂತರ ವರುಷಗಳು ಉರುಳಿದ ಬಳಿಕ ಆ ಹಳೆಯ ಜನ್ಮದ ಅನುಭವವನ್ನು ಸ್ಮರಿಸಿ ಅರ್ಜುನನಿಗೆ ಹೇಳಿದ. ಅಂದರೆ ದೇಹಗಳನೇಕ ಅಳಿದರೂ ಅವುಗಳಲ್ಲೆಲ್ಲ ಅಚ್ಯುತವಾಗಿ ನೆಲೆಸಿರುವ ಚೇತನಾವಿಶಿಷ್ಟ—ಮಹತ್ ಪಿಂಡ ಮಾತ್ರ ಅದ್ವಯ. ಆ ಮಹಾಪಿಂಡಸ್ಥ ಭಗವಂತನೇ ಮೊದಲು ಉಪದೇಶಿಸಿದ, ಕಾಲಾಂತರದಲ್ಲಿ ತಾನು ಹೇಳಿದ್ದ ಮಾತುಗಳನ್ನೇ ಮತ್ತೆ ಅರ್ಜುನನಿಗೆ ಪುನರಾವರ್ತನ ಮಾಡಿದ.

ಈ ಮಹತ್ ಪಿಂಡ ಯಾವುದು?

(೨) ನಿರ್ಮಿತ ವಸ್ತು ಕಾರ್ಯ. ನಿರ್ಮಿಸಿದ ಮೂಲ ವಸ್ತು ಕಾರಣ. ಕಾರಣವು ಆಧಾರ; ಕಾರ್ಯವು ಆಧೇಯ. ಕಾರ್ಯವು ತೋರಿ ಅಡಗುವದು; ಕಾರಣವು ಸ್ಥಿರ. ಉದಾ: ಆಭರಣವು ಕಾರ್ಯ; ಸುವರ್ಣವು ಕಾರಣವಸ್ತು. ಒಂದು ಆಭರಣ ಮುರಿದು ಮತ್ತೊಂದು ಆಭರಣ ಮಾಡಿದರೂ ಆ ಆಭರಣಗಳ ಆತ್ಮವಾದ ಸುವರ್ಣ ಮಾತ್ರ ಹಾಗೆಯೇ ಇರುವದು. ತರಂಗಗಳು ಎದ್ದು, ಅಡಗಿ, ಮತ್ತೆ ಎದ್ದರೂ ನೀರು ಮಾತ್ರ ಎರಡೂ ಬಗೆಯ ತರಂಗಗಳಿಗೆ ಏಕರೂಪ, ಆಶ್ರಯ ಹಾಗು ಆತ್ಮವಾಗಿದೆ. ಅದರಂತೆ, ಪಂಚಭೂತ ಪಂಚ ತನ್ಮಾತ್ರೆ ಏಕಾದಶ ಇಂದ್ರಿಯಗಳು ಅಹಂಕಾರ ಇವು ಕಾರ್ಯ. ದೇಹಗಳು ಈ ಕಾರ್ಯಗಳ ವಿವಿಧ ಪುಂಜಗಳು. ಇವೆಲ್ಲವುಗಳಿಗೆ ಮಹಾಕಾರಣ ವಸ್ತುವೊಂದಿದೆ. ಅದೇ ಪ್ರಕೃತಿಯ ಎರಡನೆಯ ರೂಪವಾದ 'ಮಹತ್ತತ್ತ್ವ'. ಭೂಮ್ಯಾದಿ ಮನದವರೆಗಿನ ತತ್ತ್ವಗಳು ಅಶುದ್ಧ; ಅಹಂಕಾರವು ಸಮ್ಮಿಶ್ರ; ಮಹತ್ತತ್ತ್ವವೇ ಶುದ್ಧ! ಶುದ್ಧ ಮಹತ್ ಸಾಗರದಲ್ಲಿ ಅಶುದ್ಧ ಹಾಗು ಮಿಶ್ರ ತತ್ತ್ವಗಳು ತೆರೆಯಾಗಿ ತೇಲಿವೆ; ಅವು ಕೆಲ ಕಾಲ ಬಾಳಿ ಅಳಿಯುತ್ತವೆ; ಮತ್ತೆ ಹೊಸ ತತ್ತ್ವಗಳು ತೋರಿಬರುತ್ತವೆ. ಲಕ್ಷಾಂತರ, ಕೋಟ್ಯಂತರ ದೇಹಗಳು ಆಗಾಗ ಕಾಣಬರುವ ಗುರುಳೆಗಳು. ಒಂದು ಕ್ಷಣ ಕಂಡು, ಒಂದು ಕ್ಷಣ ಬೆಳೆದು, ಮೂರನೆಯ ಕ್ಷಣ ಅಡಗುತ್ತವೆ. ಆ ಮಹತ್ತು ಮಾತ್ರ ಸುಸ್ಥಿರಾಬ್ಧಿ. ಆಭರಣರೂಪ ಚರಾಚರ ವಿಶ್ವಗಳ ಆಧಾರ ಸ್ವರ್ಣ! ಅದರಲ್ಲಿ ಪುರುಷ ಚೈತನ್ಯದ ಸ್ಫುರಣ ಮಾತ್ರ ಸದಾ ಇದೆ. ಈ ಚೇತನಾಯುಕ್ತ ಮಹತ್ತೇ "ಮಹತ್ ಪಿಂಡ"! ಶ್ರೀಕೃಷ್ಣನು ಈ ಸ್ಥಾನದಲ್ಲಿ ನಿಂತು ಮಾತನಾಡುತ್ತಿದ್ದಾನೆ. ಆದ್ದರಿಂದ ಎಲ್ಲ ಜನ್ಮಗಳ, ದೇಹಗಳ ಸ್ಮರಣೆ ಇದೆ. ಅರ್ಜುನನಾದರೋ ವಿಶಿಷ್ಟ ದೇಹದಲ್ಲಿ ನಿಂತು ಬಾಳುತ್ತಿರುವದರಿಂದ ಅವನಿಗೆ

ಪೂರ್ವಸ್ಮರಣವಿಲ್ಲ,

೩) ಒಂದು ಸಮಸ್ಯೆ :- ಪುನರ್ಜನ್ಮಕ್ಕೆ ಲಿಂಗ ದೇಹ ಅವಶ್ಯ. ಮಹತ್ತತ್ತ್ವ ವೇರಿದ ಮಹಾನುಭಾವನ ಲಿಂಗ ದೇಹ ಮಾತ್ರ ಮಹತ್ತಿನಲ್ಲಿ ಅಡಗಿದೆ. ಆದ್ದರಿಂದ ಅವನಿಗೆ ಪುನರ್ಜನ್ಮವಿಲ್ಲ. ಶ್ರೀ ಕೃಷ್ಣನೂ ಅಂಥ ಒಬ್ಬ ಮಹತ್ತತ್ತ್ವಸ್ಥ ಮಹಾತ್ಮ. ಹೀಗಿದ್ದೂ ಅನೇಕ ಜನ್ಮಗಳನ್ನು ಹೇಗೆ ಪಡೆದ? ಸಮಾಧಾನ: ಮಹಾತ್ಮರಲ್ಲಿ ಎರಡು ವಿಧ; ಅನವತಾರಿ ಮಹಾತ್ಮರು ಹಾಗು ಅವತಾರಿ ಮಹಾತ್ಮರು. ಭೌತ ಹಾಗು ಮನೋ ಮಂಡಲ ದಾಟಿ ಮಹತ್ತತ್ತ್ವವನ್ನೇರಿ ದೇವನಲ್ಲಿ ಬಯಲಾಗುವವರು ಮತ್ತೆಂದೂ ಮನಸ್ಸು ಹಾಗು ದೇಹಸ್ತರಗಳಿಗೆ ಇಳಿದು ಬಾರದ್ದರಿಂದ ಅನವತಾರಿ ಮಹಾತ್ಮರೆನಿಸುತ್ತಾರೆ. ಲೋಕ ಕಲ್ಯಾಣದ ಅತುಲ ಇಚ್ಛೆ ಇಟ್ಟುಕೊಂಡೇ ಸಾಧನೆ ಮಾಡಿ, ಪರಮ ಸೂಕ್ಷ್ಮವಾದ ಮಹತ್ತನ್ನೇರಿ, ಆತ್ಮಾನುಭೂತಿ ಪಡೆದವರು ಲೋಕ ಕಲ್ಯಾಣಪರ ಸಂಸ್ಕಾರದಿಂದಾಗಿ ಮತ್ತೆ ಈ ಮಾನಸಿಕ ಮತ್ತು ದೈಹಿಕ ಮಂಡಲಗಳಿಗೆ ಅವತರಿಸಿ ಬರುವದರಿಂದ ಅವರಿಗೆ ಅವತಾರಿ ಮಹಾತ್ಮರೆಂದು ಹೆಸರು. ಅವರ ಲಿಂಗದೇಹ ಬಹುಕಾಲ ಬಾಳುತ್ತದೆ. ಜನರ ಹಿತಕ್ಕಾಗಿ ಅನೇಕ ಜನ್ಮಗಳನ್ನು ತೊಡುತ್ತಾರೆ. ಶ್ರೀ ಕೃಷ್ಣ ಪರಮಾತ್ಮನು ಅವತಾರಿ ಮಹಾತ್ಮನು ಆದುದರಿಂದಲೇ ಅನೇಕ ಜನ್ಮಗಳನ್ನು ಪಡೆದೆ ಎಂದು ಹೇಳಿದ್ದಾನೆ.

೪) ದೇವ ಲೀಲೆ:– ಮಾಯಾವಿಯು ಸ್ವಸ್ಥಾನದಿಂದ ಕದಲದೆ ಅದೃಶ್ಯನಾಗುತ್ತಾನೆ. ತನ್ನ ಮಾಯಾಶಕ್ತಿಯಿಂದ ದೂರದಲ್ಲಿ ತನ್ನಂಥ ಇನ್ನೊಬ್ಬ ಮಾಯಾವಿಯನ್ನು ಸೃಷ್ಟಿಸುತ್ತಾನೆ. ಹಾಗು ಆ ಎರಡನೆಯ ಮಾಯಾವಿಯು ಸೂತ್ರವೊಂದನ್ನು ಹಿಡಿದು ಆಕಾಶಕ್ಕೇರಿ ಹೋದಂತೆ ತೋರಿಸುತ್ತಾನೆ. ಕೊನೆಗೆ ಎಲ್ಲ ಮರೆಯಾದ ಬಳಿಕ ತಾನೊಬ್ಬನೇ ನಿಂತಲ್ಲಿಯೇ ವ್ಯಕ್ತನಾಗುತ್ತಾನೆ. ಅದೇ ರೀತಿ, ಪುರುಷೋತ್ತಮನಾದ ಭಗವಂತನು ತನ್ನ ಮಹಾಮಾಯಾ ಶಕ್ತಿಯಿಂದ ತಾನು ಅದೃಶ್ಯನಾಗಿ, ವ್ಯಷ್ಟಿ ಸಮಷ್ಟಿಗಳ ನಿರ್ಮಿಸಿ, ಅವುಗಳಲ್ಲಿ ಯಾವುದೋ ಒಂದು ದೇಹದೊಳು ತಾನೇ ಪ್ರವೇಶಿಸಿ ಬಾಲ್ಯಾದಿ ಅವಸ್ಥೆ ಹಾಗು ಜನ್ಮಾಂತರ ದೇಹಗಳನ್ನೇರುತ್ತಿರುವಂತೆ ತೋರಿಸುತ್ತಾನೆ. ಇದು ಲೀಲೆ. ಲೀಲೆ ಸಾಕಾದಾಗ, ಜೀವ ಈಶ್ವರ ಜಡ ದೇಹ ವಿಶ್ವಗಳನ್ನು ಅಡಗಿಸಿ ತನ್ನಲ್ಲಿ ತಾನೇ ಪ್ರಕಾಶಿಸುತ್ತಾನೆ! ಅದುಗೆಲ್ಲ ಮಾಯೆ–ಮಾಟ! ಪರಮಾತ್ಮನು ಇಲ್ಲದಂತೆ ಆಗಲೂ ಇಲ್ಲ, ಜಗತ್ತಿನಲ್ಲಿ ಅವತರಿಸಿ ತೋರಲೂ ಇಲ್ಲ; ಅವನಿಗೆ ಅನ್ಯವಾಗಿ ಜಗತ್ತು ಅಸ್ತಿತ್ವ ಪಡೆಯಲೂ ಇಲ್ಲ! ಅವನು ಅವನೇ!

ಸಂಬಂಧ:– ಅರ್ಜುನ:– " ಭಗವನ್, ನೀನು ಪುರುಷೋತ್ತಮ; ಪ್ರಕೃತಿಯು ನಿನ್ನದೇ ಆದ ಮಹಾಮಾಯೆ. ಆಕೆಯ ಮೂಲಕ ಪ್ರಕಟವಾಗುವಿಯು

ಲ್ಲವೆ ? ಏಕೆ? ಯಾವಾಗ ? "

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥೭॥

ಭಾವ:- ಯಾವ ಯಾವ ಕಾಲಕ್ಕೆ ಧರ್ಮದ ಅವನತಿಯೂ ಅಧರ್ಮದ ಉನ್ನತಿಯೂ ಆಗುತ್ತದೆಯೋ ಆಗ ನಾನು ನನ್ನನ್ನು ಅವತರಿಸಿಕೊಳ್ಳುತ್ತೇನೆ.

ವಿವರಣೆ:- ಪ್ರವೃತ್ತಿಗಳು ಎರಡು:– ದುಷ್ಟ, ಶಿಷ್ಟ. ದುಷ್ಟ ಪ್ರವೃತ್ತಿಯ ಮನುಷ್ಯ ಪ್ರವರ್ತಕ-ಕರ್ಮಮಾಡಿ ಭೋಗ ಪಡೆಯುತ್ತಾನೆ. ಕೊನೆಗೆ ದುಃಖಿಯಾಗುತ್ತಾನೆ. ಶಿಷ್ಟ ಪ್ರವೃತ್ತಿಯ ಮನುಷ್ಯ ನಿವರ್ತಕ-ಕರ್ಮಮಾಡಿ ಅಪವರ್ಗಗಳಿಸುತ್ತಾನೆ. ಚಿರಂತನ ಶಾಂತಿ ಅನುಭವಿಸುತ್ತಾನೆ, ಆದರೆ ಲೋಕದ ಬಹು ಸಂಖ್ಯಜನ ಭೋಗಾಭಿಲಾಷಿಗಳು. ಎಲ್ಲೋ ಕೆಲವು ವ್ಯಕ್ತಿಗಳು ಮುಕ್ತಿ ಮಾರ್ಗದಲ್ಲಿ ನಡೆವವರು.

ಜಗದ ತುಂಬ ವಿಷಯ ವಿಲಾಸ ವಿಕಟವಾಗಿ ನರ್ತಿಸುತ್ತಿದೆ. ಕಾಮ ಕ್ರೋಧ ಪರಾಯಣರಾದ ಜನರು ಅನ್ಯಾಯದಿಂದ ಅರ್ಥ ಸಂಚಯ ಮಾಡುತ್ತಿದ್ದಾರೆ. ಅತ್ಯಾಚಾರ ಶೋಷಣೆಗಳಲ್ಲಿ ಮಗ್ನರಾಗಿದ್ದಾರೆ. ದಯೆ ದಾಕ್ಷಿಣ್ಯ ಸತ್ಯ ಪ್ರೇಮ ಮರೆತಿವೆ.

ಮನೆಯಲ್ಲಿ, ಮಗು ಹುಟ್ಟಿದ ಕೆಲದಿನಗಳಲ್ಲಿಯೇ ತಾಯಿ ಭೋಗದ ಮಾತು ಕಲಿಸಲು ಪ್ರಾರಂಭಿಸುತ್ತಾಳೆ. ಶಾಲೆಯಲ್ಲಿ, ಅಧ್ಯಾಪಕರು ವಿಷಯಗಳ ವರ್ಣನೆ ಮಾಡುತ್ತಾರೆ. ಸಮಾಜದಲ್ಲಿ, ಗೆಳೆಯರು ಜನರು ವಿಲಾಸೀ ಜೀವನಕ್ಕೆ ಪ್ರಚೋದನೆ ನೀಡುತ್ತಾರೆ. ವಿದ್ಯೆಗಾಗಿ, ದೇಶ ಸೇವೆಗಾಗಿ, ಆತ್ಮಜ್ಞಾನಕ್ಕಾಗಿ ಬಾಳ ವ್ಯಯಿಸಬೇಕೆಂಬ ಕಲ್ಪನೆ ಕೂಡ ಸುಳಿಯದು. ಪ್ರಪಂಚದ ಕ್ಷುದ್ರ ವ್ಯವಹಾರಗಳೇ ಪರಮಾರ್ಥವಾಗಿ ಕಾಣುತ್ತಿವೆ. ಆದುದರಿಂದಲೇ ಶ್ರೀಕೃಷ್ಣ ನುಡಿದ "ಕಶ್ಚಿನ್ಮಾಂ ವೇತ್ತಿ"; ಶಂಕರಾಚಾರ್ಯರು ನುಡಿದರು "ಪರೇ ಬ್ರಹ್ಮಣಿ ಕೋಽಪಿ ನ ಲಗ್ನಃ" 'ದೇವನನ್ನು ಅರಿಯುವವ ಎಲ್ಲೋ ಒಬ್ಬ.' 'ಪರಬ್ರಹ್ಮದಲ್ಲಿ ಯಾರೂ ಮಗ್ನರಿಲ್ಲ'. ಸಾಮಾನ್ಯವಾಗಿ ಲೋಕದ ಜನರೆಲ್ಲ ಬಾಲಕರಿದ್ದಾಗ ಆಟದಲ್ಲಿ ಮುಳುಗುತ್ತಾರೆ; ತಾರುಣ್ಯ ಬಂದಾಗ ತರುಣಿಯರಲ್ಲಿ ರಕ್ತರಾಗುತ್ತಾರೆ; ಮುಪ್ಪಿನಲ್ಲಿ ಚಿಂತಾಚಿತೆಯಲ್ಲಿ ಬೇಯುತ್ತಾರೆ. ಹಳೆಯದಾದಂತೆ ಹುಣಿಸೆಯ ಹುಳಿ ಹೆಚ್ಚುತ್ತದೆ. ಹಾಗೆ, ಮೈ ಬಗ್ಗಿಸಿದ ಮುಪ್ಪು ತಲೆಯನೇರಿದಂತೆ ಒಳಗಿನ ವ್ಯಾಮೋಹ ನೂರುಪಾಲು ಗಟ್ಟಿಗೊಳ್ಳುತ್ತದೆ. ಮಕ್ಕಳು ದೊಡ್ಡವರಾಗಿ ಮನೆಯ ವ್ಯವಹಾರಗಳನ್ನು ತಮ್ಮ ಕೈಗೆ ತೆಗೆದುಕೊಂಡು ಮುಪ್ಪಿನ ಮುದುಕನನ್ನು ಹೊರದಬ್ಬಿದರೂ ಮನೆ ಬಿಟ್ಟು ಒಂದಿಂಚು ಹೊರಹೋಗಲಾರ. ಅವನ ಪ್ರಾಣವೆಲ್ಲ ಮನೆಯಲ್ಲಿಯೇ ನೆಲೆಸಿದೆ.

ಪ್ರವೃತ್ತಿ ಪ್ರವಾಹ ಬರೀ ಸಾಮಾನ್ಯರನ್ನು ಕಂಗೆಡಿಸಿದೆ ಎಂದಲ್ಲ ಅವತಾರಿಗಳೂ ಅದರ ಸೆಳವಿಗೆ ಸಿಕ್ಕಿದ್ದಾರೆ. ರಾಮ ಪರಶುರಾಮರು ಒಬ್ಬನೇ ವಿಷ್ಣುವಿನ ಅವತಾರಿಗಳು. ರಾಮನಿಗೆ ಕ್ಷತ್ರಿಯ ಕುಲದ ಮೋಹ. ಪರಶುರಾಮನಿಗೆ ಬ್ರಾಹ್ಮಣ ಕುಲದ ಅಭಿಮಾನ! ತಮ್ಮ ತಮ್ಮ ಕುಲದ ಮಾನ–ಪ್ರತಿಷ್ಠೆ ಎಲ್ಲಿ ಕಡಿಮೆಯಾದೀತಲ್ಲ ಎಂಬ ಎದೆಗುದಿ ಪಡುವ ಇಬ್ಬರೂ ಪರಸ್ಪರರನ್ನು ದ್ವೇಷಿಸಿದರು. ಕಾಲ್ಕೆದರಿ ಕಾಳಗಕ್ಕಿಳಿದರು.

ಇನ್ನು ದೇವತೆಗಳ ಕಥೆ. ಅವರು ಭೋಗದ ದಾಸರು. ಅವರ ಭೋಗಪರ ವ್ಯವಹಾರಗಳು ಅತಿ ಹೇಯ. ಜಗತ್ಪಾಲಕರಾದ ದೇವರ್ಕಳೇ ಮಾನವರ ಪಾತಿವ್ರತ್ಯ ಹಾಳು ಮಾಡಲು ಬಂದರು. ಮನೆ ಊರು ಬಿಟ್ಟು, ಎಲೆ ತಿಂದು ಘೋರ ತಪಮಾಡಿದ ಯೋಗಿಗಳ ತಪ ಕೆಡಿಸಿದರು. ದೇವತೆಗಳೆನ್ನುವವರೇ ಸತ್ವಭಂಗ ಮಾಡುವ ಪಣತೊಟ್ಟಾಗ ಮಾನವರ ಗತಿಯೇನಾದೀತು? ಒಳ್ಳೆಯ ಗುಣವುಳ್ಳ ಜನತೆಗೆ ಪ್ರೋತ್ಸಾಹವೀಯುವವರೇ ಇಲ್ಲ. ಜಗಕ್ಕೆ ಉಪದೇಶ ನೀಡಿ ಸತ್ಯ ಮಾರ್ಗದಲ್ಲಿ ಕರೆದುಕೊಂಡು ಹೋಗಬೇಕಾದ ಗುರುಗಳು ಒಂದೊಂದು ವಿಧ ವಿಲಾಸಕ್ಕೆ ತಾವೇ ಮನಸೋತರು. ಜನರ ಮನೋನಿರ್ಮಾಲ್ಯ ಬೆಳೆಸಬೇಕಾದ ಅವರು ತಮ್ಮ ತಮ್ಮ ಸಂಪ್ರದಾಯಗಳ ಪ್ರತಿಷ್ಠಾಪನೆಗೆ ಹೆಣಗುತ್ತಿದ್ದಾರೆ. ಮಾನವ ಮಾತ್ರದಲ್ಲಿ ಭಾವೈಕ್ಯ ಬಂಧುತ್ವ ಶಾಂತಿಗಳನ್ನು ಬಿತ್ತರಿಸಬೇಕಾದ ಅವರು ತಮ್ಮ ತಮ್ಮ ಮತ ಧರ್ಮಗಳ ಹೆಸರಿನಲ್ಲಿ ಪಕ್ಷ ಪಂಗಡ ಕಟ್ಟುತ್ತಿದ್ದಾರೆ!

ಹೀಗೆ ದೇಶವೆಲ್ಲ ಅಧಃಪತನ ಹೊಂದುತ್ತಿರುವಾಗ, ಮಾನವ ಕುಲಕೋಟಿಯೇ ನೀತಿ ಶಿಖರದಿಂದ ಉರುಳಿ ಬೀಳುತ್ತಿರುವಾಗ ದೇವರಲ್ಲದೆ ಇನ್ನಾರು ಕಾಪಾಡಬೇಕು? ಆದುದರಿಂದಲೇ ಭಗವಂತನು ಪ್ರಸ್ತುತ ಮಂತ್ರವನ್ನು ನುಡಿದ. ಅಧರ್ಮ, ಅತ್ಯಾಚಾರ, ಅನ್ಯಾಯ ಸುಳಿಗಳಲ್ಲಿ ಸಿಕ್ಕು ನರಳುವ ಮಾನವರನ್ನು ಸಮಯೋಚಿತವಾಗಿ ಕಾಪಾಡುವೆ ಎಂದು ಪ್ರತಿಜ್ಞೆ ಮಾಡಿದ. ಭೋಗಮುಖಿ ಪ್ರವೃತ್ತಿಯನ್ನು ತಡೆದು ಆತ್ಮಮುಖಿಗೊಳಿಸುವದಾಗಿ ಮಾತುಕೊಟ್ಟ!

**ಭಗವಂತ:**– " ಧನಂಜಯ, ನಾನು ಕರುಣಾಮೂರ್ತಿ. ಜೀವಿಗಳು, ವಿಮಲ ಆತ್ಮಜ್ಞಾನಿಗಳಾಗಬೇಕು, ಪ್ರಕೃತಿ ಬಂಧನದಿಂದ ಪಾರಾಗಿ ತನ್ನ ಅನಂತ ಅರಿವಿನಲ್ಲಿ ಸಾಮರಸ್ಯ ಹೊಂದಬೇಕು ಎಂಬುದು ನನ್ನ ಮನೀಷೆ. ಭೂಮಂಡಲದ ತುಂಬೆಲ್ಲ ಧರ್ಮ ಸೌರಭ ಹರಡಬೇಕು, ವಿಶ್ವಪ್ರೇಮ, ಅಹಿಂಸಾ, ಶಾಂತಿ, ಸೇವಾಭಾವ, ಕ್ಷಮೆ, ವಿಷಯ ವಿರಾಗಗಳು ಮಾನವನ ಹೃದಯ ಮಂದಿರದಲ್ಲಿ ಪ್ರತಿಷ್ಠಾಪನಗೊಳ್ಳಬೇಕು ಎನ್ನುವದು ನನ್ನ ಹಿರಿದಾದ ಬಯಕೆ. ಆದುದರಿಂದ, ಯಾವಾಗ ಜೀವರು (ಮಾನವರು) ನನ್ನ ಮನೀಷೆಯ ಪರಿವೆಯಿಲ್ಲದೆ ಧರ್ಮ, ಶಾಂತಿ, ಅಹಿಂಸಾ ಪಥದಿಂದ ಭ್ರಷ್ಟರಾಗಿ ಅಜ್ಞಾನ-ಅಧರ್ಮ-ಗೊಂಡಾರಣ್ಯದಲ್ಲಿ

ವಿಷಯಗಳನ್ನು ಬೆನ್ನಟ್ಟಿ ಧಾವಿಸುವರೋ, ಅನಾತ್ಮವಸ್ತು ವ್ಯಾಮೋಹ ಪಂಕ ದಲ್ಲಿ ಸಿಕ್ಕು ನರಳುವರೋ ಆಗ ನಾನು ನನ್ನ ಮಾಯಾಶಕ್ತಿಯ ಮೂಲಕ ಅವತರಿಸುತ್ತೇನೆ. "

(೧)ಧರ್ಮದ ಗ್ಲಾನಿ ಎಂದರೆ ಧರ್ಮಧ ನಾಶವಲ್ಲ:–ಧರ್ಮ ಅಜೇಯ, ಅವಿನಾಶಿ. ಅದನ್ನು ಯಾವ ಕ್ರೂರಶಕ್ತಿಯೂ ವಿನಾಶಗೊಳಿಸದು. ಕಾಲ ದಿಂದ ಬಾಡದ ಸುಂದರ ಪುಷ್ಪವದು. ಭೋಗ ಮೋಕ್ಷಗಳೆರಡೂ ಅದರ ಸೌರಭ. ಜ್ಞಾನ ಕರ್ಮ ಭಕ್ತಿಗಳು ಅದರ ಎಸಳುಗಳು. ಆದ್ದರಿಂದಲೇ ಚತುರ್ವಿಧ ಪುರು ಷಾರ್ಥಗಳ ಆದಿಯಲ್ಲಿದೆ ಆ ಧರ್ಮ! ಧರ್ಮ ಹಿಡಿದ ಅರ್ಥ, ಧರ್ಮವಿಡಿದ ಕಾಮ, ಧರ್ಮಯುಕ್ತ ಮೋಕ್ಷಗಳು ಮಾತ್ರ ಪುರುಷಾರ್ಥಗಳು. ಧರ್ಮವಿಲ್ಲ ದಿರೆ ಉಳಿದ ಮೂರು ನಿರರ್ಥಕ.

(೨) ಧರ್ಮದಿಂದ ಆತ್ಮದರ್ಶನ:– ಅದು ಹೇಗೆ ? ನಿತ್ಯ ಅಭ್ಯಸಿಸುವದು, ತಾಯಿ ತಂದೆ ಗುರುಗಳ ಸೇವೆ ಮಾಡುವದು, ದೊರೆತುದರಲ್ಲಿ ಅಲ್ಪಭಾಗ ದಾನ ವೀಯುವದು ಬಾಲಧರ್ಮ. ಇಂದ್ರಿಯ ಹಾಗು ಮನಸ್ಸುಗಳನ್ನು ನಿಗ್ರಹಿಸು ವದು ತಾರುಣ್ಯ ಧರ್ಮ. ಮನೋ ನಿಗ್ರಹದ ಮೂಲಕ ಆಚಾರ್ಯರ ಸತ್ಪುರು ಷರ ಅನುಗ್ರಹದಿಂದ ಆತ್ಮಜ್ಞಾನ ಗಳಿಸುವದು ವೃದ್ಧಾಪ್ಯ ಧರ್ಮ. ಈ ಮೂದೆರ ಧರ್ಮದೀದ ಅನಾತ್ಮ ವಸ್ತು ಮೋಹ ಅಳಿಯುವದು. ಮನಸ್ಸು ನಿಷ್ಕಲಂಕ ವಾಗುವದು. ಆಗ ಆತ್ಮಚೇತನಾಭಿವ್ಯಕ್ತಿ

(೩) ಧರ್ಮವೆಂದರೇನು?–ಮೈ ಮುರಿದು ದುಡಿದು, ಬಂದ ಭಾಗ್ಯದಲ್ಲಿ ದೇವನಿಗೂ ದೇವನ ಸಾಕಾರ ಮೂರ್ತಿಗಳಾದ ಜನತೆಗೂ ತ್ಯಾಗಭಾವದಿಂದ ನೀಡಿ ಉಟ ಮಾಡಿದಾಗ ಉಂಟಾಗುವ ಪರಿಶುದ್ಧ ಮನೋಗತ " ಸಂಸ್ಕಾರ ವಿಶೇಷ"ವೇ ಧರ್ಮ. ಧರ್ಮದ ಉಸಿರು ತ್ಯಾಗ. ತ್ಯಾಗದ ಕಳೆಯು ಧರ್ಮ. ಧರ್ಮವು ಭೋಗ ಮೋಕ್ಷಗಳ ಸಮನ್ವಯ ಸೂತ್ರ. ಮಗುವು ಒಂದು ಮೊಲೆ ಯನ್ನು ಕೈಯಲ್ಲಿ ಹಿಡಿದು, ಮತ್ತೊಂದಕ್ಕೆ ಮುಖವಿಟ್ಟು ಹಾಲು ಕುಡಿವಂತೆ ಭೋಗಗಳನುಣ್ಣುವ ಕ್ಷಣವೇ ಯೋಗಿಯ ಮನವೆಲ್ಲ ಆತ್ಮಚಿಂತನೆಯಲ್ಲಿ ಮಗ್ನ ವಾಗಿರಬೇಕೆನ್ನುತ್ತಿದೆ ಧರ್ಮ. ಭೋಗದಲ್ಲಿರುವಾಗ ಯೋಗಿಯಾಗಿ, ಯೋಗದ ಲ್ಲಿರುವಾಗ ಭೋಗಿಯಾಗಿ ಬಾಳುವ ಬಾಳಿಗನೇ ಧರ್ಮಜೀವಿ ! ಅವನು ಪ್ರಾಪಂಚಿಕ ಹಾಲು ಕುಡಿಯುವ ಸಮಕಾಲದಲ್ಲಿಯೇ ಪಾರಮಾರ್ಥಿಕ ಅನು ಸಂಧಾನ ಮಾಡುತ್ತಾನೆ; ಪಾರಮಾರ್ಥಿಕ ದಿವ್ಯ ದುಗ್ಧ ಈಂಟುತ್ತಲೇ ಪ್ರಪಂಚ ದಲ್ಲಿ ಕರ್ತವ್ಯ ಕರ್ಮ ನಿರ್ವಹಿಸುತ್ತಾನೆ.

(೪) ಧರ್ಮಗ್ಲಾನಿ ಪೂರ್ತಿಯಾದಾಗ, ದ್ವೇಷ ಅಸೂಯೆ ಹಾಗು ಸ್ವಾರ್ಥ ಗಳು ಜಗತ್ತನ್ನೆಲ್ಲ ತುಂಬಿ ಕೊಂಡಾಗ ಪರಮಾತ್ಮನು ಮಾನವ ರೂಪದಿಂದ

ಅವತರಿಸುತ್ತಾನೆ. ನೀತಿ, ತ್ಯಾಗ, ಜ್ಞಾನ ಹಾಗು ಅನುಭಾವ ಸಂಪದ ಹೊತ್ತು ಈ ಇಳೆಗೆ ಇಳಿದು ಬರುತ್ತಾನೆ. ನಾಡಿನ ಮೂಲೆ ಮೂಲೆಗಳಲ್ಲಿ ಧರ್ಮಘೋಷ ನಿನದಿಸುವಂತೆ, ದಿವ್ಯ ಜ್ಞಾನೋಪದೇಶದ ವಚನಗಳು ಕೇಳಿ ಬರುವಂತೆ ಪ್ರೇರಣೆ ಈಯುತ್ತಾನೆ.

(೫) ದೇವನೇ ಏಕೆ ಅವತರಿಸಬೇಕು?–ಮನುಷ್ಯ ಲೌಕಿಕ ರೀತಿಯಿಂದ ಎಷ್ಟೇ ಬಲ್ಲವನಾದರೂ ಸ್ವಾರ್ಥಕ್ಕಾಗಿ ಸಮಪ್ರಜ್ಞೆಯನ್ನು ಸಹಜವಾಗಿ ಕಳೆದು ಕೊಳ್ಳುವ ಸಂಭವವಿದೆ. ನಿಷ್ಪಕ್ಷತೆ ಹಾಗು ವಿಶ್ವಸಮತೆಗಳನ್ನು ನಿಖರವಾಗಿ ಕಾಪಾಡಿಕೊಂಡು ಹೋಗುವ ಬಲ ಅವನಿಗೆ ಬರುವದು ಕಷ್ಟ. ತನಗೆ ಹಿಡಿಸಿದ ಒಂದು ಪಂಥ, ಮತ, ಜಾತಿ, ಸಿದ್ಧಾಂತವನ್ನೇ ಬೆಂಬಲಿಸಿ ಪಕ್ಷ ಪಂಗಡ ನಿರ್ಮಿ ಸುವ ಸಂಭವ ಹೆಚ್ಚು. ಆದ್ದರಿಂದ, ಸ್ವತಃ ಭಗವಂತನೇ ಅಲುಪ್ತ ಶಕ್ತಿಯೊಂದಿಗೆ ಜನ್ಮತಾಳುತ್ತಾನೆ. ಬದುಕಿನಾದ್ಯಂತ ವಿಶ್ವ–ಧರ್ಮ ಪ್ರಜ್ಞೆಯನ್ನು ವ್ಯಕ್ತಗೊ ಳಿಸುತ್ತಾನೆ.

ಸಂಬಂಧ:– ಅರ್ಜುನ:- " ಕೃಷ್ಣ, ನೀನು ಅವತರಿಸಿ ಏನು ಮಾಡುವಿ? ನಿನ್ನ ಅವತಾರದ ಗೊತ್ತು ಗುರಿಗಳನ್ನು ಸುಸ್ಪಷ್ಟವಾಗಿ ತಿಳಿವ ಆಸೆ. "

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥೮॥

ಭಾವ:– ಸಜ್ಜನರ ರಕ್ಷಣೆಗಾಗಿ ದುರ್ಜನರ ನಾಶಕ್ಕಾಗಿ ಧರ್ಮ ಸಂಸ್ಥಾಪನೆಗಾಗಿ ಪ್ರತಿಯುಗದಲ್ಲಿ ಅವತರಿಸುತ್ತೇನೆ.

ವಿವರಣೆ:– ಭಗವಂತ:- " ಅರ್ಜುನ, ಸಜ್ಜನರೆಂದರೆ ನನಗೆ ಪ್ರಾಣ, ತಮ್ಮ ಸರ್ವಸ್ವವನ್ನೇ ನನಗರ್ಪಿಸಿ ನನ್ನ ಸಂದೇಶವನ್ನು ನಾಡಿನ ಮೂಲೆಗೆ ಮೂಲೆಗಳಿಗೆ ಮುಟ್ಟಿಸುವ ಸಂತರು ನನಗೆ ಅತ್ಯಂತ ಮೆಚ್ಚಿನವರು. ಅವರಿಗೆ ನನ್ನ ಅಭಯ ಹಸ್ತವಿದೆ. ನನ್ನ ಸಂದೇಶವನ್ನು ತುಳಿದು ಹಾಕಿ, ವಿಶ್ವದ ಶಾಂತಿಯನ್ನು ಕದಡುವವರು ದುರ್ಜನರು. ಪಾಶವೀ ಗುಣಗಳಿಗೆ ಎಣ್ಣೆ ಹೊಯ್ಯುವ ಅವರು ತಮ್ಮಷ್ಟಕ್ಕೆ ತಾವೇ ನಾಶವಾಗುತ್ತಾರೆ. ಸಜ್ಜನರ ರಕ್ಷಣೆಗಾಗಿ ಹಾಗು ದುರ್ಜನರ ಪಾರುಪತ್ಯಕ್ಕಾಗಿ ನನ್ನ ಅವತಾರ.

" ನನ್ನದು ತ್ಯಾಗಮಯ–ಭೋಗಧರ್ಮ, ವಿಶ್ವತಾರಕ ನೀತಿಜೀವನ. ಅದನ್ನು ಪ್ರತಿ ಜೀವಿಯ ಹೃದಯದಲ್ಲಿ ಊರುವದು ನನ್ನ ಉದ್ದೇಶ. ಹಾಗು ವಿಶ್ವಬಂಧುತ್ವ ಭಾವನೆಗಳನ್ನು ಅಳವಡಿಸಿಕೊಂಡು, ಹಿತವಾದ ಬದುಕನ್ನು ಜನರು ನಡೆಸಬೇಕೆನ್ನುವದು ನನ್ನ ಅಭಿಲಾಷೆ. ಈ ಅಭಿಲಾಷೆಯ ಪೂರ್ತಿಗಾಗಿ ನಾನು ಅವತರಿಸಲೇ ಬೇಕಲ್ಲವೆ? ಸಮಯಾನುಸಾರ ಅವತರಿಸುತ್ತೇನೆ. "

(೧) ಪರಮಾತ್ಮನ ಅವತಾರದ ಉದ್ದೇಶಗಳು ಮೂರು: (ಅ) ಸಂತ

ಮಹಾತ್ಮರ ರಕ್ಷಣ. (ಆ) ದುಷ್ಟಜನರ ನಾಶ. (ಇ) ಧರ್ಮ ಸಂಸ್ಥಾಪನೆ. ಜ್ಞಾನ ಭಕ್ತಿ ನೀತಿಗಳ ಪ್ರತಿಮೂರ್ತಿಯಾದ ಸಂತ ಶರಣರೇ ದೇಶದ ನಿಜ ಸಂಪದ.ಅವ ರಿಂದ ದೇಶದ ಅಭ್ಯುದಯ, ಜನಾಂಗಕ್ಕೆ ಸಮಾಧಾನ. ತ್ಯಾಗ ಹಾಗು ಸೇವೆಗಳಿ ಗಾಗಿ ಬಲಿದಾನ ಕೊಡಲೂ ಸಿದ್ಧರಾದ ಅವರ ಸತ್ಯ ಹಾಗು ಕರುಣಾಪೂರ್ಣ ವಚನಗಳೇ ನಾಡಿನ ರಕ್ಷೆಗಳು. ಅವರನ್ನು ಕಾಪಾಡುವದು ಮೊದಲ ಕರ್ತವ್ಯ.

ಅಂಧಕಾರದಲ್ಲಿ ಬದುಕುವವರು ದುಷ್ಟರು. ವಿಷಯೋನ್ಮಾದದಲ್ಲಿ ಬಾಳುವ ಅವರಿಗೆ ಪರಹಿತ, ಪರಸೇವೆ ಸೇರದು. ಸ್ವಾರ್ಥಕ್ಕಾಗಿ ಸಮಾಜವನ್ನೇ ಅಲ್ಲಾಡಿ ಸುತ್ತಾರೆ; ಶೋಷಿಸುತ್ತಾರೆ. ಅವರು ಸಮಾಜ-ದೇಹಕ್ಕೆ ಹತ್ತಿದ ಕ್ಷಯಕ್ರಿಮಿಗಳು. ವ್ಯಕ್ತಿ ಹಾಗು ದೇಶವನ್ನು ಘೋರ ಕಂದರದಲ್ಲಿ ನೂಕುವ ಅವರನ್ನು ಮರ್ದನ ಮಾಡುವದು ಅನಿವಾರ್ಯ.

ಕಡೆಯದಾಗಿ ಧರ್ಮ ಸಂಸ್ಥಾಪನಾ. ದೇವನು ವಿಶ್ವಚಕ್ಷುವಾದ ಭಾಸ್ಕರ. ಅವನು ಮಾನವ ನಿರ್ಮಿತ ಜಾತಿ, ವರ್ಣ, ಆಶ್ರಮ, ಪಂಥಗಳಿಗೆ ಸೇರಿದವನಲ್ಲ. ಹಿಂದೂ, ಮುಸ್ಲೀಮ, ಕ್ರಿಶ್ಚನ್, ಬೌದ್ಧ ಇಂಥ ಮಾನವ ಧರ್ಮಗಳು ಅವನಿಗೆ ಕಾಣುವದಿಲ್ಲ. ವಿಶ್ವಾಪಿತನಾದ ಅವನು ವಿಶ್ವಧರ್ಮಿ. ಜಗತ್ ಎಂಬ ಮಹಾ ನೌಕೆಯ ಕಪ್ತಾನ ಅವನು! ಸಂಕಷ್ಟ ಬಂದಾಗ, ಅಧರ್ಮ ತೆರೆಗಳಿಂದ ಬಾಳನೌಕೆ ಕಂಪಿಸಿದಾಗ ಭೇದಭಾವವಿಲ್ಲದೆ ಎಲ್ಲರನ್ನು ರಕ್ಷಿಸುವ ನಿರಪೇಕ್ಷ ಹಿತೈಷಿ! ಆದ್ದ ರಿಂದ ಸತ್ಯ ಪ್ರೇಮ ಸೌಹಾರ್ದತೆ ಮುಂತಾದ ಸದ್ಗುಣ ಸಮೂಹರೂಪ ದೇವ ಧರ್ಮ ಪ್ರತಿಷ್ಠಾಪನೆ ಅವನ ಕರ್ತವ್ಯವೇ ವಿನಃ ಮಾನವೀ ಧರ್ಮ ಉತ್ಥಾಪನೆ ಗಾಗಿ ಅವನೆಂದೂ ಅವತರಿಸಲಾರ.

(೨) ಮಾನವೀ ದೃಷ್ಟಿಯಿಂದ ಮಾತನಾಡುವದಾದರೆ, ಜಗತ್ತಿನಲ್ಲಿ ಹುಟ್ಟಿ ಬೆಳೆದ ನೂರಾರು ಧರ್ಮಗಳಲ್ಲಿ ಯಾವದು ಕೀಳು, ಯಾವದು ಮೇಲು? ಎಲ್ಲ ಸರಿಸಮ. ಏಕೆಂದರೆ ಸತ್ಯ ಅಹಿಂಸೆಗಳೇ ಅವುಗಳ ಸಾರಸರ್ವಸ್ವ. ಯಾವ ಧರ್ಮ ವು 'ಕೊಲ್ಲು, ವಂಚಿಸು, ನಿಂದಿಸು" ಎಂದು ಹೇಳುತ್ತಿದೆ ಹೇಳಿ? ಧರ್ಮ ವಚನ ಗಳಲ್ಲಿ ಭಿನ್ನತೆಯೇ ಹೊರತು ಧರ್ಮ ತತ್ತ್ವಗಳಲ್ಲಿ ಭಿನ್ನತೆಯಿಲ್ಲ. ಎಲ್ಲ ಧರ್ಮ ಗಳ ಗುರಿ ದೇವದರ್ಶನ ಅಥವಾ ಶಾಂತಿ ಸಂಪಾದನೆ. ನಮ್ಮ ಧರ್ಮವು ನಮ್ಮ ಸಮಾಜವನ್ನು ಎತ್ತುತ್ತಿದ್ದರೆ, ಅವರ ಧರ್ಮವು ಅವರ ಸಮಾಜವನ್ನು ಎತ್ತು ತ್ತಿದೆ. ಒಂದು ಸಮಾಜವನ್ನು ಎತ್ತುವ ಧರ್ಮ ಇನ್ನೊಂದು ಸಮಾಜವನ್ನು ತುಳಿಯುವದೆಂಬ ಭಾವನೆ ಭ್ರಮಾತ್ಮಕ. ಒಬ್ಬರಿಗೆ ಶಾಂತಿ ನೀಡುವ ಧರ್ಮ ಎಲ್ಲ ರಿಗೂ ಶಾಂತಿ ನೀಡುವದು. ಅನಾದಿ ಅನಂತವಾದ ದಿವ್ಯ ಧರ್ಮವು ಸರಿಯಾದ ರೀತಿಯಲ್ಲಿ ಮಾನವ ಬುದ್ಧಿ ಸ್ತರದ ಮೇಲೆ ಅಭಿವ್ಯಕ್ತಗೊಳಿಸುವದೆಂದರೆಯೇ ಧರ್ಮ ಪ್ರತಿಷ್ಠಾಪನೆ!

(೩) ಸಾರಾಂಶ:– " ದೇವಧರ್ಮ ಅವಿನಾಶಿ, ಏಕೈಕ ! ಸಾಮಾಜಿಕ ಧರ್ಮಗಳು ಅನೇಕ ಮತ್ತು ಕಾಲಮಿತ! ಅವುಗಳನ್ನು ಪುನರುತ್ಥಾನಗೊಳಿಸ ಬಂದ ನೇತಾರರು ಮಾನವರು, ಸತ್ಯ ದೃಷ್ಟಾರರಲ್ಲ. ದೇವನಿಗೆ ಸತ್ಯ ಅಹಿಂಸಾ ದಿವ್ಯ ಧರ್ಮದ ಮೇಲೆ ಪ್ರೀತಿ. ಆ ಧರ್ಮ ಅಭಿವ್ಯಕ್ತಿಗೆ ಅವನೇ ಅವತರಿಸು ತ್ತಾನೆ. ಅಥವಾ ಅವನ ಪ್ರತಿ ಮೂರ್ತಿಗಳಾದ ಸತ್ಯದರ್ಶಿ ಸಂತರು ಯತ್ನಿ ಸುತ್ತಾರೆ.

ಸಂಬಂಧ:– ಪರಮಾತ್ಮನು ದಿವ್ಯ ಜನ್ಮ ಪಡೆದು ದಿವ್ಯ ಕರ್ಮಗಳನ್ನು ನಿರ್ವಹಿಸುತ್ತಾನೆ. ಅವೆರಡನ್ನು ಅರಿತಾಗ ದೊರೆಯುವ ಫಲ ಯಾವುದು?

ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ।
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥೯॥

ಭಾವ:– ಯಾವನು ಹೀಗೆ ನನ್ನ ಜನ್ಮ ಹಾಗು ಕರ್ಮಗಳನ್ನು ದಿವ್ಯವೆಂದು ಯಥಾ ರ್ಥವಾಗಿ ತಿಳಿಯುತ್ತಾನೆಯೋ ಅವನು ದೇಹವನ್ನು ಬಿಟ್ಟು ಮತ್ತೆ ಪುನರ್ಜನ್ಮವನ್ನು ಹೊಂದು ವದಿಲ್ಲ. ನನ್ನನ್ನು ಹೊಂದುತ್ತಾನೆ.

ವಿವರಣೆ-–ಸರ್ವದೇಹ, ಸರ್ವಲೋಕಗಳಲ್ಲಿ ಅಂತರ್ಯಾಮಿಯಾಗಿ ನೆಲೆ ಸಿರುವ ಚೈತನ್ಯ ಪ್ರಭುವು ಈಶ್ವರ. ಅವನ ಅಭಿವ್ಯಕ್ತಿಗೆ ಕಾರಣವಾದ ದೇಹವು " ಶುದ್ಧ ವಿದ್ಯೆ " ; ಅದು ಸ್ವರೂಪ ಆವರಕವಲ್ಲ, ಸ್ವರೂಪ ಪ್ರಕಟಕ. ಈಶ್ವರನು ಸ್ವರೂಪ ಪ್ರಜ್ಞಾಪ್ರಕಾಶದಲ್ಲಿ ವ್ಯಕ್ತನಾಗುವದರಿಂದ ಅವನ ಜನ್ಮವು ದಿವ್ಯ; ಸ್ವರೂಪ ಪ್ರಭಾವಲಯದಲ್ಲಿಯೇ ಕಾರ್ಯ ಮಾಡುವದರಿಂದ ಅವನ ಕರ್ಮ ದಿವ್ಯ. ಅವಿದ್ಯಾಂಧಕಾರದಲ್ಲಿ ಹುಟ್ಟುವದರಿಂದ ಜೀವನ ಜನ್ಮ ಬಾಧಕ; ಅವಿದ್ಯಾ ಮಂಡಲದಲ್ಲಿಯೇ ಕರ್ಮ ಮಾಡುವದರಿಂದ ಆ ಕರ್ಮವೂ ಬಾಧಕ. ಅವಿದ್ಯಾ ಉಪಾಧಿ ನೀಗಿದಾಗ ಈ ಜೀವನು ಅನುಪಾಧಿ ಈಶ್ವರನಲ್ಲಿ ಒಂದಾಗುತ್ತಾನೆ. ಈ ತತ್ತ್ವ ತಿಳಿದವರಿಗೆ ಪುನರ್ಜನ್ಮವಿಲ್ಲ. ಈ ಸಂಗತಿಯನ್ನು ಭಗವಂತ ಪ್ರತಿ ಪಾದಿಸುತ್ತಾನೆ.

ಭಗವಂತ:– " ಕೌಂತೇಯ, ನಾನು ಕೇವಲ ಚೈತನ್ಯ ಪುರುಷ. ನನ್ನ ಅಭಿವ್ಯಕ್ತಿಗೆ ನೆಲೆ ಮಹತ್ತತ್ತ್ವ. ಅಲ್ಲಿ ಸ್ಥಿರವಾಗಿ ನಿಂತೇ ಸ್ವಪ್ರಜ್ಞಾಸಹಿತನಾಗಿ ಅನೇಕ ಭೌತ ದೇಹಗಳನ್ನು ಧರಿಸುತ್ತೇನೆ. ಆ ದೇಹಗಳ ಮೂಲಕ ಲೋಕ-ಹಿತ ಕಾರಕ ಅಸಂಖ್ಯ ಕರ್ಮಗಳನ್ನು ಆಚರಿಸುತ್ತೇನೆ. ನನ್ನ ದೇಹಗಳಲ್ಲಿ, ನನ್ನ ಜನ್ಮಗ ಳಲ್ಲಿ, ನನ್ನ ಕರ್ಮಗಳಲ್ಲಿ ಆತ್ಮ ಪ್ರಜ್ಞೆಯ ಪ್ರಭೆ ಪ್ರತಿಫಲಿಸುತ್ತಿರುವದರಿಂದ ಅವು ದಿವ್ಯ. ಯಾವನು ಅನುಭವತಃ ನನ್ನ ದಿವ್ಯ ಜನ್ಮ, ದಿವ್ಯಕರ್ಮಗಳನ್ನು ತಿಳಿದುಕೊಳ್ಳುತ್ತಾನೆಯೋ ಅವನ ದೇಹಾದಿ ಅನಾತ್ಮ ಅಭಿಮಾನ ನಾಶವಾಗು ತ್ತದೆ. ಅವನು ನನ್ನಲ್ಲಿಯೇ ಬೆರೆಯುತ್ತಾನೆ. ಅವನಿಗೆ ಪುನರ್ಜನ್ಮವಿಲ್ಲ. "

(೧) ಕ್ರಿಮಿ ಕೀಟಾದಿ ಅಧೋ ಜೀವಿಗಳ ಜನ್ಮ ಹಾಗು ಕರ್ಮ ಪಾಪ ಮಯ. ಮರ್ತ್ಯವಾಸಿಯಾದ ಮಾನವನ ಜನ್ಮಕರ್ಮಗಳು ಪಾಪ–ಪುಣ್ಯ ಮಿಶ್ರ. ಸ್ವರ್ಗೀಯ ದೇವತೆಗಳ ಜನ್ಮಕರ್ಮ ಪುಣ್ಯರೂಪ. ಈ ಮೂರೂ ಬಗೆಯ ಜನ್ಮಕರ್ಮಗಳು ಕ್ಷಯಕಾರಿ, ಅಸ್ಥಿರ, ದುಃಖಪೂರ್ಣ. ಭಯ ಆಸಕ್ತಿ ಗಳು ಇವುಗಳಿಗೆ ಮುತ್ತಿ ಬಿಟ್ಟಿವೆ. ಆದ್ದರಿಂದ ಇವು ದಿವ್ಯವಲ್ಲ.

ಇನ್ನು, ನಿಷ್ಕಾಮ ಕರ್ಮಶೀಲನಾದ ಮುಮುಕ್ಷುವಿನ ಜನ್ಮಕರ್ಮಗಳು, ಪ್ರತ್ಯಾಹರಣ ಶೀಲನಾದ ಅಭ್ಯಾಸಿಯ ಜನ್ಮ ಕರ್ಮಗಳು, ಧ್ಯಾನ ಸಮಾಧಿಶೀಲ ಅನುಭಾವಿಯ ಜನ್ಮಕರ್ಮಗಳು ಪುನರ್ಜನ್ಮಕ್ಕೆ ಕಾರಣವಾದುದರಿಂದ (ಉದಾ: ಮುಮುಕ್ಷುವಿಗೆ ಮೂರು ಜನ್ಮ, ಅಭ್ಯಾಸಿಗೆ ಎರಡು ಜನ್ಮ, ಅನುಭವಿಗೆ ಒಂದು ಜನ್ಮ ಬರುತ್ತವೆ ಎಂದು ಬಲ್ಲವರ ನಿಯಮ. ) ದಿವ್ಯವಲ್ಲ, ಚಿರಸ್ಥಾಯಿಗಳಲ್ಲ. ಅವರೂ ಉತ್ತರೋತ್ತರ ವೃದ್ಧಿಗೆ ಕಾರಣಗಳಾಗುತ್ತವೆ.

ಹಾಗಾದರೆ ದಿವ್ಯ ಜನ್ಮ ದಿವ್ಯಕರ್ಮ ಯಾರಿಗೆ? ಮಹತ್ತತ್ತ್ವದಲ್ಲಿ ನಿಂತೇ ಅಂದರೆ " ಅಹಂ ಬ್ರಹ್ಮಾಸ್ಮಿ" ಎಂಬ ಪಾವನ ಪ್ರಜ್ಞೆಯೊಂದಿಗೆಯೇ ಯಾರು ಜನ್ಮತಾಳುತ್ತಾರೆಯೋ ಕರ್ಮ ಮಾಡುತ್ತಾರೆಯೋ ಅವರ ಜನ್ಮ ಕರ್ಮಗಳು ದಿವ್ಯ. " ಸ್ವಯಂ ಭಾತಃ ದೇವಾನಾಂ ವೇದಃ " ಅಂಥ ಮಹಾತ್ಮರಿಗೆ ದಿವ್ಯ ವೇದ ವಿದ್ಯೆ ಸ್ವಯಂಭಾತ. ಮರುಗದ ಗಿಡ ಹುಟ್ಟುತ್ತಲೇ ಪರಿಮಳ. ಎಂದಂತೆ ಮಹಾತ್ಮರಿಗೆ ಹುಟ್ಟುತ್ತಲೇ ಪಾವನ ವಿದ್ಯೆ ಅವಗತ. ಅವರ ಮಾತು ವೇದ. ಅವರ ಹೃದಯ ಕಾರುಣ್ಯ ಪೂರ್ಣ. ಅವರ ಕರ್ಮಗಳು ಲೋಕಾನುಗ್ರಾಹಕ. ಸಾಮಾನ್ಯರಂತೆ ಅವರು ಹುಟ್ಟಿದರೂ ಅವರು ಕೋಗಿಲೆ, ಸಾಮಾನ್ಯರು ಕಾಗೆ. ಸ್ವರ್ಗೀಯ ಕಂಠ ಅವರದು. ಕರ್ಕಶ ಕಂಠ ಸಾಮಾನ್ಯ ಮಾನವರದು. ಅವರ ಜನ್ಮ ಕರ್ಮಗಳು ಅಕಲಂಕ, ಸಾಮಾನ್ಯರದು ಕಲಂಕಿತ. ಆದ್ದರಿಂದವರು ಅವತಾರಿ ಗಳು. ಉಳಿದ ಮಾನವರೆಲ್ಲ ಜೀವಿಗಳು.

(೨) **ಯೋಗಶಾಸ್ತ್ರಾನುಸಾರ:**– ಅಷ್ಟಾಂಗಯೋಗದಲ್ಲಿ ಸಮಾಧಿ ಕೊನೆ ಯದು. ಅದು (ಅ) ಸವಿಕರ್ತ (ಬ) ನಿರ್ವಿಕರ್ತ (ಕ) ಸವಿಚಾರ (ಡ) ನಿರ್ವಿ ಚಾರ (ಇ) ಸಾನಂದ (ಫ) ಸಾಸ್ಮಿತಾ ಎಂದು ಆರು ಪ್ರಕಾರ. ಅವು ಕ್ರಮವಾಗಿ ಒಂದಕ್ಕಿಂತ ಒಂದು, ಸೂಕ್ಷ್ಮ, ಲಿಂಗ, ಶಾಲಿಗ್ರಾಮ, ದೇವಮೂರ್ತಿ ಇಂಥ ಸ್ಥೂಲ ಪೂಜ್ಯ ವಸ್ತುಗಳ ನಾಮರೂಪದ ಧ್ಯಾನದಲ್ಲಿದ್ದರೆ ಸವಿಕರ್ತಸಮಾಧಿ. ಆ ವಸ್ತುವಿನ ನಾಮರೂಪಗಳಲ್ಲಿ ತನ್ಮಯನಾದರೆ ನಿರ್ವಿತರ್ಕ ಸಮಾಧಿ. ಸ್ಥೂಲ ಜಗತ್ತಿನ ಕಾರಣಗಳು ಸೂಕ್ಷ್ಮತನ್ಮಾತ್ರೆಗಳು. ಕೇವಲ ಶುದ್ಧ ಬುದ್ಧಿಗಮ್ಯವಾದ ಅವುಗಳ ವಿಚಾರದಲ್ಲಿದ್ದರೆ ಸವಿಚಾರ ಸಮಾಧಿ. ಆ ತನ್ಮಾತ್ರೆಗಳಲ್ಲಿ ಒಂದಾದರೆ ನಿರ್ವಿಚಾರ ಸಮಾಧಿ. ತನ್ಮಾತ್ರೆಗಳಾಚೆ ಸತ್ತ್ವ ಪ್ರಕೃತಿಯು ವಿಸ್ತಾರ; ಬರಿ ಆನಂದ

ವಿಲಾಸ. ಅದರಲ್ಲಿ ಮನ ಮುಳುಗಿಸಿದರೆ ಸಾನಂದ ಸಮಾಧಿ. ಆ ಆನಂದ ವಿಲಾಸ ತೊರೆದು ಮತ್ತೂ ಮೇಲೆ ಹೋದಾಗ ಕಾಣುವದೇ ಮಹತ್ತತ್ತ್ವ. ದೇವಾಭಿವ್ಯಕ್ತಿಯ ನೆಲೆ. ಅಲ್ಲಿ ಮನ ನಿಂತಾಗ ಸಾಸ್ಮಿತಾ ಸಮಾಧಿ ! ಅದು ಸಮಾಧಿಯ ಪರಾಕಾಷ್ಠೆ. ಅದರಾಚೆ ಬರಿ ಬಯಲು. ಸಾಸ್ಮಿತಾ ಸಮಾಧಿಸ್ಥ ಪುರುಷನು ಉತ್ಥಾನನಾದರೂ ಆ ಮಹತ್ತತ್ತ್ವ ಸ್ಥಿರದಿಂದ ಪೂರ್ಣವಾಗಿ ಕೆಳಗಿಳಿಯುವದಿಲ್ಲ. ಅಲ್ಲಿದ್ದೇ ಜನ್ಮ ಧರಿಸುತ್ತಾನೆ; ಕರ್ಮ ಮಾಡುತ್ತಾನೆ. ಅವನ ಜನ್ಮಕರ್ಮಗಳು ದಿವ್ಯ.

(೩) ಉಗ್ರ ಜನ್ಮ ಉಗ್ರ ಕರ್ಮಗಳು: ಯಾವ ಜನ್ಮ ಕರ್ಮಗಳಿಂದ ತನಗೂ ಹಿತವಿಲ್ಲ ಪರರಿಗೂ ಹಿತವಿಲ್ಲ ಅವು ಉಗ್ರ ! ಸಾಮಾನ್ಯ ಜೀವಿಗಳಾದ ಅಸಂಖ್ಯ ಮಾನವರ ಜನ್ಮ ಕರ್ಮ ಇಂಥವೇ. ಅವರು ಹುಟ್ಟುತ್ತಾರೆ, ವಿಷಯ ದೋಕುಳಿಯಾಡುತ್ತಾರೆ. ಅವರಿಗೆ ವಿಶ್ವಹಿತೇಚ್ಛೆ ಇಲ್ಲ, ಸ್ವಪರಿವಾರದ ಹಿತೇಚ್ಛೆ ಇದೆ. ಅವರನ್ನು ಭಯಾನಕವಾದ ಅಜ್ಞಾನಾಂಧಕಾರ ಆವರಿಸಿದೆ. ಅವರು ಹೇಗೋ ಬಾಳುತ್ತಾರೆ, ಎಂಥೆಂಥವೋ ಕರ್ಮಗಳನ್ನು ಮಾಡುತ್ತಾರೆ. ಆದುದರಿಂದಲೇ ಅವರ ಮೇಲ್ವಿಚಾರಣೆಗಾಗಿ ಲಕ್ಷಾಂತರ ಪೋಲಿಸರು !

(೪) ಹೀನ ಜನ್ಮ ಹೀನ ಕರ್ಮಗಳು:- ಯಾವ ಜನ್ಮಕರ್ಮಗಳಲ್ಲಿ ಸ್ವಾವಲಂಬನೆ ಸಹಾನುಭೂತಿಗಳಿಲ್ಲವೋ ಅವು ಹೀನ. ನಮ್ಮ ನಮ್ಮ ಜೀವನ ನೋಡಿಕೊಳ್ಳಿ. ನಮ್ಮ ಸಿರಿ ಸಂಪದ ಹೆಚ್ಚಿದಂತೆ ಪರಾವಲಂಬನೆ ಹೆಚ್ಚುವದು. ನಮ್ಮ ಕೈಕಾಲಿಗೊಬ್ಬ ಸೇವಕ. ಎರಡು ಹೆಜ್ಜೆ ಹೋಗಲೂ ವಾಹನ. ಊಟ ಉಡಿಗೆಗಾಗಿ ಯಂತ್ರ. ಇಷ್ಟು ಅವಲಂಬನೆ ಹೊಂದಿದ ಬದುಕು ಬದುಕೆ ?

ನಮ್ಮ ಮನಸ್ಸೋ ಸ್ವಾರ್ಥಪೂರ್ಣ. ಒಳ್ಳೆಯದೆಲ್ಲ ನಮಗೆ ಬೇಕು, ಸುಖ ಸಮೃದ್ಧಿ ನಮಗೆ, ದುಃಖ ದಾರಿದ್ರ್ಯ ಅನ್ಯರಿಗೆ! ಸೇವಕರನ್ನು ಪಶುವಿನಂತೆ ದುಡಿಸುತ್ತೇವೆ. ಅವರ ಆಸರಿಕೆ ಬೇಸರಿಕೆಗಳ ಪರಿವೆ ನಮಗಿಲ್ಲ. ಅತ್ಯಾಚಾರ, ಅನಾಚಾರ ಬಾಳು ಸಾಗಿಸಿ ಸತ್ಯ ನ್ಯಾಯವಾದಿಗಳೆಂಬಂತೆ ಚರಿತ್ರೆ ಬರೆಸುತ್ತೇವೆ. ಇದೇ ಹೀನವಾದ ದಾನವ ಜನ್ಮ, ದಾನವ ಕರ್ಮ. ಇವುಗಳಿಂದ ಶಾಂತಿ ದೊರೆಯದು. ಭೂಮಿ ಕಾಮಿನಿ ಕಾಂಚನ ಮಾತ್ರ ದೊರೆಯಬಹುದು. ಅವುಗಳಿಂದ ಏನು ಉಪಯೋಗ?

ಸಂಬಂಧ:– ಅರ್ಜುನ:– ದೇವ, ನಿನ್ನ ದಿವ್ಯ ಜನ್ಮ ಕರ್ಮಗಳನ್ನು ತಿಳಿಯುವದರಿಂದ ನಿನ್ನ ಪ್ರಾಪ್ತಿ ಹೇಗಾಗುವದು?

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।
ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥೧೦॥

ಅರ್ಥ:- ವೀತರಾಗಭಯಕ್ರೋಧಾಃ= (ವೀತಾ ವಿಗತಾಃ ರಾಗಭಯ ಕ್ರೋಧಾಃ

(೧) ಕ್ರಿಮಿ ಕೀಟಾದಿ ಅಧೋ ಜೀವಿಗಳ ಜನ್ಮ ಹಾಗು ಕರ್ಮ ಪಾಪಮಯ. ಮರ್ತ್ಯವಾಸಿಯಾದ ಮಾನವನ ಜನ್ಮಕರ್ಮಗಳು ಪಾಪ–ಪುಣ್ಯ ಮಿಶ್ರ. ಸ್ವರ್ಗೀಯ ದೇವತೆಗಳ ಜನ್ಮಕರ್ಮ ಪುಣ್ಯರೂಪ. ಈ ಮೂರೂ ಬಗೆಯ ಜನ್ಮಕರ್ಮಗಳು ಕ್ಷಯಕಾರಿ, ಅಸ್ಥಿರ, ದುಃಖಪೂರ್ಣ. ಭಯ ಆಸಕ್ತಿಗಳು ಇವುಗಳಿಗೆ ಮುತ್ತಿ ಬಿಟ್ಟಿವೆ. ಆದ್ದರಿಂದ ಇವು ದಿವ್ಯವಲ್ಲ.

ಇನ್ನು, ನಿಷ್ಕಾಮ ಕರ್ಮಶೀಲನಾದ ಮುಮುಕ್ಷುವಿನ ಜನ್ಮಕರ್ಮಗಳು, ಪ್ರತ್ಯಾಹರಣ ಶೀಲನಾದ ಅಭ್ಯಾಸಿಯ ಜನ್ಮ ಕರ್ಮಗಳು, ಧ್ಯಾನ ಸಮಾಧಿಶೀಲ ಅನುಭಾವಿಯ ಜನ್ಮಕರ್ಮಗಳು ಪುನರ್ಜನ್ಮಕ್ಕೆ ಕಾರಣವಾದುದರಿಂದ (ಉದಾ: ಮುಮುಕ್ಷುವಿಗೆ ಮೂರು ಜನ್ಮ, ಅಭ್ಯಾಸಿಗೆ ಎರಡು ಜನ್ಮ, ಅನುಭವಿಗೆ ಒಂದು ಜನ್ಮ ಬರುತ್ತವೆ ಎಂದು ಬಲ್ಲವರ ನಿಯಮ. ) ದಿವ್ಯವಲ್ಲ, ಚಿರಸ್ಥಾಯಿಗಳಲ್ಲ. ಆದರೂ ಉತ್ತರೋತ್ತರ ವೃದ್ಧಿಗೆ ಕಾರಣಗಳಾಗುತ್ತವೆ.

ಹಾಗಾದರೆ ದಿವ್ಯ ಜನ್ಮ ದಿವ್ಯಕರ್ಮ ಯಾರಿಗೆ? ಮಹತ್ತತ್ತ್ವದಲ್ಲಿ ನಿಂತೇ ಅಂದರೆ " ಅಹಂ ಬ್ರಹ್ಮಾಸ್ಮಿ" ಎಂಬ ಪಾವನ ಪ್ರಜ್ಞೆಯೊಂದಿಗೆಯೇ ಯಾರು ಜನ್ಮತಾಳುತ್ತಾರೆಯೋ ಕರ್ಮ ಮಾಡುತ್ತಾರೆಯೋ ಅವರ ಜನ್ಮ ಕರ್ಮಗಳು ದಿವ್ಯ. " ಸ್ವಯಂ ಭಾತಃ ದೇವಾನಾಂ ವೇದಃ " ಅಂಥ ಮಹಾತ್ಮರಿಗೆ ದಿವ್ಯ ವೇದ ವಿದ್ಯೆ ಸ್ವಯಂಭಾತ. ಮರುಗದ ಗಿಡ ಹುಟ್ಟುತ್ತಲೇ ಪರಿಮಳ. ಎಂದಂತೆ ಮಹಾತ್ಮರಿಗೆ ಹುಟ್ಟುತ್ತಲೇ ಪಾವನ ವಿದ್ಯೆ ಅವಗತ. ಅವರ ಮಾತು ವೇದ. ಅವರ ಹೃದಯ ಕಾರುಣ್ಯ ಪೂರ್ಣ. ಅವರ ಕರ್ಮಗಳು ಲೋಕಾನುಗ್ರಾಹಕ. ಸಾಮಾನ್ಯರಂತೆ ಅವರು ಹುಟ್ಟಿದರೂ ಅವರು ಕೋಗಿಲೆ, ಸಾಮಾನ್ಯರು ಕಾಗೆ. ಸ್ವರ್ಗೀಯ ಕಂಠ ಅವರದು. ಕರ್ಕಶ ಕಂಠ ಸಾಮಾನ್ಯ ಮಾನವರದು. ಅವರ ಜನ್ಮ ಕರ್ಮಗಳು ಅಕಲಂಕ, ಸಾಮಾನ್ಯರದು ಕಲಂಕಿತ. ಆದ್ದರಿಂದವರು ಅವತಾರಿಗಳು. ಉಳಿದ ಮಾನವರೆಲ್ಲ ಜೀವಿಗಳು.

(೨) ಯೋಗಶಾಸ್ತ್ರಾನುಸಾರ:– ಅಷ್ಟಾಂಗಯೋಗದಲ್ಲಿ ಸಮಾಧಿ ಕೊನೆಯದು. ಅದು (ಅ) ಸವಿಕರ್ತ (ಬ) ನಿರ್ವಿಕರ್ತ (ಕ) ಸವಿಚಾರ (ಡ) ನಿರ್ವಿಚಾರ (ಇ) ಸಾನಂದ (ಫ) ಸಾಸ್ಮಿತಾ ಎಂದು ಆರು ಪ್ರಕಾರ. ಅವು ಕ್ರಮವಾಗಿ ಒಂದಕ್ಕಿಂತ ಒಂದು ಸೂಕ್ಷ್ಮ, ಲಿಂಗ, ಶಾಲಿಗ್ರಾಮ, ದೇವಮೂರ್ತಿ ಇಂಥ ಸ್ಥೂಲ ಪೂಜ್ಯ ವಸ್ತುಗಳ ನಾಮರೂಪದ ಧ್ಯಾನದಲ್ಲಿದ್ದರೆ ಸವಿಕರ್ತಸಮಾಧಿ. ಆ ವಸ್ತುವಿನ ನಾಮರೂಪಗಳಲ್ಲಿ ತನ್ಮಯನಾದರೆ ನಿರ್ವಿತರ್ಕ ಸಮಾಧಿ. ಸ್ಥೂಲ ಜಗತ್ತಿನ ಕಾರಣಗಳು ಸೂಕ್ಷ್ಮತನ್ಮಾತ್ರೆಗಳು. ಕೇವಲ ಶುದ್ಧ ಬುದ್ಧಿಗಮ್ಯವಾದ ಅವುಗಳ ವಿಚಾರದಲ್ಲಿದ್ದರೆ ಸವಿಚಾರ ಸಮಾಧಿ. ಆ ತನ್ಮಾತ್ರೆಗಳಲ್ಲಿ ಒಂದಾದರೆ ನಿರ್ವಿಚಾರ ಸಮಾಧಿ. ತನ್ಮಾತ್ರೆಗಳಾಚೆ ಸತ್ತ್ವ ಪ್ರಕೃತಿಯ ವಿಸ್ತಾರ; ಬರಿ ಆನಂದ

ವಿಲಾಸ. ಅದರಲ್ಲಿ ಮನ ಮುಳುಗಿಸಿದರೆ ಸಾನಂದ ಸಮಾಧಿ. ಆ ಆನಂದ ವಿಲಾಸ ತೊರೆದು ಮತ್ತೂ ಮೇಲೆ ಹೋದಾಗ ಕಾಣುವದೇ ಮಹತ್ತತ್ತ್ವ. ದೇವಾಭಿವ್ಯಕ್ತಿಯ ನೆಲೆ. ಅಲ್ಲಿ ಮನ ನಿಂತಾಗ ಸಾಸ್ಮಿತಾ ಸಮಾಧಿ ! ಅದು ಸಮಾಧಿಯ ಪರಾಕಾಷ್ಠೆ. ಅದರಾಚೆ ಬರಿ ಬಯಲು. ಸಾಸ್ಮಿತಾ ಸಮಾಧಿಸ್ಥ ಪುರುಷನು ಉತ್ಥಾನನಾದರೂ ಆ ಮಹತ್ತತ್ತ್ವ ಸ್ಥರದಿಂದ ಪೂರ್ಣವಾಗಿ ಕೆಳಗಿಳಿಯುವದಿಲ್ಲ. ಅಲ್ಲಿದ್ದೇ ಜನ್ಮ ಧರಿಸುತ್ತಾನೆ; ಕರ್ಮ ಮಾಡುತ್ತಾನೆ. ಅವನ ಜನ್ಮಕರ್ಮಗಳು ದಿವ್ಯ.

(೩) ಉಗ್ರ ಜನ್ಮ ಉಗ್ರ ಕರ್ಮಗಳು: ಯಾವ ಜನ್ಮ ಕರ್ಮಗಳಿಂದ ತನಗೂ ಹಿತವಿಲ್ಲ ಪರರಿಗೂ ಹಿತವಿಲ್ಲ ಅವು ಉಗ್ರ ! ಸಾಮಾನ್ಯ ಜೀವಿಗಳಾದ ಅಸಂಖ್ಯ ಮಾನವರ ಜನ್ಮ ಕರ್ಮ ಇಂಥವೇ. ಅವರು ಹುಟ್ಟುತ್ತಾರೆ, ವಿಷಯ ದೋಕುಳಿಯಾಡುತ್ತಾರೆ. ಅವರಿಗೆ ವಿಶ್ವಹಿತೇಚ್ಛೆ ಇಲ್ಲ, ಸ್ವಪರಿವಾರದ ಹಿತೇಚ್ಛೆ ಇದೆ. ಅವರನ್ನು ಭಯಾನಕವಾದ ಅಜ್ಞಾನಾಂಧಕಾರ ಆವರಿಸಿದೆ. ಅವರು ಹೇಗೋ ಬಾಳುತ್ತಾರೆ, ಎಂಥೆಂಥವೋ ಕರ್ಮಗಳನ್ನು ಮಾಡುತ್ತಾರೆ. ಆದುದರಿಂದಲೇ ಅವರ ಮೇಲ್ವಿಚಾರಣೆಗಾಗಿ ಲಕ್ಷಾಂತರ ಪೋಲಿಸರು !

(೪) ಹೀನ ಜನ್ಮ ಹೀನ ಕರ್ಮಗಳು:- ಯಾವ ಜನ್ಮಕರ್ಮಗಳಲ್ಲಿ ಸ್ವಾವಲಂಬನೆ ಸಹಾನುಭೂತಿಗಳಿಲ್ಲವೋ ಅವು ಹೀನ. ನಮ್ಮ ನಮ್ಮ ಜೀವನ ನೋಡಿಕೊಳ್ಳಿ. ನಮ್ಮ ಸಿರಿ ಸಂಪದ ಹೆಚ್ಚಿದಂತೆ ಪರಾವಲಂಬನೆ ಹೆಚ್ಚುವದು. ನಮ್ಮ ಕೈಕಾಲಿಗೊಬ್ಬ ಸೇವಕ. ಎರಡು ಹೆಜ್ಜೆ ಹೋಗಲೂ ವಾಹನ. ಊಟ ಉಡಿಗೆಗಾಗಿ ಯಂತ್ರ. ಇಷ್ಟು ಅವಲಂಬನೆ ಹೊಂದಿದ ಬದುಕು ಬದುಕೆ ?

ನಮ್ಮ ಮನಸ್ಸೋ ಸ್ವಾರ್ಥಪೂರ್ಣ. ಒಳ್ಳೆಯದೆಲ್ಲ ನಮಗೆ ಬೇಕು, ಸುಖ ಸಮೃದ್ಧಿ ನಮಗೆ, ದುಃಖ ದಾರಿದ್ರ್ಯ ಅನ್ಯರಿಗೆ! ಸೇವಕರನ್ನು ಪಶುವಿನಂತೆ ದುಡಿಸುತ್ತೇವೆ. ಅವರ ಆಸರಿಕೆ ಬೇಸರಿಕೆಗಳ ಪರಿವೆ ನಮಗಿಲ್ಲ. ಅತ್ಯಾಚಾರ, ಅನಾಚಾರ ಬಾಳು ಸಾಗಿಸಿ ಸತ್ಯ ನ್ಯಾಯವಾದಿಗಳೆಂಬಂತೆ ಚರಿತ್ರೆ ಬರೆಸುತ್ತೇವೆ. ಇದೇ ಹೀನವಾದ ದಾನವ ಜನ್ಮ, ದಾನವ ಕರ್ಮ. ಇವುಗಳಿಂದ ಶಾಂತಿ ದೊರೆಯದು. ಭೂಮಿ ಕಾಮಿನಿ ಕಾಂಚನ ಮಾತ್ರ ದೊರೆಯಬಹುದು. ಅವುಗಳಿಂದ ಏನು ಉಪಯೋಗ?

ಸಂಬಂಧ:– ಅರ್ಜುನ:– ದೇವ, ನಿನ್ನ ದಿವ್ಯ ಜನ್ಮ ಕರ್ಮಗಳನ್ನು ತಿಳಿಯುವದರಿಂದ ನಿನ್ನ ಪ್ರಾಪ್ತಿ ಹೇಗಾಗುವದು?

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।
ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥೧೦॥

ಅರ್ಥ:- ವೀತರಾಗಭಯಕ್ರೋಧಾಃ= (ವೀತಾ ವಿಗತಾಃ ರಾಗಭಯ ಕ್ರೋಧಾಃ

ಏಭ್ಯಃ) ಆಸಕ್ತಿ, ಭಯ ಮತ್ತು ಕ್ರೋಧಗಳಿಲ್ಲದ. ಮನ್ಮಯಾಃ= (ಮದೇಕ ಚಿತ್ತಾಃ) ನನ್ನಲ್ಲಿಯೇ ಮನಸ್ಸುಳ್ಳ, ಮಾಂ ಉಪಾಶ್ರಿತಾಃ= ನನ್ನನ್ನೇ ಆಶ್ರಯಿಸಿದ, ಬಹವಃ = ಅನೇಕರು ಜ್ಞಾನತಪಸಾ ಪೂತಾಃ = ಜ್ಞಾನ (ದಿವ್ಯಜನ್ಮ ದಿವ್ಯಕರ್ಮಗಳು)ರೂಪ ತಪಸ್ಸಿನಿಂದ ಪವಿತ್ರರಾದವರು (ಆಗಿ) ಮದ್ಭಾವಂ ಆಗತಾಃ= ನನ್ನ ಸಾಯುಜ್ಯವನ್ನು ಹೊಂದುತ್ತಾರೆ.

ವೀತರಾಗಭಯಕ್ರೋಧಾಃ:- ಧನ ಧಾನ್ಯಾದಿ ಪ್ರಾಪಂಚಿಕ ವಿಷಯಗಳ ಮೇಲಿರುವ ಅತುಲ ಆಸಕ್ತಿಯು ರಾಗ. ತಾನು ಕ್ಷಣ ಮಾತ್ರ ಅಗಲಿದರೂ ಆ ವಿಷಯಗಳು ಕೈಬಿಟ್ಟಾವಲ್ಲ ಎಂಬ ಅಂಜಿಕೆಯು ಭಯ. ಆ ವಿಷಯಗಳನ್ನು ಅಪಹರಿಸುವವರ ಬಗ್ಗೆ ಉಂಟಾಗುವ ಭಾವನೆಯು ಕ್ರೋಧ. ಈ ಮೂರು ವಿಕಾರಗಳಿಗೆ ಆಶ್ರಯ ಸ್ಥಾನವು "ದೇಹಾಭಿಮಾನ." ಗುರುವಿನ ಅನುಗ್ರಹ, ಶಾಸ್ತ್ರ ಶ್ರವಣಜನ್ಯ ವಿವೇಕ ಹಾಗು ದೇವನ ಅದೃಶ್ಯ ಕೃಪೆಗಳಿಂದ ದೇಹಾಭಿಮಾನವನ್ನು ನೀಗಿದರೆ ರಾಗ ಭಯ ಕ್ರೋಧಗಳು ತಮ್ಮಷ್ಟಕ್ಕೆ ತಾವೆ ಬಾಡಿ ಹೋಗುತ್ತವೆ. ಆಗ ಸಾಧಕರು ವೀತರಾಗಭಯಕ್ರೋಧರೆನಿಸುತ್ತಾರೆ.

ಮನ್ಮಯಾಃ ಮಾಂ ಉಪಾಶ್ರಿತಾಃ:– ಸಾಧ್ವಿಯು ತನ್ನ ಮನದ ತುಂಬ ಪತಿಯನ್ನೇ ಚಿಂತಿಸುವಂತೆ ತಮ್ಮ ನಿರ್ಮಲ ಮನದ ತುಂಬ ವಿಶ್ವೇಶ್ವರನ ನೆನಹು ಉಳ್ಳ ಸಾಧಕರು "ಮನ್ಮಯಾಃ." ಸತಿಯು ಪತಿಯನ್ನೇ ಸದಾ ಆಶ್ರ-ಯಿಸಿದಂತೆ ದೇವನನ್ನೇ ಜೀವನದ ತುಂಬ ಅನನ್ಯ ಭಾವದಿಂದ ಆಶ್ರಯಿಸಿದ ಸಾಧಕರು "ಮಾಂ ಉಪಾಶ್ರಿತಾಃ".

ಜ್ಞಾನ ತಪಸಾ ಪೂತಾಃ ಮದ್ಭಾವಂ ಆಗತಾಃ:– ರಾಗ ಭಯ ಕ್ರೋಧಗಳನಳಿದು, ಪರಮಾತ್ಮನಲ್ಲಿಯೇ ಮನವಿಟ್ಟು, ಅವನನ್ನೆ ಆಶ್ರಯಿಸಿದ ಸಾಧಕರ ಹೃದಯವು ಪರಿಶುದ್ಧ. ಅಂಥ ಹೃದಯದಲ್ಲಿ ಅಮರ ಆತ್ಮ ಬೆಳಕು ತುಂಬಿಕೊಳ್ಳುತ್ತದೆ. ಆ ಬೆಳಕೇ ಜ್ಞಾನ; ಅದೇ ತಪ. ಆ ತಪದ ಪ್ರಭಾವದಿಂದ ಸಾಧಕರು ಪುನೀತರಾಗುತ್ತಾರೆ; ಅಂದರೆ ತ್ವಂ ಪದ ಲಕ್ಷ್ಯವಾದ ಪ್ರತ್ಯಗಾತ್ಮನೇ ತಾವೆಂಬ ಭಾವವುಳ್ಳವರಾಗುತ್ತಾರೆ: ಬಳಿಕ, ದಿವ್ಯ ಜನ್ಮ ದಿವ್ಯ ಕರ್ಮವುಳ್ಳ ಪರಮಾತ್ಮನಲ್ಲಿ ಸಾಮರಸ್ಯ ಪಡೆಯುತ್ತಾರೆ (ಮದ್ಭಾವಮಾಗತಾಃ).

ಸಂಬಂಧ:– ಅರ್ಜುನ:- ಜನಾರ್ದನ, ನೀನೂ ಪಕ್ಷಪಾತಿಯೇ ಸರಿ. ನಿನ್ನನ್ನೇ ನಮಿಸಿ, ನಿನ್ನಲ್ಲಿಯೇ ಮನವಿಟ್ಟು, ನಿನ್ನ ಆಶ್ರಯವನ್ನೇ ಪಡೆದವರಿಗೆ ಮಾತ್ರ ನೀನು ಸಾಯುಜ್ಯ ಪದ ನೀಡುವೆ. ಉಳಿದ ಸಕಾಮ ಉಪಾಸಕರ ಗತಿ ಏನು! ಅವರನ್ನು ನೀನು ಪರಕೀಯ ಭಾವನೆಯಿಂದ ಕಾಣುತ್ತಿಯೋ?"

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೧೧॥**

ಭಾವ:- ಯಾರು ಹೇಗೆ ನನ್ನನ್ನು ಭಜಿಸುತ್ತಾರೆಯೋ (ಯಾವ ಭಾವನೆಯಿಂದ ಆಶ್ರಯಿಸುತ್ತಾರೆಯೋ) ಅವರನ್ನು ಅದೇ ರೀತಿ ನಾನು ಅನುಗ್ರಹಿಸುತ್ತೇನೆ. ಮನುಷ್ಯರು ಸರ್ವ

ಪ್ರಕಾರದಿಂದ ನನ್ನ ಪಥವನ್ನು ಅನುಸರಿಸುತ್ತಾರೆ.

ವಿವರಣೆ:- ಭಗವಂತ:- "ಧನಂಜಯ ನಾನು ಪಕ್ಷಪಾತಿ ಎಂದು ಸರ್ವಥಾ ಭಾವಿಸದಿರು. ಯಾರು ಯಾವ ರೀತಿ ನನ್ನ ಉಪಾಸನೆ ಮಾಡುವರೋ ಆ ರೀತಿ ನಾನು ಅಭಿವ್ಯಕ್ತನಾಗುವೆ. ಯಾರು ಏನನ್ನು ಬಯಸುವರೋ ಅವರಿಗೆ ಅದನ್ನೇ ಈಯುವೆ. ಆದರಿಷ್ಟೇ, ಅವರು ಆ ವಸ್ತುಗಳ ಮೋಹದಲ್ಲಿ ಚಿರಕಾಲ ಕೂಡ್ರ ಬಾರದೆಂದು ನನ್ನ ಹಿರಿದಾದ ಬಯಕೆ. ವಿನಾಶಗೊಳ್ಳುವ ಪ್ರಪಂಚದಿಂದ ಹೊರಳಿ ನನ್ನತ್ತ ಬರಬೇಕೆಂಬುದು ನನ್ನ ಅಮಿತ ಆಶೆ.

"ಮನುಷ್ಯರೆಲ್ಲರ ಸ್ವಭಾವ ಹಾಗು ಅಭಿರುಚಿಗಳು ಒಂದೇ ತೆರನಲ್ಲ. ಎಂಬ ಸಂಗತಿಯನ್ನು ಅಲ್ಲಗಳೆಯಲಾರೆ. ಅವರ ಸ್ವಭಾವ–ಅಭಿರುಚಿಗನುಸಾರ ಭೋಗ ಮೋಕ್ಷಗಳನ್ನು ಕರುಣಿಸುತ್ತೇನೆ. ಜನರು ಯಾವ ರೀತಿ ಭಜಿಸಿದರೇನು? ಯಾವ ನಾಮ ನುತಿಸಿದರೇನು ಕೊನೆಗೆ ಅವರು ನನ್ನತ್ತಲೇ ಬರುತ್ತಾರೆ. (ಮಮ ವರ್ತ್ಮಾ ಅನುವರ್ತಂತೇ.) ನಿಷ್ಕಾಮಿಗಳಂತೆ ಸಕಾಮಿಗಳು ಕೂಡ ನನ್ನೊಡನೆ ಸಾಮರಸ್ಯ ಹೊಂದಿಯೇ ಹೊಂದುತ್ತಾರೆ. ಇಷ್ಟೇ, ವ್ಯವಸಾಯ ಮತಿಯ ನಿಷ್ಕಾಮಿಗಳು ಬಹು ಬೇಗನೆ ನನ್ನ ಅನಂತ ಆನಂದ ಆಕಾಶದಲ್ಲಿ ಒಂದಾಗುತ್ತಾರೆ; ಅವ್ಯವಸಾಯಿ ಗಳಾದ ಸಕಾಮಿಗಳು ಬಹು ಕಾಲದ ನಂತರ ಭೋಗಗಳಲ್ಲಿ ವಿರತಿ ತಾಳಿ ನನ್ನತ್ತ ಬರುತ್ತಾರೆ. ಅವರನ್ನು ಅತೀವ ಪ್ರೇಮದಿಂದ ಅಪ್ಪಿಕೊಳ್ಳುವೆ. ನನ್ನಲ್ಲಿ ಸಮ ರಸಗೊಳಿಸುವೆ."

೧) ಜನರು ಎರಡು ಬಗೆ: ವ್ಯವಸಾಯಿ, ಅವ್ಯವಸಾಯಿ. ಅವ್ಯವಸಾಯಿ ಗಳು ಅಜ್ಞರು. ಭೋಗ ಪ್ರೇಮಿಗಳು. ಅವರ ಕಣ್ಣು ಸದಾ ವಿಲಾಸ ವಸ್ತುಗಳ ಮೇಲೆ. ದೇವರನ್ನು ಭಜಿಸಿದರೂ ಅವರ ಉದ್ದೇಶ ಭೋಗ ಪದಾರ್ಥಗಳ ಸಂಪಾ ದನೆ. ವಿಷಯಗಳಿಗಾಗಿ ಸದಾ ತ್ರಸ್ತರಾದ ಅವರು ಅಸಂಖ್ಯ ಜನ್ಮಗಳನ್ನು ಉಪ ಭೋಗದಲ್ಲಿ ಕಳೆಯುತ್ತಾರೆ. ಕೊನೆಗೊಮ್ಮೆ ಭೋಗ ಜೀವನದಿಂದ ಬೇಜಾರು ಪಟ್ಟು ವಿರಾಗಿಗಳಾಗುತ್ತಾರೆ.

ವ್ಯವಸಾಯಿಗಳು ಸುಜ್ಞರು. ಅವರ ದೃಷ್ಟಿ ಪರಮ ಪ್ರಭುವಿನ ಮೇಲೆ. ಅವರು ಮನದಲ್ಲಿ ಸದ್ಗುಣಗಳ ಜೋಪಾಸನೆ ಮಾಡುತ್ತಾರೆ. ಹಗಲು ರಾತ್ರಿ ದೇವನಿಗಾಗಿ ಕಾಯುತ್ತಾರೆ. ಆರ್ತಭಾವದಿಂದ ದೈವೀ ಸಂಪದವನ್ನು ಪ್ರಾರ್ಥಿಸು ತ್ತಾರೆ. ಅವು ದೊರೆತ ಒಡನೆಯೇ ಅತ್ಯಂತ ವೇಗದಿಂದ ದೇವನತ್ತ ಪ್ರಯಾಣ ಮಾಡುತ್ತಾರೆ. ಕಡೆಗೆ ಅವನಲ್ಲಿ ಒಂದಾಗುತ್ತಾರೆ.

ವ್ಯವಸಾಯಿಗಳು ವಿರಾಗಿಗಳು:– ಅವ್ಯವಸಾಯಿಗಳು ರಾಗಿಗಳು; ಅವರು ದೀರ್ಘಕಾಲದ ಭೋಗದಿಂದ ವಿಷಯರಾಗ ಬತ್ತಿದೊಡನೆ ವಿರಾಗಿ ವರ್ಗಕ್ಕೆ ಸೇರುತ್ತಾರೆ. ವಿರಾಗಿಗಳು ಭೌತ ಸಂಪದದಲ್ಲಿ ಅನಾಸಕ್ತರು; ಆದರೆ ಅವರು ಪಡೆದ

ಗುಣ ಸಂಪದ ಅಪಾರ. ಉದಾ: "(೧) ಎಡರಡಸಿದ ವೇಳೆಯೊಳು ಧೈರ್ಯ (೨) ಸಿರಿವಡೆದು ಜೀವಿಸುವೆಡೆಯೊಳು ವಿನಯ (೩) ಕಡು ಜವ್ವನದೊಳು ವಿಕೃತಿ-ದೋರದಿರುವಿಕೆ (೪) ಪಿಡಿದ ನೇಮವನು ಬಿಡದತಿ ಛಲ (೫) ಆಸುವಳಿ ಯಲು ದೇಹಿ ಎನಲೊಲ್ಲದ ಅಘಟ (ನಿರ್ಧಾರ) (೬) ಪುಸಿಯನೆಲ್ಲಿಯೂ ನುಡಿ ಯದ ಸತ್ಯ (೭) ಮಸಳಿಸದಿಹ ಪುಣ್ಯಮಯ ಕೀರ್ತಿ (೮) ಶಾಂತರು ಒಸೆದು ಆಹುದೆಂದು ಬಣ್ಣಿಸುವ ವರ್ತನ (೯) ವಿತರಣದೊಡನೆ ಭೋಗಿಸುವ ಅರ್ಥ ದೊದವು (೧೦) ಹಿತವಚನವೆ ತೊಡವೆನಿಪ ದಾನ (೧೧) ಶ್ರುತಿ ಬೋಧನೆಯೊಳು ಉಪರತಿ ಇಲ್ಲದಿಹುದು (೧೨) ನುತಿವೆತ್ತು ಕೈಸಾರುತಿಹ ಮನೋರಥ (೧೩) ಕೋಪವಂಟದ ತಪ (೧೪) ಪರವಧುವಿನ ರೂಪ ಕಂಡೆಳಸದ ಕರಣ ವಿಜಯ (೧೫) ತಾಪವಡರಿ ಕೆಡಸದ ಸಾರಸುಖ (೧೬) ಕಾಪಟ್ಯವಿಲ್ಲದ ಆಶ್ರಮ ಧರ್ಮ ರತಿ (೧೭) ಧರೆಯೊಳು ಅತ್ಯಧಿಕವೆನಿಪ ಶಾಂತಿಮತ (೧೮) ಕರುಣ ವಿದ್ಯೆಗಳುಳ್ಳ ಗುರುಭಜನೆ (ಸೇವೆ) (೧೯) ಪರತರ ಮುಕುತಿದೋರುವ ಶಾಸ್ತ್ರಾಭಿರತಿ (೨೦) ಕಂತುಹರ ದೇವನಡಿಯ ಉರುಭಕ್ತಿ." ಇಂಥ ಅಮೂಲ್ಯ ಗುಣ ರತ್ನಗಳು ವಿರಾಗಿಯ ಹೃದ್ಭಾಂಡಾರದಲ್ಲಿ ಹೊಳೆಯುತ್ತಿವೆ.

**ಸಂಬಂಧ:–** ನಿಷ್ಕಾಮ ಸಾಧನೆಯಿಂದ ಪರಮ ಪುರುಷಾರ್ಥ ದೊರೆಯು ತ್ತಿದ್ದರೂ ಬಹುಜನ ಸಕಾಮಿಗಳಾಗಿ ವಿವಿಧ ವೈಭವಗಳಿಗಾಗಿ ಆಶಿಸುವದೇಕೆ?

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥೧೨॥**

**ಅರ್ಥ:-** ಕರ್ಮಣಾಂ ಸಿದ್ಧಿಂ=ಕರ್ಮಗಳ ಸಿದ್ಧಿಯನ್ನು (ಫಲವನ್ನು) ಕಾಂಕ್ಷಂತಃ= ಬಯಸುತ್ತಿರುವವರು ಇಹ=ಈ ಭೂಲೋಕದಲ್ಲಿ ದೇವತಾಃ= ದೇವತೆಗಳನ್ನು, ಯಜಂತೇ = ಆರಾಧಿಸುತ್ತಾರೆ. ಹಿ =ಏಕೆಂದರೆ, ಮಾನುಷೇ ಲೋಕೇ= ಮನುಷ್ಯ ಲೋಕದಲ್ಲಿ ಕರ್ಮಜಾ = ಕರ್ಮಜನ್ಯವಾದ, ಸಿದ್ಧಿಃ= ಫಲವು ಕ್ಷಿಪ್ರಂ =ಶೀಘ್ರವಾಗಿ ಭವತಿ= ಆಗುತ್ತದೆ. (ಮನುಷ್ಯರು ಸಕಾಮಿಗಳಾಗಿ ದೇವತೆಗಳನ್ನು ಆರಾಧಿಸುತ್ತಾರೆ; ಏಕೆಂದರೆ ಕರ್ಮಫಲವು ಬೇಗನೆಯೇ ಸಿದ್ಧಿಸುತ್ತದೆ.)

**ವಿವರಣೆ:– ಭಗವಂತ:–** "ಅರ್ಜುನ, ಮೋಕ್ಷವು ಅಂತಿಮ ಪುರುಷಾರ್ಥ; ಅದರಂಥ ಶ್ರೇಷ್ಠ ಹಾಗು ಪವಿತ್ರ ಫಲ ಇನ್ನೊಂದಿಲ್ಲ. ನಿಜ. ಆದರೆ ಅದನ್ನು ಗಳಿಸುವದು ಅಷ್ಟು ಹಗುರಲ್ಲ. ಅದಕ್ಕಾಗಿ ಅನೇಕ ಜನ್ಮಗಳಲ್ಲಿ ನಿಷ್ಕಾಮ ಕರ್ಮ ಮಾಡಬೇಕು; ಜನ್ಮ ಜನ್ಮಾವಧಿ ಆತ್ಮೋಪದೇಶ ನೀಡಬಲ್ಲ ಸಮರ್ಥ ಗುರುಗಳನ್ನು ಹುಡುಕಬೇಕು. ಅವರ ಸೇವೆ ಮಾಡಿ ಕೃಪಾಪಾತ್ರನಾಗಬೇಕು. ಬಿಡದೆ ಅವರಿಂದ ಉಪದೇಶ ಆಲಿಸಬೇಕು. ಕೇಳಿದ ತತ್ತ್ವ ವಿಷಯಗಳನ್ನು ಏಕಾಗ್ರತೆಯಿಂದ ಮನನ ಮಾಡಬೇಕು. ನಂತರ ಆತ್ಮಜ್ಞಾನದ ಉದಯ; ಅದರಿಂದ ಆತ್ಮ ಸಾಕ್ಷಾತ್ಕಾರ, ಅದೇ ಮುಕ್ತಿ. ಇಷ್ಟು ದೀರ್ಘ ಶ್ರಮ ಯಾರಿಗೆ ಬೇಕಾಗಿದೆ ಹೇಳು?

ಸಹಜ ದೊರೆಯುವ ಫಲ ತ್ಯಜಿಸಿ ಈ ಕಷ್ಟಸಾಧ್ಯ ಸಿದ್ಧಿಗಾಗಿ ಕೈ ಹಾಕಲು ಯಾರು ತಾನೆ ಮನಸ್ಸು ಮಾಡಬಹುದು? ಆದ್ದರಿಂದಲೇ ಮೋಕ್ಷ ಕಾರಣಕ್ಕಾಗಿ ನಿಷ್ಕಾಮ ಜೀವನ ಸಾಗಿಸುವವರು ಅತಿ ವಿರಳ.

"ಭೋಗ ವೈಭವಗಳು ಶೀಘ್ರ ಸಂಪಾದನೀಯ. ಅವುಗಳನ್ನು ಬಯಸಿ ಸಕಾಮಿಗಳು ಅನೇಕ ದೇವತೆಗಳನ್ನು ಆರಾಧಿಸುತ್ತಾರೆ. ಆಗ ನಾನೇ ಆಯಾ ದೇವ ತೆಗಳ ರೂಪ ತಾಳಿ ಅವರ ಇಷ್ಟಾರ್ಥಗಳನ್ನು ದಯಪಾಲಿಸುತ್ತೇನೆ. ಅದೂ ಅತೀ ತೀವ್ರವಾಗಿ! ಇಂದು ಅವರು ಕರ್ಮ ಮಾಡಿದರೆ ಮರುದಿನವೇ ಅದರ ಫಲವನ್ನು ಅವರ ಕೈಗಿಡುವೆ. ಇಂದು ಅಕ್ಷತೆ, ನಾಳೆಯೇ ಪ್ರಾಪಂಚಿಕ ಸುಖ ಆರಂಭ! ಪಾರ್ಥ, ಈ ಮನುಜಲೋಕದಲ್ಲಿ ಕರ್ಮ ಫಲವು ಕೈಗೂಡುವಷ್ಟು ತೀವ್ರ ಇನ್ನಾವ ಲೋಕದಲ್ಲೂ ಆಗದು. ಎಂತಲೇ ಸರ್ವ ಜನರು ಸಕಾಮ ಕರ್ಮ ಮಾಡುತ್ತಾರೆ. ವಿವಿಧ ದೇವ ದೇವತೆಗಳ ಭಜನ ಸ್ತವನ ಆರಾಧನ ಅನುಸಂಧಾನ ಗಳನ್ನು ಮನಸೋಕ್ತ ಆಚರಿಸುತ್ತಾರೆ."

ಸಂಬಂಧ:– ಅರ್ಜುನ:- "ಭಗವಂತ, ಇದೀಗ ನೀವು ಹೇಳಿದಂತೆಯೇ ಚಾತುರ್ವರ್ಣ್ಯದ ವ್ಯವಸ್ಥೆ ಇದೆಯೆ?"

ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ ।
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥೧೩॥

ಅರ್ಥ:– ಗುಣ ಕರ್ಮ ವಿಭಾಗಶಃ= ಗುಣ ಕರ್ಮ ವಿಭಾಗಾನುಸಾರ ಚಾತು ರ್ವರ್ಣ್ಯಂ =ನಾಲ್ಕು ಅಂಗಗಳುಳ್ಳ ವರ್ಣ ಪದ್ಧತಿಯು ಮಯಾ = ನನ್ನಿಂದ ಸೃಷ್ಟಂ = ಸೃಜನವಾಯ್ತು. ತಸ್ಯ = ಅದರ ಕರ್ತಾರಮಪಿ = ಕರ್ತಾರನಾಗಿದ್ದರೂ ಮಾಂ = ನನ್ನನ್ನು ಅಕರ್ತಾರಂ = ಅಕರ್ತಾರನೆಂದು ಅವ್ಯಯಂ = ಅವ್ಯಯನೆಂದೂ ವಿದ್ಧಿ = ತಿಳಿ.

ಭಗವಂತ:– "ಧನಂಜಯ, ಅನಾದ್ಯನಂತ ಪರಮಾಕಾಶ ನಾನು. ಅವಿಕಾ ರಿಯಾದ ನಾನು ಅಚಿಂತ್ಯ! ಅಖಂಡ ಹಾಗು ಅಪರಿಣಾಮಿ! ನನ್ನ ಪವಿತ್ರ ಆಧಾ ರದಲ್ಲಿಯೇ ಪ್ರಕೃತಿ ವಿಕಸಿಸಿತು. ಅದರ ಗರ್ಭದಿಂದ ಜಡ ಜಗತ್ತು ಮೂಡಿ ಬಂತು; ಜಡಾಜಡ ಜೀವರು ತಲೆದೋರಿದರು; ಮಾನವ ಕುಲ ಉಗಮಿಸಿತು. ಪ್ರಾಕೃತಿಕ ಸತ್ವಗುಣ ಸೂತ್ರಬದ್ಧರಾದವರೇ ಬ್ರಾಹ್ಮಣರು; ಅವರ ಕರ್ಮ ಸಾತ್ವಿಕ. ಪ್ರಾಕೃತಿಕ ರಜಸ್ಸತ್ವ ಗುಣಸೂತ್ರಬದ್ಧರಾದವರೇ ಕ್ಷತ್ರಿಯರು; ಅವರ ಕರ್ಮ ರಜೋ ಮಿಶ್ರ ಸತ್ವ. ಪ್ರಾಕೃತಿಕ ರಜೋಗುಣ ಸೂತ್ರಬದ್ಧರಾದವರು ವೈಶ್ಯರು; ಅವರ ಕರ್ಮ ರಾಜಸಿಕ. ಪ್ರಾಕೃತಿಕ ತಮೋಗುಣ ಸೂತ್ರಬದ್ಧರಾದ ವರು ಶೂದ್ರರು; ಅವರ ಕರ್ಮ ತಾಮಸಿಕ. ಹೀಗೆ ಗುಣ ಕರ್ಮ ವಿಭಾಗಾನು ಸಾರ ಮಾನವರು ನಾಲ್ವಿಧ. ಎಲ್ಲವೂ ನನ್ನಿಂದ ಸೃಷ್ಟವಾಗಿದೆಯಾಗಿ ಅವುಗಳ ಕರ್ತ ನಾನೇ ಎಂದು ಭಾವಿಸು.

"ಆದರೆ, ವಾಸ್ತವಿಕವಾಗಿ ನೋಡಿದೆಯಾದರೆ ನಾನು ಅಕರ್ತ, ಅಭೋಕ್ತ,

ಅವ್ಯಯ, ಅಚ್ಯುತ! ನಾನು ಏನನ್ನು ಮಾಡುವವನೂ ಅಲ್ಲ, ಕೆಡಿಸುವವನೂ ಅಲ್ಲ. ಆಕಾಶದಂತೆ ಸರ್ವ ಕರ್ಮಾಶ್ರಯ; ನಿರ್ಲಿಪ್ತ. ನಿರಂಜನ! ಸನ್ನಿಧಾನ ಮಾತ್ರದಿಂದ ಕ್ರಿಯಾಭೂಮಿಯಾದ ಪ್ರಕೃತಿ ತನ್ನ ಸಹಸ್ರಮುಖ ವಿಲಾಸವನ್ನು ತೋರುತ್ತದೆ; ವರ್ಣ ವ್ಯವಸ್ಥೆಯಂಥ ಸಾಮಾಜಿಕ ಪದ್ಧತಿಗಳೆಲ್ಲ ಅದರ ರಚನೆಗಳು. ನಾನು ನಿರ್ಗುಣ, ನಿಷ್ಕ್ರಿಯ, ಅವರ್ಣನೆಂದು ಪರಿಭಾವಿಸು. ನೀನು ನನ್ನತ್ತ ಬರಬೇಕಲ್ಲವೆ? ಹಾಗಾದರೆ ಆ ವರ್ಣಗಳ ಅಭಿಮಾನ ಶಿಥಿಲಗೊಳಿಸು. ಅನಾತ್ಮ ವಸ್ತುವ್ಯಾಮೋಹ ನೀಗು."

**ವಿವರಣೆ:**– (೧) **ವರ್ಣಗಳು:**– ವೈವಿಧ್ಯಮಯ ಜಗತ್ತಿನ ಮೂಲ ವಸ್ತುಗಳು ಮೂರು: ಸತ್ವ ರಜ ತಮ. ಮನುಷ್ಯನು ಆ ಮೂರರ ಸಮ್ಮಿಶ್ರ ನಿರ್ಮಿತಿ. ಕೆಲವರಲ್ಲಿ ಸತ್ವ ಹೆಚ್ಚು. ಕೆಲವರಲ್ಲಿ ಸತ್ವ-ರಜ ಮಿಶ್ರಣ, ಇನ್ನು ಕೆಲವರಲ್ಲಿ ರಜ–ತಮ ಮಿಶ್ರಣ. ಉಳಿದವರಲ್ಲಿ ತಮದ ಆಧಿಕ್ಯ. ಸಾತ್ವಿಕರು ಬ್ರಾಹ್ಮಣರು. ವೀರ ಕ್ಷತ್ರಿಯರು ರಾಜಸಿಕ ಸಾತ್ವಿಕರು. ವೈಶ್ಯರು ರಾಜಸಿಕ ತಾಮಸಿಕರು. ತಮೋ ಭಾಗ ಪ್ರಧಾನವುಳ್ಳವರೇ ಶೂದ್ರರು. ಬ್ರಾಹ್ಮಣರ ಕರ್ಮ ಸಾತ್ವಿಕ–ಶಮ ದಮ ಅಧ್ಯಯನ ಅಧ್ಯಾಪನಾದಿ. ಕ್ಷತ್ರಿಯರ ಕರ್ಮ ರಜ-ಸತ್ವ. ರಕ್ಷಣಾದಿ. ವೈಶ್ಯರ ಕರ್ಮ ರಜ-ತಮ, ಕೃಷಿ ವಾಣಿಜ್ಯಾದಿ. ಶೂದ್ರರ ಕರ್ಮ ತಾಮಸಿಕ–ಸೇವಾ ಶುಶ್ರೂಷಾದಿ. ಆಯಾ ವರ್ಣದವರಿಗೆ ಆಯಾ ಕರ್ಮಗಳೇ ಇಷ್ಟ. ಅಧ್ಯಯನಶೀಲನಾದ ಬ್ರಾಹ್ಮಣನಿಗೆ ವಿದ್ಯೆ ಎಂದರೆ ಪ್ರೇಮ: ಅವನಿಂದ ರಾಷ್ಟ್ರ ರಕ್ಷಣೆ ವಾಣಿಜ್ಯಗಳನ್ನು ನಿರೀಕ್ಷಿಸುವದು ಅಸಮಂಜಸ. ಅದೇ ರೀತಿ, ಕ್ಷತ್ರಿಯನಿಗೆ ಪ್ರಜಾರಕ್ಷಣಾ ಕಾರ್ಯದಲ್ಲಿ ಅಭಿರತಿ, ವಿದ್ಯೆ ಉದ್ಯಮ ಹಾಗು ಸೇವೆಗಳಲ್ಲಿ ಅನಾಸಕ್ತಿ; ವೈಶ್ಯನಿಗೆ ಉದ್ಯಮದಲ್ಲಿ ಅಭಿರತಿ, ವಿದ್ಯೆ ರಕ್ಷಣ ಹಾಗು ಸೇವೆಗಳಲ್ಲಿ ಅನಾಸಕ್ತಿ; ಶೂದ್ರನಿಗೆ ಸೇವಾ ಕಾರ್ಯಗಳಲ್ಲಿ ರತಿ. ವಿದ್ಯೆ, ಧೀರಕಾಳಗ ಹಾಗು ವಾಣಿಜ್ಯಗಳಲ್ಲಿ ಅವನಿಗೆ ಅನಾಸಕ್ತಿ. ಈ ಗುಣ ಕ್ರಿಯಾಧಾರಿತ ವರ್ಣಭೇದ ಬರಿ ಭಾರತಕ್ಕೆ ಸೀಮಿತವಲ್ಲ ಮಾನವ ಕುಲಕ್ಕೆಲ್ಲ ಇದು ಅನ್ವಯಿಸುತ್ತದೆ. ಮನುಷ್ಯ ಮನುಷ್ಯನಲ್ಲಿರುವ ಸ್ವಭಾವ ಸಾಮರ್ಥ್ಯ ಹಾಗು ಅಭಿರುಚಿ ಭೇದವನ್ನು ಯಾರೂ ಅಲ್ಲಗಳೆಯಲಾರರು.

ಆದರೆ, ಭಾರತ ದೇಶದಲ್ಲಿ ದುರ್ದೈವದಿಂದ ಆ ನೈಸರ್ಗಿಕ ವರ್ಣಭೇದಗಳು ರಕ್ತ ಸಂಬಂಧದ ಜಾತಿಗಳಾದವು. ವ್ಯಕ್ತಿಯ ಸ್ವಭಾವವು ಅವನ ವರ್ಣವನ್ನು ನಿರ್ಧರಿಸುವ ಬದಲು ಅವನ ರಕ್ತಪರಂಪರೆ ನಿರ್ಧರಿಸತೊಡಗಿತು. ಬ್ರಾಹ್ಮಣರ ಮಗ ತಾಮಸಿಯಾಗಿದ್ದರೂ ಬ್ರಾಹ್ಮಣ ಎನಿಸಿದ. ಶೂದ್ರನ ಮಗ ಸಾತ್ವಿಕನಾಗಿದ್ದರೂ ಶೂದ್ರನೆನಿಸಿದ. ಬರ ಬರುತ್ತ, ಆ ವರ್ಣಗಳಲ್ಲಿ ತರತಮ ಭಾವ ಉದಿಸಿತು, ಬ್ರಾಹ್ಮಣರು ಶ್ರೇಷ್ಠ, ಶೂದ್ರರು ತೀರ ಕನಿಷ್ಠ; ಬ್ರಾಹ್ಮಣರು ಸೇವ್ಯ,

ಶೂದ್ರರು ಅಸೇವ್ಯ; ಬ್ರಾಹ್ಮಣರು ಸ್ಪರ್ಶ್ಯ, ಶೂದ್ರರು ಅಸ್ಪರ್ಶ್ಯ ಎಂಬ ವಿಕೃತ ಕಲ್ಪನೆ ರೂಢಮೂಲವಾಯ್ತು. ಈ ಕಲ್ಪನೆಯಿಂದಾಗಿ ಶೂದ್ರರು ಬಹಿಷ್ಕೃತರಾದರು; ಕೋಟ್ಯಂತರ ಸಂಖ್ಯೆಯಲ್ಲಿರುವ ಅವರು ಮನಬಲ್ಲಂತೆ ತುಳಿಯಲ್ಪಟ್ಟರು. ಅವರ ಬದುಕು ನಾಯಿ ನರಿಗಳಿಗೂ ಕೀಳಾಯ್ತು. ವಿಕೃತ ವರ್ಣ ಕಲ್ಪನೆಯಿಂದ ಘಟಿಸಿದ ಈ ಅಮಾನುಷ ನಬ್ಬಾಳಿಕೆಯೇ ಹಿಂದೂ ಧರ್ಮಕ್ಕಂಟಿದ ಘೋರ ಪಾಪ! ಮೇಲಿನ ವರ್ಗದವರು ಮಾಡಿದ ಅಕ್ಷಮ್ಯ ಅಪರಾಧ!

(೨) ಕರ್ಮಗಳಲ್ಲಿ ಶ್ರೇಷ್ಠತೆ ಕನಿಷ್ಠತೆಯಿಲ್ಲ:– ಸಮಾಜ ಬಾಳಬೇಕಾದರೆ ನಾಲ್ಕೂ ಕರ್ಮಗಳು ಅಗತ್ಯವಲ್ಲವೆ? ದೇಹವನ್ನೇ ನೋಡಿ. ಬುದ್ಧಿಯ ಸ್ಥಾನವಾದ ತಲೆ ಬ್ರಾಹ್ಮಣ. ಸಂರಕ್ಷಣಾ ಸಾಮರ್ಥ್ಯವುಳ್ಳ ಬಾಹುಗಳು ಕ್ಷತ್ರಿಯ. ಪೋಷಕಾಂಗವಾದ ಉದರ ವೈಶ್ಯ. ಸೇವೆಗೆ ಸಹಕಾರಿಗಳಾದ ಕಾಲುಗಳು ಶೂದ್ರ. ಈ ಮಾತಿಗೆ ಆಧಾರವಾಗಿ ಉಪನಿಷತ್ಕಾರರು ಹೀಗೆ ಹೇಳಿದ್ದಾರೆ. ಪರಮಾತ್ಮನೆಂಬ ವಿಶ್ವಪುರುಷನ ಮುಖದಿಂದ ಬ್ರಾಹ್ಮಣರು ಹುಟ್ಟಿದರು. ಬಾಹುಗಳಿಂದ ಕ್ಷತ್ರಿಯರು ಹುಟ್ಟಿದರು. ಉದರದಿಂದ ವೈಶ್ಯರು ಹುಟ್ಟಿದರು. ಪಾದಗಳಿಂದ ಶೂದ್ರರು ಹುಟ್ಟಿದರು. ಹೀಗಿರುವಾಗ ಯಾವುದು ಶ್ರೇಷ್ಠ ಯಾವುದು ಕನಿಷ್ಠ? ನಾಲ್ಕೂ ಭಾಗಗಳು ತಮ್ಮ ತಮ್ಮ ನಿರ್ದಿಷ್ಟ ಕರ್ಮ ಮಾಡಿದರೆಯೇ ವ್ಯಕ್ತಿಯ ಜೀವನ ಹೃದ್ಯ. ಹಾಗೆ ನಾಲ್ಕೂ ವರ್ಣದವರು ಪರಸ್ಪರ ಸಹಕಾರ ಸಹಾನುಭೂತಿಗಳಿಂದ ದುಡಿದರೆಯೇ ಸಮಾಜ ಪುರುಷನ ಜೀವನ ಸುಂದರ.

ನಾಲ್ವರಲ್ಲಿ ಯಾರೂ ದೊಡ್ಡವರಲ್ಲ, ಯಾರೂ ಕಡಿಮೆಯವರಲ್ಲ ಎಂಬ ಮಾತಿಗೆ ಪುಷ್ಟಿ ಬರಲೆಂದೇ ನಮಸ್ಕರಿಸುವ ಪ್ರಥೆ ತಂದರು ಬಲ್ಲಿದರು. ನಮಿಸುವಾಗ ಬ್ರಾಹ್ಮಣ ಸ್ಥಾನವೆನಿಸಿದ ತಲೆಯನ್ನು ಶೂದ್ರಸ್ಥಾನವೆನಿಸಿದ ಪಾದಗಳ ಮೇಲಿಡುತ್ತೇವೆ. ಕ್ಷತ್ರಿಯ ತಾಣವೆನಿಸಿದ ಬಾಹುಗಳನ್ನು ಪಾದಗಳೆದುರು ನೆಲಕ್ಕೆ ಹಚ್ಚುತ್ತೇವೆ. ವೈಶ್ಯ ಸ್ಥಾನವೆನಿಸಿದ ಉದರವಂತು ಭೂಮಿಗೆ ಹತ್ತಲೇ ಬೇಕಲ್ಲ. ಹೀಗೆ ನಮಸ್ಕರಿಸಿದಾಗ ಗುರುಗಳು ಮುಖದಿಂದ ಮಂತ್ರ ನುಡಿದು, ಹಸ್ತಗಳಿಂದ ಆಶೀರ್ವಾದ–ಅಭಯ ನೀಡುತ್ತಾರೆ. ಇದು ವರ್ಣ ಸಮನ್ವಯದ ದ್ಯೋತಕ.

(೩) ದೈನಂದಿನ ವ್ಯವಹಾರಗಳಲ್ಲಿ ಕೂಡ ಪ್ರತಿಯೊಬ್ಬ ಬ್ರಾಹ್ಮಣನಾಗಿ ಪೂಜಿಸುತ್ತಾನೆ. ಪ್ರಸಂಗ ಬಂದಾಗ ಕ್ಷತ್ರಿಯನಾಗಿ ರಕ್ಷಿಸಿಕೊಳುತ್ತಾನೆ. ವೈಶ್ಯನಾಗಿ ಆಹಾರ ಸಂಗ್ರಹಿಸುತ್ತಾನೆ. ಶೂದ್ರನಾಗಿ ಮನೆ, ವಸ್ತ್ರ, ದೇಹಗಳನ್ನು ಸ್ವಚ್ಛಮಾಡಿಕೊಳ್ಳುತ್ತಾನೆ. ಇವುಗಳಲ್ಲಿ ಒಂದು ವ್ಯವಹಾರ ನಿಂತರೂ ನಾಶ ತಪ್ಪಿದ್ದಲ್ಲ. ಆದ್ದರಿಂದ ನಾಲ್ವರೂ ಶ್ರೇಷ್ಠ. ನಾಲ್ವರ ಕಾರ್ಯಗಳೂ ಪವಿತ್ರ.

೪) ವರ್ಣಗಳು ದೇಹಕ್ಕಲ್ಲ; ಆತ್ಮಕ್ಕೂ ಇಲ್ಲ; ಅವು ಜೀವನಿಗೆ. ತನ್ನ ಸ್ವರೂಪ ಮರೆತು ಅನಾತ್ಮಾಭಿಮಾನ ಹೊಂದಿದ ಅಜ್ಞ ಜೀವನು ಅವುಗಳನ್ನು

ನಿರ್ಮಿಸಿದ, ಹಾಗು ತಾನೇ ಅವುಗಳಲ್ಲಿ ಬದ್ಧನಾದ. ಒಂದು ವೇಳೆ ಅವು ಪರಮಾತ್ಮನಿಂದ ನಿರ್ಮಿತವಾಗಿದ್ದರೆ ಕೆಡಿಸುವದೇ ಸಾಧ್ಯವಿರುತ್ತಿರಲಿಲ್ಲ; ಹಾಗಿಲ್ಲ, ಜಾತಿಗಳನ್ನು ಬೇಕಾದಂತೆ ಬದಲಿಸಬಹುದು.

ಜನ್ಮನಾ ಜಾಯತೇ ಶೂದ್ರಃ। ಸಂಸ್ಕಾರಾದ್ವಿಜ ಉಚ್ಯತೇ ॥
ವೇದಾಧ್ಯಯನಾತ್ ವಿಪ್ರೋ ಭವತಿ। ಬ್ರಹ್ಮ ಜಾನಾತೀತಿ ಬ್ರಾಹ್ಮಣಃ॥

ಹುಟ್ಟುವಾಗ ಎಲ್ಲರೂ ಶೂದ್ರರು. ಅವರಿಗೆ ಸಂಸ್ಕಾರವಿತ್ತಾಗ ದ್ವಿಜರಾಗುತ್ತಾರೆ. ವೇದಾಧ್ಯಯನ ಮಾಡಿದಾಗ ವಿಪ್ರರಾಗುತ್ತಾರೆ. ಬ್ರಹ್ಮನನ್ನು ತಿಳಿದಾಗ ಬ್ರಾಹ್ಮಣರಾಗುತ್ತಾರೆ. ಈ ಆಧಾರ ವಚನದಿಂದ ಕಂಡು ಬರುವಂತೆ ಮನಸ್ಸು ಮಾಡಿದರೆ ಜಾತ್ಯಾಂತರ, ವರ್ಣಾಂತರ, ಧರ್ಮಾಂತರ ಎಲ್ಲವೂ ಸಾಧ್ಯ. ಪರಿಶುದ್ಧ ಕುಲದ ಬ್ರಾಹ್ಮಣರಿಂದು ಪಾದರಕ್ಷೆಯ ವ್ಯವಹಾರ ಮಾಡುತ್ತಾರೆ. ಕ್ಷತ್ರಿಯ ರಾಜರು ವ್ಯಾಪಾರಕ್ಕಿಳಿದಿದ್ದಾರೆ. ವೈಶ್ಯರು ಅಧ್ಯಾಪನ ಮಾಡುತ್ತಾರೆ. ಶೂದ್ರರು ರಾಜ್ಯವಾಳುತ್ತಾರೆ. ಗುರುಗಳಾಗಿ ಉಪದೇಶಿಸುತ್ತಾರೆ. ವರ್ಣೀಯರು ಬೌದ್ಧ ಜೈನ ಮುಸ್ಲೀಮ ಕ್ರಿಸ್ತ ಮತ ಸ್ವೀಕರಿಸುತ್ತಿರುವದು ಸರ್ವೇ ಸಾಮಾನ್ಯ ಸಂಗತಿ. ಆದ್ದರಿಂದ ವರ್ಣಾದಿಗಳು ಜೀವ ನಿರ್ಮಿತ.

೫) ಇನ್ನು ದೇಹದ ಬಾಹ್ಯ ಚಿಹ್ನಗಳ ಮೇಲಿಂದ ವರ್ಣಾದಿ ಕಲ್ಪನೆ. ಹಾಗು ವರ್ಣ ವರ್ಣಗಳ ಕಲಹ. ಚಿಹ್ನಗಳನ್ನು ಮರೆತು ಅಂತರಂಗದಲ್ಲಿ ಜಾಜ್ವಲ್ಯಮಾನವಾಗಿ ಹೊಳೆವ ಪರಮಾತ್ಮನತ್ತ ದೃಷ್ಟಿ ಹಾಕಿದಾಗ ಎಲ್ಲಿ ಜಾತಿ? ಎಲ್ಲಿ ವರ್ಣ? ಎಲ್ಲಿ ಧರ್ಮ? ಕಲಹವೆಲ್ಲಿ? ಸ್ಥಾನ ಮಾನಗಳು ಕೇವಲ ವ್ಯಾವಹಾರಿಕ, ನೈಜವಲ್ಲ. ಆದ್ದರಿಂದಲೇ ತತ್ತ್ವ ಅರಿತ ಮಹಾತ್ಮರು ಒಂದು ವಿಶಿಷ್ಟ ಕರ್ಮಕ್ಕೆ ಅಂಟಿಕೊಳ್ಳುವದಿಲ್ಲ. ಸಮಯಾನುಸಾರ ಎಲ್ಲ ಕಾರ್ಯಗಳನ್ನು ಮನವಿಟ್ಟು ಮಾಡುತ್ತಾರೆ. ಉದಾ: ಗಾಂಧೀಜಿ. ಅವರು ಸತ್ಯದರ್ಶಿಗಳು ಗುರುವಾಗಿ ಉಪದೇಶಿಸಿದರು. ಕ್ಷತ್ರಿಯನಂತೆ ಬ್ರಿಟಿಶರೊಂದಿಗೆ ಅಹಿಂಸಾತ್ಮಕ ಕದನ ಮಾಡಿದರು. ವೈಶ್ಯನಾಗಿ ದುಡಿದರು, ಶೂದ್ರನಂತೆ ಭಂಗಿ ಬಳಿದರು. ಆ ಎಲ್ಲ ಕಾರ್ಯಗಳಲ್ಲಿ ದೇವ ದರ್ಶನ ಪಡೆದರು. ಅವರಿಗೆ ವರ್ಣದ ಕಟ್ಟಿಲ್ಲ.

(೬) ಪ್ರಾಸಂಗಿಕ ಮಂತ್ರ ಸರಿಯಾಗಿ ತಿಳಿಯಬೇಕಾದರೆ ಮೂರನೆಯ ಅಧ್ಯಾಯದ ೨೭-೨೮ ಮಂತ್ರಗಳನ್ನು ನೆನಿಸಿಕೊಳ್ಳಬೇಕು.

"ಪ್ರಕೃತೇಃ ಕ್ರಿಯ ಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ।
ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ॥"
" ತತ್ತ್ವವಿತ್ತು ಮಹಾಭಾಹೋ ಗುಣಕರ್ಮ ವಿಭಾಗಯೋಃ।
ಗುಣಾಗುಣೇಷು. ವರ್ತಂತ ಇತಿ ಮತ್ವಾ ನ ಸಜ್ಜತೇ॥ "

ಸರ್ವ ವಿಧ ಕರ್ಮಗಳಿಗೆ ಗುಣಾತ್ಮಕ ಪ್ರಕೃತಿಯು ಕಾರಣ. ಆತ್ಮನಿಗೂ ಈ ಪ್ರಕೃತಿಗೂ ಸಂಬಂಧವಿಲ್ಲ. ಆತ್ಮನು ಮೂರ್ತ ಪ್ರಕೃತಿಗೆ ಅತೀತ. ಅವನು ಸಾಕ್ಷಿ

ಸೂರ್ಯ. ಆ ಸಾಕ್ಷಿ ದೇವನೇ ವಿಶ್ವಸೃಷ್ಟಾರ ಹಾಗು ವರ್ಣಗಳ ನಿರ್ಮಾಪಕ ಎಂಬ ಮಾತು ಕೇವಲ ಔಪಚಾರಿಕ; ಸತ್ಯಾರ್ಥದಲ್ಲಲ್ಲ. ಈ ಸತ್ಯವನ್ನರಿಯದೇ ದೇವನೇ ವರ್ಣ, ಕರ್ಮಗಳನ್ನೆಲ್ಲ ರಚಿಸಿದನೆಂದು ತಿಳಿಯುವವರು ಮೂಢರು. ಅಜ್ಞಾನಿಗಳು. ಅವರಿಗೆ ವರ್ಣಾದಿಗಳಲ್ಲಿ ತುಂಬ ಅಭಿನಿವೇಶ. ದೇಹಾತ್ಮ ಭಾವಿಗಳಾದ ಅವರು ಪ್ರಾಕೃತಿಕ ಕರ್ತೃ ಭೋಕ್ತೃ ಕಲ್ಪನೆಗಳನ್ನು ತಮ್ಮ ಮೇಲೆ ಆರೋಪಿಸಿಕೊಳ್ಳುತ್ತಾರೆ. ಅನ್ನ ಕುಲ ವಿದ್ಯಾ ರೂಪ ಮುಂತಾದವುಗಳ ವಿಷಯದಲ್ಲಿ ಗರ್ವ ಪಡುತ್ತಾರೆ. ರಾಮ ಪರಶುರಾಮರು ಕ್ಷತ್ರಿಯ, ಬ್ರಾಹ್ಮಣ ಅಭಿಮಾನಕ್ಕೆ ಸಿಕ್ಕು ಕದನ ಮಾಡಿದುದನ್ನು ಸ್ಮರಿಸಿಕೊಳ್ಳಿ.

(೭)ವಿಷಯ ಒಳ್ಳೆಯದೇ ಇರಲಿ ಅಥವಾ ಕೆಟ್ಟದ್ದೇ ಇರಲಿ, ಅದರಲ್ಲಿ ಅಭಿಮಾನ ತಾಳುವದು ಸರಿಯಲ್ಲ. ಅಭಿಮಾನದಿಂದ ಮದೋನ್ಮಾದ; ಅದರಿಂದ ವ್ಯಕ್ತಿನಾಶ. ಬಲಿ ಚಕ್ರವರ್ತಿಯು ಅತ್ಯಂತ ಸಾತ್ವಿಕ ಅಹಂ ತಳೆದ; ತನ್ನಂಥ ದಾನಿಯೇ ಇಲ್ಲ ಎಂದು ಬಗೆದ. ಈ ಅಹಂ ಬುದ್ಧಿಯ ಪರಿಣಾಮವೇ ಅವನ ವಿನಾಶ! ಯೋಗಿ ಎಷ್ಟೇ ಎತ್ತರಕ್ಕೆ ತಲುಪಿರಲಿ, “ನಾನು ಬ್ರಹ್ಮ” ಎಂಬ ಕಲ್ಪನೆ ಮೂಡಿದರೂ ಸಾಕು, ಅದು ಅವನ ಪತನಕ್ಕೆ ಹೇತುವಾಗುತ್ತದೆ. ಹೀಗಿರುವಾಗ, ಕ್ಷುಲ್ಲಕ ಗುಣ ಹಾಗು ಕರ್ಮ ಸಂಬಂಧಿತವಾದ ವರ್ಣ ಆಶ್ರಮಾದಿಗಳ ಗರ್ವ ಎಂಥ ಅಧಃಪತನಕ್ಕೆ ದಾರಿ ಮಾಡೀತು ಎಂಬುದನ್ನು ಊಹಿಸಿಯೇ ನೋಡಬೇಕು.

(೮) ಪರಮಾತ್ಮನು ಸರ್ವಕರ್ತ ಹಾಗು ದಯಾಘನ. ಅವನಿಂದಲೇ ಚರಾಚರ ಪ್ರಪಂಚದ ಉದಯ. ಸೃಷ್ಟವಾದ ವಿಶ್ವದ ಸರ್ವ ವಸ್ತುಗಳ ಅಂತರ್ಯದಲ್ಲೆಲ್ಲ ಅವನೇ ತುಂಬಿಕೊಂಡಿದ್ದಾನೆ. “ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ” ಜೀವಲೋಕದಲ್ಲಿರುವ ಪ್ರತಿ ಜೀವಿಯು ನನ್ನಂಶ; ಎಂಬ ಭಗವಂತನ ಉಕ್ತಿ ಮನನೀಯ. ಇರುವದೆಲ್ಲ ಅವನ ಅಂಶವೇ ಆಗಿರುವಾಗ ಎಲ್ಲಿ ವರ್ಣ? ಎಲ್ಲಿ ಆಶ್ರಮ ಭೇದ? ವರ್ಣಾಶ್ರಮಾಧಾರಿತ ಭೇದ ಬುದ್ಧಿಯು ಪ್ರಾಕೃತಿಕ. ಪ್ರಕೃತಿಯ ಹೀನ ಪ್ರವಾಹಕ್ಕೆ ಸಿಲುಕಿದ ಜೀವರು ಮಾತ್ರ ವರ್ಣಾಶ್ರಮಗಳ ಅಭಿಮಾನ ಹೊಂದುತ್ತಾರೆ; ಪರಸ್ಪರ ಮೇಲು ಕೀಳು ಭಾವ ತಾಳುತ್ತಾರೆ. ಪ್ರಾಕೃತಿಕ ಮೇರೆ ದಾಟಿದಾಗ ಏನಿಲ್ಲ! ಎಲ್ಲ ಶಿವನ ರೂಪ.

(೯) ಮತ್ತೊಂದು ದೃಷ್ಟಿಯಿಂದ ನೋಡಿದರೆ ಜಗತ್ತಿನಲ್ಲಿ ನಾಲ್ವಿಧ ಕಾರ್ಯಶೀಲರನ್ನು ಕಾಣುತ್ತೇವೆ. (ಅ) ಕೆಲವರು ವಿಶ್ವಾತ್ಮನಲ್ಲಿ ಸಾಮರಸ್ಯ ಹೊಂದಿ, ತಾವು ಅನುಭವಿಸಿದ ದಿವ್ಯ ಆನಂದವನ್ನು ಎಲ್ಲ ಜೀವರಿಗೆ ತಲುಪಿಸಲು ಶ್ರಮಿಸುತ್ತಾರೆ. (ಬ) ಕೆಲವರು ತಮ್ಮ ಶಕ್ತಿ ಹಾಗು ಬುದ್ಧಿ ಕೌಶಲ್ಯದಿಂದ ಮಾನವ ಜನಾಂಗವನ್ನು ಪರಿರಕ್ಷಿಸುತ್ತಾರೆ. (ಕ) ಕೆಲವರು ಉತ್ತಿ ಬಿತ್ತಿ ಉತ್ಪಾ

ದಿಸಿ ಅನ್ನ ವಸ್ತ್ರ ವಸನ ಮುಂತಾದವುಗಳನ್ನು ಜಗತ್ತಿಗೆ ಒದಗಿಸಿ ಪೋಷಿಸುತ್ತಾರೆ. (ಡ) ಉಳಿದ ಕೆಲವರು ಅಹಂಭಾವ ತೊರೆದು ಜಗತ್ತಿನ ಸೇವೆ ಮಾಡುತ್ತಾರೆ. ಈ ನಾಲ್ವರಲ್ಲಿ ಯಾರು ಮೇಲು? ಯಾರು ಕೀಳು? ಎಲ್ಲರೂ ವಿಶ್ವ ಪೂಜ್ಯರೇ ಸರಿ.

ಎಲ್ಲವೂ ಪ್ರಕೃತಿಯಾಟ. ದೇವನ ಸಾನಿಧ್ಯಲೀಲೆ. ನಾನಾದರೋ ಸಾಮಾನ್ಯ ಸೇವಕ; ದೇವನ ಕೈಯಲ್ಲಿಯ ಗೊಂಬೆ. ಎಂಬ ನಿರಭಿಮಾನದ ಭಾವ ವಿರಲಿ. ಈ ಭಾವ ಹೊಂದಿದ್ದ ಹನುಮಂತ ದೇಶದ ತುಂಬ ಪೂಜೆಗೊಳ್ಳುತ್ತಿದ್ದಾನೆ. ಅವನು ಗೈದ ಸಾಹಸಪರ ಸೇವೆ ಅಗಾಧವಾದರೂ ಅದರ ತಿಲಮಾತ್ರ ಹಮ್ಮು ಅವನಲ್ಲಿರಲಿಲ್ಲ. ಆದುದರಿಂದ ಯಾವ ವರ್ಣಾದಿಗಳಲ್ಲೂ ಆಶ್ರಮಗಳಲ್ಲೂ ಆಸಕ್ತಿಬೇಡ. ಅಹಂತೆ ಬೇಡ. ದಾಸ ಭಾವ ಸರ್ವರಕ್ಷಕ.

**ಸಂಬಂಧ:–** ಜೀವನು ಕರ್ಮ ಮಾಡಬೇಕೇನೋ ನಿಜ. ಆ ಕರ್ಮಗಳಿಂದ ಆತ ನಿಬದ್ಧನಾಗಬಾರದು. ಅದು ಹೇಗೆ?

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬದ್ಧ್ಯತೇ ॥೧೪॥**

**ಭಾವ:–** ಕರ್ಮಗಳು ನನ್ನನ್ನು ಅಂಟುವದಿಲ್ಲ. ನನಗೆ ಕರ್ಮ ಫಲದಲ್ಲಿ ಆಸಕ್ತಿಯಿಲ್ಲ. ಹೀಗೆ ಯಾವನು, ತಿಳಿಯುತ್ತಾನೆಯೋ ಅವನು ಕರ್ಮಗಳಿಂದ ಬಾಧೆಗೊಳ್ಳುವದಿಲ್ಲ.

**ವಿವರಣೆ:–** ಕರ್ತೃತ್ವ ಮೂರು ಬಗೆ: (೧) ಕರ್ಮ ಕರ್ತೃತ್ವ:– ಇಂದ್ರಿಯ ಮನಸ್ಸು ಮತ್ತು ಅಹಂಕಾರವಿಡಿದು ಕರ್ಮ ಮಾಡುವದು ಕರ್ಮ ಕರ್ತೃತ್ವ, ಈ ಕರ್ತೃತ್ವ ಉಳ್ಳವರು ಅಜ್ಞರು, ದೇಹಾತ್ಮಭಾವಿಗಳು ಹಾಗು ನಶ್ವರ ವಸ್ತುಗಳಲ್ಲಿ ಆಸಕ್ತರು. ಕರ್ಮಗಳು ಅವರನ್ನು ನಖ ಶಿಖಾಂತ ಬಂಧಿಸುತ್ತವೆ. ಅವರು ಸಂಸಾರ ಸಾಗರದಲ್ಲಿ ಬಿದ್ದು ತೊಳಲಾಡುತ್ತಾರೆ.

(೨)ಕರಣ ಕರ್ತೃತ್ವ:–ಇಂದ್ರಿಯ ಸಹಾಯವಿಲ್ಲವೆ ಸಂಕಲ್ಪಮಾತ್ರದಿಂದ ಕರ್ಮಮಾಡುವದು ಕರಣ ಕರ್ತೃತ್ವ, ಇಲ್ಲಿಯೂ ಅಹಂಕಾರವಿದೆ. ಈ ಕರ್ತೃತ್ವ ಉಳ್ಳವರು ಅಲೌಕಿಕರು, ಯೋಗಿಗಳು, ಸಿದ್ಧ ಪುರುಷರು. ಅವರಲ್ಲಿ ಯತ್ನವಿಲ್ಲ, ಪ್ರಬಲ ಸಂಕಲ್ಪ ಇದೆ. ಮಾನ ಪ್ರತಿಷ್ಠೆಗಳ ಭಾವ ಅವರನ್ನು ಮುತ್ತಿದೆ ಆದ್ದರಿಂದ ಕರ್ಮ ಬಂಧನ ಅವರಿಗೂ ಇದೆ. ಕರ್ಮಕರ್ತೃಗಳಿಗೆ ಕರ್ಮವು ರಾಡಿಮಲವಾಗಿ ಅಂಟಿದರೆ, ಕರಣ ಕರ್ತೃಗಳಿಗೆ ಅದು ತಿಳಿಮಲವಾಗಿ ಅಂಟಿದೆ.

(೩) ಸನ್ನಿಧಾನ ಕರ್ತೃತ್ವ:– ಇಂದ್ರಿಯ, ಮನ, ಅಹಂಕಾರ, ಸಂಕಲ್ಪ ಯತ್ನಗಳಿಲ್ಲದೆ ಸನ್ನಿಧಿ ಮಾತ್ರದಿಂದ ಕರ್ಮ ಜರಗುತ್ತಿದ್ದರೆ ಅದು ಸನ್ನಿಧಾನ ಕರ್ತೃತ್ವ. ಸೂರ್ಯನ ಸಾನಿಧ್ಯದಲ್ಲಿ ರಾಡಿ ಒಣಗುತ್ತದೆ, ಮೇಣ ಕರಗುತ್ತದೆ ಹೂವು ಅರಳುತ್ತದೆ. ಅವನು ಸನ್ನಿಧಾನ ಕರ್ತ. ಹಾಗೆ ಅನೇಕ ಮಹಾಪುರುಷರು

ಸನ್ನಿಧಾನ ಕರ್ತೃಗಳು. ಅವರ ಪ್ರಭಾವದಿಂದ ಅನೇಕ ಲೋಕಹಿತ ಕಾರ್ಯ ಸಾಗುತ್ತವೆ. ಆ ಕರ್ಮಗಳಿಂದ ಮಹಾ ಪುರುಷರಿಗೆ ಬಾಧೆಯಿಲ್ಲ.

ಪರಮಾತ್ಮನು ಚತುರ್ವರ್ಣಗಳಿಗೆ ಕರ್ಮ ಅಥವಾ ಕರಣ ಕರ್ತೃವಲ್ಲ ಸನ್ನಿಧಾನ ಕರ್ತೃ. ಅವನ ಆಶ್ರಯದಲ್ಲಿಯೇ ವಿಶ್ವ ಬಾಳುತ್ತದೆ, ಜೀವಿಗಳು ವ್ಯವಹರಿಸುತ್ತಾರೆ, ಜನರು ಧಾರ್ಮಿಕ ಕಾರ್ಯ ನೆರವೇರಿಸುತ್ತಾರೆ; ಆದ್ದರಿಂದ ಅವುಗಳಿಗೆಲ್ಲ ಅವನೇ ಸನ್ನಿಧಾನಕರ್ತೃ. "ತಸ್ಯ ಕರ್ತಾರಮಪಿ ಮಾಂ ವಿದ್ಧಿ " "ಯೇ ಯಥಾ ಮಾಂ ಪ್ರಪದ್ಯಂತೇ ತಾನ್ ತಥೈವ ಭಜಾಮ್ಯಹಂ" "ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ " -ಆ ವರ್ಣ. ವ್ಯವಸ್ಥೆಯ ಕರ್ತೃ. ನಾನು ಯಾರು ಹೇಗೆ ಭಜಿಸುವರೋ ಹಾಗೆಯೇ ನಾನು ಅನುಗ್ರಹಿಸುವೆ. ಮನುಷ್ಯರು ನನ್ನ ಸನ್ನಿಧಾನಾಶ್ರಯವಿಡಿದೇ ವ್ಯವಹರಿಸುತ್ತಾರೆ. ಎಂಬ ಮುಂತಾದ ಮಾತುಗಳು ಸನ್ನಿಧಾನ ಕರ್ತೃತ್ವದರ್ಶಿಯಾಗಿವೆ.

ಸನ್ನಿಧಾನ ಕರ್ತೃತ್ವವುಳ್ಳ ಸೂರ್ಯ, ಲೋಹಚುಂಬಕ ಇತ್ಯಾದಿಗಳು ಪರಿಮಿತ, ವ್ಯಯಶೀಲ. ಹಾಗೆಯೇ, ಪರಮಾತ್ಮನು ಶುದ್ಧಶಕ್ತಿಯಿಂದ ಪರಿಮಿತನಾದಾಗ ಸನ್ನಿಧಾನ ಕರ್ತೃ. ಉಪಾಧಿ ಭಾವ ಬಿಟ್ಟು ವಾಸ್ತವಿಕ ಪ್ರಭುವಿನತ್ತ ನಾವು ಲಕ್ಷಿಸಿದರೆ ಅವನು ಪರಿಪೂರ್ಣ! ಸರ್ವಾತ್ಮ! ಸರ್ವವಸ್ತು-ವ್ಯಕ್ತಿಗಳ ಸಾರ! ಅವನು ಅವ್ಯಯ, ಅಕರ್ತಾ. "ಅಕರ್ತಾರಂ ಅವ್ಯಯಂ ಮಾಂ ವಿದ್ಧಿ!"

ಒಟ್ಟಿನಲ್ಲಿ ಪರಮಾತ್ಮನು ಜ್ಞಾನ ಬಲ ಐಶ್ವರ್ಯ ತೇಜ ವೈರಾಗ್ಯ ಮತ್ತು ಓಜಸ್ಸುಗಳೆಂಬ ಷಡ್ಗುಣಗಳಿಂದ ವ್ಯಕ್ತನಾದರೆ ಸಾಕಾರ ಭಗವಂತನೆನಿಸುತ್ತಾನೆ. ಅವನಲ್ಲಿ ಸನ್ನಿಧಾನ ಕರ್ತೃತ್ವ ಕಾಣಬರುತ್ತದೆ. ಉಪಾಧಿ ವಿರಹಿತನಾದಾಗ ನಿರಾಕಾರ ಪ್ರಭು ಎನಿಸುತ್ತಾನೆ. ಆಗ ಅವನು ಅಕರ್ತ!

"ತನ್ನ ವಿನೋದಕ್ಕೆ ತಾನೆ ಸೃಷ್ಟಿಸಿದ ಸಕಲ ಜಗತ್ತುಗಳ" "ತತ್ಸೃಷ್ಟ್ವಾ ತದೇವಾನುಪ್ರವಿಶತ್"– ಜಗತ್ತನ್ನು (ನಾಮರೂಪುಳ್ಳ ವಿಶ್ವವನ್ನು) ಹುಟ್ಟಿಸಿ ಅದರಲ್ಲಿ ತಾನೇ ಪ್ರವಿಷ್ಟನಾದ. ಇತ್ಯಾದಿ ವಚನಗಳಿಂದ ಕಾಣಬರುವಂತೆ ಪರಮ ಪರಾತ್ಪರ ಪರಮಾತ್ಮನ ಲೀಲೆ ಈ ಜಗ. ಅವನಿಗೆ ಈ ಜಗದ ಅಭಿಮಾನವಿಲ್ಲ. ವರ್ಣಾದಿಗಳ ಅಭಿನಿವೇಶ ಇಲ್ಲ. ಲೀಲಾದೇವನಾದ ಅವನಿಗೆಯೇ ಅವುಗಳಲ್ಲಿ ಆಸಕ್ತಿ ಇಲ್ಲವೆಂದಾಗ, ನಮಗೇಕೆ ಆ ವರ್ಣಾದಿ ವಿಷಯಕ ಗರ್ವ! ರಾಜನ ಬರವಿನ ಬಗ್ಗೆ ಮಹಾರಾಣಿಗೆಯೇ ಇಲ್ಲದ ಉತ್ಸಾಹ ದಾಸಿಯರಿಗೇಕೆ? ಈ ಎಲ್ಲ ವಿಚಾರಗಳನ್ನು ಅಳವಡಿಸಿಕೊಂಡಾಗ ಸಾಧಕನು ಕರ್ಮ ಮಾಡಿಯೂ ಕರ್ಮ ಕರ್ತೃತ್ವತ್ಯಾಗ ಮಾಡುತ್ತಾನೆ. ಕರ್ಮ ಬಂಧನದಿಂದ ಮುಕ್ತನಾಗುತ್ತಾನೆ.

ಭಗವಂತ:–"ಅರ್ಜುನ, ನಾನು ಅನಹಂಕಾರಿ. ನಿಸ್ಪೃಹ. ನಿರ್ಲಿಪ್ತ. ನನ್ನ ಲೀಲಾ ಮಾತ್ರದಿಂದ ಘಟಿಸುವ ಕೋಟ್ಯಂತರ ಕರ್ಮಗಳು ನನಗೆ ಸಂಬಂಧವಿಲ್ಲ;

ಯಾವನು ಹೀಗೆ ನನ್ನನ್ನು ತಿಳಿಯುವನೋ ಅವನು ತಾನು ಮಾಡುವ ನಿತ್ಯ ನೈಮಿತ್ತಿಕಾದಿ ಸಕಲ ಕರ್ಮಗಳಿಂದ ಮುಕ್ತನಾಗುತ್ತಾನೆ."

ಸಂಬಂಧ:– ಅಹಂ ವಿರಹಿತ ಕರ್ಮ ಮಾಡಲು ಮುಂದಿನ ನಾಲ್ಕು ಮಂತ್ರಗಳಲ್ಲಿ ಉಪದೇಶವಿದೆ.

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥೧೫॥**

**ಅರ್ಥ:**- ಪೂರ್ವೈಃ =ಪ್ರಾಚೀನರಾದ ಮುಮುಕ್ಷುಭಿಃ=ಮುಮುಕ್ಷುಗಳಿಂದ ಅಪಿ = ಕೂಡ ಏವಂ =ಹೀಗೆ ಜ್ಞಾತ್ವಾ= ತಿಳಿದುಕೊಂಡು ಕರ್ಮ= ಕರ್ಮವು ಕೃತಂ= ಮಾಡಲ್ಪಟ್ಟಿತು. ತಸ್ಮಾತ್= ಆದ್ದರಿಂದ ತ್ವಂ= ನೀನು ಪೂರ್ವೈಃ= ಪೂರ್ವಜರಿಂದ, ಕೃತಂ =ಮಾಡಲಾದ, ಪೂರ್ವತರಂ ಏವ= ಪೂರ್ವ ಕರ್ಮಗಳಿಗಿಂತ ಶುದ್ಧವಾದ ಕರ್ಮ= ಕರ್ಮವನ್ನು ಕುರು= ಮಾಡು,

ವಿವರಣ:– ಭಗವಂತ;– "ಪಾರ್ಥ, ಪೂರ್ವಕಾಲದಲ್ಲಿ ಅನೇಕ ಮುಮುಕ್ಷುಗಳು ನನ್ನ ನಿಜಸ್ವರೂಪವನ್ನು ಈರೀತಿ(ಅವ್ಯಯ ಅಕರ್ತಾರ ಅಲಿಪ್ತ ಎಂದು) ಅರಿತು ಅಸಂಖ್ಯ ಕರ್ಮ ಮಾಡಿದರು. ಉದಾರ ಭಾವದ ಅವರು ನನ್ನಲ್ಲಿಯೇ ಬೆರೆತರು. ನೀನೂ ಆ ಪೂರ್ವಜರ ಅನವದ್ಯ ಕರ್ಮಗಳನ್ನು ಆಚರಿಸು. ಒಂದು ವೇಳೆ ಅವರ ಆಚರಣೆಯಲ್ಲಿ ಲೋಪ–ದೋಷ ಕಾಣಬಂದರೆ ಅವುಗಳನ್ನು ತ್ಯಜಿಸಿ ಶುದ್ಧತರ ಕರ್ಮ ನೆರವೇರಿಸು. ಹೆಚ್ಚೇನು ಹಿಂದಿನವರನ್ನು ಮರೆಸುವಂಥ ಕರ್ಮಾಚರಣೆ ನಿನ್ನದಾಗಿರಲಿ. ಅದರಿಂದ ನಿನ್ನ ಹೃದಯ ಪಾವಿತ್ರ್ಯ; ದಿವ್ಯಜ್ಞಾನ; ಲೋಕಸಂಗ್ರಹ. ಕರ್ಮಗಳನ್ನು ಕಡೆಗಣಿಸದೆ ನಿಷ್ಠೆಯಿಂದ, ನಿಸ್ಪೃಹತೆಯಿಂದ ಸಮಾಚರಿಸು. "

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್‌ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ೧೬**

**ಅರ್ಥ:**- ಕಿಂ ಕರ್ಮ=ಯಾವುದು ಕರ್ಮ? ಕಿಂ ಅಕರ್ಮ =ಯಾವುದು ಅಕರ್ಮ ಇತಿ ಅತ್ರ=ಈ ವಿಷಯದಲ್ಲಿ, ಕವಯಃ ಅಪಿ=ಕವಿಗಳು ಕೂಡ ಮೋಹಿತಾಃ= ತಿಳಿಯದವರಾಗಿದ್ದಾರೆ (ಮೂಢರಾಗಿದ್ದಾರೆ). ಯತ್ =ಯಾವುದನ್ನು ಜ್ಞಾತ್ವಾ= ತಿಳಿದು ಅಶುಭಾತ್ = ಅಶುಭದಿಂದ ( ಸಂಸಾರದಿಂದ) ಮೋಕ್ಷ್ಯಸೇ= ಮುಕ್ತನಾಗುತ್ತೀಯೋ ತತ್= ಆ ಕರ್ಮ =ಕರ್ಮವನ್ನು ತೇ= ನಿನಗೆ ಪ್ರವಕ್ಷ್ಯಾಮಿ= ಹೇಳುವೆನು.

ವಿವರಣೆ:– ಭಗವಂತ:– "ಕುರೂತ್ತಮ, ಕರ್ಮ ಅಕರ್ಮಗಳ ವಿಷಯ ಅತೀವ ಗಹನ. ಮಹಾ ಮಹಾ ದಾರ್ಶನಿಕರು ಕೂಡ ನಿಖರವಾಗಿ ತಿಳಿಯರು. ಅಂಥ ಕ್ಲಿಷ್ಟ ವಿಷಯವನ್ನು ನಿನಗಾಗಿ ವಿವರಿಸುವೆ. ಅಶುಭವಾದ ಸಂಸಾರದಿಂದ ನಿನ್ನನ್ನು ಮುಕ್ತಗೊಳಿಸಬಲ್ಲ ಕರ್ಮ ಕುರಿತು ಬಹು ಸಲೀಸಾಗಿ ವರ್ಣಿಸುವೆ."

ಪ್ರಯಾಣ ಕಾಲದಲ್ಲಿ ಕಾಗೆ ಎಡ ಕಟ್ಟಿದರೆ, ಬೆಕ್ಕು ಅಡ್ಡ ಬಂದರೆ, ಬೊಕ್ಕ

ತಲೆ ಹಾಗು ಬರಿಗೊಡ ಎದುರಾದರೆ ಅಶುಭವಲ್ಲ. ಜೀವನವನ್ನೇ ಹಾಳು ಮಾಡುವ ಸಂಸಾರವು ನಿಜವಾದ ಅಶುಭ! ಸಂಸಾರದಲ್ಲಿ ಏನಿದೆ? ಎಲ್ಲ ಹಳೆಯದು. ಕೇಳಿದ್ದನ್ನೇ ಕೇಳುತ್ತೇವೆ; ನೋಡಿದ್ದನ್ನೇ ನೋಡುತ್ತೇವೆ; ಮಾಡಿದ್ದನ್ನೇ ಮಾಡುತ್ತೇವೆ; ಉಂಡಿದ್ದನ್ನೇ ಉಣ್ಣುತ್ತೇವೆ; ನೆನೆಸಿದ್ದನ್ನೇ ನೆನೆಸುತ್ತೇವೆ. ಹೊಸದೆಲ್ಲಿದೆ ಇಲ್ಲಿ? ಕೇವಲ ಉಚ್ಛಿಷ್ಟ. ಆ ಉಚ್ಛಿಷ್ಟದಲ್ಲಿಯೇ ಅದೆಂಥ ಗಾಢ ಆಸಕ್ತಿ ನಮಗೆ!

ಸಂಸಾರವೊಂದು ಭಯಂಕರ ಮೊಸಳೆ. ಅದರ ಒಳಮುಖ ಹಲ್ಲುಗಳ ಬಾಯಿಗೆ ಸಿಕ್ಕ ವ್ಯಕ್ತಿಯ ತಾಪ ಹೇಳಲಾಸಲ್ಲ. ಅಲ್ಲಿಯ ಸಂಕಷ್ಟ ತಾಳಲಾರದ ಆರ್ತ ಜೀವನ ಅಳಲ ಕೇಳಿ:

> ಆವಾಗಳು ಎನ್ನ ಮನ ಉದರಕ್ಕೆ ಹರಿವುದು. ಕಾಣಲಾರೆನಯ್ಯ ನಿಮ್ಮುವನು. ಭೇದಿಸಲರಿಯೆನಯ್ಯಾ! ಮಾಯದ ಸಂಸಾರದಲ್ಲಿ ಸಿಲುಕಿದೆನು, ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಹೊದ್ದುವಂತೆ ಮಾಡಾ ನಿಮ್ಮ ಧರ್ಮ"

ಪ್ರಪಂಚಾಗ್ನಿಯ ಸ್ವಲ್ಪ ಕಾವು ತಾಕಿದಾಗ ಬಾಲ ಧ್ರುವ ಅರಮನೆ ಬಿಟ್ಟು ಅರಣ್ಯ ಸೇರಿದ. ಹಗಲಿರಳು ಶ್ರೀ ಮನ್ನಾರಾಯಣನಿಗೆ ಮೊರೆಯಿಟ್ಟ. ಪ್ರಹ್ಲಾದ ಸಂಸಾರ ತಾಪವನ್ನು ಮೊದಲೇ ತಪ್ಪಿಸಲು ಶ್ರೀ ಹರಿಯ ನೆನಹಿನಲಿ ಮುಳುಗಿ ಹೋದ. ನಾವೂ ಈ ಅಶುಭ ಸಂಸಾರದಿಂದ ಪಾರಾಗಲೇ ಬೇಕು. ಅದಕ್ಕೆ ಸಾಧನವೆಂದರೆ ಕರ್ಮ ಅಕರ್ಮ ವಿಕರ್ಮಗಳ ಸ್ವರೂಪಜ್ಞಾನ ಹಾಗು ಫಲಜ್ಞಾನ. ಶಾಬ್ದಿಕ ಜ್ಞಾನಿಗಳಾದ ಮಾತ್ರಕ್ಕೆ ಕರ್ಮ ಅಕರ್ಮ ಹಾಗು ವಿಕರ್ಮಗಳ ಪರಿಜ್ಞಾನ ಉಂಟಾಗದು, ಜಗತ್ತಿನ ಮಹಾ ಪಂಡಿತರನ್ನೆ ಕಿಂ-ಕರ್ತವ್ಯಮೂಢರನ್ನಾಗಿಸಿದ ಈ ವಿಷಯವಾಗಿ ಭಗವಂತನು ಉಪದೇಶ ಮಾಡಲು ಪ್ರಾರಂಭಿಸುತ್ತಾನೆ. ಅವನ ಮಾತಿನ ಗರ್ಭಿತಾರ್ಥವರಿತು ಅದರಂತೆ ನಮ್ಮ ಜೀವನವನ್ನು ರೂಪಿಸಿಕೊಂಡರೆ ನಿಜವಾಗಿಯೂ ಸಂಸಾರವೆಂಬ ಅಶುಭವನ್ನು ನೀಗುವೆವು.

**ಸಂಬಂಧ:– ಅರ್ಜುನ:–** " ದೇವ, ಸಾಮಾನ್ಯ ಮನುಷ್ಯಕೂಡ ಕರ್ಮ ಅಕರ್ಮಗಳ ಅರ್ಥ ಹೇಳಬಲ್ಲ. ಶರೀರಾದಿಗಳ ವ್ಯವಹಾರವು ಕರ್ಮ; ಆ ವ್ಯವಹಾರ ನಿಂತರೆ ಅದು ಅಕರ್ಮ. ಇದರಲ್ಲಿ ವಿವೇಕಿಗಳೂ ತಲೆ ತುರಿಸಿಕೊಳ್ಳುವಂಥ ಕಠಿಣತೆ ಏನಿದೆ ? "

> **ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
> **ಅಕರ್ಮಣಶ್ಚ ಬೋದ್ಧವ್ಯಂ ಗಹನಾಕರ್ಮಣೋ ಗತಿಃ ॥೧೭॥**

**ಭಾವ:-** ಕರ್ಮದ (ನಿಷಿದ್ಧ ಕರ್ಮದ) ಮತ್ತು ಅಕರ್ಮದ ವಿಷಯವನ್ನು ತಿಳಿದುಕೊಳ್ಳಬೇಕು. ಏಕೆಂದರೆ ಕರ್ಮದ ತತ್ತ್ವವು ತಿಳಿಯಲು ಕಠಿಣ.

**ವಿವರಣೆ:– ಭಗವಂತ:-** " ಧನಂಜಯ, ನೀನು ತಿಳಿದಷ್ಟು ಕರ್ಮದ ಸ್ವರೂಪ ಸುಲಭವಾಗಿಲ್ಲ. ಅದು ಅತೀ ರಹಸ್ಯ. ಯೋಗಿ ಮಹಾತ್ಮರನ್ನು ಸಂದೇ

ಪಕ್ಕೆ ಒಳಪಡಿಸುವಷ್ಟು ಗಹನ. ನೀನು ಕರ್ಮ,( ವಿಹಿತ ಕರ್ಮ ). ಅಕರ್ಮ (ನಿಷ್ಕಾಮ ಕರ್ಮ), ವಿಕರ್ಮ (ನಿಷಿದ್ಧಕರ್ಮ) ಈ ಮೂರನ್ನು ಅರಿತುಕೊಳ್ಳ ಬೇಕು. ಬಹು ಲಕ್ಷವಿತ್ತು ನನ್ನ ವಿವರಣೆಗಳನ್ನು ಆಲಿಸು."

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।
ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನ ಕರ್ಮಕೃತ್ ॥೧೮॥

ಭಾವ:- ಯಾವನು ಕರ್ಮದಲ್ಲಿ ಅಕರ್ಮವನ್ನು, ಯಾವನು ಅಕರ್ಮದಲ್ಲಿ ಕರ್ಮ ವನ್ನು ನೋಡುತ್ತಾನೆಯೋ ಅವನು ಮನುಷ್ಯರಲ್ಲಿ ಬುದ್ಧಿವಂತನು. ಅವನು ಯೋಗಿಯು, ಅಶೇಷ ಕರ್ಮ ಮಾಡುವವನು.

ವಿವರಣೆ:– ಕರ್ಮ:– ದೇಹ, ಇಂದ್ರಿಯ ಮತ್ತು ಮನಸ್ಸಿನಿಂದ ಮಾಡ ಲಾಗುವ ಕ್ರಿಯೆಗೆ ಕರ್ಮವೆಂದು ನಾಮ.

ವಿಕರ್ಮ:– ಅನಾತ್ಮ ವಸ್ತುಗಳ ಬಯಸಿ ಮಾಡಲಾಗುವ ಕರ್ಮವು ವಿಕರ್ಮ (ನಿಷಿದ್ಧಕರ್ಮ). ಘೋರ ತಪಮಾಡಿದ ರಾವಣ ಪಾರ್ವತಿಯನ್ನೇ ವರವಾಗಿ ಬೇಡಿದ. ದೀರ್ಘಕಾಲ ತಪಗೈದ ಭಸ್ಮಾಸುರ ದಗ್ಧ–ಹಸ್ತ ಬೇಡಿದ. ಇವರಿಬ್ಬರು ವಿಕರ್ಮ ಕರ್ತೃಗಳ ಉದಾಹರಣೆ. ವಿಕರ್ಮದಿಂದ ಶಾಂತಿ ನಾಶ. ಬಲ್ಲವರ ಅಭಿಪ್ರಾಯದಂತೆ " ಫಲ ಕಾಮನೆಯಿಂದ ಮಾಡಿದ ಮಜ್ಜನ ರಕ್ತ ಧಾರೆ, ಪುಷ್ಪಾರ್ಪಣ ವಜ್ರಾಘಾತ, ನೈವೇದ್ಯ ವಿಷ. "

ಅಕರ್ಮ:– ಆತ್ಮದೇವನನ್ನಲ್ಲದೆ ಇನ್ನೇನನ್ನೂ ಬಯಸದೆ ಆಚರಿಸುವ ಕರ್ಮವು ಅಕರ್ಮ. ದೇವನು ವಿಶ್ವ ನಿಯಾಮಕ. ವಿಶ್ವ ಸಾಕ್ಷಿ. ಅವನ ಅಧಿಷ್ಠಾ ನದಲ್ಲಿ ಜಗದ ಬಾಳು. ಮನುಷ್ಯ ಬರೀ ಸೇವಕ. ಎಂಬ ವಿಮಲ ಭಾವನೆ ಅಕರ್ಮದಲ್ಲಿದೆ. ಅಕರ್ಮದಿಂದ ಚಿತ್ತ ಶಾಂತಿ; ಭವ ಬಂಧ ಮುಕ್ತಿ !

ಕರ್ಮಣಿ ಅಕರ್ಮ ಯಃ ಪಶ್ಯೇತ್ :– ಕರ್ಮದಲ್ಲಿ ವಿಕರ್ಮ ಕಂಡವನು ಅಂದರೆ ಸಕಾಮನೆಯಿಂದ ಕರ್ಮ ಮಾಡುವವನು ಮರುಳ. ಭಜನೆ ಕೀರ್ತನ ಶ್ರವಣ ಮುಂತಾದ ಪವಿತ್ರ ಧರ್ಮ–ಕರ್ಮಗಳನಾಚರಿಸಿಯೂ ಆ ಕರ್ಮಜಾಲ ದಲ್ಲಿ ಬದ್ಧನಾಗುತ್ತಾನೆ. ಕರ್ಮದಲ್ಲಿ ಅಕರ್ಮ ಕಂಡವನು, ಅಂದರೆ ನಿಷ್ಕಾಮ ಭಾವನೆಯಿಂದ ಸತ್ಕರ್ಮ ಆಚರಿಸುವವನು ಭವ ಹಿಂಗಿ, ಅಭವಪಥಿಕನಾಗುತ್ತಾನೆ.

ಅಕರ್ಮಣಿ ಕರ್ಮ ಯಃ ಪಶ್ಯೇತ್ :– ಇಲ್ಲಿ ಅಕರ್ಮವೆಂದರೆ ಕ್ರಿಯಾ ಹೀನತೆ. ದುಡಿದೂ ಫಲದಾಸೆ ಬೇಡ ಎನ್ನುವದಾದರೆ ದುಡಿಯುವ ಗೊಡವೆಯೇ ಬೇಡ ಎಂದು ನಿಷ್ಕ್ರಿಯ ಭಾವ ತಾಳಬಹುದು. ಹೀಗೆ ಕೂಡ್ರುವ ಮನುಷ್ಯ ಅಕರ್ಮಿ. " ಏವಂ ಪ್ರವರ್ತಿತಂ ಚಕ್ರಂ... " ( ಭ. ಗೀ. ೩–೧೬ ) ಪರ ಮಾತ್ಮನು ಪ್ರವರ್ತನಗೊಳಿಸಿದ ಧರ್ಮ–ಕರ್ಮ ಚಕ್ರಕ್ಕೆ ಅನುಸಾರ ಯಾವನು ದುಡಿಯುವದಿಲ್ಲವೋ, ದುಡಿದು ಬಂದ ಫಲವನ್ನು ದೇವನಿಗೆ ನೀಡುವದಿಲ್ಲವೋ. ಅವನು ಅಕರ್ಮಿ. ಅವನ ಆಯುಷ್ಯ ಪಾಪದ್ದು. ಇಂದ್ರಿಯಾರಾಮಿಯಾದ

ಅವನು ವ್ಯರ್ಥ ಜೀವನ ಕಳೆಯುತ್ತಾನೆ. ಅವನ ಅಕರ್ಮ ಪ್ರವೃತ್ತಿ ಭವಬಂಧಕ ವಾದುದರಿಂದ ಅದು ಭವ ಕರ್ಮವೇ ಸರಿ. ಹೀಗೆ ಕ್ರೀಯಾಹೀನತೆಯೆಂದರೆ ಬಾಧಕ ಕರ್ಮವೆಂದು ಯಾವನು ಕಾಣುತ್ತಾನೆಯೋ ಅವನು ಜಾಣ.

ಸಃ ಬುದ್ಧಿಮಾನ್...:- ಮೇಲೆ ಹೇಳಿದಂತೆ ಕರ್ಮಗಳಲ್ಲಿ ಅಕರ್ಮವನ್ನು ಹಾಗು ಕ್ರಿಯಾಹೀನತೆಯಲ್ಲಿ ಭವ ಕರ್ಮವನ್ನು ಗುರುತಿಸುವ ಜೀವನು ಅತೀವ ಬುದ್ಧಿವಂತ. ಅವನೇ ಯೋಗಿ. ಸರ್ವ ಕರ್ಮಾಚರಣೆ ಮಾಡಿದ ನಿರ್ಲಿಪ್ತ ಪುರುಷ.

ತಾತ್ಪರ್ಯ:- (೧) ಸಾಧಕನು ಆರುರುಕ್ಷು. ಸಿದ್ಧನು ಆರೂಢ. ಮನೋ ನಿರ್ಮಲತೆಗಾಗಿ ಸಾಧಕನ ಕರ್ಮ; ಲೋಕ ಸಂಗ್ರಹಕ್ಕಾಗಿ ಸಿದ್ಧನ ಕರ್ಮ. ಅವ ರಿಬ್ಬರ ಕರ್ಮಗಳು ಆಶಾಭಾವವಿರಹಿತವಾದುದರಿಂದ ಅಬಾಧಕ; ಆ ಕಾರಣಕ್ಕಾ ಗಿಯೇ ಅವು ಅಕರ್ಮಗಳು.

ಸಾಧಕನು ಚಿಕ್ಕವ; ಒಮ್ಮೆಲೆ ಕರ್ಮ-ಕೌಶಲ್ಯ ಅಂಗವಿಸಲಿಕ್ಕಿಲ್ಲ. ಆದರೂ ಅವನು ಎದೆಗುಂದಬಾರದು. ವಿಶ್ವಾಮಿತ್ರ ತಪಮಾಡುವಾಗ ಪತನ ಹೊಂದಿದ; ಆದರೆ ಅಷ್ಟಕ್ಕೆ ಯತ್ನಹೀನನಾಗಲಿಲ್ಲ. ಮತ್ತೆ ಪ್ರಯತ್ನಿಸಿದ. ಬ್ರಹ್ಮರ್ಷಿಯಾದ. ಹಾಗೆ, ಸಾಧಕನು ಅಮರ ಪರಂಧಾಮದತ್ತ ಸಾಗುವ ತನ್ನ ಗುರಿಯನ್ನು ಮರೆ ಯದೆ ಬಾಳಿರುವವರೆಗೂ ಕರ್ಮ ಮಾಡಲಿ, ಅಕರ್ಮಿಯಾಗಿ! ಹಾಗೆ ಮಾಡಿದರೆ ಕರ್ಮಗಳು ಬಾಧಿಸಲಾರವು.

ಸಾಧಕನೇ ಇರಲಿ, ಸಿದ್ಧನೇ ಇರಲಿ ಕರ್ಮದಿಂದ ನಿವೃತ್ತರಾಗುವದು ಅತೀ ತಪ್ಪು. 'ನಿತ್ಯ ನಿಷ್ಕಾಮ ಕರ್ಮಂಗಳಿಲ್ಲದಿರುವದು ಜ್ಞಾನಕ್ಕೆ ಪ್ರತಿಬಂಧಕ ಮಕ್ಕುಂ'! ಸಾಧಕನು ಅನಾಸಕ್ತ ಕರ್ಮ ಮಾಡದಿದ್ದರೆ ಜ್ಞಾನ ಗಳಿಸಲಾರ, ಶಾಂತಿ ಪಡೆಯಲಾರ, ಜನ್ಮ ರಾಟಾಳದಿಂದ ಪಾರಾಗಲಾರ. ಸಿದ್ಧನು ಅನಾಸಕ್ತ ಕರ್ಮ ಮಾಡದಿದ್ದರೆ ದೊರೆತ ಅಮೌಲ್ಯ ಅನುಭವವನ್ನು ಚಿರಸ್ಥಿರವಾಗಿ ಉಳಿಸಿ ಕೊಳ್ಳಲಾರ; ಹಾಗು ಲೋಕಕ್ಕೆ ಮಾರ್ಗದರ್ಶನ ಮಾಡುವ ತನ್ನ ಪಾವನ ಕರ್ತವ್ಯವ ನಿರ್ವಹಿಸಲಾರ.

ಜಾಣನು ಇದನ್ನೆಲ್ಲ ಲಕ್ಷಿಸಬೇಕು. ಜ್ಞಾನಾವಹೇಳನದಲ್ಲಿಯೂ ತೊಡಗದೆ, ಕರ್ಮಾವಹೇಳನದಲ್ಲಿಯೂ ಮನ ಹಾಕದೆ ದೇವನ ಸೇವೆ ಮಾಡುವದು ವಿಹಿತ. ಆಗ ಮಾತ್ರ ಸ್ವಪರ ಉದ್ಧಾರ.

(೨) ಕರ್ಮ ಅಕರ್ಮಗಳಿಗೆ ಇನ್ನೊಂದು ತಾತ್ವಿಕ ಅರ್ಥವಿದೆ. ವಿಶ್ವವು ವೇದ್ಯವಾದುದರಿಂದ ಕರ್ಮ, ಪರಮಾತ್ಮನು ಅವೇದ್ಯನಾದುದರಿಂದ ಅಕರ್ಮ. ಈ ಮಹಾವಿಶ್ವದತ್ತ ನೋಡುತ್ತಿರುವಾಗಲೇ ಆ ಅಕರ್ಮ ದೇವನನ್ನು ಕಾಣುವ ದೆಂದರೆ ಕರ್ಮದಲ್ಲಿ ಅಕರ್ಮ ದರ್ಶನ !

ಅಕರ್ಮ-ದೇವನಿಂದ ಎಲ್ಲ ಸಾಗಿದೆ ಎಂಬ ಭಾವ ಬಿಟ್ಟು ಕರ್ಮರೂಪ ವಿಶ್ವ ತನ್ನಿಂದ ಎಂದು ಬಗೆದರೆ ಅದೇ ವಿಕರ್ಮ. ವಿಕರ್ಮಶೀಲನು ಅಜ್ಞಾನಿ, ಅಹಂಕಾರಿ. ದುಃಖ ಸುಖಗಳ ಸೆಳವಿಗೆ ಬಿದ್ದ ಸಂಸಾರಿ!

ಪರಮಾತ್ಮನು ಕರ್ಮಫಲನಲ್ಲವಾಗಿ ಅಕರ್ಮ. ವಿಶ್ವವು ಕರ್ಮಜನ್ಯವಾಗಿ ಕರ್ಮ. ಅವನ ದಿವ್ಯಸಾನಿಧ್ಯದಲ್ಲಿ ಹುಟ್ಟಿದ ಈ ಸೃಷ್ಟಿ ಅಸಾಮಾನ್ಯ. ಅವನು ಹೇಗೆ ಪೂರ್ಣನೋ ಹಾಗೆ ಇದು ಒಂದು ದೃಷ್ಟಿಯಲ್ಲಿ ಪೂರ್ಣ. ಆ ಅಕರ್ಮ ದೇವನ ಪಾವನ ಸಾಕ್ಷಾತ್ಕಾರಾನುಭೂತಿಯ ಸೌಖ್ಯವನ್ನು ಅನುಭವಿಸುವ ಕ್ಷಣವೇ ಈ ವಿಶ್ವವನ್ನೆಲ್ಲ ಆ ದೇವನ ಅಭಿವ್ಯಕ್ತ ರೂಹೆಂದು ಕಾಣುವದು ಅಕರ್ಮದಲ್ಲಿ ಕರ್ಮ ದರ್ಶನ. ಇಂಥ ದರ್ಶನ ಸಾಧಕನಿಗೆ ಸಾಧ್ಯವಿಲ್ಲ; ಸಿದ್ಧನಿಗೆ ಸಮನಿಸಿದೆ.

(೩) ಅಕರ್ಮದ ಅರಿವು ಒಡಮೂಡಿದಂತೆ ವಿನಯ, ಕ್ಷಮೆ, ಅಹಿಂಸೆ ಮುಂತಾದ ಸದ್ಗುಣಗಳು ವ್ಯಕ್ತವಾಗಬೇಕು. ಅಂದರೆ ಲೋಕಸೇವೆ ಸಾಧ್ಯ. ಅಂಥ ಜ್ಞಾನಿಯು ಮನುಷ್ಯ ಮಾತ್ರರಲ್ಲಿಯೇ ಶ್ರೇಷ್ಠ! ಪರಮ ಯೋಗಿ! ಕೃತಕೃತ್ಯ!! ಆ ಮಹಾತ್ಮನ ಅಂತಸ್ಸಾಧನೆ ಲೋಕದ ಕಣ್ಣಿಗೆ ಕಾಣದಿದ್ದರೂ ಅವನ ಬಾಹ್ಯ ಕರ್ಮಗಳು ಜನರಿಗೆ ಮಾರ್ಗದರ್ಶನ ಮಾಡುತ್ತವೆ. ಬಂಗಾರದ ಪರೀಕ್ಷೆ ಕಲ್ಲಿನಿಂದ; ಹಾಗೆ ಮಹಾತ್ಮರ ಪರೀಕ್ಷೆ ಲೋಕ ವ್ಯವಹಾರಗಳಿಂದ! ಬಾಹ್ಯ ವಚನ, ವರ್ತನಗಳಿಂದ!

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪ ವರ್ಜಿತಾಃ।**
**ಜ್ಞಾನಾಗ್ನಿ ದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥೧೯॥**

**ಅರ್ಥ:-** ಯಸ್ಯ=ಯಾವನ ಸರ್ವೇ= ಸಕಲ ಸಮಾರಂಭಾಃ =ಕರ್ಮಗಳು, ಕಾಮ ಸಂಕಲ್ಪ ವರ್ಜಿತಾಃ= ಕಾಮ ಸಂಕಲ್ಪ ರಹಿತವೋ ಜ್ಞಾನಾಗ್ನಿದಗ್ಧಕರ್ಮಾಣಂ = ಜ್ಞಾನ ರೂಪ ಅಗ್ನಿಯಿಂದ ದಗ್ಧವಾದ ಕರ್ಮಗಳುಳ್ಳ ಅವನನ್ನು ಬುಧಾಃ=ಜ್ಞಾನಿಗಳು ಪಂಡಿತಂ= ಪಂಡಿತನೆಂದು ಆಹುಃ= ಹೇಳುತ್ತಾರೆ.

**ವಿವರಣೆ:-ಕಾಮ ಸಂಕಲ್ಪ ವರ್ಜಿತಾಃ ಸಮಾರಂಭಾಃ-** ಫಲಾಕಾಂಕ್ಷೆಯು ಕಾಮ. ಕರ್ತೃತ್ವಾಭಿನಿವೇಶವು ಸಂಕಲ್ಪ. ಈ ಎರಡರ ಭಾವವಿಲ್ಲದೆ ಆಚರಿಸಲಾದ ಕರ್ಮಗಳು ತಾರಕ. ಸಾಧಕ ಹಾಗೂ ಸಿದ್ಧರಿಬ್ಬರೂ ಇಂಥ ಕರ್ಮವನ್ನು ರೂಢಿ ಸಿರಬೇಕು. ಅವರು ಸರ್ವಸಂಗ ಪರಿತ್ಯಾಗ ಅಂದರೆ ಸರ್ವಾರ್ಪಣ ಬುದ್ಧಿಯಿಂದ ಬಾಳಬೇಕು. ಆದರಿಂದ ದೇವದರ್ಶನ ಹಾಗು ಲೋಕಸಂಗ್ರಹ.

ಸರ್ವಾರ್ಪಣ ಭಾವ ಉದಿಸುವವರೆಗೆ ದೇವಾನುಗ್ರಹ ಉಂಟಾಗದು. ಇದಕ್ಕೆ ತಕ್ಕ ನಿದರ್ಶನ ದ್ರೌಪದಿಯ ವಸ್ತ್ರಾಪಹರಣದ ಘಟನೆ. ತುಂಬಿದ. ಸಭೆ ಯಲ್ಲಿ ದುಶ್ಶಾಸನ ವಸ್ತ್ರ ಸೆಳೆಯುತ್ತಿದ್ದಾನೆ. ದ್ರೌಪದಿ ಒಂದು ಕೈಯಿಂದ ವಸ್ತ್ರ

ಗಟ್ಟಿಯಾಗಿ ಹಿಡಿದು ಮತ್ತೊಂದು ಕೈಎತ್ತಿ ಕೃಷ್ಣನಿಗೆ ಬೇಡಿಕೊಳ್ಳುತ್ತಾಳೆ. ಕೃಷ್ಣ ಸಹಾಯಕ್ಕೆ ಬರಲಿಲ್ಲ. ದುಶ್ಶ್ಯಾಸನನ ಎಳೆತದ ರಭಸಕ್ಕೆ ಸೋತ ದ್ರೌಪದಿ ತನ್ನೆರಡೂ ಕೈಎತ್ತಿ ಶ್ರೀಕೃಷ್ಣನನ್ನು ಆರ್ತಳಾಗಿ ಪ್ರಾರ್ಥಿಸುತ್ತಾಳೆ. ಆ ಕ್ಷಣವೇ ಅವಳ ವಸ್ತ್ರ ಅಕ್ಷಯವಾಗುತ್ತದೆ. ಕೆಲ ಕಾಲದ ನಂತರ ಈ ಘಟನೆಯ ಬಗ್ಗೆ ಪ್ರಸ್ತಾಪ ಬಂದಾಗ ಶ್ರೀಕೃಷ್ಣ ಹೇಳಿದ. "ದ್ರೌಪದಿ, ನಿನ್ನಲ್ಲಿ ಕಾಪಾಡಿಕೊಳ್ಳಬಲ್ಲೆ ಎಂಬ ಸ್ವ-ಕರ್ತೃತ್ವ ಭಾವವಿರುವವರೆಗೆ ನಾನು ದೂರಿದ್ದೆ. ದೇಹದ ಪರವೆ ಬಿಟ್ಟು ಸರ್ವ ಸಮರ್ಪಣ ಬುದ್ಧಿಯಿಂದ ಪ್ರಾರ್ಥಿಸಿದಾಗ ಸಹಾಯಕ್ಕೆ ಬಂದೆ. ಎಲ್ಲಿ ಸರ್ವ ಕಾಮ ಸಂಕಲ್ಪಗಳ ತ್ಯಾಗವೋ ಅಲ್ಲಿ ನನ್ನ ಸಹಾಯ! "

ಜ್ಞಾನಾಗ್ನಿದಗ್ಧಕರ್ಮಾಣಂ:-ಜನ್ಮ ಹಾಗು ಜೀವನ ಸುಖಾನುಭವವಲ್ಲ.

"ಆದೌ ಕರ್ಮ ಪ್ರಸಂಗಾತ್ ಕಲಯತಿ ಕಲುಷಂ ಮಾತೃಕುಕ್ಷೌ ಸ್ಥಿತಂ ಮಾಮ್ ।
ವಿಣ್ಮೂತ್ರಾಮೇಧ್ಯಮಧ್ಯೇ ಕ್ವಥಯತಿ ನಿತರಾಂ ಜಾಠರೋ ಜಾತವೇದಾಃ॥
ಯದ್ಯದ್ವೈತತ್ರ ದುಃಖಂ ವ್ಯಥಯತಿ ನಿತರಾಂ ಶಕ್ಯತೇ ಕೇನವಕ್ತುಮ್।
ಕ್ಷಂತವ್ಯೋ ಮಮಾಪರಾಧಃ ಶಿವಶಿವಭೋ ಶ್ರೀಮಹಾದೇವ ಶಂಭೋ॥"

ಮೊದಲು ತಾಯಿಯ ಗರ್ಭದಲ್ಲಿರುವಾಗ ಕರ್ಮಾನುಸಾರ ಹೇಯವಾದ ಕಲುಷ ನನ್ನ ಮುತ್ತಿಕೊಳ್ಳುತ್ತದೆ. ಜಠರದಲ್ಲಿರುವ ಅಗ್ನಿ ಮಲಮೂತ್ರಗಳ ಮಧ್ಯೆ ಸಿಲುಕಿರುವ ನನ್ನನ್ನು ಕತಕತ ಕುದಿಸುತ್ತದೆ. ಅಲ್ಲಿ ಬಾಧಿಸುವ ದುಃಖಗಳನ್ನ ದಾರು ಬಣ್ಣಿಸ ಬಲ್ಲರು? ದೇವಾ, ನನ್ನ ಅಪರಾಧ ಕ್ಷಮಿಸು.

ಇಂಥ ಭಯಂಕರ ಜೀವನಕ್ಕೆ ಕಾರಣವಾದುದೇ ಕರ್ಮಬೀಜ, ಅಹಂಕಾರ ಯುಕ್ತ ವಾಸನಾವಿಷೇಶ. ಈ ಕರ್ಮ ನಮ್ಮನ್ನು ದೇವರಾಜ್ಯದಿಂದ ಪತನಗೊಳಿ ಸಿದೆ; ಮನೆಮಡದಿ ಮಕ್ಕಳ ವ್ಯಾಮೋಹದಲ್ಲಿ ಮುಳುಗಿಸಿದೆ; ಗುರು ಶಾಸ್ತ್ರ ದೇವರ ಭಾನ ಬರದಂತೆ ನಮ್ಮನ್ನು ಮರುಳು ಮಾಡಿದೆ. ಸಾವಿನ ಕೊನೆಯ ಕ್ಷಣ ಕೂಡ ಮಡದಿ ಮಕ್ಕಳ ನೆನೆದು ಸಂತಾಪ ಪಡುತ್ತೇವೆ. ಆದುದರಿಂದ ಮತ್ತೆ ಅಂಥದೇ ಜೀವ–ಜನ್ಮಕ್ಕೆ ಬರುತ್ತೇವೆ.

ಜನ್ಮ ದುಃಖ ನೀಗಬೇಕಾದರೆ ಕರ್ಮವು ಅಳಿಯಬೇಕು. ಹೇಗೆ? ತೋರಿ ಕೆಯ ತಪ, ಶಾಬ್ದಿಕ ಜ್ಞಾನ ಕರ್ಮ ನಾಶಕಗಳಲ್ಲ. ಅವುಗಳಿಂದ ಮೋಹ ಹೆಚ್ಚೀತು! ಭವ ಬಂಧನ ಮತ್ತಷ್ಟು ಬಿಗಿಯಾದೀತು? ಕರ್ಮದ ವಿನಾಶ ಒಂದೇ ಒಂದು ಉಪಾಯದಿಂದ ಸಾಧ್ಯ! ಅದೇ ದೇವನ ನೈಜ ಜ್ಞಾನ. ನಮ್ಮ ಹೃದಯವು ಅಗ್ನಿ ಕುಂಡ; ಅಂತರ್ಜ್ಯೋತಿರಾತ್ಮನೇ ವಿಮಲಾಗ್ನಿ. ನಾವು ಮಾಡಿದ ಸಕಲ ಕರ್ಮ ಗಳನ್ನು ಮಾಡಿದೆನೆಂಬ ಅಹಂ ಬುದ್ಧಿಯನ್ನು, ಹಾಗು ಬೇಕು ಬೇಡೆಂಬ ದ್ವಿವಿಧ ಸಂಕಲ್ಪಗಳನ್ನು ಆ ದಿವ್ಯಾಗ್ನಿಯಲ್ಲಿ ಹವಿಸಿದರೆ ಕರ್ಮ ಬೀಜಗಳು ಹುರಿದು ಹೋಗುತ್ತವೆ. ಹುರಿದ ಕಾಳು ಮೊಳಕೆಯಾಗದು; ತಿನ್ನಲು ಮಾತ್ರ ರುಚಿ. ಹಾಗೆ

ದಗ್ಧ ಕರ್ಮಗಳು ಪುನರ್ಜನ್ಮ ನೀಡವು; ಪ್ರಾರಬ್ಧ ಜೀವನವು ಮಾತ್ರ ಬಹು ಸುಖಮಯವೆನಿಸುತ್ತದೆ.

**ತಂ ಆಹುಃ ಪಂಡಿತಂ ಬುಧಾಃ**:– ಯಾವನು ಸರ್ವ ಶರಣ್ಯನಾದ ದೇವನನ್ನು ಸರ್ವನಿಯಂತಾರನೆಂದರಿತು, ಕರ್ತೃಭಾವ ಹಾಗು ಕರ್ಮ ಫಲದಾಸೆಗಳನ್ನು ಪರಿತ್ಯಜಿಸುವನೋ ಅವನೇ ಸಾಧಕ ಪಂಡಿತನೆಂದು ಬಲ್ಲವರು ಹೇಳುತ್ತಾರೆ.

ಆ ಸಾಧಕ ಪಂಡಿತನೇ ಪಕ್ವವಾದಾಗ ಸಿದ್ಧ ಪಂಡಿತ ಎನಿಸುತ್ತಾನೆ. ಸಾಧಕ ಪಂಡಿತನಲ್ಲಿ ದೇವನ ಸಾಮಾನ್ಯ ಜ್ಞಾನವಿದೆ; ಆ ದೇವನಿಗಾಗಿ ತನ್ನೆಲ್ಲ ಕರ್ಮಗಳನ್ನು ಸಮರ್ಪಣ ಮಾಡುತ್ತಾನೆ. ಸಿದ್ಧ ಪಂಡಿತನಲ್ಲಿ ದೇವನ ಅಪರೋಕ್ಷ ದರ್ಶನವಿದೆ; ತಾನೇ ದೇವ, ದೇವನೇ ತಾನು ಎಂಬ ಸಾಮರಸ್ಯಾನುಭೂತಿಯಿದೆ; ಆದುದರಿಂದ ಸಹಜವಾಗಿಯೇ ಅವನ ಕರ್ತೃಭಾವ ಮತ್ತು ಕರ್ಮ ಫಲಾಕಾಂಕ್ಷೆ ಅಳಿದಿವೆ. ಅವನು ಸರ್ವಭೂತಗಳನ್ನು ತನ್ನಲ್ಲಿಯೂ, ತನ್ನನ್ನು ಸರ್ವ ಭೂತಗಳಲ್ಲಿಯೂ ಕಾಣುತ್ತಾನೆ. ಹೇಗೆ? ಆಭರಣಗಳಲ್ಲಿ ಬಂಗಾರ, ಬಂಗಾರದಲ್ಲಿ ಆಭರಣ ಕಾಣುವಂತೆ. 'ಜಗವೆಂದಡುಂ ತಾನೆ; ಜಗದೀಶನುಂ ತಾನೆ; ಜಗದಾತ್ಮರೆಲ್ಲರುಂ ತಾನೆ' ಎಂಬ ಅಪೂರ್ವ ಪ್ರಜ್ಞೆ ಅವನಲ್ಲಿ ಜಾಗೃತವಾಗಿದೆ. ಆ ಪ್ರಜ್ಞೆಯಲ್ಲಿ ಅಹಂಕಾರ ಆಶೆಗಳು ಹುರಿದು ಹೋಗಿವೆ.

"ಅಜ ಕಲ್ಪಕೋಟಿ ವರುಷದವರೆಲ್ಲ ಹಿರಿಯರೆ? ಹುತ್ತೇರಿ ಬೆತ್ತಬೆಳೆದ ತಪಸ್ವಿಗಳೆಲ್ಲ ಹಿರಿಯರೆ? ನಡು ಮುರಿದು ಗುಡಗೂರಿ ತಲೆನಡುಗಿ ನೆರೆತೆರೆ ಹೆಚ್ಚಿ ಮತಿಗೆಟ್ಟು ಒಂದನಾಡ ಹೋಗಿ ಒಂಭತ್ತನಾಡುವ ಅಜ್ಞಾನಿಗಳೆಲ್ಲರು ಹಿರಿಯರೆ? ಅನುವರಿದು ಘನವ ಬೆರೆಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚೆನ್ನ ಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು!"

ಈ ವಚನದಲ್ಲಿ ವ್ಯಕ್ತವಾದ ಹಿರಿಯತನದ ಸೂತ್ರ ಸರ್ವಶಾಸ್ತ್ರ ಸಮ್ಮತ, ಸರ್ವ ಸಂತ ಮಾನ್ಯ. ಈ ಸೂತ್ರದನ್ವಯ ಹಿರಿತನ ಅಳವಟ್ಟಾಗ ಯಾವ ಬಗೆಯ ಭೇದಗಳೂ ಉಳಿಯವು! ಅಖಂಡ ಅನಂತ ವ್ಯಕ್ತಿತ್ವ ನಮ್ಮದಾಗುವದು!

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥೨೦॥**

**ಅರ್ಥ**:–ಸಃ = ಆ ಪಂಡಿತನು, ಕರ್ಮಫಲಾಸಂಗಂ = ಕರ್ಮಫಲಾಸಕ್ತಿಯನ್ನು ತ್ಯಕ್ತ್ವಾ =ಬಿಟ್ಟು ನಿತ್ಯತೃಪ್ತಃ= (ನಿತ್ಯೇನ ನಿಜಾನಂದೇನ ತೃಪ್ತಃ) ನಿತ್ಯ ನಿಜಾನಂದದಿಂದ ಸಂತೃಪ್ತನೂ ನಿರಾಶ್ರಯಃ= (ಯೋಗಕ್ಷೇಮಾರ್ಥಂ ಆಶ್ರಯಣೀಯ ರಹಿತಃ) ಯೋಗಕ್ಷೇಮಾರ್ಥ ಯಾವುದನ್ನು ಆಶ್ರಯಿಸದವನೂ (ಆಗಿ) ಕರ್ಮಣಿ= ಕರ್ಮಗಳಲ್ಲಿ ಅಭಿಪ್ರವೃತ್ತಃ ಅಪಿ= ತೊಡಗಿದ್ದರೂ ಕಿಂಚಿತ್ ಏವ=ಏನನ್ನೂ ನ ಕರೋತಿ=ಮಾಡುತ್ತಿಲ್ಲ.

**ವಿವರಣೆ**:- ಭಗವಂತ;-"ಧನಂಜಯ, ಕರ್ಮಫಲಗಳ ಆಶೆ ಬಿಟ್ಟು,ಸದಾ ಸಂತೃಪ್ತಭಾವ ತಾಳಿ, ಅನಾತ್ಮ ವಸ್ತುಗಳನ್ನು ಕ್ಷಣಮಾತ್ರವೂ ಆಶ್ರಯಿಸದೆ ನನ್ನಲ್ಲಿಯೇ ಮನವಿತ್ತು, ಯಾವ ಜಾಣನು ವಿವಿಧ ಕರ್ತವ್ಯ ಕರ್ಮಗಳಲ್ಲಿ ತೊಡ

ಗುತ್ತಾನೆಯೋ ಅವನು ವಿಮುಕ್ತ. ಕರ್ಮ ಮಾಡಿದರೂ ಮಾಡದಂತಿದ್ದಾನೆ."

(೧)ಕರ್ಮಫಲಾಸಂಗತ್ಯಾಗ:– ಕರ್ಮವು ತನ್ನಷ್ಟಕ್ಕೆ ತಾನು ಸಾಧಕವೂ ಅಲ್ಲ, ಬಾಧಕವೂ ಅಲ್ಲ. ಕರ್ಮದ ಹಿಂದಿರುವ ಆಶೆ ಅಭಿಮಾನಗಳು ಕರ್ಮದ ಪಾವಿತ್ರ್ಯತೆಯನ್ನು ಕೆಡಿಸುತ್ತವೆ. ಆದ್ದರಿಂದ ಜಾಣನು ಆ ಆಶೆ ಅಭಿಮಾನಗಳ ತೊರೆದು ದುಡಿಯುತ್ತಾನೆ.

(೨) ನಿತ್ಯತೃಪ್ತ:- ಅನ್ನ ನೀರು ವನಿತೆ ಮುಂತಾದ ಭೌತ ವಸ್ತುಗಳು ಕ್ಷಣಿಕ ತೃಪ್ತಿಯ ಸ್ಥಾನಗಳು. ಭೌತ ಅಥವಾ ಪ್ರಾಕೃತಿಕ ವಸ್ತುವಿಸ್ತಾರವನ್ನೆಲ್ಲ ಸಾಕ್ಷಿಯಾಗಿ ಪ್ರಕಾಶಿಸುವ ಅಮರ ಆತ್ಮಜ್ಯೋತಿಯೊಂದಿದೆ. ಅದು ಅಕರ್ಮ. ಅಗಮ್ಯ ಸತ್ಯ. ಸರ್ವ ತತ್ವಾಧಿಷ್ಠಾನ. ನಿರ್ಗುಣ. ಆದ್ದರಿಂದ ಅದು ನಿತ್ಯತೃಪ್ತಿ ಸ್ಥಾನ !

ಸ್ವರ್ಣಪಂಜರದ ಗಿಳಿ ಹಸಿರ ವನವ ನೆನೆವಂತೆ, ಮುತ್ತುರತ್ನಜಡಿತ ಅಂಬಾರಿ ಹೊತ್ತು ರಾಜವೀಥಿಯಲ್ಲಿ ನಡೆವ ಆನೆ ಅರಣ್ಯಶ್ರೀಯ ಸ್ಮರಿಸುವಂತೆ, ಜಾಣ ಸಾಧಕನು ಹಾಗು ಆತ್ಮಾರಾಮ ಸಿದ್ಧನು ಈ ಮಾಯಾಕೃತ ದೇಹ ಪಂಜರದಲ್ಲಿ ರುವಾಗಲೇ ಆ ದಿವ್ಯ ತಾಣವನ್ನು ನೆನೆಸುತ್ತಾನೆ. ಬಾಳ ಬಟ್ಟೆಯಲ್ಲಿ ಭೋಗ ವೈಭವಗಳೊಂದಿಗೆ ಸಾಗಿರುವ ಕ್ಷಣವೇ ಆತ ಆತ್ಮದೇವನನ್ನು ಲಕ್ಷಿಸುತ್ತಾನೆ. ಎಂತಲೇ ಅವನು ನಿತ್ಯತೃಪ್ತ.

(೩) ನಿರಾಶ್ರಯ:– ಪರಾಧೀನತೆಗಿಂತ ಸಾವೇ ಹಿತ. ವೃಷಭ ಶಿವನನ್ನೇ ಮೊರೆಹೊಕ್ಕು ಸೇವೆಗೆ ನಿಂತರೂ ಕಡಿವಾಣ ತಪ್ಪಲಿಲ್ಲ. ಲಕ್ಷ್ಮಿಯು ನಾರಾಯಣ ನನ್ನು ವರಿಸಿದರೂ ಮೂಗುತಿಯ ಬಂಧನ ಬಿಡಲಿಲ್ಲ. ಸಾಮಾನ್ಯವಾಗಿ ಮಾನವ ಅನಾತ್ಮ ವಸ್ತುಗಳ ಮೇಲೆ ಅವಲಂಬನೆ ಹೊಂದಿದ್ದಾನೆ. ತಾವೇ ಕಾಲದ ಪ್ರಪಾ ತಕ್ಕೆ ಸಿಲುಕಿ ನಾಶವಾಗುತ್ತಿರುವ ಅವು ಮನುಷ್ಯನಿಗೆಂತು ಆಶ್ರಯ ಕೊಡಬಲ್ಲವು? ಈ ವಿಚಾರ ಅವನಿಗಿಲ್ಲ. ಸಾಂಸಾರಿಕ ತಾಪಕ್ಕೆ ಬಸವಳಿದು ಮನೆ ಮಡದಿ ಮಕ್ಕಳು ಮಾನ ಮರ್ಯಾದೆಗಳನಾಶ್ರಯಿಸುವದೂ, ಬಿಸಿಲಿನ ತಾಪಕ್ಕೆ ಬೇಗುದಿಗೊಂಡ ಇಲಿಯೊಂದು ಹಾವಿನ ನೆರಳನ್ನಾಶ್ರಯಿಸುವದೂ ಒಂದೇ. ಮನುಷ್ಯ ಯಾವು ದನ್ನು ಆಶ್ರಯಿಸುತ್ತಾನೆಯೋ ಅದೇ ಅವನನ್ನು ಕಬಳಿಸುತ್ತದೆ.

ಮನುಷ್ಯನ ನಿಜವಾದ ಮತ್ತು ನಿತ್ಯಸ್ಥಿರವಾದ ಆಶ್ರಯ ಪರಮಾತ್ಮ. ಜಗತ್ತಿನ ವಸ್ತುಗಳ ಬಿಟ್ಟು ಆ ದೇವನನ್ನೇ ಆಶ್ರಯಿಸಬೇಕೆನ್ನುವದು ಬಲ್ಲವರ ಆದೇಶ.

(೪) ಸಃ ನೈವ ಕಿಂಚಿತ್ ಕರೋತಿ:– ಕರ್ಮಫಲಾಸಕ್ತಿಯನ್ನು ಬಿಟ್ಟು ಅನಾಸಕ್ತಭಾವ ತಾಳಿದ ಸಂತನು ಪರಮ ದೇವನನ್ನೇ ಆಶ್ರಯಿಸಿದ್ದಾನೆ. ಸರ್ವಾ ರ್ಪಣ ಬುದ್ಧಿಯುಳ್ಳ ಅವನು ನಿತ್ಯತೃಪ್ತ! ಅವನು ದೇಹ ಮನಸ್ಸುಗಳಿಂದ

ವಿವಿಧ ಕರ್ಮಗೈಯುತ್ತಾನೆ. ಲೋಕ ಹಿತಕ್ಕಾಗಿ ಬೆವರು ಸುರಿಸಿ ಶ್ರಮಿಸುತ್ತಾನೆ. ಆದರೂ ಅವನು ಏನನ್ನೂ ಮಾಡುತ್ತಿಲ್ಲ; ಕರ್ಮಗಳು ಅವನನ್ನು ಬಾಧೆಗೊಳಿಸವು. ಅವನು ಸದೈವ ನಿರ್ಲಿಪ್ತ! ವಿಮುಕ್ತ!

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತ ಸರ್ವ ಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥೨೧॥**

**ಅರ್ಥ:–** ನಿರಾಶೀಃ= ಆಶೆಯಿಲ್ಲದ ಯತಚಿತ್ತಾತ್ಮಾ= ದೇಹ ಮನಸ್ಸುಗಳನ್ನು ವಶವಡಿಸಿಕೊಂಡ ತ್ಯಕ್ತಸರ್ವಪರಿಗ್ರಹಃ= ಸಕಲ ಭೋಗೋಪಕರಣಗಳನ್ನು ಪರಿತ್ಯಜಿಸಿದ, ಕೇವಲಂ= ಬರಿ. ಶಾರೀರಂ ಕರ್ಮ= ಶರೀರ ರಕ್ಷಣೆಗೆ ಅವಶ್ಯವಾದ ಕರ್ಮವನ್ನು ಕುರ್ವನ್ = ಮಾಡುತ್ತಿರುವ (ಮನುಷ್ಯನು) ಕಿಲ್ಬಿಷಂ= ಸಂಸಾರವನ್ನು ನ ಆಪ್ನೋತಿ= ಹೊಂದುವದಿಲ್ಲ.

**ವಿವರಣೆ:–** **ನಿರಾಶೀಃ :–** "ಆಶಾಯಾಃ ಯೋಃ ದಾಸಃ ಸ ದಾಸಃ ಸರ್ವಲೋಕಸ್ಯ" ಯಾವನು ಆಶೆಯ ದಾಸನೋ ಅವನು ಸರ್ವಲೋಕದ ದಾಸನು. ಉದಾ:– ಪತ್ನಿಗೆ ದಾಸನಾದವನು ಆಕೆಯ ತವರಿನ ಒಬ್ಬ ಹೊಲೆಯಾಳಿಗೂ ದಾಸನಾಗಿ ನಡೆಯುತ್ತಾನೆ, ಅಧಿಕಾರ ಲಾಲಸೆಗೆ ದಾಸನಾದವನು ಪಾಪಿ, ಕುಡುಕ, ತುಡುಗ, ವಂಚಕ ಎಲ್ಲರಿಗೂ ಕೈಮುಗಿಯುತ್ತಾನೆ. ಆದರೆ, "ಆಶಾ ಯೇಷಾಂ ದಾಸೀಕೃತಾ ತಸ್ಯದಾಸಾಯತೇ ವಿಶ್ವಂ" ಆಶೆ ಯಾವನಿಗೆ ದಾಸಿಯೋ, ಅವನಿಗೆ ವಿಶ್ವವೆಲ್ಲ ದಾಸವಾಗುತ್ತದೆ. ಗಾಂಧೀಜಿಯವರು ಸಾರ್ವಭೌಮನಾದ ಬ್ರಿಟಿಶ್ ಚಕ್ರವರ್ತಿಯ ದರ್ಬಾರಿನಲ್ಲಿ ಕಾಲು ಹಾಕಿದಾಗ ಮಹಾರಾಜನು ತನ್ನ ಘನತೆ ಗೌರವ ಮರೆತು ಮಾನವಿತ್ತು ಬರಮಾಡಿಕೊಂಡ! ಇದು ಆಶಾರಹಿತ ಜೀವನದ ಹಿರಿಮೆ. ಕೌಶಿಕ ಮಹಾರಾಜನಿತ್ತ ರಾಜಭೋಗ ತೊರೆದು ವಿರಾಗಿಣಿಯಾದ ಅಕ್ಕಮಹಾದೇವಿಗೆ ಕಲ್ಯಾಣದ ಶರಣ ಕುಲವೆಲ್ಲ ನಮಿಸಿತು.

ಜಗತ್ತೆಲ್ಲ ಆಸೆಯ ದಾಸ. ಎಂಥ ಮನೋನಿರ್ಧಾರದ ತರುಣರು ಕೂಡ ವರದಕ್ಷಿಣ ವಧುದಕ್ಷಿಣ ಎಂಬ ಶಬ್ದಗಳಿಗೆ ಮರುಳಾಗುತ್ತಾರೆ. ಧನ ಕನಕ ಕಣ್ಣಿಗೆ ಬೀಳುವದೇ ತಡ, ಸಂಸಾರ ಬಲೆಗೆ ತಾವಾಗಿಯೇ ತಲೆ ನೀಡುತ್ತಾರೆ, ಸಾಧಕ ಮಾತ್ರ ಅಜೇಯನಾಗಿ ಉಳಿಯುತ್ತಾನೆ. ಅವನು ನಿರಾಶಿ.

**ಯತಚಿತ್ತಾತ್ಮಾ:–** ದೇವಸಾಧನೆಗೆ ವ್ಯತ್ಯಯ ತರುವ ಸ್ಥಾನ ತೊರೆದು ನಿರಾತಂಕ ಸ್ಥಾನಕ್ಕೆ ಹೋಗುವದು ತನು ಪ್ರತ್ಯಾಹಾರ. ಬಯಸಿದ ವಿಷಯಗಳತ್ತ ಹರಿಬಿಡದೆ ಮನಸ್ಸನ್ನು ಸಂಯಮನ ಮಾಡುವದು ಮನದ ಪ್ರತ್ಯಾಹಾರ. ಈ ಎರಡನ್ನು ಸಾಧಿಸಿದುದರಿಂದ ಸಾಧಕನು ಯತಚಿತ್ತಾತ್ಮನು.

**ತ್ಯಕ್ತ ಸರ್ವ ಪರಿಗ್ರಹಃ:–** ನಮ್ಮ ಸುತ್ತು ಮುತ್ತ ಹರವಿದ ವಸ್ತುಗಳು ಪರಿಗ್ರಹ. ಮಾನ ಪ್ರತಿಷ್ಠೆ ಕೀರ್ತಿಗಳು ಸೂಕ್ಷ್ಮ ಪರಿಗ್ರಹ. ತಿಳಿವಿನ ಹಂಭಾವವು ಸೂಕ್ಷ್ಮತರ ಹರಿಗ್ರಹ. ಎಂಟು ನಾಯಿಗಳ ಮಧ್ಯೆ ಮೊಲವು ಸಿಕ್ಕಂತೆ

ಮನುಷ್ಯನು ಈ ವಿವಿಧ ಪರಿಗ್ರಹಗಳ ನಡುವೆ ಸಿಕ್ಕಿದ್ದಾನೆ. ಆ ಪರಿಗ್ರಹ ಅನುಕೂಲವಾದಷ್ಟು ಅವನ ಬಂಧನ ಹೆಚ್ಚು ಬಲಿಷ್ಠ! ಸಾಧಕನು ಹಿತ, ಅಹಿತ ಎರಡೂ ಪರಿಗ್ರಹಗಳನ್ನು ಮನಃಪೂರ್ವಕ ಬಿಟ್ಟುಕೊಡುತ್ತಾನೆ, ತನಗೆ 'ಸುತ್ತಿದ ಮಾಯಾ ಪ್ರಪಂಚವ' ಹರಿದು ಹಾಕುತ್ತಾನೆ. ಆದುದರಿಂದ ಅವನು ತ್ಯಕ್ತ ಸರ್ವ ಪರಿಗ್ರಹನು.

ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ:– ಸಾಧಕನು ಇಂತು ನಿರಾಶಿ. ದೇಹ ಮನಸ್ಸುಗಳು ಅವನ ನಿಯಂತ್ರಣದಲ್ಲಿವೆ. ಪರಿಗ್ರಹ ಗಳಿಗೆ ಅವನು ಮೋಹಿತನಲ್ಲ. ಅಹಂಕಾರ ವಿರಹಿತ. ಅವನು ಅದೆಷ್ಟು ಕಾರ್ಯಗ ಳನ್ನು ಮಾಡಿದರೂ ಅವು ಕೇವಲ ಶಾರೀರಿಕ. ತೋರಿಕೆಗೆ ಮಾತ್ರ! ಅವುಗಳ ಹಿಂದೆ ರಾಗ ದ್ವೇಷವಿಲ್ಲವಾಗಿ ಅವನಿಗೆ ಬಾಧೆಯುಂಟು ಮಾಡಲಾರವು. ಸಂಸಾರಾ ಮಯವು ಅವನ ಪರಿಶುದ್ಧ ಮನಸ್ಸಿಗೆ ಲೇಪಗೊಳ್ಳದು. ಪುನರ್ಜನ್ಮಕ್ಕೆ ಕಾರಣ ವಾಗದು.

ಯದೃಚ್ಛಾ ಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ॥
ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥೨೨॥

ಅರ್ಥ:– ಯದೃಚ್ಛಾ ಲಾಭ ಸಂತುಷ್ಟಃ= ಬೇಡದೆ ಬಂದುದರಲ್ಲಿ ತೃಪ್ತನಾದ, ದ್ವಂದ್ವಾತೀತಃ= (ಶೀತೋಷ್ಣಾದಿ) ದ್ವಂದ್ವಗಳನ್ನು ಅತಿಕ್ರಮಿಸಿದವನಾದ, ವಿಮತ್ಸರಃ= ಮಾತ್ಸರ್ಯರಹಿತನಾದ, ಸಿದ್ಧೌ ಅಸಿದ್ಧೌ ಚ=ಲಾಭ ಅಲಾಭಗಳಲ್ಲಿ ಸಮಃ = ಸಮ ಬುದ್ಧಿ ಯುಳ್ಳ, (ಪುರುಷನು) ನ ನಿಬಧ್ಯತೇ = ಬದ್ಧನಾಗುವದಿಲ್ಲ.

ವಿವರಣೆ:- ತ್ಯಕ್ತ ಸರ್ವ ಪರಿಗ್ರಹಃ:– ಈ ಪದ ಸಮುಚ್ಚಯದ ಅರ್ಥ ಸರ್ವ ವಸ್ತು ತ್ಯಾಗ ಎಂದಲ್ಲವೆ? ಹಾಗಾದರೆ, ಅಂಥ ತ್ಯಾಗ ಸರ್ವಥಾ ಅಶಕ್ಯ. ದೇಹವಿಡಿದು ಬಾಳುತ್ತಿರುವವರೆಗೆ ಬಹಳ ಬೇಡ ಕೆಲವಾದರೂ ವಸ್ತುಗಳು ಅವಶ್ಯ. ದೇಹ ಬದುಕಲು ಅನ್ನ, ಅನ್ನದ ಉತ್ಪತ್ತಿಗಾಗಿ ಭೂಮಿ, ಭೂಮಿ ಊಳಲು ಪಶು, ಪಶು ಸಂಗೋಪನೆಗಾಗಿ ಆಳು, ಇರಲು ಮನೆ, ಸಂಗಕ್ಕೆ ವನಿತೆ. ವಂಶ ವೃದ್ಧಿಗಾಗಿ ಮಕ್ಕಳು ಇವು ಸಾಮಾನ್ಯ ಮನುಷ್ಯನಿಗೆ ಅನಿವಾರ್ಯ. ಎಲ್ಲ ತ್ಯಾಗ ಮಾಡಿದ ಸನ್ಯಾಸಿಯಾದರೇನು ಅವನಿಗೂ ಅನ್ನ, ವಸತಿ, ವಸ್ತ್ರ ಇತ್ಯಾದಿ ಬೇಕೆಬೇಕಲ್ಲ? ಈ ಸಂದೇಹ ನಮ್ಮ ತಲೆಯಲ್ಲಿ ಮಿಸುಕುವದು ಸಹಜ. ಇದರ ಪರಿಹಾರಕ್ಕಾಗಿ ಕೃಷ್ಣನ ಉಪದೇಶ ಮುಂದುವರೆದಿದೆ.

ಸರ್ವತ್ಯಾಗವೆಂದರೆ ಅನ್ನ ವಸ್ತ್ರಾದಿಗಳನ್ನು ಬಿಟ್ಟು ಬಿಡುವದೆಂದಲ್ಲ; ಅವು ಗಳ ಬಗೆಗಿನ ಚಿಂತೆಯನ್ನು ತೊರೆಯುವದು; ಹಾಗು ಪರಮಾತ್ಮನನ್ನೇ ಪೂರ್ತಿ ಯಾಗಿ ನಂಬಿಕೊಂಡಿರುವದು. ಪರಮಾತ್ಮನು ತ್ಯಾಗಿಯ ಯೋಗಕ್ಷೇಮ ನೋಡಿ ಕೊಳ್ಳುತ್ತಾನೆ.

"ನನ್ನ (ಶ್ರೀ ಮಲ್ಲಿಕಾರ್ಜುನ ಶಿವಯೋಗಿಗಳವರು) ಜೀವನದಲ್ಲಿಯೆ

ಒಂದು ಘಟನೆ. ಒಮ್ಮೆ ಬೆಂಗಳೂರಿನಿಂದ ಶಂಭುಲಿಂಗ ಬೆಟ್ಟಕ್ಕೆ ಹೊರಟಿದ್ದೆ. ಆ ನಾಡಿನಲ್ಲಿ ಪ್ರಯಾಣ ಮಾಡುತ್ತಿದ್ದುದು ಅದೇ ಮೊದಲು. ನಮ್ಮ ಬಸ್ಸು ಕೊಳ್ಳೇಗಾಲ ತಲುಪಿದಾಗ ಮಧ್ಯಾಹ್ನ ೩-೩೦ ಗಂಟೆ. ಅಲ್ಲಿಯವರೆಗೆ ಸ್ನಾನ ಪೂಜೆ ಪ್ರಸಾದ ಆಗಿರಲಿಲ್ಲ. ಬಸ್ಸು ಅಲ್ಲಿ ನಿಲ್ಲುವದೇ ತಡ ಒಬ್ಬ ವ್ಯಕ್ತಿ ಬಂದು ಕೈಮುಗಿದು 'ಸ್ವಾಮಿ, ತಮಗಾಗಿ ಪ್ರಸಾದ ಸಿದ್ಧವಾಗಿದೆ. ನಮ್ಮಲ್ಲಿಗೆ ದಯಮಾಡಿಸಬೇಕು' ಎಂದು ಪ್ರಾರ್ಥಿಸಿದ. ಆಶ್ಚರ್ಯ ಪಡುತ್ತ ಕೇಳಿದೆ 'ನಾನು ಬರುವದು ನಿಮಗಾರು ಹೇಳಿದರು? ನೀವು ಯಾರು?' 'ಬುದ್ಧೀ, ನಾನೊಬ್ಬ ಸೇವಕ; ಒಬ್ಬರು ಬಂದು ನಿಮ್ಮ ಲಕ್ಷಣ ಹೇಳಿ ಈ ಬಸ್ಸಿಗೆ ಬರುತ್ತಿರುವದಾಗಿ ಹೇಳಿ ಹೋದರು'. ಎಲ್ಲ ದೇವರ ಲೀಲೆ ಎಂದುಕೊಂಡೆ ಮನದಲ್ಲಿ." ಬಸವಣ್ಣನವರು "ನಂಬಿ ಕರೆದಡೆ ಓ ಎನ್ನನೇ ಶಿವನು" ಎಂದಿದ್ದಾರೆ. "ಯೋಗಕ್ಷೇಮಂ ವಹಾಮ್ಯಹಂ" ಎಂಬ ಭಗವಂತನ ಆಶ್ವಾಸನ ನಮ್ಮ ತಲೆಯಲ್ಲಿ ಸುಸ್ಥಿರವಾಗಿದ್ದರೆ ಚಿಂತೆಗೆ ಅವಕಾಶವೇ ಇಲ್ಲ. ಆದ್ದರಿಂದ,

ಯದೃಚ್ಛಾಲಾಭ ಸಂತುಷ್ಟಃ :-ಸಾಧಕನು ದೇವರ ಕೃಪೆಯಿಂದ ದೊರೆತುದರಲ್ಲಿ ಸಂತುಷ್ಟನಾಗಿರಬೇಕು. ಅಯಾಚಿತ ಹಾಗು ಅಸಂಕ್ಲೃಪ್ತ ಅಂದರೆ ಬೇಡದೆ ಹಾಗೂ ಪೂರ್ವದಲ್ಲಿ ಯೋಜಿಸದೆ ಬಂದ ಭೋಗವು 'ಯದೃಚ್ಛಾಲಾಭ'. ಅದರಲ್ಲಿ ಸಂತೋಷ ಪಡುವ ಗುಣವಿರಬೇಕು ಸಾಧಕನಿಗೆ. ವಸ್ತುಗಳ ಸಂಗ್ರಹ ಬೆಳೆದಂತೆ ಮನೋ ವಿಕಾರ ಹೆಚ್ಚುತ್ತದೆ, ಅಸಮಾಧಾನ ವೃದ್ಧಿಯಾಗುತ್ತದೆ. ಎಷ್ಟು ಮಿತ ಸಂಗ್ರಹವೋ ಅಷ್ಟು ಹಿತ. ಋಷಿ ವಚನ ಹೀಗಿದೆ:

> "ಕೌಪೀನ ಯುಗಲಂ ವಾಸಃ ಕಂಥಾಂ ಶೀತ ನಿವಾರಿಣೀಮ್ ।
> ಪಾದುಕೇ ಚಾಪಿ ಗೃಹ್ಣೀಯಾತ್ ಕುರ್ಯಾನ್ನಾನ್ಯಸ್ಯ ಸಂಗ್ರಹಮ್॥'

ಎರಡು ಕೌಪೀನ, ಶೀತ ನಿವಾರಕ ಹೊದಿಕೆ, ಕಾಲಲ್ಲೆರಡು ಪಾದುಕೆ-ಇವಿಷ್ಟೇ ಸಾಧಕನ ಸಂಪತ್ತಾಗಿರಬೇಕು. ಅಹಿಂಸಾ ಪ್ರವಾದಿಗಳಾದ ಗಾಂಧಿಯವರು ಅಪರಿಗ್ರಹ ವ್ರತಿಗಳಾಗಿದ್ದುದು ಗಮನೀಯ. ಜಗತ್ತಿನ ಅತ್ಯಂತ ಪ್ರಭಾವಿ ಮಹಾಪುರುಷರಾದ ಅವರಲ್ಲಿ ಎರಡು ಪಂಜೆ, ಕಾಲ್ಮರಿ, ಕೈಕೋಲು, ಗಡಿಯಾರ, ಲೇಖನಿ, ಪುಸ್ತಕ ಇಂಥ ಕೆಲವೇ ಸಾಮಾನುಗಳಿದ್ದವು. ಅಷ್ಟರಲ್ಲಿ ಅವರು ಗಳಿಸಿದ ಆನಂದ ಅಪಾರ, ಅವಿನಾಶಿ! ಮನುಕುಲದ ಹೃದಯವನ್ನೇ ಗೆದ್ದರು.

ರೂಢಿಯಿಂದ ಪರಿಗ್ರಹ ಹೆಚ್ಚಬಲ್ಲದು ಅಥವಾ ಕಡಿಮೆಯಾಗಬಲ್ಲದು. ನಮ್ಮ ದೇಹ ಪರಿಸರಕ್ಕೆ ಹೊಂದಿಕೊಳ್ಳುವ ಗುಣವುಳ್ಳದು. ರೂಢಿ ಮಾಡಿದರೆ ಕೊರೆವ ಚಳಿಯಲ್ಲಿಯೂ ಬರಿಮೈಯಿಂದ ಚರಿಸಬಲ್ಲೆವು. ಹೆಚ್ಚು ಹೆಚ್ಚು ಧರಿಸುವ ರೂಢಿ ಮಾಡಿದರೆ ಹತ್ತು ಉಣ್ಣೆಯ ಬಟ್ಟೆ ಹಾಕಿದರೂ ಕಡಿಮೆಯೇ ಎನಿಸುತ್ತದೆ.

ಹೊಟ್ಟೆಗೆ ತುತ್ತು ಅನ್ನ ಬೇಕಷ್ಟೆ? ಅದಕ್ಕಾಗಿ ಜೀವನವನ್ನೇ ಸವೆಸ ಬೇಕಿಲ್ಲ. ಒಂದು ಪವಿತ್ರ ಕಾಯಕ ನಮ್ಮ ದೈನಂದಿನ ಅವಶ್ಯಕತೆಗಳನ್ನು ಪೂರ್ತಿ ಗೊಳಿಸುವದು. ಅಷ್ಟೇ ಅಲ್ಲ ಅದು ನಮ್ಮ ಆರೋಗ್ಯಕ್ಕೂ ಹಿತ, ಸಮಾಜಕ್ಕೂ ಉಪಕಾರಿ. ಆತ್ಮ ಹಾಗು ಧರ್ಮ ಸಾಧನೆಗೆ ಅಂಥಹ ಕಾಯಕವು ಒಂದುವೇಳೆ ಅಷ್ಟು ಅನುಕೂಲವಾಗದಿದ್ದರೆ ಭಿಕ್ಷೆ ಬೇಡುವದು ಉಚಿತ ಮತ್ತು ಧರ್ಮಸಮ್ಮತ. ಬಲ್ಲವರು ಹೇಳಿದ್ದಾರೆ: "ಭಿಕ್ಷದಾ ಅನ್ನವು ಮೋಕ್ಷಕ್ಕೆ ಸಾಧನವು. ಕುಕ್ಷಿಗೆ ತಿರಿದುಂಡರೆ ನರಕ ತಪ್ಪದು." ಅನುಭವಿಗಳ ದೃಷ್ಟಿಯಲ್ಲಿ ಭಿಕ್ಷೆ ಪಂಚವಿಧ.

"ಮಾಧೂಕರಂ ಅಸಂಕ್ಲೃಪ್ತಂ ಪ್ರಾಕ್ಪ್ರಣೀತಂ ಅಯಾಚಿತಮ್ ।
ತತ್ಕಾಲೋಪಪನ್ನಂ ಚ ಭೈಕ್ಷ್ಯಂ ಪಂಚವಿಧಂ ಭವೇತ್ ॥"

ಮಾಧುಕರಿ, ಅಪೂರ್ವಯೋಜಿತ, ಪೂರ್ವ ಅ[illegible], ಅಯಾಚಿತ, ತತ್ಕಾಲೋಪಪನ್ನ –ಇವು ಭಿಕ್ಷಾ ಪ್ರಭೇದಗಳು. ಒಂದೇ ವೇಳೆ ಭಿಕ್ಷೆ ಬೇಡಬೇಕು. ಅನವಶ್ಯವಾಗಿ ಹೆಚ್ಚು ತರುವದು, ನಿಯಮಿತ, ಮನೆ[illegible]ಹೋಗುವದು, ಕಾಡಿ ಬೇಡುವದು ಸರಿಯಲ್ಲ. ಭಕ್ತಿ ಆದರಗಳಿಂದ ನೀಡಿದ ಅನ್ನವನ್ನಷ್ಟೇ ಗ್ರಹಿಸಿ ದೇಹ ರಕ್ಷಿಸಬೇಕು. ಇದೇ ಯದೃಚ್ಛಾಲಾಭ ಸಂತುಷ್ಟಿ.

ಯದೃಚ್ಛಾಲಾಭ ಸಂತುಷ್ಟಿ ಅಳವಡಬೇಕಾದರೆ ಸಾಧಕನು ಪಂಚವ್ರತ ಶೀಲನಾಗಬೇಕು. ಗುರುಭಕ್ತಿ, ನಿರ್ವಿಷಯಿತ್ವ, ಬ್ರಹ್ಮಧ್ಯಾನ ಪ್ರವೃತ್ತಿ, ನಿಸ್ಪೃಹತೆ ಹಾಗು ಕೋಪರಾಹಿತ್ಯ–ಇವು ಪಂಚವ್ರತ. ವೈಭವ ಬರಲಿ ಅಥವಾ ದುಃಖ ಹೆಚ್ಚಲಿ ಗುರುಗಳನ್ನು, ದೇವನನ್ನು ಬಿಡದೆ ನೆನೆಸುವದು ಭಕ್ತಿ. ವಿಷಯಗಳಿಂದ ಮನಸ್ಸನ್ನು ನಿರೋಧಿಸುವದು, ಯಾವ ಚಟಗಳಿಗೂ ಅಂಟದಿರುವದು ನಿರ್ವಿಷಯಿತ್ವ. ಸದಾ ಆತ್ಮಚಿಂತನ ಮಾಡುವದು ಧ್ಯಾನ. ವಸ್ತುಗಳಲ್ಲಿ ಅನಾಸಕ್ತನಾಗಿರುವದು ನಿಸ್ಪೃಹತೆ. ಎಂಥ ಪ್ರಸಂಗದಲ್ಲಿಯೂ ವೈರಭಾವ ತಾಳದಿರುವದು ಕೋಪ ರಾಹಿತ್ಯ.

**ದ್ವಂದ್ವಾತೀತಃ:-** ಹಸಿವು ತೃಷೆ, ಚಿಂತೆ ಭ್ರಾಂತಿ, ಶೋಕ ಮೋಹ, ಸಿರಿತನ ಬಡತನ, ಮಾನ ಅಪಮಾನ, ರೋಗ ನಿರೋಗ-ಇವು ದ್ವಂದ್ವಗಳು. ದ್ವಂದ್ವಗಳಲ್ಲಿ ಉಭಯಪದ ಪ್ರಧಾನ. ಒಂದರಿಂದ ಎಷ್ಟು ತಾಪವೋ ಇನ್ನೊಂದರಿಂದ ಅಷ್ಟೇ ತಾಪ. ಉದಾ:– ಬಡವರಿಗೆ ಬಡತನದ ತಾಪ. ಧನಿಕರಿಗೆ ಸಿರಿವಂತಿಕೆಯ ತಾಪ. ಸಾಧಕನು ಎರಡರ ಭಾವ ಬಿಟ್ಟಿರಬೇಕು.

**ವಿಮತ್ಸರಃ:–** ಪರರ ವೈಭವದ ವಿಷಯದಲ್ಲಿ ಅಸಹನ ಉಂಟಾದರೆ ಅದು ಮತ್ಸರ. ಮಾನವ ಜನಾಂಗದ ಸಕಲ ರಂಗಗಳಲ್ಲಿ ಮಾತ್ಸರ್ಯ ತಾಂಡವಿಸುತ್ತಿದೆ. ಇಬ್ಬರು ಸವತೆಯರು, ಯೋಗಿಗಳು, ಪಂಡಿತರು, ರಾಜಕಾರಣಿಗಳು, ಸಹೋದರರು ಕೂಡಿ ಬದುಕುವದೇ ಅಸಾಧ್ಯ. ಬ್ರಹ್ಮ ವಿಷ್ಣು ಶಿವ ಮೂವರೂ ಸೋದ

ರರು; ಜಗದಾಣ್ಮರಾದ ದೇವತೆಗಳು. ಆದರೂ ಒಬ್ಬರು ಇನ್ನೊಬ್ಬರಿಗೆ ಸೇರುವ ದಿಲ್ಲ. ಒಬ್ಬರ ಪುರಾಣದಲ್ಲಿ ಮತ್ತೊಬ್ಬರ ಅವಹೇಳನ. ಗಣಪತಿ ಷಣ್ಮುಖರಲ್ಲಿ ನಿತ್ಯ ಕದನ. ಪಾಂಡು ಧೃತರಾಷ್ಟ್ರ, ಕುಂತಿ ಗಾಂಧಾರಿ ಇವರ ಮಧ್ಯೆ ತಲೆ ಎತ್ತಿದ ಮಾತ್ಸರ್ಯ ಕುರುಕುಲ ವಿನಾಶ ಮಾಡಿತು. ಈ ಸರ್ವಘಾತುಕ ಮಾತ್ಸರ್ಯ ಸಾಧಕನನ್ನು ಸ್ಪರ್ಶಿಸಬಾರದು. ನೆರೆ ಹೊರೆಯವರ ಸಿರಿ, ವೈಭವ, ಪಾಂಡಿತ್ಯ, ಮಾನ, ಕೀರ್ತಿ ಕಂಡು ಆನಂದ ಪಡುವದು ಸಾಧಕನ ಗುಣವಾಗಬೇಕು,

**ಸಮಃ ಸಿದ್ಧಾವಸಿದ್ಧೌ ಚ:**– ಕಾರ್ಯಸಿದ್ಧಿ, ಕಾರ್ಯಹಾನಿಗಳು ಒದಗಿದಾಗ ಚಿತ್ತ ಸಮತೆ ಕಾಪಾಡಿಕೊಂಡಿರುವವ ಸಮಭಾವಿ.

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ॥**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥೨೩॥**

**ಅರ್ಥ**:–ಗತ ಸಂಗಸ್ಯ= ವಿಷಯಾಭಿರತಿ ಇಲ್ಲದ, ಮುಕ್ತಸ್ಯ= ಮುಕ್ತನಾದ ಜ್ಞಾನಾವಸ್ಥಿತ ಚೇತಸಃ= ಜ್ಞಾನದಲ್ಲಿ ನೆಲೆಸಿದ ಮನವುಳ್ಳ, ಯಜ್ಞಾಯ= (ಲೋಕ ಸಂಗ್ರಹಾರ್ಥಂ) (ಪರಮೇಶ್ವರರಾರ್ಥಂ) ಲೋಕ ಸಂಗ್ರಹಕ್ಕಾಗಿ ಹಾಗು ಪರಮಾತ್ಮನಿಗಾಗಿ (ಕರ್ಮ) ಆಚರತಃ= ಕರ್ಮ ಆಚರಿಸುವ (ಸಂತನ) ಸಮಗ್ರಂ ಕರ್ಮ =ಸಮಗ್ರ ಕರ್ಮವು ಪ್ರವಿಲೀಯತೇ= ನಾಶವಾಗುತ್ತದೆ,

**ವಿವರಣೆ**:- **ಗತ ಸಂಗಸ್ಯ, ಮುಕ್ತಸ್ಯ**:-ಮುಕ್ತಿ ಎರಡು ವಿಧ: ಜನ್ಮಬಂಧ ವಿನಿರ್ಮುಕ್ತಿ ಹಾಗು ಗುಣಾಭಿಮಾನ ನಿರ್ಮುಕ್ತಿ, ಜೀವ-ಕಲ್ಪನೆಗೆ ಕಾರಣ ಅವಿದ್ಯೆ. ಅದು ಸಂಪೂರ್ಣ ನಾಶವಾಗಿ ದಿವ್ಯ ಆನಂದ ಸಮನಿಸಿದರೆ ಅದೇ ಮುಕ್ತಿ. ಈ ಮುಕ್ತಿ ದೊರೆತಾಗ ಮತ್ತೆ ಜನ್ಮ ಮರಣವಿಲ್ಲವಾಗಿ ಇದಕ್ಕೆ ಜನ್ಮ ಬಂಧವಿನಿರ್ಮುಕ್ತಿ ಎನ್ನುತ್ತಾರೆ. ಆತ್ಮ ತತ್ವ್ತದ ಪರಿಜ್ಞಾನ ಹೊಂದಿ ಪ್ರಾಕೃತಿಕ ಸತ್ವರಜ ತಮಗುಣಗಳ, ಸಕಾಮ ಧರ್ಮಾಧರ್ಮಗಳ ಮತ್ತು ರಾಗ ದ್ವೇಷಗಳ ಅಭಿಮಾನವೆಂಬ ಬಲೆಯಿಂದ ಪಾರಾಗುವದು ಗುಣಾಭಿಮಾನ ನಿರ್ಮುಕ್ತಿ. ಮೊದಲನೆಯ ಮುಕ್ತಿ ಪಡೆದವನು ಸಿದ್ಧ. ಎರಡನೆಯ ಮುಕ್ತಿ ಪಡೆಯುವವನು ಸಾಧಕ. ಮುಕ್ತಸ್ಯ ಈ ಪದವು ಸಾಧಕವರ್ಯನನ್ನು ನಿರ್ದೇಶಿಸಿದೆ.

ಈ ಮುಕ್ತನು ಜನ್ಮಬಂಧ ನೀಗಿರದಿದ್ದರೂ ದ್ವಂದ್ವಾತೀತನು; ವಿಮತ್ಸರನು. ಯದೃಚ್ಛಾಲಾಭ ಸಂತುಷ್ಟನು. ಗತ ಸಂಗನು ಅಂದರೆ ಐಹಿಕ ಹಾಗು ಸ್ವರ್ಗೀಯ ಭೋಗ ಭಾಗ್ಯಗಳ ವಿಷಯದಲ್ಲಿ ಅನಾಸಕ್ತನು.

**ಜ್ಞಾನಾವಸ್ಥಿತ ಚೇತಸಃ** :– ಜ್ಞಾನ ಎರಡು ಪ್ರಕಾರ ೧) ನಿರ್ವಿಕಲ್ಪಕ, ನಿರಾಕಾರ. ಜೀವ ಶಿವೈಕ್ಯ ಜ್ಞಾನ. ೨)ಸವಿಕಲ್ಪಕ, ಸಾಕಾರ ದೇವ ಜ್ಞಾನ. ಮೊದಲನೆಯ ಜ್ಞಾನದಲ್ಲಿ ಸಮಾಹಿತ ಸ್ಥಿತಪ್ರಜ್ಞನ ಮನಸ್ಸು ನೆಲೆಸಿದೆ; ಅವನಿಗೆ ವಿಶ್ವವೆಲ್ಲ ದೇವನ ರೂಪಾಗಿ ಕಾಣುತ್ತಿದೆ. ಪ್ರಾಕೃತಿಕ ದ್ವಂದ್ವಗಳಿಂದ ವಿಮುಕ್ತನಾದ ಸಾಧಕನ ಮನಸ್ಸು ಮಾತ್ರ ಎರಡನೆಯ ವಿಧ ಜ್ಞಾನದಲ್ಲಿ ಅವಸ್ಥಾನವಾಗಿದೆ.

ಅಂದರೆ ಸಾಧಕನು ನಿತ್ಯ ದೇವನನ್ನೇ ಧ್ಯಾನಿಸುತ್ತಾನೆ. ದೇವಾರಾಧನೆ, ದೇವ ಪ್ರಾರ್ಥನೆ, ದೇವ ಭಜನಗಳೆಂದರೆ ಅವನಿಗೆ ಪ್ರಾಣ. ಸಿದ್ಧ ಪುರುಷನಿಗೆ ಲೋಕ ಸೇವೆಯಲ್ಲಿ ಎಷ್ಟು ಅನುರಾಗ ಹಾಗು ಆನಂದವೋ ಸಾಧಕನಿಗೆ ದೇವ ಸೇವೆ ಯಲ್ಲಿ ಅಷ್ಟು ಪ್ರೇಮ.

ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ:- ಸಮಾಧಿ ಪುರುಷನಿಗೆ ಯಜ್ಞವೆಂದರೆ ಲೋಕ ಸಂಗ್ರಹ ಕರ್ಮ; ಸಾಧಕನಿಗೆ ಪರಮಾತ್ಮನ ಅರ್ಚನೆಯೇ ಯಜ್ಞ. ಇಬ್ಬರೂ ನಿರಾಶಿ, ನಿರ್ಮಮ, ವಿಗತಜ್ವರರಾಗಿ ಕರ್ಮ ಗಳನ್ನು ಆಚರಿಸುತ್ತಾರೆ. ಸಿದ್ಧನ ಕರ್ಮವು ಲೋಕಕ್ಕೆ ಹಿತಕರ. ಸಾಧಕನ ಕರ್ಮವು ಹೃದಯ ಶುದ್ಧಿಕರ. ಅವನ ಕರ್ಮದಲ್ಲಿ ಕಾಮನೆ ಇಲ್ಲ. ಅಭಿಮಾನ ವಿಲ್ಲ. ಆದುದರಿಂದ ಅದು ಅಬಾಧಕ. ಅಂದರೆ ಸಿದ್ಧನ ಜ್ಞಾನಕರ್ಮ ಹಾಗು ಸಾಧಕನ ದೇವಪ್ರೀತ್ಯರ್ಥ ಕರ್ಮದಿಂದ ಸರ್ವ ಕರ್ಮ (ಬಂಧನ) ಗಳು ನಾಶ ವಾಗುತ್ತವೆ.

ಕರ್ಮನಾಶ ಎರಡು ವಿಧ: (೧) ಮನೋನಾಶರೂಪ (೨) ವಾಸನಾ ನಾಶ ರೂಪ. ಮನಸ್ಸು ದೇವನ ಸಾಕಾರ ಚಿಂತನೆಯಲ್ಲಿ ತಲ್ಲೀನವಾದರೆ ಮನೋನಾಶ. ಆಗ ಸಾಕಾರ ದೇವ ಸಾಕ್ಷಾತ್ಕಾರ. ಪ್ರಾಪಂಚಿಕ ಪದಾರ್ಥಗಳ ಆಕರ್ಷಣೆಗಿನ್ನೂ ಇಲ್ಲಿ ಆಸ್ಪದವಿದೆ. ಆಕಾರ ಕರಗಿ ನಿರಾಕಾರ ದೇವ ಚೇತನದಲ್ಲಿ ಮನಸ್ಸು ಕರಿ ಗೊಂಡು ನಿಂತಾಗ ಅದು ನಿರಾಕಾರ ದೇವ ಸಾಕ್ಷಾತ್ಕಾರ. ಆಗ ವಾಸನಾ ನಾಶ. ಮೊದಲನೆಯ ವಿಧ ಕರ್ಮ ನಾಶವು ಸಾಧಕನಿಗೆ. ಎರಡನೆಯ ವಿಧವು ಸಿದ್ಧನಿಗೆ. ಸಾಧಕ ವಿವಿದಿಷಾ ಸನ್ಯಾಸಿ. ಸಿದ್ಧನು ವಿದ್ವತ್ ತತ್ತ್ವಸ್ವರೂಪ ಸನ್ಯಾಸಿ. ಸಿದ್ಧನು ಸದೈವ ಮುಕ್ತ. ಸಾಧಕನು ನಿರಾಯಾಸವಾಗಿ ವಾಸನಾಕ್ಷಯ ಮಾಡಿಕೊಂಡು ಮುಕ್ತನಾಗುತ್ತಾನೆ.

ಭಗವಂತ:– "ಅರ್ಜುನ, ಅರಿತ ಅನುಭಾವಿಯು ಮುಕ್ತ. ವಿಷಯಾಭಿರತಿ ಯಾಗಲಿ, ಫಲಭೋಕ್ತೃತ್ವವಾಗಲಿ ಅವನಲ್ಲಿಲ್ಲ. ಬದುಕಿನಾದ್ಯಂತ ಲೋಕಸಂಗ್ರಹ ಕಾರ್ಯಗಳಲ್ಲಿ ತೊಡಗುತ್ತಾನೆ. ಅರಿವಿನ ಮಾರ್ಗದಲ್ಲಿರುವ ಸಾಧಕನೂ ಒಂದರ್ಥ ದಲ್ಲಿ ಮುಕ್ತ. ಏಕೆಂದರೆ ದೇವ-ನೆನಹಿನಲ್ಲಿಯೇ ಅವನ ಮನ ಮುಳುಗಿದ್ದರಿಂದ ವಿಷಯ ಲಾಲಸೆ ಇಲ್ಲ. ಅನಾಸಕ್ತನಾಗಿ ದೇವಜ್ಞಾನದಲ್ಲಿ ಚಿತ್ತ ನೆಲೆಗೊಳಿಸಿ ದೇವ ಪ್ರೀತ್ಯರ್ಥ ಕರ್ಮ ಮಾಡುತ್ತಾನೆ. ಇಬ್ಬರೂ ಸಂತರು. ಕರ್ಮ ಯೋಗಿಗಳು. ಅವರ ಕರ್ಮಗಳಿಂದಾಗಿ ಕರ್ಮಬಂಧನ ಅಳಿಯುತ್ತದೆ."

ಸಂಬಂಧ:– ಪರಮೇಶ್ವರಾರಾಧನಾರೂಪ ಕರ್ಮವು ಆತ್ಮ ಜ್ಞಾನಕ್ಕೆ ಕಾರಣವಾಗುವದರಿಂದ ಅದು ಬಂಧನಕರವಲ್ಲ. ಆದ್ದರಿಂದ ಅದು ಅಕರ್ಮ. ಯೋಗಾರೂಢ ಅವಸ್ಥೆಯಲ್ಲಿ ಆತ್ಮಜ್ಞಾನದ ಪ್ರಚಂಡ ಪ್ರಕಾಶ ಹರವಿದ್ದರಿಂದ

ಆಗ ಮಾಡಿದ ಕರ್ಮವೆಲ್ಲ ಅಕರ್ಮವೇ. ಇದು ಸಾರಾಂಶ. ಕರ್ಮದ ಅಂಗಗಳೆಲ್ಲ ಬ್ರಹ್ಮರೂಪವೇ ಎಂಬ ತಾತ್ತ್ವಿಕ ಸಂಗತಿಯನ್ನು ವಿವರಿಸಲಾಗುತ್ತದೆ.

**ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾಹುತಮ್ ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ ಕರ್ಮ ಸಮಾಧಿನಾ ॥೨೪॥**

**ಅರ್ಥ:-** ಅರ್ಪಣಂ= ಅರ್ಪಣವು ( ದರ್ವಿ ಮುಂತಾದ ಅರ್ಪಣಾ ಸಾಧನಗಳು.) ಬ್ರಹ್ಮ= ಬ್ರಹ್ಮವು. ಹವಿಃ= ಹವಿಸ್ಸು (ತುಪ್ಪ ಮುಂತಾದ ಅರ್ಪಿಸಲಾಗುವ ಪದಾರ್ಥಗಳು ) ಬ್ರಹ್ಮ= ಬ್ರಹ್ಮವು, ಬ್ರಹ್ಮಾಗ್ನೌ ಬ್ರಹ್ಮಣಾಹುತಂ= (ಅಗ್ನಿಯು ಬ್ರಹ್ಮ; ಕರ್ತನು ಬ್ರಹ್ಮ) ಬ್ರಹ್ಮರೂಪ ಅಗ್ನಿಯಲ್ಲಿ ಬ್ರಹ್ಮನಿಂದ ಹೋಮ ಮಾಡಲ್ಪಟ್ಟಿತು. ಬ್ರಹ್ಮ ಕರ್ಮ ಸಮಾಧಿನಾ =(ಈ ರೀತಿ) ಕರ್ಮರೂಪ ಬ್ರಹ್ಮದಲ್ಲಿ ಸಮಾಧಿ ಹೊಂದಿದ (ಚಿತ್ತೈಕಾಗ್ರತಾರೂಪ ಸಮಾಹಿತ ಸ್ಥಿತಿ ಪಡೆದ) ತೇನ= ಆ ಪುರುಷನಿಂದ, ಗಂತವ್ಯಂ =ಹೊಂದಬೇಕಾದುದು ಬ್ರಹ್ಮ ಏವ =ಬ್ರಹ್ಮವೇ.

**ವಿವರಣೆ:—** "ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ ।
ಅವಶ್ಯಮನುಭೋಕ್ತವ್ಯಂ ಫಲಂ ತಸ್ಯ ಶುಭಾಶುಭಮ್ ॥

ಕೋಟಿ ಕಲ್ಪ ವರುಷಗಳು ಗತಿಸಿದರೂ .ಉಪಭೋಗಿಸದೆ ಕರ್ಮ ಕ್ಷಯವಾಗದು. ಕರ್ಮದ ಶುಭಾಶುಭ ಫಲವನ್ನು ಉಂಡೇ ತೀರಬೇಕು (ಶ್ರುತಿ). " ಸಮಗ್ರಂ ಕರ್ಮ ಪ್ರವಿಲೀಯತೇ " (೪—೨೩.) ದೇವನಿಗಾಗಿ ಆಚರಿಸಿದರೆ ಕರ್ಮಗಳೆಲ್ಲ ನಾಶವಾಗುತ್ತವೆ. ಶ್ರೀ ಕೃಷ್ಣನ ಈ ಮಾತಿಗೂ ಶ್ರುತಿಯ ಆ ಮಾತಿಗೂ ವಿರೋಧವಿರುವಂತೆ ಭಾಸವಾಗುತ್ತಿದೆ. ಆದರೆ ನಿಜವಾದ ಅರ್ಥದಲ್ಲಿ ವಿರೋಧವಿಲ್ಲ. ಯಾಕೆಂದರೆ ಸಕಾಮ ಕರ್ಮವನ್ನು ಉಂಡಲ್ಲದೆ ತೀರದೆಂದು ಶ್ರುತಿಯ ಮತ. ನಿಷ್ಕಾಮ ಭಾವನೆಯಿಂದ ಮಾಡಿದರೆ ಅದೇ ಕರ್ಮವು ಪ್ರವಿಲೀನಗೊಳ್ಳುವದೆಂದು ಭಗವಂತನ ಅಭಿಪ್ರಾಯ. ಭಗವಂತನು ತನ್ನ ಅಭಿಮತವನ್ನು ಈಗ ತಾತ್ತ್ವಿಕ ದೃಷ್ಟಿಯಿಂದ ವಿವರಿಸುತ್ತಾನೆ.

ಬ್ರಹ್ಮಾರ್ಪಣಂ ಬ್ರಹ್ಮಹವಿಃ:- ಆಕಾಶದಲ್ಲಿ ವಾಯುವಿರುವಂತೆ ದೇವನಲ್ಲಿ ದೇವಾತ್ಮಶಕ್ತಿ ಇದೆ. ದೇವನು ಆಶ್ರಯ. ಶಕ್ತಿಯು ಆಶ್ರಿತ. ಅವನು ಸಾಕ್ಷಿ ಹಾಗು ಸರ್ವಾಧಿಕರಣ. ಶಕ್ತಿಯು ಸಕ್ರಿಯೆ ಹಾಗು ಪರಾಧೀನೆ. ಅವನ ಸಾನಿಧ್ಯದಲ್ಲಿ ಪರಿಣಾಮಶೀಲ ಶಕ್ತಿಯು ವಿಕಾಸವಾಗುತ್ತದೆ. ಅದರ ಅಪ್ರತಿಮ ಗರ್ಭದಿಂದ ಕರ್ತಾ, ಕರಣ, ಕಾರ್ಯ, ಪ್ರೇರಕ ಎಂಬ ನಾಲ್ಕು ಕಲ್ಪನೆಗಳು ಮೂಡಿಬಂದವು. ಶಕ್ತಿಗೂ ದೇವನಿಗೂ ಅವಿನಾಭಾವ ಸಂಬಂಧವಿರುವದರಿಂದ ಹಾಗು ದೇವ ಚೈತನ್ಯವೇ ಪ್ರಪ್ರಥಮ ಕಾರಣವಾದುದರಿಂದ ಆ ನಾಲ್ಕೂ ಕಲ್ಪನೆಗಳು ಅವನಿಂದ ಭಿನ್ನವಲ್ಲ. ಅವನೇ ಕರ್ತ, ಕರಣ, ಕಾರ್ಯ. ಅವನೇ ಪ್ರೇರಕ! ಇದನ್ನೇ ಯಜ್ಞ ರೂಪಕವಿತ್ತು ವಿವರಿಸಬಹುದು.

ಹವ್ಯ ಹವನ ಮಾಡುವದು ಯಜ್ಞ. ಯಜ್ಞದಲ್ಲಿ ಮುಖ್ಯ ವಸ್ತುಗಳು

ಐದು. (೧) ಹವನ ಕರ್ತೃ (೨) ಹವನ ಸಾಮಗ್ರಿಗಳು (೩) ಹವಿಸ್ಸು (ತುಪ್ಪ, ಅಕ್ಕಿ ಇತ್ಯಾದಿ) (೪) ಹವನ ಸ್ಥಾನ (ಅಗ್ನಿ) (೫) ಹವಿಸ್ಸ ಸ್ವೀಕರಿಸುವ ದೇವತೆ. ಇವೈದೂ ಬ್ರಹ್ಮರೂಪ. ಬ್ರಹ್ಮನೇ ಕರ್ತೃವಾಗಿ ಯಜ್ಞ ಮಾಡುತ್ತಾನೆ; ಕರ್ಮ ವಾಗಿ ಹವಿಗೊಳ್ಳುತ್ತಾನೆ. ಕರಣವಾಗಿ ಹವನಕ್ಕೆ ಸಹಾಯ ಮಾಡುತ್ತಾನೆ. ಅಧಿ ಕರಣವಾಗಿ ಹವಿಸ್ಸನ್ನು ಸ್ವೀಕರಿಸುತ್ತಾನೆ. ಒಟ್ಟಿನಲ್ಲಿ ಯಜ್ಞವೆಲ್ಲ ಬ್ರಹ್ಮ!

ದೈಹಿಕ ತತ್ತ್ವಗಳಲ್ಲಿ ಜೀವನು ವ್ಯಾಪಿಸಿರುವಂತೆ ವೈಶ್ವಿಕ ತತ್ತ್ವಗಳಲ್ಲಿ ಆತ್ಮನು ವ್ಯಾಪಿಸಿದ್ದಾನೆ. ಅವನೇ ಜಡ ಅಜಡ ರೂಪ. ಕರ್ತೃ ಕರ್ಮ ಕರಣ ಸಂಪ್ರದಾನ ಅಪಾದಾನ ಸಂಬಂಧ ಅಧಿಕರಣಗಳು ಅವನ ಅಭಿವ್ಯಕ್ತ ರೂಪಗಳು. ಜಗತ್ತಿನ ಯಾವ ವಸ್ತುವೂ ಕೀಳಲ್ಲ. ಭಕ್ತಿಭಾವದಿಂದ, ಸರ್ವದರಲ್ಲಿ ದೇವ ನೆಲೆ ಸಿದ್ದಾನೆಂಬ ತಿಳಿವಿನಿಂದ ಅಗ್ನಿಯನ್ನೇ ಪೂಜಿಸಲಿ ಅಶ್ಮವನ್ನೇ ಅರ್ಚಿಸಲಿ ನೆಲ ಜಲಗಳನ್ನೇ ಆರಾಧಿಸಲಿ ಅದೆಲ್ಲ ದೇವ ಸೇವೆಯೇ ಸರಿ. ಕಲ್ಲಿನಲ್ಲಿ ದೇವರನ್ನು ಕಂಡವರಿದ್ದಾರೆ. ಅಗ್ನಿಯಿಂದ ವರ ಪಡೆದವರಿದ್ದಾರೆ. ಸೂರ್ಯನಿಂದ ಅನು ಗ್ರಹ ಹೊಂದಿದವರು ಅನೇಕ. ಭಾವ ವಿಮಲವಾದರ ಎಲ್ಲೆಡೆ ದೇವದರ್ಶನ.

ಸಾಧಕನು ನಿರಭಿಮಾನ ಕರ್ಮಕರ್ತಾರ. ಜಾಗ್ರ ಸ್ವಪ್ನ ಸುಷುಪ್ತಿಗತ ಸೃಷ್ಟಿ ಗಳ ದಾಂಟಿ ಮನಸ್ಸನ್ನು ಪರಮಾತ್ಮನಲ್ಲಿ ಏಕಾಗ್ರಗೊಳಿಸುವ ಏಕಾಗ್ರತಾ ಪರಿ ಣಾಮರೂಪ ಬ್ರಹ್ಮಕರ್ಮ, ದೇವನಲ್ಲಿ ಮನೋ ವಿಲಯನ ಗೊಳಿಸುವ ಸಮಾಧಿ ಪರಿಣಾಮ ರೂಪ ಬ್ರಹ್ಮಕರ್ಮ ಹಾಗು ಚಿತ್ತ ತನ್ಮಯತಾ ಅವಸ್ಥೆ ಯಲ್ಲಿ ನೆಲೆಸುವ ಅವಸ್ಥಾ ಪರಿಣಾರೂಪ ಬ್ರಹ್ಮಕರ್ಮ—ಈ ಮೂರು ಬಗೆಯ ಕರ್ಮಗಳಲ್ಲಿ ಸಾಧಕನು ಮಗ್ನನಾಗಿ ಬ್ರಹ್ಮನನ್ನೇ ಹೊಂದುತ್ತಾನೆ (ಬ್ರಹ್ಮಕರ್ಮ ಸಮಾಧಿನಾ ಬ್ರಹ್ಮೈವ ತೇನ ಗಂತವ್ಯಂ) ಆಗ ಶುಭಾಶುಭ ಕರ್ಮಗಳು ವಿಲೀನ.

**ಭಗವಂತ:**— "ಅರ್ಜುನ, ಬ್ರಹ್ಮವು ಅಖಂಡ ಪರಿಪೂರ್ಣ. ಜಡ ಅಶ್ಮ ದಿಂದ ಮಹಾನ್ ಶಕ್ತಿಯವರೆಗಿನ ಅಸಂಖ್ಯ ತತ್ತ್ವಗಳಲ್ಲೆಲ್ಲ ಅವನು ಓತ ಪ್ರೋತವಾಗಿ ತುಂಬಿದ್ದಾನೆ. ಕರ್ತೃ ಕರ್ಮ ಕರಣ ಪ್ರೇರಕ, ಭೋಕ್ತಾ ಭೋಗ ಭೋಜ್ಯ ಪ್ರೇರಕ ಏನೆಲ್ಲ ಅವನದೇ ರೂಪ. ಯಾವ ಬಲ್ಲಿದನು ಬ್ರಹ್ಮಮಯ ವಿಶ್ವವೆಂದರಿದು ನಿರ್ಭಾವದಿಂದ ಕರ್ಮ ಮಾಡುತ್ತಾನೆಯೋ ಅವನು ಕರ್ಮ ಗಳಿಂದ ಮುಕ್ತನಾಗುತ್ತಾನೆ. ದಿವ್ಯ ಸಮಾಧಿರೂಪ ಕರ್ಮದ ಮೂಲಕ ದೇವ ಸಾಕ್ಷಾತ್ಕಾರ ಹೊಂದಿ ಅವನಲ್ಲಿಯೇ ಸಾಮರಸ್ಯ ಪಡೆಯುತ್ತಾನೆ.

**ಸಂಬಂಧ:**-ಸರ್ವತ್ರ ಬ್ರಹ್ಮದರ್ಶನರೂಪ ಬ್ರಹ್ಮಯಜ್ಞವು ಸರ್ವಶ್ರೇಷ್ಠ. ಆದರೆ ಇದು ಎಲ್ಲ ಸಾಧಕರಿಗೆ ಸಾಧ್ಯವಿಲ್ಲ. ಸಾಧಕರ ಯೋಗ್ಯತಾನುಸಾರ ವಿವಿಧ ಯಜ್ಞಗಳಿವೆ. ಅವುಗಳ ವಿಶೇಷ ವಿವೇಚನೆ ಮುಂದಿನ ೮ ಮಂತ್ರಗಳಲ್ಲಿದೆ.

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**

ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥೨೫॥

**ಅರ್ಥ:-** ಅಪರೇ ಯೋಗಿನಃ= ಕೆಲವು ಯೋಗಿಗಳು ದೈವಂ ಯಜ್ಞಂ ಏವ= ದೈವ ಯಜ್ಞವನ್ನೇ ಪರ್ಯುಪಾಸತೇ= ಆಚರಿಸುತ್ತಾರೆ. ಅಪರೇ= ಕೆಲವರು ಬ್ರಹ್ಮಾಗ್ನೌ =ಬ್ರಹ್ಮ ಅಗ್ನಿಯಲ್ಲಿ ಯಜ್ಞಂ= (ಜೀವರೂಪ) ಯಜ್ಞವನ್ನು ಯಜ್ಞೇನ ಏವ= (ಶುದ್ಧೀಕರಣಗೊಳಿಸುವ ಕ್ರಿಯಾರೂಪ) ಯಜ್ಞದಿಂದ ಉಪಜುಹ್ವತಿ =ಹವನ ಮಾಡುತ್ತಾರೆ.

**ವಿವರಣೆ:-** ವಿವಿಧ ಯಜ್ಞಗಳ ವಿವರಣೆ.

(೧) ದೈವಯಜ್ಞ:- ಕಲ್ಲು ಕಟ್ಟಿಗೆ ಇತ್ಯಾದಿ ಜಡ ವಸ್ತುಗಳಲ್ಲಿ ದೇವತ್ವ ಕಲ್ಪಿಸಿ ಆ ದೇವರಿಗೆ ವಿವಿಧ ಪದಾರ್ಥಗಳನ್ನು ಭಕ್ತಿ ಭಾವದಿಂದ ಅರ್ಪಿಸುವದು ದೈವಯಜ್ಞ. ಈ ಯಜ್ಞದಲ್ಲಿ ನಿಷ್ಕಾಮ ಬುದ್ಧಿ ಇರುವದರಿಂದ ಇದರ ಫಲ ಹೃದಯ ಶುದ್ಧಿ. ಅದರಿಂದ ಆತ್ಮಜ್ಞಾನ. ಅದರಿಂದ ಶಿವಸಾಮರಸ್ಯ.

(೨) ಬ್ರಹ್ಮಯಜ್ಞ (ಜೀವಯಜ್ಞ):- ಪರಿಪೂರ್ಣ ನಿತ್ಯ ನಿರಂಜನನಾದ ಅನುಪಮ ದಿವ್ಯಾಸ್ತಿತ್ವವೇ ಬ್ರಹ್ಮ. ಜ್ಞಾನ ಭಾಸ್ಕರ. ನಂದದ ಚಿದಗ್ನಿ! ಅಜಡ ಚೇತನ ಮತ್ತು ಜಡ ದೇಹ ಮನ ಬುದ್ಧಿಗಳ ಸಮ್ಮಿಶ್ರದಲ್ಲಿ ತಲೆದೋರುವ ಅಹಂಭಾವ ವಿಶಿಷ್ಟ ಚೇತನವೇ ಜೀವ! ಜನ್ಮ ಮರಣ ಸುಖ ದುಃಖ ಮುಂತಾದ ಕಲ್ಪನೆಗಳ ಕಟ್ಟಿನಲ್ಲಿ ಸಿಲುಕಿದ ಅದು ಚೈತನ್ಯ-ಛಾಯೆ! ಚಿದಗ್ನಿಯು ತತ್ ಪದ ಲಕ್ಷ್ಯವಾದರೆ,ಜೀವನು ತ್ವಂಪದ ವಾಚ್ಯ. ಈ ಮಲಿನ ಜೀವನನ್ನು ನಿಷ್ಕಾಮ ಕರ್ಮರೂಪ ಯಜ್ಞದಿಂದ ಪರಿಶುದ್ಧಗೊಳಿಸಿ ಆ ಅಖಂಡ ಚಿದಗ್ನಿ ದೇವನಲ್ಲಿ ಸಮರ್ಪಿಸುವದೇ ಜೀವಯಜ್ಞ! ಇಲ್ಲವೇ ಆತ್ಮಯಜ್ಞ! ಅಥವಾ ಬ್ರಹ್ಮಯಜ್ಞ! ಜ್ಞಾನಯಜ್ಞವೆಂದರೂ ಇದೇ.

ಜ್ಞಾನಯಜ್ಞದಲ್ಲಿ ಆತ್ಮಾನಾತ್ಮ ಪೃಥಕ್ಕರಣಕ್ರಿಯೆ ಅತೀವ ಮುಖ್ಯ. ಜೀವಾತ್ಮನಲ್ಲಿ ಪರಮಾತ್ಮನ ಅಂಶವೂ ಇದೆ, ಅನಾತ್ಮ ಪ್ರಕೃತಿಯ ಅಂಶವೂ ಇದೆ. ಕಬ್ಬಿನಿಂದ ರಸ ಹಾಗು ಸಿಪ್ಪೆಗಳನ್ನು ಬೇರ್ಪಡಿಸಿ ರಸವನ್ನಷ್ಟೇ ಹೀರುವದಿಲ್ಲವೇ? ಹಾಗೆ..ಜೀವ(ತ್ವಂ ಪದವಾಚ್ಯ)ನ ಅನಾತ್ಮ ಅಂಶವನ್ನು (ನೇತಿ ವಿಧಾನದಿಂದ) ಕಳಚಿ ಹಾಕಿದಾಗ ಚಿದಾತ್ಮ ಅಂಶವಷ್ಟೇ ಉಳಿಯುತ್ತದೆ. ಅದೇ ಪ್ರತ್ಯಗಾತ್ಮ ಚೇತನ. ತ್ವಂ ಪದಲಕ್ಷ್ಯ. ಅಲ್ಲಿರುವ ಸ್ಫುರಣ ಎಂಥದು?

"ಮನೋ ಬುದ್ಧ್ಯಹಂಕಾರ ಚಿತ್ತಾನಿ ನಾಹಂ
ನ ಚ ಶ್ರೋತ್ರ ಜಿಹ್ವೇ ನಚ ಘ್ರಾಣ ನೇತ್ರೇ ॥
ನ ಚ ವ್ಯೋಮ ಭೂಮಿರ್ನ ತೇಜೋನ ವಾಯು
ಶ್ಚಿದಾನಂದ ರೂಪಶ್ಶಿವೋಽಹಂ ಶಿವೋಽಹಮ್ ॥"

ನಾನು ಮನ ಬುದ್ಧಿ ಚಿತ್ತ ಅಹಂಕಾರಗಳಲ್ಲ: ಶ್ರೋತ್ರ ಜಿಹ್ವೆ ಘ್ರಾಣ ನೇತ್ರಗಳೂ ಅಲ್ಲ. ಆಕಾಶ ಭೂಮಿ ಅಗ್ನಿ ವಾಯುಗಳು ನಾನಲ್ಲ. ಇವನ್ನೆಲ್ಲ ಜ್ಞಾನಬೆಳಗಿನಿಂದ ಪ್ರಕಾಶಿಸುವ ಪರಮಶಾಂತ ಶಿವ ನಾನು! ಈ ಪಾವನ

ಸ್ಫುರಣವೇದ್ಯ ಪ್ರತ್ಯಗಾತ್ಮನಿಗೆ ಚಿಲ್ಲಿಂಗವೆಂದು ಪಾರಿಭಾಷಿಕ ನಾಮ. ಈ ಪ್ರತ್ಯಗಾತ್ಮ ಭಾವವನ್ನು ಪರಬ್ರಹ್ಮ (ತತ್‌ಪದ ಲಕ್ಷ್ಯ) ದಲ್ಲಿ ನಿವೇದಿಸುವದು ಜ್ಞಾನಯಜ್ಞ. ಹೀಗೆ ನಿವೇದಿಸಿದಾಗ ಜೀವಭಾವ ಲಯವಾಯ್ತು; ಪ್ರತ್ಯಗಾತ್ಮ ಸ್ಫುರಣೆ ಶಾಂತವಾಯ್ತು.

ಇದನ್ನೇ ಒಂದು ಉದಾಹರಣೆಯಿಂದ ಇನ್ನಷ್ಟು ಸ್ಪಷ್ಟ ಪಡಿಸಬಹುದು. ಘಟಜಲಾವಚ್ಛಿನ್ನ ಆಕಾಶ, ಘಟಾಕಾಶ, ಹಾಗು ಮಹಾಕಾಶ. ಇವುಗಳಲ್ಲಿ ಜಲಾಕಾಶ ಅಶುದ್ಧ. ಜಲ ಚೆಲ್ಲಿದಾಗ ತೋರುವ ಘಟಾಕಾಶ ಶುದ್ಧ. ಆದರೂ ಪರಿಚ್ಛಿನ್ನ. ಘಟದ ಆಕಾರ ತೊರೆದಾಗ ಘಟಾಕಾಶವು ಮಹಾಕಾಶದಲ್ಲಿ ಒಂದಾಗುತ್ತದೆ. ಅದರಂತೆ ಜೀವನು ಜಲಾಕಾಶ; ಪ್ರತ್ಯಗಾತ್ಮನು ಘಟಾಕಾಶ; ಪರಮಾತ್ಮನು ಮಹಾಕಾಶ. ಜೀವಭಾವ ತಂದ ಅಂತಃಕರಣವೆಂಬ ಜಲವನ್ನು ಚೆಲ್ಲಿದಾಗ ಅಂದರೆ ವೃತ್ತಿ ತರಂಗಗಳನ್ನು ನಿರೋಧಗೊಳಿಸಿದಾಗ ಅಲ್ಲಿ ಬರೀ ಚೈತನ್ಯ ಉಳಿಯುತ್ತದೆ. ಅದು ಪ್ರತ್ಯಗಾತ್ಮ. ವ್ಯಷ್ಟಿ ಮಿತಿಯನ್ನು ಮರೆತು ಬಿಟ್ಟರೆ ಉಳಿದುದೇನು ? ಪ್ರತ್ಯಗಾತ್ಮ ಕಲ್ಪನೆ ಕೂಡ ಅಡಗಿ ಕೇವಲ ಪರಮಾಕಾಶನಾದ ಬ್ರಹ್ಮನೊರ್ವನೇ ಉಳಿಯುತ್ತಾನೆ. ಅವನು ಅಪರಿಣಾಮಿ ! ನಿರ್ಗುಣ ನಿರ್ಭಾವಿ ! ಇಲ್ಲಿಗೆ ಬಂದು ತಲುಪುವದಕ್ಕೆ ಜ್ಞಾನಯಜ್ಞವೆಂದು ನಾಮ.

ಈ ಯಜ್ಞವು ಪರಮ ಪವಿತ್ರ. ಪ್ರಯತ್ನ ಸಾಧ್ಯವಾದ ಇದನ್ನು ಆಚರಿಸುವ ಮಹಾತ್ಮರು ಸಂಸಾರಾಮಯ ಮುಕ್ತರು; ಜಾತ್ಯಾದಿ ಭಾನ ಮೀರಿದ ಮಹಂತರು; ಶೋಕ ಮೋಹಾದಿ ಕಾಲುಷ್ಯ ನಿರ್ಮುಕ್ತರಾದ ಪಾವನಾತ್ಮರು. ವ್ಯಾವಹಾರಿಕ ಕಷ್ಟ ಕೋಟಲೆಗಳಿಂದ ಅವರು ಅಲಿಪ್ತರು. ವಿಶ್ವದ ಹಿರಿಯ ಸಂತರೆಲ್ಲ ಹೀಗೆಯೇ. ಅನೇಕ ಸಲ ಅವರನ್ನು ಸಮಾಜ ಜರೆದಿದೆ; ಹೀನಾಯಮಾನವಾಗಿ ಹಿಂಸಿಸಿದೆ. ಆದರೆ ಅದರಿಂದ ಸಂತರ ಶಾಂತಸ್ಥಿತಿ ಅಲುಗಲಿಲ್ಲ. ಉದಾ: ಹೆಂಡತಿಯು ಪ್ರಪಂಚದ ಅರಿವು ನಿಮಗಿಲ್ಲೆಂದು ಜರೆಯುವಾಗ ತುಕಾರಾಮ ಭಜನೆ ಮಾಡುತ್ತಿದ್ದ! ಶೂಲಕ್ಕೇರಿಸುವಾಗ ಕ್ರಿಸ್ತ ಪ್ರಾರ್ಥಿಸುತ್ತಿದ್ದ! ವಿಷವಿತ್ತಾಗ ಸುಕರಾತನು ಆತ್ಮಜ್ಞಾನ ಹೇಳುತ್ತಿದ್ದ!! ಅವರು ಶಾಂತಿಯಜ್ಞ ಕರ್ತರು!

ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ
ಶಬ್ದಾದೀನ್ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ॥೨೬॥

**ಭಾವ:-** ಕೆಲವರು ಶ್ರೋತ್ರಾದಿ ಇಂದ್ರಿಯಗಳನ್ನು ಸಂಯಮ ಎಂಬ ಅಗ್ನಿಗಳಲ್ಲಿ ಹೋಮ–ಹವನ ಮಾಡುತ್ತಾರೆ. (ಮತ್ತೆ) ಕೆಲವರು ಶಬ್ದಾದಿ ವಿಷಯಗಳನ್ನು ಇಂದ್ರಿಯಗಳೆಂಬ ಅಗ್ನಿಗಳಲ್ಲಿ ಹೋಮ ಮಾಡುತ್ತಾರೆ.

**ವಿವರಣೆ:-** ೩)ಸಂಯಮ ಯಜ್ಞ:- (ಇಂದ್ರಿಯಾನ್ ಸಂಯಮಾಗ್ನಿಷು ಜುಹ್ವತಿ)ಎಲ್ಲೆಡೆಗೆ ಹರಡಿರುವ ಶಬ್ದ ಸ್ಪರ್ಶಾದಿ ವಿಷಯಗಳನ್ನು ನಾಶ ಮಾಡು

ವದಸಾಧ್ಯ. ಕಣ್ಣುಬಿಟ್ಟು ನೋಡಿದಲ್ಲೆಲ್ಲ ಚಿತ್ರಪಟ, ನೃತ್ಯ, ವಿಲಾಸ, ಅಪಥ್ಯ ಭೋಜನ, ಮದ್ಯಪಾನಗಳ ಗೃಹಗಳು ಕಾಣ ಬರುತ್ತವೆ. ಮನಸ್ಸನ್ನು ಕೆರಳಿಸುವ ಶಬ್ದ ಹಾಗು ಹಾಡುಗಳು ನಮ್ಮ ಕಿವಿಗಳ ಮೇಲೆ ದಿನವಿಡೀ ಅಪ್ಪಳಿಸುತ್ತವೆ. ಇಂಥ ಪರಿಸರಿದಲ್ಲಿಯೂ ತಿಳುವಳಿಕೆಯುಳ್ಳ ಮನುಷ್ಯ ತನ್ನ ಇಂದ್ರಿಯಗಳನ್ನು ಆ ವಿಷಯಗಳತ್ತ ಹರಿಬಿಡದೆ ನಿರೋಧ ಮಾಡುವದಕ್ಕೆ ಸಂಯಮ ಯಜ್ಞ ವೆಂದು ನಾಮ. ಜೀವನದಲ್ಲಿ ಒಮ್ಮೆ ಕೂಡ ಇಂದ್ರಿಯ ಸಂಯಮದಲ್ಲಿ ಶೈಥಿಲ್ಯತೆ. ಯುಂಟಾಗಿರದಿದ್ದರೆ ಅದಕ್ಕೆ ನೈಷ್ಠಿಕ ಬ್ರಹ್ಮಚರ್ಯ ಎನ್ನುತ್ತಾರೆ.

೪) ಮಿತೋಪಭೋಗ ಯಜ್ಞ (ವಿಷಯಾನ್ ಇಂದ್ರಿಯಾಗ್ನಿಷು ಜುಹ್ವತಿ):- ವಿಷಯಗಳನ್ನು ಇಂದ್ರಿಯಗಳೆಂಬ ಅಗ್ನಿಯಲ್ಲಿ ಅರ್ಪಿಸುವದು ಅಂದರೆ, ವಿಷಯಗಳನ್ನು ಹಿತ ಮಿತವಾಗಿ ವಿಧಿಕ್ರಮವಾಗಿ ಧರ್ಮಸಮ್ಮತವಾಗಿ ಉಪಭೋಗಿಸುವದು ಮಿತೋಪಭೋಗಯಜ್ಞ. ಇದನ್ನು ಆಚರಿಸುವವರು ಸುಶೀಲ ಗೃಹಸ್ಥರು. ಇವರು ನುತ ಬ್ರಹ್ಮಚಾರಿಗಳು. ಇವರದು ಅಸಿಧಾರಾ ವ್ರತವಿದ್ದಂತೆ.

ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನ ದೀಪಿತೇ ॥೨೭॥

**ಅರ್ಥ:**— ಅಪರೇ= ಕೆಲವರು, ಸರ್ವಾಣೀಂದ್ರಿಯ ಕರ್ಮಾಣಿ =ಸರ್ವ ಇಂದ್ರಿಯ ಕರ್ಮಗಳನ್ನು ಚ= ಮತ್ತು ಪ್ರಾಣ ಕರ್ಮಾಣಿ= ಪ್ರಾಣ ಕರ್ಮಗಳನ್ನು ಜ್ಞಾನದೀಪಿತೇ = (ಸತ್ವತಮ ಮನದಲ್ಲಿ ಮೂಡಿದ) ಆತ್ಮಜ್ಞಾನದಿಂದ ಉದ್ದೀಪ್ತವಾದ, ಆತ್ಮ ಸಂಯಮ ಯೋಗಾಗ್ನೌ =ಆತ್ಮಸಂಯಮವೆಂಬ ಯೋಗಾಗ್ನಿಯಲ್ಲಿ ಜುಹ್ವತಿ= ಹೋಮ ಮಾಡುತ್ತಾನೆ.

**ವಿವರಣೆ:-** ೫) ಧ್ಯಾನಯಜ್ಞ:— ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞಾ ಬ್ರಹ್ಮರಂಧ್ರ ಶಿಖಾ ಹಾಗು ಪಶ್ಚಿಮಶಿಖಾ, ಇವು ನಮ್ಮ ದೇಹಸ್ಥ ನವ ಚಕ್ರಗಳು; ಚೇತನಾಭಿವ್ಯಕ್ತಿಗೆ ಅನುಕೂಲವಾದ ಸುಕ್ಷೇತ್ರ ಗಳು. ಈ ಸ್ಥಾನಗಳಲ್ಲಿ ಮನಸ್ಸನ್ನು ಸ್ಥಾಪಿಸುವದು ಧಾರಣ. ಧ್ಯೇಯ ಮೂರ್ತಿ ಯಲ್ಲಿ ಮನಸ್ಸನ್ನು ಧಾರಾಕಾರವಾಗಿ ನೆಲೆಗೊಳಿಸುವದು ಧ್ಯಾನ. ಮನಸ್ಸು ಧ್ಯೇಯದೊಂದಿಗೆ ಒಂದಾಗಿ ನಿಂತರೆ ಸಮಾಧಿ! ಹೀಗೆ ಧ್ಯೇಯದಲ್ಲಿ ಮನಸ್ಸನ್ನು ಸ್ಥಿರಗೊಳಿಸುವದಕ್ಕೆ "ಧ್ಯಾನಯಜ್ಞ" ಎನ್ನುತ್ತಾರೆ.

ಧ್ಯಾನ ಯಜ್ಞದಲ್ಲಿ ಅ) ಜ್ಞಾನದೀಪಿತ ಆತ್ಮ ಸಂಯಮಯೋಗವು ಅಗ್ನಿ. ಬ) ಇಂದ್ರಿಯ ಹಾಗು ಪ್ರಾಣ ಕರ್ಮಗಳು ಹವಿಸ್ಸು ಕ) ಆತ್ಮಸಾಕ್ಷಾತ್ಕಾರವು ಫಲ.

ಅ)ಅಗ್ನಿ:-"ಆತ್ಮನಿ ಸಂಯಮಃ ಧ್ಯಾನಂ ಏಕಾಗ್ರ್ಯಂ. ಸ ಏವ ಯೋಗಃ. ಸ ಏವ ಅಗ್ನಿಃ." ಆತ್ಮನು ದೇಹಾಂತರ್ಗತ ಜ್ಞಾನಾನಂದ ರವಿ. ಇಂದ್ರಿಯ ಮನ

ಬುದ್ಧಿ ಪ್ರಕಾಶಕ ಜ್ಯೋತಿ. ಮೋಹ ವಿಕಲ್ಪ ಪ್ರಮಾದಿಗಳ ಸೋಂಕಿಲ್ಲದ ಬೆಳಗು. ಆ ಬೆಳಗೇ ಮೂರ್ತಗೊಂಡರೆ ಅದು "ಧ್ಯೇಯ". ಆ ಧ್ಯೇಯದಲ್ಲಿ ಮನಸ್ಸನ್ನು ಏಕಾಗ್ರಗೊಳಿಸುವದು ಆತ್ಮಸಂಯಮ! ಏಕಾಗ್ರತಾ ಧ್ಯಾನವೃತ್ತಿಯು ಧ್ಯೇಯ ನಿಷ್ಠವಾದರೆ ಅದು ಆತ್ಮಸಂಯಮ ಯೋಗ! ಅದೇ ದಿವ್ಯಾಗ್ನಿ. ಧ್ಯೇಯ ವಸ್ತು ವಿನ ಸ್ವರೂಪಜ್ಞಾನದಿಂದ ಈ ಅಗ್ನಿಯು ಪ್ರಜ್ವಲಿಸುತ್ತದೆ.

(ಬ) ಹವಿಸ್ಸು ( ಸರ್ವಾಣಿ ಇಂದ್ರಿಯ ಕರ್ಮಾಣಿ ಪ್ರಾಣಕರ್ಮಾಣಿ ಚ):– ಶ್ರೋತ್ರ ತ್ವಕ್ ನೇತ್ರ ರಸನ ಘ್ರಾಣಗಳು ಜ್ಞಾನೇಂದ್ರಿಯಗಳು. ಶ್ರವಣ, ಸ್ಪರ್ಶನ, ದರ್ಶನ, ರಸಗ್ರಹಣ, ಗಂಧಗ್ರಹಣಗಳು ಕ್ರಮವಾಗಿ ಆ ಇಂದ್ರಿಯ–ಕಾರ್ಯಗಳು. ವಾಕ್ ಪಾಣಿ ಪಾದ ಪಾಯು ಉಪಸ್ಥಗಳು ಕರ್ಮೇಂದ್ರಿಯಗಳು. ವಚನ,ಗ್ರಹಣ, ಚಲನ, ವಿಸರ್ಜನಗಳು ಆ ಕರ್ಮೇಂದ್ರಿಯ ಕಾರ್ಯಗಳು. ಪ್ರಾಣ ಅಪಾನ ಉದಾನ ವ್ಯಾನ ಸಮಾನಗಳು ಪ್ರಾಣಗಳು. ಬಹಿರ್ಗಮನ, ಅಧೋಗ ಮನ, ಊರ್ಧ್ವನಯನ, ಆಕುಂಚನ-ಪ್ರಸರಣ, ಅನ್ನಪಾನಾದಿ ವಿತರಣಗಳು ಆ ಪ್ರಾಣಾದಿಗಳ ಕಾರ್ಯಗಳು. ಈ ಎಲ್ಲವನ್ನು ಆತ್ಮ ಸಂಯಮ ಯೋಗಾಗ್ನಿ ಯಲ್ಲಿ ಹೋಮ ಮಾಡುವದು ಧ್ಯಾನಯಜ್ಞ.

(ಕ) ಫಲ:- ಧ್ಯಾನಯಜ್ಞದ ಫಲ ಆತ್ಮಲಾಭ. " ಆತ್ಮಲಾಭಾತ್ ಪರಂ ನ ವಿದ್ಯತೇ " ಆತ್ಮ ಲಾಭಕ್ಕಿಂತ ಹೆಚ್ಚಿನ ಲಾಭ ವಿಶ್ವದಲ್ಲಿ ಮತ್ತೊಂದಿಲ್ಲ. ಏಕೆಂದರೆ, ಬಾಹ್ಯ ಸಂಪದ, ಭೌತ ವಿದ್ಯೆಗಳನ್ನು ಅದೆಷ್ಟು ಗಳಿಸಿದರೂ ತೃಪ್ತಿ ದೊರೆಯದು. ನಮಗಿಂತ ಸಿರಿವಂತ ಬುದ್ಧಿವಂತರ ಕಂಡರೆ ಹೊಟ್ಟೆ ಉರಿಯು ತ್ತದೆ. ಸಂಪತ್ತು ಬೆಳೆದಂತೆ ಮದ ಹಾಗು ವಿದ್ಯೆ ಬೆಳೆದಂತೆ ಅಹಂಕಾರ ವೃದ್ಧಿಗೊ ಳ್ಳುತ್ತವೆ. ಆತ್ಮ ಲಾಭ ಹಾಗಲ್ಲ. ಅದು ದೊರೆತಹಾಗೆ ವೈರ ಅಸೂಯೆ ಚಿಂತೆಗಳು ಅಳಿದು ಶಾಂತಿ ಪ್ರೇಮಗಳು ಸೂರ್ಮಡಿಸುತ್ತವೆ: ಮನಸ್ಸು ಸ್ಥಿರವಾಗುತ್ತದೆ. ವಿಶ್ವವೆಲ್ಲ ದೇವನ ಸಾಕಾರ ರೂಪೆಂದು ನೋಡುವ ದೃಷ್ಟಿ ಸಮನಿಸುತ್ತದೆ. ಅಷ್ಟೇ ಅಲ್ಲ, ಆತ್ಮನನ್ನರಿತಾಗ ಸರ್ವವನ್ನರಿತ ನೆಮ್ಮದಿ ಅಂಗವಿಸುತ್ತದೆ. ಅಲ್ಲಮ ಪ್ರಭುಗಳು ಹೇಳುತ್ತಾರೆ :

> " ಲಿಂಗವನರಿಯದೆ ಏನನರಿದಡೆಯೂ ಫಲವಿಲ್ಲ. ಲಿಂಗವನರಿದ ಬಳಿಕ ಮತ್ತೇನನರಿದ ಡೆಯೂ ಫಲವಿಲ್ಲ. ಸರ್ವ ಕಾರಣ ಲಿಂಗವೆಂಬುದಾಗಿ ಲಿಂಗವನೆ ಅರಿದೆ, ಅರಿದರಿದು ಲಿಂಗಸಂಗವನೆ ಮಾಡುವೆ. ಸಂಗ ಸುಖದೋಳೋಲಾಡುವೆ. ಗೋಪೇಶ್ವರಾ "

ತಮ್ಮದೆನ್ನುವ ಏನೆಲ್ಲವನು ದಿವ್ಯ ಆತ್ಮಾಗ್ನಿಯಲ್ಲಿ ಹವನ ಮಾಡಿ ವಿಮು ಕ್ತರಾದ ಧ್ಯಾನಯೋಗಿಗಳು ಮಹಾತ್ಮರು. ಹಿಮಾಲಯ ಪರ್ವತದ ಮಧ್ಯ ಕಂಗೊಳಿಸುವ ಮಾನಸ ಸರೋವರದಲ್ಲಿ ವಾಸಿಸುವ ರಾಜಹಂಸ ಪಕ್ಷಿಯು ಅಲ್ಲಿಯ ಸ್ವಚ್ಛ ಶೀತಲ ಜಲ, ನೀರವ ಪರಿಸರ, ಪರಿಮಲಭರಿತ ಮಂದ ಮಾರುತ

ಗಳನ್ನು ತೊರೆದು ಕಾಗೆಯು ಬೇವಿನ ಮರಕ್ಕೊಂದೂ ಬರದು. ಕಾಗೆಯು ಹೇಯ ಭೋಗವನು ಆಶಿಸದು. ಅದೇ ರೀತಿ, ಉತ್ತುಂಗ ಸ್ಥರದಲ್ಲಿರುವ ಪರಿಶುದ್ಧ ಮನಸ್ಸರೋವರದಲ್ಲಿ ಆತ್ಮಾನಂದ ಪವನವನು ಸೇವಿಸುತ್ತ ಧ್ಯಾನಯಜ್ಞನಿರತ ಮಹಾತ್ಮರು ಆತ್ಮಾರಾಮರಾಗಿ ವಿಹರಿಸುತ್ತಾರೆ; ಕಾಗೆಯಂತಿರುವ ಲೌಕಿಕರ ಭೋಗ ವೈಭವಗಳನ್ನು ಅವರು ಕನಸು ಮನಸ್ಸಿನಲ್ಲೂ ಆಶಿಸರು.

ದ್ರವ್ಯಯಜ್ಞಾಸ್ತಪೋ ಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯ ಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥೨೮॥

**ಅರ್ಥ:**– ಅಪರೇ=ಕೆಲವರು ದ್ರವ್ಯ ಯಜ್ಞಾಃ=ದ್ರವ್ಯ ಯಜ್ಞ ಮಾಡುವವರು. ತಪೋಯಜ್ಞಾಃ=ತಪೋಯಜ್ಞ ಮಾಡುವವರು. ಯೋಗಯಜ್ಞಾಃ =ಯೋಗಯಜ್ಞ ಮಾಡುವವರು. ಸ್ವಾಧ್ಯಾಯಯಜ್ಞಾಃ =ಸ್ವಾಧ್ಯಾಯ ಯಜ್ಞ ಮಾಡುವವರು. ಚ= ಮತ್ತು ಜ್ಞಾನ ಯಜ್ಞಾಃ= ಜ್ಞಾನ ಯಜ್ಞ ಮಾಡುವವರು, (ಏತೇ= ಇವರೆಲ್ಲ) ಸಂಶಿತವ್ರತಾಃ ಯತಯಃ = ದೃಢವತರಾದ ಯತಿಗಳು.

**ವಿವರಣೆ:**– (೬) ದ್ರವ್ಯಯಜ್ಞ:– ಧನ ಧಾನ್ಯ ಜಲ ವಸನ ಮುಂತಾದವು ದ್ರವ್ಯ. ಅವುಗಳನ್ನು ಸದ್ವಿಧಾನದಿಂದ ಸಂಪಾದಿಸಿ ಸತ್ಪಾತ್ರದಲ್ಲಿ ಅರ್ಪಿಸುವದು ದ್ರವ್ಯಯಜ್ಞ. ಯಾವುದು ಸತ್ಪಾತ್ರ ? ಯಾವುದು ಅಪಾತ್ರ ? ಈ ಬಗ್ಗೆ ಸ್ಪಷ್ಟ ಕಲ್ಪನೆ ಇರಬೇಕು. ವಿಷಯ ಪ್ರಚೋದಕ ಮೋಹ ವಿವರ್ಧಕ ವ್ಯಕ್ತಿ ವಿಘಾತಕ ಕಾರ್ಯಗಳು ಸತ್ಪಾತ್ರಗಳಲ್ಲ. ಅವುಗಳಿಗಾಗಿ ಲಕ್ಷಾಂತರ ಹಣವನ್ನು ವ್ಯಯಗೊಳಿಸುವದು ದಾನವಲ್ಲ, ವ್ಯರ್ಥಖರ್ಚು. ದೀನ, ದಲಿತ, ರೋಗಿ, ಬಡವ, ವಿದ್ಯಾರ್ಥಿ, ಧರ್ಮದರ್ಶಿ, ಗುರು ಮುಂತಾದವರು ಸತ್ಪಾತ್ರರು. ಅವರಿಗೆ ಅರ್ಪಿಸಿದ ದಾನವು ಸಂಪತ್ತಿನ ಸದ್ವ್ಯಯ. ಬಡವರಿಗಾಗಿ ಉದ್ಯೋಗ ಕಲ್ಪಿಸುವದು, ಶಾಲೆ ಕಾಲೇಜ ಕಟ್ಟುವದು, ಜ್ಞಾನಮಂದಿರ ನಿರ್ಮಿಸುವದು ಕೆರೆ ಬಾವಿ ಸರೋವರಗಳ ರಚಿಸುವದು ಸದ್ವ್ಯಯದ ಕೆಲ ರೀತಿಗಳಾಗಿವೆ.

(೭) ತಪೋಯಜ್ಞ:– ದೇಹ ಇಂದ್ರಿಯಗಳ ಕ್ಲೇಶಗಳನ್ನು ಸಹನವೆಂಬ ಅಗ್ನಿಯಲ್ಲಿ ಹವನ ಮಾಡುವದು ತಪೋಯಜ್ಞ. ಜೈನ ಮುನಿಗಳು ಕಠೋರ ತಪಸ್ಸಿಗೆ ಹೆಸರಾಗಿದ್ದಾರೆ. ತಪ್ತಶಿಲಾರೋಹಣ, ಕೇಶಲುಂಚನ. ಉಪೋಷಣ, ನಿರ್ಜಲಾಹಾರ, ನಿರಾಹಾರ, ಜಲ ಸೇವನ, ಕೃಛ್ರ ಚಾಂದ್ರಾಯಣ ಮುಂತಾದ ಘೋರ ತಪಗಳಿಂದ ದೇಹೇಂದ್ರಿಯಗಳನ್ನು ಮರ್ದಿಸುತ್ತಾರೆ. ಕಡೆಯಲ್ಲಿ ಅನಶನ ವ್ರತದಿಂದ ನಗುನಗುತ್ತ ದೇಹ ತೊರೆಯುತ್ತಾರೆ. " ಮರಣಂ ಅವಭೃತ ಸ್ನಾನಮ್ " ಅವರಿಗೆ ಮರಣವೆಂದರೆ ಅಭ್ಯಂಗ ಸ್ನಾನ.

ತಪೋಯಜ್ಞದಿಂದ ಅಮೃತತತ್ವ ಪಡೆದ ಅನೇಕ ಮಹಾಪುರುಷರು ನಾಡಿನಲ್ಲಿ ಬಾಳಿ ಹೋಗಿದ್ದಾರೆ. ಉದಾ: ಅನೇಕ ವರುಷಗಳವರೆಗೆ ನರ್ಮದಾ ನದಿಯಲ್ಲಿ ನಿಂತು ತಪ ಮಾಡಿದ ಸ್ವಾಮಿ ರಾಮದಾಸರು, ಹದಿನೆಂಟು ವರುಷಗಳ

ವರೆಗೆ ಬಹು ಎತ್ತರದ ಗುಡ್ಡದ ಮೇಲೆ ಅಚಲ ಮನಸ್ಸಿನಿಂದ ಅನುಷ್ಠಾನಗೈದ ಶ್ರೀ ಶಿವಾನಂದ ಸ್ವಾಮಿಗಳು (ಗದಗ), ಬಾಹ್ಯ ಪರಿವೆ ಹರಿದು ದೇವ ಧ್ಯಾನ ಗೈದ ಶ್ರೀ ಸಿದ್ಧಾರೂಢ ಮಹಾಸ್ವಾಮಿಗಳು (ಹುಬ್ಬಳ್ಳಿ), ಅಪ್ರತಿಮ ವಿರಾಗ ವನ್ನು ಮೈಗೂಡಿಸಿಕೊಂಡು ಜೀವನಾದ್ಯಂತ ಶಿವಯೋಗ ಸಾಧಿಸಿದ ಶ್ರೀ ಮುರುಘೇಂದ್ರ ಸ್ವಾಮಿಗಳು (ಅಥಣಿ), ಜಗದ ಜಂಜಡ ಮರೆದು ಲಿಂಗಾ ನುಸಂಧಾನ ಮಾಡಿದ ಶ್ರೀ ಬಾಲ ಲೀಲಾ ಮಹಾಂತ ಶಿವಯೋಗಿಗಳು (ಮುಳಗುಂದ), ಹುತ್ತೇರುವಷ್ಟು ಗಾಢ ಚಿಂತನದಲ್ಲಿ ಮುಳುಗಿ ಹೋಗಿದ್ದ ಶ್ರೀ ಯೆಡೆಯೂರ ಸಿದ್ಧಲಿಂಗ ಯತಿಗಳು. ಇವರೆಲ್ಲರ ತಪ ನೆನೆದಾಗ ಎಂಥವರ ಮೈಯೂ ಕಂಪಿಸೀತು !

ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಅಪರಿಗ್ರಹಗಳಂಥ ಅಮೌಲ್ಯ ಗುಣ ಸಂಪದವನ್ನು ಭದ್ರವಾಗಿಕಾಪಾಡಿ ಕೊಂಡಿರುವದೂ ತಪೋಯಜ್ಞ. ಹರಿಶ್ಚಂದ್ರನು ಸತ್ಯತಪಸ್ವಿ ! ಸತ್ಯಪಾಲನೆಗಾಗಿ ರಾಜ್ಯ ತೊರೆದ, ಹೊಲೆಯರ ಆಳಾದ. ಹೆಂಡತಿ ಯನ್ನು ಮಾರಿಕೊಂಡ. ಅವನು ಪಟ್ಟ ಪಾಡು ಅವರ್ಣನೀಯ. ಅವನ ತಪೋ ಜ್ವಾಲೆ ಸ್ವರ್ಗದವರೆಗೂ ಚಾಚಿತ್ತು. ದೇವ ದೇವತೆಗಳಿಂದ, ಋಷಿ, ಮುನಿಗಳಿಂದ ಅವನ ತಪಸ್ಸು ಪ್ರಶಂಸಿಸಲ್ಪಟ್ಟಿತು.

(೮) ಯೋಗಯಜ್ಞ:- ಮನಸ್ಸನ್ನು ದೇವಚಿಂತನಾರೂಪ ಅಗ್ನಿಯಲ್ಲಿ ಅರ್ಪಿಸುವದು, ಅಥವಾ ಸರ್ವ ಚಿತ್ತವೃತ್ತಿಗಳನ್ನು ನಿರೋಧಿಸಿ ಆತ್ಮಾಗ್ನಿಯಲ್ಲಿ ಚಿತ್ತನ್ನು ಸ್ಥಿರಗೊಳಿಸುವದು ಯೋಗಯಜ್ಞ.

ಚಿತ್ತವೃತ್ತಿಗಳು ದ್ವಿವಿಧ: ಕ್ಲಿಷ್ಟ, ಅಕ್ಲಿಷ್ಟ. ಬಂಧನಕ್ಕೆ ಕಾರಣ ಕ್ಲಿಷ್ಟ. ಮುಕ್ತಿಗೆ ಕಾರಣ ಅಕ್ಲಿಷ್ಟ. ಒಂದು ಬಾಧಕ, ಒಂದು ಸಾಧಕ. ಕ್ಲಿಷ್ಟವೃತ್ತಿಯಲ್ಲಿ ರಜ ತಮಗಳ ಆಳಿಕೆ. ಅಕ್ಲಿಷ್ಟವೃತ್ತಿಯಲ್ಲಿ ಸತ್ವದ ಆಡಳಿತ. ಜೀವನನ್ನು ಸಂಸಾ ರದಲ್ಲಿ ನೂಕುವ ಪ್ರಮಾಣ, ವಿಪರ್ಯಯ,ವಿಕಲ್ಪ, ನಿದ್ರಾ ಹಾಗು ಸ್ಮೃತಿವೃತ್ತಿ ಗಳು ಕ್ಲಿಷ್ಟ. ಆತ್ಮನತ್ತ ಕರೆದೊಯ್ಯುವ ಆ ಪ್ರಮಾಣಾದಿವೃತ್ತಿಗಳು ಅಕ್ಲಿಷ್ಟ. ಕ್ಲಿಷ್ಟವೃತ್ತಿಗಳಲ್ಲಿ ಮೂರು ವರ್ಗ: (ಅ) ಕ್ಷಿಪ್ತ (ಆ) ಮೂಢ (ಇ) ವಿಕ್ಷಿಪ್ತ. ಅಕ್ಲಿಷ್ಟವೃತ್ತಿಗಳಲ್ಲಿ ಎರಡು ವರ್ಗ: (ಈ) ಏಕಾಗ್ರ (ಉ) ನಿರುದ್ಧ. ಅವುಗಳ ಸಂಕ್ಷಿಪ್ತ ವಿವರ:

(ಅ) ಕ್ಷಿಪ್ತವೃತ್ತಿ:–ಸಂಸಾರದಲ್ಲಿ ಮಗ್ನವಾಗಿರುವ ಸ್ವಭಾವ. ರಾಡಿಯಲ್ಲಿ ಕಲ್ಲು ಸಿಕ್ಕಂತೆ, ಕ್ಷಿಪ್ತನ ಮನಸ್ಸು ವಿಷಯ ಪಂಕದಲ್ಲಿ ನಿಹಿತವಾಗಿದೆ. ಈ ವೃತ್ತಿ ಯುವನಿಗೆ ಶಾಸ್ತ್ರ ವಚನಗಳು, ದೇವ ನೆನಹು ಹಾಗು ಗುರುದರ್ಶನಗಳು ಅಪಥ್ಯ!

(ಆ) ಮೂಢವೃತ್ತಿ:– ತಮೋವೃತ್ತಿ. ಈ ವೃತ್ತಿಯುವನು ಆಲಸ್ಯ ಪ್ರಮಾದ ನಿದ್ರೆಗಳಿಂದ ಗ್ರಸ್ತನಾಗಿದ್ದಾನೆ. ಇವನ ಮತಿ ಕಲ್ಲಿನಂತೆ ಜಡ. ದೇವ

ಧರ್ಮ, ಆತ್ಮಧರ್ಮ ಯಾವುದೂ ಅರ್ಥವಾಗದು ಇವನಿಗೆ.

(ಇ) ವಿಕ್ಷಿಪ್ತವೃತ್ತಿ:– ಇದು ರಜಪ್ರಧಾನವೃತ್ತಿ; ಸ್ವಲ್ಪ ಸತ್ವವೂ ಇದ ರಲ್ಲಿದೆ. ಈ ವೃತ್ತಿಯ ಮನುಷ್ಯ ಗುರುದರ್ಶನ ಶಾಸ್ತ್ರಶ್ರವಣಗಳಿಂದ ಒಂದು ಕ್ಷಣ ಆನಂದ ಪಡುತ್ತಾನೆ; ಮತ್ತೊಂದು ಕ್ಷಣ ಮಡದಿ ಮಕ್ಕಳ ಮಧ್ಯೆ ಮೈಮರ ಯುತ್ತಾನೆ. ಈತನ ಮನಸ್ಸೊಂದು ಜೋಕಾಲಿ; ಒಮ್ಮೆ ದೇವನತ್ತ ತೂಗಿ ಬಂದರೆ ಮತ್ತೊಮ್ಮೆ ಮಡದಿ ಮನೆಗಳತ್ತ ಧಾವಿಸುವದು.

(ಈ) ಏಕಾಗ್ರವೃತ್ತಿ:– ಮನವು ವಿಷಯಗಳಿಂದ ಪರಾವೃತ್ತಗೊಂಡು ಆತ್ಮನತ್ತ ಹರಿದರೆ ಅದು ಏಕಾಗ್ರವೃತ್ತಿ. ಈ ವೃತ್ತಿಯ ಮನುಷ್ಯ ಸಾಧಕ. ಅವನಲ್ಲಿ ಭೋಗವಿರಾಗ, ಆತ್ಮಾನುರಾಗ ನೆಲೆಸಿದೆ. ಅವನಲ್ಲಿ ದೇವನನ್ನು ಕಾಣುವ ಅತುಲ ತವಕಿದೆ.

(ಉ) ನಿರುದ್ಧವೃತ್ತಿ:– ಆತ್ಮನತ್ತ ಪ್ರವಹಿಸುವ ಮನಸ್ಸು ಆತ್ಮನಲ್ಲಿ ಸ್ಥಿರಗೊಂಡರೆ ಅದು ನಿರುದ್ಧವೃತ್ತಿ. ಏಕಾಗ್ರದಲ್ಲಿ ಧ್ಯಾತೃ ಧ್ಯಾನ ಧ್ಯೇಯಗಳ ಭಾನವಿದೆ; ನಿರುದ್ಧದಲ್ಲಿ ಈ ತ್ರಿಪುಟಿ ಭಾನ ಮರೆಯಾಗಿದೆ. ಈ ವೃತ್ತಿಯ ಮನುಷ್ಯ ಸಿದ್ಧ. ಅವನಲ್ಲಿ ಪರಪ್ರಜ್ಞೆ ಅಡಗಿದೆ; ಬರಿ ಸ್ವ-ಪ್ರಜ್ಞೆ ಉಳಿದು ಕೊಂಡಿದೆ. ಇದೂ ಅಡಗಿದರೆ ಅದೇ ಪರಿಪೂರ್ಣ ಯೋಗ ! ಸರ್ವಚಿತ್ತವೃತ್ತಿಗಳ ಲಯ !! " ತದಾ ದ್ರಷ್ಟುಃ ಸ್ವರೂಪೇ ಅವಸ್ಥಾನಂ " ಆಗ ದ್ರಷ್ಟೃವು ತನ್ನ ಸ್ವರೂಪದಲ್ಲಿ ಅವಸ್ಥಾನಗೊಳ್ಳುತ್ತಾನೆ. ಇದು ಯೋಗ ಯಜ್ಞ.

(೯) ಸ್ವಾಧ್ಯಾಯ ಯಜ್ಞ:- ಆತ್ಮ ಸಾಕ್ಷಾತ್ಕಾರಕ್ಕಾಗಿ ಮಾಡುವ ಅಭ್ಯಾಸವು ಸ್ವಾಧ್ಯಾಯ. ಇದರಲ್ಲಿ ಮೂರು ಬಗೆ: (ಕ) ವೇದ ಸ್ವಾ. (ಖ) ಮಂತ್ರ ಸ್ವಾ. (ಗ) ನಾದ ಸ್ವಾ.

(ಕ) ವೇದಸ್ವಾಧ್ಯಾಯ:– ವೇದೋಪನಿಷತ್ತುಗಳು ಆತ್ಮವಿದ್ಯಾ ಭಾಂಡಾರಗಳು ! ಋಷಿ ಮುನಿಗಳ ಅನುಭಾವ ಸಾಗರಗಳು !! ಅವುಗಳನ್ನು ವಿಧಿವತ್ತಾಗಿ ಪಠಿಸುವದು, ಅಭ್ಯಸಿಸುವದು ವೇದಸ್ವಾಧ್ಯಾಯ.

(ಖ) ಮಂತ್ರಸ್ವಾಧ್ಯಾಯ:– ಪರಮಾತ್ಮನಿಗೆ ಸಂಬಂಧಿಸಿದ ವಿಶಿಷ್ಟ ಪದ ಸಮುದಾಯವು ಮಂತ್ರ. ಉದಾ: " ಓಂ ಭೂರ್ಭುವಃಸ್ವರೋಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧೀಯೋ ಯೋ ನಃ ಪ್ರಚೋದಯಾತ್ " ಇದು ಗಾಯತ್ರಿ ಮಂತ್ರ. " ಓಂ ಭೂಃ ಓಂ ಭುವಃ ಓಂ ಸ್ವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧೀಯೋ ಯೋ ನಃ ಪ್ರಚೋದಯಾತ್ " ಇದು ಸಪ್ತವ್ಯಾಹೃತಿ ಮಂತ್ರ. " ಓಂ " ಇದು ಪ್ರಣವ ಮಂತ್ರ. " ಸೋಽಹಂ " ಇದು ಅಜಪ ಮಂತ್ರ. " ಓಂ ನಮಃ ಶಿವಾಯ " ಇದು ಶಿವ ಷಡಕ್ಷರ ಮಂತ್ರ. ಮಂತ್ರಗಳು

ಅಸಂಖ್ಯವಾದರೂ ಅವುಗಳಲ್ಲಿ ಹತ್ತೆಂಟೇ ಪ್ರಧಾನ ಮಂತ್ರಗಳು. ಅವುಗಳನ್ನು ಗುರುಮುಖದಿಂದ ಪಡೆದು, ನ್ಯಾಸಾದಿ ಕ್ರಮಾನುಸಾರ ನಿಯತವಾಗಿ ಪಠಿಸು ವದು ಮಂತ್ರಸ್ವಾಧ್ಯಾಯ.

(ಗ) ನಾದ ಸ್ವಾಧ್ಯಾಯ:- ನಾದಗಳಲ್ಲಿ ಎರಡು ಪ್ರಕಾರ: ಹತನಾದ, ಅನಾಹತನಾದ. ವಾದ್ಯ ಮುಂತಾದ ವಿವಿಧ ಉಪಾಧಿಗಳಿಂದ ಉಂಟಾದುದು ಹತನಾದ. ಉಪಾಧಿಗಳಿಲ್ಲದೆ ಅಂತರಂಗದಲ್ಲಿ ಅವ್ಯಾಹತವಾಗಿ ಕೇಳಿಬರುವ ನಾದವು ಅನಾಹತ. ಷಣ್ಮುಖಿ ಮುದ್ರೆ ಮುಂತಾದ ಯೋಗಮುದ್ರಾಭ್ಯಾಸ ಮಾಡಿದಾಗ ಅಂತರಾಳದ ಯಾವುದೋ ಕೇಂದ್ರದಿಂದ ವಿವಿಧ ನಾದಗಳು ತರಂಗ ತರಂಗವಾಗಿ ಕೇಳಿಬರುತ್ತವೆ. ಶರದಿ ನಿರ್ಜರ ಭೇರಿ ಮೇಘನಾದ ಮುರಜ ಕಹಳೆ ಶಂಖ ಘಂಟಾ ವಾಸ ವೀಣೆ ಕಿಂಕಿಣಿ ಭ್ರಮರ– ಇಂಥ ಅನೇಕ ಧ್ವನಿಗಳನ್ನು ಆಲಿ ಸುವದು ನಾದ ಸ್ವಾಧ್ಯಾಯವಾಗಿದೆ.

(೧೦) ಜ್ಞಾನಯಜ್ಞ:- ಪರಮಾತ್ಮನು ನಿರ್ಗುಣ ನಿರಂಜನ ನಿಷ್ಕಲ. ಅವನು ಪ್ರತ್ಯಕ್ಷಾದಿ ಪ್ರಮಾಣಾತೀತ. ಸತ್ತು ಚಿತ್ತು ಆನಂದ. ಅವನನ್ನು ತನ್ನ ಸ್ವರೂಪವೆಂದೇ ಅರಿತು ಅವನಲ್ಲಿ ಸಾಮರಸ್ಯ ತಳೆಯುವದಕ್ಕೆ ಜ್ಞಾನಯಜ್ಞ ಎನ್ನುತ್ತಾರೆ. ಇದರ ವಿವರಣ ಹೀಗಿದೆ:

ತತ್ವಮಸಿ, ಅಹಂ ಬ್ರಹ್ಮಾಸ್ಮಿ, ಅಯಮಾತ್ಮಾ ಬ್ರಹ್ಮ, ಪ್ರಜ್ಞಾನಮಾ ನಂದಂ ಬ್ರಹ್ಮ-ಇವು ನಾಲ್ಕು ವೇದಗಳಲ್ಲಿಯ ನಾಲ್ಕು ಮಹಾ ವಾಕ್ಯಗಳು. ಈ ವಾಕ್ಯಗತ ಪದಗಳನ್ನು ಮೂರು ವರ್ಗದಲ್ಲಿ ವಿಭಜಿಸಲಾಗುತ್ತದೆ. ತ್ವಂ, ಅಹಂ, ಅಯಮಾತ್ಮಾ ಹಾಗು ಪ್ರಜ್ಞಾನ ಈ ನಾಲ್ಕು ಪದಗಳು ಒಂದನೆಯ ಗುಂಪಿಗೆ ಸೇರಿವೆ. ತತ್ ಹಾಗು ಬ್ರಹ್ಮ ಎರಡನೆಯ ಗುಂಪಿಗೆ ಸೇರಿವೆ. ಅಸಿ, ಅಸ್ಮಿಗಳು ಮೂರನೆಯ ಗುಂಪಿಗೆ ಸೇರಿವೆ. ಆಯಾ ವಿಭಾಗದ ಪದಗಳ ಅರ್ಥ ಒಂದೇ. ಪ್ರತಿವರ್ಗದ ಪದಕ್ಕೆ ಎರಡು ಅರ್ಥಗಳು: ಶಕ್ತಿವೃತ್ತಿಯಿಂದ ಶಕ್ಯಾರ್ಥ ಅಥವಾ ವಾಚ್ಯಾರ್ಥ. ಲಕ್ಷಣಾವೃತ್ತಿಯಿಂದ ಲಕ್ಷ್ಯಾರ್ಥ. ತೋರಿಕೆಯ ಅರ್ಥ ವಾಚ್ಯಾರ್ಥ. ಅಂತರ್ಗತ ಅರ್ಥ ಲಕ್ಷ್ಯಾರ್ಥ.

ಅವಿದ್ಯಾ ಉಪಾಧಿಗತ ದೇಹಾದ್ಯಾತ್ಮಭಾವಿ ಜೀವ ಪುರುಷನು ಮೊದಲ ಗುಂಪಿನ ಪದಗಳಿಗೆ ವಾಚ್ಯಾರ್ಥ. ಶಕ್ತಿ ಉಪಾಧಿ ವಿಶಿಷ್ಟನಾದ ಸರ್ವಕರ್ತೃತ್ವ ಜ್ಞಾತೃತ್ವಾದಿ ಭಾವಯುಕ್ತ ಈಶ್ವರನು ಎರಡನೆಯ ಗುಂಪಿನ ಪದಗಳಿಗೆ ವಾಚ್ಯಾರ್ಥ. ಜೀವ ಈಶ್ವರರು ಅಭಿನ್ನರು ಎಂಬುದು ಮೂರನೆಯ ಗುಂಪಿನ ಪದಗಳಿಗೆ ವಾಚ್ಯಾರ್ಥ.

ಅವಿದ್ಯಾ ಉಪಾಧಿರಹಿತ ಪ್ರತ್ಯಗಾತ್ಮ ( ಜೀವಸಾಕ್ಷಿ ಕೂಟಸ್ಥ ಚಿಲ್ಲಿಂಗ ) ನು ಮೊದಲ ಗುಂಪಿನ ಪದಗಳಿಗೆ ಲಕ್ಷ್ಯಾರ್ಥ. ನಿರುಪಾಧಿಕ, ನಿತ್ಯ, ನಿರವಯವ,

ನಿತಾಂತ ಪೂರ್ಣಬ್ರಹ್ಮನು ಎರಡನೆಯ ಗುಂಪಿನ ಪದಗಳಿಗೆ ಲಕ್ಷ್ಯಾರ್ಥ. ಪ್ರತ್ಯಗಾತ್ಮ ಪರಬ್ರಹ್ಮರು ಅಭಿನ್ನರು—ಇದು ಮೂರನೆಯ ವರ್ಗದ ಪದಗಳಿಗೆ ಲಕ್ಷ್ಯಾರ್ಥ. ಗುರುವರ್ಯರಿಂದ ಪ್ರತ್ಯಗಾತ್ಮರೂಪನಾದ ತಾನೇ ಪರಬ್ರಹ್ಮನೆಂದು ಅನುಭವತಃ ಅರಿತುಕೊಳ್ಳುವದು ಜ್ಞಾನಯಜ್ಞ. ಇಲ್ಲಿ ಜೀವಭಾವ, ಅನಾತ್ಮ ಬುದ್ಧಿ ಹಾಗು ಭೇದ ಮತಿಗಳ ಹವನವಿದೆ. ಈ ಹವನಗೈದರೆ ಸರ್ವಶಾಂತಿ! ವಿಮಲ ಮುಕ್ತಿ !!

**ಏತೇ ಸಂಶಿತವ್ರತಾಃ ಯತಯಃ:**— ಈ ನವವಿಧ ಯಜ್ಞ ಕರ್ತೃಗಳು ದೃಢವ್ರತಶೀಲರಾದ ಯತಿಗಳು; ಇವರು ಯಮ ನಿಯಮಗಳಲ್ಲಿ ಪರಿಣತರು.

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀಂ ರುದ್ಧ್ವಾ ಪ್ರಾಣಾಯಾಮ ಪರಾಯಣಾಃ ॥೨೯॥**

**ಭಾವ:**—ಕೆಲವರು ಅಪಾನ ವಾಯುವಿನಲ್ಲಿ ಪ್ರಾಣವನ್ನು ಹಾಗೆಯೇ ಪ್ರಾಣವಾಯುವಿನಲ್ಲಿ ಅಪಾನ ವಾಯುವನ್ನು ಹವನ ಮಾಡುತ್ತಾರೆ. ಪ್ರಾಣ ಅಪಾನಗಳ ಗತಿಯನ್ನು ನಿರೋಧಿಸಿ ಪ್ರಾಣಾಯಾಮದಲ್ಲಿ ಪರಾಯಣರಾಗುತ್ತಾರೆ.

**ವಿವರಣೆ:**— (೧೦) **ಪ್ರಾಣಯಜ್ಞ:**— ದೇಹದ ಬದುಕಿಗೆ ಆಧಾರವೇ ಪ್ರಾಣಶಕ್ತಿ. ಈ ಪ್ರಾಣಶಕ್ತಿಯ ಹರಿದಾಟ ಎರಡು ಮುಖದಲ್ಲಿ ಸಾಗುತ್ತದೆ. ಊರ್ಧ್ವಮುಖವಾಗಿ ಹೊರಗೆ ಹರಿದು ಹೋಗುವದು ಪ್ರಾಣ. ಅಧೋಮುಖಗೊಂಡು ಅಂತರದಲ್ಲಿಳಿಯುವದು ಅಪಾನ. ಈ ಪ್ರಾಣಾಪಾನಗಳನ್ನು ಪೂರಕ ರೇಚಕ ಕುಂಭಕ ವಿಧಾನದಿಂದ ಹವನ ಮಾಡುವದು ಪ್ರಾಣಯಜ್ಞ. ಊರ್ಧ್ವ ಮುಖವಾಗಿ ಚಲಿಸುವ ಪ್ರಾಣವನ್ನು ಒಳಸೆಳೆದು ಅಧೋಮುಖವಾದ ಅಪಾನದೊಂದಿಗೆ ಸಂಯೋಜಿಸುವದು (ಹವನ ಮಾಡುವದು) ಪೂರಕ ಯಜ್ಞ. ಅಧೋಮುಖವಾಗಿ ಚಲಿಸುವ ಅಪಾನವನ್ನು ಪ್ರಾಣದೊಂದಿಗೆ ಒಂದುಗೂಡಿಸುವದು (ಹವನ ಮಾಡುವದು) ರೇಚಕ ಯಜ್ಞ. ಕೊನೆಯದಾಗಿ ಎರಡೂ ಗತಿಗಳನ್ನು ತಡೆದು ಹೃದಯ ಸ್ಥಾನದಲ್ಲಿ ಪ್ರಾಣಾಪಾನಗಳೆರಡನ್ನೂ ಬೆರೆಸಿ ಸ್ಥಿರಗೊಳಿಸುವದು ಕುಂಭಕಯಜ್ಞ. ಈ ಮೂರು ಬಗೆಯ ಯಾಗ ಮಾಡುವವರು ಪ್ರಾಣಾಯಾಮ ಪರಾಯಣರು.

ರೇಚಕ ಪೂರಕ ಕುಂಭಕ—ಈ ತ್ರಿವಿಧಾಂಗವುಳ್ಳ ಪ್ರಾಣಾಯಾಮವು ಸತ್ವ ರಜ ತಮಗಳ ತೆರೆಗಳನ್ನು ಅಡಗಿಸಿ ಮನಸ್ಸನ್ನು ನಿಶ್ಚಲಗೊಳಿಸುತ್ತದೆ. ನಿಶ್ಚಲ ಮನೋರಂಗದಲ್ಲಿ ಆತ್ಮನ ಆನಂದ—ಜೇನು ಹನಿಹನಿಯಾಗಿ ಇಳಿದು ಬರುತ್ತದೆ. ಆ ಜೇನಿನ ಆಸ್ವಾದನೆಯಲ್ಲಿ ಯೋಗಿಯು ಮೈ ಮರೆಯುತ್ತಾನೆ. ಅದೇ ಸಮಾಧಿ. ಅದರಿಂದಲೇ ಆತ್ಮಸಾಕ್ಷಾತ್ಕಾರ.

ಪ್ರಾಣಯಜ್ಞ ಅತೀವ ಕಷ್ಟಕರ. ನಾಲ್ಕು ಗ್ರಂಥ ಓದಿಯಾಗಲಿ, ತನ್ನ

ಷ್ಟಕ್ಕೆ ತಾನೆ ಕಲ್ಪನೆ ಮಾಡಿಯಾಗಲಿ ಈ ಯಜ್ಞವನ್ನು ಆಚರಿಸುವದು ಸರಿಯಲ್ಲ. ಈ ಯಜ್ಞದಲ್ಲಿ ಪೂರ್ಣ ಪರಿಣತಿ ಹೊಂದಿದ ಅನುಭಾವಿ ಗುರುಗಳ ಸಾನಿಧ್ಯ ಹಾಗು ಮಾರ್ಗದರ್ಶನದಲ್ಲಿದ್ದೇ ಅನುಷ್ಠಾನಿಸಬೇಕು.

**ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।**
**ಸರ್ವೇऽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತ ಕಲ್ಮಷಾಃ ॥೩೦॥**

**ಅರ್ಥ:–** ನಿಯತಾಹಾರಾಃ =ಮಿತವಾಗಿ ಆಹಾರ ಸೇವಿಸುವ ಅಪರೇ= ಕೆಲವರು ಪ್ರಾಣಾನ್ =(ಪ್ರಾಣವಾಯುವಿನಿಂದ ಚೇಷ್ಟಿಸುವ) ಇಂದ್ರಿಯಗಳನ್ನು, ಪ್ರಾಣೇಷು= (ಆ ಇಂದ್ರಿಯಗಳ ಪ್ರಾಣವಾದ) ಮನ ಬುದ್ಧ್ಯಾದಿಗಳಲ್ಲಿ ಜುಹ್ವತಿ= ಹೋಮ ಮಾಡುತ್ತಾರೆ. ಏತೇ ಸರ್ವೇ ಅಪಿ= ಇವರೆಲ್ಲರೂ ಯಜ್ಞವಿದಃ =ಯಜ್ಞವಿದರು. ( ಹಾಗು ) ಯಜ್ಞ ಕ್ಷಪಿತ ಕಲ್ಮಷಾಃ= ಯಜ್ಞದಿಂದ ಪಾಪನಾಶ ಮಾಡಿಕೊಂಡವರು.

**ವಿವರಣೆ:- (೧೨) ಅಂತಃಪ್ರಾಣಯಜ್ಞ:-** ಪ್ರಾಣಶಕ್ತಿಯಿಂದ ವ್ಯವಹರಿಸುವ ಶ್ರೋತ್ರಾದಿ ಇಂದ್ರಿಯಗಳನ್ನು ಆ ಇಂದ್ರಿಯಗಳ ಪ್ರಾಣವೆನಿಸುವ ಮನಸ್ಸಿನಲ್ಲಿ ಅರ್ಪಿಸುವದು, ಆ ಮನಸ್ಸನ್ನು ಅದರ ಪ್ರಾಣವಾದ ಬುದ್ಧಿಯಲ್ಲಿ ಹವನ ಮಾಡುವದು, ಆ ಬುದ್ಧಿಯನ್ನು ಚಿತ್ತದಲ್ಲಿ, ಚಿತ್ತನ್ನು ಅಹಂಕಾರದಲ್ಲಿ ಹಾಗು ಆ ಅಹಂಕಾರವನ್ನು ದೇವನಲ್ಲಿ ನಿವೇದಿಸುವದು ಅಂತಃಪ್ರಾಣಯಜ್ಞ. ಮಿತವಾದ ಆಹಾರ, ನಿದ್ರಾ, ವ್ಯವಹಾರಗಳುಳ್ಳವರು ಮಾತ್ರ ಈ ಪಾವನ ಯಜ್ಞವನ್ನು ಆಚರಿಸಬಲ್ಲರು.

ಅಂತಃಪ್ರಾಣಯಜ್ಞದ ಇನ್ನೊಂದು ವಿಧಾನ ಹೀಗಿದೆ: ನೈಸರ್ಗಿಕವಾಗಿ ವಾಯುವು 'ಸಃ' ಶಬ್ದದೊಂದಿಗೆ ಹೊರಗೆ ಹೋಗುತ್ತದೆ; 'ಹ' ಶಬ್ದದೊಂದಿಗೆ ಒಳಗೆ ಪ್ರವೇಶಿಸುತ್ತದೆ ಹಾಗು 'ಅಂ' ಸ್ವರದೊಂದಿಗೆ ಕ್ಷಣಕಾಲ ಹೃದಯದಲ್ಲಿ ನಿಲ್ಲುತ್ತದೆ. ಅಂದರೆ ಮೊದಲು 'ಹ' (ಪೂರಕ ಧ್ವನಿ) ಮಧ್ಯದಲ್ಲಿ 'ಅಂ'( ಕುಂಭಕ ಧ್ವನಿ) ಕಡೆಗೆ 'ಸಃ' (ರೇಚಕ ಧ್ವನಿ) = ಹಂ ಸಃ- ಇದೇ ವಾಯುವಿನ ಅನುಲೋಮ ಧ್ವನಿ. ನಾವು ಅರಿಯಲಿ, ಅರಿಯದಿರಲಿ ಈ ಹಂಸ ಧ್ವನಿ ಸದಾ ಸಾಗಿದೆ. ಹಂ ಜೀವದರ್ಶಕ; ಸಃ ವಾಯುದರ್ಶಕ. ಹಂಸಃ= ಪ್ರಾಣವಾಯುವೇ ನಾನು ಎಂಬ ಭಾವ ದರ್ಶಕ. ಈ ಅನುಲೋಮ ವಾಯು ಚಲನೆಯನ್ನು ಪ್ರತಿಲೋಮಗೊಳಿಸಿದಾಗ ಸಾಮಾನ್ಯ ವಾಕ್ಯವಾದ ಹಂಸವು ಸೋऽಹಂ ಎಂಬ ತಾರಕ ಮಂತ್ರವಾಗುತ್ತದೆ. ಸ ಕಾರವು ತತ್ಪದದ ಅರ್ಥ. ಹ ಕಾರವು ತ್ವಂಪದದ ಅರ್ಥ. ಶೂನ್ಯವು ತತ್ ತ್ವಂ ಪದಾರ್ಥಗಳ ಏಕತಾ ಸೂಚಕ. ಒಟ್ಟಾರೆ ಸೋऽಹಂ ಎಂದರೆ ಆ ಪರಮಾತ್ಮನೇ ನಾನು !

ನಿರ್ಜನ ಸ್ಥಾನದಲ್ಲಿ ಕುಳಿತು, ಶ್ವಾಸ ಪ್ರಶ್ವಾಸಗಳ ಒಂದಿಗೆಯೇ ಸೋऽಹಂ ಮಂತ್ರವನ್ನು ಉಚ್ಚರಿಸಬೇಕು; ಹೇಗೆ? ಅವಿರತವಾಗಿ! ಆ ಮಂತ್ರೋಚ್ಚಾರದಿಂದ ಪ್ರಾಣದ ಶುದ್ಧಿ; ಆ ಮಂತ್ರಾರ್ಥ-ಚಿಂತನದಿಂದ ಮನದ ಶುದ್ಧಿ ಉಂಟಾ

ಗುತ್ತದೆ. ಆಗ ಸೋऽಹಂ ಮಂತ್ರಾರ್ಥದ ಸಾಕ್ಷಾತ್ಕಾರ. ಬಳಿಕ ಸೋऽಹಂ ಮಂತ್ರ, ಆ ಮಂತ್ರದ ಅರ್ಥ–ಇವೆರಡಕ್ಕೆ ಸಾಕ್ಷಿಯಾದ ಪರಮಾತ್ಮನ ದರ್ಶನ. ಸೋऽಹಂ ಮಂತ್ರವು ಇಷ್ಟಲಿಂಗ. ಮಂತ್ರಾರ್ಥವು ಪ್ರಾಣಲಿಂಗ. ಸಾಕ್ಷಿ ದೇವನು ಭಾವಲಿಂಗ.. ಮಂತ್ರರೂಪ ಇಷ್ಟಲಿಂಗದಲ್ಲಿ ಮನಸ್ಸು ತನ್ಮಯವಾದರೆ ಸವಿಕಲ್ಪ ಸಮಾಧಿ. ಮಂತ್ರಾರ್ಥರೂಪ ಪ್ರಾಣಲಿಂಗದಲ್ಲಿ ಮನವು ತಲ್ಲೀನವಾದರೆ ನಿರ್ವಿಕಲ್ಪ ಸಮಾಧಿ. ಸಾಕ್ಷಿ ದೇವನಲ್ಲಿ ಮನವು ಮುಳುಗಿದರೆ ಸಾಸ್ಮಿತಾ ಸಮಾಧಿ! ಅದು ಸಾಧನೆಯ ಕೊನೆ.

ಇಂತು ಹಂಸರೂಪ ಪ್ರಾಣಗತಿಗಳನ್ನು ಸೋऽಹಂ ಆಗಿ ಪರಿವರ್ತಿಸಿ, ಅದರ ಅರ್ಥದೊಂದಿಗೆ ಮನಸ್ಸನ್ನು ಸಂಲಗ್ನಗೊಳಿಸಿ, ಅಂತ್ಯದಲ್ಲಿ ವಿಶ್ವಪ್ರಾಣರೂಪ ಪರಮಾತ್ಮನಲ್ಲಿ ಆ ಮನಸ್ಸನ್ನು ಸಮರ್ಪಿಸಿದಾಗ ಅಂತಃ ಪ್ರಾಣಯಜ್ಞವು ಪೂರ್ತಿಯಾದಂತೆ.

**ಸರ್ವೇ ಅಪಿ ಏತೇ ಯಜ್ಞವಿದಃ ಯಜ್ಞಕ್ಷಪಿತಕಲ್ಮಷಾಃ:–** ಮೇಲೆ ಹೇಳಿದ ಹನ್ನೊಂದೂ ಯಜ್ಞಗಳು ಸಾತ್ವಿಕ ಹಾಗು ವಿಮೋಚಕ. ಯಾರು ಅವುಗಳನ್ನು ಅರಿತು ಆಚರಿಸುತ್ತಾರೆಯೋ ಅವರು ಯಜ್ಞವಿದರು. ಜೀವನಾವಧಿ ವಿವಿಧ ಯಜ್ಞಗಳಲ್ಲಿ ನಿರತರಾದ ಅವರ ಮಾನಸಿಕ ಕಾಲುಷ್ಯ ತೊಳೆದುಹೋಗಿದೆ. ಅವರ ಅಂತರಂಗದಲ್ಲಿ ಪ್ರಾಪಂಚಿಕ ವಿಷಯುಗಳ ಲವಲೇಶ ಆಸಕ್ತಿಯೂ ಇಲ್ಲ. ಆದ್ದರಿಂದ ಅವರು ಅಮಲಾತ್ಮರು!

**ಸಂಬಂಧ:–** ಮುಂದಿನ ಎರಡು ಮಂತ್ರಗಳಲ್ಲಿ ಯಜ್ಞ ವಿಷಯಕ ಉಪದೇಶದ ಉಪಸಂಹಾರವಿದೆ.

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥೩೧॥**

**ಅರ್ಥ:-** ಯಜ್ಞಶಿಷ್ಟವಾದ ಅಮೃತ ಸೇವಿಸುವವರು ಸನಾತನವಾದ ಬ್ರಹ್ಮವನ್ನು ಹೊಂದುತ್ತಾರೆ. ಕುರುಶ್ರೇಷ್ಠನೆ, ಯಜ್ಞ ಮಾಡದವನಿಗೆ, ಈ ಲೋಕವು ಇಲ್ಲ. ಪರಲೋಕ ಇನ್ನೆಲ್ಲಿ?

**ವಿವರಣೆ:-** ಬಾಹ್ಯ ವಿಷಯ ಹಾಗು ಇಂದ್ರಿಯ, ಪ್ರಾಣ, ಮನ, ಬುದ್ಧಿ, ಜೀವಭಾವ ಇವು ಹವನ ವಸ್ತುಗಳು. ಪರಮಾತ್ಮನೇ ಅಗ್ನಿ. ಅವನಲ್ಲಿ ಇವನ್ನೆಲ್ಲ ಸುಬುದ್ಧಿ ಹಾಗು ಸದ್ಭಾವ ಹಸ್ತದಿಂದ ಅರ್ಪಿಸಿದಾಗ ಆ ಹವಿಸ್ಸುಗಳೆಲ್ಲ ಅಮೃತವಾಗುತ್ತವೆ. ಆ ಅಮೃತವಾದ ಹಾಗು ಪ್ರಸಾದೀಕೃತವಾದ ವಸ್ತುಗಳನ್ನು ವಿಮಲ ಇಂದ್ರಿಯಗಳ ಮೂಲಕ ಉಪಭೋಗಿಸುವವರು ಯಜ್ಞಶಿಷ್ಟಾಮೃತ ಭುಜರು. ಅವರು ಸನಾತನ ಪರಬ್ರಹ್ಮವನ್ನು ಹೊಂದುತ್ತಾರೆ. ಯಾವನು ಯಜ್ಞವನ್ನೇ ಮಾಡುವದಿಲ್ಲವೋ ಅವನಿಗೆ ಇಹದ ಸೌಖ್ಯವೇ ದೊರೆಯದೆಂದಾಗ ಪರಲೋಕವಿನ್ನೆಲ್ಲಿ?

## ವಿವಿಧ ಯಜ್ಞಗಳ ಕೋಷ್ಟಕ

| ಯಜ್ಞ | ಯಜಮಾನ | ದೇವತಾ | ಅಗ್ನಿ | ಹವಿಸ್ಸು | ಸಾಧನ | ಫಲ |
|---|---|---|---|---|---|---|
| ೧) ದ್ರವ್ಯ | ದಾತೃ | ಇಷ್ಟದೇವತಾ | ಸತ್ಪಾತ್ರ | ಧನಧಾನ್ಯಾದಿ | ಹಸ್ತಾದಿ | ಪುಣ್ಯ |
| ೨) ದೈವ | ಭಾವುಕ | " | ಇಷ್ಟ ದೇವತಾ | " | " | ಚಿತ್ತಶುದ್ಧಿ |
| ೩) ಮಿತೋಪಭೋಗ | ಗೃಹಸ್ಥ | ದೇವ | ಇಂದ್ರಿಯ | ಮಿತವಿಷಯ | ನಿಗ್ರಹವೃತ್ತಿ | ಚಿತ್ತಶುದ್ಧಿ |
| ೪) ಸಂಯಮ | ಬ್ರಹ್ಮಚಾರಿ | ಸಂವಿದ್ದೇವತಾ | ಸಹನಶೀಲತಾ | ಇಂದ್ರಿಯ ವೃತ್ತಿಗಳು | ಸುಬುದ್ಧಿ | " |
| ೫) ತಪಸ್ | ತಪಸ್ವಿ | ಇಷ್ಟ ದೇವತಾ | " | ಇಂದ್ರಿಯ ಗಳು | ಇಂದ್ರಿಯ ಗಳು | ಇಷ್ಟ ದೇವ ದರ್ಶನ |
| ೬) ಸ್ವಾಧ್ಯಾಯ | ಅಭ್ಯಾಸಿ | ಇಷ್ಟದೇವತಾ | ವೇದಾದಿಗಳು | ಆಲಸ್ಯಾದಿ ಗಳು | ಚಕ್ಷು,ಮನ, ಬುದ್ಧಿ | ಅಜ್ಞಾನ ನಾಶ |

| | | | | | | |
|---|---|---|---|---|---|---|
| ೭) ಪ್ರಾಣಯಾಮ | ಸಾಧಕ | " | ಕುಂಭಕ | ಪ್ರಾಣಾಪಾನ | ವಾಯು | ನಿಶ್ಚಲತೆ |
| ೮) ಯೋಗ | ಯೋಗ ಸಾಧಕ | ಧ್ಯೇಯವಸ್ತು | ಧ್ಯೇಯಾಗ್ನಿ | ಮನೋವೃತ್ತಿ | ಆತ್ಮಾಕಾರ ವೃತ್ತಿ | ಧ್ಯೇಯದೊಡನೆ ಐಕ್ಯತೆ |
| ೯) ಧ್ಯಾನ | ಧ್ಯಾತೃ | " | " | ಏಕಾಗ್ರವೃತ್ತಿ | " | ಧ್ಯೇಯದರ್ಶನ |
| ೧೦) ಅಂತಃಪ್ರಾಣ | ಲಯಯೋಗಿ | ವಿಶ್ವಪ್ರಾಣನಾದ ಪರಮಾತ್ಮ | ವಿಶ್ವಪ್ರಾಣ - | ಬಾಹ್ಯಾಂತರ ಇಂದ್ರಿಯ | ಅರ್ಪಣಾ ವೃತ್ತಿ | ಮನೋಲಯ |
| ೧೧) ಜ್ಞಾನ | ಶುದ್ಧ ಚಿತ್ತನು | ಪ್ರತ್ಯಗಾತ್ಮ | ಪ್ರತ್ಯಗಾತ್ಮ | ಮನೋವೃತ್ತಿ | ಪ್ರತ್ಯಗಾತ್ಮಾ-ಕಾರವೃತ್ತಿ | ಜ್ಞಾನಪ್ರಾಪ್ತಿ |
| ೧೨) ಜೀವ | ಶುದ್ಧಜೀವ | " | ಅಧಿಕರಣಾತ್ಮ | ಜೀವಭಾವ | ಶುದ್ಧವೃತ್ತಿ | ಸಾಕ್ಷಿಭಾವ |
| ೧೩) ಬ್ರಹ್ಮ | ಅಹಂಕಾರಾವ-ಚ್ಛಿನ್ನ ಚೇತನ | ಸಂಪ್ರದಾನಾವ-ಚ್ಛಿನ್ನಚೇತನ | ಅಧಿಕರಣಾವಚ್ಛಿನ್ನ ಚೇತನ | ಕರ್ಮಾವ -ಚ್ಛಿನ್ನ ಚೇತನ | ಕರಣಾವ-ಚ್ಛಿನ್ನಚೇತನ | ಬ್ರಹ್ಮ ಸಾಕ್ಷಾತ್ಕಾರ |

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ । ।**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥೩೨॥**

**ಅರ್ಥ:–** ಏವಂ= ಹೀಗೆ ಯಜ್ಞಾಃ= ಯಜ್ಞಗಳು ಬಹುವಿಧಾಃ= ಹಲವು ಬಗೆ. ಬ್ರಹ್ಮಣಃ= ವೇದದ ಮುಖೇ = ಮುಖದಿಂದ ವಿತತಾಃ = ವಿವರಿಸಲ್ಪಟ್ಟಿವೆ. ತಾನ್ ಸರ್ವಾನ್ = ಆ ಯಜ್ಞಗಳನ್ನೆಲ್ಲ ಕರ್ಮಜಾನ್ =ಕರ್ಮಜನ್ಯವೆಂದು ವಿದ್ಧಿ = ತಿಳಿ. ಏವಂ= ಈ ಪ್ರಕಾರ ಜ್ಞಾತ್ವಾ= ತಿಳಿದು ವಿಮೋಕ್ಷ್ಯಸೇ = ಮುಕ್ತನಾಗುವಿ.

**ವಿವರಣೆ:-** ಇಲ್ಲಿಯವರೆಗೆ ಹೇಳಿದ ವಿವಿಧ ಯಜ್ಞಗಳು ವೇದಗಳಲ್ಲಿ ನಿರೂಪಿಸಲ್ಪಟ್ಟಿವೆ. ದೇಹ ಇಂದ್ರಿಯ ಪ್ರಾಣ ಮನ ಬುದ್ಧಿಗಳ ಸಹಾಯದಿಂದ ಆಚರಿಸಲಾಗುವ ಆ ಎಲ್ಲ ಯಜ್ಞಗಳು ಪವಿತ್ರ ಹಾಗು ಜೀವನ ತಾರಕ ಕರ್ಮಗಳು. ಈ ಕರ್ಮಗಳಿಂದ ಮನಶ್ಶುದ್ಧಿ. ಶುದ್ಧ ಮನದಲ್ಲಿ ಸ್ವರೂಪ ಜ್ಞಾನದ ಅವತರಣ! ಪರಮ ಮುಕ್ತಿಯ ಪ್ರಾಪ್ತಿ!

**ಸಂಬಂಧ:–** ಮೇಲೆ ಹೇಳಿದ ಹಲವಾರು ಯಜ್ಞಗಳಲ್ಲಿ ಯಾವುದು ಶ್ರೇಷ್ಠವಾಗಿದೆ?

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾ ಜ್ಞಾನಯಜ್ಞಃ ಪರಂತಪ।**
**ಸರ್ವಂ ಕರ್ಮಾಖಿಲಂ ಪಾರ್ಥಜ್ಞಾನೇ ಪರಿಸಮಾಪ್ಯತೇ ॥೩೩॥**

**ಅರ್ಥ:–** ದ್ರವ್ಯಮಯಾತ್ ಯಜ್ಞಾತ್ = (ಅನಾತ್ಮ ವ್ಯಾಪಾರ ಜನ್ಯ) ದ್ರವ್ಯಮಯ ಯಜ್ಞಕ್ಕಿಂತ, ಜ್ಞಾನಯಜ್ಞಃ = ಜ್ಞಾನಯಜ್ಞವು ಶ್ರೇಯಾನ್ = ಶ್ರೇಯಸ್ಕರ. ಸರ್ವಂ = ಸಕಲ, ಅಖಿಲಂಕರ್ಮ = ಕರ್ಮಗಳ ಪರಿಪೂರ್ತಿಯು ಜ್ಞಾನೇ= ಜ್ಞಾನದಲ್ಲಿ ಪರಿಸಮಾಪ್ಯತೇ= ಪರಿಸಮಾಪ್ತಿಗೊಳ್ಳುತ್ತದೆ.

**ಭಗವಂತ:-**"ಧನಂಜಯ, ನಾನು ಹೇಳಿದ ಯಜ್ಞಗಳಲ್ಲಿ ಎರಡು ವಿಭಾಗ: ೧) ಕರ್ಮಪ್ರಧಾನವಿರುವ ಕರ್ಮಯಜ್ಞ(ದ್ರವ್ಯಾದಿ ಯಜ್ಞಗಳು) (೨) ಜ್ಞಾನ ಪ್ರಧಾನವಿರುವ ಜ್ಞಾನ ಯಜ್ಞ(ಬ್ರಹ್ಮಯಜ್ಞ. ಜೀವಯಜ್ಞ,ಜ್ಞಾನಯಜ್ಞಗಳು) ಇವೆರಡರಲ್ಲಿ ಎರಡನೆಯದು ಅಂದರೆ ಜ್ಞಾನಯಜ್ಞವು ಶ್ರೇಷ್ಠ. ಏಕೆಂದರೆ ಕರ್ಮ ಯಜ್ಞದಲ್ಲಿ ತ್ರಿಪುಟಿ ಇವೆ. ಸುಸ್ಪಷ್ಟವಾಗಿಯೇ ಇಂದ್ರಿಯಗಳ ಕಾರ್ಯ ಇವೆ. ಕಾರ್ಯಸಾಗಿರುವವರೆಗೆ ಗುಣಕರ್ಮರಹಿತವಾದ ಆತ್ಮದರುಶನವಿಲ್ಲ. ಜ್ಞಾನ ಯಜ್ಞದಲ್ಲಿ ಮಾತ್ರ ಇಂದ್ರಿಯಾದಿಗಳ ಮಿಸುಗಿಲ್ಲ; ತ್ರಿಪುಟಿಯ ಭಾವ ಅಡಗಿದೆ. ಆದುದರಿಂದ ಆತ್ಮಸಾಕ್ಷಾತ್ಕಾರ ಸಾಧ್ಯವಾಗಿದೆ

"ಪಾರ್ಥ, ಸಕಾಮ ಕರ್ಮಯಜ್ಞದಿಂದ ಅನಾತ್ಮ ವಸ್ತುಗಳ ಪ್ರಾಪ್ತಿ. ನಿಷ್ಕಾಮ ಕರ್ಮಯಜ್ಞದಿಂದ ಹೃದಯ ಶುದ್ಧಿ. ಆ ಶುದ್ಧ ಹೃದಯದಲ್ಲಿ ಅನಾದ್ಯನಂತ ಚೈತನ್ಯ ದೇವನ ದಿವ್ಯ ಪ್ರಕಾಶವನ್ನು ಅಭಿವ್ಯಕ್ತಗೊಳಿಸುವ ಸಾಮರ್ಥ್ಯ ಜ್ಞಾನಯಜ್ಞದಲ್ಲಿದೆ. ಶ್ರವಣ ಮನನ ನಿದಿಧ್ಯಾಸರೂಪ ಜ್ಞಾನಯಜ್ಞವನ್ನು ನಿರ್ವಹಿಸಿದ ಕ್ಷಣವೇ ಅಹಂಕಾರ ಸಡಲಿಸುತ್ತದೆ; ಜನ್ಮ ಜನ್ಮಾಂತರದ ಅಗಣಿತ

ವಾಸನೆಗಳು ಅಳಿಯುತ್ತವೆ; ಹೃದಯದಲ್ಲಿ ಆವರಿಸಿದ ಗಾಢ ಅವಿದ್ಯಾಂಧಕಾರ ವಿನಷ್ಟವಾಗುತ್ತದೆ; ಜೀವನ ಉಪಾಧಿಮಿತಿಗಳು ಅಡಗುತ್ತವೆ. ಕಡೆಗೆ ಜೀವಭಾವವೇ ಕರಗಿ ವಿಶ್ವಾತ್ಮಭಾವನೆ ಕರಿಸೊಳ್ಳುತ್ತದೆ. ಇದೇ ಪರಮ ಪುರುಷಾರ್ಥ; ಇಲ್ಲಿಗೆ ಸಾಮಾನ್ಯ ಕರ್ಮಗಳೂ ಮಾಯ! ಜ್ಞಾನಯಜ್ಞದಲ್ಲಿರುವ ಅಂತಃಕರ್ಮಗಳೂ ಮಾಯ! ಅನಂತ ಚಿದಾಕಾಶದಲ್ಲಿ ಸರ್ವವಸ್ತು ಹಾಗು ಭಾವಗಳ ಪರಿಲಯ!"

೧) ಸರ್ವಂ ಕರ್ಮ:- ಶ್ರುತ್ಯುಕ್ತ ಯಾಗ ಕರ್ಮಗಳು. ಅಖಿಲಂ ಕರ್ಮ- ಸ್ಮೃತಿ ಉಪದಿಷ್ಟ ನಿತ್ಯ ನೈಮಿತ್ತಿಕಾದಿ ಕರ್ಮಗಳು. ಜ್ಞಾನೇ ಪರಿಸಮಾಪ್ಯತೇ ಆ ಎರಡೂ ಕರ್ಮ ಪ್ರವಾಹಗಳು ನಿಷ್ಕಾಮ ಭೂಮಿಯಲ್ಲಿ ಪ್ರವೇಶಿಸುತ್ತವೆ. ಕೊನೆಗೆ ಶಿವಜ್ಞಾನಾಂಬುಧಿಯಲ್ಲಿ ಪರಿಸಮಾಪ್ತಿಗೊಳುತ್ತವೆ. ನದಿಗಳು ಸಾಗರವನ್ನು ಹುಟ್ಟಿಸುವದಿಲ್ಲ, ಅದರಲ್ಲಿ ಬೆರೆಯುತ್ತವೆ. ಹಾಗೆ ವಿಧಿ ಹಾಗು ಉಪಾಸನಾ ಕರ್ಮಗಳು ಶಿವಜ್ಞಾನಾಂಬುಧಿಯನ್ನು ಸೃಷ್ಟಿಸುವದಿಲ್ಲ, ಅದರಲ್ಲಿ ಒಂದಾಗುತ್ತವೆ.

ಸಂಬಂಧ:- ಆತ್ಮಸಾಕ್ಷಾತ್ಕಾರಕ್ಕೆ ನೇರ ಕಾರಣವಾದ ಜ್ಞಾನವನ್ನು ಹೇಗೆ ಪಡೆಯಬೇಕು?

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥೩೪॥

ಅರ್ಥ:- ಪ್ರಣಿಪಾತೇನ= ದೀರ್ಘ ದಂಡ ಪ್ರಣಾಮದಿಂದ ಪರಿಪ್ರಶ್ನೇನ =ಬಹುವಿಧ ಪ್ರಶ್ನದಿಂದ ಸೇವಯಾ= ಸೇವೆಯಿಂದ ತದ್ವಿದ್ಧಿ =ಅದನ್ನು (ಆ ಜ್ಞಾನವನ್ನು) ತಿಳಿದುಕೊ. ತತ್ತ್ವದರ್ಶಿನಃ= ತತ್ತ್ವದರ್ಶಿಗಳಾದ ಜ್ಞಾನಿನಃ =ಜ್ಞಾನಿಗಳು ತೇ =ನಿನಗೆ ಜ್ಞಾನಂ =ಜ್ಞಾನವನ್ನು ಉಪದೇಕ್ಷ್ಯಂತಿ= ಉಪದೇಶ ಮಾಡುವರು.

ವಿವರಣೆ:- ಜ್ಞಾನೋಪದೇಶ ಪಡೆಯುವ ಹಂಬಲವುಳ್ಳ ಸಾಧಕನು ಪ್ರಪ್ರಥಮದಲ್ಲಿ ಸಮರ್ಥ ಗುರುಗಳನ್ನು ಆಶ್ರಯಿಸಬೇಕು. ಸಮರ್ಥ ಗುರುಗಳಲ್ಲಿರಬೇಕಾದ ಲಕ್ಷಣಗಳು ಎರಡು ೧) ಶ್ರೋತ್ರಿಯತ್ವ ೨) ಬ್ರಹ್ಮನಿಷ್ಠತ್ವ.

೧) ಶ್ರೋತ್ರಿಯತ್ವ:- ಗುರುವಿನ ಮಾತು ಸರಲ, ಸುಭಗ ಹಾಗು ಸರಸವಾಗಿರಬೇಕು. ಕೇಳುವವರ ಬುದ್ಧಿಮಟ್ಟಕ್ಕೆ ಹಾಗು ಸಂಸ್ಕೃತಿಗೆ ಅನುಸರಿಸಿ ವಿವಿಧ ಪದಗಳಿಂದ ಸುಂದರ ವಾಕ್ಯಗಳನ್ನು ವಿರಚಿಸಬೇಕು. ಸಂದರ್ಭಾನುಸಾರ ಪ್ರಮಾಣ ಮತ್ತು ದೃಷ್ಟಾಂತಗಳನ್ನಿತ್ತು ಮಾತಿಗೆ ಲಾಲಿತ್ಯ ನೀಡಬೇಕು. ಮಂಡಿಸಬೇಕಾದ ವಿಷಯ ಎಷ್ಟೇ ಕಠಿಣ ಕ್ಲಿಷ್ಟವಿರಲಿ ಅದನ್ನು ಸಾಮಾನ್ಯ ಶಬ್ದಗಳಲ್ಲಿ ಹಿಡಿದು ಜನರ ಮನಸ್ಸಿನ ಮೇಲೆ ಭದ್ರವಾಗಿ ಅಚ್ಚೊತ್ತುವ ರೀತಿಯಲ್ಲಿ ನಿವೇದಿಸಬೇಕು. ಅಡಿಗೆ ಮಾಡುವಲ್ಲಿ ಕುಶಲನಾದ ಮನುಷ್ಯನಿಗೆ ನೀವೆಂಥ ಜಡ

ಪದಾರ್ಥಗಳನ್ನೇ ಕೊಡಿರಿ. ಅವನು ಅಶಕ್ತರಿಗೂ ಪಥ್ಯವಾಗುವ ರೀತಿಯಲ್ಲಿ ಹದವರಿತು ಅಡಿಗೆ ಮಾಡುತ್ತಾನೆ. ನುರಿತ ಗವಾಯಿಯು ಕ್ಲಿಷ್ಟ ರಾಗಗಳನ್ನೂ ಸರಸ ಹಾಡುಗಳಲ್ಲಿ ಹೊಂದಿಸಿ ಕೇಳುವವರ ತಲೆ ತೂಗಿಸುತ್ತಾನೆ. ಅದರಂತೆ ಮಾತಿನ ಹದವರಿತ ಗುರುವು ಪರಮ ರಹಸ್ಯಪೂರ್ಣ ತತ್ತ್ವಗಳನ್ನು ಪ್ರಸನ್ನ ವದನದಿಂದ ವಿವರಿಸುತ್ತಾನೆ; ಕೇಳುವವರ ಮನಸ್ಸಿಗೆ ಪೆಟ್ಟು ಹತ್ತದ ಹಾಗೆ ಅವರ ಬುದ್ಧಿಗೆ ಜಡವೆನಿಸದಂತೆ ನಿರೂಪಿಸುತ್ತಾನೆ. ಇಂಥ ಕಲೆ ಎಲ್ಲರಲ್ಲಿ ಇರುವದು ಸಾಧ್ಯವಿಲ್ಲ; ದೈವ ದತ್ತವಿದು.

ಬರಿ ಮಾತಿನ ರೀತಿ ಮುಖ್ಯವಲ್ಲ. ಗುರುವಾದವನು ಜಗತ್ತಿನ ಪ್ರಧಾನ ಶಾಸ್ತ್ರಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿರಬೇಕು. ಶಿಷ್ಯನು ಕೇಳಬಹುದಾದ ಸರ್ವವಿಧ ಪ್ರಶ್ನೆಗಳಿಗೂ ಸರಿಯಾದ ಮತ್ತು ಸಮಂಜಸವಾದ ಉತ್ತರ ನೀಡಲು ಅನ್ಯಮತ ಸಿದ್ಧಾಂತಗಳ ಜ್ಞಾನ ಅಗತ್ಯ.

೨) ಬ್ರಹ್ಮನಿಷ್ಠತ್ವ:– ವೇದ ಶಾಸ್ತ್ರಗಳು ಯಾವ ತತ್ತ್ವವನ್ನು ಪ್ರಶಂಸಿಸುತ್ತಿವೆಯೋ, ವಿಶ್ವದ ಆದ್ಯಂತದಲ್ಲಿ ಯಾವುದು ಚಿರಂತನವಾಗಿ ನೆಲೆಸಿದೆಯೋ, ವ್ಯಕ್ತಿಯ ಒಳಹೊರಗೆಲ್ಲ ಯಾವ ವಸ್ತು ಅವಿಚಲವಾಗಿ ತುಂಬಿದೆಯೋ ಅಂಥ ವಾಙ್ಮನಾತೀತ ದಿವ್ಯ ಬ್ರಹ್ಮವನ್ನು ಅರಿತು, ಅದರಲ್ಲಿಯೇ ಮನ ಮುಳುಗಿಸಿ ಬ್ರಹ್ಮಲೀನ-ಅನುಭೂತಿಯನ್ನು ಹೊಂದುವದೇ ಬ್ರಹ್ಮನಿಷ್ಠತ್ವ.

[ವೀರಶೈವ ಸಿದ್ಧಾಂತ ಶಿಖಾಮಣಿಯಲ್ಲಿತ್ತ ಸದ್ಗುರುವಿನ ಲಕ್ಷಣಗಳು ಗಮನೀಯವಾಗಿವೆ. ಗುರುವು(೧) ಲೋಕವಿಖ್ಯಾತ(೨) ಲೋಭ ಮೋಹ ರಹಿತ (೩)ಆತ್ಮಸ್ವರೂಪಜ್ಞಾನಿ. (೪)ವಿಷಯ ವಿಭ್ರಮದೂರ (೫)ವೇದಾಗಮಸಿದ್ಧಾಂತಜ್ಞ (೬)ಸಂಶಯ ವಿಪರ್ಯಾಯ ಭೇದಿಸಿದವ (೭)ಸತ್ಯಶೀಲ (೮)ಗುರುವಂಶ ಕ್ರಮಾನುಗತ ಆಚಾರ ಉಳ್ಳವ (೯)ಕುತ್ಸಿತ ಆಚಾರಗಳಿಂದ ದೂರನಾದವ(೧೦) ರಾಗದ್ವೇಷ ರಹಿತ (೧೧) ಶಿವತತ್ತ್ವ ವಿವೇಕಿ (೧೨) ಲಿಂಗಾಂಗಯೋಗನಿಷ್ಣಾತ (೧೩)ಅದ್ವೈತ ಭಾವಿ (೧೪)ಮಂಗಲ ವಚನ ಪ್ರಯುಕ್ತ.]

ವಿದ್ಯೆ ಹಾಗು ಜಾಣ ಮಾತುಗಾರಿಕೆಯು ಹಾಲಿನ ಹೊಳೆಯಾದರೆ ಆತ್ಮಾನುಭೂತಿಯು ಮಧುರ ಜೇನು. ಅನುಭವ ಪೂರ್ಣ ಗುರೂಪದೇಶ ಆಲಿಸಿದ ಸಾಧಕ ನಿಜಕ್ಕೂ ಕೃತಾರ್ಥನಾಗುತ್ತಾನೆ. ಇಂತು ಎರಡು ವಿಧದ ಸಾಮರ್ಥ್ಯವನ್ನು ಅಂಗವಿಸಿಕೊಂಡ ಗುರುಗಳು ದುರ್ಲಭ. ಯುಗಕ್ಕೊಬ್ಬರು.

ಪ್ರಣಿಪಾತೇನ:-ಅವರ ಚರಣಗಳಲ್ಲಿ ಸಿರಬಾಗಿ ತನ್ನ ದೇಹ ಮನಗಳನ್ನು ಅವರ ಸೇವೆಯಲ್ಲಿ ಸಮರ್ಪಿಸಿಕೊಳ್ಳಬೇಕು. "ಗುರುವು ಬ್ರಹ್ಮ; ಗುರುವು ವಿಷ್ಣು; ಗುರುವು ದೇವ; ಗುರುವು ಮಹೇಶ್ವರ; ಗುರುವು ಪ್ರತ್ಯಕ್ಷ ಪರಬ್ರಹ್ಮ." ಎಂಬ ಸದ್ಭಾವದಿಂದ ಗುರುಗಳನ್ನು ಉಪಚರಿಸಬೇಕು. ಅವರ ಆಪ್ತನಾಗಿ, ಅವರ

ಪ್ರತ್ಯಂಗವಾಗಿ ಸೇವೆ ಮಾಡಬೇಕು. ಆ ಸೇವೆಯಿಂದ ಗುರುಗಳು ಪ್ರೀತರಾಗುತ್ತಾರೆ. ಶಿಷ್ಯ ಸಾಧಕನು ಭಯ ಭಕ್ತಿಯಿಂದ ನಮಿಸಿ ತನ್ನ ಮನೋಗತ ಸಂದೇಹಗಳನ್ನು ವಿನಂತಿಪೂರ್ವಕ ಅವರಲ್ಲಿ ನಿವೇದಿಸಿಕೊಳ್ಳಬೇಕು. "ಕರುಣಾಮೂರ್ತಿಯೆ, ನಾನು ಯಾರು? ನನ್ನ ನೈಜ ಸ್ವರೂಪವೇನು? ಹುಟ್ಟು ಸಾವಿನ ಈ ಬಂಧನಕ್ಕೆ ನಾನೆಂತು ಸಿಲುಕಿದೆ? ಈ ಬಾಧನ ನೀಗುವ ಉಪಾಯವಿದೆಯೆ? ನನಗೆ ಚಿರಂತನ ಶಾಂತಿ ಹೇಗಾದರೆ ದೊರೆತೀತು?" ಹೀಗೆ ತಾತ್ತ್ವಿಕ ಸಂಗತಿಗಳ ಬಗ್ಗೆ ಬಿನ್ನವಿಸಿಕೊಳ್ಳಬೇಕು.

ತತ್ತ್ವದರ್ಶಿ (ಬ್ರಹ್ಮನಿಷ್ಠ)ಯಾದ ಹಾಗು ಪರಮ ಜ್ಞಾನಿಯಾದ ಗುರು ಮಹಾತ್ಮನು ಸತ್ಯನಿಷ್ಠೆ, ವಿನಯ, ವಿರಾಗ ಹಾಗು ಜ್ಞಾನಪಿಪಾಸೆಗಳುಳ್ಳ ಶಿಷ್ಯ-ಸಾಧಕನಿಗೆ ಬಹುಕರುಣೆಯಿಂದ ದಿವ್ಯಾತ್ಮಜ್ಞಾನವನ್ನು ಉಪದೇಶಿಸುತ್ತಾನೆ.

**ಭಗವಂತ:-** ಅರ್ಜುನ, ಆತ್ಮನ ಅನಂತಾಕಾಶವಿಹಾರಿಗಳಾದ ಗುರುಗಳು ನೀಡಿದ ಅಪ್ರತಿಮ ಉಪದೇಶಾಮೃತವನ್ನು ಮನವಾರೆ ಸೇವಿಸು. ವಿಮಲ ಆತ್ಮಜ್ಞಾನವನ್ನು ನಿನ್ನ ಅಂತರಂಗದಲ್ಲಿ ಸಂಗ್ರಹಿಸು. ಅದರ ಸಹಾಯದಿಂದ ಆತ್ಮಸಾಕ್ಷಾತ್ಕಾರ ಹೊಂದುವೆ.

**ಅರ್ಜುನ:-** ಜನಾರ್ದನ, ಆತ್ಮಜ್ಞಾನದ ಫಲವೇನು ?

**ಯಜ್‌ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥೩೫॥**

**ಅರ್ಥ:-** ಯತ್=ಯಾವುದನ್ನು ಜ್ಞಾತ್ವಾ =ತಿಳಿದು (ಪಡೆದು) ಪುನಃ= ಮತ್ತೆ ಏವಂ =ಈಗಿನಂತೆ ಮೋಹಂ =ವಿಷಯ ವ್ಯಾಮೋಹವನ್ನು ನ ಯಾಸ್ಯಸಿ= ಹೊಂದುವದಿಲ್ಲವೋ, ಯೇನ =ಯಾವುದರಿಂದ ಅಶೇಷೇಣ= ಪೂರ್ಣವಾಗಿ, ಭೂತಾನಿ =ಭೂತಗಳನ್ನು, ಆತ್ಮನಿ= ನಿನ್ನ ಆತ್ಮದಲ್ಲಿಯೂ ಅಥ ಉ =ಮತ್ತು ಮಯಿ =(ಆ ಆತ್ಮನನ್ನು) ನನ್ನ ಆತ್ಮದಲ್ಲಿಯೂ ದ್ರಕ್ಷ್ಯಸಿ= ನೋಡುವಿಯೋ (ಅದನ್ನು ಹೊಂದುವಿ).

**ವಿವರಣೆ:-** **ಭಗವಂತ:–** ಪಾರ್ಥ, ಆತ್ಮಜ್ಞಾನದ ಹಿರಿಮೆಯನ್ನು ಎಷ್ಟು ಬಣ್ಣಿಸಿದರೂ ಕಡಿಮೆಯೇ. ಅದು ಅಮರ ಭಾಸ್ಕರ. ಅದನ್ನು ಗುರುಗಳ ದಿವ್ಯ ಅನುಗ್ರಹದಿಂದಾಗಿ ನಿನ್ನಂತರಂಗದಲ್ಲಿ ಕಂಡೆಯಾದರೆ ಬಂಧು ಬಾಂಧವರ ಬಗೆಗಿರುವ ನಿನ್ನ ವ್ಯಾಮೋಹವು ಮೇಘದಂತೆ ಕರಗಿ ಹೋಗುವದು; ದೇಹ ಇಂದ್ರಿಯ ಹಾಗು ಮನಸ್ಸುಗಳ ಬಗೆಗಿನ ಮೋಹ ಮಂಜಿನಂತೆ ಮಾಯವಾಗುವದು. ಆಗ, ಅರ್ಜುನ, ನಿನ್ನ ಪ್ರತ್ಯಗಾತ್ಮ ಚೇತನದಲ್ಲಿ (ಅಕರ್ಮದಲ್ಲಿ) ಈ ಸಕಲ ಭೂತ ವಿಸ್ತಾರವನ್ನು ಕಾಣುವಿ. ಅಷ್ಟೇ ಅಲ್ಲ, ಪರಾತ್ಪರ ಪರಬ್ರಹ್ಮರೂಪಾದ ನನ್ನಲ್ಲಿ ನಿನ್ನ ಪ್ರತ್ಯಗಾತ್ಮಚೇತನವನ್ನು ದರ್ಶಿಸುವಿ. ಅಂದರೆ, ಭೌತಜಗತ್ತು, ಜೀವವರ್ಗ, ದೇಹ, ಮನ, ಬುದ್ಧಿ, ಅಹಂಕಾರ, ಪ್ರಕೃತಿ, ಪ್ರತ್ಯಗಾತ್ಮ ಏನೆಲ್ಲ ಭೇದ ಅಡಗಿ ಏಕಮೇವಾದ್ವಿತೀಯ ಪರಮಾತ್ಮನನ್ನೇ ನೋಡುವ ಭಾಗ್ಯ ನಿನ್ನದಾಗುವದು.

ಆಗೆಲ್ಲಿ ವ್ಯಷ್ಟಿ ಸಮಷ್ಟಿಗಳ ಮೋಹ?

(೧) **ಮೋಹಗಳು ಮೂರು (ಅ)ಭೌತ ವಸ್ತುಗಳ ವ್ಯಾಮೋಹ:-** ಧನ ಧಾನ್ಯ ವನಿತೆ ವಸ್ತ್ರ ವಾಹನ ಮುಂತಾದವುಗಳು ಭೌತ ವಸ್ತುಗಳು; ಅವುಗಳನ್ನು ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುವದೇ ಭೌತಮೋಹ. ಈ ವ್ಯಾಮೋಹಕ್ಕೆ ಒಳಗಾದ ಜೀವ ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಪರಿಗ್ರಹಗಳಂಥ ಮಂಗಲ ಗುಣಗಳನ್ನೇ ಬಲಿಗೊಟ್ಟು ವಿಷಯುಗಳನ್ನು ಸಂಗ್ರಹಿಸುತ್ತಾನೆ. **(ಬ) ದೇಹದ ವ್ಯಾಮೋಹ:-** ದೇಹವು ಪ್ರಕೃತಿ ನಿರ್ಮಿತ. ಅದು ಅತ್ಯಂತ ಜಡ, ಸ್ಥೂಲ. ಅದೇ ತಾನೆಂದು ಭ್ರಮಿಸುವದಕ್ಕೆ ದೇಹದ ವ್ಯಾಮೋಹ ಎನ್ನುತ್ತಾರೆ. ಈ ವ್ಯಾಮೋಹಕ್ಕೆ ಬಲಿಯಾದ ಜೀವನು ಜನ್ಮ ಮರಣಗಳ ಭಾವ ತಾಳುತ್ತಾನೆ. ದೇಹದೊಂದಿಗೆ ತಾನೂ ವಿಕಾರ ಹೊಂದುವೆನೆಂದು ಕಲ್ಪಿಸುತ್ತಾನೆ. ಭೌತ ವ್ಯಾಮೋಹವು ಮಮಕಾರದ ಮೇಲೆ ನಿಂತುದರಿಂದ ಅದನ್ನು ಬಿಡುವದು ಸರಳ. ಆದರೆ ಅಹಂ–ಮಮ ಎರಡೂ ಭಾವಗಳ ಮೇಲೆ ನೆಲೆಸಿದ ದೇಹ ವ್ಯಾಮೋಹ ಹೋಗುವದು ಮಾತ್ರ ಅತೀವ ಕಷ್ಟ. ತಪ, ಧ್ಯಾನ, ಪೂಜೆ, ಸೇವೆ ಮುಂತಾದ ಪವಿತ್ರ ಕಾರ್ಯಗಳಿಂದ ಪರಾಙ್ಮುಖಗೊಳಿಸುವ ದೇಹಮೋಹವು ಜೀವನನ್ನು ಪ್ರಪಂಚದಲ್ಲಿ ಬದ್ಧಗೊಳಿಸುವದು. **(ಕ) ಜೀವ ವ್ಯಾಮೋಹ:** ಮನ ಬುದ್ಧಿ ಚಿತ್ತು ಅಹಂಕಾರ ಜ್ಞಾತೃ ಈ ಐದು ರೂಪದಿಂದ ಪರಿಣಾಮಗೊಳ್ಳುವದು ಅಂತಃಕರಣ. ಆ ಅಂತಃಕರಣ ವಿಶಿಷ್ಟ ಚೈತನ್ಯವು ಜೀವ. ಅಂತಃಕರಣ ಸರಸ್ಸಿನಲ್ಲಿ ಏಳುವ ಎಲ್ಲ ವಿಕಾರಗಳು ಜೀವನಲ್ಲಿ ಭಾಸವಾಗುತ್ತವೆ. ಆಗ ನಾನು ಕಾಮುಕ, ನಾನು ಸುಖಿ, ನಾನು ದುಃಖಿ, ನಾನು ಜಾಣ, ನಾನು ಅಜ್ಞ ಎಂಬ ವಿವಿಧ ಭಾವ ತಾಳುತ್ತಾನೆ ಜೀವ. ಈ ಭಾವನೆಗಳೇ ಜೀವ–ವ್ಯಾಮೋಹದ ಲಕ್ಷಣಗಳು ಉಳಿದೆರಡು ಮೋಹಗಳಿಗಿಂತ ಜೀವ ಮೋಹ ಅತಿ ಸೂಕ್ಷ್ಮ ಹಾಗು ಬಿಡಲು ಅತೀವ ಕಷ್ಟ.

(೨) ಗುರುವು ನಿರ್ಮಲಾತ್ಮ; ಜ್ಞಾನ ಮೂರ್ತಿ; ಕುಶಲ ಮಾರ್ಗದರ್ಶಕ. ತನ್ನ ನಿಷ್ಕಲ್ಮಷ ಉಪದೇಶದಿಂದ ಶಿಷ್ಯಸಾಧಕನ ಈ ತ್ರಿವಿಧ ಮೋಹಗಳನ್ನು ಸಹಜವಾಗಿ ಕಳೆಯುತ್ತಾನೆ. ಗುರೂಪದೇಶದ ಒಂದು ಮಾದರಿ ಇಲ್ಲಿದೆ:

"ತಮ್ಮಾ, ನಾನು ಹೇಳುವದನ್ನು ಲಕ್ಷವಿಟ್ಟುಕೇಳು. ಭೌತ ವಸ್ತುಗಳು ಜಡ. ಅವುಗಳನ್ನು ಪಡೆಯುವಲ್ಲಿ ದುಃಖ, ರಕ್ಷಿಸುವಲ್ಲಿಯೂ ಕಷ್ಟ, ಕಡೆಗೆ ಅವು ಕೈಬಿಡುವಾಗಲಂತು ಹೇಳಬಾರದ ಅನುತಾಪ. ಅಷ್ಟೇ ಅಲ್ಲ, ಅವುಗಳನ್ನು ನೀನು ಹೇರಳವಾಗಿ ಸಂಪಾದಿಸಿದರೂ ನಿನ್ನ ಮನಸ್ಸಿಗೆ ಸಂತೃಪ್ತಿ ನೀಡವು. ಒಮ್ಮೆ ಗಳಿಸಿದ ಸಿರಿ ಸದಾ ನಿನ್ನದೇ ಆಗಿರಲಾರದು. ಇಂದು ನಿನ್ನದು, ನಾಳೆ ಅನ್ಯರದು. ಆದುದರಿಂದ ಅವುಗಳ ವ್ಯಾಮೋಹ ಬೇಡ.

" ವತ್ಸ, ದೇಹವೂ ಸುಚಿರವಲ್ಲ. ಅದು ಕಾಲ ಪ್ರವಾಹದಲ್ಲಿ ಮಿಂಚಿ ಮರೆಯಾಗುವ ವಸ್ತು. ಸದಾ ವಿಕಾರಿ. ರೋಗರುಜಿನಗಳೆಂಬ ಬಗೆ ಬಗೆಯ ಅಸು ತಾಪಗಳಿಂದ ಮುತ್ತಿ ಹೋಗಿದೆ. ಅದು ಹೇಯ ಪದಾರ್ಥಗಳ ಆಗರ. ನೂರು ಕಲುಷಗಳ ಭಾಂಡ. ಅದನ್ನು ನಂಬಬೇಡ. ಯಾವುದೇ ಕ್ಷಣದಲ್ಲಿ ನಿನ್ನನ್ನು ಬಿಟ್ಟು ಮಣ್ಣಿನಲ್ಲಿ ಕರಗಿ ಹೋಗಬಲ್ಲ ಆ ದೇಹದ ವ್ಯಾಮೋಹ ನಿನಗೇಕೆ? ನಿನ್ನನ್ನು ಜನ್ಮ, ಜರೆ, ಮರಣಗಳೆಂಬ ಭಾವ ಬಂಧನಗಳಿಂದ ಕಂಗೆಡಿಸುವ ಆ ಜಡ ತನುವಿನ ಆಸಕ್ತಿ ತರವಲ್ಲ.

"ಬಾಲಕ, ಜಡ ಭೌತ ವಿಷಯುಗಳಿಗಿಂತ ದೇಹವು ಸೂಕ್ಷ್ಮ. ದೇಹಕ್ಕಿಂತ ಜೀವನು ಬಹು ಸೂಕ್ಷ್ಮ. ದೇಹ ಮನ ಬುದ್ಧಿಗಳಲ್ಲೆಲ್ಲ ತುಂಬಿನಿಂದ ಅಹಂ ಕಾರವು ಜೀವನ ಆಶ್ರಯ ಸ್ಥಾನ. ಅಹಂ ಮಮ ಭಾವಗಳು ಜೀವನ ಎರಡು ಹಸ್ತಗಳು. ವಿಷಯ ಹಾಗು ಇಂದ್ರಿಯಗಳ ಸಂಗದಿಂದ ಹುಟ್ಟಿದ ಸಂಸ್ಕಾರಗಳೇ ಅವನ ಭೋಗಗಳು. ಅವನು ಕಿಂಚಿಜ್ಞ, ಕಿಂಚಿತ್ಕರ್ತ, ಹಾಗು ಆಕುಂಚನ ಭಾವಿ. ಜಡಾಜಡ ಸಮ್ಮಿಶ್ರಣದಿಂದ ತಲೆ ಎತ್ತಿದ ಅವನು ಸಂಕರ. ತನ್ನ ಅಜಡ ಅಂಶ ವನ್ನೇ ಮರೆತು ಉಪಾಧಿಗಳಲ್ಲಿ ತಲ್ಲೀನನಾದ ಅಜ್ಞ. ನಿಜವಾಗಿ ನೋಡಿದರೆ ಆ ಜೀವನು ನೀನಲ್ಲ. ನಿದ್ರೆಯಲ್ಲಿ ನೀನಿರುವಿ, ಆದರೆ ಅಹಂ ಮಮ ಭಾವಗಳಿಲ್ಲ. ಆ ಭಾವಗಳಿರಲು ನೀನು ಬೇಕು; ನೀನಿರಲು ಅವುಗಳ ಅವಶ್ಯಕತೆ ಇಲ್ಲ. ಅವುಗಳಿಗೆ ಹಾಗು ಜಾಗ್ರ್ರದಿ ಅವಸ್ಥೆಗಳಿಗೆ ಸಾಕ್ಷಿ ನೀನು. ನೀನು ಬರೀ ಚೇತನ! ಸರ್ವ ಸ್ವತಂತ್ರ! ಜಾಗ್ರ ಸ್ವಪ್ನಾದಿ ಸಕಲ ಅವಸ್ಥೆಗಳಲ್ಲಿ ಪ್ರಕಾಶಿಸುವ ಜ್ಞಾನಭಾನು ನೀನು. ಆದ್ದರಿಂದ ಸಂಕರವಾದ ಜೀವ ಮೋಹ ನಿನಗೇಕೆ ಬೇಕು?

"ಕುವರ, ಬಾಹ್ಯ ಮತ್ತು ಆಂತರಿಕ ಜಗತ್ತುಗಳನ್ನೆಲ್ಲ ಎದುರಿಟ್ಟು ನೋಡುವ ನೀನು ನಿರಂಜನ! ಪ್ರತ್ಯಗಾತ್ಮ! ಆ ಪ್ರತ್ಯಗಾತ್ಮನ ಭಾವನೆಯನ್ನೇ ತಾಳು! ಅದೇ ಮೋಕ್ಷ! ಜ್ಞಾನದ ಫಲ!"

ಇಂಥ ಅನುಪಮ ಬೋಧೆ ಪಡೆದ ಸಾಧಕ ಸಹಜವಾಗಿ ತ್ರಿವಿಧ ವ್ಯಾಮೋಹ ನೀಗುತ್ತಾನೆ. ಎಲ್ಲ ಚರಾಚರ ಜಗತ್ತನ್ನು ತನ್ನಲ್ಲಿ ಕಾಣುತ್ತಾನೆ; ತನ್ನನ್ನು ಪರಮಾತ್ಮನ ಸಾಕ್ಷಾತ್ ರೂಪಾಗಿ ಪರಿಭಾವಿಸುತ್ತಾನೆ.

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥೩೬॥**

**ಅರ್ಥ:-** ಸರ್ವೇಭ್ಯಃ ಪಾಪೇಭ್ಯಃ= ಸರ್ವ ಪಾಪಿಗಳಿಗಿಂತ ಪಾಪಕೃತ್ತಮಃ ಅಪಿ ಚೇತ್ ಅಸಿ =ಹೆಚ್ಚು ಪಾಪ ಮಾಡಿದವನಾಗಿ ನೀನಿರಬಹುದಾದರೂ ಸರ್ವಂ =ಸಕಲ ವೃಜಿನಂ = ಪಾಪವನ್ನು ಜ್ಞಾನ ಪ್ಲವೇನೈವ= ಜ್ಞಾನ ನೌಕೆಯಿಂದ ಸಂತರಿಷ್ಯಸಿ =ದಾಟುವಿ.

**ವಿವರಣೆ:- ಭಗವಂತ:-** "ಕುರುಸತ್ತಮ, ನೀನು ಅಸಂಖ್ಯ ಪಾಪಗಳನ್ನು

ಮಾಡಿರುವೆ ಎಂದೇ ತಿಳಿ; ನಿನ್ನ ಪಾಪವು ಮಹಾ ಸಾಗರದಷ್ಟಾದರೂ ಸರಿಯೇ. ಈ ಅಮಲ ಜ್ಞಾನ ನೌಕೆಯನ್ನು ಏರು. ನಿಶ್ಚಿಂತನಾಗಿ ಅದರಲ್ಲಿ ಕುಳಿತುಕೋ. ಅದು ನಿನ್ನನ್ನು ಆ ದುರಿತ ವಾರಿಧಿಯಿಂದ ಪಾರು ಮಾಡುವದು."

ನಾವು ಪಾಪಿಗಳು: ದೇವ ದರ್ಶನ ನಮಗೆಂತು ಸಾಧ್ಯ? —ಈ ಭಾವ ಜನರಲ್ಲಿದೆ. ನೀವು ಪಾಪಿಗಳು; ಹೀನರು; ಭವ ಬದ್ಧರು; ನಿಮಗೆ ಆತ್ಮಸೌಖ್ಯ ಎಂದಿಗೂ ಸಮನಿಸದು; ಆತ್ಮವಿದ್ಯೆ ದಕ್ಕದು.—ಹೀಗೆ ಬೋಧಕರೂ ಹೇಳುತ್ತಾರೆ. ಪಾಪದ ಹೆಸರಿನ ಮೇಲೆ ಅಜ್ಞ ಜನಾಂಗವನ್ನು ಧರ್ಮ ಗುರುಗಳು ತುಳಿಯುತ್ತಾರೆ; ಆ ಜನಾಂಗದ ಗಳಿಕೆಯನ್ನು ಯಥೇಚ್ಛೆಯಾಗಿ ದೋಚಿಕೊಳ್ಳುತ್ತಾರೆ. ಅವರಿಂದ ಮಾನ ಮರ್ಯಾದೆ ನಾಮ ಕೀರ್ತಿಯನ್ನು ಪಡೆಯುತ್ತಾರೆ. ಇಂಥ ಗುರುಗಳು ನಿಜವಾದ ಗುರುಗಳಲ್ಲ. ಸಮಾಜ ಶೋಷಕರು.

ಜಾಣ ಅಧ್ಯಾಪಕನು ಬಾಲಕನಿಗೆ "ನೀನು ಮರುಳ; ಬುದ್ಧಿಹೀನ. ನಿನಗೇನು ತಿಳಿದೀತು? ದನ ಕಾಯಲು ಮಾತ್ರ ಯೋಗ್ಯ." ಹೀಗೆಲ್ಲ ನುಡಿದು ಅಲ್ಲಗಳೆಯುವದಿಲ್ಲ. ಬದಲಾಗಿ, ಆ ಹುಡುಗನಿಗೆ ನಾಲ್ಕು ಪ್ರೋತ್ಸಾಹದ ಮಾತ ಹೇಳಿ, ಬಹು ಪ್ರೇಮ ತೋರಿ, ವಿಧ ವಿಧದಿಂದ ತಿಳಿವಂತೆ ಕಲಿಸುತ್ತಾನೆ. ಅದೇ ರೀತಿ ಮಹಾ ಗುರುಗಳು ಜನರನ್ನು ಜರೆಯದೆ ಜಾಣ ಉಪಾಯದಿಂದ ಕಲಿಸುತ್ತಾರೆ. ಉದಾಹರಣೆಗಾಗಿ—ವಾಲ್ಮೀಕಿ ಸಾವಿರಾರು ಜನರನ್ನು ಕೊಂದ ಪಾಪಿ; ಪಾಪ ಕೃತ್ತಮ! ನಾರದ ಆತನ ಪಾಪ ರಾಶಿಯನ್ನು ಕಡೆಗಣಿಸಿದ. ಅತೀ ಸ್ನೇಹದಿಂದ ನಾಲ್ಕು ಪವಿತ್ರ ನುಡಿಗಳನ್ನು ಹೇಳಿದ. ಆತ್ಮ ಜ್ಞಾನದ ಹಿರಿಮೆ ಅರುಹಿದ. ವಾಲ್ಮೀಕಿಯಲ್ಲಿ ಜ್ಞಾನ ಪಿಪಾಸೆ ಉಂಟಾಗುವಂತೆ ಯತ್ನಿಸಿದ. ಅದರ ಪರಿಣಾಮವೇನಾಯ್ತು? ಜ್ಞಾನ ನೌಕೆ—ಏರಿದ ಬೇಡ ಅದೇ ಜನ್ಮದಲ್ಲಿ ಪಾಪ ಸಾಗರ ದಾಂಟಿ ದೇವ-ದಡ ತಲುಪಿದ. ಮಹರ್ಷಿ ಎನಿಸಿದ! ನಮ್ಮ ಜನರು ಅಷ್ಟು ಪಾಪ ಮಾಡಿದವರೇ ಅಲ್ಲ. ಏನೋ ಸ್ವಲ್ಪ ಲಂಚ, ಕಳ್ಳ ವ್ಯಾಪಾರ, ವ್ಯಭಿಚಾರಗಳಲ್ಲಿ ಮನ ಸೋತವರು. ಯೋಗ್ಯವಾದ ಕರುಣಾಮಯಿ ಗುರು ದೊರೆತರೆ ಜ್ಞಾನ ಪ್ಲವವನ್ನು ಏರಿ ಶಾಂತಿ—ದಡ ಸೇರಬಲ್ಲರು. ಭಗವಂತನು. ಪ್ರಸ್ತುತ ಮಂತ್ರದಲ್ಲಿ ಹೇಳಿದ ಉಪದೇಶವನ್ನು ಉಪದೇಶಕರೆಲ್ಲ ಗ್ರಹಿಸಬೇಕು.

ಸಂಬಂಧ:— ಜ್ಞಾನ ನೌಕೆಯಿಂದ ಸಾಧಕನು ಪಾಪ ಸಾಗರವನ್ನು ದಾಟಿದನೇನೋ ಸರಿ; ಆದರೆ ಆ ಪಾಪ ಸಾಗರವು ಹಾಗೆಯೇ ಉಳಿಯುವದಲ್ಲ ಎಂದುದಾದರೆ, ಆ ಪಾಪ ಕೂಡ ನಷ್ಟವಾಗುವದೆಂದು ಮತ್ತೊಂದು ರೂಪಕದಿಂದ ಹೇಳಲಾಗುವದು.

ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ॥
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥೩೭॥

**ಭಾವ:-** ಹೇಗೆ ಪ್ರಜ್ವಲಿಸುವ ಅಗ್ನಿಯು ಕಟ್ಟಿಗೆಗಳನ್ನು ಬೂದಿ ಮಾಡುತ್ತಿದೆಯೋ ಹಾಗೆ,ಜ್ಞಾನರೂಪ ಅಗ್ನಿಯು ಸಮಸ್ತ ಕರ್ಮಗಳನ್ನು ಭಸ್ಮ ಮಾಡಿಬಿಡುತ್ತದೆ.

**ವಿವರಣೆ:- ಭಗವಂತ:-** ಭಾರತ, ಎರಡು ಕಟ್ಟಿಗೆಗಳ ಮಸೆತದಿಂದ ಅಗ್ನಿಯು ವ್ಯಕ್ತವಾಗಿ ಅರಣ್ಯವನ್ನೆಲ್ಲ ವ್ಯಾಪಿಸಿ ಭಸ್ಮ ಮಾಡುವಂತೆ, ಗುರು ಶಿಷ್ಯರ ಸಂವಾದ ರೂಪ ಮಥನದಿಂದ ಹೊರಹೊಮ್ಮಿದ ಚಿದಗ್ನಿಯು ಮನಸ್ಸಿನಲ್ಲಿ ಸಂಚಿತವಾದ ಸರ್ವ ಕರ್ಮಗಳನ್ನು ಹಾಗು ಅಹಂ-ಮಮ ಗ್ರಂಥಿಯನ್ನು ಪ್ರದಗ್ಧ ಗೊಳಿಸುತ್ತದೆ; ಆಗ ಆಗಾಮಿ ಕರ್ಮ ಕೂಡ ನಿಶ್ಶೇಷಗೊಳ್ಳುವದು. ಪ್ರಾರಬ್ಧವು ಮಾತ್ರ ಕೆಲ ಕಾಲ ಬಾಳಿ ಕಡೆಗೆ ಮರೆಯಾಗುವದು.

**ಸಂಬಂಧ:-** ಜ್ಞಾನದ ಶ್ರೇಷ್ಠತೆಯ ಬಣ್ಣನೆ ಮುಂದುವರೆದಿದೆ.

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೇ ।**
**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥೩೮॥**

**ಅರ್ಥ:-** ಇಹ= ಇಹ ಲೋಕದಲ್ಲಿ ಜ್ಞಾನೇನ ಸದೃಶಂ =ಜ್ಞಾನಕ್ಕೆ ಸಮವಾದ ಪವಿತ್ರಂ= ಪವಿತ್ರ ವಸ್ತು ನ ಹಿ ವಿದ್ಯತೇ= ಇರುವದಿಲ್ಲ. ಕಾಲೇನ= ಕಾಲಕ್ರಮದಲ್ಲಿ ಯೋಗ ಸಂಸಿದ್ಧಃ =ಯೋಗದಲ್ಲಿ ಸಿದ್ಧಿ ಹೊಂದಿದವನು, ಸ್ವಯಂ= ತಾನೇ ಆತ್ಮನಿ= ತನ್ನಲ್ಲಿ ತತ್= ಅದನ್ನು ವಿಂದತಿ=ಹೊಂದುತ್ತಾನೆ.

**ವಿವರಣೆ :-ಭಗವಂತ:-** ಧರ್ಮಸುಗ, ಆತ್ಮಜ್ಞಾನದಷ್ಟು ಹಿರಿದಾದ, ಅಮೌಲ್ಯ ಹಾಗು ಅಪ್ರತಿಮವಾದ ವಸ್ತು ಇಡೀ ವಿಶ್ವದಲ್ಲಿಯೇ ಇಲ್ಲ. ಅದು ಪವಿತ್ರ ವಸ್ತುಗಳಲ್ಲಿ ಪವಿತ್ರ! ಅದು ದುರ್ಗುಣಗಳೆಂಬ ಮದೋನ್ಮತ್ತ ಗಜಗಳ ಮರ್ದಿಸುವ ಅಂಕುಶ; ದುರಿತ ಕಾನನವನ್ನು ಕ್ಷಣಾರ್ಧದಲ್ಲಿ ಸುಟ್ಟುರುಹುವ ಅಗ್ನಿ; ಅಜ್ಞಾನ ತಿಮಿರ ನಾಶಕ ಸೂರ್ಯ! ಚಿಂತೆ, ಅನುತಾಪ, ಭ್ರಾಂತಿಗಳೆಂಬ ಮಾನಸಿಕ ಜ್ವರವನ್ನು ಶಮನ ಗೊಳಿಸುವ ಶೀತ ಜಲ! ಆದು "ಮಾನಸ ಕುಲ ಗಿರಿ ವಜ್ರ. ಸಾರ ಸುಖದ ಸುಧಾವಾರಿಧಿ. ಸುಕೃತದ ಮೇರು. ಮುಕ್ತಿಯ ಜನ್ಮ ಭೂಮಿ. ಚಾರು ಸಿದ್ಧಿಗಳ ಮಂದಾರ!"

**ಶ್ರದ್ಧಾವಾಂಲ್ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥೩೯॥**

**ಅರ್ಥ:-** ಶ್ರದ್ಧಾವಾನ್ =(ಗುರೂಪದಿಷ್ಟೇ ಅರ್ಥೇ ಆಸ್ತಿಕ್ಯ ಬುದ್ಧಿಃ ಶ್ರದ್ಧಾ) ಗುರು ವಚನದಲ್ಲಿ ಶ್ರದ್ಧೆಯುಳ್ಳ, ತತ್ಪರಃ =(ತದೇಕ ನಿಷ್ಠಃ)ಗುರು ದೇವರಲ್ಲಿ ತತ್ಪರತೆಯುಳ್ಳ, ಸಂಯತೇಂದ್ರಿಯಃ =ಜಿತೇಂದ್ರಿಯ ಸಾಧಕನು ಜ್ಞಾನಂ ಲಭತೇ =ಜ್ಞಾನವನ್ನು ಗಳಿಸುತ್ತಾನೆ. ಜ್ಞಾನಂ ಲಬ್ಧ್ವಾ =ಜ್ಞಾನಹೊಂದಿ, ಅಚಿರೇಣ- ಶೀಘ್ರವಾಗಿ ಪರಾಂ ಶಾಂತಿಂ=ಪರಮಶಾಂತಿಯನ್ನು ಅಧಿಗಚ್ಛತಿ= ಪಡೆಯುತ್ತಾನೆ.

**ವಿವರಣೆ:- ಆತ್ಮಜ್ಞಾನವನ್ನು ಗಳಿಸುವ ಉಪಾಯಗಳು:-** ಪತಂಜಲ ಋಷಿಗಳ ಅಭಿಪ್ರಾಯದಲ್ಲಿ "ಶ್ರದ್ಧಾವೀರ್ಯಸ್ಮೃತಿ ಸಮಾಧಿ

ಪ್ರಜ್ಞಾಪೂರ್ವಕಮಿತರೇಷಾಮ್" (೧-೨೦)

(೧) ಶ್ರದ್ಧಾ:– ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡ ಋಷಿಗಳಲ್ಲಿ, ಆ ಋಷಿವಚನಗಳಾದ ವೇದೋಪನಿಷದಾದಿಗಳಲ್ಲಿ ಹಾಗು ಋಷಿ ನಿರ್ದಿಷ್ಟ ದೇವ ಪಥದಲ್ಲಿ ಪೂರ್ಣ ನಂಬಿಗೆ ತಾಳಿರುವದು ಶ್ರದ್ಧೆ. ಶ್ರದ್ಧೆಯು ಸಿದ್ಧಿಗೆ ಹೇತು. ಪತ್ನಿ ಪುತ್ರರ ಮೇಲಿನ ಶ್ರದ್ಧೆಯಿಂದ ಪ್ರಪಂಚ ಚೆಂದ. ಪ್ರಜೆಗಳ ಮೇಲಿನ ಶ್ರದ್ಧೆಯಿಂದ ದೇಶ ಸುರಕ್ಷಿತ. ಹಾಗೆ ಸಾರ ಸಜ್ಜನರಲ್ಲಿಟ್ಟ ಶ್ರದ್ಧೆಯಿಂದ ದುಃಖದ ನಾಶ ನಿಶ್ಚಿತ. ಒಂದು ಕಡೆ ಅಪಾರ ಸಂಪದ, ಇನ್ನೊಂದು ಕಡೆ ದೇವ ಮೂರುತಿ ಗಳ ಇಟ್ಟು ಎರಡರಲ್ಲಿ ಒಂದನ್ನು ಆರಿಸಿಕೊಳ್ಳಲು ಹೇಳಿದರೆ ಸಂಪದವನ್ನು ಕಡೆಗಣಿಸಿ ದೇವ ಮೂರ್ತಿಯನ್ನೇ ವರಿಸುವಷ್ಟು ದೇವಶ್ರದ್ಧೆ ಗಟ್ಟಿಗೊಂಡರೆ ಅದು ದೇವದರ್ಶನಕ್ಕೆ ಕಾರಣ.

(೨) ವೀರ್ಯ:– ಅದಮ್ಯ ಕಾರ್ಯೋತ್ಸಾಹವೇ ವೀರ್ಯ. ವೇದ ವಾಕ್ಯ ಗಳು ತನ್ನ ಉದ್ಧಾರಕ್ಕಾಗಿ, ಗುರು ಸಂತರ ಉಪದೇಶ ತನ್ನ ಏಳ್ಗೆಗಾಗಿ ಎಂದು ಪರಿಭಾವಿಸಿ ಅವರು ನಿರ್ದೇಶಿಸಿದ ಪಥವಿಡಿದು ಗುರಿ ಮುಟ್ಟುವವರೆಗೂ ಸಾಗ ಬೇಕೆಂಬ ಮನೋಲ್ಲಾಸವೇ ವೀರ್ಯ.

(೩) ಸ್ಮೃತಿ:– ಮಹಾತ್ಮರ ನುಡಿ, ಆ ನುಡಿಯಲ್ಲಿ ವ್ಯಕ್ತವಾದ ಅರ್ಥ ಹಾಗು ಜೀವನದ ಉದ್ದೇಶ–ಇವು ಅಳಿಯದಂತೆ ಸ್ಮರಣದಲ್ಲಿ ಇಟ್ಟುಕೊಂಡಿರು ವದು ಸ್ಮೃತಿ. ಭೌತ ವಿಷಯಗಳು ನಮ್ಮ ಮನಸ್ಸಿನ ಮೇಲೆ ತಮ್ಮ ಮೋಹ ಪರದೆಯನ್ನು ಆವರಣಗೊಳಿಸದಂತೆ ಜಾಗ್ರತೆ ವಹಿಸುವದು ಸ್ಮೃತಿ.

(೪) ಸಮಾಧಿ:– ವಿಭಿನ್ನ ಚಿತ್ತವೃತ್ತಿಗಳನ್ನು ನಿರೋಧಮಾಡಿ, ಮನೋ ಪ್ರವಾಹವನ್ನು ಧ್ಯೇಯದತ್ತ ಅವ್ಯಾಹತವಾಗಿ ಪ್ರವಹಿಸುವಂತೆ ಮಾಡುವದು ಏಕಾಗ್ರತಾರೂಪ ಸಮಾಧಿ.

(೫) ಪ್ರಜ್ಞಾ:– ಅಂತರಂಗವನ್ನು ನಿಸ್ತರಂಗಗೊಳಿಸಿ, ಆ ಪ್ರಶಾಂತ ಚಿತ್ತ ಭೂಮಿಯಲ್ಲಿ ಆತ್ಮಪ್ರಜ್ಞೆಯನ್ನು ಪರಿಗ್ರಹಿಸುವದು ಪ್ರಜ್ಞೆ.

ಭಗವಂತನಾದ ಶ್ರೀ ಕೃಷ್ಣನು ಈ ಐದು ಉಪಾಯಗಳನ್ನು ಸಂಕ್ಷೇಪಿಸಿ ಮೂರೇ ಉಪಾಯಗಳನ್ನು ಹೇಳಿದ್ದಾನೆ.

(೧) ಶ್ರದ್ಧಾ:– ಆತ್ಮನ ನಿತ್ಯ ಹಾಗು ಪೂರ್ಣತೆಗಳಲ್ಲಿ ಆಸಕ್ತಿ ಭಾವ. (೨) ತತ್ಪರತೆ:- ಆತ್ಮಶ್ರದ್ಧೆಯ ಸುಸ್ಥಿರ ಪ್ರತಿಷ್ಠಾಪನೆ (೩) ಸಂಯತೇಂದ್ರಿಯ: ಇಂದ್ರಿಯ ಮನ ಬುದ್ಧಿಗಳನ್ನು ವಿಷಯಗಳಿಂದ ಸಂಯಮಗೊಳಿಸಿ ಆತ್ಮನಲ್ಲಿ ನೆಲೆಗೊಳಿಸುವಿಕೆ.

ಈ ಮೂರರ ಮೂಲಕ ಸಾಧಕನು ದೇವಜ್ಞಾನವನ್ನು ಪಡೆಯುತ್ತಾನೆ. ಆ ಜ್ಞಾನದಿಂದ ಅವಿದ್ಯೆಯು ಅಡಗಿ ಸಾಧಕನ ಹೃನ್ಮಂದಿರದಲ್ಲಿ ದೇವರವಿ ಉದಿ

**ಭಾವ:-** ಹೇಗೆ ಪ್ರಜ್ವಲಿಸುವ ಅಗ್ನಿಯು ಕಟ್ಟಿಗೆಗಳನ್ನು ಬೂದಿ ಮಾಡುತ್ತಿದೆಯೋ ಹಾಗೆ,ಜ್ಞಾನರೂಪ ಅಗ್ನಿಯು ಸಮಸ್ತ ಕರ್ಮಗಳನ್ನು ಭಸ್ಮ ಮಾಡಿಬಿಡುತ್ತದೆ.

**ವಿವರಣೆ:- ಭಗವಂತ:-** ಭಾರತ, ಎರಡು ಕಟ್ಟಿಗೆಗಳ ಮಸೆತದಿಂದ ಅಗ್ನಿಯು ವ್ಯಕ್ತವಾಗಿ ಅರಣ್ಯವನ್ನೆಲ್ಲ ವ್ಯಾಪಿಸಿ ಭಸ್ಮ ಮಾಡುವಂತೆ, ಗುರು ಶಿಷ್ಯರ ಸಂವಾದ ರೂಪ ಮಥನದಿಂದ ಹೊರಹೊಮ್ಮಿದ ಚಿದಗ್ನಿಯು ಮನಸ್ಸಿನಲ್ಲಿ ಸಂಚಿತವಾದ ಸರ್ವ ಕರ್ಮಗಳನ್ನು ಹಾಗು ಅಹಂ-ಮಮ ಗ್ರಂಥಿಯನ್ನು ಪ್ರದಗ್ಧ ಗೊಳಿಸುತ್ತದೆ; ಆಗ ಆಗಾಮಿ ಕರ್ಮ ಕೂಡ ನಿಶ್ಯೇಷಗೊಳ್ಳುವದು. ಪ್ರಾರಬ್ಧವು ಮಾತ್ರ ಕೆಲ ಕಾಲ ಬಾಳಿ ಕಡೆಗೆ ಮರೆಯಾಗುವದು.

**ಸಂಬಂಧ:-** ಜ್ಞಾನದ ಶ್ರೇಷ್ಠತೆಯ ಬಣ್ಣನೆ ಮುಂದುವರೆದಿದೆ.

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೇ ।**
**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥೩೮॥**

**ಅರ್ಥ:-** ಇಹ= ಇಹ ಲೋಕದಲ್ಲಿ ಜ್ಞಾನೇನ ಸದೃಶಂ =ಜ್ಞಾನಕ್ಕೆ ಸಮವಾದ ಪವಿತ್ರಂ= ಪವಿತ್ರ ವಸ್ತು ನ ಹಿ ವಿದ್ಯತೇ= ಇರುವದಿಲ್ಲ. ಕಾಲೇನ= ಕಾಲಕ್ರಮದಲ್ಲಿ ಯೋಗ ಸಂಸಿದ್ಧಃ =ಯೋಗದಲ್ಲಿ ಸಿದ್ಧಿ ಹೊಂದಿದವನು, ಸ್ವಯಂ= ತಾನೇ ಆತ್ಮನಿ= ತನ್ನಲ್ಲಿ ತತ್= ಅದನ್ನು ವಿಂದತಿ=ಹೊಂದುತ್ತಾನೆ.

**ವಿವರಣೆ :-ಭಗವಂತ:-** ಧರ್ಮಸುಗ, ಆತ್ಮಜ್ಞಾನದಷ್ಟು ಹಿರಿದಾದ, ಅಮೌಲ್ಯ ಹಾಗು ಅಪ್ರತಿಮವಾದ ವಸ್ತು ಇಡೀ ವಿಶ್ವದಲ್ಲಿಯೇ ಇಲ್ಲ. ಅದು ಪವಿತ್ರ ವಸ್ತುಗಳಲ್ಲಿ ಪವಿತ್ರ! ಅದು ದುರ್ಗುಣಗಳೆಂಬ ಮದೋನ್ಮತ್ತ ಗಜಗಳ ಮರ್ದಿಸುವ ಅಂಕುಶ; ದುರಿತ ಕಾನನವನ್ನು ಕ್ಷಣಾರ್ಧದಲ್ಲಿ ಸುಟ್ಟುರುಹುವ ಅಗ್ನಿ; ಅಜ್ಞಾನ ತಿಮಿರ ನಾಶಕ ಸೂರ್ಯ! ಚಿಂತೆ, ಅನುತಾಪ, ಭ್ರಾಂತಿಗಳೆಂಬ ಮಾನಸಿಕ ಜ್ವರವನ್ನು ಶಮನ ಗೊಳಿಸುವ ಶೀತ ಜಲ! ಅದು "ಮಾನಸ ಕುಲ ಗಿರಿ ವಜ್ರ. ಸಾರ ಸುಖದ ಸುಧಾವಾರಿಧಿ. ಸುಕೃತದ ಮೇರು. ಮುಕ್ತಿಯ ಜನ್ಮ ಭೂಮಿ. ಚಾರು ಸಿದ್ಧಿಗಳ ಮಂದಾರ!"

**ಶ್ರದ್ಧಾವಾಂಲ್ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥೩೯॥**

**ಅರ್ಥ:-** ಶ್ರದ್ಧಾವಾನ್ =(ಗುರೂಪದಿಷ್ಟೇ ಅರ್ಥೇ ಅಸ್ತಿಕ್ಯ ಬುದ್ಧಿಃ ಶ್ರದ್ಧಾ) ಗುರು ವಚನದಲ್ಲಿ ಶ್ರದ್ಧೆಯುಳ್ಳ ತತ್ಪರಃ =(ತದೇಕ ನಿಷ್ಠಃ)ಗುರು ದೇವರಲ್ಲಿ ತತ್ಪರತೆಯುಳ್ಳ, ಸಂಯತೇಂದ್ರಿಯಃ =ಜಿತೇಂದ್ರಿಯ ಸಾಧಕನು ಜ್ಞಾನಂ ಲಭತೇ =ಜ್ಞಾನವನ್ನು ಗಳಿಸುತ್ತಾನೆ. ಜ್ಞಾನಂ ಲಬ್ಧ್ವಾ =ಜ್ಞಾನಹೊಂದಿ, ಅಚಿರೇಣ- ಶೀಘ್ರವಾಗಿ ಪರಾಂ ಶಾಂತಿಂ=ಪರಮಶಾಂತಿಯನ್ನು ಅಧಿಗಚ್ಛತಿ= ಪಡೆಯುತ್ತಾನೆ.

**ವಿವರಣೆ:- ಆತ್ಮಜ್ಞಾನವನ್ನು ಗಳಿಸುವ ಉಪಾಯಗಳು:-** ಪತಂಜಲ ಋಷಿಗಳ ಅಭಿಪ್ರಾಯದಲ್ಲಿ ಇವು ಐದು: " ಶ್ರದ್ಧಾವೀರ್ಯ ಸ್ಮೃತಿ ಸಮಾಧಿ

ಪ್ರಜ್ಞಾಪೂರ್ವಕಮಿತರೇಷಾಮ್" (೧-೨೦)

(೧) ಶ್ರದ್ಧಾ:— ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡ ಋಷಿಗಳಲ್ಲಿ, ಆ ಋಷಿವಚನಗಳಾದ ವೇದೋಪನಿಷದಾದಿಗಳಲ್ಲಿ ಹಾಗು ಋಷಿ ನಿರ್ದಿಷ್ಟ ದೇವ ಪಥದಲ್ಲಿ ಪೂರ್ಣ ನಂಬಿಗೆ ತಾಳಿರುವದು ಶ್ರದ್ಧೆ. ಶ್ರದ್ಧೆಯು ಸಿದ್ಧಿಗೆ ಹೇತು. ಪತ್ನಿ ಪುತ್ರರ ಮೇಲಿನ ಶ್ರದ್ಧೆಯಿಂದ ಪ್ರಪಂಚ ಚೆಂದ. ಪ್ರಜೆಗಳ ಮೇಲಿನ ಶ್ರದ್ಧೆಯಿಂದ ದೇಶ ಸುರಕ್ಷಿತ. ಹಾಗೆ ಸಾರ ಸಜ್ಜನರಲ್ಲಿಟ್ಟ ಶ್ರದ್ಧೆಯಿಂದ ದುಃಖದ ನಾಶ ನಿಶ್ಚಿತ. ಒಂದು ಕಡೆ ಅಪಾರ ಸಂಪದ, ಇನ್ನೊಂದು ಕಡೆ ದೇವ ಮೂರುತಿ ಗಳ ಇಟ್ಟು ಎರಡರಲ್ಲಿ ಒಂದನ್ನು ಆರಿಸಿಕೊಳ್ಳಲು ಹೇಳಿದರೆ ಸಂಪದವನ್ನು ಕಡೆಗಣಿಸಿ ದೇವ ಮೂರ್ತಿಯನ್ನೇ ವರಿಸುವಷ್ಟು ದೇವಶ್ರದ್ಧೆ ಗಟ್ಟಿಗೊಂಡರೆ ಅದು ದೇವದರ್ಶನಕ್ಕೆ ಕಾರಣ.

(೨) ವೀರ್ಯ:— ಅದಮ್ಯ ಕಾರ್ಯೋತ್ಸಾಹವೇ ವೀರ್ಯ. ವೇದ ವಾಕ್ಯ ಗಳು ತನ್ನ ಉದ್ಧಾರಕ್ಕಾಗಿ, ಗುರು ಸಂತರ ಉಪದೇಶ ತನ್ನ ಏಳ್ಗೆಗಾಗಿ ಎಂದು ಪರಿಭಾವಿಸಿ ಅವರು ನಿರ್ದೇಶಿಸಿದ ಪಥವಿಡಿದು ಗುರಿ ಮುಟ್ಟುವವರೆಗೂ ಸಾಗ ಬೇಕೆಂಬ ಮನೋಲ್ಲಾಸವೇ ವೀರ್ಯ.

(೩) ಸ್ಮೃತಿ:— ಮಹಾತ್ಮರ ನುಡಿ, ಆ ನುಡಿಯಲ್ಲಿ ವ್ಯಕ್ತವಾದ ಅರ್ಥ ಹಾಗು ಜೀವನದ ಉದ್ದೇಶ—ಇವು ಅಳಿಯದಂತೆ ಸ್ಮರಣದಲ್ಲಿ ಇಟ್ಟುಕೊಂಡಿರು ವದು ಸ್ಮೃತಿ. ಭೌತ ವಿಷಯಗಳು ನಮ್ಮ ಮನಸ್ಸಿನ ಮೇಲೆ ತಮ್ಮ ಮೋಹ ಪರದೆಯನ್ನು ಆವರಣಗೊಳಿಸದಂತೆ ಜಾಗ್ರತೆ ವಹಿಸುವದು ಸ್ಮೃತಿ.

(೪) ಸಮಾಧಿ:— ವಿಭಿನ್ನ ಚಿತ್ತವೃತ್ತಿಗಳನ್ನು ನಿರೋಧಮಾಡಿ, ಮನೋ ಪ್ರವಾಹವನ್ನು ಧ್ಯೇಯದತ್ತ ಅವ್ಯಾಹತವಾಗಿ ಪ್ರವಹಿಸುವಂತೆ ಮಾಡುವದು ಏಕಾಗ್ರತಾರೂಪ ಸಮಾಧಿ.

(೫) ಪ್ರಜ್ಞಾ:— ಅಂತರಂಗವನ್ನು ನಿಸ್ತರಂಗಗೊಳಿಸಿ, ಆ ಪ್ರಶಾಂತ ಚಿತ್ತ ಭೂಮಿಯಲ್ಲಿ ಆತ್ಮಪ್ರಜ್ಞೆಯನ್ನು ಪರಿಗ್ರಹಿಸುವದು ಪ್ರಜ್ಞೆ.

ಭಗವಂತನಾದ ಶ್ರೀ ಕೃಷ್ಣನು ಈ ಐದು ಉಪಾಯಗಳನ್ನು ಸಂಕ್ಷೇಪಿಸಿ ಮೂರೇ ಉಪಾಯಗಳನ್ನು ಹೇಳಿದ್ದಾನೆ.

(೧) ಶ್ರದ್ಧಾ:— ಆತ್ಮನ ನಿತ್ಯ ಹಾಗು ಪೂರ್ಣತೆಗಳಲ್ಲಿ ಆಸಕ್ತಿ ಭಾವ. (೨) ತತ್ಪರತೆ:- ಆತ್ಮಶ್ರದ್ಧೆಯ ಸುಸ್ಥಿರ ಪ್ರತಿಷ್ಠಾಪನೆ (೩) ಸಂಯತೇಂದ್ರಿಯ: ಇಂದ್ರಿಯ ಮನ ಬುದ್ಧಿಗಳನ್ನು ವಿಷಯಗಳಿಂದ ಸಂಯಮಗೊಳಿಸಿ ಆತ್ಮನಲ್ಲಿ ನೆಲೆಗೊಳಿಸುವಿಕೆ.

ಈ ಮೂರರ ಮೂಲಕ ಸಾಧಕನು ದೇವಜ್ಞಾನವನ್ನು ಪಡೆಯುತ್ತಾನೆ. ಆ ಜ್ಞಾನದಿಂದ ಅವಿದ್ಯೆಯು ಅಡಗಿ ಸಾಧಕನ ಹೃನ್ಮಂದಿರದಲ್ಲಿ ದೇವರವಿ ಉದಿ

ಸುತ್ತಾನೆ. ಆಗ ಸಾಧಕನು ಅಖಂಡ ಶಾಂತಿಯನ್ನು ಹೊಂದುತ್ತಾನೆ.

**ಭಗವಂತ:**– "ಅರ್ಜುನ, ನೀನೊಂದು ಇದೀಗ ಬೆಳೆದ ಸಸಿ. ವಿಷಯುಗಳೆಂಬ ಚಂಡ ಮಾರುತ ಹಾಗು ಆಸೆಯೆಂಬ ದಾವಾನಲ ನಿನ್ನನ್ನು ಯಾವುದೇ ಕ್ಷಣ ನಾಶಗೊಳಿಸಬಲ್ಲವು. ಆದುದರಿಂದ, ನನ್ನಲ್ಲಿ ಪೂರ್ಣ ನಂಬಿಗೆ ತಾಳು; ನಿನ್ನ ಮನದ ತುಂಬ ನನ್ನ ಮೂರ್ತಿ ಹಾಗು ಉಪದೇಶ ನೆಲೆಸಲಿ. ಆ ವಿಷಯುಗಳತ್ತ ಸುಳಿಯದಂತೆ ನಿನ್ನ ಕರಣಗಳನ್ನು ನಿಗ್ರಹಿಸು. ಇದೋ, ನನ್ನನ್ನೇ ಅವಲಂಬಿಸಿಬಿಡು. ನನ್ನ ಕರುಣೆ ಕೃಪೆ ನಿನ್ನನ್ನು ಕಾಪಾಡಿಯೇ ಕಾಪಾಡುವದು. ಕೊನೆಗೆ ಪರಮ ಶಾಂತಿಯು ನಿನ್ನ ಕೈವಶವಾಗುವದು."

**ಸಂದೇಹ:**– ಇದಕ್ಕೂ ಮುಂಚೆ ಪ್ರಣಿಪಾತ ಪರಿಪ್ರಶ್ನೆ ಹಾಗು ಸೇವೆಗಳಿಂದ ಜ್ಞಾನಲಾಭ ಎಂದು ಹೇಳಿದ ಭಗವಂತನು ಈಗ ಶ್ರದ್ಧೆ ತತ್ಪರತೆ ಮತ್ತು ಸಂಯಮಗಳಿಂದ ಆತ್ಮಜ್ಞಾನ ಸಿದ್ಧಿ ಎಂದು ಹೇಳುವ ಉದ್ದೇಶವೇನು?

**ಸಮಾಧಾನ:**-ಪ್ರಣಿಪಾತ,ಪರಿಪ್ರಶ್ನೆ ಹಾಗು ಸೇವೆಗಳ ಹಿಂದೆ ಒಮ್ಮೊಮ್ಮೆ ಕ್ಷುದ್ರ ವಿಷಯ ಪ್ರಾಪ್ತಿಯ ಉದ್ದೇಶವಿರುವ ಸಂಭವವೂ ಇದೆ. ಅನೇಕ ಸಲ, ಕಾರ್ಯಸಾಧನೆಗಾಗಿ ಜನ ನಮಿಸುತ್ತಾರೆ, ಸೇವೆ ಮಾಡುತ್ತಾರೆ ಹಾಗು ಕುಶಲ ಮಾತನಾಡುತ್ತಾರೆ. ಹೀಗಾಗಬಾರದೆಂದೇ ಶ್ರದ್ಧೆ, ತತ್ಪರತೆ ಮತ್ತು ಸಂಯಮ ಉಪಾಯಗಳನ್ನಿಲ್ಲಿ ಹೇಳಲಾಗಿದೆ.

**ಸಂಬಂಧ:**- ಜ್ಞಾನಕ್ಕೆ ಅನಧಿಕಾರಿಗಳು ಯಾರು?

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥೪೦॥**

**ಭಾವ:**- ಜ್ಞಾನವಿಲ್ಲದವನು, ಶ್ರದ್ಧೆ ಇಲ್ಲದವನು, ಮತ್ತು ಸಂಶಯ ಚಿತ್ತದವನು ನಾಶವಾಗುತ್ತಾನೆ. ಸಂಶಯ ಚಿತ್ತದವನಿಗೆ ಈ ಲೋಕವೂ ಇಲ್ಲ; ಪರಲೋಕವೂ ಇಲ್ಲ. (ಯಾವ ಬಗೆಯ) ಸುಖವೂ ಇಲ್ಲ.

**ವಿವರಣೆ:**- **ಭಗವಂತ:**– "ಪಾರ್ಥ, ಪ್ರಣಿಪಾತ ಪರಿಪ್ರಶ್ನೆ ಮತ್ತು ಸೇವೆಗಳು ಆತ್ಮವಿದ್ಯೆಗೆ ಉಪಸಾಧನ; ಶ್ರದ್ಧೆ ನಿಷ್ಠೆ ಮತ್ತು ನಿಗ್ರಹಗಳು ಪ್ರಧಾನ ಸಾಧನ. ಯಾರಲ್ಲಿ ವಿನಯ, ಅರಿಯಬೇಕೆಂಬ ಕುತೂಹಲ, ಸೇವಾಭಾವ, ಶ್ರದ್ಧೆ, ನಿಷ್ಠೆ ಮತ್ತು ಮನೋನಿಗ್ರಹಗಳು ಇಲ್ಲವೋ ಅಂಥ ಸಂಶಯಾತ್ಮನು ನಾಶವಾಗುತ್ತಾನೆ; ಅಂದರೆ ಅವನಿಗೆ ಇಹದಲ್ಲೂ ಸುಖವಿಲ್ಲ, ಪರದಲ್ಲೂ ನೆಮ್ಮದಿಯಿಲ್ಲ. ಏಕೆಂದರೆ ಕಲುಷಿತ ಹೃದಯದ ಅವನಲ್ಲಿ ಜ್ಞಾನಾವತರಣ ಆಗದು."

(೦) **ಅಜ್ಞ:**– ಈ ಶಬ್ದಕ್ಕೆ ಎರಡರ್ಥ (ಅ) ವಿವೇಚನಾ ಶಕ್ತಿ ಹೀನತಾ (ಬ) ಭಾವಶೂನ್ಯತಾ. ಗುರುವು ವಿಶಿಷ್ಟಪದ ಪ್ರಯೋಗ, ವಾಕ್ಯ ಪ್ರಯೋಗ, ಪ್ರಮಾಣ ಹಾಗು ದೃಷ್ಟಾಂತಗಳಿಂದ ನಿಷ್ಕಲಂಕ ಆತ್ಮಸ್ವರೂಪವನ್ನು ಬೋಧಿ

ಸುತ್ತಾನೆ. ತಿಳಿ ತಿಳಿಯಾದ ಭಾಷೆಯಲ್ಲಿ ಆತ್ಮನನ್ನು ಚಿತ್ರಿಸುತ್ತಾನೆ. ಆದರೂ ಗುರುವಿನ ಬೋಧೆಯನ್ನು ಯಥಾವತ್ತಾಗಿ ಗ್ರಹಿಸುವ ಶಕ್ತಿಯಿಲ್ಲದಿರುವದು ವಿವೇಚನಾ ಶಕ್ತಿ ವಿಹೀನತೆ. ಕೇಳುವದು ಹಗುರಲ್ಲ. ಗುರುವು ಉಪದೇಶಿಸುತ್ತಿರುವಾಗ ಭಾವ ತುಂಬಿ ಶ್ರವಣ ಮಾಡಬೇಕು. ಏಕಾಗ್ರತೆ ಹಾಗು ಕುತೂಹಲ, ಪ್ರಸನ್ನತೆ ಹಾಗು ಉತ್ಸಾಹಗಳಿಂದ ಆಲಿಸಬೇಕು, ಅದು ಸಾಧ್ಯವಾಗದಿದ್ದರೆ ಭಾವಶೂನ್ಯತೆ ಎನಿಸುತ್ತದೆ. ಇವೆರಡು ದೋಷಗಳಿಂದ ಕೂಡಿದವನು ಅಜ್ಞ.

(೨) ಅಶ್ರದ್ಧ:- ಋಷಿ ಮುನಿ ಹಾಗು ಗುರುಗಳೇನು ಕೈಲಾಸದಿಂದ ಇಳಿದು ಬಂದವರಲ್ಲ. ನಮ್ಮಂತೆ ಹುಟ್ಟಿದವರು ನಮಗಿರುವಂತೆ ಅವರಿಗೂ ದೇಹವಿದೆ, ಇಂದ್ರಿಯಗಳಿವೆ, ಮನಸ್ಸಿದೆ. ನಮ್ಮಂತೆಯೇ ವ್ಯವಹರಿಸುತ್ತಾರೆ. ಪ್ರಪಂಚ ಮಾಡುತ್ತಾರೆ. ಹೀಗಿರುವಾಗ ಅವರಿಗೇಕೆ ಅಷ್ಟು ಮಹತ್ವ ಕೊಡಬೇಕು? ಅವರ ನುಡಿಗಳಾದ ವೇದಾದಿಗಳಿಗಾದರು ಪ್ರಾಮಾಣ್ಯತೆ ಹೇಗೆ ಬಂದೀತು? ಹೀಗೆ ಗುರು, ವೇದಗಳನ್ನು ಜರೆಯುವವರು ಅಶ್ರದ್ಧರು.

(೩) ಸಂಶಯಾತ್ಮ:- ಗುರು, ವೇದ ಮತ್ತು ದೇವನ ಅಸ್ತಿತ್ವಗಳಲ್ಲಿ ಸಂದೇಹ ವ್ಯಕ್ತ ಮಾಡುವವನು ಸಂಶಯಾತ್ಮ. ವೇದ ಸೂಚಿತ ಪಥ ಹಿಡಿದು ಸಾಗಿದರೆ ಪ್ರಪಂಚವು ಹಾಳಾದೀತಲ್ಲ, ಗಳಿಸಿದ ಸಂಪದವು ಕೈ ಬಿಟ್ಟೀತಲ್ಲ: ಎಂಬ ಭಯ ಅವನಿಗಿದೆ. ಅವನಿಗೆ ಸ್ವರ್ಗ ನರಕಗಳಲ್ಲಿ ಪಾಪ ಪುಣ್ಯಗಳಲ್ಲಿ ನಂಬಿಗೆ ಇಲ್ಲ. ತಾನು ವಿಶ್ವಾತ್ಮನ ಅಂಶ ಎಂಬ ಮಾತನ್ನು ಅವನೆಂದೂ ಒಪ್ಪನು. ಏಕೆಂದರೆ ಅಪ್ರತ್ಯಕ್ಷವಾದ ದೇವನ ಇರುವಿಕೆಯಲ್ಲಿಯೇ ಅವನು ಸಂದೇಹ ತಾಳಿದ್ದಾನೆ.

ಅಜ್ಞಾನ ಅಶ್ರದ್ಧೆ ಎರಡೇ ದೋಷವುಳ್ಳವರು ಇಂದಿಲ್ಲ ನಾಳೆ ಸುಧಾರಿಸುವದು ಶಕ್ಯ. ಸಂಶಯ ದೋಷವೂ ಅವುಗಳೊಂದಿಗೆ ಬೆರೆತರೆ ಮಾತ್ರ ಆ ವ್ಯಕ್ತಿ ಶಾಂತಿಪಥಭ್ರಷ್ಟನಾಗುತ್ತಾನೆ.

ಸಂಬಂಧ:- ಮುಂದಿನ ಎರಡು ಮಂತ್ರಗಳಲ್ಲಿ ಉಪಸಂಹಾರಪರ ಉಪದೇಶವಿದೆ.

**ಯೋಗಸಂನ್ಯಸ್ತ ಕರ್ಮಾಣಂ ಜ್ಞಾನಸಂಛಿನ್ನ ಸಂಶಯಮ್ ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥೪೧॥**

ಅರ್ಥ:- ಧನಂಜಯ = ಅರ್ಜುನ, ಯೋಗ ಸನ್ನಸ್ತಕರ್ಮಾಣಂ = (ಯೋಗೇನ ಸಮರ್ಪಿತಾನಿ ಕರ್ಮಾಣಿ ಯೇನ ಸಃ, ತಂ) ಪರಮೇಶ್ವರ ಆರಾಧನ ರೂಪ ಯೋಗದಿಂದ ಸರ್ವಕರ್ಮಗಳನ್ನು ಸಮರ್ಪಿಸಿದವನೂ, ಜ್ಞಾನ ಸಂಛಿನ್ನ ಸಂಶಯಂ =(ಜ್ಞಾನೇನ ಸಂಛಿನ್ನಃ ಸಂಶಯಃ ಯಸ್ಯ ಸಃ, ತಂ) ಅಕರ್ತಾರೂಪ ಆತ್ಮಜ್ಞಾನದ ಮೂಲಕ ಸಂಶಯಗಳನ್ನು ಕಳೆದುಕೊಂಡವನೂ, ಆತ್ಮವಂತಂ = (ಅಪ್ರಮಾದವಂತಂ) ಪ್ರಮಾದರಹಿತ ಜ್ಞಾನಿಯೂ (ಆದ ಪುರುಷನನ್ನು) ಕರ್ಮಾಣಿ = ಕರ್ಮಗಳು ನ ನಿಬಧ್ನಂತಿ = ಬಂಧಿಸವು.

ವಿವರಣೆ:- ಭಗವಂತ:- "ಧನಂಜಯ, ನಿಷ್ಕಾಮ ಕರ್ಮಯೋಗ ಹಾಗು

ಆತ್ಮಜ್ಞಾನಯೋಗ ಎರಡನ್ನು ವಿವರಿಸಿದೆ. ನಿಷ್ಕಾಮ ಕರ್ಮಯೋಗದಿಂದ ಕರ್ಮ ಬಂಧನದ ನಾಶ. ಜ್ಞಾನ ಯೋಗದಿಂದ ಸರ್ವ ಸಂಶಯಗಳ ನಾಶ. ಎರಡನ್ನೂ ಸಾಧಿಸಿದ ಪುರುಷನು ಅಪ್ರಮತ್ತ. ಆಲಸ್ಯ ಪ್ರಮಾದಾದಿ ದೋಷ ರಹಿತ ಜ್ಞಾನಿ! ಅವನಿಗೆ ದೇವ–ಸಾಕ್ಷಾತ್ಕಾರ ಸಮನಿಸುತ್ತದೆ."

೧) ಹೃದಯ ಶುದ್ಧಿಕರ ಕರ್ಮಯೋಗ, ಆತ್ಮ ಸಾಕ್ಷಾತ್ಕಾರದ ಪ್ರತ್ಯಕ್ಷ ಉಪಾಯವಾದ ಜ್ಞಾನಯೋಗ–ಇವೆರಡು ಸಾಧನೆಯ ಎಡಗೈ ಬಲಗೈ! ಪಕ್ಷಿಯ ಪಕ್ಕಗಳಂತೆ ಸಮ ಸಮ. ಇವುಗಳ ಬಗ್ಗೆ ಪ್ರಸ್ತುತ ಅಧ್ಯಾಯದ ತುಂಬ ವಿವರಿಸಲಾಯಿತು. ಈಗ ಸಿಂಹಾವಲೋಕನ.

ಅ) ಕರ್ಮಯೋಗ:- ಫಲದ ಅಪೇಕ್ಷೆ ಇಲ್ಲದೆ ದೇಹ ಇಂದ್ರಿಯ ಮನ ಬುದ್ಧಿಗಳಿಂದ ದೇವ ಪ್ರಿತ್ಯರ್ಥ ಕರ್ಮ ನಿರ್ವಹಿಸುವದು ಕರ್ಮಯೋಗ. ಆಶೆ ಹಿಡಿದು ಕರ್ಮ ಮಾಡುವವ ಜನ್ಮ ಮರಣದ ಚಕ್ರಕ್ಕೆ ಸಿಲುಕುತ್ತಾನೆ; ಒಂದು ಚಣದ ವಿಶ್ರಾಮವಿಲ್ಲದೆ ಬಿರುಗಾಳಿಗೆ ಸಿಕ್ಕ ತರಗೆಲೆಯಂತೆ ಪರಿತಪಿಸುತ್ತಾನೆ. ಅನಾಸಕ್ತಿ ಕರ್ಮದಿಂದ ಈ ಪರಿತಾಪ ನಿಲ್ಲುವದು. ಏಕೆಂದರೆ ಆಸಕ್ತಕರ್ಮದ ಫಲವು ದುರ್ಗ್ಗಾಣಿಯಾದರೆ, ಅನಾಸಕ್ತ ಕರ್ಮದ ಫಲವು ಬೆಲೆ ಕಟ್ಟಲು ಬಾರದಷ್ಟು ಬೆಲೆಬಾಳುವ ಚಿತ್ತಶುದ್ಧಿ! ಅಂತಶ್ಶಾಂತಿ!!

ಕರ್ಮಯೋಗದಿಂದ ವ್ಯಕ್ತಿಗಷ್ಟೇ ಅಲ್ಲ, ಸಮಾಜಕ್ಕೂ ಹಿತ: ದೇಶಕ್ಕೂ ಹಿತ. ರಾಷ್ಟ್ರದ ಹಿರಿಯರು ತಮ್ಮ ವೈಯಕ್ತಿಕ ಸಂಗ್ರಹವನ್ನು ದೇಶಕ್ಕೆ ಅರ್ಪಿಸಿ ದೇಶಸೇವಕರಾಗಿ ಬಾಳಬೇಕು, ಆಳಬೇಕು. " ತೈರ್ದತ್ತಾನಪ್ರದಾಯೇಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ " ಪರಮಾತ್ಮನಿಂದ ದೊರೆತ ದ್ರವ್ಯ–ಧವಸಗಳನ್ನು ತಿರುಗಿ ದೇಶಕ್ಕೆ ನೀಡದೆ ತಾನೇ ತಿನ್ನುವವನು ಕಳ್ಳ-ಎಂಬ ಗೀತಾ ಆದೇಶವನ್ನೇ ಮುಂದು ಮಾಡಿ ಆರ್ಥಿಕ ಸಮತೆಯನ್ನು ಕಡ್ಡಾಯವಾಗಿ ಜಾರಿಗೆ ತರಲು ಯತ್ನಿಸಬೇಕು. ಹಾಗೆ ಮಾಡಿದರೆಯೇ ಪೂರ್ಣ ಪ್ರಯೋಜನಕಾರಿ.

ನಾನು ದೇವರ ಸೇವಕ; ಜಗತ್ತು ದೇವಸಿರಿ. ಈ ಭಾವನೆ ಸಾಮಾನ್ಯ ಪ್ರಜೆಯಿಂದ ರಾಷ್ಟ್ರಾಧ್ಯಕ್ಷನವರೆಗಿರುವ ಪ್ರತಿ ನಾಗರಿಕನಿಗೂ ಬರುವದು ಅವಶ್ಯ. ಈ ಭಾವದಿಂದಲೇ ಸೇವೆ ಮಾಡಬೇಕು. ಚಿಕ್ಕಾಸಿನ ಪ್ರತಿಫಲವನ್ನು ಬೇಡಲಾಗದು. ಹೀಗೆ ಅನಾಸಕ್ತ ಕರ್ಮಮಾಡಿದರೆ ಇಂದು ರಾಷ್ಟ್ರವನ್ನೇ ಅಲುಗಿಸಿದ ಬಡತನ ಮುಂತಾದ ಸಮಸ್ಯೆಗಳು ತಮಷ್ಟಕ್ಕೆ ತಾವೆ ಬಯಲಾಗುವವು. ರಾಷ್ಟ್ರದಲ್ಲಿ ಸಂತೋಷ ನೆಲೆಸುವದು.

ನಿಷ್ಕಾಮ ಕರ್ಮಯೋಗವು ಎಲ್ಲರಿಗಿಂತ ನೇತಾರರಿಗೆಯೇ ಬಹು ಅಗತ್ಯ. ಎಂದೇ ಭಗವಂತನು ಅದನ್ನು ಸೂರ್ಯನಿಗೆ ಹೇಳಿದ; ಉಳಿದ ರಾಜರಿಗೆ ನಂತರ

ವಿವರಿಸಲ್ಪಟ್ಟಿತು. ಕರ್ಮವಿದ್ಯೆಯನ್ನು ಬುದ್ಧಿವಂತರು, ಸಮರ್ಥ ಆಡಳಿತಗಾರರು ಹಾಗು ರಾಷ್ಟ್ರನಾಯಕರು ಆಲಿಸಬೇಕು. ಅವರು ಆ ಯೋಗಕ್ಕೆ ಮನ ಒಲಿಸಿದರೆ ದೇಶಕ್ಕೆಯೇ ಲಾಭ. ದುರ್ದೈವವೆಂದರೆ, ಇಂದಿನ ಕಾಲದಲ್ಲಿ ಆ ಮುಂದಾಳು ಜನ ಉಪದೇಶದಿಂದ ಪರಾವೃತ್ತರು. ಸಾಮಾನ್ಯ ಬಡಜನ ಮಾತ್ರ ಕೇಳುತ್ತಾರೆ. ಅವರಿಂದ ಎಷ್ಟು ಲಾಭವಾದೀತು ?

ಗುರುಗಳ ಕರ್ತವ್ಯ ಬಹುದೊಡ್ಡದು. ದೇವನ ದೂತರಾದ ಅವರು ನಿರ್ಭಯ ಹಾಗು ನಿಸ್ಪೃಹರಾಗಿ ಹಿರಿಯ ಆಡಳಿತಗಾರರಿಗೆ ದೇವ ಸಂದೇಶ ತಲುಪಿಸಬೇಕು. ಅದನ್ನು ಬಿಟ್ಟು ತಾವೇ ಧರ್ಮಪಥ ತೊರೆದರೆ, ಧನ ಭೂಮಿ ಮಾನ ಕೀರ್ತಿಗಳಿಗೆ ಮನಸೋತರೆ ದೇಶಹಿತವು ಅದು ಹೇಗೆ ಸಾಧಿಸೀತು?

ದೊಡ್ಡವರು, ಮೊದಲು, ಪರಿವರ್ತನ ಹೊಂದಲಿ. ನಿಷ್ಕಾಮ ಕರ್ಮಶೀಲರಾಗಲಿ. ಆಗ ಜನರು ತಮ್ಮಿಂದ ತಾವೇ ಧರ್ಮ ಮಾರ್ಗದಲ್ಲಿ ನಡೆಯುತ್ತಾರೆ ಕರ್ಮಯೋಗಿಗಳಾಗುತ್ತಾರೆ. ಪರಸ್ಪರ ದ್ವೇಷ ವಿಷಮತೆಗಳು ಅಳಿದು ಜಾಗತಿಕ ಬಂಧುತ್ವ ನೆಲೆಗೊಳ್ಳುತ್ತದೆ. ಬೆರಳುಗಳು ಹಿರಿದು ಕಿರಿದಿದ್ದರೂ ತುತ್ತ ಬಾಯಿಗಿಡುವಾಗ ಎಲ್ಲವೂ ಸಮನಾಗುವದಿಲ್ಲವೆ? ಹಾಗೆ ಜನರ ವಿಚಾರ, ಶಕ್ತಿ ಹಾಗು ಬುದ್ಧಿಗಳು ಭಿನ್ನ ಭಿನ್ನವಿದ್ದರೂ ಕರ್ಮ ಯೋಗವು ಅವರ ಭಾವಗಳನ್ನು ಒಂದುಗೂಡಿಸುವದು! ವೈಶ್ವಿಕ ಸೌಖ್ಯಕ್ಕೆ ಎಡೆ ಮಾಡಿ ಕೊಡುವದು.

ಬ) ಜ್ಞಾನಯೋಗ:- ದೇಹ ಇಂದ್ರಿಯ ಮನ ಬುದ್ಧಿ ಅಹಂಕಾರಗಳು ಪ್ರಾಕೃತಿಕ; ಜಡ; ಕ್ಷಣಿಕ. ಈ ಎಲ್ಲ ತತ್ತ್ವಗಳನ್ನು ಪರಮ ಸಾಕ್ಷಿಯಾಗಿ ಪ್ರಕಾಶಿಸುವ ಆತ್ಮನು ಅಜಡ ಹಾಗು ನಿತ್ಯ. ಅವನಿಗೆ ಜನ್ಮ ಮರಣವಿಲ್ಲ, ವಿಕಾರ ವಿಪರ್ಯಾಸಗಳಿಲ್ಲ. ಅವನು ಅಖಂಡ ಅರಿವಿನ ಸಾಗರ! ಅವನೇ ನಾನು ಎಂಬ ತಿಳಿವೇ ಜ್ಞಾನಯೋಗ!

ಕರ್ಮಯೋಗವು ಜ್ಞಾನಯೋಗದ ಪೂರ್ವಭೂಮಿಕೆ. ಜ್ಞಾನಯೋಗವು ಕರ್ಮಯೋಗದ ಫಲ. ಎರಡೂ ಯೋಗಗಳನ್ನು ಅಂಗವಿಸಿದ ಮಹಾತ್ಮನು ಚಿರಂತನ ಶಾಂತಿ ಪಡೆಯುತ್ತಾನೆ.

**ತಸ್ಮಾದ ಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥೪೨॥**

ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಜ್ಞಾನಯೋಗೋ ನಾಮ ಚತುರ್ಥೋಽಧ್ಯಾಯಃ

**ಭಾವ:**— ಆದುದರಿಂದ ಅಜ್ಞಾನ ಜನ್ಯವಾದ, ಮನೋಗತವಾದ ಆತ್ಮ ವಿಷಯಕವಾದ ಈ ಸಂಶಯವನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸಿ ಯೋಗವನ್ನು ಅನುಷ್ಠಾನ ಮಾಡು ಏಳು.

**ವಿವರಣೆ:**— ಭಗವಂತ:— ಧನಂಜಯ, ನಿಜವಾಗಿಯೂ ಆತ್ಮ ಅಮರ-

ನೀನಾಗಲಿ, ಈ ರಾಜರುಗಳಾಗಲಿ, ಆ ಪ್ರಜೆಗಳಾಗಲಿ ಪಾರ್ಥಿವ ದೇಹ ತೊರೆಯುವರೇ ವಿನಃ ಸಾಯುವದಿಲ್ಲ. ಎಲ್ಲ ದೇಹಗಳಲ್ಲಿ ಹಾಸು ಹೊಕ್ಕಾಗಿ ನಿಂತ ಆತ್ಮವಸ್ತುವು ಅಚ್ಛೇದ್ಯ ಅದಾಹ್ಯ ಅಕ್ಲೇದ್ಯ ಅಶೋಷ್ಯ! ಅದನ್ನು ಕೊಲ್ಲಬರದು! ಕಾಲ ಪುರುಷನನ್ನು ಮೀರಿದ ಮಹಾನ್ ಸತ್ಯ ತತ್ತ್ವವದು. ಅಂಥ ಆತ್ಮನ ದಿವ್ಯ ಅಸ್ತಿತ್ವದಲ್ಲಿ ನೀನು ಸಂದೇಹ ಗೊಂಡಿರುವೆಯಷ್ಟೆ? ನಿನ್ನ ಮಲಿನ ಮನದಲ್ಲಿ ತಲೆದೋರಿದ ಈ ಸಂದೇಹವು ಅಜ್ಞಾನ ಜನ್ಯ. ನಾನು ಉಪದೇಶಿಸಿದ ಜ್ಞಾನ ಖಡ್ಗದಿಂದ ಈ ಸಂದೇಹವನ್ನು ಛೇದಿಸು. ನಿಷ್ಕಾಮ ಕರ್ಮಗಳ ಅನುಷ್ಠಾನಿಸು. ಏಳು, ದೇವರಿಗಾಗಿ ಜೀವನವೆಂಬ ಹೋರಾಟ ನಡೆಸು; ಅನಾತ್ಮ ಮೋಹವನ್ನು ಸದೆ ಬಡೆಯುವವರೆಗೆ ಕರ್ಮ ನಿಲ್ಲಿಸಬೇಡ."

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ನಾಲ್ಕನೆಯ ಬಿಂದುವು.

# ಐದನೆಯ ಅಧ್ಯಾಯ

## ಕರ್ಮಸನ್ಯಾಸಯೋಗ

### ಅರ್ಜುನ ಉವಾಚ

ಸನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಂ ॥೧॥

**ಅರ್ಥ:**- ಕೃಷ್ಣ (ಕೃಷ್=ಆಕರ್ಷಿಸು. -ಣ=ಆನಂದ ವಾಚಕ, ಪರಮಾತ್ಮನು ಎಲ್ಲರನ್ನು ತನ್ನತ್ತ ಆಕರ್ಷಿಸುತ್ತಾನೆ, ಅವನು ಆನಂದ ರೂಪ ಆದುದರಿಂದ ಅವನು ಕೃಷ್ಣ) ಕೃಷ್ಣನೆ, ಕರ್ಮಣಾಂ= (ಒಮ್ಮೆ) ಕರ್ಮಗಳ ಸನ್ಯಾಸಂ=ತ್ಯಾಗ (ಜ್ಞಾನಯೋಗ) ವನ್ನು, ಪುನಃ= ಮತ್ತೊಮ್ಮೆ ಕರ್ಮಣಾಂ ಯೋಗಂ =ಕರ್ಮಗಳ ಯೋಗವನ್ನು ಶಂಸಸಿ= ಪ್ರಶಂಸಿಸುತ್ತಿ. ಏತಯೋಃ= ಇವೆರಡರಲ್ಲಿ ಯತ್= ಯಾವುದು ಶ್ರೇಯಃ= ಶ್ರೇಯಸ್ಕರವೋ ತತ್ ಏಕಂ= ಅದೊಂದನ್ನೇ ಮೇ= ನನಗೆ ಸುನಿಶ್ಚಿತಂ= ನಿಶ್ಚಿತವಾಗಿ ಬ್ರೂಹಿ =ಹೇಳು.

**ವಿವರಣೆ:**- ಅರ್ಜುನ:- "ಕೃಷ್ಣ, ನೀನು ಆನಂದ ರೂಪ; ಜನತೆಯನ್ನೆಲ್ಲ ಆಕರ್ಷಿಸುವ ಮೋಡಿ ನಿನ್ನಲ್ಲಿದೆ. ನಿನ್ನ ಮಾತು ರಸಭರಿತ. ಅನುಭವಪೂರಿತ ನಿನ್ನ ನಲ್ ನುಡಿಗಳನ್ನು ಮಂತ್ರ ಮುಗ್ಧನಾಗಿ ಆಲಿಸುತ್ತಿರುವೆ. ಅದೇಕೋ, ಒಂದು ಸಂದೇಹವು ಮತ್ತೆ ಮತ್ತೆ ನನ್ನಲ್ಲಿ ತಲೆ ಎತ್ತುತ್ತಿದೆ. ನೀನು ಒಮ್ಮೆ ಸಾಂಖ್ಯಯೋಗ (ಸನ್ಯಾಸ) ವನ್ನು ಕೊಂಡಾಡುವಿ; ಮತ್ತೊಮ್ಮೆ ಕರ್ಮಯೋಗವನ್ನು ಮನವಾರೆ ಪ್ರಶಂಸಿಸುವಿ. ಎರಡೂ ಯೋಗಗಳು ಶ್ರೇಷ್ಠವಾಗಿವೆ ಎಂಬ ಮಾತು ನನಗೆ ಖಚಿತವಾಗಿದೆಯೇನೋ ಸರಿ. ಆದರೆ, ನಾನು ಮಾತ್ರ ಅವೆರಡರಲ್ಲಿ ಒಂದನ್ನೇ ಆರಿಸಿಕೊಳ್ಳಬೇಕಷ್ಟೇ? ಯಾವುದು ನನಗೆ ಹೆಚ್ಚು ಶ್ರೇಯಸ್ಕರವಾದೀತು ? ನಾನು ಯಾವ ಪಥ ಅನುಸರಿಸಲಿ ? ಭಗವನ್, ನಿಶ್ಚಿತವಾಗಿ ಹೇಳಿ. ನನ್ನಲ್ಲಿ ಸಂದೇಹಬಾರದಂತೆ ಸುಸ್ಪಷ್ಟ ಶಬ್ದಗಳಲ್ಲಿ ತಿಳಿಸಿರಿ; ಯಾವುದು ವರ

ಣೀಯ?"

ವಿವರಣೆ: (೧) ಮುಮುಕ್ಷು ಅಭ್ಯಾಸಿ ಅನುಭವಿ ಆರೂಢ ಇವರು ದೇವ ಯಾತ್ರಿಕರು. (ಅ) ಮುಮುಕ್ಷುವಿನಲ್ಲಿ ಪರಮ ಆತ್ಮನೇ ಏಕೈಕ ಶರಣ್ಯ ಎಂಬ ಸಾತ್ವಿಕ ಜ್ಞಾನವಿದೆ. ಹೃದಯ ಶುದ್ಧಿಪರ ನಿತ್ಯ ನೈಮಿತ್ತಿಕ ಪ್ರಾಯಶ್ಚಿತ್ತಾದಿ ವೇದ -ವಿಧಿಗಳನ್ನು, ಯಜ್ಞಯಾಗಗಳನ್ನು ಆಚರಿಸುವ ಕರ್ಮವಿದೆ. (ಬ) ಅಭ್ಯಾಸಿಯಲ್ಲಿ ಅನಾತ್ಮ ಭಿನ್ನ-ಆತ್ಮ ವಸ್ತುವಿನ ಸಾಮಾನ್ಯ ಜ್ಞಾನವಿದೆ. ಶ್ರವಣ ಮನನಗಳ ಮೂಲಕ ಆತ್ಮ ಅನಾತ್ಮಗಳನ್ನು ಪೃಥಃಕರಿಸುವ ಕರ್ಮವಿದೆ. (ಕ) ಅನುಭವಿಯಲ್ಲಿ ಅಖಂಡ ಆತ್ಮನ ಸವಿಕಲ್ಪ ಜ್ಞಾನವಿದೆ. ವಿಜಾತಿವೃತ್ತಿ ವಿರಹಿತ ಸಜಾತಿ ವೃತ್ತಿಪ್ರವಾಹರೂಪ ಆತ್ಮಧ್ಯಾನರೂಪ ಕ್ರಿಯೆ ಇದೆ. (ಡ) ಆರೂಢನಲ್ಲಿ ಜೀವ ಬ್ರಹ್ಮಸಾಮರಸ್ಯದಲ್ಲಿ ವ್ಯಕ್ತವಾಗುವ ದಿವ್ಯಾನಂದದ ಅನುಭೂತಿ ರೂಪ ಜ್ಞಾನವಿದೆ. ಹಾಗು ಬ್ರಹ್ಮದಲ್ಲಿ ಪರಿಲಯಗೊಳ್ಳುವ ಕ್ರಿಯೆ ಇದೆ.

ಇಂತು ನಾಲ್ವರಲ್ಲಿಯೂ ಜ್ಞಾನ ಮತ್ತು ಕರ್ಮಗಳು ಸಮ ಸಮುಚ್ಚಯವಾಗಿ ನೆಲೆಸಿವೆ. ಜ್ಞಾನ ಕರ್ಮಗಳು ಪರಮ ಪುರುಷಾರ್ಥದ ಎರಡು ಸಮರ್ಥ ಪಕ್ಕಗಳು. ಅವೆರಡರಲ್ಲಿ ಯಾವುದೂ ಕೀಳಲ್ಲ, ಮೇಲಲ್ಲ. ಭಗವಂತನು ಈ ಮಾತನ್ನು ಸಾಕಷ್ಟು ಸ್ಪಷ್ಟ ಪಡಿಸಿದ್ದಾನೆ. ಭಗವಂತನ ಇಂಗಿತ ಪೂರ್ಣವಾಗಿ ಅರಿತರೆ ಜ್ಞಾನ ಕರ್ಮಗಳ ತರ ತಮದ ವಿಷಯದಲ್ಲಿ ಸಂದೇಹವೇ ಏಳದು. ಹಾಗಾದರೆ, ಜಾಣನಾದ ಅರ್ಜುನ ಮತ್ತೇಕೆ ಪ್ರಶ್ನೆ ಕೇಳಿದ? ಈ ಪ್ರಶ್ನೆಗೆ ಉತ್ತರ ಮೂರು ರೀತಿಯಲ್ಲಿ ಕೊಡಬಹುದು. (ಕ) ಜ್ಞಾನ ಕರ್ಮಗಳ ವಾದ ಸಾವಿರಾರು ವರುಷಗಳಿಂದ ಬೆಳೆದು ಬಂದಿದೆ. ಬಲ್ಲ ಬಲ್ಲಿದರೆನ್ನುವವರು ಕೂಡ ತಮ ತಮಗೆ ಸರಿದೋರಿದಂತೆ ಜ್ಞಾನಕ್ಕೋ ಅಥವಾ ಕರ್ಮಕ್ಕೋ ಅತ್ಯಂತ ಹಿರಿದಾದ ಸ್ಥಾನ ಕೊಡುತ್ತ ಬಂದಿದ್ದಾರೆ; ಜ್ಞಾನ ಹಾಗು ಕರ್ಮಗಳ ಪ್ರವಕ್ತಾರರು ಅನೇಕ ಸಲ ಪರಸ್ಪರ ದೂಷಣೆಗೂ ತೊಡಗಿದ್ದಾರೆ. ಈ ದೂಷಣೆ ನಿಲ್ಲಬೇಕು, ಭಗವಂತನ ಕೊನೆಯ ನಿರ್ಣಯವು ಸುಸ್ಪಷ್ಟ ಶಬ್ದಗಳಲ್ಲಿ ವ್ಯಕ್ತವಾಗಬೇಕು. ಎಂಬ ಸದುದ್ದೇಶದಿಂದ ಅರ್ಜುನನು ಪ್ರಶ್ನೆ ಕೇಳಿರಬಹುದು. ಇಲ್ಲವೆ,(ಖ)ಅರ್ಜುನನು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಹಳಬನಲ್ಲ. ಹೊಸಬ. ಮೇಲಾಗಿ, ಜೀವನವನ್ನೆಲ್ಲ ಶಸ್ತ್ರ ಅಸ್ತ್ರ ವಿದ್ಯೆಗಾಗಿ ಸವೆಸಿದವ. ಆಧ್ಯಾತ್ಮದಂಥ ಬಹು ಕ್ಲಿಷ್ಟವಾದ ವಿದ್ಯೆಯನ್ನು ಸಹಜವಾಗಿ ಹಾಗು ನಿಖರವಾಗಿ ತಿಳಿದುಕೊಳ್ಳುವ ಬಲ (ಬುದ್ಧಿಬಲ) ಅವನಲ್ಲಿರಲಿಕ್ಕಿಲ್ಲ. ಆದುದರಿಂದ, ಭಗವಂತನು ಈ ಮುಂಚೆ ಎಷ್ಟೇ ತಿಳಿ ತಿಳಿಯಾಗಿ ಹೇಳಿದ್ದರೂ ಅರ್ಜುನನು ಮತ್ತೆ ಪ್ರಶ್ನೆ ಕೇಳಿರುವ ಸಂಭವವಿದೆ. (ಗ) ಮೂರು ಹಾಗು ನಾಲ್ಕನೆಯ ಅಧ್ಯಾಯಗಳ ತುಂಬ ಪ್ರತಿಪಾದಿತವಾದ ಜ್ಞಾನ ಕರ್ಮಗಳ ಹಿರಿಮೆಯನ್ನು ಆಲಿಸಿದಾಗ ಅರ್ಜುನನಿಗೆ ಜ್ಞಾನ ಕರ್ಮಗಳೆರಡೂ ಶ್ರೇಷ್ಠ ಮಾರ್ಗಗಳು ಎಂಬ

ಸಂಗತಿ ಖಚಿತವಾಗಿರಬೇಕು. ಆದರೆ ತನ್ನ ಜೀವನಕ್ಕೆ ಯಾವ ಮಾರ್ಗ ಒಗ್ಗಬಲ್ಲು ದು ಎಂಬ ಬಗ್ಗೆ ಸಂದೇಹ ಉಂಟಾಗಿ, ಭಗವಂತನಿಗೆ ಪ್ರಶ್ನಿಸಿರಬೇಕು, ಅವೆರಡ ರಲ್ಲಿ ಯಾವುದನ್ನು ತಾನು ಆರಿಸಬೇಕು? ಎಂದು.

(೨) ಕೇಳುವದು ಮತ್ತು ಬೋಧಕನ ಅಭಿಪ್ರಾಯ ತಿಳಿದುಕೊಳ್ಳುವದು ಸುಲಭ ಕ್ರಿಯೆಯಲ್ಲ. ಅದಕ್ಕೆ ಕುಶಲತೆ ಬೇಕು. ಪ್ರಜಾಪತಿಯು ಒಮ್ಮೆ ಇಂದ್ರ ನಿಗೂ ವಿರೋಚನ ಸಿದ್ಧಾಂತಿಗೂ ಒಂದೇ ಆತ್ಮತತ್ತ್ವವನ್ನು ಬೋಧಿಸಿದ; ಕಿಂತು, ಆ ಉಪದೇಶ ಕೇಳಿದ ನಿರ್ಮಲ ಹೃದಯಿ ಇಂದ್ರನು ದೇವನಾದ; ಮಲಿನ ಹೃದಯದ ವಿರೋಚನ ಸಿದ್ಧಾಂತಿಯು ಗರ್ವಿಷ್ಠ ರಕ್ಕಸನಾದ. ಅವನಲ್ಲಿ ವಕ್ತಾ ರನ ಅಂತರ್ಯ ತಿಳಿವ ಕಲೆ ಇರಲಿಲ್ಲ. ಇನ್ನೊಂದು ಉದಾಹರಣೆ: ಕುದುರೆಯ ಮೇಲೆ ಕುಳಿತು ಸಾಗಿದ್ದ ಒಬ್ಬ ಮನುಷ್ಯನು ಎದುರಿನಿಂದ ಬರುತ್ತಿದ್ದ ದಾರಿಕಾ ನಿಗೆ " ತಮ್ಮ, ಹಿಂದೆ ಅನತಿದೂರದಲ್ಲಿ ಕುದುರೆಯ ಮರಿ ಬರುತ್ತಿದೆ. ಅದ ನ್ನಷ್ಟು ಬೆದರಿಸು " ಎಂದು ವಿನಂತಿಸಿದ. ವಕ್ತಾರನ ಉದ್ದೇಶ ತಿಳಿಯದ ದಾರಿ ಕಾರನು ಕುದುರೆಯ ಮರಿಯ ಎದುರಿಗೆ ಹೋಗಿ ಒಮ್ಮೆಲೆ ತನ್ನ ಕಂಬಳಿ ಝಾಡಿಸಿದ. ಬೆದರಿದ ಮರಿ ದಿಕ್ಕು ತೋಚದೆ ಓಡಿಹೋಯ್ತು. ಜಾಣ ಶ್ರಾವ ಕರು ಸಿಗುವದೆಂದರೆ ವಕ್ತಾರರ ಪುಣ್ಯ! ಎಲ್ಲ ಕಡೆಯಲ್ಲಿ ಕಲಾಹೀನ ಕೇಳುಗರೇ ಸಿಗುತ್ತಾರೆ. ಗುರುವು ಒಲಿದು ಆತ್ಮತತ್ತ್ವವನ್ನು ಮನೋಹರವಾಗಿ ಪ್ರತಿಪಾದಿಸಿ ಬೋಧಿಸಿದ ನಂತರ " ತಿಳಿಯಿತೆ ? " ಎಂದು ಕೇಳಿದರೆ ಆ ಕೇಳುಗ ಹೇಳುವ ದೇನು ? " ತಮ್ಮ ವಚನ ಕೇಳಿ ಧನ್ಯನಾದೆ ಗುರುಗಳೆ. ತಮ್ಮ ಜ್ಞಾನ ಅಪಾರ. ತಮ್ಮ ಅನುಭವ ದೊಡ್ಡದು. ತಮ್ಮಿಂದ ಒಂದು ಅನುಗ್ರಹ ನನಗಾಗಬೇಕು: ನನ್ನ ಹೆಂಡತಿಯ ಮೈಯಲ್ಲಿ ಸರಿಯಿಲ್ಲ. ತಮ್ಮ ಕೃಪಾಪ್ರಸಾದ ಅವಳಿಗೆ ದೊರೆ ಯಬೇಕು " ಕೇಳುಗನ ಈ ವಿನಂತಿ ಕೇಳಿ ಗುರುವು ನಗಬೇಕೊ, ವಿಷಾದಿಸಬೇಕೋ?

೩) ಭಗವಂತನ ಪುಣ್ಯ; ಅರ್ಜುನನು ಅಷ್ಟು ಕೀಳು ಮಟ್ಟದ ಶ್ರಾವಕ ನಲ್ಲ. ಒಂದೆರಡು ಸಲ ಕೇಳಿಯೂ ತಿಳಿಯದಿದ್ದರೆ ಮತ್ತೂ ಕೇಳಿ ತಿಳಿದುಕೊಳ್ಳುವ ಪ್ರಬಲ ಇಚ್ಛೆ ಅವನಲ್ಲಿದೆ. ಆದ್ದರಿಂದಲೇ ಭಗವಂತನು ಬಹು ಉತ್ಸಾಹದಿಂದ ಮತ್ತೆ ಮತ್ತೆ ಉಪದೇಶಿಸುತ್ತಾನೆ.

ಸಂಬಂಧ:- ಅರ್ಜುನನ ಪ್ರಶ್ನೆಗೆ ಭಗವಂತನು ಉತ್ತರಿಸುವನು.

ಶ್ರೀ ಭಗವಾನುವಾಚ

ಸನ್ನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।
ತಯೋಸ್ತು ಕರ್ಮಸನ್ನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥೨॥

ಅರ್ಥ:- ಸನ್ನ್ಯಾಸಃ=ಕರ್ಮತ್ಯಾಗವು (ಸಾಂಖ್ಯ ಯೋಗವು) ಚ= ಮತ್ತು ಕರ್ಮ ಯೋಗಃ=ಕರ್ಮಯೋಗವು ಉಭೌ= ಎರಡೂ ನಿಶ್ರೇಯಸಕರೌ= ಮೋಕ್ಷದಾಯಕಗಳು. ತು =ಆದರೆ ತಯೋಃ= ಅವುಗಳಲ್ಲಿ ಕರ್ಮ ಸನ್ನ್ಯಾಸಾತ್= ಕರ್ಮ ತ್ಯಾಗಕ್ಕಿಂತ ಕರ್ಮ

ಯೋಗಃ= ಕರ್ಮಯೋಗವು ವಿಶಿಷ್ಯತೇ= ವಿಶಿಷ್ಟವೆನಿಸುತ್ತದೆ (ಉತ್ಕೃಷ್ಟವಾಗಿದೆ).

**ವಿವರಣೆ:- ಭಗವಂತ:-** "ಧನಂಜಯ, ನಿಷ್ಕಾಮ ಭಾವದಿಂದ ದೇವ ಪ್ರೀತ್ಯರ್ಥವಾಗಿ ದುಡಿಯುವದು ಕರ್ಮಯೋಗ. ಅದು ಅಪ್ರತ್ಯಕ್ಷ ರೀತಿಯಲ್ಲಿ ಪರಂಪರಾ ಸಂಬಂಧದಿಂದ ಮುಕ್ತಿಯನ್ನು ನೀಡುವದು. ಶ್ರವಣ ಮನನ ನಿಧಿಧ್ಯಾಸಗಳ ಮೂಲಕ ಜೀವಬ್ರಹ್ಮೈಕ್ಯ ಜ್ಞಾನವನ್ನು ಅಂಗವಿಸಿಕೊಳ್ಳುವದು ಜ್ಞಾನಯೋಗ. ಅದು ನೇರವಾಗಿ ಮುಕ್ತಿಯನ್ನು ನೀಡುವದು. ಆದರೇನು ಅರ್ಜುನ, ನನ್ನ ಪ್ರಾಮಾಣಿಕ ಅಭಿಪ್ರಾಯದಲ್ಲಿ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಪರಮ ಶ್ರೇಷ್ಠ."

ಭಗವಂತನ ಅಭಿಪ್ರಾಯ ಅತ್ಯಂತ ಸಮಂಜಸ. ಸರ್ವ ಮಾನ್ಯ. ವ್ಯಕ್ತಿ, ಸಮಾಜ, ದೇಶ ಹಾಗು ಮಾನವ ಕುಲದ ಹಿತ ಯಾವುದರಲ್ಲಿದೆ ಎಂಬುದನ್ನು ಭಗವಂತ ಸುಸ್ಪಷ್ಟ ಅಭಿಮತದಿಂದ ವ್ಯಕ್ತ ಮಾಡಿದ್ದಾನೆ. ಅವನ ದೃಷ್ಟಿಯಲ್ಲಿ (ಅ) ದೇವಾರ್ಪಣ ಬುದ್ಧಿಯಿಂದ ಆಚರಿಸಿದ ಸೇವೆ (ಆ)ಆತ್ಮಾನಾತ್ಮ ವಿವೇಚನೆ (ಇ) ಗುರೂಪದಿಷ್ಟ ತತ್ತ್ವಗಳನ್ನು ಯಥಾಸ್ಥಿತವಾಗಿ ಪರಿಗ್ರಹಿಸುವ ಮನಸ್ಸಿನ ಸೂಕ್ಷ್ಮ ಕ್ರಿಯೆ ಏನೆಲ್ಲವೂ ಕರ್ಮಯೋಗವೇ. ಜಗತ್ತು ಸ್ವರ್ಗವಾಗಬೇಕಾದರೆ, ಆತ್ಮಜ್ಞಾನ ಸೂರ್ಯನು ಅಂತರಂಗದಲ್ಲಿ ಉದಯಿಸಬೇಕಾದರೆ ಹಾಗು ಜೀವನು ದೇವನಲ್ಲಿ ವಿಲಯನ ಹೊಂದಬೇಕಾದರೆ, ಕರ್ಮಯೋಗವೇ ಅಗತ್ಯ.

ಕರ್ಮಯೋಗವು ನಮ್ಮ ಬಾಳಿನ ತುಂಬ ಹಾಸು ಹೊಕ್ಕಾಗಿದ್ದರೆ ಆ ಬದುಕಿಗೊಂದು ಬೆಲೆ ಇದೆ. ದಿನ ನಿತ್ಯದ ಜೀವನದಲ್ಲಿ ದೇವಾರಾಧನೆ, ದೇವನಾಮ ಸ್ಮರಣೆ, ದಾನ, ಧರ್ಮಗಳನ್ನು ಬಿಡದೆ ಆಚರಿಸಿದರೆ ಮನಸ್ಸಿಗೆ ಸಾತ್ವಿಕ ನೆಮ್ಮದಿ ದೊರಕುತ್ತದೆ. ಸಿರಿವಂತಿಕೆ ಬಡತನ, ಸುಖ ದುಃಖ, ಮಾನ ಅವಮಾನ ಏನೆಲ್ಲವನ್ನು ಸಮನಾಗಿ ಕಾಣುವ ಪಾವನ ದೃಷ್ಟಿ ಅಳವಡುತ್ತದೆ.

ಬಿತ್ತುವದು ಹಗುರಾದರೂ ಭೂಮಿಯನ್ನು ಹದಗೊಳಿಸುವದು ಶ್ರಮದಾಯಕ. ಹಾಗೆ ಜ್ಞಾನ ಪಡೆಯುವದು ಅಷ್ಟು ಬಿಗಿಯಲ್ಲ. ಹೃದಯ ಕ್ಷೇತ್ರವನ್ನು ಹದಗೊಳಿಸುವ ಕರ್ಮಯೋಗ ಮಾತ್ರ ಕಷ್ಟಸಾಧ್ಯ. ಆದರೇನು? ಅದು ಅನಿವಾರ್ಯ. ಏಕೆಂದರೆ:

"ಕ್ರಿಯಾ ಮಥನವಿಲ್ಲದೆ ಕಾಣ ಬಂದುದೇ ಇಕ್ಷುವಿನೊಳಗಣ ಮಧುರ? ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ? ಕ್ರಿಯಾ ಮಥನವಿಲ್ಲದೆ ಕಾಣ ಬಂದುದೇ ಕ್ಷೀರದೊಳಗಣ ಘೃತ? ಕ್ರಿಯಾ ಮಥನವಿಲ್ಲದೆ ಕಾಣ ಬಂದುದೇ ಕಾಷ್ಠದೊಳಗಣ ಅಗ್ನಿ? ಇದು ಕಾರಣ ನಮ್ಮ ಗೋಹೇಶ್ವರ ಲಿಂಗವ ತನ್ನೊಳರಿದೆನೆಂಬ ಮಹಂತಂಗೆ ಸತ್ಕ್ರಿಯಾಚರಣೆಯೇ ಸಾಧನ ಕಾಣಿಭೋ"

ಅನೇಕ ಜನರು ಕರ್ಮದ ಹಿರಿಮೆಯ ತಿಳಿಯದೆ ಶಾಬ್ದ ಜ್ಞಾನಕ್ಕೆ ಮನಸೋತು ಕರ್ಮಾವಹೇಳನ ಮಾಡಿದ್ದಾರೆ. 'ಬ್ರಹ್ಮನನ್ನು ತಿಳಿದುಕೊ. ನಂತರ

ಬೇಕಾದಂತೆ ವರ್ತಿಸು.' ಎಂದು ಹೇಳುವ ವಕ್ತಾರರೂ 'ಔಷಧ ಕುಡಿ; ಬಳಿಕ ಏನುಬೇಕಾದರೂ ತಿನ್ನು' ಎಂದು ಸಲಹೆ ಮಾಡುವ ವೈದ್ಯರೂ ಒಂದೇ ತರಗತಿಯ ಜನ. ಇವರಿಬ್ಬರು ಸಮಾಜ ರಕ್ಷಕರಲ್ಲ, ಸಮಾಜ ಘಾತಕರು.

"ಸರ್ವಂ ಖಲ್ವಿದಂ ಬ್ರಹ್ಮ!" ಏನಿರುವವದೆಲ್ಲ ಬ್ರಹ್ಮ! ಬಾಯಿಯಿಂದ ಹೀಗೆ ನುಡಿಯುವ, ಲೇಖನಿಯಿಂದ ಹೀಗೆ ಬರೆಯುವ ಮಹಾ ಮಹಾ ಪಂಡಿತರು ತಮ್ಮ ಮನೆಯ ಬಾಗಿಲಿಗೆ ಬಂದ ಬಡ ಜೀವಿಗೆ ಒಂದು ತುತ್ತ ಅನ್ನವನ್ನು ನೀಡಲಾರರು. ಇಂಥವರು ಎಷ್ಟು ವಿದ್ಯೆ ಗಳಿಸಿದ್ದರೇನು ಲಾಭ?

"ನೂರನೋದಿ ನೂರ ಕೇಳಿದರೇನು? ಆಸೆ ಹರಿಯದು. ರೋಷ ಬಿಡದು, ಮಜ್ಜನಕ್ಕೆರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲ ಸಂಗಮದೇವ."

ಜ್ಞಾನಿಯಾಗಬೇಕೆಂಬ ಮನುಷ್ಯ ಮೊಟ್ಟ ಮೊದಲು ತನ್ನದನ್ನೆಲ್ಲ ದಾನವಿತ್ತು ಬರಲಿ. ಅಂಥ ತ್ಯಾಗಮಯ ಕರ್ಮ ಮಾಡಿದಾಗ ಮಾತ್ರ ಚಿತ್ತ ನಿರ್ಮಲತೆ. ನಿರ್ಮಲವಾದ ಆ ಚಿತ್ತದಲ್ಲಿ ಆತ್ಮಜ್ಞಾನಾವತರಣ! ಈ ಎಲ್ಲ ಕಾರಣಗಳಿಂದಾಗಿ ಭಗವಂತನು ಕರ್ಮಯೋಗವೇ ಶ್ರೇಷ್ಠವೆಂದಿದ್ದಾನೆ.

ಸಂಬಂಧ:- ಕರ್ಮಯೋಗಿಯ ಸನ್ಯಾಸಿತ್ವ ಕುರಿತು ಭಗವಂತ ವರ್ಣಿಸುತ್ತಾನೆ.

ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।
ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ ॥೩॥

ಅರ್ಥ:- ಯಃ=ಯಾವನು ನ ದ್ವೇಷ್ಟಿ=ದ್ವೇಷಿಸುವದಿಲ್ಲವೋ ನ ಕಾಂಕ್ಷತಿ=ಆಶಿಸುವದಿಲ್ಲವೊ [ಸಃ=ಅವನು ನಿತ್ಯಸನ್ಯಾಸೀ=(ಕರ್ಮಾನುಷ್ಠಾನ ಕಾಲೇ ಅಪಿ=ಕರ್ಮಾನುಷ್ಠಾನ ಮಾಡುತ್ತಿರುವಾಗಲೂ ಕೂಡ)ನಿತ್ಯ ಸನ್ಯಾಸಿಯು,(ಎಂದು).ಜ್ಞೇಯಃ=ತಿಳಿಯಬೇಕು. ಮಹಾಬಾಹೋ= ಮಹಾ ಬಾಹು ಉಳ್ಳವನೆ, ನಿರ್ದ್ವಂದ್ವಃ= (ರಾಗ ದ್ವೇಷಾದಿ ದ್ವಂದ್ವ ಶೂನ್ಯಃ) ರಾಗ ದ್ವೇಷಾದಿ ದ್ವಂದ್ವಗಳಿಲ್ಲದ ಅವನು, ಸುಖಂ ಹಿ= ಆಯಾಸವಿಲ್ಲದೆಯೇ ಬಂಧಾತ್=ಬಂಧನದಿಂದ ಪ್ರಮುಚ್ಯತೇ= ಮುಕ್ತನಾಗುತ್ತಾನೆ.

ವಿವರಣೆ:-ಭಗವಂತ:-"ಪಾರ್ಥ, ತನಗೆ ಅನುಕೂಲವಾದ ವಿಷಯಗಳ ಬಗೆಗಿರುವ ರಾಗ ಹಾಗು ತನಗೆ ಪ್ರತಿಕೂಲ ವಿಷಯಗಳ ಬಗೆಗಿರುವ ದ್ವೇಷ ಇವೆರಡು ಮನಸ್ಸಿನ ಪ್ರಧಾನ ಕಾಲುಷ್ಯಗಳು. ಈ ಎರಡೂ ಮಾಲಿನ್ಯಗಳನ್ನು ಸಂಪೂರ್ಣ ತೊಳೆದು ಹಾಕಿ ಪ್ರಶಾಂತ ಭಾವದಿಂದ ಕರ್ಮಗಳನಾಚರಿಸುತ್ತ ಬಾಳುವ ಕರ್ಮಯೋಗಿಯು ನಿಜವಾಗಿಯೂ ನಿತ್ಯ ಸನ್ಯಾಸಿ! ಅವನು ನಿರಾಯಾಸವಾಗಿ ಜನ್ಮಕ್ಕೆ ಕಾರಣವಾಗುವ ಕರ್ಮ ಬಂಧನದಿಂದ ಮುಕ್ತನಾಗುತ್ತಾನೆ."

ನೂರು ವರುಷದ ಮಾನವೀ ಜೀವನವನ್ನು ಅನುಭವಿಗಳು ನಾಲ್ಕು ಭಾಗದಲ್ಲಿ ವಿಂಗಡಿಸಿದ್ದಾರೆ. ಪ್ರಾರಂಭದ ಕಾಲು ಶತಮಾನವು ಬ್ರಹ್ಮಚರ್ಯಾಶ್ರಮ.

ದ್ವಿತೀಯ ಕಾಲು ಶತಮಾನವು ಗೃಹಸ್ಥಾಶ್ರಮ. ತೃತೀಯ ಕಾಲು ಶತಮಾನವು ವಾನಪ್ರಸ್ಥಾಶ್ರಮ. ಚತುರ್ಥ ಕಾಲು ಶತಮಾನವೇ ಸನ್ಯಾಸಾಶ್ರಮ. ಮನುಷ್ಯನು ಬ್ರಹ್ಮಚಾರಿಯಾಗಿ ಅಧ್ಯಯನ ಮಾಡಬೇಕು; ಗೃಹಸ್ಥನಾಗಿ ಪ್ರಜೋತ್ಪಾದನೆ ಹಾಗು ವಸ್ತು ಸಂಪಾದನೆ ಮಾಡಬೇಕು; ವಾನಪ್ರಸ್ಥನಾಗಿ ಸ್ವಾಧ್ಯಾಯಕ್ಕೆ ತೊಡಗಬೇಕು. ಕಡೆಯಲ್ಲಿ ಸನ್ಯಾಸಿಯಾಗಿ ಆತ್ಮಚಿಂತನ ಮತ್ತು ಅಧ್ಯಾಪನ ನಡೆಸಬೇಕು. ಈ ಸನ್ಯಾಸಿಯು ಅರಣ್ಯದಲ್ಲಿ ವಾಸಮಾಡಿ ಯೋಗ ಸಾಧನೆಯಲ್ಲಿ ತಲ್ಲೀನನಾಗಬೇಕೆಂಬುದು ಋಷಿ ಮುನಿಗಳ ಅನುಜ್ಞೆ. ಆದರೆ ಕಾಲ ಗತಿಸಿದಂತೆ ಈ ಕಟ್ಟು ನಿಟ್ಟಾದ ಆಶ್ರಮ ಪದ್ಧತಿ ಶಿಥಿಲವಾಯ್ತು. ಇಂದು ಈ ಆಶ್ರಮಗಳು ಕೇವಲ ಶಿಷ್ಟಾಚಾರವಾಗಿ ಉಳಿದಿವೆ. ಬ್ರಹ್ಮಚರ್ಯ, ಗೃಹಸ್ಥ ಆಶ್ರಮಗಳನ್ನು ಪ್ರವೇಶಿಸಿದ ಮನುಷ್ಯನು ವಾನಪ್ರಸ್ಥ ಹಾಗು ಸನ್ಯಾಸ ಆಶ್ರಮಗಳ ಸ್ವೀಕರಿಸಿ ಪ್ರಶಾಂತ ಬಾಳನ್ನು ಬಾಳಬೇಕೆಂದು ಕನಸು ಮನಸಿನಲ್ಲಿಯೂ ಇಚ್ಛಿಸುವದಿಲ್ಲ. ಸನ್ಯಾಸ ಪದದ ಮತ್ತೊಂದು ಅರ್ಥ ಕರ್ಮತ್ಯಾಗ. ನಿಂದಿತ ಕರ್ಮಗಳನ್ನಷ್ಟೇ ಅಲ್ಲ ನಿತ್ಯ ನೈಮಿತ್ತಿಕಾದಿ ಸತ್ಕರ್ಮಗಳನ್ನೂ ವರ್ಜಿಸಿ ಸ್ವೇಚ್ಛೆಯಾಗಿ ವರ್ತಿಸುವದು ಸನ್ಯಾಸವೆಂದು ಕೆಲವರು ತಪ್ಪು ತಪ್ಪಾಗಿ ಗ್ರಹಿಕೆ ಮಾಡಿದ್ದಾರೆ.

ಭಗವಂತನಿಗೆ ಸನ್ಯಾಸ ಶಬ್ದದ ಈ ಎರಡೂ ಅರ್ಥಗಳು ಸಮ್ಮತವಿಲ್ಲ. ಅಂದರೆ ಕೇವಲ ರೂಢಿಗತವಾದ ಅಂತ್ಯಾಶ್ರಮವಾಗಲಿ, ಸರ್ವಕರ್ಮ ಪರಿತ್ಯಾಗವಾಗಲಿ ಅವನ ದೃಷ್ಟಿಯಲ್ಲಿ ಸನ್ಯಾಸವಲ್ಲ. ರಾಗ ದ್ವೇಷಗಳನ್ನು ಸಮೂಲಾಗ್ರವಾಗಿ ಹೃದಯದಿಂದ ಕಿತ್ತುಹಾಕಿ ಪ್ರಶಾಂತ ಜೀವನ ಸಾಗಿಸುವದು ಮಾತ್ರ ನಿತ್ಯ ಸನ್ಯಾಸ! ಅಂಥ ಸನ್ಯಾಸವನ್ನು ಅಂಗವಿಸಿಕೊಂಡವನೇ ನಿತ್ಯ ಸನ್ಯಾಸಿ!

(೨) ಯೋ ನ ದ್ವೇಷ್ಟಿ ನ ಕಾಂಕ್ಷತಿ ಸ ನಿತ್ಯ ಸನ್ಯಾಸಿ:– ತನಗೆ ಸೇರದ ವಸ್ತು ಮತ್ತು ವ್ಯಕ್ತಿಗಳ ಬಗೆಗೆ ಉಂಟಾಗುವ ಉದ್ರೇಕ ಭಾವವು ದ್ವೇಷ. ತನಗೆ ಸೇರುವ ವಿಷಯ ವ್ಯಕ್ತಿ ಹಾಗು ದೇಹಾದಿ ಅನಾತ್ಮ ಪದಾರ್ಥಗಳ ಮೇಲಿರುವ ಅತ್ಯಾಸಕ್ತಿಯೇ ಕಾಂಕ್ಷೆ. ಲೋಭ ಮೋಹ ಮದ ಮತ್ಸರಗಳು ರಾಗ ದ್ವೇಷಗಳೆರಡರಲ್ಲಿ ಅಡಗಿವೆ. ಈ ರಾಗ ದ್ವೇಷಗಳಿಗೆ ಮನಸ್ಸಿನ ಪ್ರಧಾನ ಕಲ್ಮಷಗಳೆಂದು ಬಲ್ಲವರು ಕರೆದಿದ್ದಾರೆ. ಈ ದ್ವಿವಿಧ ಕಾಲುಷ್ಯದಿಂದ ಒಡಗೂಡಿ ಕರ್ಮ ಮಾಡಿದರೆ ಆ ಕರ್ಮವು ಹೇಯ, ಬಾಧಕ. ಕರ್ಮವು ತನ್ನಷ್ಟಕ್ಕೆ ತಾನು ಹೇಯವೂ ಅಲ್ಲ, ಹಿತಕರವೂ ಅಲ್ಲ; ಬಾಧಕವೂ ಅಲ್ಲ, ಸಾಧಕವೂ ಅಲ್ಲ. ಆದ್ದರಿಂದ ಬರಿಕರ್ಮ ಸನ್ಯಾಸ ಮಾಡಿದ ಮಾತ್ರಕ್ಕೆ ಸನ್ಯಾಸ ಸಿದ್ಧಿಸದು, ಕರ್ಮಗಳ ಹಿಂದಿರುವ ಬಾಧಕ ರಾಗ ದ್ವೇಷಗಳನ್ನು ನಷ್ಟ ಮಾಡುವದೇ ನಿಜವಾದ ಕರ್ಮ–ಸನ್ಯಾಸ.

(೩) ವ್ಯಾವಹಾರಿಕ ಶಬ್ದಗಳಲ್ಲಿ ಹೇಳಬಹುದಾದರೆ, ಮಾನವರಾದ ನಾವೆಲ್ಲ ದೇವನ ಚಾಕರರು. ಜಗತ್ತು ದೇವನ ಕಾರ್ಯಶಾಲೆ. ನಮ್ಮ ಮನೆ, ಮಂದಿರ,

ಮಹಲುಗಳು ನಮಗೆ ದುಡಿಯಲು ದೇವನು ಒಪ್ಪಿಸಿದ ಬ್ಯಾಂಕುಗಳು. ಅಲ್ಲಿ ಸಂಪತ್ತಿದೆ. ಪ್ರಾಮಾಣಿಕವಾಗಿ ನ್ಯಾಯ ಸಮ್ಮತವಾಗಿ ಆ ದೇವದತ್ತ ಸಂಪದವನ್ನು ಹೆಚ್ಚಿಸುವದು ಹಾಗು ಸಮಾಜದ ಕಲ್ಯಾಣಕ್ಕಾಗಿ ವಿತರಣ ಮಾಡುವದು ನಮ್ಮ ಕರ್ತವ್ಯ. ಆ ಜಗಕಿಕ್ಕಿದ ಸಂಪದದಲ್ಲಿಯ ಒಂದು ನಾಣ್ಯ ಕೂಡ ನಮಗೆ ಸೇರಿದ್ದಲ್ಲ. ನಮ್ಮ ದುಡಿತಕ್ಕೆ ಮೆಚ್ಚಿ ದೇವನು ತಾನಾಗಿಯೇ ನಮಗೆ ಪ್ರತಿಫಲ ಕೊಡುತ್ತಾನೆ. ಹಾಗೆ ಅವನಿಂದ ದೊರೆತುದರಲ್ಲಿಯೇ ಸಂತೋಷ ಪಡಬೇಕು.

ನಾವು ಒಂದೇ ಮನೆಯಲ್ಲಿ ಒಂದೇ ದೇಹದಲ್ಲಿ ಸದಾ ಇರಬೇಕೆಂದು ದೇವನು ಇಚ್ಛಿಸುವದಿಲ್ಲ. ಆಗಾಗ ವರ್ಗ ಮಾಡುತ್ತಾನೆ. ಹೊಸ ಜನ್ಮ, ಹೊಸ ಮನೆ, ಹೊಸ ಪರಿಸರಗಳನ್ನು ಕರುಣಿಸುತ್ತಾನೆ. ನಾವು ಪ್ರಸನ್ನ ಚಿತ್ತರಾಗಿ ಹಳೆಯ ಕಾರ್ಯಕ್ಷೇತ್ರ ತ್ಯಜಿಸಿ ಹೊಸ ಕ್ಷೇತ್ರದಲ್ಲಿ ಪ್ರವೇಶಿಸಬೇಕು. ಸತ್ಯ ಪ್ರಾಮಾಣಿಕತೆಗಳನ್ನು ರಕ್ತಗತಗೊಳಿಸಿಕೊಂಡು, ಅಹಂಕರ್ತೃತ್ವ ಎಂಬ ಭಾವಬಿಟ್ಟು, ಪ್ರತಿಫಲದ ಆಸೆ ನೀಗಿ ಆ ಬಾಳಿನ ತುಂಬ ದುಡಿಯಬೇಕು. ಹಾಗೆ ದುಡಿಯುವ ಶಾಂತ ಮನಸ್ಕರೇ ನಿತ್ಯ ಸನ್ಯಾಸಿಗಳು.

(೪) ನಿತ್ಯ ಎಂಬ ಪದ ಬಹು ಮಹತ್ವದ್ದು. ಹಂಗಾಮಿ ಎನ್ನುವದು ಅದರ ವಿರುದ್ಧ ಶಬ್ದ. ಲೌಕಿಕ ಉದ್ದೇಶದ ಪೂರ್ತಿಗಾಗಿ ಸನ್ಯಾಸ ವೇಷ ಧರಿಸುವವರು ಹಂಗಾಮಿ ಸನ್ಯಾಸಿಗಳು. ಸುಭದ್ರೆಯ ಅಪಹರಣಕ್ಕಾಗಿ ಸನ್ಯಾಸ ವೇಷ ಧರಿಸಿದ್ದ ಅರ್ಜುನ, ಸೀತಾಪಹರಣಕ್ಕಾಗಿ ಸನ್ಯಾಸ ವೇಷ ಧರಿಸಿದ್ದ ರಾವಣ ಹಂಗಾಮಿ ಸನ್ಯಾಸಿಗಳು. ಅನೇಕ ಜನರು ಪ್ರಪಂಚದ ತಾಪಕ್ಕೆ ಬೇಸತ್ತು ಸನ್ಯಾಸ ಸ್ವೀಕರಿಸುತ್ತಾರೆ. ಮನೆಯಲ್ಲಿ ಉಪಚಾರ ಸರಿಯಾಗಿ ನಡೆಯದಾದಾಗ ಹೆಂಡತಿ ಮಕ್ಕಳನ್ನು ಹೆದರಿಸಲು ಈ ವೇಷಕ್ಕೆ ಮಾರುಹೋಗುವವರಿಗೇನೂ ಕಡಿಮೆ ಇಲ್ಲ. ರೂಢಿ ಹಾಗು ಸಂಪ್ರದಾಯ ಶರಣರಾಗಿ ಆಶ್ರಮ ಸ್ವೀಕರಿಸಿದ ಸನ್ಯಾಸಿಯೂ ಸರ್ವ ಕರ್ಮಗಳನ್ನೇ ತ್ಯಜಿಸಿ ಸ್ವೇಚ್ಛಾಜೀವನ ಸಾಗಿಸುವ ಸ್ವೈರ ಸನ್ಯಾಸಿಗಳೂ ಹಂಗಾಮಿಗಳೇ ಸರಿ.

ನಿತ್ಯ ಸನ್ಯಾಸಿಯ ಜೀವನ ಮಾತ್ರ ಪವಿತ್ರ. ಅವನಲ್ಲಿ ವೈಷಯಿಕ ಉದ್ದೇಶಗಳೊಂದೂ ಇಲ್ಲ. ಅವನ ಅಂತಃಕರಣ ಪರಿಶುದ್ಧ. ಅದರಲ್ಲಿ ರಾಗಾದಿ ತೆರೆಗಳು ಏಳುವದಿಲ್ಲ. ಸಮದೃಷ್ಟಿಯ ಅವನು ಸರ್ವಾರ್ಪಣ ಬುದ್ಧಿಯಿಂದ ದುಡಿಯುತ್ತಾನೆ. ಲಾಭ ಹಾನಿ, ಜಯ ಅಪಜಯ, ಮಾನ ಅಪಮಾನ, ಸುಖ ದುಃಖ ಇಂಥ ಸಾಂಸಾರಿಕ ದ್ವಂದ್ವಗಳು ಬಂದಾಗ ಅವನು ಅವುಗಳಿಂದ ಬಾಧೆಗೊಳ್ಳಲಾರ. ಅವನ ಅಂತರಂಗದ ತುಂಬ ವಿಶ್ವ ಚೈತನ್ಯಾತ್ಮನ ಸ್ವರೂಪ ಜ್ಞಾನವಿದೆ.

(೫) ಸುಖಂ ಬಂಧಾತ್ ಪ್ರಮುಚ್ಯತೇ:– ಆ ನಿತ್ಯ ಸನ್ಯಾಸಿಯು ಸುಲಭವಾಗಿ ಸಂಸಾರ ಬಂಧನದಿಂದ ವಿಮುಕ್ತಿ ಪಡೆಯುತ್ತಾನೆ.

"ಅಂತರಂಗದಲ್ಲಿ ಅರಿವು, ಬಹಿರಂಗದಲ್ಲಿ ಕ್ರೀ. ಈ ಉಭಯ ಸಂಪುಟವೊಂದಾದ ಶರಣಂಗೆ ಹಿಂಗಿತ್ತು ತನುಸೂತಕ. ಹಿಂಗಿತ್ತು ಮನಸೂತಕ. ಕೂಡಲ ಚೆನ್ನಸಂಗಯ್ಯನಲ್ಲಿ ಸಂಗವಾದವು ಸಕಲೇಂದ್ರಿಯಂಗಳು."

ನಿತ್ಯ ಸನ್ಯಾಸಿಯ ಒಳಗೆ ಅರಿವಿದೆ; ಹೊರಗೆ ಕ್ರೀ ಇದೆ. ಜ್ಞಾನ ಕರ್ಮಗಳ ಮೂರ್ತಿಯಾದ ಅವನೇ ಶರಣ. ಅವನ ತನು, ಮನ, ಇಂದ್ರಿಯಗಳು, ಲಿಂಗತನು, ಲಿಂಗಮನ, ಲಿಂಗೇಂದ್ರಿಯಗಳಾದವು. ಅದಾಗಿ, ಅವುಗಳ ಸೂತಕ ಹಿಂಗಿತು. ಆದ್ದರಿಂದ ನಿರಾಯಾಸವಾಗಿ ಅವನು ಮೋಕ್ಷ ಹೊಂದುತ್ತಾನೆ.

(೬) ನಿತ್ಯ ಸನ್ಯಾಸಿಯ ಜೀವನ ಅನುಪಮ:- ಅವನ ಮನಸ್ಸು ಸದಾ ಸಂತುಷ್ಟ. ಅವನ ಮುಖದ ಮೇಲೆ ಸದಾ ಪ್ರಸನ್ನತೆ. ಅವನು ಹಾನಿ ಹಳವಿಗಾಗಿ ಅಳಲಾರ. ನಿಂದೆ ಅಪಮಾನಗಳು ಬಂದರೆ ದುಃಖಿಸಲಾರ. ಜನರೂ ಮನೆಯವರೂ ಬೈದರೆ ಅವರೆದುರು ನಗು ನಗುತ್ತ ನಿಲ್ಲುವದು ಅವನ ಸ್ವಭಾವ. ಜಡಭರತನು ಒಬ್ಬ ಸಂತ. ಅವನು ಅರಣ್ಯದಲ್ಲಿ ಹೋಗುತ್ತಿರುವಾಗ ಒಬ್ಬ ರಾಜ ತನ್ನ ಪಲ್ಲಕ್ಕಿ ಹೊರಲು ಇವನನ್ನು ಬಿಟ್ಟಿಹಿಡಿದ. ಹೆಗಲುಕೊಟ್ಟ ಜಡಭರತನು ಎಲ್ಲರನ್ನು ಎಳೆದುಕೊಂಡು ವಿರುದ್ಧ ದಿಕ್ಕಿನಲ್ಲಿ ಹೆಜ್ಜೆ ಹಾಕಿದ. ಸಿಟ್ಟಿಗೆದ್ದ ರಾಜನು ಚಾಬುಕದಿಂದ ಥಳಿಸಿದ. ಆಗಲೂ ಜಡಭರತನು ನಗುತ್ತ ನಿಂತಿದ್ದ! ಇದು ಮಹಾನುಭಾವರ ಬದುಕು!!

ಸಂಬಂಧ:- ಜ್ಞಾನಯೋಗ ಕರ್ಮಯೋಗಗಳು ವಾಸ್ತವಿಕವಾಗಿ ಭಿನ್ನವಲ್ಲ ಎಂದು ಭಗವಂತನು ಅಭಿಪ್ರಾಯ ಪಡುತ್ತಾನೆ.

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥೪॥**

ಭಾವ:– ಬಾಲಕರು ಜ್ಞಾನಯೋಗ ಹಾಗು ಕರ್ಮಯೋಗಗಳು ಬೇರೆ ಬೇರೆ ಎಂದು ಹೇಳುತ್ತಾರೆ. ಪಂಡಿತರು ಹೇಳರು. ಎರಡರಲ್ಲಿ ಒಂದನ್ನಾದರು, ಚೆನ್ನಾಗಿ ಅಭ್ಯಾಸ ಮಾಡಿದವನು ಎರಡರ ಫಲವನ್ನು ಪಡೆಯುತ್ತಾನೆ.

ವಿವರಣೆ:- ಜ್ಞಾನ ಹಾಗು ಕರ್ಮಯೋಗಗಳು ಒಂದೇ ನಾಣ್ಯದ ಎರಡು ಮೈಗಳು. ಎರಡನ್ನು ಬೇರ್ಪಡಿಸುವದೇ ಅಸಾಧ್ಯ. ಹೀಗಿದ್ದರೂ ಅವುಗಳಲ್ಲಿ ಭೇದ ಮಾಡುತ್ತಾರೆ ಅನೇಕ ಜನ. ಅದೇಕೆ? ಆ ಬಗ್ಗೆ ಭಗವಂತನು ಬಹು ಸಮಂಜಸವಾದ ಮಾತುಗಳನ್ನಿಲ್ಲಿ ಹೇಳುತ್ತಿದ್ದಾನೆ.

ಭಗವಂತ:– "ಅರ್ಜುನ, ಬಹು ಜನ ವಿದ್ವಾನರು ಸಾಂಖ್ಯ ಮತ್ತು ಯೋಗಗಳನ್ನು ಬೇರೆ ಬೇರೆ ಎಂದು ಪ್ರತಿಪಾದಿಸುತ್ತಾರೆ. ತಮ್ಮ ಪಕ್ಷದಲ್ಲಿ ಅಭಿನಿವೇಶ ತಾಳಿ, ಪ್ರತಿಪಕ್ಷದವರನ್ನು ಹೀನಾಯಮಾನವಾಗಿ ಜರೆಯುತ್ತಾರೆ. ಖಂಡನ ಮಂಡನವೆಂಬ ಸೈದ್ಧಾಂತಿಕ ಕದನ ಮಾಡುತ್ತಾರೆ. ಈ ಪಂಡಿತರ ಹೃದಯದಲ್ಲಿ ಶಾಂತಿ ಇಲ್ಲ; ದ್ವೇಷದ ಉರಿ ಹತ್ತಿಕೊಂಡಿದೆ. ಇವರು ನಿಜವಾಗಿ

ನೋಡಿದರೆ ಸಾಂಖ್ಯವನ್ನೂ ಅರಿಯರು, ಕರ್ಮ ಯೋಗವನ್ನೂ ತಿಳಿಯರು. ಇವರನ್ನು ಬಾಲಕರೆಂದೇ ತಿಳಿ.

"ನಿಜವಾದ ಪಂಡಿತರು ಅವೆರಡನ್ನು ಒಂದೇ ದೃಷ್ಟಿಯಿಂದ ಕಾಣುತ್ತಾರೆ. ಎರಡೂ ಯೋಗಗಳ ಅಂತರಂಗವನ್ನು ಅರಿತ ಅವರು ಪಕ್ಷಾಭಿನಿವೇಶವಿಲ್ಲದವರು. ನಿಷ್ಕಲ್ಮಷ ಮನಸ್ಸಿನಿಂದ ಕರ್ಮಯೋಗ ಆಚರಿಸುತ್ತಾರೆ; ಕರ್ಮಯೋಗದ ಪರಿಪಕ್ವತೆಯುಂಟಾದ ಒಡನೆಯೇ ದಿವ್ಯಜ್ಞಾನ ಭಾಸ್ಕರನನ್ನು ಕಂಡು ಆನಂದಿಸುತ್ತಾರೆ.

"ಪಾರ್ಥ, ಎರಡೂ ಯೋಗಗಳು ಪರಸ್ಪರ ಪೂರಕ. ಅವುಗಳ ಗುರಿಯೂ ಒಂದೇ. ಅದು ಆತ್ಮಸಾಕ್ಷಾತ್ಕಾರ! ಆದುದರಿಂದ ನೀನು ಎರಡನ್ನೂ ಪ್ರೀತಿಸು. ಕರ್ಮಯೋಗಿಯಾಗಿ ನಿತ್ಯದಲ್ಲಿ ದಾನ ಧರ್ಮ ಧ್ಯಾನ ಮುಂತಾದ ಕರ್ಮಗಳನ್ನು ಆಯಾಸ ಪಡದೆ ಆಚರಿಸು. ಮೈ ಬೆವರೊಡೆವಂತೆ ದುಡಿದವನಿಗೆ ಊಟ ರುಚಿ. ದುಡಿಯದವನಿಗೆ ಮುಂದಿದ್ದ ಮೃಷ್ಟಾನ್ನ ಕೂಡ ಸವಿಯಾಗದು. ಹಾಗೆ, ನಿಷ್ಕಾಮನೆಯಿಂದ ಶ್ರಮಿಸಿದೆಯಾದರೆ ಜಗವೆಲ್ಲ ಆನಂದದ ಆಗರವಾಗುವದು. ಆಗ ವಿಶ್ವದ ಪರಮ ಮೂಲನಾದ ಪರಮ ಪ್ರಭು ಪರಮಾತ್ಮನು ತಾನೇ ಮುಖದೋರುತ್ತಾನೆ. ನಿನ್ನ ಮಹಾ ಪ್ರಜ್ಞೆಯಲ್ಲಿ ಅರಿವಿನ ರೂಪದಿಂದ ಅವತರಿಸುತ್ತಾನೆ."

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥೫॥**

**ಭಾವ:–** ಜ್ಞಾನನಿಷ್ಠರಿಂದ ಯಾವ ಸ್ಥಾನವು ಹೊಂದಲ್ಪಡುತ್ತದೆಯೋ ಅದು ಯೋಗಿಗಳಿಂದಲೂ ಹೊಂದಲ್ಪಡುತ್ತದೆ. ಯಾವನು ಜ್ಞಾನಯೋಗ ಕರ್ಮಯೋಗಗಳನ್ನು ಒಂದೇ ಎರದು ನೋಡುತ್ತಾನೆಯೋ ಅವನು ನಿಜವಾಗಿಯೂ ನೋಡುತ್ತಾನೆ.

**ವಿವರಣೆ:–** "ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥"

ಕೆಲವರು ಧ್ಯಾನಯೋಗದಿಂದ, ಕೆಲವರು ಆತ್ಮಾರ್ಪಣ ರೂಪ ಭಕ್ತಿಯೋಗದಿಂದ, ಕೆಲವರು ಜ್ಞಾನಯೋಗದಿಂದ, ಮತ್ತೆ ಕೆಲವರು ಕರ್ಮಯೋಗದಿಂದ ಪರಮಾತ್ಮನನ್ನು ಕಾಣುತ್ತಾರೆ. ಈ ಪ್ರಮಾಣ ವಚನಾನುಸಾರ ಜ್ಞಾನ, ಧ್ಯಾನ ಕರ್ಮ, ಭಕ್ತಿಗಳು ಮುಕ್ತಿ–ಮಾರ್ಗಗಳು. ನಾಲ್ಕರ ಗುರಿಯೂ ಒಂದೇ–ಪರಮ ನಿರ್ವಾಣ !

(೧) **ಜ್ಞಾನಮಾರ್ಗ:–** ವಿವೇಕ ವಿರಕ್ತಿ ಶಮದಮಾದಿ ಷಡ್ಗುಣ ಸಂಪತ್ತು ಮುಮುಕ್ಷತ್ವಯುಕ್ತ ಸಾಧಕ–ಅಧಿಕಾರಿ ಗುರು ಸಾನಿಧ್ಯದಲ್ಲಿ ವಾಸಿಸಿ, ಗುರುಗಳ ಮುಖದಿಂದ ಮಹಾವಾಕ್ಯಗಳ ಶ್ರವಣ ಮಾಡಿ ಮನನ, ನಿದಿಧ್ಯಾಸನಗಳ ಮೂಲಕ ಪರಿಶುದ್ಧಾರ್ಥವನ್ನು ಪರಿಗ್ರಹಿಸಬೇಕು. ಆಗ ಜೀವಭಾವ ಅಡಗಿ

ಪ್ರತ್ಯಗಾತ್ಮ ಭಾವವು ವ್ಯಕ್ತವಾಗುವದು; ಬಳಿಕ ಆ ಪ್ರತ್ಯಗಾತ್ಮ ಭಾವಕೂಡ ಪರಬ್ರಹ್ಮನಲ್ಲಿ ಬಯಲಾಗಿ "ಅಹಂಬ್ರಹ್ಮಾಸ್ಮಿ" ಎಂಬ ಪವಿತ್ರ ಸ್ಫುರಣೆ ಉದಿಸುವದು. ಈ ಸ್ಫುರಣೆಯೇ ಜ್ಞಾನ. ಈ ಜ್ಞಾನವುಳ್ಳವನು ಜ್ಞಾನಯೋಗಿ. ಕಾಲಾವಕಾಶದಲ್ಲಿ ಈ ಅಹಂಬ್ರಹ್ಮಾಸ್ಮಿ ಭಾವವೂ ಮರೆಯಾಗುವದು. ಕೇವಲ ಅಸ್ತಿತ್ವವೊಂದೇ ಉಳಿಯುವದು. ಅಲ್ಲಿ ಅಹಂ ಇಲ್ಲ; ಅಲ್ಲಿ ಬ್ರಹ್ಮಭಾವವಿಲ್ಲ! ಜ್ಞಾನದ ಮಿಸುಗಿಲ್ಲ. ಜ್ಞಾನಯೋಗದ ಕೊನೆಯದು !

(೨) ಧ್ಯಾನಮಾರ್ಗ:- ನಿಷ್ಕಾಮ ಕರ್ಮಯೋಗದ ಮೂಲಕ ಯಮ ನಿಯಮಗಳನ್ನು ಸಾಧಿಸಿ, ಮನಸ್ಸನ್ನು ಅಕ್ಲಿಷ್ಟಗೊಳಿಸಿಕೊಂಡ ಸಾಧಕನು ಅಧಿಕಾರಿ. ಅವನು ಸತ್ವಯುತವಾದ ತನ್ನ ಮನಸ್ಸನ್ನು ಆತ್ಮಪ್ರಭುವಿನತ್ತ ಅವಿಚ್ಛಿನ್ನವಾಗಿ ಹರಿಸುತ್ತಾನೆ. ಇದಕ್ಕೆ ಧ್ಯಾನವೆನ್ನುತ್ತಾರೆ: ಈ ಧ್ಯಾನವು ಪರಿಪಕ್ವವಾದರೆ ಧ್ಯೇಯಾಕಾರವಾದ ಮನಸ್ಸು ಧ್ಯೇಯದಲ್ಲಿ ಅವಿಚಲವಾಗಿ ಪ್ರತಿಷ್ಠಿತವಾಗುತ್ತದೆ. ಆಗ ಆತ್ಮಾನುಭೂತಿ ಸಮನಿಸುತ್ತದೆ. ಅದರಿಂದ ಕೈವಲ್ಯ ಪ್ರಾಪ್ತಿ!

(೩) ಕರ್ಮಮಾರ್ಗ:- ಪರಮಾತ್ಮನ ಮೇಲೆ ಸಂಪೂರ್ಣ ಭಾರ ಹಾಕಿ, ಕರ್ಮಕರ್ತೃತ್ವ ಬುದ್ಧಿಯನ್ನು ತೊರೆದು, ಕರ್ಮಫಲಾಭಿರತಿಯನ್ನು ನೀಗಿ ಸತ್ಕ್ರಿಯೆಗಳನಾಚರಿಸುವದು ಕರ್ಮಪಥ. ಆಲಸ್ಯ ಪ್ರಮಾದ ತಂದ್ರಾ ಮುಂತಾದ ಜಡ ಭಾವಗಳಿಗೆ ಅವಕಾಶ ಕೊಡದೆ, ಸದಾ ಕ್ರಿಯಾಶೀಲನಾದ ಸಾಧಕನು ಈ ಪಥದ ಅಧಿಕಾರಿ. ಅವನು ಕರ್ಮ ಮಾಡುತ್ತ ಮಾಡುತ್ತ 'ಅಹಂ' ಭಾವನೆಯನ್ನೇ ಸಂಪೂರ್ಣ ಕಳೆದುಕೊಳ್ಳುತ್ತಾನೆ. ಆಗ ಅವನು ಪರಮಾತ್ಮನೊಂದಿಗೆ ಒಂದಾಗುತ್ತಾನೆ. ಅದೇ ಪೂರ್ಣತೆ.

(೪) ಭಕ್ತಿಮಾರ್ಗ:- ಭಕ್ತಿಯೋಗಿಯು ದೇವನನ್ನು ಸರ್ವರಕ್ಷಕ ಸರ್ವಾಧಿಷ್ಠಾನ ಸರ್ವಾಂತರ್ಯಾಮಿ ಎಂದು ಬಗೆದು ತನ್ನನ್ನೇ ಅವನಲ್ಲಿ ಅರ್ಪಿಸುತ್ತಾನೆ. ಅಲ್ಲಿಂದ ಅತ್ತ, ತಾನಿಲ್ಲ, ತನ್ನ ಬಿಟ್ಟು ಬೇರೆ ದೇವನಿಲ್ಲ! ಭಕ್ತ ದೇವ ಸಾಮರಸ್ಯ! ವಿಮುಕ್ತಿಪದ!

ಒಂದು ಗಮನಾರ್ಹ ಸಂಗತಿ: ಜ್ಞಾನಯೋಗ, ಧ್ಯಾನಯೋಗ ಹಾಗು ಭಕ್ತಿಯೋಗಗಳನ್ನು ಕರ್ಮಯೋಗದಿಂದ ಬೇರ್ಪಡಿಸಲು ಬಾರದು. ಕರ್ಮಯೋಗವು ಆ ಮೂರು ಯೋಗಸದನಗಳ ರಚನೆಗೆ ಅಡಿಪಾಯ! ಕರ್ಮಯೋಗವು ಪ್ರಪ್ರಥಮ ಸೋಪಾನ. ಅದರ ಮೇಲೆ ಹೆಜ್ಜೆ ಇಟ್ಟೇ ಜ್ಞಾನ–ದೇವಾಲಯ, ಧ್ಯಾನ–ದೇವಾಲಯ, ಭಕ್ತಿ–ದೇವಾಲಯಗಳನ್ನು ಪ್ರವೇಶಿಸಬೇಕು. ಇದು ಅನಿವಾರ್ಯ! ಆದ್ದರಿಂದ ಕರ್ಮಮಾರ್ಗವನ್ನು ಅಲಕ್ಷಿಸಿದರೆ ಆಧ್ಯಾತ್ಮದಲ್ಲಿ ಪ್ರಗತಿಯೇ ಸಾಧ್ಯವಿಲ್ಲ.

ಸಂಬಂಧ:-ಅರ್ಜುನ:– " ಭಗವಂತನೇ, ಕರ್ಮಯೋಗಿಯು ಕರ್ಮಾಂತ್ಯ

ದಲ್ಲಿ ಜ್ಞಾನವನ್ನು ಗಳಿಸಿಯೇ ಪರಮುಕ್ತಿ ಪಡೆಯುವದಾದರೆ, ಕರ್ಮಕ್ಷೇತ್ರ ಜ್ಞಾನಯೋಗರೂಪ ಸನ್ಯಾಸವೇ ಶ್ರೇಷ್ಠವೆಂದಂತಾಯಿತಲ್ಲ! ಹಾಗಿದ್ದರೆ ಕರ್ಮ ಯೋಗವ ಬಿಟ್ಟು ಸನ್ಯಾಸವನ್ನೇ ಏಕೆ ಪತ್ಕರಿಸಬಾರದು?"

ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।
ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥೬॥

**ಅರ್ಥ:**-ತು =ಆದರೆ ಮಹಾಬಾಹೊ =ಹೇ ಮಹಾಬಾಹುವೆ, ಸನ್ಯಾಸಃ =ಸನ್ಯಾಸವು ಅಯೋಗತಃ =ಕರ್ಮಯೋಗದ ಸಹಾಯವಿಲ್ಲದೆ, ಆಪ್ತುಂ =ಹೊಂದಲು ದುಃಖಂ= ಕಷ್ಟ ವಾಗಿದೆ, ಯೋಗಯುಕ್ತಃ= ಯೋಗದಿಂದ ಕೂಡಿರುವ, ಮುನಿಃ =ಮುನಿಯು ನ ಚಿರೇಣ = ಶೀಘ್ರವಾಗಿ ಬ್ರಹ್ಮ= ಬ್ರಹ್ಮವನ್ನು ಅಧಿಗಚ್ಛತಿ =ಹೊಂದುತ್ತಾನೆ.

**ವಿವರಣೆ:**– "ಅರ್ಜುನ, ಕರ್ಮಯೋಗದ ಹಿರಿಮೆ ಅಷ್ಟಿಷ್ಟಲ್ಲ. ಇದು ಸರ್ವಯೋಗಗಳ ಪ್ರಾಣ. ವ್ಯಕ್ತಿ, ದೇಶ, ಮಾನವಜನಾಂಗ-ಎಲ್ಲರ ಪ್ರಗತಿ ಕರ್ಮ ಯೋಗದ ಮೇಲೆಯೇ ನಿಂತಿದೆ. ನಿರಹಂಕಾರ, ನಿಸ್ಪೃಹತೆ ಹಾಗು ದಾಸೋಹ ಭಾವದಿಂದ ಲೋಕಹಿತಕ್ಕಾಗಿ ದುಡಿಯದೆ ಅದೆಂಥ ಜ್ಞಾನ ಪಡೆದರೇನು? ಧ್ಯಾನಗೈದರೇನು ? ಸ್ವಾರ್ಥ ಸಾಧನೆಯ ಹೇತುವಿನಿಂದ ದೇಶ ದೇಶ ತಿರುಗಿ ಪ್ರಚಂಡ ಉಪನ್ಯಾಸಗಳನ್ನಿತ್ತರೇನು ? ಎಲ್ಲ ಅರ್ಥಹೀನ. ನೆರೆಹೊರೆಯ ಬಂಧು ಗಳ ಕಷ್ಟ ಕೋಟಲೆಗಳತ್ತ ಹಣಿಕಿಯೂ ನೋಡದ ಜ್ಞಾನಿಗಳಿಂದ ಯಾರಿಗೆ ಹಿತ ವಿದೆ? ಅರ್ಜುನ, ನೀನು ಮೌನವಾಗಿ ದುಡಿ. ಕರ್ತವ್ಯ ಕರ್ಮಗಳನ್ನು ಆತ್ಮಾ ರ್ಪಣ ಬುದ್ಧಿಯಿಂದ ನಿರ್ವಹಿಸು. ನಿನಗೆ ಬ್ರಹ್ಮಸಾಕ್ಷಾತ್ಕಾರ ತಾನಾಗಿಯೇ ದೊರೆಯುವದು."

ಕರ್ಮಯೋಗದಿಂದ ಪರಾವೃತ್ತರಾದ ಸನ್ಯಾಸಿಗಳ ಹೀನ ಬದುಕನ್ನು ವರ್ಣಿಸುವ ಒಂದು ಋಷಿ-ವಚನ ಇಲ್ಲಿದೆ;

'ಪ್ರಮಾದಿನೋ ಬಹಿಶ್ಚಿತ್ತಾಃ ಪಿಶುನಾಃ ಕಲಹೋತ್ಸುಕಾಃ।
ಸನ್ಯಾಸಿನೋಽಪಿ ದೃಶ್ಯಂತೇ ವೇದ ಸಂದೂಷಿತಾಶಯಃ ॥'

ಅವರು (ಲೋಕ ಸಂಗ್ರಹ ಮಾಡದ ಸನ್ಯಾಸಿಗಳು) ಸೆರೆ ಗಾಂಜಿ ಇತ್ಯಾದಿ ಮಾದಕ ಪದಾರ್ಥ ಸೇವಿಸುವ ಉನ್ಮತ್ತರು ಹಾಗು ಸ್ತ್ರೀ ಲೋಲರು (ಪ್ರಮಾದಿನಃ). ಅವರ ಮನಸ್ಸು ಸದಾ ಹೊರ ಮುಖ; ಹೊರಗಿನ ರೂಪ ಶಬ್ದ ರಸಗಳಿಗೆ ಸೋತಿದೆ; ಏಕಾಂತ ಚಿಂತನವು ಅವರಿಗೆ ಆಗಿ ಬರದು. ಅವರು ಚಾಡಿಕೋರರು; ನಿಂದಕರು; ದಿನದ ಬಹುಭಾಗವನ್ನು ಇನ್ನೊಬ್ಬರ ಅವಗುಣ ಎಣಿಸಲು ಕಳೆಯು ತ್ತಾರೆ (ಪಿಶುನಾಃ). ಮುಖದಿಂದ ಅದ್ವೈತ ಮಾತನಾಡಿದರೂ ದ್ರವ್ಯ ಭೂಮಿ ಮಠ ಮಂದಿರಗಳಿಗಾಗಿ ವ್ಯಾಜ್ಯ ಮಾಡುತ್ತಾರೆ (ಕಲಹೋತ್ಸುಕಾಃ). ಎರಡು ವ್ಯಕ್ತಿಗಳಿಗೆ, ಎರಡು ಗುಂಪುಗಳಿಗೆ ಕದನ ಹಚ್ಚುವದೆಂದರೆ ಅವರಿಗೆ ಮಧುವಿ ನಷ್ಟು ಸವಿ. ವೇದ ದೂಷಿತ ಶಾಸ್ತ್ರ ವಾಚನ ಹಾಗು ನಿಷಿದ್ಧ ವಸ್ತುಗಳ ಸಂಗ್ರಹ

ಗಳಲ್ಲಿ ಅವರಿಗೆ ಬಹು ಆಶೆ (ವೇದ ಸಂದೂಷಿತಾಶಯಃ). ಇಂಥ ಸನ್ಯಾಸಿಗಳಿಗೆಲ್ಲಿ ದೇವ–ದರ್ಶನ?

ಜ್ಞಾನಿಗಳಾಗಬೇಕಾದ ಸನ್ಯಾಸಿಗಳು, ದಾರ್ಶನಿಕರು ತಮಗಾಗಿ ಅಲ್ಲ, ಆದರೆ ಇಡೀ ದೇಶಕ್ಕಾಗಿ ಹೃದಯತಃ ದುಡಿಯಬೇಕು. ಹೆಚ್ಚೇನು, ವಿಶ್ವದ ಸೇವೆ ಮಾಡುವ ಮನಸ್ಸಿದ್ದವರೇ ಸನ್ಯಾಸಿಗಳು. ಅವರೇ ಮಹಾ ಮುನಿಗಳು.

**ಸಂಬಂಧ:**–ದಿವ್ಯಜ್ಞಾನ ಗಳಿಸಿದ ನಂತರ ಮಾಡಿದ ಕರ್ಮಗಳಿಂದ ಬಂಧನ ಉಂಟಾಗುವದಿಲ್ಲವೆ ?

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥೭॥**

**ಅರ್ಥ:**- ವಿಶುದ್ಧಾತ್ಮಾ=ಪರಿಶುದ್ಧ ಚಿತ್ತನು, ವಿಜಿತಾತ್ಮಾ =ನಿಗ್ರಹಿತ ಶರೀರನು, ಜಿತೇಂದ್ರಿಯಃ =ಸಂಯಮಿತ ಇಂದ್ರಿಯನು, ಸರ್ವಭೂತಾತ್ಮಭೂತಾತ್ಮಾ =ಸಕಲ ಭೂತಗಳ ಆತ್ಮವಾದ ಪರಮಾತ್ಮನನ್ನು ತನ್ನ ಆತ್ಮವೆಂದೇ ತಿಳಿದವನು (ಆದ) ಯೋಗಯುಕ್ತಃ =ಕರ್ಮ ಯೋಗಿಯು ಕುರ್ವನ್ ಅಪಿ = ಕರ್ಮ ಮಾಡುತ್ತಿದ್ದರೂ ನ ಲಿಪ್ಯತೇ =(ಆ ಕರ್ಮಗಳಿಗೆ) ಅಂಟಿಕೊಳ್ಳುವದಿಲ್ಲ.

**ವಿವರಣೆ:**– **ಭಗವಂತ:**– "ಭಾರತ, ರಾಗ ದ್ವೇಷಗಳನ್ನು ಮನಸ್ಸಿನಿಂದ ತೆಗೆದುಹಾಕಿದವ ವಿಶುದ್ಧಾತ್ಮ. ದೇಹವನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡ ವನು ವಿಜಿತಾತ್ಮ. ವಿಷಯಗಳಿಂದ ಇಂದ್ರಿಯಗಳನ್ನು ನಿಗ್ರಹಿಸಿದವನು ಜಿತೇಂ ದ್ರಿಯ. ಸರ್ವ ಪ್ರಾಣಿಗಳ ಅಂತರ್ಯದಲ್ಲಿ ಆತ್ಮರೂಪದಿಂದ ನೆಲೆಸಿರುವ ಪರ ಮಾತ್ಮನೇ ತನ್ನ ಆತ್ಮವೆಂದು ತಿಳಿದವನು ಸರ್ವಭೂತಾತ್ಮಭೂತಾತ್ಮಾ. ಈ ನಾಲ್ಕು ದೈವೀ ಲಕ್ಷಣಗಳಿಂದ ಕೂಡಿದ ನಿಷ್ಕಾಮ ಕರ್ಮಯೋಗಿಯು (ಯೋಗ ಯುಕ್ತನು) ಅಗಣಿತ ಕರ್ಮಗಳನ್ನು ಜೀವನವಿಡಿ ಎಸಗಿದರೂ ಆ ಕರ್ಮಗಳಿಂದ ಬದ್ಧನಾಗುವದಿಲ್ಲ."

ಕರ್ಮಯೋಗಿಗೆ ತ್ರಿದಂಡೀ ಎಂದೂ ಕರೆಯಲಾಗುತ್ತಿದೆ. ಮನುಸ್ಮೃತಿ ಯಲ್ಲಿ ತ್ರಿದಂಡಿಯ ವ್ಯಾಖ್ಯೆ ಇಂತಿದೆ:

"ವಾಗ್ದಂಡೋऽಥ ಮನೋದಂಡಃ ಕಾಯದಂಡಸ್ತಥೈವ ಚ॥
ಯಸ್ಯೈತೇ ನಿಯತಾ ದಂಡಾ ಸ ತ್ರಿದಂಡೀತಿ ಕಥ್ಯತೇ ॥ "

ವಾಗಾದಿ ಸಕಲೇಂದ್ರಿಯಗಳನ್ನು, ಮನಸ್ಸನ್ನು ಮತ್ತು ದೇಹವನ್ನು ದಂಡಿ ಸಿದವನು (ನಿಗ್ರಹಿಸಿದವನು) ತ್ರಿದಂಡಿಯು. ಅವನು ಸಂಯಮನಯೋಗಿ. ಬದು ಕಿನ ಮಧ್ಯದಲ್ಲಿದ್ದರೂ ನಿರ್ಮುಕ್ತ.

**ಸಂಬಂಧ:**– ಕರ್ಮಮಾಡಿದರೂ ಆ ಕರ್ಮಗಳಿಂದ ಅದೇಕೆ ಲಿಪ್ತನಾಗು ವದಿಲ್ಲ? ಈ ಪ್ರಶ್ನೆಗೆ ಭಗವಂತ ಉತ್ತರವೀಯುತ್ತಾನೆ. ಕರ್ತೃತ್ವಾಭಿಮಾನವಿಲ್ಲ ದಿದ್ದರೆ ಕರ್ಮಲೇಪವಾಗದೆಂದು ಭಗವಂತನ ಆಶಯ.

ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ಗಚ್ಛನ್ಸ್ವಪನ್‌ಶ್ವಸನ್ ॥೮॥
ಪ್ರಲಪನ್ವಿಸೃಜನ್ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥೯॥

ಅರ್ಥ:– ತತ್ತ್ವವಿತ್= ತತ್ತ್ವಗಳನ್ನು ಅರಿತ, ಯುಕ್ತಃ= ಕರ್ಮಯೋಗಿಯು, ಪಶ್ಯನ್= ನೋಡುವಾಗ, ಶೃಣ್ವನ್ =ಕೇಳುವಾಗ, ಸ್ಪೃಶನ್= ಮುಟ್ಟುವಾಗ, ಜಿಘ್ರನ್ =ಮೂಸಿಸುವಾಗ, ಅಶ್ನನ್ =ತಿನ್ನುವಾಗ, ಗಚ್ಛನ್ನ =ನಡೆಯುವಾಗ, ಸ್ವಪನ್ = ನಿದ್ರೆ ಮಾಡುವಾಗ ಶ್ವಸನ್= ಉಸಿರು ಬಿಡುವಾಗ, ಪ್ರಲಪನ್ =ಮಾತನಾಡುವಾಗ, ವಿಸೃಜನ್ = ವಿಸರ್ಜಿಸುವಾಗ, ಗೃಹ್ಣನ್ =ಗ್ರಹಿಸುವಾಗ, ಉನ್ಮಿಷನ್ ನಿಮಿಷನ್ ಅಪಿ =ಕಣ್ಣು ತೆರೆಯು ವಾಗ ಹಾಗು ಮುಚ್ಚುವಾಗ ಇಂದ್ರಿಯಾಣಿ =ಇಂದ್ರಿಯಗಳು, ಇಂದ್ರಿಯಾರ್ಥೇಷು= ಇಂದ್ರಿ ಯ–ವಿಷಯಗಳಲ್ಲಿ, ವರ್ತಂತೇ= ವರ್ತಿಸುತ್ತವೆ; ಇತಿ =ಹೀಗೆ, ಧಾರಯನ್= ನಿಶ್ಚಯಿಸಿ, ಕಿಂಚಿತ್ ಏವ =ಏನನ್ನೂ ನ ಕರೋಮಿ= ನಾನು ಮಾಡುತ್ತಿಲ್ಲ, ಇತಿ =ಎಂದು, ಮನ್ಯೇತ= ತಿಳಿಯಬೇಕು.

ವಿವರಣೆ:– ವಿಶ್ವವು ಮಹಾಸಾಗರ! ಅದರಲ್ಲಿರುವ ವಸ್ತುಗಳು ಸಾಗರದ ತೆರೆಗಳಂತೆ ಅಸಂಖ್ಯ! ಅವುಗಳಲ್ಲಿ ಕೆಲವು ಅತಿ ಸ್ಥೂಲ; ಕೆಲವು ಅತ್ಯಂತ ಸೂಕ್ಷ್ಮ; ಅವುಗಳಲ್ಲಿ ಕೆಲವು ಸ್ಥೂಲ ಸೂಕ್ಷ್ಮಗಳ ಸಮ್ಮಿಶ್ರ. ಆ ವಸ್ತುಗಳನ್ನು ವಿವಿಧ ರೀತಿಯಿಂದ ವಿಮರ್ಶಿಸುತ್ತ ಹೋದರೆ. ಎಲ್ಲ ವಸ್ತುಗಳ ಬಾಹ್ಯ ಭಿನ್ನತೆ ಮರೆಯಾಗಿ ಎರಡೇ ಎರಡು ಮೂಲ ವಸ್ತುಗಳು ಉಳಿಯುತ್ತವೆ. ಒಂದು ಪುರುಷ; ಇನ್ನೊಂದು ಪ್ರಕೃತಿ. ಪುರುಷನು ಅರಿವಿನ ಅನಂತ ಮೂರ್ತಿ. ಪ್ರಕೃ ತಿಯು ಜಡ ಜಗತ್ತಿನ ಆದಿ ಜನನಿ; ಸತ್ವ ರಜ ತಮ ಗುಣಗಳ ಸಾಮ್ಯಾವಸ್ಥೆ! ಅವ್ಯಕ್ತ ಶಕ್ತಿ! ಪುರುಷ ಅಪರಿಣಾಮಿ; ಪ್ರಕೃತಿ ಪರಿಣಾಮಶೀಲ. ಸೂರ್ಯನ ಸಾನಿಧ್ಯದಲ್ಲಿ ಮೇಣ ಕರಗುವಂತೆ, ಹೂವು ಅರಳುವಂತೆ, ಮೇಘಗಳು ಮಳೆ ಸುರಿ ಸುವಂತೆ ಪುರುಷ ಭಾಸ್ಕರನ ಪವಿತ್ರ ಸಾನಿಧ್ಯದಲ್ಲಿ ಪ್ರಕೃತಿ ವ್ಯಕ್ತವಾಗುತ್ತದೆ. ಸತ್ವಾದಿ ಗುಣಗಳು ಮೂರ್ತಗೊಂಡು ವಿಶ್ವವನ್ನು ರಚಿಸುತ್ತವೆ. ಅಂದರೆ–

ಸತ್ವಗುಣದ ಅತಿ ಸೂಕ್ಷ್ಮ ಮೂರ್ತರೂಪವೇ ಮಹತ್ತು; ಸ್ವಜ್ಞಪ್ತಿಯ ತಾಣ. ನಿರ್ವಿಕಲ್ಪ ಅವಸ್ಥೆಯನ್ನು ಪ್ರವೇಶಿಸಿದಾಗ ನಾವು ಈ ಮಹತ್ತನ್ನು ಕಾಣ ಬಲ್ಲೆವು. ರಜೋಗುಣದ ಅತಿ ಸೂಕ್ಷ್ಮ ಮೂರ್ತರೂಪವೇ ಅಹಂಕಾರ; ಅಸ್ಪಷ್ಟ ಇತರಜ್ಞಪ್ತಿ ಹಾಗು ಸುಸ್ಪಷ್ಟ ಸ್ವಜ್ಞಪ್ತಿಗಳ ತಾಣವಿದು. ಧ್ಯಾನಾವಸ್ಥೆಯಲ್ಲಿ ನಿಂತಾಗ ನಾವು ಈ ಅಹಂಕಾರ ತತ್ತ್ವವನ್ನು ಕಾಣಬಲ್ಲೆವು. ತಮೋಗುಣದ ಸೂಕ್ಷ್ಮ ಮೂರ್ತರೂಪಗಳೇ ಶಬ್ದ ಸ್ಪರ್ಶಾದಿ ಪಂಚ ತನ್ಮಾತ್ರೆಗಳು. ಇತರ ಜ್ಞಪ್ತಿ ಹಾಗು ಸ್ವಜ್ಞಪ್ತಿ ಎಂಬ ಉಭಯ ಜ್ಞಪ್ತಿ ಸ್ಥಾನವಿದು. ದೇವ ಚಿಂತ ನೆಯು ಹೆಚ್ಚಿ ಮನಸ್ಸು ಏಕಾಗ್ರಗೊಳ್ಳತೊಡಗಿದಾಗ ನಾವು ಈ ಪಂಚ ತನ್ಮಾ

ತ್ರೆಗಳನ್ನು ಕಾಣಬಲ್ಲೆವು. ಇಲ್ಲಿರುವ ಶಬ್ದಾದಿಗಳು ದಿವ್ಯ!

ಪಂಚ ತನ್ಮಾತ್ರೆಗಳ ಮಹಾಗರ್ಭದಿಂದ ಆಕಾಶ ವಾಯು ಅಗ್ನಿ ಜಲ ಹಾಗು ಭೂಮಿ ಎಂಬೈದು ಮಹಾ ಭೂತಗಳು ಮೂಡಿ ಬರುತ್ತವೆ. ಸೃಷ್ಟಿ ಶಕ್ತಿಯುಕ್ತ 'ವಿಧಿ' ಯು ಈ ಪಂಚಭೂತಗಳನ್ನು ಬಗೆ ಬಗೆಯಾಗಿ ಒಂದರ ಳೊಂದನ್ನು ಸಮ್ಮಿಶ್ರಗೊಳಿಸಿ ವಿವಿಧ ತತ್ತ್ವಗಳನ್ನು ನಿರ್ಮಿಸುತ್ತಾನೆ. ಈ ಮಿಶ್ರಣ ಕ್ರಿಯೆಗೆ ಪಂಚೀಕರಣವೆಂದು ನಾಮ.

ಬ್ರಹ್ಮನು ಒಂದು ವಿಶಿಷ್ಟ ಪ್ರಮಾಣವಲ್ಲಿ ಭೂತಗಳನ್ನು ತೆಗೆದುಕೊಂಡು ಪ್ರತಿಯೊಂದರಲ್ಲಿ ಅರ್ಧ ಅರ್ಧ ಭಾಗ ಮಾಡಿದ. ಮೊದಲಿನ ಅರ್ಧಭಾಗಗಳಿಂದ ಕ್ರಮವಾಗಿ ಜೀವ, ವ್ಯಾನ, ನೇತ್ರ, ರಸ ಹಾಗು ಪಾಯು ತತ್ತ್ವಗಳನ್ನು ನಿರ್ಮಿಸಿದ. ಉಳಿದ ಅರ್ಧ ಭಾಗಗಳಲ್ಲಿ ಮತ್ತೆ ನಾಲ್ಕು ನಾಲ್ಕು ವಿಭಾಗ ಮಾಡಿ ಮೊದಲಿನ ಮೂಲ ಅರ್ಧ ಭಾಗಗಳಲ್ಲಿ ಉಳಿದ ಭೂತಗಳ ೧/೮ (ಎರಡನೆಯ ಅರ್ಧದ ೧/೪ ಭಾಗವನ್ನು) ಬೆರೆಸಿದ. ಆಗ ಒಟ್ಟು ಇಪ್ಪತ್ತು ತತ್ತ್ವಗಳು ತೋರಿ ಬಂದವು.

ವಿವರವಾಗಿ ಹೇಳುವದಾದರೆ– ೧) ಆಕಾಶ:– ಅರ್ಧ ಭಾಗವು ಜ್ಞಾತೃ. ಅದರಲ್ಲಿ ವಾಯುವಿನ ೧/೮ ಕೂಡಿಸಿದರೆ ಮನದ ಉತ್ಪತ್ತಿ. ವಾಯುವಿನ ಚಂಚಲತೆ ಅದಕ್ಕಿದೆ. ಅಗ್ನಿಯ ೧/೮ ಕೂಡಿಸಿದರೆ ಬುದ್ಧಿಯ ಉತ್ಪತ್ತಿ. ಅಗ್ನಿಯ ಪ್ರಕಾಶ ಗುಣ ಅದಕ್ಕಿದೆ. ಜಲದ ೧/೮ ಕೂಡಿಸಿದರೆ ಚಿತ್ತಿನ ಉತ್ಪತ್ತಿ. ಜಲದ ಗ್ರಹಣ ಗುಣ ಅದಕ್ಕಿದೆ. ಪೃಥ್ವಿಯ ೧/೮ ಕೂಡಿಸಿದರೆ ಅಹಂಕಾರದ ಉತ್ಪತ್ತಿ. ಭೂಮಿಯ ಜಡ ಗುಣ ಅದಕ್ಕಿದೆ. ಇವು ಐದು ಆಕಾಶದ ತತ್ತ್ವಗಳು.

೨) ವಾಯು:–ಅರ್ಧ ಭಾಗವು ವ್ಯಾನ. ಅದರಲ್ಲಿ ಆಕಾಶದ ೧/೮ ಬೆರೆತರೆ ಸಮಾನದ ಉದಯ. ಅಗ್ನಿಯ ೧/೮ ಬೆರೆತರೆ ಉದಾನದ ಉದಯ ೧/೮ ಜಲದ ಬೆರೆತರೆ ಅಪಾನದ ಉದಯ. ಪೃಥ್ವಿಯ ೧/೮ ಬೆರೆತರೆ ಪ್ರಾಣದ ಉದಯ. ಇವು ಐದು ವಾಯುವಿನ ತತ್ತ್ವಗಳು.

(೩) ಅಗ್ನಿ:- ಅರ್ಧಭಾಗವು ನೇತ್ರ. ಅದರಲ್ಲಿ ಆಕಾಶದ ೧/೮ ಕೂಡಿದರೆ ಕರ್ಣ; ಆಕಾಶದ ಗುಣವಾದ ಶಬ್ದ ಪ್ರಕಾಶಕ ಶಕ್ತಿ ಅದಕ್ಕಿದೆ. ವಾಯುವಿನ ೧/೮ ಕೂಡಿದರೆ ತ್ವಚ; ವಾಯುವಿನ ಗುಣವಾದ ಸ್ಪರ್ಶ ಪ್ರಕಾಶಕ ಶಕ್ತಿ ಅದಕ್ಕಿದೆ. ಜಲದ ೧/೮ ಕೂಡಿದರೆ ಜಿವ್ಹೆ; ಜಲದ ಗುಣವಾದ ರಸ ಪ್ರಕಾಶಕ ಶಕ್ತಿ ಅದಕ್ಕಿದೆ ಪೃಥ್ವಿಯ ೧/೮ ಕೂಡಿದರೆ ಘ್ರಾಣ; ಪೃಥ್ವಿಯ ಗುಣವಾದ ಗಂಧ ಪ್ರಕಾಶಕ ಶಕ್ತಿ ಅದಕ್ಕಿದೆ. ಇವು ಐದು ಅಗ್ನಿಯ ತತ್ತ್ವಗಳು.

(೪) ಜಲ:- ಅರ್ಧಭಾಗ ರಸವಿಷಯ. ಅದರೊಂದಿಗೆ ಆಕಾಶದ ೧/೮ ಬೆರೆತರೆ ಶಬ್ದಗುಣದುದಯ. ವಾಯುವಿನ ೧/೮ ಬೆರೆತರೆ ಸ್ಪರ್ಶಗುಣದುದಯ.

ಅಗ್ನಿಯ ೧/೮ ಬೆರೆತರೆ ರೂಪಗುಣದುದಯ. ಪೃಥ್ವಿಯ ೧/೮ ಬೆರೆತರೆ ಗಂಧ ಗುಣದುದಯ. ಇವು ಐದು ಜಲದ ತತ್ತ್ವಗಳು.

(೫) ಭೂಮಿ:- ಅರ್ಧಭಾಗ ಪಾಯು. ಅದರಲ್ಲಿ ಆಕಾಶದ ೧/೮ ಕೂಡಿದರೆ ತಾಲವ್ಯಾದಿ ಅಷ್ಟಸ್ಥಾನವರ್ತಿ ವಾಕ್ ಉದಿಸುತ್ತದೆ ವಾಯುವಿನ ೧/೮ ಕೂಡಿದರೆ ಪಾಣಿಯು ಉದಿಸುತ್ತನೆ ಅಗ್ನಿಯ ೧/೮ ಕೂಡಿದರೆ ಪಾದವು ಉದಿಸುತ್ತದೆ. ಜಲದ ೧/೮ ಕೂಡಿದರೆ ಉಪಸ್ಥವು ಉದಿಸುತ್ತದೆ. ಇವು ಐದು ಭೂಮಿಯ ತತ್ತ್ವಗಳು.

ಒಟ್ಟು ಪಂಚೀಕರಣದಿಂದ ರಚನೆಗೊಂಡ ತತ್ತ್ವಗಳು ಇಪ್ಪತ್ತೈದು. ಈ ಇಪ್ಪತ್ತೈದರ ಸುಂದರ ಗುಂಪೇ ದೇಹ! ವ್ಯಷ್ಟಿ ವಿಶ್ವ! ಆ ಪ್ರಕೃತಿಯಿಂದ ಈ ಜಡ ದೇಹದ ವರೆಗಿನ ಇಳಿಕೆಯ ಸೃಷ್ಟಿಕ್ರಮಕ್ಕೆ ಅನುಲೋಮ ಎನ್ನುತ್ತಾರೆ. ದೇಹದಿಂದ ಪ್ರಕೃತಿವರೆಗಿನ ಉತ್ಕ್ರಾಂತಿಗೆ ಪ್ರತಿಲೋಮವೆನ್ನುತ್ತಾರೆ. ಇಷ್ಟು ಸಂಗತಿಗಳ ಹಿನ್ನಲೆಯಲ್ಲಿ ಭಗವಂತನ ಪ್ರಸ್ತುತ ಉಪದೇಶವನ್ನು ಅರ್ಥಮಾಡಿ ಕೊಳ್ಳುವದು ಸಮಂಜಸ.

ಭಗವಂತ:- "ಕುರುಸತ್ತಮ, ಪ್ರಕೃತಿಗಿಂತ ಆಚೆ ಅನಂತವಾಗಿ ವ್ಯಾಪಿಸಿದ ನಿತ್ಯಾತ್ಮನನ್ನು ತಿಳಿದವನು 'ತತ್ತ್ವವಿತ್'. ಅವನು ಎಲ್ಲರಂತೆ ಮಾತನಾಡು ತ್ತಾನೆ, ಹಿಡಿಯುತ್ತಾನೆ, ಬಿಡುತ್ತಾನೆ, ನಡೆಯುತ್ತಾನೆ, ವಿಸರ್ಜಿಸುತ್ತಾನೆ, ಕೇಳು ತ್ತಾನೆ, ನೋಡುತ್ತಾನೆ, ಮುಟ್ಟುತ್ತಾನೆ, ರುಚಿಸುತ್ತಾನೆ, ಆಘ್ರಾಣಿಸುತ್ತಾನೆ, ಸಂಕಲ್ಪಿಸುತ್ತಾನೆ, ನಿರ್ಧರಿಸುತ್ತಾನೆ, ಸ್ಮರಿಸುತ್ತಾನೆ ಹಾಗು ಅಹಂಕರಿಸುತ್ತಾನೆ. ಮಲಗುತ್ತಾನೆ. ಏಳುತ್ತಾನೆ, ಉಸಿರಾಡಿಸುತ್ತಾನೆ, ಕಣ್ಣೆವೆಯಾಟ ಮಾಡುತ್ತಾನೆ; ಅಷ್ಟೇ ಅಲ್ಲ ದೇಹದಿಂದ ವಿವಿಧ ಕಾರ್ಯಗಳನ್ನು ನಿರ್ವಹಿಸುತ್ತಾನೆ. ಆದರೆ ಇಷ್ಟೆಲ್ಲ ಕಾರ್ಯಗಳನ್ನು ಗೈಯುತ್ತಿರುವ ಕ್ಷಣವೇ ತಾನು ಆ ಕಾರ್ಯಗಳ ಕರ್ತೃ ವಲ್ಲ; ಆಯಾ ಇಂದ್ರಿಯಗಳೇ ತಮ್ಮ ತಮ್ಮ ವಿಷಯಗಳಲ್ಲಿ ವ್ಯವಹರಿಸುತ್ತವೆ; ತಾನು ಕೇವಲ ಸಾಕ್ಷಿ-ಪುರುಷ; ಎಂದು ಪರಿಭಾವಿಸುತ್ತಾನೆ.

"ಅರ್ಜುನ, ಹಾಗೆ ಸಾಕ್ಷಿ-ಭಾವ ತಾಳಿ ಕರ್ತವ್ಯ ಕರ್ಮಗಳನ್ನು ಆಚರಿ ಸುವ ತತ್ತ್ವವಿದನು ಎಂದೆಂದಿಗೂ ಕರ್ಮಗಳ ಅಳವಿಗೆ, ಬಂಧನೆಗೆ ಸಿಕ್ಕು ಬೀಳುವದಿಲ್ಲ."

ಪುರುಷನು ಸ್ವಭಾವತಃ ನಿಷ್ಕಲಂಕ ಹಾಗು ನಿರಂಜನ. ಕಿಂತು, ನಾನಾ ವಿಧ ಉಪಾಧಿಗಳ ಸಂಬಂಧದಿಂದ ಬಹು ಬಗೆಯ ನಾಮ ಧರಿಸುತ್ತಾನೆ; ಕರ್ಮ ಕರ್ತೃತ್ವ ಬುದ್ಧಿ ಪಡೆಯುತ್ತಾನೆ; ಫಲ ಭೋಕ್ತೃತ್ವ ಭಾವ ತಾಳುತ್ತಾನೆ. ಉದಾ: ಪುರುಷನು ಸತಿ ಉಪಾಧಿ ಸಂಬಂಧದಿಂದ ಪತಿ, ಪುತ್ರ ಉಪಾಧಿ ಸಂಬಂಧದಿಂದ ಪಿತ, ಪ್ರಪುತ್ರ ಉಪಾಧಿ ಸಂಬಂಧದಿಂದ ಅಜ್ಜ ಎನಿಸುತ್ತಾನೆ; ಪತಿ ಪಿತ ಅಜ್ಜ ನಾಗಿ ಭಿನ್ನ ಭಿನ್ನ ಕಾರ್ಯಗಳನ್ನು ಎಸಗುತ್ತಾನೆ. ಉಪಾಧಿಗಳಲ್ಲಿ ಪೂರ್ಣ ಮಗ್ನ

ನಾದ ಪುರುಷನು ತನ್ನ ನಿರ್ಮಲ ಸ್ವರೂಪ ಮರೆತು ಉಪಾಧಿಗಳ ರಕ್ಷಣೆ ಪೋಷಣೆಗಾಗಿ ಹಗಲಿರುಳು ಚಿಂತಿಸುತ್ತಾನೆ. ಪ್ರಾಣದ ಹಂಗು ಹರಿದು ಶ್ರಮಿಸುತ್ತಾನೆ. ಸುಖ ದುಃಖಗಳನ್ನು ಪಡೆಯುತ್ತಾನೆ. ಸುಖದ ಬಗ್ಗೆ ಅನುರಾಗ ಹಾಗು ದುಃಖದ ಬಗ್ಗೆ ದ್ವೇಷ ತಾಳುತ್ತಾನೆ. ಆ ಅನುರಾಗ ಹಾಗು ದ್ವೇಷಗಳೇ ಅವನನ್ನು ಜನ್ಮ ಮರಣಕ್ಕೆ ಪೂರ್ತಿಯಾಗಿ ಬಂಧಿಸುತ್ತವೆ.

ವಾಸ್ತವಿಕವಾಗಿ ನೋಡಿದರೆ ಪುರುಷನಾದ ತಾನು ಶಾಶ್ವತ. ದೇಹ, ಇಂದ್ರಿಯ, ಮನ, ಬುದ್ಧಿಗಳೂ ಸತಿ ಸುತಿ ಗೃಹ ಧನ ಧಾನ್ಯಗಳೂ ಮಧ್ಯಂತರದಲ್ಲಿ ತನಗೆ ಸಂಬಂಧಿಸಿದ ಪದಾರ್ಥಗಳು. ಅವು ಚಿರಕಾಲ ತನ್ನವಾಗಿಯೂ ಬಾಳವು. ಅವು ಬರುವ ಪೂರ್ವದಲ್ಲಿ, ಅವು ಕೈಬಿಟ್ಟ ಅನಂತರದಲ್ಲಿ ತಾನಿದ್ದಾನೆ ಅಪರಿಣಾಮಿಯಾಗಿ. ಆದುದರಿಂದ, ಮಧ್ಯಕಾಲದಲ್ಲೂ ಕೂಡ ಆ ಉಪಾಧಿಗಳು ತನಗೆ ಸಂಬಂಧವಿಲ್ಲ ಎಂದು ಅರಿತವನೇ ಜಾಣ; ತತ್ತ್ವವೇತ್ತ, ಅವನನ್ನು ಮಾನ ಅಪಮಾನ, ಜನ್ಮ ಮರಣಗಳು ಪೀಡಿಸವು. ತಾಯಿ ತಂದೆ ಬಂಧು ಬಾಂಧವ ಎಂಬ ಕಲ್ಪನೆಗಳು ಅವನನ್ನು ಮುತ್ತವು. ಅವನು ಸದಾ ಉದ್ಗರಿಸುವದು ಹೀಗೆ:

"ನ ಮೃತ್ಯುರ್ನ ಶಂಕಾ ನ ಮೇ ಜಾತಿಭೇದಃ ಪಿತಾನೈವ ಮೇನೈವ ಮಾತಾ ಚ ಜನ್ಮ॥
ನ ಬಂಧುರ್ನ ಮಿತ್ರಂ ಗುರುರ್ನೈವ ಶಿಷ್ಯಃ ಚಿದಾನಂದ ರೂಪಶ್ಶಿವೋಽಹಂ ಶಿವೋಽಹಮ್॥

ಮೃತ್ಯು, ಸಂದೇಹ, ಜಾತಿಭೇದಂಗಳಿಲ್ಲ ನನಗೆ. ಪಿತಾ ಮಾತಾ ಜನ್ಮ ಬಂಧು ಮಿತ್ರ ಗುರು ಶಿಷ್ಯ ಯಾವುದೂ ನನಗಿಲ್ಲ. ಜ್ಞಾನಾನಂದ ಘನ ದೇವನೇ ನಾನು!

ಸಂಬಂಧ:–ಅಸಂಗನಾಗಿ ಕರ್ಮ ಮಾಡುವವನು ಪಾಪ ಲಿಪ್ತನಾಗುವದೇ ಇಲ್ಲ.

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥೧೦॥

ಅರ್ಥ:- ಯಃ=ಯಾವನು ಬ್ರಹ್ಮಣಿ=ಬ್ರಹ್ಮದಲ್ಲಿ ಕರ್ಮಾಣಿ= ಕರ್ಮಗಳನು ಆಧಾಯ= ಸಮರ್ಪಿಸಿ ಸಂಗಂ=(ತತ್ಫಲೇ= ಆ ಕರ್ಮ ಫಲದಲ್ಲಿ) ಆಸಕ್ತಿಯನ್ನು ತ್ಯಕ್ತ್ವಾ= ಬಿಟ್ಟು ಕರೋತಿ= ಕರ್ಮ ಮಾಡುತ್ತಾನೆಯೋ ಸಃ= ಅವನು ಅಂಭಸಾ ಪದ್ಮಪತ್ರಂ ಇವ= ನೀರಿನಿಂದ ತಾವರೆಯ ಎಲೆಯು (ಅಂಟದಂತೆ) ಪಾಪೇನ=ಪಾಪದಿಂದ, ನ ಲಿಪ್ಯತೇ= ಲಿಪ್ತನಾಗುವದಿಲ್ಲ.

ವಿವರಣೆ:– ಭಗವಂತ:– ಪರಮಾತ್ಮನು ಸರ್ವಾಧಿಷ್ಠಾನ, ಸರ್ವನಿಯಂತಾರ ಹಾಗು ಸರ್ವಸಾಕ್ಷಿ. ಸರ್ವಕರ್ತಾರ! ಅವನನ್ನು ಅರಿತ ತತ್ತ್ವವೇತ್ತನು ಅನಾಸಕ್ತನಾಗಿ ಕರ್ಮ ಆಚರಿಸುತ್ತಾನೆ. ಕರ್ತೃ ಭಾವನೆಯನ್ನು ಬಿಟ್ಟು ಪರಹಿತಕ್ಕಾಗಿ ಶ್ರಮಿಸುತ್ತಾನೆ. ಬಂದ ಫಲಗಳನ್ನು ದೇವನಡಿಗೆ ನಿವೇದಿಸುತ್ತಾನೆ. ಆದುದರಿಂದ, ತಾವರೆಯ ಪತ್ರದಂತೆ ಪಾಪಜಲಕ್ಕಂಟದೆ ನಿರ್ಲಿಪ್ತನಾಗಿ ಉಳಿಯುತ್ತಾನೆ."

ಭಗವಂತನ ಮಾತನ್ನು ಆಧರಿಸಿಯೇ ಬ್ರಹ್ಮಸೂತ್ರದ ಒಂದು ವಚನ ಇಂತಿದೆ:

**"ತದಧಿಗಮೇ ಉತ್ತರ ಪೂರ್ವ ಅಘಯೋಃ ಅಶ್ಲೇಷ ವಿನಾಶೌ ತದವ್ಯ ಪದೇಶಾತ್"** ೪-೧-೧೩. ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡ ಬಳಿಕ ಹಿಂದೆ ಘಟಿಸಿದ ಹಾಗು ಮುಂದೆ ಘಟಿಸಲಿರುವ ಸರ್ವ ಪಾಪಗಳು ಪೂರ್ಣವಾಗಿ ನಾಶ ವಾಗುತ್ತವೆ. ಏಕೆಂದರೆ, ಹಾಗೆ ಶ್ರುತಿಯ ಘೋಷಣೆ ಇದೆ. ( ಬ್ರಹ್ಮಸೂತ್ರ ). ತತ್ತ್ವವಿದನಿಗೆ ಸಾಂಸಾರಿಕ ಬಾಳು ಬರಿ ತೋರಿಕೆ ಮಾತ್ರ!

**ಸಂಬಂಧಃ**– ಯೋಗಿಗಳು ಕರ್ಮಗಳನ್ನು ಗೈಯುತ್ತಾರೆ. ಹೇಗೆ?

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥೧೧॥**

**ಅರ್ಥ**:– ಯೋಗಿನಃ= ಯೋಗಿಗಳು ಕೇವಲೈಃ= ಕೇವಲ ಕಾಯೇನ= ದೇಹದಿಂದ ಮನಸಾ= ಮನಸ್ಸಿನಿಂದ ಬುದ್ಧ್ಯಾ= ಬುದ್ಧಿಯಿಂದ ಇಂದ್ರಿಯೈಃ ಅಪಿ= ಮತ್ತು ಇಂದ್ರಿಯ ಗಳಿಂದ ಸಂಗಂ= ಆಸಕ್ತಿಯನ್ನು ತ್ಯಕ್ತ್ವಾ= ಬಿಟ್ಟು ಆತ್ಮ ಶುದ್ಧಯೇ= ಚಿತ್ತ ಶುದ್ಧಿಗಾಗಿ ಕರ್ಮ= ಕರ್ಮವನ್ನು ಕುರ್ವಂತಿ= ಮಾಡುತ್ತಾರೆ.

**ವಿವರಣೆ**:- **ಭಗವಂತ**:- "ಅರ್ಜುನ, ಯೋಗಿಗಳು ಕರ್ಮಕುಶಲರು. ಅಹಂಕಾರ, ಮಮಕಾರ, ರಾಗ, ದ್ವೇಷ, ಸ್ವಾರ್ಥ ಸಾಧನೆಯ ಅಭಿಲಾಷೆ, ವಿಷ ಯಾಭಿರತಿ ಹಾಗು ಕರ್ತೃತ್ವಾಭಿಮಾನಗಳಿಲ್ಲದೆ ದೇವಾರ್ಪಣ ಬುದ್ಧಿಯಿಂದ ಆ ಯೋಗಿಗಳು ಕೇವಲ ದೇಹ, ಇಂದ್ರಿಯ, ಮನ, ಬುದ್ಧಿಗಳ ಮೂಲಕ ಕರ್ಮ ಗಳನ್ನು ಆಚರಿಸುತ್ತಾರೆ. ಆ ಕರ್ಮಗಳ ಆಚರಣೆಯಲ್ಲಿರುವ ಏಕೈಕ ಉದ್ದೇಶ ವೆಂದರೆ ಚಿತ್ತಶುದ್ಧಿ!"

(೧) ಗುರುಭಜನ, ಹರನ ಪೂಜೆ, ಶರಣ ಸಂಗ, ದಾನ-ಧರ್ಮ ಮುಂ-ತಾದ ಸತ್ಕ್ರಿಯೆಗಳನ್ನು ನಿರಹಂಭಾವದಿಂದ ಆಚರಿಸುವದು ಕೇವಲ-ದೈಹಿಕ ಕರ್ಮ. ಶಮ, ವಿವೇಕ, ಆತ್ಮವಿದ್ಯೆ, ದಮ, ದಯಾ, ವಿರಾಗ, ಯೋಗಗಳನ್ನು ನಿಯಮಿತವಾಗಿ ಸದೈವ ಆಚರಿಸುವದು ಕೇವಲ-ಮಾನಸಿಕ ಕರ್ಮ. ಅನಿತ್ಯ ಪದಾರ್ಥಗಳಿಂದ ನಿತ್ಯ ಸತ್ಯ ಆತ್ಮ ವಸ್ತುವನ್ನು ಬೇರ್ಪಡಿಸಿ ಅದರಲ್ಲಿಯೇ ನಿಶ್ಚಯ ಬುದ್ಧಿ ತಾಳುವದು ಕೇವಲ-ಬೌದ್ಧಿಕ ಕರ್ಮ. ಪ್ರಾಪಂಚಿಕ ವಸ್ತು ವಿಷ ಯಗಳ ಸಂಗ ಬಿಟ್ಟು ಗುರೂಪದೇಶ, ಶಾಸ್ತ್ರವಚನ ಹಾಗು ದೇವನ ಸ್ವರೂಪ ವನ್ನು ನೆನೆಯುವದು ಕೇವಲ- ಚಿತ್ತ ಕರ್ಮ. (ಈ ಚಿತ್ತ ಕರ್ಮವು ಸಾಧಕನಿಗೆ ಅತ್ಯ ವಶ್ಯ. ಅವನು ಧನ ಕನಕ ಕಾಮಿನಿ ಯಾವುದನ್ನೂ ನೆನೆಯದೆ, ಪರರಿಂದ ಬರುವ ನಿಂದೆ ಅಪವಾದಗಳಿಗೆ ಕಿವಿಗೊಡದೆ ಆತ್ಮವಿದ್ಯೆಯೊಂದನ್ನೇ ಅಂತರಂಗದಲ್ಲಿ ನೆಲೆ ಗೊಳಿಸಿರಬೇಕು). ನಾನು ದೇಹವಲ್ಲ, ಮನ ಬುದ್ಧಿಗಳಲ್ಲ; ವಿಮಲ ಆತ್ಮ ನಾನು; ಹೀಗೆ ಪರಿಭಾವಿಸುವದು ಕೇವಲ-ಅಹಂಕಾರದ ಕರ್ಮ. ನಾನು ಜಾಗ್ರ ಸ್ವಪ್ನ

ಸುಷುಪ್ತಿ ತುರಿಯ ತುರಿಯಾತೀತಗಳನ್ನೆಲ್ಲ ಸಾಕ್ಷಿಯಾಗಿ ಪ್ರಕಾಶಿಸುವ ಚಿದಾತ್ಮ. ಹೀಗೆ ಭಾವಿಸುವದು ಕೇವಲ-ಜ್ಞಾತೃವಿನ ಕರ್ಮ.

ಇನ್ನು, ಕಿವಿಯಿಂದ ಶಿವ ಸಂಬಂಧದ ನುಡಿಗಳನ್ನೇ ಕೇಳುವದು, ಗುರು ದೇವತಾ ಪಾದೋದಕ ಸ್ಪರ್ಶಿಸುವದು, ಗುರು ದೇವತೆಗಳನ್ನೀಕ್ಷಿಸುವದು. ದೇವಾರ್ಪಿತ ಪ್ರಸಾದವನ್ನು ಆಸ್ವಾದಿಸುವದು ಹಾಗು ದೇವ ನಿರ್ಮಾಲ್ಯದ ಗಂಧವನ್ನು ಆಘ್ರಾಣಿಸುವದು ಕೇವಲ-ಜ್ಞಾನೇಂದ್ರಿಯ ಕರ್ಮ. ಶಾಸ್ತ್ರಗಳನ್ನು ಪಠಿಸುವದು ಸತ್ಯ ನುಡಿಯುವದು, ಕೆರೆ ಬಾವಿ ದೇವಾಲಯಗಳ ರಚಿಸುವದು, ದಾನ ಧರ್ಮ ಈಯುವದು, ತೀರ್ಥ ಕ್ಷೇತ್ರಗಳಿಗೆ ಯಾತ್ರೆ ಹೋಗುವದು ಹಾಗು ದೇಹಕ್ಕೆ ಆರೋಗ್ಯಕರವಹ ರೀತಿಯಲ್ಲಿ ವಿಸರ್ಜನಗೈಯುವದು ಕೇವಲ-ಕರ್ಮೇಂದ್ರಿಯ ಕರ್ಮ.

(೨) ಯಾವ ಸಿದ್ಧಿ ಪಡೆಯಬೇಕಾದರೂ ಸಾಧನಾಸಾಮಗ್ರಿಗಳು ಸರಿಯಾಗಿರಬೇಕು. ಹರಕು ಹಗ್ಗ, ಒಡಕು ಮಡಿಕೆ ನಮ್ಮ ತೃಷೆಯನ್ನು ಹಿಂಗಿಸವು. ಮಲಿನವಾದ ಕನ್ನಡಕ ಅಕ್ಷರಗಳನ್ನು ತೋರಿಸದು. ಹಾಗೆ ಜರ್ಜರಿತ ದೇಹ, ವಿಗಲಿತ ಇಂದ್ರಿಯ, ಉದ್ರಿಕ್ತ ಮನ, ವಿಕ್ಷಿಪ್ತ ಬುದ್ಧಿಗಳಿಂದ ನಾವು ಲೌಕಿಕ ಸಿದ್ಧಿಯನ್ನೇ ಪಡೆಯಲಾರೆವೆಂದಾಗ ಪಾರಮಾರ್ಥಿಕ ಸಿದ್ಧಿಯ ಮಾತೆಲ್ಲಿ? ಪರಮಾತ್ಮನು ಸಮಗಿತ್ತ ಈ ದೇಹಾದಿ ಸಾಧನಗಳನ್ನು ಸುಸ್ಥಿತಿಯಲ್ಲಿ ಇಟ್ಟುಕೊಳ್ಳಬೇಕು. ಅವುಗಳಲ್ಲಿರುವ ಅಮೌಲ್ಯ ಸಾಮರ್ಥ್ಯವನ್ನು ಕ್ಷುಲ್ಲಕ ವಿಷಯಗಳಿಗಾಗಿ ಹಾಳು ಮಾಡದೆ ಪರಮಾತ್ಮನ ದರ್ಶನಕ್ಕಾಗಿ ವಿನಿಯೋಗಿಸಬೇಕು. ಅದೇ ಬುದ್ಧಿವಂತಿಕೆ. ಹಾಗೆ ಮಾಡುವವನೇ ಕರ್ಮಯೋಗಿ.

ಸಂಬಂಧಃ– ಅದೇ ಕರ್ಮಮಾಡಿ ಕೆಲವರು ಬದ್ಧರಾಗುತ್ತಾರೆ; ಮತ್ತೆ ಕೆಲವರು ಮುಕ್ತರಾಗುತ್ತಾರೆ. ಅದು ಹೇಗೆ?

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥೧೨॥**

ಅರ್ಥ:– ಯುಕ್ತಃ= ಯೋಗಿಯು, ಕರ್ಮಫಲಂ= ಕರ್ಮಫಲವನ್ನು ತ್ಯಕ್ತ್ವಾ= ಬಿಟ್ಟು ನೈಷ್ಠಿಕೀಂ = (ಆತ್ಯಂತಿಕೀಂ) ನಿತ್ಯವಾದ ಶಾಂತಿಂ = ಶಾಂತಿಯನ್ನು ಆಪ್ನೋತಿ = ಪಡೆಯುತ್ತಾನೆ. ಅಯುಕ್ತಃ= ಬಹಿರ್ಮುಖನು, ಕಾಮಕಾರೇಣ = ಆಶೆಯಿಂದ ಫಲೇ ಸಕ್ತಃ = ಫಲದಲ್ಲಿ ಆಸಕ್ತನಾಗಿ ನಿಬಧ್ಯತೇ = ಬಂಧಿಸಲ್ಪಡುತ್ತಾನೆ.

ವಿವರಣೆ:- ಭಗವಂತ:– "ಪರಮಾತ್ಮನಲ್ಲಿ ನಿಷ್ಠೆಯುಳ್ಳವನಾಗಿ ತನ್ನನ್ನು ಅರ್ಪಿಸಿದ ವಿಮಲ ಹೃದಯಿಯು ಯುಕ್ತ. ಅವನು ಕರ್ಮ ಮಾಡುತ್ತಾನೆ! ಕರ್ಮದ ಪ್ರತಿಫಲವನ್ನು ಆಶಿಸನು. ಆದುದರಿಂದ ಅವನು ಎಂದೆಂದಿಗೂ ನಾಶವಾಗದ ಪರಮ ಶಾಂತಿಯನ್ನು ಹೊಂದುತ್ತಾನೆ. ಆದರೆ ಅರ್ಜುನ, ಅಯುಕ್ತನಿಗೆ ಆ ಶಾಂತಿ-ಭಾಗ್ಯವಿಲ್ಲ. ಅವನ ಮನಸ್ಸು ಚಂಚಲ, ಬಹಿರ್ಮುಖ. ವಿಷಯ

ಗಳಿಗಾಗಿ ದುಡಿಯುತ್ತಾನೆ. ದೇವನಲ್ಲಿ ಅನುರಾಗವಿಲ್ಲದ ಈ ಮನುಷ್ಯ ಕರ್ತೃತ್ವಾಭಿಮಾನಿ. ಮಾಡಿದ ಕರ್ಮದಿಂದ ಏನಾದರೂ ಫಲ ದೊರೆಯಲೇಬೇಕೆಂಬ ಆಸೆ ಇವನಲ್ಲಿದೆ. ಆದುದರಿಂದ ತಾನೇ ಮಾಡಿದ ಕರ್ಮಗಳಿಂದ ತಾನೇ ಬದ್ಧನಾಗುತ್ತಾನೆ."

ಸಂಬಂಧ:– ಇಲ್ಲಿಯುವರೆಗೆ ಚಿತ್ತಶುದ್ಧವಿಲ್ಲದ ಸಾಧಕನಿಗಾಗಿ ಸನ್ಯಾಸಕ್ಕಿಂತ ಕರ್ಮಯೋಗವೇ ವರಣೀಯ ಎಂದು ಹೇಳಲಾಯಿತು. ಇನ್ನು ಮುಂದೆ ಚಿತ್ತಶುದ್ಧಿಯುಳ್ಳ ಪುರುಷನಿಗೆ ಜ್ಞಾನಯೋಗ (ಸನ್ಯಾಸ) ವು ವರಣೀಯ ಎಂಬ ಮಾತನ್ನು ವಿಸ್ತರಿಸಲಾಗುವದು.

ಸರ್ವ ಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।
ನವದ್ವಾರೇ ಪುರೇ ದೇಹೀ ನೈವ ಕುರ್ವನ್ನಕಾರಯನ್ ॥೧೩॥

ಭಾವ:– ಸಂಯಮಶೀಲ ಜೀವಾತ್ಮನು ವಿವೇಕಯುಕ್ತ ಮನಸ್ಸಿನಿಂದ, ಸಕಲ ಕರ್ಮಗಳನ್ನು ಪರಿತ್ಯಾಗ ಮಾಡಿ ನವ ದ್ವಾರಗಳುಳ್ಳ ದೇಹ ಪುರದಲ್ಲಿ ಏನನ್ನೂ ಮಾಡದೆ, ಏನನ್ನೂ ಮಾಡಿಸದೆ; ಸುಖವಾಗಿ ಇರುತ್ತಾನೆ.

ವಿವರಣೆ:– "ಅಥ ಯದಿದ ಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ, ದಹರಃ ಅಸ್ಮಿನ್ ಅಂತರಾಕಾಶಃ. ತಸ್ಮಿನ್ ಯದಂತಃ ತದನ್ವೇಷ್ಟವ್ಯಮ್. ತದ್ವಾವ ವಿಜಿಜ್ಞಾಸಿತವ್ಯಮ್ ॥"

ಈ ಮಾನವೀ ದೇಹವು ಬ್ರಹ್ಮಪುರ: ಬ್ರಹ್ಮನ ಪ್ರಾಪ್ತಿಸ್ಥಾನ: ಇದರಲ್ಲಿ ಬಹು ಸೂಕ್ಷ್ಮವಾದ ಕಮಲದಾಕೃತಿಯ ಹೃದಯವೆಂಬ ಅರಮನೆ ಇದೆ. ಅದರಲ್ಲಿ ಅಂತರಾಕಾಶವೆನಿಸುವ ಚಿಚ್ಛಕ್ತಿ ಎಂಬ ಸಿಂಹಾಸನವಿದೆ. ಆ ಸಿಂಹಾಸನದ ಮೇಲೆ ಅಚಲನಾಗಿ ಆಸೀನನಾಗಿರುವ ಪುರುಷನೇ ಪರಮಾತ್ಮ. ಅವನನ್ನೇ ತಿಳಿದುಕೊಳ್ಳಬೇಕು. (ಛಾಂದೋಗ್ಯ ಶ್ರುತಿ).

ನಮ್ಮ ದೇಹವು ನವ ದ್ವಾರದ ದೇವಾಲಯ. ಈ ದೇವಾಲಯದ ಗರ್ಭಗುಡಿಯಲ್ಲಿ ವಾಸ ಮಾಡಿದ ಚೇತನ ಪುರುಷನು ಪರಮಾತ್ಮ. ಸರ್ವ ದ್ವಾರಗಳನ್ನು ಮುಚ್ಚಿ, ಮನಸ್ಸನ್ನು ಪೂರ್ಣವಾಗಿ ನಿಗ್ರಹಿಸಿ ಹೃದಯ ರೂಪ ಗರ್ಭಗುಡಿಯನ್ನು ಪ್ರವೇಶಿಸಿ ಅಲ್ಲಿ ಪ್ರಜ್ವಲಿಸುವ ಆ ಆತ್ಮದೇವನ ದರ್ಶನ ಪಡೆದ ಮನುಷ್ಯನೇ ಯೋಗಿ! ಅವನಲ್ಲಿಯ ಅಹಂ–ಮಮ ವೃತ್ತಿ-ತರಂಗಗಳು ಶಾಂತವಾಗಿವೆ. ರಾಗ–ದ್ವೇಷ ಭಾವನೆಗಳು ಅಡಗಿವೆ. ಅವನೆಷ್ಟೋ ಕರ್ಮಗಳನ್ನು ಮಾಡಿದರೂ ಆ ಕರ್ಮಗಳ ಕರ್ತೃಭಾವ ವಿರಹಿತನಾದುದರಿಂದ, ಅವನು ಅಕರ್ತನೇ ಸರಿ. ಅವನ ವಾಸಸ್ಥಾನವಾದ ದೇಹದಲ್ಲಿ ಅಸಂಖ್ಯ ಕ್ರಿಯೆಗಳು ಅವ್ಯಾಹತವಾಗಿ ಸಾಗಿದ್ದರೂ ಅವುಗಳ ಸಂಬಂಧ ಅವನಿಗಿಲ್ಲವೇ ಇಲ್ಲ. ಅವನು 'ಅಹಂ ಬ್ರಹ್ಮಾಸ್ಮಿ' 'ಪರಮಾತ್ಮನೇ ನಾನು' ಎಂಬ ಸತ್ಯ ಪ್ರಜ್ಞೆ ಪಡೆದುದರಿಂದ ಬಹು ಸುಖದಿಂದ ದೇಹದಲ್ಲಿ ನೆಲೆಸಿದ್ದಾನೆ. ಅವನು ಅನುಭವಿಸುವ ದಿವ್ಯ ಆನಂದವು

ಅವರ್ಣನೀಯ.

ಸಂಬಂಧ:– " ಏಷ ಏವ ಸಾಧುಕರ್ಮ ಕಾರಾಯತಿ ತಂಯಮೇಭ್ಯೋ ಲೋಕೇಭ್ಯಃ ಉನ್ನಿನೀಷತ. ಏಷ ಏವಾಸಾಧು ಕರ್ಮ ಕಾರಯತಿ ತು ಯಮೇಭ್ಯೋ ಲೋಕೇಭ್ಯಃ ಅಧಃ ನಿನೀಷತೇ " ( ೩–೮ ) ಈಶ್ವರನು ಯಾವ ಮನುಷ್ಯರನ್ನು ಮೇಲೆ ತೆಗೆದುಕೊಂಡು ಹೋಗಬಯಸುತ್ತಾನೆಯೋ, ಅವರಿಂದ ಪುಣ್ಯ ಕರ್ಮಗಳನ್ನು ಮಾಡಿಸುತ್ತಾನೆ. ಯಾವ ಮನುಷ್ಯರನ್ನು ಕೆಳಗೆ ನೂಕಬೇಕೆಂದು ಇಚ್ಛಿಸುತ್ತಾನೆಯೋ, ಅವರಿಂದ ಪಾಪಕರ್ಮಗಳನ್ನು ಮಾಡಿಸುತ್ತಾನೆ. ಈ ಕೌಷಿತಕೀ ಉಪನಿಷತ್ತಿನ ಅಭಿಪ್ರಾಯ ದಂತೆ ಎಲ್ಲ ಕಾರ್ಯ ಮಾಡಿಸುವವನು ಈಶ್ವರನೇ. ಹೀಗಿರುವಾಗ, ಜಗತ್ತಿನಲ್ಲಿ ನಡೆಯುವ ಸರ್ವಕರ್ಮಗಳಿಗೆ ಈಶ್ವರನೇ ಹೊಣೆಗಾರನಾಗುವದಿಲ್ಲವೆ ?

ನ ಕರ್ತೃತ್ವಂ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥೧೪॥

ಅರ್ಥ:-ಪ್ರಭುಃ= ಆತ್ಮನು ಲೋಕಸ್ಯ=ಜೀವಲೋಕದ ಕರ್ತೃತ್ವಂ= ಕರ್ತೃತ್ವವನ್ನು ನ ಸೃಜತಿ =ಸೃಷ್ಟಿಸುವದಿಲ್ಲ. ನ ಕರ್ಮಾಣಿ =ಕರ್ಮಗಳನ್ನು ಸೃಷ್ಟಿಸುವದಿಲ್ಲ. ನ ಕರ್ಮಫಲ ಸಂಯೋಗಂ= ಕರ್ಮಫಲ ಭೋಗವನ್ನು ಸೃಷ್ಟಿಸುವದಿಲ್ಲ. ತು =ಆದರೆ, ಸ್ವಭಾವಃ= ಸ್ವಭಾ ವವು ಪ್ರವರ್ತತೇ =(ಸರ್ವಕಾರ್ಯಗಳನ್ನು) ಮಾಡುತ್ತದೆ.

ವಿವರಣೆ:– ಕೃತ ಕರ್ಮಕ್ಕೆ ಸಾಮಾನ್ಯವಾಗಿ ಮೂವರು ಹೊಣೆಗಾರರು: (೧) ಕರ್ಮ ನಿರ್ವಹಿಸುವ ಕರ್ತಾ (೨) ಕರ್ಮ ಮಾಡಿಸುವ ಕಾರಯಿತಾ ಹಾಗು (೩) ಕರ್ಮಕ್ಕೆ ಸಮ್ಮತಿ ನೀಡುವ ಅನುಮೋದಕ. ಕರ್ಮದ ಫಲವು ಒಳ್ಳೆ ಯದೇ ಬರಲಿ ಅಥವಾ ಕೆಟ್ಟದ್ದೇ ಬರಲಿ ಅದನ್ನು ಮೂವರೂ ಅನುಭೋಗಿಸ ಬೇಕಾಗುತ್ತದೆ. ಇದು ವ್ಯಾವಹಾರಿಕ ನಿಯಮ. ಈ ನಿಯಮವನ್ನು ತಾತ್ವಿಕ ರಂಗದಲ್ಲೂ ಅನ್ವಯಿಸಬಹುದಲ್ಲವೆ? ಜೀವರಾದ ನಾವೆಲ್ಲ ಭೃತ್ಯರು, ಪರಮಾ ತ್ಮನು ನಮ್ಮ ಒಡೆಯ. ನಾವು ಬರೀ ಕರ್ಮ ಕರ್ತೃಗಳು; ಅವನೇ ನಮ್ಮಿಂದ ಕರ್ಮ ಮಾಡಿಸುವ ಕಾರಯಿತಾ ಹಾಗು ನಮಗೆ ಕರ್ಮ ಮಾಡುವಂತೆ ಪ್ರೇರಿ ಸುವ ಪ್ರೇರಯಿತಾ. ನಾವು ಮಾಡಿದ ಕರ್ಮಗಳ ಶುಭಾಶುಭ ಫಲಕ್ಕೆ ಅವನೂ ಹೊಣೆಗಾರನಾಗಲೇಬೇಕಲ್ಲವೆ? ಈ ಪ್ರಶ್ನೆ ಏಳುವದು ಸಹಜ. ಇದಕ್ಕೆ ತಕ್ಕ ಉತ್ತರವು ಪ್ರಸ್ತುತ ಮಂತ್ರದಲ್ಲಿದೆ.

ಭಗವಂತ:- "ಧನಂಜಯ, ಪರಮಾತ್ಮನು ಅಪರಿಣಾಮಿ. ಅವನಲ್ಲಿ ಇಚ್ಛೆ ದ್ವೇಷಗಳಿಲ್ಲ. ಭಾವ-ಭೇದಗಳಿಲ್ಲ. ಪರಿಮಿತ ಬುದ್ಧಿ ಇಲ್ಲ. ಅವನು ಸರ್ವದಾ ಸಾಕ್ಷಿ. ನಿರಾಮಯ ಪ್ರಭು. ಅವನ ಸಾನಿಧ್ಯದಲ್ಲಿ ವಿಶ್ವವು ನಿರ್ಮಾಣಗೊಳ್ಳು ವದೇ ವಿನಃ ಅವನೇ ನಿರ್ಮಿಸುವದಿಲ್ಲ. ಕರ್ತೃತ್ವ ಕರ್ಮಫಲ ಭೋಕ್ತೃತ್ವ ಯಾವುದೂ ಅವನಿಂದ ಸೃಷ್ಟವಾಗಿಲ್ಲ. ಆದುದರಿಂದ ಅವನು ಕಾರಯಿತನೂ ಅಲ್ಲ, ಪ್ರೇರಕನೂ ಅಲ್ಲ. ಅವನಿಗೆ ನಾವು ಮಾಡುವ ಕರ್ಮಗಳ ಸಂಬಂಧ

ಎಂದಿಗೂ ಉಂಟಾಗದು."

(೧) ಪರಮಾತ್ಮನು ಅಜ, ನಿತ್ಯ, ಶಾಶ್ವತ, ಪುರಾಣ, ಅವಿನಾಶಿ, ಪರಿಪೂರ್ಣ ಹಾಗು ಅನಂತ. ಅವನು ಅವಧ್ಯ ಅವ್ಯಯ ಹಾಗು ಅಚ್ಯುತ. ಈ ಮಾತು ಸರ್ವವಿದಿತ. ಸಕಲ ಶಾಸ್ತ್ರಗಳಲ್ಲಿ ಕಣ್ಣಾಡಿಸಿದರೂ ದೇವನು ಪರಿಚ್ಛಿನ್ನ ವಿಕಾರಿ ಇಚ್ಛಾಯುಕ್ತ ವ್ಯಕ್ತಿ ಎಂದು ಎಲ್ಲಿಯೂ ಕಂಡು ಬರದು. ಆದುದರಿಂದ ದೇವನು ಕರ್ಮಗಳಿಗೆ ಯಾವ ರೀತಿಯಿಂದಲೂ ಸಂಬಂಧಿಸಿಲ್ಲ ಎಂಬ ಸಂಗತಿ ಸುಸ್ಪಷ್ಟ.

(೨) ಇನ್ನು ವ್ಯಾವಹಾರಿಕವಾಗಿ ಮಾತನಾಡುವದಾದರೆ, ಪರಮಾತ್ಮನು ಕರುಣಾಳು, ದಯಾಘನ! ವಿಶ್ವಜನಕ! ನಾವೆಲ್ಲ ಅವನ ಮಕ್ಕಳು. ಹೀಗಿರುವಾಗ, ಆ ದೇವನು ಭಯಾನಕವಾದ ಈ ಪ್ರಪಂಚದಲ್ಲಿ ನಮ್ಮನ್ನು ನೂಕುವದೆಂತು ಸಾಧ್ಯ? ಸಂಸಾರವೆಂದರೆ ಹಾಲಿನ ಮಡುವಲ್ಲ; ಮಧುರವಾದ ಜೇನುಗೂಡಲ್ಲ. ಇದು ಹಾಲಾಹಲ, ಕಾಲಕೂಟ. 'ಏರಿ ನೀರುಂಬುವಂತೆ, ಬೇಲಿ ಸಸಿಯ ಮೇಯುವಂತೆ, ತಾಯಿ ಮಗುವಿಗೆ ವಿಷ ಉಣಿಸುವಂತೆ' ದೇವನು ಜೀವರಿಗೆ ಸಂಸಾರ ವಿಷ ಕುಡಿಸುತ್ತಾನೆ ಎಂದುದಾದರೆ ದೇವನು ಅಷ್ಟು ಕಠೋರನೆ? ಜೀವನನ್ನು ಮಹಾ ದುಃಖ ಕೂಪಕ್ಕೆ ಚೆಲ್ಲುವಂಥ ಭೀಷಣ ಕೃತ್ಯವು ಆ ನಿರಾಮಯ ದೇವನಿಂದ ನಡೆಯುವದು ಸಾಧ್ಯವೆ? ಹಾಗೆ ತಿಳಿಯುವದೆಂದರೆ ದೇವನ ಮೇಲೆ ಘೋರ ಅಪರಾಧ ಹೊರಿಸಿದಂತೆ. ಕೃಪಾನಿಧಿ, ಅನುಗ್ರಹಶೀಲ, ಕರುಣಾಮೂರ್ತಿ ಎಂದು ಬಾಯಿತುಂಬ ಕೊಂಡಾಡುವ ವೇದಗಳು ಅವನ ಮೇಲೆ ಆರೋಪ ಹೊರಿಸುವದನ್ನು ಎಷ್ಟೂ ಸಹಿಸವು.

(೩) ಹಾಗಾದರೆ ಕರ್ಮಕ್ಕೆ ಹೊಣೆಗಾರರು ಯಾರು? ಈ ಪ್ರಶ್ನೆಗೆ ಉತ್ತರವನ್ನು ಪಡೆಯಬೇಕಾದರೆ ಕರ್ಮದ ವಿಶ್ಲೇಷಣೆಯನ್ನು ನೋಡಬೇಕು. ಕರ್ಮವೊಂದು ಘಟಿಸಬೇಕಾದರೆ ಮೂರು ಪದಾರ್ಥಗಳು ಅವಶ್ಯ: (ಅ) ದೇಹ ಹಾಗು ಇಂದ್ರಿಯ (ಬ) ಅಹಂಕಾರ (ಕ) ಚೈತನ್ಯ. ಬರಿ ಒಂದೊಂದರಿಂದಲೇ ಕರ್ಮ ಘಟಿಸದು. ಸ್ವಾಭಾವಿಕವಾಗಿ ಒಂದರಿಂದೊಂದು ಪೂರ್ತಿ ಭಿನ್ನವಾದ ಈ ಮೂರೂ ಪದಾರ್ಥಗಳು ಸಂಕರಗೊಳ್ಳಬೇಕು. ಆಗ ಜೀವನೆಂಬ ಕರ್ತನು ಕಾಣಬರುತ್ತಾನೆ. ಅವನಲ್ಲಿ ಅರಿವಿದೆ, ಅಹಂಭಾವವಿದೆ ಹಾಗು ದೇಹಾದಿಗಳಲ್ಲಿ ಮಮತೆ ಇದೆ. ಅವನೇ ಕರ್ಮಗಳ ಕರ್ತ, ಕಾರಯಿತಾ ಹಾಗು ಪ್ರೇರಕ; ಅವನೇ ಕರ್ಮಫಲಾಭಿಲಾಷಿ ಹಾಗು ಫಲಭೋಕ್ತೃ.

(೪) ಒಂದು ಸಂದೇಹ: ಪರಸ್ಪರ ವಿರುದ್ಧ ಸ್ವರೂಪದ ದೇಹ, ಅಹಂಕಾರ ಹಾಗು ಚೇತನಾತ್ಮರನ್ನು ಸಂಕರಗೊಳಿಸಿದಾಗ ಜೀವಾತ್ಮನ ಉದಯ, ಅಲ್ಲವೆ? ಆ ಸಂಕರತೆಯನ್ನು ಉಂಟು ಮಾಡುವವರಾರು? ಜಡ ದೇಹ, ಪ್ರಾಕೃತಿಕ ವಿಕೃತಿ

ಯಾದ ಅಹಂಕಾರ, ಅಜಡ ಆತ್ಮ—ಈ ಮೂರನ್ನು ಒಂದೇ ಎಡೆ ಕೂಡಿಸುವ ತತ್ತ್ವ ಯಾವುದು ?

ಸಂಕರತೆಗೆ ಹೇತು ಚೈತನ್ಯ ಘನ ದೇವನಲ್ಲ, ಏಕೆಂದರೆ ಅವನು ಜ್ಞಾನ ಘನನಾದರೂ ಇಚ್ಛೆ ಹಾಗು ಕ್ರಿಯೆಗಳಿಲ್ಲದವ. ದೇಹ ಹಾಗು ಅಹಂಕಾರ ಜಡವಾದುದರಿಂದ ಅವು ಕೂಡ ಸಂಕರತ್ವಕ್ಕೆ ಕಾರಣವಾಗವು. 'ಸ್ವಭಾವಸ್ತು ಪ್ರವರ್ತತೇ' ಎಂಬ ಶ್ರುತಿ ವಚನದಂತೆ, ಜೀವನ ಉದಯಕ್ಕೆ ಅಂದರೆ ಜಡಾಜಡ ಸಮ್ಮಿಶ್ರಣಕ್ಕೆ ' ಸ್ವಭಾವವೇ ' ಮೂಲಕಾರಣ. ಅಜ್ಞಾನ, ಅವಿದ್ಯೆ, ಪ್ರಕೃತಿ, ತಮ, ಮಾಯೆ ಇವು ಸ್ವಭಾವದ ಭಿನ್ನ ಭಿನ್ನ ನಾಮಗಳು. ಅಸತ್ವಾಪಾದಕಾವರಣ ಹಾಗು ಅಭಾನಾಪಾದಕಾವರಣಗಳು ಅವಿದ್ಯೆಯ ಎರಡು ಅಂಗಗಳು. ಮೊದಲನೆಯ ಆವರಣದಿಂದ ದೇವನು ಇಲ್ಲೆಂಬ ನಾಸ್ತಿಕ ಭಾವನೆ ಹುಟ್ಟುತ್ತದೆ. ಎರಡನೆಯ ಆವರಣದಿಂದ ದೇವನಿದ್ದರೆ ಕಾಣುತ್ತಿದ್ದ. ಕಾಣುವದಿಲ್ಲ. ಆದ್ದರಿಂದ ಇಲ್ಲ—ಎಂಬ ಅಭಾನ ಭಾವನೆಯು ಉಂಟಾಗುತ್ತದೆ. ಈ ಎರಡು ಅಂಗಗಳುಳ್ಳ ಅವಿದ್ಯೆಯು ಆತ್ಮ ದೇವನನ್ನು ಪೂರ್ಣವಾಗಿ ಮರೆಮಾಡುತ್ತದೆ. ಬಳಿಕ ವಿಕ್ಷೇಪವು ತಲೆದೋರಿ ಅಹಂಕರ್ತಾ, ಅಹಂ ಭೋಕ್ತಾ ಎಂಬ ದ್ವಿವಿಧ ಭಾವನೆಗಳನ್ನು ಹೊಂದಿದ ಜೀವನ ಉದಯಕ್ಕೆ ಕಾರಣವಾಗುತ್ತದೆ.

ಇನ್ನೊಂದು ವಿಧದಿಂದ ವಿವರಿಸಬಹುದು: ಸ್ವಭಾವರೂಪ ಮಾಯೆಯು (೧) ಆಣವ ಮಲವಾಗಿ ದೇವನ ಪರಿಪೂರ್ಣತೆಯನ್ನು ಮರೆಸಿ ಅಣುಭಾವನೆಯ ಹುಟ್ಟಿಸುತ್ತದೆ, (೨) ಮಾಯಾಮಲವಾಗಿ ದೇವನ ನಿತ್ಯತೃಪ್ತಿ ಲಕ್ಷಣವನ್ನು ಆವರಿಸಿ ವಿಷಯ ಸುಖವೇ ಸತ್ಯವೆಂಬ ವ್ಯಾಮೋಹವ ಹುಟ್ಟಿಸುತ್ತದೆ, (೩) ಕಾರ್ಮಿಕ ಮಲವಾಗಿ ದೇವನ ಸ್ವತಂತ್ರಾಸ್ತಿತ್ವವ ಮರೆಸಿ ಕರ್ಮದಿಂದಲೇ ಸುಖವೆಂಬ ಭ್ರಮೆಯನ್ನು ಹುಟ್ಟಿಸುತ್ತದೆ. ಈ ಮೂರು ಮಲಗಳ ಮಧ್ಯದಿಂದ ಆವಿರ್ಭವಿಸಿದ ಅಹಂಭಾವ ವಿಶಿಷ್ಟ ಚೈತನ್ಯ ಛಾಯೆಯೇ ಜೀವಾತ್ಮ.

ಇಂತು, ವಿಶ್ವಾತ್ಮನು ನಿರಂಜನನಾದುದರಿಂದ ಜೀವಲೋಕದ ಸೃಷ್ಟಾರನಲ್ಲ. ಅವನಿಗೆ ಜೀವಿಗಳು ಆಚರಿಸುವ ಕರ್ಮಗಳ ಸಂಬಂಧವಿಲ್ಲ. ದೇಹ ಇಂದ್ರಿಯಗಳು ಜಡವಾದುದರಿಂದ ಕರ್ಮಕ್ಕೆ ಸಾಧನವಾಗಬಲ್ಲವೇ ವಿನಃ ಕರ್ಮ ಕರ್ತೃತ್ವವು ಅವುಗಳಿಗೆ ಸಂಬಂಧಿಸಿಲ್ಲ. ಆ ದೇವ, ಈ ದೇಹ ಎರಡನ್ನು ಅಹಂಭಾವವೆಂಬ ಸೂತ್ರದಿಂದ ಸಂಕರಗೊಳಿಸುವ ಅವಿದ್ಯೆಯು ಜೀವಾತ್ಮನಿಗೆ ಜನ್ಮವೀಯುತ್ತದೆ; ಆ ಜೀವನೇ ಕರ್ಮಗಳ ಸೃಷ್ಟಾರ; ಕರ್ಮಫಲ ಭೋಕ್ತಾರ!

ಸಂಬಂಧ:- ಅಜ್ಞಾನಿಗಳು ಆತ್ಮನ ಮರೆತು ಸಂಸಾರದಲ್ಲಿ ಮೋಹಿತರಾಗುತ್ತಾರೆ.

**ನಾದತ್ತೇ ಕಸ್ಯ ಚಿತ್ಪಾಪಂ ನ ಚೈವ ಸುಕೃತಂ ವಿಭುಃ ।**

ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥೧೫॥

ಅರ್ಥ:-ಪ್ರಭುಃ=ವಿಶ್ವನಿಯಾಮಕ ದೇವನು, ಕಸ್ಯಚಿತ್= ಯಾರೊಬ್ಬರ, ಪಾಪಂ= ಪಾಪವನ್ನು ಚ=ಮತ್ತು ಸುಕೃತಂ=ಪುಣ್ಯವನ್ನು ನ ಆದತ್ತೇ= ಹೊತ್ತುಕೊಳ್ಳುವದಿಲ್ಲ. ಅಜ್ಞಾನೇನ= ಅಜ್ಞಾನದಿಂದ ಜ್ಞಾನವು ಆವೃತಂ= ಮುಚ್ಚಲ್ಪಟ್ಟಿದೆ, ತೇನ= ಅದರಿಂದ ಜಂತವಃ= ಪ್ರಾಣಿಗಳು ಮುಹ್ಯಂತಿ= (ಕರ್ಮಗಳಲ್ಲಿ) ಮೋಹಗೊಳ್ಳುತ್ತವೆ.

ವಿವರಣೆ:- ಭಗವಂತ:-"ಭಾರತ, ದೇವನು ಆಕಾಶದಂತೆ ನಿರ್ಲಿಪ್ತ ಹಾಗು ಪರಿಪೂರ್ಣ. ಜಗತ್ತಿನಲ್ಲಿ ನಡೆಯುವ ಲಕ್ಷಾಂತರ ಕಾರ್ಯಗಳು ಆಕಾಶಕ್ಕೆ ಹೇಗೆ ಸಂಬಂಧಿಸುವದಿಲ್ಲವೋ ಹಾಗೆಯೇ ಜೀವಲೋಕದಲ್ಲಿ ಘಟಿಸುವ ಕರ್ಮಗಳು ದೇವನಿಗೆ ಸಂಬಂಧವಾಗವು. ಅವನು ನಾವು ನಿವೇದಿಸಿದ ಒಂದು ತುತ್ತನ್ನೂ ತಿನ್ನಲಾರ, ನಾವು ಗೈಯುವ ಒಂದು ಕೆಲಸಕ್ಕೂ ಪ್ರೇರಣೆ ನೀಡಲಾರ.

" ಇಂಥ ವಿಪುಲ ದೇವನನ್ನು ಅವಿದ್ಯೆ ಮರೆಮಾಡಿತು. ಆಗ ಅಸಂಖ್ಯ ಜೀವರು ತೋರಿ ಬಂದರು. ತಾವು ದೇವನ ಅಂಶ ಎಂಬ ಸತ್ಯವನ್ನು ಮರೆತು ಮೂಢರಾದರು. ಕರ್ಮಕರ್ತೃತ್ವಾಭಿಮಾನ ತಳೆದರು. ಕರ್ಮಫಲಗಳ ಬಯಸಿ, ಭೋಗಿಸಿ ಕರ್ಮಜಾಲದಲ್ಲಿ ಬದ್ಧರಾದರು. ಅವರನ್ನು ವೈಷಯಿಕ ಚಿಂತೆ ಕಾಡುತ್ತಿದೆ. ಅವರಿಗೆ ಶಾಂತಿ ಸಮಾಧಾನ ಏನಿಲ್ಲ. ಅವರು ಬದುಕಿರುವಷ್ಟು ಕಾಲ ಸೂಕರದಂತೆ ಮನೆ ಹೊಲ ಮಡದಿ ಮಾನ ಧನಗಳೆಂಬ ದುರ್ಗಂಧ ಪೂರಿತ ಕೊಳಚೆಯಲ್ಲಿ ಆಕಂಠ ಮುಳುಗಿ, ಹೊರಳಿ, ಆನಂದ ಪಡುತ್ತಿದ್ದಾರೆ. (ಮುಹ್ಯಂತಿ)."

ಸಂಬಂಧ:– ಜ್ಞಾನಿಗಳು ಮೋಹಿತರಾಗುವದಿಲ್ಲ.

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।
ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥೧೬॥

ಅರ್ಥ:- ತು =ಆದರೆ, ಆತ್ಮನಃ ಜ್ಞಾನೇನ= ಸಾತ್ವಿಕ ಮನದಲ್ಲಿ ಆವಿರ್ಭವಿಸಿದ ಆತ್ಮಜ್ಞಾನದಿಂದ ಯೇಷಾಂ= ಯಾರ ತತ್ ಅಜ್ಞಾನಂ =ಆ ಅಜ್ಞಾನವು ನಾಶಿತಂ =ನಾಶವಾಗಿದೆಯೋ ತೇಷಾಂ =ಅವರ ತತ್ ಜ್ಞಾನಂ =ಆ ಆತ್ಮಜ್ಞಾನವು ಆದಿತ್ಯವತ್= ಸೂರ್ಯನ ಹಾಗೆ ಪರಂ = ಪರಬ್ರಹ್ಮವನ್ನು ಪ್ರಕಾಶಯತಿ =ಪ್ರಕಾಶಿಸುತ್ತದೆ.

ವಿವರಣೆ:– (೧) ಆತ್ಮನಃ ಜ್ಞಾನೇನ ಅಜ್ಞಾನಂ ನಶ್ಯತಿ:– ಶುಕ್ತಿಯ ಮೇಲೆ ತೋರಿದ ರಜತ ಭ್ರಮೆ ನಾಶವಾಗಬೇಕಾದರೆ ಶುಕ್ತಿಯ ಜ್ಞಾನವಾಗಬೇಕು. ಮನೆಯ ಕತ್ತಲೆ ಹೋಗಬೇಕಾದರೆ ದೀಪವೇ ಬೇಕು; ಆ ಕತ್ತಲೆಯು ಬರಿ ಸಾರಣೆಯಿಂದ ಹೋಗದು. ಹಾಗೆ ಆತ್ಮನ ಅಜ್ಞಾನದಿಂದ ಬಂದ ಜೀವಭ್ರಮೆಯು ಜಡವಿಶ್ವದ ಜ್ಞಾನದಿಂದ ಹೋಗದು; ಅದು ಹೋಗಲು ಆತ್ಮಜ್ಞಾನವೇ ಬೇಕು. ಅದನ್ನು ಗಳಿಸುವದೆಂತು ?

ತನ್ನ ತಾ ಅರಿಯಬೇಕೆನ್ನುವ ಪ್ರಬಲ ಇಚ್ಛೆಯುಳ್ಳ ಸಾಧಕನು ಅನಾಸಕ್ತ ಕರ್ಮಗಳಿಂದ ಹೃದಯ ಶುದ್ಧಿ ಮಾಡಿಕೊಂಡು ಅನುಭಾವಿ ಗುರುಗಳ ಸಾನಿಧ್ಯ

ಸೇರಬೇಕು. ಗುರುಗಳು ಉಪನಿಷದ್ ವಿದ್ಯೆಯನ್ನು ಹೃದಯಂಗಮವಾಗಿ ಉಪದೇಶಿಸುತ್ತಾರೆ. ಅನ್ಯವಿಷಯ ವಿಮುಖನಾಗಿ ಸಾಧಕನು ಶ್ರವಣ ಮಾಡುತ್ತ ಹೋದಂತೆ ಅವನ ಹೃದಯವನ್ನಾವರಿಸಿದ ಅಸತ್ವಾಪಾದಕಾವರಣವು (ಅಜ್ಞಾನದ ಪ್ರಥಮ ಪರದೆಯು) ಹರಿಯುತ್ತದೆ. ಆಗ ಅಂತಃಕರಣವು ಸತ್ವತರವಾಗಿ ಆತ್ಮನ ಪರೋಕ್ಷ ಜ್ಞಾನವಾಗುತ್ತದೆ.

ಸಾಧಕನ ಹೃದಯ ಹೀಗೆ ಸತ್ವತರವಾದುದನ್ನು ಕಂಡ ಗುರುಗಳು ಸರ್ವವೇದ ಸಾರವಾದ ತತ್ತ್ವಮಸಿ ಅಹಂಬ್ರಹ್ಮಾಸ್ಮಿ ಎಂಬ ದಿವ್ಯ ಮಹಾವಾಕ್ಯಗಳನ್ನು ಭೋಧಿಸುತ್ತಾರೆ. ಈ ಮಹಾವಾಕ್ಯಗಳನ್ನಾಲಿಸಿದ ಒಡನೆಯೇ ಅಜ್ಞಾನದ ದ್ವಿತೀಯ ಪರದೆಯಾದ ಅಭಾನಾಪಾದಕಾವರಣವು ಕೂಡ ನಾಶವಾಗಿ 'ಅಹಂ ಬ್ರಹ್ಮಾಸ್ಮಿ' 'ನಾನೇ ದೇವ. ನಾನು ಮುಕ್ತ. ತ್ರಿಕಾಲಾಬಾಧ್ಯ, ಚಿದ್ಘನ, ಆನಂದ ಸಾಗರ.' ಎಂದು ಸಾಧಕನು ಉದ್ಗರಿಸುತ್ತಾನೆ. ಇದೇ ಅಪರೋಕ್ಷಾನುಭೂತಿ. ಈಗ ಸಾಧಕನ ಹೃದಯವು ಸತ್ವತಮ ! ಅದರಲ್ಲಿ ಹೊರಹೊಮ್ಮಿದ ಆತ್ಮ ಪ್ರಕಾಶವೇ ಆತ್ಮಜ್ಞಾನ !!

(೨)ತೇಷಾಂ ಅದಿತ್ಯವತ್ ಜ್ಞಾನಂ ಪ್ರಕಾಶಯತಿ ಪರಂ:-ಯಾರ ಅಜ್ಞಾನಾವರಣವು ಪರೋಕ್ಷ ಹಾಗು ಅಪರೋಕ್ಷ ಆತ್ಮಜ್ಞಾನದಿಂದ ನಾಶವಾಯಿತೋ ಅವರ ಸತ್ವತಮ ಅಂತರಂಗದಲ್ಲಿ ಅಪ್ರತಿಮ ಆತ್ಮಜ್ಞಾನವು ಸೂರ್ಯನಂತೆ ಜಾಜ್ವಲಿಸುತ್ತದೆ; ಹಾಗು ಪರಾತ್ಪರವಾದ ಕೇವಲಾಸ್ತಿತ್ವವಾದ ನಿಶ್ಶಬ್ದ ಬ್ರಹ್ಮವನ್ನು ತನ್ನ ಸಾಕ್ಷಾತ್ ಸ್ವರೂಪವಾಗಿಯೇ ಸಾಕ್ಷಾತ್ಕರಿಸಿಕೊಡುತ್ತದೆ. ಆಗ ಅಹಂ ಬ್ರಹ್ಮಾಸ್ಮಿ ಸಂವೇದನೆ ಕೂಡ ಅಡಗಿ ಸಾಧಕನು ಮಹಾ ಮೌನ ತಾಳತ್ತಾನೆ.

**ಸಂಬಂಧ:**- ಮುಕ್ತರಲ್ಲಿ ಎರಡು ವಿಧ: (೧) ವಿದೇಹ ಮುಕ್ತರು (೨) ಜೀವನ್ಮುಕ್ತರು. ಮುಂದಿನ ಮಂತ್ರದಲ್ಲಿ ವಿದೇಹ ಮುಕ್ತರ ವರ್ಣನೆ ಇದೆ. ನಂತರದ ಮಂತ್ರದಲ್ಲಿ ಜೀವನ್ಮುಕ್ತರ ವರ್ಣನೆಯಿದೆ.

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತ ಕಲ್ಮಷಾಃ ॥೧೭॥**

**ಅರ್ಥ:**- (ಮಹಾಯೋಗಿಗಳು) ತದ್ಬುದ್ಧಯಃ =(ತಸ್ಮಿನ್ ಪರಮಾತ್ಮನಿ ಏವ ಬುದ್ಧಿಃ ನಿಶ್ಚಯಾತ್ಮಿಕಾಮತಿಃ ಯೇಷಾಂ ತೇ) ಪರಮಾತ್ಮನಲ್ಲಿ ನಿಶ್ಚಯಮತಿಯುಳ್ಳವರು. ತದಾತ್ಮಾನಃ= (ತಸ್ಮಿನ್ ಏವ ಆತ್ಮಾ ಮನಃ ಯೇಷಾಂ ತೇ) ದೇವನಲ್ಲಿಯೇ ಮನಸ್ಸುಳ್ಳವರು. ತನ್ನಿಷ್ಠಾಃ =(ತಸ್ಮಿನ್ ಏವ ನಿಷ್ಠಾ ಯೇಷಾಂ ತೇ) ದೇವನಲ್ಲಿಯೇ ನಿಷ್ಠೆಯುಳ್ಳವರು. ತತ್ಪರಾಯಣಾಃ= (ತದೇವ ಪರಂ ಅಯನಂ ಆಶ್ರಯಃ ಯೇಷಾಂ ತೇ) ದೇವನಲ್ಲಿಯೇ ಆಶ್ರಯ ಪಡೆದವರು, (ಹಾಗು) ನಿರ್ಧೂತ ಕಲ್ಮಷಾಃ= (ಆತ್ಮಜ್ಞಾನೇನ ನಿರ್ಧೂತಂ ನಿರಸ್ತಂ ಕಲ್ಮಷಂ ಯೇಷಾಂ ತೇ)ಆತ್ಮಜ್ಞಾನದಿಂದ ಪಾಪ ನಾಶಮಾಡಿಕೊಂಡವರು. ಅಪುನರಾವೃತ್ತಿಂ =(ಅವರು) ಪುನರಾವೃತ್ತಿರಹಿತ ಮುಕ್ತಿಯನ್ನು ಗಚ್ಛಂತಿ =ಹೊಂದುತ್ತಾರೆ.

**ವಿವರಣೆ:— ತದ್ಬುದ್ಧಯಃ :—** ಯೋಗಿಗಳ ನಿಶ್ಚಯಾತ್ಮಿಕಾ ಬುದ್ಧಿಯು ಅತೀವ ನಿರ್ಮಲ. ದೀರ್ಘ ಸಾಧನೆ, ಗುರುಕೃಪೆ ಹಾಗು ನಿಷ್ಕಚಿಂತನೆಗಳಿಂದ ಆ ವಿಮಲ ಮತಿಯಲ್ಲಿ ಪರಮಾತ್ಮನ ಆವಿರ್ಭಾವ ಉಂಟಾಗಿದೆ. ಆತ್ಮನನ್ನರಿಯೆ ಎಂಬ ಅಜ್ಞಾನ ಹಾಗು ಆತ್ಮನಿಲ್ಲವಾಗಿ ತೋರಲಾರ ಎಂಬ ಆವರಣ ಈ ಎರಡೂ ದೋಷಗಳು ಅವರ ಬುದ್ಧಿಯಿಂದ ಕಳಚಿ ಬಿದ್ದಿವೆ. ಅವರಿಗೆ ಆತ್ಮನ ವಿಷಯದಲ್ಲಿ ಶಂಕೆ—ಸಂದೇಹಗಳೇ ಇಲ್ಲ. ನಮಗೆ ಭೌತ ವಸ್ತುಗಳಲ್ಲಿ ಎಷ್ಟು ನಿಶ್ಚಯ ಬುದ್ಧಿಯೋ ಅದರ ಸಾವಿರ ಪಾಲು ಆತ್ಮವಸ್ತುವಿನಲ್ಲಿ ಅವರ ನಿಶ್ಚಯ ಬುದ್ಧಿ.

**ತದಾತ್ಮಾನಃ :—** ಯೋಗಿಗಳ ಮನಸ್ಸಂತು ತಿಳಿಗೊಳದ ಜಲದಂತೆ ಶುಭ್ರ, ಸ್ವಚ್ಛ, ಶಾಂತ. ಅದರ ತುಂಬ ಪರಮಾತ್ಮನೇ ತುಂಬಿಕೊಂಡಿದ್ದಾನೆ. ಕೆಲಸಕ್ಕೆ ಹೋದ ತಾಯಿಯ ಮನಸ್ಸೆಲ್ಲ ಮನೆಯಲ್ಲಿರುವ ಎಳೆಯ ಮಗುವಿನ ಮೇಲೆ; ಹಾಗೆ ಲೋಕದಲ್ಲಿ ಬಾಳುತ್ತಿರುವ ಯೋಗಿಗಳ ಮನಸ್ಸೆಲ್ಲ ಆತ್ಮನ ಮೇಲೆ. ಆದುದರಿಂದ, ಅವರ ವಿಕ್ಷೇಪವೃತ್ತಿಯು (ಅನಾತ್ಮಗಳಲ್ಲಿ ಆತ್ಮ ಭಾವ ಹಾಗು ಅಹಂಕರ್ತೃತ್ವ, ಅಹಂ ಭೋಕ್ತೃತ್ವ ಭಾವ) ನಾಶವಾಗಿದೆ.

**ತನ್ನಿಷ್ಠಾಃ ತತ್ಪರಾಯಣಾಃ:—** ಅವರು ಆತ್ಮನಲ್ಲಿಯೇ ಪೂರ್ಣ ನಿಷ್ಠರಾದುದರಿಂದ ಪ್ರಾಪಂಚಿಕ ಶೋಕವು ಅವರನ್ನು ಬಾಧಿಸದು. ಪರಮಾತ್ಮನಲ್ಲಿಯೇ ಅವರು ಆಶ್ರಯ ಪಡೆದುದರಿಂದ ಅವರಿಗೆ ನಿರಂಕುಶ ಆನಂದವು ಪ್ರಾಪ್ತವಾಗಿದೆ. ಈ ಶೋಕ ನಿವೃತ್ತಿ ಮತ್ತು ನಿರಂಕುಶ ತೃಪ್ತಿಗಳು ಜೀವನ್ಮುಕ್ತ ಸ್ಥಿತಿಯ ಪಕ್ವ ಫಲಗಳಾಗಿವೆ.

**ಜ್ಞಾನನಿರ್ಧೂತ ಕಲ್ಮಷಾಃ :—** ಭ್ರೂಣಹತ್ಯ, ಶಿಸು ಹತ್ಯದಂಥ ಘೋರ ಪಾಪಗಳ ಮೂಲ ಶ್ರೋತವೆಂದರೆ ಆತ್ಮನ ಅಜ್ಞಾನ, ತನ್ನ ಸ್ವರೂಪದ ಮರೆವು. ಈ ಅಜ್ಞಾನವು ಪಾಪಗಳ ರಾಜ, ಸಕಲ ದುರಿತಗಳ ಜನಕ. ಇಂಥ ಅಜ್ಞಾನ ರೂಪ ಪಾಪವನ್ನು ತೊಳೆದು ಹಾಕುವ ಏಕೈಕ ದಿವ್ಯ ಔಷಧಿ ಎಂದರೆ ಆತ್ಮಜ್ಞಾನ. ಯೋಗಿಗಳು ಆ ಆತ್ಮಜ್ಞಾನ ಜಲದಿಂದ ಮನಸ್ಸಿಗೆ ಮೆತ್ತಿದ ಅಜ್ಞಾನವನ್ನು ಸ್ವಚ್ಛ ಮಾಡಿದ್ದಾರೆ.

**ಗಚ್ಛಂತಿ ಅಪುನರಾವೃತ್ತಿಂ:** ಇಂತು ದೇವನನ್ನೇ ಏಕೈಕ ಶರಣ್ಯನೆಂದು ವರಿಸಿದ ಯೋಗಿಗಳು ಮತ್ತೆಂದೂ ಜನ್ಮ ಮರಣ ಚಕ್ರಕ್ಕೆ ತಿರುಗಿ ಬಾರದಂತೆ ಅಮೃತ ಪದವಿ ಪಡೆಯುತ್ತಾರೆ. ಅವರು ವಿದೇಹ ಮುಕ್ತರು.

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥೧೮॥**

**ಅರ್ಥ:—** ಪಂಡಿತಾಃ=ಜ್ಞಾನಿಗಳು ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ= ವಿದ್ಯೆ ವಿನಯಗಳಿಂದ ಕೂಡಿದ ಬ್ರಾಹ್ಮಣನಲ್ಲಿ, ಗವಿ ಹಸ್ತಿನಿ ಶುನಿ ಚ ಶ್ವಪಾಕೇ= ಆಕಳು, ಆನೆ, ನಾಯಿ ಹಾಗು ಚಾಂಡಾಲರಲ್ಲಿ ಸಮದರ್ಶಿನಃ= ಸಮದರ್ಶಿಗಳು.

ವಿವರಣೆ:— ಆತ್ಮಜ್ಞಾನದಿಂದ ಚಿತ್ತಶುದ್ಧಿ ಮಾಡಿಕೊಂಡು ಪುನರ್ಜನ್ಮ ನೀಗಿದವರು ವಿದೇಹ ಮುಕ್ತರು. ಬದುಕಿರುವಾಗಲೇ ಜೀವ ಭಾವ ತ್ಯಜಿಸಿದ ಮಹಾತ್ಮರು ಜೀವನ್ಮುಕ್ತರು. ಅವರ ಸಮದರ್ಶಿತ್ವದ ಪರಾಮರ್ಶೆಯನ್ನು ಇಲ್ಲಿ ಕಾಣಲಿದ್ದೇವೆ.

ದೃಷ್ಟಿ: ವಿಶ್ವದತ್ತ ನಾವು ನೋಡುವ ದೃಷ್ಟಿಗಳು ಎರಡು: ೧) ವ್ಯಾವಹಾರಿಕ ೨) ಪಾರಮಾರ್ಥಿಕ. ವ್ಯಾವಹಾರಿಕ ದೃಷ್ಟಿಯು ಅಶುದ್ಧ. ಅದಕ್ಕೆ ಹೊರಗಿನ ನಾಮ ರೂಪುಗಳು ಗುಣ ಕ್ರಿಯೆಗಳು ತೋರುತ್ತವೆ. ವ್ಯಕ್ತಿಯ ಅಂತರ್ಯಾಮನ್ನಾಗಲಿ, ಜಗತ್ತಿನ ಅಂತರ್ಯಾಮನ್ನಾಗಲಿ ಈಕ್ಷಿಸುವ ಸಾಮರ್ಥ್ಯ ಇದಕ್ಕಿಲ್ಲ. ಈ ದೃಷ್ಟಿಯ ವ್ಯಕ್ತಿಯು ತನ್ನನ್ನು ಮರೆತು "ಅನ್ಯತ್ ಶೃಣೋತಿ, ಅನ್ಯತ್ ಪಶ್ಯತಿ, ಅನ್ಯತ್ ವಿಜಾನಾತಿ" ಅನಾತ್ಮವಸ್ತುವನ್ನೇ ನೋಡುತ್ತಾನೆ, ಕೇಳುತ್ತಾನೆ ಹಾಗು ತಿಳಿದುಕೊಳ್ಳುತ್ತಾನೆ. ಅದರ ರೂಪಿಗೆ ಮರುಳಾಗುತ್ತಾನೆ. ಈ ದೃಷ್ಟಿಯ ಮನುಷ್ಯನ ಬುದ್ಧಿಯು ಭೇದಕ್ಕೆ ಆಸ್ಪದವಿತ್ತಿದೆ; ತನ್ನದು, ಅನ್ಯರದು, ತನ್ನವರು, ಪರಕೀಯರು ತನ್ನ ಜಾತಿ, ಭಿನ್ನಜಾತಿ, ತನ್ನ ಧರ್ಮ ಅನ್ಯ ಧರ್ಮ ಎಂಬ ಭಿನ್ನತೆ ಅವನಲ್ಲಿ ಬೇರು ಬಿಟ್ಟಿದೆ. ಈ ಭಿನ್ನತೆಯೇ ದುಃಖ ಹೇತು.

ಪಾರಮಾರ್ಥಿಕ ದೃಷ್ಟಿಯು ಪರಮ ಪಾವನ. ಬಾಹ್ಯ ನಾಮ ರೂಪ ಗುಣ ಕ್ರಿಯೆಗಳನ್ನು ಬದಿಗಿರಿಸಿ ಅವುಗಳ ಅಂತರಂಗದಲ್ಲಿ ಹುದುಗಿದ ಸಚ್ಚಿದಾನಂದ ಆತ್ಮವಸ್ತುವನ್ನು ದರ್ಶಿಸುವ ಬಲ ಇದಕ್ಕಿದೆ. ವ್ಯಾವಹಾರಿಕನು ಆಭರಣಗಳನ್ನಷ್ಟೇ ಕಾಣುತ್ತಾನೆ. ಪಾರಮಾರ್ಥಿಕನು ಮಾತ್ರ ಆಭರಣಗಳನ್ನು ನೋಡುತ್ತಿರುವ ಕ್ಷಣದಲ್ಲಿಯೇ ಅವುಗಳ ಆತ್ಮವಾದ ಸುವರ್ಣವನ್ನು ಈಕ್ಷಿಸುತ್ತಾನೆ. ಆದುದರಿಂದ ಅವನಿಗೆ ಸ್ವರ್ಣಮುಕುಟ ಹಾಗು ಸ್ವರ್ಣ ಪಾದರಕ್ಷೆಗಳಲ್ಲಿ ಭೇದ ಕಾಣದು. ಅವನದು ಸರ್ವಸಮದೃಷ್ಟಿ. "ನಾನ್ಯತ್ ಪಶ್ಯತಿ, ನಾನ್ಯತ್ ಶೃಣೋತಿ, ನಾನ್ಯತ್ ವಿಜಾನಾತಿ" ಅವನು ಆತ್ಮಭಿನ್ನವಾದ ಏನನ್ನು ನೋಡುವದಿಲ್ಲ, ಕೇಳುವದಿಲ್ಲ ಹಾಗು ತಿಳಿದುಕೊಳ್ಳುವದಿಲ್ಲ. 'ಸರ್ವಭೂತಸ್ಥಮಾತ್ಮಾನಂ ಸರ್ವ ಭೂತಾನಿ ಚಾತ್ಮನಿ' ಸರ್ವ ಭೂತಗಳಲ್ಲಿ ತನ್ನನ್ನು ತನ್ನಲ್ಲಿ ಸರ್ವಭೂತಗಳನ್ನು ನೋಡುತ್ತಾನೆ. ಹೀಗೆ ವಿಶ್ವದಲ್ಲೆಲ್ಲ ತನ್ನ ಆತ್ಮದೇವನನ್ನೇ ದರ್ಶಿಸುವ ಅವನು ರಾಗ ದ್ವೇಷವಿರಹಿತ. ದುಃಖ ಶೋಕಗಳಿಂದ ಮುಕ್ತ! ಸದಾ ಸಂತುಷ್ಟ! ಆತ್ಮಾರಾಮ!

ವಿದ್ಯಾವಿನಯ ಸಂಪನ್ನೇ...: ಪ್ರಪಂಚವು ವಿಷಮ. ಪ್ರತಿಯೊಬ್ಬರೂ ಒಂದೊಂದು ರೀತಿ. ಉದಾ: ಹಿರಣ್ಯ ಕಶ್ಯಪನು ಶಿವಭಕ್ತ; ಗರ್ವಿಷ್ಠ. ಅವನ ಮಗನಾದ ಪ್ರಹ್ಲಾದನು ವಿಷ್ಣುಭಕ್ತ; ವಿನೀತ. ಉತ್ತಾನಪಾದ ರಾಜನು ಮೋಹಿತ; ಮಗನಾದ ಧ್ರುವನು [illegible] ತಪಸ್ವಿ. ದಶರಥ ಕಾಮುಕ; ರಾಮ

ಆಜ್ಞಾಪಾಲಕ. ಕೆಲವರಿಗೆ ಕರ್ಮದಲ್ಲಿ ರತಿ; ಕೆಲವರಿಗೆ ಭಕ್ತಿಯಲ್ಲಿ ಅಭಿರುಚಿ. ಕೆಲವರಿಗೆ ಯೋಗಾಸಕ್ತಿ; ಕೆಲವರಿಗೆ ವಿದ್ಯಾಪ್ರೇಮ. ಒಬ್ಬರು ಅಂತರ್ಮುಖಿ, ಮತ್ತೊಬ್ಬರು ಬಹಿರ್ಮುಖಿ, ಇನ್ನೊಬ್ಬರು ವಾಗ್ಮಿ, ಮಗುದೊಬ್ಬರು ಮೌನಿ! ಎಷ್ಟು ವ್ಯಕ್ತಿಗಳೋ ಅಷ್ಟು ವಿಧ. ಈ ಬಾಹ್ಯ ಭಿನ್ನತೆ ಕಂಡು ಚಿಂತಿಸುವ ಜನ ರೆಲ್ಲ ಲೌಕಿಕರು; ಸಾಮಾನ್ಯ ಕಣ್ಣಿನ ವ್ಯಾವಹಾರಿಕರು.

ಲೌಕಿಕರ ದೃಷ್ಟಿಯು ಪ್ರಕಾಶ ಕಿರಣದಂತೆ, ದೇಹದ ಬಾಹ್ಯರೂಪವನ್ನು ಮಾತ್ರ ತೋರಿಸುತ್ತದೆ. ಅಲೌಕಿಕ ಯೋಗಿಗಳ ದೃಷ್ಟಿಯಾದರೋ ಕ್ಷ-ಕಿರಣದಂತೆ. ಕ್ಷ ಕಿರಣವು ಬಟ್ಟೆ ಬರೆ, ಚರ್ಮ ಮಾಂಸಗಳನ್ನೆಲ್ಲ ದಾಟಿ ಅಸ್ಥಿ ಪಂಜರವನ್ನು ತಲುಪುತ್ತದೆ. ಯೋಗಿಯ ಅಂತರ್ದೃಷ್ಟಿಯು, ಅದೇರೀತಿ, ವ್ಯಕ್ತಿಯ ಬಾಹ್ಯ ಜಾತಿ ವರ್ಣ ಆಶ್ರಮ ಕುಲ ಧರ್ಮ ಪುಣ್ಯ ಪಾಪ ನಾಮ ರೂಪ ಎಲ್ಲವನ್ನು ಬದಿಗೆ ಸರಿಸಿ ಅಂತರಂಗದಲ್ಲಿ ಪ್ರವೇಶಿಸಿ ಅಲ್ಲಿ ಸ್ಥಿರವಾಗಿ ನೆಲೆಸಿದ ಪರಮಾತ್ಮ ಚೈತನ್ಯವನ್ನು ಅಭಿವ್ಯಕ್ತಗೊಳಿಸುತ್ತದೆ. ಅದೇ ಆತ್ಮದರ್ಶನ!

ಯೋಗಿಯು ಪಡೆವ ಆತ್ಮದರ್ಶನದಲ್ಲಿ ಮೂರು ವಿಧ: (೧) ಬಾಹ್ಯ ಸವಿಕಲ್ಪ ದರ್ಶನ: ಬಾಹ್ಯ ವಸ್ತುಗಳ ತೋರಿಕೆಯ ನಾಮರೂಪಾದಿಗಳ ಬಿಟ್ಟು ಅವುಗಳ ಆಶ್ರಯವಾದ ಸಚ್ಚಿದಾನಂದ ಆತ್ಮನನ್ನು ಕಾಣುವದು. (೨) ಅಂತರ್ ಸವಿಕಲ್ಪ ದರ್ಶನ: ದೇಹದಲ್ಲಿ ಭೂಮಿಯಿಂದ ಜ್ಞಾತೃವಿನವರೆಗೆ ೨೫ ಪ್ರಾಕೃ ತಿಕ ತತ್ತ್ವಗಳಿವೆಯಷ್ಟೆ? ಅವುಗಳ ಭಾವವನ್ನು ಪರಿತ್ಯಜಿಸಿ ಪರಾತ್ಪರ ಹಾಗೂ ನಿರ್ಗುಣ, ನಿಷ್ಕ್ರಿಯ ಪ್ರತ್ಯಗಾತ್ಮನನ್ನು ದರ್ಶಿಸುವದು. (೩) ನಿರ್ವಿಕಲ್ಪ ಆತ್ಮ ದರ್ಶನ: ನಾಮ ರೂಪ ಗುಣ ಕ್ರಿಯಾ ಹಾಗು ತತ್ತ್ವಗಳ ಪರಿಧಿಗಳನ್ನೆಲ್ಲ ದಾಟಿ ಪರಿಪೂರ್ಣ ದೇವನಲ್ಲಿ ಸಾಮರಸ್ಯ ಹೊಂದಿರುವದು.

ಈ ಮೂರು ದರ್ಶನಗಳಲ್ಲಿ ಒಂದು ಸಾಧಿಸಿದರೂ ಸಾಕು, ಅವನು ಪುನೀತ ಮಹಾತ್ಮ. ಮೂರನೆಯ ವಿಧದ ದರ್ಶನವಾದರಂತೂ ಅವನು ದಿವ್ಯ ದೃಷ್ಟಾರನೇ ಸರಿ! ಅವನೇ ಮಹರ್ಷಿ. "ಪಂಡಿತ" ಎನ್ನುವದು ಅವನಿಗೆ ಭಗ ವಂತನೇ ಒಲಿದಿತ್ತ ಪದವಿ. ಅದಕ್ಕೆ ಸಮನಾದ ಪದವಿಗಳು ವಿಶ್ವದಲ್ಲಿಯೇ ಇಲ್ಲ. ಪದ್ಮಶ್ರೀ, ಪದ್ಮಭೂಷಣ, ಭಾರತ ರತ್ನ ಮುಂತಾದ ಪದವಿಗಳು ಶಿವಯೋಗಿ, ಋಷಿ, ಮಹಾತ್ಮ, ಪಂಡಿತ ಎಂಬ ದೈವೀ ಪದವಿಗಳ ಎದುರು ಒಂದು ಕಾಷ್ಠಕ್ಕೆ ಸಮ!

ಪಂಡಿತನು ವಿದ್ಯಾವಿನಯ ಸಂಪನ್ನನಾದ ಬ್ರಾಹ್ಮಣ ಹಾಗು ನಾಯಿಯ ಮಾಂಸ ತಿನ್ನುವ ಚಾಂಡಾಲರನ್ನು ಒಂದೇ ದೃಷ್ಟಿಯಿಂದ ನೋಡುತ್ತಾನೆ. ಅವ ನಿಗೆ ಪೂಜ್ಯ ಆಕಳು ಆನೆ, ಹೇಯವಾದ ಶ್ವಾನ ಸೂಕರಗಳು ಸಮ! ಇಂಥ ದೃಷ್ಟಿ ಎಷ್ಟು ಜನರಿಗೆ ದೊರೆತೀತು? ಮಹಾನ್ ತತ್ವ ಸಾಹಿತಿಯು ಜ್ಞಾನೇಶ್ವರ

ಅವನನ್ನೇ ಹೀಗಳೆದು ಬ್ರಾಹ್ಮಣ ವರ್ಣದಿಂದ ಹೊರದೂಡಿದ ಜನರು ವಿದ್ಯಾ ವಿನಯ ಸಂಪನ್ನ ಬ್ರಾಹ್ಮಣನನ್ನೇ ಕೀಳಾಗಿ ಕಾಣುವರೆಂದಾಗ ಅಂತ್ಯಜನೊಂದಿಗೆ ತಮ್ಮನ್ನು ಸರಿಸಮಾನವೆಂದು ಅದೆಂತು ನೋಡಬಹುದು? ನಾವು ಆಕಳನ್ನು ಕಂಡು ಹಣೆ ಹಚ್ಚಿ ನಮಿಸುತ್ತೇವೆ. ಆನೆಯು ಬಲಿಷ್ಠ ಪ್ರಾಣಿ, ಅದಕ್ಕೆ ಕೈಮುಟ್ಟಿ ವಾತ್ಸಲ್ಯ ತೋರುತ್ತೇವೆ. ನಾಯಿಯು ಕೀಳು ಪ್ರಾಣಿ; ಕಾಲಿನಿಂದ ಸ್ನೇಹ ಹಾಗು ಮೆಚ್ಚಿಗೆ ವ್ಯಕ್ತ ಮಾಡುತ್ತೇವೆ; ಸೂಕರವನ್ನಂತು ಅಸ್ಪರ್ಶವೆಂದು ಬಗೆಯುತ್ತೇವೆ. ಪಂಡಿತನು ಹಾಗಲ್ಲ. ಸಂತ ನಾಮದೇವನು ತನ್ನ ಬುತ್ತಿಯಿಂದ ಹೋಳಿಗೆ ಕಚ್ಚಿ ಕೊಂಡೋಡುವ ನಾಯಿಯ ಹಿಂದೆ ತುಪ್ಪದ ಬಟ್ಟಲ ಹಿಡಿದು "ವಿಠಲಾ ಸ್ವಲ್ಪ ನಿಲ್ಲು. ಬರಿ ಹೋಳಿಗೆ ತಿನ್ನ ಬೇಡ. ತುಪ್ಪ ತೆಗೆದುಕೊ" ಎಂದು ಓಡಿದ. ಅವ ನಿಗೆ ನಾಯಿಯು ನಾಯಿಯಾಗಿ ಕಾಣಲಿಲ್ಲ, ವಿಠಲನಾಗಿ ಕಂಡಿತು. ಸಮ್ಯಕ್ ಜ್ಞಾನಿ ಮಹಾತ್ಮರಾದ ಬಸವಣ್ಣನವರು ಕಳವಿಗೆ ಬಂದ ಕಳ್ಳನಲ್ಲಿ ಕೂಡಲ ಸಂಗಮನನ್ನು ಕಂಡರು. ಶ್ರೀ ರಾಮಕೃಷ್ಣ ಪರಮಹಂಸರು ವಿಧಿವತ್ತಾಗಿ ವಿವಾಹವಾದ ಹೆಂಡತಿಯಲ್ಲಿ ಮಹಾ ಕಾಳಿಯನ್ನು ದರ್ಶಿಸಿದರು! ನಾರದ ಮಹ ರ್ಷಿಯ ಕಣ್ಣಿಗೆ ವಾಲ್ಮೀಕಿಯ ಲಕ್ಷ ಪಾತಕಗಳು ಕಾಣದೆ ಅವನ ಹೃದ್ಗುಹಾ ನಿವಾಸಿಯಾದ ರಾಮನು ಕಂಡ!

ಜಗತ್ತಿನಲ್ಲಿ ಬಹು ಜನರು ಅಪಂಡಿತರು; ಮೂಢರು. ತಮ್ಮವರೇ ಆದ ನಾಲ್ಕು ಜನ ಗಂಡು ಹೆಣ್ಣು ಮಕ್ಕಳಲ್ಲಿ ಒಂದು ಭಾವ ತೋರರು; ತಮ್ಮನ್ನೇ ನಂಬಿದ ಪ್ರಜೆಗಳಲ್ಲಿ ರಾಜ ಮಹಾರಾಜರಿಗೆ, ಮಂತ್ರಿ ಮಹಾಮಂತ್ರಿಗಳಿಗೆ ಸಮಬುದ್ಧಿ ಇಲ್ಲ. ಅಷ್ಟು ಬುದ್ಧಿ ಬಂದಿದ್ದರೆ ದೇಶ ಸ್ವರ್ಗವಾಗುತ್ತಿತ್ತು!

ಸಂಬಂಧ:- ಸಮದರ್ಶಿಯ ವರ್ಣನೆ ಮುಂದುವರೆದಿದೆ.

ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇಸ್ಥಿತಂ ಮನಃ ।
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥೧೯॥

ಅರ್ಥ:- ಯೇಷಾಂ =ಯಾರ, ಮನಃ= ಮನಸ್ಸು ಸಾಮ್ಯೇ = ಸಾಮ್ಯದಲ್ಲಿ (ಸಮತ್ವದಲ್ಲಿ) ಸ್ಥಿತಂ= ನಿಂತಿರುವದೋ ತೈಃ =ಅವರಿಂದ ಇಹ ಏವ= ಈ ಜನ್ಮದಲ್ಲಿಯೇ ಸರ್ಗಃ= ಸಂಸಾರವು ಜಿತಃ= ಜಯಿಸಲ್ಪಟ್ಟಿದೆ. ಹಿ= ಏಕೆಂದರೆ, ಬ್ರಹ್ಮ= ಬ್ರಹ್ಮವು ನಿರ್ದೋಷಂ= ದೋಷರಹಿತವು, ಸಮಂ= ಸಮವು, ತಸ್ಮಾತ್= ಆದ್ದರಿಂದ ತೇ= ಆವರು ಬ್ರಹ್ಮಣಿ =ಬ್ರಹ್ಮದಲ್ಲಿಯೇ ಸ್ಥಿತಾಃ= ಸ್ಥಿತರಾಗಿದ್ದಾರೆ.

ವಿವರಣೆ:- ವೀರ ಸ್ವರ್ಗ ಬಯಸಿ ಪ್ರಾಣ ಈಯುವ ರಣಧೀರರು, ಸ್ವರ್ಗ ಸುಖ ಇಚ್ಛಿಸಿ ಗಂಗಾನದಿಯಲ್ಲಿ ದೇಹ ಬಿಡುವ ಯಾಗಶೀಲರು ಮತ್ತೆ ಮತ್ತೆ ಜನ್ಮಕ್ಕೆ ಬರುತ್ತಾರೆ. ಕೆಲವು ಯೋಗಿಗಳು ನಿಷ್ಕಾಮ ಭಾವನೆಯಿಂದ ಯೋಗಾ ಭ್ಯಾಸ ಮಾಡಿ ತನ್ಮಾತ್ರೆ, ಅಹಂಕಾರ, ಮಹತ್ತತ್ತ್ವಗಳವರೆಗೆ ಏರಿ ಅಲ್ಲಿಂದ ಪ್ರಕೃ ತಿಯಲ್ಲಿ ಬೆರೆಯುತ್ತಾರೆ. ಇವರಿಗೂ ಜನ್ಮ ತಪ್ಪಿದ್ದಲ್ಲ. ಇವರು ಹುಟ್ಟುವಾಗ

ವಿವಿಧ ಸಿದ್ಧಿಗಳನ್ನು ಕಟ್ಟಿಕೊಂಡೇ ಬರುತ್ತಾರೆ. ಮತ್ತೆ ಕೆಲವರು ಮಹತ್ತಿನ ವರೆಗೆ ಹೋಗಿ ತಲುಪುತ್ತಾರೆ; ಆತ್ಮನ ದರ್ಶನ ಪಡೆಯುತ್ತಾರೆ; ನಂತರ ಭೌತ್ರ ದೇಹ ತೊರೆದು ಆ ಮಹತ್ತಿನಿಂದ ನೇರವಾಗಿ ಆತ್ಮನಲ್ಲಿ ಸಾಮರಸ್ಯ ಹೊಂದು ತ್ತಾರೆ. ಅವರು ವಿದೇಹ ಮುಕ್ತರು. ದೇಹವಿರುವಾಗಲೇ ಪ್ರತ್ಯಗಾತ್ಮನಲ್ಲಿ ಒಂದಾ ದವರು ಮಾತ್ರ ಜೀವನ್ಮುಕ್ತರು. ಅವರಿಗೆ ಇದೇ ಕ್ಷಣ ಜನ್ಮ ನಿರ್ಮುಕ್ತಿ ! ಅವರಿಗೆ ಸಂಸಾರವು ಬಾಧಕವಾಗದು ಎಂಬ ಮಾತನ್ನು ಭಗವಂತ ಹೇಳುತ್ತಾನೆ.

**ಬ್ರಹ್ಮ ನಿರ್ದೋಷಂ ಸಮಂ:-** ಸರ್ವಲೋಕದ ಚಕ್ಷುವು ಸೂರ್ಯ. ಅವನು ಸುರಾಭಾಂಡ ಹಾಗು ಮಧು ಭಾಂಡಗಳಲ್ಲಿ ತನ್ನ ಪ್ರತಿಬಿಂಬ ಮೂಡಿಸು ತ್ತಾನೆ. ಆದರೆ ಆ ಸುರೆಯ ಮಾಲಿನ್ಯತೆಯಾಗಲಿ, ಮಧುವಿನ ಮಾಧುರ್ಯವಾ ಗಲಿ ಪ್ರತಿಬಿಂಬಗಳಿಗೆಯೇ ಅಂಟವು, ಇನ್ನು ಸೂರ್ಯನಿಗಂಟುವ ಮಾತಂತು ಬಹು ದೂರ. ಸೂರ್ಯನು ಪೂರ್ತಿ ನಿರ್ದೋಷ. ಹಾಗೆ ಬ್ರಹ್ಮನು ವಿಶ್ವಭಾಸ್ಕರ: ಸರ್ವ ತತ್ತ್ವ-ಪ್ರಕಾಶಕ ಸಂವಿದ್ಭಾನು! ಕಾಲ ದೇಶಾದ್ಯತೀತ ದಿವ್ಯ ವಸ್ತು. ಅಂತ ರಂಗ ಸರಸ್ಸಿನಲ್ಲಿ ಮೂಡಿದ ಬ್ರಹ್ಮನ ಪ್ರತಿಬಿಂಬವೇ ಜೀವಾತ್ಮ. ಅಂತರಂಗದ ಯಾವ ದೋಷವೂ ಜೀವನಿಗೆಯೇ ಸಂಬಂಧವಾಗದಾಗಿ ಪರಬ್ರಹ್ಮಕ್ಕೆಲ್ಲಿ ಅದರ ಸಂಪರ್ಕ? ಆದ್ದರಿಂದ ಬ್ರಹ್ಮನು 'ನಿರ್ದೋಷ.'

ದೇವಾಲಯದ ಶಿಲಾಲಿಂಗಕ್ಕೆ ನೈವೇದ್ಯ ಅರ್ಪಿಸಿ ನಮಿಸುತ್ತೇವೆ. ಅಲ್ಲಿಯೇ ಇರುವ ಇರುವೆಗಳು ಅದರ ಮೇಲೆಲ್ಲ ಓಡಾಡುತ್ತವೆ. ಶಿಲಾಲಿಂಗವು ಮಾತ್ರ ಇಬ್ಬರಿಗೂ ಸಮ! ಸಾಮಾನ್ಯ ಶಿಲಾಲಿಂಗವೇ ಇಷ್ಟು ಸಮ ಎಂದಾಗ ಚೈತನ್ಯ ಲಿಂಗದೇವನು ಅದೆಷ್ಟು ಸಮನಿರಬೇಕು! ಅವನಿಗೆ ಪಾಪಿಗಳೂ ಕಾಣು ವದಿಲ್ಲ, ಪುಣ್ಯವಂತರೂ ತೋರುವದಿಲ್ಲ. ಅವನು ಸರ್ವ ಸಮಾನ!

**ಯೇಷಾಂ ಸಾಮ್ಯೇ ಸ್ಥಿತಂ ಮನಃ ತೈಃ ಜಿತಃ ಇಹ ಏವ ಸರ್ಗಃ:-** ಯಾವ ದಾರ್ಶನಿಕರ (ಪಂಡಿತರ) ಮನಸ್ಸು ಆ ಸರ್ವಸಮಾನ ಪರಬ್ರಹ್ಮನಲ್ಲಿ ಒಂದಾ ಗಿದೆಯೋ ಅವರು ಬದುಕಿರುವಾಗಲೇ ಸಂಸಾರವನ್ನು ಗೆದ್ದಿದ್ದಾರೆ. ಅವರು ಜೀವನ್ಮುಕ್ತರು. ಅಹಂಕಾರ ಮಮಕಾರ ವಿಹೀನರು. ಪರಮಾತ್ಮನಷ್ಟು ಅವರ ಹೃದಯವು ವಿಶಾಲ. ಮನೆ ಮಡದಿ ಮಕ್ಕಳು ಧನ ಮಾನ ಮಿತ್ರ ವೈರಿಗಳು ಅವರಿಗೆ ಬ್ರಹ್ಮರೂಪ. ಅವರು ವಿಶ್ವಕುಟುಂಬಿಗಳು. ಬ್ರಹ್ಮದಲ್ಲಿ ನೆಲೆಸಿದ ನೈಜ ಬ್ರಾಹ್ಮಣರು! ವರ್ಣಾಶ್ರಮ ಗಡಿ ದಾಟಿದ ಮುಕ್ತಾತ್ಮರು!!

**ಸಂಬಂಧ:-** ಸಮದರ್ಶಿಗಳು ಹೇಗೆ ಬಾಳುತ್ತಾರೆ? ಅವರ ಜೀವನದ ರೀತಿ ನೀತಿಗಳೇನು?

**ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾಪ್ರಿಯಮ್ ।**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥೨೦॥**

**ಅರ್ಥ:-** ಬ್ರಹ್ಮವಿತ್= ಬ್ರಹ್ಮವಿದನು, ಸ್ಥಿರ ಬುದ್ಧಿಃ= (ನಿಶ್ಚಲಾ ಬುದ್ಧಿಃ ಯಸ್ಯ ಸಃ) ನಿಶ್ಚಲ ಬುದ್ಧಿಯುಳ್ಳವನು. ಅಸಂಮೂಢಃ =ಮೋಹವಿಲ್ಲದವನು. ಬ್ರಹ್ಮಣಿ ಸ್ಥಿತಃ= ಬ್ರಹ್ಮಸಾಮರಸ್ಯ ಹೊಂದಿದವನು, (ಅವನು) ಪ್ರಿಯಂ ಪ್ರಾಪ್ಯ= ಪ್ರಿಯವಾದುದನ್ನು ಹೊಂದಿ ನ ಪ್ರಹೃಷ್ಯೇತ್ =ಹಿಗ್ಗುವದಿಲ್ಲ (ಹಿಗ್ಗಲಾರ), ಅಪ್ರಿಯಂ ಪ್ರಾಪ್ಯ= ಅಪ್ರಿಯ ವಾದುದನ್ನು ಹೊಂದಿ, ನ ಉದ್ವಿಜೇತ್= ಕುಗ್ಗುವದಿಲ್ಲ (ಕುಗ್ಗಲಾರ).

**ವಿವರಣೆ:–** "ಬ್ರಹ್ಮವನ್ನು ಅರಿತು ಬ್ರಹ್ಮದಲ್ಲಿ ಸಮರಸರಾದ ಮಹಾತ್ಮರೇ ಬ್ರಹ್ಮವಿದರು, ಸಮದರ್ಶಿಗಳು, ಜೀವನ್ಮುಕ್ತರು. ಸತ್ಯ ವಸ್ತುವನ್ನು ಅಪರೋಕ್ಷವಾಗಿ ದರ್ಶಿಸಿದ ಅವರಿಗೆ ಪ್ರಾಪಂಚಿಕ ವಿಷಯಗಳ ವ್ಯಾಮೋಹವಿಲ್ಲ. ಅವರ ಬುದ್ಧಿ ಸುಸ್ಥಿರ, ಮನಸ್ಸು ನಿಶ್ಚಲ! ಪ್ರೀತಿಯ ವಸ್ತು ದೊರೆತಾಗ ಅವರು ಹಿಗ್ಗುವದಿಲ್ಲ; ಅಪ್ರಿಯ ವಸ್ತು ಬಂದರೆ ಕುಗ್ಗುವದಿಲ್ಲ" ಎಂದು ಭಗವಂತನು ಆದೇಶ ನೀಡುತ್ತಾನೆ.

೧) ಸ್ಥಿರ ಬುದ್ಧಿ: ಭೌತಿಕ ಕಷ್ಟ ಕೋಟಲೆಗಳಿಗೆ ಕಂಪಿಸದ ಮತಿ. ಎಷ್ಟೇ ಸಾಂಸಾರಿಕ ತೊಂದರೆಗಳು ಎದುರಾಗಲಿ, ಲೋಕದ ಜನ ಜರೆಯಲಿ ನಿಂದಿಸಲಿ ಅಪಹಾಸ್ಯ ಮಾಡಲಿ ಸ್ಥಿರ ಬುದ್ಧಿಯ ಸಂತರು ಉದ್ವಿಗ್ನರಾಗುವದಿಲ್ಲ; ಮನಶ್ಶಾಂತಿಯನ್ನು ಕಳೆದುಕೊಳ್ಳುವದಿಲ್ಲ. ವಿಶ್ವಾಮಿತ್ರನು ವಸಿಷ್ಠರ ನೂರು ಜನ ಮಕ್ಕಳನ್ನು ಕೊಂದರೂ ಅವರ ಮನಸ್ಸು ಉದ್ವಿಗ್ನಗೊಳ್ಳಲಿಲ್ಲ. ದೇವನ ಪಥ ವಿಡಿದು ಸಾಗಿದ ಸಮದರ್ಶಿಗಳನ್ನು ಹರಿ ಹರ ಬ್ರಹ್ಮರು ಕೂಡ ಪಥಭ್ರಷ್ಟರನ್ನಾಗಿಸಿ ಸಾಂಸಾರಿಕ ಜಾಲದಲ್ಲಿ ಸಿಲುಕಿಸಲಾರರು! ಅಷ್ಟು ಅಚಲತೆ.

ಅಚಲ ಪ್ರಜ್ಞರಲ್ಲದ ಚಲಪ್ರಜ್ಞರು ಮಾತ್ರ ಗಾಳಿಯ ಪಟದಂತೆ ಸದಾ ಅಲುಗಾಡುತ್ತಾರೆ. ಕ್ಷಣ ಕ್ಷಣಕ್ಕೂ ತಮ್ಮ ವಿಚಾರ, ಭಾವನೆ ಮತ್ತು ನಿರ್ಧಾರಗಳನ್ನು ಬದಲು ಮಾಡುತ್ತಾರೆ. ಮನೆಯವರೆಗೆ ಲಕ್ಷ್ಮಿ ನಡೆದು ಬಂದರೆ, ನವ ತಾರುಣ್ಯದ ಯುವತಿ ಧರ್ಮಪತ್ನಿಯಾಗಿ ಮನೆಯನ್ನು ಪ್ರವೇಶಿಸಿದರೆ, ಕೈಯಲ್ಲಿ ಬಹು ದೊಡ್ಡ ಅಧಿಕಾರಸೂತ್ರ ಸಿಕ್ಕರೆ ಅವರ ಮನಸ್ಸು ಒಂದು ಕ್ಷಣಕೂಡ ದೇವ ಮಾರ್ಗದಲ್ಲಿ ನಿಲ್ಲದು. ಬಡವರಿದ್ದಾಗಿನ ಭಕ್ತಿ ಸಿರಿವಂತರಾದಾಗ ಉಳಿಯದು. ಅಜ್ಞರಾದಾಗಿನ ದೇವರತಿ ಸುಜ್ಞರಾದಾಗ ಬದುಕದು!

ಬರೀ ಪ್ರಾಪಂಚಿಕರದಲ್ಲ, ಮನೆ ಬಿಟ್ಟು ಧರ್ಮ ಪೀಠಗಳನ್ನೇರಿದಸ್ವಾಮಿಗಳ ಮನಸ್ಸೂ ಚಂಚಲವೇ ಸರಿ. ಮಠದ ಅಧಿಕಾರ, ಮರ್ಯಾದೆ, ಸಂಪದಗಳು ಅವರ ದೇವಪ್ರಜ್ಞೆಯನ್ನು ಮರೆಮಾಡುತ್ತವೆ. ಸನ್ಯಾಸ ಹಾಗೂ ಧರ್ಮ ಜೀವನದ ಗೊತ್ತು-ಗುರಿಗಳು ಮರೆತು ಹೋಗುತ್ತವೆ. ಆಗ ಉಪದೇಶ ಚರ್ಚೆಗಳಂಥ ಜ್ಞಾನ ಕಾರ್ಯಗಳು ತಮ್ಮ ಘನತೆಗೆ ತಕ್ಕವಲ್ಲ ಎಂದು ಬಗೆಯುತ್ತಾರೆ. ಆದುದರಿಂದಲೇ, ಅವರು ಅಧ್ಯಾಪನ, ಪ್ರವಚನಗಳಿಗಾಗಿ ಶಾಸ್ತ್ರಿಗಳನ್ನು ನೇಮಿಸಿಕೊಳ್ಳುವದು. ಆಗ, ಸ್ವಾಮಿಗಳಿಗೆ ಉಳಿದ ಕಾರ್ಯವೇನು? ಹಣ ಸಂಗ್ರಹ, ಸಭೆ

ಸಮಾರಂಭ, ಮೆರವಣಿಗೆ ಮುಂತಾದವು! ಇಂತು ಸರ್ವ ಜನರು ಚಲಪ್ರಜ್ಞರು.

(೨) ಅಸಮ್ಮೂಢತೆ:– ಭೋಗ ವೈಭವಗಳಿಗೆ ಒಲಿಯದ ಚಿತ್ತವೃತ್ತಿ. ಸಂತರ ಎದುರು ರಂಭೆ ಊರ್ವಶಿಯರು ನರ್ತಿಸಲಿ, ಮೂಲೋಕದ ಸಿರಿ ಸಂಪದ ಸಾಗಿ ಬರಲಿ, ಮೃತ್ಯು ಲೋಕದ್ದಲ್ಲ ಸ್ವರ್ಗದ ಚಕ್ರವರ್ತಿ ಪದವೇ ಕೈಮುಗಿದು ನಿಂತಿರಲಿ ಅವರು ಅವುಗಳಿಗೆ ಮರುಳಾಗರು!

"ಬ್ರಹ್ಮ ಪದವಿಯನೊಲ್ಲೆ. ವಿಷ್ಣು ಪದವಿಯನೊಲ್ಲೆ. ರುದ್ರ ಪದವಿಯನೊಲ್ಲೆ ಮತ್ತಾವ ಪದವಿಯನೊಲ್ಲೆನಯ್ಯಾ. ಕೂಡಲ ಸಂಗಮದೇವಾ, ನಿಮ್ಮ ಸದ್ಭಕ್ತರ ಪಾದವ ಸರಿದಿಪ್ಪ ಮಹಾ ಪದವಿಯನೆ ಕರುಣಿಸಯ್ಯಾ."

ಈ ವಚನವು ಬಸವಣ್ಣನವರ ಅಸಮ್ಮೂಢತೆಯ ಪ್ರತೀಕ.

ಜೀವನ್ಮುಕ್ತನ ಬಗೆ ಬೇರೆ. ಸಾವಿರು ಕುರಿಗಳು ಕೂಡಿ ಒಬ್ಬ ಮನುಷ್ಯ ನನ್ನು ಪರಿವರ್ತಿಸಿ ಕುರಿಯನ್ನಾಗಿ ಮಾರ್ಪಡಿಸುವದು ಹೇಗೆ ಅಸಾಧ್ಯವೋ ಹಾಗೆ ಲಕ್ಷ ಲಕ್ಷ ಲೌಕಿಕರು ಕೂಡಿ ಜೀವನ್ಮುಕ್ತನನ್ನು ಸಂಸಾರಿಯನ್ನಾಗಿಸುವದು ಅಸಾಧ್ಯ! ಏಕೆಂದರೆ ಅವನು ಪ್ರಿಯ ವಸ್ತುಗಳಿಗೆ ಮರುಳಾಗುವವನಲ್ಲ. ಅಪ್ರಿಯ ವಸ್ತುಗಳಿಗೆ ಕಂಗೆಡುವವನಲ್ಲ. ಅವನು ವಿಶ್ವಚೇತನದಲ್ಲಿ ನಿಂತಿದ್ದಾನೆ. ಅವನು ಸದಾ ಪ್ರಶಾಂತ!!

ಸಂಬಂಧ:- ಬ್ರಹ್ಮವಿದನಾಗಲು ಯಾವ ಸಾಧನೆ ಅವಶ್ಯ?

ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥೨೧॥

ಅರ್ಥ:- ಬಾಹ್ಯಸ್ಪರ್ಶೇಷು =ಬಾಹ್ಯ ಶಬ್ದಾದಿ ವಿಷಯಗಳಲ್ಲಿ ಅಸಕ್ತಾತ್ಮಾ= ಆಸಕ್ತಿ ಇಲ್ಲದವನು ಯತ್ ಸುಖಂ= ಯಾವ ಸುಖವನ್ನು ಆತ್ಮನಿ ವಿಂದತೇ= ಅಂತಃಕರಣದಲ್ಲಿ ಪಡೆಯುತ್ತಾನೆಯೋ, ಸಃ ಬ್ರಹ್ಮಯೋಗಯುಕ್ತಾತ್ಮಾ= ಬ್ರಹ್ಮಜ್ಞಾನಿಯಾದ ಆ ಯೋಗಿಯು ಅಕ್ಷಯಂ ಸುಖಂ ಅಶ್ನುತೇ= ಅಕ್ಷಯ ಸುಖ ಪಡೆಯುತ್ತಾನೆ.

ವಿವರಣೆ:– ಭಗವಂತ:– "ಅರ್ಜುನ, ಶಬ್ದ ಸ್ಪರ್ಶ ರೂಪ ರಸ ಗಂಧ ಇವು ಐದು ಜಗತ್ತಿನಲ್ಲಿ ಎಲ್ಲೆಡೆಗೆ ಹರವಿಕೊಂಡ ಭೋಗ ವಿಷಯಗಳು. ಲೋಕದ ಮಹಾ ಮಹಾ ಪಂಡಿತರನ್ನೇ ತಮ್ಮತ್ತ ಬಲವಾಗಿ ಆಕರ್ಷಿಸುವ ಈ ಪಂಚ ವಿಷಯಗಳ ಮೋಹಕ್ಕೆ ಒಳಗಾಗದಂತೆ ಮನಸ್ಸನ್ನು ಸಂಯಮನ ಮಾಡುವದು ಪವಿತ್ರವಾದ ಸಾಧನ. ಈ ಸಾಧನೆ ಮಾಡಿದ ಸಾಧಕನ ಹೃದಯವು ಪರಿಶುದ್ಧ ವಾಗುವದರಿಂದ ಅಲ್ಲಿ ಆತ್ಮಪ್ರಜ್ಞಾವತರಣವಾಗುತ್ತದೆ. ಅವನ ಜೀವಭಾವವು ಅಡಗಿ ಪ್ರತ್ಯಗಾತ್ಮನೇ ತಾನು ಎಂಬ ಸಾಕ್ಷೀ ಭಾವವು ಸಮನಿಸುತ್ತದೆ. ಆಗ ದೇಹ ಇಂದ್ರಿಯಗಳ ಭೋಗ ಸಂಪದಗಳ ಕಲ್ಪನೆಯು ಅಡಗುತ್ತದೆ. ಜಗತ್ತನ್ನೆಲ್ಲ ತನ್ನ ವಿಭಿನ್ನ ಜಾಲಗಳಿಂದ ವ್ಯಾಪಿಸಿದ ಮಾಯೆಯು ತನ್ನಷ್ಟಕ್ಕೆ ತಾನೆ ಮರೆ ಯಾಗುತ್ತದೆ. ಕೊನೆಗೆ ಪ್ರತ್ಯಗಾತ್ಮಾಭಿನ್ನ ಪರಬ್ರಹ್ಮದ ಅನುಭವವು ದೊರೆ

ಯುತ್ತದೆ. ಅಲ್ಲಿಗೆ ಯೋಗಿಯು ಬ್ರಹ್ಮಜ್ಞಾನಿ! ದಿವ್ಯಾನುಭಾವಿ! ಅವನು ಎಂದೆಂದಿಗೂ ಅಳಿಯುದ ಚಿರಂತನ ಸುಖವನ್ನು ಪಡೆಯುತ್ತಾನೆ."

ಬ್ರಹ್ಮಜ್ಞಾನವು ಶಬ್ದದಿಂದ ಅಥವಾ ಓದಿನಿಂದ ಬರುವಂಥದಲ್ಲ. ಅದಕ್ಕಾಗಿ, ದೀರ್ಘ ಕಾಲ ಸಾಧನೆ ಅವಶ್ಯ; ಮೊದಲು ವಿಷಯ ವಿರಾಗ ವ್ಯಾಗೂಡಬೇಕು. ಅದೇನು ಅಷ್ಟು ಹಗುರಾದ ಕಾರ್ಯವಲ್ಲ. ಸುತ್ತೆಲ್ಲ ಇಲಿಗಳು ಓಡಾಡುತ್ತಿರುವಾಗ ಬೆಕ್ಕು ಕಣ್ಣು ಮುಚ್ಚಿ ಮೌನವಾಗಿ ಕುಳಿತಿರುವದು ಎಷ್ಟು ಕಷ್ಟವೋ ಮಧುರ ಮನೋಹರ ವಿಷಯುಗಳು ಎಲ್ಲೆಡೆ ಹರಡಿರುವಾಗ ಅವುಗಳತ್ತ ಲಕ್ಷಿಸದೆ ಮನಸ್ಸನ್ನು ಅಂತರ್ಮುಖಿಗೊಳಿಸಿಕೊಂಡಿರುವದು ಅಷ್ಟೇ ಕಷ್ಟ. ಹೊರ ಜಗತ್ತಿನಲ್ಲಿರುವ ಸಕಲ ವಿಷಯುಗಳನ್ನು ನಾಶ ಮಾಡುವದಂತು ಎಂದಿಗೂ ಆಗದ ಮಾತು. ಭೂಮಿ ಜಲ ಅಗ್ನಿ ವಾಯು ಹಾಗು ಆಕಾಶಗಳು ಇವೆ ಎಂದಾಗ ಗಂಧ, ರಸ, ರೂಪ, ಸ್ಪರ್ಶ ಹಾಗು ಶಬ್ದ ವಿಷಯ ಇರಲೇಬೇಕಲ್ಲ. ಅವುಗಳ ಮಧ್ಯ ಇದ್ದೇ ಅವುಗಳ ಆಕರ್ಷಣದಿಂದ ಪಾರಾಗಬೇಕು; ಅವುಗಳ ಮೇಲಣ ವ್ಯಾಮೋಹ ಮತ್ತು ಆಸಕ್ತಿಗಳನ್ನು ತೊರೆಯಬೇಕು. ಋಣ ತೀರಿಸಿದಾಗ ಸಾಹುಕಾರನ ಅಂಜಿಕೆ ಏನು? ಹಾಗೆ ಭೋಗಾಸಕ್ತಿಯೇ ತೀರಿದಾಗ ವಿಷಯುಗಳ ಭೀತಿ ಎಲ್ಲಿ? ಈ ನಿರ್ಭೀಕ ಅವಸ್ಥೆ ಪ್ರಾಪ್ತವಾದರೆ ಬ್ರಹ್ಮಯೋಗ ಹಾಗು ಚಿರ ಸೌಖ್ಯಗಳು ತಾನಾಗಿಯೇ ದೊರೆಯುವವು.

### ಬ್ರಹ್ಮಯೋಗವೆಂದರೇನು?

ಕಾಮಾದಿ ಅಶುಭ ಹಾಗು ಶಮಾದಿ ಶುಭ ತರಂಗಗಳು ಅಡಗಿ, ಸುಖ ದುಃಖಗಳ ಭಾವ ನಿಂತು ನಾನು ಸಾಕ್ಷೀಚೇತನ ಎಂಬ ಅನುಭವವು ಆಳವಟ್ಟರೆ ಅದು "ಯೋಗ". ದೇಹಸ್ಥ ಪಂಚ ವಿಂಶತಿ ತತ್ತ್ವಗಳು ಜಡ, ಅನಿತ್ಯ, ಪರಿಚ್ಛಿನ್ನ. ಅವುಗಳಿಗೆ ವಿಲಕ್ಷಣವಾದ ಆತ್ಮವು ಮಾತ್ರ ಅಜಡ, ನಿತ್ಯ ಹಾಗು ಅಪರಿಚ್ಛಿನ್ನ. ತತ್ತ್ವಗಳು ಪ್ರಕಾಶಿತ, ಆತ್ಮವು ಪ್ರಕಾಶಕ, ಎಂಬ ಪ್ರತ್ಯಗಾತ್ಮ ಭಾವನೆ ದೃಢಗೊಂಡರೆ ಅದು "ಆತ್ಮಯೋಗ". ದೇಹಗತ ಪದಾರ್ಥಗಳಿಗೆ ಆತ್ಮನು ಹೇಗೆ ಆಶ್ರಯನೋ ಹಾಗೆಯೇ ವಿಶ್ವಗತ ಪದಾರ್ಥಗಳಿಗೆಯೂ ಅವನೇ ಆಶ್ರಯ. ಅವನು ವಿಶ್ವಸಾಕ್ಷಿ, ಪರಮಾತ್ಮ. ದೈಹಿಕ ತತ್ತ್ವಗಳಿಗೆ ಸಾಕ್ಷಿಯಾದ ಪ್ರತ್ಯಗಾತ್ಮ ಹಾಗು ವೈಶ್ವಿಕ ತತ್ತ್ವಗಳಿಗೆ ಸಾಕ್ಷಿಯಾದ ಪರಮಾತ್ಮ ಭಿನ್ನರಲ್ಲ, ಈ ಅದ್ವಯ ಸತ್ಯದ ಭಾನ ಬಂದರೆ ಅದು ಬ್ರಹ್ಮಯೋಗ!

ಯೋಗವನ್ನು ಸಾಧಿಸಿದವನು ಸಾಧಕಯೋಗಿ. ಆತ್ಮಯೋಗವನ್ನು ಸಾಧಿಸಿದವನು ಜ್ಞಾನಯೋಗಿ. ಬ್ರಹ್ಮಯೋಗವನ್ನು ಸಾಧಿಸಿದವನು ಅನುಭಾವ ಯೋಗಿ! ಯೋಗದಲ್ಲಿ ಚಿತ್ತಶುದ್ಧಿಕರ ಸಂಯಮನವು ಪ್ರಧಾನ. ಆತ್ಮಯೋಗದಲ್ಲಿ ಜಡಾಜಡ ವಸ್ತು ವಿವೇಚನೆ ಪ್ರಧಾನ. ಬ್ರಹ್ಮಯೋಗದಲ್ಲಿ ಸರ್ವಭಾವಗಳ

ವಿಲಯನವು ಪ್ರಧಾನ. ಯೋಗಿಯು ಮನಸಂಯಮನಮಾಡಿ ಲೋಕದಲ್ಲಿ ವ್ಯವಹರಿಸುತ್ತಾನೆ. ಜ್ಞಾನಿಯು ಸತ್ಯಾಸತ್ಯ ವಿವೇಚನಾ ಪ್ರಜ್ಞೆ ಹಿಡಿದು ವ್ಯವಹರಿಸುತ್ತಾನೆ. ಅನುಭಾವಿಯು ಸರ್ವ ಸಮದರ್ಶಿಯಾಗಿ ಲೋಕದಲ್ಲಿ ಸಂಚರಿಸುತ್ತಾನೆ.

ಸಂಬಂಧ:- ದುಃಖ ಕಾರಣವಾದ ಭೋಗಗಳಲ್ಲಿ ಜ್ಞಾನಿಯು ಎಂದಿಗೂ ರಮಿಸುವದಿಲ್ಲ.

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥೨೨॥**

**ಅರ್ಥ:**- ಯೇ ಹಿ = ಯಾವು ಸಂಸ್ಪರ್ಶಜಾಃ ಭೋಗಾಃ = ಇಂದ್ರಿಯ ಸಂಪರ್ಕದಿಂದುತ್ಪನ್ನವಾದ ಭೋಗಗಳು (ಇವೆಯೋ) ತೇ = ಆವು ದುಃಖಯೋನಯಃ ಏವ = ದುಃಖಕ್ಕೆ ಕಾರಣಗಳೇ ಆಗಿವೆ. ಆದ್ಯಂತವಂತಃ = ಉತ್ಪತ್ತಿ ನಾಶ ಉಳ್ಳವುಗಳು. ಬುಧಃ = ಜ್ಞಾನಿಯು ತೇಷು = ಅವುಗಳಲ್ಲಿ ನ ರಮತೇ = ರಮಿಸುವದಿಲ್ಲ.

**ವಿವರಣೆ:**- ಭಗವಂತ:- "ಪಾರ್ಥ, ಬಾಹ್ಯ ವಿಷಯಗಳು ತೋರಿಕೆಗೆ ಸುಖವಾಗಿ ಕಂಡರೂ ವಾಸ್ತವಿಕವಾಗಿ ದುಃಖದ ಆಗರಗಳಾಗಿವೆ. ಅವುಗಳ ಗಳಿಕೆ, ಉಳಿಕೆ ಹಾಗು ವಿನಾಶಗಳಲ್ಲಿ ದುಃಖ ತುಂಬಿದೆ. ವಿಷಯಗಳ ಆಕರ್ಷಣೆಗೆ ಮರುಳಾದ ಮನುಷ್ಯ ಸತ್ಯ ಅಹಿಂಸೆಗಳಂಥ ದೈವೀ ಗುಣಗಳನ್ನು ಬಲಿಗೊಟ್ಟು ಸ್ಪರ್ಧೆ, ಮಾತ್ಸರ್ಯ, ಕಲಹಗಳಲ್ಲಿ ತೊಡಗುತ್ತಾನೆ; ಆದುದರಿಂದ ಅವನ ಹೃದಯವು ಉನ್ಮಾದ ರಕ್ಕಸನ ನೃತ್ಯ ವೇದಿಕೆಯಾಗುವದು. ಆಗ ಶಾಂತಿ ಸಮಾಧಾನಗಳು ಹೇಗೆ ಉಳಿಯಬೇಕು?

"ತನ್ನ ಅಸ್ತಿತ್ವದ ಪ್ರಜ್ಞೆ ಪಡೆದ ಪಂಡಿತನು ಮಾತ್ರ ಬುದ್ಧಿವಂತ. ಆದಿ ಅಂತ ಉಳ್ಳ ವಿಷಯಗಳ ಸ್ವರೂಪವು ಅವನಿಗೆ ಪೂರ್ಣ ಗೊತ್ತು. ಆದುದರಿಂದ, ಅವನು ಅವುಗಳಲ್ಲಿ ರಮಮಾಣನಾಗಲಾರ."

ಭಗವಂತನ ಅಭಿಪ್ರಾಯಕ್ಕೆ ಶಬ್ದತಃ ಸಾಕ್ಷಿ ನುಡಿವ ಒಂದು ಸೂತ್ರ ಪತಂಜಲ-ಯೋಗದರ್ಶನದಲ್ಲಿದೆ:

"ಪರಿಣಾಮ ತಾಪ ಸಂಸ್ಕಾರ ದುಃಖೆ ರ್ಗುಣವೃತ್ತಿವಿರೋಧಾಚ್ಚ ದುಃಖಮೇವ ಸರ್ವಂ ವಿವೇಕಿನಃ ॥೨-೧೫॥

ಪರಿಣಾಮದುಃಖ, ತಾಪ ದುಃಖ, ಸಂಸ್ಕಾರದುಃಖಗಳಿಂದಲೂ ಸತ್ವಾದಿ ಪರಸ್ಪರ ವಿರೋಧಗುಣವೃತ್ತಿಗಳಿಂದಲೂ ಕೂಡಿರುವದರಿಂದ (ವಿಷಯ ಭೋಗಗಳೆಲ್ಲ) ವಿವೇಕಿ ಪುರುಷನಿಗೆ ದುಃಖ ರೂಪ ಆಗಿವೆ.

**ಅ) ಪರಿಣಾಮ ದುಃಖ:**- ವಿಷಯಗಳು ಮೊದಲು ಸುಖವೀಯುತ್ತವೆ; ಕೊನೆಯಲ್ಲಿ ಮಾತ್ರ ಅತ್ಯಂತ ದುಃಖ ಕೊಡುತ್ತವೆ. ಉದಾ: ಮದುವೆ ಮೊದಲು ಹಿತ; ಪರಿಣಾಮದಲ್ಲಿ ಘೋರ ತಾಪ. ಹತ್ತು ಮಕ್ಕಳು ಹಸಿದು ವೈ-ಮನಸ್ಸು

ಗಳಿಗೆ ತೊಂದರೆ ಉಂಟು ಮಾಡಿದಾಗ ಯಾವ ಮನುಷ್ಯನು ಸುಖದ ನಗೆಯು ನಕ್ಕಾನು?

ಆ) ತಾಪದುಃಖ:-ಭೋಗಗಳನ್ನು ಉಪಭೋಗಿಸುವಾಗಲಾದರೂ ಸುಖ ವಿದೆಯೆ? ಇಲ್ಲ; ವಿಷಯಗಳು ನಾಶವಾಗಲಿವೆ ಎಂಬುದನ್ನು ನೆನೆದಾಗ ಚಿಂತೆ ತಲೆದೋರುವದು; ತನಗಿಂತ ವಿಶೇಷ ಭೋಗಿಗಳನ್ನು ಕಂಡಾಗ ಅವರ ಬಗ್ಗೆ ದ್ವೇಷ ತಲೆ ಎತ್ತುವದು; ಸರಿ ಸಮ ಭೋಗಿಗಳನ್ನು ನೋಡಿದಾಗ ಮಾತ್ಸರ್ಯ ಉಲ್ಬಣಿಸುವದು; ಕೀಳು ಭೋಗಿಗಳನ್ನು ಈಕ್ಷಿಸಿದಾಗ ಗರ್ವ ಮೈದಾಳುವದು. ಈ ನಾಲ್ಕು ಆಸುರೀ ಗುಣಗಳ ಮೊತ್ತವೇ ತಾಪದುಃಖ.

ಇ) ಸಂಸ್ಕಾರ ದುಃಖ: ವಿಷಯಗಳ ಭೋಗಿಸುವ ದೈಹಿಕ ಸಾಮರ್ಥ್ಯ ಬಹುದಿನ ಉಳಿಯದು. ಪ್ರಾಯ ಮುಪ್ಪಿಗೆ ತುತ್ತಾದರೆ ಮನಸ್ಸು ಬಯಸಿ ದರೂ ಉಪಭೋಗಕ್ಕೆ ದೇಹ ಒಗ್ಗದು. ಆಗ ನಿರುಪಾಯವಾದ ಮನಸ್ಸು ಪೂರ್ವದ ಭೋಗ-ಸಂಸ್ಕಾರಗಳನ್ನು ನೆನೆಸಿಕೊಳ್ಳುವದು. ಈಗಿನ ಅಶಕ್ತತೆ, ಹಿಂದಿನ ಭೋಗ ಸ್ಮರಣ ಇವೆರಡರ ಮಧ್ಯದಿಂದ ದುಃಖ ತೋರಿ ಬರುವದು.

ಈ)ಗುಣವೃತ್ತಿ ವಿರೋಧದುಃಖ:ಗುಣವೃತ್ತಿ ಎಂದರೆ ಗುಣಗಳ ಕಾರ್ಯ. ಸತ್ವಗುಣದ ಕಾರ್ಯ ಜ್ಞಾನ ಹಾಗು ಸುಖ. ರಜೋಗುಣದ ಕಾರ್ಯ ಉದ್ರೇಕ ಹಾಗು ದುಃಖ. ತಮೋ ಗುಣದ ಕಾರ್ಯ ಜಾಡ್ಯತೆ ಹಾಗು ಅಸಮಾಧಾನ. ಪರಸ್ಪರ ವಿರುದ್ಧವಾದ ಈ ವೃತ್ತಿಗಳು ಒಂದರ ಹಿಂದೊಂದು ಕಾಣಿಸಿಕೊಂಡಾಗ ಉಂಟಾಗುವ ದುಃಖ ಈ ನಾಲ್ಕನೆಯದು. ಉದಾ: ಮಿಷ್ಟಾನ್ನ ಊಟಮಾಡು ವಾಗ ಸತ್ವಗುಣವು ವ್ಯಕ್ತವಾಗಿ ಸುಖವೃತ್ತಿ ಹುಟ್ಟುತ್ತದೆ. ಮರುಕ್ಷಣ ರಜೋ ಗುಣವು ವ್ಯಕ್ತವಾಗಿ ತಂದ ಸಾಲದ ನೆನಹಿನಿಂದ ದುಃಖ ಉಂಟಾಗುವದು. ಬಳಿಕ, ತಮೋಗುಣವು ವ್ಯಕ್ತವಾಗಿ ದೈಹಿಕ ಜಾಡ್ಯತೆಯಿಂದ ಮಿಷ್ಟಾನ್ನ ಸುಖವೇ ಅಹಿತವೆನಿಸುವದು.

ವಿವೇಕಿ ಮಹಾತ್ಮನು ವಿಷಯಗಳಲ್ಲಿ ಈ ನಾಲ್ಕು ವಿಧ ದುಃಖಗಳನ್ನು ಅತೀವ ಸ್ಪಷ್ಟವಾಗಿ ಕಾಣುತ್ತಾನೆ. ವಿಷಯಗಳು ಕ್ಷಣಿಕವೆಂದು ಖಚಿತವಾಗಿ ತಿಳಿದ ಅವನು ಅವುಗಳನ್ನು ಕನಸು-ಮನಸ್ಸಿನಲ್ಲಿಯೂ ಇಚ್ಛಿಸುವದಿಲ್ಲ; ಇನ್ನು ಅವು ಗಳಲ್ಲಿ ರಮಮಾಣನಾಗುವದಂತು ದೂರ ಉಳಿಯಿತು.

ಸಂಬಂಧ:- ಕಾಮ ಕ್ರೋಧಗಳನ್ನು ಜಯಿಸಿದವನೇ ಯೋಗಿ; ಇಂದ್ರಿಯ ಗಳನ್ನು ಸಿಕ್ಕಂತೆ ಹರಿಬಿಟ್ಟು ಆತ್ಮ ಜ್ಞಾನ ಪಡೆವೆನೆಂದು ಹೇಳುವದು ಒಂದು ಹುಚ್ಚುತನ.

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್‌ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥೨೩॥**

**ಅರ್ಥ:**– ಯಃ =ಯಾವನು ಶರೀರ ವಿಮೋಕ್ಷಣಾತ್ ಪ್ರಾಕ್= ಶರೀರ ಬಿಡುವ ಮುಂಚೆ ಕಾಮಕ್ರೋಧೋದ್ಭವಂ =ಕಾಮ ಕ್ರೋಧಗಳಿಂದ ಉಂಟಾದ ವೇಗಂ= ವೇಗವನ್ನು ಇಹ ಏವ =ಇಲ್ಲಿಯೇ ಸೋಢುಂ = ಸಹಿಸಿಕೊಳ್ಳಲು ಶಕ್ನೋತಿ=ಶಕ್ತನಾಗುತ್ತಾನೆಯೋ ಸಃ= ಅವನು ಯುಕ್ತಃ =ಯೋಗಿಯು. ಸಃ= ಅವನು ಸುಖೀ ನರಃ=ಸುಖಿಯಾದ ಮನುಷ್ಯನು.

**ವಿವರಣೆ:**– ಭಗವಂತ:– "ಭಾರತ, ಕಾಮ ಮತ್ತು ಕ್ರೋಧಗಳು ಭಯಂಕರ ವೇಗವಾಗಿ ಹರಿಯುವ ಎರಡು ಪ್ರವಾಹಗಳು. ಅವುಗಳ ಸೆಳವಿಗೆ ಸಿಕ್ಕ ಮನುಷ್ಯ ಸಂಸಾರಿ; ನೂರು ಸಾವಿರ ತಾಪಗಳ ಮಧ್ಯ ಬದುಕುವ ಪ್ರಾಪಂಚಿಕ. ಅವನಿಗೆ ಜೀವನದ ಸತ್ಪಥ ಕಾಣುವ ಕಣ್ಣಿಲ್ಲ, ತನ್ನ ಅಂತರ್ಗತ ನಿತ್ಯ ವಸ್ತುವಿನನ್ನು ಅರಿತುಕೊಳ್ಳುವಷ್ಟು ಶಕ್ತಿಯಿಲ್ಲ. ಅಮೌಲ್ಯ ಆಯುವನ್ನೆಲ್ಲ ಕಾಮ ಕ್ರೋಧಗಳಿಗೆ ಧಾರೆ ಎರೆಯುತ್ತಾನೆ. ಪಾಪ, ಅವನಿಗೆಲ್ಲಿ ಸಮಾಧಾನ? ಅರ್ಜುನ, ಕಾಮ ಕ್ರೋಧಗಳೆರಡನ್ನು ಪ್ರಶಮನಗೊಳಿಸಿ ಚಿತ್ತಪ್ರಶಾಂತತೆಯನ್ನು ಅನುಭವಿಸುವ ಮನುಷ್ಯನು ಮಾತ್ರ ಯೋಗಿ! ಅವನಂಥ ಸುಖಿ ಅವನೇ."

(೧) ಕಾಮ, ಕ್ರೋಧ:– ಕಾಮವು ಮನುಷ್ಯ ಕುಲವನ್ನೇ ದಹಿಸುತ್ತಿರುವ ದಾವಾನಲ! ತಾರುಣ್ಯ ಚತುರ ಬುದ್ಧಿಮತ್ತೆ ಹಾಗು ಭಾವಸಂಪದವನ್ನೆಲ್ಲ ಕ್ಷಣಾರ್ಧದಲ್ಲಿ ಕಬಳಿಸುವ ವಡವಾಗ್ನಿ! ಪಂಡಿತ ಪಾಮರ, ವೇದ ವಿದ್ಯಾವಿಶಾರದ, ಭೋಗ–ವಿಲಾಸ ಚತುರ, ತರುಣ ಮುದುಕ ಎಲ್ಲರೂ ಅದರ ದಾಸರು! ಉದಾ: ಕಿಂದಮನು ವೇದ ಪಾರಂಗತ ಋಷಿ, ಧರ್ಮಶಾಸ್ತ್ರ ನಿಪುಣ. ಆದರೆ ಹಾಡಹಗಲು ಕಾಮನ ಸೆಳೆತಕ್ಕೆ ಸಿಕ್ಕ ಅವನು ಮೃಗರೂಪದಲ್ಲಿ ತನ್ನ ಸತಿಯೊಂದಿಗೆ ಕೂಡಿದ. ಓರ್ವ ಸಾಮಾನ್ಯ ಕುಲದ ಸ್ತ್ರೀಗಾಗಿ ಜಗತ್ತಿನ ಅಸಾಮಾನ್ಯ ಚಕ್ರವರ್ತಿಯಾಗಿದ್ದ ಎಂಟನೆಯ ಎಡ್ವರ್ಡನು ಜಗದ್ವಿಶಾಲ ಬ್ರಿಟಿಶ್ ಚಕ್ರಾಧಿಪತ್ಯ ಸಿಂಹಾಸನವನ್ನು ತೊರೆದ. ಸೀತೆಗಾಗಿ ರಾಮ ರಾವಣರು ಒಂದು ಸುಂದರ ಸಾಮ್ರಾಜ್ಯವನ್ನೇ ಹಾಳು ಮಾಡಿದರು. ಕಾಮನು ಇಂದ್ರ ಚಂದ್ರರ ಮಾನ ಕಳೆದ; ಭಸ್ಮಾಸುರನನ್ನು ನಾಶ ಮಾಡಿದ. ಕಾಮನು ಮೂರು ಲೋಕಗಳನ್ನಾಳ್ವ ಮನಸಿಜ ರಾಜ! ಇಂದಿನ ಯುಗದ ಸಾರ್ವಭೌಮ ಅವನೇ. ಹತ್ತು ಹದಿನಾರು ವರುಷಕ್ಕೆ ಬಾಲಕನಲ್ಲಿ ಪ್ರವೇಶಿಸಿದ ಕಾಮನು ಕೊನೆಯುಸುರಿನವರೆಗೂ ತನ್ನ ಆಧಿಪತ್ಯ ನಡೆಸುತ್ತಾನೆ. ಬ್ರಹ್ಮಚರ್ಯಾದಿ ಆಶ್ರಮಗಳ ರಚನೆ ಕಾಮನನ್ನು ನಿಗ್ರಹಿಸಬೇಕೆಂದೇ ಹುಟ್ಟಿಕೊಂಡಿತು. ಆದರೆ ಕಾಮನ ಅರ್ಭಟಕ್ಕೆ ಆಶ್ರಮ ಪದ್ಧತಿಯೇ ತತ್ತರಿಸಿತು. ಇನ್ನೂ ಹದಿನಾರರ ಹೊಸ್ತಿಲ ದಾಟದ ಬಾಲಕರು ಕಾಮ ಚೇಷ್ಟೆಗೆ ತೊಡಗುತ್ತಾರೆ: ಪತ್ನಿ ಅಥವಾ ಪತಿ-ವ್ರತಸ್ಥರಾಗಬೇಕಿದ್ದ ಗೃಹಸ್ಥರು ಸ್ವೇಚ್ಛಾ ಕಾಮ ವಿಲಾಸಕ್ಕೆ ಮನಸ್ಸು ಹಾಕುತ್ತಾರೆ. ವಾನಪ್ರಸ್ಥ ಸನ್ಯಾಸಿಗಳಾಗಿ ಆತ್ಮ ಶುದ್ಧಿಗೆ ಶ್ರಮಿಸಬೇಕಾದ ಮುದುಕರು ಕಾಮಕೇಳಿಗೆ [illegible]

ಹೀಗೆ ವಿಶ್ವವನ್ನೆಲ್ಲ ಕಬಳಿಸಿದ ಕಾಮನನ್ನು ಸಾಧಕ ಯೋಗಿಯು ಗೆಲ್ಲ ಬೇಕು! ಮೈಯಲ್ಲಿ ತಾರುಣ್ಯ, ಬುದ್ಧಿಯಲ್ಲಿ ಪಟುತ್ವ ಇರುವಾಗಲೇ ಕಾಮನನ್ನು ತುಳಿದು ಹಾಕಬೇಕು! ಹೇಗೆ? ವಸಿಷ್ಠ ಋಷಿಗಳು ಹೀಗೆ ಆದೇಶ ನೀಡುತ್ತಾರೆ:

"ಪ್ರಾಣೇ ಗತೇ ಯಥಾ ದೇಹಃ ಸುಖದುಃಖಂ ನ ವಿಂದತಿ ।
ತಥಾ ಚೇತ್ಪ್ರಾಣಯುಕ್ತೋಽಪಿ ಸ ಕೈವಲ್ಯಾಶ್ರಯೋ ಭವೇತ್ ॥"

ಪ್ರಾಣೋತ್ಕ್ರಮಣದ ನಂತರ ಹೇಗೆ ದೇಹವು ಸುಖ ದುಃಖಗಳನ್ನು ಹೊಂದು ವದಿಲ್ಲವೋ ಹಾಗೆ ಜೀವಿಸಿರುವಾಗಲೇ ಸಾಧಕನು ಕಾಮಾದಿಗಳಿಂದ ಘಾಸಿಗೊಳ್ಳ ಬಾರದು. ಅಂಥ ಸಾಧಕನಿಗೆ ಮಾತ್ರ ಕೈವಲ್ಯ! (ನಾರದ ಪರಿವ್ರಾಜ್ರ ೩–೨೭). ಕಾಮನನ್ನು ಸುಟ್ಟುರುಹಿದ ವೀರ ವಿರಾಗಿಣಿ ಅಕ್ಕನು ಕಾಮ ವಿಜಯದ ರೀತಿ ಯನ್ನು ಹೀಗೆ ವಿವರಿಸುತ್ತಾಳೆ:

"ಅಂಗವ ಭಂಗವ ಲಿಂಗ ಸುಖದಿಂದ ಗೆಲಿದೆ. ಮನದ ಭಂಗವ ಅರಿವಿನ ಮುಖದಲ್ಲಿ ಗೆಲಿದೆ. ಜೀವನ ಭಂಗವ ಶಿವಾನುಭಾವದಿಂ ಗೆಲಿದೆ. ಕರಣದ ಕತ್ತಲೆಯು ಬೆಳಗನುಟ್ಟು ಗೆಲಿದೆ. ಜವ್ವನದ ಹೊರ ಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ. ಚನ್ನ ಮಲ್ಲಿಕಾರ್ಜುನ ಕಾಮನಕೊಂದು ಮನಸಿಜನಾಗಿ ಉಳುಹಿ ದರೆ, ಮನಸಿಜನ ತಲೆಯ ಬರಹವ ತೊಡೆದೆನು!"

ದೇವನ ನೆನಹು, ಹಾಗು ತತ್ತ್ವಗಳ ಚಿಂತನ ಅವ್ಯಾಹತವಾಗಿ ಸಾಗಿದರೆ ಕಾಮ ದಹನ ಸಾಧ್ಯವೆಂದು ಅಕ್ಕನು ಸೂಚಿಸಿದ್ದಾಳೆ. ಆಕೆಯ ನುಡಿ ಅನುಭವಪೂರ್ಣ.

ಕಾಮದ ಸಂಗಾತಿ ಕ್ರೋಧ. ವ್ಯಕ್ತಿ, ಕುಟುಂಬ, ಸಮಾಜ, ದೇಶ, ಸಂಘ ಸಂಸ್ಥೆಗಳನ್ನು ಛಿನ್ನ ವಿಚ್ಛಿನ್ನಗೊಳಿಸುವ ವಿಕೃತ ಶಕ್ತಿ ಕ್ರೋಧದಲ್ಲಿದೆ. ಅಂತ ಶ್ಚಕ್ಷುವಿನಲ್ಲಿ ಮಣ್ಣೆರಚಿ ವೈರ ಭಾವನೆಯನ್ನು ಕೆದಕುವ ಸ್ವಭಾವ ಕ್ರೋಧದ್ದು. ವಿಶ್ವಾಮಿತ್ರನ ಕ್ರೋಧಕ್ಕೆ ವಸಿಷ್ಠರ ಮಕ್ಕಳು ಹತರಾದರು. ಮಹಾಭಾರತ ಕಥೆಯ ಅಡಿಪಾಯವೇ ಅಸಹನೀಯ ವೈರ! ಲೋಭ, ಮೋಹ, ಮದ, ಮತ್ಸರಗಳು ಕಾಮ-ಕ್ರೋಧ ಜನ್ಯ. ನಾವು ದೃಷ್ಟಿ ಹರಿಸಿದಲ್ಲೆಲ್ಲ ಈ ಗುಣ ಗಳ ತಾಂಡವ ನೃತ್ಯವನ್ನು ಕಾಣುತ್ತೇವೆ.

ಸಾಧಕ ಯೋಗಿಯು ಬಹು ಜಾಣ್ಮೆಯಿಂದ ಅವುಗಳನ್ನು ಜಯಿಸಬೇಕು. ದೇವಭಕ್ತಿಯಿಂದ ಕಾಮನಾಶ; ದೇವ ಸೇವೆಯಿಂದ ಕ್ರೋಧದ ನಾಶ; ದಾನದಿಂದ ಲೋಭದ ನಾಶ; ಸತ್ಯ ಅಸತ್ಯ ವಿವೇಕದಿಂದ ಮೋಹನಾಶ; ವಿನಯದಿಂದ ಮದದ ನಾಶ; ಪ್ರೇಮದಿಂದ ಮಾತ್ಸರ್ಯ ಹಾನಿ. ಈ ತತ್ತ್ವ ಅರಿತ ಯೋಗಿ ಅವುಗಳಿಂದ ಬಾಧೆ ಪಡುವದಿಲ್ಲ.

(೨) ಕಾಮ ಕ್ರೋಧಗಳ ಜಯಕ್ಕೆ ವಿರಾಗ ಹಾಗು ತಿತೀಕ್ಷಾ ಎಂದು ನಾಮ. ಈ ಎರಡನ್ನೂ ಅಂಗೀಕರಿಸಿಕೊಂಡ ಮಹಾನುಭಾವರಲ್ಲಿ ಶ್ರೀರಾಮ ಚಂದ್ರನು ಗಣನೀಯ ಯೋಗಿ. ತಂದೆ ದಶರಥ ಮಹಾರಾಜನು ಅಯೋಧ್ಯಾ

ರಾಜ್ಯ ಸಿಂಹಾಸನ ಏರಲು ಆಜ್ಞೆ ಮಾಡಿದಾಗ ರಾಮನು ಅನಾಸಕ್ತ ಭಾವದಿಂದಲೇ ಸಿಂಹಾಸನ ಏರಲು ಸನ್ನದ್ಧನಾದ. ಮರುಕ್ಷಣ ಅದೇ ತಂದೆ ಕೈಕೇಯಿಯ ಮಾತು ಕೇಳಿ 'ಸಿಂಹಾಸನ ತ್ಯಜಿಸಿ ಅರಣ್ಯಕ್ಕೆ ಹೋಗು' ಎಂದು ಆಣತಿ ನೀಡಿದಾಗ ಅದೇ ಪ್ರಸನ್ನ ವದನದಿಂದ ಅರಣ್ಯಕ್ಕೆ ನಡೆದು ಹೋದ! ಇದು ಸಹಜ ವಿರಾಗ! ಅಸಾಮಾನ್ಯ ಅನಾಸಕ್ತ ಪ್ರಜ್ಞೆ!

(೩) ಕಾಮಾದಿಗಳ ಜಯ ಎಂದರೆ ವಿಷಯಗಳಲ್ಲಿ ವಿರಾಗ; ಅದು ತಾನಾಗಿಯೇ ಬರದು; ಒಮ್ಮೊಮ್ಮೆ ಪರಿಸ್ಥಿತಿಯ ಅನುಸಾರ ಬಂದರೂ ಬಹುಕಾಲ ಉಳಿಯದು. ಉದಾಹರಣೆಗಾಗಿ, ಪುರಾಣ ಕೇಳಿ ಬರುವ ವಿರಾಗ, ಪ್ರಸೂತಿಯ ಸಂಕಷ್ಟದಿಂದ ಉದ್ಭವಿಸುವ ವಿರಾಗ, ಗೆಳೆಯನ ಅಂತ್ಯಯಾತ್ರೆಗೆ ಹೋದಾಗ ಸ್ಮಶಾನದಲ್ಲಿ ಉಂಟಾಗುವ ವಿರಾಗ ಹಾಗು ಆರೋಗ್ಯ ಧನ ಮಾನ ಮುಂತಾದವುಗಳ ಅಭಾವದಿಂದ ತಲೆದೋರುವ ವಿರಾಗ. ದೀರ್ಘ ಸಮಯದವರೆಗೆ ಬಾಳುವದಿಲ್ಲ. ವಿರಾಗವು ಚಿರಂತನವಾಗಬೇಕಾದರೆ ವಿವೇಕ ಅಗತ್ಯ; ವಿಷಯಗಳು ವಿಷಗಳು; ಅವು ಅಂತವಂತವಾದುದರಿಂದ ಸುಖದಾಯಿಗಳಲ್ಲ; ಈ ಸಂಗತಿ ದೃಢಮೂಲವಾದರೆ ಮತ್ತೊಮ್ಮೆ ಮನುಷ್ಯ ಅವುಗಳತ್ತ ಇಣುಕಿ ನೋಡಲಾರ; ಇದೇ ವಿವೇಕ ಜನ್ಯ ಸ್ಥಿರ ವಿರಾಗ!

(೪) ಪ್ರತಿ ವ್ಯಕ್ತಿಯಲ್ಲಿ ಬುದ್ಧಿ ಇದೆ, ಶಕ್ತಿ ಇದೆ, ಭಾವನೆಗಳಿವೆ. ಒಂದು ವೇಳೆ ಆ ಬುದ್ಧಿ ಮುಂತಾದ ಬಲಗಳು ಬರಿ ಒಂದು ಸ್ತ್ರೀ ಸಂಪಾದನೆಗಾಗಿಯೋ ಧನ ಕನಕ ಸ್ಥಾನ ಮಾನ ಪ್ರಾಪ್ತಿಗಾಗಿಯೋ ಉಪಯೋಗವಾದರೆ ಆ ವ್ಯಕ್ತಿ ಬುದ್ಧಿ ಹೀನನೆಂದೇ ಭಾವಿಸಬೇಕು. ಅವನು ದೈಹಿಕ ಶಕ್ತಿಯುಕ್ತನಾದರೂ ಹೇಡಿ; ಅಪಾರ ವಿದ್ಯೆ ಗಳಿಸಿದ್ದರೂ ಅಜ್ಞ; ಮಹಾ ಕವಿತ್ವ ಬಲವಿದ್ದರೂ ಮರುಳ! ಯಾವನ ಆ ಬಲಗಳು ವಿವೇಕ–ವಿರಾಗವೆಂಬ ಅಮೂಲ್ಯ ಸಂಪದವನ್ನು ಸಂಗ್ರಹಿಸಬಲ್ಲವೋ ಅವನೇ ಬುದ್ಧಿವಂತ, ಪಂಡಿತ ವೀರ! ಮಹಾ ಯೋಗಿ. ಅವನಂಥ ಸುಖಿ ಯಾರೂ ಇಲ್ಲ.

**ಸಂಬಂಧ:–** ಅರ್ಜುನ:– ಭಗವನ್, ಕೇವಲ ಕಾಮ ಕ್ರೋಧಗಳ ವೇಗವನ್ನು ಸಹಿಸಿದ ಮಾತ್ರಕ್ಕೆ ಮೋಕ್ಷವಾಗುವದೆಂದು ನಿನ್ನ ಅಭಿಪ್ರಾಯವೆ?

**ಯೋಽಂತಃ ಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮ ಭೂತೋಽಧಿಗಚ್ಛತಿ ॥೨೪॥**

**ಅರ್ಥ:-** ಯಃ = ಯಾವನು ಅಂತಸ್ಸುಖಃ = (ಅಂತಃ ಆತ್ಮನಿ ಏವ ಸುಖಂ ಯಸ್ಯ ಸಃ) ಅಂತರಾತ್ಮನಲ್ಲಿಯೇ ಸುಖ ಪಡುವನೋ, ಅಂತರಾರಾಮಃ = (ಅಂತರಿ ಏವ ಆರಾಮಃ ಕ್ರೀಡಾ ಯಸ್ಯ ಸಃ) ಅಂತರಾತ್ಮನಲ್ಲಿಯೇ ರಮಿಸುವನೋ, ತಥಾ = ಮತ್ತು ಯಃ= ಯಾವನು ಅಂತರ್ಜ್ಯೋತಿಃ= (ಅಂತರೇವ ಜ್ಯೋತಿಃ ದೃಷ್ಟಿಃ ಯಸ್ಯ ಸಃ) ಅಂತರಾತ್ಮನ ಪರಿಜ್ಞಾನ ಉಳ್ಳವನೋ, ಸಃ ಯೋಗೀ= (ಅಂಥ) ಆ ಯೋಗಿಯು, ಬ್ರಹ್ಮಭೂತಃ= ಬ್ರಹ್ಮನಲ್ಲಿ

ಸ್ಥಿತನಾಗಿ ಬ್ರಹ್ಮ ನಿರ್ವಾಣಂ ಅಧಿಗಚ್ಛತಿ = ಮುಕ್ತಿಯನ್ನು ಪಡೆಯುತ್ತಾನೆ.

**ವಿವರಣೆ:– ಭಗವಂತ:-** "ಪಾರ್ಥ, ಕಾಮ ಕ್ರೋಧಗಳ ಬಲೆಯಿಂದ ಪಾರಾಗುವದು ಕೈವಲ್ಯ ಸಾಧನೆಯ ಪ್ರಥಮ ಹಂತ. ಅದು ಸಿದ್ಧಿಸಿದ ಬಳಿಕ, ಮನಸ್ಸು ಅಂತಸ್ಥ ಚಿಲ್ಲಿಂಗ ಪ್ರಭುವಿನತ್ತ ಧಾವಿಸಬೇಕು; ಅಲ್ಲಿಯೇ ಸುಖ ಪಡಬೇಕು; ಆ ಪ್ರಭು ಚಿಂತನದಲ್ಲಿಯೇ ಮನಸ್ಸು ರಮಮಾಣವಾಗಬೇಕು; ಪ್ರಭುವಿನ ಪರಿಪೂರ್ಣ ಜ್ಞಾನವನ್ನು ಅವಗತಗೊಳಿಸಿಕೊಳ್ಳಬೇಕು. ಆಗ ಮಾತ್ರ ಸಾಧಕನು ಬ್ರಹ್ಮನೊಂದಿಗೆ ಸಮರಸಗೊಳ್ಳುತ್ತಾನೆ. ಮುಕ್ತಿಯನ್ನು ಪಡೆಯುತ್ತಾನೆ!"

**(೧) ಅಂತಸ್ಸುಖಃ :–** ಬಾಹ್ಯ ಸುಖವು ವಿಷಯ ಜನ್ಯ. ಅದು ಸುಂದರ ವೇಷ ಧರಿಸಿದ ಶೂರ್ಪನಖಿಯಂತೆ ಕಪಟಿ. ತೋರಿಕೆಗೆ ಸುಖವಾದರೂ ಅದರ ಒಡಲಿನಲ್ಲಿ ಕೇವಲ ವಿಷ ತುಂಬಿದೆ. ಇದಕ್ಕೆ ಪ್ರತಿಯಾದುದು ಅಂತಸ್ಸುಖ. ಇದು ಇಂದ್ರಿಯಗಳಿಂದ ಉಂಟಾಗುವಂಥದಲ್ಲ; ಬಾಹ್ಯ ವಿಶ್ವ ಮರೆತು, ದೇಹ ಪ್ರಾಣ ಪರಿಧಿಗಳ ದಾಟಿ ಅಂತರಂಗದಲ್ಲಿ ಜಾಜ್ವಲಿಸುವ ಆತ್ಮದೀಪದ ದಿವ್ಯ ದರ್ಶನ ಪಡೆದಾಗ ದೊರೆಯುವಂಥದು. ಇದು ಚಿರಂತನ.

**(೨) ಅಂತರಾರಾಮಃ:–**ವಿಷಯಗಳಲ್ಲಿ ವಿರಮಿಸುವದು ವಿಷಯಾರಾಮ. ಲೌಕಿಕರು ವಿಷಯಾರಾಮಿಗಳು. ಸದಾ ಮನರಂಜನ, ಕ್ರೀಡೆ, ಕೂಟಗಳಲ್ಲಿ ತಲ್ಲೀನರು. ಇವರಲ್ಲಿ ರಾಗ ದ್ವೇಷಗಳಿವೆ. ಈ ಜನ ಬುದ್ಧಿವಿರಹಿತರು. ಪಾಂಡವರು ಪಗಡೆಯಾಡಿ ರಾಜ್ಯ ಕಳೆದುಕೊಂಡುದು ವಿಷಯಾರಾಮದ ಪರಿಣಾಮ. ಪಗಡೆಗೆ ಮನಸೋತ ಪಾಂಡವರ ಧರ್ಮಾಧರ್ಮ ಪ್ರಜ್ಞೆ ಅಳಿಯಿತು; ದ್ರೌಪದಿಯನ್ನೇ ಪಣಕ್ಕೆ ಹಚ್ಚಿದರು; ಹನ್ನೆರಡು ವರುಷ ವನವಾಸ ಭೋಗಿಸಿದರು; ಯುದ್ಧಮಾಡಿ ಕುರುವಂಶದ ಬಹು ಭಾಗವನ್ನು ನಾಶ ಮಾಡಿಕೊಂಡರು. ವಿಷಯಗಳಿಂದ ವಿಮುಖನಾಗಿ ಆತ್ಮನ ಸಚ್ಚಿದಾನಂದ ಸ್ವರೂಪದ ಚಿಂತನದಲ್ಲಿ ಆನಂದ ಪಡುವದೇ ಅಂತರಾರಾಮ. ಯೋಗಿಯು ಅಂತರಾರಾಮಿ.

**೩) ಅಂತರ್ಜ್ಯೋತಿಃ :–** ಜಗತ್ತಿನಲ್ಲಿ ಹರವಿಕೊಂಡಿರುವ ವಿಷಯಗಳನ್ನು ಪ್ರಕಾಶಿಸುವ ಜ್ಞಾನವು ಬಾಹ್ಯ ಜ್ಯೋತಿ. ಎಲ್ಲೆಲ್ಲೂ ಅವ್ಯಕ್ತವಾಗಿ ನಿಂದಿರುವ ದಿವ್ಯ ಚೈತನ್ಯ ವಸ್ತುವಿನ ಅರಿವು ಅಂತರ್ಜ್ಯೋತಿ. ಜಾಗ್ರ ಸ್ವಪ್ನ ಸುಷುಪ್ತಿಗಳನ್ನು ದಾಟಿ ಪರಜಾಗ್ರ ಅವಸ್ಥೆಯಲ್ಲಿ ಪ್ರವೇಶಿಸಿ ಅಲ್ಲಿ ಮಿನುಗುವ ದೇವನನ್ನು ಕಾಣುವವ ಅಂತರ್ಜ್ಯೋತಿಯುಳ್ಳ ವಿಮಲಯೋಗಿ.

**೪) ಸಃ ಯೋಗಿ ಬ್ರಹ್ಮಭೂತಃ ಬ್ರಹ್ಮನಿರ್ವಾಣಂ ಅಧಿಗಚ್ಛತಿ:–** ಅಂಥ ಪಾವನ ಯೋಗಿಯ ದೇಹ, ಇಂದ್ರಿಯ, ಪ್ರಾಣ, ಮನ, ಬುದ್ಧಿಗಳಲ್ಲಿ ಬ್ರಹ್ಮನೇ ತುಂಬಿಕೊಂಡಿದ್ದಾನೆ; ಅವನು ಜಗತ್ತನ್ನು ಬ್ರಹ್ಮ ರೂಪವೆಂದೇ

ಕಾಣುತ್ತಾನೆ; ತನ್ನ ಬಾಹ್ಯಾಂತರದಲ್ಲಿ ಬ್ರಹ್ಮ ಬೆಳಗನ್ನೇ ನೋಡುತ್ತಾನೆ. ಅವನು ನಿಶ್ಚಿತವಾಗಿಯೂ ಬ್ರಹ್ಮನಿರ್ವಾಣ ಅಂದರೆ ಪರಮ ಮುಕ್ತಿಯನ್ನು ಹೊಂದುತ್ತಾನೆ.

**ಸಂಬಂಧ:-** ನಿರ್ವಾಣ-ಯೋಗಿಯಲ್ಲಿ ಇರುವ ಲಕ್ಷಣಗಳು ಮುಂದಿನ ಎರಡು ಮಂತ್ರಗಳಲ್ಲಿ.

**ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥೨೫॥**

**ಅರ್ಥ:-** ಕ್ಷೀಣಕಲ್ಮಷಾಃ = ನಿರ್ಮಲರೂ ಛಿನ್ನದ್ವೈಧಾ = ಸಂಶಯರಹಿತರೂ, ಯತಾತ್ಮಾನಃ = ಸಂಯತ ಚಿತ್ತರೂ ಸರ್ವಭೂತ ಹಿತೇರತಾಃ =ಸರ್ವಪ್ರಾಣಿ ಹಿತೈಷಿಗಳೂ (ಆದ) ಋಷಯಃ=ಋಷಿಗಳು ಬ್ರಹ್ಮನಿರ್ವಾಣಂ= ಮುಕ್ತಿಯನ್ನು ಲಭಂತೇ= ಪಡೆಯುತ್ತಾರೆ.

**ವಿವರಣೆ:-** ಆತ್ಮದರ್ಶನ ಮಾಡಿಕೊಂಡ ಮಹಾತ್ಮರೇ ನಿರ್ವಾಣಯೋಗಿಗಳು; ಅವರೇ ಋಷಿಗಳು. ಅವರು ಬ್ರಹ್ಮ ನಿರ್ವಾಣವನ್ನು ಹೊಂದುತ್ತಾರೆ. ಏಕೆಂದರೆ ಅವರಲ್ಲಿ ಆತ್ಮಮೂಲ್ಯವಾದ ನಾಲ್ಕು ಲಕ್ಷಣಗಳಿವೆ.

**(೧) ಕ್ಷೀಣಕಲ್ಮಷಾಃ :** ಕಲ್ಮಷ ಎಂದರೆ ಪಾಪ, ಮನದ ಕೊಳೆ, ಆತ್ಮನನ್ನು ಮರೆ ಮಾಡಿದ ಮಾಲಿನ್ಯ. ಋಷಿಗಳು ಜಪ, ತಪ, ದಾನ, ಧರ್ಮ. ಯಾಗ, ಧ್ಯಾನಗಳ ಮೂಲಕ ಆ ಕಲ್ಮಷವನ್ನು ತೊಳೆದು ಹಾಕಿದುದರಿಂದ ಅವರು ಕ್ಷೀಣಕಲ್ಮಷರು.

**(೨) ಛಿನ್ನದ್ವೈಧಾಃ :** ದ್ವೈಧಾ ಎಂದರೆ ಸಂಶಯ. ಪ್ರಮಾತೃಗತ ಪ್ರಮಾಣಗತ ಪ್ರಮೇಯಗತ ಎಂದು ಸಂಶಯ ಮೂರು ಪ್ರಕಾರ. ದೀರ್ಘ ಕಾಲದ ವೇದಾಂತತತ್ತ್ವದ ಶ್ರವಣ, ಮನನಗಳಿಂದ ಆ ಸಂಶಯವನ್ನು ಛೇದಿಸಿದರಾಗಿ ಆ ಋಷಿಗಳು ಛಿನ್ನದ್ವೈಧರು.

**(೩) ಯತಾತ್ಮಾನಃ :** ಶ್ರವಣ ಮನನಗಳ ಪರಿಪಾಕದಿಂದ ಏಕಾಗ್ರತೆ ಸಮನಿಸುತ್ತದೆ; ಅದೇ ನಿದಿಧ್ಯಾಸ, ವಿಜಾತಿ ವೃತ್ತಿ ವಿರಹಿತ ಸಜಾತಿವೃತ್ತಿ ಪ್ರವಾಹರೂಪ ಧ್ಯಾನ! ಋಷಿಗಳು ಈ ಧ್ಯಾನದಲ್ಲಿ ನೈಪುಣ್ಯ ಸಾಧಿಸಿದುದರಿಂದ ಯತಾತ್ಮರು.

**೪) ಸರ್ವಭೂತ ಹಿತೇ ರತಾಃ :** ಧ್ಯಾನದ ಪರಿಪಕ್ವ ಸ್ಥಿತಿಯೇ ಸಮಾಧಿ; ಅಲ್ಲಿ ಜೀವ ಶಿವ ಸಾಮರಸ್ಯವಿದೆ. ಅದನ್ನು ಸಾಧಿಸಿದ ಋಷಿಗಳು ಉತ್ಥಾನರಾದಾಗ ಎಲ್ಲ ವಸ್ತುಗಳಲ್ಲಿ ಪರಮಾತ್ಮನನ್ನೇ ಕಾಣುತ್ತಾರೆ. ಪಶು,ಪಕ್ಷಿ ಹಾಗು ಮಾನವರನ್ನು ಆತ್ಮೀಯ ದೃಷ್ಟಿಯಿಂದ ನೋಡುತ್ತಾರೆ; ಪ್ರೇಮ ಭಾವನೆ ತೋರುತ್ತಾರೆ. ಆದುದರಿಂದ ಅವರು ಸರ್ವಭೂತ ಹಿತೈಷಿಗಳು.

**ಕಾಮಕ್ರೋಧವಿಮುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥೨೬॥**

**ಅರ್ಥ:**- ಕಾಮಕ್ರೋಧ ವಿಮುಕ್ತಾನಾಂ =ಕಾಮಕ್ರೋಧಗಳಿಂದ ವಿಮುಕ್ತರಾದ, ಯತಚೇತಸಾಂ= ಸಂಯತ ಚಿತ್ತರಾದ, ವಿದಿತಾತ್ಮನಾಂ =ಆತ್ಮಜ್ಞಾನಿಗಳಾದ, ಯತೀನಾಂ= ಯೋಗಿಗಳಿಗೆ ಅಭಿತಃ= ಸರ್ವತ್ರ ಬ್ರಹ್ಮನಿರ್ವಾಣಂ = ಬ್ರಹ್ಮನಿರ್ವಾಣವು ವರ್ತತೇ = ಇರುತ್ತದೆ.

**ವಿವರಣೆ:**– ಭಗವಂತ:- " ಕುರುಪುಂಗವ, ಋಷಿಗಳು ಸಾಧಿಸಿದ ಸಿದ್ಧಿಯನು ಎಷ್ಟು ಕೊಂಡಾಡಿದರೂ ಕಡಿಮೆ. ಕಾಮಾದಿ ವಿಕಾರ ವಿರಹಿತರಾದ ಹಾಗು ನಿರ್ಮಲ ನಿರುದ್ಧ ಮನಸ್ಸಿನವರಾದ ಅವರು ಒಳಗೆ ಹೊರಗೆ, ಮೇಲೆ ಕೆಳಗೆ, ಹಿಂಸೆ ಮುಂದೆ ಕೇವಲ ಬ್ರಹ್ಮವನ್ನೇ ಕಾಣುತ್ತಾರೆ. ಅವರಲ್ಲಿ ನನ್ನದು ಅನ್ಯರದು, ಒಳ್ಳೆಯದು ಕೆಟ್ಟದ್ದು, ಆತ್ಮ ಅನಾತ್ಮ, ಪುಣ್ಯ ಪಾಪ ಇಂಥ ದ್ವಂದ್ವ ಭಾವನೆಗಳಿಲ್ಲ. ಅರ್ಜುನ, ನೀನೂ ಅಂಥ ಋಷಿಯಾಗಲು ಯತ್ನಿಸು. ಅದರಿಂದಲೇ ನಿನ್ನ ಜೀವನದಲ್ಲಿ ಶಾಂತಿ. "

**ಸಂಬಂಧ:**– ಇಲ್ಲಿಗೆ ಐದನೆಯ ಅಧ್ಯಾಯ ಕೊನೆಗೊಂಡರೂ ಮುಂದಿನ ಅಧ್ಯಾಯದ ಪೂರ್ವಪೀಠಿಕೆಯಾಗಿ ಹಾಗು ಪ್ರಸ್ತುತ ಅಧ್ಯಾಯದ ಸಾರವಾಗಿ ಮತ್ತೆ ಮೂರು ಪದ್ಯಗಳನ್ನು ಹೇಳಿಯೇ ಅಧ್ಯಾಯವನ್ನು ಮುಗಿಸಲಾಗಿದೆ.

**ಸ್ಪರ್ಶಾನ್ಕೃತ್ವಾಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ‖೨೭‖**
**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತಏವ ಸಃ ‖೨೮‖**

**ಅರ್ಥ:**- ಬಾಹ್ಯಾನ್= ಹೊರಗಿನ, ಸ್ಪರ್ಶಾನ್= ವಿಷಯಗಳನ್ನು ಬಹಿಃಕೃತ್ವಾ= ದೂರಮಾಡಿ. ಚಕ್ಷುಃ ಚ =ದೃಷ್ಟಿಯನ್ನು ಭ್ರುವೋಃ ಅಂತರೇ= ಹುಬ್ಬುಗಳ ನಡುವೆ (ನಿಲ್ಲಿಸಿ), ನಾಸಾಭ್ಯಂತರ ಚಾರಿಣಾ= ನಾಸಿಕದಲ್ಲಿ ಸಂಚರಿಸುವ, ಪ್ರಾಣಾಪಾನೌ= ಪ್ರಾಣ ಅಪಾನಗಳನ್ನು ಸಮೇಕೃತ್ವಾ= ಕುಂಭಕ ಮಾಡಿ, ‖೨೭‖ ಯತೇಂದ್ರಿಯ ಮನೋಬುದ್ಧಿಃ= ಇಂದ್ರಿಯ ಮನ ಬುದ್ಧಿಗಳನ್ನು ಜಯಿಸಿರುವವನೂ, ಮೋಕ್ಷಪರಾಯಣಃ= (ಮೋಕ್ಷ ಏವ ಪರಮಯಸಂ ಪ್ರಾಪ್ಯಂ ಯಸ್ಯ ಸಃ) ಮೋಕ್ಷವೇ ಪರಮ ಪ್ರಾಪ್ಯವೆಂದು ತಿಳಿದವನೂ ವಿಗತೇಚ್ಛಾಭಯ ಕ್ರೋಧಃ= ಇಚ್ಛಾ ಭಯ ಕ್ರೋಧ ವಿರಹಿತನೂ (ಆದ) ಯಃ ಮುನಿಃ= ಯಾವ ಮುನಿಯು, (ಇರುತ್ತಾನೆಯೋ), ಸಃ =ಅವನು ಸದಾ= ಯಾವಾಗಲು ಮುಕ್ತಃ ಏವ= ಮುಕ್ತನೇ ‖೨೮‖

**ವಿವರಣೆ:**– ಯಮ, ನಿಯಮ, ಆಸನ, ಪ್ರಾಣಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಹಾಗು ಸಮಾಧಿ ಈ ಎಂಟು ಅಂಗಗಳಿಂದ ಕೂಡಿದ ಯೋಗವು ರಾಜಯೋಗ; ಪ್ರಾಯೋಗಿಕ ವೇದಾಂತ. ರಾಜಯೋಗದಂಥ ನಿಸ್ಸಂದಿಗ್ಧ ಹಾಗು ಸರ್ವಸಂತಸಮ್ಮತ ಯೋಗವು ಇನ್ನೊಂದಿಲ್ಲ ಎಂದು ಹೇಳಿದರೆ ಅತಿಶಯೋಕ್ತಿಯಲ್ಲ. ರಾಜ ಯೋಗದ ಆಧಾರ ಸ್ತಂಭಗಳೆಂದರೆ ಅಮಿತ ಪ್ರಯತ್ನ ಮತ್ತು ಅಚಲ ಮನೋನಿರ್ಧಾರ! ರಾಜಯೋಗದ ಗುರಿಯೆಂದರೆ ಈಶ್ವರ ದರ್ಶನ,

ಕಾಣುತ್ತಾನೆ; ತನ್ನ ಬಾಹ್ಯಾಂತರದಲ್ಲಿ ಬ್ರಹ್ಮ ಬೆಳಗನ್ನೇ ನೋಡುತ್ತಾನೆ. ಅವನು ನಿಶ್ಚಿತವಾಗಿಯೂ ಬ್ರಹ್ಮನಿರ್ವಾಣ ಅಂದರೆ ಪರಮ ಮುಕ್ತಿಯನ್ನು ಹೊಂದುತ್ತಾನೆ.

ಸಂಬಂಧ:- ನಿರ್ವಾಣ–ಯೋಗಿಯಲ್ಲಿ ಇರುವ ಲಕ್ಷಣಗಳು ಮುಂದಿನ ಎರಡು ಮಂತ್ರಗಳಲ್ಲಿ.

ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।
ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥೨೫॥

ಅರ್ಥ:– ಕ್ಷೀಣಕಲ್ಮಷಾಃ = ನಿರ್ಮಲರೂ ಛಿನ್ನದ್ವೈಧಾ = ಸಂಶಯರಹಿತರೂ, ಯತಾತ್ಮಾನಃ = ಸಂಯತ ಚಿತ್ತರೂ ಸರ್ವಭೂತ ಹಿತೇರತಾಃ =ಸರ್ವಪ್ರಾಣಿ ಹಿತೈಷಿಗಳೂ (ಆದ) ಋಷಯಃ =ಋಷಿಗಳು ಬ್ರಹ್ಮನಿರ್ವಾಣಂ= ಮುಕ್ತಿಯನ್ನು ಲಭಂತೇ= ಪಡೆಯುತ್ತಾರೆ.

ವಿವರಣೆ:- ಆತ್ಮದರ್ಶನ ಮಾಡಿಕೊಂಡ ಮಹಾತ್ಮರೇ ನಿರ್ವಾಣಯೋಗಿಗಳು; ಅವರೇ ಋಷಿಗಳು. ಅವರು ಬ್ರಹ್ಮ ನಿರ್ವಾಣವನ್ನು ಹೊಂದುತ್ತಾರೆ. ಏಕೆಂದರೆ ಅವರಲ್ಲಿ ಅತ್ಯಮೂಲ್ಯವಾದ ನಾಲ್ಕು ಲಕ್ಷಣಗಳಿವೆ.

(೧) ಕ್ಷೀಣಕಲ್ಮಷಾಃ : ಕಲ್ಮಷ ಎಂದರೆ ಪಾಪ, ಮನದ ಕೊಳೆ, ಆತ್ಮನನ್ನು ಮರೆ ಮಾಡಿದ ಮಾಲಿನ್ಯ. ಋಷಿಗಳು ಜಪ, ತಪ, ದಾನ, ಧರ್ಮ. ಯಾಗ, ಧ್ಯಾನಗಳ ಮೂಲಕ ಆ ಕಲ್ಮಷವನ್ನು ತೊಳೆದು ಹಾಕಿದುದರಿಂದ ಅವರು ಕ್ಷೀಣಕಲ್ಮಷರು.

(೨) ಛಿನ್ನದ್ವೈಧಾಃ : ದ್ವೈಧಾ ಎಂದರೆ ಸಂಶಯ. ಪ್ರಮಾತೃಗತ ಪ್ರಮಾಣಗತ ಪ್ರಮೇಯಗತ ಎಂದು ಸಂಶಯ ಮೂರು ಪ್ರಕಾರ. ದೀರ್ಘ ಕಾಲದ ವೇದಾಂತತತ್ತ್ವದ ಶ್ರವಣ, ಮನನಗಳಿಂದ ಆ ಸಂಶಯವನ್ನು ಛೇದಿಸಿದರಾಗಿ ಆ ಋಷಿಗಳು ಛಿನ್ನದ್ವೈಧರು.

(೩) ಯತಾತ್ಮಾನಃ : ಶ್ರವಣ ಮನನಗಳ ಪರಿಪಾಕದಿಂದ ಏಕಾಗ್ರತೆ ಸಮನಿಸುತ್ತದೆ; ಅದೇ ನಿದಿಧ್ಯಾಸ, ವಿಜಾತಿ ವೃತ್ತಿ ವಿರಹಿತ ಸಜಾತಿವೃತ್ತಿ ಪ್ರವಾಹರೂಪ ಧ್ಯಾನ! ಋಷಿಗಳು ಈ ಧ್ಯಾನದಲ್ಲಿ ನೈಪುಣ್ಯ ಸಾಧಿಸಿದುದರಿಂದ ಯತಾತ್ಮರು.

೪) ಸರ್ವಭೂತ ಹಿತೇ ರತಾಃ : ಧ್ಯಾನದ ಪರಿಪಕ್ವ ಸ್ಥಿತಿಯೇ ಸಮಾಧಿ; ಅಲ್ಲಿ ಜೀವ ಶಿವ ಸಾಮರಸ್ಯವಿದೆ. ಅದನ್ನು ಸಾಧಿಸಿದ ಋಷಿಗಳು ಉತ್ಥಾನರಾದಾಗ ಎಲ್ಲ ವಸ್ತುಗಳಲ್ಲಿ ಪರಮಾತ್ಮನನ್ನೇ ಕಾಣುತ್ತಾರೆ. ಪಶು,ಪಕ್ಷಿ ಹಾಗು ಮಾನವರನ್ನು ಆತ್ಮೀಯ ದೃಷ್ಟಿಯಿಂದ ನೋಡುತ್ತಾರೆ; ಪ್ರೇಮ ಭಾವನೆ ತೋರುತ್ತಾರೆ. ಆದುದರಿಂದ ಅವರು ಸರ್ವಭೂತ ಹಿತೈಷಿಗಳು.

ಕಾಮಕ್ರೋಧವಿಮುಕ್ತಾನಾಂ ಯತೀನಾಂ ಯತಚೇತಸಾಮ್ ।
ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥೨೬॥

**ಅರ್ಥ:-** ಕಾಮಕ್ರೋಧ ವಿಮುಕ್ತಾನಾಂ =ಕಾಮಕ್ರೋಧಗಳಿಂದ ವಿಮುಕ್ತರಾದ, ಯತಚೇತಸಾಂ= ಸಂಯತ ಚಿತ್ತರಾದ, ವಿದಿತಾತ್ಮನಾಂ =ಆತ್ಮಜ್ಞಾನಿಗಳಾದ, ಯತೀನಾಂ= ಯೋಗಿಗಳಿಗೆ ಅಭಿತಃ= ಸರ್ವತ್ರ, ಬ್ರಹ್ಮನಿರ್ವಾಣಂ= ಬ್ರಹ್ಮನಿರ್ವಾಣವು ವರ್ತತೇ = ಇರುತ್ತದೆ.

**ವಿವರಣೆ:–** ಭಗವಂತ:- " ಕುರುಪುಂಗವ, ಋಷಿಗಳು ಸಾಧಿಸಿದ ಸಿದ್ಧಿಯನು ಎಷ್ಟು ಕೊಂಡಾಡಿದರೂ ಕಡಿಮೆ. ಕಾಮಾದಿ ವಿಕಾರ ವಿರಹಿತರಾದ ಹಾಗು ನಿರ್ಮಲ ನಿರುದ್ಧ ಮನಸ್ಸಿನವರಾದ ಅವರು ಒಳಗೆ ಹೊರಗೆ, ಮೇಲೆ ಕೆಳಗೆ, ಹಿಂದೆ ಮುಂದೆ ಕೇವಲ ಬ್ರಹ್ಮವನ್ನೇ ಕಾಣುತ್ತಾರೆ. ಅವರಲ್ಲಿ ನನ್ನದು ಅನ್ಯರದು, ಒಳ್ಳೆಯದು ಕೆಟ್ಟದ್ದು, ಆತ್ಮ ಅನಾತ್ಮ, ಪುಣ್ಯ ಪಾಪ ಇಂಥ ದ್ವಂದ್ವ ಭಾವನೆಗಳಿಲ್ಲ. ಅರ್ಜುನ, ನೀನೂ ಅಂಥ ಋಷಿಯಾಗಲು ಯತ್ನಿಸು. ಅದರಿಂದಲೇ ನಿನ್ನ ಜೀವನದಲ್ಲಿ ಶಾಂತಿ. "

**ಸಂಬಂಧ:–** ಇಲ್ಲಿಗೆ ಐದನೆಯ ಅಧ್ಯಾಯ ಕೊನೆಗೊಂಡರೂ ಮುಂದಿನ ಅಧ್ಯಾಯದ ಪೂರ್ವಪೀಠಿಕೆಯಾಗಿ ಹಾಗು ಪ್ರಸ್ತುತ ಅಧ್ಯಾಯದ ಸಾರವಾಗಿ ಮತ್ತೆ ಮೂರು ಪದ್ಯಗಳನ್ನು ಹೇಳಿಯೇ ಅಧ್ಯಾಯವನ್ನು ಮುಗಿಸಲಾಗಿದೆ.

ಸ್ಪರ್ಶಾನ್ಕೃತ್ವಾಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥೨೭॥
ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥೨೮॥

**ಅರ್ಥ:-** ಬಾಹ್ಯಾನ್= ಹೊರಗಿನ, ಸ್ಪರ್ಶಾನ್= ವಿಷಯಗಳನ್ನು ಬಹಿಃಕೃತ್ವಾ= ದೂರಮಾಡಿ, ಚಕ್ಷುಃ ಚ =ದೃಷ್ಟಿಯನ್ನು ಭ್ರುವೋಃ ಅಂತರೇ= ಹುಬ್ಬುಗಳ ನಡುವೆ (ನಿಲ್ಲಿಸಿ), ನಾಸಾಭ್ಯಂತರ ಚಾರಿಣಾ= ನಾಸಿಕದಲ್ಲಿ ಸಂಚರಿಸುವ, ಪ್ರಾಣಾಪಾನೌ= ಪ್ರಾಣ ಅಪಾನಗಳನ್ನು ಸಮೇಕೃತ್ವಾ= ಕುಂಭಕ ಮಾಡಿ, ॥೨೭॥ ಯತೇಂದ್ರಿಯ ಮನೋಬುದ್ಧಿಃ= ಇಂದ್ರಿಯ ಮನ ಬುದ್ಧಿಗಳನ್ನು ಜಯಿಸಿರುವವನೂ, ಮೋಕ್ಷಪರಾಯಣಃ= (ಮೋಕ್ಷ ಏವ ಪರಮಯನಂ ಪ್ರಾಪ್ಯಂ ಯಸ್ಯ ಸಃ) ಮೋಕ್ಷವೇ ಪರಮ ಪ್ರಾಪ್ಯವೆಂದು ತಿಳಿದವನೂ ವಿಗತೇಚ್ಛಾಭಯ ಕ್ರೋಧಃ= ಇಚ್ಛಾ ಭಯ ಕ್ರೋಧ ವಿರಹಿತನೂ (ಆದ) ಯಃ ಮುನಿಃ= ಯಾವ ಮುನಿಯು, (ಇರುತ್ತಾನೆಯೋ), ಸಃ =ಅವನು ಸದಾ= ಯಾವಾಗಲು ಮುಕ್ತಃ ಏವ= ಮುಕ್ತನೇ ॥೨೮॥

**ವಿವರಣೆ:–** ಯಮ, ನಿಯಮ, ಆಸನ, ಪ್ರಾಣಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಹಾಗು ಸಮಾಧಿ ಈ ಎಂಟು ಅಂಗಗಳಿಂದ ಕೂಡಿದ ಯೋಗವು ರಾಜಯೋಗ; ಪ್ರಾಯೋಗಿಕ ವೇದಾಂತ. ರಾಜಯೋಗದಂಥ ನಿಸ್ಸಂದಿಗ್ಧ ಹಾಗು ಸರ್ವಸಂತಸಮ್ಮತ ಯೋಗವು ಇನ್ನೊಂದಿಲ್ಲ ಎಂದು ಹೇಳಿದರೆ ಅತಿಶಯೋಕ್ತಿಯಲ್ಲ. ರಾಜ ಯೋಗದ ಆಧಾರ ಸ್ತಂಭಗಳೆಂದರೆ ಅಮಿತ ಪ್ರಯತ್ನ ಮತ್ತು ಅಚಲ ಮನೋನಿರ್ಧಾರ! ರಾಜಯೋಗದ ಗುರಿಯೆಂದರೆ ಈಶ್ವರ ದರ್ಶನ,

ಪುರುಷತತ್ತ್ವದ ಸ್ವರೂಪ ಸಾಕ್ಷಾತ್ಕಾರ!

ಮುಂದಿನ ಅಧ್ಯಾಯವು ರಾಜಯೋಗದ ಮಂಡನೆಗಾಗಿ ಮೀಸಲಾಗಿದೆ. ಆದರ ಸಂಕ್ಷೇಪ ದರ್ಶನ ಈ ಎರಡು ಮಂತ್ರಗಳಲ್ಲಿದೆ. ಅಷ್ಟ ಅಂಗಗಳ ಅಲ್ಪ ವಿವರಣೆಯನ್ನು ಇದೀಗ ಅವಲೋಕಿಸುವಾ; ಎರಡೂ ಮಂತ್ರಗಳಲ್ಲಿ ಕೂಡಿ ಅಷ್ಟಾಂಗ ನಿರ್ದೇಶಕವಾದ ಆರು ಪದಸಮುದಾಯಗಳಿವೆ: (೧) ವಿಗತೇಚ್ಛಾ ಭಯಕ್ರೋಧ (ಯಮ ನಿಯಮ ಆಸನ) (೨) ಪ್ರಾಣಾಪಾನ ಸ ಮೇ ಕೃತ್ವಾ (ಪ್ರಾಣಾಯಾಮ) (೩) ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾನ್ (ಪ್ರತ್ಯಾಹಾರ) (೪) ಚಕ್ಷುಶ್ಚೈವಾಂತರೇ ಭ್ರುವೋಃ (ಧಾರಣ) (೫) ಯತೇಂದ್ರಿಯ ಮನೋ ಬುದ್ಧಿ (ಧ್ಯಾನ) (೬) ಮೋಕ್ಷ ಪರಾಯಣತಾ (ಸಮಾಧಿ).

(೧) ಯಮ: ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಹಾಗು ಅಪರಿಗ್ರಹಗಳು ಯಮದ ಪಂಚಮುಖಗಳು. ಅಹಿಂಸೆಯಿಂದ ಕ್ರೋಧನಾಶ, ಸತ್ಯದಿಂದ ಮದನಾಶ, ಅಸ್ತೇಯದಿಂದ ಮೋಹನಾಶ, ಬ್ರಹ್ಮಚರ್ಯದಿಂದ ಕಾಮ ನಾಶ, ಅಪರಿಗ್ರಹದಿಂದ ಲೋಭ ಹಾಗು ಮಾತ್ಸರ್ಯ ನಾಶ.

(೨) ನಿಯಮ: ಶೌಚ, ಸಂತೋಷ, ತಪ, ಸ್ವಾಧ್ಯಾಯ, ಈಶ್ವರ-ಪ್ರಣಿಧಾನಗಳು ನಿಯಮದ ಅವಯವಗಳು. ಶೌಚದಿಂದ ದೈಹಿಕ ಆರೋಗ್ಯ. ಸಂತೋಷದಿಂದ ಮಾನಸಿಕ ಆರೋಗ್ಯ. ತಪದಿಂದ ಮನೋ ನಿರ್ಧಾರದ ವೃದ್ಧಿ. ಸ್ವಾಧ್ಯಾಯದಿಂದ ವಿದ್ಯಾಪ್ರಾಪ್ತಿ. ಈಶ್ವರ ಪ್ರಣಿಧಾನದಿಂದ ನಿರ್ಭೀಕತೆ ಹಾಗು ನಿಶ್ಚಿಂತತೆ. ನಿಯಮಾಂಗಕ್ಕೆ ಮೈತ್ರಿ, ಕರುಣಾ, ಮುದಿತಾ ಹಾಗು ಉಪೇಕ್ಷೆಗಳು ಸಹಕಾರಿಗಳಾಗಿವೆ. (ಅ) ಎಲ್ಲ ವಿಧದಲ್ಲಿ ತನ್ನ ಸಮಾನರಾದವರ ಕಂಡು ಸಂತೋಷ ಪಡುವದು ಮೈತ್ರಿ. ಇದರಿಂದ ಮಾತ್ಸರ್ಯದ ನಾಶ. (ಆ) ಕಷ್ಟದಲ್ಲಿದ್ದವರ ಕಂಡು ಅನುಕಂಪ ತಾಳುವದು ಕರುಣಾ. ಇದರಿಂದ ವೈರ ನಾಶ. (ಇ) ಹಿರಿಯ ಅನುಭಾವಿ, ವಿದ್ವಾನ ಹಾಗು ಲೋಕ ಸೇವಕರ ಕಂಡು ಆನಂದಿಸುವದು ಮುದಿತಾ. ಇದರಿಂದ ಅಭಿಮಾನದ ಹಾನಿ. (ಈ) ದುಷ್ಟರ ವಿಷಯದಲ್ಲಿ ಉದಾಸೀನನಾಗಿರುವದು ಉಪೇಕ್ಷೆ. ಇದರಿಂದ ಗರ್ವ ಹಾಗು ಕೀಳು ಭಾವನೆಗಳ ವಿನಾಶ.

(೩) ಆಸನ: ದೇಹದ ಅವಯವಗಳು ಸಶಕ್ತ ಹಾಗು ಕಾರ್ಯಕ್ಷಮವಾಗುವ ರೀತಿಯಲ್ಲಿ ಕೂಡ್ರುವದು ಆಸನ. ಇದು ನೂರಾರು ವಿಧ. ಇದರಿಂದ ದೈಹಿಕ ಸ್ಥಿರತೆ ಉಂಟಾಗುತ್ತದೆ,

(೪) ಪ್ರಾಣಾಯಾಮ: ಶ್ವಾಸ ಉಚ್ಛ್ವಾಸಗಳಲ್ಲಿ ಕ್ರಮ ಬದ್ಧತೆಯನ್ನು ತರುವದು ಮತ್ತು ಶ್ವಾಸ ನಿರೋಧರೂಪ ಕುಂಭಕವನ್ನು ಸುದೀರ್ಘಗೊಳಿಸುವದು ಪ್ರಾಣಾಯಾಮ. ಇದರಿಂದ ಮನಸ್ಸಂಯಮನರೂಪ ಸಾಧನೆಯು ತೀವ್ರಗೊಳ್ಳುವದು.

(೫) ಪ್ರತ್ಯಾಹಾರ:– ಪಾದತ್ರಾಣಗಳನ್ನು ಬಾಗಿಲ ಹೊರಗೆಯೇ ಬಿಟ್ಟು ದೇವಾಲಯುವನ್ನು ಪ್ರವೇಶಿಸುವಂತೆ ಉನ್ಮಾದಕರ ವಿಷಯುಗಳನ್ನು ಹೊರ ಜಗತ್ತಿನಲ್ಲಿಯೇ ಬಿಟ್ಟು ಮನ, ಬುದ್ಧಿಗಳನ್ನು ಒಳಗೆ ಸೆಳೆದುಕೊಳ್ಳುವದು ಪ್ರತ್ಯಾಹಾರ. ಇದರಿಂದ ವಿಷಯ ವಿಭ್ರಮೆಯು ಅಳಿಯುವದು.

(೬) ಧಾರಣ:- ಎರಡೂ ದೃಷ್ಟಿಗಳನ್ನು ಅನಿಮಿಷಗೊಳಿಸಿ ಹುಬ್ಬುಗಳೆರಡರ ಮಧ್ಯದಲ್ಲಿ ಕೇಂದ್ರಿಕರಿಸುವದು ಧಾರಣ. ಇದರಿಂದ ಮನಸ್ಸಿನ ಹೊಯ್ದಾಟ ನಿಲ್ಲುವದು.

(೭) ಧ್ಯಾನ:- ನಿಗ್ರಹೀತವಾದ ಮನಸ್ಸು ಮೂರ್ತ ಅಥವಾ ಅಮೂರ್ತ ದೇವನ ಚಿಂತನೆಯಲ್ಲಿ ಏಕಾಗ್ರವಾದರೆ ಅದು ಧ್ಯಾನ. ಸಂಪ್ರಜ್ಞಾತ ಸಮಾಧಿ ಎನ್ನುವದು ಅದರ ಇನ್ನೊಂದು ನಾಮ. ಇದರಲ್ಲಿ ನಾಲ್ಕು ಬಗೆ: (ಅ) ಸವಿತರ್ಕ ಸಂಪ್ರಜ್ಞಾತ ಸಮಾಧಿ: ಸಾಕಾರ ದೇವ ಮೂರ್ತಿಯಲ್ಲಿ ಮನಸ್ಸನ್ನು ನಿಲ್ಲಿಸುವದು. (ಆ) ಸವಿಚಾರ ಸಂಪ್ರಜ್ಞಾತ ಸಮಾಧಿ: ತನ್ಮಾತ್ರೆಗಳಿಂದಾದ ಸೂಕ್ಷ್ಮ ದೇವ ಮೂರ್ತಿಯಲ್ಲಿ ಮನಸ್ಸನ್ನು ನಿಲ್ಲಿಸುವದು. (ಇ) ಸಾನಂದ ಸಂಪ್ರಜ್ಞಾತ ಸಮಾಧಿ: ಸಾತ್ವಿಕಬುದ್ಧಿ ವೃತ್ತಿಯಲ್ಲಿ ತೋರಿದ, ದಿವ್ಯ ಆನಂದ ರೂಪಿನಲ್ಲಿ ಮನವ ನಿಲ್ಲಿಸುಸುವದು. (ಈ) ಸಾಸ್ಮಿತಾ ಸಂಪ್ರಜ್ಞಾತ ಸಮಾಧಿ: ದಿವ್ಯ ಆಸ್ತಿತ್ವ ರೂಪಿನಲ್ಲಿ ಮನವ ನಿಲ್ಲಿಸುವದು.

(೮) ಸಮಾಧಿ:- ಚಿಂತನೆಗೈಯುತ್ತಿರುವ ಮನಸ್ಸು ಧ್ಯೇಯದಲ್ಲಿ (ದೇವನಲ್ಲಿ) ಒಂದಾದರೆ ಅದು ಸಮಾಧಿ. ಅದಕ್ಕೆ ಅಸಂಪ್ರಜ್ಞಾತ ಸಮಾಧಿ ಎಂದು ಮತ್ತೊಂದು ನಾಮ. ಈ ಅವಸ್ಥೆಯಲ್ಲಿ ಧ್ಯಾತೃವು ಧ್ಯೇಯದಲ್ಲಿ ಪೂರ್ಣ ವಿಲಯನ ಹೊಂದಿದ್ದಾನೆ. ಧ್ಯಾತೃ, ಧ್ಯಾನ, ಧ್ಯೇಯ ಎಂಬ ತ್ರಿಪುಟಿ ಭಾವನೆ ಅಡಗಿದೆ.

ಭಗವಂತ:– ಪಾರ್ಥ, ಅಷ್ಟ ಅಂಗಗಳಿಂದ ಸಂಯೋಜಿಸಲ್ಪಟ್ಟ ರಾಜಯೋಗವನ್ನು ಕ್ರಮಬದ್ಧವಾಗಿ ಅನುಷ್ಠಾನ ಮಾಡಿದ ಯೋಗಿಯೇ ಮುನಿ. ಅವನು ಮುಕ್ತ! ಸ್ವತಂತ್ರ!! ಅವನು ಏನು ಮಾಡುತ್ತಾನೆ. ಎಂಬುದನ್ನು ತಿಳಿದಿರುವೆಯಾ?

ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥೨೯॥

ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಕರ್ಮಸನ್ಯಾಸ ಯೋಗೋ ನಾಮ ಪಂಚಮೋಧ್ಯಾಯಃ

ಅರ್ಥ:- ಯಜ್ಞ ತಪಸಾಂ ಭೋಕ್ತಾರಂ= (ಭಕ್ತರು ಆಚರಿಸಿದ) ಯಜ್ಞ ಮತ್ತು ತಪಸ್ಸುಗಳನ್ನು ಸ್ವೀಕರಿಸಿ ಭಕ್ತರನ್ನು ಪಾಲಿಸುವವನಾದ, ಸರ್ವಲೋಕ ಮಹೇಶ್ವರಂ = ಸಕಲ ಲೋಕಗಳ ಅಧೀಶ್ವರನಾದ, ಸರ್ವಭೂತಾನಾಂ ಸುಹೃದಂ = ಸಕಲ ಜೀವಿಗಳ ಸುಹೃದನಾದ

(ನಿರಪೇಕ್ಷವಾಗಿ ಉಪಕಾರ ಮಾಡುವ ಮಿತ್ರ), ಮಾಂ =ನನ್ನನ್ನು ಜ್ಞಾತ್ವಾ = ತಿಳಿದು, ಶಾಂತಿಂ ಋಚ್ಛತಿ = (ಯೋಗಿ) ಶಾಂತಿ ಪಡೆಯುತ್ತಾನೆ.

ವಿವರಣೆ:- ಭಗವಂತ:- "ಅರ್ಜುನ, ನಾನು ಸರ್ವ ಲೋಕಗಳ ಒಡೆಯ. ಸರ್ವ ಜೀವರುಗಳ ಹಿತೈಷಿ. ದೇವ ದಾನವ ಮಾನವ ಗಂಧರ್ವ ಮುಂತಾದವರ ಪೂಜ್ಯ ದೇವತೆ. ನಾನೇ ವಿಶ್ವದ ಏಕೈಕ ದೊರೆ. ಅದ್ವಿತೀಯ ಚಕ್ರವರ್ತಿ! ಭೂತ ಗಳಿಂದ ಪ್ರಕೃತಿಯ ವರೆಗಿನ ಎಲ್ಲ ತತ್ತ್ವಗಳು ನನ್ನ ಚಕ್ರಾಧಿಪತ್ಯಕ್ಕೆ ಒಳಪ ಟ್ಟಿವೆ. ಸೃಷ್ಟಿ, ರಕ್ಷಣೆ, ನಾಶ ಎಲ್ಲದಕ್ಕೂ ನಾನೇ ಸನ್ನಿಧಾನ ಕರ್ತೃ. ಋಷಿ ಮುನಿಗಳು ನನ್ನನ್ನು ಕುರಿತೇ ಯಜ್ಞ, ತಪ ಆಚರಿಸುತ್ತಾರೆ; ಬಹು ಭಕ್ತಿಯಿಂದ ಹವ್ಯ ದ್ರವ್ಯವನ್ನು ನನಗೆ ಅರ್ಪಿಸುತ್ತಾರೆ. ನಾನು ಸ್ವೀಕರಿಸಿ ಅವರನ್ನು ಕಾಪಾ ಡುತ್ತೇನೆ. ಭಾರತ, ಇಂಥ ನನ್ನನ್ನು ಆಶ್ರಿತ ಯೋಗಿಯು ಚಿರಂತನ ಶಾಂತಿ ಯನ್ನು ಗಳಿಸುತ್ತಾನೆ! ಅನುಭವಿಸುತ್ತಾನೆ!"

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಐದನೆಯ ಬಿಂದುವು.

* † *

# ಆರನೆಯ ಅಧ್ಯಾಯ

## ಧ್ಯಾನಯೋಗ

### ಶ್ರೀ ಭಗವಾನುವಾಚ

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ ॥೧॥

ಅರ್ಥ:- ಕರ್ಮಫಲಂ =ಕರ್ಮದ ಫಲವನ್ನು ಅನಾಶ್ರಿತಃ =ಅಪೇಕ್ಷಿಸದೆ ಕಾರ್ಯಂ ಕರ್ಮ =ಮಾಡಬೇಕಾದ ಕರ್ಮವನ್ನು ಯಃ =ಯಾವನು ಕರೋತಿ =ಮಾಡುತ್ತಾನೆಯೋ =ಅವನು ಸನ್ಯಾಸೀ= ಸನ್ಯಾಸಿಯು ಚ= ಮತ್ತು ಯೋಗಿ =ಯೋಗಿಯು. ನ ನಿರಗ್ನಿಃ= ಅಗ್ನಿಯನ್ನು ತ್ಯಜಿಸಿದವನು (ಸನ್ಯಾಸಿ) ಅಲ್ಲ. ನ ಚ ಅಕ್ರಿಯಃ= ಮತ್ತು ಕರ್ತವ್ಯ ಕರ್ಮಗಳನ್ನು ಬಿಟ್ಟವನು ಯೋಗಿಯೂ ಅಲ್ಲ.

ವಿವರಣೆ:- " ಮಣಿಯನೆಣಿಸಿ ದಿನವ ಕಳೆಯಲಿಬೇಡ. ಕಣಿಯ ಪೂಜಿಸಿ ಕಾಲ ಕಳೆ ಯಲಿ ಬೇಡ. ಕ್ಷಣದೊಳಗಣ ಅರ್ಧಕ್ಷಣವಾದರೂ ನಿಜದ ನೆನಹೇ ಸಾಕು. ಬೆಂಕಿಯೊಳ ಗುಳ್ಳ ಗುಣ ಬಿಸಿ ನೀರೊಳಗುಂಟೆ ? ಗೋಹೇಶ್ವರ. "

ಭಗವಂತ:- "ಭಾರತ, ಪ್ರಪಂಚದ ಬೇಡಿಗಳನ್ನು ಕಡಿದು ಹಾಕಿ ದಿವ್ಯ ಹಾಗು ಅಮರ ಸ್ವಾತಂತ್ರ್ಯ ಗಳಿಸಲು ಎರಡೇ ಎರಡು ಮಾರ್ಗಗಳು. ಒಂದು ಯೋಗ, ಮತ್ತೊಂದು ಸನ್ಯಾಸ. ಪವಿತ್ರ ಭಾವನೆಯಿಂದ ದುಡಿಯುವದು ಯೋಗ; ದುಡಿಮೆಯ ಫಲವನ್ನು ದೇವನಿಗೆ ಅರ್ಪಿಸಿ ಬಿಡುವದು ಸನ್ಯಾಸ. ಯಮನಿಯಮಾದಿ ವಿಧಿಗಳಿಂದ ಮನಸ್ಸನ್ನು ಹದಮಾಡುವದು ಯೋಗ; ಆಸೆ ಆಮಿಷಗಳನ್ನು ಪರಿತ್ಯಜಿಸುವದು ಸನ್ಯಾಸ. ಚಿತ್ತ ವೃತ್ತಿಗಳನ್ನು ಕ್ರಮಬದ್ಧ

ವಾಗಿ ನಿರೋಧಿಸುವದು ಯೋಗ; ವೃತ್ತಿರಹಿತ ಚಿತ್ತದಲ್ಲಿ ಆತ್ಮಪ್ರಕಾಶವನ್ನು ಪರಿಗ್ರಹಿಸಿ ಜೀವಭಾವನೆಯನ್ನು ಕಳಚಿಹಾಕುವದು ಸನ್ಯಾಸ. ಜೀವಭಾವ ಬಿಟ್ಟು ನಿರಂಜನನಾಗಿ ಲೋಕ ಹಿತಾರ್ಥ ಕಾರ್ಯ ನಿರ್ವಹಿಸುವದು ಯೋಗ; ವಿಶ್ವವ ತುಂಬ ದೇವನ ಅಸ್ತಿತ್ವವನ್ನು ಅನುಭವಿಸುವದು ಸನ್ಯಾಸ! ಈ ಯೋಗ ಹಾಗು ಸನ್ಯಾಸ ಮಾರ್ಗಗಳೆರಡನ್ನು ಅಚೂಕಾಗಿ ಅನುಸರಿಸಿ ದೇವನಲ್ಲಿ ಸಮರ ಸನಾದ ಮಹಾತ್ಮನೇ ಯೋಗಿ, ಸನ್ಯಾಸಿ!"

(೧) ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರೋತಿ: ವೇದ, ಆಗಮ, ಸ್ಮೃತಿ ಮುಂತಾದ ಪವಿತ್ರ ಗ್ರಂಥಗಳು ವಿಧಿಸುವ ಕ್ರಿಯೆಗಳಿಗೆ ಕಾರ್ಯ ಎನ್ನು ತ್ತಾರೆ.

ಪ್ರಾಪಂಚಿಕ ಪರಿವಾರವನ್ನು ಬಿಟ್ಟು ಬಿಟ್ಟ ಸನ್ಯಾಸಿಗಳು ಅನೇಕ ಜನ. ಅವರು ವಿಧಿ ನಿಯಮಗಳೆಂದರೆ ಹೇಯವೆಂದು ಬಗೆಯುತ್ತಾರೆ. ಹೀಗಾಗು ವದರಿಂದ. ಅವರಿಗೂ ಚಿತ್ತಶುದ್ಧಿ ಹಾಗು ದೇವದರ್ಶನ ಸಮನಿಸದು.

ಗೃಹಸ್ಥರ ಅಂತರಂಗದಲ್ಲಿ ಸಕಾಮಭಾವನೆ ಎಂಬ ಬಿರುಗಾಳಿ ಬೀಸು ತ್ತಿದ್ದರೆ ಪರಿತ್ಯಕ್ತ ಸನ್ಯಾಸಿಗಳ ಹೃದಯದಲ್ಲಿ ಗರ್ವ ಆಢ್ಯತೆ ಎಂಬ ಝಂಝಾ ಮಾರುತ ಸುತ್ತುತ್ತಿದೆ. ಹೀಗಿರುವಾಗ, ಭಗವಂತನು ಹಚ್ಚಿಕೊಟ್ಟ ಆತ್ಮಜ್ಞಾನ ದೀಪ ಹೇಗೆ ಬಾಳೀತು? ಯಾರ ಮನವು ನಿಸ್ತಬ್ಧವೋ ಯಾರ ಕ್ರಿಯೆಗಳು ಕಾಮವಿರಹಿತವೋ ಯಾರ ಭಾವಮಂದಿರದಲ್ಲಿ ವಿಶ್ವಾತ್ಮ ಪ್ರಜ್ಞಾ ಜ್ಯೋತಿ ಮಿನುಗುತ್ತಿದೆಯೋ ಅವರಷ್ಟೇ ಯೋಗಿ-ಸನ್ಯಾಸಿಗಳು!

೨) ನಿರಗ್ನಿಃ ಅಕ್ರಿಯಃ ಚ ಸಃ— ಅಗ್ನಿಯು ಭಗವಂತನ ಸಾಕಾರ ಮೂರ್ತಿ. ಹವನವನ್ನು ಸ್ವೀಕರಿಸಿ ಹವಿತೃವಿನಲ್ಲಿ ತ್ಯಾಗಬುದ್ಧಿಯನ್ನು ಬಲ ಪಡಿಸುವ ಶಕ್ತಿ ಅದರಲ್ಲಿದೆ. ಇದು ವ್ಯಾವಹಾರಿಕ ಮಾತು. ತಾತ್ವಿಕವಾಗಿ ಹೇಳುವದಾದರೆ, ಅಗ್ನಿಯು ವಸ್ತುಪ್ರಕಾಶಕ, ಸರ್ವಭಕ್ಷಕ, ಅಜ್ಞಾನಾಂಧಕಾರ ನಾಶಕ ಮತ್ತು ಪರವಸ್ತುದರ್ಶಕ ಆತ್ಮಜ್ಞಾನದ ಕುರುಹಾಗಿದೆ. ನಿಜ ಸನ್ಯಾಸಿ ಯು ತ್ಯಾಗಶಕ್ತಿಯ ಮೂಲವಾದ ಅಗ್ನಿಯನ್ನು ತ್ಯಜಿಸುವದಿಲ್ಲ, ಪರಮ ಸೌಖ್ಯ ದಾಯಿಯಾದ ಆತ್ಮಜ್ಞಾನವನ್ನು ಉಪೇಕ್ಷಿಸುವದಿಲ್ಲ.

ಎರಡನೆಯದಾಗಿ, ನಿಜವಾದ ಯೋಗಿಯು ಸತ್ಯ ಅಹಿಂಸೆ ಅಸ್ತೇಯ ಬ್ರಹ್ಮಚರ್ಯ ಅಪರಿಗ್ರಹಾದಿ ಉನ್ನತ ಕರ್ಮಗಳಿಂದ ನಿವೃತ್ತನಾಗುವದಿಲ್ಲ (ನ ಅಕ್ರಿಯಃ). ಒಂದನೆಯ ಇಯತ್ತೆಯಲ್ಲಿ ಕಲಿತ ಅಕ್ಷರ, ಅಂಕಿಗಳನ್ನು ಪಂಡಿತನಾದ ಮೇಲೂ ಬಳಕೆ ಮಾಡುವದಿಲ್ಲವೆ? ಹಾಗೆ ಚಿತ್ತಶುದ್ಧಿಗಾಗಿ ಸಾಧಕಾವಸ್ಥೆಯಲ್ಲಿ ಪಾಲಿಸಿದ ಸತ್ಯ ಅಹಿಂಸಾದಿ ಆಚಾರ ವ್ರತಗಳನ್ನು ಮಹಾ ಯೋಗಿಯಾದ ಮೇಲೆ ಮೊದಲಿಗಿಂತ ಹೆಚ್ಚಾಗಿ ನಿರ್ವಹಿಸುತ್ತಾನೆ. ಅದೇ

ಜಾಣತನ. ಅಕ್ಷರ ಅಂಕಿಗಳನ್ನು ಮರೆತ ಬಳಿಕ ಪಾಂಡಿತ್ಯವಾದರು ಎಲ್ಲಿ ಉಳಿಯಬೇಕು? ಅಂತೆಯೇ ಆಚಾರ ನಿಯಮಗಳೇ ಸಿಥಿಲವಾದರೆ ಆತ್ಮ ಜ್ಞಾನವಾದರೂ ಹೇಗೆ ಬದುಕೀತು? ಯೋಗಿತ್ವವು ಹೇಗೆ ಸೆಲೆಸೀತು? ಆಲ ಸಿಗಳು, ವ್ಯಸನಿಗಳು ಮಾತ್ರ ಅಹಿಂಸಾದಿ ವ್ರತಗಳನ್ನು ಬಿಡುತ್ತಾರೆ! ಯೋಗಿ ಗಳಲ್ಲಿ ವ್ರತನಿಷ್ಠೆ ಹೆಚ್ಚುತ್ತದೆ. ವಿಧಿ-ನಿಯಮ ಪಾಲಿಸದವರು - ಸನ್ಯಾಸಿಗ ಳಲ್ಲ; ವ್ರತಾಚರಣೆ ಬಿಟ್ಟವರು ಯೋಗಿಗಳಲ್ಲ!!

**ಸಂಬಂಧ:–** ಅದೇಕೆ?

**ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನ ಹ್ಯಸಂನ್ಯಸ್ತ ಸಂಕಲ್ಪೋ ಯೋಗೀ ಭವತಿ ಕಶ್ಚನ ॥೨॥**

**ಅರ್ಥ:–** ಪಾಂಡವ=ಅರ್ಜುನ, ಯಂ=ಯಾವುದನ್ನು, ಸನ್ಯಾಸಂ ಇತಿ=ಸನ್ಯಾಸ ವೆಂದು ಪ್ರಾಹುಃ=ಹೇಳಿದರೋ, ತಂ=ಅದನ್ನೇ ಯೋಗಂ =ಯೋಗವೆಂದು ವಿದ್ಧಿ= ತಿಳಿ ಹಿ= ಏಕೆಂದರೆ, ಅಸನ್ಯಸ್ತ ಸಂಕಲ್ಪಃ =(ನ ಸನ್ಯಸ್ತಃ ಫಲಸಂಕಲ್ಪಃ ಯೇನ ಸಃ) ಫಲ ಸಂಕಲ್ಪ ವನ್ನು ತ್ಯಜಿಸದಿರುವ, ಕಶ್ಚನ= ಯಾವನೂ ಯೋಗೀ ನ ಭವತಿ= ಯೋಗಿಯಾಗಲಾರ.

**ವಿವರಣೆ:– ಭಗವಂತ:–** "ಪಾಂಡವ, ನಮ್ಮ ಪೂರ್ವದ ಮಹಾನು ಭಾವಿಗಳು ಯಾವುದಕ್ಕೆ ಸನ್ಯಾಸವೆಂದು ಬಣ್ಣಿಸಿದರೋ ಅದೇ ಯೋಗವೆಂದು ತಿಳಿ. ಏಕೆಂದರೆ ಕರ್ಮಫಲಾಶಾ-ತ್ಯಾಗ ರೂಪ ಸನ್ಯಾಸವಿಲ್ಲದಿರೆ ಯೋಗವಿಲ್ಲ; ಮನಶ್ಶುದ್ಧಿರೂಪ ಯೋಗವಿಲ್ಲದೆ ಸನ್ಯಾಸವಿಲ್ಲ. ಒಂದೇ ಸಾಧನೆಯ ಎರಡು ಮುಖಗಳವು."

**(೧) ಸನಾಸ್ಯ ಹಾಗು ಯೋಗಗಳು ಅಭಿನ್ನ:** ಸನ್ಯಾಸವೆಂದರೆ ಕರ್ಮ ತ್ಯಾಗವಲ್ಲ. ಕರ್ತೃಭಾವದ ಮತ್ತು ಕರ್ಮಫಲದ ತ್ಯಾಗ! ಯೋಗವೆಂದರೆ ಮನೋ ನಾಶವಲ್ಲ, ಮನೋಗತ ಕಾಮನೆಗಳ ಪ್ರಶಮನ! ತಾತ್ವಿಕವಾಗಿ ನೋಡಿದರೆ ಕರ್ತೃತ್ವ ತ್ಯಾಗ ಹಾಗು ಕರ್ಮ ಫಲಗಳ ತ್ಯಾಗವೆಂದರೂ ಕಾಮನೆಗಳ ಪ್ರಶಮನ ವೆಂದರೂ ಒಂದೇ. ಆದ್ದರಿಂದ ಸನ್ಯಾಸ ಹಾಗು ಯೋಗಗಳು ಅಭಿನ್ನ!

**(೨) ಅಸನ್ಯಸ್ತ ಸಂಕಲ್ಪನು ಎಂದಿಗೂ ಯೋಗಿಯಾಗಲಾರ:** ವಿವಿಧ ಭೋಗ ವಿಷಯಗಳನ್ನು ಗಳಿಸಬೇಕೆಂಬ ಸಂಕಲ್ಪ, ಆ ಭೋಗ ವಿಷಯಗಳು ಕೈ ಬಿಡುವಾಗ ಉಂಟಾಗುವ ವಿಕ್ಷೇಪ, ಇವೆರಡು ಮನಸ್ಸಿನ ಕಾಲುಷ್ಯಗಳು. ಈ ಕಲುಷ ಇರುವ ವರೆಗೆ ಕರ್ಮ ತೊರೆದರೇನು, ಧ್ಯಾನ್ಯಗೈದರೇನು? ಆತ ಯೋಗಿ ಯಾಗುವದು ಸಾಧ್ಯವೇ ಇಲ್ಲ. ಏಕೆಂದರೆ ಆ ಕಲುಷ ಅಥವಾ ಮಾಲಿನ್ಯವು ಹೀನ ವಾಸನೆಗಳಿಗೆ ಪ್ರಚೋದಕ. ಆ ಹೀನ ವಾಸನೆಗಳು ಸಾಧನಕ್ಕೆ ಪ್ರತಿಬಂಧಕ. ವಾಸನೆಯು ಉದ್ರೇಕಗೊಂಡರೆ ಧ್ಯಾನಕ್ಕೆ ಕುಳಿತ ಮನುಷ್ಯನನ್ನು ಎಬ್ಬಿಸಿ ಚಿತ್ರ ಮಂದಿರಕ್ಕೆ ಕರೆದೊಯ್ಯುವದು; ಶಾಸ್ತ್ರ ಶ್ರವಣ ಮಾಡುವವನನ್ನು ನಿದ್ರೆಗೆ ತೊಡಗಿಸುವದು, "ದೇವರ ಪೂಜೆ ಮಾಡು" ಎಂದು ತಾಯಿ ಹೇಳಿದರೆ, "ಬೇಕಾ

ದರೆ ಎಷ್ಟೊಂದು ಪ್ರೀತಿಯಿಂದ ತಂದೇನು. ಈ ಪೂಜೆಗೆ ಮಾತ್ರ ಹಚ್ಚಬೇಡ" ಎಂದೆನ್ನುವ ಬಾಲಕನಲ್ಲಿ ಹೀನ ವಾಸನೆಯೇ ಕಾರ್ಯ ಮಾಡುತ್ತಿದೆ. ಇದೆಲ್ಲ ಮಾನಸಿಕ ಕಲ್ಮಷದ ಆಟ. ಯೋಗಿಯಾಗಬಯಸುವವನು ಬಹು ಜಾಗ್ರತೆಯಿಂದ ಸಂಕಲ್ಪ ವಿಕಲ್ಪಗಳ ಕಳಚಿ ಚಿತ್ತಶುದ್ಧಿ ಪಡೆಯಬೇಕು. ಅದರಿಂದ ದೇವದರ್ಶನ ಹಾಗು ಚಿರಂತನ ಶಾಂತಿ.

ಸಂಬಂಧ:- ಕರ್ಮ ಮಾಡಲೇ ಬೇಕು ನಿಜ; ಆದರೆ ಎಲ್ಲಿಯವರೆಗೆ? ಯೋಗಾರೂಢನಾಗುವ ವರೆಗೆ.

**ಆರುರುಕ್ಷೋರ್ಮುನೇರ್ಯೋಗಂ ಕರ್ಮಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥೩॥**

**ಅರ್ಥ:-** ಯೋಗಂ= ಯೋಗವನ್ನು ಮುಕ್ತಿಸಾಧನಾ ಶ್ರೇಣಿಯಾದ ಜ್ಞಾನಯೋಗ ವನ್ನು) ಆರುರುಕ್ಷೋಃ =ಏರಲಿಚ್ಛಿಸುವ, ಮುನೇಃ= ಮುನಿಗೆ ಕರ್ಮ =ನಿಷ್ಕಾಮ ಕರ್ಮ ಯೋಗವು ಕಾರಣಂ= ಕಾರಣವು (ಅವಶ್ಯ) ಎಂದು ಉಚ್ಯತೇ =ಹೇಳಲ್ಪಡುತ್ತದೆ. ಯೋಗಾ ರೂಢಸ್ಯ= (ಹೃದಯ ಶುದ್ಧಿಯ ಮೂಲಕ) ಜ್ಞಾನಯೋಗವನ್ನು ಸಾಧಿಸಿದ ತಸ್ಯ ಏವ= ಅವನಿಗೆ ಜ್ಞಾನ ಪರಿಪಾಕಕ್ಕಾಗಿ, ಶಮಃ ಕಾರಣಂ ಉಚ್ಯತೇ =ಸಮಾಧಿಯೇ ಕಾರಣ ಎಂದು ಹೇಳಲ್ಪಡುತ್ತದೆ.

ವಿವರಣೆ:– ಭಗವಂತ:_ "ಭಾರತ, ಕೈವಲ್ಯ ಶಿಖರ ಬಹು ಎತ್ತರ. ನೈಸರ್ಗಿಕ ಅವಸ್ಥೆಗಳ ಆಚೆ ಅಂತರಾಳದಲ್ಲಿ ಅದು ಕಂಗೊಳಿಸುತ್ತಿದೆ. ದಯಾ ಪರನಾದ ನಾನು ಈ ಲೌಕಿಕ ಮಂಡಲದಿಂದ ಆ ಕೈವಲ್ಯ ಶಿಖರವನ್ನೇರಲು ಒಂದು ಸಮರ್ಥ ಏಣಿಯನ್ನು ರಚಿಸಿದ್ದೇನೆ; ಅದೇ ತತ್ತ್ವಗಳ ಪರಿಜ್ಞಾನ! ತನ್ನ ಅರಿವು! ಈ ಜ್ಞಾನಶ್ರೇಣಿಯನ್ನು ಏರಿಯೇ ತೀರುವೆ ಎಂದು ದೃಢ ಸಂಕಲ್ಪ ಮಾಡಿ ಕಾರ್ಯ ಪ್ರವೃತ್ತನಾದ ಸಾಧಕನಿಗೆ ಆರುರುಕ್ಷು ಎಂದು ಹೆಸರು. ಅವನು ಹೃದಯ ಶುದ್ಧಿಯ ಮೂಲಕ ಆತ್ಮಜ್ಞಾನ ಪಡೆವ ಇಚ್ಛೆಯನ್ನು ಪೂರ್ತಿ ಗೊಳಿಸಿಕೊಳ್ಳಬೇಕಾದರೆ ಒಂದೇ ಒಂದು ಮಾರ್ಗವಿದೆ; ಅದೇ ಅನಾಸಕ್ತ ಕರ್ಮಾಚರಣ.

"ಎರಡನೆಯದಾಗಿ, ಚಿತ್ತನಿರ್ಮಲತೆಯನ್ನು ಸಾಧಿಸಿದ ಸಾಧಕನು ಜೀವ ಭಾವ ತೊರೆದು 'ಅಹಂ ಬ್ರಹ್ಮಾಸ್ಮಿ' ಎಂಬ ಭಾವ ತಾಳುತ್ತಾನೆ. ಇದೇ ಆತ್ಮ ಜ್ಞಾನಾವತರಣ! ಜ್ಞಾನಶ್ರೇಣಿಯ ಅಂತಿಮ ಘಟ್ಟ. ಇಲ್ಲಿಗೆ ತಲುಪಿದ ಸಾಧಕ ನಿಗೆ ಯೋಗಾರೂಢ ಎಂದು ನಾಮ! ಅಲ್ಲಿಂದ ಅತ್ತ ಏರುವ ಕ್ರಿಯೆಯಿಲ್ಲ, ಸಾಧಿ ಸುವ ಸಿದ್ಧಿ ಇಲ್ಲ; ಕಾರ್ಯ ಸಾಧನವಾದ ಮನಸ್ಸು ಅಲ್ಲಿಗೆ ಪ್ರಶಾಂತ!

ಮನಸ್ಸು ವಿಶಾಲವಾದ ಸರಸ್ಸು. ಅದರಲ್ಲಿ ಅಸಂಖ್ಯ ವೃತ್ತಿಗಳು, ವಾಸನೆ ಗಳು, ಭೋಗೇಚ್ಛೆಗಳು ಹಾಗು ವಿಭಿನ್ನ ಸಂಕಲ್ಪ–ವಿಕಲ್ಪಗಳು ಸುಳಿದಾಡುತ್ತಿವೆ. ಬಾಹ್ಯ ವಿಷಯ ದರ್ಶನದ ನಿಮಿತ್ತವಾಗಿಯೋ, ಆಂತರಿಕ ವಿಷಯಾಲೋಚ

ನೆಯ ನಿಮಿತ್ತವಾಗಿಯೋ ಅವು ಉದ್ರೇಕಗೊಳ್ಳುತ್ತವೆ; ಹೃದಯ ಸರಸ್ಸು ಸಂಪೂರ್ಣ ಕಲಕಿಬಿಡುತ್ತದೆ. ಕೆಳಗಿರುವ ರಾಗ-ದ್ವೇಷರೂಪ ರಾಡಿ ಎದ್ದು ಮನಸ್ಸನ್ನೆಲ್ಲ ತುಂಬಿಕೊಳ್ಳುತ್ತದೆ. ಹೀಗೆ ಕಲುಷಿತವಾದ ಪ್ರಕ್ಷುಬ್ಧ ಮನಸ್ಸು ಅಂತರ್ಯಾಮಿ ದೇವನನ್ನು ಅದೆಂತು ತೋರಿಸೀತು?

ಇದನ್ನು ಸಾಧಿಸುವ ಯೋಗಸಾಧನೆಗೆ ಎರಡು ಅಂಗ: (೧) ಪೂರ್ವಾಂಗ (೨) ಉತ್ತರಾಂಗ (೧). ಪೂರ್ವಾಂಗ: ಯಮ, ನಿಯಮ, ಆಸನ, ಪ್ರಾಣಾಯಾಮ ಪ್ರತ್ಯಾಹಾರ ಧಾರಣ ಹಾಗು ಧ್ಯಾನಗಳಿಂದ ಕೂಡಿದುದು. ಇದರಿಂದ ಚಿತ್ತತರಂಗಗಳು ಅಡಗುತ್ತವೆ; ಮನಶುದ್ಧಿ ಉಂಟಾಗುತ್ತದೆ. (೨) ಉತ್ತರಾಂಗ: ಸವಿತರ್ಕ, ನಿರ್ವಿತರ್ಕ, ಸವಿಚಾರ, ನಿರ್ವಿಚಾರ, ಸಾನಂದ, ಸಾಸ್ಮಿತಾ ಸಮಾಧಿಗಳಿಂದ ಕೂಡಿದೆ. ಬಾಹ್ಯ ವಿಷಯಗಳಲ್ಲಿ ನಿರ್ಮೋಹಗೊಂಡ ಮನಸ್ಸು ಅಂತರ್ಮುಖವಾಗುತ್ತದೆ, ಬಳಿಕ ಅಂತರ್ಜ್ಯೋತಿರಾತ್ಮನಲ್ಲಿ ತಲ್ಲೀನಗೊಳ್ಳುತ್ತದೆ.

ಪೂರ್ವಾಂಗಯೋಗದಲ್ಲಿ ಪರಿಣತಿ ಅಳವಡಬೇಕಾದರೆ ನಿಷ್ಕಾಮ ಕರ್ಮವು ಕಾರಣ ( ಅಗತ್ಯ ). ಉತ್ತರಾಂಗ ಯೋಗದಲ್ಲಿ ಪರಿಣತಿ ಉಂಟಾಗಬೇಕಾದರೆ 'ಶಮ' ( ಸರ್ವಚಿತ್ತವೃತ್ತಿಗಳ ಉಪಶಮನವು ) ಕಾರಣ (ಅವಶ್ಯ). ಪೂರ್ವಾಂಗದ ಸಾಧಕನು ಆರುರುಕ್ಷು. ಉತ್ತರಾಂಗದ ಸಿದ್ಧನು ಯೋಗಾರೂಢ.

ಆರುರುಕ್ಷುಃ:-ಆರೋಢುಂ ಇಚ್ಛುಃ =ಆರುರುಕ್ಷುಃ. ಯೋಗದ ಎಂಟೂ ಹಂತಗಳನ್ನು ಎಂಥ ಪ್ರಸಂಗ ಬಂದರೂ ಏರಿಯೇ ತೀರುವೆನೆಂಬ ಛಲವುಳ್ಳವನು ಆರುರುಕ್ಷು. ಲೌಕಿಕ ಭೋಗ ಸಂಪದವನ್ನು ಬೀಸಾಡಿ ಚೆನ್ನಮಲ್ಲಿಕಾರ್ಜುನನತ್ತ ಸಾಗಿದ್ದ ಅಕ್ಕಮಹಾದೇವಿಯು ಆದರ್ಶ ಆರುರುಕ್ಷು.

ಆರುರುಕ್ಷುವು ತನ್ನ ನಿರ್ಮಲ ಬಯಕೆಯನ್ನು ಪೂರ್ತಿಗೊಳಿಸಬೇಕಾದರೆ "ತಪಸ್ಸ್ವಾಧ್ಯಾಯೇಶ್ವರಪ್ರಣಿಧಾನಾನಿ ಕ್ರಿಯಾಯೋಗಃ"ತಪಸ್ಸು, ಸ್ವಾಧ್ಯಾಯ, ಈಶ್ವರ ಪ್ರಣಿಧಾನಗಳೆಂಬ ಕರ್ಮಯೋಗವನ್ನು ನಿಷ್ಕಾಮ ಭಾವನೆಯಿಂದ ಬಹು ದೀರ್ಘಕಾಲ ಆಚರಿಸಬೇಕು. ಹಾಗೆ ಮಾಡಿದರೆ ಅವನು ಯೋಗಾರೂಢನಾಗುತ್ತಾನೆ.

ಸಂಬಂಧ:- ಆ ಯೋಗಾರೂಢನ ಲಕ್ಷಣಗಳ ವಿವರಣೆ ಮುಂದಿನ ಮಂತ್ರದಲ್ಲಿದೆ.

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪ ಸನ್ಯಾಸೀ ಯೋಗಾರೂಢಸ್ತದೋಚ್ಯತೆ ॥೪॥**

ಅರ್ಥ:- ಯದಾಹಿ = ಯಾವಾಗ ಇಂದ್ರಿಯಾರ್ಥೇಷು = ಇಂದ್ರಿಯ ವಿಷಯಗಳಲ್ಲಿ, ಕರ್ಮಸು = ಇಂದ್ರಿಯಕರ್ಮಗಳಲ್ಲಿ ನ ಅನುಷಜ್ಜತೇ = ಆಸಕ್ತನಾಗುವದಿಲ್ಲವೋ ಆಗ ಸರ್ವಸಂಕಲ್ಪ ಸನ್ಯಾಸೀ = ಸರ್ವಸಂಕಲ್ಪಗಳನ್ನು ವರ್ಜಿಸುತ್ತಾನೆಯೋ ತದಾ = ಯೋಗಾರೂಢಃ = ಯೋಗಾರೂಢನು ಎಂದು ಉಚ್ಯತೇ = ಹೇಳಲ್ಪಡುತ್ತಾನೆ.

ವಿವರಣೆ:- ಭಗವಂತ:- "ಕುರುಸತ್ತಮ, ಉಚಿತವಾಗಿ ಬರೆ ಕೊಡುತ್ತಾರೆಂದು ಯಾವ ಜಾಣನೂ ಮೈಯೊಡ್ಡಲಾರನಲ್ಲವೆ? ಹಾಗೆ, ಶಬ್ದಾದಿ ವಿಷಯಗಳು ಉಚಿತವಾಗಿ ಹಾಗು ಹೇರಳವಾಗಿ ದೊರೆತರೂ ಯೋಗಾರೂಢ ಮಹಾತ್ಮನು ಅವುಗಳಲ್ಲಿ ರಮಮಾಣನಾಗಲಾರ. ಇಂದ್ರಿಯ ವ್ಯವಹಾರಗಳೆಲ್ಲ ಅವನಿಗೆ ಅಪಥ್ಯ. ಇಹ ಪರ ಭೋಗ ವೈಭವಗಳ ಕಾಮನೆಗೆ ಅವನಲ್ಲಿ ತಿಲಮಾತ್ರ ಅವಕಾಶವೂ ಇಲ್ಲ. ಅನಾತ್ಮ ವಸ್ತುಗಳ ವಿಷಯದಲ್ಲಿ ಉಂಟಾಗುವ ಸರ್ವ ಸಂಕಲ್ಪಗಳನ್ನು ಅವನು ಸಂಪೂರ್ಣ ವರ್ಜಿಸಿದ್ದಾನೆ."

ಸಂಬಂಧ:- ವಿಷಯಾಸಕ್ತಿಯ ತ್ಯಾಗವೇ ಮೋಕ್ಷಕ್ಕೆ ಕಾರಣ; ವಿಷಯಾಸಕ್ತಿಯ ವರ್ಧನೆಯೇ ಆತ್ಮವಿನಾಶಕ್ಕೆ ಕಾರಣ. ವಿಷಯಾಸಕ್ತಿಯ ತ್ಯಾಗಿಯು ಯೋಗಿ; ವಿಷಯಾಸಕ್ತ ಜೀವಿಯು ಸಂಸಾರಿ. ಈ ಸಂಗತಿಯ ವಿವೇಚನೆ ಮುಂದಿನ ಮಂತ್ರದಲ್ಲಿದೆ.

ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥೫॥

ಅರ್ಥ:-ಆತ್ಮನಾ = (ವಿವೇಕ, ವಿರಾಗ ಯುಕ್ತ) ಮನಸ್ಸಿನಿಂದ, ಆತ್ಮಾನಂ= (ಸಂಸಾರದಲ್ಲಿ ಮುಳುಗಿದ) ತನ್ನನ್ನು, ಉದ್ಧರೇತ್= ಉದ್ಧರಿಸಬೇಕು. ಆತ್ಮಾನಂ =ತನ್ನನ್ನು ನ ಅವಸಾದಯೇತ್= ಪತನಗೊಳಿಸಬಾರದು. ಹಿ =ಏಕೆಂದರೆ, ಆತ್ಮಾ ಏವ= ತಾನೇ. ಆತ್ಮನಃ = ತನ್ನ ಬಂಧುಃ=ಬಂಧುವು; ಆತ್ಮಾ ಏವ=ತಾನೇ ಆತ್ಮನಃ= ತನ್ನ ರಿಪುಃ=ವೈರಿಯು.

ವಿವರಣೆ:- "ಭರತೋತ್ತಮ, ಜೀವನು ಬಹು ಆಳವಾಗಿ ಸಂಸಾರ ಸಾಗರದಲ್ಲಿ ಮುಳುಗಿದ್ದಾನೆ. ಅವನನ್ನು ಬೇರೆ ಯಾರೂ ಎತ್ತಲಾರರು. ತನ್ನ ಮನಸ್ಸನ್ನು ನಿಷ್ಕಲ್ಮಷಗೊಳಿಸಿ ಅದರ ಸಹಾಯದಿಂದ ತನ್ನನ್ನು ತಾನೇ ಎತ್ತಬೇಕು; ಸಂಸಾರ ಆಮಯದಿಂದ ಪಾರು ಮಾಡಬೇಕು. ಕಾಮಾದಿಗಳ ಬಲಿಗೆ ಬಿದ್ದು ತನ್ನನ್ನು ಇನ್ನಷ್ಟು ಅಧಃಪತನಗೊಳಿಸುವದು ತರವಲ್ಲ. ನಿಜವಾಗಿ ಹೇಳ ಬೇಕಾದರೆ, ತನಗೆ ತಾನೇ ಮಿತ್ರ, ತನಗೆ ತಾನೇ ವೈರಿ." ಇದು ಭಗವಂತನ ಮಾರ್ಮಿಕ ನುಡಿ.

(೮) ಜಗತ್ತಿನ ಮಹಾ ಆಧಾರವಾದ ಅಖಂಡ, ಅವಿಚಲ, ಅಮರ ದೇವನನ್ನು ಕಾಣದೆ ಅಶಾಶ್ವತ ಹಾಗು ಮಾಯಿಕ ವಿಷಯಗಳಲ್ಲಿ ಮನಸ್ಸು ಮಗ್ನವಾದರೆ ಆ ಮನೋಗತ ಜೀವಚೈತನ್ಯ ಪುರುಷನು ಭವಬದ್ಧನಾಗುತ್ತಾನೆ; ಮನೋತರಂಗಗಳಾದ ರಾಗ ದ್ವೇಷಗಳ ಸುಳಿಗೆ ಸಿಲುಕುತ್ತಾನೆ. ಅದೇ ಮನಸ್ಸು ಬಾಹ್ಯದ ನಾಮ ರೂಪುಗಳ ವ್ಯಾಮೋಹ ತೊರೆದು ಅನಂತ ದೇವನತ್ತ ಪ್ರವಹಿಸಿ ಅವನ ಆಕಾರಗೊಂಡರೆ ಜೀವಪುರುಷನು ಭಾವಬಂಧನಗಳಿಂದ ಮುಕ್ತನಾಗುತ್ತಾನೆ, ತನ್ನ ಮೂಲ ಸ್ವರೂಪದಲ್ಲಿ ಒಂದಾಗುತ್ತಾನೆ. ಇಂತು ಮನವೇ ಬಂಧ ಮುಕ್ತಿಗಳಿಗೆ ಕಾರಣ.

(೨) ಇನ್ನು ಯೋಗಶಾಸ್ತ್ರದ ಪದ್ಧತಿಯಂತೆ ಹೇಳುವದಾದರೆ, ಮನಸ್ಸು ಪ್ರಮಾಣ ವಿಪರ್ಯಾಯ ವಿಕಲ್ಪ ನಿದ್ರಾ ಮತ್ತು ಸ್ಮೃತಿ ಎಂಬ ಐದು ವೃತ್ತಿಗಳಿಗೆ ಸ್ಥಾನವಾಗಿದೆ; ಈ ಐದು ವೃತ್ತಿಗಳು ಸತ್ಯದರ್ಶನಕ್ಕೆ ಸಾಧಕವಾಗಿದ್ದರೆ ಆ ಮನಸ್ಸಿಗೆ ಶುದ್ಧ ಮನಸ್ಸೆಂದು ತಿಳಿಯಬೇಕು; ಬಾಧಕವಾಗಿದ್ದರೆ ಅಂಥ ಮನಸ್ಸು ಅಶುದ್ಧವೆಂದು ಭಾವಿಸಬೇಕು. ಅಶುದ್ಧ ಮನಸ್ಸಿನಿಂದ ಜೀವನು ಬದ್ಧನಾಗುತ್ತಾನೆ; ಶುದ್ಧ ಮನಸ್ಸಿನಿಂದ ಜೀವನು ಸತ್ಯಸಾಕ್ಷಾತ್ಕಾರಪಡೆದು ಮುಕ್ತನಾಗುತ್ತಾನೆ.

### ಪಂಚ ವೃತ್ತಿಗಳ ಸಂಕ್ಷಿಪ್ತ ವಿವರ:

(ಅ) ಪ್ರಮಾಣವೃತ್ತಿ:– ಪ್ರಮಾರೂಪ ಜ್ಞಾನಕ್ಕೆ ಕಾರಣವಾದ ಮನೋವೃತ್ತಿಯು ಪ್ರಮಾಣ: ಇದು ಮೂರು ವಿಧ. (೧) ಪ್ರತ್ಯಕ್ಷ ಪ್ರಮಾಣವೃತ್ತಿ: ಪ್ರತ್ಯಕ್ಷ ಪ್ರಮೆಗೆ ಕಾರಣವಾದುದು ಪ್ರತ್ಯಕ್ಷ ಪ್ರಮಾಣ. (ಉದಾ: ಹೂವಿನ ಆಕಾರ, ವರ್ಣಗಳ ಜ್ಞಾನವು ಪ್ರತ್ಯಕ್ಷ ಪ್ರಮಾ. ಮನಸ್ಸಂಯುಕ್ತ ನೇತ್ರವು ಪ್ರತ್ಯಕ್ಷ ಪ್ರಮಾಣ). ಆ ಪ್ರಮಾಣದಲ್ಲಿರುವ ಮನೋವೃತ್ತಿಯೇ ಪ್ರತ್ಯಕ್ಷ ಪ್ರಮಾಣವೃತ್ತಿ.

೨) ಅನುಮಾನ ಪ್ರಮಾಣವೃತ್ತಿ:– ಅನುಮಿತಿಗೆ ಕಾರಣವಾದುದು ಅನುಮಾನ ಪ್ರಮಾಣವು. ಅದರ ಜ್ಞಾನವು ಅನುಮಾನ ಪ್ರಮಾಣವೃತ್ತಿ. (ಉದಾ:– ಪರ್ವತ ಪಕ್ಷದಲ್ಲಿ ಸಾಧ್ಯರೂಪ ಅಗ್ನಿಯ ಸಿದ್ಧತೆಗಾಗಿ ಕಾರಣವಾದುದು ಧೂಮರೂಪ ಹೇತು. ಅದುವೇ ಅನುಮಾನ ಪ್ರಮಾಣ. ಆ ಧೂಮದ ಜ್ಞಾನವೇ ಅನುಮಾನ ಪ್ರಮಾಣವೃತ್ತಿ).

೩) ಶಾಬ್ದ ಪ್ರಮಾಣ ವೃತ್ತಿ:– ಶಾಬ್ದಬೋಧಕ್ಕೆ ಕಾರಣವಾದುದು ಶಬ್ದ ಪ್ರಮಾಣ. ಅದರ (ಶಬ್ದ ಹಾಗು ಶಬ್ದಾರ್ಥ ಸಂಬಂಧದ) ಜ್ಞಾನವು ಶಬ್ದ ಪ್ರಮಾಣವೃತ್ತಿ. (ಉದಾ:– ನಮಗೆ ಅದೃಶ್ಯವಾದ ವಸ್ತುವಿನ ಜ್ಞಾನಕ್ಕೆ ಕಾರಣವಾದ ಆಪ್ತ ಪುರುಷನ ವಚನವು ಶಬ್ದಪ್ರಮಾಣ. ಆ ಶಬ್ದ ಹಾಗು ಶಬ್ದಾರ್ಥಗಳ ಮಧ್ಯದ ಸಂಬಂಧದ ಜ್ಞಾನವು ಶಬ್ದ ಪ್ರಮಾಣವೃತ್ತಿ.)

ಬ) ವಿಪರ್ಯಯವೃತ್ತಿ:– "ವಿಪರ್ಯಯೋ ಮಿಥ್ಯಾಜ್ಞಾನಮತದ್ರೂಪಪ್ರತಿಷ್ಠಂ." ಇದ್ದ ವಸ್ತುವಿನಲ್ಲಿ ಇಲ್ಲದ ವಸ್ತುವನ್ನು ಭಾವಿಸುವದು ವಿಪರ್ಯಯವೃತ್ತಿ. (ಉದಾ:– ಇದ್ದ ಹಗ್ಗದಲ್ಲಿ ಇಲ್ಲದ ಹಾವನ್ನು ಕಾಣುವದು ವಿಪರ್ಯಯ).

ಕ) ವಿಕಲ್ಪವೃತ್ತಿ:–"ಶಬ್ದಜ್ಞಾನಾನುಪಾತೀ ವಸ್ತುಶೂನ್ಯೋ ವಿಕಲ್ಪಃ" ವಸ್ತುವಿಲ್ಲದೆ ಬರಿ ಶಬ್ದಾನುಸಾರ ಉಂಟಾಗುವ ಜ್ಞಾನಕ್ಕೆ ಕಾರಣವು ವಿಕಲ್ಪವೃತ್ತಿ. (ಉದಾ:– ಗಗನ ಕುಸುಮ, ಬಂಧ್ಯಾ ಪುತ್ರ, ಇತ್ಯಾದಿ).

(ಡ) ನಿದ್ರಾವೃತ್ತಿ:- "ಅಭಾವ ಪ್ರತ್ಯಯಾಲಂಬನವೃತ್ತಿರ್ನಿದ್ರಾ" ಜಾಗ್ರ ಹಾಗು ಸ್ವಪ್ನ ವೃತ್ತಿಗಳ ಅಭಾವದ ಆಕಾರದ ವೃತ್ತಿಯು ನಿದ್ರಾ.

(ಇ) ಸ್ಮೃತಿವೃತ್ತಿ:– " ಅನುಭೂತ ವಿಷಯಾಸಂಪ್ರಮೋಷಃ ಸ್ಮೃತಿಃ " ಪೂರ್ವಾನುಭೂತ ವಿಷಯಗಳ ಆಕಾರ ತಾಳುವಂಥದು ಸ್ಮೃತಿವೃತ್ತಿ.

ಅಭ್ಯಾಸ, ವೈರಾಗ್ಯ, ಶ್ರದ್ಧಾ, ವೀರ್ಯ, ಸ್ಮೃತಿ, ಸಮಾಧಾನ, ಪ್ರಜ್ಞಾ, ಮೈತ್ರಿ, ಕರುಣಾ, ಮುದಿತಾ, ಉಪೇಕ್ಷಾ, ಸವಿಕಲ್ಪ, ನಿರ್ವಿಕಲ್ಪ ಎಂಬ ಪವಿತ್ರ ವೃತ್ತಿಗಳಿಗೆ ಸಾಧಕವಾದರೆ ಈ ಪ್ರಮಾಣಾದಿ ಪಂಚ ವೃತ್ತಿಗಳು ಅಕ್ಲಿಷ್ಟವೆನಿಸು ತ್ತವೆ; ಬಾಧಕವಾದರೆ ಕ್ಲಿಷ್ಟವೆನಿಸುತ್ತವೆ. ಅಕ್ಲಿಷ್ಟವೃತ್ತಿಗಳುಳ್ಳ ಮನಸ್ಸೇ ನಿಷ್ಕಲ್ಮಷ. ಕ್ಲಿಷ್ಟ ವೃತ್ತಿಯುಳ್ಳ ಮನಸ್ಸು ಅಶುದ್ಧ.

ತನ್ನನ್ನು ತಾನು ಅಧೋಗತಿಗಿಳಿಸಬಾರದು. ಕ್ಲಿಷ್ಟ ವೃತ್ತಿಗಳಿಗೆ ಆಸ್ಪದ ನೀಡಿ, ಮನಸ್ಸನ್ನು ಕಾಮಾದಿಗಳ ನಾಟ್ಯ ಕ್ಷೇತ್ರವನ್ನಾಗಿಸಿ, ವಿಷಯ ಲಾಲಸೆಗೆ ಬಲಿ ಬೀಳಬಾರದು. ಏಕೆಂದರೆ, ಆತ್ಮಾವಸಾದನ ಮಾಡಿಕೊಂಡವರು ಆತ್ಮ ಹನೋಜನಾಃ. ಆತ್ಮಘಾತಕರು! ಅವರು,

ಅಸುರ್ಯಾನಾಮ ತೇ ಲೋಕಾಃ ಅಂಧೇನ ತಮಸಾವೃತಾಃ ।
ತಾನ್ ತೇಃ ಪ್ರೇತ್ಯಾಭಿಗಚ್ಛಂತಿ ಯೇಕೇಚಾತ್ಮ ಹನೋ ಜನಾಃ ॥

ಅಸುರೀ ಎಂದು ಪ್ರಸಿದ್ಧವಾದ ಲೋಕಗಳು ತಮಂಧಕಾರದಿಂದ ಆವೃತವಾಗಿವೆ. ಯಾರು ಆತ್ಮಘಾತಿಗಳೋ ಆ ಜನರು ಸತ್ತಬಳಿಕ ಆ ಭಯಂಕರ ಲೋಕಗಳಿಗೆ ಮತ್ತೆ ಮತ್ತೆ ಹೋಗುತ್ತಾರೆ( ಈ. ಉ. ೩. ). ಸ್ವರ್ಗ ಕೂಡ ಒಂದು ವಿಧದ ಆಸುರೀ ಲೋಕವೇ ಸರಿ. ಅಲ್ಲಿಯೂ ರಾಗ ದ್ವೇಷಗಳಿವೆ, ವೈರ ಅಸೂಯ ಗಳಿವೆ. ಉದಾ: ತ್ರಿಷ್ಟಪ ಬ್ರಾಹ್ಮಣನು ಇಂದ್ರ ಪದವಿಯನ್ನು ಪಡೆಯಲಿದ್ದಾನೆ ಎಂಬ ವಾರ್ತೆ ಕೇಳಿದ ಇಂದ್ರನು ತಪ್ತನಾದ; ಅಸೂಯೆ ಹಾಗು ಕ್ರೋಧದ ಭರ ದಲ್ಲಿ ಆ ಬ್ರಾಹ್ಮಣನನ್ನೇ ಕೊಲೆಗೈದ! ಆಸೆಯ ಬೆನ್ನುಹತ್ತಿ ಜೀವರುಗಳು ಸ್ವರ್ಗ ನರಕಗಳಂಥ ಗತಿ ಹೊಂದಬಾರದು, ಎನ್ನುವದು ಭಗವಂತನ ಆಶಯ. ಅಮೌಲ್ಯವಾದ ದೇಹ ಮತ್ತು ಮನಸ್ಸುಗಳನ್ನು ಹೀನ ವಸ್ತು ಪ್ರಾಪ್ತಿಗಾಗಿ ವ್ಯಯ ಮಾಡುವಲ್ಲಿ ಅದಾವ ಬುದ್ಧಿವಂತಿಕೆ ಇದೆ?

ತಾನೇ ತನಗೆ ಬಂಧು, ತಾನೇ ತನಗೆ ವೈರಿ. ಈ ಮಾತಿಗೆ ಒಂದು ಪ್ರಮಾಣ ವಚನ ಇಲ್ಲಿದ್ದೆ;

ಸುಖಸ್ಯ ದುಃಖಸ್ಯ ನ ಕೋಪಿ ದಾತಾ ಪರೋ ದದಾತೀತಿ ಕುಬುದ್ಧಿರೇಷಾ।
ಅಹಂ ಕರೋಮೀತಿ ವೃಥಾಭಿಮಾನಃ ಸ್ವಕರ್ಮಸೂತ್ರೇಣ ಗ್ರಥಿತೋಹಿ ಲೋಕಃ ॥

ಸುಖ ದುಃಖ ಕೊಡುವವರು ಬೇರಾರೂ ಇಲ್ಲ. ಇನ್ನೊಬ್ಬರು ಕೊಡು ತ್ತಾರೆ ಎಂಬುದು ಕುಬುದ್ಧಿಯಾಗಿದೆ. ನಾನು ಮಾಡುವೆನೆಂದು ವೃಥಾಭಿಮಾನ ಪಡುವ ಜನವಿದು ತನ್ನ ಕರ್ಮ ಸೂತ್ರದಿಂದ ತಾನೇ ಬದ್ಧವಾಗಿದೆ. ಈ ಪ್ರಮಾ

ಣವು ಸ್ಪಷ್ಟಪಡಿಸಿದಂತೆ ತನ್ನನ್ನು ಕಾಪಾಡುವವರು ಅಥವಾ ಕೆಡಿಸುವವರು ಬೇರಾರೂ ಅಲ್ಲ; ತಾನೇ. ಮನಸ್ಸನ್ನು ಪರಿಮಲಗೊಳಿಸಿಕೊಂಡಾಗ ತಾನೇ ತನಗೆ ಬಂಧು, ತಾರಕ! ಮನಸ್ಸನ್ನು ಹೊಲಸು ಮಾಡಿಕೊಂಡಾಗ ತಾನೇ ತನಗೆ ರಿಪು, ಮಾರಕ!!

**ಸಂಬಂಧ:**- ಪ್ರಸ್ತುತ ವಿಷಯ ಮುಂದುವರೆದಿದೆ.

**ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ॥೬॥**

**ಅರ್ಥ:**- ಯೇನ= ಯಾವ ಮನುಷ್ಯನಿಂದ, ಆತ್ಮನಾ= ನಿರ್ಮಲ ಮನದ ಮೂಲಕ ಆತ್ಮಾ= ಕಾರ್ಯ, ಕಾರಣ ಸಂಘಾತ ರೂಪ ದೇಹಾದಿಗಳ ಗುಂಪು, ಜಿತಃ = ವಶೀಕೃತವಾಗಿದೆಯೋ, ತಸ್ಯ = ಅವನಿಗೆ, ಆತ್ಮಾಏವ = ಆ ಮನವೇ ಬಂಧುಃ = ಬಂಧುವು, ತು = ಆದರೆ, ಅನಾತ್ಮನಃ = ಅಜಿತಾತ್ಮನಿಗೆ, ಆತ್ಮಾಏವ = ತನ್ನ ಮನಸ್ಸೇ ಶತ್ರುವತ್ = ವೈರಿಯಂತೆ ಶತ್ರುತ್ವೇ = ದ್ವೇಷ ಭಾವದಲ್ಲಿ ವರ್ತೇತ = ವರ್ತಿಸುತ್ತದೆ.

**ವಿವರಣೆ:- ಬಂಧುರಾತ್ಮಾ ಆತ್ಮನಃ ಯೇನ ಆತ್ಮಾ ಆತ್ಮನಾ ಜಿತಃ** :- ನಮ್ಮ ಬಂಧುಗಳು ಯಾರು? ನಮ್ಮನ್ನು ದುಃಖ ಪ್ರಪಾತಕ್ಕೆ ನೂಕುವವರು ಬಂಧುಗಳಲ್ಲ, ವೈರಿಗಳು. ರಕ್ಕಸಿಯಾದ ತಾಯಿ ತನ್ನ ಮಗುವನ್ನೇ ಮುರಿದು ತಿನ್ನುವಂತೆ ನಾವೆಲ್ಲರು ನಂಬಿದ ದೇಹ ಮತ್ತು ಇಂದ್ರಿಯಗಳು ನಮ್ಮ ಅಂತ ಶ್ಶಾಂತಿಯನ್ನೇ ಕಬಳಿಸುತ್ತವೆ. ಅವು ಸದಾ ಬಾಹ್ಯ ವಿಷಯ ಸ್ಪರ್ಶಿಸಲು ಹಾತೊರೆಯುತ್ತವೆ. ಇವುಗಳನ್ನು ತೃಪ್ತಿಪಡಿಸಲು ಬಾಹ್ಯಾಂತರ ಶಕ್ತಿಯನ್ನೆಲ್ಲ ವ್ಯಯ ಮಾಡುತ್ತೇವೆ. ಆ ವ್ಯಯದಿಂದ ದೊರೆವ ಫಲ ಮಾತ್ರ ಭೂರಿ ದುಃಖ!

ನಮ್ಮ ಸ್ವರೂಪದ ತಿಳಿವನ್ನು ನಮಗೆ ನೀಡುವ ಗುರು ಹಾಗು ಶಾಸ್ತ್ರಗಳು ನಮ್ಮ ನಿಜ ಬಂಧುಗಳು. ವಿರಾಗ ವಿವೇಕ ಹಾಗು ಸದ್ಗುಣದಿಂದ ಕೂಡಿದ ಸಾತ್ವಿಕ ಮನಸ್ಸೇ ನಮ್ಮ ಸುಹೃದ! ಹಿತೈಷಿ! ಶುದ್ಧ ಮನೋಗತ ಶಾಂತಿದಾಂತಿಗಳೇ ನಮ್ಮ ನಲವಿನ ಮಿತ್ರರು! ಬಾಂಧವರು!

ಯೋಗಿಯ ಪರಿವಾರ ಕುರಿತು ಶ್ರೀ ನಿಜಗುಣ ಶಿವಯೋಗಿಗಳು ಒಂದು ಮಾರ್ಮಿಕ ಪದ ರಚಿಸಿದ್ದಾರೆ. ಅದು ಇಲ್ಲಿ ಅವಲೋಕನೀಯ:

"ಯೋಗಿಗೆ ಸಕಲ ಸಂಸಾರ ಸಂಗವದಿಲ್ಲ। ವಾಗಿ ತಿಳಿವರದು ಮಸಿ ನೋಡು ರಮಣೆ ।ಪ। ವರ ವಿದ್ಯೆಯೆಂಬ ಕುಲವನಿತೆಯುಂಟಗಲದ। ಪರಿತೋಷವೆಂಬ ಮೋಹ ದಣುಗನುಂಟು।। ವಿರತಿಯೆಂಬನುಕೂಲ ಜನಮುಂಟು ಕ್ಷಮೆಯೆಂಬ। ಚರನುಂಟು ಶಾಂತಿಯೆಂಬ ಸಖಿನ ಸರಸಮುಂಟು ॥೧॥ ನುತ ಭಕ್ತಿಯೆಂಬ ಮಾತೆಯುಂಟು ಸುಚ। ರಿತವೆಂಬ ಪಿತನುಂಟು ಸತ್ಯವೆಂಬ ಕುವರಿಯುಂಟು॥ ಹಿತವಾದ ನಂಬುಗೆಯೆಂಬಾಪ್ತ ಜನರ ಸೇವೆಯುಂಟು। ಮತಿಯೆಂಬ ಗೇಹ ಮುಂಟಾಚಾರವೆಂಬ ಕ್ಷೇತ್ರಮುಂಟು॥ ದಾಸಿಯುಂಟಹಿಂಸೆಯೆಂಬ ದಾಕ್ಷಿಣ್ಯಟಸ್ತೇಯವೆಂಬ। ಲೇಸನೀವ ಧರ್ಮವೆಂಬ ವಾಹನ

ಮುಂಟು ॥೨॥ ಭಾಸುರ ಮೈತ್ರ್ಯಾದಿಯೆಂಬ ಪೌತ್ರರುಂಟು। ಮುಕ್ತಿಯೆಂಬ। ದೇಶ ಮುಂಟು ಶಂಭುಲಿಂಗವೆಂಬ ಗುರುತನವುಂಟು ॥೩॥

ಶಮೋ ದಮೋ ವಿವೇಕಶ್ಚ ವೈರಾಗ್ಯಂ ಪೂರ್ಣ ಭಾವನಾ ।
ಕ್ಷಾಂತಿಃ ಕಾರುಣ್ಯ ಸಂಪತ್ತಿಃ ಶ್ರದ್ಧಾ ಸತ್ಯ ಸಮುದ್ಭವಾ ॥
ಶಿವಭಕ್ತಿಃ ಪರೋಧರ್ಮಃ ಶಿವಜ್ಞಾನಸ್ಯ ಬಾಂಧವಾಃ ।
ಏತೈರ್ಯುಕ್ತೋ ಮಹಾಯೋಗೀ ಸಾತ್ವಿಕಃ ಪರಿಕೀರ್ತಿತಃ ॥

ಶಮ ದಮ ವಿವೇಕ ವಿರಾಗ ಪೂರ್ಣಭಾವನಾ ಕ್ಷಾಂತಿ ಕಾರುಣ್ಯಸಂಪತ್ತಿ ಸತ್ಯೋದಿತಶ್ರದ್ಧಾ ಶಿವಭಕ್ತಿ ಹಾಗು ಪರೋಧರ್ಮ-ಇವೇ ಶಿವಜ್ಞಾನದ ಬಾಂಧವರು. ಇವುಗಳಿಂದ ಕೂಡಿದ ಸಾತ್ವಿಕನೇ ಮಹಾಯೋಗಿ. ॥ವೀರಶೈವ ಸಿದ್ಧಾಂತ ಶಿಖಾಮಣಿ॥

ಸಾತ್ವಿಕ ಮನಸ್ಸಿನ ಯೋಗಿಯು ವಿಷಯಗಳ ನಡುವಿದ್ದರೂ ಅವುಗಳ ಆಕರ್ಷಣೆಗೆ ಬಲಿಯಾಗಲಾರ. ಅವನು ಎಲ್ಲವನ್ನು ನೋಡಿಯೂ ಅಂಧ, ಕೇಳಿಯೂ ಕಿವುಡ! ಅವನು ನಿರ್ಲಿಪ್ತ, ನಿರಾಮಯ. ಒಲಿದು ಬಂದ ಸುರ ಸುಂದರ ಹೊಲತಿಯರನ್ನು ಮನಸ್ಸಿನಲ್ಲೂ ಆಶಿಸದ ಹರಿಶ್ಚಂದ್ರನು, ಧರ್ಮ ಪತ್ನಿಯಲ್ಲಿ ಮಹಾಕಾಳಿಕಾ ದೇವಿಯನ್ನು ಕಂಡ ಶ್ರೀ ರಾಮಕೃಷ್ಣರು ಸಾತ್ವಿಕ ಯೋಗಿಗಳ ಮಾದರಿಯಾಗಿದ್ದಾರೆ.

ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್:- ಭಗವಂತ:- "ಒಂದು ವೇಳೆ, ನಿನ್ನ ಆ ಮನಸ್ಸು ಇಂದ್ರಿಯ ಹಾಗು ಅನಾತ್ಮ ವಿಷಯ ಗಳ ಆಕರ್ಷಣೆಗೆ ಸಿಕ್ಕು ಹೊರಹರಿದರೆ ಅದುವೇ ನಿನ್ನ ನಿಜ ವೈರಿ ಎಂದು ಭಾವಿಸು. ನಿನ್ನನ್ನದು ಘೋರ ಭವದಲ್ಲಿಕ್ಕುವದು ಖಚಿತ."

ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।
ಶೀತೋಷ್ಣ ಸುಖದುಃಖೇಷು ತಥಾ ಮಾನಾಪಮಾನಯೋಃ ॥೭॥

ಅರ್ಥ:- ಜಿತಾತ್ಮನಃ= ದೇಹಗತ ಸರ್ವ ತತ್ತ್ವಗಳನ್ನು ತನ್ನ ವಶಮಾಡಿಕೊಂಡ, ಪ್ರಶಾಂತಸ್ಯ= ಚಿತ್ತ ಪ್ರಸನ್ನತೆಯನ್ನು ಪಡೆದುಕೊಂಡ, (ಪುರುಷನಿಗೆ) ಪರಮಾತ್ಮಾ = ದೇವನು ಸಮಾಹಿತಃ= ಸಮಾಹಿತನಾಗಿದ್ದಾನೆ, ಶಿತೋಷ್ಣ ಸುಖ ದುಃಖೇಷು= ಶೀತ ಉಷ್ಣ ಸುಖ ದುಃಖಗಳಲ್ಲಿ ತಥಾ= ಮತ್ತು ಮಾನಾಪಮಾನಯೋಃ= ಮಾನ ಅಪಮಾನಗಳಲ್ಲಿ (ಆ ಪುರುಷನು ಸಮಭಾವಿಯಾಗಿದ್ದಾನೆ).

ವಿವರಣೆ:- (೧) ಜಿತಾತ್ಮಾ:- ಆತ್ಮಾ ಎಂದರೆ ದೈಹಿಕ ತತ್ತ್ವಪುಂಜ; ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಪ್ರಾಣಗಳು, ಅಂತಃಕರಣಗಳು-ಇವುಗಳಿಂದ ಕೂಡಿದ ಭೌತ ವ್ಯಷ್ಟಿ ವಿಶ್ವ. ಈ ಸಕಲ ತತ್ತ್ವಗಳನ್ನು ತನ್ನ ದಿವ್ಯಸಾಧನೆಗೆ ಅನುಕೂಲವಾಗುವಂತೆ ಸ್ವಾಧೀನಪಡಿಸಿಕೊಂಡ ಯೋಗಿಯು ಜಿತಾತ್ಮಾ.

ಪ್ರಶಾಂತಃ:- ಮೋಹ, ಜಡತೆ, ಆಲಸ್ಯ, ಉನ್ಮಾದಗಳು ತಮೋಗುಣದ

ಪರಿಣಾಮ. ದ್ವೇಷ, ಮದ, ಮಾತ್ಸರ್ಯಗಳು ರಜೋಗುಣದ ಪರಿಣಾಮ. ಈ ರಜ ತಮ ಗುಣಗಳಿಗೆ ಆಶ್ರಯವಿತ್ತ ಮನಸ್ಸು ಅಶಾಂತ; ಚಿಂತೆ ಶೋಕ, ಅಸಂತೋಷಗಳ ಬೀಡು. ರಜ ತಮ ಗುಣಗಳು ಅಡಗಿ ಜ್ಞಾನ, ಆನಂದ ಹಾಗು ಅನಾಸಕ್ತಿಗಳ ಜನನಿಯಾದ ಸತ್ವ ಗುಣವು ಪ್ರತಿಷ್ಠಾಪನೆಗೊಂಡರೆ ಮನಸ್ಸು ಪ್ರಶಾಂತವಾಗುತ್ತದೆ. "ವಿಶೋಕಾ ವಾ ಜ್ಯೋತಿಷ್ಮತೀ" (ಯೋ.ಸೂ.) ಶೋಕ ಸಂತಾಪ ರಹಿತವಾದ ಆ ಸಾತ್ವಿಕ ಮನಸ್ಸು ಆತ್ಮಜ್ಯೋತಿಯನ್ನು ತನ್ನಲ್ಲಿ ಅಭಿವ್ಯಕ್ತಗೊಳಿಸುತ್ತದೆ. ಆದ್ದರಿಂದ ಅದು "ವಿಶೋಕಾ ಹಾಗು ಜ್ಯೋತಿಷ್ಮತೀ ಪ್ರಜ್ಞಾ" ಎನಿಸಿದೆ. ಇಂಥ ಪ್ರಶಾಂತ ಹಾಗು ಆತ್ಮಪ್ರಜ್ಞಾವಂತ ಮನಸ್ಸುಳ್ಳ ಯೋಗಿಯು ಪ್ರಶಾಂತಾತ್ಮನು.

**ಪರಮಾತ್ಮಾ ಸಮಾಹಿತಃ:-** ವಿಶ್ವದ ತುಂಬ ಓತಪ್ರೋತವಾಗಿ ತುಂಬಿ ಕೊಂಡ ದೇವನು ಪರಮಾತ್ಮ, ಜಡ ಅಜಡ ಜಡಾಜಡ ಎಂಬ ಸಕಲ ವಸ್ತುಗಳ ಅಂತರ್ಯಾಮಿ. ಸತ್ತು ಚಿತ್ತು ಆನಂದ ಸ್ವರೂಪನಾದ ಅವನು, ಶುದ್ಧ, ಸಾತ್ವಿಕ ಮನಸ್ಸಿನಲ್ಲಿ ಪ್ರತ್ಯಗಾತ್ಮ ರೂಪದಿಂದ ಪ್ರಕಟನಾಗುತ್ತಾನೆ. ಆ ಪ್ರಶಾಂತ ಮನಸ್ಸಿನಲ್ಲಿ ಸದಾ ಸಮಾಹಿತನಾಗಿ ನೆಲೆಸುತ್ತಾನೆ. ಆದುದರಿಂದ ಇಂಥ ಮನಸ್ಸಿಗೆ ಆತ್ಮ ಸಮಾಹಿತ ಮನಸ್ಸು ಎನ್ನುತ್ತಾರೆ. ಈ ಮನಸ್ಸಿನ ಯೋಗಿಗೆ ಸಮಾಹಿತ ಪುರುಷ ಎಂದು ಅಭಿಧಾನ,

**ಶೀತೋಷ್ಣ ಸುಖದುಃಖೇಷು ಮಾನಾಪಮಾನಯೋಃ (ಅಚಲಃ):-** ಆ ಆತ್ಮದರ್ಶಿಯಾದ ಪ್ರಶಾಂತ ಯೋಗಿಯು ಶೀತ ಉಷ್ಣ, ಸುಖ ದುಃಖ, ಮಾನ ಅಪಮಾನ ಇತ್ಯಾದಿ ದ್ವಂದ್ವಗಳಿಂದ ಬಾಧೆಗೊಳ್ಳುವದಿಲ್ಲ. ಅವನು ಸದಾ ನಿಶ್ಚಲ! ಅಪರಿಣಾಮಿ!

**ಸಂಬಂಧ:–** ಅವನ (ಯೋಗಾರೂಢನ) ವರ್ಣನೆಯು ಇನ್ನೂ ಎರಡು ಮಂತ್ರಗಳಲ್ಲಿ ಸಾಗಲಿದೆ.

**ಜ್ಞಾನವಿಜ್ಞಾನ ತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮ ಕಾಂಚನಃ ॥೮॥**

**ಅರ್ಥ:–** ಯೋಗೀ =ಯೋಗಾರೂಢನು, ಜ್ಞಾನ ವಿಜ್ಞಾನ ತೃಪ್ತಾತ್ಮಾ =(ಜ್ಞಾನಮೌಪದೇಶಿಕಂ, ವಿಜ್ಞಾನಮಪರೋಕ್ಷಾನುಭವಃ, ತಾಭ್ಯಾಂ ತೃಪ್ತಃ ಆತ್ಮಾ ಚಿತ್ತಂ ಯಸ್ಯ)ಗುರೂಪದಿಷ್ಟ ಜ್ಞಾನ ಹಾಗು ಸಾಕ್ಷಾದನುಭವ ರೂಪ ವಿಜ್ಞಾನ ಇವೆರಡರಿಂದ ಸಂತೃಪ್ತವಾದ ಮನಸ್ಸುಳ್ಳವನು, ಕೂಟಸ್ಥಃ =ನಿರ್ವಿಕಾರನು. ವಿಜಿತೇಂದ್ರಿಯಃ= ಇಂದ್ರಿಯ ಸಂಯಮಿಯು, ಸಮಲೋಷ್ಟಾಶ್ಮಕಾಂಚನಃ= (ಸಮಾನಿ ಲೋಷ್ಟಾದೀನಿ ಯಸ್ಯ ಸಃ) (ಮತ್ತು) ಮಣ್ಣು ಕಲ್ಲು ಕನಕಗಳಲ್ಲಿ ಸಮಬುದ್ಧಿಯವನು. (ಸಃ) ಯುಕ್ತಃ ಇತಿ ಉಚ್ಯತೇ= ಯುಕ್ತೋಹಿ ಪರವೈರಾಗ್ಯ ಸಂಪನ್ನಃ) ಅವನು ಪರವೈರಾಗ್ಯ ಸಂಪನ್ನನೆನಿಸುತ್ತಾನೆ.

**ವಿವರಣೆ:- ಯೋಗಾರೂಢನ ಗುಣ ಲಕ್ಷಣಗಳು:**

(೧) ಜ್ಞಾನ ವಿಜ್ಞಾನ ತೃಪ್ತಾತ್ಮಾ:– ವೇದ ಉಪನಿಷತ್ತುಗಳ ವಾಚನದಿಂದ, ಹಾಗು ಸಂತ-ಮಹಾತ್ಮರ ವಚನಶ್ರವಣದಿಂದ ಜಡವಿಲಕ್ಷಣನಾದ ಆತ್ಮನು ಅಜರ ಅಮರ ಅಖಂಡ ಅನಂತ ಎಂದು ತಿಳಿಯುವದು ಜ್ಞಾನ; ಆ ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವದು ವಿಜ್ಞಾನ. ಜ್ಞಾನ ಉಳ್ಳವನು ಜ್ಞಾನಿ; ವಿಜ್ಞಾನ ಉಳ್ಳವನು ವಿಜ್ಞಾನಿ. ಜ್ಞಾನಿಯು ಧನ ಸಂಗ್ರಹಿಸುವ ಧನಿಕನಂತೆ, ವಿಜ್ಞಾನಿಯು ಸಂಗ್ರಹಿಸಿದ ಧನವನ್ನು ಜಾಣ್ಮೆಯಿಂದ ಉಪಭೋಗಿಸುವ ಭೋಗಿಯಂತೆ. ಜ್ಞಾನಿಯು ಕಾಯ್ದೆಯ ಪಂಡಿತನಂತೆ; ವಿಜ್ಞಾನಿಯು ಕಾಯ್ದೆಗಳನ್ನು ಹೃದಯತಃ ಪರಿಪಾಲಿಸುವ ನ್ಯಾಯನಿಷ್ಠನಂತೆ. ಯೋಗಾರೂಢ ಪುರುಷನು ಮಾತ್ರ ಆತ್ಮಜ್ಞಾನಿಯೂ ಅಹುದು, ಆತ್ಮವಿಜ್ಞಾನಿಯೂ ಅಹುದು. ಅವನ ತಲೆತುಂಬ ವೇದ ನುಡಿಗಳಿವೆ; ಅವನ ಹೃದಯದ ತುಂಬ 'ಅಹಂ ಬ್ರಹ್ಮಾಸ್ಮಿ' ಎಂಬ ದೈವೀ ನಿನಾದವಿದೆ.

(೨) ಕೂಟಸ್ಥಃ:–ಕೂಟೇ ತಿಷ್ಠತಿ ಇತಿ ಕೂಟಸ್ಥಃ. ಸುಖ ದುಃಖಗಳ ಮಧ್ಯದಲ್ಲಿ ಜನ್ಮ ಮರಣಗಳ ಮಧ್ಯದಲ್ಲಿ, ಮಾನ ಅಪಮಾನ ಯಶ ಅಪಯಶಗಳ ಮಧ್ಯದಲ್ಲಿ ಅಚಲನಾಗಿ ನಿಂತಿರುವದು ಕೂಟಸ್ಥ ಸ್ಥಿತಿ. ಯೋಗಾರೂಢನು ವಿಷಯಗಳ ಹಾಗು ಕಾಮಾದಿ ರಾಕ್ಷಸೀ ಗುಣಗಳ ಅವ್ಯಾಹತ ಆಕ್ರಮಣದಿಂದ ಘಾಸಿಗೊಳ್ಳುವದಿಲ್ಲ. ಅವನು ಜಾಗ್ರ ಸ್ವಪ್ನ ಸುಷುಪ್ತಿ ತುರಿಯ ತುರಿಯಾತೀತಗಳ ಆಚೆ ಅವಿಕೃತವಾಗಿ ಜಾಜ್ವಲಿಸುವ ಸಾಕ್ಷಿ–ಜ್ಯೋತಿ!

(೩) ವಿಜಿತೇಂದ್ರಿಯಃ:– ಯೋಗಾರೂಢನು ವೀರ. ಇಂದ್ರಿಯಗಳೆಂಬ ಬಲಾಢ್ಯ ಕುದುರೆಗಳನ್ನು ತನ್ನ ಅಂಕಿತದಲ್ಲಿಟ್ಟು ಕೊಂಡಿದ್ದಾನೆ. ಆದ್ದರಿಂದ ಅವನಿಗೆ ವಿಜಿತೇಂದ್ರಿಯ ಎನ್ನುತ್ತಾನೆ ಭಗವಂತ.

(೪) ಸಮಲೋಷ್ಟಾಶ್ಮ ಕಾಂಚನಃ :- ಯೋಗಾರೂಢನಿಗೆ ಮಣ್ಣು ಕಲ್ಲು ಬಂಗಾರಗಳು ಸಮ. ಒಂದು ಸಲ ತುಕಾರಾಮ ಸಂತರು ಕೆಲವು ತುಡುಗರ ಕೈಗೆ ಸಿಕ್ಕರು. ಅವರ ಹೇಳಿಕೆಯಂತೆ ಸಂತರು ಅಗರ್ಭ ಶ್ರೀಮಂತರ ಮನೆಯಲ್ಲಿ ಮೇಲ್ ಮಾಳಿಗೆಯ ಕಿಂಡಿಯಿಂದ ಇಳಿದರು. 'ಭಾರವಾದ ಬೆಲೆಯುಳ್ಳ ವಸ್ತುಗಳನ್ನು ಹುಡುಕಿ ಮೇಲೆ ಕಳಿಸು' ಎಂದು ಆಜ್ಞಾಪಿಸಿದ್ದರು ತುಡುಗರು. ಸಂತ ತುಕಾರಾಮರು ಅಲ್ಲೇ ಇದ್ದ ದೊಡ್ಡದಾದ ಬೀಸುವ ಕಲ್ಲೊಂದನ್ನು ಎತ್ತಿ ಹಗ್ಗಕ್ಕೆ ಕಟ್ಟಿ 'ಎಳೆದುಕೊಳ್ಳಿ' ಎಂದರು ! ಕಷ್ಟ ಪಟ್ಟು ಮೇಲೆಳೆದು ನೋಡುತ್ತಾರೆ, ಬರಿ ಕಲ್ಲು ! ಸಿಟ್ಟಿಗೆದ್ದ ತುಡುಗರು ಒಳಗೆ ಹೋಗಲು ತಿಳಿಸಿದರು. ಸಂತರು ದೇವರ ಕೋಣೆಯಲ್ಲಿ ಹೆಜ್ಜೆ ಹಾಕಿದರು. ' ಅದೊಂದು ಬಹು ಶೃಂಗರಿತ ಕೋಣೆ; ಎತ್ತರವಾದ ಜಗುಲಿಯಲ್ಲಿ ದೇವ ಮೂರ್ತಿ; ಸ್ವರ್ಣ-ಸಮೆಗಳಲ್ಲಿ ನಂದಾ ದೀಪಗಳು ಉರಿಯುತ್ತಿವೆ. ಸುಗಂಧ ವಾಸನೆ ಅಲ್ಲೆಲ್ಲ ಹರಡಿದೆ. ಭಕ್ತಿಯ

ಉನ್ಮಾದ ಬರಿಸುವ ವಾತಾವರಣ!' ಸಂತರ ಮುಖ ಅರಳಿತು. ಕೈಯಲ್ಲಿ ತಾಳ ಹಿಡಿದು ಮೈಮರೆತು 'ಜೈ ವಿಠಲ' ಎಂದು ಭಜನೆ ಪ್ರಾರಂಭಿಸಿದರು! ಎಂಥ ಸಹಜತೆ! ಸಂತರಿಗೆ ಕಲ್ಲು ಬಂಗಾರಗಳ ಭೇದ ಭಾವವಿಲ್ಲ; ಪ್ರಸಂಗ ಅಪ್ರಸಂಗಗಳ ಕಲ್ಪನೆಯಿಲ್ಲ; ಆ ಮನೆಯವರು ಎದ್ದು ತನ್ನನ್ನು ಹೊಡೆದಾರು ಎಂಬ ಬೇಗುದಿ ಇಲ್ಲ. ನಿಶ್ಚಿಂತ, ನಿರ್ಲಿಪ್ತರು! ಇದೇ ಯೋಗಾರೂಢ ಸ್ಥಿತಿ.

ಮೋಳಿಗೆಯ ಮಾರಯ್ಯ, ಶುಕದೇವ, ಏಕನಾಥ ಇವರ ಜೀವನದಲ್ಲೂ ಯೋಗಾರೂಢನ ಸಮದೃಷ್ಟಿಯನ್ನು ಕಾಣುತ್ತೇವೆ. ಬಸವಣ್ಣನವರು ಬಿಟ್ಟು ಹೋದ ಎರಡು ಜಾಳಿಗೆ ಬಂಗಾರವನ್ನು ಮಾರಯ್ಯ ಶರಣರು ತಮ್ಮ ಗುಡಿಸಲಿನಿಂದ ಹೊರಗೆ ನೂಕಿದರು, ಕಸ ನೂಕುವಂತೆ! ತಂದೆಯಾದ ವ್ಯಾಸರು ದಾರಿಯಲ್ಲಿ ಬಿದ್ದ ಹೊನ್ನವನ್ನು ಶುಕ ಕಾಣದಿರಲೆಂದು ಮಣ್ಣು ಮುಚ್ಚಿದುದನ್ನು ಕಂಡ ಶುಕನು 'ನಿನಗಿನ್ನೂ ಮಣ್ಣು ಬಂಗಾರ ಎಂಬ ಭೇದ ದೃಷ್ಟಿ ಇದೆಯು ?' ಎಂದು ಕೇಳಿದ. ಯಾರೋ ಪರುಷ ಮಣಿಯನ್ನು ಕೈಗಿತ್ತಾಗ ಅದನ್ನು ಜಲದೇವತೆಯ ಉಡಿಗೆ ನೀಡಿದರು ಏಕನಾಥರು!

ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥದ್ವೇಷ್ಯ ಬಂಧುಷು ।
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥೯॥

ಅರ್ಥ:- ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥ ದ್ವೇಷ್ಯ ಬಂಧುಷು= ಅನಿಮಿತ್ತ ಬಂಧು, ನಿಮಿತ್ತ ಬಂಧು, ವೈರಿ ಉಪೇಕ್ಷಕ ಅಪಕ್ಷಪಾತಿ ದ್ವೇಷಕ ಬಂಧುಗಳಲ್ಲಿ ಅಪಿ= ಮತ್ತು ಸಾಧುಷು= ಸಾಧುಗಳಲ್ಲಿ ಚ =ಹಾಗು ಪಾಪೇಷು =ಪಾಪಿಗಳಲ್ಲಿ ಸಮಬುದ್ಧಿಃ= ಸಮಬುದ್ಧಿಯುಳ್ಳವನು ವಿಶಿಷ್ಯತೇ= ಶ್ರೇಷ್ಠ ಎನಿಸುತ್ತಾನೆ.

ವಿವರಣೆ:- ಯಾವ ನಿಮಿತ್ತವಿಲ್ಲದೆ ಉಪಕಾರ ಮಾಡುವವ ಸುಹೃತ್. ಸ್ನೇಹ ನಿಮಿತ್ತದಿಂದ ಹಿತ ಬಯಸುವವ ಮಿತ್ರ. ಕೆರಳಿಸಿದಾಗ ಅಹಿತ ಬಗೆಯುವವನು ಅರಿ. ಸ್ವಭಾವತಃ ದ್ವೇಷಭಾವನೆ ತಾಳಿದವನು ದ್ವೇಷ್ಯನು. ಇನ್ನೊಬ್ಬರ ವ್ಯವಹಾರಗಳಲ್ಲಿ ಕೈ ಹಾಕದಿರುವವನು ಉದಾಸೀನ. ಪಕ್ಷ ಪ್ರತಿಪಕ್ಷಗಳೆರಡಕ್ಕೂ ಹಿತ ಬಯಸುವವನು ಮಧ್ಯಸ್ಥ. ಜನ್ಮತಃ ಪ್ರೀತಿ ತೋರುವವನು ಬಂಧು! ಶಾಸ್ತ್ರೋಕ್ತ ಆಚಾರ ಉಳ್ಳವರು ಸಾಧುಗಳು. ಶಾಸ್ತ್ರ ನಿಷಿದ್ಧ ಕರ್ಮದಲ್ಲಿ ತೊಡಗಿದವರು ಪಾಪಿಗಳು; ಯೋಗಾರೂಢನು ಇವರಲ್ಲಿ ಸಮಬುದ್ಧಿ ತಾಳಿದ್ದಾನೆ. ಅಂದರೆ ಅವನಲ್ಲಿ ಇವರ ಬಗ್ಗೆ ರಾಗವಿಲ್ಲ, ದ್ವೇಷವಿಲ್ಲ ಹಾಗು ಉಪೇಕ್ಷೆ ಇಲ್ಲ. ತನ್ನ ಆತ್ಮ ಚೈತನ್ಯದ ಅಂಶಗಳೆಂದೇ ನೋಡುತ್ತಾನೆ.

ಸಂಬಂಧ:- ೧೦ನೆಯ ಮಂತ್ರದಿಂದ ೩೨ನೆಯ ಮಂತ್ರದವರೆಗೆ ಸರ್ವಾಂಗ ಪೂರ್ಣ ಯೋಗದ ವರ್ಣನೆ ನಡೆಯುವದು. ಅವರಲ್ಲಿ ಪರಿಣತಿ ತಾಳಿದವನೇ ಯೋಗಾರೂಢನಾಗುತ್ತಾನೆ.

ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।

ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥೧೦॥

**ಅರ್ಥ:–** ಯೋಗೀ=ಯೋಗ ಸಾಧಕನು ಸತತಂ=ಸದಾ ರಹಸಿ = ಏಕಾಂತದಲ್ಲಿ ಸ್ಥಿತಃ = ಇದ್ದು ಏಕಾಕೀ = ಒಬ್ಬನೇ (ಆಗಿ) ಯತಚಿತ್ತಾತ್ಮಾ = ಮನಸ್ಸು ಮತ್ತು ದೇಹವನ್ನು ನಿರೋಧಗೊಳಿಸಿದವನೂ ನಿರಾಶೀಃ = ಆಶಾರಹಿತನೂ ನಿರಾಹಾರಿಯೂ, ಅಪರಿಗ್ರಹಃ = ಮಿತಸಂಗ್ರಹಿಯೂ (ಆಗಿ) ಆತ್ಮಾನಂ = ಮನಸ್ಸನ್ನು ಯುಂಜೀತ = ಯೋಗಕ್ಕೆ ಹಚ್ಚಬೇಕು (ಸಮಾಹಿತಗೊಳಿಸಬೇಕು).

**ವಿವರಣೆ:–** ಈ ಮಂತ್ರದಿಂದ ಧ್ಯಾನಯೋಗದ ಕ್ರಮ ವಿವರಣೆ ಪ್ರಾರಂಭವಾಗುತ್ತಿದೆ. ಧ್ಯಾನಯೋಗವು ಉಳಿದ ಶಾಸ್ತ್ರಗಳ ಯೋಗಗಳಂತಲ್ಲ. ಇಲ್ಲಿ ಬಲಾಢ್ಯ ಇಚ್ಛಾಶಕ್ತಿ, ಪ್ರಕೃತಿ-ಪುರುಷರ ತಿಳಿವು ಮತ್ತು ಶ್ರಮಾನ್ವಿತ ಸಾಹಸಗಳಿಗೆ ಪ್ರಾಧಾನ್ಯತೆಯಿದೆ. ಈ ಯೋಗಸಾಧಕನಾಗಬಯಸಿದವನು ವಿಶಿಷ್ಟ ವರ್ಣ, ಆಶ್ರಮ, ಜಾತಿಯವನಿರಬೇಕೆಂಬ ನಿಯಮವಿಲ್ಲ. ಅವನಲ್ಲಿ ಮನೋದಾರ್ಢ್ಯ ಹಾಗು ಮನೋ ನಿರ್ಮಾಲ್ಯ ಇವೆರಡಿದ್ದರೆ ಸಾಕು. ಅರ್ಜುನ ಹಾಗಿದ್ದಾನೆಂದೇ ಭಗವಂತನು ಅವನಿಗೆ ಈ ಯೋಗವನ್ನು ಉಪದೇಶಿಸುತ್ತಿದ್ದಾನೆ?

(೧) ರಹಸಿ ಸ್ಥಿತಃ...ನಿರಾಶೀರಪರಿಗ್ರಹಃ– ಧ್ಯಾನಯೋಗದ ಸಾಧಕನು ಬಹು ರಮ್ಯವಾದ ನಿರ್ಜನ ಸ್ಥಾನದಲ್ಲಿ ಏಕಾಂಗಿಯಾಗಿ ವಾಸಿಸಬೇಕು. ತನ್ನಂತೆಯೇ ಸಾಧನ ಮಾಡುವ ಸಹ ಸಾಧಕರಿದ್ದರಂತು ಇನ್ನಷ್ಟು ಒಳ್ಳೆಯದು. ತನ್ನ ಮನಸ್ಸನ್ನು ದೇಹವನ್ನು ಅಂಕಿತದಲ್ಲಿ ಇಟ್ಟುಕೊಳ್ಳಬೇಕು. ವಿಷಯಗಳಿಗಾಗಿ ಆಶೆ ಬೇಡ; ಆಹಾರ ಸೇವನೆ ಕೂಡ ಹಿತ-ಮಿತವಾಗಿರುವದು ಅವಶ್ಯ. ಚಿಕ್ಕದಾದ ಅಂಗವಸ್ತ್ರ, ಕಮಂಡಲ, ದಂಡ ಇಂಥ ಕೆಲವೇ ಅತ್ಯಗತ್ಯದ ವಸ್ತುಗಳ ಬಿಟ್ಟು, ಹೆಚ್ಚಿನ ವಸ್ತುಗಳು ಬೇಡ. ಇಂತು ಸನ್ನದ್ಧನಾದ ಸಾಧಕನು—

(೨) ಯುಂಜೀತ ಸತತಂ ಆತ್ಮಾನಂ: ಸಂತತವಾಗಿ ಚಿತ್ತವನ್ನು ಆತ್ಮ ಚಿಂತನೆಗೆ ತೊಡಗಿಸಬೇಕು. ಎಷ್ಟು ದಿನ? ಮತ್ತು ಹೇಗೆ?

"ಸ ತು ದೀರ್ಘ ಕಾಲ ನೈರಂತರ್ಯ ಸತ್ಕಾರಾಸೇವಿತೋ ದೃಢ ಭೂಮಿಃ"

ಅಭ್ಯಾಸವುಬಹು ದೀರ್ಘಕಾಲ, ಧ್ಯೇಯಸಾಕ್ಷಾತ್ಕಾರದ ಪರ್ಯಂತ, ಅತ್ಯಂತ ಆದರ, ಪ್ರೇಮ, ಉತ್ಸಾಹದಿಂದ ಸಾಗಬೇಕು. (ಪಾ. ಯೋ. ಸೂ.)

ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।
ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥೧೧॥

**ಅರ್ಥ:–** ಶುಚೌ ದೇಶೇ = ಶುದ್ಧ ಸ್ಥಾನದಲ್ಲಿ, ಸ್ಥಿರಂ = ಅಚಲವಾದ, ನಾತ್ಯುಚ್ಛ್ರಿತಂ ನಾತಿನೀಚಂ = ಅತೀ ಎತ್ತರವಲ್ಲದ, ಅತೀ ನಿಮ್ನವಲ್ಲದ, ಚೈಲಾಜಿನ ಕುಶೋತ್ತರಂ= ವಸ್ತ್ರ, ಚರ್ಮ, ಕುಶ–ಹುಲ್ಲುಗಳನ್ನು ಒಂದರಮೇಲೊಂದು ಹಾಸಿರುವ, (ಅಥವಾ ಹುಲ್ಲು ಚರ್ಮ ಮತ್ತು ವಸ್ತ್ರಗಳನ್ನು ಒಂದರ ಮೇಲೊಂದು ಹಾಸಿರುವ) ಆಸನಂ = ಆಸನವನ್ನು ಆತ್ಮನಃ = ತನ್ನ ಸಾಧನೆಗಾಗಿ ಪ್ರತಿಷ್ಠಾಪ್ಯ = ಹಾಸಿಕೊಂಡು,

ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥೧೨॥

ಅರ್ಥ:- ತತ್ರ = ಆ ಆಸನದಲ್ಲಿ ಉಪವಿಶ್ಯ = ಕುಳಿತುಕೊಂಡು, ಮನಃ = ಮನಸ್ಸನ್ನು ಏಕಾಗ್ರಂ =ಅವಿಕ್ಷಿಪ್ತವಾಗಿ ಕೃತ್ವಾ =ಮಾಡಿ ಯತ ಚಿತ್ತೇಂದ್ರಿಯ ಕ್ರಿಯಃ (ಸನ್) = ಚಿತ್ತ ಹಾಗು ಇಂದ್ರಿಯ ಕ್ರಿಯೆಗಳನ್ನು ನಿಗ್ರಹಿಸಿದವನಾಗಿ, ಆತ್ಮವಿಶುದ್ಧಯೇ = ಅಂತಃಕರಣದ ಶುದ್ಧಿಗಾಗಿ ಯೋಗಂ =ಯೋಗವನ್ನು ಯುಂಜ್ಯಾತ್= ಅಭ್ಯಸಿಸಬೇಕು.

ವಿವರಣೆ:- (೧) ಅಭ್ಯಾಸಕ್ಕೆ ತಕ್ಕ ಸ್ಥಾನ: ಧ್ಯಾನಯೋಗಕ್ಕೆ ವಿಶಿಷ್ಟ ಸ್ಥಾನವೇ ಬೇಕು. ಆ ಸ್ಥಾನದ ವಿಶದ ನಿರ್ದೇಶವು ಹಠಯೋಗ ಪ್ರದೀಪಿಕೆಯಲ್ಲಿ ಹಾಗು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಈ ಕೆಳಗಿನಂತೆ ಮಾಡಲ್ಪಟ್ಟಿದೆ.

"ಸುರಾಜ್ಯೇ ಧಾರ್ಮಿಕೇ ದೇಶೇ ಸುಭಿಕ್ಷೇ ನಿರುಪದ್ರವೇ ।
ಧನುಃ ಪ್ರಮಾಣ ಪರ್ಯಂತ ಶಿಲಾಗ್ನಿ ಜಲ ವರ್ಜಿತೇ ॥ (ಹ. ಪ್ರ, ೧-೧೨-)
ಏಕಾಂತೇ ಮಠಿಕಾ ಮಧ್ಯೇ ಸ್ಥಾತವ್ಯಂ ಹಠಯೋಗಿನಾ ।
ಅಲ್ಪ ದ್ವಾರಮರಂಧ್ರ ಗರ್ತವಿವರಂ ನಾತ್ಯುಚ್ಚ ನೀಚಾಯತಂ ॥ (೧-೧೩)
ಸಮ್ಯಗ್ಗೋಮಯ ಸಾಂದ್ರಲಿಪ್ತಮಮಲಂ ನಿಃಶೇಷ ಜಂತೂಜ್ಝಿತಮ್ ।
ಬಾಹ್ಯೇ ಮಂಟಪವೇದಿ ಕೂಪ ರುಚಿರಂ ಪ್ರಾಕಾರ ಸಂವೇಷ್ಟಿತಮ್ ॥
ಪ್ರೋಕ್ತಂ ಯೋಗಮಠಸ್ಯ ಲಕ್ಷಣಮಿದಂ ಸಿದ್ಧೈರ್ಹಠಾಭ್ಯಾಸಿಭಿಃ ॥ (೧-೧೪)

ಧಾರ್ಮಿಕ ಜನರು ವಾಸಮಾಡಿದ, ಸಮೃದ್ಧವಾದ, ನಿರುಪದ್ರವವಿರುವ, ಸುಖಿ ಹಾಗು ಉತ್ತಮವಾದ ರಾಜ್ಯದಲ್ಲಿ, ಸನಿಹದಲ್ಲೆಲ್ಲೂ ಕಲ್ಲು, ಬೆಂಕಿ, ನೀರುಗಳಿಂದ ತೊಂದರೆ ಉಂಟಾಗದಂಥ ಏಕಾಂತ ಕುಟಿರದಲ್ಲಿ ಛಲದಿಂದ ಯೋಗ ಸಾಧಿಸಬಯಸುವ ಸಾಧಕನು ವಾಸಮಾಡಬೇಕು. ಆ ಕುಟಿರದ ಬಾಗಿಲು ಚಿಕ್ಕದಾಗಿರಬೇಕು, ರಂಧ್ರಗಳಿರಬಾರದು. ಕ್ರಿಮಿ ಕೀಟಕಗಳ ಬಾಧೆ ಇಲ್ಲದಿರಬೇಕು. ಕುಟಿರವು ಒಳ ಹೊರಗೆ ಸುಂದರ ಮತ್ತು ಸ್ವಚ್ಛವಾಗಿರಬೇಕು. ಹೊರಗೆ ಬಾವಿ, ಮಂಟಪ, ವೇದಿಕೆ-ಮುಂತಾದ ಉಪಯುಕ್ತ ಸಾಧನಗಳಿರುವದು ಅಗತ್ಯ. ಒಟ್ಟಿನಲ್ಲಿ ಕುಟಿರದ ಸ್ಥಾನವು ಸುರಮ್ಯ ಉದ್ಯಾನಗಳಿಂದ ಆವೃತವಾಗಿರಬೇಕು. ಅದುವೇ ಯೋಗಾಭ್ಯಾಸಕ್ಕೆ-ತಕ್ಕಸ್ಥಾನವೆಂದು ಯೋಗಸಿದ್ಧರು ಹೇಳಿದ್ದಾರೆ.

"ಸಮೇ ಶುಚೌ ಶರ್ಕರಾ ವಹ್ನಿವಾಲುಕಾ ವಿವರ್ಜಿತೇ ಜಲಾಶ್ರಯಾದಿಭಿಃ ।
ಮನೋಽನುಕೂಲೇ ನ ತು ಚಕ್ಷುಪೀಡನೇ ಗುಹಾನಿವಾತಾಶ್ರಯಣೇ ಪ್ರಯೋಜಯೇತ್ ॥

ಸ್ವಚ್ಛವಾದ, ಮನಸ್ಸಿಗೆ ಅನುಕೂಲವಾದ. ಬೆಣಚುಗಲ್ಲು ಬೆಂಕಿ ಉಸುಕು ಜವಳು ಭೂಮಿ ಮುಂತಾದವುಗಳಿಲ್ಲದ, ಕಣ್ಣಿಗೆ ಪೀಡೆಯಾಗದ, ಗಾಳಿ ತಟ್ಟದ, ಸಮತಲದ ಗುಹಾಶ್ರಯದಲ್ಲಿ ಯೋಗಾಭ್ಯಾಸ ಮಾಡಬೇಕು. (ಶ್ವೇ. ಶ್ವ. ೨-೧೦)

ನಾವು ನೆಲೆಸುವ ಸ್ಥಾನ ಹಾಗು ಪರಿಸರ ನಮ್ಮ ಮನಸ್ಸಿನ ಮೇಲೆ ಸಾಕಷ್ಟು ಪ್ರಭಾವ ಬೀರುತ್ತದೆ. ನಮ್ಮ ಹೃದಯ ವಿಕಸಿತವಾಗಬೇಕಾದರೆ, ಮನಸ್ಸು ನೆಮ್ಮದಿಗೊಳ್ಳಬೇಕಾದರೆ ನಮ್ಮ ನೆಲೆಯ ಸುತ್ತಲಿನ ಪ್ರದೇಶ ನಯನ ಮನೋ

ಹರವಾಗಿರಬೇಕು. ಅಂದರೆ, ಹಚ್ಚ ಹಸಿರು ಎಲ್ಲೆಡೆ ವ್ಯಾಪಿಸಿರಬೇಕು; ಅಲ್ಲಲ್ಲಿ ಎತ್ತರದ ಮರಗಳು, ಹರಿವ ನಿರ್ಝರಣೆಗಳು, ಉಲಿವ ಹಕ್ಕಿಗಳು, ಹುಲ್ಲೆ ಹಂಸಗಳು ನೋಡಿದಲ್ಲೆಲ್ಲ ಕಾಣಬರಬೇಕು. ಹಿಂದಿನ ಕಾಲದ ಋಷಿ–ಮುನಿಗಳು ಅಂಥ ಸುಂದರ ಪ್ರದೇಶದಲ್ಲಿಯೇ ವಾಸಮಾಡಿದುದು ಸರ್ವವಿದಿತ. ಗಂಗಾತಟ, ವಿಶಾಲ ಸರೋವರದ ದಡ, ಹರಿತ ವನ, ಹಳ್ಳಕೊಳ್ಳ, ಹೂ ಬಳ್ಳಿ, ಗಿಡ ಮರ ಗಳಿಂದ ಕಂಗೊಳಿಸುವ ಸುರಮ್ಯ ತಾಣಗಳಲ್ಲಿ ತಮ್ಮ ಸಾಧನಾಶ್ರಮ ಕಟ್ಟಿದರು. ಸಮೀಪದಲ್ಲಿ ಧರ್ಮಶಾಲೆ, ನಾಟ್ಯಮಂದಿರ, ಊರು-ಕೇರಿ, ರಾಜಮಾರ್ಗ, ವ್ಯವ ಹಾರೋದ್ಯಮಕೇಂದ್ರಗಳಿದ್ದರೆ ಸಾಧಕರ ಮನಸ್ಸು ಚಂಚಲವಾದೀತೆಂಬ ದೂರ ದೃಷ್ಟಿಯಿಂದಲೇ ಮಹಾ ತಪಸ್ವಿಗಳು ನಾಗರಿಕ ನೆಲೆಗಳಿಂದ ಬಹು ದೂರದಲ್ಲಿ ವಿಹಾರ ಹಾಗು ತಪೋವನಗಳನ್ನು ನಿರ್ಮಿಸಿದರು. ಆ ತಪೋವನಗಳಲ್ಲಿ ಹೆಜ್ಜೆ ಹಾಕಿದರೂ ಸಾಕು, ಮನಸ್ಸು ತಾನಾಗಿಯೇ ದೇವ ಮುಖವಾಗುವದು, ಭಾವವು ನಿರ್ಮಲಗೊಳ್ಳುವದು.

(೨) ಆಸನ:- ಯೋಗಾಭ್ಯಾಸಕ್ಕಾಗಿ ಆರಿಸಿಕೊಂಡ ತಾಣದಲ್ಲಿ ಅಷ್ಟು ಎತ್ತರ, ಅಷ್ಟು ನಿಮ್ನವಲ್ಲದ ಒಂದು ಗದ್ದಿಗೆ ಕಟ್ಟಿ ಅದನ್ನು ಹಾಗು ಅದರ ಸುತ್ತ ಲಿನ ಭೂಮಿಯನ್ನು ಗೋಮಯದಿಂದ ಸಾರಿಸಬೇಕು. ಸ್ನಾನ ಮಾಡಿ ಶುಚಿ ಯಾದ ಸಾಧಕನು ಅ ಗದ್ದುಗೆಯ ಮೇಲೆ ಮೊದಲು ದರ್ಭಾಸನ, ಅದರ ಮೇಲೆ ವ್ಯಾಘ್ರ ಅಥವಾ ಹರಿಣ ಚರ್ಮಾಸನ, ಬಳಿಕ ಅದರ ಮೇಲೆ ಮೃದು ವಾದ ವಸ್ತ್ರ ಹಾಸಬೇಕು. ಅಷ್ಟಾದರೆ ಕೂಡ್ರಲು ಆಸನ ಸಿದ್ಧವಾಯಿತು. (ಚರ್ಮಾಸನಕ್ಕಿಂತ ಶ್ವೇತ ಕಂಬಲವನ್ನು ಉಪಯೋಗಿಸುವದು ಒಳ್ಳೆಯದು).

(೩) ಕೂಡ್ರುವ ರೀತಿ:– ಸಾಧಕನು ತಾನು ಸಿದ್ಧಪಡಿಸಿದ ಆಸನದ ಮೇಲೆ ವಿಶಿಷ್ಟ ರೀತಿಯಲ್ಲಿಯೇ ಕೂಡ್ರಬೇಕು. ಯೋಗ ಪರಿಣತರು ಸಾಧನೆಗೆ ಅನುಕೂಲವಾಗಲೆಂದು ವಿವಿಧ ಆಸನಗಳನ್ನು ಸೂಚಿಸಿದ್ದಾರೆ. ಅವುಗಳಲ್ಲಿ ಪ್ರಮು ಖವೆಂದರೆ (೧) ಸಿದ್ಧಾಸನ (೨) ಪದ್ಮಾಸನ (೩) ವೀರಾಸನ (೪) ಸ್ವಸ್ತಿಕಾಸನ (೫) ಸುಖಾಸನ. ಆಸನದ ಬಗ್ಗೆ ಪತಂಜಲ ಋಷಿಗಳು ಕೆಲವು ಗಮನೀಯ ಮಾತುಗಳನ್ನು ಹೇಳಿದ್ದಾರೆ: "ಸ್ಥಿರಸುಖಮಾಸನಂ" ಸ್ಥಿರವಾಗಿ ಸುಖವಾಗಿ ಕೂಡ್ರುವದು ಆಸನ. "ಪ್ರಯತ್ನಶೈಥಿಲ್ಯಾನಂತಸಮಾಪತ್ತಿಭ್ಯಾಂ" ಪ್ರಯತ್ನ ಶೈಥಿಲ್ಯದಿಂದ (ದೇಹದ ನಿಶ್ಚಲತೆ ಸ್ವಾಭಾವಿಕವಾಗುವದರಿಂದ) ಹಾಗು ಅನಂತ ಸಮಾಪತ್ತಿಯಿಂದ (ಪರಮಾತ್ಮನಲ್ಲಿ ಮನಸ್ಸು ಸ್ಥಿರವಾಗಿ ನಿಲ್ಲುವದ ರಿಂದ) ಆಸನವು ಸ್ಥಿರವಾಗುತ್ತದೆ. "ತತೋ ದ್ವಂದ್ವಾನಭಿಘಾತಃ" ಆಸನ ಸಿದ್ಧಿ ಯಿಂದ ಶೀತ ಉಷ್ಣಾದಿ ದ್ವಂದ್ವಗಳ ಆಘಾತ ಉಂಟಾಗದು.

(೪) ಧ್ಯಾನ ಸಾಧನಾ ಪೂರ್ವದ ಕ್ರಿಯೆಗಳು:– ಆಸನದ ಮೇಲೆ ಆಸನ

ಹಾಕಿ ಕುಳಿತ ನಂತರ ಶ್ವಾಸ-ಉಚ್ಛ್ವಾಸ ಗತಿಗಳನ್ನು ತನ್ನ ಅಂಕಿತದಲ್ಲಿ ತೆಂದು ಕೊಳ್ಳುವದಕ್ಕಾಗಿ ಪ್ರಾಣಾಯಾಮ ಮಾಡಬೇಕು. " ತಸ್ಮಿಂಸತಿ ಶ್ವಾಸ ಪ್ರಶ್ವಾಸ ಯೋರ್ಗತಿ ವಿಚ್ಛೇದಃ ಪ್ರಾಣಾಯಾಮಃ " ಆಸನ ಸ್ಥಿರತೆಯ ನಂತರ ಶ್ವಾಸ ಪ್ರಶ್ವಾಸಗಳ ಗಮನಾಗಮನಗತಿಯನ್ನು ತಡೆಯುವದು ಪ್ರಾಣಾಯಾಮ (ಯೋ. ಸೂ). ಪ್ರಾಣಾಯಾಮದಲ್ಲಿ ಮೂರು ಕ್ರಿಯೆಗಳಿವೆ (ಅ) ಶ್ವಾಸ (ಪೂರಕ) (ಬ) ಉಚ್ಛ್ವಾಸ (ರೇಚಕ) (ಕ) ಕುಂಭಕ (ಪ್ರಾಣ ನಿರೋಧ). ಎರಡು ಸೆಕೆಂದಿಗೆ ಒಂದು ಮಾತ್ರೆ ಎನ್ನುತ್ತಾರೆ. ಹನ್ನೆರಡು ಹನ್ನೆರಡು ಮಾತ್ರೆಯ ಪೂರಕ ಕುಂಭಕ ರೇಚಕವುಳ್ಳದು ಮಂದ ಪ್ರಾಣಾಯಾಮ. ಇಪತ್ನಾಲ್ಕು ಮಾತ್ರೆ ಯದು ಮಧ್ಯಮ ಪ್ರಾಣಾಯಾಮ. ಮುವ್ವತ್ತಾರು ಮಾತ್ರೆಯದು ಉತ್ತಮ ಪ್ರಾಣಾಯಾಮ. "ತತಃ ಕ್ರಿಯತೇ ಪ್ರಕಾಶಾವರಣಂ " ಪ್ರಾಣಾಯಾಮದ ಸ್ಥಿರತೆಯಿಂದ ವಿವೇಕಕ್ಕೆ ಆವರಕವಾದ ರಾಗ ದ್ವೇಷಾದಿ ಕ್ಲೇಶಗಳು ನಾಶವಾಗು ತ್ತವೆ. (ಯೋ. ಸೂ).

ಪ್ರಾಣವು ಸ್ಥಿಮಿತಕ್ಕೆ ಬಂದ ಬಳಿಕ ಪ್ರತ್ಯಾಹಾರ. "ಸ್ವವಿಷಯಾsಸಂಪ್ರ ಯೋಗೇ ಚಿತ್ತಸ್ಯ ಸ್ವರೂಪಾನುಕಾರ್ಯ ಇವೇಂದ್ರಿಯಾಣಾಂ ಪ್ರತ್ಯಾಹಾರಃ" ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಿಂದ ದೂರಾಗಿ ಚಿತ್ತದ ಅನುಕರಣ ಮಾಡಿದಂತಾದರೆ ಅದು ಇಂದ್ರಿಯಗಳ ಪ್ರತ್ಯಾಹರ. "ತತಃ ಪರಮಾವಶ್ಯತ ಇಂದ್ರಿ ಯಾಣಾಂ" ಈ ಪ್ರತ್ಯಾಹಾರದಿಂದ ಇಂದ್ರಿಯಗಳ ಪರಮ ಜಯವು ದೊರೆಯು ತ್ತದೆ. "ಧಾರಣಾಸು ಯೋಗ್ಯತಾ" ಧಾರಣ ಮಾಡಲು ಯೋಗ್ಯತೆ ಬರುತ್ತದೆ.

"ದೇಶ ಬಂಧಃ ಚಿತ್ತಸ್ಯ ಧಾರಣಾ" ದೇಹದಲ್ಲಿರುವ ವಿವಿಧ ಚಕ್ರ—ಸ್ಥಾನ ಗಳಲ್ಲಿ ಸಂಯತವಾದ ಮನಸ್ಸನ್ನು ಪ್ರತಿಷ್ಠಾಪಿತಗೊಳಿಸುವದು ಧಾರಣ.

(೫) ಧ್ಯಾನ (ಚಿತ್ತೈಕಾಗ್ರತಾ): "ತತ್ರ ಪ್ರತ್ಯಯೈಕತಾ ಧ್ಯಾನಂ" ಆಯಾ ಚಕ್ರ ಸ್ಥಾನಗಳಲ್ಲಿರುವ ಧ್ಯೇಯ ಮೂರ್ತಿಗಳಲ್ಲಿ. ಮನೋವೃತ್ತಿಯನ್ನು ಅವಿಚ್ಛಿನ್ನವಾಗಿ ಏಕಾಗ್ರಗೊಳಿಸುವದು ಧ್ಯಾನ. ಅಂದರೆ, ಸರ್ವ ವ್ಯಾಪಕ ಸರ್ವಾಂತರ್ಯಾಮಿ ಸರ್ವಜ್ಞನಾದ ಪರಮಾತ್ಮನು ಧ್ಯೇಯ. ಆ ಧ್ಯೇಯದ ಆಕಾರವಾದ ಮನೋ ತರಂಗಗಳ ಅವ್ಯಾಹತ ಪ್ರವಾಹವೇ ಏಕಾಗ್ರತೆ; ಅದೇ ಪಾವನ ಧ್ಯಾನ. ಧ್ಯಾನದಲ್ಲಿ ಉಂಟಾಗುವ ಧ್ಯೇಯ ತಲ್ಲೀನತೆಯೇ ಸಂಪ್ರಜ್ಞಾತ ಸಮಾಧಿ. ಇಲ್ಲಿ ಬಾಹ್ಯ ಭಾನವಿಲ್ಲ. ಈ ಧ್ಯಾನದ ಅಂತಿಮ ಅವಸ್ಥೆಯೇ ಅಸಂಪ್ರ ಜ್ಞಾತ ಸಮಾಧಿ. "ತದೇವಾರ್ಥ ಮಾತ್ರ ನಿರ್ಭಾಸಂ ಸ್ವರೂಪ ಶೂನ್ಯಮಿವ ಸಮಾಧಿಃ" ಧ್ಯಾನ ವೃತ್ತಿಯು ಧ್ಯೇಯ (ಅರ್ಥ) ದಲ್ಲಿ ಒಂದಾಗಿ, ಆ ವೃತ್ತಿಗತ ಧ್ಯಾತೃವು ಸ್ವಸ್ವರೂಪದಲ್ಲಿ ಲೀನವಾದರೆ ಅದುವೇ ಪರಮ ಸಮಾಧಿ! ಯೋಗದ ಅಂತಿಮ ಘಟ್ಟ. ಯಮದಿಂದ ಸಮಾಧಿ ವರೆಗಿನ ಈ ಎಂಟು ಅಂಗಗಳ ಯೋಗವೇ

"ಅಷ್ಟಾಂಗಯೋಗ".

ಭಗವಂತ:- "ಅರ್ಜುನ, ಜನಜಂಗುಳಿಯಿಂದ ದೂರ ನಡೆದು ಶುಚಿಯಾದ ರಮ್ಯ ಸ್ಥಾನದಲ್ಲಿ ಕುಳಿತು ತನ್ನ ಚಿತ್ತಶುದ್ಧಿಗಾಗಿ, ದೇಹ ಇಂದ್ರಿಯ ಪ್ರಾಣ ಮನ ಬುದ್ಧಿ ಭಾವ ಅಹಮುಗಳ ನಿರ್ಮಲತೆಗಾಗಿ ಸಕ್ರಮವಾದ ಅಷ್ಟಾಂಗ ಯೋಗವನ್ನು ಪರಿಪಾಲಿಸಬೇಕು."

ಸಂಬಂಧ:– ಅಷ್ಟಾಂಗ ಯೋಗಾಚರಣೆಯ ಕ್ರಮ ಮುಂದಿನ ಎರಡು ಮಂತ್ರಗಳಲ್ಲಿದೆ.

ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥೧೩॥

ಅರ್ಥ:– ಕಾಯಶಿರೋಗ್ರೀವಂ=ದೇಹ, ತಲೆ ಹಾಗು ಕುತ್ತಿಗೆಗಳನ್ನು ಸಮಂ= ಸಮವಾಗಿ, ಅಚಲಂ=ಅಚಲವಾಗಿ, ಧಾರಯನ್ = ಇರಿಸಿ, ಸ್ಥಿರಂ = ಸ್ಥಿರವಾಗಿ (ಕುಳಿತು), ನಾಸಿಕಾಗ್ರಂ = ನಾಸಿಕದ ತುದಿಯನ್ನು ಸಂಪ್ರೇಕ್ಷ್ಯ = ನೆಟ್ಟ ಕಣ್ಣಿನಿಂದ ನೋಡುತ್ತ, ಸ್ವಂ ದಿಶಃ ಚ = ತನ್ನ (ದೇಹದ) ನ್ನು ಮತ್ತು (ಹೊರಗಿನ) ದಿಕ್ಕುಗಳನ್ನು ಅನ್ ಅವಲೋಕ ಯನ್=ನೋಡದೆ,

ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥೧೪॥

ಅರ್ಥ:– ಪ್ರಶಾಂತಾತ್ಮಾ = ಶಾಂತ ಮನಸ್ಸಿನವನಾಗಿ, ವಿಗತಭೀಃ = ನಿರ್ಭಯ ನಾಗಿ, ಬ್ರಹ್ಮಚಾರೀವ್ರತೇ ಸ್ಥಿತಃ = ಬ್ರಹ್ಮಚರ್ಯ ವ್ರತದಲ್ಲಿ ನಿಂತು, ಮನಃ ಸಂಯಮ್ಯ = ಮನಸ್ಸನ್ನು ಸಂಯಮನ ಮಾಡಿಕೊಂಡು, ಮಚ್ಚಿತ್ತಃ = ನನ್ನಲ್ಲಿಯೇ ಚಿತ್ತ ಉಳ್ಳವನಾಗಿ ಮತ್ಪರಃ ನಾನೇ ಪರಮ ಪುರುಷಾರ್ಥ ಎಂಬ ಭಾವನೆಯುಳ್ಳವನಾಗಿ, ಯುಕ್ತಃ ಆಸೀತ= ಯೋಗ ಯುಕ್ತನಾಗಿರಬೇಕು.

ವಿವರಣೆ:- ಭಗವಂತ:– "ಭಾರತ, ವೃತ್ತಿಗಳನ್ನು ಅಡಗಿಸಿ ಶಿವನಲ್ಲಿ ಸಾಮರಸ್ಯ ಪಡೆಯುವದು ಯೋಗ. ಅದು ದೊರೆತಾಗ ದ್ರಷ್ಟುವಾದ ಜೀವನು ಸ್ವಸ್ವರೂಪದಲ್ಲಿ ನೆಲೆಸುತ್ತಾನೆ. ದೇಹ ಕರಣಗಳನ್ನು ಒಂದು ಉಪಾಯದಿಂದ ಅಂಕಿತಗೊಳಿಸಿಕೊಳ್ಳಬೇಕು. ಶುಚಿಯಾದ ವಿಮಲ ಸ್ಥಾನದಲ್ಲಿ ಗುರುವಿನ ಮಾರ್ಗದರ್ಶನದ ಕೆಳಗೆ ಯೋಗದ ಅಭ್ಯಾಸ ಪ್ರಾರಂಭಿಸಬೇಕು. ನೀಟಾಗಿ ಕುಳಿತುಕೊಳ್ಳುವದು, ಅನಿಮಿಷ ದೃಷ್ಟಿ ಇರಿಸುವದು, ಅನ್ಯತ್ರ ಮನ ಹರಿಸದೆ ನನ್ನಲ್ಲಿಯೇ ಪೂರ್ಣ ಶ್ರದ್ಧೆ ಇಡುವದು, ಬ್ರಹ್ಮಚರ್ಯ ವ್ರತಸ್ಥನಾಗಿರುವದು, ನಾನೇ ಪರಮ ಪುರುಷಾರ್ಥವೆಂದು ಭಾವಿಸುವದು ಸಾಧನಾ ಕ್ರಮವಾಗಿದೆ. ಈ ಕ್ರಮ ಅನುಸರಿಸಿದರೆ ಯೋಗವು ಸಿದ್ಧಿಸುತ್ತದೆ."

(೧) ಸಾಧನೆಗೆ ಕೂಡ್ರುವ ಪದ್ಧತಿ:

" ತ್ರಿರುನ್ನತಂ ಪ್ರಾಪ್ಯ ಸಮಂ ಶರೀರಂ । ಹೃದೀಂದ್ರಿಯಾಣಿ ಮನಸಾ ನಿರುಧ್ಯ ॥
ಬ್ರಹ್ಮೋಡುಪೇನ ಪ್ರತರೇತ ವಿದ್ವಾನ್ । ಸ್ರೋತಾಂಸಿ ಸರ್ವಾಣಿ ಭಯಾವಹಾನಿ ॥

ಎದೆ, ಕೊರಳು ಹಾಗು ತಲೆಗಳನ್ನು ಉನ್ನತವಾಗಿರಿಸಿ, ದೇಹವನ್ನು ಸಮರೇಷೆಯಲ್ಲಿ ಸ್ಥಿರಗೊಳಿಸಿ, ಮನದ ಮೂಲಕ ಹೃದಯದಲ್ಲಿ ಇಂದ್ರಿಯಗಳನ್ನು ನಿರೋಧಿಸಿ ವಿದುಷನು ಭಯಕಾರಿಯಾದ ಜನ್ಮಮರಣಾದಿ ಸರ್ವ ಸಂಸಾರ ಪ್ರವಾಹಗಳನ್ನು ಓಂಕಾರರೂಪ ಬ್ರಹ್ಮ–ನೌಕೆಯಿಂದ ದಾಟಬೇಕು. (ಶ್ವೇ. ಶ್ವ. ಉ.). ಯೋಗ ಸಾಧನೆಯಲ್ಲಿ ವಿಘ್ನಗಳು ಅನೇಕ; ನಿದ್ರಾ ಆಲಸ್ಯಗಳು ಸಾಕಷ್ಟು ತೊಂದರೆ ನೀಡುತ್ತವೆ. ಆದುದರಿಂದ, ಸಾಧಕನು ನಿದ್ರಾದಿಗಳ ಉಪಟಳ ತಪ್ಪಿಸುವದಕ್ಕೆಂದೇ ಬಹು ನೇರವಾಗಿ ಕುಳಿತುಕೊಳ್ಳಬೇಕು.

(೨) ನಾಸಿಕಾಗ್ರ ದೃಷ್ಟಿ:- ಸಾಧಕನು ತನ್ನ ದೃಷ್ಟಿಯನ್ನು ನಾಸಿಕದ ಅಗ್ರಭಾಗದ ಮೇಲೆ ಕೇಂದ್ರೀಕರಿಸಬೇಕು. ಹಾಗೆ ಮಾಡುವದರಿಂದ ತನ್ನ ದೇಹವೂ ಕಾಣುವದಿಲ್ಲ, ಹೊರಗಿನ ದಿಕ್ಕುಗಳೂ ತೋರುವದಿಲ್ಲ. ಮನಸ್ಸು ಭ್ರುಕುಟಿಯಲ್ಲಿರುವ ಓಂಕಾರ ಮೂರ್ತಿಯಲ್ಲಿ ನೆಲೆಸಲು ಪ್ರಾರಂಭಿಸುವದು. ಚ್ಯವನ ಋಷಿಗಳು ನಾಸಿಕಾಗ್ರ ದೃಷ್ಟಿಯಿಟ್ಟು ಹೂವಿನ ಪೊದೆಯಲ್ಲಿ ಧ್ಯಾನ ಮಗ್ನರಾಗಿ ಕುಳಿತ್ತಿದ್ದರು. ಆಗ, ಸುಕನ್ಯೆ ಎಂಬ ರಾಜಕುವರಿಯು ತಿಳಿಯದೆ ಅವರ ಹೊಳೆವ ಕಣ್ಣುಗಳಲ್ಲಿ ಕಟ್ಟಿಗೆಯಿಂದ ಚುಚ್ಚಿದಳು. ರಕ್ತ ಹರಿದರೂ ಮುನಿಯ ಮನಸ್ಸು ಧ್ಯಾನದಿಂದ ಹೊರಬರಲಿಲ್ಲ ! ಇದು ನಾಸಿಕಾಗ್ರ ದೃಷ್ಟಿಯ ಪ್ರಭಾವ.

(೩) ಪ್ರಶಾಂತಾತ್ಮಾ:– " ತಸ್ಯ ಪ್ರಶಾಂತವಾಹಿತಾ ಸಂಸ್ಕಾರಾತ್ " (ಯೋ.ಸೂ.೩–೧೦) ಆ ನಿರೋಧ ನಾಮಕ ಧ್ಯಾನಸ್ಥ ಚಿತ್ತವು ಸಂಸ್ಕಾರದ ಬಲದಿಂದ ಪ್ರಶಾಂತವಾಹಿನಿಯಾಗುತ್ತದೆ. ಈ ಪ್ರಮಾಣ ವಾಕ್ಯದಂತೆ, ವಿಮಲ ಸಂಸ್ಕಾರಗಳಿಂದ ಮನಸ್ಸು ಪ್ರಶಾಂತವಾಗುತ್ತದೆ.

ರಜ ತಮ ಸಂಸ್ಕಾರಗಳು ಸಮಲ. ಸತ್ವವೊಂದೇ ವಿಮಲ. ಸಮಲ ಅಥವಾ ಮಲಿನ ಸಂಸ್ಕಾರಗಳು ಮೇಲಿಂದ ಮೇಲೆ ಏಳುತ್ತಿದ್ದರೆ ಘೋರ ತಪಸ್ವಿ ಕೂಡ ಪತನ ಹೊಂದುತ್ತಾನೆ. ಆಸನ ಹಾಕಿದ ಮಾತ್ರಕ್ಕೆ, ನಾಸಿಕಾಗ್ರ ದೃಷ್ಟಿ ಸ್ಥಿರಗೊಳಿಸಿದ ಮಾತ್ರಕ್ಕೆ ಮಲಿನ ಸಂಸ್ಕಾರಗಳ ಪ್ರವಾಹ ನಿಂತೀತೆಂದು ಹೇಳಬರದು. ಉದಾ: ಮಹಾ ತಪಸ್ವಿ ವಿಶ್ವಾಮಿತ್ರನು ವನದಲ್ಲಿಯೇ ಇದ್ದ, ನಿರಾಹಾರಿಯಾಗಿ, ಭದ್ರ ಆಸನಸ್ಥನಾಗಿ, ದೃಷ್ಟಿಯನ್ನು ನಿಶ್ಚಲಗೊಳಿಸಿದ್ದರೂ ಕಾಮಸಂಸ್ಕಾರದ ಆಘಾತಕ್ಕೆ ಬಲಿಯಾದ !

ಸಾಧಕನು ಈ ಮಲಿನ ಸಂಸ್ಕಾರಗಳು ಏಳದಂತೆ ಜಾಗ್ರತೆ ವಹಿಸಬೇಕು. ಅದಕ್ಕೆ ಮೂರು ಸಂಗತಿಗಳು ಪಾಲನೀಯ: (೧) ಸಂತ ಸಂಗ (೨) ಬಲಾಢ್ಯ ಸದಿಚ್ಛೆ (೩) ಸದ್ವರ್ತನ.

"ಅನ್ನಾಹಾರಾರ್ಥಂ ಕರ್ಮ ಕುರ್ಯಾದನಿಂದ್ಯಮ್ ।
ಕುರ್ಯಾದಾಹಾರಂ ಪ್ರಾಣಸಂಧಾರಣಾರ್ಥಮ್ ॥
ಪ್ರಾಣಾಃ ಸಂಧಾರ್ಯಾಸ್ತತ್ತ್ವಜಿಜ್ಞಾಸನಾರ್ಥಮ್ ।

ತತ್ತ್ವಂ ಜಿಜ್ಞಾಸ್ಯಂ ಯೇನ ಭೂಯೋ ನ ದುಃಖಮ್॥"

ಅನ್ನ ಆಹಾರಕ್ಕಾಗಿ ಅನಿಂದ್ಯ ಕಾಯಕ ಮಾಡಬೇಕು. ಪ್ರಾಣ ರಕ್ಷಣೆಗಾಗಿ ಆ ಅನಿಂದ್ಯ ಆಹಾರ ಸ್ವೀಕರಿಸಬೇಕು. ತತ್ತ್ವ ಜಿಜ್ಞಾಸೆಗಾಗಿ ಪ್ರಾಣ ರಕ್ಷಿಸಬೇಕು. ಹಾಗು ಕೊನೆಯದಾಗಿ, ಯಾವುದರ ಜಿಜ್ಞಾಸೆಯಿಂದ ಮತ್ತೆ ಎಂದಿಗೂ ದುಃಖವು ಉಂಟಾಗಲಾರದೋ ಅಂಥ ತತ್ತ್ವವನ್ನು ಅರಿತುಕೊಳ್ಳಬೇಕು. ಹೀಗೆ ಬಲ್ಲವರ ಅಭಿಮತ. ಹೀಗೆ ಮಾಡಿದರೆ ಮಲಿನ ವೃತ್ತಿಗಳು ಅಡಗಿ ನಿರ್ಮಲ ಸಂಸ್ಕಾರ ಗಳು ಏಳುತ್ತವೆ. ಆಗ ಮನಸ್ಸು ಪ್ರಶಾಂತವಾಗುತ್ತದೆ. ಅಂಥ ಮನ ಉಳ್ಳವನು ಪ್ರಶಾಂತಾತ್ಮ.

(೪) ನಿರ್ಭೀತ (ವಿಗತ ಭೀಃ) :– ಮಡದಿ ಮಕ್ಕಳು, ಬಂಧು ಬಾಂಧ ವರು, ಪಶು ಪಕ್ಷಿಗಳು, ಕಾಡು ಪ್ರಾಣಿಗಳು, ರೋಗ ರುಜಿನಗಳು ಯೋಗಾಭ್ಯಾ ಸಕ್ಕೆ ಬಾಧಕ. ಅವುಗಳ ಬಗೆಗೆ ಭಯವಿಲ್ಲದಿರುವದು ನಿರ್ಭೀಕತೆ! ಅಂದರೆ ಸಾಧ ಕನಿಗೆ ಬಾಹ್ಯ ವಸ್ತುಗಳಿಂದ, ಪಶು ಪಕ್ಷಿ ಮಾನವರಿಂದ ಎಷ್ಟೋ ತೊಂದರೆ ಉಂಟಾದರೂ ಅತ್ತ ಅಲಕ್ಷನಾಗಿರುವದು ಅವಶ್ಯ. ಹಾಗೆ ಅಲಕ್ಷಿಸಿದರೆ ಆ ಕಷ್ಟ ಗಳು ತಮ್ಮಷ್ಟಕ್ಕೆ ತಾವೆ ಅಡಗುವವು.

(೫) ಬ್ರಹ್ಮಚಾರೀ ವ್ರತೇ ಸ್ಥಿತಾಃ:- ಬ್ರಹ್ಮನಂತೆ ಇಂದ್ರಿಯ, ಮನಸ್ಸು ಗಳಲ್ಲಿ ವಿಕಾರ ತಾಳದಿರುವದು ಬ್ರಹ್ಮಚರ್ಯ. ಇದು ಪಾವನ ರತ್ನ; ಮುಕ್ತಿ ದಾಯಕ ಶೀಲ. ಈ ಬ್ರಹ್ಮಚರ್ಯ ಪೋಷಕ ಆಚಾರಗಳಿಗೆ ಬ್ರಹ್ಮಚಾರೀ ವ್ರತ ಎನ್ನುತ್ತಾರೆ. ಈ ವ್ರತಗಳು ಹೀಗಿವೆ: (ಅ) ನಿತ್ಯಾನಿತ್ಯ ವಸ್ತುವಿವೇಕ. (ಆ) ಭೋಗೇಚ್ಛೆ ತೊರೆಯುವ ವಿರಾಗ (ಇ) ಶಮ ದಮಾದಿ ಸದ್ಗುಣ ಸಂಪದ. (ಈ) ಮುಕ್ತಿಯ ಆಸೆ (ಉ) ಗುರುಪಾದಸೇವೆ, (ಊ) ಶಾಸ್ತ್ರಾದಿಗಳ ಸ್ವಾಧ್ಯಾಯ (ಎ) ಶರೀರಾದಿ ಉಪಾಧಿಗಳ ಆಸಕ್ತಿ ತ್ಯಾಗ (ಏ) ದೇವಾನುಗ್ರಹದ ಇಚ್ಛೆ (ಐ) ಸ್ನಾನಾರ್ಚನೆ, (ಒ) ಮಿತ ಭಿಕ್ಷೆ (ಓ) ದೊರೆತುದರಲ್ಲಿ ಸಂತುಷ್ಟಿ. ಈ ವ್ರತಗಳಿಂದ ಕೂಡಿಕೊಂಡು ಸಾಧಕನು ಬ್ರಹ್ಮಚರ್ಯ ಪರಿಪಾಲಿಸುತ್ತಾನೆ.

(೬) ಮನಸ್ಸಂಯಮನಃ– ಮನಸ್ಸು ಸ್ವಭಾವತಃ ಚಂಚಲ, ಸಹಜ ವಾಗಿಯೇ ವಿಷಯ ಚಿಂತನೆಗೆ ತೊಡಗುತ್ತದೆ. ಸುತ್ತೆಲ್ಲ ಯೋಗಿಗಳು, ಜನ ಸಂದಣಿಯಿಲ್ಲದ ಪಾವನ ಆಶ್ರಮ, ವಿಷಯ ಸಂಬಂಧವೇ ಇಲ್ಲದ ಪರಿಸರ– ಇಷ್ಟಿದ್ದರೂ ಕೂಡ ಮನವು ಕ್ಷಣಾರ್ಧದಲ್ಲಿ ವಿಷಯ ಕಲ್ಪನಾ ರಾಜ್ಯವನ್ನೇ ರಚಿಸಿ ಅದರಲ್ಲಿ ವಿಹಾರ ಮಾಡುತ್ತದೆ; ಸ್ವಾದಾನ್ನಾದಿಗಳಿಗೆ ಎಳಸುತ್ತದೆ. ಇಂಥ ಮನಸ್ಸನ್ನು ವ್ಯಸನ ಮುಖಿಯಾಗದಂತೆ ತಡೆಯುವದೇ ಮನಸ್ಸಂಯಮನ.

(೭) ಮಚ್ಚಿತ್ತಃ :- ಹಾಗೆ ಸಂಯಮನವಾದ ಚಿತ್ತವು ಧ್ಯೇಯ ಮೂರ್ತಿ ಯಾದ ದೇವನಲ್ಲಿ ನೆಲೆಸುವದಕ್ಕೆ ಮಚ್ಚಿತ್ತವೆನ್ನುತ್ತಾರೆ. ಧ್ಯೇಯ ಮೂರ್ತಿಯು

ಸಾಕಾರವಿರಬಹುದು ಇಲ್ಲವೆ ನಿರಾಕಾರವಿರಬಹುದು. ಸಾಕಾರ ಧ್ಯೇಯ ಮೂರ್ತಿಯಲ್ಲಿ ಮನಸ್ಸು ಸ್ಥಿತವಾದರೆ ಅದಕ್ಕೆ ಸಾಕಾರ ಧ್ಯಾನ ಎನ್ನುತ್ತಾರೆ. ಸಾಕಾರ ಮೂರ್ತಿಗಳ ಪ್ರಕಾಶಕ ನಿರಾಕಾರ ಚೇತನದತ್ತ ಮನಸ್ಸನ್ನು ಪ್ರವಾಹವಾಗಿ ಹರಿಸುವದು ನಿರಾಕಾರ ಧ್ಯಾನ.

(೮) ಮತ್ಪರಃ :- (ನಾನು =ಪರಮಾತ್ಮ). ಪರಮಾತ್ಮನು ಶ್ರೇಷ್ಠ, ವಿಷಯಗಳು ಕನಿಷ್ಠ ಎಂದು ಭಾವಿಸಿ ಹೃದಯದಲ್ಲಿ ಪರಮಾತ್ಮನ ವಿಮಲ ಮೂರ್ತಿಯನ್ನು ಸ್ಥಿರಗೊಳಿಸುವದೇ ಮತ್ಪರತೆ; ದೇವ ತತ್ಪರತೆ!

(೯) ಯುಕ್ತಃ ಆಸೀತ:- ಹೀಗೆ ಸರ್ವ ಮುಖದಿಂದ ದೇವನನ್ನು ಚಿಂತಿಸುವ ಸಾಧಕನು ನಿಶ್ಚಿತವಾಗಿಯೂ ಯೋಗನಿಷ್ಠನಾಗುತ್ತಾನೆ, ಜೀವ ಶಿವೈಕ್ಯ ಹೊಂದುತ್ತಾನೆ.

**ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥೧೫॥**

**ಅರ್ಥ:-** ಏವಂ= ಈ ರೀತಿ ಆತ್ಮಾನಂ= ಮನಸ್ಸನ್ನು ಸದಾ = ಯಾವಾಗಲು, ಯುಂಜನ್= ದೇವ ಚಿಂತನಾ ತತ್ಪರಗೊಳಿಸುತ್ತ ನಿಯತ ಮಾನಸಃ= ಮನಸ್ಸನ್ನು ನಿರುದ್ಧ ಮಾಡಿದ ಯೋಗೀ= ಯೋಗಿಯು ಮತ್ಸಂಸ್ಥಾಂ =ನನ್ನ ಸ್ವರೂಪಭೂತವಾದ, ನಿರ್ವಾಣ ಪರಮಾಂ= ನಿರ್ವಾಣದ ಸ್ವರೂಪವಾದ, ಶಾಂತಿಂ= ಶಾಂತಿಯನ್ನು, ಅಧಿಗಚ್ಛತಿ= ಹೊಂದುತ್ತಾನೆ.

**ವಿವರಣೆ:–** ಪ್ರಕೃತಿ, ಪುರುಷ ಇವೆರಡು ವಿಶ್ವದ ಮಹಾನ್ ಸತ್ಯಗಳು. ಪುರುಷನು ಚೇತನಾರೂಪ, ಪ್ರಕೃತಿಯು ಜಡ ರೂಪ; ಪುರುಷನು ಅವಿಕಾರಿ ಅಚಿಂತ್ಯ,ಅನಂತ, ಪ್ರಕೃತಿಯು ವಿಕಾರಿ, ಸಚಿಂತ್ಯ ಹಾಗು ವಿಭಿನ್ನ ಗುಣಧರ್ಮಿಣಿ. ಸರ್ವ ವಿಶ್ವದ ಬೃಹತ್ ಗರ್ಭವಾದ, ಲಯ ಭಾಂಡವಾದ ಪ್ರಕೃತಿಯ ರೂಪುಗಳು ಎರಡು. (೧) ಸಾಮ್ಯರೂಪ: ಸತ್ವಾದಿ ಗುಣಗಳ ಸ್ಪಂದನೆಯಿಲ್ಲದ ಅವ್ಯಕ್ತ ಸ್ಥಿತಿ. (೨) ವಿಕಾಸ ರೂಪ: ಸತ್ವಾದಿ ಗುಣಗಳ- ಸ್ಪಂದನೆಯುಳ್ಳ ವ್ಯಕ್ತ ಸ್ಥಿತಿ. "ವಿಶೇಷಾವಿಶೇಷ ಲಿಂಗಮಾತ್ರಾಲಿಂಗಾನಿ ಗುಣಪರ್ವಾಣಿ" (ಪಾ. ಯೋ. ಸೂ. ೨-೧೯) ವಿಶೇಷ, ಅವಿಶೇಷ, ಲಿಂಗ ಮಾತ್ರ ಹಾಗು ಅಲಿಂಗ ಇವು ಪ್ರಕೃತಿಯ ನಾಲ್ಕು ಗುಣ ರೂಪುಗಳು. ಇದು ಪ್ರಮಾಣ ವಚನ. ಅಲಿಂಗ ಎಂಬುದು ಪ್ರಕೃತಿಯ ಸಾಮ್ಯರೂಪ. ಉಳಿದ ಮೂರು ವಿಕಾಸರೂಪ ಪ್ರಕೃತಿಯ ವಿಭಿನ್ನ ರೂಪುಗಳು. ಅವುಗಳ ಸಂಕ್ಷಿಪ್ತ ವಿವರ.

(೧) ವಿಶೇಷ:- ಪಂಚಭೂತಗಳು, ಪಂಚ ಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು ಮತ್ತು ಮನಸ್ಸು ಈ ಹದಿನಾರು ಸ್ಥೂಲ ವಿಕೃತ ತತ್ತ್ವಗಳು. ಇವುಗಳಲ್ಲಿ ಶಾಂತ, ಘೋರ, ಮೂಢ ಎಂಬ ಮೂರು ಗುಣವೃತ್ತಿಗಳು ವಿಶೇಷವಾಗಿ ನೆಲೆಸಿರುವದರಿಂದ ಇವುಗಳಿಗೆ ವಿಶೇಷ ತತ್ತ್ವ ಎನ್ನುತ್ತಾರೆ.

(೨) ಅವಿಶೇಷ:- ಶಬ್ದ ಸ್ಪರ್ಶ ರೂಪ ರಸ ಗಂಧ ಈ ಗುಣಗಳಿಗೆ ಭಿನ್ನವೂ ಕಾರಣರೂಪವೂ ಆದ ಪಂಚ ತನ್ಮಾತ್ರೆಗಳಿವೆ. ಅವುಗಳಿಂದಲೇ ಪಂಚ ಭೂತೋತ್ಪತ್ತಿ. ಅಂತಃಕರಣಗತ ಅಹಂಕಾರಕ್ಕೆ ಭಿನ್ನವೂ ಮಹಾ ಕಾರಣವೂ ಆದ ಅಹಂಕಾರವೊಂದಿದೆ; ಅದರಿಂದಲೇ ಪಂಚ ತನ್ಮಾತ್ರಾ ಉತ್ಪತ್ತಿ, ಇಂದ್ರಿಯ ಕರಣಗಳ ಸೃಷ್ಟಿ. ಪಂಚ ತನ್ಮಾತ್ರೆ ಮತ್ತು ಅಹಂಕಾರ ಈ ಆರು ತತ್ತ್ವಗಳಲ್ಲಿ ಶಾಂತಾದಿ ವೃತ್ತಿಗಳಿಲ್ಲವಾಗಿ ಇಂದ್ರಿಯಾವೇದ್ಯ; ಆದ್ದರಿಂದ ಅವು ಅವಿಶೇಷ ತತ್ತ್ವ ಎನಿಸಿವೆ,

(೩) ಲಿಂಗ ಮಾತ್ರ:- ವಿಶೇಷ ಮತ್ತು ಅವಿಶೇಷ ತತ್ತ್ವಗಳ ಜನ್ಮ ಭೂಮಿಯು ಮಹತ್ತು. ಇದು ಪ್ರಕೃತಿಯ ಪ್ರಥಮ ಸ್ಫುರಣೆ. ಇಲ್ಲಿಗೆ ಸಾಧಕ ಬಂದರೆ ಇತರಜ್ಞಪ್ತಿಶೂನ್ಯ ಸ್ವಜ್ಞಪ್ತಿಯ ಅನುಭವ ಬರುತ್ತದೆ. ಈ ಮಹತ್ತಿಗೆ ಲಿಂಗ ಮಾತ್ರವೆಂದು ನಾಮ.

(೪) ಅಲಿಂಗ:- ಮಹತ್ತತ್ತ್ವದ ಆಚೆ ಪ್ರಕೃತಿ; ಅಲ್ಲಿ ಗುಣಗಳೆಲ್ಲ ಸಾಮ್ಯ ಸ್ಥಿತಿಯಲ್ಲಿವೆ. ಅಲ್ಲಿ ಇತರ ಜ್ಞಪ್ತಿ ಮತ್ತು ಸ್ವಜ್ಞಪ್ತಿ ಎರಡೂ ಭಾವಗಳಿಲ್ಲ. ಆದುದರಿಂದ ಅದು ಅಲಿಂಗ, ಮೂಲ ಪ್ರಕೃತಿ! ವಿಶ್ವದ ಆತ್ಯಂತಿಕ ಕಾರಣ!

"ವಿಶೇಷ" ತತ್ತ್ವಗಳಿಂದ ಅಸಂಖ್ಯ ವಿಷಯಗಳು ತೋರಿವೆ. ಅವುಗಳ ವ್ಯಾಮೋಹ ಜಾಲದಲ್ಲಿ ಬದುಕುವ ಜೀವನು ಇಹ ಸಂಸಾರಿ. ಅವಿಶೇಷ ತತ್ತ್ವಗಳಿಂದಾದುದು ಸ್ವರ್ಗ ವೈಭವ. ಅದರ ಉಪಭೋಗದಲ್ಲಿ ಆಸಕ್ತನಾದವನು ಪರ–ಸಂಸಾರಿ. ಲಿಂಗ ತತ್ತ್ವದರ್ಶನದಿಂದ ಬ್ರಹ್ಮಾದಿ ಪದವಿಗಳ ಪ್ರಾಪ್ತಿ. ಅಲಿಂಗ ತತ್ತ್ವದರ್ಶನದಿಂದ ಅಷ್ಟ ಮಹಾ ಸಿದ್ಧಿಗಳ ಗಳಿಕೆ.

ಈ ನಾಲ್ಕು ವಿಧದ ಪ್ರಾಕೃತಿಕ ಭೋಗ ವೈಭವಗಳು ಜಗತ್ತನ್ನೇ ಮರುಳ ಮಾಡಿವೆ. ಅನೇಕ ಋಷಿ ಮುನಿಗಳು ಕೂಡ ಅದರ ಸೌಂದರ್ಯಕ್ಕೆ ಮನಸೋತರು! ಉದಾಹರಣೆಗಾಗಿ, ಅಚಲ ನಿರ್ಣಯದ ಋಷಿ ವಿಶ್ವಾಮಿತ್ರ; ಮೇನಕೆಯ ರೂಪ, ಲಾವಣ್ಯ, ಹಾವಭಾವ, ಮಧುರ ಧ್ವನಿಗಳಿಗೆ ಮನಸೋತ! ಪ್ರಾಕೃತಿಕ ವಿಶ್ವ ಎಂಬುದು ಮನೋಹರವಾದ ಆಧುನಿಕ 'ಹಾಟೆಲ'. ಅಲ್ಲಿ ಸಂಗೀತ, ಮಿಷ್ಟಾನ್ನ, ಸುರುಚಿ ಪೇಯ, ಲೇಹ್ಯ, ನರ್ತನ, ನರ್ತಕೀಯರ ಮೇಳ–ಏನೆಲ್ಲ ಇದೆ. ಪ್ರಕೃತಿ ಭಿನ್ನವಾದ ಪುರುಷ ತತ್ತ್ವವು ಮಾತ್ರ ಅಚಲ, ಅದ್ವಯ, ಅಪರಿಣಾಮಿ. ಇಲ್ಲಿ ರೂಪ ರಾಗಗಳಿಲ್ಲ; ರಸ ಸ್ವಾದಗಳಿಲ್ಲ! ಆ ಮನೋಹರ ಪ್ರಕೃತಿ ವೈಭವ ತೊರೆದು ನೀರಸವಾದ ಈ ಪುರುಷ ತತ್ತ್ವದತ್ತ ಮನಸ್ಸು ಹಾಕುವವರು ಯಾರು? ಕಣ್ಣೆದುರಿಗೆ ಇಹ ಪರದೇವ ದೇವತೆಗಳ ಭೋಗ ಬಂದಾಗ, ಮಹಾ ಮಹಾ ಸಿದ್ಧಿಗಳು ಆಳಾಗಿ ನಿಂತಾಗ ಅವುಗಳತ್ತ ಮನಸ್ಸು ಹಾಕದೆ ನಿಶ್ಶೂನ್ಯ ದೇವನನ್ನು ನೆನೆಸುವವರು ಎಲ್ಲಿ ಸಿಕ್ಕಾರು? ನಾವು ಅರಿವಿಲ್ಲದ

ಬಾಲರು. ಸಂಸಾರ ಮಲದಲ್ಲಿ ಕೈಯಿಟ್ಟು ಆಡುತ್ತಿದ್ದೇವೆ. ಸುಖ ಪಡುತ್ತಿದ್ದೇವೆ, ಮೈಗೆಲ್ಲ ಮೆತ್ತಿಕೊಳ್ಳುತ್ತಿದ್ದೇವೆ. ಶ್ರುತಿ ಮಾತೆ ಬಂದು "ತಡೆ, ತಡೆ, ಅದೆಲ್ಲ ಹೊಲಸು. ಮುಟ್ಟಬೇಡ" ಎಂದು ವಿಧಿಸುತ್ತಾಳೆ; ಆ ಕ್ಷಣಮಾತ್ರ ಸಂಸಾರದಿಂದ ಕೈತೆಗೆದು ಆಕೆಯತ್ತ ನೋಡುತ್ತೇವೆ. ಆಕೆ ಸ್ವಲ್ಪ ಮರೆಯಾಗುವದೇ ತಡ ಮತ್ತೆ ಅದೇ ಮಲದಲ್ಲಿ ಆಡುತ್ತೇವೆ.

ಯೋಗಿಯು ಹಾಗಲ್ಲ. ಪ್ರಕೃತಿ ವಿಲಾಸದಲ್ಲಿ ಅವನು ನಿರಾಸಕ್ತ. ಶ್ರುತಿ ವಾಣಿಯಲ್ಲಿ ಅವನಿಗೆ ಪೂರ್ಣ ನಂಬಿಗೆ. ಅವನ ಒಲವೆಲ್ಲ ದೇವನತ್ತ! ಅವನಿಗೆ ಜಗತ್ತು ಹೇಗೆ ಕಾಣುವದೆಂಬುದನ್ನು ಶ್ರೀ ನಿಜಗುಣರ ಒಂದು ಪದದಲ್ಲಿ ನೋಡಬೇಕು.

"ಕೇಡಿಲ್ಲದುಳ್ಳದೆನಿಸುವ ವಿಶ್ವ ವಿಷಯದೊಳು । ಮಾಡಲುದಾಸೀನವನದೀಗಳೇ ಮಹಾ ವಿರತಿ ॥ಪ॥ ಧರೆ ಗೋವಿನಡಿ ಮೇರುಗಿರಿಯೊಂದು ಮೊರಡೆಯೇಳು । ಶರಧಿ ಪಚ್ಚರೆ ದಶ ದಿಕ್ಕು ದೇಹಲಿ ॥ ನೆರೆದ ಜನವೇ ಚಿತ್ರದಿರವಜಾಂಡವೆ ಚಂಡು । ಸುರತರು ನಿಂಬಭೂಜವಾಗಲದೆ ವಿರತಿ ॥೧॥ ಜಗವಿದು ತೃಣವಜಹರಿಸುರಪದವಣು । ವಗಣಿತ ಸಿದ್ಧಿ ನಾಟಕದ ರಚನೆ ॥ ಬಗೆವೊಡೀ ತನು ಭಿನ್ನ ಘಟ ವಂಗನಾದಿ ಭೋಗ । ದೊಗುಮಿಗೆ ನಿರಸವೆನಿಸೆ ವಿರತಿ ॥೨॥ ನಿರುಪಮಾದ್ವಯ ನಿತ್ಯ ಸುಖ ಬೋಧ ರೂಪನಾದ । ಗುರು ಶಂಭುಲಿಂಗವೆ ತಾನಾಗಿ ಮಿಕ್ಕಿನ ॥ ವರಗತಿಗಳೆಲ್ಲವನು ಹೇಯವೆಂಬ ಮತಿ । ದೊರೆದಚಲಿತವಾಗಲದೇ ವಿರತಿ ॥೩॥"

ಯೋಗದಲ್ಲಿ ಪರಿಣತಿ ಪಡೆಯಲೆಂದು ಹೆಣಗುವ ಸಾಧಕನು ಪರಾವೈರಾಗ್ಯವೆಂಬ ಕವಚ ತೊಟ್ಟು ದೇವನತ್ತ ಯಾತ್ರೆ ಮಾಡಬೇಕು. ಇದಕ್ಕೆ ಅಭ್ಯಾಸ ಎನ್ನುತ್ತಾರೆ. ಈ ಅಭ್ಯಾಸದ ವಿವರ ಪ್ರಸ್ತುತ ಮಂತ್ರದಲ್ಲಿದೆ.

(೧) ಯೋಗೀ ಸದಾ ಆತ್ಮಾನಂ ಯುಂಜನ್, ನಿಯತ ಮಾನಸಃ ಸನ್: ಆತ್ಮಾ ಎಂದರೆ ಮನಸ್ಸು. ಪ್ರಾಕೃತಿಕ ಸಂಸಾರ ಜಂಜಡದಿಂದ ಮುಕ್ತಗೊಳಿಸಿ ಆತ್ಮ ಚಿಂತನೆಗೆ ತೊಡಗಿಸುವದು ಏಕಾಗ್ರತಾ ರೂಪ ಯೋಗ. ಮನಸ್ಸನ್ನು ಭವದಿಂದ ದೇವನತ್ತ ಅವ್ಯಾಹತವಾಗಿ ಎಳೆದೊಯ್ಯುವದೆಂದರೆ ತುಂಬಿದ ಟ್ರಕ್ಕನ್ನು ಎತ್ತರವಾದ ಘಟ್ಟ ಏರಿಸಿದಷ್ಟೇ ಕಷ್ಟಕರ. ಒಂದು ಚಣ ನಿರ್ಲಕ್ಷ ಮಾಡಿದರೆ ಟ್ರಕ್ಕು ಹಿಂದೆ ಉರುಳಿ ಕೊಳ್ಳ ಸೇರುವದು. ಹಾಗೆ ಸಾಧಕ ಯೋಗಿಯು ಒಂದು ನಿಮಿಷ ಆಲಸ್ಯ ತೋರಿದರೂ "ಪುನರನಿಷ್ಟ ಪ್ರಸಂಗಾತ್" ಮತ್ತೆ ಸಂಸಾರ ಕಂದರದಲ್ಲಿ ತಲೆ ಕೆಳಗಾಗಿ ಬೀಳುತ್ತಾನೆ. ಬಹು ಜಾಗ್ರತೆಯಿಂದ ಅವನು ಧ್ಯಾನ ಕ್ರಿಯೆಯಲ್ಲಿ ಮುಳುಗಬೇಕು.

ಹೀಗೆ ಮನಸ್ಸನ್ನು ದೇವಧ್ಯಾನದಲ್ಲಿ ತೊಡಗಿಸಿ (ಆತ್ಮಾನಂ ಯುಂಜನ್) ನಂತರ ಆ ಧ್ಯಾನದ ಪರಿಪಕ್ವ ಸ್ಥಿತಿಯನ್ನು ಗಳಿಸಿದರೆ ಮನಸ್ಸು "ನಿಯತ" ನಿರುದ್ಧವಾಗುತ್ತದೆ. ಧ್ಯಾನದಲ್ಲಿರುವ ತ್ರಿಪುಟಿ ಭಾವ ಅಳಿದು ಅದ್ವಯ ಪ್ರಜ್ಞೆ ಆವಿರ್ಭವಿಸುತ್ತದೆ. ದ್ರಷ್ಟನು ಧ್ಯೇಯದಲ್ಲಿ ಒಂದಾಗುತ್ತಾನೆ.

(೨) ಮತ್ಸಂಸ್ಥಾಂ ನಿರ್ವಾಣ ಪರಮಾಂ ಶಾಂತಿಂ ಯೋಗೀ ಅಧಿಗಚ್ಛತಿ:– ಹೂದೋಟದತ್ತ ಹೆಜ್ಜೆ ಹಾಕುತ್ತಿರುವ ವ್ಯಕ್ತಿ ಇನ್ನೂ ದೂರಿರುವಾಗಲೇ ಹೂವಿನ ಮಕರಂದ ಆಸ್ವಾದಿಸುತ್ತಾನೆ; ಹಾಗೆಯೇ ಸಾಗಿ ತೋಟದಲ್ಲಿ ಕುಳಿತು ಬಿಟ್ಟನೆಂದರೆ ಪರಿಮಳದಲ್ಲಿ ಮುಳುಗಿ ಹೋಗುತ್ತಾನೆ. ಅದರಂತೆ ದೇವನತ್ತ ಸಾಗಿದ ಯಾತ್ರಿಕನು ಧ್ಯಾನ-ಅವಸ್ಥೆಗೆ ಬಂದ ತಕ್ಷಣ ದೇವನ ಆನಂದಾಮೃತವನ್ನು ಆಘ್ರಾಣಿಸುತ್ತಾನೆ. ಕೊನೆಯಲ್ಲಿ ಮನಸ್ಸನ್ನು ನಿರುದ್ಧ ಮಾಡಿ ಅಮರ ಬಯಲಿನಲಿ ಒಂದಾಗುತ್ತಾನೆ. ಪರಬ್ರಹ್ಮನ ಅನುಪಮ ಶಾಂತಿಯನ್ನು ಅನುಭವಿಸುತ್ತಾನೆ.

ಸಂಬಂಧ:- ಎಂಥವನಿಗೆ ಯೋಗ ಸಾಧಿಸದು?

ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತ: ।
ನ ಚಾತಿ ಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥೧೬॥

ಅರ್ಥ:–ಅತಿ ಅಶ್ನತಃ ತು=ಹೆಚ್ಚು ತಿನ್ನುವವನಿಗೆ, ಏಕಾಂತಂ ಅನಶ್ನತಃ=ಏನನ್ನು ತಿನ್ನದಿರುವವನಿಗೆ, ಅತಿ ಸ್ವಪ್ನ ಶೀಲಸ್ಯ=ಹೆಚ್ಚು ನಿದ್ರಿಸುವವನಿಗೆ, ಜಾಗ್ರತಃ ಏವ= ಮತ್ತು ಹೆಚ್ಚು ಜಾಗ್ರವಿರುವವನಿಗೆ, ನ ಯೋಗಃ ಅಸ್ತಿ= ಯೋಗವಿಲ್ಲ.

ವಿವರಣೆ:– ಭಗವಂತ:– "ಅರ್ಜುನ, ಮಿತಿಗೆಟ್ಟು ತಿನ್ನುವದರಿಂದ ಆಲಸ್ಯ ಹೆಚ್ಚುತ್ತದೆ. ಸದಾ ಉಪವಾಸ ಮಾಡುವದರಿಂದ ನಿರುತ್ಸಾಹ ಹಾಗು ನಿರ್ವೀರ್ಯತೆಗಳು ಬೆಳೆಯುತ್ತವೆ. ಅತಿ ನಿದ್ರೆಯು ಮತಿಜಾಡ್ಯಕ್ಕೆ ಕಾರಣ. ಅತಿ ಜಾಗ್ರವು ಸ್ಮೃತಿ ಭ್ರಮೆಗೆ ಕಾರಣ. ಹೀಗಾಗಿ ಈ ನಾಲ್ಕರ ಅತಿರೇಕದಲ್ಲಿ ತೊಡಗಿದವರಿಗೆ ಮನೋಲಯರೂಪ ಯೋಗ ಎಂದಿಗೂ ಸಾಧಿಸದು."

ಸಂಬಂಧ:– ಎಂಥವನಿಗೆ ಯೋಗ ಸಾಧಿಸುವದು?

ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತ ಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥೧೭॥

ಅರ್ಥ:- ಯುಕ್ತಾಹಾರವಿಹಾರಸ್ಯ =ಮಿತ ಆಹಾರ ವಿಹಾರ (ವಿಹಾರಃ ಗತಿಃ), ಉಳ್ಳ, ಕರ್ಮಸು ಯುಕ್ತ ಚೇಷ್ಟಸ್ಯ= ಕರ್ಮಗಳಲ್ಲಿ ಮಿತವಾಗಿ ವ್ಯವಹರಿಸುವ, ಯುಕ್ತ ಸ್ವಪ್ನಾವಬೋಧಸ್ಯ= ಮಿತ ನಿದ್ರೆ ಜಾಗ್ರಗಳುಳ್ಳ (ಸಾಧಕನಿಗೆ) ಯೋಗಃ ದುಃಖಹಾ ಭವತಿ = ದುಃಖನಾಶಕ ಯೋಗವು ಸಮನಿಸುತ್ತದೆ.

ವಿವರಣೆ:- ಧರ್ಮ ಅರ್ಥ ಕಾಮ ಮೋಕ್ಷ ಯಾವುದನ್ನು ಸಾಧಿಸಬೇಕಾದರೂ ದೇಹ ಅಗತ್ಯ. ದೇಹ ನಶ್ವರ, ರೋಗದ ತವರು ನಿಜ. ಅದನ್ನು ಬಿಟ್ಟು ಸಿದ್ಧಿಯನ್ನು ಪಡೆಯಬರದು. ದೇವನ ಅನುಗ್ರಹದಿಂದ ದೊರೆತ ದೇಹವು ಕೆಡದಂತೆ ಬಹು ಜಾಣ್ಮೆಯಿಂದ ಪೋಷಿಸಬೇಕು. ಬಳಿಕ ಆ ದೇಹದೊಳಗಿನ ಮನಸ್ಸನ್ನು ಸಬಲಗೊಳಿಸಬೇಕು. ಆಗ ಯೋಗವು ಸಹಜವಾಗಿ ಅಳವಡುತ್ತದೆ. ಇದೇ ಮಾತನ್ನು ಭಗವಂತನು ಪ್ರಸ್ತುತ ಮಂತ್ರದಲ್ಲಿ ವಿವರಿಸಿದ್ದಾನೆ. ಯುಕ್ತಾಹಾರ,

ಯುಕ್ತವಿಹಾರ, ಯುಕ್ತ ಕರ್ಮ, ಯುಕ್ತ ನಿದ್ರಾ, ಯುಕ್ತ ಜಾಗ್ರಗಳಲ್ಲಿ ಪರಿಣತಿ ಪಡೆದ ಸಾಧಕನಿಗೆ ಯೋಗ ಸಾಧನೆ ಸುಲಭ ಎಂದು ಭಗವಂತನ ಉಪದೇಶ.

ಗೋಧೂಮ ಶಾಲಿ ಯವಷಾಷ್ಟಿಕ ಶೋಭನಾನ್ನಮ್।
ಕ್ಷೀರಾಜ್ಯಖಂಡ ನವನೀತ ಸಿತಾ ಮಧೂನಿ ॥
ಶುಂಠೀ ಪಟೋಲಕ ಫಲಾದಿಕ ಪಂಚಶಾಕಮ್ ।
ಮುದ್ಗಾದಿ ದಿವ್ಯಮುದಕಂ ಚ ಯಮೀಂದ್ರ ಪಥ್ಯಮ್ ॥

ಗೋದಿ ಅಕ್ಕಿ ಮುಂತಾದ ಶುದ್ಧ ಅನ್ನ, ಹಾಲು ಮೊಸರು ಬೆಣ್ಣೆ ತುಪ್ಪ ಜೇನು ಸುಂಠಿ ಹೆಸರು ಪಂಚಶಾಕ ಮುಂತಾದ ಪದಾರ್ಥಗಳು ಭೋಜ್ಯವಾಗಿವೆ. ಅವುಗಳನ್ನು ಯೋಗ ಸಾಧಕನು ಸೇವಿಸಬೇಕು. ಮಳೆಯಿಂದ ದೊರೆಯುವ ನೀರನ್ನೇ ಅವನು ಕುಡಿಯಬೇಕು; ಅಥವಾ ಅತ್ಯಂತ ಶುದ್ಧವಾದ ಗಂಗಾಜಲ ದಂಥ ನೀರನ್ನು ಕುಡಿಯಬೇಕು. (ಹಠಯೋಗ ೧-೬೨)

ಪುಷ್ಟಂ ಸುಮಧುರಂ ಸ್ನಿಗ್ಧಂ ಗವ್ಯಂ ಧಾತು ಪ್ರಪೋಷಣಮ್ ।
ಮನೋಭಿಲಷಿತಂ ಯೋಗ್ಯಂ ಯೋಗೀ ಭೋಜನಮಾಚರೇತ್ ॥

ಪುಷ್ಟಿಕರವಾದ, ಮಧುರವಾದ, ಘೃತಯುಕ್ತವಾದ, ಗವ್ಯ (ಆಕಳಹಾಲು ಮೊಸರು ಮಜ್ಜಿಗೆ ಬೆಣ್ಣೆ ತುಪ್ಪ) ಗಳಿಂದ ಕೂಡಿದ, ಮನಸ್ಸಿಗೆ ಪ್ರಸನ್ನತೆ ನೀಡುವ ಭೋಜನವು ಯೋಗ್ಯ. ಯೋಗಿಯು ಅಂಥ ಆಹಾರವನ್ನೇ ಸೇವಿಸ ಬೇಕು. (ಹಠಯೋಗ ೧-೬೩)

ಯದು ಹ ವಾ ಆತ್ಮಸಮ್ಮಿತಮನ್ನಂ ತದವತಿ। ತನ್ನ ಹಿನಸ್ತಿ ।
ಯದ್ಭೂಯೋ ಹಿನಸ್ತಿ ತದ್ಯತ್ಕನೀಯೋ ನ ತದವತಿ॥

ದೇಹಕ್ಕೆ ಹಿತವಾದ ಆಹಾರವು ದೇಹವನ್ನು ರಕ್ಷಿಸುತ್ತದೆ, ನಾಶ ಮಾಡುವದಿಲ್ಲ. ಅನ್ನದ ಪ್ರಮಾಣವು ಅತಿಯಾದರೆ ಅಥವಾ ತೀರ ಕಡಿಮೆಯಾದರೆ ಅದು ದೇಹ ವನ್ನು ರಕ್ಷಿಸದು. (ಶತಪಥ).

ಆಹಾರ ಶುದ್ಧೌ ಸತ್ವಶುದ್ಧಿಃ ಸತ್ವಶುದ್ಧೌ ಧ್ರುವಾ ಸ್ಮೃತಿಃ।
ಸ್ಮೃತಿರ್ಲಬ್ಧೇ ಸರ್ವಗ್ರಂಥೀನಾಂ ವಿಪ್ರಮೋಕ್ಷೋ ಭವಿಷ್ಯತಿ॥

ಆಹಾರ ಶುದ್ಧವಾದರೆ ಬುದ್ಧಿಶುದ್ಧಿ. ಬುದ್ಧಿ ಶುದ್ಧವಾದರೆ ಸ್ಥಿರ ಸ್ಮರಣ. ಶ್ರುತ್ಯುಪದೇಶದ ಸ್ಮರಣ ವರ್ಧಿಸಿದರೆ ಹೃದ್ಗತ ಸರ್ವ ಗ್ರಂಥಿಗಳ (ವಾಸನೆಗಳ) ವಿನಾಶ ಉಂಟಾಗುತ್ತದೆ. (ಛಾಂದೋಗ್ಯ).

ಪೂರಯೇದಶನೇನಾರ್ಧಂ ತೃತೀಯಮುದಕೇನ ತು ।
ವಾಯೋಃ ಸಂಚರಣಾರ್ಥಂತು ಚತುರ್ಥಮವಶೇಷಯೇತ್॥

ಜಠರದ ಅರ್ಧವನ್ನು ಅನ್ನದಿಂದ ಹಾಗು ಕಾಲುಭಾಗವನ್ನು ನೀರಿನಿಂದ ತುಂಬ ಬೇಕು. ಉಳಿದ ಕಾಲು ಭಾಗವನ್ನು ವಾಯು ಸಂಚಾರಕ್ಕಾಗಿ ಬರಿದು ಇಡಬೇಕು. (ಇದರರ್ಥ, ಹಸಿವೆಗಿಂತ ಕಡಿಮೆ ಊಟ ಮಾಡಬೇಕು).

ಒಟ್ಟಿನಲ್ಲಿ ಹೇಳುವದಾದರೆ, ಸಾಧಕನು ತನ್ನ ಪ್ರಕೃತಿ ಮತ್ತು ಮನಸ್ಸು

ಗಳಿಗೆ ಬಾಧಕವಾಗದಂಥ ಆಹಾರವನ್ನು ಹಸಿವಿಗಿಂತ ಕಡಿಮೆ ಪ್ರಮಾಣದಲ್ಲಿ ಸದ್ಭಾವನೆಯಿಂದ ಸ್ವೀಕರಿಸಬೇಕು. ಆಹಾರವನ್ನು ಸಂಗ್ರಹಿಸುವ, ತಯಾರಿಸುವ ಹಾಗು ಎಡೆ ಮಾಡುವ ಕಾಲದಲ್ಲಿ ಪ್ರಕಟವಾದ ಭಾವನೆಗಳು ಆ ಆಹಾರ ಸ್ವೀಕರಿಸುವವನ ಮನಸ್ಸಿನ ಮೇಲೆ ಪರಿಣಾಮ ಬೀರುವ ಸಂಭವ ಹೆಚ್ಚು. ಹಾಗೆ ಅನೇಕ ಬಲ್ಲಿದರು ಅಭಿಪ್ರಾಯ ವ್ಯಕ್ತ ಮಾಡಿದ್ದಾರೆ. ಕಳ್ಳ ಸಂತೆಯ ಅನ್ನ ಉಂಡ ಒಬ್ಬ ಸನ್ಯಾಸಿಯು ಶಿಷ್ಯನ ಮನೆಯಿಂದ ಬಂಗಾರ-ತಟ್ಟೆ ಕದ್ದು ಓಡಿದ ಕಥೆ ಎಲ್ಲರಿಗೂ ಗೊತ್ತು. ಉಂಡ ಅನ್ನ ರೇಚಕವಾಗಿ ಹೋದಾಗ ಆ ಸನ್ಯಾಸಿ ಮತ್ತೆ ಪೂರ್ವದ ವಿರಕ್ತಿಭಾವ ತಳೆದುದು ಗಮನೀಯ.

ಜಾಣ ಸಾಧಕರು ತಾವು ಸೇವಿಸುವ ಪ್ರತಿ ಪದಾರ್ಥದ ಪೂರ್ವಾಪರಗಳತ್ತ ಲಕ್ಷ ಈಯಬೇಕು. ಯಾರ ಅನ್ನ ಹೇಗೋ ತಿಳಿಯದು. ಯಾವುದೋ ರೀತಿಯಿಂದ ಸಂಗ್ರಹಿಸಿದ ಲೌಕಿಕರ ಅನ್ನ ಉಂಡೇ ಅನೇಕ ಸ್ವಾಮಿಗಳು ಸನ್ಯಾಸಿಗಳು ಅಧರ್ಮ ಕಾರ್ಯದಲ್ಲಿ ತೊಡಗಿದರು. ಸಂಗ್ರಹಶೀಲರಾದರು. ಆದುದರಿಂದ ಕಾಯಕ ಜೀವಿಯಾಗಿ ಬದುಕುವದು ಸಾಧಕನ ಹಿತದೃಷ್ಟಿಯಿಂದ ಒಳ್ಳೆಯದು. ಬಸವಣ್ಣನವರಂಥ ಶರಣರು ಸಂತರು ಸ್ವತಃ ಶ್ರಮವಹಿಸಿ ದುಡಿದು ಗಳಿಸಿದ ಆಹಾರವನ್ನೇ ಪ್ರಸಾದೀಕರಿಸಿ ಸ್ವೀಕರಿಸಿದುದನ್ನು ನೆನೆಸಿಕೊಳ್ಳಬೇಕು. ಸ್ವಶ್ರಮದಿಂದ ಬಂದ ಅನ್ನದಷ್ಟು ಪವಿತ್ರ ಆಹಾರ ಇನ್ನೊಂದಿಲ್ಲ. ಅದರಿಂದ ತನಗೂ ಹಿತ, ಸಮಾಜಕ್ಕೂ ಹಿತ. (ಆತ್ಮದರ್ಶನಾನಂದದ ನಿಬ್ಬೆರಗಿನಲ್ಲಿ ಮುಳುಗಿದ ಮಹಾನುಭಾವಿಗಳಿಗೆ ಮಾತ್ರ ಈ ನಿಯಮ ಅನ್ವಯಿಸುವದಿಲ್ಲ. ಏಕೆಂದರೆ ಅವರ ದೃಷ್ಟಿ ಹಾಗು ಸ್ಪರ್ಶಗಳು ಪರುಷವಾಗಿವೆ. ಅವರು ಮುಟ್ಟಿದ್ದೆಲ್ಲ ಪ್ರಸಾದ!)

(೨) ಯುಕ್ತ ವಿಹಾರ:– ಮನಸ್ಸಂತೋಷಕರ ಸಂಚಾರವು ವಿಹಾರ. ಇದು ಮಿತವಾಗಿರಬೇಕು. ಮನ ಬಂದಲ್ಲಿ, ಮನ ಬಂದಂತೆ ದಿನವಿಡಿ ತಿರುಗಾಡುವದು ಆಟ ನೋಟಗಳಲ್ಲಿ ತೊಡಗುವದು ಎಷ್ಟೂ ಯುಕ್ತವಲ್ಲ.

(೩) ಯುಕ್ತ ಚೇಷ್ಟಃ:– ಚೇಷ್ಟಾ ಎಂದರೆ ಐಂದ್ರಿಯಿಕ ಕರ್ಮ. ಕೇಳುವದು, ಮುಟ್ಟುವದು, ನೋಡುವದು, ಹಿಡಿಯುವದು, ಜಪಿಸುವದು, ಓದುವದು, ಶ್ರವಣ ಮಾಡುವದು, ಪಾಠನ ಮಾಡುವದು–ಯಾವ ಕರ್ಮವಿದ್ದರೂ ಸರಿಯೇ ಅದನ್ನು ಮಿತಿಮೀರಿ ಆಚರಿಸದೆ ಇರುವದು ಯುಕ್ತಚೇಷ್ಟೆ. ಮನಸ್ಸು ಬೇಜಾರುಗೊಳ್ಳುವ ಮುನ್ನವೇ ಆ ಕರ್ಮ ಮುಗಿಯಬೇಕು. ದೇಹ ನಿರ್ಬಲವಾಗದಷ್ಟು ಬುದ್ಧಿ ನಿಸ್ಸತ್ವಗೊಳ್ಳದಷ್ಟು ಮಾತ್ರ ಕರ್ಮ ನಿರ್ವಹಿಸುವದು ಜಾಣತನ.

(೪) ಯುಕ್ತ ಸ್ವಪ್ನಃ :- ದೇಹಕ್ಕೆ ನಿದ್ರೆ ಅತ್ಯವಶ್ಯ. ತನ್ನ ದೇಹದ

ಗುಣ, ವಯಸ್ಸು, ಹಾಗು ಕಾರ್ಯಗಳಿಗೆ ತಕ್ಕಂತೆ ಹಿತ ಮಿತವಾಗಿ ಸಾಧಕ ನಿದ್ರಿಸ ಬೇಕು. ಮೈ ಮನಗಳಲ್ಲಿ ಉತ್ಸಾಹ ತುಂಬುವ ನಿದ್ರೆಯದು ಹಿತ ನಿದ್ರೆ. ಕೆಲವು ಯೋಗಿಗಳ ಅಭಿಮತದಂತೆ ಅತೀವ ಬೇಗನೆ ಮಲಗಿ ಗಾಢ ನಿದ್ರೆ ಮುಗಿದೊಡನೆ ಎದ್ದು ಬಿಡಬೇಕು.

(೫) ಯುಕ್ತ ಬೋಧಃ :- ಒತ್ತಾಯದಿಂದ ಎಚ್ಚರಿರುವದು ತಪ್ಪು. ಭಾವದ ಆವೇಶ ಹಾಗು ವಿಷಯಾಸಕ್ತಿಗಳು ನಿದ್ರೆಯನ್ನು ದೂರ ಅಟ್ಟುತ್ತವೆ; ಎಷ್ಟೇ ತೊಂದರೆಯಾದರೂ ಆ ವ್ಯಕ್ತಿಯು ಮಲಗದಂತೆ ಮಾಡುತ್ತವೆ. ಸಾಧಕ ಆ ಆವೇಶಾದಿಗಳಿಗೆ ಅವಕಾಶ ಕೊಡದೆ ಮಿತ ಜಾಗ್ರಶೀಲನಾಗಿರಬೇಕು. ಜಾಗ್ರ ದಿಂದಿರುವಷ್ಟು ಕಾಲ ದೇವನನ್ನು ಸ್ಮರಿಸಬೇಕು.

ಸಂಬಂಧ:- ಯುಕ್ತ ಜೀವನ ಸಾಗಿಸುವ ಸಾಧಕನಿಗೆ ಯೋಗ ಸಿದ್ಧಿಸು ವದು. ಅದರ ಬಗ್ಗೆ ಮುಂದಿನ ಮಂತ್ರ ಹೇಳುತ್ತದೆ.

ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।
ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥೧೮॥

ಅರ್ಥ:- ಯದಾ= ಯಾವಾಗ, ವಿನಿಯತಂ= ನಿಗ್ರಹಿಸಲ್ಪಟ್ಟ ಚಿತ್ತಂ =ಮನಸ್ಸು, ಆತ್ಮನಿ ಏವ =ಆತ್ಮದಲ್ಲಿಯೇ ಅವತಿಷ್ಠತೇ=ನಿಲ್ಲುತ್ತದೆಯೋ ತದಾ =ಆಗ ಸರ್ವಕಾಮೇಭ್ಯಃ = ಸರ್ವ ಕಾಮನೆಗಳಿಂದ ನಿಸ್ಪೃಹಃ=ಬಿಡಲ್ಪಟ್ಟ ಬಯಕೆಯುಳ್ಳವನಾಗಿ ಯುಕ್ತಃ ಇತಿ = ಯೋಗಿ ಎಂದು ಉಚ್ಯತೇ =ಹೇಳಲ್ಪಡುತ್ತಾನೆ.

ವಿವರಣೆ:- ಇಲ್ಲಿಂದ ಆರು ಮಂತ್ರಗಳವರೆಗೆ ಏಕಾಗ್ರ, ನಿರುದ್ಧ ವೃತ್ತಿ ಗಳ ಬಗ್ಗೆ ಕೂಲಂಕಷವಾದ ಉಪದೇಶ ಇವೆ. ಈ ಎರಡು ವೃತ್ತಿಗಳು ಯೋಗದ ಅಮೌಲ್ಯ ಸಾಧನಗಳಾಗಿವೆ ಎಂಬುದನ್ನು ಸಾಧಕ ಮರೆಯಲಾಗದು.

(೧) ವಿನಿಯತಂ ಚಿತ್ತಂ:- 'ವಿಶೇಷೇಣ ಸಂಯತಂ ಚಿತ್ತಂ' ವಿಶೇಷವಾಗಿ ಸಂಯತವಾದ ಮನಸ್ಸು. ಅಸಂಯತವಾದ ಮನಸ್ಸು ಕಲಕಿದ ಸರಸ್ಸಿನಂತೆ. ಸದಾ ಪ್ರಕ್ಷುಬ್ಧ. ಅಹಂಕಾರ, ಅನಾತ್ಮವಸ್ತುವ್ಯಾಮೋಹ ಹಾಗು ವೈರ ಭಾವನೆಗಳು ಅಲ್ಲಿ ತಾಂಡವ ಆಡುತ್ತವೆ. ಆಗ ಇಂದ್ರಿಯಗಳು ಹೊರಮುಖವಾಗಿ ಹರಿಯು ತ್ತವೆ. ಚಿತ್ತದಲ್ಲಿ ಹುದುಗಿದ ವಿಷಯ ವಾಸನೆಗಳು ತಲೆ ಎತ್ತುತ್ತವೆ. ಬುದ್ಧಿಯು ಭೋಗಪರ ನಿರ್ಣಯ ಮಾಡುತ್ತದೆ. ದೇಹದಲ್ಲಿ ನಾನೆಂಬ ನನ್ನದೆಂಬ ಅನುರಾಗ ಉಂಟಾಗುತ್ತದೆ. ಹೀಗೆಲ್ಲ ಆಗುವದಕ್ಕೆ ವಿಕ್ಷೇಪ ಎಂದು ಹೆಸರು. ಈ ವಿಕ್ಷೇಪವು ಇಲ್ಲದಾಗಬೇಕು; ಮನದಲ್ಲೇಳುವ ವಿಕಾರಗಳು ಶಾಂತವಾಗಬೇಕು; ಅದಕ್ಕೆ ಚಿತ್ತ ಸಂಯಮನವೆಂದು ನಾಮ. ಈ ಸಂಯಮನಾಭ್ಯಾಸವು ಕ್ರಮಬದ್ಧವಾಗಿ ಸಾಗಿ ದರೆ ಫಲಕಾರಿ. ಆ ಅಭ್ಯಾಸದ ಹಂತಗಳನ್ನಿಲ್ಲಿ ನೋಡುವಾ:

(ಅ) ಪ್ರಥಮಹಂತ : ದೇಹದ ವ್ಯಾಮೋಹವು ವಿಕೃತ ವೃತ್ತಿಯಾಗಿದೆ. ಅದಕ್ಕೆ ಕಾರಣ ಅಜ್ಞಾನ. ದೇಹವು ಜಡ, ಸಾದಿ, ಸಾಂತ, ಪರಿಣಾಮಶೀಲ;

ಆದ್ದರಿಂದ ಅನಾತ್ಮ. ನಾನು ಅಜಡ, ಅನಾದಿ, ಅನಂತ, ಅಪರಿಣಾಮಿ. ನಿದ್ರೆಯಲ್ಲಿ ದೇಹದ ಭಾನವಿರದಿದ್ದರೂ ನಾನಿದ್ದೇನೆ; ಅಲ್ಲವೆ? ಅಂದಾಗ ದೇಹ ನಾನಲ್ಲವೆಂಬುದು ಸುಸ್ಪಷ್ಟ. ಈ ತಿಳಿವು ಮೂಡಿದರೆ ದೇಹ ಸಂಬಂಧದ ವಿಕ್ಷೇಪವು ಅಳಿಯುತ್ತದೆ.

(ಆ) ದ್ವಿತಿಯ ಹಂತ: ದೇಹಕ್ಕಿಂತ ಸೂಕ್ಷ್ಮ ಇಂದ್ರಿಯಗಳು. ಅವು ಬಾಹ್ಯ ಜಗತ್ತಿನತ್ತ ಧಾವಿಸುತ್ತವೆ. ಶಬ್ದಾದಿ ಗುಣಗಳನ್ನು ಪ್ರಕಾಶಿಸುತ್ತವೆ. ಆದರೆ ತಮ್ಮನ್ನಾಗಲಿ, ತಮ್ಮ ಹಿಂದಿರುವ ಆತ್ಮ ಪ್ರಕಾಶವನ್ನಾಗಲಿ ಅರಿಯಲಾರವು. ನಾನು ಆತ್ಮರೂಪ; ಆ ಇಂದ್ರಿಯಗಳು ಅನಾತ್ಮ ವಿಕೃತಿಗಳು. ಅವು ಅಳಿದು ಹೋಗುತ್ತವೆ; ನಾನು ಎಂದಿಗೂ ಅಳಿಯುವದಿಲ್ಲ. ಆದುದರಿಂದ ಇಂದ್ರಿಯಗಳಾಗಲಿ, ಇಂದ್ರಿಯ ಕಾರ್ಯಗಳಾಗಲಿ ನನಗೆ ಸಂಬಂಧಿಸಿಲ್ಲ. ಈ ತಿಳಿವು ಉದಿಸಿದರೆ ಇಂದ್ರಿಯ ಸಂಬಂಧದ ವಿಕ್ಷೇಪವು ಹಾನಿಗೊಳ್ಳುತ್ತದೆ.

(ಇ) ತೃತೀಯ ಹಂತ:– ಇಂದ್ರಿಯಗಳ ಹಿಂದೆ, ಅವುಗಳಿಗೂ ಸೂಕ್ಷ್ಮವಾಗಿ ಪ್ರಾಣ, ಮನ ಹಾಗು ಭಾವಗಳಿವೆ. ಅವೂ ಜಡ; ಪರಿವರ್ತನಶೀಲ ಹಾಗು ಸಂಕುಚಿತ. ಅವು ನಿದ್ರೆಯಲ್ಲಿ ಅಡಗಿವೆ; ಆತ್ಮರೂಪನಾದ ನಾನಾದರೋ ಸದ್ಯವ ಜಾಗ್ರತ! ಈ ಅರಿವು ಮೈಯಾಂತರೆ ಪ್ರಾಣಾದಿಗಳ ಬಗೆಗಿನ ವಿಕ್ಷೇಪ ಇಲ್ಲದಾಗುತ್ತದೆ.

ಹೀಗೆ ಮೂರು ಹಂತಗಳಲ್ಲಿ, ಚಿತ್ತವಿಕ್ಷೇಪವು ಅಳಿದರೆ ಸ್ವಯಂ ಜ್ಞಾನ ಜ್ಯೋತಿರಾತ್ಮನೇ ನಾನೆಂಬ ಆತ್ಮವೃತ್ತಿ ಉದಿಸುತ್ತದೆ; ಈ ವೃತ್ತಿಯು ಅವಿಚ್ಛಿನ್ನವಾಗಿ ಪ್ರವಹಿಸಿದರೆ "ಏಕಾಗ್ರ" ಎಂಬ ನಾಮ ತಳೆಯುತ್ತದೆ. ಇದುವೇ ಸಂಪ್ರಜ್ಞಾತ ಸಮಾಧಿ. 'ಆತ್ಮನ್ಯೇವಾವತಿಷ್ಠತೇ' ಎಂಬ ಪದ ಸಮುದಾಯವು ಸೂಚಿಸುವಂತೆ ಚಿತ್ತವಿಲ್ಲಿ ಆತ್ಮದಲ್ಲಿ ಸುಸ್ಥಿರವಾಗಿ ನೆಲೆಸಿದೆ. ಅಸ್ಮಿ, ಪ್ರಕಾಶೇ, ನಂದಾಮಿ ಎಂಬ ಪಾವನ ಭಾವ ಸ್ಫುರಣಗಳು ಆ ಚಿತ್ತದಲ್ಲಿ ಉದಿಸಿವೆ.

(೨) ಸರ್ವ ಕಾಮೇಭ್ಯಃ ನಿಸ್ಪೃಹಃ:– ಸಂಯತವಾದ ಚಿತ್ತವನ್ನು ಆತ್ಮನಲ್ಲಿ ಕೇಂದ್ರೀಕರಿಸಿದ ಧ್ಯಾನಯೋಗಿಯು ಇಹ ಪರ ಭೋಗೈಶ್ವರ್ಯಗಳಲ್ಲಿ ನಿರಾಸಕ್ತ, ನಿಸ್ಪೃಹ.

> "ಸಾಲೋಕ್ಯ ಸಾಮೀಪ್ಯ ಸಾರುಪ್ಯ ಸಾಯುಜ್ಯ ಪದಂಗಳ ಬಯಸಿ ಅರ್ಚಿಸಿದಡೆ ಲಿಂಗಸಂಗವಿಲ್ಲ. ತನು ಹಂಗ ಹರಿದು ಅರ್ಚಿಸುವ ಸಂಗಿಗಳಿಗೆ ಲಿಂಗಸಂಗವಕ್ಕು. ಮಂಗಳಾಂಗನೆ ನಿನ್ನ ಹಂಗಿಲ್ಲದಿರ್ದವರ ಸಂಗ ನಿನ್ನಯ ರೂಪು ಯೋಗಿನಾಥ."

ಈ ಮಾತಿಗೆ ತಕ್ಕ ಉದಾಹರಣೆ ನಚಿಕೇತ. ಯಮರಾಜನು ಬ್ರಹ್ಮಾದಿ ದೇವದೇವತೆಗಳ ಸಕಲೈಶ್ವರ್ಯ ಕೊಡಲಿಚ್ಛಿಸಿದಾಗ ನಚಿಕೇತನು ಅವನ್ನೆಲ್ಲ ತಿರಸ್ಕರಿಸಿ ಆತ್ಮವಿದ್ಯೆಯನ್ನೇ ಬೇಡುತ್ತಾನೆ.

(೩) ಯುಕ್ತಃ ಇತಿ ಉಚ್ಯತೇ:- ಹೀಗೆ ಮಲಿನ ಪ್ರಾಕೃತಿಕ ಸಂಪದದಲ್ಲಿ

ಪರಮ ವಿರಾಗ ತಾಳಿದ ಆತ್ಮನಿಷ್ಠ ಯೋಗಿಯೇ ಯುಕ್ತ (ಯೋಗಾರೂಢ) ಎನಿಸುತ್ತಾನೆ, ಅವನ ಮನಸ್ಸು ಆತ್ಮವಸ್ತುವಿನಲ್ಲಿ ಒಂದಾಗಿದೆ.

ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।
ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥೧೯॥

ಅರ್ಥ:- ಯಥಾ = ಹೇಗೆ, ನಿವಾತಸ್ಥಃ = ನಿರ್ವಾತ ಪ್ರದೇಶದಲ್ಲಿರುವ ದೀಪಃ = ದೀಪವು, ನ ಇಂಗತೇ = ಚಲಿಸುವದಿಲ್ಲವೋ, ಆತ್ಮನಃ = ಪರಮಾತ್ಮನ ಯೋಗು =(ಸಾಮರಸ್ಯರೂಪ) ಯೋಗವನ್ನು ಯುಂಜತಃ = ಅಭ್ಯಸಿಸುತ್ತಿರುವ. ಯೋಗಿನಃ = ಯೋಗಿಯ ಯತಚಿತ್ತಸ್ಯ = ಸಂಯತ ಚಿತ್ತಕ್ಕೆ ಸಾ = ಆ ನಿರ್ವಾತ ದೀಪವು ಉಪಮಾ = (ತಕ್ಕ) ಉಪಮೆ ಎಂದು ಸ್ಮೃತಾ= ಹೇಳಲ್ಪಡುತ್ತದೆ.

ವಿವರಣೆ:— ತತಃ ಪುನಶ್ಶಾಂತೋದಿತೌ ತುಲ್ಯ ಪ್ರತ್ಯಯೌ
ಚಿತ್ತಸ್ಯೈಕಾಗ್ರತಾ ಪರಿಣಾಮಃ ॥ ಪಾ. ಯೋ. ೩–೧೨ ॥

ವಿಕ್ಷಿಪ್ತ ವೃತ್ತಿಗಳು ಅಡಗಿದ ಬಳಿಕ (ತತಃ), ಧ್ಯೇಯಾಕಾರದ ಸಮಾನ ಪ್ರತ್ಯಯಗಳು ಉದಿಸಿ, ಶಾಂತವಾಗಿ ಪುತ್ತೆ ಮತ್ತೆ ಉದಿಸುತ್ತಿದ್ದರದು ಚಿತ್ತೈಕಾಗ್ರತೆ. ಇದು ಸಂಪ್ರಜ್ಞಾತ ಸಮಾಧಿ.

ಪ್ರಸಂಖ್ಯಾನೇ ಅಪ್ಯಕುಸೀದಸ್ಯ ಸರ್ವಥಾ
ವಿವೇಕ ಖ್ಯಾತೇಃ ಧರ್ಮಮೇಘ ಸಮಾಧಿಃ ॥ ಪಾ. ಸೂ, ೪–೨೯ ॥

ಧ್ಯಾನಾವಸ್ಥೆಯಲ್ಲಿ (ಪ್ರಸಂಖ್ಯಾನೇ= ಚಿತ್ತೈಕಾಗ್ರತೆಯಲ್ಲಿ) ಮುಳುಗಿ, ನಿಸ್ಪೃಹ (ಅಕುಸೀದಸ್ಯ =ಫಲಾಶಾರಹಿತ)ನಾದ ಯೋಗಿಯಲ್ಲಿ ನಿರಂತರ ಆತ್ಮ ಸಾಕ್ಷಾತ್ಕಾರವೃತ್ತಿ ಇರುವದರಿಂದ ಧರ್ಮಮೇಘವು ಆ ವಿಮಲ ಚಿತ್ತದಲ್ಲಿ ಸಮಾಹಿತೆಯು ಮಳೆ ಸುರಿಸುತ್ತದೆ.

ಇಜ್ಯಾಚಾರ ಧರ್ಮಾಹಿಂಸಾ ದಾನ ಸ್ವಾಧ್ಯಾಯ ಕರ್ಮಣಾಮ್ ।
ಅಯಂತು ಪರಮೋಧರ್ಮೋ ಯದ್ಯೋಗೇನಾತ್ಮದರ್ಶನಮ್ ॥

ಯಜ್ಞ, ಆಚಾರ ಧರ್ಮ ಅಹಿಂಸಾ ದಾನ ಸ್ವಾಧ್ಯಾಯ ಕರ್ಮಗಳಲ್ಲಿ ಆತ್ಮ ದರ್ಶನ ಮಾಡಿಕೊಡುವ ಈ ಯೋಗವು ಪರಮ ಧರ್ಮವೆನಿಸಿದೆ. ಈ ಯೋಗ ಸಾಧಿಸಿದ ಯೋಗಾರೂಢನ ಅಚಲ ಚಿತ್ತಕ್ಕೆ ನಿವಾತ ಸ್ಥಾನದಲ್ಲಿಟ್ಟ ದೀಪವೇ ಯೋಗ್ಯ ಉಪಮೆ.

ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।
ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥೨೦॥

ಅರ್ಥ:—ಯತ್ರ= ಯಾವ ಅವಸ್ಥೆಯಲ್ಲಿ ಯೋಗಸೇವಯಾ= ಯೋಗಾಭ್ಯಾಸದಿಂದ ನಿರುದ್ಧಂ ಚಿತ್ತಂ= ನಿರೋಧಿಸಲ್ಪಟ್ಟ ಚಿತ್ತವು ಉಪರಮತೇ= ಶಾಂತವಾಗುವದೋ, ಯತ್ರ ಚ= ಯಾವ ಅವಸ್ಥೆಯಲ್ಲಿ ಆತ್ಮನಾ= ನಿರುದ್ಧ ಮನಸ್ಸಿನಿಂದ ಆತ್ಮಾನಂ= ಪ್ರತ್ಯಗಾತ್ಮನನ್ನು (ಅಥವಾ ಪ್ರತ್ಯಗಾತ್ಮಾಭಿನ್ನ ಪರಮಾತ್ಮನನ್ನು) ಪಶ್ಯನ್—ನೋಡುತ್ತ ಆತ್ಮನಿ ಏವ= ಶುದ್ಧ ಅಂತಃಕರಣದಲ್ಲಿ ತುಷ್ಯತಿ= ಆನಂದ ಪಡುತ್ತಾನೆಯೋ (ಅದೇ ಯೋಗದ ಉತ್ಕೃಷ್ಟಾವಸ್ಥೆ).

**ವಿವರಣೆ:-** (೧)ಸಾವಿರಾರು ವರುಷಗಳ ದೀರ್ಘ ಕಾಲಾವಧಿಯಲ್ಲಿ ಅನೇಕ ಜನ ಸಂತರು ಶರಣರು ಮಹಾತ್ಮರು ಋಷಿ-ಮುನಿಗಳು ಬಾಳಿ ಹೋಗಿದ್ದಾರೆ. ಅವರ ಹತ್ತಿರ ಅಪಾರ ದ್ರವ್ಯಸಂಪದವಿರಲಿಲ್ಲ. ಅಸಾಮಾನ್ಯ ದೇಹಶಕ್ತಿಯಿರ ಲಿಲ್ಲ. ಪ್ರಚಂಡ ವಾಕ್ಪಟುತ್ವವಿರಲಿಲ್ಲ. ನಾಗರಿಕ ನೆಲೆಗಳ ಹೊರಗೆ ಮುರುಕು ಗುಡಿ ಸಲುಗಳಲ್ಲಿ ಜೀವಿಸಿದರೂ ಜಗತ್ತಿನ ಮಹಾನ್ ಮಹಾನ್ ಸಾರ್ವಭೌಮ ಪ್ರಭು ಗಳು ಅವರ ಪದತಲದಲ್ಲಿ ತಮ್ಮ ತಲೆ ಇಟ್ಟರು, ವಿನಮ್ರರಾಗಿ ವಂದಿಸಿದರು. ನಾಡು ನಾಡುಗಳ ಜನಾಂಗ ಆ ಸಂತರ ದರ್ಶನ ಮತ್ತು ಹಿತ ವಚನಗಳಿಗಾಗಿ ಹಾತೊರೆದರು! ಸರ್ವ ಪೂಜ್ಯರಾದ ಅವರಲ್ಲಿದ್ದ ಸಂಪತ್ತು ಯಾವುದು? ಅದು "ಮನಸ್ಸು"; ಅಂತಸ್ಸಾಮರ್ಥ್ಯ; ಎಲ್ಲರಿಗೂ ಇದು ದೇವದತ್ತಿಯಾಗಿ ದೊರೆತರೂ ಆ ಶಕ್ತಿಯನ್ನು ಭೋಗೋಪಭೋಗಕ್ಕಾಗಿ ವಿನಿಯೋಗಿಸಿ ದರಿದ್ರರಾಗಿದ್ದಾರೆ ಯೋಗಿಗಳು ಜಾಣರು. ಅವರು ಮನಸ್ಸನ್ನು ಯೋಗಕ್ಕಾಗಿ, ದೇವ ಜ್ಞಾನಕ್ಕಾಗಿ ಬಳಸಿದರು. ವಿಶ್ವದ ಆದ್ಯಂತಗಳನ್ನು ಅರಿತರು. ಅನಂತತೆಯನ್ನೇ ತಮ್ಮಂತರಂಗ ದಲ್ಲಿ ಅಭಿವ್ಯಕ್ತಿಗೊಳಿಸಿಕೊಂಡರು. ಆದುದರಿಂದ ಅವರು ಪೂಜ್ಯರು.

(೨) ಸರ್ವಸಿದ್ಧಿಗಳಿಗೆ ಸಾಧಕವಾದ ಮನಸ್ಸನ್ನು ಹದಗೊಳಿಸುವ ಸುಂದರ ಸಾಧನವೆಂದರೆ ಅಷ್ಟಾಂಗಯೋಗ. ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಹಾಗು ಧಾರಣಗಳ ಸಾಧನೆಯಿಂದ ಮನಸ್ಸಿನ ನಿರ್ಬಲತೆಯು ಅಳಿ ಯುವದು; ಧ್ಯಾನ ಸಮನಿಸಿದರೆ ಅದೇ ಮನಸ್ಸು ಸಬಲವಾಗುವದು; ಧ್ಯಾನದ ಪಕ್ವ ಸ್ಥಿತಿ ಅಳವಟ್ಟರೆ ಅದು ಸಬಲತರವಾಗುವದು; ಸಮಾಧಿ ಸಿದ್ಧಿಸಿದರೆ ಅದು ಸಬಲತಮವಾಗುವದು; ಸಬಲತಮ ಮನಸ್ಸಿನ ಮಹಾಂತರೇ ಯೋಗಿಗಳು. ಮನದ ಬೆಳವಣಿಗೆಯ ಘಟ್ಟಗಳನ್ನು ಸ್ವಲ್ಪ ವಿಶದವಾಗಿ ಅರಿಯುವಾ.

(ಅ) **ಸಬಲ ಮನ:–** ಧ್ಯಾನ ಕ್ಷೇತ್ರದಲ್ಲಿ ಪಾದಾರ್ಪಣ ಮಾಡಿದ ಮನಸ್ಸು ಸಬಲ. ಈ ಮನಸ್ಸಿನ ಸಹಾಯದಿಂದ ಸಾಧಕನು 'ಕಾಮ ಸಂಕಲ್ಪಾದಿಗಳು ದೃಶ್ಯ ತಾನು ಅವಕ್ಕೆ ಸಾಕ್ಷಿಕ' ಎಂಬ ಅನುಸಂಧಾನ ಮಾಡುತ್ತಾನೆ. ಇದು ಅಭ್ಯಂತರ ದೃಶ್ಯಾನುವಿದ್ಧ ಸವಿಕಲ್ಪ ಸಮಾಧಿ.

(ಆ) **ಸಬಲತರ ಮನ:–** ಅನ್ಯ ವಿಕಾರಗಳಿಲ್ಲದೆ ಬರಿ ಆತ್ಮಾಕಾರ ವೃತ್ತಿ ಗಳಿಂದ ಕೂಡಿದ ಮನಸ್ಸು ಸಬಲತರ. ಈ ಮನದ ಸಹಾಯದಿಂದ ಸಾಧಕನು ಅಸಂಗ ಸಚ್ಚಿದಾನಂದ ಸ್ವಯಂ ಪ್ರಕಾಶ ಅದ್ವಯ ಸ್ವರೂಪವೇ ತಾನೆಂದು ಚಿಂತನೆ ಮಾಡುತ್ತಾನೆ. ಇದು ಅಭ್ಯಂತರ ಶಬ್ದಾನುವಿದ್ಧ ಸವಿಕಲ್ಪ ಸಮಾಧಿ.

(ಇ) **ಸಬಲತಮ ಮನ:-** ಸರ್ವ ವೃತ್ತಿವಿರಹಿತವಾದ ಅಚಲ ಮನಸ್ಸು ಸಬಲತಮ. ಇದರ ಸಹಾಯದಿಂದ ಸಾಧಕನು ಸ್ವಾನುಭೂತರಸಾವೇಶದಿಂದ ಆ ದೃಶ್ಯ ಶಬ್ದಗಳೆರಡನ್ನುಳಿದು ನಿವಾತಸ್ಥಿತ ದೀಪದಂತೆ ನಿಷ್ಪಂದರೂಪದಿಂದಿರು

ತ್ತಾನೆ. ಇದು ಅಭ್ಯಂತರ ನಿರ್ವಿಕಲ್ಪ ಸಮಾಧಿಯಾಗಿದೆ.

ಸಬಲ ಮನಸ್ಸಿನ ಯೋಗಿ ಉತ್ಥಾನನಾದರೆ ಬಾಹ್ಯ ವಸ್ತುಗಳನ್ನು ನೋಡುವಾಗ ಅವುಗಳ ನಾಮ ರೂಪುಗಳನ್ನು ಬಿಟ್ಟು ಅಸ್ತಿ, ಭಾತಿ, ಪ್ರಿಯವೆಂಬ ಸಚ್ಚಿದಾನಂದ ಬ್ರಹ್ಮಾಂಶ ತ್ರಯವನ್ನು ಅನುಸಂಧಾನಗೈಯುತ್ತಾನೆ. ಇದು ಬಾಹ್ಯ ದೃಶ್ಯಾನುವಿದ್ಧ ಸವಿಕಲ್ಪ ಸಮಾಧಿ. ಸಬಲತರ ಮಸ್ಸಿನ ಯೋಗಿಯು ಉತ್ಥಾನನಾದರೆ ಜಗತ್ತನ್ನು ಕಂಡು ಅಖಂಡ ಸಚ್ಚಿದಾನಂದ ಅದ್ವಿತೀಯ ಬ್ರಹ್ಮ ಸ್ವರೂಪವೆಂದು ಧ್ಯಾನಿಸುತ್ತಾನೆ. ಅದು ಬಾಹ್ಯ ಶಬ್ದಾನುವಿದ್ಧ ಸವಿಕಲ್ಪಕ ಸಮಾಧಿ.

ಸಬಲತಮ ಮನಸ್ಸಿನ ಯೋಗಿಯು ಆ ಸಮಾಧಿ ದ್ವಯದ ಅಭ್ಯಾಸ ಬಲ ದಿಂದಾದ ಬ್ರಹ್ಮಾನಂದಾಸ್ವಾದನದಲ್ಲಿಯೇ ಮಗ್ನನಾಗಿ ನಿಸ್ತರಂಗ ಸಮುದ್ರದಂತೆ ನಿಶ್ಚಲವಾಗಿರುತ್ತಾನೆ. ಇದು ಬಾಹ್ಯ ನಿರ್ವಿಕಲ್ಪ ಸಮಾಧಿ.

ಭಗವಂತ:- "ಪಾರ್ಥ, ಅಷ್ಟಾಂಗ ಯೋಗಾಭ್ಯಾಸದಿಂದ ಚಿತ್ತವು ಶುದ್ಧ ವಾಗಿ ಆತ್ಮ ಸಾಮ್ರಾಜ್ಯದಲ್ಲಿ ಪ್ರವೇಶಿಸಿ ವಿಶ್ರಮಿಸುತ್ತದೆ. ಅಲ್ಲಿ ಸಂಕಲ್ಪ ವಿಕಲ್ಪ ಗಳು, ವಿವಿಧ ಭಾವ ತರಂಗಗಳು, ಅಜ್ಞ ಸುಜ್ಞನೆಂಬ ಅಹಂ ಸ್ಪಂದನೆಗಳು ಅಡ ಗಿವೆ. ಅಂಥ ಪರಮ ಉಪರಮಾವಸ್ಥೆ ಹೊಂದಿದ ಯೋಗಿಯು ವಿಮಲ ಮನ ಸ್ಸಿನ ಮೂಲಕ ಪ್ರತ್ಯಗಾತ್ಮಾಭಿನ್ನ ದೇವನನ್ನು ತನ್ನ ರೂಹೆಂದೇ ನೋಡುತ್ತ ತೃಪ್ತಿ ಪಡುತ್ತಾನೆ. ಅವನದು ಅಮರ ಸೌಖ್ಯವೆಂದು ತಿಳಿ."

ಅರ್ಜುನ:- "ಆ ಪರಮಾನಂದದ ಸ್ವರೂಪವೇನು?"

ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥೨೧॥

ಅರ್ಥ:- ಆತ್ಯಂತಿಕಂ= ನಿತ್ಯವಾದ, ಬುದ್ಧಿಗ್ರಾಹ್ಯಂ= ಶುದ್ಧಮತಿಗೆ ವೇದ್ಯವಾದ, ಅತೀಂದ್ರಿಯಂ= ಇಂದ್ರಿಯಗಳಿಗೆ ಅಗೋಚರವಾದ ಯತ್ ಸುಖಂ ತತ್= ಯಾವ ಸುಖವೋ ಅದನ್ನು (ಯಾವ ಅವಸ್ಥೆಯಲ್ಲಿ ಯೋಗಿಯು) ವೇತ್ತಿ= ತಿಳಿಯುತ್ತಾನೆಯೋ, ಚ= ಮತ್ತು ಯತ್ರ= ಯಾವ ಅವಸ್ಥೆಯಲ್ಲಿ ಸ್ಥಿತಃ= ನಿಂತು, ಅಯಂ= ಈ ಯೋಗಿಯು ತತ್ತ್ವತಃ= ಆತ್ಮ ಸ್ವರೂಪದಿಂದ ನ ಏವ ಚಲತಿ= ಚಲಿಸುವದಿಲ್ಲವೋ (ಅದು ಯೋಗಾವಸ್ಥೆ).

ವಿವರಣೆ:- ಭಗವಂತ:- "ಅರ್ಜುನ, ಯೋಗಿಯು ದೀರ್ಘಕಾಲದ ಸಾಧ ನೆಯ ಅಂತ್ಯದಲ್ಲಿ ಒಂದು ದಿವ್ಯ ಅವಸ್ಥೆ ಪಡೆಯುತ್ತಾನೆ. ಅಲ್ಲಿ ದೇಹ ಕಾಣದು, ಪ್ರಕೃತಿಯ ವಿವಿಧ ರಚನೆಗಳು ತೋರವು, ಪರಮ ಆತ್ಮವಸ್ತುವೊಂದೇ ಅಭಿ ವ್ಯಕ್ತವಾಗುತ್ತದೆ. ಆಗ ಯೋಗಿಯು ಅಮರ ಸೌಖ್ಯ ಅನುಭವಿಸುತ್ತಾನೆ. ಆ ಸೌಖ್ಯ ನೇತ್ರಾದಿ ಇಂದ್ರಿಯ ವೇದ್ಯವಲ್ಲ, ವಿಮಲ ಬುದ್ಧಿವೇದ್ಯ! ಅದು ಕಾಲ ಖಂಡದಲ್ಲಿ ನಾಶವಾಗುವಂಥದಲ್ಲ, ಚಿರಂತನ! ಶಾಶ್ವತ! ಅಂಥ ಆನಂದ ಸಾಗರವ ನೀಂಟಿದ ಯೋಗಿಯು ಮತ್ತೆಂದೂ ಆತ್ಮ ಸ್ವರೂಪದಿಂದ ವಿಚಲಿತನಾಗಲಾರ!"

(೧) ಆನಂದ(ಸುಖ)ದ ಸ್ವರೂಪ ಲಕ್ಷಣ:– (ಅ) ಆತ್ಯಂತಿಕ:– ಇಂದ್ರಿಯಿಕ ಸೌಖ್ಯ ಅಂತವಂತ; ಏಕೆಂದರೆ, ವಿಷಯಗಳು ಇಂದ್ರಿಯಗಳು ಮತ್ತು ಅವೆರಡರ ಸಂಬಂಧಗಳು ಚಿರಕಾಲ ಬಾಳವು. 'ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ' ಸ್ಪರ್ಶ ಸುಖಗಳು ಆದಿ ಅಂತವುಳ್ಳವುಗಳು, ಬುಧರು ಅವುಗಳಲ್ಲಿ ರಮಿಸುವದಿಲ್ಲ. ಇದು ಪ್ರಮಾಣ ವಾಕ್ಯ. ವಿಷಯಗಳು, ಇಂದ್ರಿಯಗಳು ಹಾಗು ಉಳಿದ ಅಸಂಖ್ಯ ತತ್ತ್ವಗಳು ಯಾವ ಆಧಾರದ ಮೇಲೆ ಭಾಸವಾಗಿವೆಯೋ ಆ ಆಧಾರ ದೇವನು ಮಾತ್ರ ಅನಾದಿ ಅನಂತ; ಅವನು ಸಚ್ಚಿದಾನಂದ! ಅವನ ಸಾಕ್ಷಾತ್ಕಾರದಿಂದ ಆವಿರ್ಭವಿಸುವ ಆತ್ಮಸುಖವೂ ಆತ್ಯಂತಿಕ!

(ಬ) ಬುದ್ಧಿಗ್ರಾಹ್ಯಂ:– ಕಬ್ಬು ಶುದ್ಧ ಸಕ್ಕರೆಯಾದರೆ ಹಾಲಲ್ಲಿ ಬೆರೆಯುತ್ತದೆ. ಹಾಗೆ ಕ್ಷಿಪ್ತ ವಿಕ್ಷಿಪ್ತ ಮೂಢ ವೃತ್ತಿ ತರಂಗಗಳಿಲ್ಲದ ವಿಮಲ ಬುದ್ಧಿಯು ಅಮಲಾತ್ಮನಲ್ಲಿ ಒಂದಾಗುತ್ತದೆ. ಆತ್ಮನ ಸದಾದಿ ಲಕ್ಷಣಗಳನ್ನು ಪರಿಗ್ರಹಿಸುತ್ತದೆ. ಆದ್ದರಿಂದ ಆತ್ಮಾನಂದವು ಬುದ್ಧಿಗ್ರಾಹ್ಯವೆನಿಸಿದೆ. ಈ ಮಾತಿಗೆ ಪ್ರಮಾಣ ವಾಕ್ಯ ಹೀಗಿದೆ: 'ಯೋಗಾಂಗಾನುಷ್ಠಾನಾದಶುದ್ಧಿಕ್ಷಯೇ ಜ್ಞಾನದೀಪ್ತಿರಾವಿವೇಕ ಖ್ಯಾತೇಃ' (ಪಾ. ಯೋ. ಸೂ. ೨-೨೮). ಯೋಗದ ಯಮ ನಿಯಮಾದಿ ಅಷ್ಟಾಂಗಗಳನ್ನು ಆಚರಿಸುವದರಿಂದ ಅವಿದ್ಯಾದಿ ಪಂಚಕ್ಲೇಶರೂಪ ಮಲಿನಗಳು ನಾಶವಾಗುತ್ತವೆ; ಆಗ ಆ ಕ್ಲೇಶವಿರಹಿತ ಬುದ್ಧಿ ದೀಪವು ತತ್ತ್ವ ಸಾಕ್ಷಾತ್ಕಾರದ ವರೆಗೂ ಬೆಳಗುತ್ತದೆ. ಅದೇ ಚಿಚ್ಛಕ್ತಿ ಎನಿಸುವ ದಿವ್ಯಪ್ರಜ್ಞೆ. ಅದರಿಂದ ದೇವನ ಅಖಂಡಾನಂದದ ಅನುಭವ! ಈ ಅನುಭವ ಪಡೆದ ಮಹಾತ್ಮನು ಧನ್ಯ. ಭರ್ತೃಹರಿ ಹೇಳುತ್ತಾನೆ—

"ಧನ್ಯಾನಾಂ ಗಿರಿ ಕಂದರೇಷು ವಸತಾಂ ಜ್ಯೋತಿಃ ಪರಂ ಧ್ಯಾಯತಾಮ್ ॥
ಆನಂದಾಶ್ರುಜಲಂ ಪಿಬಂತಿ ಶಕುನಾ ನಿಶ್ಶಂಕಮಂಕೇಶಯಾಃ॥"

ಪಕ್ಷಿಗಳು ನಿರ್ಭಯದಿಂದ ಯಾರ ತೊಡೆಯ ಮೇಲೆ ಕುಳಿತು ಆನಂದಾಶ್ರುಗಳನ್ನು ಕುಡಿಯುವವೋ, ಯಾರು ಗಿರಿ ಕಂದರಗಳಲ್ಲಿ ಕುಳಿತು ಪರಂಜ್ಯೋತಿಯನ್ನು ವಿಮಲ ಬುದ್ಧಿಯಿಂದ ಧ್ಯಾನಿಸುತ್ತಿರುವರೋ ಅವರು ಧನ್ಯರು!

ಅನ್ನ ನೀರು ಐಶ್ವರ್ಯ ವೈಭವ ಎಲ್ಲವನ್ನು ತೃಣದಂತೆ ತೊರೆದು ನಿಸರ್ಗದ ಮಧ್ಯ ಕುಳಿತು ದೇವ ಧ್ಯಾನದಲ್ಲಿ ಮೈಮರೆಯಬೇಕಾದರೆ ಆ ಯೋಗಿಗಳು ಅನುಭವಿಸುವ ಆನಂದ ಎಷ್ಟು ಉದಾತ್ತವಾಗಿರಬೇಕು! ಎಷ್ಟು ಪೂರ್ಣವಾಗಿರಬೇಕು!

(ಕ) ಅತೀಂದ್ರಿಯ:– ಜಾಗ್ರಾವಸ್ಥೆಯಲ್ಲಿ ದೊರೆವ ವಿಷಯಾನಂದವು ಇಂದ್ರಿಯ-ಮನಗಳಿಗೆ ವೇದ್ಯ. ಸ್ವಪ್ನದಲ್ಲಿ ದೊರೆಯುವ ವಾಸನಾಜನ್ಯ ಆನಂದವು ಮನೋವೇದ್ಯ. ನಿದ್ರೆಯಲ್ಲಿ ಉಂಟಾಗುವ ಆನಂದವು ಅಜ್ಞಾನ ವೃತ್ತಿಗೆ ವೇದ್ಯ. ಈ ಮೂರೂ ಅವಸ್ಥೆಗಳ ದಾಟಿದಾಗ ಪಾರಮಾರ್ಥಿಕ ಆನಂದ. ಆ

ಆನಂದವು ನಾಮ ರೂಪ ಮುಂತಾದ ಗುಣಗಳನ್ನು ಅವಲಂಬಿಸಿಲ್ಲವಾಗಿ ಅದು ಅತೀಂದ್ರಿಯ!

(೨) ಯತ್ರ...ತದೇವ ಯೋಗಃ :- ಯೋಗವೆಂದರೆ ಇನ್ನೇನಲ್ಲ; ಅದೊಂದು ಅನುಪಮ ಅವಸ್ಥೆ. ಎಲ್ಲಿ ನಿಂತಾಗ ಅತೀಂದ್ರಿಯವಾದ ದಿವ್ಯ ಸುಖವು ಅನುಭವಕ್ಕೆ ಬರುವದೋ ಅಂಥ ಸ್ಥಿತಿ. ಈ ಮಾತಿಗೆ ಆಧಾರ ವಾಣಿ ಹೀಗಿದೆ– "ನಿರ್ವೃತ್ತಿಕಃ ಪರಮಾನಂದಾಭಿವ್ಯಂಜಕಃ ಚಿತ್ತಾವಸ್ಥಾ ವಿಶೇಷ ಏವ ಯೋಗಃ" ಪುಣ್ಯ, ಪಾಪ, ಶುಭ, ಅಶುಭ ಮುಂತಾದ ಸಕಲ ವೃತ್ತಿಗಳನ್ನು ಅಡಗಿಸಿದ, ಪರಮ ಪ್ರಭು ಪರಬ್ರಹ್ಮನ ಪರಮಾನಂದ ಸ್ವರೂಪ ಪ್ರಕಾಶಕವಾದ ಯಾವ ಶುದ್ಧ ಮನಸ್ಸಿನ ವಿಶೇಷ ಅವಸ್ಥೆ ಇದೆಯೋ ಅದು ಯೋಗ.

(೩) ತತ್ತ್ವತಃ ನ ಚಲತಿ:- ಯೋಗ ಪಡೆದ ಮಹಾತ್ಮನು ಅಂದರೆ ಶುದ್ಧ ಪ್ರಜ್ಞೆಯಿಂದ ಆತ್ಮ ಸೌಖ್ಯವನ್ನು ಗ್ರಹಿಸಿ ಸಂತೃಪ್ತಿ ಹೊಂದಿದ ಸಂತನು ಬಾಹ್ಯ ವಿಷಯಗಳ ಆಕರ್ಷಣೆಯಿಂದಾಗಿ ಪತನ ಹೊಂದುವದಿಲ್ಲ. ಚಿರಸ್ಥಿರವಾಗಿ ಅವನು ಆತ್ಮ ಸಾಮ್ರಾಜ್ಯದಲ್ಲಿ ನೆಲೆಸಿದ್ದಾನೆ.

ಸಂಬಂಧ:- ಯೋಗಿಯ ಅಚಲತೆಯ ವರ್ಣನೆ ಮುಂದಿದೆ.

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಽಪಿ ವಿಚಾಲ್ಯತೇ ॥೨೨॥
ತಂ ವಿದ್ಯಾದ್ದುಃಖ ಸಂಯೋಗವಿಯೋಗಂ ಯೋಗಸಂಜ್ಞಿತಮ್।
ಸ ನಿಶ್ಚಯೇನ ಯೋಕ್ತವ್ಯೋಯೋಗೋಽನಿರ್ವಿಣ್ಣ ಚೇತಸಾ ॥೨೩॥

ಅರ್ಥ:-ಯಂ ಲಬ್ಧ್ವಾ=ಯಾವುದನ್ನು ಪಡೆದು ತತಃ ಅಧಿಕಂ=ಅದಕ್ಕಿಂತ ಶ್ರೇಷ್ಠ ವಾದ ಅಪರಂ=ಬೇರೆ ಲಾಭ=ಲಾಭವಿದೆಯೆಂದು ನ ಮನ್ಯತೇ=ತಿಳಿಯುವದಿಲ್ಲವೋ ಯಸ್ಮಿನ್=ಯಾವದರಲ್ಲಿ ಸ್ಥಿತಃ =ಇದ್ದು (ನಿಂತು), ಗುರುಣಾ ದುಃಖೇನ ಅಪಿ= ಮಹಾ ದುಃಖದಿಂದ ಕೂಡ (ಶೀತೋಷ್ಣಾದಿ ತಾಪ ಬಂದರೂ ಕೂಡ) ನ ವಿಚಾಲ್ಯತೇ =ವಿಚಲಿತ ನಾಗುವದಿಲ್ಲವೋ ॥೨೨॥ ದುಃಖ ಸಂಯೋಗ ವಿಯೋಗಂ= (ದುಃಖಸ್ಯ ಸಂಯೋಗೇನ ಸ್ಪರ್ಶ ಮಾತ್ರೇಣ ಅಪಿ ವಿಯೋಗಃ ಯಸ್ಮಿನ್ ತಂ) ದುಃಖದ ಲವಲೇಶ ಸ್ಪರ್ಶವೂ ಇರದ ತಂ= ಆ ಅವಸ್ಥೆಯನ್ನು ಯೋಗ ಸಂಜ್ಞಿತಂ= ಯೋಗ ನಾಮಕವೆಂದು ವಿದ್ಯಾತ್ =ತಿಳಿಯಬೇಕು. ಸಃ ಯೋಗಃ=ಆ ಯೋಗವು ನಿಶ್ಚಯೇನ= ನಿಶ್ಚಯವಾಗಿ ಅನಿರ್ವಿಣ್ಣ ಚೇತಸಾ =ನಿರುತ್ಸಾಹ ವಿಲ್ಲದ ಮನಸ್ಸಿನಿಂದ ಯೋಕ್ತವ್ಯಃ ಆಚರಿಸಲ್ಪಡಬೇಕು. ॥೨೩॥

ವಿವರಣೆ:– ಭಗವಂತ:– "ಪಾರ್ಥ, ಯೋಗವೊಂದು ಅಸಾಮಾನ್ಯ ಸಾಧನೆ; ಅನಾದ್ಯನಂತ ದೇವನ ಪ್ರಾಪ್ತಿ! ಚಿದ್ಘನಾನಂದದ ಅನುಭೂತಿ! ಅದನ್ನು ಆತ್ಮಸಾತ್ ಗೊಳಿಸಿದ ನಂತರ ಇನ್ನೊಂದು ವಸ್ತುವನ್ನು ಪಡೆಯಬೇಕೆಂದಾಗಲಿ, ಇನ್ನೊಂದು ತತ್ತ್ವವನ್ನು ತಿಳಿಯಬೇಕೆಂದಾಗಲಿ ಇಚ್ಛೆ ಉಂಟಾಗದು. ಅಷ್ಟೇ ಅಲ್ಲ, ದುಃಖಗಳ ಭಯಂಕರ ಪ್ರಪಾತ ಕೂಡ ಯೋಗಿಯ ಮನಸ್ಸನ್ನು ವಿಚಲ

ಗೊಳಿಸದು. ನೀನು ಅಂಥ ಯೋಗ ಸಿದ್ಧಿ ಪಡೆಯ ಬಯಸುವಿಯಾದರೆ ಪರಮ ಉತ್ಸಾಹ ಹಾಗು ದೃಢ ನಿರ್ಧಾರಗಳಿಂದ ಅಭ್ಯಾಸ ಪ್ರಾರಂಭಿಸು."

ಯಂ ಲಬ್ಧ್ವಾ...ಅಧಿಕಂ ತತಃ:– ಕರುವನ್ನು ಹಿಡಿದರೆ ಆಕಳು ತಾನಾಗಿಯೇ ಬೆನ್ನು ಹತ್ತಿ ಬರುವಂತೆ ಈ ಯೋಗವನ್ನು ಸಾಧಿಸಿದರೆ ಪರಮಾತ್ಮನು ತಾನಾಗಿಯೇ ಮುಃಖಿದ್ಧೋರುತ್ತಾನೆ. ಪರಮಾತ್ಮನಿಗಿಂತ ಶ್ರೇಷ್ಠವಾದುದೇನಿದೆ ವಿಶ್ವದಲ್ಲಿ? ಧನ, ಭೂಮಿ, ಪತ್ನಿ, ಪುತ್ರ, ಅಧಿಕಾರ, ದೇಹ, ಕೀರ್ತಿ ಈ ಪ್ರಾಪಂಚಿಕ ವಸ್ತುಗಳಲ್ಲಿ ತರತಮ ಭಾವವಿದೆ; ಈ ತರತಮ ಪ್ರವಾಹವು ದೇವನಲ್ಲಿ ಅಡಗಿ ಬಿಡುತ್ತದೆ. ಅಂಥ ಪರಮೋಚ್ಚಪದವನ್ನು ಗಳಿಸಿಕೊಡುವ ಯೋಗವೇ ಕೈವಶವಾದರೆ ಮತ್ತೇನು ಬೇಕಾದೀತು ಮನುಷ್ಯನಿಗೆ? ಆತ ಏನನ್ನೂ ಪಡೆಯಲೆಳಸುವದಿಲ್ಲ.

(೨) ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ:– ಅಂಥ ಪರಾತ್ಪರ ಪ್ರಭುವನ್ನು ತೋರಿಸುವ ಈ ಯೋಗದಲ್ಲಿ ನಿಂತಾಗ ಎಂಥ ಭಯಾನಕ ದುಃಖಗಳು ಮೈಮೇಲೆ ಕಡಿದು ಬಿದ್ದರೂ ಆ ಯೋಗಿ ಹೊಯ್ದಾಡಲಾರ. ಅಕ್ಕನ ವಚನವಿಲ್ಲಿ ಗಮನೀಯ.

> "ಕಿಡಿ ಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು, ಮುಗಿಲು ಹರಿದು ಬಿದ್ದಡೆ ಎನಗೆ ಮಜ್ಜನಕ್ಕೆರೆದರೆಂಬೆನು, ಗಿರಿ ಮೇಲೆ ಬಿದ್ದರೆ ಎನಗೆ ಪುಷ್ಪವೆಂಬೆನು, ಚನ್ನ ಮಲ್ಲಿಕಾರ್ಜುನಯ್ಯಾ ಶಿರ ಹರಿದು ಬಿದ್ದಡೆ ಪ್ರಾಣ ನಿಮಗರ್ಪಿತವೆಂಬೆನು."

(೩) ತಂ ವಿದ್ಯಾತ್:– ಸ ನಿಶ್ಚಯೇನ ಯೋಕ್ತವ್ಯಃ : ದುಃಖದ ಲವ ಲೇಶ ಸಂಪರ್ಕವಿಲ್ಲದ, ಆತ್ಮಪ್ರಕಾಶಕವಾದ ಚಿತ್ತದ ಅವಸ್ಥೆಯೇ ಯೋಗ. ಇದು ಬಲ್ಲವರ ಅಭಿಮತ. ಶ್ರದ್ಧಾ ವೀರ್ಯ ಸ್ಮೃತಿ ಸಮಾಧಿ ಹಾಗು ಪ್ರಜ್ಞಾ ಪೂರ್ವಕ ಆ ಯೋಗವನ್ನು ಅನುಷ್ಠಾನಗೊಳಿಸಬೇಕು. ಹತ್ತು ಜನ್ಮ ಕಳೆದರೂ ಸರಿಯೇ ಯೋಗವನ್ನು ಸಾಧಿಸಿಯೇ ತೀರುವೆನೆಂಬ ದೃಢ ನಿರ್ಧಾರವಿದ್ದರೆ ಯೋಗವೇನೂ ಅಸಾಧ್ಯವಲ್ಲ. ಟಿಟ್ಟಿಭ ಪುಟ್ಟ ಪಕ್ಷಿಯಾದರೂ ಸಮುದ್ರರಾಜನನ್ನೇ ಸೋಲಿಸಿದ ಕಥೆ ಛಲದ ಮಾದರಿಯಾಗಿದೆ. ನಾವು ಪ್ರಾಪಂಚಿಕರು, ಸನ್ಯಾಸಿಗಳಿಗೆ ಮಾತ್ರ ಸಾಧ್ಯವಾಗಬಹುದಾದ ಯೋಗವು ನಮಗೆ ಅದೆಂತು ಸಮನಿಸೀತು? ಎಂಬ ನಿರಾಶಾ ಭಾವನೆ ಬೇಡ. ನಮ್ಮ ಮನೋನಿರ್ಧಾರ ಏನೆಲ್ಲವನ್ನು ಸಾಧಿಸಿ ಕೊಟ್ಟೇ ತೀರುವದು.

**ಸಂಕಲ್ಪ ಪ್ರಭವಾನ್ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥೨೪॥**

ಅರ್ಥ:– ಸಂಕಲ್ಪ ಪ್ರಭವಾನ್ = (ಸಂಕಲ್ಪಾತ್ ಪ್ರಭವಃ ಯೇಷಾಂ ತೇ, ತಾನ್) ಸಂಕಲ್ಪದಿಂದ ಹುಟ್ಟುವ, ಸರ್ವಾನ್ = ಸಕಲ ಕಾಮಾನ್ = ಕಾಮನೆಗಳನ್ನು ಅಶೇಷತಃ = ಸಂಪೂರ್ಣವಾಗಿ ತ್ಯಕ್ತ್ವಾ = ತ್ಯಜಿಸಿ ಮನಸಾ ಏವ = ಮನಸ್ಸಿನಿಂದಲೇ ಇಂದ್ರಿಯ

ಗ್ರಾಮಂ = ಇಂದ್ರಿಯ ಸಮೂಹವನ್ನು ಸಮಂತತಃ = ಎಲ್ಲ ರೀತಿಯಿಂದ ವಿನಿಯಮ್ಯ= ನಿಯಮನ ಮಾಡಿ (ನಿಯಮನ ಮಾಡಬೇಕು).

**ವಿವರಣೆ:-** (೧) **ಸಂಕಲ್ಪ ಪ್ರಭವಾನ್ ಕಾಮಾನ್:** ಪ್ರಾಕೃತಿಕವಾದ ಭೂಮಿ ಕಾಂಚನ ಕಾಮಿನಿ ಕೀರ್ತಿ ಅಧಿಕಾರ ಮುಂತಾದ ವಸ್ತುಗಳು ಅಶುಭ; ಅರ್ಥಾತ್ ದುಃಖಕರ. ಆ ವಸ್ತುಗಳು ಶುಭ, ಸುಖಕರ ಎಂದು ಭಾವಿಸುವದು ಸಂಕಲ್ಪ. ಸಂಕಲ್ಪ ಒಂದೇ ಬಗೆಯಲ್ಲ; ಹತ್ತು ಹಲವು ಬಗೆ; ಎಷ್ಟು ವಿಷಯಗಳೋ ಅಷ್ಟು ಸಂಕಲ್ಪ! ಎಂತಲೇ ಯೋಗ ಸೂತ್ರಕಾರರು "ದ್ರಷ್ಟು ದೃಶ್ಯೋಪರಕ್ತಂ ಚಿತ್ತಂ ಸರ್ವಾರ್ಥಮ್" (೪-೨೩) ಎಂದಿದ್ದಾರೆ. ಅವರ ಅರ್ಥ ದ್ರಷ್ಟುವಿನ ಮತ್ತು ದೃಶ್ಯಗಳ ಆಕಾರವಾಗುವ ಚಿತ್ತು ಸರ್ವಾರ್ಥ- ವಿಭಿನ್ನ! ಹಲವಿಧ; ಏಕೆಂದರೆ ಗುಣ ಕ್ರಿಯಾಭಿಮಾನಿಯಾದ ಅಲ್ಲದೆ ದೇಹಾದಿ ವಿವಿಧ ತತ್ತ್ವಗಳ ಅಭಿಮಾನಿಯಾದ ದ್ರಷ್ಟನಲ್ಲಿಯೂ ಭಿನ್ನತೆಗೆ ಅವಕಾಶವಿದೆ. ಗುಣ ಕ್ರಿಯಾರೂಪ ದೃಶ್ಯಸೃಷ್ಟಿಯಲ್ಲೂ ವೈವಿಧ್ಯತೆಯಿದೆ. ಇವೆಲ್ಲವುಗಳ ಆಕಾರವಾಗುವ ಚಿತ್ತು ಸ್ವಾಭಾವಿಕವಾಗಿಯೇ ಸರ್ವಾರ್ಥಕ. ಇಂಥ ಚಿತ್ತದ ಸಂಕಲ್ಪಗಳಿಂದ ಅಸಂಖ್ಯ ಕಾಮನೆಗಳು ಇಚ್ಛೆಗಳು ಜನ್ಮ ತಾಳುತ್ತವೆ.

(೨) **ತ್ಯಕ್ತ್ವಾ ಸರ್ವಾನ್ (ಕಾಮಾನ್) ಅಶೇಷತಃ :-** ಅಶೇಷತಃ ಅಂದರೆ ವಾಸನಾ ಸಹಿತವಾಗಿ (ಸಂಕಲ್ಪ ಸಹಿತವಾಗಿ) ಆ ಸಕಲ ಕಾಮನೆಗಳನ್ನು ಬಿಟ್ಟುಕೊಡಬೇಕು. ಭೋಗ ಲಾಲಸೆಯನ್ನೂ ಭೋಗ ವೈಭವಗಳ ಆಸಕ್ತಿಯನ್ನೂ ಸಂಪೂರ್ಣವಾಗಿ ತ್ಯಜಿಸಬೇಕು "ಶ್ವಾನ ವಮನ" ಎಂದು ಭಾವಿಸಿ! ನಾಯಿಯು ಕಾರಿದ ಅನ್ನವನ್ನು ಯಾರು ಬಯಸುತ್ತಾರೆ? ಧನ ಭೂಮಿಗಳು ಅಸಂಖ್ಯ ಹಸ್ತಗಳ ಸ್ಪರ್ಶಿಸಿ ನಮ್ಮ ಕೈಗೆ ಬಂದಿವೆ; ಯಾವುದೂ ಪರಿಶುದ್ಧವಲ್ಲ, ಪರಸ್ಪೃಷ್ಟ! ಆದ್ದರಿಂದ ಅವು ತ್ಯಾಜ್ಯ! ಹೀಗೆ ತಿಳಿವು ಮೂಡಿ ಪರಿತ್ಯಾಗ ಮಾಡಿದರೆ ಅದು ಸುಸ್ಥಿರ ವಿರಾಗ.

(೩) **ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ:–** ಜಗತ್ತು ಬಹು ಆಕರ್ಷಕ. ಮನುಷ್ಯನ ಕೈವಾಡದಿಂದ ಅದು ಮತ್ತಷ್ಟು ಮನೋಹರವಾಗಿದೆ. ಇಂದ್ರಿಯಗಳು ಮನಸ್ಸು ಅತ್ತ ಹರಿಯುವದು ಸಹಜ. ಅವುಗಳನ್ನು ಸಕ್ತಿಯಿಂದಲಾದರೂ ಸರಿಯೆ ನಿಗ್ರಹಿಸಬೇಕು. ಆ ಮನದಲ್ಲಿ ಪುಟಿದೇಳುವ ದ್ವೇಷ ಮಾತ್ಸರ್ಯ ಮೋಹಗಳನ್ನು ತುಳಿದು ದಮನ ಮಾಡಬೇಕು. ಆಗ ಒಂದು ಬಗೆಯ ನಿಶ್ಚಲತೆ ಅಂತರಂಗದಲ್ಲಿ ನೆಲೆಸುವದು. ಸತ್ಯ ದರ್ಶನಕ್ಕೆ ಅನುಕೂಲವಾದ ಪರಿಸರ ಹೃದಯದಲ್ಲಿ ವ್ಯಾಪಿಸುವದು. ಬಳಿಕ ಅಚಲ ಮನಸ್ಸಿನಲ್ಲಿ ಸತ್ವತಮ ಶಕ್ತಿ ಆವಿರ್ಭವಿಸಿ ದೇವನ ಸಾಕ್ಷಾತ್ಕಾರ ಸಾಧ್ಯಗೊಳಿಸುವದು.

**ಸಂಬಂಧ:–** ಪೂರ್ವ ಸಂಸ್ಕಾರದ ಒತ್ತಡದಿಂದ ಮನಸ್ಸು ಕಂಪಿಸಿದರೆ

ನಿಧಾನವಾಗಿ ಒಂದು ಉಪಾಯದಿಂದ ಅದನ್ನು ಅವಿಚಲಗೊಳಿಸಬೇಕೆಂದು ಭಗವಂತ ಉಪದೇಶಿಸುವನು.

ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥೨೫॥

ಅರ್ಥ:– ಧೃತಿ ಗೃಹೀತಯಾ ಬುದ್ಧ್ಯಾ = ಧಾರಣೆಯ ಮೂಲಕ ವಶೀಕೃತವಾದ ಬುದ್ಧಿಯಿಂದ, ಆತ್ಮಸಂಸ್ಥಂ ಮನಃ ಕೃತ್ವಾ = ಮನಸ್ಸನ್ನು ಆತ್ಮನಿಷ್ಠಗೊಳಿಸಿ, ಶನೈಃ ಶನೈಃ = ಸಾವಕಾಶವಾಗಿ ಉಪರಮೇತ್ = ನಿಶ್ಚಲವಾಗಿಸಬೇಕು, ನ ಕಿಂಚಿದಪಿ ಚಿಂತಯೇತ್ = ಏನನ್ನು (ಬೇರೆ ಏನನ್ನೂ) ಚಿಂತಿಸಬಾರದು.

ವಿವರಣೆ:– ಭಗವಂತ:– "ಭರತೋತ್ತಮ, ಯಾವ ಸಿದ್ಧಿಯಾದರೇನು ಅದು ಸುಲಭವಾಗಿ ಹಾಗು ತರಾತುರಿಯಿಂದ ಕೈವಶವಾಗದು. ಅವರಲ್ಲಿ ಅವ್ಯಕ್ತ ಹಾಗು ಅಚಿಂತ್ಯ ದೇವನ ಅನುಭೂತಿ ಹೊಂದಬೇಕಾದರಂತೂ ಅಪಾರ ತಾಳ್ಮೆ, ಬಹು ದೀರ್ಘ ಯತ್ನ ಅತ್ಯಗತ್ಯ. ವಿಷಯಗಳಲ್ಲಿ ಹರಿದಾಡುವ ಮನಸ್ಸನ್ನು ನಿಧಾನವಾಗಿ ವಿವೇಕ ವಿರಾಗ ಶಮ ದಮಾದಿ ಸುಗುಣಗಳಿಂದ ಮತ್ತು ದೇವನನ್ನು ಪಡೆದೇ ತೀರುವೆನೆಂಬ ಬಲವಾದ ಇಚ್ಛೆಗಳ ಸಹಾಯದಿಂದ ಪರಾವೃತ್ತಗೊಳಿಸಬೇಕು. ಬಳಿಕ ಅದನ್ನು ಹೃದಯಸ್ಥ ಆತ್ಮದಲ್ಲಿ ಧಾರಣೆಮಾಡಿ, ಆ ಆತ್ಮನಲ್ಲೇ ಪೂರ್ತಿ ನಿಶ್ಚಲಗೊಳಿಸಬೇಕು. ಬಾಹ್ಯದ ಏನನ್ನೂ ಧೇನಿಸದೆ ಆತ್ಮನಲ್ಲಿ ಮನಸ್ಸನ್ನು ಮುಳುಗಿಸಿಬಿಡಬೇಕು."

(೧) ಶನೈಶ್ಶನೈರುಪರಮೇತ್:- ಅವಸರ, ರಭಸ, ಅತ್ಯಾತುರಗಳು ಸಾಧಕವಲ್ಲ. ಅವಸರದ ಮನುಷ್ಯ ಬೇಗನೆ ದಣಿಯುತ್ತಾನೆ; ಬೇಸರಗೊಳ್ಳುತ್ತಾನೆ. ವೇಗವಾಗಿ ಓಡಿದ ಮೊಲ ಅರ್ಧ ದಾರಿಯಲ್ಲೇ ಆಯಾಸಹೊಂದಿ ಮಲಗಿತು; ಒಂದೇ ಗತಿಯಲ್ಲಿ ಸಾಗಿದ ಆಮೆಯು ಗುರಿ ಮುಟ್ಟಿ ಪಂದ್ಯದಲ್ಲಿ ಗೆದ್ದಿತು. ಸಾಧಕನು ಈ ಕಥೆಯಿಂದ ಪಾಠ ಕಲಿಯಬೇಕು. ಪಕ್ಷಿಯ ವಿಹಂಗಮ ಗತಿಯು ಚುರುಕಿನದಾದರೂ ಗುರಿಯ ಪ್ರಾಪ್ತಿ ಖಚಿತವಿಲ್ಲ; ಪಿಪೀಲಿಕಾ ಗತಿಯು ನಿಧಾನವಾದರೂ ಗುರಿ ತಲುಪುವದು ನೂರಕ್ಕೆ ನೂರು ಖಚಿತ. ಡಣಾ ಡಂಗುರ ಸಾರಿ ಆಂತರಿಕ ಆತ್ಮಾಭ್ಯಾಸಕ್ಕೆ ಇಳಿದ ವ್ಯಕ್ತಿ ಅನೇಕ ಕಷ್ಟನಷ್ಟಗಳನ್ನು ತಾನಾಗಿಯೇ ಬರಮಾಡಿಕೊಳ್ಳುತ್ತಾನೆ. ಪತ್ನಿ ಪುತ್ರ ಪರಿವಾರದವರೆಲ್ಲ ಬಲಾತ್ಕಾರದಿಂದ ಅವನ ಸಾಧನೆ ಬಿಡಿಸುತ್ತಾರೆ, ಪ್ರಪಂಚದಲ್ಲಿ ಕಟ್ಟಿ ಹಾಕುತ್ತಾರೆ. ಮೌನವಾಗಿ ರಹಸ್ಯದಲ್ಲಿ ಅಭ್ಯಾಸಕ್ಕೆ ತೊಡಗಿದ ಮನುಷ್ಯನು ದೇವ ದಾರಿಯಲ್ಲಿ ನಿಧಾನವಾಗಿ ನಡೆಯುತ್ತಾನೆ; ಪ್ರಗತಿ ಸಾಧಿಸುತ್ತಾನೆ. ಒಂದು ದಿನ ಗುರಿ ಮುಟ್ಟಿಯೇ ತೀರುತ್ತಾನೆ.

ಇಂದ್ರಿಯ, ಮನ, ಅಹಂಕಾರ ಮಹತ್ತು ಹಾಗು ಪ್ರಕೃತಿ ಇವು ಉತ್ತರೋತ್ತರ ಶ್ರೇಷ್ಠ ಮತ್ತು ಸೂಕ್ಷ್ಮವಾದ ತತ್ತ್ವಗಳು. ಸಾಧಕನು ಪ್ರಾರಂಭದಲ್ಲಿ

ಇಂದ್ರಿಯ ಸ್ಥರದಲ್ಲಿ ನಿಂತಿದ್ದಾನೆ. ಈ ಇಂದ್ರಿಯ ಸ್ಥರದಿಂದ ಒಮ್ಮೆಲೆ ಅವ್ಯಕ್ತ ಪ್ರಕೃತಿಯಾಚೆ ನೆಲೆಸಿರುವ ದಿವ್ಯ ಆತ್ಮ ಸಾಮ್ರಾಜ್ಯದಲ್ಲಿ ಕಾಲು ಹಾಕುವದು ಅಸಾಧ್ಯ. ಅತಿ ಎತ್ತರ ಸ್ಥಾನಕ್ಕೆ ಮುಟ್ಟಬೇಕಾದರೆ ಮೆಟ್ಟಿಲು ಮೆಟ್ಟಿಲಾಗಿ ಏರ ಬೇಕಲ್ಲವೆ? ಅದೇ ರೀತಿ, ಸಾಧಕನು ಇಂದ್ರಿಯ, ಮನ, ಅಹಂಕಾರ, ಮಹತ್ತು ತತ್ತ್ವಗಳನ್ನೇರುತ್ತ ಕೊನೆಗೆ ದೇವರಾಜ್ಯದಲ್ಲಿ ಪ್ರವೇಶಿಸಬೇಕು. ಅವನ ಮನಸ್ಸು ಶುದ್ಧವಾಗುತ್ತ ಆಗುತ್ತ ಸಾಗಿ ಅನಂತತೆಯಲ್ಲಿ ಬೆರೆತು ಬಿಡಬೇಕು. ಇದಕ್ಕೆ ಚಿತ್ತೋಪರಮ ಸ್ಥಿತಿ ಎನ್ನುತ್ತಾರೆ. ತ್ವಂ ಪದ ಲಕ್ಷ್ಯ ಸಿದ್ಧಿ ಎಂದರೂ ಇದೆ. ಇವಕ್ಕೆಯೇ ಸವಿಕಲ್ಪ ಸಂಪ್ರಜ್ಞಾತ ಸಮಾಧಿ ಎಂದು ಉಪನಾಮ.

(೨) **ನ ಕಿಂಚಿದಪಿ ಚಿಂತಯೇತ್:** ಚಿತ್ತೋಪರಮವು ಸಿದ್ಧಿಸಿದರೆ ಸಾಧನೆ ಮುಗಿಯಲಿಲ್ಲ. ಆ ಉಪರಮದ ಭಾನ ಅಡಗಬೇಕು. ನಾನು ಅನ್ಯ ಎಂಬ ಕಲ್ಪನೆ ಅಳಿಯಬೇಕು. ವ್ಯುತ್ಥಾನವಾದಾಗಲು ಕೂಡ ಜಗತ್ತು ಆತ್ಮ ಭಿನ್ನವಾಗಿ ತೋರದೆ ಪರಮೇಶ್ವರನ ವಿಭಿನ್ನ ಅಭಿವ್ಯಕ್ತಿಯಾಗಿ ಕಾಣಬೇಕು. ಅಷ್ಟೇ ಅಲ್ಲ ಜಗತ್ತನ್ನು ನೋಡುತ್ತಿರುವಂತೆಯೇ ಅದರ ನಾಮ ರೂಪುಗಳು ಮರೆಯಾಗಿ ವಿಶ್ವಾಧಾರ ದೇವನೊರ್ವನೇ ತೋರಬೇಕು; ದೃಷ್ಟಾ ದೃಶ್ಯ ದರ್ಶನ ಈ ತ್ರಿಪುಟಿ-ಕಣ್ಮರೆ ಯಾಗಿ ನಿಂತಾಗ ಅದು ಅಸಂಪ್ರಜ್ಞಾತ ಸಮಾಧಿ! ಅಲ್ಲಿ ಸಾಧಕ ಪೂರ್ಣ ತೃಪ್ತ.

**ಪರಿಶಿಷ್ಟ:-** ಸಾಧನೆಯಲ್ಲಿ ಎರಡು ಭಾಗ- (೧) ಪೂರ್ವ (೨) ಉತ್ತರ. ಪೂರ್ವ ಯೋಗ ಸಾಧನೆಯಲ್ಲಿ ನಾಲ್ಕು ಘಟ್ಟ. (ಅ) ಇಂದ್ರಿಯ ಮಂಡಲ ಬಿಟ್ಟು ಮನೋ ಮಂಡಲಕ್ಕೆ ಏರುವದು: ಇದರಿಂದ ಇಂದ್ರಿಯ ಲಯ. (ಆ) ಮನೋ ಮಂಡಲ ದಾಟಿ ಅಹಂಕಾರ ಮಂಡಲಕ್ಕೆ ಏರುವದು. ಇದರಿಂದ ಮನೋಲಯ. (ಇ) ಅಹಂಕಾರ ಮಂಡಲ ದಾಟಿ ಮಹತ್ ಮಂಡಲಕ್ಕೇರು ವದು: ಇದರಿಂದ ಅಭಿಮಾನ ನಾಶ (ಈ) ಮಹತ್ ಮಂಡಲ ದಾಟಿ ಸಾಕ್ಷಿ ಆತ್ಮನಲ್ಲಿ ಪ್ರವೇಶಿಸುವದು. ಇದರಿಂದ ಬುದ್ಧಿ ತತ್ತ್ವವಿಲಯ. ಸಾಧಕನು ಈ ನಾಲ್ಕು ಘಟ್ಟಗಳನ್ನು ಸಾಧಿಸಿದರೆ ಆತ್ಮಸುಖದಲ್ಲಿ ರಮಿಸುವನು. ಈ ಸುಖಾನು ಭವ ವೃತ್ತಿಯೂ ಲಯವಾಗಿ ಪ್ರತ್ಯಗಾತ್ಮಾಭಿನ್ನ ಪರಮಾತ್ಮನಲ್ಲಿ ಪರಿಪೂರ್ಣ ಸಾಮರಸ್ಯ ಆಳವಟ್ಟರೆ ಅದೇ ಉತ್ತರ ಸಾಧನೆಯ ಸಿದ್ಧಿ.

**ಸಂಬಂಧ:-** ಅಷ್ಟು ಸಹಜವಾಗಿ ಮನೋ ನಿಗ್ರಹ ಸಾಧಿಸದಿದ್ದರೆ ಪ್ರತ್ಯಾ ಹಾರದ ಮೂಲಕ ಅದನ್ನು ಅಂತರ್ಮುಖ ಮಾಡಬೇಕು.

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್** ॥೨೬॥

**ಅರ್ಥ:-** ಚಂಚಲಂ= ಚಂಚಲವೂ ಅಸ್ಥಿರಂ= ಅಸ್ಥಿರವೂ (ಆದ) ಮನಃ= ಮನಸ್ಸು ಯತಃ ಯತಃ= ಯಾವ ಯಾವ ವಿಷಯಗಳತ್ತ ನಿಶ್ಚರತಿ= ಹರಿದಾಡುತ್ತಿದೆಯೋ ತತಃ ತತಃ

= ಆಯಾ ವಿಷಯಗಳಿಂದ ಏತತ್= ಇದನ್ನು ನಿಯಮ್ಯ= ನಿಗ್ರಹಿಸಿ ಆತ್ಮನಿ ಏವ= ಆತ್ಮದಲ್ಲಿಯೇ ವಶಂ ನಯೇತ್= ಸ್ಥಿರಗೊಳಿಸಬೇಕು.

ವಿವರಣೆ:- ಧನಂಜಯ, ಜಗತ್ತು ಪರಿವರ್ತನಶೀಲ. ಪ್ರತಿಯೊಂದು ವಸ್ತುವು ಪ್ರತಿನಿಮಿಷ ಬದಲಾಗುತ್ತದೆ. ಉದಾ: ಹಿಂಡಿದ ಹಾಲು ಮೊಸರಾಗುವದು, ಬಿತ್ತಿದ ಕಾಳು ಸಸಿಯಾಗುವದು, ಹುಟ್ಟಿದ ಮಗು ಬೆಳೆದು ಇಳಿದು ಸಾಯುವದು. ಕಟ್ಟಿದ ಕಟ್ಟಡಗಳು ಉರುಳುವವು. ಸೂರ್ಯ ಚಂದ್ರ ನಕ್ಷತ್ರ ಏನೆಲ್ಲವೂ ಕಾಲದ ಹಿಡಿತದಲ್ಲಿ ಸಿಲುಕಿದೆ. ಮನಸ್ಸೆನ್ನುವ ವಸ್ತು ಕೂಡ ವಿಶ್ವದ ಒಂದು ಭಾಗವಾದುದರಿಂದ ಅದೂ ಚಂಚಲ, ಎಂದು ಬೇರೆ ಹೇಳಬೇಕಿಲ್ಲ. ಅದು ಭಿನ್ನ ಭಿನ್ನ ವಿಷಯಗಳಲ್ಲಿ ಹರಿಯುತ್ತದೆ. ಹಾಗೆ ಹರಿದಾಗ ಆ ವಿಷಯದಿಂದ ಆ ಮನಸ್ಸನ್ನು ನಿಗ್ರಹಿಸಬೇಕು; ಹಾಗು ಆತ್ಮದಲ್ಲಿಯೇ ಸುಸ್ಥಿರಗೊಳಿಸಬೇಕು."

(೧) ಮನೋ ನಿರೋಧ:– ಹೊರಗೆ ಧಾವಿಸುವ ಮನಸ್ಸನ್ನು ಒಳಗೆ ಜಗ್ಗಬೇಕಲ್ಲವೆ ? ಅದಕ್ಕೆ ಮನೋ ನಿಗ್ರಹವೆಂದು ನಾಮ. ಈ ನಿಗ್ರಹ ಮೂರು ವಿಧದಿಂದ ಸಾಧ್ಯ: (ಅ) ವಿವೇಕ–ವಿರಾಗ (ಬ) ಉಪದೇಶ (ಕ) ಉದಾಸೀನತೆ.

(ಅ) ವಿಷಯಗಳ ನಿತ್ಯಾನಿತ್ಯತೆ ಸತ್ಯಾಸತ್ಯತೆಗಳನ್ನು ಪರೀಕ್ಷಿಸುವದು ವಿವೇಕ. ಅನಿತ್ಯ ಅಸತ್ಯ ವಿಷಯಗಳನ್ನು ಪರಿತ್ಯಜಿಸುವದು ವಿರಾಗ. ವಿವೇಕವು ವಸ್ತುವಿನ ಗುಣಧರ್ಮ ದರ್ಶಕ ಹಾಗು ವಿರಾಗವು ಮೋಹ ನಾಶಕ. ಈ ಎರಡರಿಂದ ಮನಸ್ಸು ಸಹಜವಾಗಿ ನಿರೋಧವಾಗುತ್ತದೆ.

(ಬ) ಉಪದೇಶದಲ್ಲಿ ಅಪಾರ ಶಕ್ತಿಯಿದೆ. ಎಂಥ ದುರಾತ್ಮನೂ ಕಾರುಣ್ಯ ಪೂರ್ಣ ಉಪದೇಶದಿಂದ ಪರಿವರ್ತನ ಹೊಂದುತ್ತಾನೆ. ಅಂಥ ಉಪದೇಶದಲ್ಲಿ ಎರಡು ವಿಧ. ಒಂದು ಪರೋಪದೇಶ, ಇನ್ನೊಂದು ಮನೋಬೋಧ. ಪರೋಪದೇಶವು ಇನ್ನೊಬ್ಬರ ಮನಸ್ಸನ್ನು ಪ್ರೇರಿಸುತ್ತದೆ. ಮನೋಬೋಧವು ಸ್ವಂತ ಮನಸ್ಸನ್ನು ಶುದ್ಧೀಕರಿಸುತ್ತದೆ. ಮನೋಬೋಧದ ಒಂದೆರಡು ಮಾದರಿಗಳು ಕೆಳಗಿವೆ.

"ಎಲೆ ಮನವೆ, ನೀ ನಿನ್ನ ನಿಜವ ತಿಳಿವಡೆ ಆ ನಿನ್ನ ನಿಜವ ಹೇಳುವೆ ಕೇಳು, ಅದು ಕೇವಲ ಜ್ಯೋತಿ. ಅದು ವರ್ಣಾತೀತ. ನೀನು ಅದನರಸುವಾಗ ನಿನಗಾವಲ್ಲಿ ನಿಶ್ಚಯ ತೋರಿತ್ತೋ ಅದೀಗ ನಿನ್ನ ಪರಿಪೂರ್ಣದ ನೆಲೆ, ಆ ನಿನ್ನ ನಿಜವ ನಿಶ್ಚಯಿಸಿ ನಿರ್ಗಮನಿಯಾದಲ್ಲಿ ಅದೇ ನಿನ್ನ ಸಮ್ಯಕ್ ಜ್ಞಾನದ ತೋರಿಕೆ, ಆ ತೋರಿಕೆಯ ಅಖಂಡ ಬೆಳಗಿನ ಹೊಳಹಿನೊಳಗೆ ನೀ ನಮ್ಮ ಗೋಹೇಶ್ವರ ಲಿಂಗದ ಶ್ರೀ ಚರಣವಸರಿಸಿಕೊಂಡು ನಿಶ್ಚಿಂತನಾಗೆಲೆ ಮನವೆ."

"ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ।
ಅಥ ಯದಲ್ಪಂ ತನ್ಮರ್ತ್ಯಂ ಯನ್ಮರ್ತ್ಯಂ ತದ್ದುಃಖಮ್ "॥

ಎಲೆ ಮನವೆ, ಯಾವುದು ವಿಶ್ವಕ್ಕಿಂತ ಹಿರಿದಾದುದೋ ಅದೇ ಸುಖ. ಪರಿಚ್ಛಿನ್ನವಾದ ಕಿರಿ ವಸ್ತುವಿನಲ್ಲಿ ಸುಖವಿಲ್ಲ. ಯಾಕೆಂದರೆ, ಅಲ್ಪವಾದುದಲ್ಲ ನಾಶವಾಗು

ತ್ತದೆ, ದುಃಖ ಕೊಡುತ್ತದೆ.

ಇಂಥ ಪವಿತ್ರ ಉಪದೇಶಗಳ ಸಹಾಯದಿಂದ ಮನಸ್ಸನ್ನು ನಿಗ್ರಹಿಸು ವದು ಸುಲಭ. ತವರನ್ನು ಬಿಟ್ಟು ಹೊರಟ ಮಗಳು ದುಃಖಿಸುತ್ತಾಳೆ; ತಂದೆಯ ಎರಡು ಹಿತವಚನ ಆಕೆಗೆ ಸಮಾಧಾನ ನೀಡುವವು. ಗಂಡನ ಪ್ರೀತಿಯ ಮಾತು ಗಳು ಅವಳನ್ನು ಮುಗ್ಧಗೊಳಿಸುವವು. ತವರನ್ನೇ ಮರೆತು ಬಿಡುವಳು. ಹಾಗೆ ಗುರುವಿನ ಹಿತವಚನ ಹಾಗು ಅಂತಃಪ್ರಜ್ಞೆಯ ಮನೋಬೋಧಗಳೆರಡೂ ಮನಸ್ಸಿನ ಪ್ರತ್ಯಾಹರಣ ಮಾಡಬಲ್ಲವು.

(೬) ಉದಾಸೀನತೆಯು ಚತುರ ಉಪಾಯ. ಮಹಾ ಸಾಗರದಲ್ಲಿ ಸಾಗಿದ ನೌಕೆಯ ಮೇಲೊಂದು ಗಿಳಿ ಕುಳಿತಿದೆ ಎನ್ನಿ. ಅದು ಹಾರಿ ಹೋಗುತ್ತದೆ, ಮೈಲು ಮೈಲು! ಆದರೆ ನಾವಿಕ ಅದರ ಗೊಡವೆಗೆಯೇ ಹೋಗುವದಿಲ್ಲ. ತನ್ನ ಮಾರ್ಗದಲ್ಲಿ ತಾನು ಕ್ರಮಿಸುತ್ತಾನೆ. ಹಾರಾಡಿ ಸೋತ ಗಿಳಿ ನಿರುಪಾಯವಾಗಿ ಮತ್ತೆ ತಾನಾಗಿಯೇ ನೌಕೆಗೆ ಹಿಂದಿರುಗುವದು. ಹಾಗೆ, ಮನಸ್ಸು ಎತ್ತ ಹರಿದರೂ ಹರಿಯಲಿ; ಜೀವ ನಾವಿಕ ಅದರ ಬೆನ್ನು ಹತ್ತದೆ ತನ್ನ ಧ್ಯೇಯದತ್ತ ಸಾಗಬೇಕು. ಮನಸ್ಸನ್ನು ಉದಾಸೀನ ಮಾಡಬೇಕು. ಆಗ ಹರಿದಾಡಿ ಸೋತ ಮನಸ್ಸು ತಾನಾ ಗಿಯೇ ವಶಕ್ಕೆ ಬರುವದು.

(೭) ಹಾಗೆ ಮೂರು ಉಪಾಯಗಳಿಂದ ನಿಗ್ರಹಿಸಲ್ಪಟ್ಟ ಮನಸ್ಸನ್ನು ಆತ್ಮನ ಚಿಂತನ ಧ್ಯಾನ ಸಮಾಧಿಗಳಲ್ಲಿ ಅಭಿರತಗೊಳಿಸಬೇಕು.

ಸಂಬಂಧ:- ನಿಷ್ಕಲ್ಮಷ ಮನದ ಯೋಗಿಯು ಅಮರ ಸುಖ ಹೊಂದು ತ್ತಾನೆ.

ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।
ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥೨೭॥

ಅರ್ಥ:- ಪ್ರಶಾಂತ ಮನಸಂ=ಪ್ರಶಾಂತ ಚಿತ್ತನಾದ, ಶಾಂತರಜಸಂ =ರಜೋಗುಣ ವಿಲ್ಲದ ಅಕಲ್ಮಷಂ= ಕಶ್ಮಲರಹಿತನಾದ ಬ್ರಹ್ಮಭೂತಂ =ಬ್ರಹ್ಮಲೀನನಾದ ಏನಂ ಯೋಗಿನಂ = ಈ ಯೋಗಿಯನ್ನು ಉತ್ತಮಂ ಸುಖಂ ಉಪೈತಿ= ಉತ್ತಮ (ಸಮಾಧಿ) ಸುಖವು ಹೊಂದುತ್ತದೆ.

ವಿವರಣೆ:- ಭಗವಂತ:- " ಪಾರ್ಥ, ವಿಷಯಂಗಳಿಂದ ನಿವೃತ್ತ ಮನಸ್ಸು ಪ್ರಶಾಂತ; ಅದರಲ್ಲಿ ರಜೋಗುಣವಿಲ್ಲ, ರಾಗ ದ್ವೇಷಾದಿ ಕಲುಷಗಳಿಲ್ಲ. ಆದುದ ರಿಂದ ಅದು ಬ್ರಹ್ಮವಸ್ತುವನ್ನು ಪೂರ್ಣವಾಗಿ ಪರಿಗ್ರಹಿಸುತ್ತದೆ; ಅಷ್ಟೇ ಅಲ್ಲ, ಆ ವಸ್ತುವಿನಲ್ಲಿ ಒಂದಾಗುತ್ತದೆ. ಆಗ, ಎಂದಿಗೂ ಕರಗದ ಕಡಿಮೆಯಾಗದ ದಿವ್ಯ ಸುಖ ಅವನಿಗೆ ಸಮನಿಸುತ್ತದೆ. "

ಭಗವಂತನ ಆಶಯವನ್ನೇ ಪುಷ್ಟೀಕರಿಸುವ ಒಂದು ಆಧಾರ ವಚನ ಇಲ್ಲಿದೆ:

" ಯಸ್ಮಿನ್ನೇಕಾಗ್ರೇ ಚೇತಸಿ ಸದ್ಭೂತಮರ್ಥಂ ಪ್ರದ್ಯೋತಯತಿ । ಕರ್ಮ ಬಂಧನಾನ್

ಶ್ಲಥಯತಿ । ನಿರೋಧಮಭಿಮುಖೀ ಕರೋತಿ । ಕ್ಷಿಣೋತಿ ಸರ್ವಾನ್ ಕ್ಲೇಶಾನ್ ।
ಸ ಸಂಪ್ರಜ್ಞಾತ ಯೋಗ ಇತಿ ಆಖ್ಯಾಯತೇ ॥ "

ಯಾವುದು ಏಕಾಗ್ರ ಮನಸ್ಸಿನಲ್ಲಿ ತ್ರಿಕಾಲಾಬಾಧ್ಯ ಸದ್ರೂಪ ಆತ್ಮನನ್ನು ಪ್ರಕಾಶ ಪಡಿಸುತ್ತದೆಯೋ, ಯಾವುದು ಪಾಪ ಪುಣ್ಯಗಳ ಕರ್ಮ ಬಂಧನಗಳನ್ನು ಸಡಿಲಾಗಿಸುತ್ತದೆಯೋ, ಅಸಂಪ್ರಜ್ಞಾತ ಸಮಾಧಿ ಮುಖವಾಗಿ ನಮ್ಮನ್ನು ಕರೆದೊಯ್ಯುತ್ತದೆಯೋ, ಅವಿದ್ಯಾದಿ ಪಂಚ ಕ್ಲೇಶಗಳನ್ನು ಕ್ಷಯಗೊಳಿಸುತ್ತದೆಯೋ ಅದುವೇ ಸಂಪ್ರಜ್ಞಾತ ಯೋಗರೂಪ ಮನಃಪ್ರಶಾಂತತೆ! ಈ ಸ್ಥಿತಿಯು ಯಾರಿಗೆ ದೊರೆತಿದೆಯೋ ಆ ಯೋಗಿಗಳಿಗೆ ದಿವ್ಯಾನಂದವು ಸಹಜವಾಗಿ ಪ್ರಾಪ್ತವಾಗುತ್ತದೆ.

**ಸಂಬಂಧ:–** ಯೋಗದಿಂದ ಸಿದ್ಧಿಸುವ ಫಲಗಳ ಬಗ್ಗೆ ಹೇಳಲಾಗುವದು.

**ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥೨೮॥**

**ಅರ್ಥ:–** ಏವಂ= ಇಂತು ಸದಾ = ಸಂತತವಾಗಿ ಆತ್ಮಾನಂ = ಮನಸ್ಸನ್ನು ಯುಂಜನ್= ವಶಮಾಡಿಕೊಳ್ಳುತ್ತ, ವಿಗತಕಲ್ಮಷಃ =ಕಲ್ಮಷರಹಿತನಾಗಿ, ಯೋಗೀ =ಯೋಗಿಯು, ಸುಖೇನ= ಅನಾಯಾಸದಿಂದ, ಬ್ರಹ್ಮಸಂಸ್ಪರ್ಶಂ ಅತ್ಯಂತಂ ಸುಖಂ=ಬ್ರಹ್ಮಸಾಕ್ಷಾತ್ಕಾರ ರೂಪ ಅನಂತ ಸುಖವನ್ನು ಅಶ್ನುತೇ =ಹೊಂದುತ್ತಾನೆ.

**ವಿವರಣೆ:–** ಭಗವಂತ:- " ಅರ್ಜುನ, ಅಷ್ಟಾಂಗ ಯೋಗವನ್ನು ಅನವರತವಾಗಿ ಸಾಧಿಸಿದ ಯೋಗಿಯ ಮನಸ್ಸು ಆತ್ಮವಶವಾಗಿದೆ; ಅದರಲ್ಲಿರುವ ಧರ್ಮಾಧರ್ಮಾದಿ ಸರ್ವಕ್ಲೇಶಗಳು ಅಳಿದಿವೆ. ಆದುದರಿಂದ ಆ ಯೋಗಿಯು ಬ್ರಹ್ಮಸಾಕ್ಷಾತ್ಕಾರರೂಪ ನಿತ್ಯ ಸುಖವನ್ನು ಅನುಭವಿಸುತ್ತಾನೆ. "

### ಸುಖದ ಮೀಮಾಂಸೆ

ಸುಖ ಹಾಗು ಆನಂದ ಎರಡೂ ಏಕಾರ್ಥ ಶಬ್ದಗಳು. ಮನದ ಅಹ್ಲಾದಕರ ಸ್ಥಿತಿಯೇ ಸುಖ; ಉದಾ: ಸುಂದರವಾದ ಗುಲಾಬಿ ಪುಷ್ಪವನ್ನು ನೋಡಿದಾಗ ಒಂದು ಕ್ಷಣಕಾಲ ರಜ ತಮಗಳು ಅಡಗಿ ಸತ್ವವು ಮನಸ್ಸಿನಲ್ಲಿ ಆವಿರ್ಭವಿಸುತ್ತದೆ. ಸತ್ವಯುತ ಮನಸ್ಸು ಅರಳುತ್ತದೆ; ಅದರಲ್ಲಿ ಪರಮಾತ್ಮನ ಆನಂದ ಕಿರಣಗಳು ವ್ಯಕ್ತವಾಗುತ್ತವೆ, ಆಗ ನಮಗೆ ಸುಖದ ಅನುಭವ ದೊರೆಯುತ್ತದೆ. ಅಜ್ಞಾನಿಗೆ ಇದೆಲ್ಲ ತಿಳಿಯದು. ತನಗಾದ ಸುಖವು ಪುಷ್ಪದ್ದೆಂದೇ ಅವನ ಭ್ರಮೆ. ಒಣ ಎಲುವಿಗೆ ಹತ್ತಿದ ತನ್ನ ಲಾಲಾರಸವನ್ನೇ ನೆಕ್ಕಿ ಎಲುವೇ ಸುರಸ ಹಾಗು ಸುಖದವೆಂದು ತಿಳಿಯುವ ನಾಯಿಯೂ ಆ ಅಜ್ಞ ಮನುಷ್ಯನೂ ಒಂದೇ ವರ್ಗದವರು. ಎಂತಲೇ ಅವನಿಗೆ ' ಪಶು ' ಎಂದಿದ್ದಾರೆ. ( ಪಶ್ಯತಿ ತಸ್ಮಿನ್ನೇವ ಸಂತುಷ್ಯತಿ ಇತಿ ಪಶುಃ. ನೋಡಿದ್ದರಲ್ಲಿ ಸಂತೋಷ ಪಡುವದು ಪಶು. )

ಅಜ್ಞ ಜೀವನು ಶಬ್ದ ಸ್ಪರ್ಶಾದಿ ವಿವಿಧ ಗುಣಗಳಲ್ಲಿ ರಮಮಾಣನಾಗಿದ್ದಾನೆ. ಸಾಕ್ಷಾತ್ ಭಗವಂತನೇ ಎಚ್ಚರಿಸಿದರೂ ಮಡದಿ ಮಕ್ಕಳನ್ನು ಒಂದು

ಕ್ಷಣವೂ ಬಿಡದಷ್ಟು ಆಸಕ್ತಿ ತಾಳಿದ್ದಾನೆ. ಅವುಗಳ ಸಾನಿಧ್ಯದಲ್ಲಿ ಒಂದು ಬಗೆಯ ಮಾದಕ ಸುಖವನ್ನು ಅನುಭವಿಸುತ್ತಾನೆ, ಇವನು ಐಹಿಕ ಸುಖಜೀವಿ. ಇನ್ನೊಬ್ಬ ಜೀವನು ಇಹದ ಭೋಗಗಳಲ್ಲಿ ಆನಂದ ಪಡುವದಿಲ್ಲ. ಅವನು ಸ್ವರ್ಗೀಯ ಶಬ್ದ ಸ್ಪರ್ಶಾದಿಗಳಿಗೆ ಮನಸೋತಿದ್ದಾನೆ. ಅವನಿಗೆ ಸ್ವರ್ಗದ ಸೆರೆಯು ಅಮೃತ; ಅಲ್ಲಿಯ ರಂಭೆ ಊರ್ವಶಿಯ ಸಾನಿಧ್ಯವು ಚಿರ ಸೌಖ್ಯ. ಅವನು ಲೌಕಿಕ ಭೋಗಿಗಿಂತ ಸ್ವಲ್ಪ ವಿಶಿಷ್ಟನಾದರೂ ಕಾಮಾತ್ಮನೇ ಸರಿ! ಅವನೂ ಅವಿಪಶ್ಚಿತ. ಮತ್ತೊಬ್ಬನು ಸುಪ್ತಿ ಸುಖಜೀವಿ. ಇಹ ಪರಗಳ ವಿಷಯವಿರದ ತಮೋಂಧಕಾರದಲ್ಲಿ ಪ್ರವೇಶಿಸಿ ಒಂದು ವಿಧದ ಜಡ ಸೌಖ್ಯ ಅನುಭವಿಸುತ್ತಾನೆ.

ಈಗ ನಾವು ನೋಡಿದ ಐಹಿಕ ಆಮುಷ್ಮಿಕ ಮತ್ತು ಸುಪ್ತಿಗತ ಸುಖಗಳು ಲೌಕಿಕ ಅಥವಾ ಪ್ರಾಕೃತಿಕ. ಕ್ಷಿಪ್ತ ವಿಕ್ಷಿಪ್ತ ಹಾಗು ಮೂಢ ವೃತ್ತಿಯವರಿಗೆ ಈ ಸುಖಗಳು ಶಾಶ್ವತವಾಗಿ ಕಂಡರೂ ಅವೆಲ್ಲ ಕ್ಷಣಿಕ. ನಾಮ ಮಾತ್ರ. ಈ ಮೂರು ಸುಖಗಳಿಗೆ ಅತೀತ ಹಾಗು ವಿಲಕ್ಷಣವಾದ ಪರಾತ್ಪರ ಸುಖವೊಂದಿದೆ. ಮನಸ್ಸು ಬಾಹ್ಯ ದೃಶ್ಯ ಜಗತ್ತನ್ನು ಮರೆತು ಸುಪ್ತಿ ಮಂಡಲವೇರಿ ಆಚೆ ಅನಂತತೆಯಲ್ಲಿ ಏಕೈಕವಾಗಿ ಪ್ರಜ್ವಲಿಸುವ ಪುರುಷ ಜ್ಯೋತಿಯತ್ತ ಮುಖ ಹೊರಳಿಸಿದರೆ ತ್ವಂ ಪದ ಲಕ್ಷ್ಯದ ಅನಿರ್ಗಲ ಅನುಸಂಧಾನ ಪ್ರಾರಂಭವಾಗುವದಲ್ಲವೆ? ಈ ಅನುಸಂಧಾನದಲ್ಲಿ ಅನುಭವಕ್ಕೆ ಬರುವಂಥದು ಆ ಪರಾತ್ಪರ ಸುಖ! ಅದು ಅಲೌಕಿಕ! ಪಾರಮಾರ್ಥಿಕ! ನಂತರ ತ್ವಂ ಪದ ಲಕ್ಷ್ಯದ ಅನುಸಂಧಾನ ಕೂಡ ನಿಂತು ಪ್ರತ್ಯಗಾತ್ಮನಲ್ಲಿ ಆ ಮನವು ವಿಲೀನಗೊಂಡರೆ ಅಸಂಪ್ರಜ್ಞಾತ ಸಮಾಧಿ ಸಮನಿಸುವದಷ್ಟೆ? ಅಲ್ಲಿ ಅನುಭವಕ್ಕೆ ಬರುವ ಸುಖವೇ ಚಿರಂತನ ದಿವ್ಯ ಸಂತಸ! ಅದು ಅವರ್ಣನೀಯ! ಅದು ಯೋಗದ ಅಂತಿಮ ಫಲ.

ಒಟ್ಟಿನಲ್ಲಿ, ಸುಖವು ದೇವನ ರೂಪು. ಅಷ್ಟಾಂಗಯೋಗ ಸಾಧನೆಯಿಂದ ಮಾತ್ರ ಅದನ್ನು ಯಥಾವತ್ತಾಗಿ ಅನುಭವಿಸುವದು ಶಕ್ಯ. ಯೋಗಾಂತರಾಯಗಳು ಎದುರಾದರೆ ಆ ಸುಖದ ಅನುಭವ ಅಶಕ್ಯ. ಯೋಗಾಂತರಾಯಗಳ ಬಗ್ಗೆ ಈ ಪ್ರಸಂಗದಲ್ಲಿ ಒಂದೆರಡು ಸಾಲುಗಳ ವಿವರಣೆ ಕೊಡುವದು ಸೂಕ್ತವೆನಿಸುತ್ತದೆ.

ಅಂತರಾಯ ಎಂದರೆ ಅಡೆ ತಡೆ.

(೧) ವ್ಯಾಧಿ: ದೇಹಕ್ಕೆ ತಗಲುವ ರೋಗಗಳು (೨) ಸ್ತ್ಯಾನ: ಮಾನಸಿಕ ಜಡತೆ (೩) ತಂದ್ರಾ: ಶಾರೀರಿಕ ಆಲಸ್ಯ (೪) ಸಂಶಯ: ಸಾಧನ ಮಾಡಿದರೆ ಸಿದ್ಧಿ ದೊರೆತೀತೆ ? ಎಂಬ ಸಂದೇಹ (೫) ಪ್ರಮಾದ: ಮರೆವು (೬) ಅವಿರತಿ: ವಿಷಯ ವ್ಯಾಮೋಹ (೭) ಭ್ರಾಂತಿ ದರ್ಶನ: ಅಸತ್ಯ ಅನಾತ್ಮ ವಸ್ತುಗಳೇ ಸುಖವೆಂದು ಭಾವಿಸುವದು (೮) ಅಲಬ್ಧಭೂಮಿಕಾ: ಸಾಧನೆ ಮಾಡಿದರೂ ಕಾರಣಾಂತರ

ದಿಂದ ಸಿದ್ಧಿಯಾಗದಿರುವದು. (೯) ಅನವಸ್ಥಿತಿ: ಸಮಾಧಿ ಅವಸ್ಥೆ ದೊರೆಯುದ ಮೂಲಕ ಮನಸ್ಸು ಅಲ್ಲಿ ಸ್ಥಿರವಾಗಿ ನಿಲ್ಲದಿರುವದು. ಇವು ಒಂಭತ್ತು ವಿಘ್ನಗಳು.

ಮನದ ಕ್ಷೋಭ, ಶಾರೀರಿಕ ಅಸ್ಥಿರತೆ, ಶ್ವಾಸ ಪ್ರಶ್ವಾಸಗಳ ಅಕ್ರಮ, ನಿದ್ರೆ, ವಿಕ್ಷೇಪ, ವಾಸನೆ, ಭೂತಸ್ಮೃತಿ ಇವೆಲ್ಲ ಯೋಗಿಗೆ ಕೀಟಲೆ ನೀಡುತ್ತವೆ. "ಅಕ್ಕಿ ಟೆಂಗಿಗೆ ಮೂಲ, ಮೆಕ್ಕಿ ಕಣಕಕೆ ಮೂಲ, ಜಾನಕಿ ಮೂಲ ರಾವಣಗೆ" ಹಾಗೆ ಈ ವಿಘ್ನಗಳು ಸಾಧಕ ಯೋಗಿಗೆ ಮೂಲ! ಇದನ್ನು ಅನುಲಕ್ಷಿಸಿಯೇ ಪ್ರಭುದೇವರು ನುಡಿದರು :

"ತನುವ ತೋಂಟವ ಮಾಡಿ, ಮನವ ಗುದ್ದಲಿ ಮಾಡಿ, ಅಗಿದು ಕಳೆದೆನಯ್ಯಾ ಭ್ರಾಂತಿನ ಬೇರ. ಒಡೆದು ಸಂಸಾರ ಹೆಂಟೆಯು, ಬಗಿದು ಬಿತ್ತಿದೆನಯ್ಯಾ ಬ್ರಹ್ಮಬೀಜವ; ಅಖಂಡ ಮಂಡಲವೆಂಬ ಬಾವಿ, ಪವನವೇ ರಾಟಾಳ, ಸುಷುಮ್ನಾ ನಾಳದಿಂದ ಉದಕವ ತಿದ್ದಿ ಬಸ ವಗಳೈವರು ಹಸಗೆಡಿಸಿಹರೆಂದು ಸಮತೆ ಸೈರಣೆ ಎಂಬ ಬೇಲಿಯನಿಕ್ಕಿ ಆವಾಗಳೂ ಈ ತೋಟದಲ್ಲಿ ಜಾಗರವಿರ್ದು ಸಸಿಯ ಸಲುಹಿದೆನು ಕಾಣಾ ಗುಹೇಶ್ವರಾ,"

ಹೃದಯದಲ್ಲಿ ಬ್ರಹ್ಮಬೀಜವ ಬಿತ್ತಿ ಮುಕ್ತಿಫಲ ಬಯಸಿದ ಯೋಗಿ ಹಗಲು ರಾತ್ರಿ ಜಾಗರವಿದ್ದು ಶಾಂತಿ ಸೈರಣೆಯಿಂದ ಅಂತರಾಯಗಳನ್ನು ದೂರಿ ಡಬೇಕೆನ್ನುವದು ತಾತ್ಪರ್ಯ. ಬಾಹ್ಯಾಂತರ ವೈರಿಗಳಿಂದ ನಮ್ಮ ಮನದ ಏಕಾ ಗ್ರತೆ ಹಾಗು ಪಾವಿತ್ರ್ಯವನ್ನು ಕಾಪಾಡಿಕೊಳ್ಳುವದು ಸುಲಭವಲ್ಲ. "ಈಶ್ವರ ಪ್ರಣಿಧಾನಾದ್ವಾ" ಎಂದಂತೆ, ಪರಮಾತ್ಮನಲ್ಲಿ ತನ್ನ ತಾನರ್ಪಿಸಿಕೊಳ್ಳುವದರಿಂದ ಯೋಗಾಂತರಾಯಗಳು ನಾಶವಾಗುತ್ತವೆ. ಯೋಗಿಯು ತನ್ನ ಸರ್ವಸ್ವವನ್ನೆಲ್ಲ ದೇವನಿಗೆ ನೀಡಿದ್ದರಿಂದ 'ಸುಖೇನ' ಅನಾಯಾಸವಾಗಿ (ಅಂತರಾಯಗಳ ತಾಪವಿ ಲ್ಲದೆ) ಬ್ರಹ್ಮಸುಖ ಪಡೆಯುತ್ತಾನೆ.

ಸಂಬಂಧ:– ಯೋಗಿಯು ಸಮದರ್ಶಿಯಾಗಿದ್ದಾನೆ.

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥೨೯॥

ಅರ್ಥ:– ಸರ್ವತ್ರ = ಎಲ್ಲೆಡೆಗೆ, ಸಮದರ್ಶನಃ = ಸಮದರ್ಶಿಯಾದ, ಯೋಗ ಯುಕ್ತಾತ್ಮಾ = ಯೋಗಯುಕ್ತನು ಆತ್ಮಾನಂ = ತನ್ನನ್ನು ಸರ್ವಭೂತಸ್ಥಂ = ಸರ್ವಭೂತ ಗಳಲ್ಲಿ ಜೀವರೂಪದಿಂದಿರುವವನನ್ನಾಗಿ ಸರ್ವಭೂತಾನಿ ಚ = ಮತ್ತು ಸರ್ವಭೂತಗಳನ್ನು ಆತ್ಮನಿ = ಸಾಕ್ಷೀ ಕೂಟಸ್ಥನಾದ ತನ್ನಲ್ಲಿಯೂ ಈಕ್ಷತೇ =ನೋಡುತ್ತಾನೆ,

ವಿವರಣೆ:– ಭಗವಂತ:– "ಅರ್ಜುನ, ವಿವಿಧ ವರ್ಣ ಆಕಾರ ನಾಮ ಕ್ರಿಯೆಗಳ ಆಧಾರ ದೇವ. ಅವನು 'ಅಣೋರಣಿಯು, ಮಹತೋ ಮಹಿಯು.' ಸಕಲ ಜೀವಿಗಳ ಹೃದಯ ಮಂದಿರದಲ್ಲಿ ಚೈತನ್ಯ ದೀಪವಾಗಿ ಹೊಳೆಯುವ ಅವನೇ ಪ್ರಾಕೃತಿಕ ಅಸಂಖ್ಯ ತತ್ತ್ವವಿಸ್ತಾರವನ್ನು ದಾಟಿ ಅದರಾಚೆ ಮಹಾ ಘನವಸ್ತುವಾಗಿ ವ್ಯಾಪಿಸಿದ್ದಾನೆ. ಅವನೇ ತಾನೆಂದು ಅರಿತವ ಯೋಗಿ. ತನ್ನ

ಲ್ಲೆಲ್ಲ ಆವನ ಅಸ್ತಿತ್ವವನ್ನೇ ಅನುಭವಿಸುವವ ಮಹಾತ್ಮ. ಅವನು ಸಮದರ್ಶಿ. ಅವನು ಸಕಲ ಭೂತ (ಪ್ರಾಣಿ) ಗಳ ಹೃದಯಾಂತರಾಳದಲ್ಲಿ ತನ್ನ ಅಮರ ಅನಂತ ಚೇತನವನ್ನು ಕಾಣುತ್ತಾನೆ; ಹಾಗು ತನ್ನ ಹೃನ್ಮಂದಿರಸ್ಥ ಚಿದಂಶದಲ್ಲಿ ಸಕಲ ಜೀವ ರಾಶಿಯನ್ನು ನೋಡುತ್ತಾನೆ! ಅರ್ಜುನ, ಇದು ಅನುಪಮ ದೃಷ್ಟಿ"

(೧) ವೇದ ವೇದಾಂತಗಳನ್ನು ಮೈಗೂಡಿಸಿಕೊಂಡ ಪಂಡಿತರು, ಸುಲಲಿತ ವಾಗಿ ಉಪನ್ಯಾಸವೀಯುವ ವಾಗ್ಮಿಗಳು ಅಸಂಖ್ಯ; ಕಠೋರ ತಪಸ್ವಿಗಳಿಗೆ ಹಾಗು ನವ್ಯ ಸಿದ್ಧಾಂತಿಗಳಿಗೆ ಕೊರತೆಯಿಲ್ಲ. ಆದರೆ ಸಕಲ ವಸ್ತುಗಳಲ್ಲಿ ಪರಮಾ ತ್ಮನನ್ನು ಕಾಣುವ ದೃಷ್ಟಿ ಮಾತ್ರ ಅವರಿಗೆ ಅಳವಟ್ಟಿಲ್ಲ. ಜಾತಿ ಮತ ಮುಂತಾದ ಭೇದ ಭಾವಗಳು ಅವರಲ್ಲಿ ಬೇರೂರಿವೆ. ಅವುಗಳನ್ನು ಬಿಟ್ಟುಕೊ ಡುವದು ಬಹು ಕಷ್ಟ. ಸಾಮಾನ್ಯರಂತು ಭೇದ ಜಾಲದಲ್ಲಿ ಪೂರ್ತಿ ಸಿಕ್ಕುಬಿದ್ದಿ ದ್ದಾರೆ. ತಮ್ಮ ಗಂಡು ಹೆಣ್ಣು ಮಕ್ಕಳಲ್ಲಿಯೇ ತಾರತಮ್ಯ ಎಣಿಸುವ ಆ ಜನ ಜಗತ್ತಿನ ಎಲ್ಲ ಮಕ್ಕಳನ್ನು ಹೇಗೆ ಸಮನಾಗಿ ಕಂಡಾರು? ಪಂಡಿತರು ಬಾಹ್ಯ ಸೌಂದರ್ಯ, ಬೌದ್ಧಿಕ ಚಾಕಚಕ್ಯತೆ, ಮಾತಿನ ಮೋಡಿ, ಪ್ರತಿಷ್ಠೆ, ಮಾನ-ಮರ್ಯಾದೆ, ಕೀರ್ತಿ ಇತ್ಯಾದಿ ಸಂಗತಿಗಳಿಗೆ ಮಾರು ಹೋಗಿದ್ದಾರೆ. ಹೀಗಿರು ವಾಗ ಅಂತರಂಗಸ್ಥ ದಿವ್ಯಾತ್ಮನನ್ನು ಕಂಡು ವಿಶ್ವವನ್ನೇ ಪ್ರೀತಿಸುವವರೆಲ್ಲಿ ಬರ ಬೇಕು? ಪಾಪಿ-ಪಾಮರ. ದೀನ-ಹೀನ, ಅಸ್ಪೃಶ್ಯ-ಚಾಂಡಾಲರನ್ನು ನೋಡಿ ಹತ್ತು ಮಾರು ಜಿಗಿದು ಹೀಗಳೆಯುವ ಜನರು ಅದೆಂತು ಅವರನ್ನು ಅಪ್ಪಿ ಕೊಂಡಾರು? ಪ್ರಪಂಚದಲ್ಲಿ ಇಂದು ನಡೆದ ಯುದ್ಧ, ಕಲಹ, ವರ್ಣದ್ವೇಷ, ಆಶ್ರುಮವೈರ ಹಾಗು ಅಪ್ರಾಮಾಣಿಕ ವ್ಯವಹಾರಗಳನ್ನು ಅಭ್ಯಸಿಸಿದಾಗ ಮತ್ತು ಧರ್ಮಕ್ಷೇತ್ರ ಹಿಡಿದು ಸರ್ವ ಇತರ ಕ್ಷೇತ್ರಗಳನ್ನು ಒಳಹೊಕ್ಕು ಅವಲೋಕಿಸಿ ದಾಗ ವಿಶ್ವಪ್ರೇಮಿಯಾದ ಒಬ್ಬಿಬ್ಬರಾದರು ಹಿರಿಯ ವ್ಯಕ್ತಿಗಳು ಇದ್ದಾರೆಯೇ ಎಂಬ ಸಂದೇಹ ತಲೆ ಎತ್ತುತ್ತದೆ. ಸುಖ ಶಾಂತಿಗಳು ಜೀವನದಲ್ಲಿ ದೊರೆಯಬೇ ಕಾದರೆ ಸಮದರ್ಶಿತ್ವ ಪಡೆಯದೆ ಗತ್ಯಂತರವಿಲ್ಲ! ಸಮದರ್ಶನವು ಸಹಜ ಸಿದ್ಧಿ ಸುಪಂಥದೂ ಅಲ್ಲ. ಅದಕ್ಕೂ ಪೂರ್ವ ಸಿದ್ಧತೆ ಹಾಗು ಯೋಗ್ಯತೆ ಬೇಕು.

(೨) ಸಮದರ್ಶಿತ್ವಕ್ಕಾಗಿ ದೀರ್ಘ ಕಾಲದ ಆತ್ಮಸಾಧನೆ ಸಾಗಬೇಕು. ಆ ಸಾಧನೆಯ ಬಗ್ಗೆ ಒಂದೆರಡು ಸಂಗತಿ ತಿಳಿಯಬಹುದು. ಸವಿಚಾರ, ನಿರ್ವಿಚಾರ ಇವು ಯೋಗ ಪ್ರಭೇದಗಳು. ತುರಿಯ ಮಂಡಲದಲ್ಲಿ ನಿಂತು ಪ್ರಕೃತಿ ಮಹತ್ತು ಅಹಂಕಾರ ತನ್ಮಾತ್ರೆ ಎಂಬ ಶಕ್ತಿ ಪ್ರಭೇದವನ್ನು ಮತ್ತು ಪರಬ್ರಹ್ಮ ಪರ ಮೇಶ ಪ್ರತ್ಯಗಾತ್ಮ ಜೀವಾತ್ಮ ಎಂಬ ಚೈತನ್ಯ ಪ್ರಭೇದವನ್ನು ಅರಿತುಕೊಳ್ಳು ವದು ಸವಿಚಾರ ಯೋಗ. ವಿಚಾರ ಪ್ರವಾಹ ನಿಂತು ತಾನು ಚೈತನ್ಯ ಸಾಗರದಲ್ಲಿ

ಅಡಗಿ ಬಿಡುವದು ನಿರ್ವಿಚಾರ ಯೋಗ. ಸವಿಚಾರಿಯು ತತ್ತ್ವಜ್ಞಾನಿ; ನಿರ್ವಿಚಾರಿಯು ತತ್ತ್ವದರ್ಶಿ. "ನಿರ್ವಿಚಾರ ವೈಶಾರದ್ಯೇಽಧ್ಯಾತ್ಮ ಪ್ರಸಾದಃ" ನಿರ್ವಿಚಾರ ಸಮಾಧಿಯಲ್ಲಿ ಯೋಗಿಯ ವಿಶುದ್ಧ ಬುದ್ಧಿಯಲ್ಲಿ ಚೈತನ್ಯದ ಅಭಿವ್ಯಕ್ತಿಯಾಗುತ್ತದೆ. ಅದುವೇ ಪ್ರಸಾದ (ಯೋ ಸೂ ೧.೪೭) "ಋತಂಭರಾ ತತ್ರ ಪ್ರಜ್ಞಾ" ಪ್ರಸಾದಿತ ಬುದ್ಧಿಶಕ್ತಿಯು ಸತ್ಯದಿಂದ ತುಂಬಿಕೊಳ್ಳುತ್ತದೆ. ಅದಕ್ಕೆ ಋತಂಭರಾ ಪ್ರಜ್ಞೆ ಎನ್ನುತ್ತಾರೆ. (ಪಾ. ಯೋ. ೧-೪೮) "ಶ್ರುತಾನುಮಾನ ಪ್ರಜ್ಞಾಭ್ಯಾಂ ಅನ್ಯ ವಿಷಯಾ ವಿಶೇಷಾರ್ಥತ್ವಾತ್" ಶಾಸ್ತ್ರ ಪ್ರಮಾಣ ಜನ್ಯ ಪ್ರಜ್ಞೆ ಅನುಮಾನ ಪ್ರಮಾಣಜನ್ಯ ಪ್ರಜ್ಞೆ ಈ ಎರಡು ಪ್ರಜ್ಞೆಗಳಿಗಿಂತ ತತ್ತ್ವಾರ್ಥಗ್ರಾಹಿಯಾದ ಋತಂಭರಾ ಪ್ರಜ್ಞೆ ಭಿನ್ನ ವಿಷಯಕವಾಗಿದೆ. ಏಕೆಂದರೆ, ಈ ಪ್ರಜ್ಞೆಯು ವಿಶೇಷರೂಪದಿಂದ ಅರ್ಥದ ಸಾಕ್ಷಾತ್ಕಾರ ಮಾಡಿಕೊಡುತ್ತದೆ. ತತ್ತ್ವಜ್ಞಾನಿ ಹಾಗು ತತ್ತ್ವದರ್ಶಿಯಾದ ನಂತರ ಆ ಕೃತಕೃತ್ಯ ಯೋಗಿಯು ಸಮದರ್ಶನ ಶಕ್ತಿ ಪಡೆಯುತ್ತಾನೆ. ಅವನಿಗೆ ವಿಶ್ವವೆಲ್ಲ ಒಂದೇ ರೂಪವಾಗಿ ಕಾಣುತ್ತದೆ. ಅಂದರೆ:

(೩) ಸರ್ವಭೂತಸ್ಥಮಾತ್ಮಾನಂ:- ಭೂತಗಳು ಅಸಂಖ್ಯ. ಆ ಎಲ್ಲ ಜೀವಿಗಳ ದೇಹಾಂತರಂಗದಲ್ಲಿ ಅಂತಃಕರಣ ಅಥವಾ ಮನಸ್ಸಿದೆ. ಆ ಮನದಲ್ಲಿ ಪ್ರತಿಫಲಿಸಿದ ಬ್ರಹ್ಮಚೇತನಾಂಶವೇ 'ಜೀವಾತ್ಮ'. ಅಜ್ಞರಿಗೆ ಜೀವನು ದೇಹ ಇಂದ್ರಿಯ ಮನ ಬುದ್ಧಿಗಳಾಗಿ ತೋರುತ್ತಾನೆ; ಕರ್ತಾ, ಭೋಕ್ತಾ, ಜ್ಞಾತಾ ಆಗಿ ಕಾಣುತ್ತಾನೆ. ದೇಹಾದಿ ಸಕಲ ತತ್ತ್ವಗಳು ಅಸಂಖ್ಯವಾದುದರಿಂದ ಜೀವಾತ್ಮನು ಒಂದಲ್ಲ, ಅಸಂಖ್ಯ ಅನೇಕಾತ್ಮನೆಂಬ ಭಾವನೆ ಬಂದಿದೆ. ಸವಿಚಾರ ಹಾಗು ನಿರ್ವಿಚಾರ ಯೋಗಿಗಳು ಮಾತ್ರ ಜೀವಿಗಳ ಹೃದಯಸ್ಥ ಚೈತನ್ಯದತ್ತ ನೋಡುವ ರೀತಿ ಬೇರೆ, ಅವರಿಗೆ ಪ್ರಾಕೃತಿಕ ತತ್ತ್ವಗಳ ಸಂಪೂರ್ಣ ಜ್ಞಾನವಿರುವದಾಗಿ ಅವುಗಳಿಂದ ಚೈತನ್ಯವನ್ನು ಬೇರ್ಪಡಿಸುತ್ತಾರೆ. ಆಗ ಉಳಿದುದು ಬರೀ ಚೇತನ. ಯೋಗಿಗಳು ಆ ಚೇತನವನ್ನೇ ಕಾಣುತ್ತಾರೆ; ಆ ಚೇತನವೇ ತನ್ನ ಅನಂತ ಆತ್ಮ ಎಂದು ದರ್ಶಿಸುತ್ತಾರೆ! ಶಾಸ್ತ್ರೀಯ ಶಬ್ದಗಳಲ್ಲಿ ಹೇಳುವದಾದರೆ ತ್ವಂ ಪದ ವಾಚ್ಯದಲ್ಲಿ ತ್ವಂ ಪದ ಲಕ್ಷ್ಯನಾದ ನಿರಂಜನಾತ್ಮನನ್ನು ಈಕ್ಷಿಸುತ್ತಾರೆ.

ಎಲ್ಲ ಜೀವರುಗಳು ತನ್ನ ಚೇತನಾಂಶವೇ ಎಂದು ತಿಳಿಯದ ಮನುಷ್ಯ ಅವರನ್ನು ಜರೆಯುತ್ತಾನೆ, ಶೋಷಿಸುತ್ತಾನೆ, ತುಳಿಯುತ್ತಾನೆ, ಇಲ್ಲವೆ ಉಪೇಕ್ಷಿಸುತ್ತಾನೆ. ಎಲ್ಲ ಜೀವರಲ್ಲಿ ತನ್ನದೇ ಚೈತನ್ಯ ಅಂಶ ಇದೆ ಎಂದು ಅರಿತುಕೊಂಡ ಯೋಗಿ ಮಾತ್ರ ಎಲ್ಲರನ್ನು ಅಪ್ಪಿಕೊಳ್ಳುತ್ತಾನೆ! ಇಪ್ಪತ್ತು ವರುಷಗಳ ದೀರ್ಘ ಕಾಲದ ನಂತರ ಒಂದು ರಾತ್ರಿ ಆಕಸ್ಮಿಕವಾಗಿ ಬಾಗಿಲಿಗೆ ಬಂದ ಹರಕು ಬಟ್ಟೆಯ ಮಗನನ್ನು ಅವನಲ್ಲಿ ತನ್ನಂಶವಿದೆಯೆಂದರಿಯದ ತಂದೆ ಧಿಃಕರಿಸುತ್ತಾನೆ, ಹೊರ

ನೂಕಿ ಬಾಗಿಲು ಮುಚ್ಚುತ್ತಾನೆ. ಆ ಮಗನ ದರಿದ್ರ ಸ್ಥಿತಿ ನೋಡದೆ ಅವನ ಪಿಂಡ ನೋಡಿ ಅಲ್ಲಿ ತನ್ನ ರಕ್ತ ಇರುವದನ್ನು ಕಂಡ ತಂದೆ ಅವನನ್ನು ಅಪ್ಪಿಕೊಂಡು ಆನಂದಾಶ್ರು ಸುರಿಸುತ್ತಾನೆ; ಅಲ್ಲವೆ? ಯೋಗಿಯು ಅರಿತ ತಂದೆಯಂತೆ; ಭೋಗಿಯು ಅರಿಯದ ತಂದೆಯಂತೆ! ಭೋಗಿಯು ಸ್ವಾರ್ಥ ಸಾಧಕ, ಪರ ಜನ ದ್ವೇಷಿ, ಸಮಾಜ ಘಾತಕ. ಯೋಗಿಯು ವಿಶ್ವಾತ್ಮದರ್ಶಿ, ಸಕಲ ಜೀವ ಹಿತೈಷಿ ಹಾಗು ಸಮಾಜ ಸೇವಕ! ಭೋಗಿಗೆ ಕಾಣುವದು ಮೇಲಿನ ಬಣ್ಣ; ಯೋಗಿಗೆ ಕಾಣುವದು ಒಳಗಿನ ಆತ್ಮ! ಆದ್ದರಿಂದ ಭೋಗಿಯು ವಿಷಮದರ್ಶಿ. ಯೋಗಿಯು ಸಮದರ್ಶಿ!

(೪) ಸರ್ವಭೂತಾನಿ ಚಾತ್ಮನಿ:- ಜೀವಿಗಳು ಅಸಂಖ್ಯ, ನಿಜ. ಆದರೆ ಅವರೆಲ್ಲ ಬದುಕಿರುವದು ಸರ್ವಸಾಕ್ಷಿಕ ಪರಮಾತ್ಮನ ಆಶ್ರಯದಲ್ಲಿ. ಅಷ್ಟೇ ಅಲ್ಲ, ಆ ಜೀವರುಗಳು ಆ ದೇವನಿಂದ ಭಿನ್ನರಲ್ಲ, ಅಭಿನ್ನರು. ಯೋಗಿಯು ದಾರ್ಶನಿಕ. ಅವನು ಸರ್ವ ಜೀವರನ್ನು ತನ್ನ ಸಾಕ್ಷಿ ಆತ್ಮನಲ್ಲಿ ಅಭೇದ ರೂಪದಿಂದ ಕಾಣುತ್ತಾನೆ. ಅಂದರೆ ತ್ವಂ ಪದ ವಾಚ್ಯ ಜೀವರನ್ನು ತ್ವಂ ಪದ ಲಕ್ಷ್ಯ-ಪ್ರತ್ಯಗಾತ್ಮನೆಂದೇ ನೋಡುತ್ತಾನೆ. ಆದ್ದರಿಂದ ಅವನು ವಿಶ್ವವನ್ನು ಆತ್ಮರೂಪಾಗಿ ಅನುಭವಿಸುತ್ತಾನೆ; ಅಖಂಡ ಶಾಂತಿಯನ್ನು ಪಡೆಯುತ್ತಾನೆ.

ಸಂಬಂಧ :- ಹಿಂದಿನ ಮಂತ್ರದಲ್ಲಿ ತ್ವಂ ಪದ ಲಕ್ಷ್ಯದರ್ಶನವಿದೆ; ಮುಂದಿನ ಮಂತ್ರದಲ್ಲಿ ತತ್ ಪದ ಲಕ್ಷ್ಯದರ್ಶನವಿದೆ.

ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥೩೦॥

ಅರ್ಥ:- ಯಃ=ಯಾವನು ಸರ್ವತ್ರ=ಎಲ್ಲೆಲ್ಲಿಯೂ ಮಾಂ=ನನ್ನನ್ನು ಪಶ್ಯತಿ= ನೋಡುತ್ತಾನೆಯೋ, ಸರ್ವಂಚ= ಮತ್ತು ಎಲ್ಲವನ್ನು ಮಯಿ= ನನ್ನಲ್ಲಿ ಪಶ್ಯತಿ= ನೋಡುತ್ತಾನೆಯೋ ತಸ್ಯ= ಅವನಿಗೆ ಅಹಂ= ನಾನು ನ ಪ್ರಣಶ್ಯಾಮಿ= ಅದೃಷ್ಟನಲ್ಲ. ಸಃ ಚ= ಮತ್ತು ಅವನು ಮೇ= ನನಗೆ ನ ಪ್ರಣಶ್ಯತಿ= ಅದೃಷ್ಟನಲ್ಲ.

ವಿವರಣೆ:- ಭಗವಂತ:- "ಭಾರತ, ನಾನು ಅಮಲ ದೇವ; ಸರ್ವಾಂತರ್ಯಾಮಿ; ಸರ್ವ ತತ್ತ್ವಾಶ್ರಯ; ಪರಮ ನಿರಂಜನ. ನಾನು ವಿಶ್ವದ ಹಾಸುಹೊಕ್ಕು ಹಾಗು ವಿಶ್ವಾತೀತ! ಸಶ್ರಮದಿಂದ ಯೋಗಾರೂಢನಾದ ಯೋಗಿಯು ಎಲ್ಲೆಡೆಯಲ್ಲೂ ನನ್ನನ್ನೇ ಕಾಣುತ್ತಾನೆ; ನನ್ನಲ್ಲಿಯೇ ಎಲ್ಲವನ್ನು ನೋಡುತ್ತಾನೆ. ಅವನು ನನ್ನ ರೂಪ; ನಾನು ಅವನ ಸ್ವರೂಪ. ನಮ್ಮಿಬ್ಬರ ಮಧ್ಯ ಅಂತರ ಇಲ್ಲವಾಗಿ ನಾನು ಅವನಿಗಾಗಲಿ, ಅವನು ನನಗಾಗಲಿ ದೂರಲ್ಲ."

(೧) ದೇವ:- ಸೋಪಾಧಿಕ ನಿರುಪಾಧಿಕ:- (ಅ) 'ವಸ್ತುವಿನಲ್ಲಿ ಸೇರಿ ಅದರ ರೂಪನ್ನೇ ಬದಲಿಸುವದು ವಿಶೇಷಣ. ಉದಾ: ಕೆಂಪುವರ್ಣ ಪುಷ್ಪದಲ್ಲಿ ಸೇರಿ ಕೆಂಪು ಪುಷ್ಪವಾಗಿಸುತ್ತದೆ. ಸೆರೆ ಮೆದುಳಿನಲ್ಲಿ ಸೇರಿ ಉನ್ಮತ್ತನನ್ನಾಗಿಸುತ್ತದೆ. ವಸ್ತುವಿನಿಂದ ಭಿನ್ನವಾಗಿದ್ದು ಸಂಪರ್ಕ ಮಾತ್ರದಿಂದ ತೋರಿಕೆಯ ಬದಲಾವಣೆ

ಉಂಟು ಮಾಡುವದು ಉಪಾಧಿ: ಉದಾ: ಪತ್ನಿಯು ಪುರುಷನ ಸಂಪರ್ಕದಲ್ಲಿ ಬಂದರೆ ಪುರುಷನು ಪತಿ ಎನಿಸುತ್ತಾನೆ. ಆ ಪತಿ ಕೇವಲ ತೋರಿಕೆಯಲ್ಲಿ. ಸೀದಿಯು ಸಂಪರ್ಕದಿಂದ ವ್ಯಕ್ತಿ ಈಳಿಗ ಎನಿಸುತ್ತಾನೆಯಾದರೂ ಉನ್ಮಾದ ಅವನಿಗಿಲ್ಲ. ಹಾಗೆ, ಸಂಸಾರವು ವಿಶೇಷಣವಾದರೆ ದೇವಚೇತನವು ಜೀವಾತ್ಮ (ತ್ವಂ ಪದ ವಾಚ್ಯ)ನೆನಿಸುತ್ತದೆ. ಸಂಸಾರವು ಉಪಾಧಿಯಾದರೆ ದೇವಚೇತನವು ಕೂಟಸ್ಥ (ತ್ವಂ ಪದ ಲಕ್ಷ್ಯ)ನೆನಿಸುತ್ತದೆ. ಮೊದಲಿನ ಜೀವ ಸಂಸಾರಿ; ಎರಡನೆಯವ ಅನುಭಾವಿ. ಸಂಸಾರಿ ಜನ್ಮ ಮರಣಭಾವಿ; ಅನುಭಾವಿಯು ಅಜನ್ಮ ಅಮರ. ಸಂಸಾರಿ ಸದಾ ಬದ್ಧ. ಅನುಭಾವಿಯು ಸದಾ ಮುಕ್ತ.

(ಬ) ನಿರಂಜನ ಚೈತನ್ಯ ಪ್ರಭುವು ನಿರುಪಾಧಿಕ, ತತ್ ಪದದ ಲಕ್ಷ್ಯ. ಮಾಯಾ ಶಕ್ತಿಯ ಉಪಾಧಿಯಿಂದ ವಿಶ್ವೇಶ್ವರ ನಾಮ ತಾಳಿದ; ಅವನೇ ತತ್ ಪದದ ವಾಚ್ಯ. ಅವನೇ ಪಾರ್ವತಿಯ ಸಾಮಿಪ್ಯದಿಂದ ಶಿವ, ಲಕ್ಷ್ಮಿಯ ಸಾಮಿಪ್ಯದಿಂದ ನಾರಾಯಣ, ಸರಸ್ವತಿಯ ಸಾಮಿಪ್ಯದಿಂದ ಬ್ರಹ್ಮ ಎಂಬ ಮೂರು ಬಗೆಯ ಅಭಿಧಾನ ಹೊತ್ತ. ಸಮಷ್ಟಿ ವಿಶ್ವಜೀವಾಭಿಮಾನಿಯಾದ ವೈಶ್ವಾನರನೇ ಬ್ರಹ್ಮ. ಸಮಷ್ಟಿ ತೈಜಸಾಭಿಮಾನಿಯಾದ ಹಿರಣ್ಯಗರ್ಭನೇ ವಿಷ್ಣು. ಸಮಷ್ಟಿ ಪ್ರಾಜ್ಞಜೀವಾಭಿಮಾನಿಯಾದ ಈಶನೇ ಶಿವ. ಈ ಮೂವರು ಹಿರಿಯ ಸಾಂಸಾರಿಕರು. ಇಷ್ಟೇ ಆ ದೊಡ್ಡ ಸಂಸಾರ ಅವರಲ್ಲಿ ಪ್ರವೇಶಿಸಿಲ್ಲ.

(೨) **ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ:**– ಉಪಾಧಿ ಭಾವಗಳನಳಿದು ನಿರುಪಾಧಿಕ ಸಾಕ್ಷಿ–ಆತ್ಮನನ್ನು ಸಾಕ್ಷಾತ್ಕರಿಸಿದ ಯೋಗಿಯು ಜಗದ ತುಂಬ ತತ್‌ಪದ ವಾಚ್ಯನಾದ ಈಶನನ್ನು ಕಾಣುತ್ತಾನೆ; ಹಾಗು ತತ್‌ಪದ ಲಕ್ಷ್ಯನಾದ ಪರಮಾತ್ಮನಲ್ಲಿ ವಿಶ್ವವನ್ನೆಲ್ಲ ಏಕರೂಪದಿಂದ ಈಕ್ಷಿಸುತ್ತಾನೆ. ಇನ್ನಷ್ಟು ಸುಸ್ಪಷ್ಟವಾಗಿ ಹೇಳುವದಾದರೆ ವ್ಯಕ್ತ ವಿಶ್ವದಲ್ಲಿ ಅವ್ಯಕ್ತ ಚೈತನ್ಯವನ್ನು ಹಾಗು ಅವ್ಯಕ್ತ ದೇವನಲ್ಲಿ ಅಭಿವ್ಯಕ್ತ ವಿಶ್ವವನ್ನು ನೋಡುತ್ತಾನೆ.

(೩) **ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ:**– ಆ ಮಹಾಪುರುಷನಾದ ಯೋಗಿಯು ಎಂದೆಂದಿಗೂ ದೇವನಿಂದ ಮರೆಯಾಗಲಾರ; ಆ ದೇವನು ಆ ಯೋಗಿಗೆ ಎಂದಿಗೂ ಕಾಣದಾಗಲಾರ. ಇಬ್ಬರೂ ಅಪರೋಕ್ಷ. ಗುಡಿಯಲ್ಲಿಯ ಲಿಂಗ ಹಾಗು ನಂದಿ ಸದೈವ ಪರಸ್ಪರರು ಈಕ್ಷಿಸುವಂತೆ ಯೋಗಿಯು ದೇವನತ್ತ, ದೇವನು ಯೋಗಿಯತ್ತ ನೋಡುತ್ತಿದ್ದಾರೆ. ಇನ್ನೊಂದರ್ಥದಲ್ಲಿ ಹೇಳುವದಾದರೆ, ಯೋಗಿಯು ದೇಹಾದಿ ಅನಾತ್ಮ ವಸ್ತು ಮಂಡಲಗಳನ್ನು ದಾಂಟಿ ಅಮರ ನಿಸ್ಸೀಮ ಚಿದ್ಘಯಲಿನಲಿ ಒಂದಾದುದರಿಂದ ಅವನಿಗೂ ದೇವನಿಗೂ ಮಧ್ಯ ಅಂತರವಿಲ್ಲ; ಆದಾಗಿ ಅವನು ದೇವನಿಗೆ ಅದೃಶ್ಯವಿಲ್ಲ. ದೇವನು

ಅವನಿಗೆ ಅದೃಶ್ಯವಿಲ್ಲ !

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥೩೧॥**

**ಅರ್ಥ:**— ಸರ್ವಭೂತಸ್ಥಿತಂ =(ಸರ್ವೇಷು ಭೂತೇಷು ಸ್ಥಿತಂ) ಸಕಲ ಜೀವಿಗಳಲ್ಲಿ ನೆಲೆಸಿರುವ ಮಾಂ =ನನ್ನನ್ನು ಯಃ= ಯಾವನು ಏಕತ್ವಂ ಆಸ್ಥಿತಃ ಭಜತಿ= ಅದ್ವಯ ಭಾವದ ಯಿಂದ ಭಜಿಸುತ್ತಾನೆಯೋ ಸಃ ಯೋಗೀ= ಆ ಯೋಗಿಯು ಸರ್ವಥಾ ವರ್ತಮಾನೋಽಪಿ= ಯಾವುದೇ ರೀತಿ ವ್ಯವಹರಿಸಿದರೂ ಮಯಿ =ನನ್ನಲ್ಲಿಯೇ ವರ್ತತೇ= ಇರುತ್ತಾನೆ.

**ವಿವರಣೆ:**— ಭಗವಂತ:— " ಕುರುನಂದನ, ನಾನು ಸರ್ವ ವಿಶ್ವದ ಪರಮಾಧಾರ, ಅಸ್ತಿತ್ವದ ಮಹಾ ಬಯಲು, ಅರಿವಿನ ಭಾಸು, ಆನಂದದ ಶರಧಿ. ಭೂಮಂಡಲದಲ್ಲಿ ಬಾಳುವ ಸಮಸ್ತ ಜೀವ ಜಂತುಗಳ ಅಂತರಾಳದಲ್ಲಿ ಪರಮ ರಹಸ್ಯವಾಗಿ ನೆಲೆಸಿದ್ದೇನೆ. ಜೀವ ಭಾವ ಬಿಟ್ಟು ನನ್ನಲ್ಲಿಯೇ ಒಂದಾದ ಯೋಗಿಯು ನನ್ನನ್ನೇ ಸದೈವ ಭಜಿಸುತ್ತಾನೆ; ತ್ವಂ ಪದ ಲಕ್ಷ್ಯನಾದ ತನಗೂ ತತ್‌ಪದ ಲಕ್ಷ್ಯನಾದ ನನಗೂ ಭಿನ್ನತೆ ಇಲ್ಲವೆಂದು ಅನುಭವತಃ ಅರಿಯುತ್ತಾನೆ. ಅವನ ನಡೆ ನುಡಿ ಮನಗಳಲ್ಲಿ ನಾನೇ ತುಂಬಿಕೊಂಡಿದ್ದೇನೆ. ಆ ಯೋಗಿ ಲೋಕ ದಲ್ಲಿ ಹೇಗೆ ಬಾಳಿದರೇನು ? ಅವನು ನನ್ನಲ್ಲಿಯೇ ಇದ್ದಾನೆ. ಅವನನ್ನು ಕರ್ಮಗಳು ಬಂಧಿಸವು. ಸಂಸಾರವು ಮೋಹಿಸದು. ವಿಷಯಗಳು ಆಕರ್ಷಿಸವು. "

(೧) ದೇಹ ಸಂಘಾತದಲ್ಲಿ ಅಹಂ ಮಮ ಭಾವ ತಾಳಿದ ಜೀವನು ಸಂಸಾರಿ, ತ್ವಂ ಪದದ ವಾಚ್ಯ. ಸಂಸಾರದ ಭಾವ ಬಿಟ್ಟಾಗ ಉಳಿವ ಪರಿಶುದ್ಧ ಜೀವಚೈತನ್ಯವೇ ಪ್ರತ್ಯಗಾತ್ಮ. ತ್ವಂ ಪದದ ಲಕ್ಷ್ಯ. ಅದೇ ರೀತಿ, ಶಕ್ತಿಸಮೇತನಾದ ಶಿವನು ಸೃಷ್ಟಾರ, ಪೋಷಕ, ಸಂಹಾರಕ. ತತ್ ಪದದ ವಾಚ್ಯ. ಶಕ್ತಿ ಉಪಾಧಿಯನ್ನು ತ್ಯಜಿಸಿದಾಗ ಉಳಿವ ಶಿವ ಚೈತನ್ಯವೇ ಪರಬ್ರಹ್ಮ, ತತ್ ಪದದ ಲಕ್ಷ್ಯ. ತ್ವಂ ಪದದ ಲಕ್ಷ್ಯವು ಘಟಾಕಾಶದಂತೆ, ತತ್ ಪದದ ಲಕ್ಷ್ಯವು ಮಹಾಕಾಶದಂತೆ. ಅವೆರಡೂ ಭಿನ್ನವಲ್ಲ, ಏಕರೂಪ ! ಯೋಗಿಗೆ ಈ ಏಕರೂಪತೆಯ ಅನುಭವವಿದೆ.

(೨) ಏಕರೂಪತೆಯ ಅನುಭವ ಬಹು ಜನರಿಗಿಲ್ಲ. ಏಕೆಂದರೆ ಮಾಯೆ ಅವರನ್ನು ಮುಸುಕಿದೆ. ಅವಿದ್ಯೆ, ತಮ, ಅಜ್ಞಾನಗಳು ಅದರ ಬೇರೆ ನಾಮಗಳು. ಬರೀ ಶಾಸ್ತ್ರ ಪಠಣ, ವೇದಾಧ್ಯಯನ, ಪ್ರವಚನ ಮುಂತಾದವುಗಳಿಂದ ಆ ಮಾಯಾ ಪರದೆ ಹರಿಯದು ಸತ್ಯವಸ್ತುದರ್ಶನವಾಗದು. ಪಂಡಿತರು ತತ್ತ್ವಮಸ್ಯಾದಿ ಮಹಾ ವಾಕ್ಯಗಳ ಮೇಲೆ ನಿರರ್ಗಳವಾಗಿ ಉಪನ್ಯಾಸ ಮಾಡಬಲ್ಲರು, ಗ್ರಂಥ ರಚಿಸಬಲ್ಲರು; ಅಷ್ಟರಿಂದ ಅವರ ಸಾಂಸಾರಿಕ ವ್ಯಾಮೋಹ ಹರಿದೀತೆಂದು ಹೇಳುವದು ಕಷ್ಟ.

(೩) ಮಾಯೆ ಅಳಿದು ಅದ್ವಯಾತ್ಮನ ಸಾಕ್ಷಾತ್ಕಾರವಾಗಬೇಕಾದರೆ, ಯಮ ನಿಯಮಾದಿ ಅಷ್ಟಾಂಗ ಸಾಧನ ಮಾಡಬೇಕು. ಅದರಿಂದ ರಜ ತಮ

ಕ್ಲೇಶಗಳು ಕ್ಷಯಿಸುವವು. ಸಾಧನೆಯು ಕೊನೆಯ ಹಂತ ತಲುಪಿದರೆ ಒಂದು ಅತ್ಯದ್ಭುತ ದೈವೀ ಶಕ್ತಿ ಸಂಪ್ರಾಪ್ತವಾಗುವದು; ಅದೇ ಯೋಗ ಶಕ್ತಿ. ಸೂರ್ಯ ಉದಿಸಿದಾಗ ರಜನಿ ಕರಗಿ ಬಿಡುವಂತೆ ಸತ್ವತಮ ಯೋಗಶಕ್ತಿಯು ಉದಿಸಿದೊಡನೆಯೇ ಮಾಯಾಂಧಕಾರ ವಿನಷ್ಟವಾಗುವದು. ಪ್ರತ್ಯಗಾತ್ಮಾಭಿನ್ನ ಪರಮಾತ್ಮನ ಅನುಪಮ ದರ್ಶನವಾಗುವದು. ಇದಕ್ಕೆ ಯೋಗಜ ಪ್ರತ್ಯಕ್ಷ ಎನ್ನುತ್ತಾರೆ. ಈ ಯೋಗಜ ಪ್ರತ್ಯಕ್ಷ ಹೊಂದಿದ ಯೋಗಿಗೆ " ಯುಕ್ತ ಯೋಗಿ " ಎಂದು ನಾಮ. ಅವನಿಗೆ ತ್ವಂ ಪದ ತತ್‌ಪದಗಳ ವಾಚ್ಯಾರ್ಥ ಲಕ್ಷ್ಯಾರ್ಥಗಳು ಅತೀವ ಸ್ಫುಟ. ಅತೀತ ಅನಾಗತ ವರ್ತಮಾನದ ಸರ್ವ ಜೀವರನ್ನು ತನ್ನ ಆತ್ಮಸ್ವರೂಪದಲ್ಲಿ ಅಭೇದ ರೂಪದಿಂದ ಕಾಣುತ್ತಾನೆ. ಇದೇ ಅಸಿ ಪದದ ಪಾವನಾರ್ಥದ ದರ್ಶನ. ಒಂದೆರಡು ಶ್ರುತಿ ವಚನಗಳಿಲ್ಲಿ ಗಮನಾರ್ಹ:

"ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ ।
ಸರ್ವ ಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ॥"

ಯುಕ್ತ ಯೋಗಿಯು ಸರ್ವ ಭೂತಗಳನ್ನು ತನ್ನಲ್ಲಿ, ತನ್ನನ್ನು ಸರ್ವ ಭೂತಗಳಲ್ಲಿ ಅಭಿನ್ನವಾಗಿ ನೋಡುತ್ತಾನೆ. ಆದುದರಿಂದ ಅವನು ಯಾರ ಮೇಲೂ ದ್ವೇಷ ಮಾಡಲಾರ.

"ಸಃ ಸರ್ವಸ್ಯ ಆತ್ಮಾ ಭವತಿ" ಅವನು ಚರಾಚರ ಜಡಾಜಡ ಸಮಸ್ತ ಪದಾರ್ಥಗಳ ಆತ್ಮನಾಗಿದ್ದಾನೆ. "ಇದಂ ಸರ್ವಂ ಯದಯಮಾತ್ಮಾ" ಇಂದ್ರಿಯ ಮನ ಬುದ್ಧಿಗಳಿಗೆ ದೃಶ್ಯವಾಗುವ ಏನಿದೆಯೋ ಅದೆಲ್ಲ ಈ ಅಮರ ಅನಂತ ಅಖಂಡ ಆತ್ಮನೇ ಎಂಬುದು ಯೋಗಿಯ ದೃಷ್ಟಿ.

(೪) ಆತ್ಮದರ್ಶಿಯಾದ ಯೋಗಿಯು ಪರಮ ಮುಕ್ತ. ಅವನ ಸಂಚಿತ ಕರ್ಮಗ್ರಂಥಿ ದಗ್ಧವಾಗಿದೆ. ಮುಂದೆ ಅವನಿಗೆ ಜನ್ಮವಿಲ್ಲ, ಹಿಂದೆ ಕರ್ಮವಿಲ್ಲ ಪ್ರಾರಬ್ಧರೂಪ ದೇಹ ಮಾತ್ರ ಉಳಿದಿದೆ. ಅದು ತನ್ನಷ್ಟಕ್ಕೆ ತಾನೇ ನಾಶವಾಗುತ್ತದೆ. ಒಂದು ರೂಪಕದಿಂದ ಹೇಳಬಹುದು: ಕುಂಬಳ ಕಾಯಿಯೊಳಗಿನ ಬೀಜ ತಿಳಿಲ ಹೊರಗೆ ಚೆಲ್ಲಿ, ಒಣಗಿಸಿ ಆ ಕಾಯಿಗೋಡು ಸೂರು ಹಚ್ಚಿ ಊದಿದರೆ ಹಾವೂ ತಲೆದೂಗುತ್ತದೆ. ಅಷ್ಟು ಮಧುರ ಸ್ವರ ಹೊರ ಹೊಮ್ಮುತ್ತದೆ. ಅದೇ ರೀತಿ, ಯೋಗಿಯು ತನ್ನ ದೇಹದಲ್ಲಿರುವ ವಾಸನಾ ತಿಳಿಲನ್ನು ಮತ್ತು ಅಹಂ ಮಮ ಬೀಜಗಳನ್ನು ಚೆಲ್ಲಿ ಸಂಯಮ–ಸಾವಧಾನತೆ ಎಂಬ ಬಿಸಿಲಲ್ಲಿ ಒಣಗಿಸುತ್ತಾನೆ. ಏಕಾಗ್ರತೆ ಎಂಬ ಸೂರನ್ನು ಅದಕ್ಕೆ (ದೇಹಗತ ಮನಸ್ಸಿಗೆ) ಅಳವಡಿಸಿ, ದೀರ್ಘ–ವಿಶ್ವಪ್ರಾಣ–ಉಸಿರನ್ನೆಳೆದು ಊದಲು ಪ್ರಾರಂಭಿಸುತ್ತಾನೆ. ದೇವ ದೇವತೆಗಳೇ ತಲೆಹಾಕಬೇಕು, ಅಷ್ಟು ಮಂಜುಳವಾದ ಉಪನಿಷದ್ ಮಂತ್ರರಾಗಗಳು ಅದರಿಂದ ಹೊರ ಹೊಮ್ಮುತ್ತವೆ. ಆ ನುಡಿ ಕೇಳಿದಾಗ ಎಂಥ ಪಾಪಿಯ ಮನಸ್ಸೂ ಅರಳುತ್ತದೆ. ಸ್ವಾರ್ಥ, ಕಾಮ, ದ್ವೇಷಗಳಿಲ್ಲದ ಆ ಇನಿ–ದನಿಯಲ್ಲಿ

ಆನಂದ ಜೇನು ಸುರಿಯುತ್ತದೆ. ಇಂಥ ಸುಮಧುರ ಮಂತ್ರ ಧ್ವನಿ ಹೊರಡಿಸುವ ಯೋಗಿಯು ದಾರ್ಶನಿಕ.

(೫) ಸರ್ವಥಾ ವರ್ತಮಾನಃ ಅಪಿ:- ಈ ಪದ ಸಮುದಾಯ ಮಾರ್ಮಿಕ ವಾಗಿವೆ. ದಾರ್ಶನಿಕ ಯೋಗಿಯ ದೇಹ ಸಂಬಂಧದ ಆಶ್ರಮ ಧರ್ಮ ಹಾಗು ಕಾಯಕಗಳು ಭಿನ್ನ ಭಿನ್ನವಿರಬಹುದು. ಉದಾ:

"ಕೃಷ್ಣೋ ಭೋಗೀ ಶುಕಸ್ತ್ಯಾಗೀ ನೃಪೌ ಜನಕ ರಾಘವೌ ।
ವಶಿಷ್ಠಃ ಕರ್ಮ ಕರ್ತಾ ಚ ಪಂಚೈತೇ ಜ್ಞಾನ ಸಮ್ಮತಾಃ ॥
ದತ್ತಾತ್ರೇಯಸ್ತು ಮದೋನ್ಮತ್ತಃ ಪ್ರಹ್ಲಾದೋ ಭಕ್ತಿಸಮೃದ್ಧಿಃ ।
ನಾರದೋ ಗಾನಲೋಲಸ್ತು ಸನಕಾದ್ಯಸ್ತು ಯೋಗಿನಃ ॥
ಹನುಮಾನೋಽಪಿ ದೂತೋಽಭೂತ್ ಜೀವನ್ಮುಕ್ತಾ ಇಮೇ ಮತಾ॥ "

ಕೃಷ್ಣಭೋಗಿ, ಶುಕ ತ್ಯಾಗಿ, ಜನಕ ರಾಮಚಂದ್ರರು ನೃಪರು, ವಸಿಷ್ಠ ಕರ್ಮಶೀಲ. ಈ ಐವರೂ ಜ್ಞಾನಯೋಗಿಗಳೇ. ದತ್ತಾತ್ರೇಯನು ಮದೋನ್ಮತ್ತ, ಪ್ರಹ್ಲಾದ ಭಕ್ತಿಸಂಪನ್ನ, ನಾರದ ಗಾನಲೋಲ, ಸನಕಾದಿಗಳು ಯೋಗಿಗಳು, ಹನುಮಂತ ದೂತ. ಆದರೇನು ಇವರೆಲ್ಲ ಜೀವನ್ಮುಕ್ತರೇ ಎಂದು ಅನುಭವಿಗಳ ಅಭಿಮತ.

ಯೋಗಿಯು ಬ್ರಹ್ಮಚಾರಿ, ಅಥವಾ ಸನ್ಯಾಸಿಯೇ ಇರಬೇಕೆಂಬ ನಿಯಮ ವಿಲ್ಲ; ಅವನು ಗೃಹಸ್ಥ ರಾಜಕಾರಣಿ ಅಧ್ಯಾಪಕ ಒಕ್ಕಲಿಗ ಹೇಗೆಯೇ ಬಾಳಿರಲಿ, ಯಾವುದೇ ಕಾರ್ಯ ಮಾಡುತ್ತಿರಲಿ ದೇವಸಾಮ್ರಾಜ್ಯದಲ್ಲಿಯೇ ಬಾಳುತ್ತಾನೆ! ಮೀನು ಮುಂದೆ ಹಿಂದೆ ಮೇಲೆ ಕೆಳಗೆ ಹೇಗೇ ಈಜಲಿ ಅದು ಸಮುದ್ರ ಬಿಟ್ಟಿಲ್ಲ ಅಲ್ಲವೆ? ಹಾಗೆಯೇ ಯೋಗಿಯ ಬದುಕು.

ಸಂಬಂಧ:- ವಿವಿಧ ಪ್ರಾರಬ್ಧವುಳ್ಳ ಯೋಗಿಗಳಲ್ಲಿ ಯಾವ ಪ್ರಾರಬ್ಧದ ಯೋಗಿ ಶ್ರೇಷ್ಠ?

ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।
ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥೩೨॥

ಅರ್ಥ:– ಆತ್ಮೌಪಮ್ಯೇನ=ತನ್ನಂತೆಯೇ ಸುಖಂ ವಾ ಯದಿ ವಾ ದುಃಖಂ=ಸುಖ ವನ್ನಾಗಲಿ ದುಃಖವನ್ನಾಗಲಿ ಯಃ=ಯಾವನು, (ಇನ್ನೊಬ್ಬರ ವಿಷಯದಲ್ಲಿ) ಸಮಂ ಪಶ್ಯತಿ= ಸಮ ಭಾವದಿಂದ ನೋಡುತ್ತಾನೆಯೋ ಸಃ ಯೋಗೀ=ಆ ಯೋಗಿಯು ಪರಮೋ ಮತಃ= ಶ್ರೇಷ್ಠನೆಂದು ಅಭಿಪ್ರಾಯ.

ವಿವರಣೆ:- ಭಗವಂತ:- "ಅರ್ಜುನ, ಯೋಗಿಗಳಲ್ಲಿ ಅನೇಕ ವಿಧ ನಿಜ. ಆದರೆ ಯಾವ ಯೋಗಿಯು ತನ್ನಂತೆಯೇ ಇತರರೆಂದು ತಿಳಿದು ಅವರಿಗೆ ಸದಾ ಸುಖವನ್ನೇ ಬಯಸುತ್ತಾನೆಯೋ ಅವನೇ ಶ್ರೇಷ್ಠ, ಅವನು ಸ್ವಾತ್ಮಾರಾಮ; ಅವ ನಿಂದ ಲೋಕದ ಜನತೆಗೆ ಅಪಾರ ಲಾಭವಿದೆ."

(೧) ಆತ್ಮದರ್ಶಿಗಳಾದ ಜ್ಞಾನಿಗಳಲ್ಲಿ ಅನೇಕ ವರ್ಗಗಳಿವೆ. ಉದಾ: (ಅ) ಕರ್ಮನಿಷ್ಠ ಜ್ಞಾನಿಗಳು (ಬ) ಏಕಾಂತ ಪ್ರಿಯ ಜ್ಞಾನಿಗಳು (ಕ) ಭೋಗಪರ

ಜ್ಞಾನಿಗಳು (ಡ) ಮೌನಶೀಲ ಜ್ಞಾನಿಗಳು (ಇ) ಉಪದೇಶಕ ಜ್ಞಾನಿಗಳು.

(ಅ) ಕರ್ಮನಿಷ್ಠರು:- ಕೆಲವು ಸಂತರು ತಮ್ಮ ಬದುಕನ್ನು ವೇದೋಕ್ತ ಯಜ್ಞ ಯಾಗ ಜಪ ಪೂಜೆ ಇತ್ಯಾದಿ ಕರ್ಮಗಳನ್ನು ಬಹು ನಿಷ್ಠೆಯಿಂದ ಆಚರಿಸುವಲ್ಲಿ ಕಳೆಯುತ್ತಾರೆ. ಸ್ನಾನ, ಸಂಧ್ಯಾವಂದನ, ಪ್ರಸಾದ, ಭಜನ, ಅರ್ಚನ ಇವುಗಳ ಮಧ್ಯ ಅವರಿಗೆ ಜನತೆಯನ್ನು ಕಾಣಲು ಸಮಯವೇ ದೊರೆಯದು. ಅದ್ದರಿಂದ, ಇವರನ್ನು ಕಾಣುವ ಭಾಗ್ಯವೂ-ಸಾಮಾನ್ಯರಿಗೆ ಇಲ್ಲ.

(ಬ) ಏಕಾಂತ ಪ್ರಿಯರು:– ಕೆಲವು ಸಂತರು ಮನೆ ಊರು ಜನಪದಗಳನ್ನು ತೊರೆದು ನಿರ್ಜನವಾದ ಹಾಗು ದುರ್ಗಮವಾದ ಗುಡ್ಡ ಗವ್ಹರ ಅರಣ್ಯಗಳಲ್ಲಿ ಕುಳಿತುಕೊಳ್ಳುತ್ತಾರೆ. ತಮ್ಮ ಆತ್ಮಾನಂದದ ನಿಬ್ಬೆರಗಿನಲ್ಲಿ ಮೈ ಮರೆಯುತ್ತಾರೆ; ಇಂಥ ಜ್ಞಾನಿಗಳ ಅಸ್ತಿತ್ವ ಕೂಡ ಜನರಿಗೆ ಗೊತ್ತಾಗುವದು ಕಷ್ಟ.

(ಕ) ಭೋಗಶೀಲರು:- ಕೆಲವು ಮಹಾತ್ಮರು ಅಮಿತ ಭೋಗ ಜೀವನ ಸಾಗಿಸುತ್ತಾರೆ. ಅಪಾರ ಧನ ಕನಕ ಸಂಪಾದಿಸುತ್ತಾರೆ. ಜನತೆಯ ಕಪ್ಪ ಕಾಣಿಕೆಗಳನ್ನು ಪಡೆದು ಸಿರಿವಂತರಾಗುತ್ತಾರೆ. ಒಂದಿಲ್ಲ ಒಂದು ರೀತಿಯಲ್ಲಿ ಮಾನ್ಯ ಕೀರ್ತಿಗಳನ್ನು ಬೆಳೆಸುವಲ್ಲಿ ತಲ್ಲೀನರಾಗುತ್ತಾರೆ. ಇವರನ್ನು ಜನತೆ ಸೇವಿಸುತ್ತದೆ. ಆದರೆ ಇವರು ಜನತೆಗೆ ಏನನ್ನೂ ನೀಡಬಯಸುವದಿಲ್ಲ.

(ಡ)ಮೌನಿಗಳು:– ಕೆಲವು ಮಹಾ ಪುರುಷರು ಮುಖ ಮುಚ್ಚಿದವರು ಕೊನೆಯವರೆಗೂ ತೆರೆಯುವದಿಲ್ಲ. ಮಹಾ ಮೌನಧರಿಸಿ ತಮ್ಮಲ್ಲಿ ತಾವು ಮಗ್ನರಾದ ಇವರ ದರ್ಶನದಿಂದ ಅನೇಕ ಜನ ಕೃತಕೃತ್ಯ ಭಾವ ತಳೆಯುತ್ತಾರೆ.

(ಇ) ಉಪದೇಶಕರು:– ಕೆಲವು ಅನುಭಾವಿಗಳು ತಾವು ಪಡೆದ ದಿವ್ಯ ಸೌಖ್ಯವನ್ನು ಬಹು ಮುಕ್ತ ರೀತಿಯಲ್ಲಿ ಉಪದೇಶಗಳ ಮೂಲಕ ಜಗತ್ತಿಗೆ ನೀಡಬಯಸುತ್ತಾರೆ. ಅಂಥ ಮಹಾತ್ಮರ ಆಚಾರ ಆದರ್ಶ. ಮಾತು ದಯಾಪೂರ್ಣ, ಕೃತಿ ಲೋಕೋಪಕಾರಕ. ನೋಟ ಅನುಗ್ರಾಹಕ. ಬಾಳಿನ ತುಂಬ ತಮ್ಮ ಶಕ್ತಿಯನ್ನೆಲ್ಲ ಲೋಕಹಿತಕ್ಕಾಗಿ ವಿನಿಯೋಗಿಸುತ್ತಾರೆ. 'ಸರ್ವೇ ಜನಾಃ ಸುಖಿನೋ ಭವಂತು' 'ಸರ್ವ ಲೋಕದ ಹಿತ ಬಯಸುವ ನಮ್ಮ ಕೂಡಲಸಂಗನ ಶರಣರು' ಈ ಭಾವ ಅವರದು. ಜಗದ ಸುಖವೇ ಅವರ ಸುಖ, ಜಗತ್ತು ದುಃಖಿಯಾದರೆ ಅವರ ಮನಸ್ಸು ನೋಯುತ್ತದೆ. ಇಂಥ ಮಾಹಾತ್ಮರಿಗೆ 'ಜಗದ್ಗುರು' ಎನ್ನುತ್ತಾರೆ. ಅವರಿಗೆ ಧನಗಳಿಸುವ ಆಸಕ್ತಿ ಇಲ್ಲ. ಮಾನಕೀರ್ತಿಗಳಲ್ಲಿ ಅಭಿರತಿಯಿಲ್ಲ. ಭೋಗಾಭಿಲಾಷೆ ಇಲ್ಲ. ಜಾತಿ ಪಂಥ ಪಕ್ಷಗಳ ಕಲ್ಪನೆ ಅವರಿಗಿಲ್ಲ. ತಮ್ಮಂಥ ಅನುಭವಿಗಳನ್ನೂ ಲೋಕ ಸೇವಕರನ್ನೂ ಜ್ಞಾನಿಗಳನ್ನೂ ನಿರ್ಮಿಸುವಲ್ಲಿಯೇ ಅವರು ತಮ್ಮ ಜೀವನ ವ್ಯಯಿಸುತ್ತಾರೆ. ಆದರಲ್ಲಿಯೇ ಆನಂದ ಪಡುತ್ತಾರೆ.

ಇಂತು ಐವರು ಜ್ಞಾನಿಗಳಲ್ಲಿ ಕೊನೆಯವನಾದ ಉಪದೇಶಕನಾದ ಅನು

ಭಾವಿಯೇ ಪರಮಶ್ರೇಷ್ಠ. ಅವನಿಂದಲೇ ಲೋಕಸಂಗ್ರಹ! ಧರ್ಮ ಪ್ರತಿಷ್ಠಾಪನೆ!

**ಸಂಬಂಧಃ**– ಅರ್ಜುನನು ಒಂದು ಸಂದೇಹ ವ್ಯಕ್ತಮಾಡುತ್ತಾನೆ.

**ಅರ್ಜುನೋವಾಚ**

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥೩೩॥**

**ಅರ್ಥ**:–ಮಧುಸೂದನ= ಎಲೈ ಮಧುಸೂದನ, ತ್ವಯಾ= ನಿನ್ನಿಂದ ಸಾಮ್ಯೇನ= ಸಮತ್ವದಿಂದ ಕೂಡಿದ ಯಃ ಅಯಂ ಯೋಗಃ= ಯಾವ ಈ ಯೋಗವು ಪ್ರೋಕ್ತಃ =ಹೇಳಲ್ಪಟ್ಟಿತೋ, ಚಂಚಲತ್ವಾತ್= ಮನಸ್ಸು ಚಂಚಲವಾದುದರಿಂದ ಏತಸ್ಯ= ಇದರ ಸ್ಥಿರಾಂ ಸ್ಥಿತಿಂ= ಸ್ಥಿರವಾದ ಸ್ಥಿತಿಯನ್ನು ಅಹಂ ನ ಪಶ್ಯಾಮಿ = ನಾನು ಕಾಣೆನು.

**ವಿವರಣೆ**:– ಚಿತ್ತಚಂಚಲರೂಪ ವಿಕ್ಷೇಪ, ವಿಷಯ ವಾಸನಾರೂಪ ರಸಾಸ್ವಾದ ಹಾಗು ಪಾಪಸ್ಮೃತಿರೂಪ ಕಷಾಯಗಳ ಜನ್ಮಸ್ಥಾನವು ರಜೋಗುಣ. ಈ ರಜೋಗುಣವು ಗಾಢವಾದ ತಮದಲ್ಲಿ ಅಡಗಿದಾಗ ನಿದ್ರೆಯ ಸುಖ ಅನುಭವಿಸುತ್ತೇವೆ; ಆ ನಿದ್ರಾವಸ್ಥೆಯಲ್ಲಿ ರಾಗದ್ವೇಷಗಳು ಏಳವು. ರಜೋಗುಣವು ತಮದಲ್ಲಿ ಅಡಗದೆ ಗಾಢ ಸತ್ವದಲ್ಲಿ ಅಡಗಿದರೆ ನಿದ್ರೆಯಾಚೆಗಿನ ಪವಿತ್ರ ಉತ್ಕ್ರಾಂತ ಪ್ರಜ್ಞಾವಸ್ಥೆಯನ್ನು ಹೊಂದುತ್ತೇವೆ. ಅದುವೇ ಸಮಾಹಿತ ಸ್ಥಿತಿ; ಸರ್ವವೃತ್ತಿ ಹಾಗು ವಾಸನಾವಿಹೀನವಾದ ಶುದ್ಧಸ್ಥಲ! ಅಲ್ಲಿ ಮನಸ್ಸು ಬ್ರಹ್ಮಲೀನವಾಗಿದೆ. ನಾದ, ಬಿಂದು, ಕಲೆಗಳು ಮರೆಯಾಗಿ ಅಖಂಡ ಅಸ್ತಿತ್ವ. ಜ್ಞಾನ, ಹಾಗು ಆನಂದಗಳೇ ಮನದಲ್ಲಿ ಪ್ರತಿಫಲಿಸಿವೆ. ದ್ರಷ್ಟನಾದ ಜೀವನು ಸಾಕ್ಷಿದೇವನಲ್ಲಿ ಒಂದಾಗಿದ್ದಾನೆ. ಅಂಥ ಅವಸ್ಥೆಯಲ್ಲಿ ನಿಂತಾಗ ಕಾಣುವದೇನು? ಬರೀ ಆತ್ಮ! ಹೊರ ಒಳಗೆಲ್ಲ ವ್ಯಾಪಿಸಿರುವ ದಿವ್ಯವಸ್ತು! ಈ ಪಾವನ ದರ್ಶನವೇ 'ಸಮದರ್ಶನ'. ಈ ದರ್ಶನ ಪ್ರಾಪ್ತಿಯೇ ಸಮತ್ವಯೋಗ. ಭಗವಂತನು ಇಲ್ಲಿಯವರೆಗೆ ಈ ಯೋಗವನ್ನು ತೀತಿಳಿಯಾಗಿ ವಿವರಿಸಿದನು. ಅದನ್ನು ಏಕಾಗ್ರತೆಯಿಂದ ಕೇಳಿದ ಅರ್ಜುನನು ಒಂದು ಸಂದೇಹ ವ್ಯಕ್ತಮಾಡಿದ.

**ಅರ್ಜುನ**:– "ಮಧು ಸೂದನ, ನೀನು ಬಹು ದೀರ್ಘವಾಗಿ ಸಮತ್ವ ಯೋಗವನ್ನು ಪ್ರತಿಪಾದಿಸಿದೆ. ನನ್ನ ಮತಿಗೆ ಸಾಧ್ಯವಾದಷ್ಟನ್ನು ತಿಳಿಯಲು ಯತ್ನಿಸಿದ್ದೇನೆ. ಆದರೆ ಕೃಷ್ಣ, ಆ ಸ್ಥಿತಿಯನ್ನು ಸಾಧಿಸಿಕೊಳ್ಳುವದು ಬಹು ಕಷ್ಟಕರವೆನಿಸುತ್ತಿದೆ. ಏಕೆಂದರೆ ಮನಸ್ಸು ಮೂಲತಃ ಚಂಚಲ."

**ಸಂಬಂಧಃ**- ಅರ್ಜುನನು ತನ್ನ ಸಂದೇಹವನ್ನು ಇನ್ನಷ್ಟು ಸ್ಪಷ್ಟಪಡಿಸುತ್ತಿದ್ದಾನೆ.

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥೩೪॥**

**ಅರ್ಥ**:- ಮನಃ=ಮನಸ್ಸು ಚಂಚಲಂ ಹಿ = ಚಂಚಲವಾಗಿದೆ, (ಅದು)ಪ್ರಮಾಥಿ=

ಪ್ರಕ್ಷೋಭಕಾರಿ, ಬಲವತ್= ದುರ್ಜಯಿ, ದೃಢಂ= ದುರ್ಭೇದ್ಯ; ತಸ್ಯ= ಅದರ ನಿಗ್ರಹಂ= ನಿರೋಧವು ವಾಯೋಃ ಇವ= ವಾಯುವಿನಂತೆ ಸುದುಷ್ಕರಂ= ಕಷ್ಟಸಾಧ್ಯವೆಂದು ಅಹಂ ಮನ್ಯೇ= ನಾನು ತಿಳಿಯುತ್ತೇನೆ.

**ವಿವರಣೆ:–** "ದೇವ, ಮನಸ್ಸನ್ನು ನಿಗ್ರಹಿಸುವದೆಂದರೆ ಚಂಡಮಾರುತವನ್ನು ನಿಗ್ರಹಿಸಿದಂತೆ. ಅತ್ಯಂತ ಕಷ್ಟ. ಹೀಗಿರುವಾಗ ನನ್ನಂಥ ಮನುಷ್ಯನಿಗೆ ಯೋಗವು ಎಂತು ಸಾಧ್ಯವಾದೀತು?"

"ಮನವೆಂಬ ಮರ್ಕಟವ ತಡೆಯಲಾರೆನು ದೇವ। ಎನಿತಿದರ ಚಪಲ ಚೇಷ್ಟೆಗಳ ವರ್ಣಿಸಲಿ ॥ಪ॥ ಧರೆಯನೆಲ್ಲವನೊಂದೆ ಕೊಡೆಯಿಂದಲಾಳುವದು। ಗಿರಿಯ ಗುಹೆಯೊಳು ಕುಳಿತು ತಪವ ಮಾಡುವದು ॥ ತರುಣಿಯರ ಕಂಕುಳೊಳು ಕೈಯಿಕ್ಕಿ ನಗಿಸುವದು। ಕರಿಯ ಮೇಲಂಬಾರಿಯಲ್ಲಿ ಮೆರೆಯುವದು ॥೧॥ ಅನುಭವದಿ ಜೀವೇಶರೈಕ್ಯವನು ತಿಳಿಯುವದು। ಧನವ ದಶಲಕ್ಷವನು ಗಳಿಸಿ ಹೂಳುವದು॥ ಮನೆಯ ಮಕ್ಕಳ ಬಿಟ್ಟು ವಿರತಿಯಿಂ ಪೊರಡುವದು। ವನಜೋದ್ಭವಾಂಡವೊಂದೊಂದನೆಣಿಸುವದು ॥೨॥ ಅರಿಗಳನು ಹಿಡಿದು ಹೆಡಮುಡಿಗಟ್ಟಿ ಹೊಸಗುವದು। ಸುರಲೋಕಕ್ಕೈದಿ ರಂಭೆಯೊಳು ರಮಿಸುವದು॥ ಬರಿದೆ ನೀನೇಕಿನಿತು ಚೇಷ್ಟಿಸುವೆಯೆನೆ ಭುವಿಯೊ। ಳಿರುವ ಕೋಟಿಗಳಾರ ಶಿಷ್ಯರೆಂಬುವುದು ॥೩॥ ಓಡಿವೆನೆನೆ ಮೊದಲ ಮುಮ್ಮಾರು ಹಾರಾಡಿಹುದು। ಪೊಡೆವೆನೆನಲಾ ನುಡಿಯದಾರದೆಂಬುವದು॥ ತುಡುಗ ದನವಿನ ಕೊರಳ ಗುದ್ದೆಯುಂಡದೋಳೆನ್ನ। ನೆಡವಿಡದೆ ಮೂಜಗದೊಳೆಳದಾಡುತಿಹುದು ॥೪॥ ಧರೆಯ ನಿಕ್ಷೇಪವನು ಕದ್ದೆಲ್ಲಿಗೋಡಿದರೂ। ಧರೆಯವಲ್ಲಲ್ಲಿ ಕಳ್ಳನ ಕಾಡುವಂತೆ॥ ಗುರುಸಿದ್ಧ ಎನ್ನ ಮನವಾವ ವಿಷಯಂಗಳೊಳ। ಗೆರಗಲೆಲ್ಲ ನೀಂ ಕಾಣಿಸದೆ ಬಿಡಿಸೈ ॥೫॥

**ಸಂಬಂಧ:–** ಭಗವಂತನು ಸಮಾಧಾನಕರ ಉತ್ತರ ನೀಡುತ್ತಾನೆ.

## ಶ್ರೀಕೃಷ್ಣ ಉವಾಚ

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲವ್ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥೩೫॥**

**ಅರ್ಥ:–** ಮಹಾಬಾಹೋ= ಅರ್ಜುನ, ಮನಃ= ಮನಸ್ಸು ದುರ್ನಿಗ್ರಹಂ= ನಿರೋಧಿಸಲು ಕಷ್ಟಕರ, ಚಲಂ= ಚಂಚಲ (ಎಂಬುದು) ಅಸಂಶಯಂ = ನಿಶ್ಚಿತ, ತು= ಆದರೆ ಕೌಂತೇಯ= ಅರ್ಜುನ, ಅಭ್ಯಾಸೇನ= ಅಭ್ಯಾಸದಿಂದ ಚ= ಮತ್ತು, ವೈರಾಗ್ಯೇಣ= ವಿರಾಗದಿಂದ, ಗೃಹ್ಯತೇ= ನಿಗ್ರಹಿಸಲ್ಪಡುತ್ತದೆ.

೧)**ಚಂಚಲಂ:–** ಮನವು ಅಸ್ಥಿರ, ಎಂಬ ಸಂಗತಿಯನ್ನು ಬೆಂಬಲಿಸುವ ಸಂತರ ನುಡಿಗಳು ಅನೇಕ. ಅವುಗಳಲ್ಲಿ ಒಂದನ್ನು ಅವಲೋಕಿಸುವಾ.

ತಡೆವುದಾಗದು ತನಗಗಣಿತ ವಿಷಯದೊ। ಳೆಡೆಮಾಡುವತಿ ಚಪಲತೆಯ ಚಿತ್ತವನು॥ಪ॥ ಧರೆಯನಜಿನದಂತೆ ಸುರುಳಲಹುದು ಮೇರು। ಗಿರಿಯನಂಗುಲಿಯ ಕೊನೆಯಲಾನಲಹುದು॥ ಶರಧಿಯನೊಮ್ಮೆ ಪಾನವ ಮಾಡಲಹುದುಸೈ। ತಿರಿಸಬಾರದು ನಿಮಿಷಾರ್ಧವೀ ಮನವ॥೧॥ ಮೊಲನ ತಲೆಯೊಳು ಕೋಡ ತನು ಕಾಣಲಹುದಭ್ರ। ದೊಳು ಸೌರಭದ ವಾರಿಜವನೆತ್ತಲಹುದು ಬಳಸಲಹುದು ರವಿಕಿರಣೋದಕವ ನಸ। ದಳವರ್ಷಳಿಗೆ ನಿಲ್ಲಿಸಲು ಮಾನಸವ॥೨॥ ಮಾರವಿರೋಧಿ ಮಾಯಾ ಮೋಹ ರಹಿತನ। ಪಾರಮಹಿಮ ಶಂಭುಲಿಂಗದೊಲವನು ॥

ಭೂರಿ ಪುಣ್ಯದ ಫಲದಿಂದೆ ಪಡೆಯದೆ ಸಂ । ಸಾರಿ ಸುಮ್ಮನೆ ಗೆಲಲರಿದು ಹೃದಯುವ॥೩॥"

— ನಿಜಗುಣ ಶಿವಯೋಗಿಗಳು

ಭಾವ:– ರಣದುಂದುಭಿ ರಾಕ್ಷಸ ಭೂಮಿಯನ್ನು ಚಾಪೆಯಂತೆ ಸುತ್ತಿದ. ರಾವಣ ಮೇರು ಗಿರಿಯನ್ನು ಎತ್ತುವ ಸಾಹಸ ಮಾಡಿದ. ಅಗಸ್ತ್ಯ ಸಪ್ತ ಸಮುದ್ರಗಳನ್ನೇ ಕುಡಿದ. ಆದರೆ ಮನಸ್ಸಿನ ವೇಗ ತಡೆಯುವದಾಗಲಿಲ್ಲ. ಒಂದು ವೇಳೆ ಅಸಾಧ್ಯವೆನ್ನಬಹುದಾದ ಮೊಲದ ಕೋಡನ್ನು ಕಾಣಬಹುದು. ಸುಗಂಧ ಭರಿತ ಆಕಾಶಪುಷ್ಪವನ್ನು ಎತ್ತಬಹುದು. ಸೂರ್ಯ ಕಿರಣಗಳಿಂದ ಜಲ ತೆಗೆಯಬಹುದು. ಮನವನ್ನು ಅರ್ಧ ನಿಮಿಷ ನಿಲ್ಲಿಸುವದು ಅಶಕ್ಯ. ಅದಕ್ಕೆ ಪರಮಾತ್ಮನ ಕೃಪೆಬೇಕು,

(೨) ದುರ್ನಿಗ್ರಹ:– ಮನದ ಓಘ ಬಲಾಢ್ಯ. ಅದನ್ನು ತಡೆದು ನಿಲ್ಲಿ ಸುವದು ಸಾಮಾನ್ಯ ಸಾಹಸಕ್ಕೆ ಆಗದ ಮಾತು. ವಿಶ್ವಾಮಿತ್ರ, ರಾವಣ. ಇಂದ್ರ ಮುಂತಾದ ಮಹಾನುಭಾವರ ಮನಸ್ಸು ವಿಷಯಗಳತ್ತ ಹರಿದಾಗ ಅದನ್ನು ನಿಗ್ರಹಿಸಲಾಗದೆ ಪತನ ಹೊಂದಿದರು.

(೩) ಆದರೂ ಅಭ್ಯಾಸ ಮತ್ತು ವಿರಾಗಗಳಿಂದ ಅದನ್ನು ತಡೆಯು ವದು ಸಾಧ್ಯ. (ಅ) ಅಭ್ಯಾಸ:– ಸಾಧು ಸಮಾಗಮ ಹಾಗು ಅಧ್ಯಾತ್ಮ ವಿದ್ಯಾಧಿಗಮಗಳು ಅಭ್ಯಾಸದ ಅಂಗಗಳು. ದೇವನನ್ನು ವಿಶ್ವದಾದ್ಯಂತ ನೋಡುವವರು ಸಾಧುಗಳು; ಅವರ ಹೃದಯದಲ್ಲಿ ಕೇವಲ ಕರುಣೆ ತುಂಬಿದೆ, ಅವರ ಮತಿಯಲ್ಲಿ ಅಗಾಧ ಅನುಭಾವ ನೆಲಸಿದೆ. ಅವರ ಸ್ಮರಣದಲ್ಲಿ ಅಪಾರ ಜ್ಞಾನ ಶೇಖರಣೆಗೊಂಡಿದೆ. ಅಂಥ ಸಂತರ ಬಳಿ ಹೋಗಿ, ಅವರ ಆಶ್ರಯ ದಲ್ಲಿ ನೆಲೆಸಿ, ಅವರ ಕೃಪಾಪೋಷಿತರಾಗಿ, ಅವರಿಂದ ವೇದಾದಿ ವಿದ್ಯೆಯನ್ನು ಕಲಿಯುವದು ಹಾಗು ಸಾಧನೆ ಮಾಡುವದು ಅಭ್ಯಾಸ. ಈ ಅಭ್ಯಾಸದಿಂದ ಅವಿದ್ಯೆಯ ನಾಶ. (ಬ) ವಿರಾಗ:– ವಿಷಯ ವಾಸನಾ ಪರಿತ್ಯಾಗವು ವಿರಾಗ; ವಿರಾಗಿಯು ರೂಪ ರಸಾದಿಗಳನ್ನು ಹೇಯವಾಗಿ ಕಾಣುತ್ತಾನೆ; ಅವುಗಳ ಕ್ಷಣಿಕತೆ ಹಾಗು ಅರ್ಥಹೀನತೆಗಳನ್ನು ಗುರುತಿಸುತ್ತಾನೆ. ಆಗ ಅವನ ಮನ ಸ್ಸಿನಲ್ಲಿರುವ ವಿಷಯಾಸಕ್ತಿಯೇ ಇಲ್ಲದಾಗುವದು.

ಈ ಅಭ್ಯಾಸ ಮತ್ತು ವಿರಾಗಗಳು ರಕ್ತಗತವಾದರೆ ಚಿತ್ತವು ನಿರ್ಮಲ ಗೊಳ್ಳುತ್ತದೆ. ಆದರಲ್ಲಿ ಮೈತ್ರಾ:– (ಕ) (ಸುಖೀ ಜೀವರ ಕಂಡು ಅವರೊಂದಿಗೆ ಸ್ನೇಹದಿಂದ ವರ್ತಿಸುವ ರೀತಿ) (ಖ) ಕರುಣಾ (ದುಃಖಿ ಜೀವಿಗಳ ಕಂಡು ಮರುಕಗೊಳ್ಳುವದು) (ಗ) ಮುದಿತಾ:– (ಪುಣ್ಯಜೀವಿಗಳ ಕಂಡು ಸಂತೋಷಿ ಸುವದು) (ಘ) ಉಪೇಕ್ಷಾ:– (ಪಾಪಿ ಜೀವಿಯ ಕಂಡು ಉದಾಶೀನನಾಗಿರು ವದು) ಎಂಬ ನಾಲ್ಕು ಸತ್ವಪೂರ್ಣ ದೈವೀ ಗುಣಗಳು ಪ್ರತಿಷ್ಠಾಪನೆಗೊ

ಳ್ಳುತ್ತವೆ. ಆಗ ಮನಸ್ಸಿನ ಚಂಚಲತೆ ನಿಂತು ಅದು ಪೂರ್ಣ ನಿಗ್ರಹಿತವಾಗು ತ್ತದೆ. ಮನೋನಿಗ್ರಹದ ನಂತರ ಆತ್ಮದರ್ಶನ ಸಹಜ ಸಾಧ್ಯ!

**ಸಂಬಂಧ:-** ಆತ್ಮಸಂಯಮವಿರದವನಿಗೆ ಯೋಗ ಸಾಧಿಸದು.

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋऽವಾಪ್ತುಮುಪಾಯತಃ ॥೩೬॥**

**ಅರ್ಥ:-** ಅಸಂಯತಾತ್ಮನಾ=ಮನೋನಿಗ್ರಹವಿಲ್ಲದವನಿಂದ, ಯೋಗಃ=ಯೋಗವು (ಆತ್ಮ ಪರಮಾತ್ಮರ ಐಕ್ಯಾನುಭೂತಿಯು) ದುಷ್ಪ್ರಾಪಃ = ಪ್ರಾಪ್ತಿಸಲ್ಪಡದು. (ಎಂದು) ಮೇ = ನನ್ನ ಮತಿಃ = ಅಭಿಪ್ರಾಯವು. ತು = ಆದರೆ, ಯತತಾ = ಯತ್ನಶೀಲನಾದ ಉಪಾಯತಃ ವಶ್ಯಾತ್ಮನಾ = ಉಪಾಯತಃ ಮನಸ್ಸನ್ನು ವಶಗೊಳಿಸಿದ ಸಾಧಕನಿಂದ, ಅವಾಪ್ತುಂ= (ಯೋಗವನ್ನು) ಹೊಂದುವದು ಶಕ್ಯಃ= ಶಕ್ಯವು.

**ವಿವರಣೆ:-** ಭಗವಂತ:— "ಅರ್ಜುನ, ಇಂದ್ರಿಯಗಳನ್ನು ಸ್ವೇಚ್ಛೆಯಾಗಿ ಭೋಗ ವಸ್ತುಗಳಲ್ಲಿ ಹರಿಬಿಟ್ಟವರು ಇಂದ್ರಿಯಾರಾಮಿಗಳು. ಛಲದಿಂದ ಆ ಇಂದ್ರಿಯಗಳನ್ನು ನಿರೋಧಿಸಿದವರು ಹಟವಾದಿ ತಾಪಸರು. ಇವರೀರ್ವರ ಮನಸ್ಸೂ ವಾಸನೆಗಳ ತಾಂಡವ ರಂಗಭೂಮಿಯಾಗಿದೆ. ಆದ್ದರಿಂದಿವರು ಅಸಂಯತಾತ್ಮರು. ತಮ್ಮ ಮನವು ತಮ್ಮ ಕೈಯಲ್ಲಿಲ್ಲದ ಹೇಡಿಗಳು. ಇವ ರಿಗೆ ಯೋಗವು ಎಂದಿಗೂ ದೊರೆಯದು.

"ಯಾರು ಯಮ ನಿಯಮಾದಿ ಕ್ರಮಾಂಗಗಳನ್ನು ಅನುಷ್ಠಾನಕ್ಕೆ ತಂದು ಉಪಾಯದಿಂದ ಮನಸ್ಸನ್ನು ತಮ್ಮ ಅಂಕಿತಕ್ಕೆ ಒಳಪಡಿಸಿಕೊಳ್ಳುತ್ತಾರೆಯೋ ಅವರಿಗೆ ಯೋಗವು ಸುಲಭ ಸಾಧ್ಯವಾಗುತ್ತದೆ."

(೧) ಯಾವುದೇ ಸಿದ್ಧಿ ಕೈಗೂಡಬೇಕಾದರೆ ದೀರ್ಘಪ್ರಯತ್ನ ಮತ್ತು ಅದಮ್ಯ ಉತ್ಸಾಹಗಳು ಬೇಕು. ಬಾಲಕ ನಡೆಯಲು ಹೋಗಿ ನೂರು ಸಲ ಬೀಳುತ್ತಾನೆ, ಅದರಿಂದಾತ ನಿರಾಶನಾಗುವದಿಲ್ಲ. ದೃಢನಿರ್ಧಾರ ಮತ್ತು ಉತ್ಸಾಹದಿಂದ ಮತ್ತೆ ಮತ್ತೆ ಪ್ರಯತ್ನಿಸುತ್ತಾನೆ. ನಿಧಾನವಾದರೂ ಚಿಂತೆ ಯಿಲ್ಲ ನಡೆಯಲು ಕಲಿಯುತ್ತಾನೆ, ಅವನೇ ಮುಂದೆ ತಂತಿಯ ಮೇಲೂ ಲೀಲಾ ಜಾಲವಾಗಿ ನಡೆಯಬಲ್ಲ. ಯತ್ನ ಮಾಡುವವನಿಗೆ ಅಸಾಧ್ಯವಾದುದೇನಿದೆ? ಆತ್ಮಸಾಕ್ಷಾತ್ಕಾರ-ಸಾಧನೆ ಮಾಡುವಾಗ ಸಾಧಕನ ಮನಸ್ಸು ಒಮ್ಮೆಲೇ ಏಕಾಗ್ರಗೊಳ್ಳದು. ನಿಜ, ಅದು ಮತ್ತೆ ಮತ್ತೆ ವಿಷಯಗಳತ್ತ ಹರಿಯುತ್ತದೆ. ಆದರೇನು, ಎದೆಗುಂದುವದು ವೀರ ಸಾಧಕನ ಲಕ್ಷಣವಲ್ಲ. ಅವನು ಹತ್ತು, ನೂರು, ಸಾವಿರ ಬಾರಿ ಪ್ರಯತ್ನಿಸಬೇಕು. ಯೋಗಾಂಗಗಳ ಉಪಾಯದಿಂದ ಅದನ್ನು ಸಾಧುಗೊಳಿಸಬೇಕು. ಅದು ನಮ್ಮ ಕೈವಶವಾಗಿಯೇ ತೀರುವದು.

(೨) ಮನಸ್ಸಂಯಮನದ ಉಪಾಯಗಳು ಎರಡು: (ಕ) ವೃತ್ತಿಲಯ ರೂಪ ಯೋಗ (ಖ) ತತ್ತ್ವ ವಿವೇಚನಾ ರೂಪಜ್ಞಾನ. ಕಾಮ ಕ್ರೋಧಾದಿ

ಅಭ್ಯಾಸ ಮಾಡುವವನಾದ ಸಂಶುದ್ಧ ಕಿಲ್ಬಿಷಃ =ಪಾಪರಹಿತನಾದ ಅನೇಕ ಜನ್ಮ ಸಂಸಿದ್ಧಃ= ಅನೇಕ ಜನ್ಮಗಳಲ್ಲಿ ಗೈದ ಯೋಗ ಸಾಧನದಿಂದ ಸಮ್ಯಗ್ಜ್ಞಾನಿಯಾದ, ಯೋಗೀ = ಯೋಗಿಯು ತತಃ= ಆ ಬಳಿಕ ಪರಾಂ ಗತಿಂ ಯಾತಿ= ಪರಮ ಗತಿಯನ್ನು ಹೊಂದು ತ್ತಾನೆ.

ವಿವರಣೆ:- ಭಗವಂತ:- "ಭಾರತ, ಸಾಧಕನು ಸಾಹಸಿ. ಭೌತಿಕ ಕಷ್ಟ ಕಾರ್ಪಣ್ಯಗಳಿಗೆ ಹೆದರುವವನಲ್ಲ. ಭೂರಿ ಪ್ರಯತ್ನ ಮಾಡುತ್ತಾನೆ. ಅಹಿಂಸಾದಿ ಗಳನ್ನು ಪರಿಪಾಲಿಸುತ್ತಾನೆ. ಗುರು ಸಾನಿಧ್ಯದಲ್ಲಿ ನೆಲೆ ನಿಂತು ಅವರ ಮಾರ್ಗ ದರ್ಶನದಲ್ಲಿ ಅವಿಚ್ಛಿನ್ನವಾಗಿ ಅಭ್ಯಸಿಸುತ್ತಾನೆ. ವೈಶ್ವಿಕ ತತ್ತ್ವಗಳ ಪರಿಜ್ಞಾನ ಪಡೆಯುತ್ತಾನೆ. ಪ್ರಾಕೃತಿಕ ವಸ್ತುಗಳ ಭಾವ ನೀಗಿ ಚೈತನ್ಯ ಜ್ಯೋತಿಯತ್ತ ಮನೋವೃತ್ತಿಯನ್ನು ಧಾರೆಗೊಳಿಸುತ್ತಾನೆ. ಆಗ ಅವನ ಅಂತರಂಗಸ್ಥ ಸಕಲ ಕಲ್ಮಷಗಳು ಅಳಿಯುತ್ತವೆ. ಅನೇಕ ಜನ್ಮಗಳಲ್ಲಿ ಇಂಥದೇ ಪರಿಶುದ್ಧಿ ಕ್ರಿಯೆ ಸಾಗಿ ಕೊನೆಗೊಮ್ಮೆ ಸಮ್ಯಗ್ ಜ್ಞಾನದ ದಿವ್ಯಾವತರಣೆ ಉಂಟಾಗುತ್ತದೆ. ಆ ಬಳಿಕ ಆ ಯೋಗಿಗೆ ಪರಮ ಪರಾತ್ಪರ ಮುಕ್ತಿ ಕೈಗೂಡುತ್ತದೆ."

(೧) ಸಾಧಕ ಅಧಿಕಾರಿಗಳಲ್ಲಿ ನಾಲ್ವಗೆ: (ಅ) ಮಂದ ಅಧಿಕಾರಿ: ಬಲ ಹೀನ, ಅನುರಾಗಿ, ಮಂದಮತಿ, ಪರಾವಲಂಬಿ, ರೋಗಿ ಹಾಗು ಗೃಹಕಾರ್ಯ ಗಳಲ್ಲಿ ತನ್ಮಯನಾದವನು ಮಂದ. ಇವನಲ್ಲಿ ಸಾಕಷ್ಟು ಶ್ರದ್ಧೆ ಇದೆ; ಪ್ರಯತ್ನ ಮಾತ್ರ ಕಡಿಮೆ. (ಆ) ಮಧ್ಯಮ ಅಧಿಕಾರಿ: ಇವನು ಸಮಭಾವಿ, ಸಜ್ಜನ ಸಂಗಪ್ರೇಮಿ, ನಿರೋಗಿ, ಕಾರ್ಯಸಾಕ್ಷಿ, ವಿಮಲ, ಇಂದ್ರಿಯ ವೃತ್ತಿ ವಿರಹಿತ, ಶಾಂತ, ಅಭ್ಯಾಸಿ, ಹರಿತ ಬುದ್ಧಿಯುಳ್ಳವ. ಇವನಲ್ಲಿ ಶ್ರದ್ಧೆಯಿದೆ ಮತ್ತು ತಕ್ಕ ಮಟ್ಟಿಗೆ ಪ್ರಯತ್ನವಿದೆ. (ಇ) ಅತಿಮಾತ್ರ ಅಧಿಕಾರಿ: ನೀತಿ ಧೈರ್ಯ ನಿರ್ಧಾರ ನಿರ್ಮಲತೆ ಶೌರ್ಯ ಪರಿತೋಷ ಈ ಗುಣಗಳಿಂದ ಕೂಡಿದವನೀತ. ಇವನಲ್ಲಿ ಸಾಕಷ್ಟು ಶ್ರದ್ಧೆ ಹಾಗು ಪ್ರಯತ್ನಗಳಿವೆ. (ಈ) ಅತಿಮಾತ್ರತರ ಅಧಿಕಾರಿ: ಬಹುಶಾಸ್ತ್ರ ಪರಿಣತೆ; ಭೋಗ ವಿಮುಖತೆ, ಅಧಿಕ ಶೌರ್ಯ, ಅಕರ್ಮ ರತಿ, ಅವಿಕಾರಿತ್ವ, ತತ್ತ್ವಭಾವಗಳಿಂದ ಯುಕ್ತನಾದವನೀತ. ಶ್ರದ್ಧೆ ಪ್ರಯತ್ನಗಳೆರ ಡನ್ನು ಸಮ ಸಮವಾಗಿ ಸಮುಚ್ಚಯಗೊಳಿಸಿದ ಶ್ರೇಷ್ಠ ಅಧಿಕಾರಿ. (ಶ್ರೀ ನಿಜ ಗುಣರ 'ಜಗದೊಳುನ್ನತವಾದ' ಎಂಬ ಪದ್ಯದ ಸಾರ). ಈ ನಾಲ್ವರಿಗೆ ಕ್ರಮ ವಾಗಿ ಮಂತ್ರ, ಲಯ, ಹಠ ಮತ್ತು ರಾಜ ಯೋಗಗಳು ಹೇಳಲ್ಪಡುತ್ತವೆ. ಅವರು ತಮ್ಮ ಯೋಗ ಸಾಧನೆಯನ್ನು ಪೂರ್ತಿಗೊಳಿಸದಿದ್ದರೆ ಮತ್ತೆ ಹುಟ್ಟಿ ಬಂದು ಪೂರ್ವ ಸಂಸ್ಕಾರದ ಬಲದಿಂದ ಯೋಗಾಭ್ಯಾಸಕ್ಕೆ ತೊಡಗುತ್ತಾರೆ. ಪರಮಗತಿಯನ್ನು ಪಡೆದೇ ತೀರುತ್ತಾರೆ.

ಸಂಬಂಧ:- ಎಲ್ಲರಿಗಿಂತ ಯೋಗಿಯು ಅಧಿಕ, ಎಂದು ಹೇಳಲಾಗುವದು.

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ।**

ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀಭವಾರ್ಜುನ ॥೪೬॥

**ಅರ್ಥ:**– ಯೋಗೀ = ಯೋಗಿಯು ತಪಸ್ವಿಭ್ಯಃ = ತಪಸ್ವಿಗಳಿಗಿಂತ ಅಧಿಕಃ = ಶ್ರೇಷ್ಠನು, ಜ್ಞಾನಿಭ್ಯಃ = ಜ್ಞಾನಿಗಳಿಗಿಂತ ಅಧಿಕಃ = ಶ್ರೇಷ್ಠನು ಚ = ಮತ್ತು ಕರ್ಮಿಭ್ಯಃ = ಕರ್ಮಿಗಳಿಗಿಂತ ಅಧಿಕಃ = ಶ್ರೇಷ್ಠನು (ಎಂದು) ಮತಃ = ಅಭಿಪ್ರಾಯವು, ತಸ್ಮಾತ್ = ಆದ್ದರಿಂದ, ಅರ್ಜುನ ಯೋಗೀ ಭವ = ಯೋಗಿಯಾಗು.

**ವಿವರಣೆ:**– ಯೋಗೀ:– ಕಬ್ಬಿನ ಬಗ್ಗೆ ಬರಿ ಮಾತನಾಡಿದರೆ ಲಾಭವಿಲ್ಲ. ಅದನ್ನು ಸುಲಿದು ಜಗಿದು ರಸ ಹೀರಿದಾಗ ಆನಂದ. ಹಾಗೆ ಅಷ್ಟಾಂಗ ಯೋಗ ವನ್ನು ಬರಿ ಹೇಳಿ ಕೇಳುವದು ಲಾಭದಾಯಕವಲ್ಲ. ಅದನ್ನು ಹಂತ ಹಂತವಾಗಿ ಜೀವನದಲ್ಲಿ ರೂಢಿಸಿಕೊಳ್ಳುವವರಿಂದ ಸಾಧಕನಿಗೆ ಸಂತೋಷ. ಅಂಥ ಸಾಧಕನು ಕ್ರಮವಾಗಿ ತನ್ಮಾತ್ರಾ, ಅಹಂಕಾರ, ಮಹತ್ತತ್ತ್ವಗಳನ್ನೇರಿ ಅಲ್ಲಿಂದ ಸ್ವಸ್ವರೂ ಪದಲ್ಲಿ ಬೆರೆಯುತ್ತಾನೆ. ಅವನೇ ಯೋಗಿ.

ಸಃ ತಪಸ್ವಿಭ್ಯೋ ಅಧಿಕಃ:-ದೇಹ ಇಂದ್ರಿಯ ಹಾಗು ಮನಸ್ಸುಗಳ ನೈಸ ರ್ಗಿಕ ಓಘ ವಿಷಯಗಳತ್ತ. ಆ ಓಘಗಳನ್ನು ಬಲವಂತವಾಗಿ ತಡೆದಾಗ ಒಂದು ರೀತಿಯ ಬಾಧೆ ಉಂಟಾಗುತ್ತದೆ. ಅದನ್ನು ಸಹಿಸಿಕೊಳ್ಳುವದೇ ತಪ. ದೇವ ಗುರು ಹಿರಿಯರ ಪೂಜೆ, ಶುಚಿ, ಬ್ರಹ್ಮಚರ್ಯ, ಅಹಿಂಸೆಗಳು ದೈಹಿಕ ತಪ. ಉದ್ವೇಗವಿಲ್ಲದ ಮಾತು, ಸತ್ಯ ನುಡಿ, ಪ್ರಿಯ ವಚನ, ಅಧ್ಯಯನ, ಅಧ್ಯಾಪನ ಗಳು ವಾಣಿ ತಪ. ನೆಮ್ಮದಿ, ಸೌಮ್ಯತೆ, ಮೌನ, ಭಾವಶುದ್ಧಿಗಳು ಮಾನಸಿಕ ತಪ.

ಈ ತ್ರಿವಿಧಾಂಗ ತಪವು ಫಲಾಭಿಲಾಷಾರಹಿತವಾಗಿದ್ದರೆ ಸಾತ್ವಿಕ. ಸತ್ಕಾರ ಮಾನ ಪೂಜೆಗಳಿಗಾಗಿ ಅಹಂಕಾರದಿಂದ ಮಾಡಲ್ಪಟ್ಟರೆ ರಾಜಸಿಕ. ತನ್ನ ಹಾಗು ಅನ್ಯರ ಪೀಡೆಗಾಗಿ ಮಾಡಲಾಗಿದ್ದರೆ ತಾಮಸಿಕ. ಯೋಗಿಯು ಈ ಮೂರು ವಿಧ ತಪಗಳನ್ನಾಚರಿಸುವ ತಪಸ್ವಿಗಳಿಗಿಂತ ಶ್ರೇಷ್ಠ.

ಸಃ ಜ್ಞಾನಿಭ್ಯಃ ಅಪಿ ಅಧಿಕಃ:- ವಸ್ತುಗಳ ಸತ್ಯ ಸ್ವರೂಪವನ್ನು ಕಂಡು ಕೊಳ್ಳುವದು ಜ್ಞಾನ. ಅನಂತ ಚೈತನ್ಯ ದೇವನನ್ನು ಅಸಂಖ್ಯ ಪದಾರ್ಥಗಳಲ್ಲಿ ಕಾಣುವದು ಸಾತ್ವಿಕ ಜ್ಞಾನ. ಚೈತನ್ಯವನ್ನು ಕಾಣದೆ ವಸ್ತು ಭೇದವನ್ನು ಮಾತ್ರ ಲಕ್ಷಿಸುವದು ರಾಜಸಿಕ ಜ್ಞಾನ. ಸ್ವಾರ್ಥಪರ ಬುದ್ಧಿ ಹೊಂದಿರುವದೂ ದೇಹವೇ ತಾನೆಂದು ಭಾವಿಸುವದೂ ತಾಮಸಿಕ ಜ್ಞಾನ. ಇನ್ನೊಂದು ವಿಧದಲ್ಲಿ ಹೇಳುವ ದಾದರೆ, ವೇದ ವೇದಾಂತ ವಿದ್ಯೆಯನ್ನು ಹೊಟ್ಟೆ ಹೊರೆಯಲು ಬಳಸುವದು ತಾಮಸಿಕ. ತನ್ನ ಮಾನ ಕೀರ್ತಿಗಾಗಿ ಹಾಗು ಭೇದ ಬಾವ ವರ್ಧಿಸಲೆಂದು ಬಳ ಸುವದು ರಾಜಸಿಕ. ತನ್ನ ತಾನರಿಯಲು ಹಾಗು ವಿಶ್ವದ ಸಕಲ ಮಾನವರಲ್ಲಿ ಭಾವೈಕ್ಯ ಉಂಟುಮಾಡಲು ಉಪಯೋಗಿಸುವದು ಸಾತ್ವಿಕ. ಈ ಮೂವಿಧ ಜ್ಞಾನ ಹೊಂದಿದ ಜ್ಞಾನಿಗಳಿಗಿಂತ ಯೋಗಿಯು ಅಧಿಕ.

ಸಂದೇಹ ನಿವಾರಿಸು."

(೧) ನಿಜವಾಗಿಯೂ ಅಧ್ಯಾತ್ಮಾನುಭವ ಪಥದಲ್ಲಿ ನಡೆಯುವಂತೆ ಪ್ರೋತ್ಸಾಹ ಕೊಡುವವರು ಯಾರೂ ಸಿಗುವದಿಲ್ಲ. ಮಹಾ ವಿದುಷರು, ಗುರುಗಳು, ಸ್ವಾಮಿಗಳು ಕೂಡ ದೇವ ಜೀವನಕ್ಕೆ ವಿರೋಧ ಮಾಡುತ್ತಾರೆ. ಮನೆಯಲ್ಲಿಯ ಮಕ್ಕಳು ಪವಿತ್ರ ಗ್ರಂಥವಾಚನ, ಯೋಗಸಾಧನ, ಪ್ರವಚನ ಶ್ರವಣ ಮಾಡಲು ಆರಂಭಿಸಿದರೆ ತಾಯಿ ತಂದೆ ಗುರು ಹಿರಿಯರೆಲ್ಲ ವಿರೋಧಿಸುತ್ತಾರೆ. ಮನೆಯು ಮಠವಾದೀತಲ್ಲ ಎಂಬ ಭಯ ಪಾಲಕರಿಗಿದ್ದರೆ ಆ ಮನೆಯ ಆತಿಥ್ಯ ತಪ್ಪೀತಲ್ಲ ಎಂಬ ಚಿಂತೆ ಗುರುಗಳಿಗೆ! ತಮ್ಮ ಮಕ್ಕಳ ಮೇಲೂ ಪರಿಣಾಮವಾದೀತಲ್ಲ ಎಂಬ ಅಂಜಿಕೆ ನೆರೆ ಹೊರೆಯವರಿಗೆ!

(೨) ಇಂಥ ಜನರಿಂದ ಸಾಧಕನ ಸಂಶಯ ಹೇಗೆ ಹೋದೀತು? ಭಗವಂತನೊಬ್ಬನೇ ನಿರಾಮಯ, ಕರುಣಾಮೂರ್ತಿ; ಅವನೇ ನಮಗೆ ಮಾರ್ಗದರ್ಶನ ಮಾಡಬಲ್ಲ.

ಸಂಬಂಧ:- ಭಗವಂತನು ಉತ್ತರ ನೀಡುತ್ತಾನೆ.

ಶ್ರೀ ಭಗವಾನುವಾಚ

ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।
ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥೪೦॥

ಅರ್ಥ:- ಪಾರ್ಥ= ಅರ್ಜುನ, ತಸ್ಯ ವಿನಾಶಃ= ಅಪೂರ್ಣ ಸಾಧಕನ ವಿನಾಶವು ಇಹ ವಾ ಅಮುತ್ರ ಏವ ನ ವಿದ್ಯತೇ= ಇಹದಲ್ಲಾಗಲಿ ಪರದಲ್ಲಾಗಲಿ ಇಲ್ಲ. ಹಿ= ಏಕೆಂದರೆ ತಾತ= ತಾತನೆ, ಕಲ್ಯಾಣಕೃತ್ ಕಶ್ಚಿತ್= ಶುಭ ಕಾರ್ಯ ಮಾಡಿದ ಯಾವನೂ ದುರ್ಗತಿಂ ನ ಗಚ್ಛತಿ= ಅಧೋಗತಿಗೆ ಹೋಗನು.

ವಿವರಣೆ:- ಭಗವಂತ:- "ಪಾರ್ಥ, ಅರ್ಧಮರ್ಧ ಸಾಧನೆ ಮಾಡಿ ಕೈಬಿಟ್ಟ ಸಾಧಕನಿಗೆ ಒಂದೆಡೆ ಭೋಗ ಸುಖವಿಲ್ಲ, ಇನ್ನೊಂದೆಡೆ ಪಾರಮಾರ್ಥಿಕ ಸೌಖ್ಯವಿಲ್ಲ, ಆದುದರಿಂದ ಅವನು ಉಭಯ ಭ್ರಷ್ಟನಾಗಿ ವಿನಷ್ಟವಾಗುವನೆಂದು ಭಾವಿಸಬೇಡ. ಯಮ ನಿಯಮಗಳೆರಡನ್ನೇ ಸಾಧಿಸಿದರೂ ಸಾಕು. ಅವನಿಗೆ ಇಹದಲ್ಲಿ ಗೌರವ ದೊರೆಯುತ್ತದೆ, ಪರದಲ್ಲಿ ಸುಖ ಸಿಕ್ಕುತ್ತದೆ. ಅವನಿಗೆ ಪೂಜ್ಯತೆ ಕೀರ್ತಿ ಸನ್ಮಾನಗಳು ಲಭ್ಯವಾಗುತ್ತವೆ.

"ತಾತ, ಸ್ವಾರ್ಥ ಹಾಗು ದುರುದ್ದೇಶವಿಲ್ಲದೆ ಪವಿತ್ರ ಭಾವದಿಂದ ಆಚರಿಸಿದ ಸತ್ಕರ್ಮಗಳು ಎಂದಿಗಾದರು ನಿಷ್ಫಲವಾಗುವದು ಸಾಧ್ಯವೆ? ಆ ಪಾವನ ಕ್ರಿಯೆಗಳನ್ನು ವಿಧಿವತ್ತಾಗಿ, ಹೃದಯ ಪೂರ್ವಕ ನಿರ್ವಹಿಸಿದ ಸಾಧಕನು ದುರ್ಗತಿಗೆ ಎಂದಿಗೂ ಹೋಗಲಾರ ಎಂಬುದನ್ನು ಖಚಿತವಾಗಿ ತಿಳಿದುಕೊ."

(೧) ಚೇನ ಕ್ರೇನದಿಂದ ಭಾರ ಎತ್ತುವಾಗ ಚೇನನ್ನು ಅರ್ಧಕ್ಕೆ ಕೈ ಬಿಟ್ಟರೂ ಭಾರವು ಕೆಳಗೆ ಬೀಳದು. ಅದೇ ರೀತಿ, ಸಾಧಕನು ಸಾಧನಾ-ಚೇನನ್ನು

ಮಧ್ಯದಲ್ಲಿ ಬಿಟ್ಟರೂ ಪತನ ಹೊಂದಲಾರ; ಅವನು ಮೈಗೂಡಿಸಿಕೊಂಡ ಅಹಿಂಸಾದಿ ಸುಗುಣಗಳು ಅವನನ್ನು ಕಾಪಾಡುತ್ತವೆ.

(೨) ಶಿಥಿಲ ಸಾಧನೆಯ ಸಾಧಕನು ನಾಶಹೊಂದುವದಿಲ್ಲ ಎಂಬ ಮಾತಿಗೆ ಪ್ರಮಾಣವಾಕ್ಯ:

"ಸ್ನಾತಂ ತೇನ ಸಮಸ್ತತೀರ್ಥ ಸಲಿಲೇ ಸರ್ವಾಪಿ ದತ್ತಾವನಿಃ।
ಯಜ್ಞಾನಾಂಚ ಕೃತಂ ಸಹಸ್ರಮಖಿಲಾ ದೇವಾಶ್ಚ ಸಂಪೂಜಿತಾಃ ॥
ಸಂಸಾರಾಚ್ಚ ಸಮುದ್ಧೃತಾಃ ಪಿತರಸ್ತ್ರೈಲೋಕ್ಯ ಪೂಜ್ಯೋಪ್ಯಸೌ।
ಯಸ್ಯ ಬ್ರಹ್ಮವಿಚಾರಣೇ ಕ್ಷಣಮಪಿ ಸ್ಥೈರ್ಯಂ ಮನಃಪ್ರಾಪ್ನುಯಾತ್॥"

ಯಾವನ ಮನಸ್ಸು ಒಂದೇ ಒಂದು ಕ್ಷಣ ಬ್ರಹ್ಮ ವಿಚಾರದಲ್ಲಿ ತೊಡಗುವದೋ ಅವನಂಥ ಸುಕೃತನೇ ಯಾರಿಲ್ಲ. ಅವನು ಸರ್ವತೀರ್ಥಗಳಲ್ಲಿ ಸ್ನಾನ ಮಾಡಿದಂತೆ. ಸಮಸ್ತ ಭೂಮಿಯನ್ನೇ ದಾನವಿತ್ತಂತೆ. ಸಾವಿರ ಯಜ್ಞಗಳನ್ನು ಆಚರಿಸಿದಂತೆ, ಸರ್ವ ದೇವತೆಗಳನ್ನು ಪೂಜಿಸಿದ ಪುಣ್ಯ ಅವನದಾಗದು. ಪಿತೃಗಳನ್ನು ಸಂಸಾರ ದಿಂದ ಪಾರು ಮಾಡಿದ ಶ್ರೇಯವಂತನಾತ. ಅವನು ತ್ರಿಲೋಕ ಪೂಜ್ಯ, ಸ್ವಲ್ಪ ಧರ್ಮ ಆಚರಿಸಿದರೂ ಮಹತ್ಪುಣ್ಯ ಪ್ರಾಪ್ತಿ ಎಂಬ ಭಾವವಿಲ್ಲಿದೆ.

(೩) ತಾತ ಎಂಬ ಸಂಬೋಧನಾ ಪದವು ಮಾರ್ಮಿಕ. ಅದರ ಅರ್ಥ ತಂದೆಯ ಸಂಪದವನ್ನು ಕಾಪಾಡುವವ, ಗುರುವಿನ ವಿದ್ಯಾನಿಧಿಯನ್ನು ರಕ್ಷಿಸು ವವ, ಎಂದು. ಪ್ರೇಮ, ವಾತ್ಸಲ್ಯ, ನಲುಮೆ ತಾತ ಪದದಿಂದ ನಿರ್ದಿಷ್ಟವಾಗಿವೆ. ಅರ್ಜುನನು ಶ್ರೀಕೃಷ್ಣನಿಗೆ ಅತಿ ಪ್ರೀತಿಯವ, ಅವನ ಉಪದೇಶ ಸ್ವೀಕರಿಸಲು ಯೋಗ್ಯ ಅಧಿಕಾರಿ, ತನ್ನ ವಿದ್ಯೆಯನ್ನು ಕಾಪಾಡಬಲ್ಲ ನಲುಮೆಯ ಶಿಷ್ಯ. ಆದ್ದ ರಿಂದ ತಾತ ಎಂಬ ಶಬ್ದದ ಸಂಬೋಧನೆ.

ಸಂಬಂಧಃ- ಯೋಗಭ್ರಷ್ಟ (ಅಪೂರ್ಣಸಾಧನ ಮಾಡಿದ ಸಾಧಕ) ನು ದೇಹಾಂತ್ಯದಲ್ಲಿ ಎಲ್ಲಿಗೆ ಹೋಗುತ್ತಾನೆ, ಮತ್ತೆ ಎಲ್ಲಿ ಹುಟ್ಟುತ್ತಾನೆ? ಈ ಎರಡು ಪ್ರಶ್ನೆಗಳಿಗೆ ಉತ್ತರ ಮುಂದೆ ಇದೆ.

**ಪ್ರಾಪ್ಯ ಪುಣ್ಯಕೃತಾನ್ ಲೋಕಾನುಷಿತ್ವಾ ಶಾಶ್ವತೀಃ ಸಮಾಃ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥೪೧॥**

ಅರ್ಥ:- ಯೋಗಭ್ರಷ್ಟಃ= ಯೋಗಭ್ರಷ್ಟನು, ಪುಣ್ಯಕೃತಾಂ= ಪುಣ್ಯಶಾಲಿಗಳ ಲೋಕಾನ್= ಲೋಕಗಳನ್ನು ಪ್ರಾಪ್ಯ= ಹೊಂದಿ ಶಾಶ್ವತೀಃ ಸಮಾಃ= ಅನೇಕ ದೇವತಾ-ವರುಷಗಳವರೆಗೆ ಉಷಿತ್ವಾ= ವಾಸಮಾಡಿ, ಶುಚೀನಾಂ= ಸದಾಚಾರಶೀಲರಾದ ಶ್ರೀಮತಾಂ = ಶ್ರೀಮಂತ ಗೇಹೇ= ಮನೆಯಲ್ಲಿ ಅಭಿಜಾಯತೇ= ಹುಟ್ಟುತ್ತಾನೆ.

ವಿವರಣೆ:- (೧) ಯೋಗಭ್ರಷ್ಟಃ- ಶುಭೇಚ್ಛಾ (ಮುಕ್ತಿ ಪಡೆವ ಅಭಿ ಲಾಷೆ) ವಿಚಾರಣಾ (ಗುರೂಪದೇಶದ ಶ್ರವಣ ಮನನ) ತನುಮಾನಸ (ಮನ ಸ್ಸಿನ ಶುದ್ಧತೆ ಮತ್ತು ನಿಧಿಧ್ಯಸನ ಶೀಲತೆ) ಸತ್ವಾಪತ್ತಿ (ಸತ್ವತಮಮನಸ್ಸಿ

ನಲ್ಲಿ ಆತ್ಮಜ್ಯೋತಿಯ ಪ್ರಕಾಶ ಪ್ರತಿಫಲನ, ಅರ್ಥಾತ್ ಆತ್ಮಸಾಕ್ಷಾತ್ಕಾರ) ಅಸಂಸಕ್ತಿ (ಉತ್ಥಾನವಾದಾಗಲೂ ವಿಷಯಾಸಕ್ತಿ ಹಾಗು ಭೋಗರತಿಗಳಿಲ್ಲದಿರುವದು) ಪದಾರ್ಥಾಭಾವನೆ (ಆತ್ಮಾನಾತ್ಮ ತತ್ವಗಳ ಭಿನ್ನತೆ ಅಡಗಿ, ಕೇವಲ ಅಖಂಡೈಕರಸರೂಪ ಚೈತನ್ಯದ ಭಾವನೆ ಹೊಂದಿರುವದು) ಹಾಗು ತುರಿಯ (ಆತ್ಮಭಾವನೆಯೂ ಇಲ್ಲದಾಗಿ ವಿಶ್ವವ್ಯಾಪಿ ಪರಬ್ರಹ್ಮನಲ್ಲಿ ಸಾಮರಸ್ಯ ಹೊಂದಿರುವದು) – ಇವು ಯೋಗದ ಸಪ್ತಭೂಮಿಕೆಗಳು. ಮೊದಲಿನ ಮೂರು ಸಾಧನಾ ಭೂಮಿಕೆಗಳು; ನಾಲ್ಕನೆಯದು ಸಾಕ್ಷಾತ್ಕಾರ ಭೂಮಿಕೆ; ಕೊನೆಯ ಮೂರು ಜೀವನ್ಮುಕ್ತಿ ಭೂಮಿಕೆಗಳು. ನಾಲ್ಕನೆಯ ಭೂಮಿಕೆಗೆ ಬರುವ ಮುನ್ನವೇ ದೇಹ ತೊರೆದವನಿಗೆ ಯೋಗಭ್ರಷ್ಟ ಎನ್ನುತಾರೆ.

(೨) ಪುಣ್ಯಕೃತಾನ್ ಲೋಕಾನ್ ಪ್ರಾಪ್ಯ...: ಯೋಗಭ್ರಷ್ಟನು ನರಕಗಾಮಿಯಾಗುವದಿಲ್ಲ. ಪುಣ್ಯ ಪುರುಷರಿಗೆ ತಕ್ಕ ಲೋಕಗಳಿಗೆ ಹೋಗುತ್ತಾನೆ. ಪ್ರಮಾಣ ವಚನ:

> "ತತಃ ಸುರವಿಮಾನೇಷು ಲೋಕಪಾಲಪುರೇಷು ಚ ।
> ಮೇರು ಪವನ ಕುಂಜೇಷು ರಮತೇ ರಮಣೀ ಸುಖಮ್ ॥
> ತತಃ ಸುಕೃತ ಸಂಭಾರೇ ದುಷ್ಕೃತೇ ಚ ಪುರಾಕೃತೇ।
> ಭೋಗಕ್ಷಯಾತ್ಪರಿಕ್ಷೀಣೇ ಜಾಯಂತೇ ಯೋಗಿನೋ ಭುವಿ॥"

ಪ್ರಾಣಹೋದನಂತರ ದೇವತಾ ವಿಮಾನದಲ್ಲಿ ಇಂದ್ರಲೋಕಕ್ಕೆ ಹೋಗಿ, ಯೋಗಭ್ರಷ್ಟನು ಶೀತಲ ಪವನವಾಟಿಕೆಗಳಲ್ಲಿ ಸೌಂದರ್ಯ ಸುಖವನ್ನು ಆಸ್ವಾದಿಸುತ್ತಾನೆ. ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯ ಪಾಪಗಳೆರಡೂ ಉಂಡು ಕ್ಷೀಣವಾಗಲಾಗಿ ಆ ಯೋಗಿಗಳು ಭೂಮಿಯಲ್ಲಿ ಹುಟ್ಟುತ್ತಾರೆ.

ಹೀಗೆ, ಮುಂದೆ ದಿವ್ಯ ವೈಭವ ಬರುವದರಿಂದ ಸಾಧಕನು ಮರಣ ಸಮಯದಲ್ಲಿ ದುಃಖಿಸಬೇಕಿಲ್ಲ. ಅವನಿಗೆ ಮರಣವೆಂದರೆ ಮಹಾನವಮಿ. ನಗು ನಗುತ್ತ ಸಾವನಪ್ಪಿ, ದೇಹ ತ್ಯಜಿಸಿ ದೇವತೆಗಳೊಂದಿಗೆ ದಿವ್ಯ ಲೋಕಕ್ಕೆ ಹೋಗುತ್ತಾನೆ. ಅಸಂಖ್ಯ ವರುಷಗಳವರೆಗೆ ಅಲ್ಲಿ ಭೋಗ ಉಂಡು ಮತ್ತೆ ಶುಚಿ ಶ್ರೀಮಂತರ ಮನೆಯಲ್ಲಿ ಜನ್ಮಿಸುತ್ತಾನೆ.

(೩) ಶುಚಿಯಾದ ಶ್ರೀಮಂತರು:-ದೇವನ ದೃಷ್ಟಿಯಲ್ಲಿ ಶ್ರೀಮಂತರ ಮನೆ ಯೋಗಿಗಳ ಜನ್ಮಸ್ಥಾನ. ಅಲ್ಲಿ ಹುಟ್ಟಿದವರೆಲ್ಲ ಪುಣ್ಯಾತ್ಮರು! ಆದರೆ ದುರ್ದೈವದಿಂದ ತಾವು ಯಾರು? ತಮ್ಮ ಜೀವನದ ಧ್ಯೇಯ ಏನು? ಎಂಬುದೇ ಅವರಿಗೆ ಗುರುತಿಲ್ಲ. ಉಳಿದವರಿಗಿಲ್ಲದ ಭೋಗ ವೈಭವವನ್ನು ತಮಗೇಕೆ ದೇವರಿತ್ತಿದ್ದಾನೆ ಎಂಬ ವಿಚಾರವೇ ಅವರ ತಲೆಯಲ್ಲಿ ಸುಳಿಯದು. ಪ್ರಾಪಂಚಿಕ ಅನಾನುಕೂಲತೆಯಾದರೆ ಆತ್ಮಚಿಂತನೆಗೆ ಅವಕಾಶ ಸಿಗುವದು ಕಷ್ಟವಾದೀತಲ್ಲ ಎಂಬ ಕಳಕಳಿಯಿಂದ ದೇವನು ಸಿರಿಯನಿತ್ತ. ಸಿರಿಯುಳ್ಳವರಾದರೋ ಆತ್ಮ ಚಿಂತನೆ

ಬಿಟ್ಟು ಧನ ಚಿಂತನೆಗೆ ತೊಡಗಿದರು. ಧಾನ್ಯದಲ್ಲಿ ನುಸಿ ಕುಳಿತಂತೆ ಮನೆ ಮಡದಿ ಭೂಮಿ ಧನ ಹಿಡಿದು ಕುಳಿತರು. ಅನುಭಾವಿಗಳ ನಾಲ್ಕು ಪವಿತ್ರ ಮಾತ ಕೇಳುವ ಇಚ್ಛೆ ಕೂಡ ಅವರಿಗೆ ಉಳಿಯಲಿಲ್ಲ. ಎಂಥ ಕ್ರೂರ ವಿಧಿ ಲಿಖಿತ!?

ಸಿರಿಯನ್ನು ಸಾರ್ಥಕಗೊಳಿಸಿಕೊಳ್ಳುವ ಬುದ್ಧಿ ಬರಬೇಕು. ಭಕ್ತಿ ಭಾಂಡಾರಿ ಬಸವಣ್ಣನು ಮಹಾರಾಜ್ಯದ ಮಹಾದಂಡನಾಯಕ. ಪ್ರಧಾನ ಮಂತ್ರಿ. ತಾನು ಪಡೆದ ಸಿರಿಯನ್ನೆಲ್ಲ ದೇವ ಸೇವೆ, ಸಮಾಜ ಸೇವೆ ಹಾಗು ಶರಣ ಸೇವೆಗಾಗಿ ಮೀಸಲಿರಿಸಿದ, ಶಿವಾನುಭವ ಮಂಟಪ ರಚಿಸಿದ. ಲಕ್ಷಾಂತರ ದೀನ ದಲಿತರಿಗೆ ಅನ್ನ ನೀಡಿ ಅಧ್ಯಾತ್ಮರಸವನುಣಬಡಿಸಿದ. ಇದು ನಿಜವಾದ ಸಂಪತ್ತಿನ ಉಪಯೋಗ. ಅವನು ತೋರಿದ ಮಾರ್ಗದಲ್ಲಿ ಧನಿಕರು ಹೆಜ್ಜೆ ಹಾಕಬೇಕು. ತಮ್ಮ ಗಳಿಕೆಯಿಂದ ಬಡವರಿಗೆ ಶಿಕ್ಷಣ, ಔಷಧಿ, ಅನ್ನ, ವಸ್ತ್ರ, ವಾಸಸ್ಥಾನಗಳನ್ನು ಕಲ್ಪಿಸಿಕೊಡಬೇಕು. ನೂರಾರು ಜನರಿಗೆ ಜೀವನದ ಅನು ಕೂಲತೆ ಕಲ್ಪಿಸಿ ಆಧ್ಯಾತ್ಮ ಶ್ರವಣಾದಿಗಳಿಗೆ ಅವರನ್ನು ಕರೆತರಬೇಕು. ಹೀಗೆ ಮಾಡಿದರೆ ತಮಗೂ ಶ್ರೇಯ, ಸಮಾಜಕ್ಕೂ ಕಲ್ಯಾಣ! ದೇವನು ಹೇಳಿದಂತೆ ಶ್ರೀಮಂತರು ಯೋಗ ಸಾಧನೆಗಾಗಿ ನಿಲ್ಲಬೇಕು; ತಾವು ಭೋಗ ಜೀವಿಗಳಲ್ಲ ಯೋಗಭ್ರಷ್ಟರು ಎಂಬುದನ್ನು ಅರಿತುಕೊಳ್ಳಬೇಕು. ಅಂಥವರು ಶುಚಿ.

ಸ್ವಾರ್ಥ ಬುದ್ಧಿಯುಳ್ಳ ಸಿರಿವಂತರು ಅಶುಚಿ; ನೀತಿ ಧರ್ಮ ಜ್ಞಾನ ವಿಮುಖರು. ಅವರಿಗೆ ಮಹಾತ್ಮರ ನುಡಿಗಳೆಂದರೆ ಅಪಥ್ಯ. ಬಸವಣ್ಣನವರು ಅವರ ಬಗ್ಗೆ ಖಡಾಖಂಡಿತವಾಗಿ ಹೇಳಿದ್ದಾರೆ:

> "ಹಾವ ತಿಂದವರ ನುಡಿಸಬಹುದು, ಗರ ಹೊಡೆದವರ ನುಡಿಸಬಹುದು. ಸಿರಿಗರ ಹೊಡೆದವರ ನುಡಿಸಲು ಬಾರದು, ನೋಡಯ್ಯಾ. ಬಡತನವೆಂಬ ಮಂತ್ರವಾದಿ ಬರಲು ಒಡನೆ ನುಡಿವರು; ಕೂಡಲ ಸಂಗಮ ದೇವಾ."

ಭೋಗಮತ್ತರಾದ ಅವರ ಮಾತು ದರ್ಪ ಅಧ್ಯತೆ ಅಹಂಕಾರಗಳಿಂದ ಕೂಡಿದೆ. ಅವರ ಮನೆಯಲ್ಲಿ ಹುಟ್ಟಿದ ಮಕ್ಕಳೂ ಹುಟ್ಟುತ್ತಲೇ ಗರ್ವಿಷ್ಠರು. ಪರೋ ಪಕಾರ ಬುದ್ಧಿ ಹೀನರು. ಆ ಮಕ್ಕಳು ಶಾಲೆ ಕಾಲೇಜುಗಳಿಗೆ ಹೋಗಿ ಪಡೆವ ವಿದ್ಯೆ ಅಷ್ಟಕ್ಕಷ್ಟೇಯಾದರೂ ಅಲ್ಲಿಯ ವಿದ್ಯಾ ವಾತಾವರಣವನ್ನು ಕೆಡಿಸದೆ ಬಿಡರು. ಅವರು ತಮ್ಮ ಭರ್ಜರಿ ಉಡುಗೆ, ಒನಪು–ವಯ್ಯಾರ, ಆಡಂಬರ- ವೈಭವ ಇವುಗಳ ಮೂಲಕ ವಿದ್ಯಾಮಂದಿರಗಳನ್ನು ತಮ್ಮ ಸಿರಿಯ ಪ್ರದರ್ಶನಾ ಮಂದಿರಗಳನ್ನಾಗಿ ಪರಿವರ್ತಿಸುತ್ತಾರೆ. ಅವರಿಗೆ ಇಂದ್ರಿಯಗಳಿಗೊಂದೊಂದು ಚಟ. ಅವರ ವಿಲಾಸೀ ಜೀವನ ಕಂಡು ಬಡವರ ಮಕ್ಕಳೂ ಅವರಂತೆ ಮೆರೆಯಬೇಕೆಂದು ಬಯಸುತ್ತಾರೆ. ಆ ಬಯಕೆ ಬಲಾಢ್ಯವಾದರೆ ಸುಳ್ಳು ವಂಚ ನೆಗಳ ಸಹಾಯದಿಂದ ಇದ್ದು ಬಿದ್ದ ತುಣುಕು ಹೊಲ, ಮುರುಕು ಮನೆಗಳನ್ನೇ ತಾಯಿ ತಂದೆಯರಿಂದ ಮಾರಿಸಿ ಮೆರೆಯುತ್ತಾರೆ. ಹೀಗೆ ಬಡವರನ್ನು ಹಾಸು

ಮಾಡಿದ ಪಾಪ ಅಶುಚಿ ಸಿರಿವಂತರ ತಲೆಗೆ! ಕಲಿಸುವ ಗುರುವರ್ಗ ಕೂಡ ಸಿರಿವಂತ ವಿಲಾಸಿ ವಿದ್ಯಾರ್ಥಿಗಳ ಕೈಗೊಂಬೆಯಾಗಿ ವರ್ತಿಸುತ್ತದೆ.

ತಮ್ಮ ಮಕ್ಕಳು ವಿದ್ಯಾವಂತರು ನೀತಿಶೀಲರು ಪರೋಪಕಾರಿಗಳು ಆಗಬೇಕೆಂದು ಎಷ್ಟು ಜನ ಧನಿಕರು ಹೃದಯತಃ ಇಚ್ಛಿಸುತ್ತಾರೆ? ತಮ್ಮ ಹುಡುಗರು ಉಳಿದವರಿಗಿಂತ ವಿಶೇಷವಾಗಿ ಕಾಣಬೇಕು, ನಿರುಪಯುಕ್ತ ಹಾಗು ಅನವಶ್ಯವಾದರೂ ಸ್ಕೂಟರ ಕಾರುಗಳಲ್ಲಿ ಓಡಾಡಬೇಕು, ರೇಡಿಯೋ ಟೆಲಿವ್ಹಿಜನ್ ಟೇಪರಿಕಾರ್ಡ ಕ್ಯಾಮರಾ ಇತ್ಯಾದಿ ಅತ್ಯಾಧುನಿಕ ಯಂತ್ರಗಳನ್ನು ಪಡೆದಿರಬೇಕು, ವಿವಿಧ ಕ್ಲಬ್ಬುಗಳಲ್ಲಿ ಸಂಘ ಸಂಸ್ಥೆಗಳಲ್ಲಿ ವಿಲಾಸೀ ಜನರೊಂದಿಗೆ ಬೆರೆಯಬೇಕು, ಸಿನೇಮಾ ಹಾಟೇಲ ನರ್ತನಾಲಯ ಸಂಗೀತಸಂಘ ಇಂಥ ಎಡೆಗಳಲ್ಲಿ ಸಂದರ್ಶನವೀಯಬೇಕು ಹೀಗೆಲ್ಲ ಬಯಸುತ್ತಾರೆ. ಶಾಲೆಯ ಚುನಾವಣೆಯಂಥ ನಿರರ್ಥಕ ಕಾರಣಗಳಿಗಾಗಿ ಸಾವಿರಾರು ಸಂಖ್ಯೆಯಲ್ಲಿ ಹಣ ಪೋಲಿ ಮಾಡಲು ಅವರ ವಿರೋಧವಿಲ್ಲ. ಅದೇ ಧನವನ್ನು ಬಡ ವಿದ್ಯಾರ್ಥಿಗಳ ವಿದ್ಯೆಗಾಗಿ ಅನುಕೂಲತೆಗಾಗಿ ಈಯಬೇಕೆಂಬ ಭಾವ ಅವರಿಗೆಂದಿಗೂ ಬರದು. ಅವರು, ಅವರ ಮನೆ, ಅವರ ಸಂಪದ, ಅವರ ಮಕ್ಕಳು ಮರಿಗಳು ಸಾಲಿಗೆ ಸಾಲೇ ಅಶುಚಿ! ಅವರ ದೇಹ ಇಂದ್ರಿಯ ಮನ ಬುದ್ಧಿಗಳೆಲ್ಲ ಅಶುಚಿ!

ಶುಚಿ ಸಿರಿವಂತರು ತದ್ವಿರುದ್ಧ. ಅವರು ಒಳ ಹೊರಗೆ ಪರಿಶುದ್ಧ. 'ತಮ್ಮ ಧನ ದೇವನ ದತ್ತಿ. ಬಡಜನತೆ ದೇವನ ಸಾಕಾರ ಮೂರ್ತಿ' ಈ ಭಾವದಿಂದ ತಮ್ಮ ಸಂಪತ್ತಿನ ಉಪಯೋಗ ಮಾಡುತ್ತಾರೆ. ದೈವೀ ಗುಣ ಸಮೂಹದಿಂದ ಅವರ ಹೃದಯ ತುಂಬಿದೆ. ಅವರದು ನಿಗರ್ವಿ ಜೀವನ. ನಯ ನಡತೆ, ಮೃದು ವಾಣಿ, ಸುಶೀಲ ಸ್ವಭಾವ! ಸಲ್ಲದ ಚಟಗಳಿಂದ ಬಹುದೂರ. ಅವರ ಮಕ್ಕಳಲ್ಲಿ ಜನ್ಮತಃ ಭಕ್ತಿ ಬೆಳೆದು ಬರುತ್ತದೆ. ತಾಯಿ ತಂದೆಯವರು ಮಕ್ಕಳ ಮನದಲ್ಲಿ ದಾನ ದಯೆ ಧರ್ಮ ವಿನಯಗಳನ್ನು ಬೆಳೆಸುತ್ತಾರೆ. ವಿದ್ಯಾ ಪ್ರೇಮಿಗಳೂ ದೀನ ದಲಿತರ ಸೇವಾಸಕ್ತರೂ ಆಗುವಂತೆ ಪ್ರೇರೇಪಿಸುತ್ತಾರೆ. ಸಿರಿಯ ಪ್ರದರ್ಶನದಿಂದ ಜನರ ಗೌರವ ಪಡೆಯದೆ ಗುಣ ಸಂಪದದಿಂದ ಜನರ ಪ್ರೇಮ ಗಳಿಸುತ್ತಾರೆ. ಅವರು ದೊಡ್ಡವರಾದರೆ ಸಮಾಜದ ನೆಚ್ಚಿನ ನೇತಾರರೆನಿಸುತ್ತಾರೆ.

ಶುಚಿ ಸಿರಿವಂತರ ಮನೆ ದೇವಾಲಯ, ಧರ್ಮದ ಶಾಲೆ, ಸಹನ ಸೌಜನ್ಯ ಸದಾಚಾರ ಸದ್ವಿಚಾರಗಳ ವಾಸಸ್ಥಾನ. ಅಲ್ಲಿ ಕಪಟಿ ನಿಂದಕ ನಾಸ್ತಿಕ ನೀತಿಹೀನರಿಗೆ ಸ್ವಾಗತವಿಲ್ಲ. ಸಾಧು ಸಂತ ಶರಣರಿಗೆ ಮುಕ್ತದ್ವಾರ. ಹಸಿದ ಹೊಟ್ಟೆಯ ಯಾವ ಭಿಕ್ಷುಕನೂ ಆ ಮನೆಯಿಂದ ಬರಿದೆ ಹಿಂದಿರುಗಲಾರ. ಆ ಮನೆ ತುಂಬ ತತ್ತ್ವಗ್ರಂಥಗಳು, ದೇವ ಮೂರ್ತಿಗಳು. ಶಾಸ್ತ್ರ ಪ್ರವಚನಗಳೆಂದರೆ ಮನೆಯವ

ರಿಗೆಲ್ಲ ಹಬ್ಬದೂಟ. ಅಪ್ಪಿ ತಪ್ಪಿಯೂ ಮನಸ್ತಾಪವಿಲ್ಲ, ಕದನವಿಲ್ಲ, ಪಕ್ಷಪಾತ ಚಾಡಿಹೋಕತನಗಳಿಗೆ ಎಡೆಯಿಲ್ಲ. ಅಲ್ಲಿ ನೆಲೆಸಿರುವ ಲಕ್ಷ್ಮಿ ತನ್ನ ಜನ್ಮ ಸಾರ್ಥಕವೆಂದು ಬಗೆಯುತ್ತಾಳೆ.

(೪) ಶುಚಿ ಶ್ರೀಮಂತರ ಮನೆಯಲ್ಲಿಯೇ ಯೋಗಭ್ರಷ್ಟನು ಹುಟ್ಟುವದೇಕೆ? ಅದಕ್ಕೆ ಕಾರಣ ಹಲವಾರು. ಆ ಮನೆಯ ಪರಿಸರ ಸಾಧನೆಗೆ ಅನುಕೂಲ. ಅನ್ನ ವಸ್ತ್ರದ ಚಿಂತೆಯಿಲ್ಲವಾಗಿ ಸಾಧನೆಗೆ ಸಾಕಷ್ಟು ವೇಳೆಯು ಉಳಿತಾಯ. ಸಂತ ಸಜ್ಜನರ ಸಂಪರ್ಕ ಹೆಚ್ಚು. ಸಮಾಜದ ಆದರವಿರುವದರಿಂದ ನೂರಾರು ಜನರನ್ನು ತನ್ನ ಸುನೀತಿಯಿಂದ ಒಲಿಸಿ ಆಧ್ಯಾತ್ಮ ಮಾರ್ಗಕ್ಕೆ ಹಚ್ಚಬಲ್ಲ. ಅರ್ಜುನ ಸಿರಿವಂತ; ಎಂತಲೇ ಶ್ರೀಕೃಷ್ಣನು ಅವನಿಗೆ ಗೀತೆ ಬೋಧಿಸಿದ; ಆ ಗೀತೆ ವಿಶ್ವವ್ಯಾಪಿಯಾಯ್ತು. ಇಂದು ರಾಜಕಾರಣಿಗಳು ಧಾರ್ಮಿಕರು ಉದ್ಯಮಿಗಳು ವ್ಯವಸಾಯಿಗಳು ಅದರಿಂದ ಪ್ರೇರಣೆ ಪಡೆಯುತ್ತಿದ್ದಾರೆ. ಒಂದು ವೇಳೆ ಒಬ್ಬ ಭಿಕ್ಷುಕನಿಗೆ ಗೀತೆ ಉಪದಿಷ್ಟವಾಗಿದ್ದರೆ ಮಹಾ ಜನತೆ ಈ ಗೀತೆಯನ್ನು ಉಪೇಕ್ಷಿಸುತ್ತಿದ್ದರು.

(೫) ಅಶುಚಿ ಸಿರಿವಂತರು ಇಲ್ಲದಾಗಿ ಎಲ್ಲ ಧನಿಕರು ಶುಚಿವಂತರಾದರೆ ನಾಡಿಗೆ ಹಿತ. ನಮ್ಮ ಶಾಲೆ ಕಾಲೇಜುಗಳಲ್ಲೆಲ್ಲ ಶುಚಿತ್ವ ನೀಡುವ ಶಿಕ್ಷಣ ದೊರೆಯಬೇಕು. ಆ ವಿದ್ಯಾನಿಲಯಗಳಿಂದ ಹೊರಬರುವ ಪಧವೀಧರರು ಪುಸ್ತಕ ವಿದ್ಯೆಯ ಭಾಂಡಾರುಗಳಾಗದೆ ಸತ್ಯ ದಯ ಪ್ರೇಮ ಸೇವೆ ಜ್ಞಾನಗಳ ಆಗರರಾಬೇಕು. ವಸ್ತ್ರ ಒಡವೆ ವಾಹನ ವಸತಿ ವಿಲಾಸಗಳ ಮೋಹ ಹಾಳಾಗಿ ಜನ ಹಾಗು ಜನಾರ್ದನನ ಅರ್ಚನೆ,ಸೇವೆ ಸರ್ವತ್ರ ಸಾಗಬೇಕು. ಇಂದಿನ ವಿದ್ಯಾ ಮಂದಿರಗಳು ಮನುಷ್ಯರನ್ನು ದಾನವರನ್ನಾಗಿಸುತ್ತವೆ ಎಂದೆನಿಸುತ್ತಿದೆ.

(೬) ಶುಚಿ ಸಿರಿವಂತನಾಗಿ ಹುಟ್ಟಿದ ಯೋಗಭ್ರಷ್ಟನು ವೈಭವದ ಮಧ್ಯದಲ್ಲಿದ್ದರೂ ನಿರ್ಮೋಹಿಯಾಗಿ ಬದುಕುತ್ತಾನೆ, ಮುಂದಿನ ಯೋಗಾಭ್ಯಾಸ ಮಾಡಿ ಒಂದಿಲ್ಲೊಂದು ದಿನ ತುರಿಯಾವಸ್ಥೆ ಪಡೆದೇ ತೀರುತ್ತಾನೆ.

ಸಂಬಂಧ:-ಯೋಗಭ್ರಷ್ಟರಲ್ಲಿ ಮೂರು ವಿಧ: (೧) ರಜೋಮಿಶ್ರ ಸಾತ್ವಿಕನು: ಮುಕ್ತಿ ಪಡೆವ ಒಲವಿದೆ, ಆದರೆ ಅವನ ಅಭ್ಯಾಸ ವಿರಾಗಗಳು ನಿರ್ಬಲ. ಅವನಿಗೆ ಸಂತ ಜನ ಸಂಗತಿ ದುರ್ಲಭ, ಆದ್ದರಿಂದ ಕಿಂಚಿತ್ ಭೋಗ ವಾಸನೆಯುಳ್ಳವನಾಗಿಯೇ ದೇಹ ತೊರೆಯುತ್ತಾನೆ. (೨)ಸಾತ್ವಿಕನು: ಭೋಗವಾಸನೆಯಿಲ್ಲ. ಅಭ್ಯಾಸ ವಿರಾಗಗಳು ಪ್ರಬಲ, ಗುರು ಸಾನಿಧ್ಯ ಸದಾಲಭ್ಯ. ಆತ್ಮಬುದ್ಧಿ ಜಾಗ್ರುತ. ಅನುದ್ಭೂತ ಭೋಗ ವಾಸನೆಯುವನಾಗಿ ದೇಹಬಿಡುತ್ತಾನೆ. (೩) ಸತ್ವತರನು: ಭೋಗ ವಾಸನೆಯ ಲವಲೇಶವಿಲ್ಲ. ಅಭ್ಯಾಸ ವಿರಾಗಗಳು ಅತಿ ಪ್ರಬಲ. ಗುರು ಕೃಪೆ ಆಗಿದೆ. ಯಾವುದೋ ಕಿಂಚಿತ್ ಕಾರಣದಿಂದಾಗಿ ಧ್ಯೇಯ ಮುಟ್ಟದೆ ಪ್ರತ್ಯ

ಗಾತ್ಮವಾಸನಾಯುಕ್ತನಾಗಿ ದೇಹ ತೊರೆಯುತ್ತಾನೆ. ಮೇಲಿನ ಮಂತ್ರದಲ್ಲಿ ಮೊದಲನೆಯ ಯೋಗಭ್ರಷ್ಟನು ಶುಚಿ ಸಿರಿವಂತ ಮನೆಯ ಮಗನಾಗಿ ಹುಟ್ಟುತ್ತಾನೆಂದು ಹೇಳಲಾಗಿದೆ. ಉಳಿದೀರ್ವರ ಗತಿ ಏನು? ಅದರ ಉತ್ತರ ಮುಂದಿನ ಮಂತ್ರದಲ್ಲಿ ಇದೆ.

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥೪೨॥**

**ಅರ್ಥ:**-ಅಥವಾ= ಯೋಗಭ್ರಷ್ಟನು, ದೀರ್ಘಕಾಲ ಸಾಧನೆಮಾಡಿ ದೇಹ ಬಿಟ್ಟ ಪಕ್ಷದಲ್ಲಿ, ಧೀಮತಾಂ =ಜ್ಞಾನಿಗಳಾದ ಯೋಗಿನಾಂ =ಯೋಗಿಗಳ ಕುಲೇ ಏವ= ವಂಶದಲ್ಲಿಯೇ ಭವತಿ= ಹುಟ್ಟುತ್ತಾನೆ, ಯದ್ ಈದೃಶಂ= ಯಾವ ಇಂಥ, ಏತತ್ ಜನ್ಮ=ಈ ಜನ್ಮ ಏದೆಯೋ(ಇದು), ಲೋಕೇ= ಜಗತ್ತಿನಲ್ಲಿ ಹಿ= ನಿಜವಾಗಿಯೂ ದುರ್ಲಭತರಂ= ದುರ್ಲಭತರವಾಗಿದೆ.

**ವಿವರಣೆ:**- (೧) **ಧೀಮಾನ್:**- ಆತ್ಮವಿದ್ಯಾವಂತ. ವಿದ್ಯೆಗಳ ರಾಜ ಆತ್ಮವಿದ್ಯೆ. ಅದಿಲ್ಲದ ಲೋಕ ವಿದ್ಯೆಗಳು ಅಪಥ್ಯ ಹಾಗು ನಿರುಪಯುಕ್ತ. ಅವು ಕದನಕ್ಕೆ ಹಾಗು ಮನುಕುಲದ ಭಿನ್ನ ಭಿನ್ನತೆಗೆ ಕಾರಣ; ಅಹಂಕಾರಕ್ಕೆ ಹೇತು. ಆತ್ಮವಿದ್ಯೆಯು ಶಾಂತಿಗೆ ಮೂಲ; ಅಹಂಕಾರ ವಿನಾಶಕ. ಅದನ್ನು ಗಳಿಸಿದಾಗ ಇನ್ನೊಂದು ವಿದ್ಯೆ ಗಳಿಸಲುಳಿಯದು. ಅಂಥ ಅಮೃತದಂಥ ವಿದ್ಯೆಯನ್ನು ಸಂಪಾದಿಸಿದ ಮಹಾತ್ಮರು ವಿದುಷರು, ಧೀಮಂತರು. ಅವರ ಮನೆ ಗುಡಿಸಲು. ಅವರ ಮನ ರಾಜ ಮಹಲು!

"ಮನೆ ನೋಡಾ, ಬಡವರು, ಮನ ನೋಡಾ, ಸಂಪನ್ನರು! ಧನ ನೋಡಾ, ಬಡವರು, ಘನ ಮನ ಸಂಪನ್ನರು. ಕೂಡಲ ಸಂಗನ ಶರಣರು ಕರುಳಿಲ್ಲದ ಕಲಿಗಳು! ಆರಿಗೂ ಉಪಮಿಸಬಾರದು."

ಏಕನಾಥ, ಮೋಳಿಗೆಯ ಮಾರಯ್ಯ, ತುಕಾರಾಮ, ಸುಕರಾತ ಮುಂತಾದವರು ಅಂಥ ಘನ ಮನದ ಸಂತರು. ಅವರು ಬಹು ದುರ್ಲಭ.

(೨) **ಯೋಗಿನಾಂ ಕುಲೇ ಭವತಿ:**- ಆ ಧೀಮಂತರು ದೇವನೊಳು ಬೆರೆದ ಮಹಾತ್ಮರು. ಭೋಗವಾಸನಾ ವಿರಹಿತನಾದ ಯೋಗಭ್ರಷ್ಟನು (ವಿಚಾರಣಾ ಭೂಮಿಕೆಯವನು) ಆ ಮಹಾತ್ಮರ ಮನೆಯಲ್ಲಿ ಹುಟ್ಟಿ ಬರುತ್ತಾನೆ. ಬಾಲಕನಿರುವಾಗಲೇ ತಾಯಿ, ತಂದೆಯರ ಅನುಗ್ರಹದಿಂದ ಬ್ರಹ್ಮವಿದ್ಯೆ ಪಡೆಯುತ್ತಾನೆ; ತನ್ನ ಆತ್ಮಜ್ಯೋತಿಯನ್ನು ನೋಡುತ್ತಾನೆ. ಉದಾ: ಮದಾಲಸಾ ಮಹಾರಾಣಿ, ಅನುಭಾವಿ. ತನ್ನ ಎರಡು ಮಕ್ಕಳಿಗೆ ಆತ್ಮವಿದ್ಯೆ ನೀಡಿದಳು. ಅವರು ೧೦-೧೬ ವರುಷದವರಾಗುತ್ತಿರುವಂತೆಯೇ ಮನೆ ತೊರೆದು ಬ್ರಹ್ಮಜ್ಞಾನೋಪದೇಶಕ್ಕೆ ಹೊರಡುತ್ತಿದ್ದರು. ಮೂರನೆಯ ಮಗನನ್ನು ರಾಜರ್ಷಿಯನ್ನಾಗಿ ಪರಿವರ್ತಿಸಿದಳು.

(೩) ತನುಮಾನಸ-ಯೋಗಭ್ರಷ್ಟನು:- ಅವನ ಅಂತರಂಗ ಸತ್ವತರ. ಅವನು ಮಾತ್ರ ದೇಹ ಬಿಟ್ಟ ಬಳಿಕ ತಿರುಗಿ ಜನ್ಮಕ್ಕೆ ಬರುವದಿಲ್ಲ. ಬ್ರಹ್ಮ, ಶಿವ ಮೊದಲಾದ ಇಚ್ಛಿತ ದೇವ ಲೋಕಗಳಿಗೆ ಹೋಗಿ ಅಲ್ಲಿಯ ಭೋಗಗಳನ್ನು ಅನುಭವಿಸಿ, ಸುರ ಸಿದ್ಧ ಮನು ಮುನಿ ಗಂಧರ್ವಾದಿಗಳಿಂದ ಆದರಿಸಲ್ಪಟ್ಟು ಅಲ್ಲಿಂದಲೇ ಮನಸ್ಸು ಬಯಸಿದೊಡನೆ ಮಹಾ ನಿರ್ವಾಣ ಹೊಂದುವನು.

ಭಗವಂತ:- "ಅರ್ಜುನ, ದೀರ್ಘ ಕಾಲದವರೆಗೆ ನಿಷ್ಠೆಯಿಂದ ಯೋಗ ಸಾಧನೆ ಮಾಡಿ ಬಳಿಕ ಸಾಧನಾ ಶೈಥಿಲ್ಯತೆ ಹೊಂದಿದ ಯೋಗಭ್ರಷ್ಟನು ಮತ್ತೆ ಈ ಭೂಮಿಗೆ ಹುಟ್ಟಿ ಬರುತ್ತಾನೆ. ಆದರೆ ಶುಚಿ ಶ್ರೀಮಂತರ ಮನೆಯಲ್ಲಲ್ಲ, ಅನುಭಾವಿಗಳಾದ ಯೋಗಿಗಳ ಕುಟಿರದಲ್ಲಿ. ಆ ಕುಟಿರದಲ್ಲಿ ಧನವಿಲ್ಲ ನಿಜ, ಜ್ಞಾನ ತುಂಬಿದೆ; ಭೋಗ ಸಾಮಗ್ರಿಗಳಿಲ್ಲ ನಿಜ, ಯೋಗ ಸಾಧನಾನುಕೂಲತೆಗಳಿವೆ. ಯೋಗಿಗಳಾದ ತಾಯಿ ತಂದೆಯರು ಬಾಲ ತನದಲ್ಲಿಯೇ ಆತ್ಮಜ್ಞಾನ ನೀಡುತ್ತಾರೆ. ದೇವ ಮಾರ್ಗ ತೋರುತ್ತಾರೆ. ಆದುದರಿಂದ ಹೊಳೆಯು ಕೂಡಿದ ನಿರ್ಝರಿಣಿಯೊಂದು ನಿರಾಯಾಸವಾಗಿ ಸಮುದ್ರ ಸೇರುವಂತೆ ಯೋಗಭ್ರಷ್ಟನು ಮಾತಾಪಿತರ ಸಹಾಯದಿಂದ ನಿರಾಯಾಸವಾಗಿ ಆತ್ಮಸಾಕ್ಷಾತ್ಕಾರ ಪಡೆಯುತ್ತಾನೆ!"

ಸಂಬಂಧ:— ಯೋಗಭ್ರಷ್ಟನ ಪುನಸ್ಸಾಧನೆಯ ವಿವರಣೆ ಮುಂದುವರೆಯುವದು.

ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥೪೩॥

ಅರ್ಥ:— ಕುರುನಂದನ=ಅರ್ಜುನ ತತ್ರ = ಹೊಸದಾಗಿ ಪ್ರಾಪ್ತವಾದ ದ್ವಿವಿಧ ಜನ್ಮದಲ್ಲಿ. ಪೌರ್ವದೇಹಿಕಂ = ಪೂರ್ವಜನ್ಮ ಸಂಬಂಧವಾದ, ತಂ ಬುದ್ಧಿ ಸಂಯೋಗಂ = ಆ ಬುದ್ಧಿಯ ಸಂಯೋಗವನ್ನು (ಬ್ರಹ್ಮವಿಷಯಯಾ ಬುದ್ಧ್ಯಾ ಸಂಯೋಗಂ = ಬ್ರಹ್ಮ ವಿಷಯಕ ಬುದ್ಧಿಯನ್ನು, ಅಥವಾ ಬ್ರಹ್ಮ ಪ್ರಕಾಶಗ್ರಾಹಿಯಾದ ಮತಿಯನ್ನು) ಲಭತೇ=ಹೊಂದುತ್ತಾನೆ. ತತಃ = ಆ ಮೇಲೆ ಸಂಸಿದ್ಧೌ ಚ = ಮೋಕ್ಷಕ್ಕಾಗಿ ಭೂಯಃ= ಮತ್ತೆ ಯತತೇ = ಪ್ರಯತ್ನಿಸುತ್ತಾನೆ.

ವಿವರಣೆ:— ವಿದ್ಯಾರ್ಥಿಯು ಓದಿ ಮಲಗುತ್ತಾನೆ; ಎದ್ದ ಬಳಿಕ ಹಿಂದಿನದನ್ನು ಕ್ಷಿಪ್ರದಲ್ಲಿ ಸ್ಮರಿಸಿ ಓದನ್ನು ಮುಂದುವರಿಸುತ್ತಾನೆ. ನಿದ್ರೆಯು ಸ್ಮರಣೆಯನ್ನು ನಾಶ ಮಾಡುವದಿಲ್ಲ. ಅದರಂತೆ ಜನ್ಮಾಂತರ. ಒಂದು ಜನ್ಮ ಕಳೆದು ಇನ್ನೊಂದು ಜನ್ಮ ಬಂದಾಗ ಹಿಂದಿನ ಜನ್ಮದ ಸಾಧನೆಯು ಪೂರ್ಣ ನಾಶವಾಗುವದಿಲ್ಲ. ಇಷ್ಟೇ, ಕೆಲವರಲ್ಲಿ ಅದು ಮಬ್ಬಾಗಿದ್ದರೆ, ಇನ್ನು ಕೆಲವರಲ್ಲಿ ಅದು ಸ್ಫುಟವಾಗಿರುತ್ತದೆ. ಉದಾ: ನಾರದ ಮಹರ್ಷಿ ಸಕಲ ಗ್ರಂಥಗಳನ್ನು ಓದಿ ಮುಗಿಸುವ ಪಣ ತೊಟ್ಟು ನೂರು ಜನ್ಮಗಳ ತುಂಬ ಅಭ್ಯಸಿಸಿದರು. ಒಂದು

ಜನ್ಮದಲ್ಲಿ ಓದಿದ್ದನ್ನು ಮತ್ತೆ ಓದುತ್ತಿರಲಿಲ್ಲ. ಅಷ್ಟು ಸ್ಫುಟವಾದ ಸ್ಮರಣಶಕ್ತಿ ಪಡೆದಿದ್ದರು. ನಮ್ಮ ಸ್ಮರಣ ಶಕ್ತಿ ಬಹು ಮಂದ. ಹಿಂದಿನ ಜನ್ಮದಲ್ಲಿ ಇದ್ದೆವು ಎನ್ನುವದು ಕೂಡ ನೆನಪಿಗೆ ಬರುವದಿಲ್ಲ.

ಸಾಧಕನ ಹೃದಯ ನಿರ್ಮಲವಾದುದರಿಂದ ಅವನು ಯೋಗಭ್ರಷ್ಟನಾಗಿ ಮತ್ತೆ ಹುಟ್ಟಿದಾಗ ಹಿಂದಿನ ಸಾಧನೆಯನ್ನು ಪೂರ್ತಿಯಾಗಿ ಸ್ಮರಿಸಿಕೊಂಡು ಮುಂದಿನ ಸಾಧನೆಗೆ ತೊಡಗುತ್ತಾನೆ. ಅನುಕೂಲವಾದ ಪ್ರೇರಕ ವಾತಾವರಣವು ಅವನ ಪೂರ್ವ ಸಂಸ್ಕಾರಗಳನ್ನು ಜಾಗ್ರತಗೊಳಿಸಲು ಸಹಾಯ ಮಾಡುತ್ತದೆ. ಹಿಂದಿನದೆಲ್ಲ ಮನಸ್ಸಿನಲ್ಲಿ ಮೂಡುವದರಿಂದ ಪ್ರಸ್ತುತ ಬದುಕಿನ ಬೆಲೆಯನ್ನು ಅರಿತು, ಒಂದೊಂದು ಕ್ಷಣ ಕೂಡ ವ್ಯರ್ಥ ವ್ಯಯಿಸದೆ ಗುರಿಯತ್ತ ಧಾವಿಸು ತ್ತಾನೆ. ಆಹಾರ ನಿದ್ರೆ ವ್ಯವಹಾರಗಳನ್ನು ಬಹು ಮಿತಗೊಳಿಸಿ ಶಾಸ್ತ್ರ ಶ್ರವಣ ಮನನ ನಿಧಿಧ್ಯಾಸಗಳಲ್ಲಿ ಅಮಿತೋತ್ಸಾಹದಿಂದ ತೊಡಗುತ್ತಾನೆ. ಅವನ ಕನಸು ಮನಸಿನಲ್ಲಿ ಕೇವಲ ದೇವ ಚಿಂತನೆ ತುಂಬಿದೆ. ರಾಗ ದ್ವೇಷಗಳು ತಮ್ಮಷ್ಟಕ್ಕೆ ತಾವೆ ಕ್ಷಯಿಸಿ ಮಾನಸಿಕ ತನುತ್ವ ಅಂದರೆ ಸಾತ್ವಿಕತೆ ಅಳವಡುತ್ತದೆ. ಆ ಸಾತ್ವಿಕ ಮನದಲ್ಲಿ ಪ್ರತ್ಯಗಾತ್ಮಾಭಿವ್ಯಕ್ತಿ ಸಮನಿಸುತ್ತದೆ. ಅದೇ ಆತ್ಮ ಸಾಕ್ಷಾತ್ಕಾರ! ಸತ್ವಾಪತ್ತಿ ಭೂಮಿಕೆ.

ಅಲ್ಲಿಂದ ಮತ್ತೆ ಬಾಹ್ಯ ಭಾನಕ್ಕೆ ಆ ಸಮಾಧಿ ಯೋಗಿಯು ತಾನಾಗಿಯೇ ಬಂದರೆ ಮತ್ತೆ ಸಂಸಾರದ ವಿವಿಧ ವಿಷಯಗಳಲ್ಲಿ ಆಸಕ್ತಿ ತಾಳಲಾರ. ಅದಕ್ಕೆ ಅಸಂಸಕ್ತಿ ಭೂಮಿಕೆ ಎಂದು ನಾಮ. ಅವನ ಸಮಾಧಿ ವೃತ್ತಿ ಬಹು ಗಾಢವಾ ಗಿದ್ದು ಪರರ ಆಗ್ರಹದಿಂದ ಉತ್ಥಾನ ಹೊಂದುತ್ತಿದ್ದರೆ ಅವನಿಗೆ ಪದಾರ್ಥಾ ಭಾವನಾ ಭೂಮಿಕೆ ದೊರಕಿದೆ ಎಂದರ್ಥ. ಸಮಾಧಿಯು ಚಿರಂತನವಾದರೆ, ಸಮಾಧಿಸ್ಥ ಯೋಗಿಯು ಸದಾ ಸ್ವಾತ್ಮಾನಂದಿಯಾದರೆ, ಅದು ತುರಿಯ ಭೂಮಿಕೆ.

ಭಗವಂತ:– "ಯೋಗಭ್ರಷ್ಟನು ಶುಚಿವಂತ ಶ್ರೀಮಂತರ ಮನೆಯ ಲ್ಲಿಯೋ ಯೋಗಿಗಳ ಕುಟಿರದಲ್ಲಿಯೋ ಜನ್ಮತಾಳುತ್ತಾನೆಯಷ್ಟೆ? ಆ ಬಳಿಕ ಪೂರ್ವ ಜನ್ಮದ ವಿನಿರ್ಮಲ ಸಾಧನಾ ಮತಿಯನ್ನು ಪಡೆದು ಮತ್ತೆ ದೇವ ಮಾರ್ಗದಲ್ಲಿ ಯಾತ್ರೆ ಪ್ರಾರಂಭಿಸುತ್ತಾನೆ. ಮೋಕ್ಷ ಮಂದಿರ ಸೇರುವವರೆಗೂ ಅವಿಶ್ರಾಂತವಾಗಿ ಪ್ರಯಾಣ ಮಾಡುತ್ತಾನೆ; ಅದೂ ದ್ವಿಗುಣಿತ ಉತ್ಸಾಹ ದಿಂದ!"

ಸಂಬಂಧ:– ಯೋಗಭ್ರಷ್ಟ ಸಾಧಕನು ಪುನಃ ಹುಟ್ಟಿದಾಗ ವಿಷಯಗಳ ವ್ಯಾಮೋಹಕ್ಕೆ ಅದೇಕೆ ಸಿಲುಕುವದಿಲ್ಲ? ಅವನು ಮೊದಲಿಗಿಂತಲೂ ಅಧಿಕ ಪ್ರಯತ್ನ ಮಾಡಲು ಕಾರಣವೇನು?

ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।
ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥೪೪॥

**ಅರ್ಥ:–** ಅವಶಃ ಅಪಿ = (ಒಂದು ವೇಳೆ) (ವೈಷಯಿಕ ಪರಿಸರದ ಬಲವಾದ ಪರಿಣಾಮದಿಂದ ಆತ್ಮಯೋಗ ಸಾಧನೆಗೆ ತೊಡಗದಿದ್ದರೂ ಅಂದರೆ) ವಶವಾಗದಿದ್ದರೂ, ಸಃ = ಆ ಯೋಗಭ್ರಷ್ಟನು ತೇನ ಪೂರ್ವಾಭ್ಯಾಸೇನ ಏವ =ಆ ಪೂರ್ವಕೃತ ಅಭ್ಯಾಸದ ಬಲದಿಂದಲೇ ಹ್ರಿಯತೇ = ( ಆತ್ಮಸಾಧನಾ ಯೋಗದತ್ತ ) ಸೆಳೆಯಲ್ಪಡುತ್ತಾನೆ. ಯೋಗಸ್ಯ ಜಿಜ್ಞಾಸುಃ ಅಪಿ = (ಅವನಿನ್ನೂ ಪೂರ್ತಿ ಯೋಗಿಯಾಗಿರದಿದ್ದರೂ ಅಂದರೆ) ಯೋಗದ ಜಿಜ್ಞಾಸುವಾಗಿದ್ದರೂ ಶಬ್ದಬ್ರಹ್ಮಾತಿವರ್ತತೇ = ವೇದೋಕ್ತ ಕರ್ಮ ಫಲಗಳನ್ನು ತ್ಯಜಿಸುತ್ತಾನೆ. (ಆ ಫಲಕ್ಕಿಂತ ಅಧಿಕವಾದ ಫಲ ಪಡೆದು ಮುಕ್ತನಾಗುತ್ತಾನೆ)

**ವಿವರಣೆ:–** ಯೋಗಭ್ರಷ್ಟನು ಪುನರ್ಜಾತನಾದಾಗ ಸುತ್ತಲಿನ ವೈಭವಗಳ ಸೌಂದರ್ಯಕ್ಕೆ ಆಕರ್ಷಣೆಗೆ ಮನಸೋಲುವದು ಅಸಹಜವೇನಲ್ಲ. ಅಂಥ ಪ್ರಸಂಗದಲ್ಲೂ ಹಿಂದೆ ಮಾಡಿದ ಸಾಧನೆಯ ಸಂಸ್ಕಾರ ಬಲಾಢ್ಯವಿರುವದರಿಂದ ಅವನನ್ನು ಮತ್ತೆ ಯೋಗ ಪಥಕ್ಕೆ ಎಳೆದು ತರುತ್ತದೆ. ಸಾಧನೆಗೆ ತೊಡಗಿಸುತ್ತದೆ. ಉದಾ: ಪ್ರಹ್ಲಾದ ಯೋಗಭ್ರಷ್ಟ. ರಾಕ್ಷಸೇಂದ್ರನ ಮನೆಯಲ್ಲಿ ಜನಿಸಿದ. ಆರ ಮನೆಯಲ್ಲಿ ಭೋಗ ವಿಲಾಸ. ವಿಷಯೋನ್ಮಾದದ ಪರಿಸರ. ಅಂಥದರಲ್ಲೂ ಪ್ರಹ್ಲಾದನು ದೇವ ಚಿಂತನೆಗೆ ತೊಡಗಿದ. ಅದು ಪೂರ್ವ ಸಂಸ್ಕಾರದ ಪ್ರಭಾವ. ಕಪಿಲನು ಬಾಲಕನಿರುವಾಗಲೇ ಮನೆ ತೊರೆದ. ತಾಯಿಯ ಅಪಾರ ವಾತ್ಸಲ್ಯಕ್ಕೆ ಮನಸೋಲದೆ ಶಂಕರಾಚಾರ್ಯ ಗುರುಸಾನಿಧ್ಯ ಸೇರಿದ. ಅಕ್ಕಮಹಾದೇವಿಗೆ ನಲ್ಮೆಯ ತಾಯಿ ತಂದೆಯರು; ಒಲುಮೆಯ ಬಂಧುಗಳು, ಶಾರೀರಿಕ ಸೌಷ್ಟತೆ, ಕರಗದ ಸಂಪತ್ತು. ಅಂಥದರಲ್ಲೂ ವಿರಾಗದ ಸಂಸ್ಕಾರ ತಲೆ ಎತ್ತಿತು. ಅವಳನ್ನು ಶ್ರೀಶೈಲದ ಮಲ್ಲಿಕಾರ್ಜುನನತ್ತ ಕರೆದೊಯ್ದಿತು. ನಮ್ಮ ಪೂರ್ವದ ಸಂಸ್ಕಾರ ಬಲವಾಗಿದ್ದರೆ ಪ್ರಪಂಚವನ್ನು ಬಿಡಲಾರೆವೆಂದರೂ ಅದು ಬಿಡಿಸುವದು; ಬಿಡಿಸಿಯೇ ತೀರುವದು!

(೨) ಯೋಗಭ್ರಷ್ಟನು ಮತ್ತೆ ಸಾಧನೆಗೆ ತೊಡಗುತ್ತಾನೆ. ದೇವನಲ್ಲಿ ಸಾಮರಸ್ಯ ಹೊಂದಿಯೇ ತೀರಬೇಕೆಂಬ ಇಚ್ಛೆ ಬಲಗೊಳ್ಳುತ್ತದೆ. ಆ ಇಚ್ಛೆಯಿಂದ ಪ್ರೇರಿತನಾಗಿ, ಇಹ ಪರ ಸುಖಗಳನ್ನು ಬದಿಗೆ ಸರಿಸಿ, ದೇವನತ್ತ ಸಾಗುವನು.

**ಸಂಬಂಧ:–** ಯೋಗಿಗೆ ಪರಮ ಗತಿ ನಿಶ್ಚಿತ ಎಂಬ ಸಂಗತಿಯನ್ನು ವಿವರಿಸಲಾಗಿದೆ.

ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧ ಕಿಲ್ಬಿಷಃ ।
ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥೪೫॥

**ಅರ್ಥ:–** ತು = ಆದರೆ ಪ್ರಯತ್ನಾತ್ ಯತಮಾನಃ = ಪ್ರಯತ್ನಪೂರ್ವಕ

ಗಳು ವೃತ್ತಿಗಳು; ಶಮ ದಮಾದಿಗಳನ್ನು ಬೆಳೆಸಿಕೊಂಡಾಗ ಆ ದುಷ್ಟ ವೃತ್ತಿಗಳು ಅಡಗುತ್ತವೆ. ಹೀಗೆ ಮಾಡುವದರಿಂದ ಮನಸ್ಸು ನಿಲ್ಲುವದು. ತತ್ತ್ವಗಳಲ್ಲಿ ಎರಡು ವಿಧ: ಒಂದು ಪ್ರಾಕೃತಿಕ, ಇನ್ನೊಂದು ಚೇತನಾತ್ಮಕ. ಪ್ರಾಕೃತಿಕ ತತ್ತ್ವವು ಗುಣಾತ್ಮಕ, ಕ್ರಿಯಾಶೀಲ ಹಾಗು ಅನಿತ್ಯ. ಚೇತನಾತ್ಮಕ ತತ್ತ್ವವು ನಿರ್ಗುಣ ನಿಷ್ಕ್ರಿಯ ಮತ್ತು ನಿತ್ಯ. ಪ್ರಪಂಚವೆಲ್ಲ ಪ್ರಾಕೃತಿಕ; ದೇವನೇ ಚೇತನಾ ಸ್ವರೂಪ. ನಾನು ದೇವರೂಪ, ದೇಹಾದಿರೂಪನಲ್ಲ. ಎಂಬ ವಿವೇಚನೆಯೇ ಜ್ಞಾನೋಪಾಯ. ಈ ಜ್ಞಾನದಿಂದಲೂ ಮನಸ್ಸು ಸ್ಥಿರವಾಗುತ್ತದೆ. ಒಂದು ಆಧಾರ ಮಂತ್ರ ಇಲ್ಲಿದೆ:

"ದ್ವೌ ಕ್ರಮೌ ಚಿತ್ತ ನಾಶಸ್ಯ ಯೋಗೋ ಜ್ಞಾನಂ ಚ ರಾಘವ।
ಯೋಗೋ ವೃತ್ತಿ ನಿರೋಧೋ ಹಿ ಜ್ಞಾನಂ ಸಮ್ಯಗವೇಕ್ಷಣಮ್ ॥
ಅಸಾಧ್ಯಃ ಕಸ್ಯಚಿದ್ಯೋಗಃ ಕಸ್ಯಚಿತ್ತತ್ತ್ವ ನಿಶ್ಚಯಃ ।
ಪ್ರಕಾರೌ ದ್ವೌ ತತೋ ದೇವೋ ಜಗಾದ ಪರಮಶ್ಶಿವಃ ॥" (ಯೋಗವಾಸಿಷ್ಠ).

ಚಿತ್ತನಾಶಕ್ಕೆ (ಚಿತ್ತ ಸಂಯಮಕ್ಕೆ) ಎರಡು ಕ್ರಮಗಳು (ಉಪಾಯಗಳು). ಒಂದು: ಯೋಗ, ಇನ್ನೊಂದು: ಜ್ಞಾನ. ರಾಘವನೆ, ಸರ್ವವೃತ್ತಿ ನಿರೋಧವು ಯೋಗ. ಸಮ್ಯಗ್ದರ್ಶನವು ಜ್ಞಾನ. ಕೆಲವರಿಗೆ ಯೋಗವು ಕಠಿಣ; ಕೆಲವರಿಗೆ ಜ್ಞಾನವು ಕಠಿಣ. ಆದ್ದರಿಂದ ಪರಶಿವನು ಎರಡೂ ಉಪಾಯಗಳನ್ನು ಹೇಳಿದ.

ಸಂಬಂಧ:- ಅರ್ಜುನನಿಗೆ ಮತ್ತೆ ಒಂದು ಸಂದೇಹ ಉಂಟಾಯ್ತು.

**ಅರ್ಜುನ ಉವಾಚ**

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥೩೭॥**

ಅರ್ಥ:- ಶ್ರದ್ಧಯಾ ಉಪೇತಃ=ಶ್ರದ್ಧೆಯುಳ್ಳವನು, ಅಯತಿಃ=ಯತ್ನಹೀನನು ಯೋಗಾಚ್ಚಲಿತ ಮಾನಸಃ = ಯೋಗಸಾಧನೆಯಿಂದ ಅನ್ಯತ್ರ ಚಲಿಸಿದ ಮನಸ್ಸುಳ್ಳವನು ಯೋಗ ಸಂಸಿದ್ಧಿಂ ಅಪ್ರಾಪ್ಯ = ಯೋಗ ಸಂಸಿದ್ಧಿಯನ್ನು ಪಡೆಯದೆ (ಇದ್ದರೆ), ಕೃಷ್ಣ= ಕೃಷ್ಣನೆ, ಕಾಂ ಗತಿಂ ಗಚ್ಛತಿ =ಯಾವ ಗತಿಯನ್ನು ಹೊಂದುತ್ತಾನೆ?

ವಿವರಣೆ:- ಅರ್ಜುನ:- "ಭಗವಂತನೇ, ಒಬ್ಬ ಸಾಧಕನು ದೇವನಲ್ಲಿ ಹಾಗು ಯೋಗಸಾಧನೆಯಲ್ಲಿ ಪೂರ್ಣ ಶ್ರದ್ಧೆ ತಳೆದಿದ್ದಾನೆ. ಚಿರಂತನ ಶಾಂತಿ ಪಡೆಯಬೇಕೆಂಬ ಅಭಿಲಾಷೆಯೂ ಅವನಿಗಿದೆ. ಆದರೆ ಪರಿಸ್ಥಿತಿಯ ಅನಾನುಕೂಲತೆ ದೈಹಿಕ ದೌರ್ಬಲ್ಯ ಮತ್ತು ಮಾನಸಿಕ ಚಂಚಲತೆಗಳಿಂದಾಗಿ ಪ್ರಯತ್ನ ಮಾಡಲಿಲ್ಲ. ಅವನ ವಿರಾಗ ಸಡಲಿಸಿತು. ದೇವನನ್ನು ನೆನೆಯಬೇಕಾದ ಮನಸ್ಸು ಬಹಿರ್ಮುಖವಾಯ್ತು. ಯೋಗ ಸಿದ್ಧಿಸದ ಈ ವ್ಯಕ್ತಿಯು ಯಾವ ಗತಿ ಹೊಂದುತ್ತಾನೆ."

**ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**

ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥೩೮॥

**ಅರ್ಥ:-** ಬ್ರಹ್ಮಣಃ ಪಥಿ ವಿಮೂಢಃ = ಬ್ರಹ್ಮಪ್ರಾಪ್ತಿಯ ಮಾರ್ಗದಲ್ಲಿ ತಪ್ಪಿದವನು, ಉಭಯ ಭ್ರಷ್ಟಃ = ಸಕಾಮ ಕರ್ಮಪ್ರಾಪ್ಯ ಸ್ವರ್ಗ ಮತ್ತು ನಿಷ್ಕಾಮ ಕರ್ಮ ಪ್ರಾಪ್ಯ ಮೋಕ್ಷ ಎರಡನ್ನೂ ಕಳೆದುಕೊಂಡವನು, ಅಪ್ರತಿಷ್ಠಃ = ಆಶ್ರಯವಿಲ್ಲದವನಾಗಿ, ಛಿನ್ನಾಭ್ರಮಿವ= ತುಂಡು ಮೋಡದಂತೆ ಕಚ್ಚಿತ್ ನ ನಶ್ಯತಿ = ನಾಶವಾಗುವದಿಲ್ಲವೆ?

ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।

ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥೩೯॥

**ಅರ್ಥ:-** ಮೇ= ನನ್ನ ಏತತ್ ಸಂಶಯಂ = ಈ ಸಂಶಯವನ್ನು ಅಶೇಷತಃ = ಪೂರ್ಣವಾಗಿ ಛೇತ್ತುಂ =ನಿವಾರಿಸಲು ಅರ್ಹಸಿ = ಸಮರ್ಥನು ನೀನು. ಹಿ = ಏಕೆಂದರೆ ತ್ವತ್ ಅನ್ಯಃ = ನಿನಗಿಂತ ಬೇರೆ ಸಮರ್ಥರಾರೂ ನ ಉಪಪದ್ಯತೇ = ಸಿಗುವದೇ ಇಲ್ಲ.

**ವಿವರಣೆ:-** ಅರ್ಜುನ:- "ಕೃಷ್ಣ, ಮಹಾ ಮೇಘ ಸಮೂಹದಿಂದ ಒಡೆದು ಹೋದ ಮೇಘದ ತುಂಡೊಂದು ಭೂಮಿಗೂ ಬೀಳದೆ, ಆ ಸಮೂಹವನ್ನೂ ಕೂಡದೆ ನಡುವೆಯೇ ಮಾರುತನಿಗೆ ಸಿಕ್ಕು ನಾಶವಾಗಿ ಬಿಡುವಂತೆ, ಮಧ್ಯದಲ್ಲಿಯೇ ಸಾಧನೆಯನ್ನು ಬಿಟ್ಟ ಸಾಧಕನು ಭೋಗ ಮೋಕ್ಷಗಳೆರಡರಿಂದಲೂ ವಂಚಿತನಾಗುತ್ತಾನೆಯೆ? ಅವನು ಯೋಗದ ಕೊನೆಯ ಹಂತ ರುವ ಮುಂಚೆಯೇ ಅಭ್ಯಾಸ ವಿಮುಖನಾದುದರಿಂದ ಮೋಕ್ಷ ದೊರೆಯದು. ಸಕಾಮ ಕರ್ಮ ಎಸಗಿಲ್ಲವಾಗಿ ಸ್ವರ್ಗ-ಭೋಗ ಸಿಗದು. ಹೀಗೆ ಎರಡನ್ನೂ ಕಳೆದುಕೊಂಡು ನಿರಾಶ್ರಿತನಾಗಿ ಆ ಸಾಧಕ ವಿನಾಶವನಪ್ಪಬೇಕಾಗುವದೆ? ಅತೋ ಭ್ರಷ್ಟಃ ತತೋ ಭ್ರಷ್ಟಃ; ಸಾಂಸಾರಿಕ ಸುಖವೂ ಇಲ್ಲ; ಅಮರ ಸೌಖ್ಯವೂ ಇಲ್ಲ. ಇಂಥ ಸಾಧಕನ ಗತಿ ಏನು?

"ಕೃಷ್ಣ, ನೀನು ಸರ್ವಶಕ್ತಿಮಂತ. ನಿನ್ನ ಹೆಸರೇ ಸೂಚಿಸುವಂತೆ (ಭಕ್ತಾನಾಂ ಪಾಪಾದಿ ದೋಷಾನ್ ನಿವಾರಯಿತುಂ ಅಶಕ್ಯಾನಪಿ ಕೃಷತಿ ನಿವಾರಯತಿ, ತೇಷಾಮೇವ ಸರ್ವಥಾ ಪ್ರಾಪ್ತುಮಶಕ್ಯಾನಪಿ ಪುರುಷಾರ್ಥಾನ್ ಆಕರ್ಷತಿ ಪ್ರಾಪಯತಿ ಇತಿ ಕೃಷ್ಣ) ಭಕ್ತರ ಪಾಪಾದಿ ದೋಷಗಳನ್ನು ನಾಶ ಮಾಡುವದು ಸರ್ವಥಾ ಅಶಕ್ಯವಾದರೂ ನೀನು ನಾಶಮಾಡುವಿ. ಪುರುಷಾರ್ಥಗಳನ್ನು ಗಳಿಸುವದು ಅಸಾಧ್ಯವಾದರೂ ಆ ಭಕ್ತರಿಗಾಗಿ ಪ್ರಾಪ್ತಿಸಿಕೊಡುವಿ. ದೇವಾ, ನಿನ್ನ ಹಿರಿಮೆ ಅಪಾರ. ನನ್ನ ಸಂದೇಹ ನಿವಾರಣೆ ಮಾಡುವ ಸಾಮರ್ಥ್ಯ ನಿನಗಲ್ಲದೆ ಇನ್ನಾರಿಗಿರಬಲ್ಲದು? ಲೋಕದ ಜನ, ಸ್ವರ್ಗದ ದೇವತೆಗಳು, ಧರ್ಮಪಾಲಕ ಗುರುಗಳು ಕೂಡ ಪ್ರಪಂಚದತ್ತ ಸೆಳೆಯುತ್ತಾರೆ. ಆತ್ಮ ಸಾಕ್ಷಾತ್ಕಾರದ ಮಾರ್ಗ ಸಾಮಾನ್ಯರಿಗೆ ಅಸಾಧ್ಯ; ಆ ಮಾರ್ಗ ತುಳಿದು ಗುರಿ ತಲುಪದೆ ಬಳಲುವದಕ್ಕಿಂತ ಸಂಸಾರ ಮಾಡುವದೇ ಹಿತ; ಎಂದು ಮುಂತಾಗಿ ಉಪದೇಶಿಸಿ ಧೈರ್ಯಗುಂದಿಸುತ್ತಾರೆ, ದೇವಾ ನೀನೇ ದಾರಿ ತೋರು. ನನ್ನ

ಸಃ ಕರ್ಮಿಭ್ಯಃ ಅಧಿಕಃ:- ದೇಹಾದಿಗಳಿಂದ ಜರಗುವ ಕ್ರಿಯೆಗಳು ಕರ್ಮ. ಆಸಕ್ತಿ, ಅಹಂಭಾವ ಮತ್ತು ಫಲಾಭಿರತಿ ಇಲ್ಲದೆ ಮಾಡುವದು ಸಾತ್ವಿಕ ಕರ್ಮ. ಆಸಕ್ತಿ, ಅಹಂಭಾವ, ಮತ್ತು ಫಲಾಭಿರತಿಯಿಂದ ಮಾಡುವದು ರಾಜಸಿಕ ಕರ್ಮ. ಹಿಂಸೆ ವ್ಯಾಮೋಹ ಮತ್ತು ಮೌಢ್ಯತೆಯಿಂದ ಮಾಡುವದು ತಾಮಸಿಕ ಕರ್ಮ. ಈ ಮೂರು ಪ್ರಕಾರದ ಕರ್ಮಗಳನ್ನಾಚರಿಸುವ ಕರ್ಮಿಗಳಿಗಿಂತ ಯೋಗಿಯು ಅಧಿಕ.

ಭಗವಂತ:- "ಅರ್ಜುನ, ಯೋಗಿಯು ತಪಸ್ವಿ ಜ್ಞಾನಿ ಕರ್ಮಿಗಳಿಗಿಂತ ಸರ್ವಶ್ರೇಷ್ಠನೆಂದು ಖಚಿತವಾಗಿ ತಿಳಿದುಕೊ. ಯಾಕೆಂದರೆ ಆ ಮೂವರು ಗುಣಗಳ ಬಂಧನೆಯಲ್ಲಿ ಸಿಲುಕಿದ್ದಾರೆ. ಲೌಕಿಕ ಸಂಪದ, ಮಾನ, ಪೂಜೆಗಳ ಆಕರ್ಷಣೆಗೆ ಒಳಗಾಗಿದ್ದಾರೆ. ಯೋಗಿ ಅಂತಲ್ಲ. ಅವನು ನಿಸ್ತ್ರೈಗುಣ್ಯನಾಗಿದ್ದಾನೆ. ಸಕಲ ಬಂಧನಗಳಿಂದ ಮುಕ್ತನಾಗಿದ್ದಾನೆ. ಆದ್ದರಿಂದ ನೀನು ಯೋಗಿಯಾಗು."

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ಸಮೇ ಯುಕ್ತತಮೋ ಮತಃ॥೪೭॥

ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಆತ್ಮಸಂಯಮಯೋಗೋ ನಾಮ ಷಷ್ಠೋಽಧ್ಯಾಯಃ॥

ಅರ್ಥ:-ಯಃ ಶ್ರದ್ಧಾವಾನ್ =ಯಾವನು ಶ್ರದ್ಧಾವಂತನೋ, ಮದ್ಗತೇನ ಅಂತರಾತ್ಮನಾ=ನನ್ನಲ್ಲಿ ತಲ್ಲೀನವಾದ ಮನಸ್ಸಿನಿಂದ, ಮಾಂ ಭಜತೇ =ನನ್ನನ್ನು ಭಜಿಸುತ್ತಾನೆಯೋ, ಸಃ=ಅವನು ಸರ್ವೇಷಾಂ =ಸರ್ವ ಯೋಗಿನಾಮಪಿ =ಯೋಗಿಗಳಲ್ಲಿಯೂ ಯುಕ್ತತಮಃ = ಅತ್ಯಂತ ಶ್ರೇಷ್ಠನು. (ಎಂದು) ಮೇ ಮತಃ = ನನ್ನ ಅಭಿಪ್ರಾಯ.

ವಿವರಣೆ:- ಭಗವಂತ:- "ಭಾರತ, ಎಲ್ಲ ಕಡೆಗೆ ಹರವಿ ಹಬ್ಬಿದ ಪ್ರಕೃತಿ ವಿಲಾಸದ ಆಕರ್ಷಣೆಯನ್ನು ನೀಗಿ, ಪರಮ ಪ್ರಭುವಾದ ನನ್ನಲ್ಲಿಯೇ ಮನಸ್ಸನ್ನು ನೆಲೆಗೊಳಿಸುವ ಶ್ರದ್ಧಾವಂತ ಯೋಗಿಯು ಸರ್ವ ಯೋಗಿಗಳಲ್ಲಿ ಪರಮ ಶ್ರೇಷ್ಠ! ಆ ಯೋಗಿಯು ನನ್ನ ಪಾದಗಳಲ್ಲಿ ತನ್ನನ್ನೇ ಅರ್ಪಿಸಿದ್ದಾನೆ. ಸಾಧನಾ ಕಾಲದಲ್ಲಿ ಸಹಜ ಪ್ರಾಪ್ತವಾಗುವ ವಿವಿಧ ಸಿದ್ಧಿ ಶಕ್ತಿಗಳಿಗೆ ದೃಷ್ಟಿಹಾಕದೆ ನನ್ನನ್ನೇ ಭಜಿಸುತ್ತಾನೆ. ನನ್ನಲ್ಲಿಯೇ ಬೆರೆದು ಒಂದಾಗುತ್ತಾನೆ."

(೧) ಪ್ರಾಕೃತಿಕ ಜಗತ್ತು ಬಹು ಮೋಹಕ. ಅದರ ಚಿತ್ರ ವಿಚಿತ್ರ ರಂಗುರಂಗಿನ ವಿನ್ಯಾಸಕ್ಕೆ ಎಲ್ಲ ಜನ ಮೋಹಿತರಾಗುವದು ಸರ್ವೇ ಸಾಮಾನ್ಯ ಸಂಗತಿ. ವಿವಿಧ ಬಗೆಯ ವಿದ್ಯೆಗಳಲ್ಲಿ ಪಾರಂಗತನಾದ ಯುವಕನು ಗುರು ನಿಲಯವತ್ತ ಹೊರಟು ಮಧ್ಯದಲ್ಲಿಯೇ ಆಗರ್ಭ ಸಿರಿವಂತನ ಸವಿ ಮಾತಿಗೆ ಮರುಳಾಗಿ ಅವನ ಮಗಳೊಂದಿಗೆ ಲಗ್ನವಾಗುತ್ತಾನೆ! ಪರಮ ಪ್ರಭುವಿನ ಸ್ವಯಂಭೂ ಸ್ವರೂಪ ಸದನದತ್ತ ಸಾಗಿದ ಯೋಗಿ ಮಧ್ಯದಲ್ಲಿಯೇ ಪ್ರಾಕೃತಿಕ ಸಿದ್ಧಿಗಳಿಗೆ ಮರುಳಾಗಿ ಗುರಿ ಮರೆಯುತ್ತಾನೆ! ಅನಂತ ಚೇತನದ ಅವತರಣೆಗಾಗಿ ಘೋರ

ತಪಸ್ಸೈವ ತಪಸ್ವಿಯು ತನಗೆ ಲೋಕದವರಿಂದ ದೊರೆವ ಮಾನ ಸನ್ಮಾನಗಳ ಜಾಲದಲ್ಲಿ ಬಿದ್ದು ಬಿಡುತ್ತಾನೆ. ಪ್ರಕೃತಿಯ ಸೌಂದರ್ಯಕ್ಕೆ ಮಾರು ಹೋದವ ರೆಲ್ಲ ಪ್ರಾಕೃತಿಕ ಯೋಗಿಗಳು. ಅವರಿಗೆ ಸಮಾಜದಲ್ಲಿ ಪೂಜ್ಯತೆ ಇದೆ. ಅವರು ಬಾಳಿರುವವರೆಗೆ ಜನರಿಂದ ಪೂಜೆಗೊಳ್ಳುತ್ತಾರೆ; ದೇಹ ಬಿಟ್ಟ ನಂತರ ಅವರ ಪಾರ್ಥಿವ ದೇಹದ ಅರ್ಚನೆ ನಡೆಯುತ್ತದೆ. ಮನೆ ಮನೆಗಳಲ್ಲಿ ಅವರ ತೈಲ ಚಿತ್ರ ಗಳು ಕಂಗೊಳಿಸುತ್ತವೆ. ಸಮಾಧಿ ಮಂದಿರಗಳು ಎದ್ದು ನಿಲ್ಲುತ್ತವೆ. ಸ್ತವನ, ಭಜನ, ಕೀರ್ತನಗಳು ಎಲ್ಲೆಡೆ ಕೇಳ ಬರುತ್ತವೆ. ಅಪಾರವಾದ ಸಾಹಿತ್ಯ ನಿರ್ಮಾಣಗೊಳ್ಳುತ್ತದೆ. ಆದರೆ ಅವರ ಆತ್ಮ ಮಾತ್ರ ನಿಲುಕಡೆಯಿಲ್ಲದೆ ಭವ ಭವಗಳಲ್ಲಿ ತಿರುಗುತ್ತದೆ.

ನಿಜವಾದ ಯೋಗಿ ಜಗತ್ತಿನಲ್ಲಿ ಎಲೆಯ ಮರೆಯ ಪುಷ್ಪದಂತೆ ಬದುಕು ತ್ತಾನೆ. ಜಗದ ಕಣ್ಣಿನಲಿ ಅವನೊಬ್ಬ ಸಾಮಾನ್ಯ ಮನುಷ್ಯ. ಅವನಿದ್ದಾಗ ಮಾನ–ಮರ್ಯಾದೆಗಳಿಲ್ಲ, ದೇಹ ತೊರೆದಾಗ ಉತ್ಸವ ಪೂಜೆಗಳಿಲ್ಲ! ಆದರೆ ಅವನ ಅಂತಶ್ಚೇತನವು ವಿಶ್ವ ಚೇತನದಲ್ಲಿ ಲೀನ! ಅವನಷ್ಟು ಶ್ರೇಷ್ಠ ಯೋಗಿ ಅವನೇ!

(೨) ಪರಮಾತ್ಮನೇ ಅಂತಿಮ ಸತ್ಯ. ಎಲ್ಲ ನಾಶವಾದರೂ ಅವನಿಗೆ ಅಳಿ ವಿಲ್ಲ. ನಾವು ಪರಿಪೂರ್ಣತೆಯ ಪ್ರಜ್ಞೆ ಹೊಂದಿ ದಿವ್ಯ ಚೇತನಾಗಸದಲ್ಲಿ ಒಂದಾಗಿ ಹೋಗಬೇಕಾದರೆ ನಿಜ ಯೋಗಿಗಳಾಗಬೇಕು; ಅಂತಿಮ ವಸ್ತುವನ್ನೇ ನಂಬಿ, ಅದರಲ್ಲಿಯೇ ಮನ ಬೆರೆಸಿ. ಅದನ್ನೇ ಚಿಂತಿಸಿ ಪವಿತ್ರ ಬಾಳನ್ನು ಬದುಕ ಬೇಕು. ಅನ್ಯ ವಿಷಯಗಳ ಧ್ಯಾನಿಸದೆ ಚಿತ್ತನ್ನು ಚೈತನ್ಯಮಯಗೊಳಿಸಬೇಕು. ಅದರಿಂದ ಅನಂತ ಶಾಂತಿ!! ಲೋಕದವರ ಮನ್ನಣೆ ಹಾಗು ಜಾಗತಿಕ ಕೀರ್ತಿ ಗಳಿಂದ ನಮಗೆ ಆಗಬೇಕಾದುದಾದರೂ ಏನಿದೆ?

(೩) ಇಲ್ಲಿಗೆ ಯೋಗದ ವ್ಯಾಖ್ಯೆ, ಸ್ವರೂಪ, ಸಾಧನಾ ಕ್ರಮ, ಹಿರಿಮೆ ಹಾಗು ಗರಿಮೆಗಳ ವರ್ಣನೆ ಮುಗಿಯಿತು. ಭಗವಂತನ ಅಭಿಪ್ರಾಯದಲ್ಲಿ ವಿದ್ಯೆ, ವೈಭವ, ಜ್ಞಾನ, ತಪ ಮುಂತಾದ ಯಾವುದೂ ದೊಡ್ಡದಲ್ಲ. ನಿಶ್ಚಲ ಮನಸ್ಸಿ ನಿಂದ ದೇವನನ್ನು ಚಿಂತಿಸಿ ದೇವನಲ್ಲಿ ಬಯಲಾಗುವದೇ ಪರಮೋತ್ಕೃಷ್ಟ! ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಆಸೆಯ ಬಿಂದುವು.

* † *

# ಏಳನೆಯ ಅಧ್ಯಾಯ

## ಜ್ಞಾನ ವಿಜ್ಞಾನ ಯೋಗ

ಶ್ರೀ ಭಗವಾನುವಾಚ

ಮಯ್ಯಾಸಕ್ತ ಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ ।

ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥೧॥

ಅರ್ಥ:- ಪಾರ್ಥ = ಅರ್ಜುನ, ಮಯಿ = ನನ್ನಲ್ಲಿ ಆಸಕ್ತ ಮನಾಃ = ಆಸಕ್ತ ಮನಸ್ಸುಳ್ಳವನಾಗಿ, ಮದಾಶ್ರಯಃ = ನನ್ನನ್ನು ಆಶ್ರಯಿಸಿದವನಾಗಿ, ಯೋಗಂ ಯುಂಜನ್ = ಯೋಗವನ್ನು ಮಾಡುತ್ತ (ಜ್ಞಾನ ಧ್ಯಾನಾದಿಯೋಗವನ್ನು ಅಭ್ಯಸಿಸುತ್ತ) ಮಾಂ = ನನ್ನನ್ನು ಸಮಗ್ರಂ = ಸಂಪೂರ್ಣವಾಗಿ, (ಮತ್ತು) ಅಸಂಶಯಂ = ಅಸಂದಿಗ್ಧವಾಗಿ ಯಥಾ = ಹೇಗೆ ಜ್ಞಾಸ್ಯಸಿ = (ನೀನು) ತಿಳಿದುಕೊಳ್ಳುವಿಯೋ ತತ್ = ಅದನ್ನು ಶ್ರುಣು = ಆಲಿಸು.

ವಿವರಣೆ:- ಭಗವಂತ:- "ಪಾರ್ಥ, ನಾನು ಅನಾದ್ಯನಂತ ಪರತತ್ತ್ವ; ವ್ಯಷ್ಟಿ ಸಮಷ್ಟಿ ವಿಶ್ವಗಳ ಪರಮಾಧಾರ. ಸತ್ಯ ಜ್ಞಾನ ಮತ್ತು ಆನಂದಗಳ ಮಹಾನ್ ಸಾಗರ! ನನ್ನಲ್ಲಿಯೇ ನಿನ್ನ ಮನಸ್ಸನ್ನು ಅಚಲಗೊಳಿಸು; ಉಳಿದೆಲ್ಲ ನಶ್ವರ ಪ್ರಪಂಚವನ್ನು ಮರೆತು ನನ್ನನ್ನೇ ಆಶ್ರಯಿಸು. ನಿನ್ನದೆಂಬುದನ್ನೆಲ್ಲ ನನಗೆ ಅರ್ಪಿಸು. ನಿನ್ನ ಅಹಂ ಭಾವವನ್ನು ಕೂಡ ನನ್ನ ಮಡಿಲಲ್ಲಿ ನಿವೇದಿಸು. ಅನ್ಯ ಚಿಂತನೆ ಬಿಟ್ಟು ನನ್ನ ಧ್ಯಾನಯೋಗವನ್ನು ಅಭ್ಯಸಿಸು; ಅನಾತ್ಮ ಪ್ರಪಂಚ ಬಿಟ್ಟು ಅನಂತಾತ್ಮನಾದ ನನ್ನನ್ನೇ ತಿಳಿದುಕೊ; ಜ್ಞಾನಯೋಗವನ್ನಾಚರಿಸು. ಹೀಗೆ ಮಾಡಿದೆಯಾದರೆ ನನ್ನನ್ನು ಸಂಪೂರ್ಣವಾಗಿ ಮತ್ತು ಅಸಂದಿಗ್ಧವಾಗಿ ಅರಿತುಕೊಳ್ಳುವಿ. ನನ್ನನ್ನು ಅರಿಯುವ ಆ ಬಗೆಯನ್ನು ಕುರಿತು ಕೂಲಂಕಷ ವಾಗಿ ವಿವರಿಸುವೆ; ಲಕ್ಷ ಸ್ಥಿರವಿಟ್ಟು ಕೇಳು."

(೧) ಕಾಣುವ ಜಡ ವಿಶ್ವವು ಪರಮಾತ್ಮನ ಸಾಕಾರ ರೂಪ. ಕಾಣದ ಜೀವರೂಪ ಅಜಡ ವಿಶ್ವವು ದೇವನ ನಿರಾಕಾರ ರೂಪ. ಒಟ್ಟಿನಲ್ಲಿ, ಚೈತನ್ಯ ಪ್ರಭುವೇ ಎಲ್ಲೆಡೆಗೆ ಹಾಸು ಹೊಕ್ಕಾಗಿ ತುಂಬಿಕೊಂಡಿದ್ದಾನೆ. ಅವನನ್ನು ಸಮಗ್ರ ವಾಗಿ ಕಾಣುವದು ಮತ್ತು ಅವನೊಂದಿಗೆ ಸಮರಸವಾಗುವದು ಸಾಮಾನ್ಯ ಜೀವಿಗಳಿಂದ ಸಾಧ್ಯವಿಲ್ಲ. ಅದಕ್ಕೂ ಯೋಗ್ಯತೆ ಅಥವಾ ಅಧಿಕಾರ ಬೇಕು. ಹಿಂದಿನ ಅಧ್ಯಾಯದ ಕೊನೆಯ ಮಂತ್ರದಲ್ಲಿ ಅಧಿಕಾರ-ಲಕ್ಷಣಗಳನ್ನು ಸೂಚ್ಯ ವಾಗಿ ತಿಳಿಸಲಾಗಿದೆ; ಅವು: (೧) (ಮದ್ಗತೇನ ಅಂತರಾತ್ಮನಾ) ಮನಸ್ಸು ದೇವ ನಲ್ಲಿ ನೆಲೆಸಬೇಕು. (೨)(ಶ್ರದ್ಧಾವಾನ್ ಮಾಂ ಭಜತೇ) ದೇವನಲ್ಲಿ ಶ್ರದ್ಧೆಯಿರಿಸಿ ಅವನನ್ನೇ ಆಶ್ರಯಿಸಬೇಕು. ಈ ಎರಡು ಪವಿತ್ರ ಲಕ್ಷಣಗಳನ್ನೇ ಕೂಲಂಕಷ ವಾಗಿ ಈ ಮುಂದೆ ವಿಸ್ತರಿಸಲಾಗಿದೆ.

(೨) ಮದಾಶ್ರಯ, ಮಯ್ಯಾಸಕ್ತಿ: ಆಶ್ರಯ ದೈಹಿಕ; ಆಸಕ್ತಿ ಮಾನ ಸಿಕ. ಎಲ್ಲಿ ದೇಹ ಅಲ್ಲಿ ಮನ, ಎಲ್ಲಿ ಮನಸ್ಸು ಅಲ್ಲಿ ದೇಹ ಇದ್ದರೆ ಅದು ಋಜುತೆ. ಅದರಿಂದ ಶ್ರೇಯಸ್ಸು. ಹೆಂಡತಿ ಗಂಡನನ್ನು ಆಶ್ರಯಿಸಿದಂತೆ ಗಂಡನ ಲ್ಲಿಯೇ ಆಸಕ್ತಳಾಗಿರಬೇಕು: ರಾಜಕೀಯ ಮುಖಂಡನು ರಾಷ್ಟ್ರವನ್ನು ಆಶ್ರಯಿ ಸಿದಂತೆ, ರಾಷ್ಟ್ರಹಿತದಲ್ಲಿಯೇ ಆಸಕ್ತನಾಗಿರಬೇಕು, ಮನೆ ಮಡದಿ ಮಕ್ಕಳಲ್ಲಿ

ರತನಾಗಿರಬಾರದು. ಈ ಶ್ರೇಯಸ್ಸಿನ ಸೂತ್ರವನ್ನು ಪಾಲಿಸದಿದ್ದರೆ ಮಾತ್ರ ಸ್ವ ಪರ ಹಾನಿ. ದೇಹವೊಂದು ಕಡೆ ಮನಸ್ಸೊಂದು ಕಡೆ ಇದ್ದ ಸತಿ ವ್ಯಭಿಚಾರಿಣಿ; ಆಕೆಗಾಗಲಿ, ಅವಳ ಪತಿಗಾಗಲಿ ವ್ಯಭಿಚಾರದಿಂದ ಹೇಗೆ ಗೌರವ ಬಂದೀತು? ವ್ಯಭಿಚಾರಶೀಲನಾದ ರಾಜಕಾರಣಿಯಿಂದ ದೇಶಕ್ಕೆ ದೇಶವೇ ಹಾಳಾಗುತ್ತದೆ. ರೂಪಕದಿಂದ ವಿವರಿಸುವದಾದರೆ, ವ್ಯಭಿಚಾರಿಗಳದು ಬೆಕ್ಕಿನ ಜಾತಿ; ಬೆಕ್ಕು ಪೋಷಿಸಿದವರ ಹಿಟ್ಟಿನ ಬುಟ್ಟಿಯಲ್ಲಿಯೇ ಹೊಲಸು ಮಾಡುತ್ತದೆ. ಋಜು ಗುಣದ ಅವ್ಯಭಿಚಾರಿಗಳದು ಪ್ರಾಮಾಣಿಕ ನಾಯಿಯ ವರ್ಗ. ನಾಯಿಯ ದೇಹ ಮನ ಒಂದೇ ಕಡೆ. ಅದು ತನ್ನ ಪೋಷಕರನ್ನು ಜೀವದ ಹಂಗು ಹರಿದು ರಕ್ಷಿಸು ವದು. ಬೆಕ್ಕು ವಂಚಕ, ನಾಯಿ ನಂಬಿಗಸ್ಥ. ವಂಚಕ-ಜೀವನ ಕಷ್ಟ ನಷ್ಟಗಳಿಂದ ಕೂಡಿದೆ. ನಂಬಿಗೆಯ ಜೀವನ ಸುರಕ್ಷಿತವಾಗಿದೆ. ಉದಾ: ತಾಯಿಯನ್ನೇ ಸಂಪೂ ರ್ಣವಾಗಿ ನಂಬಿದ ಮಗುವನ್ನು ತಾಯಿಯು ತನ್ನ ಜೀವಕ್ಕಿಂತಲೂ ಹೆಚ್ಚು ಪ್ರೀತಿಸುತ್ತಾಳೆ. ಎಂಥ ಪರಿಸ್ಥಿತಿಯಲ್ಲಿಯೂ ರಕ್ಷಿಸುತ್ತಾಳೆ. ತನ್ನ ದೇಹ ಮನ ಸ್ಸುಗಳಿಂದ ರಾಮನನ್ನೇ ಆಶ್ರಯಿಸಿದ ಹನುಮಂತ ಅಜರಾಮರನಾದ. ರಾಮ ಮಂದಿರಗಳಿಲ್ಲದ ಗ್ರಾಮಗಳಿವೆ; ಹನುಮಂತ ದೇವನ ಮಂದಿರಗಳಿಲ್ಲದ ಗ್ರಾಮ ಗಳೇ ಇಲ್ಲ. ಅಷ್ಟು ಅವನ ಹಿರಿಮೆ ಜಗತ್ತಿನಲ್ಲಿ ವಿಸ್ತರಿಸಿದೆ. ಸೀತಾದೇವಿ ಆದರ್ಶ ಪತಿ ಪರಾಯಣೆ; ರಾಮ ಆದರ್ಶ ಏಕಪತ್ನಿ ವ್ರತಸ್ಥ. ಅವರ ಮಧ್ಯದ ಅನ್ಯೋನ್ಯ ಆಶ್ರಯ–ಆಸಕ್ತಿಗಳು ಅನುಕರಣೀಯವಾಗಿದ್ದವು. ಎಂದೇ ದೇವ– ದೇವತೆಯ ಸ್ಥಾನ ಅವರಿಗೆ ಕೊಡಲಾಗಿದೆ. ಅಕ್ಕಮಹಾದೇವಿ ತನ್ನ ದೇಹ ಮತ್ತು ಮನಸ್ಸುಗಳೆರಡನ್ನೂ ಚನ್ನಮಲ್ಲಿಕಾರ್ಜುನದೇವನಿಗೆ ಅರ್ಪಿಸಿ ಅಮರ ಳಾದಳು. ಅವಳ ಒಂದು ವಚನದಲ್ಲಿ ಈ ಅರ್ಪಣೆ ವ್ಯಕ್ತವಾಗಿದೆ:

"ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನೊಲಿದೆನವ್ವಾ. ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ ಚಲುವಂಗಾನೊಲಿದೆನವ್ವಾ. ನೀನು ಕೇಳಾ ತಾಯೆ. ಭವವಿಲ್ಲದ, ಭಯವಿಲ್ಲದ ನಿರ್ಭಯ ಚಲುವಂಗಾನೊಲಿದೆನವ್ವಾ. ಕುಲ ಸೀಮೆಯಿಲ್ಲದ ನಿಸ್ಸೀಮ ಚಲು ವಂಗೆ ನಾನೊಲಿದೆ, ಇದು ಕಾರಣ ಚೆನ್ನಮಲ್ಲಿಕಾರ್ಜುನ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು."

ಒಲಿದೆನೆಂಬ ಪದ ಆಸಕ್ತಿ ದರ್ಶಕ. ಗಂಡನೆನಗೆ ಎಂಬ ಪದ ಆಶ್ರಯ ದರ್ಶಕ. ಜಗದ ಸಾವ ಕೆಡುವ ಗಂಡರನ್ನು ಆಶ್ರಯಿಸದೆ ಪರಮ ಪಾವನ ಹಾಗು ಅಪ್ರ ತಿಮ ಚೆಲುವ ಚೈತನ್ಯ ಪುರುಷನನ್ನೇ ನಂಬಿ ಅವನ ಸಾನಿಧ್ಯ ಬಯಸಿ ಅವನ ಲ್ಲಿಯೇ ಮನ ಮುಳುಗಿಸಿದಳು ಮಹಾ ಶರಣೆ ಅಕ್ಕ ಮಹಾದೇವಿ.

ಲೋಕದಲ್ಲಿ ಬಹು ಜನರು ವಂಚಕರು; ಅವರ ನಡತೆ ನಂಬಿಗೆಗಳಲ್ಲಿ ತಾಳ ವಿಲ್ಲ. ಅವರ ವಾಸ, ವಿಚಾರಗಳಲ್ಲಿ ಮೇಳವಿಲ್ಲ. ಅವರು ದೇಹದಿಂದ ಶುದ್ಧರು, ಮನದಿಂದ ಅಶುದ್ಧರು; ಅವರ ಕಾಯ ದೇವಾಲಯದಲ್ಲಿ, ಮನಸ್ಸು ಪಾಪದ

ನೆನಹಿನಲ್ಲಿ! ಬಸವಣ್ಣನವರು ಹೇಳುತ್ತಾರೆ:

"ತನು ಮುಟ್ಟಿ ಮನ ಮುಟ್ಟದೆ ದೂರವಾದರಯ್ಯಾ, ಬೆಲೆ ವಣ್ಣೆಸುತೆ. ಸೂಳೆ ತನು ಮುಟ್ಟಿ ಅಪ್ಪುವಳಲ್ಲದೆ ಮನ ಮುಟ್ಟಿ ಅಪ್ಪಳಾಗಿ. ಆಚಾರವ ಅರಿಯದ ಅರೆ ಮರುಳು ಗಳು ಸುಖವನೆತ್ತ ಬಲ್ಲರು ಕೂಡಲ ಸಂಗಮ ದೇವಾ."

ಜನರು ವೇಶ್ಯೆಯಂತೆ. ತನು ಒಬ್ಬನ ಮುಟ್ಟಿದರೆ ಮನ ಧನದ ಮೇಲೆ ನೆಟ್ಟಿದೆ. ಆಳುವ ವ್ಯಕ್ತಿಗಳ ದೇಹ ದೇಹಲಿಯಲ್ಲಿ: ಮನ ಮನೆಯಲ್ಲಿ. ಧರ್ಮಾಧಿಕಾರಿಗಳ ತನು ಗುರು ಪೀಠದ ಮೇಲೆ, ಮನ ಧನ ಕನಕಗಳಲ್ಲಿ. ಹದ್ದು ಎಷ್ಟೆತ್ತರಕ್ಕೇರಿದ ರೇನು? ಅದರ ದೃಷ್ಟಿ ಕೊಳೆತ ಹೆಣದ ಮೇಲೆ. ಇಂಥ ವಿಚ್ಛಿನ್ನ ವ್ಯಕ್ತಿಗಳಿಗೆ ಯೋಗ ಸಾಧ್ಯವಾಗದು.

(೩) ದೇಹ ಇಂದ್ರಿಯ ಮನ ಬುದ್ಧಿ ಅಹಂ ಗಳಲ್ಲೆಲ್ಲ ಪರಮಾತ್ಮನ ಅಖಂಡ ಬೆಳಗು ಮೂಡಿನಿಲ್ಲಬೇಕಾದರೆ ಬಾಹ್ಯಾಂತರ ಶುದ್ಧಿಯಾಗಬೇಕು; ದೇಹದಲ್ಲಿ ಸದಾಚಾರ, ಇಂದ್ರಿಯಗಳಲ್ಲಿ ಸಂಯಮನ, ಮನಸ್ಸಿನಲ್ಲಿ ಧ್ಯಾನ, ಬುದ್ಧಿಯಲ್ಲಿ ಆತ್ಮವಿದ್ಯೆ, ಅಹಂ ದಲ್ಲಿ ಆತ್ಮಭಾವ ನೆಲೆಗೊಳ್ಳಬೇಕು. ಅದನ್ನು ಸಾಧಿಸಿದವನಿಗೆ ನಿಸ್ಸಂದಿಗ್ಧವಾಗಿ ಮುಕ್ತಿ ದೊರೆಯುತ್ತದೆ.

**ಸಂಬಂಧ:** – ಭಗವಂತನು ತಾನು ಹೇಳಲಿರುವ ಜ್ಞಾನದ ಸ್ತುತಿ ಮಾಡುತ್ತಾನೆ.

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ॥೨॥**

**ಅರ್ಥ:**– ಯತ್ ಜ್ಞಾತ್ವಾ=ಯಾವುದನ್ನು ತಿಳಿದು (ಕೊಂಡ ಬಳಿಕ) ಇಹ=ಈ ಲೋಕದಲ್ಲಿ ಭೂಯಃ = ಮತ್ತೆ ಅನ್ಯತ್ ಜ್ಞಾತವ್ಯಂ = ಬೇರೆ ತಿಳಿಯಬೇಕಾದುದು ನ ಅವಶಿಷ್ಯತೇ = ಉಳಿಯುವುದಿಲ್ಲವೋ (ಅಂಥ) ಇದಂ = ಈ ಸವಿಜ್ಞಾನಂ= ಅನುಭವ ಪೂರ್ಣ, ಜ್ಞಾನಂ = ಜ್ಞಾನವನ್ನು ಅಶೇಷತಃ =ನಿಶ್ಶೇಷವಾಗಿ, ವಕ್ಷ್ಯಾಮಿ ಅಹಂ ತೇ= ನಾನು ನಿನಗೆ ಹೇಳುವೆ.

**ವಿವರಣೆ:** – ಭಗವಂತ:– "ಅರ್ಜುನ, ನೀನು ನನ್ನನ್ನೇ ಆಶ್ರಯಿಸಿರುವಿ; ನಿನ್ನ ಮನಸ್ಸು ನನ್ನಲ್ಲಿಯೇ ನೆಲೆಯಾಗಿದೆ. ಪುರುಷೋತ್ತಮ ಆತ್ಮ ತತ್ತ್ವವನ್ನು ಗ್ರಹಿಸುವ ಸಾಮರ್ಥ್ಯ ನಿನ್ನಲ್ಲಿದೆ. ಆದ್ದರಿಂದ ಯಾವುದನ್ನು ತಿಳಿದ ನಂತರ ತಿಳಿಯಬೇಕಾದುದೇನೂ ಉಳಿಯದೋ ಅಂಥ ಆತ್ಮ ಜ್ಞಾನವನ್ನು ಸ್ವಾನುಭವ ಸಹಿತವಾಗಿ ಉಪದೇಶಿಸುವೆ."

(೧) ಇದು ಭಗವಂತನ ಪ್ರತಿಜ್ಞಾ ವಾಕ್ಯ. 'ಸಾಧ್ಯ ವಿಶಿಷ್ಟಂ ವಾಕ್ಯಂ ಪ್ರತಿಜ್ಞಾ ವಾಕ್ಯಂ' ಸಾಧ್ಯ ವಿಶಿಷ್ಟವಾದ ವಾಕ್ಯವು ಪ್ರತಿಜ್ಞಾ ವಾಕ್ಯ. ಉದಾ: ಪರ್ವತದಲ್ಲಿ ಅಗ್ನಿ ಇದೆ. ಪರ್ವತ ಪಕ್ಷದಲ್ಲಿ ಧೂಮ ಹೇತುವಿನಿಂದ ಸಿದ್ಧ ಮಾಡಬೇಕಾದ ಅಗ್ನಿಯು ಸಾಧ್ಯ. ಆ ಸಾಧ್ಯದ ನಿರ್ದೇಶನ ಮಾಡುವ ವಾಕ್ಯವು

ಪ್ರತಿಜ್ಞಾ ವಾಕ್ಯ: ಗ್ರಂಥದ ಅಂತರಂಗವನ್ನು ಎತ್ತಿ ತೋರಿಸುವ ಪ್ರಸ್ತಾವನೆಯು ಪ್ರತಿಜ್ಞಾ. ಭಗವಂತನ ಈ ಮೇಲಿನ ಮಾತು ಏಳನೆಯ ಅಧ್ಯಾಯದ ವಿಷಯವನ್ನು ಸೂಚಿಸುವದರಿಂದ ಪ್ರತಿಜ್ಞಾ ವಾಕ್ಯವೆನಿಸಿದೆ.

(೨) ಸವಿಜ್ಞಾನ ಜ್ಞಾನ: ಗುರು ಶಾಸ್ತ್ರಗಳಿಂದ ದೇವನನ್ನು ಅರಿತರೆ ಅದು ಸಾಮಾನ್ಯ ಜ್ಞಾನ. ಸರ್ವಸಂಗರಹಿತನಾಗಿ, ಮಾನಸಿಕ ಕಲ್ಮಷಗಳನ್ನು ಕಳೆದು ಹಾಕಿ, ನಿರ್ಮಲಾಂತರಂಗದಲ್ಲಿ ಅಮರ ದೇವ ಬೆಳಗನ್ನು ಸಾಕ್ಷಾತ್ಕರಿಸಿಕೊಳ್ಳುವದು ಸವಿಜ್ಞಾನ–ಜ್ಞಾನ. ಈ ಜ್ಞಾನವು ಸರ್ವಶ್ರೇಷ್ಠ. ಅಹಂ ಬ್ರಹಾಸ್ಮಿ; ವಿಜ್ಞಾನಮಾನಂದಂ ಬ್ರಹ್ಮ: ಸತ್ಯಂ ಜ್ಞಾನಮನಂತಂ ಬ್ರಹ್ಮ. ಇಂಥ ಮಹಾವಾಕ್ಯಗಳ ರೂಪದಿಂದ ಹೊರ ಹೊಮ್ಮುವ ಈ ಸವಿಜ್ಞಾನ-ಜ್ಞಾನವನ್ನು ಗಳಿಸಿದ ನಂತರ ಪಡೆಯಬೇಕಾದ ಇನ್ನೊಂದು ಜ್ಞಾನ ಉಳಿಯದು; ತಿಳಿಯಬೇಕಾದ ಇನ್ನೊಂದು ವಸ್ತು ಇರದು. ಈ ಮಾತಿಗೆ ಪ್ರಮಾಣಗಳು: "ಯೇನ ಅಶ್ರುತಂ ಶ್ರುತಂ ಭವತಿ" ಅದನ್ನು ಕೇಳಿದಾಗ ಕೇಳಲಾರದ್ದೆಲ್ಲ ಕೇಳಿದಂತಾಗುವದು. "ತಸ್ಮ ಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" ಅದನ್ನು ತಿಳಿದಾಗ ಏನೆಲ್ಲವು ತಿಳಿಯಲ್ಪಡುತ್ತದೆ.

(೩) ಪರಮಾತ್ಮನು ವಿಶ್ವವಿಸ್ತಾರ: ಹಿಂದೆ ಮುಂದೆ, ಮೇಲೆ ಕೆಳಗೆ, ಎಡಕ್ಕೆ ಬಲಕ್ಕೆ ಎಲ್ಲೆಲ್ಲೂ ವ್ಯಾಪಿಸಿದ್ದಾನೆ. ಅವನನ್ನು ಸಾಕ್ಷಾತ್ಕಾರಗೊಳಿಸಿಕೊಂಡ ನಂತರ ಆಶೆ ಉಳಿಯದು, ಆಮಿಷ ಬಾಳದು, ವಿಕಾರಗಳೇಳವು, ಭೇದ ಕಾಣದು! ವಿಶ್ವವೇ ತಾನೆಂದು, ವಿಶ್ವಾತೀತ ಅಮರ ಅನಂತತೆಯೇ ತನ್ನ ಸ್ವರೂಪವೆಂದು ನೋಡುತ್ತಾನೆ. ಇದು ಅಮರ ಜ್ಞಾನದ ಅಂತಿಮ ಫಲ. ಈ ಫಲವು ಸರ್ವ ಜನತೆಗೆ ದೊರೆಯಲೆಂಬ ಕರುಣೆಯಿಂದ ಭಗವಂತನು ಸತ್ಯವಸ್ತು ಜ್ಞಾನವನ್ನು ಅಧ್ಯಾಯದ ತುಂಬ ಉಪದೇಶಿಸುತ್ತಾನೆ.

ಸಂಬಂಧ:- ಸವಿಜ್ಞಾನ-ಜ್ಞಾನದ ಗಳಿಕೆ ಎಲ್ಲರಿಗೂ ಅಸಾಧ್ಯ. ಕೆಲವರೇ ಅದನ್ನು ಹೊಂದಬಲ್ಲರು.

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥೩॥

ಅರ್ಥ:- ಮನುಷ್ಯಾಣಾಂ ಸಹಸ್ರೇಷು=ಸಾವಿರಾರು ಮನುಷ್ಯರಲ್ಲಿ, ಕಶ್ಚಿತ್= ಯಾವನೋ ಒಬ್ಬನು ಸಿದ್ಧಯೇ = ಜ್ಞಾನಸಿದ್ಧಿಗಾಗಿ ಯತತಿ = ಪ್ರಯತ್ನಿಸುತ್ತಾನೆ. ಯತತಾಂ = ಯತ್ನಮಾಡುವ ಸಿದ್ಧಾನಾಂ ಅಪಿ = ಸಿದ್ಧರಲ್ಲೂ ಕೂಡ, ಕಶ್ಚಿತ್ = ಯಾವನೋ ಒಬ್ಬನು ಮಾಂ = ನನ್ನನ್ನು ತತ್ತ್ವತಃ = ಯಥಾರ್ಥವಾಗಿ ವೇತ್ತಿ = ತಿಳಿಯುತ್ತಾನೆ.

ವಿವರಣೆ:– ಭಗವಂತ:- "ಪಾರ್ಥ, ಜಗತ್ತಿನಲ್ಲಿ, ಕೋಟ್ಯಂತರ ಜನರು ಬಾಳಿದ್ದಾರೆ. ಅವರಲ್ಲಿ ಹೆಚ್ಚು ಜನ ವಿಷಯ ವಿಲಾಸಿಗಳು, ಇಂದ್ರಿಯಾರಾಮಿ

ಗಳು ಮತ್ತು ಮೋಹಿತರು. ಅವರಿಗೆ ಈ ಲೋಕದ ಬಾಳುವೆಯೇ ಪರಮಾರ್ಥ. ಇಲ್ಲಿ ದೊರೆಯುವ ಸುಖವೇ ಆತ್ಯಂತಿಕ! ಎಲ್ಲಿಯೋ ಒಬ್ಬನು ಮಾತ್ರ ವಿಷಯ ವಿಮುಖನಾಗಿ ದಿವ್ಯ ದೇವನತ್ತ ಹೊರಳುತ್ತಾನೆ; ತೋರಿಕೆಯ ಪರದೆ ಹರಿದು ಅದರೊಳಗೆ ಅನಂತವಾಗಿ ನೆಲೆಸಿರುವ ಆತ್ಮ ಪುರುಷನ ದಿವ್ಯ ದರ್ಶನಕ್ಕಾಗಿ ಯತ್ನಿಸುತ್ತಾನೆ. ಅನುಭವಾತ್ಮಕ ಆತ್ಮಜ್ಞಾನವನ್ನು ಸಂಪಾದಿಸಲು ಹವಣಿಸು ತ್ತಾನೆ. ಹಾಗೆ ಹವಣಿಸುವ ಹಾಗು ಯತ್ನಿಸುವ ಸಾವಿರಾರು ಸಾಧಕರಲ್ಲಿ ಯಾವನೋ ಒಬ್ಬನು ಆ ಅನಂತರೂಪನಾದ ನನ್ನನ್ನು ನೈಜವಾಗಿ ತಿಳಿದುಕೊ ಳ್ಳುತ್ತಾನೆ. ಅರ್ಜುನ, ಅಂಥ ಮಹಾನುಭಾವರ ಮಾಲಿಕೆಗೆ ನೀನು ಸೇರಬೇಕು."

ಇದೇ ಭಾವದ ಒಂದು ಮಾತು ಕಠೋಪನಿಷತ್ತಿನಲ್ಲಿದೆ.

"ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ಶೃಣ್ವಂತೋऽಪಿ ಬಹವೋ ಯಂ ನ ವಿದ್ಯುಃ ॥
ಆಶ್ಚರ್ಯೋ ವಕ್ತಾ ಕುಶಲೋऽಸ್ಯ ಲಬ್ಧಾ ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ"

ಯಾವ ಆತ್ಮನು ಅನೇಕರಿಂದ ಕೇಳಲಿಕ್ಕೂ ಕೂಡ ದೊರೆಯುವದಿಲ್ಲವೋ, ಯಾವನನ್ನು ಬಹುಜನ ಕೇಳಿಯೂ ತಿಳಿಯಲಾರರೋ, ಇಂಥ ಗೂಢವಾದ ಆತ್ಮತತ್ತ್ವದ ವಕ್ತಾರನು ದುರ್ಲಭನು. ಆತ್ಮಾನುಭವ ಪಡೆದ ಉಪದೇಶ ಕುಶಲ ಗುರುವು ಇನ್ನೂ ದುರ್ಲಭನು. ಅಂಥ ಗುರುವಿನಿಂದ ಉಪದೇಶ ಪಡೆದು ಜ್ಞಾನ ಮಾಡಿಕೊಂಡ ಶಿಷ್ಯನೂ ದುರ್ಲಭ. (೧-೨-೭ ಕಠ)

ಆತ್ಮ ತತ್ತ್ವವು ಸುಲಭ ಸಾಧ್ಯವಲ್ಲ. ಬಹು ಜನರಿಗಂತು ಕೇಳಲೂ ದೊರೆ ಯದು. ಹಗಲು ರಾತ್ರಿ ವೈಷಯಿಕ ಶಬ್ದ ಪರಿಸರದಲ್ಲಿ ಬದುಕುವ ಅವರ ಮನ ಸ್ಸಂತು ವಿಷಯ ಚಿಂತನದಲ್ಲಿ ತಲ್ಲೀನವಾಗಿದೆ. ಆತ್ಮತತ್ತ್ವವೊಂದಿದೆ, ಅದರ ಬಗ್ಗೆ ಕೇಳಬೇಕು ಎಂಬ ಕಲ್ಪನೆ ಕೂಡ, ಪಾಪ, ಅವರಿಗಿಲ್ಲ. ಇನ್ನು ಕೆಲವರು ಕೇಳುವ ಸದವಕಾಶ ಪಡೆಯುತ್ತಾರೆ. ಅವರಿಗೆ ಭಾಷಾ ಜ್ಞಾನವಿದೆ. ಆತ್ಮತ ತ್ತ್ವೋಪದೇಶಕನ ಪ್ರವಚನಗಳನ್ನು ಶಬ್ದಶಃ ಗ್ರಹಿಸುವ ಅಗಾಧ ಸಾಮರ್ಥ್ಯವೂ ಇದೆ. ಆದರೇನು? ವಿಷಯಾಭಿರತಿಯಿಂದಾಗಿ ಅಥವಾ ಮನಸ್ಸಿನ ದುರ್ಬಲತೆ ಯಿಂದಾಗಿ ಆತ್ಮತತ್ತ್ವವನ್ನು ತಿಳಿದುಕೊಳ್ಳಲಾರರು. ಆತ್ಮನ ನಿಸ್ಸೀಮ ಸ್ವರೂ ಪವನ್ನು ಅರ್ಥತಃ ಗ್ರಹಿಸಲಾರರು, ಆತ್ಮ ದರ್ಶನ ಪಡೆಯಲಾರರು! ಇನ್ನು ಆತ್ಮಸಾಕ್ಷಾತ್ಕಾರದ ಅಮೃತಾನುಭವವನ್ನು ಅನುಭವಿಸಿ, ಆ ಅನುಭೂತಿಯನ್ನೇ ನಾಡಿನ ದೀನ ಅಜ್ಞ ಜನತೆಗೆ ಅನುಕಂಪನೆ ಹಾಗು ವಾತ್ಸಲ್ಯದಿಂದ ನೀಡುವ ಉಪದೇಶಕ ದೊರೆಯುವದಂತು ತೀರ ದುರ್ಲಭ. ಅಷ್ಟೇ ಅಲ್ಲ, ದೇವನನ್ನು ಅರಿತು ತನ್ನ ಜೀವನವನ್ನು ಕೃತಾರ್ಥಗೊಳಿಸಿಕೊಂಡ ಮಹಾತ್ಮನು ಎಲ್ಲೋ ಒಬ್ಬ ಕಾಣಸಿಗುತ್ತಾನೆ. ಆ ಮಹಾತ್ಮನ ಬಳಿ ಇದ್ದು ಅವನ ಕೃಪೆಯಿಂದ ಉಪ ದೇಶ ಹೊಂದಿ, ಮನನ ನಿಧಿಧ್ಯಾಸನಗಳಲ್ಲಿ ತೊಡಗಿದ ಆತ್ಮಜ್ಞಾನಿಗಳು ಜಗತ್ತಿ ನಲ್ಲಿ ವಿರಳ! ಈ ಶ್ರುತಿ ವಚನವು ಹೇಳುವಂತೆ, ಅಮರ ಜ್ಞಾನವು ಎಲ್ಲೋ ಒಬ್ಬ

ನಿಗೆ ಲಭ್ಯ. ಉಳಿದೆಲ್ಲ ಮಾನವರು ಕುಮಾರ್ಗ-ಪ್ರವೃತ್ತರು, ತತ್ತ್ವವಿವೇಚನಾ ಸಾಮರ್ಥ್ಯವಿಲ್ಲದ ಅಂಧರು. ಅಹಂಕಾರೋನ್ಮತ್ತರು!

**ಸಂಬಂಧ:**— ದುರ್ಲಭವಾದ ಶಿವವಿದ್ಯೆಯ ರೂಪು ರಚನೆಯ ವರ್ಣನೆ ಮುಂದಿನ ಮಂತ್ರದಿಂದ ಪ್ರಾರಂಭವಾಗುತ್ತಿದೆ.

**ಭೂಮಿರಾಪೋಽನಲೋವಾಯುಃ ಖಂ ಮನೋ ಬುದ್ಧಿರೇವಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥೪॥**

**ಅರ್ಥ:**— ಭೂಮಿಃ = ಭೂಮಿ, ಆಪಃ = ನೀರು, ಅನಿಲಃ = ಅಗ್ನಿ. ವಾಯುಃ = ವಾಯು, ಖಂ = ಆಕಾಶ ಮನಃ = ಮನಸ್ಸು ಬುದ್ಧಿಃ = ಬುದ್ಧಿ. ಅಹಂಕಾರಃ ಏವಚ = ಮತ್ತು ಅಹಂಕಾರ ಇತಿ = ಎಂದು ಇಯಂ ಮೇ ಪ್ರಕೃತಿಃ = ಈ ನನ್ನ ಪ್ರಕೃತಿಯು ಅಷ್ಟಧಾ ಭಿನ್ನಾ = ಎಂಟು ಪ್ರಕಾರವಾಗಿದೆ.

**ವಿವರಣೆ:**— ಭಗವಂತ:— "ಅರ್ಜುನ, ಆತ್ಮಜ್ಞಾನವು ದುರ್ಲಭ ಎಂದು ನಾನು ವರ್ಣಿಸಿದ್ದೇನೆ ಅಷ್ಟೆ? ಅದರ ಉದ್ದೇಶ ಮಾತ್ರ ಕೇಳುಗರಲ್ಲಿ ನಿರಾಶೆ ಹುಟ್ಟಿಸುವದಕ್ಕಲ್ಲ, ಸ್ವಲ್ಪಿಲ್ಲ ಸ್ವಲ್ಪಾದರೂ ಫಲ ಹುಟ್ಟಲೆಂಬ ಭಾವ ನನ್ನದು. ನೀನು ವೀರ, ರಣಧೀರ. ಆಧ್ಯಾತ್ಮರಂಗದಲ್ಲೂ ವೀರನಂತೆ ವರ್ತಿಸು. ಕಾಮಾದಿ ವೈರಿಗಳನ್ನು ಸದೆಬಡೆ. ಆತ್ಮಜ್ಞಾನ ಸ್ವೀಕಾರಕ್ಕಾಗಿ ಸನ್ನದ್ಧನಾಗು. ಪೂರ್ಣ ಲಕ್ಷವಿತ್ತು ನನ್ನ ಅಮೌಲ್ಯ ನುಡಿಗಳನ್ನು ಆಲಿಸು, ಅರ್ಥ ಮಾಡಿಕೊ, ಹಾಗು ಅನುಭವಿಸು. ಇದೋ, ಈಗ ಉಪದೇಶ ಪ್ರಾರಂಭಿಸುವೆ.

"ಪಾರ್ಥ, ನಾನು ಅವಿಚ್ಛಿನ್ನ ಅಸ್ತಿತ್ವಾಂಬರ! ಅನಂತ ಅಮೃತ! ನಾನು ಸ್ವತಃ (ಸ್ವರೂಪತಃ) ನಿರ್ವಿಕಾರ, ನಿರಂಜನ, ನಿಶ್ಚಲ! ನನ್ನ ಪರಮಾಶ್ರಯದಲ್ಲಿ ಈ ಭೌತ ಹಾಗು ಈ ಮಾನಸಿಕ ವಿಶ್ವವನ್ನು ಸೃಷ್ಟಿಸುವ ಅದ್ಭುತ ಪ್ರಕೃತಿ ಶಕ್ತಿ ಇದೆ. ಅದು ಗುಣ ಸಾಮ್ಯ ಸ್ಥಿತಿ! ಸದಾ ವಿಕಾರಿ! ಭೂಮಿ ನೀರು ಅಗ್ನಿ ವಾಯು ಆಕಾಶ ಮನ ಬುದ್ಧಿ ಅಹಂಕಾರ ಈ ಎಂಟು ತತ್ತ್ವಗಳು ಪ್ರಕೃತಿಯ ಮಹಾ ಗರ್ಭದಿಂದ ಹೊರಬಂದಿವೆ.

(೧) ಪ್ರಧಾನ ಅವ್ಯಕ್ತ, ದೇವಾತ್ಮಶಕ್ತಿ, ಮಾಯೆ ಮುಂತಾದ ವಿಭಿನ್ನ ನಾಮಗಳಿಂದ ನಿರ್ದಿಷ್ಟವಾದ ಪ್ರಕೃತಿಯು ಅಸಂಖ್ಯ ತತ್ತ್ವಗಳ ಮೂಲ. ಸಕಲ ಕಾರಣಗಳ ಆದಿ ಕಾರಣ. ಪುರುಷನ ಸಾನಿಧ್ಯದಲ್ಲಿ ಅದು ತನ್ನ ಗುಣ ಸಾಮ್ಯಾ ವಸ್ಥೆಯಿಂದ ವಿಚಲನಗೊಂಡು ಅನೇಕ ಬೃಹದ್ ತತ್ತ್ವಗಳ ರೂಪ ತೊಡುವದು. ಮಹತ್ತತ್ತ್ವವು ಪ್ರಕೃತಿಯ ಪ್ರಪ್ರಥಮ ವಿಕಾರ; ಅದರ ನಂತರ ಕ್ರಮವಾಗಿ ಅಹಂಕಾರ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ತನ್ಮಾತ್ರೆಗಳು ಮೂಡಿ ಬರುತ್ತವೆ. ಆ ಬಳಿಕ ಪಂಚ ಭೂತ, ಮನ ಬುದ್ಧಿ ಅಹಂಕಾರ ಚಿತ್ತುಗಳು, ಶ್ರೋತ್ರಾದಿ ಬಾಹ್ಯೇಂದ್ರಿಯಗಳು, ದೇಹವು ನಿರ್ಮಾಣಗೊಂಡವು. ಮಹತ್ತಿನಿಂದ ದೇಹದವರೆಗಿನ ಸಕಲ ತತ್ತ್ವಗಳೂ ಪದಾರ್ಥಗಳೂ ಪ್ರಕೃತಿ ಜನ್ಯವಾದುದರಿಂದ ವಿಕೃತಿ ಎನಿ

ಸಿವೆ; ಮಹತ್ತು, ಅಹಂಕಾರ ಮತ್ತು ಪಂಚ ತನ್ಮಾತ್ರೆಗಳು ತಮ್ಮ ಮುಂದಿನ ತತ್ತ್ವಗಳ ಉದಯಕ್ಕೆ ಕಾರಣವಾದುದರಿಂದ ಪ್ರಕೃತಿ ಎಂದೂ ಹೇಳಿಸಿಕೊಳ್ಳುತ್ತವೆ. ಉಳಿದ ತತ್ತ್ವಗಳು ಮಾತ್ರ ಕೇವಲ ವಿಕೃತಿಗಳು. ಸಂಕ್ಷೇಪವಾಗಿ ಹೇಳುವದಾದರೆ, ಅವ್ಯಕ್ತ ಶಕ್ತಿಯು ಮಹಾ ಪ್ರಕೃತಿ. ಮಹತ್ತಿನಿಂದ ಗಂಧತನ್ಮಾತ್ರೆಯು ವರೆಗಿನ ಸಪ್ತ ತತ್ತ್ವಗಳು ಪ್ರಕೃತಿಯ ವಿಕೃತಿಗಳು ಹಾಗು ಮುಂದಿನ ವಿಕೃತಿಗಳ ಪ್ರಕೃತಿಗಳು. ಉಳಿದ ವಿಶ್ವವೆಲ್ಲ ವಿಕೃತಿ.

ಭೂಮಿಃ ಆಪಃ ಅನಲಃ ವಾಯುಃ ಹಾಗು ಖಂ ಎಂಬ ಶಬ್ದಗಳು ಪಂಚ ತನ್ಮಾತ್ರೆಗಳನ್ನೂ, ಮನಸ್ಸು ಎಂಬ ಶಬ್ದ ವೈಕಾರಿಕ ಅಹಂಕಾರವನ್ನೂ, ಅಹಂಕಾರವೆಂಬ ಶಬ್ದವು ತೈಜಸ ಭೂತಾದ್ಯಹಂಕಾರವನ್ನೂ, ಬುದ್ಧಿ ಎಂಬ ಶಬ್ದವು ಮಹತ್ತತ್ತ್ವವನ್ನೂ ನಿರ್ದೇಶಿಸುತ್ತಿವೆ. ಈ ಎಂಟು ತತ್ತ್ವಗಳು ಪ್ರಕೃತಿಯ ಅಷ್ಟ ರೂಪುಗಳೆನಿಸಿವೆ.

(೨) ಮೇ ಪ್ರಕೃತಿಃ:– ಅಷ್ಟ ಪ್ರಕಾರವಾದ ಆ ಬೃಹದ್ ಪ್ರಕೃತಿಯು ಸ್ವತಂತ್ರವಲ್ಲ. ಅನಾದಿ, ಅಮರವಾದರೂ ಅದೇ ಅಂತಿಮ ಸತ್ಯವಲ್ಲ. ವಿಶ್ವವನ್ನೆಲ್ಲ ತನ್ನಲ್ಲಿ ಗರ್ಭೀಕರಿಸಿಕೊಂಡಿದ್ದರೂ ತಾನು ನಿರಂಕುಶ ಮತ್ತು ನಿರಾಲಂಬ ವಸ್ತುವಲ್ಲ. ಪರಮಾತ್ಮನ ನಿಸ್ಸೀಮ ವಿಸ್ತಾರದಲ್ಲಿ ಅದು ನೆಲೆಸಿದೆ: ದೇವನ ಸಾನಿಧ್ಯವೇ ಪ್ರಕೃತಿಯ ಬಾಳಿಗೆ ಆಧಾರ. ಅದು ವಿಕಾಸಗೊಂಡು ಚಿತ್ರ ವಿಚಿತ್ರ ವಿಶ್ವವನ್ನು ರಚಿಸುವದು. ಅದು ದೇವನ ಸೊತ್ತು. ಆದುದರಿಂದ ಭಗವಂತನು 'ಮೇ ಪ್ರಕೃತಿಃ' (ನನ್ನ ಪ್ರಕೃತಿಯು) ಎಂದು ವರ್ಣಿಸಿದ್ದಾನೆ.

ಸಂಬಂಧಃ– ಮೇಲೆ ನಿರೂಪಿತವಾದ ಅಷ್ಟಧಾ ಪ್ರಕೃತಿಯು ಅಪರಾ. ಮುಂದಿನ ಮಂತ್ರದಲ್ಲಿ ಪರಾ ಪ್ರಕೃತಿಯ ಬಗೆಗೆ ಹೇಳಲಾಗಿದೆ.

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥೫॥**

**ಅರ್ಥಃ**- ಮಹಾಬಾಹೋ= ಮಹಾಬಾಹು ಉಳ್ಳವನೆ, ಇಯಂ= ಈಗ ಹೇಳಿದ ಪ್ರಕೃತಿಯು ಅಪರಾ= ಅಪರಾ (ಎಂದು ಹೇಳಿಸಿಕೊಳ್ಳುತ್ತಿದೆ). ಇತಃ ತು ಅನ್ಯಾಂ= ಇದಕ್ಕಿಂತಲೂ ಬೇರೆಯಾದ, ಜೀವಭೂತಾಂ= ಜೀವರೂಪವಾದ ಮೇ = ನನ್ನ ಪ್ರಕೃತಿಂ= ಪ್ರಕೃತಿಯನ್ನು ಪರಾಂ= ಪರಾ (ಎಂದು) ವಿದ್ಧಿ= ತಿಳಿ. ಯಯಾ= ಯಾವುದರಿಂದ, ಇದಂ ಜಗತ್= ಈ (ದೇಹರೂಪ) ಜಗತ್ತು ಧಾರ್ಯತೇ= ಧರಿಸಲ್ಪಡುತ್ತದೆಯೋ (ಅದುವೇ ಪರಾ ಪ್ರಕೃತಿ). (ಪರಾ= ಶ್ರೇಷ್ಠ ಅಪರಾ= ಕನಿಷ್ಠ. ಜಡ ಪ್ರಕೃತಿಯು ಕನಿಷ್ಠ, ಅಜಡವಾದ ಜೀವ ಎಂಬ ಪ್ರಕೃತಿಯು ಶ್ರೇಷ್ಠ.)

ವಿವರಣೆ:– ಭಗವಂತಃ- "ಮಹಾಬಾಹುವೆ, ಅಪರಾ ಪ್ರಕೃತಿಯು ಜಡ, ದೃಶ್ಯ ಹಾಗು ಪರಿಣಾಮಶೀಲ. ದೇಹವು ಅಪರಾ ಪ್ರಕೃತಿಯ ಸ್ಥೂಲಕೃತಿ. ಇದ್ದೇ ದೇಹದಲ್ಲಿ ಮನ ಬುದ್ಧಿ ಅಹಂಕಾರಾತ್ಮಕ ಅಂತಃಕರಣವಿದೆ. ಆದರಲ್ಲಿ

ಪ್ರತಿಫಲಿಸಿದ ನನ್ನ ಚೇತನಾಂಶನೇ ಜೀವ: ಅವನೇ ಪರಾ ಪ್ರಕೃತಿ. ಅವನು ಅಜಡ, ಅದೃಶ್ಯ ಹಾಗು ಸ್ವರೂಪತಃ ಅಪರಿಣಾಮಿ! ಅಪರಾ ಪ್ರಕೃತಿಯ ಅಭಿಮಾನಿಯಾದ ಜೀವಾತ್ಮನ ಇರುವಿಕೆಯಿಂದಲೇ ದೇಹವು ಧರಿಸಲ್ಪಟ್ಟಿದೆ; ಅವನಿಗಾಗಿಯೇ ವಿಶ್ವ ವಿಕಾಸಗೊಂಡಿದೆ, ಶಬ್ದ ಸ್ಪರ್ಶ ರೂಪ ರಸ ಗಂಧಗಳೆಲ್ಲ ಮೈದೆಗೆದು ನಿಂತಿವೆ. ಅವನ ಸಂತೋಷಕ್ಕಾಗಿಯೇ ಪ್ರಕೃತಿಯು ವಿವಿಧ ಭಂಗಿಯಲ್ಲಿ ಲಾಸ್ಯವಾಡುತ್ತಿದೆ! ಜಗತ್ತೆಲ್ಲ ಆ ಪರಾಪ್ರಕೃತಿಯ ಉಪಭೋಗಕ್ಕಾಗಿ ಚಿತ್ರವಿಚಿತ್ರ ರೂಪ ತಾಳಿಕೊಂಡಿದೆ ಎಂಬುದನ್ನು ಗಮನಿಸು."

**ಸಂಬಂಧ:-** ಎರಡೂ ಪ್ರಕೃತಿಗಳ ಆಶ್ರಯನು ದೇವ. ಎಂಬ ಸಂಗತಿಯನ್ನು ಮುಂದೆ ವರ್ಣಿಸಲಾಗುವದು.

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥೬॥**

**ಅರ್ಥ:–** ಸರ್ವಾಣಿ ಭೂತಾನಿ = ಸರ್ವ ಭೂತಗಳು ಏತದ್ಯೋನೀನಿ = ಈ ಪ್ರಕೃತಿದ್ವಯದಿಂದ ಹುಟ್ಟಿವೆ. ಇತಿ = ಎಂದು, ಉಪಧಾರಯ = ತಿಳಿದುಕೊ. ಅಹಂ = ನಾನು ಕೃತ್ಸ್ನಸ್ಯ = ಸಕಲ ಜಗತಃ = ಜಗತ್ತಿನ ಪ್ರಭವಃ = ಕಾರಣನು, ತಥಾ = ಹಾಗೆಯೇ ಪ್ರಲಯಃ = ಪ್ರಲಯ ಸ್ಥಾನನು.

**ವಿವರಣೆ:-** ಭಗವಂತ:- "ಅರ್ಜುನ, ದೇಹವು ಅಪರಾ ಪ್ರಕೃತಿ, ಜೀವಾತ್ಮನು ಪರಾ ಪ್ರಕೃತಿ, ದೇಹ ಗುಣಾತ್ಮಕ, ಜೀವ ನಿರ್ಗುಣ. ದೇಹ ಸಾವಯವ, ಜೀವ ನಿರವಯವ. ದೇಹ ಅಂತವಂತ, ಜೀವ ನಿತ್ಯ. ಈ ಎರಡೂ ಪ್ರಕೃತಿಗಳು ತದ್ವಿರುದ್ಧವಾದರೂ ಅವು ಒಂದಕ್ಕೊಂದು ಹೊಂದಿ ನಿಂತಾಗಲೇ ಜೀವ ವರ್ಗದ ಉದಯ. ದೇಹ ಜೀವರ ಬೆಸುಗೆಯೇ ಉದ್ಭಿಜ, ಸ್ವೇದಜ, ಅಂಡಜ ಹಾಗು ಜರಾಯುಜ ಎಂಬ ನಾಲ್ವಿಧ ಭೂತಗಳ ಉತ್ಪತ್ತಿಗೆ ಕಾರಣ.

"ಪಾರ್ಥ, ಕ್ಲೇಶ, ಕರ್ಮ, ಜಾತ್ಯಾಯುರ್ಭೋಗ ಹಾಗು ವಾಸನಾ ವಿರಹಿತನಾದ ನಾನು ಸಚ್ಚಿದಾನಂದ ಸ್ವರೂಪ. ಪರಾ ಅಪರಾ ಪ್ರಕೃತಿಗಳ ಆಧಾರಭೂಮಿ. 'ಯತೋ ವಾ ಇಮಾನಿ ಭೂತಾನಿ ಜಾಯಂತೆ ಯೇನ ಜಾತಾನಿ ಜೀವಂತಿ। ಯತ್ಪ್ರಯಂತಿ ಅಭಿಸಂವಿಶಂತಿ ತತ್ ಬ್ರಹ್ಮ। ತತ್ ವಿಜಿಜ್ಞಾಸಸ್ವ।' ಈ ಋಷಿ ವಚನದನ್ವಯ ನನ್ನಿಂದಲೇ ಸಕಲ ತತ್ತ್ವಗಳ ಉದಯ, ಬಾಳಿಕೆ ಹಾಗು ಅಳಿವು. ಅಂತ್ಯದಲ್ಲಿ ಏನೆಲ್ಲವು ನನ್ನನ್ನೇ ಸೇರಬೇಕಾಗುತ್ತದೆ. ಆಕಾಶವು ಎಲ್ಲ ಪದಾರ್ಥಗಳಲ್ಲಿ ತುಂಬಿದ್ದರೂ ಅದು ನಿನ್ನ ಇಂದ್ರಿಯಗಳಿಗೆ ಅದೃಶ್ಯ. ಹಾಗೆ ಸರ್ವ ದೇಹಗಳಲ್ಲಿ ಮತ್ತು ಮನಸ್ಸುಗಳಲ್ಲಿ ನಾನು ನೆಲೆಸಿದ್ದರೂ ಮೂಢ ಜೀವನು ನನ್ನನ್ನು ಕಾಣಲಾರ, ಕೇಳಲಾರ, ಮುಟ್ಟಲಾರ!

"ದೇಹವು ಕಾಲಾಂತರದಲ್ಲಿ ಕ್ಷಯಿಸುವದು. ಜೀವನು ಕಾಮಾದಿ ಅನೇಕ ಉದ್ರೇಕಗಳಿಂದ ಕಷ್ಟ ಪಡುವನು. ಕುರುನಂದನ, ಅಂಥ ದೇಹ ಮತ್ತು ಜೀವಾ

ತ್ಮರ ಅಂತರ್ಯಾಮಿಯಾಗಿ ನಾನಿದ್ದರೂ ದೇಹದ ವಿಕಾರವಾಗಲಿ ಜೀವಾತ್ಮನ ಸಂಕಷ್ಟವಾಗಲಿ ನನಗಿಲ್ಲ. ಜನ್ಮ ಮರಣ, ಸಂಕೋಚ ವಿಕಾಸ, ಸುಖ ದುಃಖ ಎಲ್ಲ ಭಾವನೆಗಳನ್ನು ಮೀರಿದ ಮಹಾಂತ ನಾನು. ನಾನು ಸರ್ವ ವ್ಯಾಪಿ. ಅನಂತ ಪ್ರಭು. ನೀನು ದೇಹ ಮತ್ತು ಜೀವಾತ್ಮರ ಸ್ತರದಲ್ಲಿ ನಿಲ್ಲಬೇಡ; ನನ್ನತ್ತ ನೋಡು. ನಾನು ನಿರ್ದೇಶಿಸಲಿರುವ ಜ್ಞಾನ ಮಾರ್ಗದಲ್ಲಿ ಸಾಗು."

(೧) ಪ್ರಕೃತಿಯ ವಿಷಯದಲ್ಲಿ ಕೆಲ ಗಮನೀಯ ಸಂಗತಿಗಳು: 'ತದರ್ಥ ಏವ ದೃಶ್ಯಸ್ಯ ಆತ್ಮಾ' (೨-೨೧ ಪಾ.ಸೂ) ಪುರುಷನಿಗಾಗಿಯೇ ಪ್ರಕೃತಿಯ ಈ ದೃಶ್ಯವಿಸ್ತಾರವಿದೆ! ಇದು ದೇವದರ್ಶಿಗಳಾದ ಋಷಿಗಳ ವಚನ. ಧನ, ದವಸ, ಕನಕ, ಕಾಂಚನ, ಮಾನ, ಮರ್ಯಾದೆ, ದೇಹ, ಇಂದ್ರಿಯ, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಮತ್ತು ಭೌತವಿಶ್ವದ ಅಸಂಖ್ಯ ನಕ್ಷತ್ರಗಳು, ಭೂಮಿಗಳು ಅಪರಾ ಪ್ರಕೃತಿಯ ವಿಭಿನ್ನ ಕೃತಿಗಳು. ಯಾರಿಗಾಗಿ ಪ್ರಕೃತಿಯು ಇಷ್ಟೆಲ್ಲ ವೈವಿಧ್ಯತೆಯಿಂದ ಕೂಡಿದ ವಿಶ್ವರೂಪಾಗಿ ಪರಿಣಾಮಹೊಂದುತ್ತದೆ? ತನಗಾಗಿ ಅಲ್ಲ; ಏಕೆಂದರೆ ತಾನು ಜಡ, ಇಚ್ಛಾ-ಜ್ಞಾನ-ವಿಹೀನ, ಭಾವ ವಿರಹಿತ. ಇನ್ನು ವಿಕಾಸವು ಪರಮ ಪುರುಷನಾದ ಪರಮಾತ್ಮನಿಗಾಗಿಯೂ ಅಲ್ಲ; ಏಕೆಂದರೆ ಅವನು ಆನಂದಘನ, ಪರಿಪೂರ್ಣ, ಅನಂತ. ಅವನು ಪಡೆಯಬೇಕಾದುದೂ ಇಲ್ಲ, ಮುಟ್ಟಬೇಕಾದ ಸಿದ್ಧಿಯೂ ಇಲ್ಲ. ಅವನು ಸ್ವನಿಷ್ಠ. ಹಾಗಾದರೆ ಪ್ರಕೃತಿಯ ಆಟ ಮತ್ತೆ ಯಾರಿಗಾಗಿ? ಅನುಭವಿಗಳ ಉತ್ತರ-ಜೀವರಿಗಾಗಿ! ಜೀವರು ದೇವನ ಅಂಶರು ನಿಜ, ಉಪಾಧಿಗಳ ಮೂಲಕ ದೇಶ ಮತ್ತು ವಸ್ತುಗಳಿಂದ ಪರಿಮಿತರಾಗಿದ್ದಾರೆ. ಸೂರ್ಯನು ಸಾವಿರಾರು ಘಟಗಳಲ್ಲಿ ಪ್ರತಿಫಲಿಸಿ ಸಾವಿರಾರು ಪ್ರತಿಬಿಂಬಾಕಾರ ತಾಳುವಂತೆ ದೇಹಾಂತಃಕರಣಗಳಲ್ಲಿ ಪ್ರತಿಫಲಿಸಿದ ದೇವರವಿಯು ಅಸಂಖ್ಯ ಜೀವರಾಗಿ ತೋರುತ್ತಾನೆ. ಪ್ರಕೃತಿಯು ಈ ಎಲ್ಲ ಜೀವರಿಗಾಗಿ ಅಂಗಾಂಗಗಳಿಂದ ಕೂಡಿದ ಸುಂದರ ದೇಹವನ್ನು ನಿರ್ಮಿಸಿತು. ಅವರ ಭೋಗಕ್ಕಾಗಿ ಅನ್ನ ನೀರು ಮುಂತಾದ ಭೋಗ ಭಾಗ್ಯಗಳನ್ನು ಸೃಷ್ಟಿಸಿತು. ಅಷ್ಟೇ ಅಲ್ಲ, ಪರಮಾತ್ಮನನ್ನು ಕಂಡು ಕೃತಾರ್ಥರಾಗಲೆಂಬ ಉದ್ದೇಶದಿಂದ ಮೋಕ್ಷ ಸಾಧನವಾದ ಅಮಿತ ಶಕ್ತಿಯ ಅಂತಃಕರಣವನ್ನು ನಿರ್ಮಿಸಿತು.

(೨) ಒಟ್ಟಿನಲ್ಲಿ ಪ್ರಕೃತಿ ವಿಕಾಸದ ಉದ್ದೇಶಗಳು ಎರಡು: (ಅ) ಭೋಗ (ಬ) ಮುಕ್ತಿ. ಬುದ್ಧಿಯಿಲ್ಲದ ಜೀವನು ಭೋಗವೇ ಧ್ಯೇಯವೆಂದು ಭಾವಿಸಿ ದೇಹವಿರುವಷ್ಟು ಕಾಲ ಶಬ್ದಾದಿ ವಿಷಯಗಳಲ್ಲಿಯೇ ರಮಿಸುತ್ತಾನೆ, ದೇಹದ ವ್ಯವಹಾರಗಳಿಂದ ದೊರೆಯುವ ಸುಖ ದುಃಖಗಳಲ್ಲಿ ಮುಳುಗುತ್ತಾನೆ. ದೇಹದ ಹುಟ್ಟು ಸಾವುಗಳೊಂದಿಗೆ ತಾನೇ ಹುಟ್ಟುವವ, ತಾನೇ ಸಾಯುವವ ಎಂದು ಭ್ರಮಿಸುತ್ತಾನೆ. ಇದು ಜೀವನ ಬದ್ಧಾವಸ್ಥೆ. ಬುದ್ಧಿವಂತ ಜೀವನು ಹೀಗಲ್ಲ.

ಅವನು ಜಡಾಜಡ ತತ್ತ್ವಗಳನ್ನು ಪೂರ್ತಿಯಾಗಿ ಅರಿತಿದ್ದಾನೆ. ಅವನಲ್ಲಿ ಜಡ ವಸ್ತು ವಿಷಯಕ ವಿರಾಗವಿದೆ. ಮನೆ ಮಡದಿ ಮುಂತಾದ ಭೌತ ಸಂಪದವು ತನಗಾಗಿ; ತಾನು ಅವುಗಳಿಗಾಗಿ ಅಲ್ಲ; ಎಂಬ ಮತಿ ಅವನದು. ಅವನು ಭಾವಿಸುವದು ಹೀಗೆ: 'ದೇಹವು ನನ್ನ ಆವಾಸ ನಿಲಯ. ಇಂದ್ರಿಯಾದಿಗಳು ನನ್ನ ಹಸ್ತಗತ ಸಾಧನಗಳು. ನಾನು ಸಾಕ್ಷಿ. ದೇಹಾದಿ ಅನಾತ್ಮ ಪದಾರ್ಥಗಳ ನಿರ್ಮಾಣದ ಉದ್ದೇಶ ನನಗೆ ಸಾಂಸಾರಿಕ ಭೋಗವೀಯಲಲ್ಲ. ಆ ತತ್ತ್ವಗಳಾಚೆ ಹಬ್ಬಿದ ದೇವ ನನ್ನು ಅರಿಯಲು!' ಈ ನೈಜ ಭಾವನೆಯಿಂದ ಪ್ರೇರಿತನಾದ ಸಾಧಕನು ಇಪ್ಪತ್ನಾಲ್ಕು ತತ್ತ್ವಗಳನ್ನು ಒಳ ಸೆಳೆದು ದೇವ ಮುಖಿಗೊಳಿಸುತ್ತಾನೆ. ಸಾಕ್ಷಿ ಪ್ರಭುವಿನಲ್ಲಿ ಸಮರ್ಪಿಸುತ್ತಾನೆ. ಆಗ ಪ್ರಕೃತಿಯ ಕೃತಿಗಳೆಲ್ಲ ಮರೆಯಾಗುತ್ತವೆ. ಸಾಧಕ ಜೀವನು ವಿಶ್ವಾತ್ಮನಲ್ಲಿ ಒಂದಾಗುತ್ತಾನೆ. ಇದುವೇ ಕೈವಲ್ಯ.

ಸಂಬಂಧ:- ಪರಮಾತ್ಮನಿಗಿಂತ ಪರತರವಿನ್ನೊಂದಿಲ್ಲ.

ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥೭॥

ಅರ್ಥ:- ಧನಂಜಯ = ಧನಂಜಯನೆ, ಮತ್ತಃ = ನನಗಿಂತ ಪರತರಂ = ಶ್ರೇಷ್ಠವಾದ ಅನ್ಯತ್ ಕಿಂಚಿತ್ = ಬೇರಾವುದೂ ನ ಅಸ್ತಿ = ಇರುವದಿಲ್ಲ, ಇದಂ ಸರ್ವಂ = ಇವೆಲ್ಲವೂ ಸೂತ್ರೇ = ದಾರದಲ್ಲಿ ಮಣಿಗಣಾ ಇವ = ಮಣಿಗಳ ಗುಂಪು (ಪೋಣಿಸಲ್ಪಟ್ಟಂತೆ) ಮಯಿ = ನನ್ನಲ್ಲಿ ಪ್ರೋತಂ = ಪೋಣಿಸಲ್ಪಟ್ಟಿದೆ.

ವಿವರಣೆ:- ಭಗವಂತ:- "ಧನಂಜಯ, ಪರಾಪರ ಪ್ರಕೃತಿಗಳ ಪರಮಾಶ್ರಯ ಪ್ರಭು ನಾನು; ಕಾಲ ಮಿತಿ ದೇಶಮಿತಿ ವಸ್ತುಮಿತಿಗಳಿಲ್ಲದ ಅಪರಿಚ್ಛಿನ್ನ ದೇವ ನಾನು; ಏನೂ ಏನೂ ಇಲ್ಲದಂದು ತುಂಬಿ ತುಳುಕುತ್ತಿದ್ದ ದಿವ್ಯ ಅಸ್ತಿತ್ವ ನನ್ನದು. ನಾನು ಸೂಕ್ಷ್ಮಾತಿ ಸೂಕ್ಷ್ಮ; ಸರ್ವ ಕಾರಣಗಳ ಕಾರಣವಾದ ಪ್ರಕೃತಿಗೂ ಕಾರಣ. ನಾನು ಪರಾತ್ ಪರ. ಪರಮೋತ್ಕೃಷ್ಟ ಅಮರ ವಸ್ತು. ಅರ್ಜುನ, ಸೂತ್ರದಲ್ಲಿ ಅನೇಕ ಮಣಿಗಳು ಪೋಣಿಸಲ್ಪಡುವಂತೆ, ಸ್ಥೂಲ ದೇಹದಿಂದ ಬೃಹದ್ ಪ್ರಕೃತಿಯವರೆಗಿನ ಸಮಸ್ತ ತತ್ತ್ವಗಳು ನನ್ನ ಸಚ್ಚಿದಾನಂದಮಯ ಅನುಪಮ ಸೂತ್ರದಲ್ಲಿ ಹೆಣೆಯಲ್ಪಟ್ಟಿವೆ. ಸೂತ್ರ ಬಿಟ್ಟರೆ ಮಣಿಗಳಿಗೆ ಉಳಿವಿಲ್ಲ; ನನ್ನ ಬಿಟ್ಟರೆ ತತ್ತ್ವಗಳಿಗೆ ಅಸ್ತಿತ್ವವಿಲ್ಲ. ಸರ್ವವೂ ನನ್ನನ್ನು ಅವಲಂಬಿಸಿದೆ. ನೀನು ಮಣಿಗಳಲ್ಲಿ ರಮಮಾಣನಾಗದಿರು. ವಿಶ್ವಸೂತ್ರದಂತಿರುವ ನನ್ನನ್ನೇ ನೋಡು, ಚಿಂತಿಸು; ಕೊನೆಗೆ ನನ್ನಲ್ಲಿಯೇ ಒಂದಾಗು."

ವಿಶೇಷಾರ್ಥದರ್ಶನ: (೧) ಕಾಲ ಕರ್ಮಗಳು, ಜೀವ ಜಂತುಗಳು, ಲೋಕ ಲೋಕಂಗಳು; ತತ್ತ್ವ ವೀಚಿಗಳು ತೋರಿ ಬಾರದ ಮುನ್ನ ಅನಂತ ಅಖಂಡ ಅಚಿಂತ್ಯ ಚೇತನಾಂಶವೊಂದೇ ಪರಿಪೂರ್ಣವಾಗಿ ವ್ಯಾಪಿಸಿತ್ತು. ಅದು ಅವ್ಯಯ, ಅವಿಕಾರಿ, ಅಪರಿಣಾಮಿ ಹಾಗೂ ಅಗಮ್ಯ! ಅದು ಕೇವಲ ಅಸ್ತಿತ್ವ,

ಕೇವಲ ಜ್ಞಾನ. ಕೇವಲ ಶಾಂತಿರೂಪ! ಅಂಥ ನಿಸ್ಸೀಮ ಚೇತನಕ್ಕೆ ಭಿನ್ನವಾಗ ದಂತೆ ಅದರಷ್ಟೇ ವ್ಯಾಪಕ, ಅದರಷ್ಟೇ ಸೂಕ್ಷ್ಮವಾದ ಅನನ್ಯ ಮಹಾಶಕ್ತಿ ಯೊಂದು ಆ ಅನಂತಾಕಾಶದಲ್ಲಿ ತುಂಬಿಕೊಂಡಿತ್ತು! ಆ ಮಹಾಕಾಶಕ್ಕೂ ಈ ಮಹಾಶಕ್ತಿಗೂ ಒಂದೇ ಒಂದು ಭಿನ್ನತೆ. ಆ ಮಹಾಕಾಶವು ಚಿರಸ್ಥಾಯಿ! ಕೇವಲಾ ಧಾರ! ಈ ಮಹಾಶಕ್ತಿಯಾದರೋ ವಿಶ್ವ ನಿರ್ಮಾಣಕಾರಿಣಿ! ಪರಿವರ್ತನಾಶೀಲೆ!

(೨) ಪರಮ ಚೇತನದ ಪವಿತ್ರ ಆಶ್ರಯದಲ್ಲಿ ವಿಶ್ವ ಮಹಾಶಕ್ತಿ (ದೇವಾ ತ್ಮಶಕ್ತಿ) ಯು ವಿಚಲಿಸಿತು; ಗುಣ ಸಾಮ್ಯಾತ್ಮಕ ಮಹಾ ಪ್ರಕೃತಿಯಾಗಿ ರೂಪುಗೊಂಡಿತು. ದೇವಾತ್ಮಶಕ್ತಿಯು ಪರಿಸೂಕ್ಷ್ಮ, ಪ್ರಕೃತಿಯು ಅದರ ಸ್ಥೂಲ ರಚನೆ. ಆ ಪ್ರಕೃತಿಯು ಎರಡು ವಿಧ: (ಅ) ಅಸ್ತಿತ್ವ ಅಭಿವ್ಯಕ್ತಕಾರಿಣಿ. (ಬ) ಜ್ಞಾನಾಸ್ತಿತ್ವ ಅಭಿವ್ಯಕ್ತಕಾರಿಣಿ ಮೊದಲನೆಯದು ಅಪರಾ ಪ್ರಕೃತಿ. ಎರ ಡನೆಯದು ಪರಾ ಪ್ರಕೃತಿ. ಪರಮಾತ್ಮನ ಅಸ್ತಿತ್ವವೊಂದನ್ನೇ ಗರ್ಭೀಕರಿಸಿ ಕೊಂಡ ಅಪರಾ ಪ್ರಕೃತಿಯು ವಿಕಾಸವಾದರೆ ಮಹತ್ತಿನಿಂದ ಮೃತ್ತಿಕೆಯವರೆ ಗಿನ ಜಡವಿಶ್ವವು ತೋರಿಬರುತ್ತದೆ. ಪರಮಾತ್ಮನ ಜ್ಞಾನಾಸ್ತಿತ್ವಗಳೆರಡನ್ನೂ ಗರ್ಭೀಕರಿಸಿಕೊಂಡ ಪರಾ ಪ್ರಕೃತಿಯು ವಿಕಾಸವಾದರೆ. ಜೀವ ಸಮುದಾಯವು ಕಾಣಬರುತ್ತದೆ. ಆ ಪರಾ ಮತ್ತು ಅಪರಾ ಪ್ರಕೃತಿಗಳ ವಿಲಾಸಮಯ ಸೃಷ್ಟಿಯೇ 'ವಿಶ್ವ.'

(೩) ಮೊದಲು ಇಲ್ಲದೆ ಮಧ್ಯಂತರದಲ್ಲಿ ತೋರಿಬಂದ ವಸ್ತುವಿಗೆ ಕಾರ್ಯವೆನ್ನುತ್ತಾರೆ. ಪರಾಪರಾತ್ಮಕ ವಿಶ್ವವು ಮೊದಲಿರಲಿಲ್ಲ: ಈಗ ಕಾಣ ಬಂದಿದೆ; ಆದ್ದರಿಂದಿದು ಕಾರ್ಯ. ಕಾರ್ಯವು ಸ್ವಸಂಭವವಲ್ಲ. ಅದು ಉಂಟಾಗ ಬೇಕಾದರೆ ಉಪಾದಾನ ಮತ್ತು ನಿಮಿತ್ತ್ಯ ಕಾರಣಗಳು ಬೇಕು. ಉದಾ: ಮಣ್ಣಿನ ಕೊಡವು ಕಾರ್ಯ. ಮಣ್ಣು ಉಪಾದಾನ ಕಾರಣ; ಕುಂಬಾರನು ನಿಮಿತ್ತ್ಯ ಕಾರಣನು. ಅದೇ ರೀತಿ ವಿಶ್ವವು ಬೃಹದ್ಬ್ರಾಂಡ, ದೇವಾತ್ಮ ಶಕ್ತಿಗತ ಕ್ರಿಯಾಶಕ್ತಿಯಲ್ಲಿ ಪ್ರತಿಫಲಿಸಿದ ಚೈತನ್ಯವೇ ಅದರ ಉಪಾದಾನ ಕಾರಣ. ದೇವಾತ್ಮಶಕ್ತಿಗತ ಜ್ಞಾನ-ಇಚ್ಛಾ ಶಕ್ತಿಗಳಲ್ಲಿ ಪ್ರತಿಫಲಿಸಿದ ಚೈತನ್ಯವೇ ಅದರ ನಿಮಿತ್ತ್ಯ ಕಾರಣ. ದೇವಾತ್ಮ ಶಕ್ತಿಗೂ, ಆ ಶಕ್ತಿಗತ ಚೈತನ್ಯಗಳಿಗೂ ಪರಮ ಮೂಲನಾದವನು ಪರಮಾತ್ಮ. ಆದುದರಿಂದ ಅವನೇ ವಿಶ್ವದ ಅಭಿನ್ನ ನಿಮಿತ್ತೋ ಪಾದಾನ ಕಾರಣನು!! ಜೇಡರ ಹುಳ ತನ್ನ ದೇಹದಿಂದ ಹೊರಡುವ ಎಳೆಯಿಂದ ಮನೆ ಕಟ್ಟುತ್ತದೆ. ಆ ಹುಳದ ದೇಹವು ಆ ಎಳೆಯು ಮನೆಗೆ ಉಪಾದಾನ ಕಾರಣ; ಆ ಹುಳದ ಇಚ್ಛಾಜ್ಞಾನಯುಕ್ತ ಮನಸ್ಸು ನಿಮಿತ್ತ್ಯ ಕಾರಣ. ದೇಹ ಮತ್ತು ಮನಸ್ಸುಗಳೆರಡೂ ಹುಳದ ಸೊತ್ತುಗಳಾದುದರಿಂದ ಆ ಹುಳವು ಎಳೆಯ ಮನೆಗೆ ಅಭಿನ್ನ ನಿಮಿತ್ತೋಪಾದಾನ ಕಾರಣ. ಪರಮಾತ್ಮನ ಅಭಿನ್ನ

ನಿಮಿತ್ತೋಪಾದಾನ ಕಾರಣಕ್ಕೆ ಜೇಡರ ಹುಳದ ದೃಷ್ಟಾಂತ ಅತೀ ಸಮಂಜಸ.

(ಳ) ಜ್ಞಾನ ಸಾಧಕನು ಕಾರ್ಯ ಪ್ರಪಂಚವನ್ನು ಕಂಡು ಮೋಹಿತನಾಗದೆ ಸರ್ವ ಕಾರಣನಾದ ಪರಮಾತ್ಮನತ್ತ ನೋಡಬೇಕು. ಹಾಗೆ ಮಾಡಿದ ಸಾಧಕನ ಮನಸ್ಸು ಶಾಂತವಾಗುವದು; ಜೀವಭಾವವು ಬಯಲಾಗುವದು. ಆಗ ಅನುಭವಕ್ಕೆ ಬರುವ ಪಾವನ ಅವಸ್ಥೆಯೇ ಸಮಾಧಿ.

ಸಂಬಂಧ:- ಪರಮಾತ್ಮನು ಅಪರಿಮಿತ ಪ್ರಭು. ಅವನು ಎಲ್ಲ ವಸ್ತುಗಳ ಅಂತರ್ಯಾಮಿ. ಈ ಮಾತನ್ನು ಮುಂದಿನ ಐದು ಮಂತ್ರಗಳಲ್ಲಿ ವಿಸ್ತರಿಸಲಾಗಿದೆ.

**ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥೮॥**

ಅರ್ಥ:– ಕೌಂತೇಯ=ಕುಂತೀ ಪುತ್ರನೆ, ಅಹಂ=ನಾನು ಅಪ್ಸು=ಜಲದಲ್ಲಿ ರಸಃ =ರಸ, ಶಶಿ ಸೂರ್ಯಯೋಃ=ಚಂದ್ರಸೂರ್ಯರಲ್ಲಿ ಪ್ರಭಾ = ಪ್ರಕಾಶ, ಸರ್ವ ವೇದೇಷು = ಸರ್ವ ವೇದಗಳಲ್ಲಿ ಪ್ರಣವಃ = ಓಂಕಾರ, ಖೇ = ಆಕಾಶದಲ್ಲಿ ಶಬ್ದಃ = ಶಬ್ದ, ನೃಷು = ಪುರುಷರಲ್ಲಿ ಪೌರುಷಂ= ಕರ್ತೃತ್ವ ಶಕ್ತಿ.

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥೯॥**

ಅರ್ಥ:– ಪೃಥಿವ್ಯಾಂ = ಪೃಥ್ವಿಯಲ್ಲಿ ಪುಣ್ಯಃ ಗಂಧಃ = ಪರಿಮಲ ಗಂಧವು, ವಿಭಾವಸೌ = ಅಗ್ನಿಯಲ್ಲಿ ತೇಜಃ = ತೇಜಸ್ಸು, ಸರ್ವಭೂತೇಷು ಜೀವನಂ = ಸರ್ವ ಪ್ರಾಣಿಗಳಲ್ಲಿ ಜೀವನವು, ತಪಸ್ವಿಷು = ತಪಸ್ವಿಗಳಲ್ಲಿ ತಪಃ = ತಪಸ್ಸು ಅಸ್ಮಿ = ನಾನಾಗಿದ್ದೇನೆ.

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥೧೦॥**

ಅರ್ಥ:– ಸರ್ವಭೂತಾನಾಂ = ಸಕಲ ಜೀವಜಂತುಗಳ ಸನಾತನಂ ಬೀಜಂ = ನಿತ್ಯವಾದ ಪ್ರಜೋತ್ಪಾದಕ ಶಕ್ತಿ ಎಂದು, ಮಾಂ=ನನ್ನನ್ನು ವಿದ್ಧಿ= ತಿಳಿ. ಬುದ್ಧಿಮತಾಂ=ಬುದ್ಧಿವಂತರ ಬುದ್ಧಿಃ = ಪ್ರಜ್ಞೆಯು, ತೇಜಸ್ವಿನಾಂ = ತೇಜಸ್ವಿಗಳ ತೇಜಃ = ತೇಜಸ್ಸು ಅಹಂ ಅಸ್ಮಿ = ನಾನು ಇರುತ್ತೇನೆ

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥೧೧॥**

ಅರ್ಥ:-ಬಲವತಾಂ= ಶಕ್ತಿವಂತರ ಕಾಮರಾಗವಿವರ್ಜಿತಂ= (ಕಾಮಃ= ಅಪ್ರಾಪ್ತೇ ವಸ್ತುನಿ ಅಭಿಲಾಷಃ: ದೊರೆತಿರದ ವಸ್ತುವಿನ ಇಚ್ಛೆ. ರಾಗಃ = ಅಭಿಲಾಷಿತೇ ಅರ್ಥೇ ಪ್ರಾಪ್ತೇ ಅಪಿ ಪುನಃ ಅಧಿಕೇ ಅರ್ಥೇ ಚಿತ್ತರಂಜನಾತ್ಮಕ ತೃಷ್ಣಾ. ಇಚ್ಛಿತ ವಸ್ತು ದೊರೆತಾಗಲೂ ಅಧಿಕ ವಸ್ತುವಿಗಾಗಿ ಆಶೆ) ಕಾಮ ರಾಗಗಳಿಲ್ಲದ ಬಲಂ= (ಸಾತ್ವಿಕಂ ಸ್ವಧರ್ಮಾನುಷ್ಠಾನಸಾಮರ್ಥ್ಯಂ; ಸ್ವಧರ್ಮ ಪಾಲನಾಶಕ್ತಿ) ಶಕ್ತಿಯು, ಭೂತೇಷು= ಪ್ರಾಣಿಗಳಲ್ಲಿ ಧರ್ಮಾವಿರುದ್ಧಂ= ಧರ್ಮಕ್ಕೆ (ಪವಿತ್ರ ಗೃಹಸ್ಥ ಧರ್ಮಕ್ಕೆ) ವಿರುದ್ಧವಲ್ಲದ ಕಾಮಃ= ಕಾಮವು ಅಹಂ= ನಾನು ಅಸ್ಮಿ= ಇದ್ದೇನೆ.

ವಿವರಣೆ:– ಭಗವಂತ:– "ಧನಂಜಯ, ಪರಮಾತ್ಮನಾದ ನನ್ನ ವಿಸ್ತಾರ ಅಳತೆಗೆ ಸಿಕ್ಕದು. 'ಅತ್ಯತಿಷ್ಠದ್ದಶಾಂಗುಲಂ' ನಾನು ಹತ್ತೂ ದಿಕ್ಕುಗಳನ್ನು ದಾಟಿ ವ್ಯಾಪಿಸಿದ್ದೇನೆ. ಪರಾಪರ ಪ್ರಕೃತಿಗಳ ಸುಳಿವಿಲ್ಲದಲ್ಲಿ ನೆಲೆಸಿದ್ದೇನೆ. ನಾನಿಲ್ಲದ ಸ್ಥಾನವಿಲ್ಲ. ನೀನು ನಿನ್ನ ಬಾಹ್ಯಾಂತರ ಇಂದ್ರಿಯಗಳಿಂದ ಏನ ನೋಡುವಿಯೋ ಅದೆಲ್ಲದರ ಅಂತರ್ಗತ ಸತ್ತು ನಾನು! ತೋರಿಕೆಯ ಒಳಗಡೆ ನೋಡು. ನನ್ನ ಪಾವನ ದರ್ಶನ ಹೊಂದು.

(೧) ರಸೋಹಮಪ್ಸು:- ಗಂಧ ತನ್ಮಾತ್ರೆಯಿಂದ ಪೃಥ್ವಿಯ ಉತ್ಪತ್ತಿ; ರಸ ತನ್ಮಾತ್ರೆಯಿಂದ ಜಲದ ಉತ್ಪತ್ತಿ; ರೂಪ ತನ್ಮಾತ್ರೆಯಿಂದ ಅಗ್ನಿಯ ಉತ್ಪತ್ತಿ; ಸ್ಪರ್ಶ ತನ್ಮಾತ್ರೆಯಿಂದ ವಾಯುವಿನ ಉತ್ಪತ್ತಿ; ಶಬ್ದ ತನ್ಮಾತ್ರೆಯಿಂದ ಆಕಾಶದ ಉತ್ಪತ್ತಿ. ಭೂತಗಳು ಜಡ, ಸ್ಥೂಲ, ಪರಿಣಾಮಶೀಲ. ತನ್ಮಾತ್ರೆಗಳು ಸೂಕ್ಷ್ಮ ಹಾಗು ಬಹುಕಾಲ ಬಾಳುವಂಥವು. ಪಂಚ ಭೂತಗಳಲ್ಲಿ ಆಯಾ ತನ್ಮಾತ್ರೆಗಳು ಆತ್ಮವಾಗಿ ನೆಲೆಸಿವೆ; ಪಂಚ ಭೂತಗಳಿಗೆ ಇಂತು ಪ್ರಾಣರೂಪವಾದ ಸಾರ ತತ್ತ್ವ ಗಳೆಲ್ಲ ಭಗವಂತನ ವಿಶೇಷ ರೂಪುಗಳು.

(೨) ಸಕಲ ವೇದಗಳಿಗೆ ಎರಡು ಮುಖ—ನಾಮ ಮತ್ತು ಅನುಭವ. ನಾಮ ಗಳಿಗೆ ಆತ್ಮರೂಪವಾದುದು ಪ್ರಣವ; ಅನುಭವಗಳಿಗೆ ಮೂಲವಾದುದು ಪ್ರಣವ ದೇವ. ಅದೇ ರೀತಿ, ಪುರುಷರಲ್ಲಿರುವ ಪೌರುಷ (ಶೌರ್ಯ, ಸಾಹಸ ಪ್ರವೃತ್ತಿ ಗಳು)ವೂ ಆತನೇ.

(೩) ಜೀವನಂ ಸರ್ವ ಭೂತೇಷು:- ಸಕಲ ಪ್ರಾಣಿಗಳು ಬದುಕಿರುವವರೆಗೆ ಅಸಂಖ್ಯ ಚಟುವಟಿಕೆಗಳಲ್ಲಿ ತೊಡಗಿವೆ; ಅವು ನೋಡುತ್ತವೆ, ಕೂಡುತ್ತವೆ, ಓಡಾಡುತ್ತವೆ, ಉಪಭೋಗಿಸುತ್ತವೆ, ಸಂತೋಷಿಸುತ್ತವೆ, ದುಃಖಿಸುತ್ತವೆ. ಆ ಎಲ್ಲ ಕ್ರಿಯೆಗಳಿಗೆ ಮೂಲ ಶಕ್ತಿಶ್ರೋತವೆಂದರೆ ಪ್ರಾಣ(ಜೀವನ). ಆ ಪ್ರಾಣವು ಪರಮಾತ್ಮ.

(೪) ತಪಃ ಅಸ್ಮಿ ತಪಸ್ವಿಷು:- ಬೀಜಂ ಸರ್ವ ಭೂತಾನಾಂ; ಬುದ್ಧಿಃ ಬುದ್ಧಿ ಮತಾಂ:- ಪರಮ ಶ್ರೇಯಸ್ ಸಿದ್ಧಿಗಾಗಿ ಭೌತಿಕ ಮಾನಸಿಕ ಕ್ಲೇಶಗಳನ್ನು ಸಹಿಸು ವವರು ತಪಸ್ವಿಗಳು; ಅವರಲ್ಲಿರುವ ನಿರೋಧ, ಸಂಯಮ, ಸಹನಗಳೇ ತಪ. ಆ ತಪವು ಪರಮಾತ್ಮ. ಸಕಲ ಪ್ರಾಣಿಗಳಲ್ಲಿ ದೇಹ ನಿರ್ಮಾಪಕ ಸೃಜನ-ಶಕ್ತಿ ಇದೆ; ಇದೇ ಬೀಜ. ಇದು ದೇವನದೇ ಆದ ಒಂದು ರೂಪ. ದೇವನನ್ನು ಅರಿತವರು ಬುದ್ಧಿವಂತರು; ಅವರಲ್ಲಿರುವ ಪರಿಶುದ್ಧವಾದ ದೇವದರ್ಶಕವಾದ ಬುದ್ಧಿಯು ಪರಮಾತ್ಮ.

(೫) ತೇಜಃ ತೇಜಸ್ವಿನಾಂ:– ಅಜೇಯ ವೀರರಿಗೆ, ಪ್ರಚಂಡ ಬುದ್ಧಿವಂತ ರಿಗೆ, ಆಜನ್ಮ ಬ್ರಹ್ಮಚಾರಿಗಳಿಗೆ, ದೇವ ಸಾಕ್ಷಾತ್ಕಾರ ಹೊಂದಿದ ಮಹಾನುಭಾವ ರಿಗೆ ತೇಜಸ್ವಿಗಳೆನ್ನುತ್ತಾರೆ. ಅವರಲ್ಲಿ ನೆಲೆಸಿರುವ ತೇಜಸ್ಸು ಪರಮಾತ್ಮ.

(೬)ಬಲಂ ಕಾಮರಾಗವಿವರ್ಜಿತಂ ಬಲವತಾಂ:– ಅಪ್ರಾಪ್ತ ವಿಷಯಾಭಿಲಾಷೆಯು ಕಾಮ; ಪ್ರಾಪ್ತ ವಿಷಯ ರಕ್ಷಣಾ ವ್ಯಾಮೋಹವು ರಾಗ. ಈ ಎರಡೂ ದೌರ್ಬಲ್ಯಗಳು ಯಾರಲ್ಲಿ ಇಲ್ಲವೋ ಅವರು ಬಲವಂತರು. ಬಲವು ದೇವನ ರೂಪು.

(೭) ಧರ್ಮಾವಿರುದ್ಧೋ ಭೂತೇಷು ಕಾಮಃ:– ದೇವನೇ ಸಮಸ್ತ ಭೂತಗಳಲ್ಲಿ ಶಾಸ್ತ್ರ ಸಮ್ಮತವಾದ ನ್ಯಾಯ-ನೀತಿ ಬದ್ಧವಾದ, ಆತ್ಮ ಸಾಧನೆಗೆ ಸಹಾಯಕವಾದ ಕಾಮವಾಗಿದ್ದಾನೆ.

ಪರಮಾತ್ಮನು ಎಲ್ಲೋ ಅಡಗಿ ನಿಂತಿಲ್ಲ. ನಮ್ಮ ಹಾಗು ನಮ್ಮ ಸುತ್ತಲಿನ ಜಗತ್ತಿನಲ್ಲೆಲ್ಲ ಒಂದೊಂದು ರೂಪದಿಂದ ನೆಲೆಸಿದ್ದಾನೆ. ನೋಡಿದಲ್ಲೆಲ್ಲ ಕೇಳಿದಲ್ಲೆಲ್ಲ ಮುಟ್ಟಿದಲ್ಲೆಲ್ಲ ಅವನನ್ನೇ ಕಾಣುವದು ಬಲ್ಲವರ ದೃಷ್ಟಿ. ಇದಕ್ಕೆ ಸರ್ವಾತ್ಮದೃಷ್ಟಿ ಎಂದು ನಾಮ. ವ್ಯಕ್ತಿಯ ಹೊರ ಚರ್ಮ ನೋಡುವವರು ಚಮಾರರು. ವ್ಯಕ್ತಿಯ ಅಂತಃಸತ್ವ ನೋಡುವವರು ದೃಷ್ಟಾರರು! ಸೂರ್ಯ ಚಂದ್ರಾದಿಗಳ ಕಾಣುವವರು ಸಾಮಾನ್ಯರು; ಅವರಲ್ಲಿರುವ ಪರಮ ಬೆಳಗನ್ನು ಕಾಣುವವರು ಕೃತಾರ್ಥರು. ಅವರೇ ಧನ್ಯರು, ಸರ್ವಾತ್ಮಭಾವಿಗಳು! ಅವರ ಸರ್ವಾತ್ಮದರ್ಶನದ ವರ್ಣನೆ ಈ ಶ್ರುತಿ ಮಂತ್ರಗಳಲ್ಲಿದೆ:

"ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ॥
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಶ್ಶಾಶ್ವತೀ ನೇತರೇಷಾಮ್॥"

ಅಸಂಖ್ಯ ಜೀವರಿಗೆ ಕರ್ಮ ಫಲಗಳನ್ನು ನೀಡುವ ದೇವನು ಅದ್ವಯ. ಅವನು ನಿತ್ಯ ವಸ್ತುಗಳಲ್ಲಿ ನಿತ್ಯ; ಚೇತನ ವಸ್ತುಗಳಲ್ಲಿ ಚೇತನ. ಹೃದಯ ಮಂದಿರದಲ್ಲಿರುವ ಅವನನ್ನು ಯಾವ ಧೀರರು ನೋಡುತ್ತಾರೆಯೋ ಅವರಿಗೆ ಶಾಶ್ವತ ಶಾಂತಿಯಿದೆ. ಉಳಿದವರಿಗಿಲ್ಲ. (೨-೨-೧೩ ಕಠ).

"ಶ್ರೋತ್ರಸ್ಯ ಶ್ರೋತ್ರಂ ಮನಸೋಽಪಿ ಮನಃ
ಯದ್ವಾಚೋಹ ವಾಚಂ ಸ ಉ ಪ್ರಾಣಸ್ಯ ಪ್ರಾಣಮ್ ॥
ಚಕ್ಷುಷಶ್ಚಕ್ಷುರತಿಮುಚ್ಯ ಧೀರಾಃ
ಪ್ರೇತಾಸ್ಮಾಲ್ಲೋಕಾದಮೃತಾ ಭವಂತಿ ॥ (೧–೨ ಕೇನ).

ದೇವನು ಶ್ರೋತ್ರದ ಶ್ರೋತ್ರ; ಮನಸ್ಸಿನ ಮನಸ್ಸು; ವಾಣಿಯ ವಾಣಿ; ಪ್ರಾಣದ ಪ್ರಾಣ; ಚಕ್ಷುವಿನ ಚಕ್ಷು. ಅವುಗಳ ಪ್ರೇರಕ ಪ್ರಭು ಅವನೇ. ಅವನನ್ನು ತಿಳಿದವರು ಧೀರರು. ಜೀವನ್ಮುಕ್ತರಾದ ಅವರು ದೇಹ ತ್ಯಜಿಸಿದ ನಂತರ ಅಮೃತರಾಗುತ್ತಾರೆ.

ಸಂಬಂಧ:– ವಿಶ್ವವು ತ್ರಿಗುಣಾತ್ಮಿಕ, ವಿಶ್ವದಲ್ಲಿ ಬಾಳುತ್ತಿರುವ ಜೀವರ ಭಾವಗಳೂ ತ್ರಿಗುಣಾತ್ಮಿಕ; ಜೀವರು ಆಚರಿಸುವ ಕ್ರಿಯೆಗಳೂ ತ್ರಿಗುಣ ಪ್ರೇರಿತ. ಆದರೆ ಗುಣಗಳು ತಮ್ಮ ಅಸ್ತಿತ್ವಕ್ಕಾಗಿ ಪರಮಾತ್ಮನನ್ನೇ ಅವಲಂಬಿಸಿದ್ದರಿಂದ ಆ ದೇವನೆ ನಿರ್ಮಾಣ ಕರ್ತೃ ಎನಿಸುತ್ತಾನೆ. ಆ ಅರ್ಥದಲ್ಲಿ ಅವನೇ ತ್ರಿವಿಧ ಭಾವ

ಗಳ ಜನಕ. ಈ ಮಾತನ್ನು ಮುಂದಿನ ಮಂತ್ರಗಳು ವಿವರಿಸಿವೆ.

**ಯೇ ಚೈವ ಸಾತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥೧೨॥**

ಅರ್ಥ:-ಯೇ=ಯಾವ ಸಾತ್ವಿಕಾಃ ರಾಜಸಾಃ ತಾಮಸಾಃ ಚ ಏವ ಭಾವಾಃ=ಸಾತ್ವಿಕ, ರಾಜಸಿಕ ಮತ್ತು ತಾಮಸಿಕ ಭಾವಗಳಿವೆಯೋ ತಾನ್=ಅವನ್ನೆಲ್ಲ, ಮತ್ತಃ ಏವ ಇತಿ= ನನ್ನಿಂದಲೇ ಸೃಷ್ಟವಾದವುಗಳೆಂದು ವಿದ್ಧಿ= ತಿಳಿ. ತು= ಆದರೆ ಅಹಂ= ನಾನು ನ ತೇಷು= ಅವುಗಳಲ್ಲಿಲ್ಲ. ತೇ (ತು) ಮಯಿ= ಅವು ಮಾತ್ರ ನನ್ನಲ್ಲಿವೆ.

ವಿವರಣೆ:– ಭಗವಂತ:– "ಕುರುನಂದನ, ಲೋಕದಲ್ಲಿ ಅಗಣಿತ ಜನರು ಬದುಕುತ್ತಿದ್ದಾರೆ. ಅವರಲ್ಲಿ ಕೆಲವರ ಭಾವ ಸಾತ್ವಿಕ; ಅವರಿಗೆ ಅಹಿಂಸಾದಿ ಸದ್ಗುಣಗಳಲ್ಲಿ ಅಭಿರತಿ. ಕೆಲವರ ಭಾವ ರಾಜಸಿಕ; ಅವರಿಗೆ ಕಾಮ ಕ್ರೋಧಾದಿಗಳಲ್ಲಿ ಆಸಕ್ತಿ. ಮತ್ತೆ ಕೆಲವರ ಭಾವ ತಾಮಸಿಕ; ಅವರಿಗೆ ವ್ಯಾಮೋಹ ಉನ್ಮಾದಗಳೆಂದರೆ ಪ್ರೀತಿ. ಈ ಮೂರು ಬಗೆಯ ಭಾವನೆಗಳಿಗೂ ನಾನೇ ಅಂತಿಮ ಕಾರಣನೆಂದು ತಿಳಿ. ನನ್ನ ಸಾನಿಧ್ಯದಲ್ಲಿಯೇ ಅವು ವ್ಯಕ್ತವಾಗುತ್ತವೆ. ಹಾಗಿದ್ದರೂ ನಾನು ಅವುಗಳಲ್ಲಿಲ್ಲ: ಸತ್ವಾದಿ ಗುಣ ಭಾವಗಳು ನನ್ನನ್ನು ಬಂಧಿಸಲಾರವು. ಆದರೆ ಆ ಪರಿಮಿತ ಗುಣ ಭಾವಗಳು ಮಾತ್ರ ನನ್ನಿಂದ ಭಿನ್ನವಾಗಿ ಇರಲಾರವು. ನಾನು ಅವುಗಳಲ್ಲಿಲ್ಲ; ಅವು ಮಾತ್ರ ನನ್ನಲ್ಲಿಯೇ ಇವೆ."

(೧) ಬೀಜದಲ್ಲಿ ವೃಕ್ಷವು ಅವ್ಯಕ್ತವಾಗಿ ಇದೆ. ನೀರಿನ ಸಂಪರ್ಕದಿಂದ ಆ ಬೀಜ ಉಬ್ಬಿಕೊಳ್ಳುತ್ತದೆ. ನಂತರ ಅಂಕುರಿಸುತ್ತದೆ. ಆ ಅಂಕುರವು ಬೆಳೆದು ಸಸಿ, ವೃಕ್ಷ, ಪತ್ರ, ಪುಷ್ಪ ಹಾಗು ಫಲಗಳಾಗಿ ಮಾರ್ಪಡುತ್ತದೆ. ಅದರಂತೆ, ಗುಣಗರ್ಭಾತ್ಮಕ ಪ್ರಕೃತಿಯು ಬೀಜ. ವಿಶ್ವ ವೃಕ್ಷವು ಅದರಲ್ಲಿ ಅಡಗಿಕೊಂಡಿದೆ. ಸಾತ್ವಿಕಾದಿ ತ್ರಿಗುಣಗಳು ಅದರಲ್ಲಿ ಅಚಲವಾಗಿ ನೆಲೆಸಿವೆ. ಈ ಪ್ರಕೃತಿ ಬೀಜವು ದೇವನ ಸಾನಿಧ್ಯದಲ್ಲಿ ಉಬ್ಬಿಕೊಳ್ಳುತ್ತದೆ. ಈ ಉಬ್ಬಿದ ಪ್ರಕೃತಿಯೇ ಮಹತ್ತು. ಈ ಮಹತ್ತು ಮತ್ತಷ್ಟು ವಿಕಾರವಾಗಿ ಅಹಂಕಾರವೆಂಬ ಅಂಕುರ ತೋರಿ ಬರುತ್ತದೆ. ಇಲ್ಲಿ ಸತ್ವಾದಿ ಗುಣಗಳು ಬೇರೆ ಬೇರೆಯಾಗಿ ಪ್ರಕಟವಾಗುತ್ತವೆ, ಸಾತ್ವಿಕ ಅಹಂಕಾರದಿಂದ ಸಾತ್ವಿಕ ಸೃಷ್ಟಿ-ವೃಕ್ಷವು ಬೆಳೆದರೆ, ರಾಜಸಿಕ ತಾಮಸಿಕ ಅಹಂಕಾರಗಳಿಂದ ರಾಜಸಿಕ ತಾಮಸಿಕ ಸೃಷ್ಟಿ-ವೃಕ್ಷಗಳು ಬೆಳೆದು ಬರುತ್ತವೆ.

ಈ ರೀತಿ ಪ್ರಕೃತಿಯ ವೃಕ್ಷ ಬೆಳೆದು ನಿಂತರೂ ಆ ವೃಕ್ಷದ ಆಧಾರ ದೇವಭೂಮಿ; ಆ ವೃಕ್ಷದಲ್ಲಿ ಹರಿಯುವ ಜೀವರಸ ಬಂದುದು ಅದೇ ಚೈತನ್ಯ ಭೂಮಿಯಿಂದ. ಹೀಗಾಗಿ, ಸಾತ್ವಿಕಾದಿ ಸಕಲ ಭಾವನೆಗಳಿಗೆ ಪರಮಾತ್ಮನೇ ಕಾರಣ ಎಂಬ ಮಾತು ಸುಸ್ಪಷ್ಟ!

(೨) ಯೇ ಚೈವ ಸಾತ್ವಿಕಾ...ಭಾವಾಃ:-ಆತ್ಮಜ್ಞಾನ, ಸಮಾಧಿ, ಧ್ಯಾನ, ಜಪ, ಅರ್ಚನ, ನೀತಿ ನಿಯಮಾಚರಣೆ, ದಯೆ, ದಾನ,–ಈ ಗುಣಗಳಿಗೆ ಸಾತ್ವಿಕ

ಭಾವಗಳೆಂದು ಸಂಕೇತ. ಈ ಗುಣ, ಈ ಭಾವ ಉಳ್ಳವರು ಸಾತ್ವಿಕರು. ರಾಗ, ವಿಷಯ ವಿಲಾಸ, ಶೃಂಗಾರ, ಕಾಮ, ದರ್ಪ–ಇಂಥ ವಿಕ್ಷುಬ್ಧ ಗುಣಗಳಿಗೆ ರಾಜಸಿಕ ಭಾವಗಳೆಂದು ಹೆಸರು; ಈ ಭಾವದ ಜನರು ರಾಜಸಿಕರು. ಇವರು ಸ್ವಾರ್ಥಿಗಳು. ವಿತಂಡ, ದುರ್ವಿಷಯ ರತಿ, ಪ್ರಮಾದ, ಮೋಹ, ಅಜ್ಞಾನ– ಇಂಥ ಮಾದಕ ಗುಣಗಳಿಗೆ ತಾಮಸಿಕ ಭಾವಗಳೆಂದು ನಾಮ. ಈ ಭಾವ ಉಳ್ಳವರು ತಾಮಸಿಕರು. ಇವರ ಬುದ್ಧಿ ಜಡ. ಕಲಹೋತ್ಸುಕರಿವರು. ಪಾಪ ಕಾರ್ಯಕ್ಕೆ ಹೇಸದವರು.

ಸಾತ್ವಿಕರು ಲೋಕ ಪೂಜ್ಯರು, ರಾಜಸಿಕರು ಧನ-ಧಾನ್ಯಾದಿಗಳ ಮೂಲಕ ಮಾನ-ಮರ್ಯಾದೆ ಗಳಿಸುತ್ತಾರೆ. ತಾಮಸಿಕರು ಲೋಕಕ್ಕೆ ಅಪ್ರಿಯರು. ತಿಳಿದ ಅನುಭಾವಿಯು "ಗುಣಾಃ ಗುಣೇಷು ವರ್ತಂತೇ ಇತಿ" ಗುಣಗಳು ಗುಣಗಳಲ್ಲಿ ವರ್ತಿಸುತ್ತವೆ. ನನಗೇನೂ ಸಂಬಂಧವಿಲ್ಲ ಎಂದು ತಿಳಿಯುತ್ತಾನೆ. ಸಾತ್ವಿಕಾದಿ ಭಾವಗಳ ಅಭಿಮಾನ ನೀಗಿ ಆ ಗುಣಾಧಾರ ದೇವನನ್ನೇ ಕಂಡು ಆನಂದ ಪಡುತ್ತಾನೆ.

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥೧೩॥**

**ಅರ್ಥ:-** ತ್ರಿಭಿಃ ಗುಣಮಯೈಃ ಏಭಿಃ ಭಾವೈಃ =ತ್ರಿಗುಣಮಯವಾದ ಈ ತ್ರಿವಿಧ ಭಾವಗಳಿಂದ ಇದಂ ಸರ್ವಂ ಜಗತ್= ಈ ಎಲ್ಲ ಜಗತ್ತು ಮೋಹಿತಂ = ಮೋಹಿತವಾಗಿದೆ. ಏಭ್ಯಃ ಪರಂ= ಈ ಗುಣ ಭಾವಗಳಿಗಿಂತ ವಿಲಕ್ಷಣನಾದ ಅವ್ಯಯಂ= ಅವ್ಯಯನಾದ ಮಾಮ್ = ನನ್ನನ್ನು ನ ಅಭಿಜಾನಾತಿ= ತಿಳಿದುಕೊಳ್ಳದು.

**ವಿವರಣೆ:-** ಭಗವಂತ:–"ಪಾರ್ಥ, ಸತ್ವ ರಜ ತಮ ಗುಣಗಳಿಂದ ಸಾತ್ವಿಕ ರಾಜಸಿಕ ತಾಮಸಿಕ ಭಾವಗಳ ಉತ್ಪತ್ತಿ. ಆ ಭಾವಗಳಿಂದ ಸಾತ್ವಿಕ ರಾಜಸಿಕ ತಾಮಸಿಕ ಕ್ರಿಯೆಗಳ ಹುಟ್ಟು. ಜಗತ್ತು ಈ ಮೂರರ ಬಲೆಯಲ್ಲಿ ಸಿಕ್ಕಿದೆ. ಕೆಲವರಿಗೆ ತಮ್ಮ ಒಳ್ಳೆಯತನದ ಅಭಿಮಾನ. ಕೆಲವರಿಗೆ ತಮ್ಮ ಅಧಿಕಾರ ಸಂಪದ ಮತ್ತು ಕೀರ್ತಿಯ ಹಮ್ಮು. ಕೆಲವರಿಗೆ ಮಡದಿ ಮಕ್ಕಳ ವ್ಯಾಮೋಹ-ಮದ. ಇಂಥ ಜನರಿಗೆ ಗುಣಾತೀತ, ಭಾವಾತೀತ ಹಾಗು ನಿಷ್ಕ್ರಿಯ ಅವ್ಯಯನಾದ ನನ್ನ ದರ್ಶನ ಹೇಗಾದೀತು?

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥೧೪॥**

**ಅರ್ಥ:-** ಹಿ= ನಿಶ್ಚಿತವಾಗಿಯೂ, ಮಮ= ನನ್ನ ಏಷಾ= ಈ ಗುಣಮಯೀ= ತ್ರಿಗುಣಮಯಿಯಾದ ದೈವೀ ಮಾಯಾ= ದೈವೀ ಮಾಯೆಯು ದುರತ್ಯಯಾ= ದುಸ್ತರವಾಗಿದೆ. ಯೇ= ಯಾರು ಮಾಂ ಏವ= ನನ್ನನ್ನೇ ಪ್ರಪದ್ಯಂತೇ= ಆಶ್ರಯಿಸುತ್ತಾರೆಯೋ ತೇ= ಅವರು ಏತಾಂ= ಈ ಮಾಯಾಂ= ಮಾಯೆಯನ್ನು ತರಂತಿ= ದಾಟುತ್ತಾರೆ.

ವಿವರಣೆ:- (೧) ಮಾಯೆ:- 'ಏಕೋ ದೇವಃ' ದೇವನು ಅದ್ವಯ; ಅನಂತ. ಅವನಲ್ಲಿ ಅವಿನಾಭಾವ ಸಂಬಂಧದಿಂದ ದೇವಾತ್ಮ ಶಕ್ತಿ ಇದೆ. ದೇವನು ಚೈತನ್ಯ ಭಾನು; ಆ ಶಕ್ತಿಯು ಚೈತನ್ಯ ಪ್ರಭಾ. ದೇವನ ಪ್ರಶಾಂತ ಸನ್ನಿಧಿಯಲ್ಲಿ ಆ ಶಕ್ತಿಯು ಪರಿಣಮಿಸಿ ಎರಡು ರೂಪುಗಳಿಗೆ ಜನ್ಮ ಕೊಡುತ್ತಾಳೆ: (ಅ) ಶುದ್ಧ (ಬ) ಅಶುದ್ಧ. ಶುದ್ಧ ಶಕ್ತಿಯು ದೇವನಿಗೆ ಉಪಾಧಿಯಾಗಿ ನಿಂತು ಅವನ ಸುಪ್ತ ಸಚ್ಚಿದಾನಂದಾದಿ ಲಕ್ಷಣಗಳನ್ನು ಪ್ರಕಟ ಪಡಿಸುತ್ತದೆ. ಅಶುದ್ಧ ಶಕ್ತಿಯೇ ಮಾಯೆ. ಇವರಲ್ಲಿ ಗುಣಗಳ ಸಂಚಲನವಿದೆ. ಸತ್ವ ಗುಣಾಧಿಕ್ಯವಾದರೆ ಆ ಮಾಯೆಗೆ ಊರ್ಧ್ವ ಮಾಯೆಯೆಂದು ಹೆಸರು; ರಜ ತಮ ಗುಣಾಧಿಕ್ಯವಾದರೆ ಅವಕ್ಕೆ ಅಧೋಮಾಯೆ ಎಂದು ನಾಮ. ಊರ್ಧ್ವಮಾಯಾ ವಿಶಿಷ್ಟನೇ ಮಹೇಶ, ತತ್ ಪದದ ವಾಚ್ಯ. ಅಧೋಮಾಯಾವಿಶಿಷ್ಟ ದೇವನೇ ಜೀವಾತ್ಮ, ತ್ವಂ ಪದದ ವಾಚ್ಯ. ಬ್ರಹ್ಮ ವಿಷ್ಣು ರುದ್ರಾದಿ ದೇವ ದೇವತೆಗಳು ಮಹೇಶನ ವಿಭಿನ್ನ ಮೂರ್ತಿಗಳು. ವಿಶ್ವ ಜೀವ, ತೈಜಸ ಜೀವ, ಪ್ರಾಜ್ಞ ಜೀವ ಮುಂತಾದವರೆಲ್ಲ ಜೀವಾತ್ಮನ ವಿವಿಧ ರೂಪರು.

ಮಾಯೆ ಶಕ್ತಿಶಾಲಿನಿ. ಆಕೆಯ ರೂಪ ಅತೀ ಸುಂದರ. ಆಕೆಯ ಮೋಹಕ್ಕೆ ಒಳಗಾಗದವರಾರು? ಆಕೆಯ ಮೋಡಿಗೆ ಮರುಳಾದ ಬ್ರಹ್ಮನು ತನ್ನ ಹೆಂಡತಿಯನ್ನು ನಾಲಿಗೆಯ ಮೇಲಿಟ್ಟುಕೊಂಡ. ವಿಷ್ಣುವು ಧರ್ಮಪತ್ನಿಗೆ ತನ್ನ ಎದೆಯ ಮೇಲೆ ಸ್ಥಾನವಿತ್ತ. ಶಿವನಂತು ತನ್ನ ಹೆಂಡಂದಿರಿಗೆ ತನ್ನ ತೊಡೆ ತಲೆಗಳ ಮೇಲೆ ಆಸನವಿತ್ತ! ಜೀವರಂತು ಚಿತ್ರ ವಿಚಿತ್ರ ಪ್ರಪಂಚಕ್ಕೆ ಪೂರ್ತಿ ಮರುಳಾದರು. ಪ್ರಪಂಚವೇ ಪುರುಷಾರ್ಥವೆಂದು ಬಗೆದರು. ಸ್ತ್ರೀ ಪುತ್ರಾದಿಗಳೇ ಬ್ರಹ್ಮವೆಂದು ಭಾವಿಸಿದರು.

ಮಾಯೆಯನ್ನು ಗೆಲ್ಲುವದು ದುಸ್ಸಾಧ್ಯ. ವಿಶ್ವವೆಲ್ಲ ಆಕೆಯ ಇಚ್ಛೆಗೆ ಸರಿಯಾಗಿ ತಾಳ ಹಾಕುತ್ತಿದೆ. ಆಕೆಯ ಗುರುತ್ವಾಕರ್ಷಣ ಶಕ್ತಿಯು ಸುಪ್ತಿ ಮಂಡಲದವರೆಗೂ ವ್ಯಾಪಿಸಿದೆ, ಸ್ವರ್ಗದಿಂದ ನರಕದವರೆಗೂ ಹಬ್ಬಿದೆ, ಪಂಡಿತರಿಂದ ಪಾಮರರವರೆಗೆ, ಗುರುಗಳಿಂದ ಭಕ್ತರವರೆಗೆ, ರಾಜರಿಂದ ಭಿಕ್ಷುಗಳವರೆಗೆ ವಿಸ್ತರಿಸಿದೆ. ಅವಳ ದುರ್ದಮ್ಯ ನಾಟ್ಯವನ್ನು ಶಬ್ದಗಳು ರೇಖಿಸವು. ಶ್ರೀನಿಜಗುಣ ಶಿವಯೋಗಿಗಳ ಮುಖದಿಂದಲೇ ಅವಳ ಕ್ರೀಡೆಯ ವರ್ಣನೆಯನ್ನು ಕೇಳಬೇಕು:

ಆಡುತೈದಾಳೆ ಮಾಯೆಯೆಂಬ ಕಾಮಿನಿ। ಬಿಡದೆ ನೋಡಿ ಬಲ್ಲವರು ಸಂಸಾರ ನಾಟಕವ ॥ಪ॥
ಶಿವಶಕ್ತಿಯೆಂಬ ರಂಗದೊಳು ನರನಾಗದಾ। ನವ ದೇವತಾದಿ ಪೆಸರಿನ ತನುಗಳೆಂಬ ॥
ವಿವಿಧ ರೂಪಿನ ಬೊಂಬೆಗಳಿಗಾತ್ಮರೆಂಬ ಸೂ। ತ್ರವನು ಹವಣಿಸಿ ಮೋಹದೊಡನೆ ಮೇಳೈಸಿ॥೧॥
ಮೂರವಸ್ಥೆಯ ಮರೆಯೋಳಿರ್ದು ತಾನಲ್ಲಲ್ಲಿ। ಯಾರು ವಿಕೃತಿಗಳು ನವಗುಣೋನ್ನತಿಗಳೆಂಬ ॥
ಬೇರುವಡೆದಿಹ ಭಾವರಸ ಚಿತ್ರ ರಚನೆ ಕೆಲ। ಜಾರವಂತಭಿನಯಿಸಿ ತೋರಿ ನಿಯತಿಯೊಳು ॥೨॥
ಪರಮುಕ್ತರೆಂಬ ಕೋವಿದರೊಂದುಗೂಡಿ ಪರ। ತರ ಶುಭಲಿಂಗವೆಂಬತುಳ ಭೂಭುಜನು ॥

ಪರಿವಿಡಿದು ತನ್ನ ಸನ್ನಿಧಿಯೊಳಿಂತೆಸೆವನವರ। ಪರಿಯು ನವಿಕಾರದಿಂದೀಕ್ಷಿಸುತ್ತಿರಲು ॥೩॥

ಮಾಯೆಯ ಮನೋಹರ ಮಾಟಕ್ಕೆ ಜೀವ ತಲೆದೂಗುತ್ತಾನೆ: ಅವನ ಬುದ್ಧಿ ಮಂದವಾಗುತ್ತದೆ; ತನ್ನನ್ನೇ ಮರೆತು ತೋರುವ ವಿಷಯ ವಿಲಾಸದಲ್ಲಿ ಮೈ ಮರೆಯುತ್ತಾನೆ; ಪ್ರಪಂಚ ಜೇಲಿನಿಂದ ಪಾರಾಗಿ ಹೋಗುವ ಮನಸ್ಸೂ ಇಲ್ಲ, ಸಾಮರ್ಥ್ಯವೂ ಇಲ್ಲ ಅವನಲ್ಲಿ. ದೇಹ ಜೀರ್ಣಿಸಿ ಇಂದ್ರಿಯಗಳು ಗಲಿತವಾಗಿ ಮುಪ್ಪು ಬಂದರೂ ಆ ಜೀವನಿಗೆ ದೇವನನ್ನು ನೆನೆಯಬೇಕೆಂಬ ಬುದ್ಧಿ ಬಾರದು. ಹುಣಿಸೆ ಮುಪ್ಪಾದಂತೆ ಹುಳಿ ಹೆಚ್ಚುವದಿಲ್ಲವೆ? ಹಾಗೆ, ವೃದ್ಧಾಪ್ಯ ವರ್ಧಿಸಿ ದಂತೆ ಮಾಯೆಯ ಬಂಧನಕ್ಕೆ ಮತ್ತಷ್ಟು ಸಿಲುಕಿಕೊಳ್ಳುತ್ತಾನೆ. ಅವನ ವಿಷಯಾ ಸಕ್ತಿ ನೂರ್ಮಡಿಸುತ್ತದೆ. ಎದ್ದರೂ ಮನೆ, ಕುಳಿತರೂ ಮನೆ, ಮಲಗಿದರೂ ಮನೆ ಅವನ ಮನದ ತುಂಬ ಮನೆ ಮಡದಿ ಮಕ್ಕಳು ತುಂಬಿ ಬಿಡುತ್ತಾರೆ. ಹೀಗೆ ಜೀವ ಜೀವರನ್ನೆಲ್ಲ ಮೋಹ ಪಂಕದಲ್ಲಿ ನೂಕಿದ ಮಾಯೆಯನ್ನು ಗೆಲ್ಲುವದು ಕಷ್ಟ. ಆಕೆಯ ಕ್ರೀಡಾ ಕ್ಷೇತ್ರವನ್ನು ದಾಟುವದು ದುಸ್ತರ.

(೨) ದುರತ್ಯಯಾ ಎಂದ ಮಾತ್ರಕ್ಕೆ ಮಾಯೆಯ ಮೇರೆಯನ್ನು ಮೀರುವದೇ ಸಾಧ್ಯವಿಲ್ಲೆಂದು ಬಗೆಯಬಾರದು. ಜೀವರು ಜಾಣರಾಗಬೇಕು; ನೀತಿ-ಧರ್ಮಗಳಲ್ಲಿ ಆಸಕ್ತಿವಹಿಸಿ ಪುಣ್ಯವನ್ನು ಸಂಪಾದಿಸಬೇಕು; ಗುರು ಸಾನಿಧ್ಯ ಸೇರಿ ಆತ್ಮಜ್ಞಾನ ಗಳಿಸಬೇಕು. ಆ ಗುರುಶ್ರೇಷ್ಠರ ಮಾರ್ಗದರ್ಶನದಲ್ಲಿ ಮತ್ತು ಕೃಪಾ ಛತ್ರದಲ್ಲಿ ಧ್ಯಾನ-ಸಮಾಧಿಗಳನ್ನು ಅಂಗವಿಸಿಕೊಳ್ಳಬೇಕು. ಆಗ ಪ್ರತ್ಯಗಾತ್ಮನ ಸಾಕ್ಷಾತ್ಕಾರವಾಗುತ್ತದೆ; ಪರಬ್ರಹ್ಮನಿಗೂ ಪ್ರತ್ಯಗಾತ್ಮರಿಗೂ ಭೇದವಿಲ್ಲ ಎಂಬ ಅದ್ವಯದ ಪರಿಜ್ಞಾನವಾಗುತ್ತದೆ. ಅದೇ ದೇವ ಸಾಕ್ಷಾತ್ಕಾರ. ಆಗ, ಆ ಸಿದ್ಧ ಜೀವರು ದುರತ್ಯಯವಾದ ಮಾಯಾ ಸಾಗರವನ್ನು ಸಹಜವಾಗಿ ದಾಟುತ್ತಾರೆ.

ಸಂಬಂಧಃ- ದೇವನನ್ನು ತಿಳಿಯದವರು ಮಾತ್ರ ಮಾಯೆಯಲ್ಲಿ ಬಂಧಿತರಾಗುತ್ತಾರೆ. ಅಂಥ ಜನ ಅಸುರರು, ಪಾಪಿಗಳು.

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥೧೫॥**

ಭಾವಃ– ಮಾಯೆಯ ದಾಸರಾಗಿ ಯಾರು ಗುರು ಶಾಸ್ತ್ರಗಳಿಂದ ಸಂಪಾದಿಸಿದ ಜ್ಞಾನವನ್ನು ಕಳೆದುಕೊಂಡರೋ ಅವರು ರಾಕ್ಷಸಭಾವಿಗಳು, ಪಾಪಶೀಲರು, ಮೂಢರು ಮತ್ತು ನರಾಧಮರು. ಅವರು ನನ್ನನ್ನು ಹೊಂದುವದಿಲ್ಲ.

ವಿವರಣೆ:-(೧) ಮಾಯಯಾ ಅಪಹೃತ ಜ್ಞಾನಾಃ- ಮಾಯೆಯು ನಮ್ಮ ಕಣ್ಣು ಕಿವಿ ಮೊದಲಾದ ಇಂದ್ರಿಯಗಳಿಂದ ಬಹು ನಯವಾಗಿ ಒಳ ಸೇರುತ್ತಾಳೆ; ಮನಸ್ಸಿನಲ್ಲಿ ಪ್ರವೇಶಿಸಿ ತನ್ನ ಆಧಿಪತ್ಯ ಸ್ಥಾಪಿಸುತ್ತಾಳೆ; ಬುದ್ಧಿ ಹಾಗು ಚಿತ್ತಗಳಲ್ಲಿ ತುಂಬಿದ ಆತ್ಮಜ್ಞಾನವನ್ನು ಅಪಹರಿಸಿಬಿಡುತ್ತಾಳೆ. ಆಗ ನಾವು ಆಕೆಯ ಗುಲಾಮರು! ಅನೇಕ ಜನ ಮನೆ ತ್ಯಜಿಸಿ ಮಹಾತ್ಮರ ಸಾನಿಧ್ಯ ಪಡೆದು ವೇದ

ವೇದಾಂತ ಆಗಮ ಸಿದ್ಧಾಂತ–ಶಾಸ್ತ್ರಗಳನ್ನು ಮನಸಾರೆ ಅಧ್ಯಯನ ಮಾಡು ತ್ತಾರೆ. ಧರ್ಮ ನೀತಿಗಳನ್ನು ಅಳವಡಿಸಿಕೊಳ್ಳುತ್ತಾರೆ. ಮಹಾ ಮೇಧಾವಿಗಳಾಗಿ ಮತ್ತೆ ಜನಪದಗಳಿಗೆ ಬರುತ್ತಾರೆ. ಅವರ ಆಗಮನದ ಉದ್ದೇಶ ಸಮಾಜ ಸೇವೆ, ಲೋಕ ಸಂಗ್ರಹ. ಆದರೆ ಸ್ವಲ್ಪೇ ಸಮಯದಲ್ಲಿ ಎಲ್ಲ ವಿಪರೀತವಾಗುತ್ತದೆ. ಅಲ್ಲಿಯವರೆಗೆ ಸುಪ್ತವಾಗಿ ಹೃದಯದಲ್ಲಿ ಅಡಗಿದ್ದ ಮಾಯೆ ಮೈ ಬಿಚ್ಚುತ್ತಾಳೆ. ಅವರ ಕಣ್ಣೆದುರು ಸ್ತ್ರೀ ಭೂಮಿ ಸುವರ್ಣ ಕೀರ್ತಿಗಳಾಗಿ ಮಿಂಚುತ್ತಾಳೆ. ಮೇಧಾವಿಗಳ ಮನದಲ್ಲಿ ವಿಷಯಾಸಕ್ತಿಯು ಹೆಮ್ಮರವಾಗಿ ಬೆಳೆಯುತ್ತದೆ. ಕಲಿತು ಗಳಿಸಿದ್ದ ಜ್ಞಾನ ಭಾಂಡಾರವು ಸತ್ವಹೀನವಾಗುತ್ತದೆ: ಧರ್ಮಪ್ರಜ್ಞಾ ದೀಪವು ಮಂದವಾಗುತ್ತದೆ. ಜನಸೇವೆ ಮರೆತು ವಿಷಯ ವ್ಯಸನಗಳಿಗೆ ತೊಡಗುತ್ತಾರೆ. ಮಾನ, ಧನ ಇತ್ಯಾದಿ ವಸ್ತುಗಳಿಗಾಗಿ ತಮ್ಮ ನೀತಿಯನ್ನೇ ಬಲಿಕೊಡುತ್ತಾರೆ. ಅವರಿಗೆ ಮಾಯಾಪಹೃತ ಜ್ಞಾನಾಃ ಎನ್ನುತ್ತಾರೆ.

(೨) ದುಷ್ಕೃತಿನಾಃ ಮೂಢಾಃ:– ಮಾಯಾ ಪುತ್ರರು ದುಷ್ಕೃತಿಗಳು 'ಪರವಧುವಿನ ಕೂಟ, ಅನ್ಯರ ಧನಾಪಹರಣ, ಅಭಕ್ಷ್ಯ ಭೋಜನ, ಹಿಂಸೆ, ಹುಸಿ ಅನುಚಿತ ನಿಷ್ಠುರ ಮಾತು, ಅಹಿತವಾದ ಕಾರ್ಯ-ರತಿ, ಅನಿಷ್ಟ ಚಿಂತನ.' ಇಂಥ ನಿಕೃಷ್ಟ ಕರ್ಮಗಳಲ್ಲಿ ಅವರು ಸಂತೋಷ ಪಡುತ್ತಾರೆ. ಅವರಲ್ಲಿ ಯೋಗ್ಯಾ ಯೋಗ್ಯ, ನ್ಯಾಯಾನ್ಯಾಯ, ಧರ್ಮಾಧರ್ಮ, ಇಷ್ಟಾನಿಷ್ಟಗಳನ್ನು ಪೃಥಃಕರಿ ಸುವ ವಿವೇಕವೇ ಉಳಿಯದಾಗಿ ಅವರು ಪೂರ್ತಿ ಮೂಢರು.

(೩) ಆಸುರಂ ಭಾವಮಾಶ್ರಿತಾಃ ನರಾಧಮಾಃ:– ನಿರ್ದಯ, ದಂಭ, ಅಹಂಕಾರ, ದರ್ಪ, ಪರಾಪಕಾರ, ಅಸತ್ಯ, ಅತ್ಯಾಚಾರ– ಇಂಥ ದುರ್ಗುಣಗಳಿಗೆ ಅಸುರ ಭಾವವೆನ್ನುತ್ತಾರೆ. ಮೂಢ ಜನರು ಈ ಎಲ್ಲ ಭಾವಗಳನ್ನು ಹೊಂದಿರು ವುದರಿಂದ 'ಅಸುರ' ಎನಿಸಿದ್ದಾರೆ. ಅವರು ತಮ್ಮ ಮನಸೇಚ್ಛೆಯಾಗಿ ಜನತೆ ಯನ್ನು ಸುಲಿಯುತ್ತಾರೆ. ಜನತೆಯ ಕಣ್ಣುಗಳಲ್ಲಿ ಮಣ್ಣು ಉಗ್ಗಿ ಅನ್ಯಾಯದಿಂದ ದ್ರವ್ಯ ಸಂಪಾದಿಸುತ್ತಾರೆ. 'ಯೇನಕೇನ ಪ್ರಕಾರೇಣ' ಹೆಸರುವಾಸಿಯಾಗಲು ಹೆಣಗುತ್ತಾರೆ. ಅವರ ಹೃದಯದಲ್ಲಿ ಕರುಣೆಯೇ ಇಲ್ಲವಾಗಿ ಅವರು ನರಾಧ ಮರು! ದುರ್ಲಭ ನರಜನ್ಮವನ್ನು ಪೋಲಿ ಮಾಡುವ ಬುದ್ಧಿಹೀನರು!!

(೪) (ತೇ) ಮಾಂ ನ ಪ್ರಪದ್ಯಂತೇ:– "ಅರ್ಜುನ, ಇಂಥ ನರ-ರಕ್ಕಸರು ನನ್ನ ಪಾವನ ದರ್ಶನ ಪಡೆಯಲಾರರು; ನನ್ನ ದಿವ್ಯ ಆನಂದವನ್ನು ಅನುಭವಿಸ ಲಾರರು."

ಸಂಬಂಧ:– ಹಾಗಾದರೆ ಪರಮಾತ್ಮನನ್ನು ಕಾಣುವವರು ಯಾರು?

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋऽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥೧೬॥**

**ಭಾವ:–** ಆರ್ತ ಅರ್ಥಾರ್ಥಿ ಜಿಜ್ಞಾಸು ಮತ್ತು ಜ್ಞಾನಿ ಈ ನಾಲ್ಕು ಜನ ಪುಣ್ಯ ಜೀವಿಗಳು ಮಾತ್ರ ನನ್ನನ್ನು ಹೊಂದುತ್ತಾರೆ.

**ವಿವರಣೆ:–** (೧) ಆರ್ತ:– ರೋಗ, ರುಜಿನ, ಅಸಮಾಧಾನ, ಋಣಭಾರ ಮುಂತಾದ ಕಷ್ಟ ಕಾರ್ಪಣ್ಯಗಳಿಂದ ಬಳಲುವ ದುಃಖಿಯು ಆರ್ತ, ವ್ಯಾವಹಾರಿಕ ದೃಷ್ಟಿಯಲ್ಲಿ. ಜನ್ಮ ಜರಾ ಮರಣಗಳು ತಾಪದಾಯಕ; ಸಾಂಸಾರಿಕ ವಿಷಯಗಳಲ್ಲಿ ತಿಲಮಾತ್ರ ಸೌಖ್ಯವೂ ಇಲ್ಲ; ವಸ್ತು, ಒಡವೆ, ನೆರೆಹೊರೆಯ ಜನ, ಬಂಧು ಬಾಂಧವರು, ಮಡದಿ ಮಕ್ಕಳು ಎಲ್ಲರು ಜೀವ ಅರೆಯುವವರೇ; ಜೀವನದಲ್ಲಿ ನೂರು ಸಾಸಿರ ಚಿಂತೆ; ವ್ಯಾಮೋಹವೆಂಬ ಅಗ್ನಿ ಹೊರ ಒಳಗನ್ನೆಲ್ಲ ದಹಿಸುತ್ತದೆ; ಈ ಪ್ರಪಂಚ ಸಂಕಷ್ಟ ಹೇಗಾದರೆ ತಪ್ಪೀತು? ಇದನ್ನು ತಪ್ಪಿಸಲು ಎಲ್ಲಿ ಹೋಗಲಿ? ಏನ ಮಾಡಲಿ? ಹೀಗೆಲ್ಲ ಮರುಗುವ ಜೀವನೇ ಆರ್ತ, ಪಾರಮಾರ್ಥಿಕ ದೃಷ್ಟಿಯಲ್ಲಿ. ಮಾಯೆಯ ಪೆಟ್ಟು ತಿಂದು ಬುದ್ಧಿ ಕಲಿತ ಆರ್ತನು ಹೃದಯಾರೆ ಪರಮಾತ್ಮನಿಗೆ ಮೊರೆ ಹೋಗುತ್ತಾನೆ. ದೇವನನ್ನು ಭಜಿಸುತ್ತಾನೆ. ಆರ್ತ ಸ್ವರದಿಂದ ಪ್ರಾರ್ಥಿಸುತ್ತಾನೆ. ಆತನ ಆರ್ತ ಧ್ವನಿಯ ಕೆಲ ಉದಾಹರಣೆಗಳಿಲ್ಲಿವೆ:

"ದೇವಾ, ಪಾಪಾನುಗುಣದಿಂದ ಗಿಡ ಮರ ಕ್ರಿಮಿ ಕೀಟ ಪತಂಗ, ಪಶು, ಪಕ್ಷಿಯಾಗಿ ಹುಟ್ಟಿ ಬಾಧೆ ಪಟ್ಟೆ. ಪಂಚಭೂತವಾಗಿ ವನಸ್ಪತಿಯಾಗಿ ನಂತರ ಧಾತು ಸಪ್ತಕದ ರೂಪಾಗಿ ತಂದೆಯೊಳು ಬೆರೆತೆ; ತಾಯಿಯ ರಕ್ತದಲಿ ಸೇರಿ ದೇಹವಾಗಿ ಬೆಳೆದೆ. ಬಾಲಕ, ತರುಣ, ವೃದ್ಧ ರೂಪಾಗಿ, ಮರಣ ಹೊಂದಿ ನರಕಿಯಾದೆ. ಇಂತು ನಾನು ಪಟ್ಟ ಪರಿಭವ ದುಃಖ ಸಮುದ್ರ–ಸಾಯಸವ ನೆನೆದುಕೊಂಡಾಗ ನಿದ್ರೆ ಬಾರದು" –(ಶ್ರೀ ನಿಜಗುಣರು)

"ಅಡಿಗಡಿಗೆ ತೋರುವ ಘೋರ ಸಂಸಾರದ ಅನುತಾಪಗಳನ್ನು ಯಾರು ಪರಿಹರಿಸಬಹುದು? ತಾಯಿಯ ಗರ್ಭದಲ್ಲಿರುವಾಗ ಪ್ರಾಣ ಹೀರುವಂಥ ಹೊಲಸು ವಾಸನೆ. ಹುಟ್ಟುವಾಗ ಪ್ರಸೂತಿ ವಾಯುವಿನ ಸಿಡಿಲ ಸಮ ಆಘಾತ, ಶಿಶುವಾದಾಗ ಮಲ ಮೂತ್ರದಲ್ಲಿ ಹೊರಳಾಟ, ಬಾಲತನದಲ್ಲಿ ಅಜ್ಞಾನ, ಯೌವನದಲ್ಲಿ ಕಾಮದ ಕಾಟ, ಸಹಸ್ರ ದುರಿತಗಳ ತಾಪ. ಮುಪ್ಪಿನಲ್ಲಿ ಹೇಳ ತೀರದ ಬಾಧೆ, ಕೊನೆಯಲ್ಲಿ ಎದೆ ನಡುಗಿಸುವಂಥ ವಿಕೃತ ಮರಣ ಇದೆಲ್ಲ ಒಂದೆರಡು ಜನ್ಮಗಳಲ್ಲಲ್ಲ. ಸಾವಿರಾರು ಜನ್ಮಗಳಿಂದ ನಾವು ಪಡುತ್ತ ಬಂದ ಕಷ್ಟ."
–(ಶ್ರೀ ನಿಜಗುಣರು)

"ಎಂದೋ, ಸಂಸಾರ ದಂದುಗ ಹಿಂಗುವಡೆಸಗಿನ್ನೆಂದೊ? ಮನದಲ್ಲಿ ಪರಿಣಾಮವೆನಗೆಪ್ಪುದೆಂದೊ? ಕೂಡಲ ಸಂಗಮ ದೇವ, ಇನ್ನೆಂದೊ ಪರಮ ಸಂತೋಷದೊಳಿಹುದೆನಗೆಂದೊ?"
–(ಶ್ರೀ ಬಸವೇಶ್ವರರು)

ಭಯಂಕರ ವೇಗದಿಂದ ತಿರುಗುವ ಚಕ್ರವೀ ಸಂಸಾರ. ಇದರ ಹಿಡಿತಕ್ಕೆ ಸಿಲುಕಿದವ ಪಾರಾಗುವದೇ ಕಷ್ಟ. ಶಿವನು ಸಾಕ್ಷಾತ್ ದೇವೇಶ. ಅವನಿಗೆ ಅಸೂಯಾಪರರಾದ ಇಬ್ಬರ ಹೆಂಡಿರು. ಅವರಿಬ್ಬರ ಕಲಹದಿಂದ ಅವನ ಬಾಳ ನೌಕೆ ತತ್ತರಿಸಿತು. ಅಸ್ತವ್ಯಸ್ತ ಆಕಾರದ ಇಬ್ಬರು ಮಕ್ಕಳ ಕಾಟ ಅವನನ್ನು ಕಂಗೆಡಿಸಿತು. ಕೊನೆಗೆ, ಸಂಸಾರದ ತಾಪ ತಾಳಲಾರದೆ ಹಾಲಾಹಲ ಕುಡಿದು ಸಾಯಲು ಪ್ರಯತ್ನಿಸಿದ. ಅದು ಸಾಧ್ಯವಾಗಲಿಲ್ಲ; ನಿರುಪಾಯನಾದ ಅವನು ಕೈಲಾಸವನ್ನೇ

ತೊರೆದು ಸ್ಮಶಾನಕ್ಕೆ ಓಡಿಹೋದ! ಇಷ್ಟು ಭಯಾನಕ ಸಂಸಾರ! ಇದರಿಂದ ಕಡೆ ಗಾಗಲು ಹಗಲು ರಾತ್ರಿ ದೇವನಲ್ಲಿ ಆರ್ತ ಸ್ವರದಿಂದ ಪ್ರಾರ್ಥಿಸುವವ ಆರ್ತ!

(೨) ಅರ್ಥಾರ್ಥಿ: ಜೀವನದಲ್ಲಿ ಗಳಿಸಲೇಬೇಕಾದ ಸಂಪತ್ತುಗಳಿಗೆ ಅರ್ಥ ವೆನ್ನುತ್ತಾರೆ. ಧರ್ಮ, ಅರ್ಥ (ದ್ರವ್ಯ), ಕಾಮ, ಮೋಕ್ಷ ಇವೇ ನಾಲ್ಕು ಪುರು ಷಾರ್ಥಗಳು. ಮೊದಲಿನ ಮೂರು ಪರಿಮಿತ ಪುರುಷಾರ್ಥಗಳು; ನಾಲ್ಕನೆಯದು ಅಪರಿಮಿತ ಪುರುಷಾರ್ಥ. ಅದು ನಿತ್ಯ. ಸಾಂಸಾರಿಕ ಅರ್ಥಗಳು ಕೇವಲ ತೋರಿ ಕೆಯ ಸುಖ ನೀಡುತ್ತವೆ. ಮೋಕ್ಷ ಹಾಗಲ್ಲ. ಅದು ಕಾರಣ ಸಹಿತ ದುಃಖ ನಿವೃತ್ತಿ, ಪರಮಾನಂದ ಪ್ರಾಪ್ತಿ. ದುಃಖಕ್ಕೆ ಕಾರಣ ಜನ್ಮ, ಅದಕ್ಕೆ ಕಾರಣ ಅಜ್ಞಾನ! ಅಸತ್ಯದಲ್ಲಿ ಸತ್ಯದ ಕಲ್ಪನೆಯು ಅಜ್ಞಾನ. ಅದು ಪೂರ್ತಿ ಅಳಿದರೆ ದುಃಖದ ವಿನಾಶ. ಚರಮ ಸಂತೋಷದ ಪ್ರಾಪ್ತಿ. ಇಂಥ ಮೋಕ್ಷಕ್ಕಾಗಿ ಹಗಲಿ ರುಳು ಚಿಂತಿಸುವವ ಅರ್ಥಾರ್ಥಿ.

(೩) ಜಿಜ್ಞಾಸು: ಜೀವ ಜಗತ್ತು, ಆತ್ಮ ಪರಮಾತ್ಮ ಈ ಸಕಲ ತತ್ತ್ವ ಗಳನ್ನು ಸಮಗ್ರವಾಗಿ ತಿಳಿದುಕೊಳ್ಳುವ ಇಚ್ಛೆಯುಳ್ಳವ ಜಿಜ್ಞಾಸು. ಅವನು ತನ್ನ ಇಚ್ಛಾ ಪೂರ್ತಿಗಾಗಿ, ಸದ್ಗುರುವಿನ ಕೃಪಾಛತ್ರ ಸೇರಬೇಕು. ಅವರನ್ನು ಸೇವಿಸಿ, ಅವರ ಅನುಗ್ರಹಕ್ಕೆ ಪಾತ್ರನಾಗಿ, ಅವರಿಂದ ಆತ್ಮೋಪದೇಶ ಆಲಿಸ ಬೇಕು. ಹಾಗೆ ಆಲಿಸಿದುದನ್ನು ಮನನ ಮಾಡಬೇಕು; ಮನನದಿಂದ ಅವಗತ ಮಾಡಿಕೊಂಡ ಆತ್ಮ ವಿಷಯವನ್ನು ನಿಧಿಧ್ಯಾಸನದ ಮೂಲಕ ಸಾಕ್ಷಾತ್ಕರಿಸಿ ಕೊಳ್ಳಬೇಕು. ಈ ಮೂರು ಜಿಜ್ಞಾಸುವಿನ ಕ್ರಿಯೆಗಳು.

(೪) ಜ್ಞಾನಿ: ಸಕಲ ತತ್ತ್ವಗಳನ್ನರಿತವ, ಅಮರ ಆತ್ಮ ವಸ್ತುವಿನ ದಿವ್ಯ ಜ್ಞಾನ ಸಾಗರದಲ್ಲಿ ತಲ್ಲೀನನಾದವ, ಪ್ರತ್ಯಗಾತ್ಮಾಭಿನ್ನ ಪರಬ್ರಹ್ಮನಲ್ಲಿ ಒಂದು ಗೂಡಿದವ ಜ್ಞಾನಿ!

ಭಗವಂತ:– "ಅರ್ಜುನ, ಆರ್ತ ಅರ್ಥಾರ್ಥಿ ಜಿಜ್ಞಾಸು ಜ್ಞಾನಿ ಈ ನಾಲ್ವರೂ ಪುಣ್ಯ ಪುರುಷರು; ಮಾಯೆಯ ಆಘಾತ ಮತ್ತು ಆಕರ್ಷಣ ಅವರಿ ಗಿಲ್ಲ. ಅವರು ನನ್ನನ್ನೇ ಬಯಸುತ್ತಾರೆ; ನನ್ನನ್ನೇ ತಿಳಿಯುತ್ತಾರೆ; ನನ್ನನ್ನೇ ಚಿಂತಿಸಿ, ನನ್ನಲ್ಲಿಯೇ ಸಾಮರಸ್ಯ ಹೊಂದುತ್ತಾರೆ."

ಸಂಬಂಧ:- ಆ ನಾಲ್ವರಲ್ಲಿ ಯಾರು ಶ್ರೇಷ್ಠ?

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ॥೧೭॥**

ಭಾವ:– ಆ ನಾಲ್ವರಲ್ಲಿ ಜ್ಞಾನಿಯು ಶ್ರೇಷ್ಠ. ಅವನ ಮನಸ್ಸು ಸದಾ ನನ್ನಲ್ಲಿಯೇ ನೆಲೆಯಾಗಿದೆ. ಅವನ ಪ್ರೇಮಧಾರೆ ನನ್ನತ್ತಲೇ ಹರಿಯುತ್ತಿದೆ. ಆದ್ದರಿಂದ ಅವನು ನನಗೆ ಅತೀ ಪ್ರಿಯ; ನಾನು ಅವನಿಗೆ ಅತೀ ಪ್ರಿಯ. (ನಿತ್ಯಯುಕ್ತಃ = ಮನ್ನಿಷ್ಠಃ, ನನ್ನಲ್ಲಿಯೇ ನಿಷ್ಠೆ ಯುಳ್ಳವ, ಏಕಭಕ್ತಿಃ = ಏಕಸ್ಮಿನ್ ಏವ ಮಯಿ ಭಕ್ತಿಃ ಯಸ್ಯ ಸಃ, ನನ್ನೊಬ್ಬನಲ್ಲಿಯೇ ಭಕ್ತಿ

ಯುಳ್ಳವ. ಅತ್ಯರ್ಥಂ =ಅತ್ಯಂತ)

**ವಿವರಣೆ:–** ಆರ್ತ, ಅರ್ಥಾರ್ಥಿ, ಜಿಜ್ಞಾಸು, ಜ್ಞಾನಿ– ಈ ನಾಲ್ಕು ಜನರಲ್ಲಿ ಜ್ಞಾನಿಯೇ ಶ್ರೇಷ್ಠ ಎಂಬುದು ನಿರ್ವಿವಾದ. ಅವನು ಅಸಾಮಾನ್ಯ ಪುರುಷ. ಮಾಯೆಯನ್ನು ಪೂರ್ತಿಯಾಗಿ ಗೆದ್ದ ಮಹಾತ್ಮ. ಸದಾ ಸ್ವಾತ್ಮಾನಂದ ವಿಹಾರಿಯಾಗಿ ಚರಿಸುವ ಅವನು ನೀರಿನಲ್ಲಿ ರಸ, ಅಗ್ನಿಯಲ್ಲಿ ರೂಪ, ಕುಸುಮಗಳಲ್ಲಿ ಕಂಪು ಬೆರೆದಂತೆ ಪರಬ್ರಹ್ಮನಲ್ಲಿ ಸಮವೇತನಾಗಿದ್ದಾನೆ. ಎಲ್ಲವನ್ನು ತನ್ನ ಆತ್ಮವೆಂದೇ ಕಾಣುತ್ತಾನೆ. ನೈಯಾಯಿಕರ ಸಪ್ತ ಪದಾರ್ಥ, ವೈಶೇಷಿಕರ ಷೋಡಶ ವಸ್ತು, ಸಾಂಖ್ಯರ ಪುರುಷ, ಪ್ರಧಾನ–ಯಾವುದನ್ನೂ ಆತ ತನ್ನಿಂದ ಭಿನ್ನವೆಂದು ತಿಳಿಯುವದಿಲ್ಲ. ಸೂರ್ಯ, ಚಂದ್ರ, ನಕ್ಷತ್ರ, ಆಕಾಶ, ಗುರು, ಶಿಷ್ಯ, ಬ್ರಾಹ್ಮಣ, ಚಾಂಡಾಲ, ಪುಣ್ಯವಂತ, ಪಾಪಿ, ಭಕ್ತ, ಭವಿ, ಋಷಿ ಮುನಿ, ಎಲ್ಲದರಲ್ಲಿಯೂ ತನ್ನನ್ನೇ ಈಕ್ಷಿಸುತ್ತಾನೆ! ಅವನಿಗೆ ಯಾರು ವೈರಿ? ಯಾರು ಮಿತ್ರ? ಯಾರು ಮೇಲು? ಯಾರು ಕೀಳು?

**ಭಗವಂತ:–** "ಪಾರ್ಥ, ಅಂಥ ಜ್ಞಾನಿಯು ನರೋತ್ತಮ! ಅಷ್ಟೇ ಅಲ್ಲ ನರೋತ್ತಮರಲ್ಲಿ ಅಗ್ರಗಣ್ಯ. ಅವನಿಗೆ ನಾನು ಪ್ರೀತಿಯವ, ನನಗೆ ಅವನು ಪ್ರೀತಿಯವ. ನಮ್ಮಿಬ್ಬರಿಗೂ ಹೊಟ್ಟೆ ಬೆನ್ನುಗಳಷ್ಟು ಸರಸ ಸಂಬಂಧ! ಹೆಚ್ಚೇನು, ನಾವಿಬ್ಬರೂ ಒಂದೇ."

**ಸಂಬಂಧ:–** ಜ್ಞಾನಿಯನ್ನು ಮತ್ತಷ್ಟು ಕೊಂಡಾಡುತ್ತಾನೆ ಭಗವಂತ.

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥೧೮॥**

**ಭಾವ:–**ಇವರೆಲ್ಲರೂ(ನಾಲ್ವರೂ)ಉತ್ಕೃಷ್ಟರೇ ಸರಿ. ಆದರೆ ಜ್ಞಾನಿಯು ನನ್ನ ಆತ್ಮನೇ ಎಂದು ನನ್ನ ನಿಶ್ಚಿತ ಮತ. ಅವನು ಮದೇಕಚಿತ್ತನು. ಸರ್ವೋತ್ಕೃಷ್ಟಗತಿಯಾದ ನನ್ನನ್ನೇ ಆಶ್ರಯಿಸಿದ್ದಾನೆ. (ಉದಾರಃ =ಮಹಾಂತಃ, ಮೋಕ್ಷಭಾಜಃ)

**ವಿವರಣೆ:–** (೧) ಉದಾರಾಃ:– ಪುಣ್ಯವಂತರು; ಮಹಾತ್ಮರು. ಆರ್ತಾದಿ ಜ್ಞಾನಿ ವರೆಗಿನ ಸಾಧಕರು ಸುಕೃತಿಗಳು, ಪೂಜ್ಯರು. ಇದರಲ್ಲಿ ಸಂಶಯವಿಲ್ಲ. ಜ್ಞಾನಿಯನ್ನು ಬಿಟ್ಟು ಉಳಿದ ಮೂವರು ದೇವಾಧಿದೇವನ ಆರಾಧಕರಾಗಿದ್ದಾರೆ. ಆರ್ತನು ಭವ ನಿವಾರಣೆಗಾಗಿ, ಅರ್ಥಾರ್ಥಿಯು ಭವ ನಿವಾರಣೆ ಮತ್ತು ಆತ್ಮ ಪ್ರಾಪ್ತಿಗಾಗಿ, ಜಿಜ್ಞಾಸುವು ಮುಕ್ತಿ ಸಾಧನವಾದ ಆತ್ಮ ಜ್ಞಾನಕ್ಕಾಗಿ ದೇವನನ್ನು ಪ್ರಾರ್ಥಿಸುತ್ತಾರೆ. ಅವರ ಕನಸು ಮನಸ್ಸಿನಲ್ಲೆಲ್ಲ ದೇವನೇ ತುಂಬಿಕೊಂಡುದರಿಂದ ಅವರು ಕೃತಾರ್ಥರು.

(೨) ತು ಜ್ಞಾನೀ ಮಮ ಆತ್ಮಾ: ಆದರೆ, ನಾಲ್ಕನೆಯವನಾದ ಜ್ಞಾನಿಯು ಸದ್ಯೋನ್ಮುಕ್ತ! ವಿಶ್ವರೂಪ! ಪರಮಾತ್ಮೈಕ್ಯ! ಅವನು ದೇವನ ಆತ್ಮ! ಆತ್ಮದಷ್ಟೇ ಪ್ರೀಯ! ಏಕೆಂದರೆ ಜ್ಞಾನಿಯು 'ಅಹಂ ಮಮ ಭಾವಗ

ಳನ್ನು ಕಳಚಿ, ತನ್ನನ್ನೇ ದೇವ ಚರಣದಲ್ಲಿ ಸಮರ್ಪಿಸಿದ್ದಾನೆ. ಅವನು ಮಾಡಿದ ಸಾಧನೆ ಸುಲಭವಾದುದಲ್ಲ. ಕೇಳಿದರೆ ಎಂಥವನೂ ದಂಗಾಗಬೇಕು ಅಷ್ಟು ಕಠೋರ ಅಭ್ಯಾಸಗೈದಿದ್ದಾನೆ. ಅವನ ಸಾಧನೆಯ ಸಂಕ್ಷೇಪ ರೂಪ-ರೇಷೆ ಹೀಗಿದೆ.

(ಅ) ಅವನು ಮೊಟ್ಟ ಮೊದಲು ಜಗತ್ತಿನ ಬಗ್ಗೆ ವಿವೇಚಿಸಿದ. ನಿತ್ಯ ಅನಿತ್ಯಗಳ ಜ್ಞಾನ ಪಡೆದ (ವಿವೇಕ), ಅನಿತ್ಯ ಅನಾತ್ಮವಾದ ಸಾಂಸಾರಿಕ ವಸ್ತುಗಳ ವ್ಯಾಮೋಹ ತೊರೆದ (ವಿರಾಗ), ಮನೋ ನಿಗ್ರಹ (ಶಮ), ಇಂದ್ರಿಯ ನಿಗ್ರಹ (ದಮ) ಕಷ್ಟಸಹನ (ತಿತೀಕ್ಷಾ), ಜೀವಿಗಳಲ್ಲಿ ಅಂತಃಕರುಣೆ (ದಯಾ), ಗುರುಶ್ರುತ್ಯಾದಿಗಳಲ್ಲಿ ಪ್ರೇಮ (ಶ್ರದ್ಧಾ), ಲಾಭ ಹಾನಿಗಳಾದಾಗ ಅಚಲನಾಗಿ ಉಳಿಯುವದು (ಸಮಾಧಾನ). ಈ ಆರು ಗುಣಗಳನ್ನು ಮೈಗೂಡಿಸಿಕೊಂಡ; ಏನಾದರೂ ಆಗಲಿ, ಮೋಕ್ಷವನ್ನು ಪಡೆದೇ ತೀರಬೇಕೆಂದು ದೃಢ ನಿಶ್ಚಯ ಮಾಡಿದ (ಮುಮುಕ್ಷುತ್ವ); ನಂತರ, (ಬ) ಗುರುಸಾನಿಧ್ಯಕ್ಕೆ ಹೋಗಿ ಅಷ್ಟ ವಿಧ ಸಾತ್ವಿಕ ಭಾವಗಳಿಂದ ಅವರ ಸೇವೆ ಮಾಡಿದ. ಆ ಭಾವಗಳು ಹೀಗಿವೆ:

(೧) ಸ್ತಂಭ: ಮುಗ್ಧನಾಗಿ ನಿಲ್ಲುವದು. (೨) ಸ್ವೇದ: ಬೆವರ ಸುರಿಸುವದು. (೩) ರೋಮಾಂಚನ. (೪) ಸ್ವರಭೇದ: ಸ್ವರದಲ್ಲಿ ಕಂಪನ ಮತ್ತು ಸೌಮ್ಯತೆಗಳು ಉಂಟಾಗುವದು. (೫) ವಿವರ್ಣ: ಮುಖದಲ್ಲಿ ಅಹಂಭಾವ ತೋರದೆ ಪ್ರಶಾಂತತೆಯು ಮೂಡಿಕೊಳ್ಳುವದು. (೬) ಕಂಪನ: ದೇಹದ ಕಂಪನ (೭) ಅಶ್ರು ಸುರಿಸುವದು: (ಆನಂದ ತುಂದಿಲನಾಗಿ). (೮) ಭಾವ ಪರವಶತೆ: (ಪ್ರಲಯ) ಸಮನಿಸುವದು. (ಕ) ಗುರುಗಳು ಒಲಿದು ದಿವ್ಯಾತ್ಮನ ಜ್ಞಾನವನ್ನು ಬೋಧಿಸಿದಾಗ ಏಕಾಗ್ರತೆಯಿಂದ ಆಲಿಸಿದ, ಮನನದ ಮೂಲಕ ಆತ್ಮಸಾತ್‌ಗೊಳಿಸಿಕೊಂಡ. (ಡ) ಆತ್ಮಜ್ಞಾನಾರ್ಜನೆ, ಚಿಂತನೆ ಬೆಳೆದಂತೆಲ್ಲ ಅವನ ಮನಸ್ಸು ಪ್ರತ್ಯಗಾತ್ಮನತ್ತ ಸಾಗಿತು. ಪ್ರತ್ಯಗಾತ್ಮನೇ ತಾನೆಂಬ ಸೋಽಹಂ ಭಾವನೆ ಅಳವಟ್ಟಿತು. ಬರ ಬರುತ್ತ ಈ ಪ್ರತ್ಯಗಾತ್ಮ ಭಾವ ಕೂಡ ಅಡಗಿ ಪ್ರತ್ಯಗಾತ್ಮಾಭಿನ್ನ ಪರಬ್ರಹ್ಮ ಭಾವ ಬೆಳೆದು ಬಂತು! ಅದೇ ಓಂಕಾರಾನುಭೂತಿ. ಅಲ್ಲಿ ಸರ್ವಾತ್ಮ ಭಾವದ ಪ್ರತಿಷ್ಠಾನ!

ಇಷ್ಟೆಲ್ಲ ಸಾಧಿಸಿದನೆಂದೇ ಪರಮಾತ್ಮನಿಗೆ ಅವನ ಮೇಲೆ ಅಪಾರ ಪ್ರೇಮ. ಎಂದೇ 'ಜ್ಞಾನಿಯು ನನ್ನ ಆತ್ಮ!' ಎಂದು ಉದ್ಗರಿಸಿದ, ಭಗವಂತ.

(೩) ಸಃ ಯುಕ್ತಾತ್ಮಾ ಅನುತ್ತಮಾಂ ಗತಿಂ ಮಾಂ ಏವ ಆಶ್ರಿತಃ: ಅವನು (ಜ್ಞಾನಿಯು) ತನ್ನ ಮನಸ್ಸನ್ನು ಪರಮಾತ್ಮನಲ್ಲಿ ಸಂಯೋಜಿಸಿದ್ದಾನೆ. ಯಾವ ಅವಸ್ಥೆಯಲ್ಲಿ ನಿಂತಾಗ ವಿಶ್ವದಲ್ಲಿ ತನಗಿಂತ ಮೇಲು, ಕೀಳು, ತನಗೆ ಸರಿ ಸಮ ಯಾವುದೂ ಕಾಣದೆ ಎಲ್ಲ ತಾನೇಯಾಗಿ ಕಾಣುವದೋ ಅಂಥ ಅನುತ್ತಮ

(ದಿವ್ಯ) ಗತಿಯನ್ನು ಪಡೆದಿದ್ದಾನೆ. ಪರಮ ಪ್ರಭುವನ್ನೇ ಆಶ್ರಯಿಸಿದ್ದಾನೆ.

(೪) ಒಂದು ಸಂದೇಹ: ಜ್ಞಾನಿಯೊಬ್ಬನೇ ಪ್ರಿಯ ಎಂದು ಹೇಳಿದಾಗ ಉಳಿದ ಮೂವರು ಪ್ರಿಯರಲ್ಲವೆಂದರ್ಥವಾಗುವದಿಲ್ಲವೆ? ಭಗವಂತನ ಅಭಿಪ್ರಾಯ ಹಾಗಿಲ್ಲ. ಹಾಲಿಗೆ ಬೆಲ್ಲ ಸಕ್ಕರೆ ಎರಡೂ ಪ್ರಿಯ; ಆದರೆ ಸಕ್ಕರೆ ಪರಮ ಪ್ರಿಯ; ಏಕೆಂದರೆ ಅದು ಸುಟ್ಟು ಸುಟ್ಟು ನಿಷ್ಕಲ್ಮಷವಾಗಿದೆ. ಹಾಲಿನೊಂದಿಗೆ ಹಾಲಾಗಿಯೇ ಬೆರೆಯುತ್ತದೆ. ಹಾಗೆ, ಆರ್ತ ಅರ್ಥಾರ್ಥಿ ಜಿಜ್ಞಾಸು ಜ್ಞಾನಿ ನಾಲ್ವರನ್ನೂ ದೇವನು ಪ್ರೀತಿಸುತ್ತಾನೆ. ಆದರೆ ಮೂವರಲ್ಲಿ ಇನ್ನೂ ಕಲ್ಮಷವಿರುವದರಿಂದ ದೇವನೊಂದಿಗೆ ಪೂರ್ತಿ ಅಭಿನ್ನರಾಗರು; ಜ್ಞಾನಿ ಮಾತ್ರ ಸಾಧನೆಯ ವಿವಿಧ ಕುಲುಮೆಗಳಲ್ಲಿ ಸುಟ್ಟು ಪರಿಶುದ್ಧನಾದುದರಿಂದ ದೇವನೊಂದಿಗೆ ಅವಿನಾಭಾವದಿಂದ ಬೆರೆಯುತ್ತಾನೆ. ಆ ಕಾರಣಕ್ಕಾಗಿಯೇ ದೇವನಿಗೆ ಅವನು ಪರಮಪ್ರಿಯ.

(೫) ಸಮಾಜ ಹಾಗು ರಾಷ್ಟ್ರಗಳು ಸರ್ವಾಂಗ ಸುಂದರವಾಗಬೇಕಾದರೆ, ದೇಶದ ವಾತಾವರಣದಲ್ಲಿ ಶಾಂತಿ–ಪರಿಮಳ ತುಂಬಿಕೊಳ್ಳಬೇಕಾದರೆ, ಜನರ ಹೃದಯಗಳೆಲ್ಲ ಸಾತ್ವಿಕ ಪ್ರೇಮದಿಂದ ಒಂದುಗೂಡಬೇಕಾದರೆ ದೇವಪ್ರಿಯರಾದ ಜ್ಞಾನಿಗಳು ಅಲ್ಲಿ ವಾಸವಾಗಿರುವಂತೆ ಮಾಡಬೇಕು. ಜ್ಞಾನಿಗಳನ್ನು ಒಂದೆಡೆ ತಡೆಯುವದು ಹಗುರಲ್ಲ. ಸಾವಿರ ಆನೆ ಸಾಕಿ ಸಲುಹಬಹುದು. ಒಬ್ಬ ಜ್ಞಾನಿಯನ್ನು ಉಪಚರಿಸುವದು ಕಷ್ಟ. ಏಕೆಂದರೆ, ಜ್ಞಾನಿಗಳು ಬಯಸುವದು ಸರ್ವ ತ್ಯಾಗಕ್ಕೆ ಸಿದ್ಧರಿರುವ ಉದಾರಿಗಳನ್ನು. ಅವರ ಆದೇಶಗಳನ್ನು ಚಾಚೂ ತಪ್ಪದೆ ಅನುಷ್ಠಾನಕ್ಕೆ ತರುವ ತ್ಯಾಗಶೀಲರು ಕರ್ಮಶೀಲರು ದೊರೆತರೆ ಜ್ಞಾನಿಗಳು ಅಲ್ಲಿ ನೆಲೆಯಾಗುವರು. ಲೋಕ ಸಂಗ್ರಾಹಕ ಕಾರ್ಯಗಳಿಗೆ ಪ್ರೇರಣೆ ನೀಡುವರು.

ಸಂಬಂಧ:– ಜ್ಞಾನಿಗಳು ದುರ್ಲಭ.

ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥೧೯॥

ಭಾವ:– ಅನೇಕ ಜನ್ಮಗಳ ಪುಣ್ಯ ಸಂಚಯದಿಂದ ಸರ್ವವೂ ವಾಸುದೇವನೆಂದು ಅನುಭೂತಿ ಪಡೆದ ಜ್ಞಾನೀ ಮಹಾತ್ಮನು ನನ್ನನ್ನೇ ಹೊಂದುತ್ತಾನೆ. ಲೋಕದಲ್ಲಿ ಅವನು ಸುದುರ್ಲಭ.

ವಿವರಣೆ:– (೧) ಅಂತಃಕರಣವು ಇಂದ್ರಿಯಗಳ ಮೂಲಕ ಬಾಹ್ಯ ವಿಷಯಾಕಾರವಾದರೆ ವ್ಯಾವಹಾರಿಕ ಅನುಭವವುಂಟಾಗುತ್ತದೆ. ಅದೇ ಅಂತಃಕರಣವು ಅತೀ ಶುದ್ಧವಾಗಿ ಆತ್ಮಾಕಾರವಾದರೆ ಪಾರಮಾರ್ಥಿಕ ಅನುಭವವುಂಟಾಗುತ್ತದೆ. ಈ ಎರಡೂ ಪ್ರಕಾರದ ಅನುಭವಗಳು ಬಹು ಸೂಕ್ಷ್ಮವಾಗಿ ಹೃದಯದಲ್ಲಿ ಉಳಿದುಕೊಳ್ಳುತ್ತವೆ. ಅವುಗಳಿಗೆ ಸಂಸ್ಕಾರ ಎಂದು ನಾಮ. ಸಂಸ್ಕಾರಗಳ

ನಂತರ ಸ್ಮೃತಿ. ಪೂರ್ವ ಕ್ಷಣದಿ ಅನುಭವ, ನಂತರ ಅನುಭಾವಾಧಾರಿತ ಸಂಸ್ಕಾರ ಹಾಗು ಉತ್ತರ ಕ್ಷಣದಿ ಸ್ಮೃತಿ ಇವುಗಳಿಗೆಲ್ಲ ಆಧಾರ ಭೂಮಿಯು ಮನಸ್ಸು.

ಸಂಸ್ಕಾರದ ಪಾತ್ರ ಬಹು ದೊಡ್ಡದು. ನಮ್ಮ ಅಗಣಿತ ಭಾವಗಳಿಗೆ ಕ್ರಿಯೆಗಳಿಗೆ ಪ್ರೇರಕ ಘಟಕವು ಸಂಸ್ಕಾರ.

ಸಂಸ್ಕಾರದ ಪ್ರಕಾರಗಳು: (ಕ) ದೈವೀ (ಖ) ಮಾನವೀ (ಗ) ರಾಕ್ಷಸೀ.
(ಕ) ಶುಭ (ಖ) ಶುಭಾಶುಭ (ಗ) ಅಶುಭ.
(ಕ) ಪುಣ್ಯ (ಖ) ಮಿಶ್ರ (ಗ) ಪಾಪ.

" ಸ್ವರೂಪಗಳು:(ಚ) ಸುಪ್ತ (ಛ) ವಿಚ್ಛಿನ್ನ (ಜ) ತನು (ಝ) ಉದಾರ.

ಸುಪ್ತ ಸಂಸ್ಕಾರ:– ನಿಷ್ಕ್ರಿಯವಾದ ಸಂಸ್ಕಾರ. ಉದಾ:– ಬಾಲಕನ ಹೃದಯದಲ್ಲಿ ಇರುವ ಕಾಮ ಸಂಸ್ಕಾರವು ನಿಷ್ಕ್ರಿಯವಾಗಿದೆ. ಸುಂದರ ಸ್ತ್ರೀ, ವೈಷಯಿಕ ಗಾಯನ, ಸುಗಂಧ ಇತ್ಯಾದಿ ಕಾಮೋತ್ತೇಜಕ ವಸ್ತುಗಳಿದ್ದರೂ ಆ ಬಾಲಕನ ಕಾಮ ಸಂಸ್ಕಾರವು ವ್ಯಕ್ತವಾಗುವದಿಲ್ಲ. ಅವನಲ್ಲಿ ಆ ಸರ್ವ ಸಂಸ್ಕಾರಗಳು ಜಾಗ್ರುತವಿರುವದಿಲ್ಲ. ಶಾಂತ ಸಂಸ್ಕಾರ ಜಾಗ್ರುತವಾದಾಗ ಕ್ರೋಧ ಸಂಸ್ಕಾರ ಸುಪ್ತ. ಕಾಮ ಸಂಸ್ಕಾರ ಜಾಗ್ರುತವಾದಾಗ ನಿಗ್ರಹ ಸಂಸ್ಕಾರ ಸುಪ್ತ. ವಿಶ್ವಾಮಿತ್ರನು ಮೇನಕೆಯನ್ನು ಕಂಡ ಕ್ಷಣ ಕಾಮ ಸಂಸ್ಕಾರ ಎದ್ದಿತು, ತಪಸ್ಸಂಸ್ಕಾರ ಸುಪ್ತವಾಗಿತ್ತು. ಕೈಕೇಯಿಯಲ್ಲಿ ಮಾತೃಸಂಸ್ಕಾರ ಸುಪ್ತವಾಗಿ ರಾಕ್ಷಸೀ ಸಂಸ್ಕಾರ ಜಾಗ್ರತವಾದುದರಿಂದ ರಾಮನನ್ನು ಅರಣ್ಯಕ್ಕೆ ಕಳಿಸಿದಳು.

ವಿಚ್ಛಿನ್ನ ಸಂಸ್ಕಾರ:– ಸಾಮಾನ್ಯವಾಗಿ ಸಂಸ್ಕಾರಗಳು ಕ್ರಮಬದ್ಧ ರೀತಿಯಲ್ಲಿ ಹೆಣೆದುಕೊಂಡಿರುತ್ತವೆ. ಆ ಕ್ರಮ ತಪ್ಪಿ ಸಂಸ್ಕಾರ ಪ್ರವಾಹವು ವಿಚ್ಛಿನ್ನಗೊಂಡರೆ ಆ ಸಂಸ್ಕಾರಗಳು ಅಶಕ್ತವಾಗುತ್ತವೆ. ಹಾಗೆ ನಿರ್ಬಲ ಮತ್ತು ನಿರುಪಯುಕ್ತವಾದ ಸಂಸ್ಕಾರಗಳು 'ವಿಚ್ಛಿನ್ನ' ಎನಿಸುತ್ತವೆ. ಉದಾ:– ವಾಲ್ಮೀಕಿ ಬೇಡ. ನಾರದನ ಭೆಟ್ಟಿಯಾದ ಮರುಕ್ಷಣ ಅವನ ರಾಕ್ಷಸೀ ಸಂಸ್ಕಾರಗಳು ವಿಚ್ಛಿನ್ನವಾದವು. ದೈವೀ ಸಂಸ್ಕಾರಗಳು ಉದಯವಾದವು.

ತನು ಸಂಸ್ಕಾರಗಳು:- ಪರಿಸರದ ಪರಿಣಾಮವಾಗಿ ಕ್ಷೀಣಗೊಂಡ ಸಂಸ್ಕಾರ 'ತನು'. ಉದಾ:- ತರುಣ,ಕ್ಷಯರೋಗ ಪೀಡಿತ. ಅವನ ಸುಂದರ ಹೆಂಡತಿ ಮಗ್ಗುಲಲ್ಲಿ ಕುಳಿತರೂ ಅವನಿಗೆ ಕಾಮ ವಿಕಾರ ಉಂಟಾಗದು. ಏಕೆಂದರೆ ಅವನ ರೋಗದ ಪರಿಣಾಮದಿಂದಾಗಿ ಕಾಮ ಸಂಸ್ಕಾರಗಳು ಕ್ಷಯಿಸಿವೆ, ತನುಗೊಂಡಿವೆ. ಮಹಾತ್ಮರ ಸನ್ನಿಧಿಯಲ್ಲಿರುವಾಗ ಸಾಧಕರ ವೈಷಯಿಕ (ಶಬ್ದ ಸ್ಪರ್ಶ ಇತ್ಯಾದಿ) ಸಂಸ್ಕಾರಗಳು ನಿರ್ಬಲವಾಗಿರುತ್ತವೆ, ತನುಗೊಳ್ಳುತ್ತವೆ.

ಉದಾರ ಸಂಸ್ಕಾರ:- ಕಾರ್ಯೋನ್ಮುಖ ಸಂಸ್ಕಾರಗಳು. ಯಾವ ಸಂಸ್ಕಾರ ಉದಾರವಿದೆಯೋ ಅಂಥದೇ ಭಾವ, ಅಂಥದೇ ಕಾರ್ಯ ಘಟಿಸುತ್ತದೆ. ಪ್ರವಚ

ನಕ್ಕೆ ಕುಳಿತಾಗ ಗ್ರಂಥಾಧ್ಯಯನ ಮಾಡುವಾಗ, ಧ್ಯಾನಗೈಯುವಾಗ ದೈವೀ ಸಂಸ್ಕಾರಗಳು 'ಉದಾರ' ವಾಗಿರುತ್ತವೆ.

(೨) ಬಹೂನಾಂ ಜನ್ಮನಾಮಂತೇ:– ಪ್ರತಿಯೊಬ್ಬನು ಅರಿತೊ ಅರಿಯ ದೆಯೊ ಒಂದಿಲ್ಲೊಂದು ಸತ್ಕರ್ಮ ಮಾಡಿಯೇ ಮಾಡುತ್ತಾನೆ. ಸಜ್ಜನರ ಸಂಗ, ಸಂತ ದರ್ಶನ, ತೀರ್ಥಾಟನ, ಗುರು ದೇವತಾರ್ಚನ, ಹೋಮ-ಹವನ, ಅರ್ಚನ-ಅರ್ಪಣ, ಗ್ರಂಥ ವಾಚನ, ಶಾಸ್ತ್ರಶ್ರವಣ ಇಂಥ ಪವಿತ್ರ ಕರ್ಮಗಳನ್ನು ಆಚರಿಸುತ್ತಾನೆ. ಅವು ಶುದ್ಧ ಸಂಸ್ಕಾರ ರೂಪದಿಂದ ಅವನ ಹೃದಯದಲ್ಲಿ ಉಳಿ ಯುತ್ತವೆ. ಈ ಸಂಸ್ಕಾರಗಳು ಭೋಗದಾಯಕವಲ್ಲ (ನಿಷ್ಕಾಮನೆಯಿಂದ ಗೈದ ಕರ್ಮಗಳ ಸಂಸ್ಕಾರಗಳು ಭೋಗವೀಯವು. ಇದು ನಿಯಮ). ಆದ್ದರಿಂದ ಅನೇಕ ಜನ್ಮಗಳವರೆಗೆ ಅವು ನಾಶವಾಗದೆ ಶೇಖರಣೆಗೊಳ್ಳುತ್ತವೆ. ಅವುಗಳ ಮೊತ್ತ ಬೆಳೆದು ಒಂದು ಮಿತಿ ಮುಟ್ಟಿದಾಗ ಅವು ಒಮ್ಮೆಲೆ ವ್ಯಕ್ತವಾಗುತ್ತವೆ. ಆ ವ್ಯಕ್ತಿ ಯನ್ನು ತಕ್ಷಣ ಪ್ರಪಂಚ–ಪರಾವೃತ್ತಗೊಳಿಸುತ್ತವೆ. ಗುರು ಮಹಾತ್ಮರ ಸಾನಿಧ್ಯಕ್ಕೆ ಕರೆದೊಯ್ಯುತ್ತವೆ; ಆತ್ಮಜ್ಞಾನಾವತರಣಕ್ಕೆ ಅವಕಾಶ ಮಾಡಿ ಕೊಡುತ್ತವೆ.

ಉದಾ:- ವಾಲ್ಮೀಕಿ, ಬರ್ತೃಹರಿ. ತುಳಸೀದಾಸ– ಇವರ ಜೀವನದಲ್ಲಿ ಪೂರ್ವ ಸುಕೃತ ಸಂಸ್ಕಾರಗಳು ಒಮ್ಮೆಲೆ ಪರಿವರ್ತನ ಉಂಟು ಮಾಡಿದವು. ಅಕ್ಕಮಹಾದೇವಿ, ಮೀರಾಬಾಯಿ, ಶಾರದಾದೇವಿ ಮುಂತಾದವರು ಯೌವನದ ಹೊಸ್ತಿಲಲ್ಲಿ ಕಾಲು ಹಾಕುತ್ತಿರುವಂತೆಯೇ ದೇವಾಧಿದೇವನಿಗೆ ತಮ್ಮ ಜೀವನ ವನ್ನು ಸಮರ್ಪಿಸಿಕೊಂಡರು.

ಜ್ಞಾನವಾನ್ ಮಾಂ ಪ್ರಪದ್ಯತೇ: "ಅರ್ಜುನ, ಮನುಷ್ಯನು ಕರ್ಮ ಶೀಲ. ಪುಣ್ಯ ಪಾಪ ಎರಡೂ ಬಗೆಯ ಕರ್ಮಗಳನ್ನು ಮಾಡುತ್ತಾನೆ. ಆ ಕರ್ಮ ಗಳು ಸಂಸ್ಕಾರ ರೂಪದಿಂದ ಹೃದಯದಲ್ಲಿ ಉಳಿದುಕೊಳ್ಳುತ್ತವೆ. ಪಾಪ ಸಂಸ್ಕಾ ರಗಳೇ ಬಲಿಷ್ಠವಾಗಿರುವವರೆಗೆ ಅವನು ಅಜ್ಞಾನಾಂಧಕಾರದಲ್ಲಿ ಬಾಳುತ್ತಾನೆ. ಒಂದು ವೇಳೆ, ಅನೇಕ ಜನ್ಮಗಳ ಸುಕೃತಗಳು ಶೇಖರಣೆಗೊಂಡು ಪುಣ್ಯ-ಸಂಸ್ಕಾ ರದ ಮೊತ್ತ ಬೆಳೆದರೆ ಹೃದ್ಗತ ಅಜ್ಞಾನಾಂಧಕಾರ ನಾಶವಾಗುತ್ತದೆ. ಒಂದು ಬಗೆಯ ಬೆಳಕು ಅಲ್ಲಿ ಪ್ರಕಟಗೊಳ್ಳುತ್ತದೆ. ಆ ಬೆಳಕಿನ ಪ್ರಭಾವದಿಂದ ಮನ ಬುದ್ಧಿ ಭಾವಗಳು ನಿರ್ಮಲವಾಗುತ್ತವೆ. ನಾನು ನೀನು, ಆತ್ಮ ಅನಾತ್ಮ, ಜಡ ಚೇತನ ಎಂಬ ಭೇದ ಬುದ್ಧಿಯು ಮರೆಯಾಗಿ 'ವಿಶ್ವವೆಲ್ಲ ವಾಸುದೇವ' ಎಂಬ ಅಮೃತ ವಿದ್ಯೆ ಸಮನಿಸುತ್ತದೆ. 'ಅಣೋರಣೀಯಾನ್ ಮಹತೋ ಮಹೀ ಯಾನ್' ಎಂಬ ದಿವ್ಯ ಜ್ಞಾನ ಅಳವಡುತ್ತದೆ. ಆ ಜ್ಞಾನವುಳ್ಳ ಮಹಾನು ಭಾವನು ಜ್ಞಾನಿ! ಅವನು ನನ್ನ ಆತ್ಮ! ನನ್ನನ್ನೇ ಕಂಡು, ನನ್ನನ್ನೇ ಭಾವಿಸಿ,

ನನ್ನಲ್ಲಿಯೇ ಒಂದಾಗುತ್ತಾನೆ ಆತ. ಅಂಥ ಜ್ಞಾನಿಯು 'ದುರ್ಲಭ'!"

**ಸಂಬಂಧ:–** ನಿಷ್ಕಾಮಶೀಲರು ಆತ್ಮಜ್ಞಾನ ಹೊಂದಿ ಮುಕ್ತರಾಗುತ್ತಾರೆ. ಸಕಾಮಿಗಳು ಭೋಗಲೋಕ ಹೊಂದಿ ಕಡೆಗೊಮ್ಮೆ ದೇವನನ್ನೇ ಸೇರುತ್ತಾರೆ. ಆದರೆ ನೂರಾರು ಆಶೆಗಳಿಂದ ಕೂಡಿದ ರಜತಮೋ ಮನೋಭಾವಿಗಳ ಗತಿ ಏನು?

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇऽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥೨೦॥**

**ಅರ್ಥ:–** ತೈಃ ತೈಃ = ಆಯಾಯ, ಕಾಮೈಃ ಕಾಮನೆಗಳಿಂದ (ಪುತ್ರ ಕೀರ್ತಿ ಶತ್ರುಜಯ ಇತ್ಯಾದಿ ವಿಷಯಕ ಕಾಮನೆಗಳಿಂದ) ಹೃತ ಜ್ಞಾನಾಃ = ಅಪಹರಿಸಲ್ಪಟ್ಟ ಜ್ಞಾನವುಳ್ಳವರು, ತಂ ತಂ = ಆಯಾಯ ನಿಯಮಂ = ನಿಯಮವನ್ನು (ತತ್ತದ್ದೇವತಾರಾಧನೇ ಯೋ ಯೋ ನಿಯಮ ಉಪವಾಸಾದಿ ಲಕ್ಷಣಃ ತಂ ನಿಯಮಂ = ಆಯಾ ದೇವತಾರಾಧನೆಗೆ ಯಾವ ಯಾವ ಆರಾಧನಾ ನಿಯಮ ಇದೆಯೋ ಅದನ್ನು) ಆಸ್ಥಾಯ = ಅನುಸರಿಸಿ, ಸ್ವಯಾ ಪ್ರಕೃತ್ಯಾ = ತಮ್ಮ ಸ್ವಭಾವದಿಂದ ನಿಯಂತ್ರಿತರಾಗಿ ಅನ್ಯದೇವತಾಃ = ಅನ್ಯ ದೇವತೆಗಳನ್ನು ಪ್ರಪದ್ಯಂತೇ = ಶರಣು ಹೊಂದುತ್ತಾರೆ.

**ವಿವರಣೆ:– ಭಗವಂತ:–** "ಅರ್ಜುನ, ಬಡವ ಬಲ್ಲಿದ, ಅಜ್ಞ ಸುಜ್ಞ ಎಲ್ಲರ ಹೃದಯ ಪುತ್ರ ದಾರಾದಿ ವಿಷಯ ಕಾಮನೆಯಿಂದ ತುಂಬಿ ಬಿಟ್ಟಿದೆ. ಆತ್ಮಾನಾತ್ಮಗಳನ್ನು ವಿಂಗಡಿಸುವ ವಿವೇಕ ಮರೆಯಾಗಿದೆ. ಸತ್ಯ ಪ್ರಜ್ಞೆ ಅಡಗಿದೆ. ಹೀಗಾಗಿ, ಎಲ್ಲ ಜೀವ ಜಂತುಗಳು ಹಾಗು ಮಾನವರು ಪ್ರಪಂಚ ವ್ಯಾಮೋಹ ಪಂಕದಲ್ಲಿ ಆಕಂಠ ಮುಳುಗಿದ್ದಾರೆ. ವಿಷಯಗಳನ್ನು ಪಡೆಯುಲೆಂದು 'ಕ್ಷುದ್ರ ದೇವ–ದೇವತೆಗಳನ್ನು ಆ ದೇವತಾರಾಧನ ಪದ್ಧತಿಯಿಂದ ಪೂಜಿಸುತ್ತಾರೆ. ತಮ್ಮ ತಮ್ಮ ಸ್ವಭಾವಾನುಸಾರ ಆ ದೇವತೆಗಳಿಗೆ ಮೊರೆ ಹೋಗುತ್ತಾರೆ. ಆ ದೇವತೆಗಳನ್ನು ವಿಭಿನ್ನ ಸೇವೆ ಮತ್ತು ಉಪಚಾರಗಳಿಂದ ಸಂತೋಷ ಪಡಿಸಿ ಇಂದ್ರಿಯ ವಿಷಯಗಳನ್ನು ಬೇಡಿ ಪಡೆಯುತ್ತಾರೆ. ಅಂಥ ಜನರಿಗೆ ಜ್ಞಾನವು ಎಂತು ಸಮನಿಸೀತು?"

(೧) **ಸ್ವಭಾವ ಹಾಗು ಕಾಮನಾ:** ಬಹು ಜನ್ಮಗಳಲ್ಲಿ ಗಳಿಸಿದ ಸಂಸ್ಕಾರಗಳ ಕಣಜವೇ ಸ್ವಭಾವ (ಪ್ರಕೃತಿ). ಅದು ಪಾರಮಾರ್ಥಿಕ ಮತ್ತು ವ್ಯಾವಹಾರಿಕ ಎಂದು ಎರಡು ಪ್ರಕಾರ. ಪಾರಮಾರ್ಥಿಕ ಸ್ವಭಾವವು ದೇವರತ್ತ ಪ್ರವಹಿಸುತ್ತದೆ; ವ್ಯಾವಹಾರಿಕ ಸ್ವಭಾವವು ವಿಷಯಗಳತ್ತ ಪ್ರವಹಿಸುತ್ತದೆ. ಸ್ವಭಾವದ ಬಲದಿಂದಾಗಿ ಏಳುವ ಬಯಕೆಗಳೇ ಕಾಮನೆಗಳು. ಪಾರಮಾರ್ಥಿಕ ಸ್ವಭಾವದಿಂದ ಪಾರಮಾರ್ಥಿಕ ಕಾಮನೆಗಳ ಉದಯ. ವ್ಯಾವಹಾರಿಕ ಸ್ವಭಾವದಿಂದ ವ್ಯಾವಹಾರಿಕ ಕಾಮನೆಗಳ ಉದಯ. ಪಾರಮಾರ್ಥಿಕ ಕಾಮನೆ (ಆತ್ಮ ಕಾಮನೆ) ಯು ಸಾಧಕ. ವ್ಯಾವಹಾರಿಕ ಕಾಮನೆ (ವಿಷಯಗಳ ಕಾಮನೆ) ಯು ಬಾಧಕ;

ಅದು ಮನುಷ್ಯನ ಸಾರಾಸಾರ ಬುದ್ಧಿಯನ್ನೇ ಅಪಹರಿಸುತ್ತದೆ. ಸತ್ಯವನ್ನು ಮರೆ ಮಾಚಿಸಿ ಅಸತ್ಯ ಅಭಿರತಿಯನ್ನು ಹೆಚ್ಚಿಸುತ್ತದೆ.

ವಿಷಯ ಕಾಮನೆಯ ಶಕ್ತಿ ಅಪಾರ. ಪ್ರಕಾಂಡ ಪಂಡಿತರನ್ನು, ಮಹಾ ವಕ್ತಾರರನ್ನು, ಸರಸ ಅಧ್ಯಾಪಕರನ್ನು ಮತ್ತು ಆಧ್ಯಾತ್ಮಿಕ ಗ್ರಂಥಕಾರರನ್ನು ಸಹಜವಾಗಿ ಮರುಳಗೊಳಿಸುವ ಮೋಡಿ ಅದರಲ್ಲಿದೆ. ಧನ, ಕನಕ, ಮಾನ, ಗೌರವ, ಕೀರ್ತಿ ಮುಂತಾದ ಆಮಿಷ ತೋರಿಸಿ ಅವರನ್ನು ತನ್ನ ಬಲೆಗೆ ಹಾಕಿ ಕೊಳ್ಳುತ್ತದೆ. ಜಗತ್ತೆಲ್ಲ ವಿಷಯ ಕಾಮನೆಯ ಜ್ವಾಲೆಗೆ ಸಿಕ್ಕು ಬೆಂದು ಹೋಗುತ್ತಿದೆ.

(೨) ಕಾಮನೆಗಳನ್ನು ಪೂರ್ತಿ ಮಾಡಿಕೊಳ್ಳಬೇಕೆಂಬ ಹಂಬಲ ಎಲ್ಲರಲ್ಲಿದೆ. ಅದಕ್ಕೆ ಸುಲಭ ಉಪಾಯವೆಂದರೆ ಬಗೆ ಬಗೆಯ ದೇವತೆಗಳ ಅರ್ಚನ. ಭೂತ ಪ್ರೇತ ಯಕ್ಷ, ಕಾಳಿಕೆ ಮಾರಿ ಮಸಣಿ, ಭೈರವ ಮುಂತಾದ ಅಸಂಖ್ಯ ಕ್ಷುದ್ರ ದೈವಗಳನ್ನು ಆಯಾ ದೇವತೆಗೆ ಇಷ್ಟವಾದ ವಸ್ತುಗಳನ್ನು ನಿವೇದಿಸಿ ಪೂಜಿಸಿದರೆ ಆ ದೇವತೆಯು ಪೂಜಕನ ಇಚ್ಛೆಯನ್ನು ಪೂರೈಸುತ್ತದೆ. ಕಾಮುಕ್ಯಾಲ ಸರು ಬಹು ಶ್ರಮ ವಹಿಸಿ, ಅತುಲ ನಿಷ್ಠೆಯಿಂದ, ಮನೋರಂಜಕ ರೀತಿಯಲ್ಲಿ ಹಲು ದೈವಗಳ ಸೇವೆ ಮಾಡಿ ಕಾಮನೆಗಳನ್ನು ಪಡೆಯುತ್ತಾರೆ. ಪಡೆದ ಭೋಗ ವೈಭವಗಳ ಉಪಭೋಗದಲ್ಲಿ ತಮ್ಮನ್ನೇ ತಾವು ಮರೆಯುತ್ತಾರೆ, ಪ್ರಾಪಂಚಿಕ ತಮಂಧದಲ್ಲಿ ಬಾಳುತ್ತಾರೆ. ಅವರ ಸ್ವಭಾವಕ್ಕೆ ಅಂಧಕಾರವೇ ಇಷ್ಟ!

ಸಂಬಂಧ:– ಪರಮಾತ್ಮನೇ ಸನ್ನಿಧಾನ ರೂಪದಿಂದ ಆಯಾ ದೇವತೆಗಳ ಮೂಲಕ ಕಾಮನಾ ಪೂರ್ತಿ ಮಾಡುತ್ತಾನೆ.

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವವಿದಧಾಮ್ಯಹಮ್ ॥೨೧॥
ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।
ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ಹಿ ತಾನ್ ॥೨೨॥

ಅರ್ಥ:- ಯಃ ಯಃ = ಯಾವ ಯಾವ ಭಕ್ತಃ = ಭಕ್ತನು ಯಾಂ ಯಾಂ = ಯಾವ ಯಾವ ತನುಂ = ಶರೀರವನ್ನು (ದೇವತಾ ಮೂರ್ತಿಯನ್ನು) ಶ್ರದ್ಧಯಾ = ಶ್ರದ್ಧೆಯಿಂದ ಅರ್ಚಿತುಂ = ಪೂಜಿಸಲು ಇಚ್ಛತಿ = ಇಚ್ಛಿಸುತ್ತಾನೆಯೋ ತಸ್ಯ ತಸ್ಯ = ಅವನಿಗೆ ಅವನಿಗೆ ತಮೇವ = ಅದೇ ಅಚಲಾಂ = ಸ್ಥಿರವಾದ ಶ್ರದ್ಧಾಂ = ಶ್ರದ್ಧೆಯನ್ನು ಅಹಂ= ನಾನು ವಿದಧಾಮಿ = ಕೊಡುತ್ತೇನೆ ॥೨೧॥ ಸಃ = ಅವನು ತಯಾ ಶ್ರದ್ಧಯಾ = ಅದೇ ಶ್ರದ್ಧೆಯಿಂದ ಯುಕ್ತಃ = ಕೂಡಿದವನಾಗಿ ತಸ್ಯ = ಆ ದೇವತೆಯ, ಆರಾಧನಂ = ಅರ್ಚನೆಯನ್ನು ಈಹತೇ = ಮಾಡುತ್ತಾನೆ, ಚ = ಮತ್ತು ತತಃ = ಅದರಿಂದ ಮಯಾ ಏವ= ನನ್ನಿಂದಲೇ ವಿಹಿತಾನ್ = ಅವನಿಗೆ ವಿಹಿತವೆನಿಸುವ ತಾನ್ ಕಾಮಾನ್ = ಆ ಕಾಮನೆಗಳನ್ನು ಲಭತೇ ಹಿ =ಪಡೆಯುತ್ತಾರೆ. ॥೨೨॥

ವಿವರಣೆ:– ಭಗವಂತ:– "ಪಾರ್ಥ, ನಾನು ವಿಭು, ಸರ್ವಾಧಾರ.

ಸರ್ವಾಂತರ್ಯಾಮಿ. ಯಕ್ಷ ಕಿನ್ನರ ಕಿಂಪುರುಷ ಸೂರ್ಯ ಚಂದ್ರ ಇಂದ್ರ ಮಾರಿ ಕಾಳಿಕೆ ಮುಂತಾದ ವಿಭಿನ್ನಾಕಾರ ವಿಭಿನ್ನ ಸ್ವಭಾವ ಹಾಗು ವಿಭಿನ್ನ ಆಶಯದ ಕ್ಷುದ್ರ ದೇವತೆಗಳೆಲ್ಲ ನನ್ನ ಸಾನಿಧ್ಯದಲ್ಲಿಯೇ ಬಾಳಿದ್ದಾರೆ. ಅವರು ನನ್ನ ಹಲವು ವಿಧ ಸಾಕಾರ ಮೂರ್ತಿಗಳೆಂದೇ ತಿಳಿ. ಬೇರೆ ಬೇರೆ ಭಕ್ತರು ಒಂದೊಂದು ಬಗೆಯ ಶ್ರದ್ಧೆ ಇರಿಸಿ ಸಕಾಮಿಗಳಾಗಿ ಆಯಾ ದೇವತೆಗಳನ್ನು ಅರ್ಚಿಸುತ್ತಾರೆ. ನಾನು ಅವರ ಶ್ರದ್ಧೆಗೆ ಬಾಧೆ ತರುವದಿಲ್ಲ. ಅಷ್ಟೇ ಅಲ್ಲ, ಆ ಶ್ರದ್ಧೆ ದೃಢವಾಗುವಂತೆ ಮಾಡುತ್ತೇನೆ. ಆ ಭಕ್ತರು ಆಯಾ ದೇವತೆಗಳನ್ನು ಪೂಜಿಸಿ ತಮ್ಮ ಇಚ್ಛಿತ ವಿಷಯಗಳನ್ನು ಪಡೆದುಕೊಳ್ಳುತ್ತಾರೆ. ಆ ದೇವತೆಯ ಮೂಲಕ ಫಲಗಳನ್ನು ನೀಡುವವ ನಾನೇ ಎಂದು ತಿಳಿದುಕೊ. ಆ ಫಲಗಳು ಹಿತಕಾರಿಯಲ್ಲ ಎಂಬ ಬುದ್ಧಿ ಆ ಜನರಿಗಿಲ್ಲ, ಪಾಪ."

(೧) ಅನ್ಯ ದೇವತೆಗಳು: ಪರಮಾತ್ಮನ ಕೃಪಾ ಛತ್ರದಲ್ಲಿ ಅಸಂಖ್ಯ ದೇವ ದೇವತೆಗಳು ಬಾಳುತ್ತಿದ್ದಾರೆ. ಅವರು ಸಾವ ಉಳ್ಳವರು. ಅವರ ಶಕ್ತಿಯು ತೀರ ಪರಿಮಿತ. ಅಲ್ಲದೆ ವಿಶಿಷ್ಟ ರೀತಿಯಲ್ಲಿ ಅವರನ್ನು ಅರ್ಚಿಸಿ ಕಾಯಿ ಹಣ್ಣುಗಳನ್ನು ನಿವೇದಿಸಿದರೆ ಸಾಕು ಅಲ್ಪ ಸಂತುಷ್ಟರಾದ ಅವರು ನಮ್ಮ ಇಚ್ಛಿತ ಧನ ಧಾನ್ಯಗಳನ್ನು ಕೊಡುತ್ತಾರೆ. ಅವುಗಳನ್ನು ಪಡೆದು ಹಿರಿ ಹಿರಿ ಹಿಗ್ಗುತ್ತೇವೆ. ಮುಕ್ತಿ ಪಡೆದಷ್ಟು ಸಂತೋಷಿಸುತ್ತೇವೆ. ನಮ್ಮ ಮರುಳತನಕ್ಕೆ ಸಂತರು ನಗುತ್ತಾರೆ. ವಿನಾಶ ಶೀಲವಾದ ದುಃಖಕಾರಿಯಾದ ಸಾಂಸಾರಿಕ ವೈಭವಗಳನ್ನು ಅಪ್ಪಿ ಚಿರಸುಖದ ಕನಸ ಕಾಣುವ ನಮ್ಮನ್ನು ಕಂಡು ಮರುಕ ವ್ಯಕ್ತ ಮಾಡುತ್ತಾರೆ. ಅಷ್ಟೋಪಚಾರ, ಶತೋಪಚಾರ, ಸಹಸ್ರೋಪಚಾರಗಳಿಂದ ಮನುಷ್ಯನು ದೇವತೆಗಳನ್ನು ಪೂಜಿಸುತ್ತಾನೆ. ಲಕ್ಷ ಲಕ್ಷ ದ್ರವ್ಯ ವ್ಯಯಿಸಿ ಯಜ್ಞಯಾಗ ಗೈಯುತ್ತಾನೆ. ವ್ರತ ಉಪವಾಸ ಜಪ ತಪ ನಿರ್ವಹಿಸುತ್ತಾನೆ. ಆದರೆ ಕಟ್ಟ ಕಡೆಯಲ್ಲಿ ಅವನು ಬೇಡುವದೇನು? ಮುಕ್ತಿಯನ್ನಲ್ಲ. ಸದ್ಗುಣ, ವಿರಾಗ, ವಿವೇಕಗಳನ್ನಲ್ಲ. ನಾರಿ, ಧಾರುಣಿ, ಸಿರಿ, ಈ ಮೂರು ಹೇಯ ವಸ್ತುಗಳನ್ನು.

(೨) ಅದ್ವಯ ದೇವನು ಪರಮಾತ್ಮ. ಸಕಲ ದೇವತೆಗಳ ಅಂತರ್ಯಾಮಿ. ಅವನು ಅಜ ಅಮರ! ಅವನ ಅರ್ಚನೆ ಚಿಂತನೆ ಧ್ಯಾನಗಳಿಂದ ಅಕ್ಷಯ ಆನಂದ ಪ್ರಾಪ್ತಿ! ದುರ್ದೈವವೆಂದರೆ ಬಹು ಜನರಿಗೆ ಇದು ತಿಳಿಯುತ್ತಿಲ್ಲ. ಸಾಮಾನ್ಯ ಜೀವಿಯಿಂದ ಮಹಾ ಪಂಡಿತರವರೆಗೂ ಒಂದೇ ಬಗೆಯ ಬಯಕೆ ಹಬ್ಬಿದೆ. ಅಂಧರಾದ ಗುರುಗಳು ಭಕ್ತರು, ನಾಯಕರು ಚಾಕರರು ಪ್ರಾಪಂಚಿಕ ವೈಭವಕ್ಕಾಗಿ ಸದಾ ಹವಣಿಸುತ್ತಾರೆ. ಸವಿ ಭೋಜನ, ಭೋಗ ಭಾಗ್ಯ, ಪೂಜ್ಯತೆ, ಗೌರವ ಇವು ದೊರೆಯುತ್ತಿದ್ದರೆ ಗುರು-ಶಿಷ್ಯ, ರಾಜ-ಪ್ರಜೆ, ಹೀಗೆಲ್ಲ ಆಗಲು ಬಯಸುತ್ತೇವೆ. ಅವು ದೊರೆಯದಿದ್ದರೆ ಆ ಗುರುತ್ವ, ಆ ಅಧಿಕಾರ ಯಾರಿಗೆ

ಬೇಕು ಹೇಳಿ? ಸಾಂಸಾರಿಕ ಆಸಕ್ತಿ ಬದಿಗಿರಿಸಿ, ಕೀರ್ತಿಯ ಆಕಾಂಕ್ಷೆ ತ್ಯಜಿಸಿ ಲೋಕಸೇವೆಯೇ ದೇವ ಪೂಜೆಯೆಂದು ಭಾವಿಸಿ ದುಡಿಯುವವರು ಎಲ್ಲಿ ದೊರೆಯುತ್ತಾರೆ?

ಸಂಬಂಧ:- ಎಲ್ಲ ದೇವತೆಗಳು ಪರಮಾತ್ಮನ ಸ್ವರೂಪರೇ ಸರಿ. ಆದುದರಿಂದ ಅವರ ಆರಾಧನೆ ಎಂದರೆ ಪರಮಾತ್ಮನ ಆರಾಧನೆಯೇ ಆಗಿದೆ. ಆ ಆರಾಧನೆಯ ಫಲ ಕೊಡುವವನೂ ಅವನೇ. ಆದರೆ, ಪರಮಾತ್ಮನ ಸಾಕ್ಷಾತ್ ಆರಾಧಕರು ಪಡೆವ ಫಲಕ್ಕೂ ದೇವತೆಗಳ ಆರಾಧಕರು ಪಡೆವ ಫಲಕ್ಕೂ ಬಹು ಅಂತರವಿದೆ.

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥೨೩॥**

ಭಾವ:– ಆ ಅಲ್ಪ ಬುದ್ಧಿಯವರಿಗೆ ಅನ್ಯದೇವತಾರಾಧನೆಯಿಂದ ದೊರೆಯುವ ಫಲವು ವಿನಾಶಿ. (ನನ್ನ ಭಕ್ತರು ಪಡೆವ ಫಲ ಅವಿನಾಶಿ). ದೇವತೆಗಳನ್ನು ಆರಾಧಿಸುವವರು ದೇವತೆಗಳನ್ನು ಹೊಂದುತ್ತಾರೆ, ನನ್ನ ಭಕ್ತರು ನನ್ನನ್ನೇ ಹೊಂದುತ್ತಾರೆ. (ಅಲ್ಪಮೇಧಸಾಂ= ಪರಿಚ್ಛಿನ್ನ ದೃಷ್ಟಿಯವರ).

ವಿವರಣೆ:– "ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ. ಅಥ ಯತ್ರ ಅನ್ಯತ್ಪಶ್ಯತಿ ಅನ್ಯಚ್ಛೃಣೋತಿ ಅನ್ಯದ್ವಿಜಾನಾತಿ ತದಲ್ಪಂ. ಯೋ ವೈ ಭೂಮಾ ತದಮೃತಂ, ಅಥ ಯದಲ್ಪಂ ತನ್ಮರ್ತ್ಯಮ್ ॥" (ಛಾಂ. ಉ. ೭–೨೪–೧) ಎಲ್ಲಿ ಆತ್ಮಾತಿರಿಕ್ತವಾದುದೇನನ್ನೂ ನೋಡುವದಿಲ್ಲವೋ ಕೇಳುವದಿಲ್ಲವೋ ತಿಳಿದುಕೊಳ್ಳುವದಿಲ್ಲವೋ ಅದು ಅನಂತ! ಬೃಹತ್ತತ್ತ್ವ. ಎಲ್ಲಿ ಅನ್ಯವನ್ನು ನೋಡುತ್ತಾನೆಯೋ ಕೇಳುತ್ತಾನೆಯೋ ಅರಿಯುತ್ತಾನೆಯೋ ಅದು ಸಾಂತ, ಅಲ್ಪ! ಅನಂತವಾದುದು ಅಮೃತ, ಅಲ್ಪವಾದುದು ಮರ್ತ್ಯ.

(೧) ಅಲ್ಪಮೇಧಸಃ :– ಅಲ್ಪದರ ವ್ಯಾಮೋಹ ಉಳ್ಳವರು ಅಲ್ಪ ಪ್ರಜ್ಞರು. ಅನಂತದ ಭಾವನೆಯುಳ್ಳವರು ಪೂರ್ಣ ಪ್ರಜ್ಞರು. ಅಲ್ಪ ಪ್ರಜ್ಞರಿಗೆಯೇ ಅಲ್ಪಮೇಧಸಃ ಎನ್ನಲಾಗಿದೆ. ಅವರಿಗೆ ತಮ್ಮ ಜೀವನದ ಬೆಲೆ, ಆತ್ಮನ ನೆಲೆ, ಸಾಧನೆಯ ಮಹತಿ ಅರ್ಥವಾಗವು. ಅವರು ದೇವ ಭಕ್ತರಲ್ಲ, ಧನ ಕನಕ ಭೂಮಿ ಮಾನ ಮತ ಸಂಪ್ರದಾಯಾದಿಗಳ ಭಕ್ತರು!

(೨) ಅವರು ತಮ್ಮ ಇಚ್ಛಾ ಪೂರ್ತಿಗಾಗಿ ಪರಮಾತ್ಮನಿಂದ ಅನ್ಯವಾದ ಬಗೆ ಬಗೆಯ ದೇವತೆಗಳನ್ನು ವಿಧಿವತ್ತಾಗಿ ಪೂಜಿಸುತ್ತಾರೆ. ಇಚ್ಛಿತ ಫಲ ಪಡೆಯುತ್ತಾರೆ. ಕಡೆಗೆ ಆ ದೇವತೆಯ ಸಾನಿಧ್ಯ ಸೇರುತ್ತಾರೆ. ಆದರೆ ಆ ದೇವತೆ, ಆ ದೇವತೆಯು ಕರುಣಿಸಿದ ಎಲ್ಲವೂ ಅಶಾಶ್ವತ!

ಪೂರ್ಣ ಪ್ರಜ್ಞರು ಹಾಗಲ್ಲ. ಅವರು ಪರಮಾತ್ಮನನ್ನೇ ಅರ್ಚಿಸುತ್ತಾರೆ; ತಮ್ಮ ದೇಹ, ಸಂಪದಗಳನ್ನು ಅವನಿಗೆ ಅರ್ಪಿಸುತ್ತಾರೆ; ಸದಾ ಅವನನ್ನೇ

ಧ್ಯಾನಿಸುತ್ತಾರೆ. ಕಡೆಗೆ ಅವನಲ್ಲಿಯೇ ಒಂದಾಗುತ್ತಾರೆ. ದಿವ್ಯ ಆನಂದ ಅನು ಭವಿಸುತ್ತಾರೆ. ಆ ಆನಂದ ರೂಪ ಫಲವು ಅಪಾರ!

**ಭಗವಂತ:**-"ಅರ್ಜುನ, ಮಾನವೀ ಜೀವನವು ಬಹು ಬೆಲೆಬಾಳುವಂಥದು. ಅದು ಕೈ ಬಿಡುವಷ್ಟರಲ್ಲಿಯೇ ಬುದ್ಧಿವಂತನು ಪರಮಾಧಾರನಾದ ನನ್ನನ್ನೇ ಶರಣು ಹೋಗುತ್ತಾನೆ. ನನಗಾಗಿ ತನ್ನ ಬಾಹ್ಯಾಂತರ ಸಂಪದವನ್ನು ಮೀಸ ಲಿಡುತ್ತಾನೆ. ಮನಸ್ಸಿನಲ್ಲೆಲ್ಲ ನನ್ನ ಸ್ವರೂಪವನ್ನೇ ಚಿಂತಿಸುತ್ತಾನೆ. ಕೊನೆಯಲ್ಲಿ ಮುಕ್ತಿ ಎಂಬ ಅಮೃತ ಪಡೆಯುತ್ತಾನೆ. ಬುದ್ಧಿ ಹೀನನು ಮಾತ್ರ ನಿತ್ಯ ಅನಿತ್ಯ ಗಳನ್ನರಿಯದೆ ಕ್ಷಣಭಂಗುರ ವಿಷಯಗಳನ್ನು ಬಯಸಿ ಕ್ಷಣಿಕ ಬಾಳಿನ ದೇವತೆ ಗಳಿಗೆ ಮೊರೆಹೋಗುತ್ತಾನೆ; ವಿಷಯಗಳನ್ನು ಸಂಪಾದಿಸುತ್ತಾನೆ; ಕಡೆಯಲ್ಲಿ ಆ ದೇವತೆಗಳನ್ನೇ ಹೊಂದುತ್ತಾನೆ. ಅವರೊಂದಿಗೆ ತಾನೂ ಮೃತನಾಗುತ್ತಾನೆ. ನೀನು ಹಾಗೆ ಮಾಡದಿರು. ನನ್ನತ್ತ ನೋಡು. ನನ್ನ ಹಿತನುಡಿಗಳನ್ನು ಅನು ಸರಿಸು."

**ಸಂಬಂಧ:**- ಅಲ್ಪ ಪ್ರಜ್ಞರು ಹಾಗು ಪೂರ್ಣಪ್ರಜ್ಞರು ಅಷ್ಟೇ ಶ್ರಮ ವಹಿಸಿ ಸಾಧನೆ ಮಾಡುತ್ತಾರೆ; ಆದರೆ ಅವರು ಪಡೆವ ಫಲ ಮಾತ್ರ ಭಿನ್ನ. ಒಬ್ಬನದು ಅಲ್ಪ, ಇನ್ನೊಬ್ಬನದು 'ಭೂಮಾ.' ಹೀಗಿದ್ದರೂ ಅಲ್ಪ ಪ್ರಜ್ಞರು ದೇವನನ್ನೇಕೆ ಆರಾಧಿಸುವದಿಲ್ಲ?

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥೨೪॥**

**ಭಾವ:**- ನನ್ನ ಅವ್ಯಕ್ತ, ಅವ್ಯಯ ಹಾಗು ಅನುತ್ತಮವಾದ ಪರಮ ಭಾವವನ್ನು ತಿಳಿಯದ ಅವಿವೇಕಿಗಳು ನನ್ನನ್ನು ವ್ಯಕ್ತವಾದವನೆಂದು ಭಾವಿಸುತ್ತಾರೆ. (ಅವ್ಯಕ್ತಂ=ಪ್ರಪಂಚಾ ತೀತ. ವ್ಯಕ್ತಿಂ= ಮನುಷ್ಯಾದಿ ರೂಪವನ್ನು. ಪರಂ ಭಾವಂ=ಉತ್ಕೃಷ್ಟ ಸ್ವರೂಪವನ್ನು)

**ವಿವರಣೆ:**- ಅವ್ಯಕ್ತ, ಅವ್ಯಯ, ಅನುತ್ತಮ: ಸತ್ತ್ವ ರಜ ತಮ ಈ ಮೂರು ಗುಣಗಳಿಂದ ನಿರ್ಮಾಣವಾದ ವಸ್ತುವು ವ್ಯಕ್ತ, ವ್ಯಯಶೀಲ ಮತ್ತು ಅಪರ. ಅದು ಇಂದ್ರಿಯಗಳಿಗೆ, ಮನಸ್ಸಿಗೆ ಮತ್ತು ಬುದ್ಧಿಗೆ ವೇದ್ಯವಾಗುತ್ತದೆ. ಸದಾ ಪರಿಣಾಮ ಹೊಂದುತ್ತಿರುವ ಅದು ಆದಿ ಅಂತ ಉಳ್ಳದು. ತ್ರಿಗುಣಗಳ ಆಚೆ ಅನಂತವಾಗಿ ವ್ಯಾಪಿಸಿದ ದಿವ್ಯ ವಸ್ತುವು ನಿರ್ಗುಣ, ನಿರ್ಮಲ, ನಿರ್ವಿಕಾರ. ಅದನ್ನು ಇಂದ್ರಿಯಗಳು ಗುರುತಿಸವು, ಮನಸ್ಸು ಭಾವಿಸದು, ಬುದ್ಧಿ ಗ್ರಹಿ ಸದು. ಅಣುವಿನ ಆತ್ಮವಾಗಿ, ಆಕಾಶದ ಆಧಾರವಾಗಿ ಅದು ನಿಂತಿದೆ. ಅದು ಸೂಕ್ಷ್ಮಕ್ಕೆ ಸೂಕ್ಷ್ಮ. ಮಹತ್ತಿಗೆ ಮಹತ್ತು. ಪ್ರಕೃತಿಯ ವಿಸ್ತಾರ ಪರಿಧಿಗೆ ಅದು ಸಿಲುಕದು, ಆದ್ದರಿಂದ ಅವ್ಯಕ್ತ; ಕಾಲ ಪ್ರವಾಹದ ಅಳವಿಗೆ ನಿಲುಕದು. ಆದ್ದ ರಿಂದ ಅವ್ಯಯ; ಅದಕ್ಕಿಂತ ಚಿರಸ್ಥಿರವಾದ ಸತ್ಯ ತತ್ತ್ವವಿನ್ನೊಂದಿಲ್ಲ. ಆದ್ದರಿಂದ ಅನುತ್ತಮ!

ಪ್ರಮಾಣ ವಚನಗಳು:

"ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂ ನಿತ್ಯಮಗಂಧವಚ್ಚ ಯತ್ ।
ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತನ್ಮೃತ್ಯುಮುಖಾತ್ಪ್ರಮುಚ್ಯತೇ ॥ಕಠ॥"

ಆತ್ಮನು (ಅವ್ಯಕ್ತ ದೇವನು) ಅಶಬ್ದ ಅಸ್ಪರ್ಶ ಅರೂಪ ಅವ್ಯಯ ಅರಸ ನಿತ್ಯ ಅಗಂಧ; ಅದೇ ರೀತಿ, ಅನಾದಿ ಅನಂತ ಪರಾತ್ಪರ ಅಚಲ. ಅವನನ್ನು ತಿಳಿದು ಜ್ಞಾನಿ ಮೃತ್ಯು ಮುಖದಿಂದ ಪಾರಾಗುತ್ತಾನೆ.

"ಒಡಲುಗೊಂಡು ಒಡಲವಿಡಿಯದೆ, ಒಡಲಿಲ್ಲದ ನಿಜವ ಬೆರೆಸಲಾರೊ. ನರರು ಸುರರು ಕಿನ್ನರರು ಖೇಚರರು ಪರಮ ಪದವಿಯನರಿಯದ ಕಾರಣ ಭವದೊಳಗೆ ಸಿಲುಕಿದರು. ಕೂಡಲ ಚನ್ನ ಸಂಗನ ನಿಜ ರೂಪವನೆ ಬೆರೆಯಿರೊ ಮುಮುಕ್ಷುಗಳಿರಾ"

ದೇಹವು ವ್ಯಕ್ತ. ಅದರಲ್ಲಿಯೇ ಆತ್ಮಭಾವ ತಾಳಬೇಡಿ. ಅದೇ ವ್ಯಕ್ತ ಕಾಯದಲ್ಲಿ ಅವ್ಯಕ್ತ ಆತ್ಮನಿದ್ದಾನೆ. ಅವನ ನಿಜ ಸ್ವರೂಪದಲ್ಲಿ ಬೆರೆಯಬೇಕು. ನರರು ಸುರರು ಕಿನ್ನರ ಖೇಚರರು ಅವ್ಯಕ್ತವನ್ನರಿಯದೆ ವ್ಯಕ್ತವನೇ ನಂಬಿ ಭವದೊಳ ಗಾದರು.

(೨)ವ್ಯಕ್ತಿಮಾಪನ್ನಂ ಮನ್ಯಂತೇ:— ತತ್ತ್ವಗಳ ಪರಿಜ್ಞಾನವಿಲ್ಲದ ಬುದ್ಧಿ ಹೀನರು (ಅಬುದ್ಧಯಃ) ಅವ್ಯಕ್ತನೂ ನಿರ್ಲಿಪ್ತನೂ ಆದ ಪರಮಾತ್ಮನನ್ನು ವ್ಯಕ್ತರೂಪನೆಂದು ಗ್ರಹಿಸುತ್ತಾರೆ, ಸಾಕಾರನೆಂದು ಭಾವಿಸುತ್ತಾರೆ. ಪರಿಪೂರ್ಣ ನಾದ ಪ್ರಭುವಿಗೆ ಅಪೂರ್ಣರೂಪ ಕೊಟ್ಟು ಆರಾಧಿಸುತ್ತಾರೆ. ಸರ್ವಕಾಲ, ಸರ್ವ ದೇಶ, ಸರ್ವವಸ್ತುಗಳಲ್ಲಿ ತುಂಬಿಕೊಂಡ ಆ ಸರ್ವೋತ್ತಮ ಭಗವಂತನಿಗೆ ವಿಶಿಷ್ಟ ಕಾಲ-ದೇಶ-ವಸ್ತು-ಮಿತಿ ಕಲ್ಪಿಸುತ್ತಾರೆ.

ಬುದ್ಧಿವಂತರು ಹಾಗಲ್ಲ. ವ್ಯಕ್ತವಾದುದೆಲ್ಲ ಪ್ರಾಕೃತಿಕ; ಅದು ಪರಿಮಿತ ಮತ್ತು ಪರಿಣಾಮಶೀಲ; ಆ ಪ್ರಾಕೃತಿಕ ವಿಶ್ವದ ಬಾಹ್ಯಾಂತರದಲ್ಲೆಲ್ಲ ಅತ್ಯಂತ ಸೂಕ್ಷ್ಮವಾಗಿ ನೆಲೆಸಿದ ಅವ್ಯಕ್ತ ಚೈತನ್ಯವೇ ದೇವ. ಅವನು ಸರ್ವಾಂತರ್ಯಾಮಿ ಯಾದರೂ ನಿರಾಕಾರ, ನಿರ್ಲಿಪ್ತ ಮತ್ತು ನಿರ್ವಿಕಾರ. ಹೀಗೆ ಬುದ್ಧಿವಂತರ ಭಾವನೆ. ಬುದ್ಧಿವಂತರು ಸಾಮರಸ್ಯ ಯೋಗಿಗಳು, ನಿರ್ವಿಕಲ್ಪ ಸಮಾಧಿ ಪುರುಷರು.

"ದೃಷ್ಟಿಂ ಜ್ಞಾನಮಯೀಂ ಕೃತ್ವಾ ಪಶ್ಯೇದ್ಬ್ರಹ್ಮಮಯೀಂ ಜಗತ್ ।
ದೇಹ ಬುದ್ಧ್ಯಾತು ದಾಸೋಽಹಂ ಜೀವಬುದ್ಧ್ಯಾ ತ್ವದಂಶಕಃ ।
ಆತ್ಮಬುದ್ಧ್ಯಾ ತ್ವಮೇವಾಹಮಿತಿ ಮೇ ನಿಶ್ಚಿತಾ ಮತಿಃ ॥"

ದೃಷ್ಟಿಯನ್ನು ಜ್ಞಾನಮಯ ಮಾಡಿಕೊಂಡು ಜಗತ್ತು ಬ್ರಹ್ಮಮಯವೆಂದು ನೋಡಬೇಕು. ದೇಹಭಾವ ಬಂದಾಗ ದಾಸ ನಾನೆಂದು, ಜೀವಭಾವ ಬಂದಾಗ ದೇವಾಂಶನೆಂದು, ಆತ್ಮ ಭಾವ ಉಂಟಾದಾಗ ದೇವನೇ ನಾನೆಂದು ಕಾಣಿಕೊಳ್ಳ ಬೇಕು. ಇದು ನನ್ನ ನಿಶ್ಚಿತ ಮತಿಯು.

ಭಗವಂತ:-"ಪಾರ್ಥ, ನಾನು ಅಖಂಡ; ನನಗೆ ಕಾಲದ ಸ್ಪರ್ಶವಿಲ್ಲ. ಗುಣ

ಗಳ ಲೇಪವಿಲ್ಲ. ನಾನು ಸಾಮಾನ್ಯ ಬುದ್ಧಿ ಭಾವಗಳಿಗೆ ಕಾಣದ ಅವ್ಯಕ್ತ ಸ್ವರೂಪಿ. ಬುದ್ಧಿಹೀನ ಜನ ನನ್ನ ಪರಮೋನ್ನತ ಅಸ್ತಿತ್ವವನ್ನು ತಿಳಿಯಲಾರದೆ ಸಾವಯುವ ದೇವ ದೇವತೆಗಳೇ ನಾನೆಂದು ಭ್ರಮಿಸುತ್ತಾರೆ. ಅವರಿಗೆ ನನ್ನ ದರ್ಶನ ಹೇಗಾದೀತು?"

ಸಂಬಂಧ:- ಅಲ್ಪ ಮತಿಗಳು ದೇವನನ್ನು ಅರಿಯದಿರಲು ಇನ್ನೊಂದು ಕಾರಣವಿದೆ.

ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।
ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್॥

ಅರ್ಥ:- ಸರ್ವಸ್ಯ=ಸರ್ವಲೋಕಕ್ಕೆ ಅಹಂ=ನಾನು ನ ಪ್ರಕಾಶಃ=(ಸ್ವಸ್ವರೂಪತಃ) ಪ್ರತ್ಯಕ್ಷನಲ್ಲ. (ಏಕೆಂದರೆ) ಯೋಗಮಾಯಾಸಮಾವೃತಃ=ಯೋಗಮಾಯೆಯಿಂದ ಆವೃತವಾದ ಅಯಂ=ಈ ಮೂಢಃ ಲೋಕಃ=ಮೂಢವಾದ ಲೋಕವು, ಅಜಂ ಅವ್ಯಯಂ=ಜನ್ಮ ವ್ಯಯಗಳಿಲ್ಲದ ಮಾಂ=ನನ್ನನ್ನು ನ ಅಭಿಜಾನಾತಿ=ತಿಳಿಯದು. (ಯೋಗಮಾಯಯಾಸಮಾವೃತಃ ಅಯಂ ಲೋಕಃ ಅಜಂ ಅವ್ಯಯಂ ಮಾಂ ನ ಅಭಿಜಾನಾತಿ. (ತೇನ ಕಾರಣೇನೈವ) ಸರ್ವಸ್ಯ ಅಹಂ ನ ಪ್ರಕಾಶಃ).

ವಿವರಣೆ:- ಭಗವಂತ:- "ನಾನು ಅಜ ಮತ್ತು ಅವ್ಯಯ. ಎಲ್ಲ ದೇಹಗಳಲ್ಲಿ ಅಂತರ್ಯಾಮಿಯಾಗಿ ವಾಸಿಸಿದ್ದೇನೆ. ಪ್ರಕೃತಿ ವಿಲಾಸದ ಸೌಂದರ್ಯಕ್ಕೆ ಮರುಳಾದ ಜನ ನನ್ನನ್ನು ಅದೆಂತು ತಿಳಿದೀತು? ಮನೋಹಾರಿಯಾದ ಯೋಗ ಮಾಯೆಯಿಂದ ಪೂರ್ಣ ಆಚ್ಛಾದಿತವಾದ ಲೋಕವು ನನ್ನ ಸ್ವರೂಪವನ್ನು ಅದು ಹೇಗೆ ನೋಡೀತು? ನನ್ನನ್ನು ವಿನಿರ್ಮಲ ಮತ್ತು ಅನಾಚ್ಛಾದಿತ ಮತಿಯಿಂದ ಮಾತ್ರ ಗ್ರಹಿಸಲು ಸಾಧ್ಯ."

(೧) ಯೋಗಮಾಯೆ:- ತ್ರಿಗುಣಗಳ ವಿಲಾಸವು ಯೋಗ ಮಾಯೆ. ಅದೊಂದು ಅಘಟನ ಘಟನಾ ಪಟೀಯಸೀ ಶಕ್ತಿ. ಜಗತ್ತನ್ನೆಲ್ಲ ಆವರಿಸಿದೆ.

"ಬಿಟ್ಟೆನೆಂದರೆ ಬಿಡದೀ ಮಾಯೆ, ಬಿಡದಿದ್ದರೆ ಬೆಂಬತ್ತಿತು ಮಾಯೆ. ಯೋಗಿಗೆ ಯೋಗಿನಿಯಾಯಿತ್ತು ಮಾಯೆ. ಸವಣಗೆ ಸವಣೆನಿಯಾಯಿತ್ತು ಮಾಯೆ. ಯತಿಗೆ ಪರಾಕಿನಿಯಾಯಿತ್ತು ಮಾಯೆ. ನಿನ್ನ ಮಾಯೆಗೆ ನಾನಂಜುವವಳಲ್ಲ. ಚನ್ನ ಮಲ್ಲಿಕಾರ್ಜುನ ದೇವ ನಿಮ್ಮಾಣೆ."

"ದೇವರೆಲ್ಲರ ಹೊಡೆತಂದು ದೇವಿಯರೊಳಗೆ ಕೂಡಿಸಿತ್ತು ಮಾಯೆ! ಹರ ಹರಾ, ಮಾಯೆಯಿದ್ದೆಡೆಯ ನೋಡಾ. ಎರಡೆಂಬತ್ತು ಕೋಟಿ ಪ್ರಮಥ ಗಣಂಗಳು, ಅಂಗಾಲ ಕಣ್ಣವರು, ಮೈಯೆಲ್ಲ ಕಣ್ಣವರು, ನಂದಿವಾಹನ ರುದ್ರರು ಇವರೆಲ್ಲರು ಮಾಯೆಯ ಕಾಲುಗಾಹಿನ ಸರಮಾಲೆ ಕಾಣಾ ಗೋಹೇಶ್ವರಾ!"

ಸಾತ್ವಿಕ ರೂಪದಿಂದ ದೇವತೆಗಳನ್ನು, ರಾಜಸಿಕ ರೂಪದಿಂದ ನರರನ್ನು, ತಾಮಸಿಕ ರೂಪದಿಂದ ರಾಕ್ಷಸರನ್ನು ಮರುಳು ಮಾಡಿದ ಮಾಯೆಯ ಸಾಮರ್ಥ್ಯ ಅಗಾಧ! ವಸುದೇವನು ಬಾಲ ಕೃಷ್ಣನನ್ನು ಕಾರಾಗ್ರುಹ ಕಾಯುತ್ತಿದ್ದ ನೂರಾರು ಜನ ಸೇವಕರ ಎದುರಿನಲ್ಲಿಯೇ ಹೊತ್ತು ಒಯ್ದು. ಯೋಗ ಮಾಯಾವೃತ್ತ

ರಾದುದರಿಂದ ಅವರು ಅದನ್ನು ಕಾಣಲೇ ಇಲ್ಲ. ಹಾಗೆ ನಮಗೂ ಮಾಯೆ ಆವರಿಸಿದೆ. ನಮ್ಮ ಕಣ್ಣೆದುರಿನಲ್ಲೇ ನಮ್ಮ ಅಮೌಲ್ಯ ಆಯುಷ್ಯ ಹಾಳಾಗುತ್ತಿದೆ. ನಮ್ಮ ಆತ್ಮ ದೇವನನ್ನು ಕಾಣದೆ ನಾವು ಮೋಹ ನಿದ್ರೆಯಲ್ಲಿ ಮುಳುಗಿದ್ದೇವೆ.

(೨) ಪರಮಾತ್ಮನು ಬಹು ಸೂಕ್ಷ್ಮ. ಮಾಯೆಯಿಂದ ಆಚ್ಛಾದಿತ ಜಗತ್ತು ಅವನನ್ನು ಕಾಣದು. ಕಠವಲ್ಲಿ ಪ್ರಮಾಣ:

"ಏಷಃ ಸರ್ವೇಷು ಭೂತೇಷು ಗೂಢೋ ಆತ್ಮಾ ನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥"

ಸರ್ವ ದೇಹಗಳಲ್ಲಿ ಗೂಢನಾಗಿ ಅಡಗಿದ್ದಾನೆ ಆತ್ಮ. ಅವನು ಎಲ್ಲರಿಗೂ ಕಾಣುವದಿಲ್ಲ, ಯಾರ ಬುದ್ಧಿ ತೀಕ್ಷ್ಣವೋ ಯಾರ ಪ್ರಜ್ಞೆ ಸೂಕ್ಷ್ಮವೋ ಅಂಥ ತತ್ತ್ವದರ್ಶಿಗಳಿಗೆ ಮಾತ್ರ ಆತ್ಮ ದರ್ಶನ.

**ಸಂಬಂಧ:**— ಪರಮಾತ್ಮನು ಸರ್ವಜ್ಞ ಹಾಗು ಅವೇದ್ಯ ಎಂಬ ಸಂಗತಿಯನ್ನು ಮುಂದಿನ ಮಂತ್ರದಲ್ಲಿ ಹೇಳಲಾಗುವದು.

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥೨೬॥**

**ಅರ್ಥ:**— ಸಮತೀತಾನಿ = ಕಳೆದು ಹೋದ, ಚ = ಮತ್ತು ವರ್ತಮಾನಾನಿ = ಈಗ ಇರುವ, ಚ = ಮತ್ತು ಭವಿಷ್ಯಾಣಿ = ಮುಂದೆ ಹುಟ್ಟುವ ಭೂತಾನಿ = ಪ್ರಾಣಿಗಳನ್ನು ಅಹಂ = ನಾನು ವೇದ = ಅರಿಯುತ್ತೇನೆ. ತು = ಆದರೆ, ಮಾಂ = ನನ್ನನ್ನು, ಕಶ್ಚನ = ಯಾವನೂ ನ ವೇದ = ಅರಿಯ.

**ವಿವರಣೆ:**— ಭಗವಂತ:— "ಮಹಾ ಬಾಹುವೆ, ನಾನು ಅಖಂಡ ಸತ್ತು; ನಿರ್ವಿಕೃತ ಚಿತ್ತು ಮತ್ತು ಅಪರಿಮಿತ ಆನಂದ ರೂಪ. ನಾನು ವಿಶ್ವಾಧಾರ, ಸರ್ವಜ್ಞ, ಸರ್ವಕರ್ತ. ನನಗೆ ತಿಳಿಯದುದು ಏನೂ ಇಲ್ಲ. ಸರ್ವ ಜೀವಿಗಳ ಭೂತ, ವರ್ತಮಾನ, ಭಾವೀ ಅವಸ್ಥೆಗಳನ್ನೆಲ್ಲ ಯಥಾವತ್ತಾಗಿ ತಿಳಿಯುತ್ತೇನೆ. ಸರ್ವ ಸಾಕ್ಷಿಯಾಗಿ ವಿಶ್ವವನ್ನು ಈಕ್ಷಿಸುತ್ತೇನೆ. ಆ ಜೀವಿಗಳು ಮಾಯಾವೃತವಾದುದರಿಂದ ನನ್ನನ್ನು ಅರಿಯಲಾರವು."

(೧) ಅವಿದ್ಯಾವೃತನಾದ ಜೀವಾತ್ಮನು ಅಲ್ಪಜ್ಞ, ಅತೃಪ್ತ, ಅಸ್ವತಂತ್ರ, ಕಿಂಚಿತ್ಕರ್ತ ಹಾಗು ಮೋಹಿತ. ಅವನಿಗೆ ದೇಹಾದಿಗಳಲ್ಲಿ ರತಿ. ಅವನ ಬುದ್ಧಿ ಮತ್ತು ಮನಸ್ಸುಗಳು ಅತ್ಯಂತ ಮಂದ ಹಾಗು ಮಲಿನವಾಗಿವೆ. ಅವನ ಚಿತ್ತು ನಿರ್ಬಲವಾಗಿದೆ. ಆದುದರಿಂದ ಹಿಂದಿನ ಸಂಗತಿಗಳನ್ನಾಗಲಿ, ಮುಂದಿನ ಸಂಗತಿಗಳನ್ನಾಗಲಿ ಗ್ರಹಿಸುವ ಸಾಮರ್ಥ್ಯ ಅವನಿಗಿಲ್ಲ. ಕಳೆದುಹೋದ ಜನ್ಮಗಳ ಬದಲಿರುವ ದೇಹಗಳ ಅರಿವು ಕೂಡ ಅವನಿಗೆ ಅಸಾಧ್ಯ.

ಜಗತ್ತಿನ ಸಕಲ ಜೀವರ ನಿಯಂತೃವಾದ ಪರಮಾತ್ಮನು ಜೀವನಂತೆ ಅವಿದ್ಯಾವೃತನಲ್ಲ. ಆದರೆ ವಿದ್ಯಾಮೂರ್ತಿ, ಜ್ಞಾನ ಭಾಸ್ಕರ. ತನ್ನ ಅಧಿಪತ್ಯದಲ್ಲಿ

ಕಾರ್ಯಮಾಡುವ ಶುದ್ಧಮಾಯಾ ಶಕ್ತಿಯ ಮೂಲಕ ಆ ದೇವನು ವಿಶ್ವದ ಭೂತ ವರ್ತಮಾನ ಭವಿಷ್ಯತ್ತುಗಳನ್ನು ಸಹಜವಾಗಿ ತಿಳಿಯುತ್ತಾನೆ. ಜೀವಿಗಳ ಅತೀತ ಅನಾಗತ ಮತ್ತು ವರ್ತಮಾನ ಸಂಗತಿಗಳನ್ನು ಗುರುತಿಸುತ್ತಾನೆ. ಅವನನ್ನು ಗ್ರಹಿಸುವ ಸಾಮರ್ಥ್ಯ ಮಾತ್ರ ಆ ಜೀವರಿಗಿಲ್ಲ.

(೨) ಪರಮಾತ್ಮನು ಸರ್ವಜ್ಞನಲ್ಲವೆ? ಅವನನ್ನು ಸಾಕ್ಷಾತ್ಕರಿಸಿಕೊಂಡ ಮನು-ಮುನಿಗಳು ಕೂಡ ಸರ್ವಜ್ಞರೇ ಸರಿ. ಅವರ ಅವಿದ್ಯಾ ಪರದೆ ಹರಿದಿವೆ. ವಿಮಲಾಂತಃಕರಣದಲ್ಲಿ ಅಮೃತ ವಿದ್ಯೆ ಆವಿರ್ಭವಿಸಿದೆ. ಆದ್ದರಿಂದ ಅವರೂ ಕಾಲ ಪ್ರವಾಹವನ್ನು ಸಾಕ್ಷಿಯಾಗಿ ನೋಡುತ್ತಾರೆ. ಕಾಲ ಗರ್ಭದಲ್ಲಿರುವ ಭೂತ ವರ್ತಮಾನ ಭಾವೀ ಸಂಗತಿಗಳನ್ನು ಅಂಗೈನೆಲ್ಲಿಯಂತೆ ಕಾಣುತ್ತಾರೆ.

(೩) ಪಾಮರ ಜೀವಿಗಳ ಬದುಕು ವರ್ತಮಾನ ಕಾಲಕ್ಕಷ್ಟೇ ಸೀಮಿತವಾಗಿದೆ. ಅವರಿಗೆ ಸಾಕ್ಷಿ ದೇವನ ಭಾನವಿಲ್ಲ; ತ್ರಿಕಾಲ ಜ್ಞಾನಿಗಳಾದ ಸಂತರನ್ನು ಅರಿಯುವ ಬಲವಿಲ್ಲ. ತಮ್ಮ ಬದುಕನ್ನು ರೂಪ ರಸಾದಿ ವಿಷಯ ಭೋಗಕ್ಕಾಗಿ ವ್ಯಯಿಸುತ್ತಾರೆ.

**ಸಂಬಂಧ:-** ಪಾಮರ ಜೀವರು ವ್ಯಾಮೋಹದಿಂದ ಆವೃತರಾಗಿದ್ದಾರೆ.

**ಇಚ್ಛಾದ್ವೇಷ ಸಮುತ್ಥೇನ ದ್ವಂದ್ವ ಮೋಹೇನ ಭಾರತ ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥೨೭॥**

**ಅರ್ಥ:-** ಪರಂತಪ = ಅರ್ಜುನ, ಇಚ್ಛಾದ್ವೇಷಸಮುತ್ಥೇನ = ಇಚ್ಛಾ ದ್ವೇಷಗಳಿಂದ ಹುಟ್ಟಿದ, ದ್ವಂದ್ವ ಮೋಹೇನ = (ಸುಖ ದುಃಖ ರೂಪ) ದ್ವಂದ್ವಗಳ ಮೋಹದಿಂದ ಸರ್ವಭೂತಾನಿ = ಸರ್ವ ಪ್ರಾಣಿಗಳು ಸರ್ಗೇ = ಜನ್ಮ ಕಾಲದಲ್ಲಿ ಸಮ್ಮೋಹಂ = ಭ್ರಾಂತಿಯನ್ನು ಯಾಂತಿ = ಹೊಂದುತ್ತವೆ.

**ವಿವರಣೆ:-** (೧) ಇಚ್ಛಾ, ದ್ವೇಷ, ಮೋಹ: ತನಗೆ ಹಿತವಾದ ವಿಷಯಗಳ ಬಗೆಗಿರುವ ಭಾವನೆಯು ಇಚ್ಛೆ. ತನಗೆ ಅಹಿತವಾದ ವಿಷಯಗಳ ಬಗೆಗಿರುವ ಭಾವನೆಯು ದ್ವೇಷ. ಈ ಎರಡೂ ಭಾವನೆಗಳ ಮಧ್ಯದಿಂದ ತೋರಿಬರುವ ಅವಸ್ಥೆಯೇ ಮೋಹ! ಮೋಹ ಮಾನವನ ಹೃದಯವನ್ನು ಆವರಿಸಿದೆ. ದೇವ ದಾನವ, ಯಕ್ಷ ರಾಕ್ಷಸ, ಗರುಡ ಗಂಧರ್ವ, ಕ್ರಿಮಿ ಕೀಟ, ಪಶು ಪಕ್ಷಿ ಎಲ್ಲರ ಮನೋ ಮಂದಿರದಲ್ಲಿ ದಟ್ಟ ಧೂಮ್ರವಾಗಿ ವ್ಯಾಪಿಸಿದೆ. ಆದುದರಿಂದಲೇ, ಆ ಎಲ್ಲ ಜೀವರು ಅಂತಃಪ್ರಜ್ಞೆಯನ್ನು ಕಳೆದುಕೊಂಡಿದ್ದಾರೆ. ವಿಷಯ ಪ್ರಾಪ್ತಿಗಾಗಿ ಅಶೀ ಕೀಳು ಕಾರ್ಯಕ್ಕೂ ಕೈ ಹಾಕಿದ್ದಾರೆ.

(೨) ವಿಷಯಾಭಿರತಿ ರೂಪ ಮೋಹ ಇಂದು ನಿನ್ನೆನದಲ್ಲ. ನಮ್ಮ (ಜೀವಿಗಳ) ಹುಟ್ಟಿನೊಂದಿಗೆ ಬೆಳೆದು ಬಂದಿದೆ. ನಮ್ಮ ಮನಸ್ಸು ಮಲಿನವಾಗಿರುವವರೆಗೂ ಅದು ಬಾಳುತ್ತದೆ. ಅದರ ಕೈಯಲ್ಲಿ ದಾಸರಾಗಿರುವ ಜನರು ಸತ್ಯವನ್ನೇನು ಕಂಡಾರು?

ಸಂಬಂಧ:— ಮೋಹದಿಂದ ಯಾರು ಬಿಡುಗಡೆ ಹೊಂದುತ್ತಾರೆ?

ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯ ಕರ್ಮಣಾಮ್ ।
ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥೨೮॥

ಭಾವ:— ಯಾವ ಪುಣ್ಯಕರ್ಮಿಗಳಾದ ಜನರ ಪಾಪವು ಇಲ್ಲದಾಯಿತೋ ಅವರು ಸಾಂಸಾರಿಕ ದ್ವಂದದ ಮೋಹದಿಂದ ಮುಕ್ತರಾದವರಾಗಿ ನನ್ನನ್ನು ದೃಢವ್ರತರಾಗಿ ಭಜಿಸುತ್ತಾರೆ.

ವಿವರಣೆ:- (೧) ಪರಮಾತ್ಮನು ಸರ್ವಗನಾದರೂ ಜೀವನಿಗೆ ಕಾಣುತ್ತಿಲ್ಲ. ಏಕೆಂದರೆ ಜೀವನ ಮೂಲ ಸ್ವರೂಪವನ್ನು ಮೂಲಾವಿದ್ಯೆ ಮರೆಸಿದೆ: ಹಾಗು ಜೀವನ ಹೃದಯದಲ್ಲಿ ಕ್ಲೇಶ ದೋಷ ನೆಲೆಸಿದೆ. ಪರಮಾತ್ಮನ ದರ್ಶನವು ಸಾಧ್ಯವಾಗಬೇಕಾದರೆ ಮೂಲಾವಿದ್ಯೆಯಾದರು ನಾಶವಾಗಬೇಕು, ಇಲ್ಲವೆ ಕ್ಲೇಶ ದೋಷಗಳಾದರೂ ನಶಿಸಬೇಕು. ಮೂಲಾವಿದ್ಯೆ ನಾಶವಾದರೆ ಕ್ಲೇಶಗಳು ತಮ್ಮಷ್ಟಕ್ಕೆ ತಾವೆ ಹಾಳಾಗುತ್ತವೆ; ಕ್ಲೇಶ ದೋಷಗಳನ್ನು ನಾಶ ಮಾಡಿದರೆ ಮೂಲಾ ವಿದ್ಯೆಯು ನಿರ್ಬಲವಾಗುತ್ತದೆ. ಆಗ ಅಂತರ್ಜ್ಯೋತಿಯು ಪ್ರಜ್ವಲಿಸುತ್ತದೆ. ಇದು ಅನುಭವದ ಸಿದ್ಧಾಂತ.

(೨)ಕ್ಲೇಶ ದೋಷವೆಂದರೆಯೇ ಚಿತ್ತಗತ ಪಾಪ. ಅದಕ್ಕೆ ಮೂರು ರೂಪ. (ಅ) ಸ್ಥೂಲ ರೂಪ: ಹಿಂಸೆ, ಕಳವು, ಪರಸ್ತ್ರೀಗಮನ ಮುಂ. (ಬ) ಮಧ್ಯಮ ರೂಪ: ಅಸತ್ಯ ಭಾಷಣ, ವಂಚಕ ನುಡಿ, ಅಪ್ರಿಯ ಮಾತು ಮುಂ. (ಕ) ಸೂಕ್ಷ್ಮ ರೂಪ: ಮೋಹ, ದ್ವೇಷ, ಕಾಮ, ಅಸೂಯೆ, ಅಹಂಕಾರ ಮುಂ. ಪಾಪದ ಮೂರನೆಯ ರೂಪು ವಿಧ್ವಂಸಕವಾಗಿದೆ. ಅದು ಮಾನಸಿಕ ಶಾಂತಿಯನ್ನು ಕಬಳಿಸುತ್ತದೆ. ಈ ಮೂರೂ ಬಗೆಯ ಪಾಪವು ಅಳಿಯಬೇಕಾದರೆ ಮೂರು ಬಗೆಯ ಸಾಧನೆ ಮಾಡಬೇಕು. (ಚ) ಪ್ರಥಮ ಸಾಧನೆ: ಗುರು ಭಜನೆ, ಸುಕರ್ಮ ವೃತ್ತಿ, ಹರನ ಪೂಜೆ, ಶರಣ ಸೇವೆ, ಮತ್ತು ಸದು ವರ್ತನಗಳನ್ನು ರೂಢಿಸುವದು. (ಛ) ದ್ವಿತಿಯ ಸಾಧನೆ: ವಿನಯ, ಅನ್ಯ ಹಿತವಚನ, ಮಂತ್ರ ಪಠಣ, ಪವಿತ್ರ ಗ್ರಂಥಾಧ್ಯಯನ ಇತ್ಯಾದಿ. (ಜ) ತೃತೀಯ ಸಾಧನೆ: ಶಮ ದಮ ದಯಾ ತಿತೀಕ್ಷಾ ಶ್ರದ್ಧಾ ಸಮಾಧಾನ ವಿರಕ್ತಿ ವಿವೇಕ ಇತ್ಯಾದಿಗಳನ್ನು ರೂಢಿಸುವದು. ಮೊದಲನೆಯ ಸಾಧನದಿಂದ ಸ್ಥೂಲ ಪಾಪವು, ಎರಡನೆಯ ಸಾಧನದಿಂದ ಮಧ್ಯಮ ಪಾಪವು, ಮೂರನೆಯ ಸಾಧನದಿಂದ ಸೂಕ್ಷ್ಮ ಪಾಪವು ಅಳಿಯುತ್ತವೆ.

ಒಟ್ಟಿನಲ್ಲಿ, ಪುಣ್ಯ ಕರ್ಮಗಳಿಂದ ಪುಣ್ಯಾತ್ಮರ, ಸಂಗದಿಂದ ಮತ್ತು ಪುಣ್ಯ ಚಿಂತನದಿಂದ ಪಾಪವು ಸಮೂಲಾಗ್ರವಾಗಿ ದಗ್ಧವಾಗುತ್ತದೆ.

(೩) ತೇ ದ್ವಂದ್ವಮೋಹನಿರ್ಮುಕ್ತಾಃ... :— ಪಾಪವೆಲ್ಲ ಕಳೆದು ಹೋಗಿ ನಿರ್ಮಲ ಹೃದಯಿಗಳಾದ ಪಾವನಾತ್ಮರು ಮಾನ ಅಪಮಾನ ಜಯ ಅಪಜಯ ಲಾಭ ಹಾನಿ ಮುಂತಾದ ದ್ವಂದ್ವಗಳಿಂದ ಉಂಟಾಗುವ ಸುಖ ದುಃಖ ಈ

ವಿವಿಧ ದ್ವಂದ್ವಗಳ ಮೋಹದಿಂದ ಮುಕ್ತರಾಗುತ್ತಾರೆ. ಅವರ ಸುತ್ತ ವಿಷಯ ಗಳು ರಾಸಿ ರಾಸಿಯಾಗಿ ಬಿದ್ದಿದ್ದರೂ ಅವುಗಳ ವ್ಯಾಮೋಹ ಅವರಿಗಿಲ್ಲ. ಕಾಮ ಕ್ರೋಧ ಲೋಭ ಮೋಹಾದಿ ಆಸುರೀ ಗುಣಗಳು ಅವರ ಹೃದಯದಿಂದ ಕಾಲ್ಕಿತ್ತಿ ಗೆದಿವೆ. ಅವರು ನಿರ್ಮೋಹಿ ನಿರಹಂಕಾರಿಗಳು! ಅವರು ಸದಾ ದೇವನನ್ನೇ ತದೇಕಚಿತ್ತರಾಗಿ ಭಜಿಸುತ್ತಾರೆ.

ಭಗವಂತ:– "ಅರ್ಜುನ, ದೇಹ ಮಾತು ಮನಸ್ಸಿನಿಂದ ಸ್ವ ಪರ ಹಿತ ಸಾಧಿಸುವ ಕರ್ಮಗಳನ್ನು ಆಚರಿಸಿದರೆ ಮನೋಗತ ಆಶೆ ಆಮಿಷಗಳು ಅಳಿಯು ತ್ತವೆ; ಅಂತರ್ಗತ ಪಾಪ ರೂಪ ಕತ್ತಲೆ ಮಾಯವಾಗುತ್ತದೆ. ಪಾವಿತ್ರ್ಯತೆಯ ಬೆಳಕು ಅಲ್ಲಿ ತುಂಬಿಕೊಳ್ಳುತ್ತದೆ. ವಿಷಯಗಳ ಆಕರ್ಷಣೆ ನಿರ್ಬಲವಾಗುತ್ತದೆ. ಆಗ ಸಾಧಕನು ತನ್ಮಯತೆಯಿಂದ ನನ್ನನ್ನೇ ಧೇನಿಸುತ್ತಾನೆ."

ಸಂಬಂಧ:- ದೇವನನ್ನು ಆಶ್ರಯಿಸಿದವರೇ ಅವನನ್ನು ಹೊಂದುತ್ತಾರೆ.

ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।
ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥೨೯॥
ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥೩೦॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾ ರ್ಜುನ ಸಂವಾದೇ ಜ್ಞಾನ ವಿಜ್ಞಾನ ಯೋಗೋ ನಾಮ ಸಪ್ತಮೋಽಧ್ಯಾಯಃ.

ಭಾವ:–ಮುಪ್ಪು ಸಾವುಗಳಿಂದ ಬಿಡುಗಡೆಯನ್ನು ಹೊಂದುವುದಕ್ಕಾಗಿ ಯಾರು ನನ್ನನ್ನು ಆಶ್ರಯಿಸಿ ಪ್ರಯತ್ನಿಸುತ್ತಾರೆಯೋ ಅವರು ಆ ಬ್ರಹ್ಮವನ್ನು, ಸಂಪೂರ್ಣ ಅಧ್ಯಾತ್ಮ ವನ್ನು ಮತ್ತು ಎಲ್ಲ ಕರ್ಮವನ್ನು ತಿಳಿಯುತ್ತಾರೆ. ॥೨೯॥ ಅಧಿಭೂತ, ಅಧಿದೈವ ಮತ್ತು ಅಧಿ ಯಜ್ಞ–ಇವುಗಳಿಂದ ಕೂಡಿರುವ ನನ್ನನ್ನು ಯಾರು ತಿಳಿಯುತ್ತಾರೆಯೋ ಅಂತಹ ಸಮಾಹಿತ ಚಿತ್ತರು ಮರಣ ಕಾಲದಲ್ಲಿಯೂ ನನ್ನನ್ನು ತಿಳಿಯುತ್ತಾರೆ. ॥೩೦॥

ವಿವರಣೆ:– ಭಗವಂತ:– "ಭಾರತ, ಹುಟ್ಟುತ್ತೇನೆ ಸಾಯುತ್ತೇನೆ ಎಂಬೆ ರಡು ಅಯಥಾರ್ಥ ಭಾವನೆಗಳೇ ಸಂಸಾರ; ಅದರಿಂದ ಜೀವನು ಬದ್ಧನಾಗಿ ದ್ದಾನೆ. ಸಂಕಟಗಳಿಗೆ ತುತ್ತಾಗಿದ್ದಾನೆ. ಅವನು ಮುಕ್ತನಾಗಬೇಕಾದರೆ ನನ್ನನ್ನು ಆಶ್ರಯಿಸಬೇಕು. ಕ್ರಮ ಬದ್ಧವಾದ ಸಾಧನೆ ಮಾಡಬೇಕು. ಆಗ ಬ್ರಹ್ಮ, ಅಧ್ಯಾತ್ಮ, ಕರ್ಮ, ಅಧಿಭೂತ, ಅಧಿದೈವ ಹಾಗು ಅಧಿಯಜ್ಞಗಳ ಸಂಪೂರ್ಣ ಜ್ಞಾನವಾಗುತ್ತದೆ. ಅಂಥ ಪವಿತ್ರ ಜ್ಞಾನ ಗಳಿಸಿದ ಅವನು ಮರಣ ಸಮಯ ದಲ್ಲಿಯೂ ನನ್ನನ್ನೇ ದೃಷ್ಟಿಸಿ ನನ್ನಲ್ಲಿಯೇ ಸಮರಸನಾಗುತ್ತಾನೆ."

ಭಗವಂತನು ಈ ಮಾತುಗಳನ್ನೇ ಬಹು ಕೂಲಂಕಷವಾಗಿ ಮುಂದಿನ ಅಧ್ಯಾಯದ ತುಂಬ ವಿಸ್ತರಿಸುತ್ತಾನೆ.

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಏಳನೆಯ ಬಿಂದುವು.

# ಎಂಟನೆಯ ಅಧ್ಯಾಯ

## ಅಕ್ಷರ ಬ್ರಹ್ಮಯೋಗ

### ಅರ್ಜುನೋವಾಚ

ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।
ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥೧॥
ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ ।
ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥೨॥

ಭಾವ:– ಪುರುಷೋತ್ತಮನೆ, ಬ್ರಹ್ಮ ಯಾವುದು? ಅಧ್ಯಾತ್ಮ ಯಾವುದು? ಕರ್ಮ ಯಾವುದು? ಅಧಿಭೂತ ಯಾವುದು? ಅಧಿದೈವ ಯಾವುದು? ಅಧಿಯಜ್ಞ ಯಾವುದು? ಮತ್ತು ಮರಣ ಕಾಲದಲ್ಲಿ ನಿನ್ನನ್ನು ಅರಿಯುವದು ಹೇಗೆ? (ನಿಯತಾತ್ಮಭಿಃ= ನಿಯತ ಚಿತ್ತೈಃ, ಸಂಯತ ಚಿತ್ತರಿಂದ).

ವಿವರಣೆ:– ಏಳನೆಯ ಅಧ್ಯಾಯದ ಕೊನೆಯ ಎರಡು ಮಂತ್ರಗಳಲ್ಲಿ ಭಗವಂತನು ಸೂಚ್ಯವಾಗಿ ಹೇಳಿದ ಏಳು ಅಮೌಲ್ಯ ವಿಷಯಗಳನ್ನು ಬಹು ಕೂಲಂಕಷವಾಗಿ ತಿಳಿಯ ಬಯಸಿದ್ದಾನೆ ಅರ್ಜುನ.

"ದೇವ, ನೀನು ಪರಮ ಪುರುಷ. ಸಕಲ ಜೀವ-ಜಂತುಗಳ ಅಂತಶ್ಚೇತನ. ಪ್ರಕೃತಿಯಾಚೆಗಿನ ಪುಣ್ಯವಸ್ತು. ಎಂದೆಂದಿಗೂ ಗುಣಗಳ ಅಳವಿನಲ್ಲಿ ಸಿಗದ ನಿಷ್ಕಲಂಕ ಬ್ರಹ್ಮ. ನಿನ್ನ ಪಾವನ ಮುಖಾರವಿಂದದಿಂದ ಬ್ರಹ್ಮ, ಅಧ್ಯಾತ್ಮ, ಕರ್ಮ, ಅಧಿಭೂತ, ಅಧಿದೈವ, ಅಧಿಯಜ್ಞ ಮತ್ತು ಮರಣ ವಿಧಾನ– ಇವುಗಳ ಬಗೆಗೆ ಸವಿಸ್ತಾರವಾಗಿ ಕೇಳಲು ಇಚ್ಛಿಸಿದ್ದೇನೆ. ಉಪದೇಶಾಮೃತವನ್ನು ಅನುಗ್ರಹಿಸಬೇಕಾಗಿ ಕೋರುವೆ.

ಅರ್ಜುನನ ಪ್ರಶ್ನೆಗಳನ್ನು ಶಾಸ್ತ್ರೀಯ ಪದ್ಧತಿಯಲ್ಲಿ ಹೀಗೆ ಇಡಬಹುದು: (೧) ತತ್ ಪದ ಲಕ್ಷ್ಯವಾದ ಬ್ರಹ್ಮವೆಂದರೇನು? (೨) ತತ್ ಪದ ವಾಚ್ಯವಾದ ಅಧಿದೈವದ ಗುಣ-ಲಕ್ಷಣಗಳಾವವು? (೩) ತ್ವಂ ಪದ ಲಕ್ಷ್ಯವಾದ ಅಧಿಯಜ್ಞದ ಸ್ವರೂಪವೇನು? (೪) ತ್ವಂ ಪದ ವಾಚ್ಯವಾದ ಅಧ್ಯಾತ್ಮದ ಅರ್ಥವೇನು? (೫) ಜನ್ಮ-ಮರಣ ಮತ್ತು ಜೀವನಗಳಿಗೆ ಕಾರಣವಾದ ಕರ್ಮದ ಆದ್ಯಂತವೇನು? (೬) ಜಡ ವಿಶ್ವವಾದ ಅಧಿಭೂತದ ರೂಪ-ರಚನೆ ಎಂಥದು? (೭) ಯಾವ ರೀತಿ ದೇಹ ತ್ಯಜಿಸಿದರೆ ಪರಮಾತ್ಮನನ್ನು ಅರಿಯಬಲ್ಲೆವು? ಎಂಟನೆಯ ಅಧ್ಯಾಯದಲ್ಲಿ ಪ್ರತಿಪಾದಿತವಾಗಲಿರುವ ಈ ಸಪ್ತಾಂಗ ಪ್ರಶ್ನಾವಳಿಯು ವಿಸ್ತಾರವಾದ ತತ್ತ್ವಜ್ಞಾನವನ್ನೇ ತನ್ನ ಕಕ್ಷೆಗೆ ಎಳೆದುಕೊಳ್ಳುತ್ತದೆ. ಆದುದರಿಂದಲೇ, ಈ ಅಧ್ಯಾಯವು ಚಿಂತನೀಯ! ಈಶಾವಾಸ್ಯ ಉಪನಿಷತ್ತನ್ನು ಹೊಂದಿಸಿ ಹೋಲಿಸಿ ಕೊಂಡು ಈ ಅಧ್ಯಾಯದ ಅಭ್ಯಾಸ ಮಾಡಿದರೆ ಪ್ರಯೋಜನಕಾರಿ.

ಸಂಬಂಧ:– ಭಗವಂತನು ಉತ್ತರವೀಯುತ್ತಾನೆ,

### ಶ್ರೀ ಭಗವಾನುವಾಚ

ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮ ಉಚ್ಯತೇ ।

ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥೩॥
ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।
ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥೪॥

ಭಾವ:– ಅವಿನಾಶಿ ಹಾಗು ಸರ್ವಶ್ರೇಷ್ಠವಾದುದು ಬ್ರಹ್ಮ. ಜೀವರೂಪ ಸ್ವಭಾವವು ಅಧ್ಯಾತ್ಮ. ಪ್ರಾಣಿಗಳ ಜನ್ಮಕ್ಕೆ ಕಾರಣವಾದುದು ಕರ್ಮ. ನಶ್ವರ ವಸ್ತುವು ಅಧಿಭೂತ. ವಿಶ್ವ ನಿಯಾಮಕ ಪುರುಷನು ಅಧಿದೈವ. ದೇಹಸ್ಥ ಸಾಕ್ಷಿ ದೇವನು ಅಧಿಯಜ್ಞ.

ವಿವರಣೆ:-(೧)ಬ್ರಹ್ಮ:- "ನಾಮ ಅನಾಮವಿಲ್ಲ. ನಾನು ತಾನು ಮುನ್ನವೇ ಇಲ್ಲ. ಉಭಯ ನಾಮವಾವ ಸೀಮೆಯೊಳಗೂ ಇಲ್ಲ. ಒಡಲು ಇಲ್ಲ. ನೆಳಲು ಇಲ್ಲ. ಏನೆಂಬುದೇನು ತಾನು ಮುನ್ನಿಲ್ಲ. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ನಾನು ಇಲ್ಲ, ನೀನು ಇಲ್ಲ." "ಆದಿಯಾಧಾರವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು, ಸುರಾಳ ನಿರಾಳವಿಲ್ಲದಂದು. ಶೂನ್ಯ ನಿಃಶೂನ್ಯವಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು. ಗೋಹೇಶ್ವರಾ, ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ."

ಅನುಭಾವಿ ಶರಣರ ಈ ವಚನಗಳು ವಿವರಿಸುವಂತೆ ನಾಮ ರೂಪು, ಒಡಲು ನೆಳಲು, ತಾನು ಅನ್ಯ, ಹಮ್ಮು ಬಿಮ್ಮು, ಚರ ಅಚರ, ಜೀವ ಜಲ, ದೇವ ದಾನವ, ಅಂಧಕಾರ ಪ್ರಕಾಶ, ಕಾಲ ಕರ್ಮ ಏನೊಂದೂ ತೋರುವ ಮುನ್ನ ನೆಲೆಸಿರ್ದ ಅಖಂಡ ಅನಂತ ಚೈತನ್ಯ ವಸ್ತುವೇ ಬ್ರಹ್ಮ. ಅದು ಅವಿನಾಶಿ, ಪವಿತ್ರ, ಸರ್ವೋತ್ಕೃಷ್ಟ. ಅದುವೇ ತತ್ ಪದದ ಲಕ್ಷ್ಯ!

(೨) ಅಧಿದೈವ: ಬ್ರಹ್ಮ ವಸ್ತುವಿನಲ್ಲಿ ಅವ್ಯಕ್ತವಾದ ಅಲೌಕಿಕ ಶಕ್ತಿಯೊಂದಿದೆ ತಾನೆ? ಆ ಶಕ್ತಿಯು ವಿಕಾಸವಾದರೆ ವಿಶ್ವದ ಉದಯ. ವಿಕಸಿತವಾದ ಆ ಶಕ್ತಿಗತ ಚೈತನ್ಯವೇ ಅಧಿದೈವ. ಅದು ಸರ್ವೇಶ್ವರ, ಸರ್ವ ನಿಯಂತೃ ಹಾಗು ನಿರ್ಲಿಪ್ತ. ವಿಶ್ವದ ಸೃಷ್ಟಿ, ಪಾಲನೆ, ಅವಸಾನಗಳು ಅವನ ಅಧಿಪತ್ಯದಲ್ಲಿ ಸಾಗುತ್ತಿವೆ. ಅವನಿಗೆ ಸಗುಣ ಪರಮಾತ್ಮನೆಂದೂ ನಾಮ. ಅವನೇ ತತ್ ಪದದ ವಾಚ್ಯ!

(೩)ಅಧ್ಯಾತ್ಮ:"ನಿರ್ಮಲಂ ನಿಷ್ಕಲಂ ಶಾಂತಂ ಸರ್ವಾತೀತಂ ನಿರಂಜನಮ್ ।
ತದೇವ ಜೀವರೂಪೇಣ ಪುಣ್ಯಪಾಪಫಲೈರಾವೃತಮ್ ॥"

ಪರಮಾತ್ಮನು ಆಣವಾದಿ ತ್ರಿಮಲ ರಹಿತ (ನಿರ್ಮಲ), ಪರಿಪೂರ್ಣ (ನಿಷ್ಕಲ), ಉದ್ವೇಗವಿಲ್ಲದವ (ಶಾಂತ), ಸರ್ವ ತತ್ತ್ವಗಳಲ್ಲಿದ್ದೂ ಅವುಗಳ ಸಂಪರ್ಕವಿಲ್ಲದವ (ಸರ್ವಾತೀತ), ಮತ್ತು ಗುಣರಹಿತ (ನಿರಂಜನ), (ಅವನಿಗೆ ನಿಷ್ಕಲ ಲಿಂಗವೆಂದು ಪಾರಿಭಾಷಿಕ ಅಭಿಧಾನ). ಅವನೇ (ವಿಶ್ವ ಮತ್ತು ದೇಹಗಳನ್ನು ವಿರಚಿಸಿ, ಆ ದೇಹಗಳಲ್ಲಿ) ಜೀವರೂಪದಿಂದ (ಪ್ರವೇಶಿಸಿದ), ಮತ್ತು ಪುಣ್ಯ ಪಾಪ ಫಲಗಳಿಂದ ಆವೃತನಾದನು (ರುದ್ರಯಾಮಳ). ಅಂಥ ಜೀವನೇ ಸ್ವಭಾವ (ಅಂದರೆ ಮೂಲತಃ ಆತ್ಮರೂಪಿ). ಮೂರು ಮಲಗಳು ಅವನನ್ನು ಆವರಿಸಿವೆ. ಆಣವ ಮಲದ ಸಂಗದಿಂದ ಆಕುಂಚನ ಭಾವ ಹೊಂದಿದ. ಮಾಯಾ ಮಲದ

ಸಂಗದಿಂದ ವಿಷಯಗಳೇ ಸುಖದ ರೂಪವೆಂದು ಮೋಹಿಸಿದ. ಕಾರ್ಮಿಕ ಮಲದ ಸಂಗದಿಂದ ವಿಷಯ ಸಂಗ್ರಹ ಕರ್ಮದಲ್ಲಿ ತೊಡಗಿದ. ಅವಿದ್ಯಾದಿ ಕ್ಲೇಶಗಳು ಜೀವನನ್ನು ಮುತ್ತಿವೆ; ವಿವಿಧ ವಾಸನೆಗಳು ಅವನ ಅಂತರಂಗದಲ್ಲಿ ಶೇಖರಣೆ ಗೊಂಡಿವೆ. ದೇಹಾತ್ಮ ಭಾವಿಯಾದ ಅವನಿಗೆ ಅಧ್ಯಾತ್ಮ ಎಂದಿದ್ದಾನೆ ಭಗವಂತ. ಜೀವನೇ ತ್ವಂ ಪದದ ವಾಚ್ಯಾರ್ಥ!

(೪) ಅಧಿಯಜ್ಞ: ಪ್ರಕೃತಿ ಮೊದಲ್ಗೊಂಡು ದೇಹ ಕಡೆಯಾದ ಸಕಲ ತತ್ತ್ವಗಳು ಯಾವ ಅಧಿಷ್ಠಾನದಲ್ಲಿ ವ್ಯವಹರಿಸುತ್ತಿವೆಯೋ, ಯಾವ ವಸ್ತುವಿನ ಸನ್ನಿಧಾನ–ಪ್ರೇರಣೆ ಪಡೆದು ದೈಹಿಕ, ಐಂದ್ರಿಯಿಕ, ಮಾನಸಿಕ, ಬೌದ್ಧಿಕ ಕ್ರಿಯೆಗಳು ಸಾಗಿವೆಯೋ ಆ ಮಹಾನ್ ಸಾಕ್ಷಿ ವಸ್ತುವೇ ಪ್ರತ್ಯಗಾತ್ಮ; ಅಧಿ ಯಜ್ಞ. ಅದುವೇ ತ್ವಂ ಪದದ ಲಕ್ಷ್ಯಾರ್ಥ.

"ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ॥
ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ ।
ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥"

ಪರಸ್ಪರ ಸಖ್ಯ ಭಾವವುಳ್ಳ, ಸದಾ ಕೂಡಿಕೊಂಡಿರುವ ಎರಡು ಪಕ್ಷಿಗಳು ಒಂದೇ ವೃಕ್ಷವನ್ನು ಆಶ್ರಯಿಸಿವೆ. ಅವೆರಡರಲ್ಲಿ ಒಂದು ಪಕ್ಷಿಯು ಸ್ವಾದಿಷ್ಟವಾದ ಪಿಪ್ಪಲ ಫಲವನ್ನು ತಿನ್ನುತ್ತದೆ. ಮತ್ತೊಂದು ಪಕ್ಷಿಯು ತಿನ್ನದೆ ಕೇವಲ ಪ್ರಕಾ ಶಿಸುತ್ತದೆ. (ಸೂಚ್ಯಾರ್ಥ: ದೇಹವು ವೃಕ್ಷ. ಸುಖ ದುಃಖಗಳು ಫಲಗಳು. ಜೀವಾತ್ಮ (ಅಧ್ಯಾತ್ಮ) ಮತ್ತು ಪ್ರತ್ಯಗಾತ್ಮ (ಅಧಿಯಜ್ಞ) ರು ಎರಡು ಸಖ್ಯ ಭಾವದ ಪಕ್ಷಿಗಳು; ವೃಕ್ಷದಲ್ಲಿ ವಾಸಿಸಿವೆ. ಜೀವಾತ್ಮನು ಕರ್ಮಫಲ ತಿನ್ನುತ್ತಾನೆ. ಪ್ರತ್ಯಗಾತ್ಮನು ಪ್ರಕಾಶಿಸುತ್ತಾನೆ). ಈ ವೃಕ್ಷದಲ್ಲಿ ಜೀವ ಪುರುಷನು ಸುಖ ದುಃಖ ರೂಪ ಫಲಭೋಗದಲ್ಲಿ ತನ್ಮಯನಾಗಿದ್ದಾನೆ; ಅಸಮರ್ಥನಾದುದರಿಂದ ಅವನು (ವಿಷಯಗಳಿಗಾಗಿ) ಶೋಕ ಮಾಡುತ್ತಾನೆ; ಮತ್ತು ವಿಷಯಗಳನ್ನು ಅತೀವ ಮೋಹಿಸುತ್ತಾನೆ. ಯಾವಾಗ ಜೀವ ಪುರುಷನು (ದೇವನ ಕೃಪಾ ಪ್ರಸಾ ದವನ್ನು) ಹೊಂದುತ್ತಾನೆಯೋ ಆಗ ತನಗೆ ಸಾಕ್ಷಿಯಾದ ಈಶನನ್ನು ಹಾಗು ಅವನ ಮಹಿಮೆಯನ್ನು ಗ್ರಹಿಸುತ್ತಾನೆ; ವೀತಶೋಕನಾಗುತ್ತಾನೆ. (ಮುಂಡಕ ೩–೧,೧–೨) ಈ ಎರಡು ಪ್ರಮಾಣ ವಚನಗಳಲ್ಲಿ ಅಧ್ಯಾತ್ಮ ಹಾಗು ಅಧಿಯಜ್ಞ ಗಳ ವರ್ಣನೆಯನ್ನು ಕಾಣುತ್ತೇವೆ.

ಶರಣರು ಕೂಡ ಅಧಿಯಜ್ಞವನ್ನು ಬೇರೆ ರೂಪಕಗಳಿಂದ ಕೊಂಡಾಡಿದ್ದಾರೆ:

"ಒಡಲೊಳಗಿನ ಕಿಚ್ಚು ಒಡಲ ಸುಡದ ಭೇದವನು, ಕುಡಿವ ನೀರಿನಲ್ಲಿ ಆ ಕಿಚ್ಚು ನಂದದ ಭೇದವನು, ಮೃಡನೆ ಪ್ರಾಣ ಪ್ರಕೃತಿಯೊಳಗೆ ನೀನಡಗಿದ ಭೇದವ ಲೋಕದ ಜಡ ಜೀವಿಗ ಳೆತ್ತ ಬಲ್ಲರು ರಾಮನಾಥಾ."

ದೇಹದಲ್ಲಿ ಜಠರಾಗ್ನಿ ಇದೆ. ಆದರೆ ಅದು ದೇಹವನ್ನು ಸುಡದು; ಕುಡಿದ ನೀರು ಆ ಅಗ್ನಿಯನ್ನು ಆರಿಸದು. ಅದೇ ರೀತಿ, ದೇಹದ ಒಳಗೆ ಚೈತನ್ಯಾಗ್ನಿ ಜಾಜ್ವಲಿಸುತ್ತಿದೆ. ಆದರೆ ಅದು ಅನಾತ್ಮ ತತ್ತ್ವಗಳನ್ನು ದಹಿಸದು. ಮಾಯಾಮೋಹವೆಂಬ ಜಲವು ಧಾರೆ ಧಾರೆಯಾಗಿ ಅದರ ಮೇಲೆ ಸುರಿದರೂ ಆ ಆತ್ಮಾಗ್ನಿ ನಂದದು. ಆ ಅಗ್ನಿಯೇ ಪ್ರತ್ಯಗಾತ್ಮ. ಅದರ ಅರಿವು ಮಾತ್ರ ಲೋಕದವರಿಗಿಲ್ಲ.

"ಕಲ್ಲೊಳಗೆ ಹೊನ್ನುಂಟು. ಮರದೊಳಗೆ ಅಗ್ನಿಯುಂಟು, ಹಾಲೊಳಗೆ ತುಪ್ಪವುಂಟು, ಅಂತರಾಮಿಯಲ್ಲಿ ಶಿವನಿಹನು. ಇದೇನು ಕಾರಣ? ಕತ್ತಲೆ, ಕಾಣಬಾರದು! ತೋರಬಲ್ಲ ಗುರು ಸುಳಿಯ. ಕೂಡಲ ಸಂಗಮ ದೇವಾ."

ಕಲ್ಲಿನಲ್ಲಿ ಕನಕ, ಕಟ್ಟಿಗೆಯಲ್ಲಿ ಬೆಂಕಿ, ಹಾಲಿನಲ್ಲಿ ತುಪ್ಪ ಅಡಗಿರುವಂತೆ ದೇಹಾಂತರಂಗದಲ್ಲಿ ಶಿವಚೇತನವಿದೆ. ಆದರೆ ಆ ಚೈತನ್ಯ ಜ್ಯೋತಿಯನ್ನು ಕಾಣುವದು ಅತೀ ಕಷ್ಟ; ಏಕೆಂದರೆ, ಜಗತ್ತನ್ನೆಲ್ಲ ಮಾಯಾ ನಿದ್ರೆ ಆವರಿಸಿದೆ. ಆ ನಿದ್ರೆಯಿಂದ ಎಚ್ಚರಿಸಿ ಒಳಗಿನ ಅಧಿಯಜ್ಞವನ್ನು ತೋರಿಸುವ ಸಮರ್ಥ ಗುರು ದೊರೆಯುತ್ತಿಲ್ಲ! ಪ್ರಾಪಂಚಿಕ ನಿದ್ರೆ ಬಹು ಸವಿಯಾಗಿದೆ. ನಿದ್ರೆಯ ಜಂಪಿನಲ್ಲಿಯೇ ಪ್ರವಚನ ಕೇಳುತ್ತೇವೆ, ಹೇಳುತ್ತೇವೆ, ಓದುತ್ತೇವೆ; ಆದುದರಿಂದ ಅಧಿಯಜ್ಞದ ಬೆಳಕನ್ನು ಕಾಣುವ ಭಾಗ್ಯ ನಮಗೆಲ್ಲಿ ಬಂದೀತು?

(೫) ಕರ್ಮ: 'ಭೂತ-ಭಾವ ಉದ್ಭವಕರಃ ವಿಸರ್ಗಃ ಕರ್ಮ.' ಜೀವಿಗಳ ಉತ್ಪತ್ತಿಗೆ ಯಾವ ವಿಸರ್ಗ (ಅರ್ಪಣ, ತ್ಯಾಗ) ಕ್ರಿಯೆಯು ಕಾರಣವಾಗಿದೆಯೋ ಅದು ಕರ್ಮ. ಇನ್ನಷ್ಟು ವಿಸ್ತಾರವಾಗಿ ಹೇಳುವದಾದರೆ, ಮೂಲ ದೇವನನ್ನು ಮರೆತು ಅನಾತ್ಮಭಾವ ತಾಳುವದೂ ಕರ್ಮ; ಅನಾತ್ಮ ಭಾವವನ್ನು ತ್ಯಜಿಸಿ ಮತ್ತೆ ಆತ್ಮಭಾವ ತಾಳುವದೂ ಕರ್ಮ. ಮೊದಲನೆಯದು ಪ್ರವರ್ತಕ. ಎರಡನೆಯದು ನಿವರ್ತಕ. ಪ್ರವರ್ತಕವು ಬಾಧಕ. ನಿವರ್ತಕವು ತಾರಕ.

ಪ್ರವರ್ತಕ ಕರ್ಮ:– ಇದರ ಅಂಗಗಳು ಎಂಟು; (೧) ಅಹಂ ಭ್ರಮ: ನಿರಂಜನ ದೇವನ ಅನಂತ ವಿಸ್ತಾರದಲ್ಲಿ 'ಅಹಂ' ಎಂಬ ಭಾವನೆಯೊಂದು ಸ್ಪಂದಿಸಿತು. ಚೈತನ್ಯ ಮಹಾಕಾಶದಿಂದ ತಾನು ಬೇರೆ ಎಂಬ ಭ್ರಮೆ ಸುಳಿಯಿತು. ಈ ಭ್ರಮೆಯೊಂದಿಗೆಯೇ ಜೀವನು ಉದಿಸಿದ. ಉದಿಸಿದ ಕ್ಷಣವೇ 'ಅಹಂ' ಎಂಬ ಉದ್ಗಾರ ತೆಗೆದ. ಅದೇ ಅವನ ಪ್ರಪ್ರಥಮ ಪ್ರವರ್ತಕ ಕರ್ಮ. (೨) ಅಜ್ಞ ಭ್ರಮೆ: ಅಹಂ ಭ್ರಮೆಯ ಗರ್ಭದಿಂದ ಹೊರಬಂದ ಗಾಂಢಾಂಧಕಾರವೇ ಅಜ್ಞ ಭ್ರಮೆ. ಇದು ಜೀವನ ಪ್ರಜ್ಞೆಯನ್ನು ಆವರಿಸಿದೆ. ನಿಜ ಸ್ವರೂಪವನ್ನು ಮರೆಸಿದೆ. ಅಜ್ಞ ಭ್ರಮೆಯು ಗರ್ಭದಿಂದ ಮನ ಬುದ್ಧಿ ಚಿತ್ತಗಳೇ ನಾನೆಂಬ (೩) ಕರಣ ಭ್ರಮೆ, ಚಕ್ಷುರಾದಿ ಇಂದ್ರಿಯಗಳು ನಾನೆಂಬ (೪) ಇಂದ್ರಿಯ ಭ್ರಮೆ, ಭೌತ ದೇಹವೇ ನಾನೆಂಬ (೫) ದೇಹ ಭ್ರಮೆ, ಜಾಗ್ರಾವಸ್ಥೆಯ ವಿಶ್ವಜೀವ ನಾನೆಂಬ (೬) ಜಾಗ್ರ ಭ್ರಮೆ, ಸ್ವಪ್ನಾವಸ್ಥೆಯ ತೈಜಸ ಜೀವ ನಾನೆಂಬ (೭) ಸ್ವಪ್ನ ಭ್ರಮೆ, ನಿದ್ರಾ

ವಸ್ಥೆಯ ಪ್ರಾಜ್ಞಜೀವ ನಾನೆಂಬ (೮) ಸುಪ್ತಿ ಭ್ರಮೆ—ಈ ಎಂಟು ಭ್ರಮೆಗಳು ತಲೆದೋರಿದವು; ಈ ಅಷ್ಟಾಂಗಗಳಿಂದ ಕೂಡಿದ ಪ್ರವರ್ತಕ ಕರ್ಮವು ಶಿವಾಂಶನಾದ ಜೀವನನ್ನು ಆತ್ಮಸ್ಥರದಿಂದ ಕೆಳಗಿಳಿಸಿ ಅನಾತ್ಮವಸ್ತುಗಳ ವ್ಯಾಮೋಹದ ಪಂಜರದಲ್ಲಿ ಬಂಧಿಸಿತು.

ನಿವರ್ತಕ ಕರ್ಮ:– ಇದರ ಅಂಗಗಳು ಮೂರು. (ಕ) ಯಾಗ: ಬಾಹ್ಯ ಸಂಪದವನ್ನು ದೇವನಿಗೆ ಅರ್ಪಿಸುವದು (ಖ) ದಾನ: ಸ್ವ ಪರ ಭಾವನೆಯನ್ನು ದೇವನಡಿಯಲ್ಲಿ ತ್ಯಜಿಸುವದು. (ಗ) ಹೋಮ: ನಾನು ದೇಹ, ನಾನು ಇಂದ್ರಿಯ, ನಾನು ಮನಸ್ಸು, ನಾನು ಬದ್ಧ ಜೀವ–ಇಂಥ ಅಯಥಾರ್ಥ ಭಾವನೆಗಳನ್ನು ಚಿದಗ್ನಿಯಲ್ಲಿ ಹವಿಸುವದು; ಹಾಗು ನಾನು ಹವಿಸಿದೆ ಎಂಬ ಭಾವದ ಅಂತ್ಯಾಹುತಿ ಈಯುವದು! ಈ ಮೂರು ಅಂಗಗಳಿಂದ ಕೂಡಿದ ನಿವರ್ತಕ ಕರ್ಮವನ್ನು ಆಚರಿಸಿದರೆ ಜೀವನು ಪ್ರಪಂಚದಿಂದ ಮುಕ್ತನಾಗುತ್ತಾನೆ. ಅಂದರೆ ನಿವರ್ತಕ ಕರ್ಮವು ಜೀವನನ್ನು ಸಂಸಾರ ಪಂಜರದಿಂದ ಬಿಡುಗಡೆ ಮಾಡಿ ಪರಮಾತ್ಮನಲ್ಲಿ ಸಮರಸಗೊಳಿಸುವದು!

ಎರಡೂ ಕರ್ಮಗಳಲ್ಲಿ ವಿಸರ್ಗವಿದೆ. ಪ್ರವರ್ತಕದಲ್ಲಿ ವ್ಯವಸಾಯ ಬುದ್ಧಿಯ ಪರಿತ್ಯಾಗವಿದೆ; ನಿವರ್ತಕದಲ್ಲಿ ಅಹಂ ಮಮರೂಪ ಪ್ರಪಂಚ ಭಾವದ ಪರಿತ್ಯಾಗವಿದೆ. ಪ್ರವರ್ತಕದಿಂದ ಜೀವರಲ್ಲಿ ಸಾಂಸಾರಿಕ ವಿಷಯ ವ್ಯಾಮೋಹದ ಅಭಿವೃದ್ಧಿ. ನಿವರ್ತಕದಿಂದ ಜೀವರಲ್ಲಿ ಆತ್ಮರತಿಯ ಅಭಿವೃದ್ಧಿ. ಪ್ರವರ್ತಕದಿಂದ ದೇಹ ಭಾವದ ಉದಯ. ನಿವರ್ತಕದಿಂದ ದೇವ ಭಾವದ ಉದಯ.

(೬) ಅಧಿಭೂತ: 'ಕ್ಷರೋ ಭಾವಃ' ಕ್ಷಣ ಭಂಗುರತೆಯುಳ್ಳ ವಸ್ತು. ದೇಹ, ಇಂದ್ರಿಯ, ಮನಸ್ಸು ಮತ್ತು ಬಾಹ್ಯ ವಿಶ್ವ ಎಲ್ಲವೂ ಪರಿಣಾಮ ಹೊಂದುತ್ತಿವೆ, ಅವುಗಳ ಮೂಲ ಜನನಿಯಾದ ಪ್ರಕೃತಿಯೂ ವಿಕಾರಶೀಲೆ. ಪ್ರತಿ ನಿಮಿಷ ಭೂಮ್ಯಾದಿ ಪ್ರಕೃತ್ಯಂತ ತತ್ತ್ವಗಳಲ್ಲೆಲ್ಲ ಪರಿವರ್ತನೆ ಕಾಣಬರುತ್ತಿದೆ, ಬದಲಾವಣೆ ಗೋಚರಿಸುತ್ತಿದೆ. ಹೀಗೆ ಪ್ರತಿಕ್ಷಣ ಪರಿವರ್ತನೆಯಾಗುವ ಜಗತ್ತು ಅಧಿಭೂತ. ಇದಂ ಪದ ವೇದ್ಯ, ದೃಶ್ಯ, ಅನಾತ್ಮ, ಜಡ. ಕಾಲ ದೇಶಗಳಿಂದ ಪರಿಮಿತ ಹಾಗು ಅನೇಕ ರೂಪ.

ಸಂಬಂಧ:– ಎರಡೇ ಮಂತ್ರಗಳಲ್ಲಿ ಅರ್ಜುನನ ಆರು ಪ್ರಶ್ನೆಗಳಿಗೆ ಸಂಕ್ಷೇಪತಃ ಉತ್ತರ ನೀಡಿ, ಭಗವಂತನು, ಮುಂದಿನ ಮಂತ್ರಗಳಲ್ಲೆಲ್ಲ ಏಳನೆಯ ಪ್ರಶ್ನೆಗೆ ಉತ್ತರ ನೀಡಲಿದ್ದಾನೆ.

ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।
ಯಃ ಪ್ರಯಾತಿ ಸ ಮದ್ಭಾವಂ ಯಾತಿನಾಸ್ತ್ಯತ್ರ ಸಂಶಯಃ ॥೫॥

ಅರ್ಥ:– ಯಃ=ಯಾವನು, ಅಂತಕಾಲೇ = ಮರಣಕಾಲದಲಿ ಮಾಂ ಏವ= ನನ್ನನ್ನೇ ಸ್ಮರನ್=ಸ್ಮರಿಸುತ್ತ ಕಲೇವರಂ = ದೇಹವನ್ನು ತ್ಯಕ್ತ್ವಾ = ಬಿಟ್ಟು ಪ್ರಯಾತಿ=

ಹೋಗುತ್ತಾನೆಯೋ ಸಃ = ಅವನು ಮದ್ಭಾವಂ = ನನ್ನ ಭಾವವನ್ನು (ಮದ್ರೂಪಂ), ಯಾತಿ = ಹೊಂದುತ್ತಾನೆ. ಅತ್ರ = ಇದರಲ್ಲಿ ಸಂಶಯಃ ನ ಅಸ್ತಿ = ಸಂಶಯವಿಲ್ಲ.

ವಿವರಣೆ:– ಭಗವಂತ:– "ಧನಂಜಯ, ಸ್ಮರಣೆ ಸಾಮಾನ್ಯವಲ್ಲ; ಅದು ನಮಗೆ ದೇವತ್ವ ನೀಡಬಲ್ಲದು ಅಥವಾ ದಾನವತ್ವ ಈಯಬಲ್ಲದು. ಯಾವ ಮನುಷ್ಯ ನನ್ನನ್ನೇ ಸ್ಮರಿಸುತ್ತ ದೇಹ ಬಿಡುತ್ತಾನೆಯೋ ಅವನು ನಿಸ್ಸಂದಿಗ್ಧವಾಗಿ ನನ್ನತ್ತ ಬರುತ್ತಾನೆ. ನನ್ನ ಅಮೃತ ಸ್ವರೂಪದಲ್ಲಿ ಒಂದಾಗುತ್ತಾನೆ."

ದೇಹ ತ್ಯಾಗದ ವಿಧಾನ: ತತ್ ಪದದ ಲಕ್ಷ್ಯಾರ್ಥವಾದ ಬ್ರಹ್ಮನೊಂದಿಗೆ ಸಾಮರಸ್ಯ ಹೊಂದಿದ ದಿವ್ಯ ಯೋಗಿಗೆ ದೇಹತ್ಯಾಗದ ವಿಷಯದಲ್ಲಿ ವಿಧಿ-ನಿಯಮವಿಲ್ಲ. ಏಕೆಂದರೆ:

"ನ ತಸ್ಯ ಪ್ರಾಣಾ ಉತ್ಕ್ರಾಮಂತ್ಯತ್ರೈವ ಸಮವಲೀಯಂತೇ।
ಬ್ರಹ್ಮೈವ ಸನ್ ಬ್ರಹ್ಮಾಪ್ನೋತೀತಿ ಶ್ರುತಿಃ ॥"

ಅವನ ಪ್ರಾಣಗಳು ಲೋಕಾಂತರಕ್ಕೆ ಉತ್ಕ್ರಮಣ ಮಾಡುವದಿಲ್ಲ; ವಿಶ್ವ ಪ್ರಾಣದಲ್ಲಿ ವಿಲೀನವಾಗುತ್ತವೆ. ಅವನು ಬ್ರಹ್ಮದಲ್ಲಿ ಸಮಲೀನನಾಗುತ್ತಾನೆ. ಇದು ವೇದ ಪ್ರಮಾಣ ವಚನ.

ತ್ವಂ ಪದ ಲಕ್ಷ್ಯವಾದ ಅಧಿಯಜ್ಞವನ್ನು ಧ್ಯಾನದ ಮೂಲಕ ಸಾಕ್ಷಾತ್ಕರಿಸಿಕೊಂಡ ಆತ್ಮದರ್ಶಿ ಮಾತ್ರ ಬ್ರಹ್ಮಲೀನ ಮಹಾತ್ಮನಂತೆ ಸದ್ಯೋನ್ಮುಕ್ತನಲ್ಲ. ಧ್ಯಾನಾವಸ್ಥೆಯಿಂದ ವ್ಯುತ್ಥಾನನಾದಾಗ ಆ ಆತ್ಮದರ್ಶಿಯ ಮನಸ್ಸಿನ್ನೂ ವಿಷಯ–ಮೋಹ–ಮಾರುತನ ಆಘಾತಕ್ಕೆ ಕಂಪಿಸುತ್ತದೆ. ರಾಗ- ದ್ವೇಷಾದಿ ತರಂಗಗಳು ಅವನ ಹೃದಯದಲ್ಲಿ ಏಳುವ ಸಂಭವವಿದೆ. ಆದ್ದರಿಂದ ಆತ್ಮದರ್ಶಿ ಯಾದ ಸಾಧಕನಿಗೆ ಮರಣ–ನಿಯಮವಿದೆ. ಅವನು ದೇಹ ತೊರೆಯುವಾಗ ಪರಮಾತ್ಮನ ಸ್ಮರಣೆ ಮಾಡಲೇ ಬೇಕು. ಹಾಗೆ ಮಾಡಿದರೆ ಕ್ರಮ-ಮುಕ್ತಿಪಡೆಯುತ್ತಾನೆ.

"ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ ಸನ್ನ್ಯಾಸ ಯೋಗಾದ್ಯತಯಶ್ಶುದ್ಧಸತ್ತ್ವಾಃ ॥
ತೇ ಬ್ರಹ್ಮಲೋಕೇಷು ಪರಾಂತಕಾಲೇ ಪರಾಮೃತಾಃ ಪರಿಮುಚ್ಯಂತಿ ಸರ್ವೇ ॥

ವೇದಾಂತ ಅನುಭೂತಿಯ ಮೂಲಕ ತ್ವಂ ಪದ ಲಕ್ಷ್ಯದ ನಿರ್ಣಯ ಮಾಡಿಕೊಂಡ ಹಾಗು ಫಲಾಸಕ್ತಿ ತ್ಯಾಗ ರೂಪ ಸನ್ನ್ಯಾಸ ಯೋಗದಿಂದ ಶುದ್ಧಚಿತ್ತರಾದ ಯೋಗಿಗಳು ದೇಹಾಂತ್ಯದ ನಂತರ ಬ್ರಹ್ಮಲೋಕಕ್ಕೆ ಹೋಗುತ್ತಾರೆ. ಅಲ್ಲಿ ಅಮೃತ ಭೋಗ ಉಂಡು ಅಲ್ಲಿಂದಲೇ ಅವರೆಲ್ಲ ಪೂರ್ಣ ಮುಕ್ತಿ ಗಳಿಸುತ್ತಾರೆ. (ಮುಂಡಕ ೧–೨–೬)

"ಶತಂಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ।
ತಯೋರ್ಧ್ವ ಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವಂತಿ

(ಹೃದಯದಿಂದ ಹೊರಟು ದೇಹದ ತುಂಬಿ ವ್ಯಾಪಿಸಿದ) ಹೃದಯ ನಾಡಿಗಳು ನೂರೊಂದು. ಅವುಗಳಲ್ಲಿ ಒಂದು ನೆತ್ತಿಯ ಕಡೆಗೆ ಹೋಗಿದೆ; (ಅದೇ

ಸುಷುಮ್ನಾ). ಆತ್ಮದರ್ಶಿಯು (ಈ ನಾಡಿಯ ಮೂಲಕ ಬ್ರಹ್ಮರಂಧ್ರ ತಲುಪಿ ಶಿಖಾಚಕ್ರವನ್ನು ಭೇದಿಸಿ, ದೇಹ ತೊರೆದು) ಊರ್ಧ್ವಲೋಕಕ್ಕೆ ಹೋಗಿ, ಅಮೃತತ್ತ್ವ ಪಡೆಯುತ್ತಾನೆ. ಬೇರೆ ನೂರು ನಾಡಿಗಳು ಜೀವನನ್ನು ಮರಣ ಕಾಲದಲ್ಲಿ ನಾನಾ ಬಗೆಯ ಯೋನಿಗಳಲ್ಲಿ ಕರೆದೊಯ್ಯುತ್ತವೆ. ॥೨-೩-೧೬ ಕಠ॥

ಪ್ರಸ್ತುತ ಮಂತ್ರದಲ್ಲಿ ಆತ್ಮದರ್ಶಿಯು ಮರಣ ಸಮಯದಲ್ಲಿ ಪರಮಾತ್ಮನನ್ನು ಸ್ಮರಿಸುತ್ತ ದೇಹ ಬಿಡಬೇಕೆಂದು ಭಗವಂತನು ವಿಧಿಸಿದ್ದಾನೆ.

**ಸಂಬಂಧ:–** ದೇವನನ್ನು ಸ್ಮರಿಸದೆ ಅನ್ಯವನ್ನು ಸ್ಮರಿಸುವವರು ಏನಾಗುತ್ತಾರೆ?

ಯಂ ಯಂ ವಾಪಿ ಸ್ಮರನ್ಭಾವಂ ತ್ಯಜಂತ್ಯಂತೇ ಕಲೇವರಮ್।
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥೬॥

**ಅರ್ಥ:-** ಅಂತೇ = ಅಂತ್ಯಕಾಲದಲ್ಲಿ ಯಂ ಯಂ = ಯಾವ ಯಾವ ಭಾವಂ ಸ್ಮರನ್ = ಭಾವವನ್ನು (ಅನ್ಯದೇವತೆಯನ್ನು ಅಥವಾ ಅನ್ಯ ವಸ್ತುವನ್ನು) ಸ್ಮರಿಸುತ್ತ ಕಲೇವರಂ = ದೇಹವನ್ನು ತ್ಯಜತಿ = ಬಿಡುತ್ತಾನೆಯೋ, ಸದಾ = ಯಾವಾಗಲು ತದ್ಭಾವಭಾವಿತಃ = ಅದೇ ಭಾವವನ್ನು ಭಾವಿಸುವ (ಅನುಚಿಂತಿಸುವ) ಅವನು ತಂ ತಂ ಏವ = ಅದನ್ನೇ ಅದನ್ನೇ ಏತಿ = ಹೊಂದುತ್ತಾನೆ.

**ವಿವರಣೆ:-** "ಜಾತ್ಯಾಂತರ ಪರಿಣಾಮಃ ಪ್ರಕೃತ್ಯಾಪೂರಾತ್" (ಸತ್ವಾದಿ) ಪ್ರಕೃತಿಯ ಪೂರ್ಣತೆಯಿಂದ ಅನ್ಯ ಜಾತಿಯ ಪರಿಣಾಮವು. (ಯೋ.ಸೂ. ೪-೨) ಯಾವ ಜಾತಿಯ ಸಂಸ್ಕಾರಗಳ ಮೊತ್ತ ಬೆಳೆದು ನಿಲ್ಲುವದೋ ಅಂಥದೇ ಜಾತಿಯು ದೊರೆಯುತ್ತದೆ, ಉದಾ: ಜಡ ಭರತ ಮುನಿಯಲ್ಲಿ ಹರಿಣ ಜಾತಿಯ ಜನ್ಮಕ್ಕೆ ಅಗತ್ಯವಾದ ಸಂಸ್ಕಾರಗಳು ಅಭಿವೃದ್ಧಿ ಹೊಂದಿದುದರಿಂದ ಅವನಿಗೆ ಹರಿಣ ಜನ್ಮವು ಪ್ರಾಪ್ತವಾಯಿತು. ಸಂಸ್ಕಾರಗಳ ಪ್ರಾಬಲ್ಯದಿಂದ ಪ್ರಸ್ತುತ ಜನ್ಮದಲ್ಲಿಯೇ ಜಾತ್ಯಾಂತರ ಜನ್ಮ ಹೊಂದಿದವರೂ ಇದ್ದಾರೆ; ಉದಾ: ಶಿಲಾದ ಮುನಿಯ ಮಗ ನಂದಿಕೇಶ್ವರನು ಅತ್ಯುಗ್ರ ತಪಮಾಡಿ ಅದೇ ಜನ್ಮದಲ್ಲಿ ದೇವ ದೇಹಿಯಾದ. ಶ್ರೀ ಕೃಷ್ಣನ ಮಗ ಸಾಂಬನು ಸ್ತ್ರೀ ವಾಸನೆಯ ಪ್ರಾಬಲ್ಯದಿಂದ ಅದೇ ಜನ್ಮದಲ್ಲಿ ಸ್ತ್ರೀಯಾದ. ಶಿಖಂಡಿಯು ಸ್ತ್ರೀಯಾದರೂ ಪುರುಷ ವಾಸನಾ ಪ್ರಾಬಲ್ಯದಿಂದ ಪುರುಷನಾದ. ಸ್ಮರಣ, ಚಿಂತನ ಮತ್ತು ಸಂಸ್ಕಾರಗಳಲ್ಲಿ ಅಮಿತ ಸಾಮರ್ಥ್ಯವಿದೆ. ಸ್ಮರಣೆ ಚಿಂತನಗಳು ಅವ್ಯಾಹತವಾಗಿ ಸಾಗಿದರೆ ಕೀಡಿ ಕುರುಡೆ ಕುಠಾರವಾಗುತ್ತದೆ; ಇಂದಿನ ಮಾನವ ನಾಳಿನ ಜನ್ಮದಲ್ಲಿ ಪಶು ಪಕ್ಷಿಗಳಾಗಿ ಹುಟ್ಟುತ್ತಾನೆ; ಇಂದಿನ ಪ್ರಾಣಿಗಳು ನಾಳಿನ ಜನ್ಮದಲ್ಲಿ ಮಾನವರಾಗಿ ಹುಟ್ಟುವದು ಸಾಧ್ಯ!

ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುದ್ಧ್ಯ ಚ।
ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ॥೭॥

**ಅರ್ಥ:-** ತಸ್ಮಾತ್ = ಆದ್ದರಿಂದ ಸರ್ವೇಷು ಕಾಲೇಷು = ಎಲ್ಲ ಕಾಲಗಳಲ್ಲಿ ಮಾಂ = ನನ್ನನ್ನು ಅನುಸ್ಮರ = ಸ್ಮರಿಸು. ಚ=ಹಾಗು ಯುಧ್ಯ = ಯುದ್ಧ ಮಾಡು (ಸತ್ಕರ್ಮ ಆಚರಿಸು). ಮಯಿ = ನನ್ನಲ್ಲಿ ಅರ್ಪಿತ ಮನೋಬುದ್ಧಿಃ = ಅರ್ಪಿಸಲ್ಪಟ್ಟ ಮನ ಬುದ್ಧಿ ಯುಳ್ಳವನಾಗಿ ಮಾಂ ಏವ = ನನ್ನನ್ನೇ ಏಷ್ಯಸಿ=ಹೊಂದುವೆ. ಅಸಂಶಯಃ = (ಇದರಲ್ಲಿ) ಸಂಶಯವೇ ಇಲ್ಲ.

**ವಿವರಣೆ:–** ಭಗವಂತ:- "ಅರ್ಜುನ, ಜೀವನದ ತುಂಬ ಮನುಷ್ಯನು ಯಾವುದನ್ನು ಚಿಂತಿಸುತ್ತಾನೆಯೋ ಅಂತ್ಯಕಾಲದಲ್ಲಿ ಅದನ್ನೇ ಸ್ಮರಿಸುತ್ತಾನೆ; ಅಂತ್ಯಕಾಲದಲ್ಲಿ ಯಾವುದನ್ನು ಸ್ಮರಿಸುತ್ತಾನೆಯೋ ಆದೇ ಜನ್ಮವನ್ನು ಪಡೆಯು ತ್ತಾನೆ. ಆದ್ದರಿಂದ, ನೀನು ಒಂದು ನಿಮಿಷ ಬಿಡದೆ ನನ್ನನ್ನು ಧ್ಯಾನಿಸು. ಅನ್ಯ ನೆನಹುಗಳು ಮನದಲ್ಲಿ ಸುಳಿಯದಂತೆ ಜಾಗ್ರತೆ ವಹಿಸು. ಅಷ್ಟೇ ಅಲ್ಲ. ಮನೋ ನಿರ್ಮಾಲ್ಯಕರವಾದ ಸತ್ಕರ್ಮಗಳನ್ನು ಎಡೆ ಬಿಡದೆ ಆಚರಿಸು, ಪ್ರತಿ ಕ್ಷಣ ಪುಣ್ಯ ಸಂಚಯಿಸು. ದಾನ ಹೋಮ ಯಾಗ ಕಾಯಕಗಳಲ್ಲಿ ನಿರತನಾಗು. ನದಿ ಗಳು ಹರಿಯುವದು, ವೃಕ್ಷಗಳು ಫಲಿಸುವದು, ಗೋಗಳು ಕರೆಯುವದು ಪರರಿ ಗಾಗಿಯೇ ಅಲ್ಲವೆ? ಹಾಗೆ ನೀನು ಬದುಕುವದೇ ಪರರಿಗಾಗಿ ಎಂದು ಭಾವಿಸು. ಹೆಂಡತಿ ಮಕ್ಕಳಿಗೆಂದು ದೇಹ ಧನ ಮನ ವ್ಯಯಿಸಿ ಹೆಗ್ಗುರಿಯಾಗಿ ಕೆಡಬೇಡ. ನಿನ್ನ ಮನ ಬುದ್ಧಿ ಹಾಗು ಭಾವಗಳ ಸಾಮರ್ಥ್ಯವನ್ನು ಪರಮ ದೇವನಾದ ನನ್ನ ದರ್ಶನಕ್ಕಾಗಿ ವ್ಯಯಿಸು. ನಿನ್ನ ಬಾಹ್ಯಾಂತರ ಸಂಪದವನ್ನೆಲ್ಲ ನನ್ನ ಚರಣ ಗಳಲ್ಲಿ ಸಮರ್ಪಿಸು. ಹಾಗೆ ಮಾಡಿದೆಯಾದರೆ ನಿಃಸಂಶಯವಾಗಿ ನನ್ನನ್ನೇ ಹೊಂದುವಿ."

(೧) ಮುಂಜಿವೆ, ಮದುವೆ, ಅರ್ಚನೆ, ವ್ಯಾಪಾರ, ಉದ್ಯಮ–ಇಂಥ ಕಾರ್ಯಗಳಿಗೆ ಕಾಲ ನಿರ್ಧರಿಸುವದು ಸಾಧ್ಯ. ಮರಣದ ಕಾಲ ನಿರ್ಣಯಿಸುವದು ಮಾತ್ರ ಕಷ್ಟ. ಮರಣವು ಯಾವ ನಿಮಿಷ ಬಂದೀತು ಹೇಳಬರದು. ಪುರಂಧರ ದಾಸರು ಮರಣದ ವಿಷಯವನ್ನು ಹೃದಯಂಗಮವಾಗಿ ವರ್ಣಿಸಿದ್ದಾರೆ.

"ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ। ಚಿಂತೆಯನು ಬಿಟ್ಟು ಶ್ರೀ ಹರಿಯ ನೆನೆ ಮನವೇ ॥ಪ॥ ದಿನ ರಾತ್ರಿ ಯೆನ್ನದೆ ವಿಷಯ ಲಂಪಟನಾಗಿ। ಸವಿಯೂಟಗಳನುಂಡು ಭ್ರಮಿಸ ಬೇಡ ॥ ಅವನ ಕೊಂದಿವನ ಕೊಂದರ್ಥವನು ಗಳಿಸುವೊಡೆ। ಜವನ ದೂತರು ಬರುವ ಹೊತ್ತನೀನರಿಯೆ ॥೧॥ ಮೊನ್ನೆ ಮದುವೆಯನಾದೆ ಕರೆವುವೋದೆರಡೆಮ್ಮೆ। ನಿನ್ನೆ ಕೊಂಡೆನು ಕ್ಷೇತ್ರ ಫಲವು ಬಹುದು ॥ ಹೊನ್ನು ಹಣವುಂಟೆನಗೆ ಸಾಯಲಾರೆನು ಎನಲು। ಬೆನ್ನು ಬಿಡುವಳೆ ಮೃತ್ಯು ವ್ಯರ್ಥ ಜೀವಾತ್ಮ ॥೨॥ ಹೊಸ ಮನೆಯ ಕಟ್ಟಿಹೆನು ಗೃಹಶಾಂತಿ ಮನೆಯೊಳಗೆ। ಬಸುರೆ ಹೆಂಡತಿ ಮಗನ ಮದುವೆ ನಾಳೆ ॥ ಹಸನಾಗಿ ಇದೆ ಬದುಕು ಸಾಯ ಲಾರೆನು ಎನಲು। ಕುಸುರಿದರಿಯದೆ ಬಿಡರು ಯಮನವರು ಆಗ ॥೩॥ ಪುತ್ರ ಹುಟ್ಟಿದ ದಿವಸ ಹಾಲು ಊಟವು ಹಬ್ಬ। ಮತ್ತೊಬ್ಬ ಮಗನ ಉಪನಯನ ನಾಳೆ ॥ ಅತಿಯಾಗಿದೆ ಬದುಕು ಸಾಯಲಾರೆನು ಎನಲು। ಮೃತ್ಯು ಹೆಡತಲೆಯಲ್ಲಿ ನಗುತಿರ್ಪುದರಿಯೆ ॥೪॥

ಅಟ್ಟಡಿಗೆ ಉಣಲಿಲ್ಲ ಇಷ್ಟ ದರುಶನವಿಲ್ಲ। ಕೊಟ್ಟ ಸಾಲವ ಕೇಳ್ವ ಹೊತ್ತನರಿಯೇ॥ ಕಟ್ಲೆ ತುಂಬಿದ ಮೇಲೆ ಕ್ಷಣ ಮಾತ್ರ ಇರಲಿಲ್ಲ। ಅಷ್ಟರೊಳು ಪುರಂಧರ ವಿಠಲನ ನೆನೆ ಮನವೆ ॥೫॥ ಮೃತ್ಯು ವಿಶ್ವವ್ಯಾಪಿ. ಭೂಮಿಯ ಮೇಲೆ ಹುಟ್ಟಿದ ದಿನದಿಂದ ನಾವು ಸಾವಿನ ಬಟ್ಟೆಯಲ್ಲಿ ಸಾಗಿದ್ದೇವೆ. ದಾರಿಯ ಮಧ್ಯದಲ್ಲಿಯೇ ಇನ್ನೊಬ್ಬರೊಡಗೂಡಿ ವಿವಾಹವಾಗುತ್ತೇವೆ. ಜೊತೆ ಜೊತೆಯಾಗಿ ಮೃತ್ಯುವಿನತ್ತ ಧಾವಿಸುತ್ತೇವೆ. ಬಾಲ್ಯತನ ಬಂದು ಹೋಗುವದು, ತಾರುಣ್ಯದ ಉಮ್ಮೇದ ಉಕ್ಕಿ ಹರಿದು ಮಾಯವಾಗುವದು. ಮುಪ್ಪಿನ ಅವಸ್ಥೆ ಹೇಳ ಹೆಸರಿಲ್ಲದೆ ಅಡಗಿ ಸಾವು ಕಾಣಿಸಿ ಕೊಳ್ಳುವದು. ಮೃತ್ಯುವೆಂಬ ಮಹಾ ರಕ್ಕಸಿಯು ಒಂದು ಕೈಯಿಂದ ನಮ್ಮ ಕುತ್ತಿಗೆ ಹಿಚುಕುತ್ತಿದ್ದಾಳೆ. ಮತ್ತೊಂದು ಕೈಯಿಂದ ಭೋಗ ಉಣಿಸುತ್ತಿದ್ದಾಳೆ. ಕೊನೆಯ ಉಸಿರು ಯಾವುದು ನಮಗೆ ತಿಳಿಯದು.

(೨) ಎಂತಲೇ, ಪ್ರತಿ ಉಸಿರಿನೊಂದಿಗೆ ಸೋಽಹಂ, ಶಿವೋಽಹಂ, ದಾಸೋಽಹಂ ಎಂಬಿತ್ಯಾದಿ ಪವಿತ್ರ ಭಾವನೆಗಳು ಏಳಬೇಕು. ಅಂದರೆ ಮಾತ್ರ ಜೀವನು ಪರಮಾತ್ಮನಲ್ಲಿ ಬೆರೆಯುವನು.

**ಸಂಬಂಧ:–** ಪರಮಾತ್ಮನಲ್ಲಿ ಮನಸ್ಸನ್ನು ಅರ್ಪಿಸುವದು ಹೇಗೆ?

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯ ಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥೮॥**

**ಅರ್ಥ:-** ಅಭ್ಯಾಸಯೋಗ ಯುಕ್ತೇನ = (ಅಭ್ಯಾಸಃ ಸಜಾತೀಯ ಪ್ರತ್ಯಯ ಪ್ರವಾಹಃ ಸ ಏವ ಯೋಗಃ ಉಪಾಯಃ ತೇನ ಯುಕ್ತೇನ= ಸಜಾತೀಯ ಪ್ರತ್ಯಯಗಳ ಪ್ರವಾಹವು ಯೋಗ. ಅದರಿಂದ ಕೂಡಿದವನು ಯೋಗಯುಕ್ತ) ಏಕಾಗ್ರತಾ ರೂಪ ಯೋಗ ದಿಂದ ಕೂಡಿದ, ನ ಅನ್ಯಗಾಮಿನಾ = ಅನ್ಯ ವಿಷಯಗಳತ್ತ ಹೋಗದ, ಚೇತಸಾ = ಚಿತ್ತದಿಂದ ಅನುಚಿಂತಯನ್ = ಧ್ಯಾನಿಸುವವನು ಪರಮಂ = ಶ್ರೇಷ್ಠನಾದ, ದಿವ್ಯಂ = ದೇದಿಪ್ಯಮಾನ ನಾದ ಪುರುಷಂ = ಪುರುಷನನ್ನು ಯಾತಿ = ಹೊಂದುತ್ತಾನೆ.

**ವಿವರಣೆ:-** ಭಗವಂತ:– "ಪಾರ್ಥ, ಸಾಧಕ ಯೋಗಿಯು ಬಾಹ್ಯ ವಿಷ ಯುಗಳಿಂದ ಮನಸ್ಸನ್ನು ಪರಾವೃತ್ತಗೊಳಿಸಿ, ಅಂತರ್ಗತ ಕಾಮಾದಿ ವಾಸನೆಗ ಳನ್ನು ತೊಡೆದು ಹಾಕಿ, ಅಮೃತರೂಪ ದೇವನ ಧ್ಯಾನದಲ್ಲಿ ತೊಡಗಿಸುತ್ತಾನೆ. ಧ್ಯಾನ ಬಲಿತು ಪಕ್ವವಾದಾಗ ಅವನು ಪರಾತ್ಪರನೂ ಜ್ಞಾನಭಾಸ್ಕರನೂ ಆದ ದೇವನಲ್ಲಿ ಸಮರಸನಾಗುತ್ತಾನೆ."

ಅಭ್ಯಾಸ ಯೋಗ: ಅನನ್ಯ ಚಿಂತನೆಯೇ ಅಭ್ಯಾಸ; ಅದೇ ಯೋಗ. ಇದು ಎರಡು ಪ್ರಕಾರ: (ಅ) ವಿಷಯಾಭ್ಯಾಸ: ಹಗಲು ರಾತ್ರಿ ಧನ ಧಾನ್ಯಾದಿ ಸಾಂಸಾರಿಕ ವಿಷಯುಗಳಲ್ಲಿಯೇ ತನ್ಮಯತೆ ಪಡೆಯುವದು. ತುಳಸೀದಾಸನ ಮನಸ್ಸಿನ ತುಂಬ ತವರಿಗೆ ಹೋದ ಹೆಂಡತಿಯ ಚಿತ್ರ ಮೂಡಿ ನಿಂತಿತು. ರಾತ್ರೋರಾತ್ರಿ ಅವನು ಮಾವನ ಮನೆಗೆ ಧಾವಿಸಿದ. ಅವನ ಮನಸ್ಸು ಪತ್ನಿ

ಯಲ್ಲಿ ಏಕಾಕಾರಗೊಂಡುದರಿಂದ ಹರಿವ ನದಿ ಕಾಣಲಿಲ್ಲ, ತೂಗು ಬಿದ್ದ ಹಾವು ಕಾಣಲಿಲ್ಲ. ಇದು ವಿಷಯೈಕಾಗ್ರತೆ! (ಬ) ಆತ್ಮಾಭ್ಯಾಸ: ಸ್ಥೂಲ ಸೂಕ್ಷ್ಮ ಕಾರಣ ದೇಹಗಳನ್ನು, ಜಾಗ್ರ ಸ್ವಪ್ನ ಸುಪ್ತಿ ಅವಸ್ಥೆಗಳನ್ನು, ವಿಶ್ವ ತೈಜಸ ಪ್ರಾಜ್ಞ ಜೀವರನ್ನು, ಸ್ಥೂಲ ಸೂಕ್ಷ್ಮ ಕಾರಣವೆಂಬ ಸಮಷ್ಟಿ ತನುಗಳನ್ನು, ಸೃಷ್ಟಿ ಪಾಲನ ವಿನಾಶ ಎಂಬ ಕ್ರಿಯೆಗಳನ್ನು, ಆ ತ್ರಿವಿಧ ತನುಗಳ ಅಭಿಮಾನಿಯಾದ ವಿರಾಟ, ಸೂತ್ರಾತ್ಮ ಮತ್ತು ಅಂತರ್ಯಾಮಿಗಳನ್ನು ಸರ್ವ ಸಾಕ್ಷಿಯಾಗಿ ಪ್ರಕಾಶಿಸುವ ದೇವನು ನಿರ್ಮಲ, ಅಖಂಡ, ಸವಿಂಜ್ಯೋತಿ. ಅಂಥ ದಿವ್ಯ ಆತ್ಮ ಪ್ರಭುವಿನಲ್ಲಿ ಮನಸ್ಸನ್ನು ನಿಲ್ಲಿಸುವದು ಆತ್ಮಾಭ್ಯಾಸ! ಆತ್ಮೈಕಾಗ್ರತೆ!

ವೈಷಯಿಕ ಅಭ್ಯಾಸರೂಪ ಯೋಗದಲ್ಲಿ ನೈಪುಣ್ಯತೆ ಪಡೆದವನು ಸಾಂಸಾರಿಕ. ಆತ್ಮಾಭ್ಯಾಸ ರೂಪ ಯೋಗದಲ್ಲಿ ರಮಿಸುವವನು ಯೋಗಿ!

(೨) ಆ ಯೋಗಿಯು ಪ್ರತಿ ಕ್ಷಣವನ್ನು ಆತ್ಮ ಚಿಂತನೆಯಲ್ಲಿ ಕಳೆಯುತ್ತಾನೆ. ಅವನ ಚಿತ್ತವು ದೇವನಲ್ಲಿ ಸುಸ್ಥಿರಗೊಂಡಿದೆ. ಆದುದರಿಂದ, ಪರಮಾತ್ಮನಲ್ಲಿ ಆತ ಸಾಮರಸ್ಯ ಹೊಂದಿ ದಿವ್ಯ ಸುಖವನ್ನು ಅನುಭವಿಸುತ್ತಾನೆ.

**ಸಂಬಂಧ:–** ಪರಮಾತ್ಮನ ವರ್ಣನೆ ಮತ್ತು ಅವನ ಸ್ಮರಣೆಯ ಲಾಭ– ಮುಂದೆ ಹೇಳಲಾಗಿದೆ, ಎರಡು ಮಂತ್ರಗಳಲ್ಲಿ.

ಕವಿಂ ಪುರಾಣಮನುಶಾಸಿತಾರ
 ಮಣೋರಣೀಯಾಂಸಮನುಸ್ಮರೇದ್ಯಃ ॥
ಸರ್ವಸ್ಯ ಧಾತಾರಮಚಿಂತ್ಯರೂಪ ।
 ಮಾದಿತ್ಯವರ್ಣಂ ತಮಸಃ ಪರಸ್ತಾತ್ ॥೯॥
ಪ್ರಯಾಣಕಾಲೇ ಮನಸಾಚಲೇನ ।
 ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ॥
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್ ।
 ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥೧೦॥

**ಅರ್ಥ:–** ಯಃ = ಯಾವನು, ಪ್ರಯಾಣ ಕಾಲೇ = ಮರಣ ಕಾಲದಲ್ಲಿ ಭಕ್ತ್ಯಾ ಯುಕ್ತಃ = ಭಕ್ತಿಯಿಂದ ಕೂಡಿದವನಾಗಿ ಅಚಲೇನ = ಅಚಲವಾದ ಮನಸಾ = ಮನಸ್ಸಿನಿಂದ ಯೋಗ ಬಲೇನ = ಯೋಗಬಲದಿಂದ (ಅಭ್ಯಾಸದ ಬಲದಿಂದ) ಭ್ರುವೋರ್ಮಧ್ಯೇ =ಭ್ರೂಮಧ್ಯದಲ್ಲಿ ಪ್ರಾಣಂ= ಪ್ರಾಣವನ್ನು ಸಮ್ಯಕ್ = ಚೆನ್ನಾಗಿ ಆವೇಶ್ಯ = ನಿಲ್ಲಿಸಿ ಕವಿಂ = ಸರ್ವಜ್ಞನೂ ಪುರಾಣಂ = ಪುರಾತನನೂ ಅನುಶಾಸಿತಾರಂ = ನಿಯಾಮಕನೂ ಅಣೋಃ ಅಣೀಯಾಂಸಂ = ಅಣುವಿಗಿಂತ ಸೂಕ್ಷ್ಮವಾಗಿರುವವನೂ ಸರ್ವಸ್ಯ ಧಾತಾರಂ = ಸರ್ವ ಪರಿಪಾಲಕನೂ ಅಚಿಂತ್ಯರೂಪಂ = ಅಚಿಂತನೀಯ ರೂಪವುಳ್ಳವನೂ ಆದಿತ್ಯ ವರ್ಣಂ = ಸೂರ್ಯನಂತೆ ಪ್ರಕಾಶಮಾನನೂ ತಮಸಃ ಪರಸ್ತಾತ್ = ತಮಸ್ಸಿನ ಆಚೆಗಿರುವವನೂ (ಆದ ಪುರುಷನನ್ನು) ಅನುಸ್ಮರೇತ್ = ಸದಾ ಸ್ಮರಿಸುವನೋ ಸಃ = ಅವನು ತಂ ಪರಂ ದಿವ್ಯಂ ಪುರುಷಂ

= ಆ ಪರಮ ದಿವ್ಯ ಪುರುಷನನ್ನು ಉಪೈತಿ = ಹೊಂದುತ್ತಾನೆ.

ವಿವರಣೆ:– ಯಾವುದಕ್ಕಾಗಿ ಮನುಷ್ಯದೇಹವನ್ನು ಪಡೆದೆವೋ, ಯಾವುದನ್ನು ಉದ್ದೇಶಿಸಿ ಭಕ್ತಿ ಕರ್ಮ ಜ್ಞಾನ ಮುಂತಾದ ಪಥಗಳಲ್ಲಿ ನಡೆಯುವ ಸಾಹಸ ಮಾಡುವೆವೋ, ಯಾವುದರ ಸಿದ್ಧಿಗಾಗಿ ವಿಷಯುಗಳನ್ನು ಮತ್ತು ದೇಹಾದಿ ಅನಾತ್ಮ ತತ್ತ್ವಗಳ ವ್ಯಾಮೋಹವನ್ನು ಹುಲ್ಲು ಕಡ್ಡಿಯಂತೆ ದೂರ ಎಸೆಯಬಲ್ಲೆವೋ ಅದೇ ಪರಮ ಪಾವನವಾದ ಧ್ಯೇಯ! ಅದನ್ನು ಹೊಂದಿದಾಗ ಕಾಲದ ಭೀತಿಯಿಲ್ಲ, ಮಾನಸಿಕ ಬಾಧೆಗಳಿಲ್ಲ. ಅದನ್ನು ಬಲ್ಲವರು ದೇವ, ದಿವ್ಯ ಪುರುಷ, ಸತ್ಯ, ಮೂಲ ಚೇತನ ಎಂದು ಕರೆದಿದ್ದಾರೆ. ಅಂಥ ದೇವನನ್ನು ಭಗವಂತನು ಹಲವಾರು ಲಕ್ಷಣಗಳಿಂದ ಕೊಂಡಾಡುತ್ತಾನೆ.

(೧) ಕವಿ: ಭೌತ ಜಗತ್ತನ್ನು ಬೆಳಗುವ ಸೂರ್ಯನು ಕವಿ. ಸೂರ್ಯನಿಗೂ ಕಾಣದ ಭಾವ ವಿಶ್ವವನ್ನು ಕಾಣುವ ಸೌಂದರ್ಯೋಪಾಸಕನು ವರಕವಿ. ಭೂಮ್ಯಾದಿ ಪ್ರಕೃತ್ಯಂತ ಸಕಲ ತತ್ತ್ವಗಳನ್ನು ಅಂತಃಚಕ್ಷುವಿನಿಂದ ಈಕ್ಷಿಸುವ ದಾರ್ಶನಿಕನು ಮಹಾಕವಿ. ಈ ಸೂರ್ಯ, ಈ ಸಾಹಿತಿ, ಈ ದಾರ್ಶನಿಕ, ಈ ಮೂವರನ್ನೂ ಮೀರಿ ಅವರ ಅಳವಿಗೆ ಸಿಲುಕದಂತೆ ಚೈತನ್ಯ ಪ್ರಕಾಶವನ್ನು ವಿಶ್ವದ ಆದ್ಯಂತಗಳಲ್ಲೆಲ್ಲ ಹೊರ ಹೊಮ್ಮಿಸುವ ಪುರುಷನು ಮಾತ್ರ ಗೀತೋಕ್ತ ದಿವ್ಯಕವಿ! ದಿಗ್ದಿಗಂತಗಳಲ್ಲಿ ತತ್ತ್ವ ವೀಚಿಗಳಾಚೆ ಮಿನುಗುವ ಶಾಶ್ವತ ಚಿತ್ಸೂರ್ಯ!!

ಜಾಗ್ರತ್ಸೃಷ್ಟಿ, ಸ್ವಪ್ನಸೃಷ್ಟಿ ಹಾಗು ನಿದ್ರಾಸೃಷ್ಟಿ ಅದರಂತೆಯೇ ತುರಿಯ ಮತ್ತು ತುರಿಯಾತೀತ ಅವಸ್ಥೆ ಇವನ್ನೆಲ್ಲ ಆ ದೇವ ಸೂರ್ಯನು ನಿತ್ಯ ಬೆಳಗುತ್ತಾನೆ. ಜೀವ-ಪ್ರತ್ಯಗಾತ್ಮ, ಈಶ್ವರ–ಬ್ರಹ್ಮ ಈ ನಾಲ್ಕು ಚೇತನ ತತ್ತ್ವಗಳನ್ನು ನಿರಪೇಕ್ಷನಾಗಿ ಪ್ರಕಾಶಿಸುತ್ತಾನೆ. ಅವನದು ಸ್ವತಃ ಪ್ರಕಾಶ!

"ನ ತತ್ರ ಸೂರ್ಯೋಭಾತಿ ನ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ॥
ತಮೇವ ಭಾಂತಮನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ ॥೨–೨–೧೫ ಕಠವಲ್ಲಿ॥

ಅಲ್ಲಿ (ಆತ್ಮನಲ್ಲಿ) ಸೂರ್ಯನು ಕಾಣನು. ಚಂದ್ರ ತಾರೆಗಳು ತೋರವು. ಈ ಮಿಂಚುಗಳು ಹೊಳೆಯುವು. ಇನ್ನು ಈ ಅಗ್ನಿಯ ಮಾತೆಲ್ಲಿ? ನಿತ್ಯ ಪ್ರಕಾಶಿಸುವ ಆತ್ಮನನ್ನೇ ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತವೆ. ಅವನ ಪ್ರಕಾಶದಿಂದಲೇ ಇದೆಲ್ಲವು ವಿಶೇಷವಾಗಿ ಪ್ರಕಾಶಿಸುತ್ತದೆ (ಕಠ). ಭೌತ ಪ್ರಕಾಶ ತತ್ತ್ವಗಳು ಜಾಗ್ರತ್ಸೃಷ್ಟಿಗೆ ಸೀಮಿತ. ಅವು ಮನೋ ವಿಶ್ವ, ಬುದ್ಧಿ ವಿಶ್ವಗಳನ್ನು ಬೆಳಗಲಾರವು. ಸ್ವಪ್ನ, ಸುಪ್ತಿ, ತುರಿಯ, ತುರಿಯಾತೀತ ಅವಸ್ಥೆಗಳಲ್ಲಿ ಪ್ರವೇಶಿಸುವ ಸಾಮರ್ಥ್ಯ ಅವುಗಳಿಗೆಲ್ಲಿ ಬರಬೇಕು? ಪರಮಾತ್ಮ-ರವಿಯು ಮಾತ್ರ ಸರ್ವ ಅವಸ್ಥೆಗಳಾಚೆ

ನೆಲಸಿ ಸರ್ವವನ್ನು ಬೆಳಗುತ್ತಾನೆ. ಅವನ ಗುಹ್ಯತಮ ಜ್ಞಾನ ಕಿರಣಗಳು ಮೊಟ್ಟ ಮೊದಲು ಚಿದ್ದರ್ಪಣದಲ್ಲಿ ಪ್ರತಿಫಲಿಸುತ್ತವೆ. ಅಲ್ಲಿಂದ ಆ ಪ್ರಭೆಯು ಸ್ಥೂಲವಾಗುತ್ತ ಕ್ರಮವಾಗಿ ಪ್ರಕೃತಿ ಮಹತ್ತು ಅಹಂಕಾರ ತನ್ಮಾತ್ರೆ ಜಡಪಂಚಭೂತ ಹಾಗು ದೇಹಗಳಲ್ಲಿ ಅವತರಿಸಿ ಬರುತ್ತದೆ. ಆ ಆತ್ಮಪ್ರಭೆಯ ಸಂಗದಿಂದಲೇ ಪ್ರಕೃತಿಯು ವಿಕಸನಗೊಳ್ಳುತ್ತದೆ, ಮಹತ್ತು ಪರಿಣಮಿಸುತ್ತದೆ, ಅಹಂಕಾರವು ವಿಭಿನ್ನರೂಪ ತಾಳುತ್ತದೆ, ಮನಸ್ಸು ಮನನ ಮಾಡುತ್ತದೆ, ಬುದ್ಧಿಯು ನಿರ್ಣಾಯಿಸುತ್ತದೆ, ಇಂದ್ರಿಯಗಳು ತಮ್ಮ ತಮ್ಮ ವ್ಯವಹಾರಗಳನ್ನು ನಿರ್ವಹಿಸುತ್ತವೆ, ಆಕಾಶಾದಿ ಭೂತಗಳು ಸೃಷ್ಟಿಕಾರ್ಯಗೈಯ್ಯುತ್ತವೆ ಇಂತು, ವಿಶ್ವದಲ್ಲಿ ಏನೇನು ಸಾಗಿದೆಯೋ ಅದೆಲ್ಲ ಆತ್ಮನ ಜ್ಞಾನ ಪಕಾಶದಿಂದ! ಇಂಥ ದಿವ್ಯ ಚಿತ್ಪ್ರಭಾಯುಕ್ತನಾದುದರಿಂದ ಅವನಿಗೆ 'ಕವಿ' ಎಂದು ಅಭಿಧಾನ.

(೨) ಪುರಾಣ:– ದೇಹಾದಿ ಬಿಂದ್ವಂತ ಸಕಲ ವಸ್ತುಗಳು ಕಾಲ ಖಂಡದಲ್ಲಿ ಹುಟ್ಟಿ ಬಂದಿವೆ. ಕಾಲ ಪ್ರವಾಹದಲ್ಲಿಯೇ ಬದುಕಿ ಕಾಲ ಗರ್ಭದಲ್ಲಿಂಪೇ ಅಡಗುತ್ತಿವೆ. ಅಂದರೆ ಅವುಗಳಿಗೆ ಪ್ರಾಗಭಾವವಿದೆ; ಪ್ರಧ್ವಂಸಾಭಾವವೂ ಇದೆ. ಪರಮಾತ್ಮನಿಗೆ ಮಾತ್ರ ಯಾವ ಬಗೆಯ ಅಭಾವವೂ ಇಲ್ಲ. ಅವನು ಸ್ವಯಂಭು. ಆದಿ ಅಂತಗಳಿಲ್ಲದ ಪರಿಪೂರ್ಣ ವಸ್ತು. ಆದುದರಿಂದ ಸನಾತನ, ಪುರಾಣ!

(೩) ಅನುಶಾಸಿತಾರ:- ಮನೆಯನ್ನಾಳುವ ತಂದೆ, ದೇಶವನ್ನಾಳುವ ಅಧ್ಯಕ್ಷ, ಜಗತ್ತನ್ನಾಳುವ ಬ್ರಹ್ಮಾದಿ ದೇವತೆಗಳು ಶಾಸಕರೆನಿಸುತ್ತಾರೆ. ಅವರ ಶಾಸನಾ ಕ್ಷೇತ್ರವು ಪರಿಮಿತ. ಅಷ್ಟೇ ಅಲ್ಲ, ಆ ಶಾಸನಾಧಿಕಾರವು ಅಶಾಶ್ವತ. ಪರಮಾತ್ಮನು ಇಂಥ ಸೀಮಿತ ಮತ್ತು ಅಶಾಶ್ವತ ಶಾಸಕನಲ್ಲ. ನಿಸ್ಸೀಮ ನಿಯಂತಾರ. ಅವನು ಹಾಕಿದ ಭದ್ರ ಕಟ್ಟಳೆಯನ್ನು ಅನುಸರಿಸಿಯೇ ವಸ್ತುಗಳು ಬಾಳುತ್ತವೆ. ಉದಾಹರಣೆಯಿತ್ತು ಹೇಳುವದಾದರೆ, ಅವನ ಆಜ್ಞೆಯನ್ನು ಶಿರಸಾವಹಿಸಿಯೇ ನದಿಗಳು ಹರಿಯುತ್ತವೆ, ಮಳೆ ಬೀಳುತ್ತದೆ, ಗಾಳಿ ಬೀಸುತ್ತದೆ, ಸಸ್ಯ ಬೆಳೆಯುತ್ತದೆ, ಪ್ರಾಣಿ ಜೀವಿಗಳು ಬಾಳುತ್ತವೆ. ದೇವನ ಶಾಸನಶಕ್ತಿಯು ಸ್ವರೂಪನಿಷ್ಠ, ಯಾರಿಂದಲೂ ಬಂದುದಲ್ಲ.

(೪) ಅಣೋರಣೀಯ:- ಅಣು ಎಂದರೆ ಸೂಕ್ಷ್ಮ. ಪರಮಾತ್ಮನು ಸೂಕ್ಷ್ಮಾತಿಸೂಕ್ಷ್ಮ. ಚಕ್ಷುವಿನಲ್ಲಿದ್ದರೂ ಚಕ್ಷುವಿಗೆ ಕಾಣಲಾರ. ಮನದೊಳಗಿದ್ದರೂ ಮನಸ್ಸಿಗೆ ತೋರಲಾರ!

(೫) ಸರ್ವಸ್ಯ ಧಾತಾರ:– ಧಾತೃ ಎಂದರೆ ಪೋಷಕ. ದೇವನು ಸಕಲ ಪಡಿಪದಾರ್ಥಗಳ ಪೋಷಕ. ಅಂದರೆ ವಿಶ್ವದ ಸಮಸ್ತ ವಸ್ತುಗಳಿಗೆ ಅಸ್ತಿತ್ವವನ್ನು ಕರುಣಿಸಿದ ಕಾರುಣ್ಯಮಯ ಪ್ರಭುವು.

(೬) ಅಚಿಂತ್ಯರೂಪ:- ದೇವನಲ್ಲಿ ಶಬ್ದಾದಿ ಗುಣವಿಲ್ಲವಾಗಿ ಇಂದ್ರಿಯಾ

ವೇದ್ಯ; ಅವನಿಗೆ ಭಾವರೂಪುಗಳಿಲ್ಲವಾಗಿ ಮನಸ್ಸಿಗೆ ಅಗೋಚರ. ಬುದ್ಧಿಗೆ ಅಗಮ್ಯ. ಅಚಿಂತ್ಯ! ಇಂದ್ರಿಯ ಮನ ಬುದ್ಧಿಗಳು ಪೂರ್ಣ ಶಾಂತವಾದಾಗ ಅವನ ಸ್ವರೂಪ ದರ್ಶನ.

(೭) ಆದಿತ್ಯವರ್ಣಃ– ಸೂರ್ಯನಂತೆ ಆತ್ಮನು ಸ್ವ ಪರ ಪ್ರಕಾಶ ಸ್ವರೂಪ (ವರ್ಣ). ಅವನದು ಎಂದೆಂದಿಗೂ ಕುಂದದ ಪ್ರಭೆ! ಅಂತವಿಲ್ಲದ ಪ್ರಕಾಶ.

(೮) ತಮಸಃ ಪರಃ:- ಅನಾತ್ಮ ವಸ್ತುಗಳ ವಿಸ್ತಾರವೇ ತಮ. ತ್ರಿಗುಣ ಮಯಿ ಪ್ರಕೃತಿಯೂ ತಮ. ಈ ಪ್ರಾಕೃತಿಕ ವಿಶ್ವದಲ್ಲಿ ರಾಗ ದ್ವೇಷಗಳಿವೆ, ಅಹಂಕಾರ ವ್ಯಾಮೋಹಗಳಿವೆ, ಕಾಲ ಕರ್ಮಗಳಿವೆ, ಅಜ್ಞಾನ ಧೂಮ್ರ ಆವರಿಸಿದೆ. ದೇವಾಧಿದೇವನು ಈ ತಮಸ್ಸಿನ ಅಳವಿಗೆ ಸಿಲುಕದೆ ಅದರಾಚೆ ಅನಂತವಾಗಿ ವ್ಯಾಪಿಸಿದ್ದಾನೆ. ತಮಸ್ಸಿನ ಅಂತರ್ಯದಲ್ಲೆಲ್ಲ ಹಾಸು ಹೊಕ್ಕಾಗಿ ನೆಲೆಸಿದ್ದರೂ ಆ ತಮದ ಲೇಪ ದೇವನಿಗಿಲ್ಲ. ಆದುದರಿಂದ ಅವನು 'ತಮಸಃಪರಃ'.

(೯) ಪ್ರಯಾಣ ಕಾಲೇ, ಅಚಲೇನ ಮನಸಾ, ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್, (ತಂ ದೇವಂ) ಸಮನುಸ್ಮರೇತ್‌ಯಃ ಸಃ ತಂ ಪುರುಷಮುಪೈತಿಃ ಯೋಗದಲ್ಲಿ ಅಭಿರುಚಿಯುಳ್ಳ ಮನುಷ್ಯನು ಅಂತ್ಯಕಾಲದಲ್ಲಿ ಒಂದು ಏಕಾಂತ ಸ್ಥಾನಕ್ಕೆ ಹೋಗಿ ಆಸನಸ್ಥನಾಗಿ ಕುಳಿತುಕೊಳ್ಳಬೇಕು. ಬಾಹ್ಯ ವಿಷಯ ಚಿಂತನದಿಂದ ಮನಸ್ಸನ್ನು ಪರಾವೃತ್ತಗೊಳಿಸಿ, ಪ್ರಾಣವನ್ನು ಭ್ರೂಮಧ್ಯದಲ್ಲಿ ಸ್ಥಿರಗೊಳಿಸಬೇಕು. ತನ್ನ ಹೃನ್ಮಂದಿರದಲ್ಲಿ ತುಂಬಿದ್ದ ಪ್ರೇಮ ಜಲವನ್ನು ಆತ್ಮ ಪ್ರಭುವಿನ ಮೇಲೆ ಧಾರೆ ಎರೆಯಬೇಕು. ಮನಶ್ಶ್ರೋತವನ್ನು ದೇವ ಚರಣದಲ್ಲಿ ನಿರುದ್ಧಗೊಳಿಸಬೇಕು. ಆಗ ಬಾಹ್ಯ ಭಾನ ಅಡಗುವದು. ದೇಹ ಪ್ರಜ್ಞೆ ನಿಲ್ಲುವದು. ಇಂದ್ರಿಯಗಳು ಅಚಲವಾಗುವವು. ಮನಸ್ಸಿನ ತುಂಬ ದಿವ್ಯ ಆತ್ಮ ಮೂರುತಿ ತುಂಬಿಕೊಳ್ಳುವದು. ಬರ ಬರುತ್ತ ಆ ಮನಸ್ಸು ಆ ಅಮರ ಆತ್ಮನಲ್ಲಿ ಕರಗಿ ಹೋಗುವದು. ಆ ಮನಸ್ಸಿನೊಂದಿಗೆ ಜೀವ ಭಾವವು ಕೂಡ ಶಿವಾಲೀನವಾಗಿ ಬಿಡುವದು. ಇದೇ ಜೀವ ಪರಮರ ಐಕ್ಯ; ಯೋಗಿಯು ಪಡೆವ ಅವರ್ಣನೀಯ ಫಲ! ಅಮೃತರೂಪ ಪುರುಷನನ್ನು ಧ್ಯಾನಿಸಿ ಅದರಲ್ಲಿಯೇ ಸಮಾಲೀನನಾಗುವ ಭಾಗ್ಯ ಯೋಗಿಯದು!

ಸಂಬಂಧ:– ಪರಮ ಪವಿತ್ರವಾದ ದಿವ್ಯ ತತ್ತ್ವವನ್ನು ಸಂಕ್ಷೇಪತಃ ಹೇಳುವದಾಗಿ ಪರಮಾತ್ಮನು ಅಭಿವಚನ ನೀಡುತ್ತಾನೆ.

> ಯದಕ್ಷರಂ ವೇದವಿದೋ ವದಂತಿ ।
> ವಿಶಂತಿ ಯದ್ಯತಯೋ ವೀತರಾಗಾಃ ॥
> ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ।
> ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥೧೧॥

**ಅರ್ಥ:–** ವೇದವಿದಃ =ವೇದಜ್ಞರು ಯತ್ =ಯಾವುದನ್ನು ಅಕ್ಷರಂ=ಅವಿನಾಶಿ ಯೆಂದು ವದಂತಿ = ಹೇಳುತ್ತಾರೆಯೋ ವೀತರಾಗಾಃ = ವೈರಾಗ್ಯಶೀಲರಾದ ಯತಯಃ= ಯತಿಗಳು ಯತ್ = ಯಾವುದನ್ನು ವಿಶಂತಿ = ಪ್ರವೇಶಿಸುತ್ತಾರೆಯೋ, ಯತ್ = ಯಾವು ದನ್ನು ಇಚ್ಛಂತಃ = ಇಚ್ಛಿಸುತ್ತ ಬ್ರಹ್ಮಚರ್ಯಂ = ಬ್ರಹ್ಮಚರ್ಯವನ್ನು ಚರಂತಿ = ಆಚರಿ ಸುತ್ತಾರೆಯೋ ತತ್ ಪದಂ = ಆ ಪದವನ್ನು (ಪದ್ಯತೇ ಗಮ್ಯತೇ ಇತಿ ಪದಂ ಪ್ರಾಪ್ಯಂ= ಪ್ರಾಪ್ಯ ವಸ್ತುವು) ತೇ = ನಿನಗೆ ಸಂಗ್ರಹೇಣ =(ಸಂಕ್ಷೇಪತಃ) ಸಂಕ್ಷಿಪ್ತವಾಗಿ ಪ್ರವಕ್ಷ್ಯೇ = ಹೇಳುವೆ.

**ವಿವರಣೆ:-(೧)** ವೇದವಿದಃ ಯದಕ್ಷರಂ ವದಂತಿ; ಅಮೃತ ಸ್ವರೂಪದ ಅನುಭವ ಪಡೆದವರು ಋಷಿಗಳು. ಅವರ ಪವಿತ್ರ ನುಡಿಗಳೇ ವೇದ. ವೇದಗಳನ್ನು ಅಭ್ಯಸಿಸಿ, ಅವು ನಿರೂಪಿಸಿದ ಪಥದಲ್ಲಿ ಅಚೂಕಾಗಿ ನಡೆದು, ಸರ್ವ ಸಾಕ್ಷಿಯಾದ ಚಿತ್ ರವಿಯ ದರ್ಶನ ಪಡೆದವರು ವೇದವಿದರು; ಜೀವಾತ್ಮ ಭಾವ ನೀಗಿ ಪ್ರತ್ಯಗಾತ್ಮಾಭಿನ್ನ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡ ಅವರೇ ವೇದಾಂತ ವಿಜ್ಞಾನಿಗಳು! ಅವರ ಸ್ಥಿತಿಯನ್ನು ರೇಖಿಸುವ ಒಂದು ಮಂತ್ರ ಹೀಗಿದೆ;

"ಯಥಾ ನದ್ಯಸ್ಸ್ಯಂದಮಾನಾಸ್ಸಮುದ್ರೇऽಸ್ತಂ ಗಚ್ಛಂತಿ ನಾಮ ರೂಪೇ ವಿಹಾಯ
ತಥಾ ವಿದ್ವಾನ್ಪುಣ್ಯಪಾಪೇ ವಿಹಾಯ ಪರಾತ್ಪರಂ ಪುರುಷಮುಪೈತಿ ದಿವ್ಯಮ್॥"

ಯಾವ ರೀತಿ ಹರಿವ ನದಿಗಳು ತಮ್ಮ ನಾಮ ರೂಪುಗಳನ್ನು ಪರಿತ್ಯಜಿಸಿ ಸಮುದ್ರದಲ್ಲಿ ಅಸ್ತವಾಗುತ್ತವೆಯೋ ಅದೇ ರೀತಿ ವೇದವಿದನು ಪುಣ್ಯ ಪಾಪ ಗಳನ್ನು (ಪುಣ್ಯ ಪಾಪ ಭಾವಗಳನ್ನು) ತ್ಯಜಿಸಿ ಪರಾತ್ಪರನಾದ ದಿವ್ಯ ಪುರು ಷನನ್ನು ಒಂದುಗೂಡುತ್ತಾನೆ.

ಇಂಥ ವೇದವಿದರು ಯಾವ ಪರಮ ವಸ್ತುವನ್ನು ಅಕ್ಷರ, ಅವಿನಾಶಿ, ಅನಾ ದ್ಯನಂತ, ನಿತ್ಯ ಎಂದು ಮುಂತಾಗಿ ವರ್ಣಿಸುತ್ತಾರೆಯೋ ಅದು ಪರಮಾತ್ಮ!

**(೨) ವೀತರಾಗಾಃ ಯತಯಃ ಯದ್ ವಿಶಂತಿ:–** ವಿಷಯ ವ್ಯಾಮೋಹ ಇಲ್ಲದಿರುವದೇ ವೀತರಾಗ ಅಥವಾ ವಿರಾಗ. ಇದು ಐದು ಪ್ರಕಾರ:– (ಅ) ಯತ ಮಾನ ವಿರಾಗ:- ಸ್ವಪ್ರಯತ್ನದಿಂದ, ಅನೇಕ ಜನ್ಮಗಳ ಪುಣ್ಯಪರಿಪಾಕದಿಂದ ಅಥವಾ ಶ್ರುತಿ ಗುರುಗಳ ಪ್ರಭಾವದಿಂದ ಉತ್ಪತ್ತಿಯಾಗುವ ವಿರಾಗವು. (ಆ)ವ್ಯತಿ ರೇಕ ವಿರಾಗ:- ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಿಂದ ನಿವೃತ್ತವಾಗುವ ದರಿಂದ ಉಂಟಾಗುವ ವೈರಾಗ್ಯ. (ಇ) ಏಕೇಂದ್ರಿಯ ವಿರಾಗ:- ಮನಸ್ಸನ್ನು ಬಾಹ್ಯ ವಿಷಯಗಳ ಚಿಂತನೆಗೆ ತೊಡಗದಂತೆ ನಿರೋಧಿಸುವದರಿಂದ ಪ್ರಾಪ್ತ ವಾಗುವ ವೈರಾಗ್ಯ. (ಈ) ವಶೀಕಾರ ವಿರಾಗ:- ಸುತ್ತೆಲ್ಲ ಸ್ತ್ರೀ, ಧನ, ಮಿಷ್ಟಾನ್ನ, ಸುಗಂಧ, ಸಂಗೀತ ಮುಂತಾದ ಭೋಗೋಪಭೋಗಗಳಿರುವಾಗ ಅವುಗಳ ವಶ ನಾಗದೆ ಅವುಗಳನ್ನೇ ತನ್ನ ವಶ ಮಾಡಿಕೊಂಡಿರುವಿಕೆ. (ಉ) ಪರ ವಿರಾಗ:- ಮೇಲಿನ ನಾಲ್ಕು ವಿರತಿಗಳು ಅಂಗವಿಸಿದರೆ ಪ್ರಕೃತಿಯು ಒಲಿದು ಸರ್ವ ಸಿದ್ಧಿ

ಗಳನ್ನು ಈಯುತ್ತಾಳೆ. ಆ ಸಿದ್ಧಿಗಳ ಗೊಡವೆಗೆ ಹೋಗದೆ ಪ್ರಕೃತಿಯಾಚೆಗಿರುವ ಪುರುಷೋತ್ತಮನತ್ತ ಲಕ್ಷವೀಯುವದು.

ಈ ಐದು ಬಗೆಯ ವಿರಾಗಗಳನ್ನು ಮೈಗೂಡಿಸಿಕೊಂಡ ಪುರುಷರೇ ವೀತ ರಾಗದ ಯೋಗಿಗಳು. ಅವರು ಅನಾತ್ಮ ಪ್ರಪಂಚವನ್ನು ಪರಿತ್ಯಜಿಸಿ ಯಾವ ಯಥಾರ್ಥ ವಸ್ತುವಿನಲ್ಲಿ ಸಮಾವಿಷ್ಟರಾಗುತ್ತಾರೆಯೋ ಅಂಥ ವಸ್ತುವು ದೇವ.

(೩) ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ:- ಬ್ರಹ್ಮಚರ್ಯವೆಂದರೆ ವಿಷಯಗಳ ಅನುಪಭೋಗರೂಪ ತಪ. ದೇವನಿಂದ ವರವಾಗಿ ಬಂದ ದೇಹ ಇಂದ್ರಿಯ, ಮನ, ಬುದ್ಧಿ, ಭಾವಗಳನ್ನು ವಿಷಯಗಳಿಗಾಗಿ ವ್ಯಯಮಾಡದೆ ಪರಮಾತ್ಮನಿಗಾಗಿ ಮೀಸಲಾಗಿಡುವದು ತಪ. ತಪೋನಿಷ್ಠ ಪುರುಷನೇ ತಪಸ್ವಿ, ಬ್ರಹ್ಮಚಾರಿ! ಅವನ ದೇಹ ಮನಗಳು ಶುಚಿ. ಅವನ ಹೃದಯ ನಿರ್ಮಲ. ಶೀಲ ವಂತನಾದ ಅವನ ಸರ್ವಸ್ವವು ದೇವಾರ್ಪಿತ. ಅವನು ಕಣ್ತೆರೆದರೆ ದೇವನನ್ನೇ ಕಾಣುತ್ತಾನೆ; ಮಾತನಾಡಿದರೆ ವೇದ ಮಂತ್ರಗಳನ್ನೇ ನುಡಿಯುತಾನೆ; ಭಾವಿಸಿ ದರೆ ದೇವ ರೂಹನ್ನೇ ಚಿಂತಿಸುತ್ತಾನೆ. ಇಂಥ ಪರಮ ಬ್ರಹ್ಮಚರ್ಯರೂಪ ತಪ ಮಾಡುವ ಮಹಾನುಭಾವರು ಯಾವ ವಸ್ತುವನ್ನು ಬಯಸಿ ಶುಚಿಯಾದ ಬಾಳನ್ನು ಬದುಕತ್ತಾರೆಯೋ ಆ ಪವಿತ್ರ ವಸ್ತುವೇ ನಿರ್ಮಲಾತ್ಮ!

ಇದೇ ಆಶಯದ ಒಂದು ಮಂತ್ರ ಕಠೋಪನಿಷತ್ತಿನಲ್ಲಿದೆ.

"ಸರ್ವೇ ವೇದಾ ಯತ್ಪದಮಾಮನಂತಿ ।
ತಪಾಂಸಿ ಸರ್ವಾಣಿ ಚ ಯದ್ವದಂತಿ ॥
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ।
ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥"

ಎಲ್ಲ ವೇದಗಳು ಯಾವ ಪದವನ್ನು ಪ್ರತಿಪಾದಿಸುತ್ತವೆಯೋ, ಸರ್ವ ತಪಗಳು ಯಾವದನ್ನು ಹೇಳುತ್ತವೆಯೋ, ಯಾವದನ್ನು ಇಚ್ಛಿಸಿ ಬ್ರಹ್ಮಚರ್ಯವನ್ನು ಆಚರಿಸುತ್ತಾರೆಯೋ ಆ ಪದವನ್ನು ಸಂಕ್ಷೇಪವಾಗಿ ಹೇಳುತ್ತೇನೆ. ಓಂ ಎಂಬುದೇ ಈ ತತ್ತ್ವ. (೧-೨-೧೫).

ಭಗವಂತ:- "ಅರ್ಜುನ, ಯಾವ ಪರಾತ್ಪರ ತತ್ತ್ವವನ್ನು ಕುರಿತು ವೇದ ವಿದರು ಅಕ್ಷರವೆಂದು ವರ್ಣಿಸುತ್ತಾರೆಯೋ, ರಾಗದ್ವೇಷವಿಲ್ಲದ ಯತಿಗಳು ಭೋಗ ಪ್ರಪಂಚ ತೊರೆದು ಯಾವುದರಲ್ಲಿ ಪ್ರವೇಶಿಸುತ್ತಾರೆಯೋ, ಯಾವುದರ ಅಡಿಗಳಲ್ಲಿ ಮೀಸಲು ಅಳಿಯದ ದೇಹ ಮನಸ್ಸುಗಳನ್ನು ಬ್ರಹ್ಮಚಾರಿಗಳು ಸಮ ರ್ಪಿಸುತ್ತಾರೆಯೋ ಅದೇ ದೈವೀ ಪದ! ಅಮೃತ ಸ್ಥಲ! ಅದನ್ನು ನಿನಗೆ ಅತಿ ಸಂಕ್ಷೇಪವಾಗಿ ವಿವರಿಸುವೆ."

ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ॥

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಮ್ ॥೧೩॥**

**ಅರ್ಥ:–** ಸರ್ವದ್ವಾರಾಣಿ= ಸರ್ವ ಇಂದ್ರಿಯಗಳನ್ನು ಸಂಯಮ್ಯ = ನಿಯಮನ ಮಾಡಿ ಮನಃ= ಮನಸ್ಸನ್ನು ಹೃದಿ=ಹೃದಯದಲ್ಲಿ ನಿರುಧ್ಯ= ನಿರೋಧಮಾಡಿ, ಆತ್ಮನಃ= ತನ್ನ ಪ್ರಾಣಂ= ಪ್ರಾಣವನ್ನು ಮೂರ್ಧ್ನಿ= ಸಿರಸ್ಸಿನಲ್ಲಿ ಆಧಾಯ= ನಿಲ್ಲಿಸಿ ಯೋಗಧಾರಣಾಂ ಆಸ್ಥಿತಃ= ಧಾರಣ ಮತ್ತು ಧ್ಯಾನವಲ್ಲಿ ಸ್ಥಿತನಾಗಿ ॥೧೨॥ ಓಂ ಇತಿ= ಓಂ ಎಂಬ ಬ್ರಹ್ಮ ಏಕಾಕ್ಷರಂ= ಬ್ರಹ್ಮರೂಪ ಏಕಾಕ್ಷರವನ್ನು ವ್ಯಾಹರನ್= ಉಚ್ಚರಿಸುತ್ತ ಮಾಂ= ನನ್ನನ್ನು ಅನುಸ್ಮರನ್= ಸ್ಮರಿಸುತ್ತ, ದೇಹಂ=ದೇಹವನ್ನು ತ್ಯಜನ್= ಬಿಟ್ಟು ಯಃ= ಯಾವನು ಪ್ರಯಾತಿ =ಹೋಗುತ್ತಾನೆಯೋ ಸಃ= ಅವನು ಪರಮಾಂ ಗತಿಂ= ಪರಮ ಗತಿಯನ್ನು ಯಾತಿ= ಹೊಂದುತ್ತಾನೆ. ॥೧೩॥

**ವಿವರಣೆ:–** ತರುಣನಿಗೆ ಮದುವೆಯೆಂದರೆ ಹರ್ಷ. ಕ್ಷತ್ರಿಯನಿಗೆ ಯುದ್ಧವೆಂದರೆ ಉತ್ಸಾಹ. ಧೀಮಂತರಿಗೆ ಕಾವ್ಯಶಾಸ್ತ್ರಗಳೆಂದರೆ ಸಂತಸ. ಅದರಂತೆ, ಅರಿತ ಸಾಧಕನಿಗೆ ಮರಣವೆಂದರೆ ಉಮ್ಮೇದ. "ಮರಣವೇ ಮಹಾನವಮಿ" ಎಂದರು ಶರಣರು. ಮರಣವನ್ನು ಇಷ್ಟು ಎದೆಗಾರಿಕೆಯಿಂದ ಹಾಗು ಸಂತೋಷದಿಂದ ಎದುರಿಸುವ ಶಕ್ತಿ ಬರಲೆಂದೇ ಭಗವಂತನು ವಿವಿಧ ರೀತಿಯಿಂದ ದೇಹ ಬಿಡುವ ವಿಧಾನಗಳನ್ನು ಹೇಳುತ್ತಿದ್ದಾನೆ. ಹಿಂದಿನ ಮಂತ್ರದಲ್ಲಿಯಂತೆಯೇ ಪ್ರಸ್ತುತ ಮಂತ್ರದಲ್ಲಿ ಯೋಗಸಾಧನೆಯ ಮೂಲಕ ದೇಹ ಬಿಡುವ ಕ್ರಮವನ್ನು ವಿವರಿಸುತ್ತಾನೆ.

(೧) **ಸರ್ವದ್ವಾರ ಸಂಯಮನ:-** ವಿಷಯಗಳನ್ನು ಪರಿಗ್ರಹಿಸುವ ದ್ವಾರಗಳೆಂದರೆಯೇ ಇಂದ್ರಿಯಗಳು. ಅವುಗಳಲ್ಲಿ ಅಪ್ರತಿಹತ ಶಕ್ತಿಯಿದೆ; ಮಹಾ ತಪಸ್ವಿಗಳನ್ನೂ ವಿಚಲಿಗೊಳಿಸಬಲ್ಲ ಬಲಾಢ್ಯ ಸಾಮರ್ಥ್ಯವಿದೆ. ಒಂದೊಂದೇ ಇಂದ್ರಿಯವು ಜೀವಿಗಳ ಪ್ರಾಣ ಹೀರಬಲ್ಲದು. ಉದಾ: ಶಬ್ದೇಂದ್ರಿಯವು ಹರನ ನಡುಗಿಸಿದ ಹಾವನ್ನು ಪರಾಧೀನಗೊಳಿಸುತ್ತದೆ. ಚರ್ಮೇಂದ್ರಿಯವು ಬಲಿಷ್ಠ ಆನೆಯನ್ನು ಗಾಯಗೊಳಿಸಿ ಕೊಲ್ಲುತ್ತದೆ. ನೇತ್ರೇಂದ್ರಿಯವು ಪತಂಗವನ್ನು ದೀಪದಲ್ಲಿ ಕೆಡವುತ್ತದೆ. ರಸನೇಂದ್ರಿಯವು ಸ್ವೇಚ್ಛೆಯಾಗಿ ಈಜಾಡಿಕೊಂಡಿರುವ ಮೀನವನ್ನು ಗಾಳಕ್ಕೆ ಸಿಲುಕಿಸುತ್ತದೆ. ಘ್ರಾಣೇಂದ್ರಿಯವು ಭೃಂಗವನ್ನು ಪುಷ್ಪಕೋಶದಲ್ಲಿ ಬಂಧಿಸಿ ಕೊಲ್ಲುತ್ತದೆ. ಮನುಷ್ಯನು ಮಾತ್ರ ಐದು ಆನೆಗಳ ಮಧ್ಯ ಸಿಲುಕಿದ ಬಾಳೆಯ ಗಿಡದಂತೆ ಐದೂ ಇಂದ್ರಿಯಗಳ ನಡುವೆ ಸಿಕ್ಕು ಬಿದ್ದಿದ್ದಾನೆ. ಅವನ ಗತಿ ಏನಾದೀತು–ಊಹಿಸಿಯೇ ಅರಿಯಬೇಕು. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಗೆ ಮನಸೋತಿದೆ ಪುರುಷ ವರ್ಗವೆಲ್ಲ. ಬುದ್ಧಿವಂತ, ವಿದ್ಯಾವಂತ, ಶಕ್ತಿವಂತ– ಎಲ್ಲರೂ ವಿಷಯದ ದಾಸರಾಗಿದ್ದಾರೆ. ಸ್ವಾಭಿಮಾನ, ಸ್ವಾತಂತ್ರ್ಯ, ಸ್ವಾವಲಂಬನೆಗಳನ್ನು ಕಳೆದುಕೊಂಡಿದ್ದಾರೆ.

ಇಂಥ ಐದೂ ಇಂದ್ರಿಯಗಳನ್ನು ಭೌತ ವಿಷಯಗಳಿಂದ ಪರಾವೃತ್ತಗೊಳಿಸಿ ಕೇವಲ ದೇವಶಬ್ದ, ದೇವಸ್ಪರ್ಶ, ದೇವರೂಪ, ದೇವರಸ, ದೇವಗಂಧಗಳನ್ನು ಆಸ್ವಾದಿಸುವಲ್ಲಿ ನಿಯೋಗಿಸಿದರೆ ಅದೇ ಇಂದ್ರಿಯ ಸಂಯಮನ! ಇಂದ್ರಿಯ ಪ್ರತ್ಯಾಹಾರ!

(೨) ಮನೋ ನಿರೋಧ:- ಡೋಲು ಬಾರಿಸುವದು ನಿಂತಾಗ ಡೊಂಬರವನ ಕಸರತ್ತೇ ನಿಲ್ಲುತ್ತದೆ. ಹಾಗೆ ಇಂದ್ರಿಯ ವ್ಯವಹಾರ ನಿಂತೊಡನೆಯೇ ಮನದ ಚಾಂಚಲ್ಯ ಅಡಗುತ್ತದೆ. ನಿಶ್ಚಲವಾದ ಮನಸ್ಸು ಹೃದಯ ಮಂದಿರದಲ್ಲಿ ನಿರುದ್ಧಗೊಳ್ಳುತ್ತದೆ. ಇದು ಮನದ ಪ್ರತ್ಯಾಹಾರ.

(೩) ಪ್ರಾಣ ನಿರೋಧ:– ನೈಸರ್ಗಿಕವಾಗಿ ಸಂಚರಿಸುವ ಬಾಹ್ಯ ಪ್ರಾಣವನ್ನು ಸುಷುಮ್ನಾ ನಾಡಿಯ ಮೂಲಕ ಬ್ರಹ್ಮಚಕ್ರದತ್ತ ಒಯ್ದು ಅಲ್ಲಿ ಅದನ್ನು ಕುಂಭಕಗೊಳಿಸುವದು ಪ್ರಾಣದ ಪ್ರತ್ಯಾಹಾರ ಅಥವಾ ಪ್ರಾಣದ ನಿರೋಧ.

(೪) ಯೋಗ ಧಾರಣಾ:- ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ, ಬ್ರಹ್ಮರಂಧ್ರ, ಶಿಖಾ ಹಾಗು ಪಶ್ಚಿಮ ಎಂಬ ಪವಿತ್ರವಾದ ಒಂಭತ್ತು ಸ್ಥಾನಗಳು ದೇಹದಲ್ಲಿವೆ. ಬಾಹ್ಯೇಂದ್ರಿಯ ಸಂಪರ್ಕದಿಂದ ಹಿಮ್ಮುಖವಾದ ಮನಸ್ಸನ್ನು ಈ ಸ್ಥಾನಗಳಲ್ಲಿ ವಿಧಿವತ್ತಾಗಿ ತಡೆಯುವದು ಧಾರಣ. ಆ ಸ್ಥಾನಗಳಲ್ಲಿ ದೇವಮೂರ್ತಿಯನ್ನು ಭಾವಿಸಿ ಆ ಮೂರ್ತಿಗಳಲ್ಲಿ ಮನಸ್ಸನ್ನು ಸ್ಥಿರಗೊಳಿಸುವದು ಧ್ಯಾನ. ಧಾರಣ, ಧ್ಯಾನ– ಈ ಎರಡೂ ಕ್ರಿಯೆಗಳಿಗೆ ಯೋಗಧಾರಣ ಎಂದು ನಾಮ.

(೫) ಓಂ ಇತಿ ಏಕಾಕ್ಷರಂ ಬ್ರಹ್ಮ:– ತಸ್ಯ ವ್ಯಾಹರಣ:– ಓಂ ಇದು ಏಕಾಕ್ಷರ ಮನುವು. ಸರ್ವ ಮಂತ್ರಗಳ ಆದಿ. ವೇದ ವೇದಾಂತಗಳ ತುಂಬ ಹರವಿಕೊಂಡ ಪಾವನ ಪದ. ವಿಶ್ವಾತ್ಮನ ಪ್ರಪ್ರಥಮ ಉಸಿರು. ಮೂರವಸ್ಥೆ ದಾಂಟಿ ದೇವ ಮಂಡಲದಲ್ಲಿ ಹೆಜ್ಜೆ ಹಾಕಿದಾಗ ಈ ಮಂತ್ರ ಧ್ವನಿ ಕೇಳಿ ಬರುತ್ತದೆ. ಈ ಮಂತ್ರಾರ್ಥದ ವ್ಯಾಪ್ತಿ ಅಪಾರ. ನಿಷ್ಕಲ ಲಿಂಗವಾದ ಬ್ರಹ್ಮ. ಮಹಾಲಿಂಗವಾದ ಅಧಿದೈವ, ಚಿಲ್ಲಿಂಗವಾದ ಅಧಿಯಜ್ಞ, ಜೀವ ಲಿಂಗವಾದ ಅಧ್ಯಾತ್ಮ, ಅಜಾಂಡವಾದ ಅಧಿಭೂತ ಎಲ್ಲವೂ ಓಂಕಾರ ಮಂತ್ರಾರ್ಥದ ಕಕ್ಷೆಯಲ್ಲಿವೆ. ಸಕಲ ಸಕಲಾಸಕಲ ಅಸಕಲ, ಆಕಾರ ಆಕಾರ-ನಿರಾಕಾರ ನಿರಾಕಾರ–ಏನಿರುವದೆಲ್ಲ ಓಂಕಾರ! ಅದು ಜ್ಯೋತಿ, ಅಮರ ದೀವಿಗೆ. ಅದುವೇ ವಿಶ್ವಪ್ರಾಣ, ವಿಶ್ವವಸ್ತು. ವಿಶ್ವಮೂಲ. ಇಷ್ಟೆಲ್ಲ ಅರ್ಥದೊಂದಿಗೆ ಓಂಕಾರ ಮಂತ್ರ ನುಡಿಯುವದು ಏಕಾಕ್ಷರ ವ್ಯಾಹರಣವಾಗಿದೆ. ಇದು ಪ್ರಣವೋಪಾಸನೆ.

(೬) ಮಾಂ ಅನುಸ್ಮರನ್:– "ಪಾರ್ಥ, ಯಾವ ಸಾಧಕನು ಪ್ರಶಾಂತ ಸ್ಥಾನ ಸೇರಿ ಪ್ರಾಪಂಚಿಕ ವಿಷಯಗಳಿಂದ ಇಂದ್ರಿಯಗಳನ್ನು ಒಳಸೆಳೆದು ಮನ

ಸ್ಸನ್ನು ಹೃದಯ ಮಂದಿರದಲ್ಲಿ ತಡೆದು ಪ್ರಾಣವನ್ನು ಕುಂಭಕಮಾಡಿ ಬಳಿಕ ಪ್ರತ್ಯಾಹೃತ ಮನಸ್ಸನ್ನು ವಿಶಿಷ್ಟ ಸ್ಥಾನಗಳಲ್ಲಿ ದೇವ ಧ್ಯಾನಕ್ಕೆ ತೊಡಗಿಸಿ, ಓಂಕಾರ ಮಂತ್ರೋಚ್ಚಾರ ಮಾಡುತ್ತ ನಿಷ್ಕಲಂಕ ನಿರಾಮಯನಾದ ನನ್ನನ್ನು ಸ್ಮರಿಸುತ್ತಾನೆಯೋ ಅವನು ನಿಶ್ಚಿತವಾಗಿಯೂ ದೇಹ ತೊರೆದ ನಂತರ ಪರಮ ಗತಿಯನ್ನು ಹೊಂದುತ್ತಾನೆ."

ಸಾಯುವಾಗಿನ ಭಾವವೇ ಪುನರ್ಜನ್ಮವನ್ನು ನಿರ್ಧರಿಸುವದರಿಂದ ಪಾವನ ಪರಿಸರದಲ್ಲಿಯೇ ಪ್ರಾಣ ಬಿಡಬೇಕು. ಸ್ವಾರ್ಥಿಗಳಾದ ಬಂಧು ಬಾಂಧವರನ್ನು ದೂರಿಡಬೇಕು. ತನ್ನ ಸುತ್ತೆಲ್ಲ ಸಂತ ಶರಣರೇ ಕುಳಿತಿರಬೇಕು. ವಾತಾವರಣದ ತುಂಬ ಪ್ರಣವ ನಿನಾದವೇ ಗುಂಜಿಸುತ್ತಿರಬೇಕು. ತಾನು ಆ ಪ್ರಣವ ಮಂತ್ರ ಧ್ವನಿಯನ್ನು ಅನುಸರಿಸಿ ಅಂತರಂಗದಲ್ಲಿ ಅಡಗಿರುವ ಪರ ಮಾತ್ಮನತ್ತ ಯಾತ್ರೆ ಪ್ರಾರಂಭಿಸಬೇಕು. ಆ ಮಂತ್ರವು ನಿಧಾನವಾಗಿ ಜೀವ ನನ್ನು ಭೌತ ಪರಿಧಿ, ಮನೋ ಮಂಡಲ, ಭಾವ ಕ್ಷೇತ್ರ ಹಾಗು ಬುದ್ಧಿ ಸೀಮೆ ಗಳ ದಾಟಿಸಿ ಪರಮ ಪುರುಷನತ್ತ ಕರೆದೊಯ್ಯುತ್ತದೆ. ಪುರುಷ ದರ್ಶನದ ಅನಂತರ, ಆ ಜೀವಾತ್ಮನನ್ನು ಹಿರಣ್ಯಗರ್ಭ (ಮಹಾಲಿಂಗ) ಲೋಕಕ್ಕೆ ಕರೆ ದೊಯ್ಯುವದು. ಅದರ ಆಚೆ ಪ್ರಜ್ವಲಿಸುವ ನಿಷ್ಕಲಲಿಂಗದ ಸಾಕ್ಷಾತ್ಕಾರ ಮಾಡಿಸಿ ತಾನು ಮಾಯವಾಗುವದು. ಜೀವನು ದೇವನಲ್ಲಿ ಒಂದಾಗುವನು. ಇದೇ ಪರಮುಕ್ತಿ.

ಸಂಬಂಧಃ– ಭಗವಂತನು ಯಾರಿಗೆ ಸುಲಭ?

ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।
ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥೮.೪॥

ಅರ್ಥ:– ಅನನ್ಯ ಚೇತಾಃ ಯಃ= (ನಾಸ್ತಿ ಅನ್ಯಸ್ಮಿನ್ ಚೇತಃ ಯಸ್ಯ ಸಃ) ಅನನ್ಯ ಚಿತ್ತನಾದ ಯಾವನು, ಮಾಂ =ನನ್ನನ್ನು ನಿತ್ಯಶಃ= ಜೀವಾವಧಿ, ಸತತಂ= ನಿರಂತರ, ಸ್ಮರತಿ = ಸ್ಮರಿಸುತ್ತಾನೆಯೋ ತಸ್ಯನಿತ್ಯಯುಕ್ತಸ್ಯ ಯೋಗಿನಃ =ನಿತ್ಯ ಯುಕ್ತನಾದ ಆ ಯೋಗಿಗೆ, ಅಹಂ= ನಾನು ಸುಲಭಃ =ಸುಲಭನು.

ವಿವರಣೆ:– ಮನೆ ಕಟ್ಟುವದು ವಸ್ತ್ರ ನೇಯುವದು ಯಾವ ಕೆಲಸಕ್ಕಾ ದರೂ ಕಾರಣ (ಸಲಕರಣ) ಸಾಮಗ್ರಿ ಬೇಕು. ಅದೇ ರೀತಿ ಪ್ರಣವೋಪಾಸ ನೆಗೂ ಕೂಡ ವಿಶಿಷ್ಟ ಸಲಕರಣಗಳು ಆಗತ್ಯ. ಅವು ಹೀಗಿವೆ: (೧) ಶ್ರದ್ಧಾ: ಗುರು ದೇವರು ಮಂತ್ರ ಮತ್ತು ಆತ್ಮಬಲದಲ್ಲಿ ಪೂರ್ಣ ವಿಶ್ವಾಸ. (೨) ಸಾಮರ್ಥ್ಯ: ಪರಮಾತ್ಮನ ದಿವ್ಯಾವತರಣವನ್ನು ಸಹಿಸಬಲ್ಲ ದೈಹಿಕ ಮಾನಸಿಕ ಶಕ್ತಿ. (೩) ಸ್ಮೃತಿ: ಶ್ರೀ ಗುರುವು ನೀಡಿದ ಆತ್ಮ ಜ್ಞಾನವನ್ನು ಮರೆಯದಂತೆ ಕಾಪಾಡಿಕೊಂಡಿರುವದು. (೪) ಸಮಾಧಿ: ಮನಸ್ಸಿನ ಪ್ರವಾಹವನ್ನು ಅವ್ಯಾಹತ ವಾಗಿ ಧ್ಯೇಯ (ದೇವ) ದತ್ತ ಹರಿಸುವದು. (೫) ಪ್ರಜ್ಞಾ:- ದಿವ್ಯ ಪುರುಷನ

ಪವಿತ್ರ ಮೂರ್ತಿಯನ್ನು ಅಂತಃಕರಣದಲ್ಲಿ ಸುಸ್ಥಿರವಾಗಿ ನೆಲೆಗೊಳಿಸುವದು. ಪಂಚವಿಧ ಸಾಧನದೊಂದಿಗೆ ಮಾಡಬೇಕಾದ ಪ್ರಣವೋಪಾಸನಾವಿಧಾನವನ್ನು ಈಗ ಹೇಳಲಾಗುವದು.

(೧) ಅನನ್ಯ ಚೇತಸ್:– ಆತ್ಮನಲ್ಲಿ ರತವಾದ ಮನಸ್ಸು ಅನನ್ಯ ಚೇತಸ್. ಆತ್ಮಾತಿರಿಕ್ತ ಪದಾರ್ಥಗಳಲ್ಲಿ ರತವಾದ ಮನಸ್ಸು ಅನ್ಯಚೇತಸ್; ಇದು ಬಹಿರ್ಮುಖಿ. ವಿಷಯಾಸಕ್ತ. ಹೃದಯ ಕಮಲದ ಬಹಿರ್ದಳಗಳಲ್ಲಿಯೇ ಓಡಾಡುವ ಈ ಮನಸ್ಸುಳ್ಳವನು ಬದ್ಧ ಸಂಸಾರಿ, ಪ್ರಪಂಚ-ಲೋಲ. ಹೃದಯದ ಬಾಹ್ಯ ದಳಗಳ ಬಿಟ್ಟು ಅಂತರ್ದಳಕ್ಕಿಳಿದ ಮನಸ್ಸು ಪವಿತ್ರ. ವಿಷಯಗಳಿಂದ ಹಿಮ್ಮುಖವಾದ ಆ ಮನಸ್ಸಿನಲ್ಲಿ ಸೋಹಂ– ಪರಮಾತ್ಮನೇ ನಾನು ಎಂಬ ನಿರ್ಮಲ ಭಾವವು ಉದಿಸುವದು. ಈ ಭಾವವು ಗಟ್ಟಿಗೊಂಡರೆ 'ಸ' 'ಹ' ಗಳು ಕರಗಿ ಕೇವಲ ಓಂಕಾರವೊಂದೇ ಉಳಿಯುವದು. ಅದರ ನುತಿಯಲ್ಲಿ ತೊಡಗಿದ ಜೀವಾತ್ಮನು ತನ್ನ ಮನಸ್ಸನ್ನು ಹೃದಯ ಕರ್ಣಿಕೆಯಲ್ಲಿ ಸೇರುವಂತೆ ಪ್ರೇರಣೆ ನೀಡುತ್ತಾನೆ. ಅವನ ಇಚ್ಛಾನುಸಾರ ಆ ಸಂಯತ ಮನವು ಏಕಧಾರೆಯಾಗಿ ಹೃತ್ಕಮಲದ ಕರ್ಣಿಕೆಯಲ್ಲಿ ಪ್ರವೇಶಿಸುವದು. ಆಗ ರಮ್ಯ ದೃಶ್ಯದ ದರ್ಶನ! ಲಕ್ಷ ಲಕ್ಷ ಸೂರ್ಯರಷ್ಟು ಪ್ರಕಾಶ ಪುಂಜವಾದ ಪ್ರಣವಾತ್ಮನ ಸಾಕ್ಷಾತ್ಕಾರ! ನಿಧಾನವಾಗಿ ಮನಸ್ಸು ಆ ದಿವ್ಯ ಪ್ರಕಾಶದಲ್ಲಿ ಕರಗಿ ಬಿಡುವದು; ಜೀವನು ನುತಿಸುತ್ತಿದ್ದ ಓಂಕಾರ ಮಂತ್ರವು ಶಾಂತವಾಗುವದು; ಜೀವನು ಪ್ರಣವಾರ್ಥದಲ್ಲಿ ಸಮರತಿ ಪಡೆಯುವನು! ಮುಂಡಕೋಪನಿಷತ್ತಿನ ಒಂದು ಮಂತ್ರದ ಆಶಯ ಹೀಗೆಯೇ ಇದೆ:

"ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥"

ಪ್ರಣವವು ಧನುಷ್ಯ, ಮನಸ್ಸು ಬಾಣ, ಬ್ರಹ್ಮವು ಲಕ್ಷ್ಯ. ಬಹು ಜಾಗರೂಕತೆಯಿಂದ (ಏಕಾಗ್ರ ಚಿತ್ತನಾಗಿ) ಗುರಿಯನ್ನು ವೇಧಿಸಬೇಕು. ಬಾಣವು ಗುರಿಯಲ್ಲಿ ಸಿಕ್ಕಿಕೊಳ್ಳುವಂತೆ ಮನಸ್ಸು ಆ ಬ್ರಹ್ಮದೊಂದಿಗೆ ತನ್ಮಯವಾಗಬೇಕು. (ಮುಂಡಕ ೨-೨-೪).

ಹದೆ ಏರಿಸಿ ಬಾಣ ಹೂಡಿ ಗುರಿ ಹಿಡಿದು ನಿಂತಾಗ ಅರ್ಜುನನಿಗೆ ಗುರಿಯೊಂದನ್ನು ಬಿಟ್ಟು ಮತ್ತೇನೂ ಕಾಣುತ್ತಿರಲಿಲ್ಲ. ಅದು ಅನನ್ಯ (ಏಕಾಗ್ರ) ಚಿತ್ತದ ಮಾದರಿ. ಅಷ್ಟೇ ಏಕಾಗ್ರತೆ ಆತ್ಮಸಾಧಕನಿಗೆ ಅವಶ್ಯ. ಪ್ರಣವ ಸಾಧನೆಗೆ ಕುಳಿತನೆಂದರೆ ಬಾಹ್ಯ ಪರಿಸರ, ದೇಹ, ಇಂದ್ರಿಯ ಮುಂತಾದವುಗಳ ಕಲ್ಪನೆ ಅಡಗಿ ಮನಶ್ಚಕ್ಷುವಿನೆದುರು ಧ್ಯೇಯ ಮೂರ್ತಿಯಾದ ಪ್ರತ್ಯಗಾತ್ಮ ಚೈತನ್ಯ ಜ್ಯೋತಿಯೊಂದೇ ಕಾಣಬೇಕು. ಹಾಗಾದರೆ ಅದಕ್ಕೆ ಅನನ್ಯ ಚೇತಸ್ ಎನ್ನುತ್ತಾರೆ.

ಅನನ್ಯ ಚೇತಸ್ಸು ಸಾಧನೆಯ ಜೀವಾಳ. ಅದಿಲ್ಲದೆ ಏನೂ ಸಿದ್ಧಿಸದು.

ದೇವ ದರ್ಶನ ಕೈಗೂಡದು, ಏಕೆಂದರೆ, ದೇವನತ್ತ ಸಾಗಿದ ಮಾರ್ಗ ಸುಗಮ ವಿಲ್ಲ. ಮಾರ್ಗದಲ್ಲಿ ಅನೇಕ ನೃತ್ಯ ವಾಟಿಕೆಗಳಿವೆ; ಸುಗಂಧ ಲತಾ ಮಂಟಪಗಳು ನಿರ್ಮಿಸಲ್ಪಟ್ಟಿವೆ. ಹೆಜ್ಜೆ ಹೆಜ್ಜೆಗೊಂದು ಸುರಸ ಭೋಜನಾಲಯ! ನೋಟ ಮಾತ್ರದಿಂದ ಮನಸ್ಸೆಳೆವ ಯುವತಿಯರ ಮೇಳಗಳು! ಬಹು ಜನ ದೇವ ಯಾತ್ರಿಕರು ಈ ವಿಷಯವಾಟಿಕೆಗಳಲ್ಲಿ ಬೀಡು ಬಿಡುತ್ತಾರೆ. ತಮ್ಮ ಧ್ಯೇಯ ವನ್ನು ಮರೆತೇ ಕೂಡ್ರುತ್ತಾರೆ. ಏಕೆಂದರೆ ಅವರಲ್ಲಿ ಅನನ್ಯ ಚಿತ್ತು ಇಲ್ಲ.

ಬಹು ಜಾಣನಾದ ಸಾಧಕ ಮಾತ್ರ ಮನಸ್ಸನ್ನು ಅತ್ತ ಇತ್ತ ಹರಿ ಬಿಡದೆ, ಅನನ್ಯ ಭಾವಿಯಾಗಿ ಯಾತ್ರೆ ಸಾಗಿಸುತ್ತಾನೆ. ಮಧ್ಯ ಅಲ್ಲಲ್ಲಿ ಕಾಣಬರುವ ವಿಲಾಸ ಮಂದಿರಗಳಲ್ಲಿ ಸಾವಿರಾರು ಹಿರಿಯ ಜನ ವಿಶ್ರಮಿಸಿರುವದ ಕಂಡು ಆತ ಪ್ರಶ್ನಿಸುತ್ತಾನೆ! "ಎಪ್ಪತ್ತೋ . ಎಂಭತ್ತೋ ವರುಷಗಳ ಮುಂಚೆಯೇ ದೇವ ಯಾತ್ರೆಗಾಗಿ ಹೊರಟು ಬಂದ ನೀವು ಇನ್ನೂ ಇಲ್ಲೇ ಇರುವಿರಲ್ಲ . ಸ್ತ್ರೀ ಪುತ್ರ ಧನ ಕನಕಗಳ ಮಧ್ಯ? ಇಲ್ಲಿಂದ ದೇವ ತಾಣ ಬಹುದೂರ; ಹೊರಡುವ ದಿಲ್ಲವೇ? ಶಕ್ತಿ ಕುಂದುವ ಮುನ್ನ ಯಾತ್ರೆ ಮುಗಿಯಬೇಕಲ್ಲ?" "ಏನು ಯಾತ್ರೆ? ಎಲ್ಲಿ ದೇವರು? ಅದೆಲ್ಲ ನಿನ್ನ ಭ್ರಮೆ. ಅಷ್ಟು ದೂರ ಹೋಗಿ ಯಾರು ಏನ ಗಳಿಸಿದ್ದಾರೆ. ಸುಮ್ಮನೆ ನಮ್ಮೊಂದಿಗೆ ಇಲ್ಲಿ ಉಳಿದುಕೊ. ಮನಸಾರೆ ಈ ವಿಷಯ ಗಳ ಭೋಗಿಸು!" ಇದು ಅವರ ಪ್ರತಿಕ್ರಿಯೆ. ಅಂಥ ಭೋಗ ಜೀವಿಗಳ ಒತ್ತಾಯದ ಕರೆ, ವಿಷಯಗಳ ಮನೋಹರ ರೂಪು, ಮನಸ್ಸಿನ ಸಹಜ ಎಳೆತ ವಿಲ್ಲವನ್ನು ಎದುರಿಸಿ ತನ್ನ ಯಾತ್ರೆಯನ್ನು ಮುಂದುವರಿಸುವದೆಂದರೇನು ಸಹ ಜವೇ? ಅದು ಅನನ್ಯ ಚಿತ್ತದ ಸಾಧಕನಿಗೆ ಮಾತ್ರ ಸಾಧ್ಯ.

(೨) ಸತತಂ ನಿತ್ಯಶಃ ನಿತ್ಯಯುಕ್ತಃ ತಸ್ಯಾಹಂ ಸುಲಭಃ : "ಪಾರ್ಥ, ಅನ್ಯತ್ರ ಲಕ್ಷವಿಡದೆ ಯಾವನು ನನ್ನನ್ನೇ ಸಂತತವಾಗಿ (ಜೀವನಾವಧಿ). ನಿತ್ಯ (ಒಂದು ನಿಮಿಷ ಬಿಡದೆ) ಸ್ಮರಿಸುತ್ತಾನೆಯೋ, ಯುಕ್ತಾಹಾರ-ವಿಹಾರ-ನಿದ್ರಾ ಉಳ್ಳವನಾಗಿ ನನ್ನತ್ತ ಬರುತ್ತಾನೆಯೋ, ತನ್ನ ಮನಸ್ಸನ್ನು ನನ್ನಲ್ಲಿಯೇ ನಿರುದ್ಧಗೊಳಿಸುತ್ತಾನೆಯೋ ಅವನು ನಿಜ-ಯೋಗಿ. ಅವನಿಗೆ ನಾನು ಸುಲಭ!"

ಸಂಬಂಧ:- ಪರಮಾತ್ಮ ಪದವನ್ನು ಹೊಂದಿದವರಿಗೆ ಪುನರ್ಜನ್ಮವಿಲ್ಲ.

ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।
ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥೧೫॥

**ಅರ್ಥ:**- ಪರಮಾಂ= ಶ್ರೇಷ್ಠವಾದ ಸಂಸಿದ್ಧಿಂ =ಮುಕ್ತಿಯನ್ನು ಗತಾಃ= ಹೊಂದಿ ರುವ ಮಹಾತ್ಮಾನಃ =ಮಹಾತ್ಮರು ಮಾಂ= ನನ್ನನ್ನು ಉಪೇತ್ಯ= ಸೇರಿ ದುಃಖಾಲಯಂ= ದುಃಖಕ್ಕೆ ಆಸ್ಪದವಾದ ಅಶಾಶ್ವತಂ= ಶಾಶ್ವತವಲ್ಲದ ಪುನರ್ಜನ್ಮ= ಪುನರ್ಜನ್ಮವನ್ನು ನ ಆಪ್ನುವಂತಿ= ಹೊಂದರು.

**ವಿವರಣೆ:**- ಜನ್ಮವು ಸುಖದ ಸುಪ್ಪತ್ತಿಗೆಯಲ್ಲ, ದುಃಖ-ಶರಶ-ಯನ!

ಬೆಳೆದ ಮಗಳಿದ್ದ ಮನೆಗೆ ವರಗಳ ಕಾಟ ತಪ್ಪಿದ್ದಲ್ಲ, ಹಾಗೆ, ಜನ್ಮವಿರುವವರೆಗೆ ನೂರಾರು ತಾಪಗಳು ಪೀಡಿಸುವವು. ದೈಹಿಕ ರೋಗ, ಮಾನಸಿಕ ವ್ಯಾಧಿ, ಭೌತಿಕ ಕುಂದು-ಕೊರತೆಗಳು ಜೀವನನ್ನು ವಿಷ್ಟಲಗೊಳಿಸುವವು. ಜನ್ಮಕ್ಕೆ ಮೃತ್ಯುವಂತು ಕೊನೆಗೆ ಬಲಾಢ್ಯ ವೈರಿ. ಅವನ ಕೈಯಿಂದ ಪಾರಾಗುವ ಜೀವರೇ ಇಲ್ಲ ಎಂದರೂ ನಡೆದೀತು. ಒಟ್ಟಿನಲ್ಲಿ ಜನ್ಮವು ದುಃಖಾಲಯ!

ಭಗವಂತ:– ಅರ್ಜುನ, ಯಾವ ಮನುಷ್ಯನು ಪರಮ ಪುರುಷಾರ್ಥವಾದ ಮುಕ್ತಿಯನ್ನು ಹೊಂದಿದ್ದಾನೆಯೋ, ಅವನು ಸುಖ ರೂಪನಾದ ನನ್ನನ್ನೇ ಆಶ್ರಯಿಸಿದುದರಿಂದ ಮತ್ತೆ ಘೋರ ಜನ್ಮವನ್ನು ಪಡೆಯುವದಿಲ್ಲ. ಅಂದರೆ ಮತ್ತೊಂದೂ ಜನ್ಮ ತಾಳುವದಿಲ್ಲ."

ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥೧೬॥

ಅರ್ಥ:– ಆಬ್ರಹ್ಮಭುವನಾತ್= ಬ್ರಹ್ಮಲೋಕದವರೆಗಿನ, ಲೋಕಾಃ = ಲೋಕಗಳು, ಪುನರಾವರ್ತಿನಃ= ಮತ್ತೆ ಬರುವಂಥವುಗಳು, ತು= ಆದರೆ, ಕೌಂತೇಯ= ಅರ್ಜುನ, ಮಾಂ= ನನ್ನನ್ನು ಉಪೇತ್ಯ= ಹೊಂದಿ, (ಇರುವವರಿಗೆ) ಪುನರ್ಜನ್ಮ= ಪುನರ್ಜನ್ಮವು ನ ವಿದ್ಯತೇ= ಇರುವದಿಲ್ಲ.

ವಿವರಣೆ:– (೧) ಆಬ್ರಹ್ಮ ಭುವನಾಲ್ಲೋಕಾಃ:– ಮನುಷ್ಯನು ಬದುಕುತ್ತಿರುವದು ಭೂಲೋಕ. ಇದರ ಮೇಲೆ ಉತ್ತರೋತ್ತರ ಶ್ರೇಷ್ಠವಾದ ಅನೇಕ ಲೋಕಗಳಿವೆ. ಈ ಲೋಕಗಳ ಮಾಲಿಕೆಯಲ್ಲಿ ಅಂತಿಮ ಮತ್ತು ಶ್ರೇಷ್ಠತಮವಾದುದು ಬ್ರಹ್ಮಲೋಕ. ಈ ಸರ್ವ ಲೋಕಗಳು ಅಸ್ಥಿರ. ಬೇರೆ ಬೇರೆ ಸಾಧನ ಮಾಡಿ ಅಲ್ಲಿಗೆ ಹೋದವರು ಮತ್ತೆ ಭೂಮಿಗೆ ಬಂದೇ ಬರುತ್ತಾರೆ. ಅವರಿಗೆ ಅಂತಿಮ ಪದ ಸಿದ್ಧಿ ಇಲ್ಲ. (ಅ) ಸವಿತರ್ಕ ಸಮಾಧಿ:– ಸ್ಥೂಲ ದೇವತಾ ಮೂರ್ತಿಯ ಧ್ಯಾನದಲ್ಲಿ ರತನಾಗುವದು)ಹಾಗು ನಿರ್ವಿತರ್ಕ ಸಮಾಧಿ: (ಸ್ಥೂಲ ಮೂರ್ತಿಯಲ್ಲಿ ತನ್ಮಯನಾಗುವದು) ಈ ಎರಡನ್ನು ಸಾಧಿಸಿದ ಸಾಧಕನು ಉಪಸನಾ ಮೂರ್ತಿ ಅಭಿಮಾನಿಯ ಲೋಕಕ್ಕೆ ಹೋಗುತ್ತಾನೆ. ಕೆಲ ಸಮಯ ಅಲ್ಲಿದ್ದು ಪುನಃ ಜನ್ಮ ತಾಳುತ್ತಾನೆ. ಸ್ಥೂಲ ಮೂರ್ತಿಯ ಬಿಟ್ಟು ತನ್ಮಾತ್ರಾ ರಚಿತ ಸೂಕ್ಷ್ಮ ಮೂರ್ತಿಯ ಉಪಾಸನೆಗೆ ತೊಡಗುತ್ತಾನೆ. (ಬ) ಸವಿಚಾರ ಸಮಾಧಿ: ( ಸೂಕ್ಷ್ಮ ಮೂರ್ತಿ ಪ್ರಕಾಶಕವಾದ ಜ್ಞಾನಪ್ರಭೆಯಲ್ಲಿ ಮನಸ್ಸು ನಿಲ್ಲುವದು) ಮತ್ತು ನಿರ್ವಿಚಾರ ಸಮಾಧಿ: ಆ ಜ್ಞಾನ ಪ್ರಭೆಯಲ್ಲಿ ಮನಸ್ಸು ಮುಳುಗುವದು) ಇವುಗಳನ್ನು ಸಾಧಿಸಿದ ಸಾಧಕನು ತನ್ಮಾತ್ರಾಭಿಮಾನಿ ದೇವತೆಗಳ ಲೋಕಕ್ಕೆ ಹೋಗುತ್ತಾನೆ. ಬಹುಕಾಲ ಅಲ್ಲಿದ್ದು ಪುನಃ ಜನ್ಮ ತಾಳುತ್ತಾನೆ. (ಕ) ಸಾನಂದ ಸಮಾಧಿ (ನಿರ್ವಿಚಾರ ಸಮಾಧಿಯ ಪರಿಪಕ್ವ ಅವಸ್ಥೆಯಲ್ಲಿ ತೋರುವ ದಿವ್ಯ ಆನಂದದಲ್ಲಿ ಮನಸ್ಸು ತನ್ಮಯವಾಗುವದು) ಯನ್ನು ಪಡೆದ

ಸಾಧಕನು ಆನಂದ ಅಭಿಮಾನಿ ಲೋಕಕ್ಕೆ ಹೋಗಿ, ಕೆಲ ಕಾಲ ಅಲ್ಲಿದ್ದು ಪುನಃ ಭೂಲೋಕದಲ್ಲಿ ಹುಟ್ಟುತ್ತಾನೆ. (ಡ) ಸಾಸ್ಮಿತಾ ಸಮಾಧಿ (ಆನಂದದ ಭಾವ ಮರೆತು ಬರೀ ಅಸ್ಮಿತ್ವ ತಾನೆಂದು ತಿಳಿಯುವದು)ಯನ್ನು ಸಾಧಿಸಿದವನು ಮಹತ್ತತ್ವಾಭಿಮಾನಿಯಾದ ಹಿರಣ್ಯಗರ್ಭನ ಲೋಕಕ್ಕೆ ಹೋಗುತ್ತಾನೆ. ಇದೇ ಬ್ರಹ್ಮ ಲೋಕ. ಇದೇ ಸತ್ಯಲೋಕ. ಇಲ್ಲಿಗೆ ಬಂದ ಸಾಧಕನಲ್ಲಿ ಆತ್ಮಾತಿರಿಕ್ತ ಸಂಸ್ಕಾರಗಳೊಂದೂ ಇರದಿದ್ದರೆ ಅವನು ಇಲ್ಲಿಂದ ನೇರವಾಗಿ ಪರಬ್ರಹ್ಮ ಚಿದಾಕಾಶದಲ್ಲಿ ವಿಲಯನ ಹೊಂದುತ್ತಾನೆ. ಒಂದು ವೇಳೆ ಆ ಸಾಧಕನಲ್ಲಿ ಕಿಂಚಿತ್ ಅನ್ಯ-ಸಂಸ್ಕಾರಗಳಿದ್ದರೆ ಭೂಮಿಗೆ ಬರುತ್ತಾನೆ. ಅಥವಾ ಆ ಸಾಧಕನಲ್ಲಿ ಪ್ರಕೃತಿ ದರ್ಶನಾಕಾಂಕ್ಷೆ ಉಂಟಾದರೆ ಸತ್ಯಲೋಕದಿಂದ ಪ್ರಕೃತಿಯ ಗರ್ಭದಲ್ಲಿ ಸೇರಿ, ಅಲ್ಲಿಂದ ಸರ್ವ ಸಿದ್ಧಿಗಳೊಂದಿಗೆ ಭೂಲೋಕದಲ್ಲಿ ಜನ್ಮ ತಾಳುತ್ತಾನೆ. ಬ್ರಹ್ಮ ಲೋಕದಿಂದ ಪರಮಾತ್ಮನಲ್ಲಿ ಬೆರೆತು ಹೋಗುವ ಮಹಾತ್ಮನಿಗೆ ಕೃತೋಪಾಸ್ತಿ ಎಂದು ಹೆಸರು. ಉಳಿದೆಲ್ಲ ಸಾಧಕರು ಅಕೃತೋಪಾಸ್ತಿಗಳು! ಭವ ಪ್ರತ್ಯಯದವರು; ಮಹತ್ತತ್ತ್ವದ ಎತ್ತರಕ್ಕೆ ಹೋದರೂ ದೇವನನ್ನು ಕಾಣದೆ ತಿರುಗಿ ಬರುತ್ತಾರೆ! ಕೃತೋಪಾಸ್ತಿ ಜಾಣ; ಅವನ ಜನ್ಮ ಹಾಗು ಸಾಧನವು ಸಾರ್ಥಕ. ಅವನ ಸ್ಥಿತಿ ನಿರೂಪಕ ಶುತ್ರಿ ಮಂತ್ರವು ಹೀಗಿದೆ:

"ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರ ।
ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಮ್ ॥ "

ಪ್ರಲಯಕಾಲ ಬಂದಾಗ ಬ್ರಹ್ಮನ ಆಯುಷ್ಯ ತೀರಿ ಅವನು ವಿಶ್ವಾತ್ಮನಲ್ಲಿ ವಿಲೀನನಾಗುತ್ತಾನೆ. ಅವನೊಂದಿಗೆ ಬ್ರಹ್ಮ ಲೋಕದಲ್ಲಿ ವಾಸಿಸಿದ್ದ ಕೃತೋಪಾಸ್ತಿಗಳು ಪರಮ ಪುರುಷ-ಪದದಲ್ಲಿ ಪ್ರವೇಶಿಸುತ್ತಾರೆ! ಅವರಿಗೆ ಪುನರ್ಜನ್ಮವಿಲ್ಲ.

(೨) ಭೌತ ವಿಷಯಗಳತ್ತ ಮನಸ್ಸು ಹರಿಸಿದವನು ಯಾವ ಲೋಕಕ್ಕೆ ಹೋದರೂ ಅಲ್ಲಿಂದ ಪತನ ಹೊಂದುತ್ತಾನೆ. ಈ ಮಾತು ವ್ಯವಹಾರದಲ್ಲಿಯೂ ಸತ್ಯ. ಉದಾ: ಮನೆಯತ್ತ ಮುಖ ಮಾಡಿದ ಜನ ದೇಶದ ನಾಯಕರಾದರೂ ಅಲ್ಲಿ ಬಹು ದಿನ ಆಳಲಾಗದೆ ಮನೆಗೇ ಬರುತ್ತಾರೆ. ಮನೆಯನ್ನು ಮರೆತು ದೇಶಕ್ಕೆ ತಮ್ಮನ್ನು ಅರ್ಪಿಸಿಕೊಂಡವರು ಮಾತ್ರ ರಾಷ್ಟ್ರ ನಾಯಕರಾಗುತ್ತಾರೆ. ಅವರಿಗೆ ಪತನವಿಲ್ಲ. ಸಾಂಸಾರಿಕ ಗಳಿಕೆಯ ಆಶೆಯಿಂದ ಧರ್ಮ ಪೀಠವೇರಿದ ಗುರುವು ಜನತೆಯ ಮನಸ್ಸನ್ನು ಗೆಲ್ಲಲಾರ. ಸ್ವಾರ್ಥ ಸಂಗ್ರಹದ ಭಾವನೆಯನ್ನೇ ಸುಟ್ಟು ಜನತಾ ಜನಾರ್ದನನ ಆರಾಧನಾ ಮಾಡಲು ಮುಂದಾದವರು ನಿಜವಾಗಿಯೂ ಅಮರ ಗುರುಗಳಾಗುತ್ತಾರೆ.

ಭಗವಂತ:– "ಅರ್ಜುನ, ವಿಶ್ವದಲ್ಲಿರುವ ಲೋಕಾದಿ ಲೋಕಂಗಳೆಲ್ಲ ಕಾಲದ ದವಡೆಯಲ್ಲಿ ಸಿಕ್ಕಿವೆ. ಒಂದಿಲ್ಲ ಒಂದು ದಿನ ನಾಶವಾಗಿಯೇ ಬಿಡುತ್ತವೆ.

ಬರೀ ಭೋಗಗಳನ್ನಾಶಿಸಿ ಆ ಲೋಕಗಳಿಗೆ ಹೋದವರು ಪುನರ್ಜನ್ಮ ಪಡೆಯುತ್ತಾರೆ. ಆದರೆ, ಯಾರು ಅವಿನಾಶಿಯಾದ ನನ್ನನ್ನೇ ಸಂಪೂರ್ಣವಾಗಿ ಆಶ್ರಯಿಸಿದ್ದಾರೆಯೋ ಅವರು ದೇಹಾಂತ್ಯದಲ್ಲಿ ನನ್ನನ್ನೇ ಹೊಂದುತ್ತಾರೆ. ಅವರಿಗೆ ಪುನರ್ಜನ್ಮವಿಲ್ಲ!"

ಸಂಬಂಧ:- ಬ್ರಹ್ಮಾದಿ ಲೋಕಗಳ ಆಯುಮಾನವೆಷ್ಟು?

ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ ।
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥೧೭॥

ಅರ್ಥ:- ಸಹಸ್ರಯುಗ ಪರ್ಯಂತಂ= ಸಹಸ್ರ ಯುಗಗಳವರೆಗಿರುವ, ಬ್ರಹ್ಮಣಃ = ಬ್ರಹ್ಮನ ಯತ್= ಯಾವ ಅಹಃ= ಹಗಲನ್ನು, ಯುಗ ಸಹಸ್ರಾಂತಾಂ= ಸಾವಿರ ಯುಗಗಳವರೆಗಿರುವ ರಾತ್ರಿಂ =ರಾತ್ರಿಯನ್ನು ವಿದುಃ= (ಯಾರು) ತಿಳಿದಿರುವರೋ ತೇ ಜನಾಃ = ಆ ಜನರು ಅಹೋರಾತ್ರವಿದಃ =ಅಹೋರಾತ್ರಿಗಳನ್ನು ಬಲ್ಲವರು.

ವಿವರಣೆ:– ಕಾಲಮಾಪನ:– ಮಾನವನ ೧ ವರುಷ= ದೇವತೆಗಳ ೧ ದಿನ. ದೇವತೆಗಳ ೪೦೦೦ ವ= ಕೃತಯುಗ. ದೇವತೆಗಳ ೩೦೦೦ ವ= ತ್ರೇತಾಯುಗ. ದೇವತೆಗಳ ೨೦೦೦ ವ= ದ್ವಾಪಾರಯುಗ. ದೇವತೆಗಳ ೧೦೦೦ ವ= ಕಲಿಯುಗ. ಈ ನಾಲ್ಕರ ಸಂಧಿ ಕಾಲಗಳು ಕ್ರಮವಾಗಿ ೮೦೦, ೬೦೦, ೪೦೦, ೨೦೦ ದೇವ ವರುಷಗಳು. ನಾಲ್ಕೂ ಯುಗಗಳು= ದೇವತೆಗಳ ೧೨೦೦೦ ವರುಷಗಳು= ೧ ಮಹಾಯುಗ. ೧೦೦೦ ಮಹಾಯುಗಗಳು= ಬ್ರಹ್ಮನ ೧ದಿನ; ಅಷ್ಟೇ ಕಾಲ ಪರಿಮಾಣ ಉಳ್ಳುದು ೧ ರಾತ್ರಿ. ಈ ರೀತಿ ಅವನು ೧೦೦ ವರುಷ ಬದುಕುತ್ತಾನೆ. ಒಬ್ಬ ಬ್ರಹ್ಮ ತೀರಿದರೆ ವಿಷ್ಣುವಿಗೆ ೧ ದಿನ. ನೂರು ವರುಷ ಬಾಳಿ ಒಬ್ಬ ವಿಷ್ಣು ತೀರಿದರೆ ರುದ್ರನಿಗೆ ೧ ದಿನ. ಮನುಷ್ಯನ ದೃಷ್ಟಿಯಿಂದ ದೇವತೆಗಳ ಆಯು ದೊಡ್ಡದೆನಿಸಿದರೂ ಅವರ ದೃಷ್ಟಿಯಿಂದ ಅದು ಅಲ್ಪವೇ ಸರಿ. ಈ ಕಾಲಮಾನವನ್ನು ತಿಳಿದ ತತ್ತ್ವ ವಿಜ್ಞಾನಿಗಳು ಲೌಕಿಕ ಭೋಗಗಳಲ್ಲಿ ಮೋಹಿತರಾಗುವದಿಲ್ಲ.

ಸಂಬಂಧ:–ಚರಾಚರ ಜೀವಿಗಳ ಅಭಿವ್ಯಕ್ತಿ ಹೇಗೆ ಆಗುತ್ತದೆ.

ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತ ಸಂಜ್ಞಕೇ ॥೧೮॥

ಅರ್ಥ:– ಅಹರಾಗಮೇ=ಹಗಲು ಬಂದಾಗ, ಅವ್ಯಕ್ತಾತ್=ಅವ್ಯಕ್ತ ಪ್ರಕೃತಿಯಿಂದ ಸರ್ವಾಃ ವ್ಯಕ್ತಯಃ=ಚರಾಚರ ಭೂತಗಳು-ಪ್ರಭವಂತಿ=ಉದ್ಭವಿಸುತ್ತವೆ. ರಾತ್ರ್ಯಾಗಮೇ= ರಾತ್ರಿಯು ಬಂದಾಗ ತತ್ರ ಅವ್ಯಕ್ತ ಸಂಜ್ಞಕೇ ಏವ = ಅವ್ಯಕ್ತ ಸಂಜ್ಞೆಯುಳ್ಳ ಅದೇ ಪ್ರಕೃತಿಯಲ್ಲಿಯೇ ಪ್ರಲೀಯಂತೇ=ಅಡಗುತ್ತವೆ.

ವಿವರಣೆ:- ಪ್ರಳಯ:– ಇದು ನಾಲ್ಕು ಬಗೆ: (೧) ನಿತ್ಯ ಪ್ರಳಯ: ಜಾಗರಣ ಹಾಗು ಸ್ವಪ್ನದ ಪ್ರಜ್ಞೆಯು ನಿದ್ರೆಯಲ್ಲಿ ಅಡಗುವದಕ್ಕೆ ನಿತ್ಯ ಪ್ರಳಯ

ಎನ್ನುತ್ತಾರೆ. ಇದು ವ್ಯಕ್ತಿಗೆ ಸಂಬಂಧ ಪಟ್ಟಿದೆ. ಪ್ರತಿ ದಿನ ಅಪ್ರಯತ್ನಿಕವಾಗಿ ಎಲ್ಲ ಜೀವಿಗಳು ಈ ಪ್ರಳಯವನ್ನು ಅನುಭವಿಸುತ್ತಾರೆ. (೨) ನೈಮಿತ್ತಿಕ ಪ್ರಳಯ: ಒಂದು ನಿಮಿತ್ತದಿಂದ ಪ್ರಜ್ಞೆಯು ಅಡಗಿದರೆ ಅದು ನೈಮಿತ್ತಿಕ ಪ್ರಳಯ. ಉದಾ: ಮೂರ್ಛೆ. (೩) ಮಹಾ ಪ್ರಳಯ: ಸಾಮೂಹಿಕ ಪ್ರಳಯ. ಇದರಲ್ಲಿ ಎರಡು ವಿಧ: (ಅ) ಜೀವಿಗಳ ಮಹಾ ಪ್ರಳಯ: ಸರ್ವ ಜೀವ ಜಂತು ಗಳು ತಮ್ಮ ತಮ್ಮ ಕರ್ಮ ವಾಸನಾ ಸಮೇತ ಅವ್ಯಕ್ತ ಪ್ರಕೃತಿಯಲ್ಲಿ ಅಡಗು ತ್ತವೆ. (ಬ) ಸರ್ವ ತತ್ತ್ವಗಳ ಮಹಾ ಪ್ರಳಯ: ಭೂಮ್ಯಾದಿ ಮಹತ್ ಪರ್ಯಂತ ಸಕಲ ತತ್ತ್ವಗಳು ಪ್ರಕೃತಿಯಲ್ಲಿ ಅಡಗುತ್ತವೆ. (೪) ಆತ್ಯಂತಿಕ ಪ್ರಳಯ: ಜೀವಾತ್ಮನು ಸಾಧನೆ ಮಾಡಿ ಪರಮಾತ್ಮನಲ್ಲಿ ಒಂದಾಗುತ್ತಾನೆ. ಅದು ಆತ್ಯಂತಿಕ ಪ್ರಳಯ; ಏಕೆಂದರೆ ಅವನು ಮತ್ತೆಂದೂ ಜೀವ ಭಾವಕ್ಕೆ ಬರುವ ದಿಲ್ಲ. (ಈ ಪ್ರಳಯದ ಬಗ್ಗೆ ೨೧ನೆಯ ಮಂತ್ರದಲ್ಲಿ ಹೇಳಲಾಗಿದೆ).

ಜೀವಿಗಳ ಮಹಾ ಪ್ರಳಯವೆಂದರೆ ಬ್ರಹ್ಮನ ನಿದ್ರಾ ಸಮಯ ಅಥವಾ ಅವನ ನಿತ್ಯ ಪ್ರಳಯ. ತತ್ತ್ವಗಳ ಮಹಾ ಪ್ರಳಯವೆಂದರೆ ಮಹತ್ತತ್ತ್ವಸ್ಥ ಬ್ರಹ್ಮನು (ಮಹತ್ತತ್ತ್ವವು ಅವ್ಯಕ್ತದಲ್ಲಿ ಅಡಗಿದೊಡನೆಯೇ) ಪರಮಾತ್ಮನಲ್ಲಿ ಸಮರಸನಾಗುವದು. (ಪ್ರಸ್ತುತ ಮಂತ್ರದಲ್ಲಿ ಜೀವ ಪ್ರಳಯದ ಬಗ್ಗೆ ಹೇಳ ಲಾಗಿದೆ).

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥೧೯॥**

**ಅರ್ಥ:**–ಸ ಏವ ಅಯಂ ಭೂತಗ್ರಾಮಃ= ಅದೇ ಜೀವ–ಸಮುದಾಯವು(ಬ್ರಹ್ಮನ ಹಗಲಿನಲ್ಲಿ) ಭೂತ್ವಾ ಭೂತ್ವಾ= ಹುಟ್ಟಿ ಹುಟ್ಟಿ ರಾತ್ರ್ಯಾಗಮೇ= ಬ್ರಹ್ಮನ ರಾತ್ರಿ ಬಂದಾಗ, ಪ್ರಲೀಯತೇ= ಲಯವಾಗುತ್ತದೆ. ಅಹರಾಗಮೇ= ಹಗಲು ಬಂದಾಗ ಅವಶಃ= ಪರವಶವಾಗಿ ಪ್ರಭವತಿ= ಹುಟ್ಟುತ್ತದೆ.

**ವಿವರಣೆ:**– ಬ್ರಹ್ಮನ ಹಗಲಿನಲ್ಲಿ ಜೀವಿಗಳು ಮತ್ತೆ ಮತ್ತೆ ಹುಟ್ಟು ತ್ತವೆ; ಬ್ರಹ್ಮನ ರಾತ್ರಿಯಲ್ಲಿ ಜೀವಿಗಳು ಪ್ರಾಕೃತಿಕ ಶಕ್ತಿ-ವಶರಾಗಿ ಅವ್ಯಕ್ತದಲ್ಲಿ ಅಡಗುತ್ತವೆ. ಬ್ರಹ್ಮನ ರಾತ್ರಿ ಹೋಗಿ ಹಗಲು ಉಂಟಾದರೆ ಪುನಃ ಆ ಜೀವಿ ಗಳು ಹುಟ್ಟುತ್ತವೆ.

ಮಾನವ ಪ್ರಯತ್ನಕ್ಕೆ ಅಸಾಧ್ಯ ಯಾವುದಿದೆ? ಸಾವಿರಾರು ಲಕ್ಷ ಜನ ದೇವನತ್ತ ಸಾಗಿಲ್ಲವೆ? ಅಂಥವರ ಉದಾಹರಣೆಗಳನ್ನು ಎದುರಿಗಿಟ್ಟುಕೊಂಡು ಸಾಧಿಸಬೇಕು ಆತ್ಮವನ್ನು!

**ಸಂಬಂಧ:**– ಲೋಕಗಳು ಅನಿತ್ಯ; ಅವುಗಳಿಗೆ ಅತೀತವಾದ ಚೈತನ್ಯ ವಸ್ತುವು ನಿತ್ಯ. ಅದರ ಗುಣಗಾನವು ಮುಂದಿನ ಎರಡು ಮಂತ್ರಗಳಲ್ಲಿದೆ.

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**

ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥೨೦॥

ಅರ್ಥ:– ತು= ಆದರೆ, ತಸ್ಮಾತ್ ಅವ್ಯಕ್ತಾತ್= ಆ ( ಚರಾಚರ ಕಾರಣ ಭೂತ ) ಅವ್ಯಕ್ತಕ್ಕಿಂತ, ಪರಃ= ವ್ಯತಿರಿಕ್ತವಾದ, ಅನ್ಯಃ= ವಿಲಕ್ಷಣವಾದ, ಸನಾತನಃ = ಸನಾತನ ವಾದ. ಅವ್ಯಕ್ತಃ= (ಚಕ್ಷುರಾದಿಗಳಿಗೆ) ಅಗೋಚರವಾದ ಯಃ= ಯಾವ ಭಾವಃ= ಅಸ್ತಿತ್ವ ಇದೆಯೋ ಸಃ= ಅದು, ಸರ್ವಭೂತೇಷು= ಎಲ್ಲ ಭೂತಗಳು ನಶ್ಯತ್ಸು= ನಾಶವಾದರೂ ನ ವಿನಶ್ಯತಿ=ನಾಶವಾಗುವದಿಲ್ಲ.

ವಿವರಣೆ:- ಅವ್ಯಕ್ತ:– ಚರ ಅಚರ ರೂಪ ವಿಶ್ವದ ಮಹಾಕಾರಣ ವಸ್ತುವೇ ಅವಕ್ತ ಪ್ರಕೃತಿ. ಅದು ಸತ್ವ ರಜ ತಮ ಗುಣಗಳ ಸಾಮ್ಯಾವಸ್ಥೆ. ಶಬ್ದಾದಿ ಗುಣಪ್ರಾಕಟ್ಯವಿಲ್ಲದ ಅಗೋಚರ ಶಕ್ತಿ. ಲೋಕಾದಿ ಲೋಕಗಳನ್ನು ರೂಪಿಸುವ ಬೃಹದ್ ಉಪಾದಾನ ಕಾರಣ!

ಪರಮಾತ್ಮ:– ಅವನು ಅವ್ಯಕ್ತ ಪ್ರಕೃತಿಗಿಂತ ಪರ, ಉತ್ಕೃಷ್ಟ. ಅದು ಜಡವಾದರೆ ಅವನು ಚೇತನ. ನಿರ್ಗುಣ, ನಿರ್ಲಕ್ಷಣ. ಅವನು ಸನಾತನ! ಅನಾದಿ ಅನಂತ! ಸರ್ವತಂತ್ರ ಸ್ವತಂತ್ರ. ಪ್ರಾಕೃತಿಕ ವಸ್ತುಗಳ ಭಾವ (ಅಸ್ತಿತ್ವ) ಕ್ಷಣಿಕ. ಪ್ರಕೃತ್ಯಂತವಾದ ಸಕಲ ತತ್ತ್ವಗಳು ನಾಶವಾಗುತ್ತವೆ. ಪರಮಾತ್ಮನು ಎಂದೆಂದಿಗೂ ಅವಿನಾಶಿ.

ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।
ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥೨೧॥

ಅರ್ಥ:- ಅವ್ಯಕ್ತಃ=ಅಗೋಚರ, ಅಕ್ಷರಃ= ಅವಿನಾಶಿ ಇತಿ= ಎಂದು ಉಕ್ತಃ= (ಯಾವುದು)ಹೇಳಲ್ಪಟ್ಟಿದೆಯೋ ತಂ= ಅದನ್ನು ಪರಮಾಂ= ಶ್ರೇಷ್ಠವಾದ ಗತಿಂ=ಗಮ್ಯ ವೆಂದು ಆಹುಃ=ಹೇಳುತ್ತಾರೆ. ಯತ್ಪ್ರಾಪ್ಯ= ಯಾವುದನ್ನು ಹೊಂದಿ ನ ನಿವರ್ತಂತೇ= ಹಿಂತಿರುಗುವದಿಲ್ಲವೋ ತತ್=ಅದು ಮಮ= ನನ್ನ ಪರಮಂ ಧಾಮ= ಶ್ರೇಷ್ಠ ಸ್ಥಾನವು (ಸ್ವರೂಪ).

ವಿವರಣೆ:– ಭಗವಂತ:– "ಪಾರ್ಥ, ನಾನು ಬಾಹ್ಯಾಂತರ ಇಂದ್ರಿಯ ಗಳಿಗೆ ಅವೇದ್ಯನಾದುವರಿಂದ ಅವ್ಯಕ್ತ; ಪರಿಪೂರ್ಣನಾದುದರಿಂದ ಅಕ್ಷರ. ನಾನು ಪವಿತ್ರಪದ, ಅಂತಿಮಗತಿ! ನನ್ನನ್ನು ಹೊಂದಿದ ನಂತರ ಪುನಃ ಜನ್ಮವಿಲ್ಲ; ನನ್ನ ದಿವ್ಯ ಸಾಮ್ರಾಜ್ಯದಲ್ಲಿ ತನ್ನನ್ನೇ ಅರ್ಪಿಸಿಕೊಂಡವನಿಗೆ ಮತ್ತೆ ಭವವಿಲ್ಲ. ಅಂಥ ವಿಮುಕ್ತಿ ಸ್ವರೂಪ ನನ್ನದು! ನನ್ನ ಸ್ವರೂಪಕ್ಕಿಂತ ಪರವಾದ ಪದವೇ ಇಲ್ಲ ವಿಶ್ವದಿ."

ಟಿಪ್ಪಣಿ: ರಾಹೋಶ್ಶಿರಃ ರಾಹುವಿನ ಶಿರ ಎಂದಾಗ ರಾಹು ಬೇರೆ ಶಿರ ಬೇರೆ ಎಂದರ್ಥವಲ್ಲ; ರಾಹುವೇ ಶಿರ ಎಂದು ತಾತ್ಪರ್ಯ. ಅದೇ ರೀತಿ 'ತದ್ಧಾಮ ಪರಮಂ ಮಮ' ಅದು ನನ್ನ ಶ್ರೇಷ್ಠ ಮನೆ ಎಂದರ್ಥವಾಗದು. ಅವ್ಯಕ್ತ ವಾದ ಆ ವಸ್ತುವೇ ನಾನು ಎಂದು ನಿಷ್ಕರ್ಷ. ಧಾಮ ಎಂದರೆ ಸ್ಥಾನ, ಆಧಾರ, ಸ್ವರೂಪ.

ಸಂಬಂಧ:- ಪರಮಾತ್ಮನು ಹೇಗೆ ಲಭ್ಯ?

ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।
ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥೨೨॥

ಅರ್ಥ:- ಪಾರ್ಥ= ಪಾರ್ಥನೆ, ಭೂತಾನಿ= ಪ್ರಾಣಿಗಳು ಯಸ್ಯ= ಯಾವನ, ಅಂತಸ್ಥಾನಿ = ಒಳಗೆ ಇರುವವೋ ಯೇನ= ಯಾವನಿಂದ ಇದಂ ಸರ್ವಂ= ಇದೆಲ್ಲವು ತತಂ= ವ್ಯಾಪ್ತವಾಗಿದೆಯೋ ಸಃ= ಆ ಪರಃ ಪುರುಷಃ ತು= ಪರಮ ಪುರುಷನು, ಅನನ್ಯಯಾ ಭಕ್ತ್ಯಾ = ಅನನ್ಯ (ಏಕಾಂತ) ಭಕ್ತಿಯಿಂದ ಲಭ್ಯಃ= ಲಭ್ಯನು.

ವಿವರಣೆ:- ಭಗವಂತ:- "ಪಾರ್ಥ, ಸರ್ವ ಭೂತಗಳು ಯಾವ ಮಹಾನ್ ಅಸ್ತಿತ್ವ ಸಾಗರದೊಳಗೆ ಬದುಕುತ್ತಿವೆಯೋ, ಯಾವ ಪರಾತ್ಪರ ಅವಿನಾಶಿ ವಸ್ತುವು ಜಡಾಜಡ ವಿಶ್ವವನ್ನೆಲ್ಲ ಸಮೂಲಾಗ್ರವಾಗಿ ವ್ಯಾಪಿಸಿದೆಯೋ ಆ ತತ್ತ್ವವೇ ಪರಮ-ಪುರುಷ. ಅವನೇ ನಾನು. ಅನನ್ಯ ಭಕ್ತಿಯಿಂದ ಮಾತ್ರ ನಾನು ಲಭ್ಯನೆಂದು ತಿಳಿ."

(೧) ಭಕ್ತಿ:- ಪವಿತ್ರ ಪ್ರೇಮ. ಇದು ಮೂರು ಪ್ರಕಾರ: (ಅ) ಕನಿಷ್ಠ ಭಕ್ತಿ: ತನ್ನ ಇಷ್ಟ ಮೂರ್ತಿಯನ್ನು ಪ್ರೀತಿಸುವದು ಹಾಗು ಉಳಿದ ದೇವತಾ ಮೂರ್ತಿಗಳಲ್ಲಿ ಅನಾದರ ತೋರುವುದು, (ಆ) ಮಧ್ಯಮ ಭಕ್ತಿ: ಸರ್ವ ದೇವತಾ ಮೂರ್ತಿಗಳನ್ನು ವಂದಿಸುವದು, ದೇವತಾ ಭಕ್ತರನ್ನು ಪ್ರೀತಿಸುವದು ಹಾಗು ಭಕ್ತರಲ್ಲದ ದೀನರನ್ನು ಉಪೇಕ್ಷಿಸುವದು. (ಇ) ಉತ್ತಮ ಭಕ್ತಿ: ಬ್ರಾಹ್ಮಣ ಗವಿ ಹಸ್ತಿನಿ ಶುನಿ ಶ್ವಪಾಕ- ವಿಶ್ವದಲ್ಲಿರುವ ಎಲ್ಲವನ್ನೂ ತನ್ನಾತ್ಮವೆಂದು ನೋಡುವದು. ಈ ಭಕ್ತಿಗೆಯೇ ಅನನ್ಯ ಭಕ್ತಿ ಎನ್ನುತ್ತಾರೆ.

(೨) ಲಭ್ಯ ವಸ್ತು:- ಕನಿಷ್ಠ ಭಕ್ತಿಯಿಂದ ಇಷ್ಟ ವಸ್ತುವು ಲಭ್ಯ. ಮಧ್ಯಮ ಭಕ್ತಿಯಿಂದ ಪುಣ್ಯಪದ ಲಭ್ಯ. ಅನನ್ಯ ಭಕ್ತಿಯಿಂದ ಅವಿನಾಶಿಯಾದ ದೇವಪದವೇ ಲಭ್ಯ.

ಸಂಬಂಧ:- ದೇಹಾಂತ್ಯದಲ್ಲಿ ಯಾವ ಮಾರ್ಗ ಹಿಡಿದು ಹೋದರೆ ತಿರುಗಿ ಬರಲಾರ? ಯಾವ ಮಾರ್ಗ ಹಿಡಿದು ಹೋದರೆ ಮತ್ತೆ ಬರುತ್ತಾನೆ?

ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।
ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥೨೩॥

ಅರ್ಥ:- ಯತ್ರಕಾಲೇ= ಯಾವ ಕಾಲದಲ್ಲಿ ಪ್ರಯಾತಾಃ ತು= (ದೇಹ ಬಿಟ್ಟು) ಪ್ರಯಾಣ ಮಾಡುವ ಯೋಗಿನಃ= ಯೋಗಿಗಳು ಅನಾವೃತ್ತಿಂ= ತಿರುಗಿ ಬಾರದಿರುವಿಕೆಯನ್ನು ಯಾಂತಿ= ಹೊಂದುತ್ತಾರೆಯೋ, ಚ= ಮತ್ತು ಆವೃತ್ತಿಂ= ತಿರುಗಿ ಬರುವಿಕೆಯನ್ನು ಯಾಂತಿ = ಹೊಂದುತ್ತಾರೆಯೋ ತಂ= ಆ ಕಾಲಂ= ಕಾಲವನ್ನು ವಕ್ಷ್ಯಾಮಿ = ಹೇಳುವೆ.

ಭಾವ:- ಭಗವಂತ:- "ಅರ್ಜುನ, ಸಾಧಕರು ಎಂಥ ಕಾಲದಲ್ಲಿ ದೇಹ ತೊರೆದು ಹೋದರೆ ಹಿಂತಿರುಗಿ ಭವಕ್ಕೆ ಬರುವದಿಲ್ಲವೋ ಮತ್ತು ಯಾವ ಕಾಲ

ದಲ್ಲಿ ಪ್ರಾಣ ತ್ಯಜಿಸಿ ಹೋದರೆ ಮತ್ತೆ ಜನ್ಮ-ಮರಣಗಳ ಚಕ್ರಕ್ಕೆ ಸಿಲುಕುತ್ತಾರೆಯೋ ಅಂಥ ಕಾಲಗಳ ಬಗ್ಗೆ ಹೇಳುವೆ."

ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥೨೪॥

**ಅರ್ಥ:**– ಅಗ್ನಿಃ= ಅಗ್ನಿ, ಜ್ಯೋತಿಃ= ಪ್ರಕಾಶ, ಅಹಃ= ಹಗಲು ಶುಕ್ಲಃ= ಶುಕ್ಲ ಪಕ್ಷ, ಷಣ್ಮಾಸಾಃ ಉತ್ತರಾಯಣಂ= ಆರುಮಾಸಗಳುಳ್ಳ ಉತ್ತರಾಯಣ, ತತ್ರ= ಆ ಮಾರ್ಗದಲ್ಲಿ (ಆ ಕಾಲದಲ್ಲಿ) ಪ್ರಯಾತಾಃ= ಪ್ರಯಾಣ ಮಾಡಿದ ಬ್ರಹ್ಮವಿದಃ= ಬ್ರಹ್ಮಜ್ಞಾನಿ (ಬ್ರಹ್ಮೋಪಾಸಕ) ಗಳಾದ ಜನಾಃ= ಜನರು ಬ್ರಹ್ಮ= ಬ್ರಹ್ಮವನ್ನು ಗಚ್ಛಂತಿ= ಸೇರುತ್ತಾರೆ.

ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥೨೫॥

**ಅರ್ಥ:**– ಧೂಮಃ= ಧೂಮ, ರಾತ್ರಿಃ= ರಾತ್ರಿ ತಥಾ= ಹಾಗೆಯೇ ಕೃಷ್ಣಃ= ಕೃಷ್ಣಪಕ್ಷ, ಷಣ್ಮಾಸಾ ದಕ್ಷಿಣಾಯಣಂ= ಆರು ಮಾಸಗಳುಳ್ಳ ದಕ್ಷಿಣಾಯನ, ತತ್ರ= ಆ ಕಾಲದಲ್ಲಿ(ಪ್ರಯಾಣ ಮಾಡಿದ) ಯೋಗೀ= ಯೋಗಿಯು ಚಾಂದ್ರಮಸಂ= ಚಂದ್ರನ, ಜ್ಯೋತಿಃ= ಪ್ರಕಾಶ ವಲಯವನ್ನು ಪ್ರಾಪ್ಯ= ಹೊಂದಿ ನಿವರ್ತತೇ= ಹಿಂತಿರುಗುತ್ತಾನೆ.

**ವಿವರಣೆ:**– ಜೀವಿಗಳಲ್ಲಿ ಆರು ವರ್ಗ :– (೧) ಕ್ಷುದ್ರ ಜೀವಿಗಳು: ಮಾನವನನ್ನು ಬಿಟ್ಟು ಉಳಿದೆಲ್ಲ ಜೀವಿಗಳು. ಉದಾ:– ಪ್ರಾಣಿ, ಪಶು, ಪಕ್ಷಿ ಕ್ರಿಮಿ, ಕೀಟ. ಇವು ಇಲ್ಲಿಯೇ ಹುಟ್ಟಿ ಇಲ್ಲಿಯೇ ಸಾಯುತ್ತವೆ. ಲಕ್ಷಾಂತರ ಯೋನಿಗಳ ತಿರುಗಿದಲ್ಲದೆ ಇವುಗಳಿಗೆ ಮಾನವ ಜನ್ಮವು ದೊರೆಯದು. (೨) ಪಾಪಶೀಲ ಜೀವರು: ಕಳವು ನಿಂದೆ ಅಸತ್ಯಭಾಷಣ ಕುಟಿಲತೆ ವಂಚನೆ ನಾಸ್ತಿಕತೆ ಮುಂತಾದ ಅಕೃತ್ಯಗಳನ್ನಾಚರಿಸಿ ಪಾಪ ಸಂಗ್ರಹ ಮಾಡುವವರು. ಅವರು ದೇಹಾಂತ್ಯದಲ್ಲಿ ನರಕ ಲೋಕಕ್ಕೆ ಹೋಗಿ ನಾರಕೀ ದುಃಖವನ್ನು ಅನುಭವಿಸುತ್ತಾರೆ. (೩) ಪುಣ್ಯಶೀಲ ಜೀವರು: ಇಹ ಲೋಕದಲ್ಲಿ ಇಷ್ಟ ಪೂರ್ತ ದತ್ತ (ಇಷ್ಟ = ಅಗ್ನಿ ಹೋತ್ರ, ತಪ ಸತ್ಯ ಅತಿಥಿ ಸೇವೆ ಇತ್ಯಾದಿ ಕರ್ಮಗಳು. ಪೂರ್ತ= ಬಾವಿ ಕೆರೆ ಕಟ್ಟುವದು, ದೇವಾಲಯ ರಚಿಸುವದು, ಅನ್ನಛತ್ರ ನಡೆಸುವದು. ದತ್ತ = ಅಹಿಂಸಾ ಮತ್ತು ಶರಣಾಗತ ರಕ್ಷಣ). ಮುಂತಾದ ಸತ್ಕರ್ಮಗಳನ್ನಾಚರಿಸಿ ಪುಣ್ಯ ಸಂಚಯ ಮಾಡಿದ ಮಹಾನುಭಾವರು. ಇವರು ದೇಹ ಬಿಟ್ಟ ಬಳಿಕ ಸ್ವರ್ಗಕ್ಕೆ ಹೋಗುತ್ತಾರೆ. (೪) ಅಕೃತೋಪಾಸಕ ಜೀವರು: ಪೂರ್ಣ ಚಿತ್ಶುದ್ಧಿಯಾಗಿರದ ಪ್ರಣವೋಪಾಸಕರಿವರು. ದೇಹ ಅವಸಾನವಾದ ನಂತರ ಬ್ರಹ್ಮ ಲೋಕಕ್ಕೆ ಹೋಗುತ್ತಾರೆ. ದೇವನನ್ನು ಕಾಣಲಾರದೆ ಭೋಗವಾಸನೆಯ ಒತ್ತಡದಿಂದಾಗಿ ಪುನಃ ಭೂಮಿಗೆ ಬರುತ್ತಾರೆ. (೫) ಕ್ರಮ ಮುಕ್ತ ಜೀವರು: ಪೂರ್ಣ ಚಿತ್ಶುದ್ಧಿಯಾದ ಪ್ರಣವೋಪಾಸಕ ಸಾಧಕರು. ದೇಹ ಬಿದ್ದನಂತರ ಬ್ರಹ್ಮ ಲೋಕಕ್ಕೆ ಹೋಗಿ, ಅಲ್ಲಿಂದ ಬ್ರಹ್ಮ ಪ್ರಳಯ ಕಾಲದಲ್ಲಿ ಬ್ರಹ್ಮನೊಂದಿಗೆ

ಸಮರಸರಾಗುತ್ತಾರೆ. (೬) ಸದ್ಯೋನ್ಮುಕ್ತ ಜೀವರು: ಇವರಿಗೆ ಆತ್ಮಸಾಕ್ಷಾತ್ಕಾರ ಉಂಟಾಗಿದೆ. ಜೀವ ಭಾವ ನೀಗಿದ ಇವರ ಅಂತಃಕರಣದಲ್ಲಿ ಆತ್ಮಪ್ರಕಾಶ ಹರಡಿದೆ. ಇವರು ಸದ್ಯೋನ್ಮುಕ್ತರು. ದೇಹವಿದ್ದೂ ದೇಹಭಾನವಿಲ್ಲದ ಮಹಾಂತರು.

ಈ ಆರು ಜೀವರಲ್ಲಿ ಎರಡು, ಮೂರು, ನಾಲ್ಕನೆಯ ವರ್ಗದ ಜೀವರು ಭವಕ್ಕೆ ಬರುತ್ತಾರೆ. ಅವರು ಯಾವ ಮಾರ್ಗದಿಂದ ಹೋದರೆ ಮುಕ್ತರಾದಾರು? ಯಾವ ಪಥವಿಡಿದು ಹೋದರೆ ಮುಕ್ತರಾಗಲಿಕ್ಕಿಲ್ಲ? ಈ ವಿಷಯವಾಗಿ ಭಗವಂತನು ಉಪದೇಶಿಸುತ್ತಿದ್ದಾನೆ,

ಜ್ಯೋತಿರ್ಯಾನ:- ಉತ್ತರಾಯಣದ ಶುಕ್ಲಪಕ್ಷದ ಒಂದು ಹಗಲಿನಲ್ಲಿ ನಿರ್ಜನ ಪ್ರದೇಶಕ್ಕೆ ಹೋಗಿ ಹೋಮಾಗ್ನಿಯ ಎದುರು ಕುಳಿತು ಓಂಕಾರ ಉಚ್ಚರಿಸುತ್ತ ದೇಹ ಬಿಡಬೇಕು. ಆಗ ಪ್ರಕಾಶಾಭಿಮಾನಿ ದೇವತೆಗಳು ವಾದ್ಯ-ವೈಭವಗಳೊಂದಿಗೆ ಕೆಳಗಿಳಿದು ಬಂದು ಅವನಿಗೆ ನವ - ದೈವೀದೇಹ ತೊಡಿಸಿ ಬೆಳಕಿನ ಮಾರ್ಗವಲ್ಲಿ ಹಿರಣ್ಯಗರ್ಭ ಲೋಕಕ್ಕೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಮಹರ್ಷಿಗಳು ಅವನನ್ನು ಆದರದಿಂದ ಸ್ವಾಗತಿಸುತ್ತಾರೆ. ಬಳಿಕ ಆ ಲೋಕದಲ್ಲಿ ಕೆಲಕಾಲ ತಂಗಿ ತಮ್ಮಷ್ಟಕ್ಕೆ ತಾವೇ ನಿರಧಿಕರಣ ದೀಕ್ಷೆ (ಪರಮಾತ್ಮನ ಜ್ಞಾನ ಚಿಂತನಾರೂಪ ದೀಕ್ಷೆ) ಹೊಂದಿ ಅಲ್ಲಿಂದ ಮುಕ್ತರಾಗುತ್ತಾರೆ. ಇವರು ಕೃತೋಪಾಸಕ ಬ್ರಹ್ಮವಿದರು. ಅಕೃತೋಪಾಸಕರು ಕೂಡ ಬ್ರಹ್ಮ ಲೋಕಕ್ಕೆ ಹೋಗುತ್ತಾರೇನೋ ನಿಜ ಅಲ್ಲಿ ನಿರಧಿಕರಣ ದೀಕ್ಷೆ ಹೊಂದದೆ ಮತ್ತೆ ಜನ್ಮಕ್ಕೆ ಬರುತ್ತಾರೆ. ಇವರು ಬ್ರಹ್ಮವಿದರಲ್ಲ.

ಧೂಮಯಾನ:- ದಕ್ಷಿಣಾಯನದ ಕೃಷ್ಣ ಪಕ್ಷದ ಒಂದು ರಾತ್ರಿಯಲ್ಲಿ ಚಿಂತೆ ಭೀತಿ ಎಂಬ ಧೂಮ್ರದಿಂದ ಕಣ್ಣೀರು ಸುರಿಸುತ್ತ ಮಡದಿ ಮಕ್ಕಳ ಮಧ್ಯ ದೇಹಬಿಟ್ಟವರನ್ನು ಅಂಧಕಾರಾಭಿಮಾನಿ ದೇವತೆಗಳು ಬಂದು ಬೇರೆ ದೇಹ ತೊಡಿಸಿ ಕತ್ತಲೆಯ ಮಾರ್ಗದಿಂದ ಕರೆದೊಯ್ಯುತ್ತಾರೆ. ಪುಣ್ಯವಿರುವವರೆಗೆ ವಿಷಯಾರಾಮ ನಿವಾಸವಾದ ಚಾಂದ್ರಮಸ ಸ್ವರ್ಗದಲ್ಲಿ ಭೋಗ ನೀಡಿ ಪುಣ್ಯ ತೀರಿದ ನಂತರ ಮರ್ತ್ಯಕ್ಕೆ ಕಳಿಸುತ್ತಾರೆ. ಕೆಲವರನ್ನು ಪಿತೃಲೋಕಕ್ಕೆ ಕರೆದೊಯ್ದು ಅವರ ವಂಶದ ಮೂರು ತಲೆಮಾರಿನ ಮಕ್ಕಳಿಂದ ತರ್ಪಣ ಬರುತ್ತಿರುವವರೆಗೆ ಅಲ್ಲಿಯೇ ಇರಲು ಬಿಡುತ್ತಾರೆ. ಬಳಿಕ, ಮರ್ತ್ಯಕ್ಕೆ ಕಳಿಸುತ್ತಾರೆ. ಇಂಥವರು ಸಕಾಮ ಕರ್ಮಿಗಳು.

ನರಕಯಾನ:- ಪಾಪಿಗಳು ದುರ್ಮರಣ ಹೊಂದುತ್ತಾರೆ. ಯಮದೂತರು ಬಂದು ಅವರ ಆತ್ಮಗಳಿಗೆ ಯಾತನಾದೇಹ ತೊಡಿಸಿ ಘೋರ ನರಕಗಳಿಗೆ ಕರೆದೊಯ್ಯುತ್ತಾರೆ. ಭಯಾನಕ ಹಿಂಸೆಗಳನ್ನು ಈಯುತ್ತಾರೆ. ಪಾಪ ತೀರಿದ ನಂತರ ಮರ್ತ್ಯಕ್ಕೆ ಕಳಿಸುತ್ತಾರೆ.

ಶುಕ್ಲೇಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।
ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥೨೬॥

**ಅರ್ಥ:**– ಜಗತಃ = ಜಗತ್ತನ್ನು ಕುರಿತು ಶುಕ್ಲ ಕೃಷ್ಣೇ ಹೀ= ಶುಕ್ಲ ಕೃಷ್ಣಗಳೆಂಬ (ಜ್ಯೋತಿ, ಧೂಮ ಎಂಬ) ಏತೇ ಗತೀ ಶಾಶ್ವತೇ= ಈ (ಎರಡು) ಗತಿಗಳು ಶಾಶ್ವತವೆಂದು ಮತೇ=ಅಭಿಪ್ರಾಯವು. ಏಕಯಾ=ಒಂದರಿಂದ ಅನಾವೃತ್ತಿಂ=ಅಪುನಾವೃತ್ತಿಯನ್ನು ಯಾತಿ =ಹೊಂದುತ್ತಾನೆ. ಅನ್ಯಯಾ= ಮತ್ತೊಂದರಿಂದ ಪುನಃ ಆವರ್ತತೇ= ಪುನರಾವೃತ್ತಿಯನ್ನು ಹೊಂದುತ್ತಾನೆ.

**ವಿವರಣೆ:**– ಭಗವಂತ:– "ಅರ್ಜುನ, ಜಗತ್ತಿಗೆ ಎರಡೇ ಎರಡು ಗತಿಗಳಿವೆ. (೧) ಶುಕ್ಲಗತಿ (ಜ್ಯೋತಿರ್ಗತಿ). (೨) ಕೃಷ್ಣಗತಿ (ಧೂಮಗತಿ). ಅವೆರಡೂ ಶಾಶ್ವತ. ಅಂದರೆ ಮನುಷ್ಯಕುಲವಿರುವವರೆಗೂ ಇರುಪಂಥವುಗಳು ಶುಕ್ಲಗತಿ ಹಿಡಿದವರು ಮತ್ತೆ ಭವಕ್ಕೆ ಬರುವದಿಲ್ಲ. ಕೃಷ್ಣಗತಿ ಹಿಡಿದವರು ಮತ್ತೆ ಭವಕ್ಕೆ ಬರುತ್ತಾರೆ. ಅವೆರಡರಲ್ಲಿ ಒಂದನ್ನು ಆರಿಸಿಕೊಳ್ಳುವ ಹಕ್ಕು ಮತ್ತು ಸ್ವಾತಂತ್ರ್ಯ ಜೀವನಿಗಿದೆ. ಆದರೆ ಅಜ್ಞ ಜೀವನು ಅಶಾಂತಿಕರ ಪಥವನ್ನು ಆರಿಸಿಕೊಳ್ಳುತ್ತಾನೆ; ಜಾಣನು ಶಾಂತಿಪಥವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ."

(೧) ಜಗತ್ತಿನ ಅಂಗಾಂಗಗಳಲ್ಲಿ ದೇವನು ನೆಲೆಸಿದ್ದಾನೆ. ಆದುದರಿಂದ ಅದು ದೇವಾಲಯ, ಪವಿತ್ರ ಶಿವ ಸದನ! ಒಂದು ಸಬಲ ಸಾಧನ. ಬುದ್ಧಿವಂತನು ಅದನ್ನು ಬಳಸಿ ಮುಕ್ತಿ ಪಡೆಯಬಲ್ಲ; ಬುದ್ಧಿಹೀನನು ಅದನ್ನು ವಿಕೃತವಾಗಿ ಬಳಸಿ ಬಂಧನದಲ್ಲಿ ಬೀಳುತ್ತಾನೆ. ಬುದ್ಧಿವಂತನದು ವಿವೇಕದೃಷ್ಟಿ! ಬುದ್ಧಿಹೀನನದು ಅವಿವೇಕ ದೃಷ್ಟಿ. ವಿವೇಕ ದೃಷ್ಟಿಯುಳ್ಳವನು ಸಾಗುವ ಬಾಳದಾರಿಯು ಬೆಳಕಿನದು(ಶುಕ್ಲಪಥ). ಅವಿವೇಕ ದೃಷ್ಟಿಯುಳ್ಳವನು ನಡೆವ ಬಾಳ ದಾರಿಯು ಕತ್ತಲೆಯದು (ಕೃಷ್ಣ ಪಥ).

(೨) ಶುಕ್ಲ,ಕೃಷ್ಣ ಗತಿಗಳು:– ಮಾನವ ಕುಲವಿರುವವರೆಗೂ ಇವೆರಡು ಪಥಗಳು ಶಾಶ್ವತ. ಕೆಲವರು ಮಾತ್ರ ಶುಕ್ಲಪಥದಲ್ಲಿ ಸಾಗುತ್ತಾರೆ. ಲೋಕದ ಬಹು ಸಂಖ್ಯೆ ಜನರು ಕೃಷ್ಣ ಪಥದಲ್ಲಿ ಹೆಜ್ಜೆ ಹಾಕುತ್ತಾರೆ. ಶುಕ್ಲ ಪಥಿಗಳು ಧೀರರು, ಛಲಶೀಲರು ಹಾಗು ವಿವೇಕಿಗಳು. ಸತ್ಯವನ್ನು ಯಾರೇ ಹೇಳಲಿ, ಎಲ್ಲಿಯೇ ಹೇಳಲಿ ಅದನ್ನು ಹೃದಯತಃ ಮೆಚ್ಚುತ್ತಾರೆ; ಅನುಷ್ಠಾನಕ್ಕೆ ತರುತ್ತಾರೆ. ಹೆಂಡತಿಯ ಮಾತಿನ ಸತ್ಯವನ್ನು ಅರಿತು ಪ್ರಪಂಚವನ್ನು ತ್ಯಾಗ ಮಾಡಿದ ತುಲಸೀದಾಸ, ಸತ್ಯ ರಕ್ಷಣೆಗಾಗಿ ರಾಜ್ಯವನ್ನೇ ದಾನವಿತ್ತ ಹರಿಶ್ಚಂದ್ರ ಮುಂತಾದವರು ಶುಕ್ಲಪಥಿಗಳು. ಸದಾ ಪ್ರಜ್ಞಾಚಕ್ಷುವನ್ನು ತೆರೆದು ಬಾಳುವ ಈ ಶುಕ್ಲಪಥಿಕರು ನಿರ್ಮೋಹಿಗಳು, ದೃಢ ಸಂಕಲ್ಪಶೀಲರು. ಎಂಥ ತೊಂದರೆಗಳು ಬಂದರೂ ಅತ್ತ ಲಕ್ಷಿಸದೆ ದೇವನತ್ತ ಸಾಗುವ ಮನೋದಾರ್ಢ್ಯ ಉಳ್ಳವರು! ಇಂಥ ಮಹಾತ್ಮರಿಗೆ ಪುನರ್ಜನ್ಮವಿಲ್ಲ.

ಕೃಷ್ಣ ಪಥಿಕರು ಅಜ್ಞಾನಿಗಳು. ಮಡದಿ ಮಕ್ಕಳು ಭೂಮಿ ಕನಕ ಕೀರ್ತಿ ಇತ್ಯಾದಿ ಸಾಂಸಾರಿಕ ಭೋಗ ವಸ್ತುಗಳಲ್ಲಿ ವ್ಯಾಮೋಹ ತಾಳಿದ್ದಾರೆ. ಸಂಸಾರ ದಲ್ಲಿ ಆಕಂಠ ಮುಳುಗಿದ್ದಾರೆ. ಅಂತಃಪ್ರಜ್ಞೆಯನ್ನೇ ಕಳೆದುಕೊಂಡಿದ್ದಾರೆ. ಇವ ರಿಗೆ ನೂರು ಗ್ರಂಥಗಳನ್ನು ಉಪದೇಶಿಸಿದರೂ ಸರಿ, ಹೆಂಡತಿ ನೂರು ಸಲ ಛೀಮಾರಿ ಹಾಕಿದರೂ ಸರಿ ಸಂಸಾರ ಬಿಟ್ಟು ಒಂದಿಂಚು ಕೂಡ ಸರಿಯಲಾರರು! ಇವರು ಪತ್ನಿಯ ದಾಸರು! ಸಂಸಾರವೇ ಧ್ಯೇಯ ಇವರಿಗೆ! ಇವರು ನಿರ್ಯಾಣ ಹೊಂದಿ ಯಾವ ಲೋಕಕ್ಕೆ ಹೋದರೇನು? ತಿರುಗಿ ಇದೇ ಮರ್ತ್ಯದಲ್ಲಿ ಜನಿ ಸಲೇ ಬೇಕು! ಏಕೆಂದರೆ ಇವರ ಮನಸ್ಸಿನ ತುಂಬ ಪ್ರಪಂಚವೇ ತುಂಬಿದೆ.

ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।
ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥೨೭॥

**ಅರ್ಥ:**– ಪಾರ್ಥ = ಪಾರ್ಥನೆ, ಏತೇ= ಈ ಎರಡು ಸೃತೀ= ಮಾರ್ಗಗಳನ್ನು ಜಾನನ್= ತಿಳಿದುಕೊಂಡು ಕಶ್ಚನಯೋಗೀ=ಯಾವ ಯೋಗಿಯೂ ನ ಮುಹ್ಯತಿ= ಮರುಳಾ ಗುವದಿಲ್ಲ, ತಸ್ಮಾತ್= ಆದ:ದರಿಂದ, ಅರ್ಜುನ =ಅರ್ಜುನನೆ, ಸರ್ವೇಷು ಕಾಲೇಷು= ಸರ್ವ ಕಾಲಗಳಲ್ಲಿ ಯೋಗಯುಕ್ತ ಭವ= ಯೋಗಯುಕ್ತನಾಗಿರು.

**ವಿವರಣೆ:**– ಜ್ಞಾನಿ, ಪರಿಜ್ಞಾನಿ:– ಸತ್ಯ ಅಸತ್ಯಗಳ ಬಗ್ಗೆ ತಿಳಿದವನು ಜ್ಞಾನಿ. ಅಸತ್ಯವನ್ನು ತ್ಯಜಿಸಿ ಸತ್ಯವನ್ನು ಪರಿಗ್ರಹಿಸಿದವ ಪರಿಜ್ಞಾನಿ. ಉದಾ: ಸುರಾಪಾನವು ಸರ್ವವಿನಾಶಕ ಎಂದು ಉದ್ಬೋಧಕ ಭಾಷಣ ಮಾಡಿದ ವಕ್ತಾ ರನ ಎದುರು ಹಾಲು, ಸುರೆಗಳನ್ನಿಟ್ಟಾಗ ಸುರೆಯನ್ನೇ ವರಿಸುತ್ತಿದ್ದರೆ ಅವನು ಜ್ಞಾನಿ. ಸುರೆಯ ಬಟ್ಟಲನ್ನು ಕಣ್ಣೆತ್ತಿಯೂ ನೋಡದೆ ಹಾಲನ್ನೇ ಸ್ವೀಕರಿಸು ತ್ತಿದ್ದರೆ ಅವನು ಪರಿಜ್ಞಾನಿ. ಜ್ಞಾನಿಗಳು ಮಲ ತಿನ್ನುವ ಓದಿದ ಗಿಳಿಯ ವರ್ಗಕ್ಕೆ ಸೇರಿದ್ದಾರೆ. ಪರಿಜ್ಞಾನಿಗಳು ಸುಶೀಲ ಸಂತ ವರ್ಗಕ್ಕೆ ಸೇರಿದ್ದಾರೆ. ಶ್ರೀ ಗುರುಗಳ ದಿವ್ಯ ಉಪದೇಶಗಳನ್ನು ಕೇಳಿ ಸಂತೋಷ ಪಟ್ಟು ಮಡದಿ ಮಕ್ಕಳತ್ತ ಸಾಗುವ ವರು ಜ್ಞಾನಿಗಳು; ಮಡದಿ ಮಕ್ಕಳ ವ್ಯಾಮೋಹ ತೊರೆದು ದೇವನತ್ತ ಸಾಗು ವವರು ಪರಿಜ್ಞಾನಿಗಳು.

**ಭಗವಂತ:**– "ಅರ್ಜುನ, ಶುಕ್ಲ ಮತ್ತು ಕೃಷ್ಣ ಪಥಗಳನ್ನು ಸರಿಯಾಗಿ ತಿಳಿದು ಶುಕ್ಲ ಪಥದಲ್ಲಿಯೇ ನಡೆಯುವ ಪರಿಜ್ಞಾನಿಗಳು ಯೋಗಿಗಳು. ಅವರು ದೇವ-ಯಾತ್ರಿಕರು; ಸಂಸಾರದ ಆಕರ್ಷಣೆಗೆಂದಿಗೂ ಮರುಳಾಗದ ನಿರ್ಮೋಹಿ ಗಳು. ಅವರಿಗೆ ನಾನು ನಿತ್ಯ ಸನ್ನಿಹಿತ. ಆದುದರಿಂದ ಪಾರ್ಥ, ನೀನು ಯೋಗಿ ಯಾಗು. ಮರಣವು ಯಾವಾಗ ಬಂದೀತು ಹೇಳಲಾಸಲ್ಲ. ಸದಾ ಜಾಗ್ರುತ-ಪ್ರಜ್ಞೆ ಯುಳ್ಳವನಾಗಿ ಪ್ರಕಾಶ-ಪಥದಲ್ಲಿ ಹೆಜ್ಜೆ ಇಡು. ನಿನ್ನ ಪರಿಸರವು ನಿನ್ನ ದೇವ ಯಾತ್ರೆಗೆ ಅನುಕೂಲವಾಗಿರಲಿ. ಹರಿಶ್ಚಂದ್ರನ ಬಾಳನ್ನು ನೆನೆಸಿಕೋ; ಸತಿ ತಾರಾ ಮತಿ ಮತ್ತು ಮಗ ಲೋಹಿತಾಶ್ವ ತಮ್ಮ ಜೀವನವನ್ನು ಕಷ್ಟಕ್ಕೀಡುಮಾಡಿ

ಹರಿಶ್ಚಂದ್ರನ ಧರ್ಮ ಜೀವನಕ್ಕೆ ಬೆಂಬಲ ನೀಡಿದರು; ಕೊನೆಗೆ ದೇವ ದರ್ಶನ ವಾಯ್ತು. ಪ್ರಪಂಚ ಬೇರೆ, ಪರಮಾರ್ಥ ಬೇರೆ ಎಂದು ಭಾವಿಸಬೇಡ. ಪ್ರಪಂಚ ಏಣಿ, ಪರಮಾರ್ಥವು ಗುರಿ!"

ವೇದೇಷು ಯಜ್ಞೇಷು ತಪಃಸು ಚೈವ ।
ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ॥
ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ।
ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥೨೮॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಅಕ್ಷರ ಬ್ರಹ್ಮಯೋಗೋ ನಾಮ ಅಷ್ಟಮೋಽಧ್ಯಾಯಃ.

ಅರ್ಥ:- ಯೋಗೀ= ಯೋಗಿಯು ಇದಂ ವಿದಿತ್ವಾ= ಇದನ್ನು ತಿಳಿದು ವೇದೇಷು = ವೇದಗಳಲ್ಲಿ ಯಜ್ಞೇಷು= ಯಜ್ಞಗಳಲ್ಲಿ ತಪಸ್ಸು= ತಪಸ್ಸುಗಳಲ್ಲಿ ದಾನೇಷು ಚ ಏವ= ದಾನಗಳಲ್ಲಿ ಯತ್= ಯಾವ ಪುಣ್ಯಫಲಂ= ಪುಣ್ಯಫಲವು ಪ್ರದಿಷ್ಟಂ= ಹೇಳಲ್ಪಟ್ಟಿದೆಯೋ ತತ್ಸರ್ವಂ= ಅದೆಲ್ಲವನ್ನು ಅತ್ಯೇತಿ= ಅತಿಕ್ರಮಿಸುತ್ತಾನೆ. ಚ= ಮತ್ತು, ಆದ್ಯಂ= ಆದ್ಯವಾದ ಪರಂ ಸ್ಥಾನಂ= ಪರಮ ಪದವನ್ನು ಉಪೈತಿ= ಹೊಂದುತ್ತಾನೆ.

ವಿವರಣೆ:– ಭಗವಂತ:– "ಪಾರ್ಥ, (೧) ಪಾವನ ಗಂಗೆಯಲ್ಲಿ ಮಿಂದು, ರಮ್ಯ ಆಶ್ರಮದ ವಟವೃಕ್ಷದ ಅಡಿಯಲ್ಲಿ ಕುಳಿತು ವೇದಗಳನ್ನು ಅಭ್ಯಸಿಸಿದರೆ ಅಪಾರ ಪುಣ್ಯ ಲಭಿಸುತ್ತದೆ. (೨) ದ್ರವ್ಯಯಜ್ಞ ತಪೋಯಜ್ಞ ಯೋಗಯಜ್ಞ ಮುಂತಾದ ಸಕಾಮಪರ ಯಜ್ಞಗಳನ್ನು ಮನಸೋಕ್ತ ಆಚರಿಸಿದಾಗ ನಮ್ಮ ಭಾಗ್ಯಭಾಂಡವು ಸುಕೃತದಿಂದ ತುಂಬಿಕೊಳ್ಳುತ್ತದೆ. (೩) ಸಕಾಮ ಭಾವದಿಂದ ಪ್ರೇರಿತನಾಗಿ ಶರೀರ ಇಂದ್ರಿಯ ಮನಸ್ಸುಗಳನ್ನು ಶೋಷಿಸುವದರ ಮೂಲಕ ಘೋರ ತಪಸ್ಸನ್ನಾಚರಿಸಿದರೆ ಹಾಗು (೪) ಭೂದಾನ ಗೋದಾನ ದ್ರವ್ಯದಾನಗಳನ್ನಿತ್ತರೆ ಅಂತರಂಗದಲ್ಲಿ ಪುಣ್ಯ ಸಂಪದವು ಶೇಖರಣೆಗೊಳ್ಳುತ್ತದೆ. ಆದರೆ ಈ! ನಾಲ್ವಿಧ ಸುಕರ್ಮಗಳಿಂದ ದೊರೆವ ಫಲ ಮಾತ್ರ ವಿನಾಶಶೀಲವಾದ ಸ್ವರ್ಗ· ಅರ್ಜುನ, (೫) ಜ್ಯೋತಿರ್ಯಾನ, ಧೂಮಯಾನಗಳ ಪರಿಜ್ಞಾನ ಹೊಂದಿ, ಜೀವನದ ತುಂಬ ಜ್ಯೋತಿರ್ಮಾರ್ಗದಲ್ಲಿಯೇ ಸಾಗಿದ ಯೋಗಿಯು ಗಳಿಸುವ ಪುಣ್ಯದ ಫಲ ಅವಿನಾಶಿ! ಪರಮ ಮುಕ್ತಿ! ಇದನ್ನರಿತು ನೀನು ಬಾಳು; ಯೋಗಿಯಾಗು. ನನ್ನೊಂದಿಗೆ ಒಂದಾಗುವಿ; ಅಲ್ಲಿಂದ ಪುನರಾವರ್ತನೆಯಿಲ್ಲ! ಅದಕ್ಕೂ ಮಿಗಿಲಾದ ಪದವೇ ಇಲ್ಲ!"

ಇಲ್ಲಿಗೆ ಏಳು ಪ್ರಶ್ನೆಗಳಿಗಿತ್ತ ಭಗವಂತನ ಉತ್ತರ ರೂಪ ಬೋಧೆ ಮುಗಿಯಿತು. ಮುಂದಿನ ಅಧ್ಯಾಯ ಜ್ಞೇಯವಸ್ತುವಿನ ಪರಿಶೀಲನೆಗೆ ಮೀಸಲಾಗಿದೆ

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಎಂಟನೆಯ ಬಿಂದುವು.

* † *

# ಒಂಭತ್ತನೆಯ ಅಧ್ಯಾಯ

## ರಾಜವಿದ್ಯಾರಾಜಗುಹ್ಯಯೋಗ

### ಶ್ರೀ ಭಗವಾನುವಾಚ

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥೧॥**

ಅರ್ಥ:- ಯತ್= ಯಾವುದನ್ನು ಜ್ಞಾತ್ವಾ= ತಿಳಿದು ಅಶುಭಾತ್= ಸಂಸಾರದಿಂದ ಮೋಕ್ಷ್ಯಸೇ= ಮುಕ್ತನಾಗುವಿಯೋ ಇದಂ= (ಇಂಥ) ಈ ಗುಹ್ಯತಮಂ= ಅತ್ಯಂತ ರಹಸ್ಯವಾದ, ವಿಜ್ಞಾನಸಹಿತಂ= (ವಿಶೇಷೇಣ ಜ್ಞಾಯತೇ ಅನೇನ ಇತಿ ವಿಜ್ಞಾನಂ, ತತ್ಸಹಿತಂ ಜ್ಞಾನಂ). ಅನುಭವಾನ್ವಿತವಾದ ಜ್ಞಾನಂ= ಜ್ಞಾನವನ್ನು ಅನಸೂಯವೇ ತೇ= ಅಸೂಯಾ ರಹಿತನಾದ ನಿನಗೆ ಪ್ರವಕ್ಷ್ಯಾಮಿ= ಹೇಳುವೆ.

ವಿವರಣೆ:- ಭಗವಂತ:- "ಧನಂಜಯ, ನೀನು ಸಾತ್ವಿಕ ಜೀವಿ. ಅಸೂಯಾ ಅನಿಲವು ನಿನ್ನ ಮನಸ್ಸನ್ನು ಪ್ರವೇಶಿಸಿಲ್ಲ. ದುರಾಗ್ರಹಗಳಿಂದ ನಿನ್ನ ಅಂತರಂಗ ಕಲಕಿಲ್ಲ. ನಿನ್ನ ವಿನಯ ಹಾಗು ಪ್ರೇಮಗಳನ್ನು ಕಂಡು ಸಂತೋಷ ಪಟ್ಟಿದ್ದೇನೆ. ಅರ್ಜುನ, ನೀನು ಅಶುಭ ಸಂಸಾರ ಪಂಕದಿಂದ ಮುಕ್ತನಾಗಿ ಆನಂದಾಕಾಶದಲ್ಲಿ ಸ್ವಚ್ಛಂದವಾಗಿ ವಿಹರಿಸಬೇಕೆಂದು ನನ್ನಿಚ್ಛೆ. ಆದುದರಿಂದ ನಿನಗಾಗಿ ಅತ್ಯಂತ ಗೌಪ್ಯವಾದ ದೇವ-ಜ್ಞಾನವನ್ನು ಉಪದೇಶಿಸುವೆ. ನಾನು ವಿವರಿಸುವ ವಿದ್ಯೆ ಪುಸ್ತಕೀಯವಲ್ಲ; ಯಾರಿಂದಲೋ ಕೇಳಿ ಗಳಿಸಿದುದಲ್ಲ. ಸಾಕ್ಷಾತ್ ಅಪರೋಕ್ಷಿತ! ವಿಜ್ಞಾನ ಸಹಿತ!"

ಧ್ಯಾನ, ಜ್ಞಾನ:- ಧ್ಯಾನವು ಭಾವನಾ ತಂತ್ರ, ಅಂದರೆ ಭಾವನೆಯ ಮೇಲೆ ನಿಂತಿದೆ. ಜ್ಞಾನವು ವಸ್ತುತಂತ್ರ, ಅಂದರೆ ವಸ್ತುವಿನ ಮೇಲೆ ನಿಂತಿದೆ. ಉದಾ: ಜಲವನ್ನು ಗಂಗಾ ಮಾತೆ ಎಂದು ಪೂಜಿಸಿ ಚಿಂತನೆ ಮಾಡುವದು ಧ್ಯಾನ. ಅದೇ ಜಲವನ್ನು ವಿಚ್ಛೇದಿಸಿ ಎರಡು ಭಾಗ ಜಲಜನಕ ಹಾಗು ಒಂದು ಭಾಗ ಪ್ರಾಣವಾಯುಗಳ ಸಂಯುಕ್ತ ವಸ್ತುವೆಂದು ತಿಳಿದುಕೊಳ್ಳುವದು ಜ್ಞಾನ. ಅದೇ ರೀತಿ ಶ್ರೀ ಗುರುವಿನ ಮಾತಿನಲ್ಲಿ ವಿಶ್ವಾಸವಿಟ್ಟು ಚಿತ್ತವೃತ್ತಿಗಳನ್ನು ನಿರೋಧಿಸಿ ನಿರಂಜನ ಪರಮಾತ್ಮನಲ್ಲಿ ಮನಸ್ಸನ್ನು ನೆಲೆಗೊಳಿಸುವದು ಧ್ಯಾನ! ಅಂತಃ ಪ್ರಜ್ಞೆಯಿಂದ ಪರಮಾತ್ಮನ ಸ್ವರೂಪವನ್ನು ಅರಿತುಕೊಳ್ಳುವದು ಜ್ಞಾನ! ಧ್ಯಾನಯೋಗಿಗೆ ಪರವಸ್ತುವಿನ ಸಾಮಾನ್ಯ ಜ್ಞಾನ ಸಾಕು; ಎಂತಲೇ ಎಂಟನೆಯ ಅಧ್ಯಾಯದಲ್ಲಿ 'ಅಕ್ಷರಂ ಬ್ರಹ್ಮ ಪರಮಂ' ಎಂಬ ಒಂದೇ ಪದ ಸಮುದಾಯದಲ್ಲಿ ಧ್ಯೇಯ ವಸ್ತುವರ್ಣನೆಯನ್ನು ಭಗವಂತ ಮುಗಿಸಿದ್ದಾನೆ. ಎಂಟನೆಯ ಅಧ್ಯಾಯದಿಂದ ಧ್ಯಾನಯೋಗಿಯು ಸಂತುಷ್ಟನಾಗುತ್ತಾನೆ. ಜ್ಞಾನಯೋಗಿಗೆ ಅಷ್ಟರಿಂದ ತೃಪ್ತಿಯಾಗದು, ಅವನಿಗೆ ಪರಮಾತ್ಮನ ಪ್ರಗಲ್ಭ-ಪರಿಶೀಲನೆ ಯಾಗಬೇಕು. ಆದುದರಿಂದ ಭಗವಂತನು ಈ ಅಧ್ಯಾಯದ ತುಂಬೆಲ್ಲ ಜ್ಞೇಯ ವಸ್ತುವನ್ನು ಹಲವು ವಿಧದಿಂದ ಬಣ್ಣಿಸುತ್ತಾನೆ. ಅಪ್ರಾಕೃತ ಜ್ಞಾನವೀಯುತ್ತಾನೆ.

ಜ್ಞಾನದಲ್ಲಿ ಮೂರು ವಿಧ: ಗುಹ್ಯ, ಗುಹ್ಯತರ, ಗುಹ್ಯತಮ. (ಅ) ಗುಹ್ಯಜ್ಞಾನ: ಯಾವ ಜ್ಞಾನದಿಂದ ಮನಸ್ಸು ಶುದ್ಧವಾಗುತ್ತದೆಯೋ ಅಂಥ 'ಧರ್ಮಜ್ಞಾನ' ವೇ ಗುಹ್ಯಜ್ಞಾನ. ಇದು ಮನುಷ್ಯನಲ್ಲಿ ಅಹಿಂಸಾ, ಸತ್ಯ ಅಸ್ತೇಯಾದಿ ಪವಿತ್ರ ಗುಣಗಳನ್ನು ನೆಲೆಗೊಳಿಸುತ್ತದೆ; ಅವನಿಗೆ ಸುಮನ, ಸುಬುದ್ಧಿ, ಸುಚಿತ್ತು, ನಿರಹಂಕಾರ, ಸದ್ಭಾವಗಳನ್ನು ಅಳವಡಿಸುತ್ತದೆ. ಗುಹ್ಯ ಜ್ಞಾನಿಯು ಸದಾ ನಿಷ್ಕಾಮ ಕರ್ಮಗಳನ್ನು ಆಚರಿಸುತ್ತಾನೆ. (ಬ) ಗುಹ್ಯತರ ಜ್ಞಾನ: ಪರಿಶುದ್ಧ ಮನಸ್ಸಿನಲ್ಲಿ ಆತ್ಮ ಪ್ರಜ್ಞೆ ಎಂಬ ವಿಮಲ ಪ್ರಕಾಶ ಅಭಿವ್ಯಕ್ತವಾಗಿ, ದೇಹ, ಇಂದ್ರಿಯ, ಪ್ರಾಣ, ಮನ, ಬುದ್ಧಿ ಇತ್ಯಾದಿ ಜಡ ತತ್ತ್ವಗಳ ವಿಷಯಗಳಲ್ಲಿದ್ದ ಆತ್ಮಭಾವ ಅಳಿದು ಸರ್ವತತ್ತ್ವ ಸಾಕ್ಷಿಯಾದ ಪ್ರತ್ಯಗಾತ್ಮನೇ ತಾನೆಂಬ ಅಲೌಕಿಕ ಅನುಭವ ಉಂಟಾಗುವದು. ಈ ಅನುಭವವೇ ಗುಹ್ಯತರ ಜ್ಞಾನ. (ಕ) ಗುಹ್ಯತಮ ಜ್ಞಾನ: ಪಂಚ ಭೂತ, ಪಂಚ ತನ್ಮಾತ್ರೆ, ಅಹಂಕಾರ ಮಹತ್ತು ಹಾಗು ಪ್ರಕೃತಿ ಇವುಗಳ ಮಹತ್ಪುಂಜವು ವಿಶ್ವ. ಈ ವಿಶ್ವದಾದ್ಯಂತ ಹಾಸು ಹೊಕ್ಕಾಗಿರುವ ಸಾಕ್ಷಿ ಚೇತನವೇ ಪರಮಾತ್ಮ. ಪ್ರತ್ಯಗಾತ್ಮನಿಗೂ ಪರಮಾತ್ಮನಿಗೂ ಭಿನ್ನತೆಯಿಲ್ಲ. ಅಂಥ ಪ್ರತ್ಯಗಾತ್ಮಾಭಿನ್ನ ಪರಮಾತ್ಮನೇ ತಾನು ಎಂಬ ದಿವ್ಯಾನುಭವವೇ ಗುಹ್ಯತಮಜ್ಞಾನ.

"ಗುಣೇಷು ದೋಷಾವಿಷ್ಕರಣಮಸೂಯಾ" ಒಳ್ಳೆಯದರಲ್ಲಿ ಕೆಟ್ಟದ್ದನ್ನು ಹುಡುಕುವದು ಅಸೂಯೆ. ಸುಗುಣಗಳಲ್ಲಿ ದುರ್ಗುಣಗಳನ್ನು ಆರೋಪಿಸುವದು ಅಸೂಯೆ. ಈ ಅಸೂಯೆ ಕೌಟುಂಬಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ, ವ್ಯಾಪಾರಿಕ ಇಂಥ ಎಲ್ಲ ಕ್ಷೇತ್ರಗಳಲ್ಲಿ ಪ್ರವೇಶಿಸಿದೆ; ವ್ಯಕ್ತಿ ವ್ಯಕ್ತಿಗಳ, ಸಮಾಜ ಸಮಾಜಗಳ ಮಧ್ಯೆ ದ್ವೇಷರೂಪ ಬಿರುಗಾಳಿಯನ್ನೆಬ್ಬಿಸಿದೆ. ಇಬ್ಬರು ಸವತೆಯರು ಕೂಡಿ ಬಾಳರು. ಇಬ್ಬರು ವ್ಯಕ್ತಿಗಳು ಕೂಡಿ ವಾಸಿಸರು. ಕುಲ, ಜಾತಿಗಳ ಹೆಸರಿನಲ್ಲಿ ದೀನ ದಲಿತ ಜೀವಿಗಳನ್ನು ಸಾವಿರಾರು ವರುಷಗಳಿಂದ ತುಳಿಯಲಾಗಿದೆ. ಒಂದು ಧರ್ಮದ ಗುರುವಿಗೆ ಮತ್ತೊಂದು ಧರ್ಮದ ಗುರುವೆಂದರೆ ಹೊಟ್ಟೆಯುರಿ. ನಾಡಿನಲ್ಲಿ ಸಾವಿರಾರು ಧಾರ್ಮಿಕ ತಾತ್ತ್ವಿಕ ಸಂಪ್ರದಾಯಗಳು ಬೆಳೆದಿವೆ. ತಮ್ಮ ಸಂಪ್ರದಾಯವೇ ಶ್ರೇಷ್ಠ, ತಮ್ಮ ಸಂಪ್ರದಾಯದ ಮೂಲ ಪುರುಷರೇ ಮಹಾತ್ಮರು, ತಾವು ನಡೆವ ದಾರಿಯೇ ಧರ್ಮ, ತಾವು ಮಂಡಿಸುವ ವಿಚಾರಗಳೇ ಸತ್ಯ ಎಂಬ ಭಾವನೆ ಪ್ರತಿ ಸಂಪ್ರದಾಯದ ಜನರಲ್ಲಿ ಬೇರೂರಿದೆ. ಇನ್ನೊಂದು ಸಂಪ್ರದಾಯವು ಮುರಿದು ಬಿದ್ದಾಗ ಒಂದು ಬಗೆಯ ರಾಕ್ಷಸೀ ಸಮಾಧಾನ ಅನುಭವಿಸುತ್ತಾರೆ ಉಳಿದ ಸಂಪ್ರದಾಯಿಗಳು. ದ್ವೈತ ಅದ್ವೈತಾದಿ ಮತಗಳಲ್ಲೂ ಪರಸ್ಪರರ ದ್ವೇಷವು ಕಾಡ್ಗಿಚ್ಚಾಗಿ ಹಬ್ಬಿದೆ, ಒಬ್ಬರ ಬಗ್ಗೆ ಒಬ್ಬರು ಕಾಳಜಿ ತೋರಿಸಿಕೊಳ್ಳುತ್ತಾರೆ. ಬುದ್ಧಿವಂತರೂ ಬುದ್ಧಿ ಹೀನ

ರಂತೆ ವರ್ತಿಸುತ್ತಾರೆ. ಎಲ್ಲವೂ ಅಸೂಯೆಯ ಘೋರ ಪ್ರತಾಪ!

ಅರ್ಜುನನಲ್ಲಿ ಅಸೂಯೆಯಿಲ್ಲ. ಆದುದರಿಂದ ಭಗವಂತನು ಅವನಿಗೆ ಗುಹ್ಯತಮಜ್ಞಾನವನ್ನು ಉಪದೇಶಿಸಲಿಚ್ಛಿಸಿದ. ಗುಹ್ಯತಮಜ್ಞಾನವನ್ನು ಕೇಳಿ, ತಿಳಿದು, ಆತ್ಮಸಾತ್ ಮಾಡಿಕೊಳ್ಳಲು ಮನಸ್ಸು ಮಾಡಿದ ಎಲ್ಲ ಸಾಧಕರು ತಮ್ಮ ಅಂತರಂಗದಿಂದ ಮೊಟ್ಟ ಮೊದಲು ಈ ಅಸೂಯೆಯನ್ನು ಹೊರನೂಕ ಬೇಕು.

ಸಂಬಂಧ:- ಗುಹ್ಯತಮ ವಿದ್ಯೆಯ ಮಹಿಮೆ.

ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥೨॥

ಅರ್ಥ:- ಇದಂ = ಇದು (ಈ ಆತ್ಮ ವಿದ್ಯೆಯು) ರಾಜವಿದ್ಯಾ = (ವಿದ್ಯಾನಾಂ ರಾಜಾ: ವಿದ್ಯೆಗಳ ರಾಜ ಅಥವಾ ರಾಜ್ಞಾಂ ವಿದ್ಯಾ: ರಾಜರಿಗೆ ಯೋಗ್ಯವಾದ ವಿದ್ಯೆ). ರಾಜ ವಿದ್ಯೆಯು, ರಾಜಗುಹ್ಯಂ=(ಗೋಪ್ಯೇಷು ವಿದ್ಯಾಸು ಅತಿ ಶ್ರೇಷ್ಠಂ. ಗುಪ್ತ ವಿದ್ಯೆಗಳಲ್ಲಿ ಅತಿ ಶ್ರೇಷ್ಠ ಅಥವಾ ರಾಜ್ಞಾಂ ಗುಹ್ಯಂ: ರಾಜರ ಗುಹ್ಯಜ್ಞಾನವು) ರಾಜಗುಹ್ಯವು. ಪವಿತ್ರಂ =ಪವಿತ್ರವು, ಉತ್ತಮಂ = ಮಂಗಲಕರ. ಪ್ರತ್ಯಕ್ಷಾವಗಮಂ=(ಪ್ರತ್ಯಕ್ಷಃ ಸ್ಪಷ್ಟಃ ಅವಗಮಃ ಅವಬೋಧಃ ಯಸ್ಯ ತತ್: ಯಾವುದರ ಬೋಧವು ಪ್ರತ್ಯಕ್ಷವಿದೆಯೋ ಅದು). ಅಪರೋಕ್ಷವು ಧರ್ಮ್ಯಂ = ಧರ್ಮರೂಪವು. ಕರ್ತುಂ ಸುಸುಖಂ = ಅನುಷ್ಠಾನಕ್ಕೆ ಸುಲಭವಾದುದು, ಅವ್ಯಯಂ= (ಮತ್ತು) ಅವ್ಯಯು.

ವಿವರಣೆ:- (೧) ರಾಜವಿದ್ಯಾ: (ಅ) ಲೋಕದಲ್ಲಿ ಅನೇಕ ವಿದ್ಯೆಗಳಿವೆ. ಅವುಗಳನ್ನೆಲ್ಲ ಕಲಿತರೂ ಚಿತ್ತಗತ ಅವಿದ್ಯೆ ನಾಶವಾಗದು. ದುಃಖ ಅಳಿಯದು. ಚಿರಂತನ ಶಾಂತಿ ಅಳವಡದು. ನಾರದ ಮುನಿಯು ನೂರಾರು ಜನ್ಮಗಳಲ್ಲಿ ಅಭ್ಯಸಿಸಿ ಅನೇಕ ವಿದ್ಯೆ ಗಳಿಸಿದ. ಆದರೆ "ನಾನಿಷ್ಟು ಓದಿದರೂ ಶೋಕಹಾನಿಯಾಗಲಿಲ್ಲ. ಸಮಾಧಾನ ದೊರೆಯಲಿಲ್ಲ." ಎಂದು ಕಳವಳಿಸಿ ಸನತ್ಕುಮಾರನನ್ನು ಬ್ರಹ್ಮವಿದ್ಯೆಗಾಗಿ ಮೊರೆಹೋದ. ಈ ಲೌಕಿಕ ವಿದ್ಯೆಗಳಿಂದ ಆಶಾ ಅಹಂಕಾರ ಮಮಕಾರಗಳು ಉಲ್ಬಣಿಸುವವೇ ಹೊರತು ತಿಲಮಾತ್ರವೂ ಕಡಿಮೆಯಾಗುವದಿಲ್ಲ. ಇಂಥ, ಸಹಸ್ರಾರು ವಿದ್ಯೆಗಳಲ್ಲಿ ಸಾರ್ವಭೌಮ ವಿದ್ಯೆ ಎಂದರೆ ಬ್ರಹ್ಮ ವಿದ್ಯೆ, ಆತ್ಮಜ್ಞಾನ! "ದೀಪ್ಯತೇ ಹಿ ಅತಿಶಯೇನ ಬ್ರಹ್ಮವಿದ್ಯಾ ಸರ್ವ ವಿದ್ಯಾನಾಂ" ಸರ್ವ ವಿದ್ಯೆಗಳ ಮೇಲೆ ಅಮಿತ ಕಾಂತಿಯಿಂದ ಪ್ರಜ್ವಲಿಸಿ ಪ್ರಕಾಶಿಸುವ ದಿವ್ಯಜ್ಯೋತಿ ಆ ಬ್ರಹ್ಮವಿದ್ಯೆ! "ಸರ್ವ ಅವಿದ್ಯಾನಾಂ ನಾಶಕತ್ವಾತ್" ಸರ್ವ ವಿಧದ ಅವಿದ್ಯೆಗಳನ್ನು ಕ್ಷಣಾರ್ಧದಲ್ಲಿ ವಿನಾಶಗೊಳಿಸುವದರಿಂದ ಅದು ವಿದ್ಯೆಗಳ ಅಧಿರಾಜ! ಸಾರ್ವಭೌಮ!!

(ಬ) ದೇಶವನ್ನಾಳುವ ರಾಜ ಮಹಾರಾಜರಿಗೆ ಅಗತ್ಯವಾದುದರಿಂದ ಬ್ರಹ್ಮವಿದ್ಯೆಯು ರಾಜವಿದ್ಯೆ. ಮಂಗಲಸೂತ್ರವು ಸತಿಗೆ ಭೂಷಣ, ಹಾಗೆ ಬ್ರಹ್ಮ

ವಿದ್ಯೆಯು ರಾಷ್ಟ್ರಪಾಲಕರಿಗೆ ಭೂಷಣ. ಜನಕ, ಅಜಾತಶತ್ರು, ಅಶೋಕ ಮುಂತಾದವರು ಬ್ರಹ್ಮವಿದ್ಯಾ ವಿಭೂಷಿತ ರಾಜರಾಗಿದ್ದರು. ಎಂದೇ ಅವರ ರಾಜ್ಯದಲ್ಲಿ ಶಾಂತಿ ಹರಡಿತ್ತು. ಮತ ಪಡೆದು ಆರಿಸಿ ಬರುವ ಇಂದಿನ ಮುಂದಾಳುಗಳಲ್ಲಿ ಬ್ರಹ್ಮವಿದ್ಯೆಯ ಗಂಧವೂ ಇಲ್ಲ. ಅವರಲ್ಲಿ ಸ್ವಾರ್ಥ ಮನೆ ಮಾಡಿದೆ. ಅವರ ದೃಷ್ಟಿಯು ಸದಾ ಅಧಿಕಾರ ಹಾಗು ದ್ರವ್ಯದ ಮೇಲೆ ಕೇಂದ್ರೀಕೃತವಾಗಿದೆ. ಹೀಗಾಗಿ ದೇಶದಲ್ಲಿ ತೃಪ್ತಿಯಿಲ್ಲ, ಶಾಂತಿಯಿಲ್ಲ, ಸಮೃದ್ಧಿಯಿಲ್ಲ. ನಾಡು ಸ್ವರ್ಗವಾಗಬೇಕಾದರೆ ಸಾಮಾನ್ಯ ಮನೆಯಿಂದ ಹಿಡಿದು ಜಾಗತಿಕ ಕುಟುಂಬದ ವರೆಗೆ ಹಿರಿಯರಾಗಬೇಕೆನ್ನುವವರು ಅತ್ಯವಶ್ಯವಾಗಿ ಬ್ರಹ್ಮವಿದ್ಯೆ ಪಡೆಯಲೇಬೇಕು. ಹೀಗೆ ದೈವೀ ರಾಜರನ್ನು ನಿರ್ಮಿಸುವ ಸಾಮರ್ಥ್ಯ ಈ ವಿದ್ಯೆಯಲ್ಲಿರುವದರಿಂದ ಇದಕ್ಕೆ ರಾಜವಿದ್ಯೆ ಎನ್ನುತ್ತಾರೆ.

(೨) ರಾಜಗುಹ್ಯಂ: (ಅ) ಸಕಲ ಗುಪ್ತ ವಿದ್ಯೆಗಳಲ್ಲಿ ರಾಜನಾಗಿರುವ ಬ್ರಹ್ಮ ವಿದ್ಯೆಯು ರಾಜಗುಹ್ಯ. ಲಕ್ಷಾಂತರ ಜನರೆದುರು ಅತೀ ಸ್ಪಷ್ಟ ಶಬ್ದಗಳಲ್ಲಿ ಘಂಟಾಘೋಷವಾಗಿ ಈ ವಿದ್ಯೆಯನ್ನು ಸೂರೆ ಮಾಡಿದರೂ ಬಹು ಜನರ ಅಳವಿಗೆ ದೊರೆಯದಂಥ ವಿದ್ಯೆಯಿದು. "ಬಿಚ್ಚಿದ ಗಂಟನು ಬಯಲೊಳಗಿಟ್ಟರೆ ಯಾರೂ ಮುಟ್ಟದಂಥಹದು." (ಬ) ರಾಜರೆನ್ನುವವರೇ ಬಹು ರಹಸ್ಯವಾಗಿ ತಮ್ಮ ಅಂತರಂಗದಲ್ಲಿ ಜೋಪಾನವಾಗಿಟ್ಟುಕೊಳ್ಳಬೇಕಾದ ವಿದ್ಯೆಯಿದಾದುದರಿಂದ ರಾಜಗುಹ್ಯ ಎನಿಸಿದೆ. ರಾಜನು 'ಅಹಂ ಬ್ರಹ್ಮಾಸ್ಮಿ' ಎಂಬ ಅನುಭೂತಿಯನ್ನು ಪಡೆದಿರಬೇಕು. ವ್ಯವಹಾರದಲ್ಲಿ ಮಾತ್ರ ಕರ್ಮಿಗೆ ಕರ್ಮಿಯಂತೆ, ಪುಣ್ಯಾತ್ಮನಿಗೆ ಪುಣ್ಯಾತ್ಮನಂತೆ, ಜ್ಞಾನಿಗೆ ಜ್ಞಾನಿಯಂತೆ, ಭಕ್ತನಿಗೆ ಭಕ್ತನಂತೆ ವರ್ತಿಸಬೇಕು.

(೩) ಪವಿತ್ರಂ: ಪ್ರಾಯಶ್ಚಿತ್ತಾದಿ ಕರ್ಮಗಳು ಕಿಂಚಿತ್ಪಾಪವನ್ನು ನಾಶ ಮಾಡುವವಾದರೂ ಪಾಪಕಾರ್ಯ ಪ್ರಚೋದಕವಾದ ವಾಸನೆಯನ್ನು ಮಾತ್ರ ನಾಶಮಾಡಲಾರವು. ಬ್ರಹ್ಮವಿದ್ಯೆ ಹಾಗಲ್ಲ. ಅನೇಕ ಲಕ್ಷ ವರುಷಗಳಿಂದ ಸಂಗ್ರಹವಾದ ಪಾಪರಾಶಿಯನ್ನು ಅದು ವಾಸನಾರೂಪ ಕಾರಣ ಸಮೇತವಾಗಿ ಸುಟ್ಟು ಹಾಕುವದು, ಆದುದರಿಂದ ಇದು ಪವಿತ್ರ!

(೪) ಉತ್ತಮಂ: ಜಗತ್ತಿನ ವಸ್ತುಗಳಲ್ಲಿ ಹಾಗು ವ್ಯಕ್ತಿಗಳಲ್ಲಿ ಶ್ರೇಷ್ಠತೆಯ ತರ ತಮ ಭಾವವಿದೆ. ಮನುಷ್ಯ ಗಳಿಸಿದ ಜ್ಞಾನಗಳಲ್ಲಿಯೂ ಈ ತರತಮ ಕಲ್ಪನೆ ನೆಲೆಸಿದೆ. ಭೂತಗಳಿಗಿಂತ ತನ್ಮಾತ್ರೆಗಳು ಉತ್ತಮ, ಅವುಗಳಿಗಿಂತ ಅಹಂಕಾರ, ಅದಕ್ಕಿಂತ ಮಹತ್ತು, ಮಹತ್ತಿಗಿಂತ ಪ್ರಕೃತಿ, ಪ್ರಕೃತಿಗಿಂತ ಚಿತ್ಶಕ್ತಿ ಉತ್ತಮ. ಆ ಅಂತಿಮ ಚಿತ್ ಶಕ್ತಿಯು ಯಾರ ಆಧಾರದಲ್ಲಿ ಜೀವಿಸಿದೆಯೋ ಅಂಥ ಬ್ರಹ್ಮ ವಸ್ತುವು ಉತ್ತಮೋತ್ತಮ! ಅದಕ್ಕಿಂತ ಶ್ರೇಷ್ಠ ವಸ್ತುವೇ ಇಲ್ಲ.

ಅದೇ ರೀತಿ ಜ್ಞಾನ; ಭೂತಗಳ ಜ್ಞಾನವು ಕನಿಷ್ಠ: ಚಿತ್ಶಕ್ತಿಯ ಜ್ಞಾನವು ಉತ್ತಮ, ಬ್ರಹ್ಮಜ್ಞಾನವು ಮಾತ್ರ ಉತ್ತಮೋತ್ತಮ! ಉಳಿದ ಜ್ಞಾನಗಳು ಪರಿಮಿತ. ಬ್ರಹ್ಮಜ್ಞಾನವು ಪರಿಪೂರ್ಣ!

(೫) ಪ್ರತ್ಯಕ್ಷಾವಗಮಂ: ಜಾಗ್ರ ಸೃಷ್ಟಿಯು ಇಂದ್ರಿಯಗಳಿಗೆ ಪ್ರತ್ಯಕ್ಷ. ಸ್ವಪ್ನ ಸೃಷ್ಟಿಯು ಮನಸ್ಸಿಗೆ ಪ್ರತ್ಯಕ್ಷ. ಸುಪ್ತಿ ಸೃಷ್ಟಿಯು ನಿದ್ರಾವೃತ್ತಿಗೆ ಪ್ರತ್ಯಕ್ಷ. ಜಾಗ್ರಾದಿ ತ್ರಿವಿಧ ಸೃಷ್ಟಿಗಳ ಮೇಲೆ ವಿಜೃಂಭಿಸುವ, ಭೂಮ್ಯಾದಿ ಬಿಂದ್ವಂತ ಸಕಲ ತತ್ತ್ವಗಳ ಮೇಲೆ ಪ್ರಕಾಶಿಸುವ ಚೈತನ್ಯ ರವಿ (ಪರಮಾತ್ಮನು) ಯು ಮಾತ್ರ ಇಂದ್ರಿಯಗಳಿಗಾಗಲಿ ಮನಸ್ಸಿಗಾಗಲಿ ಪ್ರತ್ಯಕ್ಷನಲ್ಲ. ಈ ಸಾಧನಗಳು ದೇವನ ಸಾನಿಧ್ಯದಲ್ಲಿ ಬಯಲಾಗುತ್ತವೆ; ದೇಹ ಬುದ್ಧಿ ಭಾವಗಳು ಅಡಗಿ ಬಿಡುತ್ತವೆ. ಆಗ ಆ ಭಾವಗತ ಜೀವಾತ್ಮನು ಭಾವಮುಕ್ತನಾಗಿ ದೇವ ಜ್ಯೋತಿಯಲ್ಲಿ ಸಮರಸನಾಗಿ ನಿಲ್ಲುತ್ತಾನೆ. ಅಲ್ಲಿ ಜೀವನಿಗೂ ದೇವನಿಗೂ ಭಿನ್ನತೆಯಿಲ್ಲ; ತಾನೇ ಆ ದೇವನಾದುದರಿಂದ ದೇವನು (ತಾನು) ತನಗೆ ಸಾಕ್ಷಾತ್ ಪ್ರತ್ಯಕ್ಷ! ಈ ಆತ್ಮಪ್ರತ್ಯಕ್ಷಾನುಭೂತಿಯೇ ಬ್ರಹ್ಮಜ್ಞಾನ! ಇದು ಪ್ರತ್ಯಕ್ಷಾವಗಮ! ಸ್ವಯಂಭಾತ! ತ್ರಿಪುಟಿ ವಿರಹಿತ ಆತ್ಮಾನುಭವ.

(೬) ಧರ್ಮ್ಯಂ: ಮೇಲಿನ ಚಿಹ್ನ, ಆಚಾರ, ವಿಚಾರ, ದೇಶ, ಕಾಲಗಳಿಂದ ಭಿನ್ನ ಭಿನ್ನವಾದ ಸಾಮಾಜಿಕ ಧರ್ಮಗಳು ನಿಜ ಧರ್ಮಗಳಲ್ಲ. ಬ್ರಹ್ಮವಿದ್ಯೆಯೊಂದೇ ನಿಜವಾದ ಧರ್ಮ. ಉಳಿದ ಧರ್ಮಗಳಲ್ಲಿ ಪರಿಣಾಮ ಹಾಗು ವಿನಾಶದ ಭಯವಿದೆ. ಬ್ರಹ್ಮ ಧರ್ಮದಲ್ಲಿ ಆ ಭಯವಿಲ್ಲ. ಸಮುದ್ರದಲ್ಲಿ ನದಿಗಳೆಲ್ಲ ಒಂದಾಗುವಂತೆ ಬ್ರಹ್ಮ ಧರ್ಮದಲ್ಲಿ ಉಳಿದೆಲ್ಲ ಧರ್ಮಗಳು ವಿಲಯವಾಗುತ್ತವೆ. ಬ್ರಹ್ಮ ಧರ್ಮದ ದೃಷ್ಟಿಯಲ್ಲಿ ಮಾನವರೆಲ್ಲ ಒಂದು! ಜೀವ ಜಂತುಗಳೆಲ್ಲ ಅಭಿನ್ನ! ಜಡ ಚೇತನಗಳ ಮಧ್ಯ ಸಾಮರಸ್ಯ.

(೭) ಕರ್ತುಂ ಸುಸುಖಂ: ಬ್ರಹ್ಮವಿದ್ಯೆಯ ಗರಿಮೆ ಅವರ್ಣನೀಯವಾದರೂ ಅದನ್ನು ಪಡೆಯುವದು ಕಠಿಣವಲ್ಲ, ಬಹು ಸುಲಭ. ಹೃದಯದಿಂದ ಅಸೂಯೆಯು ಮರೆಯಾದರೆ ಸಾಕು, ಆ ವಿದ್ಯೆ ಕೈವಶವಾಗುತ್ತದೆ.

(೮) ಅವ್ಯಯಂ: ಬ್ರಹ್ಮನು ಅವ್ಯಯ. ಆದ್ದರಿಂದ ಅವನ ಸ್ವರೂಪ ಪ್ರಭೆಯಾದ ಬ್ರಹ್ಮವಿದ್ಯೆಯೂ ಅವ್ಯಯ. ಧನ ಕನಕಗಳನ್ನು ದಾನವೀಯುತ್ತ ಹೋದರೆ ಅವು ಕರಗುತ್ತವೆ. ಆತ್ಮವಿದ್ಯೆಯನ್ನು ವಿಶ್ವದಾದ್ಯಂತ ಅತಿ ಮುಕ್ತ ರೀತಿಯಲ್ಲಿ ಹರಡಿದರೂ ಅದು ಇನ್ನಷ್ಟು ಜ್ಯೋತಿರ್ಮಯವಾಗಿ ಬೆಳಗೀತೇ ವಿನಃ ಕಳೆಗುಂದದು. ಗುರುಗಳು, ಧರ್ಮ ಪ್ರಚಾರಕರು, ಉಪದೇಶಕರು ಜಾತಿ ಕುಲ ಗೋತ್ರಗಳ ನೋಡದೆ ಪಾಪ ಪುಣ್ಯಗಳ ಮಾನವ ಲೆಕ್ಕಿಸದೆ ಮಾತ್ರಕ್ಕೆಲ್ಲ ಆತ್ಮ ವಿದ್ಯೆಯನ್ನು ಸೂರೆ ಮಾಡಲಿ. ಅದರಿಂದ ಲೋಕ ಕಲ್ಯಾಣ. ಎಲ್ಲರಿಗೂ

ಹೇಳಿದರೆ ಅಪವಿತ್ರವಾದೀತೆಂದು ಭಾವಿಸುವದು ತಪ್ಪು ವಿಚಾರ.

ಶ್ರೀ ನಿಜಗುಣ ಶಿವಯೋಗಿಗಳು ರಾಜಗುಹ್ಯ ವಿದ್ಯೆಯನ್ನು ಕುರಿತು ತಮ್ಮದೇ ಆದ ಸುಂದರ ಶಬ್ದಗಳಲ್ಲಿ ಈ ರೀತಿಬಣ್ಣಿಸಿದ್ದಾರೆ. "ಸನ್ನುತಿ ತನಗೆ ಸಂಪನ್ನವಾದ ಅರಿವಿದು. ನನ್ನಿ ಎಂದು ನಂಬು. ಯೋಗಿ, ನಿನ್ನ ಮುನ್ನಿನ ಜಡ ಭಾವವಂ ನೀಗು. ನಲಿದು ಇದು ನನ್ನಿಯೆಂದು ನಂಬು. ಇದು ನಿನ್ನ ದುರಿತ ಕಾನನ ವಹ್ನಿ. ಪರಿಭವ ಘನಚಂಡ ಮರುತ. ಅಜ್ಞಾನ ತಿಮಿರ ತರಣಿ. ಕುಲಗಿರಿ ವಜ್ರ. ಅನುತಾಪ ಸರಸಿಜ ಹಿಮ. ಸಾರಸುಖದ ಸುಧಾ ವಾರಿಧಿ. ಸುಕೃತದ ಮೇರು. ಮುಕ್ತಿಯ ಜನ್ಮ ಭೂಮಿ. ಚಾರು ಸಿದ್ಧಿಗಳ ಮಂದಾರ. ನಿಗಮವರಸುವ, ಮುನಿಗಳು ಜಾನಿಪ, ಸುರೋರಗ ನರರ ಜಾಣುಮೆಗಾಣದ ಜಗದ ಆಗು ಹೋಗಿನೊಳು ಪುಗದ ಶಂಭುಲಿಂಗದ ಅಗಣಿತ ನಿಜ!"

ಸಂಬಂಧ:– ಅಮರ ವಿದ್ಯೆಯಿದು ಸುಲಭ ಸಾಧ್ಯವೆಂದು ಭಗವಂತನ ಅಭಿಪ್ರಾಯವಾದರೆ ಸರ್ವಜನರು ಇವನ್ನೇಕೆ ಪಡೆಯುವದಿಲ್ಲ.?

ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥೩॥

ಅರ್ಥ:- ಪರಂತಪ= ಪರಂತಪನೆ, ಅಸ್ಯ ಧರ್ಮಸ್ಯ= ಈ ಧರ್ಮದಲ್ಲಿ (ಸರ್ವ ಸಮದೃಷ್ಟಿರೂಪ ಸರ್ವಾತ್ಮಕ ಧರ್ಮದಲ್ಲಿ) , ಅಶ್ರದ್ದಧಾನಾಃ = ಶ್ರದ್ಧೆಯಿಲ್ಲದಿರುವ ಪುರುಷಾಃ= ಮನುಷ್ಯರು, ಮಾಂ= ನನ್ನನ್ನು ಅಪ್ರಾಪ್ಯ= ಹೊಂದದೆ, ಮೃತ್ಯು ಸಂಸಾರ ವರ್ತ್ಮನಿ= ಮೃತ್ಯುರೂಪ ಸಂಸಾರ ಪಥದಲ್ಲಿ ನಿವರ್ತಂತೇ= ಹಿಂತಿರುಗಿ ಬರುತ್ತಾರೆ.

ವಿವರಣೆ:– ಭಗವಂತ:– " ಪರಂತಪ, ಸರ್ವಭೂತಗಳಲ್ಲಿ ಆತ್ಮನನ್ನು ಆತ್ಮನಲ್ಲಿ ಸರ್ವಭೂತಗಳನ್ನು ಕಾಣುವದು ಆತ್ಮಧರ್ಮ. ಈ ಧರ್ಮದಲ್ಲಿ ಯಾವನಿಗೆ ವಿಶ್ವಾಸವಿಲ್ಲವೋ ಅವನು ನನ್ನನ್ನು ಹೊಂದಲಾರ. ತನ್ನ ತಾ ತಿಳಿಯಲಾರ. ಆದುದರಿಂದ ಅವನು ಜನ್ಮಮರಣಾತ್ಮಕ ಸಂಸಾರಕ್ಕೆ ಹಿಂತಿರುಗುತ್ತಾನೆ. ರಾಗ ದ್ವೇಷ ಚಕ್ರದಲ್ಲಿ ಸಿಕ್ಕು ಬೀಳುತ್ತಾನೆ."

ಸಂಬಂಧ:- ಪರಮಾತ್ಮನ ವರ್ಣನ, ಅವನ ಯೋಗಮಾಯಾಶಕ್ತಿಯ ಸಾಮರ್ಥ್ಯ ಮುಂದಿನ ಎರಡು ಮಂತ್ರಗಳಲ್ಲಿ ವಿವರಿಸಲ್ಪಟ್ಟಿದೆ.

ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥೪॥

ಅರ್ಥ:– ಅವ್ಯಕ್ತ ಮೂರ್ತಿನಾ= ಅವ್ಯಕ್ತ ಮೂರ್ತಿಯಾದ, ಮಯಾ=ನನ್ನಿಂದ ಇದಂ= ಈ ಸರ್ವಂ ಜಗತ್=ಜಗತ್ತೆಲ್ಲ ತತಂ= ವ್ಯಾಪಿಸಲ್ಪಟ್ಟಿದೆ. ಸರ್ವಭೂತಾನಿ= ಸಕಲ ಪ್ರಾಣಿಗಳು ಮತ್ಸ್ಥಾನಿ= ನನ್ನಲ್ಲಿವೆ. ಅಹಂ ಚ= ಮತ್ತು ನಾನು ತೇಷು=ಅವುಗಳಲ್ಲಿ ನ ಅವಸ್ಥಿತಃ= ಇರುವದಿಲ್ಲ.

ವಿವರಣೆ: ಭಗವಂತ:-" ನಾನು ಅವ್ಯಕ್ತ, ನಿರ್ಗುಣ, ನಿರಂಜನ ಆದ್ದರಿಂದ

ಬಾಹ್ಯಾಂತರ ಕರಣಗಳಿಗೆ ಅವೇದ್ಯ. ಅಣು ಸಂಘಟಿತ, ಗುಣ ನಿರ್ಮಿತ ಹಾಗು ದೇಶಕಾಲ ಸೀಮಿತವಾದ ಈ ವಿಶ್ವದ ತುಂಬ ನಾನು ತುಂಬಿಕೊಂಡಿದ್ದೇನೆ. ಈ ವಿಶ್ವದ ಜೀವರಾಶಿಯು ನನ್ನಲ್ಲಿದೆ. ನಾನು ಮಾತ್ರ ಅನಿತ್ಯವಾದ ಅವುಗಳಲ್ಲಿಲ್ಲ. ಅವುಗಳ ಬದುಕಿಗೆ ನಾನು ಬೇಕು. ನನ್ನ ಇರುವಿಕೆಗಾಗಿ ಅವುಗಳ ಅವಶ್ಯಕತೆಯಿಲ್ಲ.

(೧) ವ್ಯಕ್ತ, ಅವ್ಯಕ್ತ:– ಇಂದ್ರಿಯಗಳಿಗೆ ಕಾಣುವದು ವ್ಯಕ್ತ. ಕಾಣದಿರುವದು ಅವ್ಯಕ್ತ. ಉದಾ:– ರೆಂಬೆ, ಎಲೆ, ಹೂ, ಹಣ್ಣುಗಳಿಂದ ಕೂಡಿದ ಗಿಡವು ವ್ಯಕ್ತ. ಆ ಗಿಡದ ತುಂಬ ವ್ಯಾಪಿಸಿರುವ ಆಕಾಶವು ಅವ್ಯಕ್ತ. ಅದೇ ರೀತಿ, ವಿಶ್ವವೆಂಬ ಮಹಾನ್ ವೃಕ್ಷವು ವ್ಯಕ್ತ. ಈ ವಿಶ್ವದಲ್ಲಿ ಹಾಸು ಹೊಕ್ಕಾಗಿ ವ್ಯಾಪಿಸಿರುವ ದೇವನು ಅವ್ಯಕ್ತ. ಸ್ಥೂಲ, ಸೂಕ್ಷ್ಮಾದಿ ದೇಹಗಳು, ಸಕಲ ಲೋಕಗಳು, ವ್ಯಕ್ತ. ಆ ದೇಹ, ಆ ಲೋಕಗಳ ಅಂತರ್ಯದಲ್ಲಿ ಪ್ರಜ್ವಲಿಸುವ ಜ್ಞಾನಜ್ಯೋತಿರಾತ್ಮನು ಅವ್ಯಕ್ತ. ವ್ಯಕ್ತ ವಿಶ್ವವು ವ್ಯಾಪ್ಯ; ಅವ್ಯಕ್ತ ದೇವನು ವ್ಯಾಪಕ. ಅವೆರಡರ ಮಧ್ಯದ ವ್ಯಾಪ್ಯವ್ಯಾಪಕ ಭಾವ ಸಂಬಂಧವೇ ವ್ಯಾಪ್ತಿ. ವ್ಯಾಪ್ಯವು ಖಂಡಿತ; ವ್ಯಾಪಕವು ಅಖಂಡಿತ. ಉದಾ:– ವ್ಯಾಪ್ಯವಾದ ಗಡಿಗೆ ಖಂಡಿತ, ವ್ಯಾಪಕವಾದ ಮಣ್ಣು ಅಖಂಡಿತ. ಗಡಿಗೆ ಹುಟ್ಟುವ ಮೊದಲೂ, ನಾಶವಾದ ನಂತರವೂ ಮಣ್ಣಿದೆ. ಮಣ್ಣಿನ ಆಶ್ರಯದಲ್ಲಿಯೇ ಗಡಿಗೆ ಬಾಳುತ್ತದೆ. ಹಾಗೆ ವಿಶ್ವವು ಪರಿಮಿತ. ದೇವನು ಅಪರಿಮಿತ. ಅವನ ಅಸ್ತಿತ್ವದ ಸಾನಿಧ್ಯದಲ್ಲಿ ಇದು ಹುಟ್ಟಿ ಬಾಳಿ ಅಳಿಯುತ್ತದೆ. ಆದ್ದರಿಂದ ಇದು ದೇವನ ಯಾವದೋ ಒಂದಂಶದಲ್ಲಿ ತೋರಿದೆ ಎಂದರ್ಥ.

ಮತ್ತೊಂದು ಉಪಮೆಯಿಂದ ವಿವರಿಸುವದಾದರೆ, ದೇವನು ಭಿತ್ತಿ. ವಿಶ್ವವು ಆ ಭಿತ್ತಿಯ ಮೇಲೆ ಮೂಡಿದ ಚಿತ್ರ. ಚಿತ್ರ ಅಳಿದರೂ ಭಿತ್ತಿಗೆ ಅಳಿವಿಲ್ಲ. ಹಾಗೆ ವಿವಿಧ ದೇಹಗಳು, ವಿವಿಧ ಜೀವರು, ಜಗತ್ತು, ಭೋಗ ಏನಿರುವದೆಲ್ಲ ಕಲಾತ್ಮಕ ಚಿತ್ರ. ಈ ಚಿತ್ರ ಕಾಲಕ್ರಮದಲ್ಲಿ ಹಾಳಾಗುತ್ತದೆ. ಇದರ ಹಿನ್ನೆಲೆಯಾಗಿರುವ ದೇವ ಭಿತ್ತಿಮಾತ್ರ ಅಮೃತ. ಚಿರಸ್ಥಿರ!

ದೇವನು ಕೇವಲ ಅಸ್ತಿತ್ವರೂಪನಲ್ಲ, ಜ್ಞಾನ ಆನಂದಗಳ ನಿಸ್ಸೀಮ ಸಾಗರ! ಅವನ ಜ್ಞಾನಾನಂದಗಳು ಜಲಬಿಂದುಗಳಂತೆ ಹನಿ ಹನಿಯಾಗಿ ವಿಶ್ವದ ಅಸಂಖ್ಯ ವಸ್ತುಗಳಲ್ಲಿ ಸುರಿಯುತ್ತವೆ. (೧) ವಿದ್ಯಾರ್ಥಿ ಪಂಡಿತ ಕವಿ ಸಾಹಿತಿ ತತ್ತ್ವಜ್ಞಾನಿ ಮುಂತಾದವರಲ್ಲಿ ಜ್ಞಾನಬಿಂದುಗಳನ್ನು ನೋಡುತ್ತೇವೆ. (೨) ಅರಳಿದ ಹೂ ಎಳೆಯ ಮಗು ಹಸಿರಾದ ಭೂಮಿ ಮುಂತಾದವುಗಳಲ್ಲಿ ಆನಂದ ಬಿಂದುಗಳನ್ನು ಕಾಣುತ್ತೇವೆ. ಒಟ್ಟಿನಲ್ಲಿ ಸತ್ತು ಜ್ಞಾನ ಆನಂದಗಳಿಂದ ಜಗವೆಲ್ಲ ಓತಪ್ರೋತವಾಗಿದೆ!

(೨) ಮತ್ಸ್ಥಾನಿ ಸರ್ವ ಭೂತಾನಿ; ನ ಅಹಂ ತೇಷು:– ನೀರಿನ ಆಶ್ರಯ

ದಲ್ಲಿ ಗುರುಳೆಗಳಿವೆ, ಗುರುಳೆಯ ಆಶ್ರಯದಲ್ಲಿ ನೀರಿಲ್ಲ. ಹಾಗೆ ಪರಮಾತ್ಮನ ಆಶ್ರಯದಲ್ಲಿ ಭೂತಗಳಿವೆ; ಭೂತಗಳ ಆಶ್ರಯದಲ್ಲಿ ಪರಮಾತ್ಮನಿಲ್ಲ. ದೇವನ ಅನಂತ ಅವಕಾಶದಲ್ಲಿ ಪ್ರಕೃತಿ ಹಾಗೂ ವಿಶ್ವ ಬದುಕಿವೆ; ಅವುಗಳ ಅಸ್ತಿತ್ವದ ಮೇಲೆ ದೇವನು ಬದುಕಿಲ್ಲ. ಇದನ್ನು ತಿಳಿದವ ಜ್ಞಾನಿ. ಅವನು ತೋರಿಕೆಯ ನಾಮ, ರೂಪ, ವಿನ್ಯಾಸಗಳನ್ನು ಬದಿಗೆ ಸರಿಸಿ ಅವುಗಳ ಅಂತಶ್ಚೇತನವನ್ನು ನೋಡುತ್ತಾನೆ. ಅದೇ ತಾನೆಂದು ಅನುಭವತಃ ಅರಿಯುತ್ತಾನೆ. ಆಗ ಅವನ ಮುಖದಿಂದ ಬರುವ ಉದ್ಗಾರಗಳು ಹೀಗಿವೆ:-

" ನಾಹಂ ದೇಹೋ ನೇಂದ್ರಿಯಾಣ್ಯಂತರಂಗಾ ।
ನಾಹಂಕಾರಃ ಪ್ರಾಣವರ್ಗೋ ನ ಬುದ್ಧಿಃ ॥
ದಾರಾಪತ್ಯೇ ಕ್ಷೇತ್ರವಿತ್ತಾದಿ ದೂರಃ।
ಸಾಕ್ಷೀ ನಿತ್ಯಃ ಪ್ರತ್ಯಗಾತ್ಮಾ ಶಿವೋऽಹಮ್ ॥೧॥
ನಾಹಂ ಜಾತೋ ಜನ್ಮಮೃತ್ಯೂ ಕುತೋ ಮೇ
ನಾಹಂ ಪ್ರಾಣಃ ಕ್ಷುತ್ಪಿಪಾಸೇ ಕುತೋ ಮೇ ॥
ನಾಹಂ ಚಿತ್ತಂ ಶೋಕ ಮೋಹೌ ಕುತೋ ಮೇ।
ನಾಹಂ ಕರ್ತಾ ಬಂಧ ಮೋಕ್ಷೌ ಕುತೋ ಮೇ ॥೨॥

ಭಾವ:- ನಾನು ದೇಹ ಇಂದ್ರಿಯ ಹಾಗು ಅಂತರಂಗವಲ್ಲ. ಅಹಂಕಾರ ಪ್ರಾಣವರ್ಗ ಬುದ್ಧಿ ಯಾವುದೂ ನಾನಲ್ಲ. ಹೆಂಡತಿ ಮಕ್ಕಳು ಭೂಮಿ ಧನಗಳಿಂದ ನಾನು ಬಹುದೂರ. ಸಾಕ್ಷೀ ನಿತ್ಯ ಪ್ರತ್ಯಗಾತ್ಮಶಿವ ನಾನು. ಅಜಾತ ನಾದ ನನಗೆ ಜನ್ಮ ಮೃತ್ಯುಗಳೆಲ್ಲಿ? ಪ್ರಾಣವೇ ನಾನಲ್ಲವೆಂದಾಗ ಹಸಿವು ನೀರ ಡಿಕೆಗಳು ನನಗೆಂತು? ನಾನು ಚಿತ್ತಲ್ಲವಾಗಿ ಶೋಕ-ಮೋಹಗಳು ನನಗಿಲ್ಲ. ನಾನು ಕರ್ತನಲ್ಲ! ಆದುದರಿಂದ ಬಂಧ ಮೋಕ್ಷಗಳ ಗೊಡವೆ ಎಲ್ಲಿಯದು?

ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।
ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥೫॥

ಅರ್ಥ:_ಚ= ಮತ್ತು ಭೂತಾನಿ= ಭೂತಗಳು= ನ ಮತ್ಸ್ಥಾನಿ = ನನ್ನಲ್ಲಿಲ್ಲ. ಮಮ ಆತ್ಮಾ= ( ನನ್ನ ಪರಮ ಸ್ವರೂಪವು ) ನನ್ನ ಆತ್ಮವು, ಭೂತ-ಭೃತ್= (ಭೂತಾನಿ ಬಿಭರ್ತಿ ಧಾರಯತಿ ಇತಿ ಭೂತಗಳನ್ನು ಧರಿಸುವವ ) ಪ್ರಾಣಗಳ ಪರಿಪಾಲಕನಾದರೂ, ಭೂತಭಾವನಃ= ಪ್ರಾಣಗಳ ಉತ್ಪಾದಕನಾದರೂ ನ ಭೂತಸ್ಥಃ=ಆ ಪ್ರಾಣಗಳಲ್ಲಿ ನಾನು ಇಲ್ಲ. ಪಶ್ಯಮೇ ಯೋಗಮೈಶ್ವರಂ= ( ಅದೆಲ್ಲಕ್ಕೆ ಕಾರಣವಾದುದು) ನನ್ನ ಯೋಗ ಪ್ರಭಾವವೆಂದು ತಿಳಿ.

ವಿವರಣೆ:- " ನನ್ನಿಂದ ಜಗತ್ತು ವ್ಯಾಪ್ತವಾಗಿದೆ " " ಎಲ್ಲ ಜೀವಿಗಳು ನನ್ನಲ್ಲಿವೆ." " ನಾನು ಅವುಗಳಲ್ಲಿಲ್ಲ.", ನಾಲ್ಕನೆಯ ಮಂತ್ರದಲ್ಲಿರುವ ಈ ಮಾತುಗಳನ್ನು ವಿಮರ್ಶೆಗೆ ಒಳಪಡಿಸಿದರೆ ಎರಡು ಸಂದೇಹಗಳು ತಲೆ ಎತ್ತುತ್ತವೆ.

(೧) ಆಧಾರ ವಸ್ತುವು ಆಧೇಯಕ್ಕಿಂತ ದೊಡ್ಡದಿರಲೇಬೇಕು. ನಿಜ; ಆದರೆ ಅದು ಪರಿಪೂರ್ಣವಾಗಿದ್ದರೆ ಆಧಾರವೆನಿಸದು. ಉದಾ:- ಗಿಡದಲ್ಲಿ ಮಂಗ ಕುಳಿತಿದೆ. ಈ ಮಾತು ಸರಿ. ಆಕಾಶದಲ್ಲಿ ಮಂಗ ಕುಳಿತಿದೆ ಎಂಬ ವ್ಯವಹಾರವಾಗದು. ಯಾವುದು ಆಧೇಯದ ಒಳಹೊರಗೆಲ್ಲ ವ್ಯಾಪಿಸಿದೆಯೋ ಅದು ಆಧಾರವಾಗದು. ಈ ಮಾತು ಸರ್ವಸಮ್ಮತ. ಆದು ದರಿಂದ ವಿಶ್ವಕ್ಕೆಲ್ಲ ಅಖಂಡದೇವನು ಆಧಾರ ಎಂದು ಹೇಳುವದು ತರ್ಕ ಬದ್ಧವೆನಿಸದು. ಪರಮಾತ್ಮನು ಪೂರ್ಣನಾಗಿದ್ದರೆ ಆಧಾರವೆನಿಸಲಾರ; ಆಧಾರ ನಾಗಿದ್ದರೆ ಪೂರ್ಣನೆನಿಸಲಾರ.

(೨) ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ. (ಶ್ವೇ. ಶ್ವ. ೩-೧೩) ಅಂಗುಷ್ಠ ಪ್ರಮಾಣದ ಪುರು ಷನು ಸದಾ ಜನರ ಹೃದಯದಲ್ಲಿ ಅಂತರ್ಯಾಮಿಯಾಗಿ ನೆಲೆಸಿದ್ದಾನೆ, ಹೇಗೆ? ಸ್ಥಿರವಾಗಿ! ಇದು ಶ್ರುತಿಮತ! ಮನದಲ್ಲಿ ದೇವರು ಮನೆಮಾಡಿಕೊಂಡಿಹ' ಇದು ಅನುಭವಿಗಳ ಅಭಿಪ್ರಾಯ. ನಾಹಂ ತೇಷು ಅವಸ್ಥಿತಃ ಎಂಬ ಭಗ ವಂತನ ಮಾತು ಶ್ರುತಿ ಹಾಗು ಅನುಭಾವಿಗಳ ಅಭಿಮತಕ್ಕೆ ತೀರ ವಿರುದ್ಧವೆನಿ ಸುತ್ತದೆ. ಈ ಎರಡೂ ಸಂದೇಹಗಳಿಗೆ ಭಗವಂತನು ಉತ್ತರವೀಯುತ್ತಾನೆ.

" ಪರಂತಪ, ನಾನು ವಿಶ್ವದ ನಿರ್ಮಾಪಕ, ಪರಿಪಾಲಕ, ಅಂತರ್ಯಾಮಿ ಹೀಗೆ ಸಾಮಾನ್ಯ ಜನರ ನಂಬಿಕೆಯಿದೆ. ಚರಾಚರ ಜೀವಿಗಳು ನನ್ನಲ್ಲಿ ಬಾಳುತ್ತಿವೆ; ನಾನು ಅವುಗಳ ಹೃದ್ಗುಹಾನಿವಾಸಿ; ಕರ್ಮ ಪ್ರೇರಕ; ಮಹಾನ್ ನಿಯಂತಾರ- ಹೀಗೆ ಪಂಡಿತರೂ ತಿಳಿದಿದ್ದಾರೆ. ಆದರೆ ವಾಸ್ತವಿಕ ಸಂಗತಿಯು ಬೇರೆಯಾಗಿದೆ. ಸಖನೆ, ನನ್ನ ಗುಟ್ಟಿನ ಮಾತೊಂದನ್ನು ಕೇಳು. ನಾನು ತತ್ತ್ವತಃ ಅಸಂಗ ನಿರ್ಲೇಪ ನಿರ್ವಿಕಾರಿ ನಿರಾಮಯ ನಿರ್ಗುಣ ನಿರುಪಮ ನಿಸ್ಸೀಮ ನಿಜವಸ್ತು. ನಾನು ನಿಷ್ಕಲ ದೇವ. ನಾನೊಂದು ಚಿದಾಕಾಶ. ನನ್ನಲ್ಲಿ ಪ್ರಾಣಿಗಳಿಲ್ಲ, ಮನುಷ್ಯರಿಲ್ಲ, ಜಡ ವಸ್ತುಗಳಿಲ್ಲ, ಅವುಗಳಲ್ಲಿ ನಾನಿಲ್ಲ! ಅತ್ಯ ದ್ಭುತವಾದ ಹಾಗು ವೈವಿಧ್ಯತೆಯಿಂದ ಕೂಡಿದ ವಿಶ್ವವು ನನ್ನ ಯೋಗ ಮಾಯೆಯ ಕಾರ್ಯವಾಗಿದೆ. ಅದು ದೇವಾತ್ಮಶಕ್ತಿ! ವಿಮಲ ಪ್ರಕೃತಿ! ನನ್ನ ಸಾನಿಧ್ಯ ಮಾತ್ರದಿಂದ ಪ್ರೇರಣೆ ಹೊಂದಿ ವಿಶ್ವವನ್ನು ಸೃಷ್ಟಿಸುತ್ತದೆ, ಪರಿ ಪಾಲಿಸುತ್ತದೆ. ಆಕೆಯೇ ಕರ್ತೃ! ನಾನು, ಅಕರ್ತಾರ, ಅವ್ಯಯ, ಅನಷ್ಟ ಹಾಗು ಅಮರ!,,

(೧) ಯೋಗ ಮಾಯಾಶಕ್ತಿ:- ಜಗತ್ತಿನ ಯಾವದೇ ವಸ್ತುವನ್ನು ನೋಡಿರಿ, ಅದರಲ್ಲಿ ಅದರದೇ ಆದ ಒಂದು ವಿಶಿಷ್ಟ ಸಾಮರ್ಥ್ಯ ನೆಲೆಸಿದುದು ಕಂಡುಬರುತ್ತದೆ. ಉದಾ: ಭೂಮಿಯಲ್ಲಿ ಧಾರಣ ಶಕ್ತಿಯಿದೆ. ಜಲದಲ್ಲಿ

ಪ್ರವಾಹೀ ಶಕ್ತಿಯಿದೆ. ಇದೇ ರೀತಿ ವಿಶ್ವದ ಮಹಾ ಆಶ್ರಯನಾದ ಪರಮಾತ್ಮ ನಲ್ಲಿ ಕೂಡ ಅವನದೇ ಆದ ಶಕ್ತಿಯಿದೆ. ಅದಕ್ಕೆ 'ದೇವಾತ್ಮಶಕ್ತಿ' ಎಂದು ಋಷಿ ಗಳು ಕರೆದಿದ್ದಾರೆ. ಪರಮಾತ್ಮನಿಗೂ ಆ ದೇವಶಕ್ತಿಗೂ ಅವಿನಾಭಾವ ಸಂಬಂಧ ವಿದೆ. ಆ ಶಕ್ತಿಯು ಅವನಷ್ಟೇ ವ್ಯಾಪಕ, ನಿತ್ಯ ಹಾಗು ಸನಾತನ. ಅವರಿಬ್ಬರಲ್ಲಿ ಒಂದು ಭೇದವಿದೆ; ಅದೆಂದರೆ, ಪರಮಾತ್ಮನು ಸದಾ ಅವಿಕಾರಿ, ಅವ್ಯಕ್ತ. ಶಕ್ತಿಯು ಮಾತ್ರ ವಿಕಾಸ ಹೊಂದಬಲ್ಲಳು ಹಾಗು ವ್ಯಕ್ತವಾಗಬಲ್ಲಳು. ಶಕ್ತಿಯ ವಿಕಾಶವು ಮೂರು ಘಟ್ಟದಲ್ಲಿ ನಡೆಯುತ್ತದೆ. ದೃಷ್ಟಾಂತದೊಂದಿಗೆ ಇದನ್ನು ಅರಿಯಬೇಕು. ಜಲವು ಮೊದಲು ಭಾಷ್ಪದ ಆಕಾರ ತಾಳುತ್ತದೆ; ಆಕಾಶದಲ್ಲಿ ಅದೃಶ್ಯವಾಗಿರುವ ಅದೇ ಭಾಷ್ಪವು ಸಾಕಾರ ಮೇಘ ರೂಪ ಪಡೆಯುತ್ತದೆ. ಅದೇ ಹಗುರಾದ ಮೇಘ ಕಡೆಗೆ ನೀರಾಗಿ ಭೂಮಿಗಿಳಿಯುತ್ತದೆ. ಹಾಗೆ, ದೇವಾತ್ಮ ಶಕ್ತಿಯು ಸ್ವಲ್ಪ ಸ್ಪಂದಿಸಿ 'ಅಜಾ' ನಾಮಕ ಸೂಕ್ಷ್ಮತಮ ರೂಪ ತಳೆಯು ತ್ತದೆ. ಅಜೆಯು ಇನ್ನಷ್ಟು ಸ್ಪಂದಿಸಿದಾಗ 'ಮಾಯೆ' ಎಂಬ ಸೂಕ್ಷ್ಮತರ ರೂಪು ಕಾಣುತ್ತದೆ. ಆ ಮಾಯೆಯು ಮತ್ತಷ್ಟು ಸ್ಥೂಲವಾದರೆ 'ಪ್ರಕೃತಿ' ಎಂಬ ಸೂಕ್ಷ್ಮ ರೂಪು ಮೂರ್ತಗೊಳ್ಳುತ್ತದೆ. ಈ ಮೂರು ಶಕ್ತಿಗಳ ಬಗ್ಗೆ ವಿಶದ ವಾಗಿ ತಿಳಿಯೋಣ.

(ಅ) ಅಜಾಶಕ್ತಿ:- ನಿರಂಜನ ಪರಮಾತ್ಮನ ಸತ್ತು, ಚಿತ್ತು, ಆನಂದ ಲಕ್ಷಣಗಳನ್ನು ಪ್ರಕಟಗೊಳಿಸುವ ಪವಿತ್ರ-ಶಕ್ತಿಯಿದು. ಈ ಶಕ್ತಿಯ ಸಂಗ ದಿಂದ ದೇವನಲ್ಲಿ ಅಡಗಿದ ಸರ್ವಜ್ಞ, ನಿತ್ಯತೃಪ್ತಿ, ಅನಾದಿಬೋಧ, ಸ್ವತಂತ್ರ, ಅಲುಪ್ತ ಮತ್ತು ಅನಂತ ಶಕ್ತಿಗಳು ಹೊರಹೊಮ್ಮುತ್ತವೆ. ಈ ಎಲ್ಲ ಗುಣ-ಲಕ್ಷಣಗಳಿಂದ ಶೃಂಗರಿತನಾದ ಅಜಾಶಕ್ತಿಯುತ-ದೇವನು 'ಅಜ' ಎನಿಸು ತ್ತಾನೆ. ಸಾಧಕನು ಯೋಗ ಸಾಧನೆಯ ಅಂತಿಮ ಹಂತಕ್ಕೆ ಬಂದಾಗ ಅಜಾ ಮಾತೆಯ ದರ್ಶನ. ಆಕೆ ಸಾಧಕ–ಜೀವನನ್ನೆತ್ತಿ ದೇವಪತಿನಿಗೆ ಅರ್ಪಿ ಸುತ್ತಾಳೆ, ಅಲ್ಲಿಗೆ ಜೀವ–ದೇವ–ಸಮರತಿ! ಇಂತು ಸಮರತಿ–ಹೊಂದಿದ ಸಾಧಕನು ಮಹಾತ್ಮ. ಸತ್ಯದರ್ಶಿ. ಅವನ ದೃಷ್ಟಿಯಲ್ಲಿ ಪರಮಾತ್ಮನು ಕರ್ತನಲ್ಲ. ನಿರ್ಮಾತೃವಲ್ಲ, ಪಾಲಕ–ಪೋಷಕನಲ್ಲ. ಕೇವಲ ಸಾಕ್ಷಿ. ಜಗತ್ತಿನ ಜನರು ವಿವಿಧ ಬಗೆಯಿಂದ ಪರಮಾತ್ಮನನ್ನು ವರ್ಣಿಸಿದರೂ ಆ ವರ್ಣನೆ ದೇವನದಲ್ಲ, ಅಜಾಮಾತೆಯದು ಎಂಬ ಖಚಿತ ಜ್ಞಾನ ಅವನಲ್ಲಿದೆ.

(ಬ) ಮಾಯಾಶಕ್ತಿ:–ಸರ್ವಸಾಕ್ಷಿ ದೇವನಿಗೆ ಮಾಹೇಶ್ವರ ಎಂಬ ನಾಮವಿತ್ತವಳು ಮಾಯಾಶಕ್ತಿ. ಆಕೆಯ ಸಾಮರ್ಥ್ಯ ಅಗಾಧ. ಆಕೆ ವಿಶ್ವ ನಾಟಕ–ರಚಯಿತ್ರಿ. ಸೌಂದರ್ಯದ ಸಾಕ್ಷಾತ್ ಮೂರ್ತಿಮಂತೆ. ಆಕೆಯ ಸಂಗದಿಂದ ದೇವನು ವಿಶ್ವಕ್ಕೆ ಅಭಿನ್ನ-ನಿಮಿತ್ತೋಪಾದಾನ ಕಾರಣನೆನಿಸಿದ.

ನೈಜವಾಗಿ ಮಾತ್ರ ಅವನು ನಿಮಿತ್ಯ ಕಾರಣನೂ ಅಲ್ಲ, ಉಪಾದಾನ ಕಾರಣನೂ ಅಲ್ಲ. ಅವನು ನಿಸ್ಸಂಗ, ನಿರ್ಲಿಪ್ತ ಮತ್ತು ನಿರಂಜನ. ಅಜ್ಞ ಜೀವನು ಮಾಯೆ ಆಡುವದೆಲ್ಲ ದೇವನ ಕ್ರೀಡೆ ಎಂದು ಭಾವಿಸುತ್ತಾನೆ. ಅವನ ಭಾವನೆ ಅರ್ಥವಿಲ್ಲದುದು.

ಜಗತ್ತಿನ ಬಹು ಜನರು ಮಾಯಾ ಮೋಹಿಗಳು. ಮನಮೋಹಕ ರೂಪಿಗೆ ಮರುಳಾಗಿದ್ದಾರೆ, ಮಾಯಾಕೃತಿಗಳಾದ ನಾಮ-ರೂಪಗಳೇ ನಿಜ ವೆಂದು ನಂಬಿಕೊಳ್ಳುತ್ತಾರೆ. ತಮ್ಮ ಪವಿತ್ರವಾದ ಜೀವನವನ್ನು ಆ ನೋಟ ಮಾತ್ರ ವಸ್ತುಗಳಿಗಾಗಿ ವ್ಯಯಿಸುತ್ತಾರೆ. ಕಡೆಗೆ ಅವುಗಳ ಧ್ಯಾನದಲ್ಲಿಯೇ ಪ್ರಾಣಬಿಡುತ್ತಾರೆ! ತಿಳಿದ ಜೀವನು ಮಾಯೆಯ ಬಗೆ ಬಗೆಯ ಕ್ರೀಡೆಗಳಿಗೆ ಮನಸೋಲದೆ ಅದೆಲ್ಲ ಬರಿ ತೋರಿಕೆಯದೆಂದು ನಿರ್ಧರಿಸಿ, ವಿಮಲ ದೇವ ನತ್ತ ದೃಷ್ಟಿಹಾಕುತ್ತಾನೆ. ನಿರಾಮಯ ನಿಶ್ಚಿಂತ ಪರಮಾತ್ಮನಲ್ಲಿ ಮನ ಬೆರೆಸಿ ಸಂತೋಷಿಸುತ್ತಾನೆ.

(ಕ) ಪ್ರಕೃತಿ ಶಕ್ತಿ :– ಈಕೆಯ ಸಂಗದಿಂದ ಪರಮಾತ್ಮನು ಜೀವ ಪುರುಷನಾದ. ಪ್ರಕೃತಿ ನಿರ್ಮಿತ ಜಡದೇಹದಲ್ಲಿ ಆತ್ಮಬುದ್ಧಿ ತಾಳಿದ; ಆಕೆ ರಚಿಸಿದ ಜಡ ಜಗತ್ತಿನಲ್ಲಿ ಆಸಕ್ತಿ ಹೊಂದಿದ. ತನ್ನ ಸುತ್ತೆಲ್ಲ ಗಾಢ ವಾದ ಸಂಸಾರ ಜಾಲವನ್ನು ಹೆಣೆದುಕೊಂಡ.

ಇಂತು, ತ್ರಿವಿಧ ರೂಪ ತಾಳಿದ ದೇವಾತ್ಮ ಶಕ್ತಿಯೇ ಪರಮಾತ್ಮನ ಯೋಗ ಮಾಯಾಶಕ್ತಿ, ಆಕೆಯೇ ಏನೆಲ್ಲ ಸೃಷ್ಟಿಸಿದಳು. ನಿರಂಜನ ದೇವನ ಲಕ್ಷಣಗಳನ್ನು ನಾನಾ ಬಗೆಯ ಸ್ಥರಗಳಲ್ಲಿ ಅಭಿವ್ಯಕ್ತಗೊಳಿಸಿದಳು. ಜೀವ ಈಶ್ವರ ನಿಯಂತಾರ ಮುಂತಾದ ನಾಮಗಳನ್ನಿತ್ತಳು. ಚರಾಚರ ವಸ್ತುಗಳ ಅಂತರಂಗದಲ್ಲಿ ದೇವನಿರುವಂತೆ, ದೇವನಲ್ಲಿ ವಿಶ್ವವು ಹುದುಗಿದಂತೆ ಮಾಟ ಮಾಡಿದಳು. ಆದರೇನು? ಆದುದೆಲ್ಲ ಮಾಯೆ. ಭಾವನೆಗಳೆಲ್ಲ ಮಾಯೆ! ನಿರ್ಮಾಪಕ ಸಂರಕ್ಷಕ ಇತ್ಯಾದಿ ಬಿರುದುಗಳು ಕಾಲ್ಪನಿಕ! ಪರಮಾತ್ಮನು ಸದಾ ನಿರ್ಲಿಪ್ತ!!! ಬರೀ ಸಾಕ್ಷಿ-ದೇವ

ಸಂಬಂಧ:– ತಾತ್ವಿಕವಾಗಿ ದೇವನು ಅಕರ್ತಾ, ಅಭೋಕ್ತಾ; ಅವನು ಸೃಷ್ಟಾರನೂ ಅಲ್ಲ ಪೋಷಕನೂ ಅಲ್ಲ. ಎಲ್ಲವು ಅವನೇ ಆದುದರಿಂದ ಅವನಿಗೆ ಭಿನ್ನವಾದ ಆಧೇಯವಿಲ್ಲ, ಆಶ್ರಿತವಿಲ್ಲ, ನಿಜ. ವ್ಯಾವಹಾರಿಕವಾಗಿ ನೋಡಿದರೆ ಮಾತ್ರ ಅವನೇ ಸರ್ವಾಧಾರ, ಎಲ್ಲವು ಅವನಲ್ಲಿ ನೆಲೆಸಿದೆ. ಮುಂದಿನ ಮಂತ್ರ ದಲ್ಲಿ ಈ ಮಾತು ವ್ಯಕ್ತವಾಗಿದೆ.

**ಯಥಾಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥೬॥**

**ಅರ್ಥ:**- ಯಥಾ=ಹೇಗೆ ಸರ್ವತ್ರಗಃ= ಎಲ್ಲೆಡೆಗೆ ಸಂಚರಿಸುವ ಮಹಾನ್ ವಾಯುಃ = ಮಹಾ ವಾಯುವು ನಿತ್ಯಂ= ಯಾವಾಗಲು ಆಕಾಶಸ್ಥಿತಃ= ಆಕಾಶದಲ್ಲಿ ಸ್ಥಿತವಾಗಿದೆಯೋ ತಥಾ= ಹಾಗೆ ಸರ್ವಾಣಿ ಭೂತಾನಿ= ಸರ್ವ ಪ್ರಾಣಿಗಳು ಮತ್ಸ್ಥಾನಿ= ನನ್ನಲ್ಲಿವೆ, ಉಪಧಾರಯ= ಎಂದು ನಿಶ್ಚಯಪೂರ್ವಕ ತಿಳಿದುಕೊ.

**ವಿವರಣೆ:**– ಕಾರ್ಯಕ್ಕೆ ಕಾರಣಗಳು ಮೂರು : (೧) ಉಪಾದಾನ: ಕಾರ್ಯದಲ್ಲಿ ಅನ್ವಯವಾಗಿರುವ ವಸ್ತು. ಉದಾ:ಗಡಿಗೆ ಕಾರ್ಯ; ಮಣ್ಣು ಉಪಾದಾನ ಕಾರಣ. (೨) ನಿಮಿತ್ತ ಕಾರಣ: ಜ್ಞಾನ ಇಚ್ಛೆ ಹಾಗು ಕ್ರಿಯೆಗಳುಳ್ಳದು. ಉದಾ: ಕುಂಬಾರ. (೩) ಸಹಕಾರಿ ಕಾರಣ: ಕಾರ್ಯ ನಿರ್ಮಿಸಲು ಬೇಕಾಗುವ ಉಪಕರಣಗಳು. ಉದಾ: ಚಕ್ರ ದಂಡ ಇತ್ಯಾದಿ. ನಾವು ಬಾಳುತ್ತಿರುವ ಮಹಾನ್ ಜಗತ್ತು ಕೂಡ ಒಂದು ಬೃಹತ್ ಕಾರ್ಯ. ಅದು ತನ್ನಿಂದ ತಾನೇ ಉತ್ಪನ್ನವಾಗದು. ಮೂರು ಕಾರಣಗಳು ಬೇಕೇ ಬೇಕು. ಆ ಕಾರಣಗಳು ಯಾವವು?

ಕಾರ್ಯಕ್ಕೆ ಕಾರಣವಾಗಬಹುದಾದ ವಸ್ತುಗಳು ಕಾರ್ಯೋತ್ಪತ್ತಿಯಾಗುವ ಮೊದಲೇ ಇರಬೇಕು. ಇದು ಕಾರಣ ಮೀಮಾಂಸೆಯ ನಿಯಮ, ಹಾಗಾದರೆ, ಈ ಜಗತ್ತು, ಸೂರ್ಯ, ಚಂದ್ರ, ನಕ್ಷತ್ರ, ದೇಹ, ಮನಸ್ಸು, ಬುದ್ಧಿ, ಭಾವ–ಇವು ಏನೂ ಹುಟ್ಟಿರದ ಮುನ್ನ ವಿಶ್ವದಲ್ಲಿ ಏನಿದ್ದವು? ಅನುಭಾವಿಗಳು ಹೇಳುವಂತೆ ಎರಡೇ ಎರಡು ವಸ್ತುಗಳಿದ್ದವು. ಒಂದು ಪರಮಾತ್ಮ, ಇನ್ನೊಂದು ದಿವ್ಯಶಕ್ತಿ! ಅವೆರಡೂ ಕಾಲಾತೀತ. ಇನ್ನು, ಪರಮಾತ್ಮನು ನಿರ್ವಿಕಾರ ನಿರವಯುವ ನಿರ್ಗುಣನಾದುದರಿಂದ ಜಗತ್ತೆಂಬ ಕಾರ್ಯದ ಉಪಾದಾನ ಕಾರಣವಾಗಲಾರ. ಜ್ಞಾನ ಇಚ್ಛಾ ಕ್ರಿಯಾಶೂನ್ಯನಾದುದರಿಂದ ನಿಮಿತ್ತ ಕಾರಣವಾಗಲಾರ. ಹೀಗಾಗಿ ದೇವಾತ್ಮಶಕ್ತಿಯೊಂದೇ ಉಪಾದಾನ, ನಿಮಿತ್ತ ಹಾಗು ಸಹಕಾರಿ ಕಾರಣಗಳಾಗಿರಲೇಬೇಕಲ್ಲವೆ?

ದೇವಾತ್ಮಶಕ್ತಿಯು ಮೊಟ್ಟ ಮೊದಲು ವಿಕಾಸ ಹೊಂದಿ ಎರಡಾಯಿತು, (೧) ಶುದ್ಧ (೨) ಅಶುದ್ಧ - ಎಂದು. ಅಶುದ್ಧಶಕ್ತಿಯು ಗುಣಮಯ ಮತ್ತು ಪರಿಣಾಮಶೀಲ. ಅದೇ ವಿಶ್ವದ ಉಪಾದಾನ ಕಾರಣ. ಅದರ ಗರ್ಭದಲ್ಲಿರುವ ಸತ್ವಾದಿ ಗುಣಗಳು ಜಗತ್ತಿನಲ್ಲಿ ಹಾಸು ಹೊಕ್ಕಾಗಿ ನಿಂತಿವೆ. ಶುದ್ಧಶಕ್ತಿಯು ಜ್ಞಾನ ಇಚ್ಛಾ ಕ್ರಿಯಾ ಶಕ್ತಿರೂಪಿಣಿ, ಪರಮಾತ್ಮನ ಪ್ರಕಾಶವು ಜ್ಞಾನಶಕ್ತಿಯಲ್ಲಿ ಮೂಡಿದಾಗ ಭಾವೀ ವಿಶ್ವದ ಜ್ಞಾನ ತಲೆದೋರಿತು. ಪರಮಾತ್ಮನ ಪ್ರಕಾಶವು ಇಚ್ಛಾ ಶಕ್ತಿಯಲ್ಲಿ ಮೂಡಿದಾಗ ಜಗನ್ನಿರ್ಮಾಪಕ ಇಚ್ಛೆ ಉದಿಸಿತು. ಅದೇ ಪ್ರಕಾಶವು ಕ್ರಿಯಾಶಕ್ತಿಯಲ್ಲಿ ಮೂಡಿದಾಗ ಜಗತ್ತಿನ ನಿರ್ಮಾಣಕ್ಕೆ ಬೇಕಾಗುವ ಕಾರ್ಯಸಾಮರ್ಥ್ಯ ಮೂರ್ತಗೊಂಡಿತು. ಹೀಗೆ ಜ್ಞಾನ ಇಚ್ಛಾ ಕ್ರಿಯಾಯುಕ್ತವಾದ ಶುದ್ಧಶಕ್ತಿಯೇ ನಿಮಿತ್ತ ಕಾರಣ. ಆದರೆ ಈ ಉಪಾದಾನ ಕಾರಣವಾದ ಅಶುದ್ಧಶಕ್ತಿ ಮತ್ತು ನಿಮಿತ್ತ ಕಾರಣವಾದ ಶುದ್ಧಶಕ್ತಿಗಳೆರಡೂ

ನೈಜವಾಗಿ ಮಾತ್ರ ಅವನು ನಿಮಿತ್ಯ ಕಾರಣನೂ ಅಲ್ಲ, ಉಪಾದಾನ ಕಾರಣನೂ ಅಲ್ಲ. ಅವನು ನಿಸ್ಸಂಗ, ನಿರ್ಲಿಪ್ತ ಮತ್ತು ನಿರಂಜನ. ಅಜ್ಞ ಜೀವನು ಮಾಯೆ ಆಡುವದೆಲ್ಲ ದೇವನ ಕ್ರೀಡೆ ಎಂದು ಭಾವಿಸುತ್ತಾನೆ. ಅವನ ಭಾವನೆ ಅರ್ಥವಿಲ್ಲದುದು.

ಜಗತ್ತಿನ ಬಹು ಜನರು ಮಾಯಾ ಮೋಹಿಗಳು. ಮನಮೋಹಕ ರೂಪಿಗೆ ಮರುಳಾಗಿದ್ದಾರೆ, ಮಾಯಾಕೃತಿಗಳಾದ ನಾಮ-ರೂಪಗಳೇ ನಿಜ ವೆಂದು ನಂಬಿಕೊಳ್ಳುತ್ತಾರೆ. ತಮ್ಮ ಪವಿತ್ರವಾದ ಜೀವನವನ್ನು ಆ ನೋಟ ಮಾತ್ರ ವಸ್ತುಗಳಿಗಾಗಿ ವ್ಯಯಿಸುತ್ತಾರೆ. ಕಡೆಗೆ ಅವುಗಳ ಧ್ಯಾನದಲ್ಲಿಯೇ ಪ್ರಾಣಬಿಡುತ್ತಾರೆ! ತಿಳಿದ ಜೀವನು ಮಾಯೆಯ ಬಗೆ ಬಗೆಯ ಕ್ರೀಡೆಗಳಿಗೆ ಮನಸೋಲದೆ ಅದೆಲ್ಲ ಬರಿ ತೋರಿಕೆಯದೆಂದು ನಿರ್ಧರಿಸಿ, ವಿಮಲ ದೇವ ನತ್ತ ದೃಷ್ಟಿಹಾಕುತ್ತಾನೆ. ನಿರಾಮಯ ನಿಶ್ಚಿಂತ ಪರಮಾತ್ಮನಲ್ಲಿ ಮನ ಬೆರೆಸಿ ಸಂತೋಷಿಸುತ್ತಾನೆ.

(ಕ) ಪ್ರಕೃತಿ ಶಕ್ತಿ :- ಈಕೆಯ ಸಂಗದಿಂದ ಪರಮಾತ್ಮನು ಜೀವ ಪುರುಷನಾದ. ಪ್ರಕೃತಿ ನಿರ್ಮಿತ ಜಡದೇಹದಲ್ಲಿ ಆತ್ಮಬುದ್ಧಿ ತಾಳಿದ; ಆಕೆ ರಚಿಸಿದ ಜಡ ಜಗತ್ತಿನಲ್ಲಿ ಆಸಕ್ತಿ ಹೊಂದಿದ. ತನ್ನ ಸುತ್ತೆಲ್ಲ ಗಾಢ ವಾದ ಸಂಸಾರ ಜಾಲವನ್ನು ಹೆಣೆದುಕೊಂಡ.

ಇಂತು, ತ್ರಿವಿಧ ರೂಪ ತಾಳಿದ ದೇವಾತ್ಮ ಶಕ್ತಿಯೇ ಪರಮಾತ್ಮನ ಯೋಗ ಮಾಯಾಶಕ್ತಿ, ಆಕೆಯೇ ಏನೆಲ್ಲ ಸೃಷ್ಟಿಸಿದಳು. ನಿರಂಜನ ದೇವನ ಲಕ್ಷಣಗಳನ್ನು ನಾನಾ ಬಗೆಯ ಸ್ಥರಗಳಲ್ಲಿ ಅಭಿವ್ಯಕ್ತಗೊಳಿಸಿದಳು. ಜೀವ ಈಶ್ವರ ನಿಯಂತಾರ ಮುಂತಾದ ನಾಮಗಳನ್ನಿತ್ತಳು. ಚರಾಚರ ವಸ್ತುಗಳ ಅಂತರಂಗದಲ್ಲಿ ದೇವನಿರುವಂತೆ, ದೇವನಲ್ಲಿ ವಿಶ್ವವು ಹುದುಗಿದಂತೆ ಮಾಟ ಮಾಡಿದಳು, ಆದರೇನು? ಆದುದೆಲ್ಲ ಮಾಯೆ. ಭಾವನೆಗಳೆಲ್ಲ ಮಾಯೆ! ನಿರ್ಮಾಪಕ ಸಂರಕ್ಷಕ ಇತ್ಯಾದಿ ಬಿರುದುಗಳು ಕಾಲ್ಪನಿಕ! ಪರಮಾತ್ಮನು ಸದಾ ನಿರ್ಲಿಪ್ತ!!! ಬರೀ ಸಾಕ್ಷಿ-ದೇವ

ಸಂಬಂಧ:- ತಾತ್ವಿಕವಾಗಿ ದೇವನು ಅಕರ್ತಾ, ಅಭೋಕ್ತಾ; ಅವನು ಸೃಷ್ಟಾರನೂ ಅಲ್ಲ ಪೋಷಕನೂ ಅಲ್ಲ. ಎಲ್ಲವು ಅವನೇ ಆದುದರಿಂದ ಅವನಿಗೆ ಭಿನ್ನವಾದ ಆಧೇಯವಿಲ್ಲ, ಆಶ್ರಿತವಿಲ್ಲ, ನಿಜ. ವ್ಯಾವಹಾರಿಕವಾಗಿ ನೋಡಿದರೆ ಮಾತ್ರ ಅವನೇ ಸರ್ವಾಧಾರ, ಎಲ್ಲವು ಅವನಲ್ಲಿ ನೆಲೆಸಿದೆ. ಮುಂದಿನ ಮಂತ್ರ ದಲ್ಲಿ ಈ ಮಾತು ವ್ಯಕ್ತವಾಗಿದೆ.

ಯಥಾಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರಗೋ ಮಹಾನ್ ।
ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥೬॥

**ಅರ್ಥ:**- ಯಥಾ=ಹೇಗೆ ಸರ್ವತ್ರಗಃ= ಎಲ್ಲೆಡೆಗೆ ಸಂಚರಿಸುವ ಮಹಾನ್ ವಾಯುಃ = ಮಹಾ ವಾಯುವು ನಿತ್ಯಂ= ಯಾವಾಗಲು ಆಕಾಶಸ್ಥಿತಃ= ಆಕಾಶದಲ್ಲಿ ಸ್ಥಿತವಾಗಿದೆಯೋ ತಥಾ= ಹಾಗೆ ಸರ್ವಾಣಿ ಭೂತಾನಿ= ಸರ್ವ ಪ್ರಾಣಿಗಳು ಮತ್ಸ್ಥಾನಿ= ನನ್ನಲ್ಲಿವೆ, ಉಪಧಾರಯ= ಎಂದು ನಿಶ್ಚಯಪೂರ್ವಕ ತಿಳಿದುಕೊ.

**ವಿವರಣೆ:**– ಕಾರ್ಯಕ್ಕೆ ಕಾರಣಗಳು ಮೂರು : (೧) ಉಪಾದಾನ: ಕಾರ್ಯದಲ್ಲಿ ಅನ್ವಯವಾಗಿರುವ ವಸ್ತು. ಉದಾ:ಗಡಿಗೆ ಕಾರ್ಯ; ಮಣ್ಣು ಉಪಾದಾನ ಕಾರಣ. (೨) ನಿಮಿತ್ತ ಕಾರಣ: ಜ್ಞಾನ ಇಚ್ಛೆ ಹಾಗು ಕ್ರಿಯೆಗಳುಳ್ಳುದು. ಉದಾ: ಕುಂಬಾರ. (೩) ಸಹಕಾರಿ ಕಾರಣ: ಕಾರ್ಯ ನಿರ್ಮಿಸಲು ಬೇಕಾಗುವ ಉಪಕರಣಗಳು. ಉದಾ: ಚಕ್ರ ದಂಡ ಇತ್ಯಾದಿ. ನಾವು ಬಾಳುತ್ತಿರುವ ಮಹಾನ್ ಜಗತ್ತು ಕೂಡ ಒಂದು ಬೃಹತ್ ಕಾರ್ಯ. ಅದು ತನ್ನಿಂದ ತಾನೇ ಉತ್ಪನ್ನವಾಗದು. ಮೂರು ಕಾರಣಗಳು ಬೇಕೇ ಬೇಕು. ಆ ಕಾರಣಗಳು ಯಾವವು?

ಕಾರ್ಯಕ್ಕೆ ಕಾರಣವಾಗಬಹುದಾದ ವಸ್ತುಗಳು ಕಾರ್ಯೋತ್ಪತ್ತಿಯಾಗುವ ಮೊದಲೇ ಇರಬೇಕು. ಇದು ಕಾರಣ ಮೀಮಾಂಸೆಯ ನಿಯಮ, ಹಾಗಾದರೆ, ಈ ಜಗತ್ತು, ಸೂರ್ಯ, ಚಂದ್ರ, ನಕ್ಷತ್ರ, ದೇಹ, ಮನಸ್ಸು, ಬುದ್ಧಿ, ಭಾವ–ಇವು ಏನೂ ಹುಟ್ಟಿರದ ಮುನ್ನ ವಿಶ್ವದಲ್ಲಿ ಏನಿದ್ದವು? ಅನುಭಾವಿಗಳು ಹೇಳುವಂತೆ ಎರಡೇ ಎರಡು ವಸ್ತುಗಳಿದ್ದವು. ಒಂದು ಪರಮಾತ್ಮ, ಇನ್ನೊಂದು ದಿವ್ಯಶಕ್ತಿ! ಅವೆರಡೂ ಕಾಲಾತೀತ. ಇನ್ನು, ಪರಮಾತ್ಮನು ನಿರ್ವಿಕಾರ ನಿರವಯುವ ನಿರ್ಗುಣನಾದುದರಿಂದ ಜಗತ್ತೆಂಬ ಕಾರ್ಯದ ಉಪಾದಾನ ಕಾರಣವಾಗಲಾರ. ಜ್ಞಾನ ಇಚ್ಛಾ ಕ್ರಿಯಾಶೂನ್ಯನಾದುದರಿಂದ ನಿಮಿತ್ತ ಕಾರಣವಾಗಲಾರ. ಹೀಗಾಗಿ ದೇವಾತ್ಮಶಕ್ತಿಯೊಂದೇ ಉಪಾದಾನ, ನಿಮಿತ್ತ ಹಾಗು ಸಹಕಾರಿ ಕಾರಣಗಳಾಗಿರಲೇಬೇಕಲ್ಲವೆ?

ದೇವಾತ್ಮಶಕ್ತಿಯು ಮೊಟ್ಟ ಮೊದಲು ವಿಕಾಸ ಹೊಂದಿ ಎರಡಾಯಿತು, (೧) ಶುದ್ಧ (೨) ಅಶುದ್ಧ–ಎಂದು. ಅಶುದ್ಧಶಕ್ತಿಯು ಗುಣಮಯ ಮತ್ತು ಪರಿಣಾಮಶೀಲ. ಅದೇ ವಿಶ್ವದ ಉಪಾದಾನ ಕಾರಣ. ಅದರ ಗರ್ಭದಲ್ಲಿರುವ ಸತ್ವಾದಿ ಗುಣಗಳು ಜಗತ್ತಿನಲ್ಲಿ ಹಾಸು ಹೊಕ್ಕಾಗಿ ನಿಂತಿವೆ. ಶುದ್ಧಶಕ್ತಿಯು ಜ್ಞಾನ ಇಚ್ಛಾ ಕ್ರಿಯಾ ಶಕ್ತಿರೂಪಿಣಿ, ಪರಮಾತ್ಮನ ಪ್ರಕಾಶವು ಜ್ಞಾನಶಕ್ತಿಯಲ್ಲಿ ಮೂಡಿದಾಗ ಭಾವೀ ವಿಶ್ವದ ಜ್ಞಾನ ತಲೆದೋರಿತು. ಪರಮಾತ್ಮನ ಪ್ರಕಾಶವು ಇಚ್ಛಾ ಶಕ್ತಿಯಲ್ಲಿ ಮೂಡಿದಾಗ ಜಗನ್ನಿರ್ಮಾಪಕ ಇಚ್ಛೆ ಉದಿಸಿತು. ಅದೇ ಪ್ರಕಾಶವು ಕ್ರಿಯಾಶಕ್ತಿಯಲ್ಲಿ ಮೂಡಿದಾಗ ಜಗತ್ತಿನ ನಿರ್ಮಾಣಕ್ಕೆ ಬೇಕಾಗುವ ಕಾರ್ಯಸಾಮರ್ಥ್ಯ ಮೂರ್ತಗೊಂಡಿತು. ಹೀಗೆ ಜ್ಞಾನ ಇಚ್ಛಾ ಕ್ರಿಯಾಯುಕ್ತವಾದ ಶುದ್ಧಶಕ್ತಿಯೇ ನಿಮಿತ್ತ ಕಾರಣ. ಆದರೆ ಈ ಉಪಾದಾನ ಕಾರಣವಾದ ಅಶುದ್ಧಶಕ್ತಿ ಮತ್ತು ನಿಮಿತ್ತ ಕಾರಣವಾದ ಶುದ್ಧಶಕ್ತಿಗಳೆರಡೂ

ಪರಮಾತ್ಮನ ಸಾನಿಧ್ಯದಲ್ಲಿ ಬಾಳುತ್ತಿರುವದರಿಂದ ಅವನೇ ವಿಶ್ವದ ಅಭಿನ್ನ ನಿಮಿತ್ತೋಪಾದಾನ ಕಾರಣನೆನಿಸುತ್ತಾನೆ.

ಭಗವಂತ:- "ವಾಯುವು ಒಂದು ಕ್ಷಣ ಬಿಡದೆ ಜಗತ್ತಿನ ತುಂಬ ಸಂಚರಿಸುತ್ತಿದೆ. ಅದು ಹುಟ್ಟುವದು, ಗತಿಶೀಲವಾಗಿ ಬಾಳುವದು ಆಕಾಶದ ಆಶ್ರಯದಲ್ಲಿ. ಆಕಾಶವಾದರೋ ನಿರ್ಲಿಪ್ತ. ವಾಯುವಿನ ವಿಕಾರಗಳಿಂದ ಅಸಂಸ್ಪೃಷ್ಟ; ಭೂಮಿಯ ಅಣು ಅಣುಗಳಲ್ಲಿ ವ್ಯಾಪಿಸಿದ್ದರೂ ಭೂಮಿಯ ಗಂಧ ಅದಕ್ಕೆ ಅಂಟಿಲ್ಲ; ನೀರೊಳಗಿದ್ದರೂ ನೀರು ಅದನ್ನು ತೋಯಿಸಿಲ್ಲ; ಬೆಂಕಿ ಅದನ್ನು ಸುಟ್ಟಿಲ್ಲ. ಅದರಂತೆ, ಅರ್ಜುನ, ನಾನು ಚಿದಾಕಾಶ. ನನ್ನ ಅಮರ ಆಶ್ರಯದಲ್ಲಿ ಭೂಮ್ಯಾದಿ ಬಿದ್ವಂತವಾದ ಮಹಾ ವಿಶ್ವವು ಪ್ರಚಂಡ ಗತಿಯಿಂದ ಕಾಲ ಪ್ರವಾಹದಲ್ಲಿ ಚಲಿಸುತ್ತಿದೆ, ಹುಟ್ಟಿನಿಂದ ಸಾವಿನೆಡೆಗೆ ಧಾವಿಸುತ್ತಿದೆ. ನನಗೆ ಮಾತ್ರ ಆ ವಿಶ್ವ-ವಿಕಾರದ ಹಾಗು ವಿಶ್ವಚಲನೆಯ ಸಂಬಂಧವಿಲ್ಲ.

"ಪಾರ್ಥ, ಅಸಂಖ್ಯ ಜೀವಿಗಳಿಂದ ಜಗತ್ತು ತುಂಬಿದೆ. ಆ ಜೀವಿಗಳ ಬಾಹ್ಯಾಂತರದಲ್ಲಿ ನಾನೇ ವಾಸಿಸಿದ್ದೇನೆ. ನನ್ನ ಪರಿಪೂರ್ಣ ಸ್ವರೂಪ ಸಾಗರದಲ್ಲಿ ಆ ಎಲ್ಲ ಜೀವಿಗಳು ಬಾಳಿವೆ. ನನ್ನಲ್ಲಿಯೇ ಅಳಿದು ಹೋಗುತ್ತಿವೆ. ಹಾಗಿದ್ದರೂ ನಾನು ನಿರ್ಲಿಪ್ತ! ದೇಹದ ಲಿಂಗ ವರ್ಣ ಜಾತಿ ಗೋತ್ರಗಳಾಗಲಿ, ಮನಸ್ಸಿನ ಧರ್ಮ ಕರ್ಮಗಳಾಗಲಿ, ಬುದ್ಧಿಯ ಮತ ಸಿದ್ಧಾಂತಗಳಾಗಲಿ ನನಗೆ ಸಂಬಂಧಿಸವು. ನಾನು ಸ್ತ್ರೀಯಲ್ಲ, ಪುರುಷನಲ್ಲ, ನಪುಂಸಕನಲ್ಲ; ಹಿಂದು ಬೌದ್ಧ ಜೈನನಲ್ಲ; ಗೃಹಸ್ಥ ಸನ್ಯಾಸಿ ಯಾವುದೂ ನಾನಲ್ಲ. ಆದರೂ ಎಲ್ಲವು ನನ್ನಲ್ಲಿದೆ. ಇವನ್ನು ತಿಳಿದವರೆ ದುಃಖದಿಂದ ಮುಕ್ತಿ ಪಡೆಯುವಿ."

ಸಂಬಂಧ:- ಮುಂದಿನ ನಾಲ್ಕು ಮಂತ್ರಗಳಲ್ಲಿ ಜಗತ್ತಿನ ಮತ್ತು ಪರಮಾತ್ಮ ಸ್ವರೂಪಗಳ ಬಗೆಗೆ ವಿವಿರಣೆ ಇದೆ.

ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ ।
ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥೭॥

ಅರ್ಥ:-ಕೌಂತೇಯ= ಅರ್ಜುನ, ಸರ್ವಭೂತಾನಿ=ಎಲ್ಲ ಪ್ರಾಣಿಗಳು ಕಲ್ಪಕ್ಷಯೇ= ಪ್ರಳಯಕಾಲದಲ್ಲಿ ಮಾಮಿಕಾಂ= ನನ್ನ ಪ್ರಕೃತಿಂ= ಪ್ರಕೃತಿಯನ್ನು ಯಾಂತಿ= ಸೇರುತ್ತವೆ. ಪುನಃ= ಮತ್ತೆ ಕಲ್ಪಾದೌ= ಸೃಷ್ಟಿಕಾಲದಲ್ಲಿ ತಾನಿ= ಅವುಗಳನ್ನು ಅಹಂ= ನಾನು ವಿಸೃಜಾಮಿ= ಸೃಷ್ಟಿಸುತ್ತೇನೆ.

ವಿವರಣೆ:- ಭಗವಂತ:- "ಪ್ರತಿ ಕಲ್ಪದ ಕೊನೆಯಲ್ಲಿ ಸರ್ವ ಪ್ರಾಣಿ ಪ್ರಪಂಚವು ನನ್ನ ಪ್ರಕೃತಿಯಲ್ಲಿ ಅಡಗುತ್ತದೆ. ಕಲ್ಪದ ಆದಿಯಲ್ಲಿ ನಾನೇ ನನ್ನ ಶಕ್ತಿಯ ಮೂಲಕ ಆ ಜೀವ ಪ್ರಪಂಚವನ್ನು ಮತ್ತೆ ನಿರ್ಮಿಸುತ್ತೇನೆ."

(೧) ಕಲ್ಪ:- ಇದೊಂದು ಕಾಲದ ಮಾಪನ. ಮನುಷ್ಯನ ೪೩ ಕೋಟಿ ೨೦ ಲಕ್ಷ ವರುಷಗಳೆಂದರೆ ಒಂದು ಕಲ್ಪ. ಬ್ರಹ್ಮನ ಒಂದು ದಿನವೆಂದರೂ

ಅಷ್ಟೇ. ಬ್ರಹ್ಮನ ರಾತ್ರಿ ಪ್ರಾರಂಭವಾದೊಡನೆ ಅವನ ಆಡಳಿತಕ್ಕೆ ಸಂಬಂಧಿಸಿದ ಜೀವ-ಜಗತ್ತು ಪ್ರಳಯವಾಗುತ್ತದೆ. ಆ ರಾತ್ರಿ ಮುಗಿದೊಡನೆಯೇ ಆ ಜಗತ್ತು ಮತ್ತೆ ರೂಪಗೊಳ್ಳುತ್ತದೆ. ಇದು ಬಲ್ಲವರ ನಂಬಿಕೆ.

(೨) ಕಲ್ಪಗಳು ಬಂದು ಹೋಗುತ್ತವೆ. ಅನೇಕ ಬ್ರಹ್ಮರು ವಿಶ್ವವನ್ನು ಆಳಿ ದೇವನಲ್ಲಿ ಒಂದಾಗುತ್ತಾರೆ. ದುರ್ದೈವದಿಂದ ಜೀವರು ಮಾತ್ರ ಜನ್ಮ-ಮರಣ ಚಕ್ರದಲ್ಲಿ ಅವ್ಯಾಹತವಾಗಿ ಸುತ್ತುತ್ತಲೇ ಇದ್ದಾರೆ. ಅವರಿಗೆ ವಿಶ್ರಾಮವಿಲ್ಲ, ಮಾನಸಿಕ ನೆಮ್ಮದಿಯಿಲ್ಲ. ವಿವಿಧ ವಾಸನೆ ಕಾಮನೆಗಳಿಂದ ವಿಹ್ವಲಿಸುತ್ತಾರೆ. ಅವರ ಹೃದಯದಲ್ಲಿ ಕೇವಲ ಅಂಧಕಾರ ತುಂಬಿದೆ. ಸಂಸಾರ ಎಂಬುದೊಂದು ಆ ಅಂಧಕಾರದಲ್ಲಿ ಕಾಣುವ ಚಿತ್ರ ನಾಟಕ. ಆ ನಾಟಕದ ತೋರಿಕೆಯ ವೈಭವಕ್ಕೆ ಮರುಳಾದ ಜೀವನು ಸುಖ ದುಃಖಗಳ ಸೆಳವಿಗೆ ಸಿಕ್ಕು ಕಾಲ ಪ್ರವಾಹದಲ್ಲಿ ಹರಿದು ಹೋಗುತ್ತಿದ್ದಾನೆ. ಜೀವನೀಗ ಸಾಹಸಪೂರ್ಣ ಸಾಧನೆಯಿಂದ ಆತ್ಮಬೆಳಗನ್ನು ಹೃದಯದಲ್ಲಿ ಆವಿರ್ಭವಿಸಿಕೊಳ್ಳಬೇಕು. ಆಗ ಅಂಧಕಾರವು ಇಲ್ಲ. ಸಂಸಾರ ಚಿತ್ರವಿಲ್ಲ. ಆ ಚಿತ್ರದ ತಾಣದಲ್ಲಿ ಪರಿಶುಭ್ರ ಪರದೆಯೊಂದೇ ಗೋಚರಿಸುತ್ತದೆ. ಅದುವೇ ಆತ್ಮಭಿತ್ತಿ! ಅಲ್ಲಿ ಪ್ರಶಾಂತಿ!

ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।
ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥೮॥

**ಅರ್ಥ:-** ಸ್ವಾಂ= ನನ್ನ ಪ್ರಕೃತಿಂ= ಪ್ರಕೃತಿಯನ್ನು ಅವಷ್ಟಭ್ಯ= ಸಹಾಯ ಮಾಡಿಕೊಂಡು, ಪ್ರಕೃತೇಃ ವಶಾತ್= ಪ್ರಕೃತಿ ವಶದಿಂದ (ಪ್ರಾಚೀನ ಕರ್ಮದ ಮೂಲಕ) ಅವಶಂ ಅಸ್ವತಂತ್ರವಾಗಿರುವ ಇದಂ= ಈ ಕೃತ್ಸ್ನಂ= ಸಮಸ್ತ ಭೂತಗ್ರಾಮಂ= ಪ್ರಾಣಿ ವರ್ಗವನ್ನು ಪುನಃ ಪುನಃ= ಮತ್ತೆ ಮತ್ತೆ ವಿಸೃಜಾಮಿ= ಹುಟ್ಟಿಸುತ್ತೇನೆ.

**ವಿವರಣೆ:–** (೧) ಪ್ರಕೃತಿ:- ಸಾಂಖ್ಯರ ಪ್ರಧಾನವು ಪುರುಷ ತಂತ್ರದಲ್ಲಿಲ್ಲ; ಅದು ಸ್ವತಂತ್ರ. ಮಾಯಾವಾದಿಗಳ ಮಾಯೆಯು ಪ್ರಾತಿಭಾಸಿಕ ಸತ್ತೆಯಲ್ಲಿದೆಯಾಗಿ ಮಿಥ್ಯೆ. ಆದ್ದರಿಂದ ಸ್ವಾಂ–ಪ್ರಕೃತಿಂ–ಎಂಬ ಪದ-ಸಮುದಾಯವು ಪ್ರಧಾನ ಮತ್ತು ಮಾಯೆಗಳನ್ನು ನಿರ್ದೇಶಿಸುವದಿಲ್ಲ. ಯಾವ ಪ್ರಕೃತಿಯು ದೇವನನ್ನು ಆಶ್ರಯಿಸಿದೆಯೋ, ದೇವನೊಂದಿಗೆ ಅಭಿನ್ನವಾಗಿ ನೆಲೆಸಿದೆಯೋ ಅದು ದೇವನ ಪ್ರಕೃತಿ. ಅದೇ "ದೇವಾತ್ಮಶಕ್ತಿ"! ಯೋಗಮಾಯೆ! ಆ ಶಕ್ತಿಯು ತಾಯಿ, ದೇವನು ತಂದೆ. ವಿಶ್ವವು ಅವರಿಬ್ಬರ ಸೃಷ್ಟಿ. ಶಕ್ತಿಯು ಶಿಲ್ಪಿ, ದೇವನು ಶಿಲ್ಪಿಯ ಪ್ರಜ್ಞೆ, ಜಗತ್ತು ಶಿಲ್ಪ! ಕರ್ಮನಿಯತಿಯೇ ದೇವಶಿಲ್ಪಿಯ ಅಮರ ಕಲಾಸೂತ್ರ!

(೨) ಪರಮಾತ್ಮನು ಆ ತನ್ನ ದಿವ್ಯ ಪ್ರಕೃತಿಯನ್ನು ಉಪಾದಾನವಾಗಿಟ್ಟುಕೊಂಡೇ ಸಮಸ್ತ ಪ್ರಾಣಿಗಳನ್ನು ಅವರವರ ಕರ್ಮಾನುಸಾರ ಪುನಃ ಪುನಃ ಸೃಷ್ಟಿಸುತ್ತಾನೆ.

ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।
ಉದಾಸೀನವದಾಸೀನಮಸ್ತಕಂ ತೇಷು ಕರ್ಮಸು ॥೯॥

ಅರ್ಥ:- ಧನಂಜಯ= ಅರ್ಜುನ, ತೇಷು ಕರ್ಮಸು= ಆ ಕರ್ಮಗಳಲ್ಲಿ ಅಸಕ್ತಂ= ಅಂಟದೆ ಉದಾಸೀನವತ್ ಆಸೀನಂ= ಉದಾಸೀನನಂತೆ ಇರುವ ಮಾಂ= ನನ್ನನ್ನು ತಾನಿ ಕರ್ಮಾಣಿ= ಆ ಕರ್ಮಗಳು ನ ನಿಬಧ್ನಂತಿ= ಬಂಧಿಸುವದಿಲ್ಲ.

ವಿವರಣೆ:- ಮೇಘವು ಮಳೆ ಸುರಿಸುತ್ತದೆ, ಆ ಮಳೆಯ ನೀರನೀಂಟಿದ ಬೀಜಗಳು ತಮ್ಮ ತಮ್ಮ ಸ್ವಭಾವಾನುಸಾರ ಬೆಳೆಯುತ್ತವೆ, ಇಲ್ಲವೆ ಕೊಳೆಯುತ್ತವೆ. ಆ ಎರಡೂ ಕ್ರಿಯೆಗಳಿಗೆ ಮೇಘವು ಹೊಣೆಯಲ್ಲ. ಹಾಗೆ ಪರಮಾತ್ಮನು ಚೈತನ್ಯ ವರ್ಷಾವ ಮಾಡುತ್ತಾನೆ. ಆ ಚೈತನ್ಯ ಜಲಬಿಂದುಗಳನ್ನು ಗ್ರಹಿಸಿದ ಜೀವಿಗಳು ತಮ್ಮ ಪೂರ್ವ ಕರ್ಮಾನುಸಾರ ವಿವಿಧ ದೇಹಗಳ ಧರಿಸಿ, ಸುಖ ದುಃಖಗಳ ಭೋಗಿಸಿ ಕೊನೆಗೆ ದೇಹ ಬಿಡುತ್ತವೆ. ಹಾಗೆ ಜೀವಿಗಳು ನಡೆಸುವ ವಿವಿಧ ಬದುಕಿಗೆ ಪರಮಾತ್ಮನು ಯಾವ ರೀತಿಯಿಂದಲೂ ಸಂಬಂಧಿಸಿಲ್ಲ. ಅವನು ನಿರ್ಲಿಪ್ತ. ಜೀವಿಗಳು ಅನುಭವಿಸುವ ಸುಖ ದುಃಖಗಳು ಅವನನ್ನು ಎಷ್ಟೂ ಬಂಧಿಸಲಾರವು.

ಕರ್ತೃತ್ವ:- ಇದು ಮೂರು ಬಗೆ: (ಅ) ಕರ್ಮಕರ್ತೃತ್ವ (ಬ) ಕರಣ ಕರ್ತೃತ್ವ (ಕ) ಸನ್ನಿಧಾನ ಕರ್ತೃತ್ವ.

ಕರ್ಮಕರ್ತೃತ್ವ:- ಧನ ಭೂಮಿ ಕನಕ ಕಾಮಿನಿ ಕೀರ್ತಿ ಇಂಥ ವಸ್ತುಗಳಿಗೆ ಪ್ರಾಪಂಚಿಕ ಭೋಗ ಪಡಿ ಪದಾರ್ಥವೆಂದು ನಾಮ. ಇವುಗಳಲ್ಲಿ ಪೂರ್ಣ ಆಸಕ್ತಿ ತಾಳಿ, ಇವುಗಳಿಂದಲೇ ತನ್ನ ಹಿತವೆಂದು ಕಲ್ಪಿಸಿ ಹಗಲು ರಾತ್ರಿ ಅವಿಶ್ರಾಂತವಾಗಿ ದುಡಿಯುವದು ಕರ್ಮಕರ್ತೃತ್ವ. ಕರ್ಮ ಕರ್ತೃವಿನಲ್ಲಿ ಕರ್ತೃತ್ವಾಭಿಮಾನವಿದೆ, ಮಮಕಾರವಿದೆ; ಸಂಸಾರದಲ್ಲಿ ಆಳವಾಗಿ ಮುಳುಗಿದ ಇವನು ಅವಿವೇಕಿ. ಅಂದರೆ ಸತ್ಯಾಸತ್ಯದ ಪ್ರಜ್ಞೆಯಿಲ್ಲದವ; ದೇಹವೇ ತಾನೆಂದು ತಿಳಿದವ.

ಕರಣ ಕರ್ತೃತ್ವ:- ಸಂಕಲ್ಪ ಮಾತ್ರದಿಂದೆ ಕಾರ್ಯಮಾಡುವದು ಕರಣ ಕರ್ತೃತ್ವ. ಈ ಕರ್ತೃತ್ವ ಉಳ್ಳವರು ಯೋಗಿಗಳು. ಇವರಲ್ಲಿ ಬಹು ಜನರು ತಮ್ಮ ಅಸಾಧಾರಣ ಶಕ್ತಿ-ಸಾಮರ್ಥ್ಯದ ಬಗ್ಗೆ ಅಭಿಮಾನ ಪಡುತ್ತಾರೆ. ಅಸಮರ್ಥ ಜನರನ್ನು ಕೀಳೆಂದು ಬಗೆಯುತ್ತಾರೆ. ತಮ್ಮ ಸರಿಸಮ ಯೋಗಿಗಳನ್ನು ಕಂಡರೆ ಮಾತ್ಸರ್ಯದಿಂದ ಕಳವಳಿಸುತ್ತಾರೆ. ತಮಗಿಂತ ಸಮರ್ಥರನ್ನು ನೋಡಿದರೆ ದ್ವೇಷ ಕಾರುತ್ತಾರೆ. ಆದುದರಿಂದ ಇವರೂ ಬದ್ಧರೇ ಸರಿ.

ಸನ್ನಿಧಾನ ಕರ್ತೃತ್ವ:- ಸನ್ನಿಧಾನ ಮಾತ್ರದಿಂದ ಕಾರ್ಯ ನಿರ್ವಹಿಸುವದು ಸನ್ನಿಧಾನ ಕರ್ತೃತ್ವ. ಸೂರ್ಯನ ಪ್ರಕಾಶದ ಸನ್ನಿಧಿಯಲ್ಲಿ ಕಮಲ ಅರಳುತ್ತದೆ, ಮೇಣ ಕರಗುತ್ತದೆ, ಕೆಸರು ಒಣಗುತ್ತದೆ. ಈ ಕಾರ್ಯಗಳು ತನ್ನಿಂದ ಜರುಗಿದವೆಂಬ ಕಲ್ಪನೆ ಅವನಿಗಿಲ್ಲ. ಅವನು ಸನ್ನಿಧಾನ ಕರ್ತೃ.

ಹಾಗೆಯೇ, ಪರಮಾತ್ಮನ ಚೈತನ್ಯ ಪ್ರಕಾಶದ ಅಡಿಯಲ್ಲಿ ಪ್ರಕೃತಿಯು ಅರಳು
ತ್ತದೆ, ಅಹಂಕಾರ ಸ್ಫುರಿಸುತ್ತದೆ, ಮನಸ್ಸು ಹರಿದಾಡುತ್ತದೆ, ದೇಹ ಪರಿಣಮಿ
ಸುತ್ತದೆ ಹಾಗು ಬ್ರಹ್ಮಾಂಡಗಳು ಉರುಳುತ್ತವೆ. ಈ ಯಾವ ಕಾರ್ಯದ
ಸೋಂಕು ದೇವನಿಗಿಲ್ಲ. ಅವನ ಸನ್ನಿಧಿಯಲ್ಲಿ ಸಾಗಿದ ಅಸಂಖ್ಯ ಕಾರ್ಯಗಳು
ಅವನನ್ನೆಂತು ಬಂಧಿಸುವದಿಲ್ಲ. ಅಷ್ಟೇ ಅಲ್ಲ, ಈ ಎಲ್ಲ ಕ್ರಿಯೆಗಳು ಸಾಗಿವೆ, ಸಾಗು
ತ್ತಿವೆ ಎಂಬುದು ಅವನಿಗೆ ಗೊತ್ತೇ ಇಲ್ಲ. ಅವನ ದೃಷ್ಟಿಯಲ್ಲಿ ಎಲ್ಲ ಶಾಂತ!

ಅಸಕ್ತಃ:– ಕರ್ಮ ಹಾಗು ಕರಣ ಕರ್ತೃಗಳಾದ ಜೀವರು ಪ್ರಪಂಚದಲ್ಲಿ
ಆಸಕ್ತರು; ಅವರ ದೇಹಗಳು ಭೋಗದಿಂದ ಹಾಗು ವಯಸ್ಸಿನಿಂದ ಜರ್ಜರಿ
ತವಾದರೂ ಅವರ ಮನಸ್ಸು ಸಂಸಾರದಲ್ಲಿ ಮುಳುಗಿಬಿಟ್ಟಿದೆ. ಉಣ್ಣೆ ಕೆಚ್ಚಲಿ
ನಲ್ಲಿಯ ರಕ್ತ ಹೀರುವದೇ ವಿನಃ ಅಲ್ಲೇ ಇರುವ ದುಗ್ಧ ಉಂಟಲರಿಯದು. ಅದ
ರಂತೆ, ಬದ್ಧ ಜೀವರು ಸಂಸಾರದಲ್ಲಿಯ ವಿಷಯಗಳನ್ನು ಸವಿಯಲೆಳಸುವರೇ
ಹೊರತು ಅದೇ ಸಂಸಾರದೊಳಗೆ ತುಂಬಿದ ದಿವ್ಯಾನಂದರೂಪ ದುಗ್ಧವನ್ನು
ಆಸ್ವಾದಿಸಲರಿಯರು. ಬೇಡಿ ಸೆರೆ ಮುಂತಾದ ಜಟಗಳನ್ನು ಬಿಡಿಸಬಹುದು;
ಸಂಸಾರ ಜಟವನ್ನು ಮಾತ್ರ ಸಹಜವಾಗಿ ಬಿಡಿಸಲಾಗದು.

ಪರಮಾತ್ಮನು ಈ ಜೀವಿಯಂತೆ ಆಸಕ್ತನಲ್ಲ, ಅಸಕ್ತ. ವಿಶ್ವವನ್ನು
ನಿರ್ಮಿಸಿದನಾದರೂ ನಿರ್ಲಿಪ್ತ. ಅವನ ಸಾನಿಧ್ಯದಲ್ಲಿ ಅನೇಕ ಕಾರ್ಯಗಳು
ಸಾಗಿವೆ. ಅವನು ಮಾತ್ರ ಪೂರ್ಣ ಉದಾಸಿನನಂತೇ ನೆಲೆಸಿದ್ದಾನೆ.

ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।
ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥೧೦॥

ಅರ್ಥ:– ಕೌಂತೇಯ=ಕುಂತಿ ಪುತ್ರನೆ, ಮಯಾಧ್ಯಕ್ಷೇಣ=ಅಧ್ಯಕ್ಷನಾದ ನನ್ನಿಂದ
ಪ್ರಕೃತಿಃ = ಪ್ರಕೃತಿಯು, ಸಚರಾಚರಮ್= ಚರಾಚರಾತ್ಮಕ ಜಗತ್ತನ್ನು, ಸೂಯತೇ=
ಉತ್ಪತ್ತಿ ಮಾಡುತ್ತದೆ, ಅನೇನ ಹೇತುನಾ= ಈ ಕಾರಣದಿಂದ, ಜಗತ್= ಜಗತ್ತು, ವಿಪರಿ
ವರ್ತತೇ = ಸುತ್ತುತ್ತಿದೆ.

ವಿವರಣೆ:– ಭಗವಂತ:– "ಅರ್ಜುನ, ಪಾಂಡುರಾಜನ ಅಧ್ಯಕ್ಷತೆಯಲ್ಲಿ
ಕುಂತಿದೇವಿಯು ಮಂತ್ರ ಶಕ್ತಿಯಿಂದ ನಿನಗೆ ಜನ್ಮ ನೀಡಿವಳಲ್ಲವೆ? ಹಾಗೆಯೇ
ನನ್ನ ಪವಿತ್ರ ಅಧ್ಯಕ್ಷತೆಯಲ್ಲಿ ( ಸಾನಿಧ್ಯದಲ್ಲಿ ) ಪ್ರಕೃತಿಯು ಯೋಗಮಾಯಾ
ಸಾಮರ್ಥ್ಯದಿಂದ ಚರಾಚರ ಜಗತ್ತನ್ನು ಹೆತ್ತಳು. ಅವಳು ಕರ್ಮಕಾರಿಣಿಯು
ನಾನು ಕರ್ಮಾಧ್ಯಕ್ಷನು.

ಜೀವರು ಅವರವರ ಸಂಸ್ಕಾರದನುಸಾರ ವ್ಯವಹರಿಸುತ್ತಾರೆ. ಒಬ್ಬನಿಗೆ
ತ್ಯಾಗದಲ್ಲಿ ಪ್ರೇಮ. ಒಬ್ಬನಿಗೆ ಭೋಗದಲ್ಲಿ ರತಿ. ಒಬ್ಬ ದೇವಪ್ರೇಮಿ, ಮತ್ತೊಬ್ಬ
ಧನಪ್ರೇಮಿ. ಜಗತ್ತಿನಲ್ಲಿ ಒಬ್ಬರಂತೆ ಒಬ್ಬರಿಲ್ಲ. ಅದೇ ವಿಶ್ವದ ವೈಶಿಷ್ಟ್ಯ. ಆಯಾ
ದೇಹಸ್ಥವಾದ ವಾಸನಾ ಗ್ರಂಥಿಯೇ ಆಯಾ ವ್ಯಕ್ತಿಯ ಭಿನ್ನ ಜೀವನಕ್ಕೆ ಕಾರಣ.

ನಾನಾದರೋ ಅವರೆಲ್ಲರ ಸಾಕ್ಷಿಯಾಗಿ ನೋಡುತ್ತೇನೆ. ನನ್ನತ್ತ ಮುಖ ಮಾಡದ ಅವರು ಅನಾತ್ಮವನ್ನೇ ನೆಚ್ಚಿ ಭವರಾಟಾಳದಲ್ಲಿ ಪರಿಭ್ರಮಿಸುತ್ತಾರೆ. ಲೋಕ ಲೋಕಂಗಳು ನನ್ನ ಕೃಪಾಛತ್ರದ ನೆರಳಲ್ಲಿ ತಿರಗುತ್ತಿವೆ."

ಶ್ರುತಿಯಲ್ಲಿ ಕೂಡ ಭಗವಂತನ ಮಾತಿಗೆ ಪ್ರಮಾಣವಿದೆ.

"ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ॥
ಕರ್ಮಾಧ್ಯಕ್ಷಃ ಸರ್ವ ಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥

ದೇವನು ಒಬ್ಬನು, ಸರ್ವ ಪ್ರಾಣಿಗಳಲ್ಲಿ ಗುಪ್ತನು, ಸರ್ವ ವ್ಯಾಪಕನು ಪ್ರಾಣಿಗಳ ಅಂತರಾತ್ಮನು. ಸರ್ವ ಕರ್ಮಗಳಿಗೆ ಅಧಿಕರಣನು. ಸರ್ವ ಭೂತಗಳ ಆಶ್ರಯನು. ಸಾಕ್ಷಿಯು. ಜ್ಞಾನ ರೂಪನು. ಮತ್ತು ಕೇವಲ ನಿರ್ಗುಣನು, (ಶ್ವೇ. ಶ್ವ ೬–೧೧)

ಸಂಬಂಧ:– ಮುಂದಿನ ಎರಡು ಮಂತ್ರಗಳಲ್ಲಿ ಮೂಢರು ದೇವನನ್ನು ತಿಳಿಯರು ಎಂಬ ಸಂಗತಿಯು ನಿರುಕ್ತವಾಗಿದೆ.

ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥೧೧॥

ಅರ್ಥ:– ಭೂತಮಹೇಶ್ವರಂ= ಸರ್ವೇಶ್ವರನಾದ ಮಮ= ನನ್ನ ಪರು ಭಾವಂ= ಪರಮ ಸ್ವರೂಪವನ್ನು ಅಜಾನಂತಃ = ತಿಳಿಯದಿರುವ, ಮೂಢಾಃ = ಮೂಢರು ಮಾನುಷೀಂ ತನುಂ= ಮನುಷ್ಯ ದೇಹವನ್ನು ಆಶ್ರಿತಂ= ಆಶ್ರಯಿಸಿರುವ ಮಾಂ= ನನ್ನನ್ನು ಅವಜಾನಂತಿ= ತಿರಸ್ಕರಿಸುತ್ತಾರೆ.

ವಿವರಣೆ:– ಭಗವಂತ:– "ಕೌಂತೇಯ, ನಾನು ಮನುಷ್ಯ ದೇಹವನ್ನು ಧರಿಸಿದ್ದೇನೇನೋ ನಿಜ; ಆದರೆ ವಾಸ್ತವಿಕವಾಗಿ ನಾನು ಅಜ, ನಿತ್ಯ, ಪೂರ್ಣ ಹಾಗು ಸನಾತನ; ಎಲ್ಲ ದೇಹಗಳ ಹೃದಯದಲ್ಲಿ ಕುಳಿತಿರುವ ಸರ್ವೇಶ್ವರ. ವಿಶ್ವದ ಅಂತರ್ಯನಿವಾಸಿಯಾದ ಭೂತೇಶ್ವರ. ಮೂಢ ಜನರು ತಮ್ಮನ್ನೇ ತಾವು ತಿಳಿಯರೆಂದಾಗ ನನ್ನನ್ನೇನು ತಿಳಿಯುತ್ತಾರೆ? ಅವರಿಗೆ ನಾನು ಧರಿಸಿರುವ ಮಾನವೀ ದೇಹ ಕಾಣುತ್ತಿದೆಯೇ ಹೊರತು ಒಳಗಿರುವ ನನ್ನ ಅಮರ ಸ್ವರೂಪ ಕಾಣದು! ಆದ್ದರಿಂದ ಅವರು ನನ್ನನ್ನು ದೇವನಲ್ಲವೆಂದು ತಿರಸ್ಕರಿಸುತ್ತಾರೆ."

(೧) ಮೂಢಾಃ:– ಅನಾತ್ಮ ವಸ್ತುಗಳ ಅಜ್ಞಾನವು ತೂಲಾವಿದ್ಯೆ. ಪರಮಾತ್ಮ ವಸ್ತುವಿನ ಅಜ್ಞಾನವು ಮೂಲಾವಿದ್ಯೆ. ಭೌತ ಶಿಕ್ಷಣದಿಂದ ತೂಲಾ ವಿದ್ಯೆ ನಾಶ. ತೂಲಾವಿದ್ಯೆಯನ್ನು ಕಳೆದುಕೊಂಡವರು ಪಂಡಿತರು. ಮೂಲಾ ವಿದ್ಯೆಯನ್ನು ಕಳೆದುಕೊಂಡವರು ಸಂತರು. ಯಾರು ಯಾರು ಸಂತರಲ್ಲವೋ, ಯಾರು ತಮ್ಮ ಪವಿತ್ರ ಆತ್ಮಸ್ವರೂಪವನ್ನು ಅರಿಯಲಾರರೋ ಅವರೆಲ್ಲ ಮೂಢರು. ಲೌಕಿಕ ದೃಷ್ಟಿಯಲ್ಲಿ ಅವರು ಬಲ್ಲಿದರಾದರೂ ತಾತ್ವಿಕವಾಗಿ ಬುದ್ಧಿ ಹೀನರು.

ಮೂಲಾವಿದ್ಯೆಯು ಎರಡು ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. (1) ಕಾಮರೂಪ ತಾಳಿ ಜೀವರನ್ನು ವಿಷಯ ವ್ಯಾಮೋಹದಲ್ಲಿ ಮುಳುಗಿಸುತ್ತದೆ. ಆತ್ಮನ ಆನಂದ ರೂಪವನ್ನು ಮರೆಮಾಡುತ್ತದೆ. (2) ಕರ್ಮರೂಪ ತಾಳಿ ಜೀವರಲ್ಲಿ ಕರ್ತೃತ್ವ ಭೋಕ್ತೃತ್ವಾದಿ ಹೀನ ಭಾವನೆಗಳನ್ನು ಹುಟ್ಟಿಸುತ್ತದೆ. ಆತ್ಮನ ಅಕರ್ತಾ, ಅಭೋಕ್ತಾ ಮುಂತಾದ ಪಾವನ ಲಕ್ಷಣಗಳನ್ನು ಮುಚ್ಚಿ ಬಿಡುತ್ತದೆ. ಈ ಕಾಮ ಮತ್ತು ಕರ್ಮಗಳ ಬಲೆಯಲ್ಲಿ ಬಿದ್ದ ಜೀವರಿಗೆ ಕ್ರಮವಾಗಿ ಕ್ಷಿಪ್ತ, ವಿಕ್ಷಿಪ್ತ ಎನ್ನುತ್ತಾರೆ. ಇವರೂ ಮೂಢರೇ.

(೨) ಮೂಢರಿಗೆ ಅಂತಶ್ಚಕ್ಷುವಿಲ್ಲ. ಗುರು ದೇವರಲ್ಲಿ ವಿಶ್ವಾಸವಿಲ್ಲ. ಶ್ರುತಿ ಭಗವತಿ ಹಾಗು ತತ್ತ್ವದರ್ಶಿಗಳು ಘಂಟಾಘೋಷವಾಗಿ ದೇವನ ವಿಶ್ವವ್ಯಾಪಿತ್ವವನ್ನು ಕೊಂಡಾಡಿದರೂ ಆ ಮಾತನ್ನು ಕಿವಿಗೆ ಹಾಕಿಕೊಳ್ಳದ ಅವಿವೇಕಿಗಳಿವರು. 'ನನಗೆ ನಾಲಿಗೆಯಿಲ್ಲ' ಎಂದು ತನ್ನ ನಾಲಿಗೆಯಿಂದಲೇ ಹೇಳುವವ ಎಷ್ಟು ಮರುಳನೋ, ತಾನೇ ದೇವನಿದ್ದು 'ದೇವನಿಲ್ಲ' ಎಂದು ಹೇಳುವವ ಅಷ್ಟೇ ಮರುಳ. ಇಂಥ ಅವಿಪಶ್ಚಿತರ ವಿಚಾರಗಳು ವಿಚಿತ್ರ.

(೩) ಪರಮಾತ್ಮನು ವಿಶ್ವಧಾರ, ವಿಶ್ವವ್ಯಾಪಿ. ಸಕಲ ಪ್ರಾಣಿಗಳ, ಸರ್ವ ಮಾನವರ ಹೃದ್ಗುಹಾ ನಿವಾಸಿ. ಅವನ ದಿವ್ಯ ಪ್ರೇರಣೆ ಪಡೆದು ಜೀವರು ಬದುಕುತ್ತಾರೆ; ಜಗತ್ತು ಬಾಳುತ್ತದೆ. ಅವನು ವಿಶ್ವಾತೀತನೂ ಅಹುದು, ವಿಶ್ವಾಂತರ್ಯಾಮಿಯೂ ಅಹುದು. ನಾವು ಕಾಣುವ ವಸ್ತುಗಳಲ್ಲಿ ವ್ಯಕ್ತಿಗಳಲ್ಲಿ ಅವನೇ ನೆಲೆಸಿದ್ದಾನೆ. ಜ್ಞಾನಬೋಧೆ ಮಾಡುವ ಗುರುಗಳು, ಲೋಕಸಂಗ್ರಾಹಕ ಸಂತರು, ನಿಷ್ಕಾಮಕರ್ಮಯೋಗಿಗಳು ಸಾಕ್ಷಾತ್ ದೇವರೂಪ. ಮೂಢರಿಗೆ ಇದೆಲ್ಲ ತಿಳಿಯದು.

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥೧೨॥**

**ಅರ್ಥ:**-ಮೋಘಾಶಾಃ= ನಿಷ್ಫಲವಾದ ಆಶೆಯುಳ್ಳ, ಮೋಘಕರ್ಮಾಣಃ= ನಿರರ್ಥಕವಾದ ಕರ್ಮವುಳ್ಳ ಮೋಘಜ್ಞಾನಾಃ= ವ್ಯರ್ಥವಾದ ಜ್ಞಾನವುಳ್ಳ ವಿಚೇತಸಃ= ಅವಿವೇಕಿಗಳು ಮೋಹಿನೀಂ= ಮೋಹಕಾರಿಯಾದ ರಾಕ್ಷಸೀಂ= ರಾಕ್ಷಸರ ಚ= ಮತ್ತು ಆಸುರೀಂ= ಅಸುರರ ಪ್ರಕೃತಿಂ= ಸ್ವಭಾವವನ್ನು ಶ್ರಿತಾಃ ಏವ= ಆಶ್ರಯಿಸುತ್ತಾರೆ.

**ವಿವರಣೆ:**– ಮನುಷ್ಯನು ನಾಲ್ಕು ಅತ್ಯಮೂಲ್ಯ ಸಂಪದಗಳನ್ನು ಪರಮಾತ್ಮನಿಂದ ವರವಾಗಿ ಪಡೆದಿದ್ದಾನೆ. ಅವು: (೧) ಇಚ್ಛಾಶಕ್ತಿ (ಆಶಾ) (೨) ಕಾರ್ಯಶಕ್ತಿ (ಯತ್ನ) (೩) ಜ್ಞಾನಶಕ್ತಿ (೪) ಚೇತಸ್ (ಮತಿ). ಇಚ್ಛಾಶಕ್ತಿ ಸಂಪದವನ್ನು ದೇವನ ಚರಣದಲ್ಲಿ ಸಮರ್ಪಿಸಿದವ ಮುಮುಕ್ಷು; ಕಾರ್ಯಶಕ್ತಿ ಸಂಪದವನ್ನು ದೇವನಡಿಗೆ ನೀಡಿದವ ಅಭ್ಯಾಸಿ; ಜ್ಞಾನಶಕ್ತಿಸಿರಿಯನ್ನು ಶಿವನಿಗಾಗಿ ನಿಯೋಗಿಸಿದವ ಅನುಭವಿ; ಮತಿಶಕ್ತಿಸಿರಿಯನ್ನು ಬ್ರಹ್ಮನಲ್ಲಿ ಹವಿಗೊಳಿ

ಸಿದವ ಅಪರೋಕ್ಷಾನುಭಾವಿ! ಈ ನಾಲ್ವರ ಜನ್ಮ ಸಾರ್ಥಕ. ಇವರ ಸಂಪದಗಳು
ಪಾವನ; ಚಿರಶಾಂತಿಯು ಕೈವಶ. ಜಗತ್ತಿನ ಜನರೆಲ್ಲ ಭಗವಂತನ ಕರುಣೆ
ಗಾಗಿಯೇ ತಮ್ಮ ಶಕ್ತಿಸಿರಿಯನ್ನು ಅರ್ಪಿಸಿದ್ದರೆ ಜಗತ್ತು ದೇವ ರಾಜ್ಯವಾಗು
ತ್ತಿತ್ತು. ದುರ್ದೈವದಿಂದ ಹಾಗಾಗಲಿಲ್ಲ. ಬಹು ಜನರು ಕ್ಷಣಭಂಗುರ ವಿಷಯ
ಗಳಿಗಾಗಿ ತಮ್ಮೆಲ್ಲ ಇಚ್ಛೆ, ಯತ್ನ, ಜ್ಞಾನ ಹಾಗು ಮತಿಗಳನ್ನು ವ್ಯರ್ಥವಾಗಿ
ಬಳಸಿದರು: ಬಳಸುತ್ತಿದ್ದಾರೆ. ಅಂಥವರಿಗೆ ಪರಮಾತ್ಮನು ವಿಚೇತಸರು (ಮತಿ
ಹೀನರು) ಎಂದಿದ್ದಾನೆ.

ವಿಚೇತಸರ ಸ್ವಭಾವ ಮೂರು ಬಗೆಯದು:

(೧) ರಾಕ್ಷಸೀ ಸ್ವಭಾವ: ದಯೆ, ಕಾರುಣ್ಯ, ಪ್ರೇಮಗಳಿಲ್ಲದ ಸ್ವಭಾವ.
ದೀನ ದಲಿತ ದರಿದ್ರ ಜನರ ರಕ್ತ ಹೀರಿ ದ್ರವ್ಯ ಸಂಚಯ ಮಾಡುವವರೆಲ್ಲ
ರಾಕ್ಷಸರು. ಅನ್ಯರ ಕಣ್ಣುಗಳಿಂದ ನೀರು ಹರಿಯುವಂತಾದರೆ, ಬರಗಾಲದ ಕರಾಳ
ಹಸ್ತದಲ್ಲಿ ಸಿಕ್ಕು ಜನರು ಕಳವಳ ಪಟ್ಟರೆ ರಾಕ್ಷಸ ಸ್ವಭಾವದವರಿಗೆ ಸಂತೋಷ.
ಲಂಚ ಭ್ರಷ್ಟಾಚಾರ ಕಳ್ಳವ್ಯಾಪಾರ ಮೋಸಗಳಲ್ಲಿ ತೊಡಗಿದವರು ನರರಾಕ್ಷ
ಸರು! (೨) ಆಸುರೀ ಸ್ವಭಾವ: ಕಾಮ ದ್ವೇಷಗಳಿಂದ ಕೂಡಿದ ಸ್ವಭಾವ. ಜೀವ
ನದ ಪ್ರತಿ ನಿಮಿಷವನ್ನು ಕಾಮತೃಪ್ತಿಗಾಗಿ ವ್ಯಯಿಸುವ, ಇತರರ ಮೇಲೆ
ದ್ವೇಷ ಕಾರುವ. ಪತಿತರನ್ನು ದರ್ಪದಿಂದ ತುಳಿದು ಹಾಕುವ ವ್ಯಕ್ತಿಗಳು ಅಸು
ರರು. (೩) ಮೋಹಿನೀ ಸ್ವಭಾವ: ಭೋಗೋನ್ಮಾದ, ಅವಿಚಾರ, ಆಲಸ್ಯಗಳಿಂದ
ಕೂಡಿದುದು ಮೋಹಿನೀ ಸ್ವಭಾವ. ಪರಿಣಾಮಗಳ ಬಗ್ಗೆ ವಿವೇಚನೆ. ಮಾಡದೆ
ಪಶುಗಳಂತೆ ವಿಷಯಗಳತ್ತ ನುಗ್ಗುವವರು ಈ ಸ್ವಭಾವದ ಜನ. ಇವರಿಗೆ ಸುರಾ
ಪಾನವು ಸುಧಾಪಾನ. ಮಾಂಸಾಹಾರವು ಮಿಷ್ಟಾನ್ನ. ಲೆತ್ತ ಚದುರಂಗ
ಮುಂತಾದ ಆಟಗಳು ಕಾಯಕ!

ಹೀಗೆ ಮೂರು ಪ್ರಕಾರದ ಸ್ವಭಾವವುಳ್ಳ ವಿಚೇತಸರು ತಮಸಾವೃತರು,
ಕತ್ತಲೆಯ ಜೀವಿಗಳು. ತಮ್ಮ ಜೀವನವನ್ನು ತಾವೇ ಹಾಳು ಮಾಡಿಕೊಳ್ಳುವ
ಆತ್ಮಘಾತಿಗಳು.

"ಅಸೂರ್ಯಾನಾಮ ತೇ ಲೋಕಾಃ ಅಂಧೇನ ತಮಸಾವೃತಾಃ।
ತಾನ್ ತೇ ಪ್ರೇತ್ಯಾಭಿಗಚ್ಛಂತಿ ಯೇಕೇಚಾತ್ಮಹನೋ ಜನಾಃ॥" (ಈ. ಉ. ೩.).

ಅಸುರರ ಪ್ರಸಿದ್ಧವಾದ ಲೋಕಗಳೆಲ್ಲ ಅಜ್ಞಾನ ಹಾಗು ದುಃಖದಿಂದ
ಮುಚ್ಚಿ ಹೋಗಿವೆ. ತಮ್ಮನ್ನು ತಾವು ಅರಿಯದ ಆತ್ಮಘಾತಿ ಜನರು ದೇಹ
ಬಿಟ್ಟು ಆ ಭಯಂಕರ ಲೋಕಗಳನ್ನು ಮೇಲಿಂದ ಮೇಲೆ ಪಡೆಯುತ್ತಾರೆ.

ಸಂಬಂಧ:– ದೈವೀ ಪ್ರಕೃತಿ (ಸ್ವಭಾವ)ಯವರ ವರ್ಣನೆ.

ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ।
ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥೧೩

ಅರ್ಥ:–ತು= ಆದರೆ, ದೈವೀಂ ಪ್ರಕೃತಿಂ= ದೈವೀ ಸ್ವಭಾವವನ್ನು ಆಶ್ರಿತಾಃ= ಆಶ್ರಯಿಸಿದ ಮಹಾತ್ಮಾನಃ= ಮಹಾತ್ಮರು ಭೂತಾದಿಂ= ಭೂತಗಳ ಮೂಲನಾದ ಅವ್ಯಯಂ = ಅವ್ಯಯನಾದ ಮಾಂ=ನನ್ನನ್ನು ಜ್ಞಾತ್ವಾ= ತಿಳಿದುಕೊಂಡು ಅನನ್ಯ ಮನಸಃ= ಅನನ್ಯ ಮನಸ್ಕರಾಗಿ ಭಜಂತಿ= ಭಜಿಸುತ್ತಾರೆ.

ವಿವರಣೆ:– (೧) ದೈವೀ ಸ್ವಭಾವ: ಶಮ ದಮ ದಾನ ವೇದಾಧ್ಯಯನ ಕ್ಷಮಾ ಶಾಂತಿ ಮುಂತಾದ ಸದ್ಗುಣಗಳಿಂದ ಕೂಡಿರುವುದು ದೈವೀ ಸ್ವಭಾವ. ಈ ಸ್ವಭಾವದವರು ಮಹಾತ್ಮರು. ಅವರಲ್ಲಿ ಸತ್ಯ ಪ್ರೇಮಗಳು ಅಂಗವಿಸಿವೆ. ದೇವಭಕ್ತಿ ಧ್ಯಾನಾಸಕ್ತಿಗಳು ಮೈಗೂಡಿವೆ. ವಿಷಯ ವಿಮುಖರಾದ ಅವರ ಭಾವ ವಿಶಾಲ. ಹೃದಯ ವಿಮಲ, ಮನಸ್ಸು ಸಬಲ. ಆ ಮನಸ್ಸು ಭೌತಿಕ, ಐಂದ್ರಿಯಿಕ ಪರಿಧಿಗಳನ್ನು ದಾಟಿ ಅಲೌಕಿಕ ಮಂಡಲಕ್ಕೇರಬಲ್ಲದು; ದೇವ ಪಥ ದಲ್ಲಿ ಅವ್ಯಾಹತವಾಗಿ ಚಲಿಸಬಲ್ಲದು. ನಿಜವಾಗಿ, ಮಹಾತ್ಮರು ಧನ್ಯರು; ಉಪ ನಿಷದ್ ವಿದ್ಯೆ ಅವರ ಉಸಿರಾಗಿದೆ.

(೨) ಭೂತಾದಿಂ ಅವ್ಯಯಂ ಜ್ಞಾತ್ವಾ, ಅನನ್ಯ ಮನಸಃ ಭಜಂತಿ: ಪಂಚ ಭೂತ, ಪಂಚ ತನ್ಮಾತ್ರೆ, ಅಹಂಕಾರ, ಮಹತ್ತು ಮತ್ತು ಪ್ರಕೃತಿ. ಈ ಸಕಲ ತತ್ತ್ವಗಳ ವಿಸ್ತಾರಕ್ಕೆ ವಿಶ್ವ ಎಂದು ನಾಮ. ಇದು ವ್ಯಯಶೀಲ, ಕ್ಷರ ಭಾವಯುಕ್ತ ಹಾಗು ಪರಿಮಿತ. ವಿಶ್ವದ ಈ ಪರಮ ಆದಿವಸ್ತುವೇ ದೇವ. ಅವನು ಅವ್ಯಯ, ಅಕ್ಷರ, ಅಪರಿಮಿತ. ಮಹಾತ್ಮರು ಅವನನ್ನು ಅನನ್ಯ ಮನಸ್ಸಿನಿಂದ ಭಜಿಸುತ್ತಾರೆ. ಅಂದರೆ, ವರ್ಣ ಆಶ್ರಮ ಜಾತಿ ವಂಶ ವರ್ಗ ಮುಂತಾದ ಸಾಂಸಾರಿಕ ಭಾವನೆಗಳನ್ನು ಪರಿತ್ಯಜಿಸಿ, ಆಂತರಿಕ ಕಾಮ ದ್ವೇಷ ದರ್ಪ ಅಭಿ ಮಾನ ಅಹಂಕಾರಗಳನ್ನೆಲ್ಲ ಅಡಗಿಸಿ ಸದ್ದೈವ ದೇವನನ್ನೇ ಚಿಂತಿಸುತ್ತಾರೆ ಲೌಕಿಕ ಆಗುಹೋಗುಗಳಿಂದ ನಿರ್ಲಿಪ್ತರಾಗಿ ಉಳಿಯುತ್ತಾರೆ.

(೩) ಅನನ್ಯ ಮನಸ್ಕತೆಗೆ ಭರತನ ಜೀವನ ಆದರ್ಶವಾಗಿದೆ. ಹದಿನಾಲ ವರ್ಷಗಳ ದೀರ್ಘಕಾಲ ರಾಜ್ಯವಾಳಿದರೂ ಅವನ ಭಾವದ ತುಂಬ ರಾಮ ಮೂರ್ತಿ ನೆಲೆಸಿತ್ತು. ಅವನ ಸುತ್ತೆಲ್ಲ ರಾಜ ವೈಭವ, ಕೈಯಲ್ಲಿ ರಾಜ ಸೂತ್ರ ಮೆಚ್ಚಿನ ಪ್ರಜೆಗಳು; ಇಷ್ಟಿದ್ದರೂ ಅವನ ಮನಸ್ಸು ಅವುಗಳತ್ತ ಹರಿಯಲಿ ಅದರಂತೆಯೇ ಸಂತರ ಜೀವನ. ಅವರು ಸಂಸಾರದಲ್ಲಿ ಬಾಳುತ್ತಾರೆ; ಆ ಅವರ ದೃಷ್ಟಿ, ಭಾವ ಹಾಗು ಬುದ್ಧಿಗಳು ಪರಮಾತ್ಮನಲ್ಲಿ ನೆಲೆಸಿವೆ.

ಭಗವಂತ:–"ನಾನು ಭೂತಗಳ ಆದಿ, ಪ್ರಕೃತಿಯ ಅಧಿಷ್ಠಾನ, ಅವ್ಯ ಅನಂತ. ಸದ್ಗುಣಗಣ ಶ್ರೀಯುಳ್ಳ ಮಹಾತ್ಮರು ನನ್ನನ್ನೇ ತಿಳಿಯುತ್ತ ನನ್ನಲ್ಲಿಯೇ ಮನವ ಮುಳುಗಿಸುತ್ತಾರೆ."

ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥

ಅರ್ಥ:–ಸತತಂ=ಯಾವಾಗಲು ಮಾಂ=ನನ್ನನ್ನು ಕೀರ್ತಯಂತಃ= ಕೀ ಡುವ, ಯತಂತಃ= (ನನ್ನ ಸಾಕ್ಷಾತ್ಕಾರಕ್ಕಾಗಿ) ಪ್ರಯತ್ನಿಸುವ, ಭಕ್ತ್ಯಾ ನಮಸ್ಯಂತಃ

ಯಿಂದ ನಮಿಸುವ, ದೃಢವ್ರತಾಃ=ಅಚಲ ವ್ರತಿಗಳಾದ, ಚ=ಮತ್ತು ನಿತ್ಯಯುಕ್ತಾಃ= ಏಕಾಗ್ರಚಿತ್ತರಾದ (ಮಹಾತ್ಮರು) ಮಾಂ= ನನ್ನನ್ನು ಉಪಾಸತೇ= ಉಪಾಸನೆ ಮಾಡುತ್ತಾರೆ.

ವಿವರಣೆ:– ಕೀರ್ತನ, ಯತ್ನ, ನಮನ, ದೃಢವ್ರತ, ಚಿತ್ತೈಕಾಗ್ರತಾ(ನಿತ್ಯಯೋಗ)– ಇವು ಈ ಮಂತ್ರದಲ್ಲಿರುವ ಅರ್ಥವತ್ತಾದ ಪದಗಳು; ಒಂದೊಂದನ್ನಾಗಿ ಅರಿಯೋಣ.

ಕೀರ್ತನ:– 'ನಾಮಮಾತ್ರೇಣ ವಸ್ತು ಸಂಕೀರ್ತನಂ' ಪರಮಾತ್ಮನ ನಾಮಮಾತ್ರ ಉಚ್ಚಾರಣೆಯು ಸಂಕೀರ್ತನ. ಪರಮಾತ್ಮನ ಗುಣ ಲಕ್ಷಣಗಳ ವರ್ಣನೆಯನ್ನು ಗುರು–ಶ್ರುತಿಗಳಿಂದ ಆಲಿಸುವದೂ ಸಂಕೀರ್ತನವೇ. ಉದಾ: "ಅಯಂ ಆತ್ಮಾ ಸರ್ವೇಷಾಂ ಭೂತಾನಾಂ ಮಧು. ಯಶ್ಚ ಅಸ್ಮಿನ್ನಾತ್ಮನಿ ತೇಜೋಮಯಃ ಅಮೃತಮಯಃ ಪುರುಷಃ" "ಇದಂ ಅಮೃತಂ ಬ್ರಹ್ಮ ಇದಂ ಸರ್ವಂ" "ಏತದ್ವೈ ಏತದಕ್ಷರಂ ಬ್ರಾಹ್ಮಣಾ ಅಭಿವದಂತಿ. ಅಸ್ಥೂಲಂ ಅನಣುಃ ಅವಾಯುಃ ಅನಾಕಾಶಂ ಅಸಂಗಂ ಅರಸಂ ಅಗಂಧಂ ಅಚಕ್ಷುಃ ಅಶ್ರೋತ್ರಂ ಅವಾಕ್ ಅಮನಃ ಅತೇಜಸ್ಕಂ ಅಪ್ರಾಣಂ ಅಮುಖಂ ಅಮಾತ್ರಂ ಅನಂತರಂ ಅಬಾಹ್ಯಂ" ಈ ಪರಮಆತ್ಮನು ಸರ್ವಭೂತಗಳ ಚೈತನ್ಯ ರಸ; ಅವನು ಈ ಜೀವಾತ್ಮನ ತೇಜೋರೂಪ; ಅಮೃತಮಯ ಪುರುಷ. ಈ ಅಮೃತ ದೇವನೇ ಇದೆಲ್ಲ ವಿಶ್ವ. ಬಲ್ಲಿದರು ಇದಕ್ಕೆ ಅದ್ವಯ, ಅಕ್ಷರ ಎನ್ನುತ್ತಾರೆ. ಇವನು ಸ್ಥೂಲನಲ್ಲ, ಅಣು ವಾಯು ಆಕಾಶ ಸಂಗ ರಸ ಗಂಧ ಚಕ್ಷು ಶ್ರೋತ್ರ ವಾಕ್ ಮನ ತೇಜಸ್ ಪ್ರಾಣ ಮುಖ ಪರಿಮಾಣ ಏನೂ ಅಲ್ಲ. ಇವನು ಒಳಗಿನವನಲ್ಲ ಹೊರಗಿನವನೂ ಅಲ್ಲ. "ಒಟ್ಟಿನಲ್ಲಿ ದೇವನು ಅವರ್ಣನೀಯ. ಹೀಗೆ ಶ್ರುತಿಗಳು ಕೀರ್ತಿಸಿವೆ. ಈ ಶ್ರುತಿ ವಚನಗಳನ್ನು ಗುರುಗಳಿಂದ ಕೇಳಿ, ತಿಳಿದು ಎಚ್ಚರಿಸುವದು ತಾತ್ವಿಕ ಕೀರ್ತನವಾಗಿದೆ. ಅದೇ ರೀತಿ ಮಂತ್ರ ಜಪ ಮತ್ತು ವೇದ ಪಠಣಗಳೂ ಕೀರ್ತನದ ಪ್ರಕಾರಗಳಾಗಿವೆ.

(೨) ಯತ್ನ:– ನಮ್ಮ ಮನವೆಂಬ ಭೂಮಿಯಲ್ಲಿ ಗುರುವು 'ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಎಂಬ ಬೀಜ ಬಿತ್ತುತ್ತಾನೆ. ಆ ಬೀಜ ಮೊಳಕೆಯೊಡೆದು ವೃಕ್ಷವಾಗುವವರೆಗೆ ಅದನ್ನು ಕಷ್ಟಪಟ್ಟು ಕಾಪಾಡುವದು ಪ್ರಯತ್ನ. ಅಲ್ಲಮ ಪ್ರಭುಗಳು ಹೇಳುತ್ತಾರೆ:

"ತನುವ ತೋಂಟವ ಮಾಡಿ, ಮನವ ಗುದ್ದಲಿ ಮಾಡಿ ಅಗಿದು ಕಳೆದೆನಯ್ಯಾ ಭ್ರಾಂತಿನ ಬೇರ. ಒಡೆದು ಸಂಸಾರ ಹೆಂಟೆಯ ಬಗಿದು ಬಿತ್ತಿದೆನಯ್ಯಾ ಬ್ರಹ್ಮ ಬೀಜವ. ಅಖಂಡ ಮಂಡಲವೆಂಬ ಬಾವಿ. ಪವನವೇ ರಾಟಾಳ. ಸುಷುಮ್ನಾ ನಾಳದಿಂದ ಉದಕವ ತಿದ್ದಿ ಬಸವ ಗಳೈವರು ಹಸಗೆಡಿಸಿಹವೆಂದು ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ ಆವಾಗಳೂ ಈ ತೋಟದಲ್ಲಿ ಜಾಗರವಿರ್ದು ಸಸಿಯ ಸಲಹಿದೆನು ಕಾಣಾ ಗೋಹೇಶ್ವರ."

ಆತ್ಮವಿದ್ಯೆಯೆಂಬ ಪೈರಿಗೆ ಕಂಟಕಗಳು ಬಹಳ. ಹೊರಗಿನ ಜನರಿಂದ ಹಾಗು

ಪರಿಸರದ ಅನಾನುಕೂಲತೆಯಿಂದ ಉಂಟಾಗುವ ಉಪಟಳ ಹೇಳಲಾಸಲ್ಲ. ಸದಾ ಜಾಗ್ರತನಾಗಿದ್ದು ಗುರುದತ್ತ ವಿಷಯವನ್ನು ಮನನ ಮಾಡುವದು ಯತ್ನ ಶೀಲ ಸಾಧಕನ ಕರ್ತವ್ಯ.

(೩) ನಮನ, ದೃಢವ್ರತ:– ನಮಗೆ ದೈವೀ ಸಿರಿಯನ್ನು ಮುಕ್ತ ಹಸ್ತ ದಿಂದ ದಯಪಾಲಿಸಿದ ಶ್ರೀ ಗುರುವಿಗೂ ದೇವನಿಗೂ ಸಂತ ಮಹಂತರಿಗೂ ಶಿರಬಾಗಿಸುವದು ನಮನ. ಇದು ಕೃತಜ್ಞತೆ, ವಿನಯ ಮತ್ತು ಸಮರ್ಪಣ ಸೂಚಕ, ಭಕ್ತಿ ಹಾಗು ಸಹೃದಯ ದರ್ಶಕ. ಅಹಿಂಸಾದಿ ಮಹಾ ವ್ರತಗಳನ್ನು ಚ್ಯುತಿಯಾಗದಂತೆ ಸರ್ವ ಜಾತಿ, ದೇಶ ಹಾಗು ಸಮಯಗಳಲ್ಲಿ ಆಚರಿಸುವದು ದೃಢವ್ರತ. ಇವೆರಡೂ ಆತ್ಮ ಸಾಧನೆಯ ಸಹಕಾರಿಗಳಾಗಿವೆ.

(೪) ಚಿತ್ತೈಕಾಗ್ರತಾ (ನಿತ್ಯಯೋಗ):– ಮನಸ್ಸು ಯಾವಾಗಲು ದೇವನ ಧ್ಯಾನದಲ್ಲಿ ರತವಾಗಿರುವದು ನಿತ್ಯಯೋಗ, ನಿಧಿಧ್ಯಾಸ, ಏಕಾಗ್ರ ಚಿಂತನೆ!

ಭಗವಂತ:– "ಅರ್ಜುನ, ಮಹಾತ್ಮರು ಪ್ರತಿನಿತ್ಯ ನನ್ನನ್ನೇ ಕೊಂಡಾಡು ತ್ತಾರೆ. ನನ್ನ ಮೂರುತಿಯೇ ಮನದಲ್ಲಿ ನೆಲೆಗೊಳ್ಳುವಂತೆ ಯತ್ನಿಸುತ್ತಾರೆ, ಭಯ ಭಕ್ತಿಯಿಂದ ನನ್ನಲ್ಲಿ ಅಭಿವಂದಿಸುತ್ತಾರೆ. ಅಹಿಂಸಾದಿ ವ್ರತಗಳನ್ನು ಅಚೂಕಾಗಿ ಆಚರಿಸುತ್ತಾರೆ. ಏಕಾಗ್ರ ಚಿತ್ತರಾಗಿ ನನ್ನನ್ನೇ ಭಜಿಸುತ್ತಾರೆ. ಅವರ ಪವಿತ್ರ ಉಪಾಸನೆಯ ಫಲವೆಂದರೆ ವರಮುಕ್ತಿ!"

ಸಂಬಂಧ:– ಉಪಾಸನೆಯ ಪ್ರಕಾರಗಳಾವವು?

ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।
ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋ ಮುಖಮ್ ॥೧೫॥

ಅರ್ಥ:– ಅನ್ಯೇ ಅಪಿ ಚ=ಮತ್ತೆ ಕೆಲವರು ಜ್ಞಾನ ಯಜ್ಞೇನ =(ಜ್ಞಾನಂ ವಾಸು ದೇವಃ ಸರ್ವಮಿತಿ ಸರ್ವಾತ್ಮದರ್ಶನಂ. ತದೇವಯಜ್ಞಃ – ಎಲ್ಲವು ವಾಸುದೇವನೆಂಬ ಸರ್ವಾತ್ಮ ದರ್ಶನವು ಜ್ಞಾನ. ಅದೇ ಯಜ್ಞ) ಜ್ಞಾನ ಯಜ್ಞದಿಂದ, ಯಜಂತಃ =ಪೂಜಿಸುತ್ತ, ಮಾಂ= ನನ್ನನ್ನು, ಉಪಾಸತೇ =ಉಪಾಸಿಸುತ್ತಾರೆ. (ಕೆಲವರು) ಏಕತ್ವೇನ= ( ಏಕಮೇವ ಪರಂ ಬ್ರಹ್ಮೇತಿ ಪರಮಾರ್ಥ ದರ್ಶನರೂಪ ಅಭೇದ ಭಾವನಯಾ – ಏಕಮೇವ ಪರಬ್ರಹ್ಮ ಎಂಬ ಪರಮಾರ್ಥ ದರ್ಶನರೂಪ ಅಭಿನ್ನ ಭಾವನೆಯಿಂದ) ಅದ್ವಯ ಭಾವದಿಂದ, ಪೃಥಕ್ತ್ವೇನ = (ಕೆಲವರು) (ದಾಸಃ ಅಹಂ ಇತಿ ಪೃಥಗ್ಭಾವನಯಾ–ನಾನು ದಾಸನೆಂಬ ಭಿನ್ನ ಭಾವದಿಂದ) ಬೇರೆ ಎಂಬ ಭಾವದಿಂದ, ಬಹುಧಾ =(ಕೆಲವರು) (ಸರ್ವಾತ್ಮಕಂ ದೇವಂ ಬ್ರಹ್ಮ ರುದ್ರಾದಿ ರೂಪೇಣ–ಸರ್ವಾತ್ಮಕ ದೇವನನ್ನು ಬ್ರಹ್ಮ ರುದ್ರಾದಿ ಹಲವು ರೂಪದಿಂದ) ಬಹುರೂಪದಿಂದ, ವಿಶ್ವತೋ ಮುಖಂ =(ಹಾಗು) ವಿಶ್ವತೋ ಮುಖನೆಂದು, ಉಪಾಸತೇ = ಉಪಾಸನೆ ಮಾಡು ತ್ತಾರೆ.

ವಿವರಣೆ:– (೧) ಜ್ಞಾನಯಜ್ಞೋಪಾಸಕರು:– ವಿಮಲ ಹೃದಯದಲ್ಲಿ ದೇವ-ಪ್ರಭೆ (ಮಹಾಲಿಂಗ) ಯನ್ನು ಪರಿಗ್ರಹಿಸಿ ವಿವಿಧ ಭಾವ ಪುಷ್ಪಗಳಿಂದ ಪೂಜಿಸುವದು ಹಾಗು ಪೂಜಾಂತ್ಯದಲ್ಲಿ ಮನಸ್ಸನ್ನು ಆ ಜ್ಞಾನಬೆಳಕಿನಲ್ಲಿಯೇ

ಸಮರ್ಪಿಸುವದು ಜ್ಞಾನಯಜ್ಞ. ಇವರಲ್ಲಿ ಪರಿಣತರು ಜ್ಞಾನಯಜ್ಞೋಪಾಸಕರು ಅಥವಾ ನಿರಾಲಂಬ ಶಿವಯೋಗಿಗಳು. ಅವರು ಮಹಾಲಿಂಗಾರ್ಚನೆಗಾಗಿ ಉಪಯೋಗಿಸುವ ಭಾವ ಪದಾರ್ಥಗಳ ವಿವರವನ್ನು ಶ್ರೀ ನಿಜಗುಣ ಶಿವ ಯೋಗಿಗಳು ಹೃದಯಂಗಮವಾಗಿ 'ಮಾಡು ಶಿವಾರ್ಚನೆ...' ಎಂಬ ಪದದಲ್ಲಿ ಇತ್ತಿದ್ದಾರೆ. ಅದರ ಸಾಮಾನ್ಯಾರ್ಥವನ್ನು ಇಲ್ಲಿ ಕೊಡಲಾಗಿದೆ.

ಭಾವ ಪದಾರ್ಥಗಳು:- (೧) ಆಸನ (ದೇವ ಗದ್ದುಗೆ): ದೇವನು ಸರ್ವ ತತ್ತ್ವಗಳ ಆಧಾರನೆಂಬ ಭಾವ. (೨) ಆಹ್ವಾನ- ದೇವನು ಪರಿಪೂರ್ಣನೆಂಬ ಭಾವ. (೩) ಅರ್ಘ್ಯ- ದೇವನು ಹರುಷ ಸಾಗರ ಎಂಬ ಭಾವ. (೪)ಪಾದ್ಯ- ಜಗತ್ತು ದೇವಚರಣವೆಂಬ ಭಾವ. (೫) ಆಚಮನ- ದೇವನು ಸದಾ ಪವಿತ್ರನೆಂಬ ಭಾವ. (೬) ಅಭಿಷೇಕ- ದೇವನು ನಿರ್ಮಲನೆಂಬ ಭಾವ. (೭)ಆಚ್ಛಾದನ- ದೇವನು ವಿಶ್ವಾತೀತ ಎಂಬ ಭಾವ. (೮) ಉಪವೀತ- ದೇವನು ನಿರ್ಗುಣನೆಂಬ ಭಾವ (೯) ಅಲಂಕೃತಿ- ದೇವನು ಸರ್ವಮಂಗಲನೆಂಬ ಭಾವ (೧೦) ಅನುಲೇಪನ- ದೇವನು ಆನಂದ-ಪರಿಮಲಯುಕ್ತನೆಂಬ ಭಾವ. (೧೧) ಪುಷ್ಪ- ನಾದ ಬಿಂದು ಕಲಾ ತತ್ತ್ವಗಳಿಗೆ ದೇವನೇ ಆದಿ ಎಂಬ ಭಾವ (೧೨) ಧೂಪ- ದೇವನ ಕೀರ್ತಿ ವಿಶ್ವವ್ಯಾಪಿ ಎಂಬ ಭಾವ. (೧೩) ದೀಪ- ದೇವನು ಸ್ವಯಂ ಜ್ಯೋತಿ ಎಂಬ ಭಾವ (೧೪) ನೈವೇದ್ಯ- ದೇವನು ನಿತ್ಯತೃಪ್ತನೆಂಬ ಭಾವ (೧೫) ವೀಳ್ಯ- ದೇವನು ಗುಣಾತೀತ ಎಂಬ ಭಾವ (೧೬) ಆವೃತ್ತಿ- ತಾನೇ ದೇವ, ದೇವನೇ ತಾನು ಎಂಬ ಭಾವ (೧೭) ವಂದನೆ- ತಾನೇ ದೇವನೆಂಬ ಭಾವ (೧೮) ವಿಸರ್ಜನೆ- ತಾನಲ್ಲದೆ ಬೇರೇನೂ ಇಲ್ಲ ಎಂಬ ಭಾವ. ಈ ರೀತಿ ಅಷ್ಟಾದಶ ಭಾವೋಪಚಾರಗಳಿಂದ ದೇವನನ್ನು ಅರ್ಚಿಸಿದ ಯೋಗಿಯು ಕೃತಾರ್ಥ.

(೨) ಏಕತ್ವೋಪಾಸಕರು:- ಮನಸ್ಸಿನ ಸಂಗದಿಂದ ಜೀವ ಭಾವ. ಜಗತ್ತಿನ ಸಂಗದಿಂದ ಈಶಭಾವ. ಮನಸ್ಸು ಮತ್ತು ಜಗತ್ತನ್ನು ಮರೆತಾಗ ಜೀವನೂ ಇಲ್ಲ, ಈಶನೂ ಇಲ್ಲ. ಕೇವಲ ಪ್ರತ್ಯಗಾತ್ಮಾಭಿನ್ನ ಪರಬ್ರಹ್ಮನೋರ್ವನೇ! ಈ ಅದ್ವಯ ಪ್ರಜ್ಞೆಯೇ ಏಕತ್ವೋಪಾಸನ. ಈ ಅನುಭೂತಿ ಪಡೆದವರು ಏಕತ್ವೋಪಾಸಕರು.

(೩) ಪೃಥಕ್ತ್ವೋಪಾಸಕರು:- ದೇವನು ವಿಶ್ವದ ಒಡೆಯ. ಅವನು ಅನಂತ ಅವ್ಯಯ ಅಮರ, ನಾನು ಅವನ ಸೇವಕ. ಅವನು ನಿಯಂತೃ, ನಾನು ನಿಯಮ್ಯ ಎಂಬ ದಾಸೋಹ ಭಾವ ತಾಳಿ ಅರ್ಚಿಸುವದು ಪೃಥಕ್ತ್ವ ಉಪಾಸನೆ. ಇದನ್ನು ಆಚರಿಸುವ ಭಕ್ತಿಶೀಲರು ಪೃಥಕ್ತ್ವೋಪಾಸಕರು.

(೪) ಬಹುಧಾ-ಉಪಾಸಕರು:- ದೇವನೇ ಬ್ರಹ್ಮ ವಿಷ್ಣು ರುದ್ರ ಈಶ್ವರ

ಸದಾಶಿವ, ಕಾಳಿಕೆ ಭವಾನಿ ಅಂಬಿಕೆ ಶಾರದೆ ಮುಂತಾದ ರೂಪದಲ್ಲಿ ಅಭಿವ್ಯಕ್ತ ನಾಗುತ್ತಾನೆ; ಹೀಗೆ ಭಾವಿಸಿ ತಮಗಿಷ್ಟವಾದ ಮೂರ್ತಿಯನ್ನು ಅರ್ಚಿಸುವದು ಬಹುಧಾ–ಉಪಾಸನೆ. ಇದರಲ್ಲಿ ನಿಪುಣರಾದವರು ಬಹುಧಾ–ಉಪಾಸಕರು.

(೩) ಸರ್ವಾತ್ಮಉಪಾಸಕರು:- ದೇವನು ಪರಮ ಸತ್ಯ. ಅವನಿಂದನ್ಯ ವಾಗಿ ಏನೂ ಇಲ್ಲ. ಕಾಣುವ ಜಗತ್ತು, ಜಡ–ವಸ್ತುಗಳು, ವಿಷಯಗಳು, ದೇಹ, ಇಂದ್ರಿಯ, ಮನಸ್ಸು, ಸುಖ ದುಃಖ ಕಾಮ ಕ್ರೋಧಾದಿ ಭಾವನೆಗಳು, ಅಹಂಕಾರ, ಪ್ರಕೃತಿ, ಜೀವಿಗಳು–ಎಲ್ಲವೂ ದೇವನ ರೂಪ. ಇರುವದೆಲ್ಲ ವಾಸ್ತ ವಿಕವಾಗಿ ಸತ್ಯ! ನಿತ್ಯ! ಈ ಭಾವದಿಂದ ಬದುಕುವದು ಸರ್ವಾತ್ಮೋಪಾಸನೆ. ಇದನ್ನು ಸಾಧಿಸಿದ ಯೋಗಿಗಳಿಗೆ ಧರ್ಮಗಳು ಕಾಣವು, ಪಂಥಗಳು ತೋರವು; ಅವರ ದೃಷ್ಟಿಯಲ್ಲಿ ವಿಶ್ವದ ಸಂತರೆಲ್ಲ ಗುರುಗಳು! ಚರ ಜೀವಿಗಳೆಲ್ಲ ಜಂಗ ಮರು!! ಜಡ ಪದಾರ್ಥಗಳೆಲ್ಲ ಲಿಂಗಗಳು!!!

ಸಂಬಂಧ; ಸರ್ವಾತ್ಮ ಭಾವವನ್ನು ಮುಂದಿನ ನಾಲ್ಕು ಮಂತ್ರಗಳು ವಿವ ರಿಸಿವೆ.

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥೧೬॥**

ಭಾವ; ಕ್ರತು,ಯಜ್ಞ. ಸ್ವಧಾ. ಔಷಧ, ಮಂತ್ರ, ಆಜ್ಯ, ಅಗ್ನಿ ಮತ್ತು ಹುತ– ಇವೆಲ್ಲ ನಾನೇ.

ವಿವರಣೆ:– ೧) ಕ್ರತು– ವೇದವಿಧಿತ ಅಗ್ನಿಷ್ಟೋಮಾದಿ ಮತ್ತು ದೇವ ತಾಧ್ಯಾನ ರೂಪ ಸಂಕಲ್ಪ. ೨) ಯಜ್ಞ– ಶೃತ್ಯುಕ್ತ ಪಂಚ ಮಹಾಯಜ್ಞಗಳು ಹಾಗು ಶೃತಿ–ಸ್ಮೃತಿ ಸಂಬಂಧವಾದ ದೇವತೆಗಳನ್ನು ಕುರಿತು ದ್ರವ್ಯತ್ಯಾಗವು. ೩) ಸ್ವಧಾ–ಬದುಕಿರುವಾಗ ತಾಯಿ ತಂದೆಯನ್ನು ಪೋಷಿಸುವದು ಮತ್ತು ಅವರು ದೇಹ ಬಿಟ್ಟ ನಂತರ ಪೂಜ್ಯ ಭಾವನೆಯಿಂದ ಸ್ಮರಿಸಿ ಶ್ರಾದ್ಧಾದಿ ಕರ್ಮ ಮಾಡು ವದು. ೪)ಔಷಧ–ಜೀವಿಗಳ ದೇಹಪೋಷಕವಾದ ಆಹಾರ. ೫) ಮಂತ್ರ–ಯಜ್ಞ ಹಾಗು ದಾನ ಮಾಡುವಾಗ ಉಚ್ಚರಿಸುವ ಪವಿತ್ರ ವಾಕ್ಯಗಳು. ೬) ಆಜ್ಯ–ಹವನ ಮಾಡುವ ಪದಾರ್ಥ. ೭) ಅಗ್ನಿ– ಹೋಮ ಕುಂಡದಲ್ಲಿರುವ ಅಗ್ನಿ. ೮)ಹುತಂ– ಅಂತ್ಯಾಹುತಿ ಅಥವಾ ಹವನ ಕ್ರಿಯೆ.

ಭಗವಂತ:–"ಅರ್ಜುನ, ನನ್ನ ಆಳ–ಅಗಲಗಳಿಗೆ ಸೀಮೆ ಇಲ್ಲ, ನನ್ನ ವಿಸ್ತಾ ರಕ್ಕೆ ಮೇರೆ ಇಲ್ಲ. ಎಲ್ಲ ಅವಸ್ಥೆಗಳಲ್ಲಿ ನನ್ನ ಪ್ರಕಾಶ ಹರಡಿದೆ. ಎಲ್ಲ ಬಗೆಯ ಸೃಷ್ಟಿಗಳಲ್ಲಿ ನನ್ನ ಅಸ್ತಿತ್ವ ವ್ಯಾಪಿಸಿದೆ. ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಸಂಬಂಧ, ಅಧಿಕರಣಗಳೆಲ್ಲ, ನಾನೇ. ವೇದೋಕ್ತ ಕರ್ಮ, ಯಜ್ಞ, ಶ್ರಾದ್ಧ, ಔಷಧ, ಆಜ್ಯ, ಅಗ್ನಿ, ಮಂತ್ರ, ಹೋಮ–ಒಂದೇ ಎರಡೇ ಎಲ್ಲ

ವಸ್ತುಗಳು ನಾನೇ. ಪಾರ್ಥ, ನನ್ನನ್ನು ಯಥಾವತ್ತಾಗಿ ಗುರುತಿಸಿದ ಸರ್ವಾತ್ಮ ದರ್ಶಿಯು ಬಾಹ್ಯಾಂತರದಲ್ಲಿ ನನ್ನನ್ನೇ ನೋಡುತ್ತಾನೆ. ಅವನಿಗೆ ವಿಶ್ವದ ಮಾನವರೆಲ್ಲ ದೇವರು; ಅವರ ಸೇವೆಯು ಪೂಜೆ. ಅವನ ಮುಖದಿಂದ ಸದಾ ಸ್ನೇಹಶೀಲ ಕಾರುಣ್ಯಪೂರ್ಣ ಶಬ್ದಗಳು ಹೊರ ಬರುತ್ತಿವೆ. ಅವು ಮಂತ್ರ. ಅವನ ನಡತೆ ಧರ್ಮ. ಅವನ ಬಾಳು ಪಾವನ!"

ಪಿತಾಹಮಸ್ಯ ಜಗತೋ ಮಾತಾ ಧಾತಾಪಿತಾಮಹಃ

ವೇದ್ಯಂ ಪವಿತ್ರಮೋಂಕಾರ ಋಕ್ ಸಾಮಯಜುರೇವ ಚ ॥೧೭॥

**ಭಾವ:–** ನಾನೇ ಈ ಜಗತ್ತಿನ ಪಿತಾ, ಮಾತಾ, ಪೋಷಕ, ಪಿತಾಮಹ; ತಿಳಿಯ ಬೇಕಾದ ವಸ್ತುವು ನಾನು; ನಾಲ್ಕು ವೇದಗಳು ಮತ್ತು ಪವಿತ್ರವಾದ ಓಂಕಾರ ಕೂಡ ನಾನೇ.

**ಭಗವಂತ:–** "ನಾನು ವಿಶ್ವದ ಪಿತಾ, ಮಹೇಶ್ವರ. ನಾನೇ ವಿಶ್ವದ ಮಾತೆ, ಭುವನೇಶ್ವರಿ. ಜೀವಿಗಳ ಕರ್ಮಾನುಸಾರ ಫಲವಿತ್ತು ರಕ್ಷಿಸುತ್ತೇನೆಯಾಗಿ ಪೋಷಕ. ಅವ್ಯಕ್ತ ಶಕ್ತಿಯ ಒಡೆಯನಾದ ಹಿರಣ್ಯಗರ್ಭನಿಗೆ ಮೊಟ್ಟ ಮೊದಲೇ ಜನ್ಮವಿತ್ತೆನಾಗಿ ನಾನು ವಿಶ್ವದ ಪಿತಾಮಹ, ನನ್ನ ಚೇತನ-ರಸ ಜೀವಿಗಳ ಹಾಗು ಜಡವಸ್ತುಗಳ ಒಳಗೆಲ್ಲ ಹರಿಯುತ್ತಿದೆ. ವೇದ ಉಪನಿಷತ್ತು ಆಗಮ ಸಿದ್ಧಾಂತಗಳು ನನ್ನನ್ನೇ ತಿಳಿಯ ಹೊರಟುದರಿಂದ ನಾನು ವೇದ್ಯ. ನಾನು ನಿರ್ಮಲ, ಪವಿತ್ರ, ಪ್ರಣವರೂಪ!"

ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।

ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥೧೮॥

**ಭಾವ:** ಗತಿ, ಭರ್ತಾ, ಪ್ರಭು, ಸಾಕ್ಷಿ, ನಿವಾಸ, ಶರಣ, ಸುಹೃದ, ಪ್ರಭವ, ಪ್ರಳಯ ಸ್ಥಾನ, ನಿಧಾನ, ಅವ್ಯಯ ಹಾಗು ಬೀಜ ನಾನೇ.

**ವಿವರಣ:–** ಗತಿ: ಕರ್ಮ ಫಲಗಳಾದ ಸಾಲೋಕ್ಯ, ಸಾಮಿಪ್ಯ. ಸಾರುಪ್ಯ ಹಾಗು ಸಾಯುಜ್ಯಗಳು ಗತಿಗಳು. (೨) ಭರ್ತಾ: ಕರ್ಮ-ನಿಯತಿಯ ಅನುಸಾರ ಜೀವಿಗಳನ್ನು ಪೋಷಿಸುವವ. (೩) ಪ್ರಭು: ವಿಶ್ವವನ್ನು ಕ್ರಮಬದ್ಧವಾಗಿ ನಿಯಂತ್ರಿಸುವವ. (೪) ಸಾಕ್ಷೀ: ಸಕಲ ಪ್ರಾಣಿಗಳ ಶುಭಾಶುಭ ಕರ್ಮಗಳನ್ನು ಪ್ರಕಾಶಿಸುವವ. (೫) ನಿವಾಸ: ಕಾರ್ಯರೂಪ ಜಗತ್ತು ಮತ್ತು ಕಾರಣರೂಪ ಪ್ರಕೃತಿಗಳಿಗೆ ಅಧಿಷ್ಠಾನ. (೬) ಶರಣಂ: ರೋಗಿಗಳಿಗೆ ವೈದ್ಯನು ಹೇಗೆ ಶರಣ್ಯನೋ ಹಾಗೆ ಆರ್ತ, ಅರ್ಥಾರ್ಥಿ, ಜಿಜ್ಞಾಸು ಜ್ಞಾನಿಗಳಿಗೆ ದೇವನು ಶರಣ್ಯ. (೭) ಸುಹೃದ: ಅನಿಮಿತ್ಯ ಹಿತಕರ್ತನು. (೮) ಪ್ರಭವ: ವಿಶ್ವೋತ್ಪತ್ತಿಸ್ಥಾನ. (೯) ಪ್ರಲಯ: ವಿಶ್ವದ ಲಯಸ್ಥಾನ. (೧೦) ಸ್ಥಾನ: ವಿಶ್ವದ ಆಧಾರನು. (೧೧) ನಿಧಾನ: ವಿಶ್ವದ ಶ್ರೀಭಾಂಡಾರ. (೧೨) ಅವ್ಯಯ: ಅವಿನಾಶಿ (೧೩) ಬೀಜ: ವಿಶ್ವದ ಆದಿಕಾರಣ ಹಾಗು ಸನ್ನಿಧಾನಕಾರಣ. ಈ ಹದಿಮೂರು ವಸ್ತುಗಳು ಪರಮಾತ್ಮನೇ.

ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥೧೯॥

ಭಾವ:–ನಾನು (ಸೂರ್ಯರೂಪದಿಂದ) ತಪಿಸುತ್ತೇನೆ. ಮಳೆಯನ್ನು ಸೆಳೆದುಕೊಳ್ಳುತ್ತೇನೆ, ಮತ್ತು ಬಿಡುತ್ತೇನೆ. ನಾನೇ ಅಮೃತ ಮತ್ತು ಮೃತ್ಯು, ಸತ್ ಮತ್ತು ಅಸತ್.

ವಿವರಣೆ:- ಭಗವಂತ:-"ಅರ್ಜುನ, ಉಷ್ಣವೀಯುವ ಸೂರ್ಯ ನಾನು. ಆದಿತ್ಯನಾಗಿ ಮಳೆ ನೀಡುವೆ ಅಥವಾ ತಡೆಯುವೆ. ನಾನೇ ಮೃತ್ಯು ದೇವತೆ; ನಾನೇ ಅಮರ ಚೇತನ. ನಾನೇ ಭಕ್ತ, ನಾನೇ ಭವಿ. ನಾನೇ ಸೇವ್ಯ, ನಾನೇ ಸೇವಕ. ನಾನೇ ಅಸತ್, ನಾನೇ ಸತ್. ಇರುವುದೆಲ್ಲ ನಾನು; ಇಲ್ಲದುದೂ ನಾನೇ. ಇದನ್ನರಿತು ನಿಶ್ಚಿಂತರಾದವರೇ ಮಹಾತ್ಮರು!"

ಸಂಬಂಧ:- ಪರಮಾತ್ಮನನ್ನು ಭಜಿಸದವರಿಗೆ ಭವ ತಪ್ಪದು.

ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ
ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।
ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ
ಮಶ್ನಂತಿ ದಿವ್ಯಾನ್ದಿವಿ ದೇವಭೋಗಾನ್ ॥೨೦॥

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಮ್
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।
ಏವಂ ತ್ರಯೀಧರ್ಮಮನುಪ್ರಪನ್ನಾ
ಗತಾಗತಂ ಕಾಮಕಾಮಾ ಲಭಂತೇ ॥೨೧॥

ಭಾವ:– ಮೂರು ವೇದ ಅರಿತವರು ಯಜ್ಞಗಳಿಂದ ನನ್ನನ್ನು ಅರ್ಚಿಸುತ್ತಾರೆ. ಸೋಮಪಾನ ಮಾಡುತ್ತಾರೆ. ಪಾಪ ಕಳೆದುಕೊಂಡು ಸ್ವರ್ಗತಿಯನ್ನು ಬೇಡಿಕೊಳ್ಳುತ್ತಾರೆ. ಸ್ವರ್ಗವನ್ನು ಪಡೆದು ಸ್ವರ್ಗೀಯ ಭೋಗಗಳನ್ನು ಅನುಭವಿಸುತ್ತಾರೆ. ॥೨೦॥ ಆ ವಿಶಾಲ ಸ್ವರ್ಗ ಲೋಕವನ್ನು ಭೋಗಿಸಿ ಪುಣ್ಯ ಕ್ಷೀಣವಾದ ನಂತರ ಮರ್ತ್ಯವನ್ನು ಪ್ರವೇಶಿಸುತ್ತಾರೆ. ಹೀಗೆ ವೈದಿಕ ಧರ್ಮವನ್ನು ಅನುಷ್ಠಾನ ಮಾಡುವ ಸಕಾಮಿಗಳು ಗಮನಾಗಮನ ಹೊಂದುತ್ತಾರೆ.

ವಿವರಣೆ:– ತ್ರೈವಿದ್ಯಾಃ:– ಪ್ರಧಾನ ವೇದಗಳು ಮೂರು–ಋಕ್, ಯಜುಸ್ ಹಾಗು ಸಾಮ. ಪ್ರತಿ ವೇದದದಲ್ಲಿ ಎರಡು ಭಾಗ–ಪೂರ್ವ ಹಾಗು ಉತ್ತರ. ಪೂರ್ವವೇದದಲ್ಲಿ ವರ್ಣಾಶ್ರಮ ಧರ್ಮ-ಕರ್ಮಗಳ ವಿವರಣೆ ಇದೆ. ಸಕಾಮ ಯಜ್ಞಗಳ ಬಗ್ಗೆ ಬಹು ದೀರ್ಘವಾಗಿ ವರ್ಣಿಸಲಾಗಿದೆ; ಇಹ ಪರ ಸುಖಗಳ ಮನೋಹರ ಚಿತ್ರಣ ಈಯಲಾಗಿದೆ. ಉತ್ತರ ವೇದವು ಆತ್ಮ ಜ್ಞಾನಕ್ಕೆ ಮೀಸಲು; ಪರಮಾತ್ಮ ಜೀವಾತ್ಮ ಜಗತ್ತು ಬಂಧ ಮೋಕ್ಷ ಸಾಧನ ಗಳ ಬಗ್ಗೆ ಬಹು ಆಳವಾದ ವಿವೇಚನೆ ಅದರಲ್ಲಿದೆ.

ಪೂರ್ವ ವೇದವು ಸಾಮಾನ್ಯರಿಗಾಗಿ. ಉತ್ತರ ವೇದವು ಸುಜ್ಞರಿಗಾಗಿ. ಪೂರ್ವ ವೇದ ಗೃಹಸ್ಥಾಶ್ರಮಕ್ಕೆ ಅನುಕೂಲ, ಉತ್ತರ ವೇದವು ಸನ್ಯಾಸಾ

ಶ್ರಮಕ್ಕೆ ಅನುಕೂಲ. ಮನುಷ್ಯನು ಮೊದಲು ಗೃಹಸ್ಥನಾಗಿ ವೇದ ವಿಹಿತ ಕರ್ತವ್ಯ ಕರ್ಮಗಳನ್ನಾಚರಿಸಿ ಬಳಿಕ ಆ ಗೃಹಸ್ಥಾಶ್ರಮ ತೊರೆದು ಸನ್ಯಾಸ ಧರ್ಮ ಪರಿಗ್ರಹಿಸಿ ವಿಮುಕ್ತಿಗಾಗಿ ಸಾಧನೆ ಮಾಡಬೇಕು. ಭೋಗ ಲಾಲಸೆಯ ತ್ಯಜಿಸಿ ನಿಸ್ಪೃಹ ನಿರಾಮಯ ಸ್ಥಿತಿಯ ಗಳಿಸಬೇಕು. ಇದು ಕ್ರಮ ಜೀವನ. ಮೊದಲಿನಿಂದಲೂ ಸನ್ಯಾಸ ಗ್ರಹಿಸಿ ವೇದಾಂತ (ಉತ್ತರ ವೇದ) ಪ್ರಕಾಶದಡಿಯಲ್ಲಿ ದೇವ ಪಥದ ಯಾತ್ರೆ ಕೈಕೊಂಡರಂತೂ ಅವರಂಥ ಭಾಗ್ಯವಂತರೇ ಇಲ್ಲ. ಅವರ ಜನ್ಮ ಸಾರ್ಥಕ. ಅವರಿಗೆ ಪೂರ್ವ ಉತ್ತರ ವೇದಗಳೆರಡೂ ಮುಕ್ತಿಗೆ ಹೇತುವಾಗಿವೆ.

ಕೆಲವು ಜನರು ಸಕಾಮಿಗಳು. ಅವರು ಅದೇ ವೇದ ಓದಿ ಯಜ್ಞ ಕರ್ಮಗಳನಾಚರಿಸಿ ಭವ ಬದ್ಧರಾಗುತ್ತಾರೆ. ಜನ್ಮ ಮರಣ ರಾಟಾಳದಲ್ಲಿ ಮತ್ತೆ ಮತ್ತೆ ತಿರುಗುತ್ತಾರೆ. ಅವರ ವಿಚಾರಗಳೇ ವಿಚಿತ್ರ. ಬಗೆ ಬಗೆಯ ಯಾಗ ಮಾಡಿ ಯಥೇಚ್ಛವಾಗಿ ಸೋಮರಸ ಕುಡಿದು ಪಾಪ ರಹಿತರಾದೆವೆಂದು ತಿಳಿಯುತ್ತಾರೆ. ಇವರ ತಿಳುವಳಿಕೆ ಸರಿಯೇ ಇದ್ದರೆ ಭೋಗವ್ಯಾಮೋಹದಿಂದ ಅದೇಕೆ ಬಳಲುತ್ತಾರೆ? ಪುಣ್ಯಾತ್ಮರಾದೆವೆಂಬ ಭಾವನೆ ಅರ್ಥಹೀನ.

ಸಕಾಮಿಗಳು ಸ್ವರ್ಗಬಯಸುತ್ತಾರೆ. ಪಡೆಯುತ್ತಾರೆ. ವಿಶಾಲವಾದ ಆ ಸ್ವರ್ಗದಲ್ಲಿ ಅನೇಕ ವರುಷ ರಂಭೆ ಊರ್ವಶಿಯರಂಥ ಸ್ತ್ರೀಯರ ಸಾನಿಧ್ಯದಲ್ಲಿ ಕುಳಿತು ಅಸಂಖ್ಯ ಭೋಗೋಪ ಭೋಗಗಳನ್ನು ಆಸ್ವಾದಿಸುತ್ತಾರೆ. ಪುಣ್ಯ ತೀರಿದೊಡನೆ ಮತ್ತೆ ಅಲ್ಲಿಂದ ಪತನ ಹೊಂದಿ ಮಾನವ ಲೋಕಕ್ಕೆ ಬರುತ್ತಾರೆ. ಇವರಿಗೂ ಚುನಾವಣೆಯಲ್ಲಿ ಆರಿಸಿ ದೇಹಲಿಗೆ ಹೋಗಿ ರಾಜವೈಭವ ಅನುಭವಿಸಿ, ಐದು ವರುಷಗಳನಂತರ ಮನೆಗೆ ಬರುವ ರಾಜಕಾರಣಿಗಳಿಗೂ ಸಾಮ್ಯವಿದೆ.

(೨) " ಅಪುತ್ರಸ್ಯ ಗತಿರ್ನಾಸ್ತಿ " " ಸ್ವರ್ಗೋಹಿ ಗಮ್ಯಸ್ಥಾನಃ " " ಕ್ಷತ್ರಿಯೋ ವೀರಸ್ವರ್ಗಮಿಚ್ಛೇತ್ " ಮಕ್ಕಳಿಲ್ಲದವನಿಗೆ ಗತಿಯಿಲ್ಲ; ಸ್ವರ್ಗವೇ ಗಮ್ಯಸ್ಥಾನ; ಕ್ಷತ್ರಿಯನು ವೀರಸ್ವರ್ಗ ಇಚ್ಛಿಸಬೇಕು. ಈ ಬಗೆಯ ವೈದಿಕ ವಾಕ್ಯಗಳು ಲೋಕದ ಬಹು ಜನರ ಮನಸ್ಸನ್ನು ಸೆಳೆದಿವೆ. ಸ್ವರ್ಗದ ಅಪೂರ್ವ ವರ್ಣನೆಗಳು ಅವರನ್ನು ಆಕರ್ಷಿಸಿವೆ. ಅವರಲ್ಲಿ ಯಜ್ಞಯಾಗಾದಿ ಕರ್ಮಪ್ರೇಮ ಅಪಾರವಾಗಿ ಬೆಳೆದಿದೆ. ಆದುದರಿಂದ ಅವರಿಗೆ ಕರ್ಮಠರು ಎಂದು ನಾಮ. ಅವರು "ಕಾಮಾತ್ಮರು, ಸ್ವರ್ಗಪರರು, ವೇದವಾದರತರು."

ಸಂಬಂಧ:— ಪರಮಾತ್ಮನನ್ನೇ ಹೊಂದಬೇಕಾದರೆ ಏನು ಮಾಡಬೇಕು?

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥೨೨॥

ಅರ್ಥ:—ಅನನ್ಯಾಃ ಮಾಂ ಚಿಂತಯಂತಃ= ಅನನ್ಯಭಾವಯುಕ್ತರಾಗಿ ನನ್ನನ್ನು ಚಿಂತಿಸುತ್ತಿರುವ ಯೇ ಜನಾಃ ಪರ್ಯುಪಾಸತೇ= ಯಾವ ಜನರು ಏಕಾಗ್ರತೆಯಿಂದ ಉಪಾಸನೆ

ಮಾಡುವರೋ ತೇಷಾಂ ನಿತ್ಯಾಭಿಯುಕ್ತಾನಾಂ= ಅಂಥ ಸದಾ ಮುನ್ನಿಷ್ಠರಾದವರ ಯೋಗ-ಕ್ಷೇಮಂ ಅಹಂ ವಹಾಮಿ= ಯೋಗಕ್ಷೇಮವನ್ನು ನಾನು ನಿರ್ವಹಿಸುತ್ತೇನೆ.

ವಿವರಣೆ:– (೧) ಅನನ್ಯ ಚಿಂತನ ಹಾಗು ನಿತ್ಯಾಭಿಯೋಗ:– ತನ್ನ ಆತ್ಮಸ್ವರೂಪದ ತಿಳಿವಿಲ್ಲದೆ ಬೇರೆ ಬೇರೆ ದೇವ ದೇವತೆಗಳನ್ನು ಭಯಭಕ್ತಿಯಿಂದ ಹಾಗು ಸಕಾಮಬುದ್ಧಿಯಿಂದ ಚಿಂತಿಸುವದು, ಆರಾಧಿಸುವದು ಅನ್ಯಚಿಂತನ. ಆತ್ಮನ ಮೂಲರೂಪವನ್ನು ಯಥಾರ್ಥವಾಗಿ ಅರಿತು, ವಿಶ್ವದಾದ್ಯಂತ ವ್ಯಾಪಿಸಿದ ಚಿರಂತನ ಪರಮಾತ್ಮನ ದಿವ್ಯ ಅಸ್ತಿತ್ವವನ್ನು ಜಾನಿಸಿ ಆ ದೇವನಲ್ಲಿ ತನ್ನತನವನ್ನೇ ಸಮರ್ಪಿಸುವದು ಅನನ್ಯ ಚಿಂತನ! ಅನನ್ಯ ಚಿಂತನ ಮಾಡುವವನೇ ವಿಪಶ್ಚಿತ, ಸಂತ. ಅವನಿಗೆ ಸರ್ವಾತ್ಮ ದೃಷ್ಟಿಯಿದೆ. ನಾಯಿಯಲ್ಲಿ ದೇವನನ್ನು ಕಂಡ ನಾಮದೇವನೇ ಇದಕ್ಕೆ ನಿದರ್ಶನ. ಇಂಥ ಜ್ಞಾನಿಗಳ ಆತ್ಮಾನುರಾಗವನ್ನು ಅಲುಗಿಸುವದು ಯಾರಿಗೂ ಸಾಧ್ಯವಿಲ್ಲ. ಲೋಕದ ಭೋಗಲಾಲಸೆಗಳು ಅವನ ಚಿತ್ತನ್ನು ಅನ್ಯಮುಖಿಗೊಳಿಸವು. ಸ್ತ್ರೀಯ ಸೌಂದರ್ಯ, ಅಪಾರ ಧನರಾಶಿ, ರಾಜಸದನ, ಅಧಿಕಾರ ಯಾವದಕ್ಕೂ ಅವನು ಮರುಳಾಗ. ಅವನಿಗೆ ಮೇಲಿನ ನಾಮ-ರೂಪಗಳು ಕಾಣುವದಿಲ್ಲ. ಅಂತಸ್ಥ ದೇವನೇ ತೋರುತ್ತಾನೆ. ಅವನು ಪರಮಾತ್ಮನೊಂದಿಗೆ ನಿತ್ಯಾಭಿಯುಕ್ತ.

(೨) ಯೋಗಕ್ಷೇಮ:– ಅನನ್ಯ ಚಿಂತನದಲ್ಲಿ ತೊಡಗಿದ ಮಹಾತ್ಮರು ಪರಮಾತ್ಮನಿಗೆ ಅತಿ ಪ್ರೀತಿಯವರು. ಅವರ ಪಾಲನೆ ಪೋಷಣೆಯನ್ನು ತಾನೇ ಮಾಡುತ್ತಾನೆ. ಇದು ಖಚಿತ; ಪರಮಾತ್ಮನೇ ಹೇಳಿದ ಪ್ರತಿಜ್ಞಾ ನುಡಿ, ಸಾಧಕರಿಗಿತ್ತ ಅಭಯ ವಚನ. ಈ ಮಾತಿಗೆ ಆಧಾರಗಳು ಅನೇಕ. ಏಕನಾಥ ಮಹಾರಾಜರು ಭಾಗವತ ರಚನೆಯಲ್ಲಿ ತಲ್ಲೀನರಾದಾಗ ಪರಮಾತ್ಮನು ಸೇವಕನ ವೇಷ ಧರಿಸಿ ಕಸಗೂಡಿಸಿದ, ನೀರು ತಂದ, ಬಟ್ಟೆ ಒಗೆದ, ಮಹಾರಾಜರ ಅಂಗಸೇವೆ ಮಾಡಿದ. ದೇವನು ಬಾಣನ ಬಾಗಿಲ ಕಾಯ್ದ. ಹೇಮರಡ್ಡಿ ಮಲ್ಲಮ್ಮನೊಂದಿಗೆ ಬೀಸಿದ, ದನಕಾಯ್ದ. ತನ್ನನ್ನೇ ನಂಬಿ ನಚ್ಚಿ ಬೆಟ್ಟದ ತುದಿಯಲ್ಲಿ ಬೆಳೆದ ಗಿಡ ಮರಗಳಿಗೆ ನೀರು ಹಣಿಸುವವನು ಅವನೇ ಅಲ್ಲವೇ? 'ನಂಬಿದವರಿಗೆ ಇಂಬು ನೀನು ಬಸವಲಿಂಗ.'

"ಕೋಳಿ ಕೂಗುವ ಮುನ್ನ ಏಳುವದು ದಿನ ನಿತ್ಯ ದ!
ಯಾಳು ದೇವರನ್ನು ನೆನೆದರಾ ದೇವ! ಆಳಿನಾಳಯ್ಯ ಸರ್ವಜ್ಞ!"

ಪತಿಯನ್ನೇ ನಂಬಿದ ಸತಿಯನ್ನು ಪತಿಯು ಎಲ್ಲ ವಿಧದಿಂದ ರಕ್ಷಿಸುತ್ತಾನೆ. ತಾಯಿಯನ್ನೇ ಚಿಂತಿಸುವ ಮಗುವನ್ನು ತಾಯಿಯು ಪ್ರಾಣ ಪಣಕ್ಕಿಟ್ಟು ಪೋಷಿಸುವಳು. ದೇವನು ಶರಣರಿಗೆ ಪತಿ; ಜೀವರಿಗೆ ತಾಯಿ. ಅವನು ತನ್ನ ಭಕ್ತರನ್ನು ನೂರು ಬಗೆಯಲ್ಲಿ ಕಾಪಾಡುತ್ತಾನೆ. ಸಾವ ಕೆಡುವ ಗಂಡರನ್ನು ಬೆಂಕಿಗೆ ತಳ್ಳಿ ಸಾವಿಲ್ಲದ ಚೆನ್ನಮಲ್ಲಿಕಾರ್ಜುನನನ್ನೇ ವರಿಸಿದಳಾಗಿ ಆ ದೇವನು ಅವಳನ್ನು ತನ್ನ ಉದರ

ದಲ್ಲಿ ಇಂಬಿಟ್ಟುಕೊಂಡ!

ಸಂಬಂಧ:– ಪರಮಾತ್ಮನಿಂದ ಭಿನ್ನವಾಗಿ ಏನೂ ಇಲ್ಲ. ದೇವ ದೇವತೆಗಳೆಲ್ಲ ಅವನ ವಿಭಿನ್ನ ಮೂರ್ತಿಗಳೇ. ಹೀಗಿರುವಾಗ, ಅವರ ಆರಾಧನೆ ಮಾಡಿವ ಭಕ್ತರು ಆನೇಕೆ ಭವಕ್ಕೆ ಬರುತ್ತಾರೆ? ಈ ಪ್ರಶ್ನೆಗೆ ಮೂರು ಮಂತ್ರಗಳಲ್ಲಿ ಉತ್ತರವಿದೆ.

ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।
ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ ॥೨೩॥

ಅರ್ಥ:– ಯೇ ಅನ್ಯದೇವತಾಭಕ್ತಾಃ ಶ್ರದ್ಧಯಾನ್ವಿತಾಃ ಯಜಂತೇ= ಯಾವ ಅನ್ಯ ದೇವತಾ ಭಕ್ತರು ಶ್ರದ್ಧಾಯುಕ್ತರಾಗಿ ಪೂಜಿಸುವರೋ, ತೇ ಅಪಿ ಮಾಮೇವ ಅವಿಧಿ ಪೂರ್ವಕಂ ಯಜಂತಿ= ಅವರು ಕೂಡ ನನ್ನನ್ನೇ ಅವಿಧಿ ಪೂರ್ವಕ (ಮೋಕ್ಷ ಪ್ರಾಪಕ ವಿಧಿಯಿಲ್ಲದ) ಪೂಜಿಸುತ್ತಾರೆ.

ವಿವರಣೆ:– ಭಗವಂತ:– "ನನ್ನ ವಿಶ್ವರೂಪವನ್ನು ಅರಿಯದ ಜನರೇ ಬಹಳ. ನಾನು ಸರ್ವಾಂತರ್ಯಾಮಿ, ಸರ್ವನಿಯಂತಾರ, ಸರ್ವಕರ್ಮಾಧ್ಯಕ್ಷ, ಸರ್ವಸಾಕ್ಷಿ. ಪ್ರಭವ, ಪ್ರಲಯ, ದೇವಾಧಿದೇವ ಎಂಬುವದರ ಕಲ್ಪನೆಯಿಲ್ಲದ ಅವರು ನಾನಾ ದೇವತೆಗಳನ್ನು ಶ್ರದ್ಧೆ ವಿಶ್ವಾಸಗಳಿಂದ ಸೇವಿಸುತ್ತಾರೆ. ಯಾಗ ಯಜ್ಞ ಪೂಜಾ ಪುರಸ್ಕಾರಗಳಿಂದ ಉಪಾಸನೆ ಮಾಡುತ್ತಾರೆ. ಹಾಗಿದ್ದರೂ ಅವರು ನನ್ನನ್ನೇ ಪೂಜಿಸುವರೆಂದು ತಿಳಿದುಕೊ. ಇಷ್ಟೇ, ಅವರ ಪೂಜೆಯು ವಿಧಿಹೀನ. ಅದು ಮೋಕ್ಷದ ಉಪಾಯವಲ್ಲ."

(೧) ಅವಿಧಿ ಪೂರ್ವಕ:– ವಿಧಿ ಪದಕ್ಕೆ ಇಲ್ಲಿ ಎರಡರ್ಥ (ಅ) ಯಾವ ದೇವತೆಯನುದ್ದೇಶಿಸಿ ಪೂಜಿಸಿದರೂ ಆ ದೇವತೆಯು ಆತ್ಮನಾದ ಪರಬ್ರಹ್ಮನಿಗೆಯೇ ಸಲ್ಲುತ್ತದೆ, ಎಂಬ ತತ್ತ್ವವನ್ನು ಸರಿಯಾಗಿ ತಿಳಿದುಕೊಂಡಿರುವದು. (ಬ) ಮಹಾತ್ಮರಿಂದ ನಿರ್ಮಿತವಾದ ಮುಕ್ತಿಪ್ರಾಪಕವಾದ ನೀತಿ ನಿಯಮಾವಳಿ. ಉದಾ: ಇದು ನಿತ್ಯವಿದನಿತ್ಯವೆಂಬುದನರಿ. ಹೃದಯದ ಭೋಗೇಚ್ಛೆ ತೊರೆ. ಶಮಾದಿ ಸದ್ಗುಣ ಭರಿತನಾಗು. ಸದ್ಗತಿಯ ಆಶೆ ಇರಲಿ. ಗುರುಪಾದ ಸೇವೆಯನು ಒಲವಿಂದ ಮಾಡು. ವೇದ ವೇದಾಂತಗಳನಭ್ಯಸಿಸು. ದೇಹಾದಿಗಳ ಮೋಹ ಬಿಡು. ಸ್ವಪರ ವಾಸನೆ ತೊರೆ. ದೇವನ ಕೂಡು. ಗುರುಗಳೀಯುವ ಇಂಥ ಉಪದೇಶವು ವಿಧಿ. ಆತ್ಮಪ್ರಜ್ಞೆಯಿಲ್ಲದೆ, ಶಾಸ್ತ್ರವಿಹಿತ ಮತ್ತು ಗುರುನಿರ್ದಿಷ್ಟ ಸದ್ಗುಣವಿಲ್ಲದೆ ಮಾಡುವ ದೇವತಾರ್ಚನೆಯು ಅವಿಧಿಕೃತ! ವಿಧಿಹೀನ!

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥೨೪॥

ಭಾವ:-ಸರ್ವಯಜ್ಞಗಳ ಭೋಕ್ತೃವೂ ಪ್ರಭುವೂ ನಾನೇ. ಆದರೆ ಅವರು (ಅನ್ಯ ದೇವತಾ ಭಕ್ತರು) ಯಥಾರ್ಥವಾಗಿ ನನ್ನನ್ನು ತಿಳಿಯರು. (ಅತಃ) ಆದುದರಿಂದ (ಅವರು)

ಚ್ಯುತರಾಗುತ್ತಾರೆ (ಚ್ಯವಂತಿ).

**ವಿವರಣೆ:-** ಭಗವಂತ:- "ಪಾರ್ಥ, ಮಾನವರ ಬುದ್ಧಿ ಭೋಗ-ಮೋಹದಿಂದ ಮಾಸಿದೆ. ಸಕಲ ಯಜ್ಞಗಳ ಭೋಕ್ತೃ, ಸರ್ವ ಲೋಕಗಳ ಪ್ರಭುವು ನಾನೇ ಎಂಬ ಸತ್ಯವು ಅವರಿಗೆ ಹೊಳೆಯದು. ಜೀವ ಈಶ್ವರ, ಪ್ರತ್ಯಗಾತ್ಮ ಪರಬ್ರಹ್ಮ ನನ್ನ ಸಾಕ್ಷಾತ್ ಸ್ವರೂಪ. ಜಡವಸ್ತು ಪ್ರಪಂಚ ಕೂಡ ನನ್ನ ಆಧಿಪತ್ಯಕ್ಕೆ ಒಳಪಟ್ಟಿದೆ; ಎಂಬ ಭಾನ ಅವರಿಗೆ ಬರದು! ಪ್ರಚಂಡ ವೇಗದಿಂದ ಮೃತ್ಯುವಿನೆಡೆ ನುಗ್ಗುತ್ತಿರುವ ಪ್ರಪಂಚ-ರಥದಲ್ಲಿ ಜೀವರೆಲ್ಲ ಆಸೀನರಾಗಿದ್ದಾರೆ. ಪಾಪ, ಬುದ್ಧಿಯೇ ಇಲ್ಲದ ಅವರು ಅದೆಂತು ಆ ರಥದಿಂದ ಕೆಳಗೆ ಜಿಗಿಯಬಲ್ಲರು? ಪ್ರಪಂಚ ರಥದಲ್ಲಿರುವ ಭೋಗವು ಅವರನ್ನು ಮರುಳ ಮಾಡಿದೆ. ನನ್ನ ಮಾರ್ಗ ಅವರಿಗೆಂತು ಸಿಕ್ಕೀತು? ಅವರು ಸಾಕಷ್ಟು ಭಕ್ತಿಯಿಂದ ಆರಾಧಿಸುತ್ತಾರೆ ಯೇನೋ ಸರಿ. ಆದರೆ ತಿಳುವಳಿಕೆಯೇ ಇಲ್ಲವಾಗಿ ಮುಕ್ತಿಫಲ ಪಡೆಯದೆ ಚ್ಯುತರಾಗುತ್ತಾರೆ."

ಭಗವಂತನ ಮಾತು ಎಷ್ಟು ಸತ್ಯ! ದೇವ ಧ್ಯಾನ ಮಾಡಬೇಕು, ಪವಿತ್ರ-ಗ್ರಂಥಗಳನ್ನೋದಬೇಕು, ವೇದಶಾಸ್ತ್ರ ಕೇಳಬೇಕು ಎಂದು ಇಚ್ಛಿಸುವವರು ಎಷ್ಟು ಜನ? ಕೆಲವರಿಗೆ ಜಾತಿ ಪಂಥಗಳ ಆತಂಕ, ಕೆಲವರಿಗೆ ಅಭಿಮಾನದ ಕಾಟ, ಕೆಲವರು ಆಲಸಿಗಳು, ಕೆಲವರು ಮಂದಮತಿಗಳು. ಅವರು ನಾಲ್ಕು ಕಾಸಿಗಾಗಿ ಹಗಲೆಲ್ಲ ದುಡಿಯುತ್ತಾರೆ, ಕೂಳುತಿನ್ನಲೂ ಸಮಯವಿಲ್ಲದೆ! ಅಳುವ ಕರೆವ ಹತ್ತು ಮಕ್ಕಳ ನಡುವೆ ನಿದ್ರೆಯಿಲ್ಲದೆ ರಾತ್ರಿ ಕಳೆಯುತ್ತಾರೆ. ಮೈಗೆ ವಿಶ್ರಾಮವಿಲ್ಲ, ಮನಸ್ಸಿಗೆ ನೆಮ್ಮದಿಯಿಲ್ಲ. ಎಷ್ಟು ದುಡಿದರೂ ಒಂದು ಕಾಸಿನ ಲಾಭವಿಲ್ಲ. ಆದರೇನು? ಸಂಸಾರ ಮಾತ್ರ ಕೈಬಿಡದು. ಅವಿಪಶ್ಚಿತರು ಪೂರ್ತಿಯಾಗಿ ಆಶೆಯ ಮುಷ್ಟಿಯಲ್ಲಿ ಸಿಕ್ಕಿದ್ದಾರೆ. ಶರಣ ಜನಸಂಗ, ಸರಲ-ಸುಭಗ ಜೀವನ, ಹಿತಮಿತವಾದ ಊಟ, ನಿದ್ದೆ, ಹೃದ್ಯ ವಿಚಾರ, ಸ್ನೇಹಶೀಲ ಹೃದಯಗಳಿಲ್ಲದ ಆ ಜನತೆಗೆ ಭವ ತಪ್ಪುವದಾದರು ಹೇಗೆ?

> ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।
> ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿಮಾಮ್॥

**ಭಾವ:-**ದೇವತೆಗಳಲ್ಲಿ ಭಕ್ತಿಯುಳ್ಳವರು ದೇವತೆಗಳನ್ನು ಸೇರುತ್ತಾರೆ. ಪಿತೃಭಕ್ತರು ಪಿತೃಗಳನ್ನು ಸೇರುತ್ತಾರೆ. ಭೂತ ಪೂಜಕರು (ಭೂತೇಜ್ಯಾಃ)ಭೂತಗಳನ್ನು ಸೇರುತ್ತಾರೆ. ನನ್ನ ಭಕ್ತರು (ಮದ್ಯಾಜಿನಃ) ನನ್ನನ್ನೇ ಸೇರುತ್ತಾರೆ.

**ವಿವರಣೆ:-** ಭಗವಂತ:- "ಅರ್ಜುನ, ದೇವತಾ ಭಕ್ತರು ಪಿತೃಭಕ್ತರು ಹಾಗು ಭೂತಭಕ್ತರು ಮತಿಹೀನರು. ಯಾವುದು ಹಿತ ಯಾವುದು ಅಹಿತ ಎಂಬುದರ ಪ್ರಜ್ಞೆ ಕಳೆದುಕೊಂಡ ಜನ ಅಪ್ರತಿಮವಾದ ಮಾನವ ಶಕ್ತಿಗಳನ್ನು ವ್ಯಯಮಾಡಿ ದೇವತೆಗಳನ್ನು ಪೂಜಿಸಿ ದೇವತೆಗಳನ್ನು ಹೊಂದುತ್ತಾರೆ; ಪಿತೃ

ಗಳನ್ನು ಪೂಜಿಸಿ ಪಿತೃಗಳನ್ನು ಸೇರುತ್ತಾರೆ; ಭೂತಗಳನ್ನು ಪೂಜಿಸಿ ಭೂತ ಗಳನ್ನು ಸೇರುತ್ತಾರೆ. ಇವರು ಜನ್ಮಮರಣ ಪ್ರವಾಹದಲ್ಲಿ ಪೂರ್ಣ ಸಿಲುಕಿದ್ದಾರೆ. ನನ್ನ ಭಕ್ತರು ಹಾಗಲ್ಲ. ಅವರಿಗೆ ವಿಶ್ವದ ಬಗ್ಗೆ ನಿರಾಸಕ್ತಿ. ಭೋಗಗಳ ಬಗ್ಗೆ ಉದಾಸೀನತೆ. ನನ್ನ ನಾಮ ನುತಿಸಿ, ನನ್ನ ಗುಣ ಲಕ್ಷಣ ಹಾಡಿ, ನನ್ನಲ್ಲಿಯೇ ಸರ್ವಸ್ವ ಅರ್ಪಿಸಿ ಆನಂದಿಸುವ ಅವರು ನನ್ನನ್ನೇ ಹೊಂದುತ್ತಾರೆ."

ಸಂಬಂಧ:-ಭಕ್ತಿಯಿಂದ ಅರ್ಪಿಸಿದ ಎಲ್ಲವೂ ದೇವನಿಗೆ ಪ್ರಿಯ.

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥೨೬॥

ಭಾವ:-ಯಾವನು ನನಗೆ ಭಕ್ತಿಯಿಂದ ಎಲೆಯನ್ನು ಹೂವನ್ನು ಹಣ್ಣನ್ನು ನೀರನ್ನು ಕೊಡುವನೋ (ಅಂಥ) ಶುದ್ಧಚಿತ್ತವುಳ್ಳವನು ಭಕ್ತಿಯಿಂದ ಅರ್ಪಿಸಿದ (ಉಪಹೃತಂ) ಅದನ್ನು ನಾನು ಸ್ವೀಕರಿಸುತ್ತೇನೆ(ಅಶ್ನಾಮಿ).

ವಿವರಣೆ:- ಭಗವಂತ:- "ಧನಂಜಯ. ನಾನು ಭಕ್ತಿಪ್ರಿಯ, ವಸ್ತುಪ್ರಿಯ ನಲ್ಲ. ಷೋಡಶ ಶತ ಸಹಸ್ರೋಪಚಾರಗಳಿಗೆ ನಾನಷ್ಟು ಬೆಲೆ ಕೊಡುವದಿಲ್ಲ. ತೆರೆದ ಹೃದಯ, ಅನನ್ಯ ಪ್ರೇಮ, ಮಚ್ಚಿಂತನಗಳೆಂದರೆ ನನಗೆ ಅತಿ ಮೆಚ್ಚು. ಅಲ್ಲದೆ, ಸರ್ವ ವಸ್ತುಗಳ ಸೃಷ್ಟಾರನೇ ನಾನಾದುದರಿಂದ ಕೆಲವೇ ವಸ್ತುಗಳು ನನ್ನ ಅರ್ಚನೆಗೆ ಯೋಗ್ಯ, ಉಳಿದವು ಅಯೋಗ್ಯ ಎಂಬ ಭಾವನೆಯೇ ತಪ್ಪು. ವಿಮಲ ಮನಸ್ಸಿನಿಂದ ಅತುಲ ಪ್ರೇಮದಿಂದ ಎಲೆ, ಹೂ, ಹಣ್ಣು, ನೀರು ಏನ ನ್ನಾದರೂ ಅರ್ಪಿಸಲಿ ನಾನು ಅದನ್ನು ಸಂತೋಷದಿಂದ ಸ್ವೀಕರಿಸುತ್ತೇನೆ."

ಭಗವಂತನ ಮಾತಿಗೆ ಕೆಲ ನಿದರ್ಶನಗಳು: (೧) ಅಕ್ಷಯ ಪಾತ್ರೆಗೆ ಹತ್ತಿದ ಒಂದು ಸೊಪ್ಪನ್ನು ಸ್ವೀಕರಿಸಿ ದ್ರೌಪದಿಯ ಹಾಗು ಪಾಂಡವರ ಮಾನ ಕಾಯ್ದು. (೨) ಗಜೇಂದ್ರನು ಇತ್ತ ಕಮಲ ಕುಸುಮವನ್ನು ಗ್ರಹಿಸಿ ಕಾಪಾಡಿದ. (೩) ಎಂಜಲ ಬಾರೀ ಹಣ್ಣ ತಿಂದು ಶಬರಿಯನ್ನು ಹರಸಿದ. (೪) ಜಲ ದಾನ ಮಾಡಿದ ರಂತಿದೇವನಿಗೆ ಮುಕ್ತಿಯನ್ನು ದಯಪಾಲಿಸಿದ.

ಕ್ಷುದ್ರ ದೇವತೆಗಳಿಗೆ ಬರಿ ಭಕ್ತಿಯಿಂದ ಸಂತೃಪ್ತಿ ಇಲ್ಲ. ಆಡಂಬರದ ಅರ್ಚನೆ, ಸಹಸ್ರೋಪಚಾರ, ಮಿಷ್ಟಾನ್ನದ ನೈವೇದ್ಯ ಪ್ರಾಣಬಲಿ, ರಕ್ತಸಿಂಚನ ಮುಂತಾದವುಗಳಿಂದ ಅವರಿಗೆ ಸಂತೋಷ. ಭಕ್ತಿಯು ಇದ್ದರೂ ಅಷ್ಟೇ, ಇಲ್ಲ ದಿದ್ದರೂ ಅಷ್ಟೇ.

ಸಂಬಂಧ:- ದೇವನಿಗೆ ಯಾವುದನ್ನು ಅರ್ಪಿಸಬೇಕು ?

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥೨೭॥

ಭಾವ:. ಯಾವುದನ್ನು ಮಾಡುತ್ತೀಯೋ, ಯಾವುದನ್ನು ಭುಂಜಿಸುತ್ತೀಯೋ, ಯಾವುದನ್ನು ಹೋಮ ಮಾಡುತ್ತೀಯೋ (ಜುಹೋಷಿ), ಯಾವುದನ್ನು ದಾನ ಮಾಡು

ತ್ರೀಯೋ. ಯಾವ ತಪಸ್ಸನ್ನು ಮಾಡುತ್ತೀಯೋ ಅದೆಲ್ಲವನ್ನು ನನಗೆ ಅರ್ಪಿಸು.

ವಿವರಣೆ:– ಭಗವಂತ:– "ಅರ್ಜುನ, ವಿಶ್ವದ ಜನಕ ಹಾಗು ನಿಯಾಮಕ
ನಾನು. ಕರ್ಮಕರ್ತ ಮತ್ತು ಫಲಭೋಕ್ತನಾದ ಜೀವ, ಬಾಹ್ಯಾಂತರ ಕರಣ
ಸಮುದಾಯ, ಕರ್ಮಫಲ, ಬಾಹ್ಯ ವಿಷಯ ಎಲ್ಲವು ನನ್ನ ರೂಪುಗಳು. ದೇಹ,
ದೇಹದ ಸಾಮರ್ಥ್ಯ, ಭಾವ, ಭಾವನಾತರಂಗ, ಬುದ್ಧಿ, ಬುದ್ಧಿಗತ ವಿಚಾರ
ವೀಚಿ, ಅಹಂ ಭಾವ, ಮಮಭಾವ ಒಂದೇ ? ಎರಡೇ? ಜಡ ಅಣು ಮೊದಲು
ಮಾಡಿ ಇರುವದೆಲ್ಲ ನನ್ನ ಲೀಲಾಕೃತಿ! ನಾನು ವಿಶ್ವದ ಕ್ರಿಯಾಸೂತ್ರ! ಭಾವ
ಸೂತ್ರ! ಜ್ಞಾನಸೂತ್ರ ! ನಾನು ಪ್ರೇರಿಸಿದಾಗ ಕಾರ್ಯಗಳು, ಭಾವಗಳು,
ಜ್ಞಾನಗಳು ಉಂಟಾಗುತ್ತವೆ. ಪಾರ್ಥ, ಈ ತಥ್ಯವನ್ನರಿಯದೆ ಭ್ರಮಿಸಬೇಡ;
ದೇಹ-ಇಂದ್ರಿಯ-ಮನಸ್ಸುಗಳ ಸಂಘಾತದಲ್ಲಿ ತಲೆದೋರಿದ ( ಎಲೆ, ಅಡಿಕೆ
ಸುಣ್ಣದ ಸಮ್ಮಿಶ್ರಣದಲ್ಲಿ ಲಾಲ-ರಸ ತಲೆದೋರಿದಂತೆ) ಅಹಂಕಾರಕ್ಕೆ ಜೋತು
ಬೀಳದಿರು. ನೀನು ಬರಿ ನಾಮ ಮಾತ್ರ ಕರ್ತ, ಭೋಕ್ತ. ಅಂತರ್ಯಾಮಿಯಾಗಿ
ಎಲ್ಲವನ್ನು ನಿರ್ವಹಿಸುವವ ನಾನೇ. ಆದ್ದರಿಂದ, ನೀನು ಏನ ಮಾಡುತ್ತಿಯೋ,
ತಿನ್ನುತ್ತೀಯೊ, ಅರ್ಪಿಸುತ್ತೀಯೊ, ಕೊಡುತ್ತೀಯೊ, ತಪ ಮಾಡುತ್ತೀಯೊ
ಅದನ್ನು ನನಗೆ ನೀಡಿಬಿಡು. ಹೆಚ್ಚೇನು? ಕರ್ತಾ ಕರಣ ಕರ್ಮ ಇತ್ಯಾದಿ ಚತು
ರ್ದಶ ತ್ರಿಪುಟಿಗಳಿಂದ ಯಾವುದನ್ನು ನಿರ್ವಹಿಸುವಿಯೋ, ಯಾವುದನ್ನು ಉಪ
ಭೋಗಿಸುವಿಯೋ ಅದೆಲ್ಲವನ್ನು ನನ್ನಡಿಗಿಡು. ನಿಶ್ಚಿಂತನಾಗಿ ಬದುಕು. ನನ್ನ
ದನ್ನು ನನಗೆ ಈಯಲು ಅದೇಕೆ ಮೀನ-ಮೇಷ?

"ಒಂದು ವೇಳೆ ನೀನು ಅಹಂ ಬುದ್ಧಿಯಿಂದ ಹವನ ಮಾಡಿದರೆ ಆ
ಹವಿಸ್ಸು ನನಗೆ ತಲುಪುವದಿಲ್ಲ. ನಿನ್ನ ಹವನ ದಾನ ವ್ಯರ್ಥವಾಗುತ್ತವೆ. ಅದ
ಕ್ಕಂದೇ ನಾನು ಮತ್ತೆ ಮತ್ತೆ ಹೇಳುತ್ತಿರುವದು– ನಿನ್ನ ಅಭಿಮಾನವನ್ನೇ ನನಗೆ
ಕೊಟ್ಟುಬಿಡು. ನನ್ನವನಾಗಿ ಬಾಳು!"

ಆತ್ಮಾ ತ್ವಂ ಗಿರಿಜಾ ಮತಿಃ ಪರಿಜನಾ ಪ್ರಾಣಶ್ಶರೀರಂ ಗೃಹಮ್ ।
ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿ ಸ್ಥಿತಿಃ ॥
ಸಂಚಾರಃ ಪದಯೋಃ ಪ್ರದಕ್ಷಿಣ ವಿಧಿಃ ಸ್ತೋತ್ರಾಣಿ ಸರ್ವಾ ಗಿರಾ ।
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್ ॥

ನೀನು ಆತ್ಮ. ಮತಿಯು ನಿನ್ನ ಪತ್ನಿ. ಪ್ರಾಣಗಳು ಪರಿಜನರು
ಶರೀರವು ಗೃಹ. ವಿಷಯೋಪಭೋಗಗಳು ಪೂಜೆ. ನಿದ್ರೆಯು ಸಮಾಧಿ. ಪಾದ
ಸಂಚಾರವು ಪ್ರದಕ್ಷಿಣ ವಿಧಿ. ಮಾತುಗಳೆಲ್ಲ ಸ್ತೋತ್ರಗಳು. ನಾನೇನು ಮಾಡು
ವೆನೋ, ದೇವಾ ಅದೆಲ್ಲ ನಿನ್ನ ಆರಾಧನೆ. ಸಾಧಕನು ಈ ಭಾವ ತಾಳಿದರೆ
ಮುಕ್ತನಾಗುತ್ತಾನೆ. ಭಗವಂತನ ನುಡಿಗಳಿಗೂ ಈ ಸಂತವಾಣಿಗೂ ಹಾಲು
ಸಕ್ಕರೆಯ ಸಂಬಂಧ!

ಸಂಬಂಧಃ– ಅರ್ಜುನಃ– ನೀನು ಹೇಳಿದಂತೆ ಮಾಡಿದರೆ ನಾನು ಯಾವ ಫಲ ಪಡೆಯುವೆನು?

ಶುಭಾಶುಭ ಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।
ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋಮಾಮುಪೈಷ್ಯಸಿ ॥೨೮॥

ಭಾವಃ– ಹೀಗೆ, ಶುಭಾಶುಭ ಫಲದಾಯಕ ಕರ್ಮ–ಬಂಧನದಿಂದ ಬಿಡುಗಡೆ ಹೊಂದುವೆ, ಸನ್ಯಾಸರೂಪ ಯೋಗದಿಂದ ಶುದ್ಧ ಅಂತಃಕರಣ ಉಳ್ಳವನಾದ ನೀನು ಮುಕ್ತನಾಗಿ ನನ್ನನ್ನು ಹೊಂದುವೆ.

ಭಗವಂತಃ– "ಕರ್ತೃ ಭಾವನೆಯಿಂದ ಆಚರಿಸಿದ ಕರ್ಮಗಳು ಶುಭಾಶುಭ ಫಲಗಳನ್ನು ಇತ್ತು, ಅವುಗಳಲ್ಲಿ ನಿನ್ನನ್ನು ಬಂಧಿಸುತ್ತವೆ. ಪ್ರಪಂಚವೆಂಬ ಭಯಾನಕ ಕಾರಾಗ್ರಹದಲ್ಲಿ ದೂಡುತ್ತವೆ. ಅಲ್ಲಿಂದ ಪಾರಾಗ ಬಯಸುವಿಯಲ್ಲವೆ? ಹಾಗಾದರೆ ನಾನು ಹೇಳಿದಂತೆ ಕೇಳು. ನಾನು ಅಂತರ್ನಿಯಾಮಕ ಎಂಬುದನ್ನು ಅರಿ. ' ನಾನು ಮಾಡುವೆ ' ಎಂಬ ಭಾವನೆಯನ್ನು ಪರಿತ್ಯಜಿಸು. ಮಾಡಿದ ಕರ್ಮ, ಬರುವ ಫಲ ಹಾಗು ಮಾಡುವ ಭಾವಗಳನ್ನು ನನ್ನ ಪಾದಗಳಲ್ಲಿ ಹೋಮಮಾಡು. ಇದೇ ಸನ್ಯಾಸ; ಇದರಿಂದ ನಿನ್ನ ಅಂತಃಕರಣವು ಪರಿಶುದ್ಧವಾಗುವದು, ಇದುವೇ ಸನ್ಯಾಸಯೋಗದ ಲಾಭ. ಇದನ್ನು ಗಳಿಸಿದ ನಂತರ ನೀನು ಸಾಂಸಾರಿಕ ಬಂಧನದಿಂದ ಮುಕ್ತಿಹೊಂದುವೆ. ಕೊನೆಗೆ ನನ್ನಲ್ಲಿ ಸಾಮರಸ್ಯ ಪಡೆಯುವೆ."

ನಿಜವಾಗಿ ನಮ್ಮನ್ನು ಭವದಲ್ಲಿ ಬಂಧಿಸಿದವರು ದೇವರಲ್ಲ, ಜಡಭೂತಗಳಲ್ಲ, ನೆಂಟರಿಷ್ಟರಲ್ಲ, ಮಡದಿ ಮಕ್ಕಳಲ್ಲ, ನಾವು ಗೈದ ಸಕಾಮ ಕರ್ಮಗಳೇ ನಮ್ಮ ಬಂಧನೆಗೆ ಕಾರಣ. ನಮ್ಮಲ್ಲಿರುವ ವೈಷಯಿಕ ಆಸಕ್ತಿ, ಮಾನ ಕೀರ್ತಿಗಳ ಬಗೆಗಿರುವ ವ್ಯಾಮೋಹ ಮತ್ತು ಅವಿವೇಕಗಳು ನಮ್ಮ ಅಧಃಪತನಕ್ಕೆ ಹೇತು. ನಮಗೆ ಸುಖ-ಸಂತೋಷಗಳು ಚಿರಂತನವಾಗಿ ಸಮನಿಸಬೇಕಾದರೆ ಆಸಕ್ತಿ ಅರತುಹೋಗಬೇಕು; 'ಯಾರಿಗೆ ಯಾರಿಲ್ಲ' ಯಾರ ಮೋಹವೂ ತರವಲ್ಲ ಎಂಬ ಅರಿವು ಉಂಟಾಗಬೇಕು. ಕಟ್ಟಿದ ಪ್ರಪಂಚವನ್ನು ಸಹಜ ಭಾವದಿಂದ ಪರಿತ್ಯಜಿಸಬೇಕು. ಅದಕ್ಕೆ ಯಾರ ಅನುಮತಿ ಬೇಕಿಲ್ಲ. ನಾವು ಅದನ್ನು ತೊರೆದಾಗ ಹೆಂಡತಿ ಮಗ ಮನೆ ಯಾವುದೂ ನಮ್ಮ ಬೆನ್ನುಹತ್ತಿ ಬರದು. ಹೀಗೆ ನಮ್ಮನ್ನು ಮುಕ್ತಗೊಳಿಸಿಕೊಂಡ ಬಳಿಕ ದೇವನ ಚರಣಗಳಿಗೆ ನಮ್ಮತನವನ್ನೇ ಸಮರ್ಪಿಸಬೇಕು. ಆ ದೇವನು ನಮ್ಮನ್ನು ತನ್ನಲ್ಲಿ ಐಕ್ಯಮಾಡಿಕೊಳ್ಳುತ್ತಾನೆ.

ಸಂಬಂಧಃ–ಅರ್ಜುನಃ- ನಿನ್ನ ಉಪದೇಶ ಕೇಳಿದಾಗ ಒಂದು ಸಂಗತಿ ಸ್ಪಷ್ಟವಾಗುತ್ತಿದೆ. ಕೊಂಡಾಡುವವರ ಮೇಲೆ ನಿನ್ನದು ಪ್ರೀತಿ; ಉಳಿದವರ ಮೇಲೆ ನೀನು ಉದಾಸೀನ! ಇದು ದೇವನಾದ ನಿನಗೆ ಸರಿಯೆ?

ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।

**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್॥೨೯**

**ಭಾವ:**–ನಾನು ಸಮಸ್ತಭೂತಗಳಲ್ಲಿ ಸಮ. ನನಗೆ ಶತ್ರುವಿಲ್ಲ. ಪ್ರಿಯನು ಇಲ್ಲ, ಆದರೆ ಯಾರು ನನ್ನನ್ನು ಭಕ್ತಿಪೂರ್ವಕ ಭಜಿಸುತ್ತಾರೆಯೋ ಅವರು ನನ್ನಲ್ಲಿ ಇರುತ್ತಾರೆ, ಮತ್ತು ನಾನು ಅವರಲ್ಲಿ ಇರುತ್ತೇನೆ.

**ವಿವರಣೆ:- ಭಗವಂತ:-**"ಅರ್ಜುನ, ನಾನು ಪಕ್ಷಪಾತಿಯಲ್ಲ. ಎಲ್ಲ ಚರಾಚರ ಜೀವಿಗಳಿಗೆ ಸಮ. ಇಷ್ಟೇ, ಯಾರು ವಿಷಯ ಪರಾಙ್ಮುಖರಾಗಿ ನನ್ನನ್ನು ವಿಮಲ ಹೃದಯದಿಂದ, ಅತುಲ ಅನುರಾಗದಿಂದ ( ಭಜಂತಿ ) ಧ್ಯಾನಿಸುತ್ತಾರೆಯೋ, ಅವರ ನಿಷ್ಕಲ್ಮಷ ಅಂತರಂಗದಲ್ಲಿ ಅಭಿವ್ಯಕ್ತನಾಗುತ್ತೇನೆ. ಅಂದರೆ ಅವರಲ್ಲಿ ನಾನಿರುತ್ತೇನೆ. ಮತ್ತು ತಮ್ಮತನವನ್ನೇ ನನಗರ್ಪಿಸಿದುದರಿಂದ ಅವರು ನನ್ನಲ್ಲಿರುತ್ತಾರೆ. ಯಾರು ವಿಷಯೋನ್ಮುಖರಾಗಿ ಪ್ರಪಂಚವನ್ನೇ ಸದಾ ಚಿಂತಿಸುತ್ತಾರೆಯೋ ಅವರ ಮನಸ್ಸು ಕಲಕುತ್ತದೆ. ಅಂಥ ಮನಸ್ಸಿನಲ್ಲಿ ನನ್ನ ಆನಂದ ಸ್ಫುರಣೆಯನ್ನು ಪರಿಗ್ರಹಿಸುವ ಸಾಮರ್ಥ್ಯ ಇಲ್ಲವಾಗಿ ದುಃಖ ಅವರನ್ನು ಬಿಡದು. ಅವರ ಭವ ಹಿಂಗದು. ಅವರಲ್ಲಿ ನಾನು ಇದ್ದರೂ ನನ್ನಲ್ಲಿ ಅವರು ಇಲ್ಲ.

೧) **ಸಮೋಽಹಂ ಸರ್ವಭೂತೇಷು:**– ಸಕಲ ದೇಹ, ಅವಸ್ಥೆ ಹಾಗು ಜೀವರುಗಳು ಚಿತ್ರಗಳು; ಅವು ಪರಸ್ಪರ ಭಿನ್ನ ಭಿನ್ನವಾದರೂ ಅವುಗಳಿಗೆ ಆಧಾರವಾದ ದೇವ ಭಿತ್ತಿ ಮಾತ್ರ ಅಭಿನ್ನ, ಸಮ! ಜ್ಞೇಯವಾದ ಪದಾರ್ಥಗಳು ಅಸಂಖ್ಯ. ಅವುಗಳನ್ನು ಸಾಕ್ಷಿಯಾಗಿ ಪ್ರಕಾಶಿಸುವ ದೇವ–ರವಿಯು ಏಕೈಕ! ವಿಷಯೋತ್ಪನ್ನ ಸುಖಗಳು ಹಲವಾರು. ಆನಂದ ಸಾಗರನಾದ ಪರಮ ಶಿವನು ಒಬ್ಬ! ಹೀಗೆ ಸಮಸ್ತ ವಿಶ್ವಕ್ಕೆ ಪರಮ ದೇವನು ಸತ್, ಚಿತ್, ಆನಂದ ರೂಪದಿಂದ ಸಮನಾಗಿದ್ದಾನೆ.

೨) **ನ ಮೇ ದ್ವೇಷ್ಯಃ ಅಸ್ತಿ ನ ಪ್ರಿಯಃ:**– ಆದ್ದರಿಂದ ವೈರಿಯಾಗಲಿ ಮಿತ್ರನಾಗಲಿ ಯಾರೂ ಇಲ್ಲ. ವೈರ ಹಾಗು ಪ್ರೇಮಗಳು ಮನೋಭೂಮಿಯನ್ನು ಅವಲಂಬಿಸಿರುವ ವ್ಯಾವಹಾರಿಕ ಭಾವಗಳು. ಅವು ವಸ್ತುಗಳ ಅನುಕೂಲತೆ ಪ್ರತಿಕೂಲತೆಗಳನ್ನು ಆಲಂಬನ ಮಾಡಿಕೊಂಡು ಉದಿಸುತ್ತವೆ. ಈ ವೈರ ಪ್ರೇಮ ಭಾವನೆಗಳು ಹುಟ್ಟಲು ಎರಡು ಸಂಗತಿಗಳು ಅಗತ್ಯ: ಅ)ಅವುಗಳನ್ನು ಹೊಂದುವ ವ್ಯಕ್ತಿ ಪರಿಚ್ಛಿನ್ನನಿರಬೇಕು. (ಬ) ಇಂದ್ರಿಯ ಹಾಗು ವಿಷಯಗಳಿಗೆ ಸಂಪರ್ಕ ಉಂಟಾಗಲೇಬೇಕು. ಪರಮಾತ್ಮನು ದೇಹಯುಕ್ತ ವ್ಯಕ್ತಿಯಲ್ಲ. ಅವನು ಅಪರಿಚ್ಛಿನ್ನ. ಅವನಿಗೆ ಇಂದ್ರಿಯಗಳಿಲ್ಲ ಮನಸ್ಸಿಲ್ಲ. ಬರಿ ಅರಿವಿನ ಸಾಗರ ಆತ. ಆದ್ದರಿಂದ ಅವನು ಯಾರನ್ನೂ ದ್ವೇಷಿಸಲಾರ, ಪ್ರೇಮಿಸಲಾರ!

೩) **ಯೇ ಭಜಂತಿ ಮಯಿ ತೇ. ತೇಷು ಅಹಂ:**–ಬರ್ಫವು ಮಡಿಯಾಕಾರವಾಗದು. ಕರಗಿಸಿದಾಗ ಬೇಕಾದ ಮಡಿಯ ಆಕಾರ ತಾಳಬಲ್ಲದು. ಹಾಗೆ

ಮಲಿನ ಮನಸ್ಸು ದೇವನನ್ನರಿಯದು. ಅದೇ ಮನಸ್ಸು ಉಪನಿಷದುಕ್ತ ಸರ್ವ ಕರ್ಮಫಲಾರ್ಪಣವೆಂಬ ಸನ್ನ್ಯಾಸ ಅಗ್ನಿಯಿಂದ ಕರಗಿದರೆ ಅದು ದೇವನ ಆಕಾರ ತಾಳುತ್ತದೆ. ಅಂದರೆ ದೇವನನ್ನು ಯಥಾವತ್ತಾಗಿ ಗ್ರಹಿಸುತ್ತದೆ. ಇಂಥ ಮನಸ್ಸುಳ್ಳವರು ಭಕ್ತರು. ಅವರಲ್ಲಿ ಪರಮಾತ್ಮನು ಅಭಿವ್ಯಕ್ತವಾಗಿ ಇದ್ದಾನೆ. ಅವನಲ್ಲಿ ಅವರು ನೆಲೆಸಿದ್ದಾರೆ.

ಸಂಬಂಧಃ– ಅನನ್ಯ ಭಕ್ತಿಯ ಪ್ರಭಾವವೇನು?

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥೩೦॥

ಭಾವಃ– ಅತ್ಯಂತ ದುರಾಚಾರಿಯಾಗಿದ್ದರೂ ಅನನ್ಯ ಭಕ್ತಿಯುಳ್ಳವನಾಗಿ (ಅನನ್ಯ ಭಾಕ್) ನನ್ನನ್ನು ಭಜಿಸಿದರೆ ಅವನು ಸಾಧುವೆಂದೇ ತಿಳಿಯಬೇಕು (ಮಂತವ್ಯಃ). ಏಕೆಂದರೆ ಅವನು ನಿಶ್ಚಯ ಬುದ್ಧಿಯುಳ್ಳವನು (ಸಮ್ಯಗ್ವ್ಯವಸಿತಃ).

ವಿವರಣೆ:– ಭಗವಂತಃ– "ಅರ್ಜುನ, ಘೋರ ದುರಾಚಾರಿಯಾಗಿದ್ದರೂ ಸರಿ. ಕರಾಳ ಕೃತ್ಯದಲ್ಲಿ ತನ್ನ ಜೀವನ ಕಳೆದ ಪಾಪಿಯಾಗಿದ್ದರೂ ಸರಿ. ಅವನು ಅತುಲ ಭಕ್ತಿಯಿಂದ ನನ್ನನ್ನು ಭಜಿಸಿದರೆ ಅವನ ಜೀವನ ಪಾವನವಾಯಿತೆಂದೇ ತಿಳಿ. ಆತ ಸಾಧು, ಸಂತ, ಶರಣ. ಏಕೆಂದರೆ, ಭಕ್ತಿಯೇ ದೇವಾನುಗ್ರಹದ ಪರಮ ಸಾಧನ ಎಂಬ ಯಥಾರ್ಥ ನಿಶ್ಚಯ ಅವನದಾಗಿದೆ."

ಭಕ್ತಿಯು ಪರಮಾತ್ಮನ ದಿವ್ಯ ಕರುಣೆಯನ್ನು ಅವತರಿಸಿಕೊಡುವ ದಿವ್ಯ ಸಾಧನ. ಅದನ್ನು ನಂಬಿ, ಕೆಟ್ಟವರೇ ಇಲ್ಲ. ಭಕ್ತಿಯು ನಮ್ಮಲ್ಲಿರುವ ಪಾಪ ಗಳನ್ನು ತೊಳೆಯುವದು. ಅಷ್ಟೇ ಅಲ್ಲ ಭಕ್ತಿಯ ಭರದಲ್ಲಿ ಮಾಡಿದ ಅಕೃತ್ಯ ಗಳು ಕೂಡ ಪಾಪವಾಗವು. ಅವು ದೇವನಿಗೆ ಕ್ಷಮ್ಯ. ಉದಾ: ಕುಂತಿದೇವಿಯು ಆರು ಜನ ಮಕ್ಕಳನ್ನು ಪತಿಯ ಸಂಬಂಧವಿಲ್ಲದೆ ಹೆತ್ತಳು. ಆದರೆ ಪರಮಾತ್ಮ ನಿಗೆ ಪೂರ್ತಿ ಮೊರೆಹೋಗಿದ್ದರಿಂದ ಆಕೆಯ ವರ್ತನೆ ಅನಾಚಾರವೆನಿಸಲಿಲ್ಲ. (ಪ್ರಮಾಣವಾಕ್ಯ: ಕುಂತೀ ಇಂದ್ರಾದಿ ಸಂಸರ್ಗಂ ಕೃತ್ವಾ ಅಪಿ, ಮದ್ಭಕ್ತಿ ಮಹಿಮ್ನಾ ಸರ್ವೋತ್ತಮಾ ಸತೀತ್ವೇನ ಪರಿಗಣಿತಾ ನಾ ಧರ್ಮ ಸಂಬಂಧೇನ ನಾಶ ಯೋಗ್ಯಾ). ಕಬೀರದಾಸನ ಹೆಂಡತಿ ಅತಿಥಿಗಳ ಸೇವೆಗಾಗಿ ಒಂದು ದಿನದ ಮಟ್ಟಿಗೆ ತನ್ನ ದೇಹವನ್ನು ಒಬ್ಬ ವ್ಯಾಪಾರಿಯ ವಶಮಾಡಲು ಮಾತು ಕೊಟ್ಟಳು. ಅವಳ ಆ ನಡತೆ ಗಂಡನಿಗೆ ಮೆಚ್ಚಿಗೆಯಾಯ್ತು. ವಾಲ್ಮೀಕಿ ಅಸದೃಶ ಪಾಪಿ. ರಾಮಭಕ್ತಿಯು ಆ ಪಾಪವನ್ನು ತೊಳೆಯಿತು. ಪರಶುರಾಮನು ತಂದೆಯ ಆಜ್ಞೆಯಂತೆ ತಾಯಿಯ ಶಿರಚ್ಛೇದ ಮಾಡಿದ. ಋಷಿ ಜಮದಗ್ನಿಯು ಆ ಕಾರ್ಯದಿಂದ ಸಂತುಷ್ಟನಾಗಿ ವರ ನೀಡಿದ. ಇವೆಲ್ಲ ಅನನ್ಯ ಭಕ್ತಿಯ ಜ್ವಲಂತ ದೃಷ್ಟಾಂತಗಳು!

ನಾವಂತೂ ಅಷ್ಟು ದುರಾಚಾರ ಮಾಡಿದವರಲ್ಲ. ಏನೋ ನಾಲ್ಕು ಕಾಸಿಗಾಗಿ

ಕಳ್ಳ ವ್ಯಾಪಾರ ಮಾಡುತ್ತೇವೆ. ಲಂಚ ಸ್ವೀಕರಿಸುತ್ತೇವೆ. ಕಲಬೆರಕೆಯ ವಸ್ತುಗಳನ್ನು ಮಾರುತ್ತೇವೆ. ಇದೆಲ್ಲ ಘೋರ ಪಾಪವೇನಲ್ಲ. ಇಂದೇ ಅನನ್ಯ ಭಕ್ತಿ ಮಾಡಲು ಕಲಿಯೋಣ. ನಮ್ಮ ಪಾಪವೆಲ್ಲ ಹುರಿದು ಹೋಗುವದು. ಪರಮಾತ್ಮನ ದಿವ್ಯ ಕೃಪೆ ಅವತರಿಸುವದು!

ಸಂಬಂಧ:– ಭಕ್ತನಿಗೆ ನಾಶವೆಂಬುವದೇ ಇಲ್ಲ.

ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।
ಕೌಂತೇಯ ಪ್ರತಿ ಜಾನೀಹಿ ನ ಮೇ ಭಕ್ತ ಪ್ರಣಶ್ಯತಿ ॥೩೧॥

ಭಾವ:– (ಅವನು) ಬೇಗನೆ ಧರ್ಮಾತ್ಮನಾಗುತ್ತಾನೆ. ಶಾಶ್ವತ ಶಾಂತಿಯನ್ನು ಹೊಂದುತ್ತಾನೆ. ನನ್ನ ಭಕ್ತನು ನಾಶವಾಗುವದಿಲ್ಲ, ಎಂದು ತಿಳಿದುಕೊ.

ವಿವರಣೆ:– ಭಗವಂತ:– "ಅರ್ಜುನ, ಮನುಷ್ಯ ಎಷ್ಟೇ ದುಷ್ಟನಿರಲಿ, ಅನೀತಿ ಅಧರ್ಮ ಅತ್ಯಾಚಾರಗಳಲ್ಲಿ ಯಥೇಚ್ಛ ತೊಡಗಿರಲಿ; ಅವನಲ್ಲಿ ನನ್ನ ಬಗೆಗೆ ಅತುಲ ಅನುರಾಗ ಉಂಟಾದರೆ ಅದೇ ಕ್ಷಣ ಆತ ಧರ್ಮಾತ್ಮನಾಗುತ್ತಾನೆ. ಆತ್ಮದರ್ಶನ ಪಡೆಯುತ್ತಾನೆ. ಪರಮ ಶಾಂತಿಯನ್ನು ಅನುಭವಿಸುತ್ತಾನೆ. ಅವನಿಗೆ ನಾಶವೆಂಬುವದೇ ಇಲ್ಲ ಎಂದು ತಿಳಿದುಕೊ."

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂಗತಿಮ್ ೩೨

ಭಾವ:– ಪಾಪಯೋನಿಜರು ಸ್ತ್ರೀ, ವೈಶ್ಯ, ಶೂದ್ರ ಯಾರೇ ಆಗಿರಲಿ ಅವರೂ ನನ್ನನ್ನು ಆಶ್ರಯಿಸಿ ಪರಮ ಗತಿಯನ್ನು ಹೊಂದುತ್ತಾರೆ.

ಭಗವಂತ:– "ಅಜ್ಞ ಮಾನವರ ದೃಷ್ಟಿಯಲ್ಲಿ ವರ್ಣ ಆಶ್ರಮ ಜಾತಿ ಗೋತ್ರ ಪಂಥಗಳು. ನನಗೆ ಮಾತ್ರ ಅವೆಲ್ಲ ಸಮಾನ. ಸಮಾಜದಲ್ಲಿ ಕಡಿಮೆಯವರೆಂದು ಗಣಿಸಲಾಗಿದ್ದ ಸ್ತ್ರೀ, ವೈಶ್ಯ, ಶೂದ್ರ–ಅಷ್ಟೇ ಏಕೆ, ಕ್ರಿಮಿ, ಕೀಟ, ಪಶು, ಪಕ್ಷಿ ಯಾವುದಿದ್ದರೂ ಸರಿ; ಒಂದು ವೇಳೆ ಆ ವ್ಯಕ್ತಿ . ಅಥವಾ ಆ ಜೀವಿ ಭೌತಿಕ ವಸ್ತುಗಳನ್ನಾಶ್ರಯಿಸದೆ ನನ್ನನ್ನೇ ಆಶ್ರಯಿಸಿದರೆ ಪರಮ ಗತಿಯ ಪ್ರಾಪ್ತಿಯು ಸುನಿಶ್ಚಿತ! ಅವರೆಲ್ಲ ನನ್ನ ಪವಿತ್ರ ಸಾನಿಧ್ಯ ಸೇರುತ್ತಾರೆ."

ಕಣ್ಣಪ್ಪ, ಕನಕದಾಸ, ಸಾಂಖ್ಯತೋಂಡ ಮುಂತಾದವರು ಕೀಳು ಕುಲದವರು. ಅವರ ಭಕ್ತಿಯನ್ನು ಕಂಡ ದೇವನು ಅವರಿಗೆ ಅಮರ ಪದವಿಯ ನೀಡಿದ. ಅಕ್ಕಮಹಾದೇವಿ, ಮೀರಾಬಾಯಿ, ಜನಾಬಾಯಿ ಮುಂತಾದವರು ಸ್ತ್ರೀಯರು. ಅವರಲ್ಲಿದ್ದ ಅಪಾರ ಅನುರಾಗವ ವೀಕ್ಷಿಸಿದ ದೇವನು ಅವರನ್ನು ಅನುಗ್ರಹಿಸಿದ. ನಿಜವಾಗಿ ನೋಡಬೇಕಾದರೆ, ಜಾತಿ-ವರ್ಣಗಳು ಆಕುಂಚಿತ ಭಾವದ ಮನುಷ್ಯರಿಂದ ಸೃಷ್ಟವಾಗಿವೆ. ಬಲ್ಲವರು, ಗುರುಗಳು ಅವುಗಳನ್ನು ಸಂಪೂರ್ಣವಾಗಿ ಉಪೇಕ್ಷಿಸಬೇಕು. ವಿಶ್ವವೆಲ್ಲ ದೇವನ ಕಲಾಕೇಂದ್ರವೆಂದು ಭಾವಿಸಬೇಕು.

ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।
ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥೩೩॥

ಭಾವ:- ಪುಣ್ಯವಂತರಾದ ಭಕ್ತರಾದ ಬ್ರಾಹ್ಮಣರೂ ರಾಜರ್ಷಿಗಳೂ (ಪರಮಗತಿಯನ್ನು ಹೊಂದುವರೆಂದು) ಹೇಳಬೇಕಾದುದೇನಿದೆ? ಅನಿತ್ಯ ಮತ್ತು ಅಸುಖವಾದ ಈ ಲೋಕವನ್ನು ಪಡೆದು ನನ್ನನ್ನು ಭಜಿಸು.

ವಿವರಣೆ:- ಭಗವಂತ:- "ಧನಂಜಯ, ಪ್ರಾಣಿ ಪಶು ಪಕ್ಷಿಗಳೂ ಕೀಳು ವರ್ಣೀಯರೂ ಭಕ್ತಿಯಿಂದ ಮುಕ್ತಿ ಪಡೆಯಬಲ್ಲರೆಂದಾಗ ತತ್ತ್ವನಿಷ್ಠರಾದ ಬ್ರಾಹ್ಮಣರೂ ಸರ್ವಾರ್ಪಣ ಭಾವದ ಭಕ್ತರೂ ರಾಜರ್ಷಿಗಳೂ ನನ್ನ ಅನನ್ಯ ಚಿಂತನದಿಂದ ಮುಕ್ತರಾಗುವರೆಂದು ಬೇರೆ ಹೇಳುವ ಅವಶ್ಯಕತೆ ಏನಿದೆ? ಆದುದರಿಂದ, ಅಸ್ಥಿರವಾದ ದುಃಖಮಯವಾದ ಈ ಮಾನವೀ ದೇಹ ಪಡೆದಿರುವ ನೀನು ಏಕಾಂತ ಭಕ್ತಿಯಿಂದ ನನ್ನನ್ನು ಭಜಿಸು!"

ಜನಾರ್ದನನನ್ನು ಆರಾಧಿಸಿದ ಹಾವು ಅವನ ಶಯನವಾಯ್ತು. ಶಿವನಿಗೆ ಶರಣೆಂದ ವೃಷಭ ಶಿವನ ವಾಹನವಾದ. ಸದಾ ವಿಷ್ಣುವಿನ ಚಿಂತನ ಮಾಡಿದ ಗರುಡ ವಿಷ್ಣುದಾಸನೆನಿಸಿದ. ಅಷ್ಟೇ ಅಲ್ಲ, ಜಗತ್ತಿನ ಲಕ್ಷಾಂತರ ಜನ ಕಡಿಮೆ ಕುಲದವರಾದರೂ ದೇವಕೃಪೆ ಹೊಂದಿದ್ದಾರೆ. ಹೀಗಿದ್ದಾಗ, ಜ್ಞಾನ ಕರ್ಮ ಭಕ್ತಿಗಳನ್ನೇ ಅಂಗವಿಸಿಕೊಂಡ ಸಂತ ಶರಣ ಮಹಾತ್ಮರು ಕೃತಾರ್ಥರಾಗುವಲ್ಲಿ ಏನಚ್ಚರಿ?

ದೇವರಾಜ್ಯದಲ್ಲಿ ಪ್ರವೇಶಿಸಲು ಎಲ್ಲರಿಗೂ ಸ್ವಾಗತವಿದೆ. ಅದಕ್ಕಾಗಿ ಸ್ವಲ್ಪ ಸಿದ್ಧತೆ ಬೇಕು. ದೇಹ ನಶ್ವರ. ದೈಹಿಕ ಭೋಗಗಳೂ ನಶ್ವರ. ಜಗತ್ತು ನಶ್ವರ. ಜಾಗತಿಕ ನಾಮ ಕೀರ್ತಿಗಳೂ ನಶ್ವರ. ಪರಮಾತ್ಮನೊಬ್ಬನೇ ನಿತ್ಯ-ಸತ್ಯ. ದೇಹ ಭೋಗಗಳನ್ನು ಪರಮಾತ್ಮನಿಗೆ ಸಮರ್ಪಿಸುವುದೇ ಆ ಸಿದ್ಧತೆ. ದೇಹದ ಅಂತ, ಭೋಗಗಳ ಅಂತ ಎಂದು ಎಂಬುದನ್ನು ಹೇಳ ಬರದು. ಇದೇ ಕ್ಷಣ ಅವೆರಡನ್ನು ಉಪಯೋಗಿಸಿ ದೇವ ಸಾಕ್ಷಾತ್ಕಾರ ಪಡೆಯೋಣ; ನಂತರ ಸಮಯ ಉಳಿದರೆ ಪ್ರಪಂಚದಲ್ಲಿ ಪ್ರವೇಶಿಸೋಣ.

"ಇಂದು ನಾಳೆಯನ್ನದೆ ಈಗಲೇ ಸುಕೃತಿ ಪಡೆ ।
ಮುಂದಾವ ಗಳಿಗೆಗೇನಹುದೋ ಮನುಜಾ ॥ಪಲ್ಲ॥
ತನುವೇನು ಶಾಶ್ವತವೇ? ಮನವು ನಿಶ್ಚಲವಿಹುದೆ?
ಧನವೇನು ಕುಲಗಿರಿಯೆ? ಯತ್ನವಭಂಗಮಯವೆ?
ವನಿತೆಯೇನನುಕೂಲಿನಿಯೆ? ತನಯನಾಜ್ಞಾಧಾರನೆ?
ಜನರೊಲುಮೆ ನಿಜವೆ? ವಾಸನೆ ಏಕಮುಖಿಯೆ? ॥೧॥
ಕುಜನರಲಸಿದರೆ ವಿಘ್ನಂಗಳಕ್ಷಿಯೇ ಹೋಯ್ತೆ?
ರುಜೆಗೆ ಮೈಮರವೆಯೆ? ದುಃಖಕ್ಕೆ ಮೂರ್ಛೆ ಬಂತೆ?
ನಿಜಬಂಧುವಳಿಯದುದೆ? ಪೈಶೂನ್ಯವಡಗಿತ್ತೆ?

ವಿಜನ ದೇಶಕೆ ಪ್ರಮಾದವು ತಪಿಸಿ ಹೋಯ್ತೆ? ॥೨॥
ಚಾರವಳಿದುವೆ ಗ್ರಹಗಳಾಧಿ ಮೃತವಾಯ್ತೆ?
ದಾರಿದ್ರ್ಯಕೇಂ ಗಡುವೆ? ನಷ್ಟವಳಕುವದೆ?
ಚೋರರತಿ ಧರ್ಮಿಗಳೆ? ಲೋಭಕ್ಕೆ ಸಾಕಾಯ್ತೆ?
ಕಾರುಣ್ಯಮುಂಟೆ ಯಮರಾಜನಿಗೆ ಕಡೆಗೆ? ॥೩॥
ಸತಿ ಸುತರಿಗಿರಲೆಂದು ಸುಕೃತಮುಳಿದಿರಲಘೋ ।
ಗತಿ ನಿನಗೊ ತದನುಭವಗೋರ್ ಬಳಿಕಾರ್ಗೋ?
ಮೃತವಪ್ಪನೆಂದು ಕರುವಿಗೆ ಗೋವು ಪುಲ್ ಮೆದೆಯ
ಜೊತೆಮಾಡುವುದೆ? ಲೋಕ ಬಂಧು ಶಿವನಿರನೆ? ॥೪॥
ಕಾಲ ಸ್ವಜನವೆಂದರೀ ದೋಷವದರಿಂದೆ ।
ಹಾಲಿದ್ದ ಕಾಲವಲೆ ಹಬ್ಬವೆಂದರಿದು ॥
ಕೇಳದಾರನು ಯಥಾಶಕ್ತಿಯಿಂ ಧರ್ಮ ಪರಿ
ಪಾಲನೆಯ ಮಾಡಿ ಗುರುಸಿದ್ಧನನು ಒಲಿಸೈ ॥೫॥

ಮನುಷ್ಯನು ದೇಹ ತೊಟ್ಟ ಮೇಲೆ ಪ್ರಪ್ರಥಮವಾಗಿ ಮಾಡಬೇಕಾದ ಕರ್ತವ್ಯವನ್ನು ನಿಖರವಾಗಿ ಮನ ಒಪ್ಪುವಂತೆ ಹೃದಯವರಳುವಂತೆ ಚಿತ್ರಿಸಿದ್ದಾರೆ ಶ್ರೀ ಸರ್ಪಭೂಷಣ ಶಿವಯೋಗಿಗಳು. ಈ ಐದು ಪದ್ಯಗಳು ದಿನ ನಿತ್ಯ ಕಣ್ಣೆದುರು ಸುಳಿಯುತ್ತಿರಲಿ.

ಸಂಬಂಧ:-ಭಗವಂತನು ಈ ಅಧ್ಯಾಯದ ಉಪಸಂಹಾರ ಮಾಡುತ್ತಾನೆ.

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥೩೪॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ರಾಜವಿದ್ಯಾ ರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ.

ಭಾವ:– ನನ್ನಲ್ಲಿ ಮನಸ್ಸುಳ್ಳವನೂ ನನ್ನ ಭಕ್ತನೂ ನನ್ನ ಪೂಜಕನೂ (ಮದ್ಯಾಜೀ) ನನ್ನನ್ನೇ ಪರಮಗತಿಯೆಂದು ತಿಳಿದವನೂ (ಮತ್ಪರಾಯಣಃ) ಆಗು. ನನ್ನನ್ನು ನಮಸ್ಕರಿಸು. (ನನ್ನಲ್ಲಿ) ಮನಸ್ಸನ್ನು ನಿಲ್ಲಿಸಿದೆಯಾದರೆ ನನ್ನನ್ನೇ ಹೊಂದುವಿ.

ವಿವರಣೆ:– ಭಗವಂತ:– "ಭಾರತ, ಜನರು ವಿಷಯಾರಾಮಿಗಳು. ಪತ್ನಿಭಕ್ತರು, ಧನದ ದಾಸರು, ನಾಮ ಕೀರ್ತಿಗಳ ಲಾಲಸರು. ಸಾವು ಸಮೀಪ ಬಂದರೂ ಒಂದಿಲ್ಲೊಂದು ನೆಪದಿಂದ ಪ್ರಪಂಚದಲ್ಲಿಯೇ ಉಳಿಯಬೇಕೆನ್ನುತ್ತಾರೆ. ತಾವು ಕಂಡ ನೂರಾರು ಕನಸುಗಳನ್ನು ನನಸಾಗಿಸಿಯೇ ದೇಹ ಬಿಡಬೇಕೆಂಬ ಛಲ ಅವರದು. ಪಾಪ ತಮ್ಮಲ್ಲಿರುವ ಮನ ಬುದ್ಧಿ ಭಾವಗಳಂಥ ಪ್ರಚಂಡ ಶಕ್ತಿಗಳನ್ನು ಕ್ಷುಲ್ಲಕ ವಿಷಯಗಳಿಗಾಗಿ ವ್ಯಯಿಸುತ್ತಾರೆ.

"ಪಾಂಡವ, ನೀನು ಅಷ್ಟು ಮರುಳನಾಗದಿರು. ನನ್ನಲ್ಲಿಯೇ ಮನವಿಡು: ನನ್ನ ಭಕ್ತನಾಗು. ನನಗಾಗಿ ನಿನ್ನದನ್ನೆಲ್ಲ. ಸಮರ್ಪಣ (ಯಜ್ಞ) ಮಾಡು. ನನ್ನ

ಚರಣಗಳಲ್ಲಿ ತಲೆ ಬಾಗಿಸು, ನನ್ನನ್ನೇ ಚಿಂತಿಸು, ಭಾವಿಸು! ನಾನೆ ಪರಮ ಗತಿಯೆಂದು ನಿರ್ಧರಿಸಿಕೊ. ಒಟ್ಟಿನಲ್ಲಿ ನಿನ್ನನ್ನೇ ನನಗೆ ನಿವೇದಿಸು! ಅಂದರೆ ನನ್ನನ್ನೇ ಹೊಂದುವಿ. ನನ್ನಲ್ಲಿಯೇ ಸಮರಸನಾಗುವಿ."

ಆ ಸಾಮರಸ್ಯದ ವರ್ಣನೆ–

"ಯಥಾ ನದ್ಯಾಸ್ಸ್ಯಂದ ಮಾನಾಸ್ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।
ತಥಾ ವಿದ್ವಾನ್ನಾಮರೂಪಾದಿಮುಕ್ತಃ ಪರಾತ್ಪರಂ ಪಡಮುಪೈತಿ ದಿವ್ಯಮ್॥"

ವಿವಿಧ ಗತಿಯಿಂದ ಹರಿಯುವ ನದಿಗಳು ತಮ್ಮ ನಾಮ ರೂಪಗಳ ತೊರೆದು ಸಮುದ್ರದಲ್ಲಿ ಅಸ್ತವಾಗುವವೋ ಹಾಗೆ, ದೇವ–ವಿಜ್ಞಾನಿಗಳು ತಮ್ಮನಾಮ ರೂಪಗಳ ಬಿಟ್ಟು ದಿವ್ಯ ದೇವನಲ್ಲಿ ಒಂದಾಗುತ್ತಾರೆ.

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಒಂಭತ್ತನೆಯ ಬಿಂದುವು.

* † *

# ಹತ್ತನೆಯ ಅಧ್ಯಾಯ

## ವಿಭೂತಿಯೋಗ

### ಶ್ರೀ ಭಗವಾನುವಾಚ

ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।
ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥೧॥

ಭಾವ:- ಮಹಾಬಾಹುವೆ, ಪ್ರೀತಿಯುಳ್ಳ ನಿನಗೆ ಹಿತೇಚ್ಛೆಯಿಂದ ನಾನು ಯಾವುದನ್ನು ಹೇಳುವೆನೋ (ಅಂಥ) ನನ್ನ ಪರಮ ವಚನವನ್ನು ಪುನಃ ಕೇಳು.

ವಿವರಣೆ:–ಜಡ ಅಜಡ; ಚರ ಅಚರ ತತ್ತ್ವಗಳ ಸುಂದರ ಸಮನ್ವಯವೇ ವಿಶ್ವ. ಭಿನ್ನ ಬಿನ್ನ ವಸ್ತು, ಪ್ರಾಣಿ, ಪಕ್ಷಿ, ಧರ್ಮ, ಆಚಾರ ಮುಂತಾದವುಗಳಿಂದ ತುಂಬಿ ಹೋದ ವಿಶ್ವವು ನಯನಾಕರ್ಷಕವಾಗಿದೆ. ಇಂಥ ವಿಶ್ವದ ಆಧಾರವು ದೇವ ಹಾಗು ದೇವಾತ್ಮಶಕ್ತಿಯ ಸಮುಚ್ಚಯ. ಶಕ್ತಿಯು ಎಲ್ಲವನ್ನು ರಚಿಸಿದೆ. ದೇವನು ಆ ರಚಿತ ಪದಾರ್ಥಗಳ ಆತ್ಮನಾಗಿ ವಾಸಿಸಿದ್ದಾನೆ. ದೇವಾತ್ಮಶಕ್ತಿಯ ಹಾಗು ದೇವನ ದರ್ಶನ ಪಡೆದವನೇ ದೃಷ್ಟಾರ! ದಾರ್ಶನಿಕ! ಅವನಿಗೆ ವಿಶ್ವವು ದೇವನ ಲೀಲೆಯಾಗಿ ಕಾಣುತ್ತದೆ. ಎಲ್ಲ ವಸ್ತುಗಳಲ್ಲಿ ಅವನು ಪರಮ ಪ್ರಭುವನ್ನೇ ನೋಡುತ್ತಾನೆ. ಸರ್ವಾತ್ಮಭಾವಿಯಾದ ಆ ಸಂತನಿಗೆ ಮಾನವರ ನುಡಿಗಳೆಲ್ಲ ಮಂತ್ರಗಳು; ಅವರ ಸಂಗ ದೇವಸಾನಿಧ್ಯ; ಜೀವ ಮಾತ್ರರ ಸೇವೆಯೇ ಆರಾಧನೆ! ಜಡ ವಸ್ತುಗಳು ದೇವನ ವಾಸ್ತವ್ಯ ನಿಲಯಗಳು! ಪಶು ಪಕ್ಷಿ ಕ್ರಿಮಿ ಕೀಟಗಳೆಲ್ಲ ದೇವ ಮೂರ್ತಿಗಳು! ಇದೇ ಅನುಭವದ ಕೊನೆಯ ಹಂತದಲ್ಲಿ ತೋರಿಬರುವ ದರ್ಶನ! ಈ ದರ್ಶನದ ಹೃದಯಂಗಮ ವರ್ಣನೆಯು ಈ ಅಧ್ಯಾಯದ ತುಂಬ ವಿಸ್ತರಿಸಿದೆ.

ಭಗವಂತ:–" ಅರ್ಜುನ, ನೀನು ಬಾಹುಬಲಿ, ವೀರಾಗ್ರೇಸರ. ನಿನ್ನಲ್ಲಿ ನನ್ನ ಬಗೆಗೆ ಅಪಾರ ಪ್ರೇಮವಿದೆ. ಇಂಥ ಕೋಲಾಹಲದಿಂದ ತುಂಬಿ ಹೋದ ರಣರಂಗದಲ್ಲೂ ಇಷ್ಟು ಚಿತ್ತವಿಟ್ಟು ನನ್ನ ಮಾತನ್ನು ಆಲಿಸುತ್ತಿರುವೆಯಲ್ಲ, ಇದೇ ನಿನ್ನ ಅತುಲ ಪ್ರೀತಿಯ ದ್ಯೋತಕ. ನಿನ್ನ ಆಧ್ಯಾತ್ಮ–ವಿದ್ಯಾಭಿರುಚಿಯ ಕಂಡು ನನ್ನ ಹೃದಯವು ಕರುಣೆಯಿಂದ ಉಕ್ಕಿದೆ. ಇನ್ನಷ್ಟು ಹೇಳುವೆ. ಮತ್ತಷ್ಟು ಉಪದೇಶಿಸುವೆ. ಪರಮ ವಸ್ತುವಿನ ಬಗೆಗಿರುವ ನನ್ನ ಮಾತುಗಳೂ ಪರಮ ಎಂದು ತಿಳಿ. ಮನಸ್ಸು ಕೊಟ್ಟು ಆಲಿಸು. "

(೧) ಪರಮಂ ವಚಃ :– ಪರಮಾತ್ಮನು ನಿರತಿಶಯ ಸ್ವಯಂಜ್ಯೋತಿ, ಪವಿತ್ರತಮ ವಸ್ತು, ಅನಾದ್ಯನಂತ ಚೇತನ! ಸಾಧಕನು ಜಾಗ್ರ ಸ್ವಪ್ನ ಸುಷ್ತಿ ಹಾಗು ತುರಿಯ ಅವಸ್ಥೆಗಳನ್ನು ದಾಂಟಿ ಆ ಪರತತ್ತ್ವದಲ್ಲಿ ಸಮರಸನಾಗು ತ್ತಾನೆ. ಆಗ ಅಹಂ ಭಾವವಿಲ್ಲ. ಜೀವ ಕಲ್ಪನೆಯಿಲ್ಲ. ಎಲ್ಲವೂ ಅಡಗಿದೆ. ಅವಿಕೃತ ದೇವನ ಸಚ್ಚಿದಾನಂದ ಲಕ್ಷಣಗಳು ಮಾತ್ರ ಅವನ ವಿಮಲಾಂತರಂಗದಲ್ಲಿ ಜಾಜ್ವಲ್ಯಮಾನವಾಗಿ ಮಿನುಗುತ್ತಿವೆ. ಅವುಗಳ ಅನುಭೂತಿಗೆ 'ಪರಾವಾಣಿ' ಎಂದು ನಾಮ. ಈ ಅವಸ್ಥೆಯಲ್ಲಿ ಆತ್ಮಲೀನನು ಅವಿಕಂಪಿತ ದಿವ್ಯ ಪ್ರಜ್ಞೆ ಹೊಂದಿದ್ದಾನೆ. ಇಲ್ಲಿ ಉಂಟಾಗುವ ಅನುಭವವು ಬಹು ಸೂಕ್ಷ್ಮವಾಗಿ , ಅಚಲ ಮನದಲ್ಲಿ ಸಂಸ್ಕಾರ ರೂಪದಿಂದ ರೇಖಿಸಲ್ಪಡುತ್ತದೆ. ಬಹುಕಾಲ ಸಮಾಧಿ ಯಲ್ಲಿ ಉಳಿದ ಯೋಗಿಯು ನಿಧಾನವಾಗಿ ಕೆಳಗಿಳಿಯುತ್ತಾನೆ; ತುರಿಯ ಭೂಮಿಗೆ ಬರುತ್ತಾನೆ. ತುರಿಯಾತೀತದಲ್ಲಿ ತಾನು ಅನುಭವಿಸಿದ ಅಮೃತೋ ಪಮ ಅನುಭೂತಿಯನ್ನೇ ಈ ತುರಿಯದಲ್ಲಿ 'ಸಂಸ್ಕಾರ'ರೂಪದಿಂದ ಪುನಃ ಅನು ಭವಿಸುತ್ತಾನೆ. ಈ ಸಂಸ್ಕಾರ ರೂಪದ ಅನುಭೂತಿಗೆ 'ಪಶ್ಯಂತಿ ವಾಣಿ ' ಎಂದು ನಾಮ. ಬಳಿಕ ಆ ಯೋಗಿಯು ನಿಧಾನವಾಗಿ ಸಂಸ್ಕಾರ ಭೂಮಿಯನ್ನು ತ್ಯಜಿಸಿ ಸ್ಮೃತಿ ಭೂಮಿಕೆಗೆ ಅವತರಿಸುತ್ತಾನೆ; ಸಂಸ್ಕಾರ ರೂಪದ ಅನುಭೂತಿಯನ್ನೇ ಇಲ್ಲಿ ಸ್ಮರಣರೂಪದಿಂದ ಅನುಭವಿಸುತ್ತಾನೆ. ಇಲ್ಲಿಯ ಸ್ಮರಣರೂಪ ಅನು ಭೂತಿಗೆ 'ಮಧ್ಯಮಾವಾಣಿ' ಎಂದು ನಾಮ. ಕೊನೆಯದಾಗಿ ಈ ಸ್ಮರಣ ದೊಂದಿಗೆ ವ್ಯುತ್ಥಾನ ಪ್ರಜ್ಞೆ ಪಡೆಯುತ್ತಾನೆ; ಸ್ಮರಣ ರೂಪದ ದಿವ್ಯಾನುಭ ವಕ್ಕೆ ಶಬ್ದರೂಪವೀಯುತ್ತಾನೆ; ಈ ದಿವ್ಯಶಬ್ದ ಪುಂಜವೇ 'ವೈಖರೀ ವಾಣಿ' ಈ ಮಂತ್ರಮಯ ವಾಣಿಯಲ್ಲಿ ಆ ಪರಾತ್ಪರ ದೇವನ ಅಚಿಂತ್ಯ ಸ್ವರೂಪವು ಪ್ರತಿ ಬಿಂಬಿಸಿದುದರಿಂದ ಇದಕ್ಕೆ 'ಪರಮಂ ವಚಃ' ಎಂದು ಅಭಿಧಾನ.

ಈ ಪರಮ ವಚನದಲ್ಲಿ ಅಸಾಮಾನ್ಯ ಸಾಮರ್ಥ್ಯ ಅಡಗಿದೆ. ಪರಮ ಗುರುವಿನ ಮುಖದಿಂದ ಹೊರಬಂದು ಇದು ಕಿವಿಯ ಮೂಲಕ ಶಿಷ್ಯನ ನಿರ್ಮಲ ಮನಸ್ಸನ್ನು ಪ್ರವೇಶಿಸಿ ದೃಢ-ಸ್ಮೃತಿರೂಪ ತಾಳುತ್ತದೆ. ಈ ಸ್ಮೃತಿಯು

ಕರಿಗೊಂಡು ಸಂಸ್ಕಾರವಾಗುತ್ತದೆ. ಈ ಸಂಸ್ಕಾರವು ಒಲಗೊಂಡ ನಂತರ ಅದು ಶಿಷ್ಯನ ಜೀವ ಪ್ರಜ್ಞೆಯನ್ನು ಊರ್ಧ್ವಮುಖಿಗೊಳಿಸುವದು; ಜಾಗ್ರ ಸ್ವಪ್ನ ಸುಷ್ತಿ ಮಂಡಲಗಳ ದಾಟಿಸಿ ತುರಿಯವನ್ನು ಮೀರಿಸಿ ಅದರಾಚೆ ವ್ಯಾಪಿಸಿದ ಅಮೃತಮಯ ಮಹಾಜ್ಞಾನಸಾಗರದಲ್ಲಿ ಒಂದುಗೂಡಿಸುವದು. ಅಲ್ಲಿ ಜೀವನು ಶಿವಾಭಿನ್ನ; ಸಂಸ್ಕಾರವು ಜೀವ-ಶಿವಾದ್ವೈತರೂಪ; ಅದುವೇ ಪರಾವಾಣಿ. ಆಗ ಕೇಳುವ ಶಿಷ್ಯನು ಮೌನ, ಹೇಳುವ ಗುರುವು ಶಾಂತ! ಇಂಥ ಅನುಪಮ ಮಹಾಮೌನ ಅವಸ್ಥೆಯನ್ನು ಕರುಣಿಸುವದರಿಂದ ಗುರುವಚನವು ಪರಮವಚನ!

(೨) ಭೂಯಃ ಪ್ರವಕ್ಷ್ಯಾಮಿ:- ಭಗವಂತನು ವೇದ ವೇದಾಂಗಗಳಲ್ಲಿ ಪಾರಂಗತನಾದ ಪಂಡಿತನಲ್ಲ; ಅವನು ಸದೈವ ಜಾಗ್ರುತಪ್ರಜ್ಞ! ಪ್ರತ್ಯಗಾತ್ಮಾಭಿನ್ನ ಪರಬ್ರಹ್ಮ ಪ್ರಭೆಯನ್ನೇ, ಮೂರ್ತಿಮಂತಗೊಳಿಸಿ ಧರೆಗಿಳಿದು ಬಂದ ಅಪ್ರತಿಮ ಗುರು! ಅವನ ಮಾತೆಲ್ಲ ಪರಮ ವಚನ ! ಪವಿತ್ರನುಡಿ. ಕೂಸು ಮಲಗಿದ್ದರೂ ತಾಯಿ ತಾನಾಗಿಯೇ ಅದರ ಹತ್ತಿರ ಹೋಗಿ ಹಾಲುಣಿಸುವಂತೆ, ವಿಶ್ವಜನನಿಯಾದ ಭಗವಂತನು ಜೀವಿಗಳೆಲ್ಲ ಆತ್ಮನನ್ನು ಮರೆತು ಅಜ್ಞಾನಾಂಧಕಾರದಲ್ಲಿ ಮಲಗಿದ್ದರೂ ಅವರ ಬಳಿಸಾರಿ ಅವರ ಕರ್ಣಗಳಲ್ಲಿ ಯಥೇಚ್ಛವಾಗಿ ಪರಮ-ವಚನ-ದುಗ್ಧವನ್ನು ಹನಿಯುತ್ತಾನೆ. ಹಿಂದೆ ಎಂಟು ಅಧ್ಯಾಯಗಳ ತುಂಬ ಅವ್ಯಾಹತವಾಗಿ ಆತ್ಮೋಪದೇಶ ಮಾಡಿದ್ದರೂ ಮತ್ತೆ "ಉಪದೇಶಾಮೃತಧಾರೆಯು ಎರೆವೆ ಗ್ರಹಿಸು; ಆಕಂಠ ಪೂರ್ತಿಯಾಗಿ ಈಗ ಕುಡಿ " ಎನ್ನುತ್ತಾನೆ ಭಗವಂತ,

(೩) ಭಗವಂತನು ಹೀಗೆ ಪುನಃ ಪುನಃ ಹೇಳುವ ಉದ್ದೇಶವೇನು? 'ಹಿತಕಾಮ್ಯಯಾ' ಕೇಳುವವ ವಿಮುಕ್ತನಾಗಬೇಕೆಂಬ ಏಕೈಕ ಇಚ್ಛೆ ಅವನದು. ಹೇಳುವ ದೇವನಲ್ಲಿ ಇರುವಷ್ಟೇ ಆತುರ ಕಳಕಳಿ ಕೇಳುಗನಾದ ಅರ್ಜುನನಲ್ಲಿಯೂ ಇದೆ. ಅವನು ಭಗವಂತನನ್ನು ಅತ್ಯಂತ ಹಾರ್ದಿಕವಾಗಿ ಪ್ರೀತಿಸುತ್ತಾನೆ. ಎಂತಲೇ ಶ್ರೀಕೃಷ್ಣನಿಗೆ ಅದೆಷ್ಟು ಹೇಳಿದರೂ ತೃಪ್ತಿಯಿಲ್ಲ.

ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।
ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥೨॥

ಭಾವ:- ದೇವತಾಗಣಗಳು (ಸುರಗಣಾಃ), ಮಹರ್ಷಿಗಳು ನನ್ನ ಉತ್ಪತ್ತಿಯನ್ನು (ಪ್ರಭವಂ= ಪ್ರಾದುರ್ಭಾವವನ್ನು) ಅರಿಯರು. ಏಕೆಂದರೆ ನಾನು ದೇವತೆಗಳಿಗೆ ಮತ್ತು ಮಹರ್ಷಿಗಳಿಗೆ ಸರ್ವ ಪ್ರಕಾರದಿಂದಲೂ ಆದಿ.

ವಿವರಣೆ:- ಭಗವಂತ:- "ನಾನು ನಿಸ್ಸೀಮ ನಿಜ, ನಿರ್ಮಲ ಜ್ಞಾನ ಶರಧಿ". ನನ್ನಲ್ಲಿ ಒಂದು ಅಚಿಂತ್ಯ ಶಕ್ತಿಯಿದೆ. ಅದರ ಮೂಲಕ ಜಡ, ಅಜಡ, ಜಡಾಜಡ ವಿಶ್ವದ ರೂಪದಿಂದ ಆವಿರ್ಭವಿಸುತ್ತೇನೆ. ಆದುದರಿಂದ ವಿಶ್ವದಲ್ಲಿ

ಇರುವದೆಲ್ಲ ನನ್ನ ವಿಭೂತಿ! ಬ್ರಹ್ಮಾದಿ ದೇವತೆಗಳು ಹಾಗು ಭೃಗ್ವಾದಿ ಮಹರ್ಷಿಗಳು ನನ್ನಿಂದ ಸೃಷ್ಟಿಕಾಲ–ಪ್ರವಾಹದಲ್ಲಿ ತೇಲಿ ಬಂದವರು. ನಾನು ಬೃಹದ್ ಕಾರಣ; ಅವರು ಯತ್ಕಿಂಚಿತ್ ಕಾರ್ಯ. ಕಾರ್ಯವು ಎಂದಿಗೂ ಪೂರ್ತಿಯಾಗಿ ಕಾರಣವನ್ನು ಗ್ರಹಿಸದು; ಅಲ್ಲವೆ? ಹಾಗೆಂದೇ ಆ ದೇವತೆಗಳಾಗಲಿ ಆ ಋಷಿಗಳಾಗಲಿ ಎಷ್ಟೇ ಯತ್ನಿಸಿದರು ನನ್ನ ಅನಂತ ಸ್ವರೂಪವನ್ನು ತಿಳಿಯರು; ನನ್ನ ವಿಭೂತಿ–ವಿಸ್ತಾರವನ್ನು ಅರಿಯರು."

ಸಂಬಂಧ:– ಯಾರು ದೇವನನ್ನು ಅರಿಯಲು ಶ್ರಮಿಸುತ್ತಾರೆಯೋ ಅವರಿಗೆ ದೊರೆಯುವ ಫಲ ಮಾತ್ರ ಅಮೃತ.

ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।
ಅಸಂಮೂಢಃ ಸ ಮರ್ತ್ಯೇಷು ಸರ್ವ ಪಾಪೈಃ ಪ್ರಮುಚ್ಯತೇ ॥೩॥

ಭಾವ:– ಯಾವನು ನನ್ನನ್ನು ಜನ್ಮರಹಿತನೆಂದು (ಅಜಂ), ಆದಿ ಇಲ್ಲದವನೆಂದು (ಅನಾದಿಂ) ಲೋಕ ಮಹೇಶ್ವರನೆಂದು ತಿಳಿಯುತ್ತಾನೆಯೋ ಅವನು ಮನುಷ್ಯರಲ್ಲಿ ಮೋಹವಿಲ್ಲದವನಾಗಿ (ಅಸಂಮೂಢಃ) ಸರ್ವಪಾಪಗಳಿಂದ ಮುಕ್ತನಾಗುತ್ತಾನೆ.

ವಿವರಣೆ:– ಭಗವಂತ:- "ಅರ್ಜುನ, ನಾನು ಕಾಲಾತೀತ ಅಖಂಡ ಸತ್ತಾಸ್ವರೂಪನಾದುದರಿಂದ ಅಜ; ನಾನು ಸ್ವಯಂಭುವಾದುದರಿಂದ ಅನಾದಿ; ಸಕಲ ಲೋಕಗಳನ್ನು ಹುಟ್ಟಿಸಿದವ. ಕಾಪಾಡುವವ ಹಾಗು ಅಡಗಿಸುವವ ನಾನಾದುದರಿಂದ ನಾನು ಲೋಕಮಹೇಶ್ವರ. ನನ್ನನ್ನು ಈ ರೀತಿ ಯಾವ ಪುಣ್ಯ ಪುರುಷನಾದ ವಿವೇಕಿಯು ಅರಿಯುತ್ತಾನೆಯೋ ಅವನು ಮನುಷ್ಯ ಕುಲದೊಳಗಿದ್ದರೂ ನಿರ್ಮೋಹಿ, ನಿರಂಜನ ಹಾಗು ಜ್ಞಾತಾಜ್ಞಾತ ಸರ್ವ ದುರಿತಗಳಿಂದ ವಿಮುಕ್ತ."

ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।
ಸುಖಂ ದುಃಖ ಭವೋಽಭಾವೋ ಭಯಂಚಾಭಯಮೇವಚ ॥೪॥
ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥೫॥

ಭಾವ:- ಬುದ್ಧಿ ಜ್ಞಾನ ನಿರ್ಮೋಹ ಕ್ಷಮಾ ಸತ್ಯ ದಮ ಶಮ ಸುಖ ದುಃಖ ಉತ್ಪತ್ತಿ ವಿನಾಶ ಭಯ ಅಭಯ ಅಹಿಂಸೆ ಸಮತೆ ಸಂತುಷ್ಟಿ ತಪ ದಾನ ಯಶ ಅಪಯಶ ಈ ನಾನಾ ವಿಧ ಭಾವನೆಗಳು ಪ್ರಾಣಿಗಳಿಗೆ ನನ್ನಿಂದಲೇ ಉಂಟಾಗುತ್ತವೆ.

ವಿವರಣೆ:– ಬುದ್ಧಿ– ವಿಶ್ವದಲ್ಲಿರುವ ಸ್ಥೂಲ ಸೂಕ್ಷ್ಮ ತತ್ತ್ವಗಳನ್ನೆಲ್ಲ ಯಥಾರ್ಥ ರೀತಿಯಲ್ಲಿ ತಿಳಿದುಕೊಳ್ಳುವ ಅಂತಃಕರಣದ ಸಾಮರ್ಥ್ಯ. ಜ್ಞಾನ– ಅನಾತ್ಮವನ್ನು ಬೇರಿಟ್ಟು ಆತ್ಮನ ಸ್ವರೂಪ ನಿರ್ಣಯ ಮಾಡಿಕೊಳ್ಳುವದು. ಅಸಮ್ಮೋಹ– ಚಿಂತೆ ವ್ಯಾಕುಲತೆಗಳಿಲ್ಲದ ನಿರ್ಮಲ ಅಂತಃಕರಣ. ಕ್ಷಮೆ– ಜನರ ಸ್ತುತಿ ನಿಂದೆಗಳನ್ನು ಮರೆತು ಬಿಡುವದು. ಸತ್ಯ– ನೋಡಿದ

ಕೇಳಿದ ಅನುಭವಿಸಿದ ಸಂಗತಿಯನ್ನು ಪ್ರಾಮಾಣಿಕವಾಗಿ ಹೇಳುವದು. ದಮ– ಯೌವನದಲ್ಲಿ ಬಾಹ್ಯೇಂದ್ರಿಯಗಳನ್ನು ನಿಗ್ರಹಿಸುವದು. ಶಮ– ಮನಸ್ಸು ವಿಕಾರ ಹೊಂದದಂತೆ ನೋಡಿಕೊಳ್ಳುವದು. ಸುಖ ದುಃಖ– ಧರ್ಮ ನಿಮಿತ್ತ ವಾಗಿರುವ ಅನುಕೂಲ ಸಂವೇದನೆಯು ಸುಖ. ಅಧರ್ಮ ನಿಮಿತ್ತವಾಗಿರುವ ಪ್ರತಿಕೂಲ ಸಂವೇದನೆಯು ದುಃಖ. ಭವ ಅಭಾವ– ಉತ್ಪತ್ತಿ ಮತು ವಿನಾಶ. ಭಯ ಅಭಯ– ಅಂಜಿಕೆ ಹಾಗು ಧೈರ್ಯ. ಅಹಿಂಸೆ– ಪರಪೀಡೆ ಮಾಡದಿರು ವದು. ಸಮತೆ– ಮಿತ್ರ ಮತ್ತು ವೈರಿಗಳಲ್ಲಿ ಸಮಭಾವಿಯಾಗಿರುವದು. ತುಷ್ಟಿ– ಪ್ರಾರಬ್ಧಾನುಸಾರ ದೊರೆತುದರಲ್ಲಿ ಸಂತಸ ಪಡುವದು. ತಪ– ದೇವನಿಗಾಗಿ ದೇಹ, ವಾಣಿ, ಮನಸ್ಸುಗಳನ್ನು ದುಡಿಸುವದು. ದಾನ– ನ್ಯಾಯದಿಂದ ಗಳಿಸಿದ ವಸ್ತುಗಳನ್ನು ಸತ್ಪಾತ್ರದಲ್ಲಿ ನೀಡುವದು. ಯಶ– ಧರ್ಮ ನಿಮಿತ್ತದಿಂದುಂಟಾ ಗುವ ಕೀರ್ತಿ. ಅಪಯಶ– ಅಧರ್ಮ ನಿಮಿತ್ತದಿಂದುಂಟಾಗುವ ಅಪಕೀರ್ತಿ.

ಭಗವಂತನ ಲೀಲಾವಿಲಾಸಮಯವಾದ ಪ್ರಾಣಿ–ಪ್ರಪಂಚದಲ್ಲಿ ಕಾಣ ಬರುವ ಈ ಸಕಲ ಭಾವನೆಗಳು ಅವನಿಂದಲೇ ಸೃಷ್ಟವಾಗಿವೆ. ಈ ಭಾವಗಳ ಮೋಹಕ್ಕೆ ಸಿಲುಕದೆ ಅವನತ್ತ ಹೊರಳಿದವನಿಗೆ ಭಯವಿಲ್ಲ.

ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।
ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥೬

**ಭಾವಃ**–ಸಪ್ತ ಮಹರ್ಷಿಗಳು, ಅವರಿಗೂ ಪೂರ್ವದವರಾದ ನಾಲ್ವರು ಋಷಿಗಳು ಹಾಗು ಹದಿನಾಲ್ಕು ಜನ ಮುನಿಗಳು ನನ್ನ ಭಾವಉಳ್ಳರಾಗಿ (ಮದ್ಭಾವಾಃ), ನನ್ನ ಸಂಕಲ್ಪ ದಿಂದಲೇ (ಮಾನಸಾಃ) ಜನಿಸಿದರು. ಲೋಕದಲ್ಲಿರುವ (ಲೋಕೇ) ಈ ಪ್ರಜೆಗಳು ಅವರಿಂದ ಹುಟ್ಟಿದರು.

ಪರಮಾತ್ಮನು ಅನಾದ್ಯನಂತ. ಏನೂ ಏನೂ ಇಲ್ಲದಾಗ ಪರಿಪೂರ್ಣ ನೆಲೆಸಿದ್ದ ಅಮೃತ ಸತ್ಯ! ಅವನ ಪ್ರಪ್ರಥಮ ಸಂಕಲ್ಪವೇ ಹಿರಣ್ಯಗರ್ಭ (ಮಹ ತ್ತತ್ತ್ವವಚ್ಛಿನ್ನ ಚೈತನ್ಯ). ಆ ಹಿರಣ್ಯಗರ್ಭನಿಂದ ಉದಿಸಿಬಂದ ಮಹಾತ್ಮರು ಇಪ್ಪತ್ತೈದು ಜನ. ಅವರಿಂದ ಸಕಲ ಪ್ರಜೋತ್ಪತ್ತಿ, ಅದರ ವಿವರ ಹೀಗಿದೆ:

(೧) **ನಾಲ್ಕುಜನ ಮಹರ್ಷಿಗಳು**:– ಸನಕ, ಸನತ್ಕುಮಾರ, ಸನತ್ಸುಜಾತ ಹಾಗು ಸನಂದನ ಈ ನಾಲ್ವರು ಹಿರಣ್ಯಗರ್ಭನ ಪ್ರಥಮ ಪುತ್ರರು. ಇವರು ಸದಾ ಕೌಮಾರಾವಸ್ಥೆಯಲ್ಲಿರುತ್ತಾರೆ. ಮಹಾನ್ ತಪಸ್ವಿಗಳಾದ ಇವರು ಆತ್ಮ ಜ್ಞಾನ ಸಂಪನ್ನರು.

(೨) **ಏಳು ಜನ ಋಷಿಗಳು**:– ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ ಗೌತಮ, ಜಮದಗ್ನಿ ಮತ್ತು ವಶಿಷ್ಠ ಈ ಏಳು ಜನರು ಹಿರಣ್ಯಗರ್ಭನಿಂದ ಅನಂತರ ಹುಟ್ಟಿಬಂದವರು. (ಪ್ರತಿ ಕಲ್ಪದ ಸಪ್ತರ್ಷಿಗಳು ಬೇರೆ ಬೇರೆ).

(೩) **ಹದಿನಾಲ್ಕುಜನ ಮನುಗಳು**:– ಸ್ವಯಂಭೂ, ಸ್ವಾರೋಚಿಷ,

ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ ಮತ್ತು ಇಂದ್ರಸಾವರ್ಣಿ ಈ ಹದಿನಾಲ್ಕು ಜನರು ಹಿರಣ್ಯಗರ್ಭನಿಂದ ಕೊನೆಯಲ್ಲಿ ಜನಿಸಿದರು. ಇವರು ಬ್ರಹ್ಮನ ಹಗಲಿನಲ್ಲಿ ಲೋಕವನ್ನಾಳುವ ರಾಜರು. ಒಬ್ಬ ಮನುವಿನ ಅಧಿಕಾರಾವಧಿಗೆ ಮನ್ವಂತರವೆನ್ನುತ್ತಾರೆ. ಒಂದು ಮನ್ವಂತರದ ಅವಧಿ ೩೦ ಕೋಟಿ ೬೭ಲಕ್ಷ ವರುಷ.

(೪) ಪ್ರಜೆಗಳು:– ಮೇಲೆ ಹೇಳಿದ ಇಪ್ಪತ್ತೈದು ಜನ ಮಹಾನುಭಾವರಿಂದ ಈ ಲೋಕದ ಸಕಲ ಪ್ರಜೆಗಳು ಹುಟ್ಟಿದರು. ಅವರ ಆಶೀರ್ವಾದ ಹಾಗು ಪ್ರೇರಣೆಯಿಂದಲೇ ಬಾಳುತ್ತಿದ್ದಾರೆ.

(೫) ಸೂಚ್ಯಾರ್ಥ:– ಪರಮಾತ್ಮ ಚೇತನದ ಅಂತಃಕರಣಸ್ಥ ಪ್ರಥಮ ಪ್ರತಿಬಿಂಬನು ಜೀವ. ಅವನ ಸುಪ್ತ ಸಂಕಲ್ಪದಿಂದ ೨೫ ತತ್ತ್ವಗಳ ಉದಯ. ಆ ತತ್ತ್ವಗಳ ಸಂಘಟನೆಯಿಂದ ಅಸಂಖ್ಯ ದೇಹಗಳ ತೋರಿಕೆ. ತತ್ತ್ವಗಳೂ ದೇಹಗಳೂ ನಾಶವಂತ. ಆತ್ಮಸ್ವೋರ್ವನೇ ಅವಿನಾಶಿ. ಜೀವರಾದ ನಾವು ದೇಹ ಮತ್ತು ದೇಹಗತ ವಿವಿಧ ತತ್ತ್ವಗಳಲ್ಲಿ ಮೋಹಿತರಾಗದೆ ನಮ್ಮ ಸಾಕ್ಷಿಚೈತನ್ಯನಾದ ಪರಮಾತ್ಮನತ್ತ ದೃಷ್ಟಿಸಬೇಕು. ಅದರಿಂದ ಮುಕ್ತಿಪ್ರಾಪ್ತಿ.

ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।
ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥೭॥

ಭಾವ:- ಯಾವನು ನನ್ನ ಈ(ಏತಾಂ) ವಿಭೂತಿಯನ್ನು ಮತ್ತು ಯೋಗವನ್ನು (ವಿಶ್ವವಿಸ್ತಾರವಾದ ವೈಭವ ಮತ್ತು ಆ ವೈಭವದ ಸೃಜನಕರ್ತ್ರಿಯಾದ ಯೋಗಮಾಯಾಶಕ್ತಿಗಳನ್ನು) ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆಯೋ ಅವನು ಅಚಲವಾದ ಯೋಗದಿಂದ ಯುಕ್ತನಾಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

ವಿವರಣೆ:- ಭಗವಂತ:– "ಅರ್ಜುನ, ಯೋಗಮಾಯಾಶಕ್ತಿಯು ನನ್ನ ಐಶ್ವರ್ಯ. ಆಕೆಯಿಂದ ಹುಟ್ಟಿದ ಋಷಿ-ಮುನಿಗಳು, ಜೀವ-ಜಂತುಗಳು, ಗುಣಲಕ್ಷಣಗಳು ನನ್ನ ವಿಭೂತಿಯಾಗಿವೆ. ನನ್ನ ವಿಭೂತಿ ಮತ್ತು ಐಶ್ವರ್ಯಗಳೆರಡನ್ನು ಯಥಾರ್ಥವಾಗಿ ತಿಳಿದವನು ಸುಸ್ಥಿರವಾದ ಸತ್ಯಜ್ಞಾನದಿಂದ ಯುಕ್ತನಾಗುತ್ತಾನೆ. ಅವನು ಪುನೀತ, ಭವಮುಕ್ತ ಹಾಗು ಆತ್ಮಾರಾಮ! ಇದು ನಿಶ್ಚಿತವೆಂದು ಗ್ರಹಿಸು.

"ಇನ್ನು ನನ್ನನ್ನು ಅರಿಯದವನು ಮಾತ್ರ ಸತ್ತ್ವಾದಿ ಗುಣಾಭಿಮಾನಿಯಾಗಿ ಜನ್ಮ–ಮರಣಗಳಿಗೆ ಸಿಕ್ಕು ಬೀಳುತ್ತಾನೆ. ಜಾತಿ, ಮತ, ವರ್ಣ ಮುಂತಾದ ಭಾವ–ಸುಳಿಯಲ್ಲಿ ಬಿದ್ದು ಗಾಸಿಗೊಳ್ಳುತ್ತಾನೆ."

ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥೮॥

ಕೇಳಿದ ಅನುಭವಿಸಿದ ಸಂಗತಿಯನ್ನು ಪ್ರಾಮಾಣಿಕವಾಗಿ ಹೇಳುವದು. ದಮ– ಯೌವನದಲ್ಲಿ ಬಾಹ್ಯೇಂದ್ರಿಯಗಳನ್ನು ನಿಗ್ರಹಿಸುವದು. ಶಮ– ಮನಸ್ಸು ವಿಕಾರ ಹೊಂದದಂತೆ ನೋಡಿಕೊಳ್ಳುವದು. ಸುಖ ದುಃಖ– ಧರ್ಮ ನಿಮಿತ್ತ ವಾಗಿರುವ ಅನುಕೂಲ ಸಂವೇದನೆಯು ಸುಖ. ಅಧರ್ಮ ನಿಮಿತ್ತವಾಗಿರುವ ಪ್ರತಿಕೂಲ ಸಂವೇದನೆಯು ದುಃಖ. ಭವ ಅಭಾವ– ಉತ್ಪತ್ತಿ ಮತ್ತು ವಿನಾಶ. ಭಯ ಅಭಯ– ಅಂಜಿಕೆ ಹಾಗು ಧೈರ್ಯ. ಅಹಿಂಸೆ– ಪರಪೀಡೆ ಮಾಡದಿರುವದು. ಸಮತೆ– ಮಿತ್ರ ಮತ್ತು ವೈರಿಗಳಲ್ಲಿ ಸಮಭಾವಿಯಾಗಿರುವದು. ತುಷ್ಟಿ– ಪ್ರಾರಬ್ಧಾನುಸಾರ ದೊರೆತುದರಲ್ಲಿ ಸಂತಸ ಪಡುವದು. ತಪ– ದೇವನಿಗಾಗಿ ದೇಹ, ವಾಣಿ, ಮನಸ್ಸುಗಳನ್ನು ದುಡಿಸುವದು. ದಾನ– ನ್ಯಾಯದಿಂದ ಗಳಿಸಿದ ವಸ್ತುಗಳನ್ನು ಸತ್ಪಾತ್ರದಲ್ಲಿ ನೀಡುವದು. ಯಶ– ಧರ್ಮ ನಿಮಿತ್ಯದಿಂದುಂಟಾಗುವ ಕೀರ್ತಿ. ಅಪಯಶ– ಅಧರ್ಮ ನಿಮಿತ್ಯದಿಂದುಂಟಾಗುವ ಅಪಕೀರ್ತಿ.

ಭಗವಂತನ ಲೀಲಾವಿಲಾಸಮಯವಾದ ಪ್ರಾಣಿ–ಪ್ರಪಂಚದಲ್ಲಿ ಕಾಣಬರುವ ಈ ಸಕಲ ಭಾವನೆಗಳು ಅವನಿಂದಲೇ ಸೃಷ್ಟವಾಗಿವೆ. ಈ ಭಾವಗಳ ಮೋಹಕ್ಕೆ ಸಿಲುಕದೆ ಅವನತ್ತ ಹೊರಳಿದವನಿಗೆ ಭಯವಿಲ್ಲ.

ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನ್ವಸ್ತಥಾ ।
ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥೬

ಭಾವಃ–ಸಪ್ತ ಮಹರ್ಷಿಗಳು, ಅವರಿಗೂ ಪೂರ್ವದವರಾದ ನಾಲ್ವರು ಋಷಿಗಳು ಹಾಗು ಹದಿನಾಲ್ಕು ಜನ ಮುನಿಗಳು ನನ್ನ ಭಾವಉಳ್ಳರಾಗಿ (ಮದ್ಭಾವಾಃ), ನನ್ನ ಸಂಕಲ್ಪದಿಂದಲೇ (ಮಾನಸಾಃ) ಜನಿಸಿದರು. ಲೋಕದಲ್ಲಿರುವ (ಲೋಕೇ) ಈ ಪ್ರಜೆಗಳು ಅವರಿಂದ ಹುಟ್ಟಿದರು.

ಪರಮಾತ್ಮನು ಅನಾದ್ಯನಂತ. ಏನೂ ಏನೂ ಇಲ್ಲದಾಗ ಪರಿಪೂರ್ಣ ನೆಲೆಸಿದ್ದ ಅಮೃತ ಸತ್ಯ! ಅವನ ಪ್ರಪ್ರಥಮ ಸಂಕಲ್ಪವೇ ಹಿರಣ್ಯಗರ್ಭ (ಮಹತ್ತತ್ತ್ವವಚ್ಛಿನ್ನ ಚೈತನ್ಯ). ಆ ಹಿರಣ್ಯಗರ್ಭನಿಂದ ಉದಿಸಿಬಂದ ಮಹಾತ್ಮರು ಇಪ್ಪತ್ತೈದು ಜನ. ಅವರಿಂದ ಸಕಲ ಪ್ರಜೋತ್ಪತ್ತಿ, ಅದರ ವಿವರ ಹೀಗಿದೆ:

(೧) ನಾಲ್ಕುಜನ ಮಹರ್ಷಿಗಳು:– ಸನಕ, ಸನತ್ಕುಮಾರ, ಸನತ್ಸುಜಾತ ಹಾಗು ಸನಂದನ ಈ ನಾಲ್ವರು ಹಿರಣ್ಯಗರ್ಭನ ಪ್ರಥಮ ಪುತ್ರರು. ಇವರು ಸದಾ ಕೌಮಾರಾವಸ್ಥೆಯಲ್ಲಿರುತ್ತಾರೆ. ಮಹಾನ್ ತಪಸ್ವಿಗಳಾದ ಇವರು ಆತ್ಮಜ್ಞಾನ ಸಂಪನ್ನರು.

(೨) ಏಳು ಜನ ಋಷಿಗಳು:– ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ ಗೌತಮ, ಜಮದಗ್ನಿ ಮತ್ತು ವಶಿಷ್ಠ ಈ ಏಳು ಜನರು ಹಿರಣ್ಯಗರ್ಭನಿಂದ ಅನಂತರ ಹುಟ್ಟಿಬಂದವರು. (ಪ್ರತಿ ಕಲ್ಪದ ಸಪ್ತರ್ಷಿಗಳು ಬೇರೆ ಬೇರೆ).

(೩) ಹದಿನಾಲ್ಕುಜನ ಮನುಗಳು:– ಸ್ವಾಯಂಭೂ, ಸ್ವಾರೋಚಿಷ,

ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ ಮತ್ತು ಇಂದ್ರಸಾವರ್ಣಿ ಈ ಹದಿನಾಲ್ಕು ಜನರು ಹಿರಣ್ಯಗರ್ಭನಿಂದ ಕೊನೆಯಲ್ಲಿ ಜನಿಸಿದರು. ಇವರು ಬ್ರಹ್ಮನ ಹಗಲಿನಲ್ಲಿ ಲೋಕವನ್ನಾಳುವ ರಾಜರು. ಒಬ್ಬ ಮನುವಿನ ಅಧಿಕಾರಾವಧಿಗೆ ಮನ್ವಂತರವೆನ್ನುತ್ತಾರೆ. ಒಂದು ಮನ್ವಂತರದ ಅವಧಿ ೩೦ ಕೋಟಿ ೬೦ಲಕ್ಷ ವರುಷ.

(೪) ಪ್ರಜೆಗಳು:– ಮೇಲೆ ಹೇಳಿದ ಇಪ್ಪತ್ತೈದು ಜನ ಮಹಾನುಭಾವರಿಂದ ಈ ಲೋಕದ ಸಕಲ ಪ್ರಜೆಗಳು ಹುಟ್ಟಿದರು. ಅವರ ಆಶೀರ್ವಾದ ಹಾಗು ಪ್ರೇರಣೆಯಿಂದಲೇ ಬಾಳುತ್ತಿದ್ದಾರೆ.

(೫) ಸೂಚ್ಯಾರ್ಥ:– ಪರಮಾತ್ಮ ಚೇತನದ ಅಂತಃಕರಣಸ್ಥ ಪ್ರಥಮ ಪ್ರತಿಬಿಂಬನು ಜೀವ. ಅವನ ಸುಪ್ತ ಸಂಕಲ್ಪದಿಂದ ೨೫ ತತ್ತ್ವಗಳ ಉದಯ. ಆ ತತ್ತ್ವಗಳ ಸಂಘಟನೆಯಿಂದ ಅಸಂಖ್ಯ ದೇಹಗಳ ತೋರಿಕೆ. ತತ್ತ್ವಗಳೂ ದೇಹಗಳೂ ನಾಶವಂತ. ಆತ್ಮನೋರ್ವನೇ ಅವಿನಾಶಿ. ಜೀವರಾದ ನಾವು ದೇಹ ಮತ್ತು ದೇಹಗತ ವಿವಿಧ ತತ್ತ್ವಗಳಲ್ಲಿ ಮೋಹಿತರಾಗದೆ ನಮ್ಮ ಸಾಕ್ಷಿಚೈತನ್ಯನಾದ ಪರಮಾತ್ಮನತ್ತ ದೃಷ್ಟಿಸಬೇಕು. ಅದರಿಂದ ಮುಕ್ತಿಪ್ರಾಪ್ತಿ.

ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।
ಸೋऽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥೭॥

ಭಾವ:- ಯಾವನು ನನ್ನ ಈ(ಏತಾಂ) ವಿಭೂತಿಯನ್ನು ಮತ್ತು ಯೋಗವನ್ನು (ವಿಶ್ವ ವಿಸ್ತಾರವಾದ ವೈಭವ ಮತ್ತು ಆ ವೈಭವದ ಸೃಜನಕರ್ತ್ರಿಯಾದ ಯೋಗಮಾಯಾಶಕ್ತಿಗಳನ್ನು) ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆಯೋ ಅವನು ಅಚಲವಾದ ಯೋಗದಿಂದ ಯುಕ್ತನಾಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

ವಿವರಣೆ:- ಭಗವಂತ:– "ಅರ್ಜುನ, ಯೋಗಮಾಯಾಶಕ್ತಿಯು ನನ್ನ ಐಶ್ವರ್ಯ. ಆಕೆಯಿಂದ ಹುಟ್ಟಿದ ಋಷಿ-ಮುನಿಗಳು, ಜೀವ-ಜಂತುಗಳು, ಗುಣ ಲಕ್ಷಣಗಳು ನನ್ನ ವಿಭೂತಿಯಾಗಿವೆ. ನನ್ನ ವಿಭೂತಿ ಮತ್ತು ಐಶ್ವರ್ಯಗಳೆರಡನ್ನು ಯಥಾರ್ಥವಾಗಿ ತಿಳಿದವನು ಸುಸ್ಥಿರವಾದ ಸತ್ಯಜ್ಞಾನದಿಂದ ಯುಕ್ತನಾಗುತ್ತಾನೆ. ಅವನು ಪುನೀತ, ಭವಮುಕ್ತ ಹಾಗು ಆತ್ಮಾರಾಮ! ಇದು ನಿಶ್ಚಿತವೆಂದು ಗ್ರಹಿಸು.

"ಇನ್ನು ನನ್ನನ್ನು ಅರಿಯದವನು ಮಾತ್ರ ಸತ್ವಾದಿ ಗುಣಾಭಿಮಾನಿಯಾಗಿ ಜನ್ಮ–ಮರಣಗಳಿಗೆ ಸಿಕ್ಕು ಬೀಳುತ್ತಾನೆ. ಜಾತಿ, ಮತ, ವರ್ಣ ಮುಂತಾದ ಭಾವ–ಸುಳಿಯಲ್ಲಿ ಬಿದ್ದು ಗಾಸಿಗೊಳ್ಳುತ್ತಾನೆ."

ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥೮॥

ಭಾವ:– ನಾನು ಎಲ್ಲದರ ಉತ್ಪತ್ತಿಸ್ಥಾನ. ನನ್ನಿಂದ ಎಲ್ಲವೂ ನಡೆಯುತ್ತದೆ. (ಪ್ರವರ್ತತೇ). ಹೀಗೆ ತಿಳಿದುಕೊಂಡು ಜ್ಞಾನಿಗಳು ನನ್ನನ್ನು ಭಜಿಸುತ್ತಾರೆ.

ವಿವರಣ:– ಭಗವಂತ:– "ಪಾಂಡವ, ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳಿಗೆ ನಾನು ಸ್ಥಾನ. ಜಡ ಅಜಡ ವಸ್ತುಗಳು ಮತ್ತು ತತ್ತ್ವಗಳು ನನ್ನ ಆಧಾರದಲ್ಲಿ ಕಾರ್ಯ ಮಾಡುತ್ತವೆ. ಹೀಗೆ ಯಾವ ವಿಮಲ ಮನೋಭಾವಿಗಳು ನನ್ನನ್ನು ತಿಳಿಯುತ್ತಾರೆಯೋ ಅವರು ಜ್ಞಾನಿಗಳು; ಸಂಸಾರದ ಘೋರ ಅಂಧಕಾರದಿಂದ ಪಾರಾಗಿ ಆತ್ಮಜ್ಞಾನೋದಯದ ಪ್ರಶಾಂತ ಚಂದ್ರಿಕೆಯಲ್ಲಿ ವಿರಮಿಸುವ ಭಾಗ್ಯಶಾಲಿಗಳು.

ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ ।
ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥೯॥

ಭಾವ:– ನನ್ನಲ್ಲಿ ಮನಸ್ಸುಳ್ಳವರೂ (ಮಚ್ಚಿತ್ತಾಃ) ನನ್ನಲ್ಲಿ ಪ್ರಾಣವುಳ್ಳವರೂ (ಮದ್ಗತ ಪ್ರಾಣಾಃ– ನನಗಾಗಿ ಜೀವಿಸುವವರು) ನನ್ನನ್ನು ಪರಸ್ಪರವಾಗಿ ಬೋಧಿಸುತ್ತ (ಬೋಧಯಂತಃ) ಹಾಗು ಯಾವಾಗಲು ನನ್ನ ಬಗ್ಗೆ ಹೇಳುತ್ತ (ಕಥಯಂತಃ) ಸಂತೋಷ ಪಡುತ್ತಾರೆ ಮತ್ತು ಆನಂದಿಸುತ್ತಾರೆ.

ವಿವರಣೆ:– ಮಚ್ಚಿತ್ತಾಃ:– ಗಿಡದ ನೆಳಲಲ್ಲಿ ಕೂಸನ್ನು ಮಲಗಿಸಿ ಕೆಲಸ ಮಾಡುವ ತಾಯಿಯ ಚಿತ್ತು ಕೂಸಿನತ್ತಲೇ. ಹಾಗೇ ವ್ಯವಹಾರ ರಂಗದಲ್ಲಿ ಬಾಳುತ್ತಿರುವ ಜ್ಞಾನಿಗಳ ಚಿತ್ತು ಪರಮಾತ್ಮನತ್ತಲೇ. ಅವರಿಗೆ ಅನ್ಯ ವಸ್ತುಗಳಲ್ಲಿ ಆಸಕ್ತಿಯೇ ಇಲ್ಲ. ದೇಹ, ಗೃಹ, ಪತ್ನಿ, ಪುತ್ರ, ಧನಗಳನ್ನು ಕಂಡರೂ ಕಾಣದಂತಿದ್ದಾರೆ. ಇದು ಸರ್ವಾತ್ಮಕ ಸಮಾಧಿ.

ಮದ್ಗತ ಪ್ರಾಣಾಃ:– ಪ್ರಾಣವೆಂದರೆ ಇಂದ್ರಿಯ ಹಾಗು ಜೀವನ. ಜ್ಞಾನಿಗಳು ನನ್ನ ನಾಮವನ್ನೇ ಕೇಳುತ್ತಾರೆ, ನನ್ನ ರೂಪವನ್ನೇ ನೋಡುತ್ತಾರೆ, ನನ್ನ ಮೂರ್ತಿಯನ್ನೇ ಹಿಡಿಯುತ್ತಾರೆ. ಅವರ ಒಳಗೆ ನನ್ನ ಪ್ರಭೆ ಹರಡಿದೆ. ಅವರ ಸಮಗ್ರ ಬದುಕು ಕೇವಲ ನನಗಾಗಿ ಮೀಸಲು! ಇದು ಕ್ರಿಯಾತ್ಮಕ ಸಮಾಧಿ.

ಪರಸ್ಪರಂ ಬೋಧಯಂತಃ:- ತಬಲಾ ಪಿಟೀಲು ತಂಬೂರಿ ಹಾಗು ಗಾನಗಳಲ್ಲಿ ಸಮ-ಪರಿಣತರಾದ ಸಂಗೀತಜ್ಞರು ಒಂದುಗೂಡಿ ಸುಂದರ ಸ್ವರ ಸಮ್ಮೇಳನ ಸಾಧಿಸಿ, ಹಾಗೆ ಹೊರಟ ಮಂಜುಳ ನಿನಾದದಲ್ಲಿ ತಮ್ಮನ್ನೇ ತಾವು ಮರೆಯುತ್ತಾರೆ. ಅದೇರೀತಿ, ಆತ್ಮವಿದ್ಯಾವಿಶಾರದರು ಒಂದೆಡೆ ಕಲೆತು ತಾವು ತಿಳಿದುದನ್ನು ಪರಸ್ಪರರಲ್ಲಿ ವಿನಿಮಯಮಾಡುವಾಗ ಅನುಭವ–ರಸ–ಗಾನ ಹೊರಡುತ್ತದೆ. ಅದರಲ್ಲಿ ಅವರು ಮೈಮರೆಯುತ್ತಾರೆ. ಇದು ಸಂವಾದ ಸಮಾಧಿ. ಬಸವಣ್ಣನವರು ಈ ಸಮಾಧಿಯನ್ನು ಹೃದಯಂಗಮವಾಗಿ ವರ್ಣಿಸುತ್ತಾರೆ,

"ಅರುಹಿದನೆಂದಡೆ ಅರುಹಿಂಗಸಾಧ್ಯ. ನೆನೆದಿಹೆನೆಂದರೆ ನೆನಹಿಂಗಸಾಧ್ಯ. ಭಾವಿಸಿಹೆನೆಂದಡೆ ಭಾವಕ್ಕಸಾಧ್ಯ. ವಾಙ್ಮನಕ್ಕಗೋಚರವನರಿವಪರಿಯೆಂತಯ್ಯಾ ಗುರು ತೋರದನ್ನಕ್ಕ?

ಗುರುಶಿಷ್ಯರ ಮಧ್ಯದಲ್ಲಿ ಸ್ವಯಂಜ್ಯೋತಿಲಿಂಗ ಉದಯವಪ್ಪ್ಪುದೆಂಬ ಶ್ರುತಿ ಹುಸಿಯೆ? ಕೂಡಲ ಸಂಗಮದೇವಯ್ಯಾ ನಿಮ್ಮ ಮಹಾನುಭಾವರ ಮಂಥನದಿಂದ ಎನ್ನಲ್ಲಿ ನಿಜವ ನೆಲೆಗೊಳಿಸಾ ಪ್ರಭುವೆ."

ಪರಮಾತ್ಮನು ಮನ ಮಾತಿಂಗೆ ಅತೀತ, ಭಾವ ಬುದ್ಧಿಗಳಿಗೆ ಅಗಮ್ಯ. ಆದರೆ ಅದೇ ದೇವನು ಗುರು-ಶಿಷ್ಯ, ಅನುಭಾವಿ-ಅನುಭಾವಿ, ಸಂತ-ಶರಣರ ಮಧ್ಯೆ ಅನುಭಾವ ಮಂಥನ ನಡೆದಾಗ ಜ್ಯೋತಿರ್ಲಿಂಗವಾಗಿ ಉದ್ಭವಿಸುತ್ತಾನೆ. ಆ ಲಿಂಗ ಜ್ಯೋತಿಯ ದಿವ್ಯ ದರ್ಶನದಲ್ಲಿ ಒಂದಾಗಿ ನಿಲ್ಲುವದು ಸಂವಾದ ಸಮಾಧಿ.

**ಕಥಯಂತಃ:-** ದೇವನ ಅಚಿಂತ್ಯಾಸ್ತಿತ್ವದಲ್ಲಿ ಮಿಂದು ಉತ್ಥಾನ ಹೊಂದಿದ ಸದ್ಗುರುಗಳು ದೇವನ ಬಗೆಗೆಯೇ ಅವ್ಯಾಹತವಾಗಿ ವಿವರಿಸುತ್ತಾರೆ. ಅವರ ಅಪ್ರತಿಮ ವಚನ ಮಾಧುರ್ಯವನೀಂಟಿದವರು ದೇವೋನ್ಮಾದ ಅವಸ್ಥೆಯನ್ನು ಅನುಭವಿಸುತ್ತಾರೆ. ಇದು ಶ್ರವಣಾಖ್ಯ ಸಮಾಧಿ.

**ತುಷ್ಯಂತಿ ಚ ರಮಂತಿ ಚ:–** ಇಂತು, ಅವಿರತವಾಗಿ ದೇವನಲ್ಲಿಯೇ ಮನ ಪ್ರಾಣಗಳನ್ನರ್ಪಿಸಿ, ಅವನ ಕಥನ, ಚಿಂತನ, ಪ್ರಬೋಧನಗಳಲ್ಲಿ ರಮಿಸುವ ಜ್ಞಾನಿಗಳು ಆತ್ಮಾನಂದ ಸಾಗರದಲ್ಲಿ ತೇಲುತ್ತಾರೆ. ಅವರು ಪಡುವ ಸಂತೋಷಕ್ಕೆ ಸರಿ ಸಮವಾದ ಸಂತೋಷ ವಿಶ್ವದಲ್ಲಿಯೇ ಇಲ್ಲ.

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥೧೦॥**

**ಭಾವ :–** ಯಾವುದರಿಂದ ಅವರು (ನನ್ನಲ್ಲಿ ಮನಸ್ಸನ್ನು ನೆಲೆಗೊಳಿಸಿದವರು) ನನ್ನನ್ನು ಹೊಂದಬಲ್ಲರೋ (ಉಪಯಾಂತಿ) ಅಂಥ ಬುದ್ಧಿಯೋಗವನ್ನು (ಸಮ್ಯಗ್ದರ್ಶನರೂಪವಾದ ಆತ್ಮಜ್ಞಾನವನ್ನು) ನಿತ್ಯಯುಕ್ತರಾದ (ಸದಾ ನನ್ನನ್ನೇ ಚಿಂತಿಸುವ) ಪ್ರೀತಿಪೂರ್ವಕವಾಗಿ ನನ್ನನ್ನೇ ಭಜಿಸುವ ಅವರಿಗೆ ಕೊಡುತ್ತೇನೆ.

**ವಿವರಣೆ:–**"ನನ್ನ ಭಕ್ತರು ಸಂಸಾರದಲ್ಲಿ ಅನಾಸಕ್ತರು, ನನ್ನಲ್ಲಿ ನಿತ್ಯ ಆಸಕ್ತರು. ನಾನು ಅವರಿಗೆ ಜೀವದಷ್ಟು ಪ್ರೀಯ. ಅವರು ನನ್ನನ್ನೇ ಧ್ಯಾನಿಸುತ್ತಾರೆ, ನನ್ನನ್ನೇ ಭಜಿಸುತ್ತಾರೆ. ನಾನು ಅವರಿಗೆ ಬುದ್ಧಿಯೋಗವೆಂಬ ಸಮರ್ಥ ನೌಕೆಯನ್ನು ಈಯುವೆ. ಅದು ಅವರನ್ನು ಪ್ರಪಂಚ ಸಾಗರದಿಂದ ಪಾರುಮಾಡುವದು. ಅಷ್ಟೇ ಅಲ್ಲ, ಅದರ ಸಹಾಯದಿಂದ ಆ ಭಕ್ತರು ನನ್ನನ್ನೇ ಹೊಂದುವರು."

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥೧೧॥**

**ಭಾವ:–** ಅವರಿಗೆ (ನನ್ನ ಭಜಕರಿಗೆ) ಅನುಕಂಪ ತೋರಿಸಬೇಕೆಂದು ನಾನು ಅವರ ಬುದ್ಧಿಯಲ್ಲಿ ಸ್ಥಿತನಾಗಿ (ಆತ್ಮ ಭಾವಸ್ಥಃ), ಪ್ರಜ್ವಲಿಸುವ ಜ್ಞಾನದೀಪದಿಂದ (ಭಾಸ್ವತಾ ಜ್ಞಾನ ದೀಪೇನ) ಅಜ್ಞಾನಜನ್ಯ ತಮಸ್ಸನ್ನು ನಾಶಮಾಡುತ್ತೇನೆ.

**ವಿವರಣೆ:-** ಭಗವಂತ:– " ಪಾರ್ಥ, ನನಗಾಗಿಯೇ ಬದುಕಿದ ನನ್ನ ಭಕ್ತರ ಮನಸ್ಸು ಸ್ವಚ್ಛ, ಕಾಮಾದಿಗಳ ಉಪಟಳವಿಲ್ಲದ ನಿವಾಂತ ಸ್ಥಾನ.

ಅಲ್ಲಿ ಆಶೆಯ ತೆರೆ ಇಲ್ಲ, ಆಮಿಷದ ಗುರುಳಿ ಇಲ್ಲ. ಆದ್ದರಿಂದ ನಾನು ಅಲ್ಲಿ ವಾಸಿಸುತ್ತೇನೆ. ಹೇಗೆ? ಪ್ರತ್ಯಗಾತ್ಮರೂಪದಿಂದ! ಪ್ರತ್ಯಗಾತ್ಮನೊಂದು ಜ್ಞಾನ ದೀಪ. ಸದಾ ಪ್ರಕಾಶಿಸುವ ಬೆಳಗು. ಭಕ್ತರ ಹೃದಯದಲ್ಲಿ ಅಳಿದುಳಿದ ಅಜ್ಞಾನ ಜನ್ಯ ತಮಂಧಕಾರವನ್ನೆಲ್ಲ ಸಮಗ್ರವಾಗಿ ನನ್ನ ಜ್ಞಾನಪ್ರಭೆಯು ಬೀರಿ ವಿನಷ್ಟ ಗೊಳಿಸುತ್ತೇನೆ"

ಸಂಬಂಧ:- ಭಗವಂತನು ತನ್ನ ವಿಭೂತಿಯ ಬಗೆಗೆ ಸಂಕ್ಷೇಪವಾಗಿ ಉಪದೇಶಿಸಿದ. ಅದನ್ನು ಆಲಿಸಿದ ಅರ್ಜುನನಲ್ಲಿ ವಿಸ್ತಾರವಾಗಿ ಕೇಳಬೇಕೆಂಬ ಆಸಕ್ತಿ ಮೂಡಿತು. ಮುಂದಿನ ೭ ಮಂತ್ರಗಳಲ್ಲಿ ತನ್ನ ಬಯಕೆಯನ್ನು ವ್ಯಕ್ತ ಮಾಡುತ್ತಾನೆ. ಪ್ರಾಸಂಗಿಕವಾಗಿ ಭಗವಂತನನ್ನು ಹೃದಯತುಂಬಿ ಬಣ್ಣಿಸುತ್ತಾನೆ.

ಅರ್ಜುನ ಉವಾಚ –

ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್।
ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥೧೨॥
ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।
ಅಸಿತೋದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥೧೩॥

ಭಾವ:- ನೀನು ಪರಬ್ರಹ್ಮ, ಪರಂಧಾಮ, ಪರಮ ಪವಿತ್ರ. ಎಲ್ಲ ಋಷಿಗಳು, ದೇವರ್ಷಿಯಾದ ನಾರದನು, ಅಸಿತದೇವಲನು ಮತ್ತು ವ್ಯಾಸ ಮುಂತಾದವರು ನಿನ್ನನ್ನು ಶಾಶ್ವತ ಪುರುಷ, ದಿವ್ಯ ದೇವ, ಆದಿ ದೇವ, ಅಜ, ವಿಭು ಎಂದು ಹೇಳುತ್ತಾರೆ. ನೀನೂ ಹಾಗೆಯೇ ಹೇಳುತ್ತಿರುವಿ.

ವಿವರಣ:- ಅರ್ಜುನ:- "ಗೋವಿಂದ, ಇಲ್ಲಿಯವರೆಗೆ ಅವ್ಯಾಹತವಾಗಿ ಹರಿದು ಬಂದ ನಿನ್ನ ಮನೋಹರ ಉಪದೇಶ-ಸರಿತ್ತಿನಲ್ಲಿ ಮಿಂದು ಪುಲಕಿತನಾಗಿದ್ದೇನೆ. ನಿನ್ನ ಅಚ್ಯುತ ಸ್ವರೂಪಕ್ಕೆ ನಿರ್ಗುಣ ಸಗುಣವೆಂದು ಎರಡು ಮುಖಗಳಲ್ಲವೆ? ಅವೆರಡರ ಬಗ್ಗೆ ಕೂಲಂಕಷವಾಗಿ ನಿನ್ನ ಮುಖದಿಂದ ಕೇಳಬೇಕೆಂಬ ಆತುರ ನನ್ನಲ್ಲಿ ತಲೆದೋರಿದೆ. ಅದರಲ್ಲೂ ಸಗುಣ ಸ್ವರೂಪದ ಬಗ್ಗೆ ನನ್ನಲ್ಲಿ ಹೆಚ್ಚು ಅನುರಾಗ. ದಯವಿಟ್ಟು ನನ್ನಿಚ್ಛೆಯ ಪೂರೈಸು.

"ನೀನು ಪರಾತ್ ಪರನಾದ ಪರಬ್ರಹ್ಮ; ವಿಶ್ವದ ಪರಮ ಆಶ್ರಯ; ಪವಿತ್ರತಮ ಚೈತನ್ಯ. ನೀನು ನಿತ್ಯ, ಪ್ರಕೃತಿ ವಿಲಕ್ಷಣನಾದ ಪುರುಷ, ಜ್ಞಾನ ರವಿ(ದಿವ್ಯ), ಆಧಿ ಪ್ರಭು; ನಿನಗೆ ಜನ್ಮವಿಲ್ಲ, ಮರಣ ವಿಲ್ಲ. ನೀನಿಲ್ಲದ ಸ್ಥಾನವೇ ಇಲ್ಲವಾಗಿ ವಿಭು. ನೀನು ಸರ್ವ ಸಾಕ್ಷಿ! ಅವಿದ್ಯಾ ಕಾಮ ಕರ್ಮಗಳ ಸೋಂಕಿಲ್ಲದ ನಿರ್ಮಲಾತ್ಮ! ಸರ್ವಾಂತರ್ಯಾಮಿ. ಹೀಗೆ ಸಕಲ ಋಷಿ ಮಹರ್ಷಿಗಳು, ನಾರದ, ಅಸಿತದೇವಲ ವ್ಯಾಸ ಮುಂತಾದ ಮಹಾತ್ಮರು ಕೊಂಡಾಡುತ್ತಾರೆ. ನೀನಾದರು ಕೂಡ ಅವರ ಅಭಿಪ್ರಾಯವನ್ನೇ ಎತ್ತಿಹಿಡಿದೆ."

ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ।

ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥೧೪॥

ಭಾವ:– "ಪ್ರಭುವೆ, ನೀನು ಹೇಳುವದನ್ನೆಲ್ಲ ನಾನು ಸತ್ಯವೆಂದು ತಿಳಿಯುತ್ತೇನೆ. ಸ್ವರ್ಗೀಯ ಭೋಗಗಳಲ್ಲಿ ತಲ್ಲೀನರಾದ ದೇವತೆಗಳು ಮತ್ತು ಕ್ರೂರತೆಗೆ ಹೆಸರಾದ ದಾನವರು ನಿನ್ನ ಸ್ವರೂಪವನ್ನು(ವ್ಯಕ್ತಿತ್ವವನ್ನು) ತಿಳಿಯರು."

ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।
ಭೂತಭಾವನ ಭೂತೇಶ ದೇವ ದೇವ ಜಗತ್ಪತೇ ॥೧೫॥

ಭಾವ:– "ದೇವಾ, ನೀನು ಪುರುಷೋತ್ತಮ. ಸರ್ವ ಪ್ರಾಣಿಗಳ ರಕ್ಷಕ (ಭೂತ ಭಾವನ), ಸರ್ವ ಭೂತಗಳ ಅಂತರ್ಯಾಮಿ(ಭೂತೇಶ). ಜ್ಞಾನ ಪ್ರಕಾಶ ಘನ, ದೇವಾಧಿ ದೇವ, ಜಗದ ಪತಿ. ನೀನು ನೀನೇ (ತ್ವಂ ಸ್ವಯಮೇವ); ನೀನೇ ಸಾಧಕ, ಸಾಧನ ಹಾಗು ಸಾಧ್ಯ. ನಿನ್ನ ಬಿಟ್ಟು ಏನೂ ಇಲ್ಲವಾಗಿ ನೀನು ನಿನ್ನನ್ನು ನಿನ್ನಿಂದಲೇ ತಿಳಿದುಕೊಂಡಿರುವಿ."

ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।
ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥೧೬॥

ಭಾವ:– "ಯಾವ ವಿಭೂತಿಗಳಿಂದ ನೀನು ಜಗತ್ತನ್ನು ವ್ಯಾಪಿಸಿರುವೆಯೋ ಆ ನಿನ್ನ ದಿವ್ಯ ವಿಭೂತಿಗಳನ್ನು ಸಂಪೂರ್ಣವಾಗಿ ನೀನು ಹೇಳಲರ್ಹನು."

ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ ।
ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥೧೭॥

ಭಾವ:–"ಕೇಶವ, ನಿನ್ನನ್ನು ಸದಾ ಧ್ಯಾನಿಸಬೇಕು. ನಿನ್ನ ಪರಿಪೂರ್ಣ ಸ್ವರೂಪವನ್ನು ತಿಳಿದುಕೊಳ್ಳಬೇಕು ಎಂಬ ಆಶೆ ನನಗಿದೆ. ಹೇಳು, ನಾನು ಯಾವ ಯಾವ ಭಾವಗಳಲ್ಲಿ ನಿನ್ನ ಚಿಂತನೆ ಮಾಡಲಿ?"

ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ।
ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್॥೧೮॥

ಭಾವ:–"ಜನಾರ್ದನ, ನಿನ್ನ ಯೋಗ ಮತ್ತು ವಿಭೂತಿಗಳನ್ನು ವಿಸ್ತಾರವಾಗಿ ಹೇಳು. ಏಕೆಂದರೆ ನಿನ್ನ ವಚನ ಅಮೃತ. ಎಷ್ಟು ಆಲಿಸಿದರೂ ನನಗೆ ತೃಪ್ತಿಯಿಲ್ಲ. ಮತ್ತೆ ಮತ್ತೆ ಕೇಳಬೇಕೆನ್ನಿಸಿದೆ."

ಯೋಗ =ಪರಮಾತ್ಮನಲ್ಲಿ ಅವಿನಾಭಾವ ಸಂಬಂಧದಿಂದಿರುವ ಯೋಗ ಮಾಯಾಶಕ್ತಿ. ಅದು ವಿಶ್ವವನ್ನು ರಚಿಸುತ್ತದೆ. ವಿಭೂತಿ=ಧ್ಯಾನಯೋಗ್ಯವಾದ ಪರಮಾತ್ಮನ ವಿವಿಧ ಪವಿತ್ರ ರೂಪುಗಳು.

ಸಂಬಂಧ:– ಅರ್ಜುನನ ಪ್ರಾರ್ಥನೆಯ ಅನುಸಾರ ಭಗವಂತನು ಅಧ್ಯಾಯಾಂತ್ಯದ ವರೆಗೂ ವಿಭೂತಿ–ವರ್ಣನೆ ಮಾಡುತ್ತಾನೆ.

ಶ್ರೀ ಭಗವಾನುವಾಚ:–

ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।
ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥೧೯॥

ಭಾವ:– ಭಗವಂತ:– "ಅರ್ಜುನ, ನನ್ನ ವಿಭೂತಿಗಳಿಗೆ ಕೊನೆಯೇ ಇಲ್ಲ. ವಿಶ್ವದ ಪ್ರತಿವಸ್ತುವೂ ನನ್ನ ಸಾಕ್ಷಾತ್ ಮೂರ್ತಿಯೇ ಆಗಿ ಹೊಳೆಯುವಾಗ, ಅವನ್ನೆಲ್ಲ ಹೇಗೆ ವರ್ಣಿಸಲಿ?

ಅವುಗಳಲ್ಲಿ ಅತ್ಯಂತ ಪ್ರಮುಖವಾದ ಅಂದರೆ ನನ್ನ ಜ್ಞಾನ ಚೇತನ–ಪ್ರಭೆಯನ್ನು ಹೆಚ್ಚು ಪ್ರಮಾಣದಲ್ಲಿ ಅಭಿವ್ಯಕ್ತಗೊಳಿಸುವ ಕೆಲವೇ ವಿಭೂತಿಗಳನ್ನು ನಿನಗಾಗಿ ಉಪದೇಶಿಸುವೆ."

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥೨೦॥

ಭಾವ:– "ಅರ್ಜುನ, ನೀನು ಸದಾ ಜಾಗ್ರತ, ನಿದ್ರೆಯನು ಗೆದ್ದ ಧೀರ (ಗುಡಾಕೇಶ). ನಿನ್ನದು ತೆರೆದ ಕಣ್ಣು, ಅರಳಿದ ಮನ. ಮೈಯೆಲ್ಲ ಕಿವಿಯಾಗಿ ಕೇಳು. ನಾನು ಸಮಸ್ತ ಪ್ರಾಣಿಗಳ ಹೃದಯದಲ್ಲಿ 'ಆತ್ಮ' ನಾಗಿದ್ದೇನೆ. ನನ್ನ ಆಧಾರದಲ್ಲಿಯೇ ಆ ಜೀವಿಗಳ ಹುಟ್ಟು, ಸ್ಥಿತಿ ಹಾಗು ನಾಶ."

ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥೨೧॥

ಭಾವ:– "ನಾನು ದ್ವಾದಶ ಆದಿತ್ಯರಲ್ಲಿ ವಿಷ್ಣು, ಜ್ಯೋತಿಸ್ಸುಗಳಲ್ಲಿ ರಶ್ಮಿಗಳುಳ್ಳ ಸೂರ್ಯ. ಮರುದ್ಗಣಗಳಲ್ಲಿ ಮರೀಚಿ. ನಕ್ಷತ್ರಗಳಲ್ಲಿ ಚಂದ್ರ."

ವಿವರಣೆ:– (೧) ದ್ವಾದಶ ಆದಿತ್ಯರು: ಕಶ್ಯಪ ಮಹರ್ಷಿಯಿಂದ ಅದಿತಿಯಲ್ಲಿ ಹುಟ್ಟಿದರು. ಧಾತೃ, ಮಿತ್ರ, ಅರ್ಯಮ, ಶಕ್ರ, ವರುಣ, ಅಂಶ, ಭಗ, ವಿವಸ್ವಂತ, ಪೂಷ, ಸವಿತೃ, ತ್ವಷ್ಟೃ ಮತ್ತು ವಿಷ್ಣು–ಇವು ಅವರ ನಾಮಗಳು.

(೨)ಜ್ಯೋತಿಸ್ಸುಗಳು:– ಸ್ಫುರಿಸುವ ಪ್ರಕಾಶ ಕಾಯಗಳು. ಅವು ಅಸಂಖ್ಯ. ಅವೆಲ್ಲವುಗಳಲ್ಲಿ ನಮಗೆ ಅತಿ ಸಮೀಪದಲ್ಲಿ ನೆಲೆಸಿರುವವ ರವಿ. ಜೀವಿಗಳ ಬದುಕಿಗೆ ಬೇಕಾದ ಸರ್ವ ಶಕ್ತಿಯನ್ನು ಅವನು ನೀಡುತ್ತಾನೆ.

(೩) ಮರುತರು:– ಕಶ್ಯಪ ಮುನಿಯಿಂದ ದಿತಿಯಲ್ಲಿ ಹುಟ್ಟಿದ ೪೯ ಜನ ಮಹಾಬಲ ಸಂಪನ್ನರು. ಅವರನ್ನು ಏಳೇಳರಂತೆ ಏಳು ಗುಂಪು ಮಾಡಲಾಗಿದೆ. ಪ್ರತಿ ಗುಂಪಿಗೆ ಮರುದ್ಗಣವೆಂದು ನಾಮ. ಮರೀಚಿ ಎನ್ನುವದು ಅಂಥ ಒಂದು ಮರುದ್ಗಣ.

(೪) ನಕ್ಷತ್ರ ಹಾಗು ಚಂದ್ರ:– ಅತ್ರಿ ಮುನಿಯು ತಪ ಮಾಡುವಾಗ ಹೊರ ಹೊಮ್ಮಿದ ತೇಜಸ್ಸು ಕ್ಷೀರ ಸಾಗರದಲ್ಲಿ ಬಿದ್ದು ತನ್ನ ಶಾಖ ಕಳೆದುಕೊಂಡು ಪುರುಷಾಕಾರ ತಾಳಿತು. ಅದುವೇ ಚಂದ್ರ. ಅಶ್ವಿನ್ಯಾದಿ ೨೭ ನಕ್ಷತ್ರಗಳು ಅವನ ಮಡದಿಯರು.

ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।
ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥೨೨॥

ಭಾವ:–"ನಾನು ವೇದಗಳಲ್ಲಿ ಸಾಮವೇದ. ದೇವತೆಗಳಲ್ಲಿ ಇಂದ್ರ. ಇಂದ್ರಿಯಗಳಲ್ಲಿ ಮನಸ್ಸು. ಭೂತಗಳಲ್ಲಿ ಬುದ್ಧಿ."

ವಿವರಣೆ:– (೧) ವೇದ:– ಅನೇಕ ವಿಷಯುಗಳ ಸಂಗ್ರಹ ಗ್ರಂಥಗಳು. ದೇವ ಪ್ರಣೀತವೆಂದು ನಂಬಿಕೆ. ಪ್ರಧಾನ ವೇದಗಳು ನಾಲ್ಕು–(ಅ) ಋಗ್ವೇದ:

ಪರಮಾತ್ಮನು ಅನೇಕ ಅಧಿದೇವತೆಗಳ ರೂಪತಾಳಿ ಜಗತ್ತಿನ ಭಿನ್ನ ಭಿನ್ನ ವ್ಯವಹಾರಗಳನ್ನು ನಿರ್ವಹಿಸುತ್ತಾನೆ. ಆ ಅಧಿದೇವತೆಗಳ ವರ್ಣನೆ ಹಾಗು ಅವರನ್ನು ಕುರಿತಾದ ಪ್ರಾರ್ಥನೆ ಋಗ್ವೇದದಲ್ಲಿವೆ. (ಬ) ಯಜುರ್ವೇದ: ಅಧಿದೇವತೆಗಳನ್ನು ತೃಪ್ತಪಡಿಸುವ ವಿಧಾನವೆಂದರೆ ಯಜ್ಞ, ಯಾಗ. ಬೇರೆ ಬೇರೆ ಯಜ್ಞಗಳನ್ನು ಆಚರಿಸುವ ಪದ್ಧತಿಗಳ ನಿಖರ ನಿರ್ದೇಶನ ಯಜುರ್ವೇದದಲ್ಲಿದೆ. (ಕ) ಸಾಮವೇದ: ಸರಸಾಗಿ ಹಾಡಬಲ್ಲ ಸಂಕೀರ್ತನೆಗಳ ಸಂಗ್ರಹ ಇದರಲ್ಲಿದೆ. (ಡ) ಅಥರ್ವಣ ವೇದ: ಮಂತ್ರ ತಂತ್ರಗಳ ಸಂಗ್ರಹವನ್ನಿಲ್ಲಿ ಕಾಣುತ್ತೇವೆ.

ನಾಲ್ಕೂ ವೇದಗಳಲ್ಲಿ ವಿಷಯ ವ್ಯಾಪ್ತಿ, ಭಾವ ಸೌಂದರ್ಯ, ರಸ ಮಾಧುರ್ಯ ಹಾಗು ಜ್ಞಾನ ಈ ಎಲ್ಲ ದೃಷ್ಟಿಯಿಂದ ಅತ್ಯಂತ ಶ್ರೇಷ್ಠವಾದುದು ಋಗ್ವೇದ. ಅದರಷ್ಟು ಹಳೇ ಗ್ರಂಥ ಬೇರೊಂದಿಲ್ಲ. ಆದರೆ ಸಾಮವೇದ ತನ್ನದೇ ಆದ ವೈಶಿಷ್ಟ್ಯ ಪಡೆದಿದೆ. ಅದರಲ್ಲಿ ಬಹುಪಾಲಿಗೆ ಋಗ್ವೇದದ ಮಂತ್ರಗಳೇ ಇದ್ದರೂ ಆ ಮಂತ್ರಗಳಿಗೆ ನಾದಮಾಧುರ್ಯದ ಆವರಣ ಹೊದಿಸಿ ಕೇಳುವವರು ಮನಮುಗ್ಧರಾಗುವಂತೆ ಮಾಡಲಾಗಿದೆ. ಏನೂ ತಿಳಿಯದ ಸಾಮಾನ್ಯ ಶ್ರಾವಕ ಕೂಡ ಸಾಮಗಾನ ಕೇಳಿ ದೇವೋನ್ಮಾದ ಪಡೆಯಬಲ್ಲ. ಆದ್ದರಿಂದ ಸಾಮವೇದವು ಪ್ರಧಾನ ವಿಭೂತಿಯಾಗಿದೆ. ಪರಮ ಪವಿತ್ರವಾದ ತತ್ತ್ವಮಸಿ ಎಂಬ ಮಹಾ ಉಪದೇಶ ಸಾಮವೇದದಲ್ಲಿದೆ ಎಂಬುದು ಗಮನಾರ್ಹ.

(೨) ದೇವತೆಗಳು:- ಸ್ವರ್ಗೀಯ ದೇವತೆಗಳು ೩೩ ಕೋಟಿ ಎಂದು ಹೇಳಲಾಗುತ್ತಿದೆ. ಅವರ ಒಡೆಯ ಇಂದ್ರ. ಸಪ್ತರ್ಷಿಗಳೇ ಅವನನ್ನು ಸೇವಿಸುತ್ತಾರೆ.

(೩) ಇಂದ್ರಿಯ ಮತ್ತು ಮನಸ್ಸು:– ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಇವು ಕರ್ಮೇಂದ್ರಿಯ; ಕರ್ಣ, ತ್ವಚ, ನೇತ್ರ, ರಸನ ಹಾಗು ಘ್ರಾಣ, ಇವು ಜ್ಞಾನೇಂದ್ರಿಯ. ಮನಸ್ಸು ಅಂತರಿಂದ್ರಿಯ. ಅದು ಅತ್ಯಂತ ಸೂಕ್ಷ್ಮ. ವಿಚಾರಗಳು, ಭಾವನೆಗಳು ಅದರ ತರಂಗಗಳು. ಅದು ಇಂದ್ರಿಯಗಳ ರಾಜ.

(೪) ಭೂತಗಳು ಮತ್ತು ಚೇತನ:– ದೇಹದಲ್ಲಿರುವ ಪೃಥ್ವ್ಯಾದಿ ಅಹಂಕಾರಾಂತ ಸಕಲ ತತ್ತ್ವಗಳು ಭೂತಗಳು. ಅವುಗಳಲ್ಲಿ ಒಂದಾದ ಬುದ್ಧಿಯು ಚೇತನ. ಅದು ವಿಚಾರ ವಿಮರ್ಶೆಗಳ ಮೂಲ; ತತ್ತ್ವ ಪ್ರಕಾಶಕ ದೀಪ! ಅದು ಬಾಹ್ಯ ಜಗತ್ತನ್ನು ತೋರಿಸಬಲ್ಲುದು. ಅದೇರೀತಿ ದೇವನನ್ನು ತೋರಿಸಬಲ್ಲದು.

ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।
ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥೨೩॥

ಭಾವ:– ನಾನು ಏಕಾದಶ ರುದ್ರರಲ್ಲಿ ಶಂಕರ. ಯಕ್ಷ ರಾಕ್ಷಸರಲ್ಲಿ ಕುಬೇರ. ಅಷ್ಟವಸುಗಳಲ್ಲಿ ಅಗ್ನಿ. ಶಿಖರಗಳುಳ್ಳ ಪರ್ವತಗಳಲ್ಲಿ ಮೇರು.

ವಿವರಣೆ:– ಹನ್ನೊಂದು ಜನ ರುದ್ರರು:- ಬ್ರಹ್ಮನ ಭ್ರೂಮಧ್ಯದಿಂದ ಜನಿಸಿದವರು. ಕಲ್ಪ ಭೇದದಿಂದ ಇವರ ನಾಮಗಳು ಭಿನ್ನವಾಗಿವೆ. (ಅ) ಅಜೈಕ

ಪಾದ, ಅಹಿರ್ಬುದ್ಧ್ನ್ಯ, ವಿರೂಪಾಕ್ಷ, ರೈವತ, ಹರ(ಶಂಕರ), ಬಹುರೂಪ, ತ್ರ್ಯಂಬಕ, ಸುರೇಶ್ವರ, ಸಾವಿತ್ರ, ಜಯಂತ ಹಾಗು ಪಿನಾಕಿ. (ಬ) ಮೃಗವ್ಯಾಧ, ಸರ್ಪ, ನಿರ್ಋತಿ, ಅಜೈಕಪಾದ, ಅಹಿರ್ಬುಧ್ನಿ, ಪಿನಾಕಿ, ದಹನ, ಈಶ್ವರ (ಶಂಕರ), ಕಪಾಲಿ, ಸ್ಥಾಣು ಹಾಗು ಭಗ. ಸಾಮಾನ್ಯವಾಗಿ ರುದ್ರ ಎಂದರೆ ಜನತೆಯನ್ನು ಪ್ರೇಯೋಭಿನ್ನ ಶ್ರೇಯಸ್ಸಿಗಾಗಿ ಅಳುವಂತೆ ಮಾಡುವವ. ರುದ್ರರಲ್ಲಿ ಶಂಕರನು ಬಹು ಶಾಂತ. ಆರ್ತ ಜೀವಿಗಳಿಗೆ ಸಮಾಧಾನ ನೀಡುತ್ತಾನೆ.

(೨) ಯಕ್ಷ-ರಾಕ್ಷಸರು:- ಜಲ ನಿವಾಸಿಗಳು ಯಕ್ಷರು. ದಯಾಹೀನ ಸ್ವಭಾವದ ಜೀವ ವಿಶೇಷರು ರಾಕ್ಷಸರು. ಕುಬೇರನು ಯಕ್ಷರ ಅಧಿಪತಿ; ಅತುಲೈಶ್ವರ್ಯ ಸಂಪನ್ನ. ಧನದ ಲಾಲಸೆಯುಳ್ಳ ರಾಕ್ಷಸರು ಇವನಿಗೆ ವಿಧೇಯರಾಗಿದ್ದಾರೆ. ತನ್ನ ಸಂಪತ್ತಿನಿಂದ ಮೂರು ಲೋಕಗಳನ್ನು ಪರಿಪಾಲಿಸಬಲ್ಲ ಸಾಮರ್ಥ್ಯ ಇವನಿಗಿದೆ.

(೩) ಎಂಟು ಜನ ವಸುಗಳು:- ಧರ್ಮಪ್ರಜಾಪತಿಯಿಂದ ದಕ್ಷಪುತ್ರಿಯಾದ ವಸು ಎಂಬವಳಲ್ಲಿ ಜನಿಸಿದವರು. ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸು ಮತ್ತು ವಿಭಾವಸು ಇವು ಅವರ ನಾಮಗಳು. ಈ ಎಂಟು ಜನರಲ್ಲಿ ಅಗ್ನಿವಸುವು ಮನುಷ್ಯರಿಂದ ಕಾಣಿಕೆ ಸ್ವೀಕರಿಸಿ ಆಯಾ ದೇವತೆಗಳಿಗೆ, ಪಿತೃಗಳಿಗೆ ತಲುಪಿಸುವ ಕಾರ್ಯ ಮಾಡುತ್ತಾನೆ.

(೪) ಮೇರು:- ಜಗತ್ತಿನಲ್ಲಿ ಅನೇಕ ಪರ್ವತಗಳಿವೆ; ಅವುಗಳಲ್ಲಿ ಹಿಮಾಲಯ ಪರ್ವತವು ಬಹು ದೊಡ್ಡದು; ಅದರಲ್ಲಿರುವ ಕೆಲವು ಶಿಖರಗಳು ಜಗತ್ತಿನಲ್ಲಿಯೇ ಎತ್ತರವಾಗಿವೆ.

ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।
ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥೨೪॥

ಭಾವ:- ಪಾರ್ಥ, ರಾಜಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿಯು ನಾನು ಎಂದು ತಿಳಿದುಕೊ. ನಾನು ಸೇನಾಪತಿಗಳಲ್ಲಿ ಸ್ಕಂದ. ಸರಸ್ಸುಗಳಲ್ಲಿ ಸಾಗರ.

ವಿವರಣೆ:- (೧) ಪುರೋಹಿತರು:- ಯಜ್ಞ ಮುಂತಾದ ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸುವವರು ಪುರೋಹಿತರು. ರಾಜ ಮಹಾರಾಜರ ಆಶ್ರಯದಲ್ಲಿರುವವರು ರಾಜ ಪುರೋಹಿತರು. ಬೃಹಸ್ಪತಿಯು ಪುರೋಹಿತರಲ್ಲಿಯೇ ಅಗ್ರಗಣ್ಯ. ಅವನು ದೇವಪುರೋಹಿತ; ದೇವಗುರು; ಸರ್ವವಿದ್ಯಾವಿಶಾರದ!

(೨) ಸೇನಾಪತಿಗಳು:- ಲಕ್ಷಾಂತರ ಸೇನೆಯ ಅಧಿಪತ್ಯವಹಿಸಿ ಅತ್ಯಂತ ಧೀರತನದಿಂದ ಕಾದುವ ಕಲಿಗಳು ಸೇನಾಪತಿಗಳು. ಪಾರ್ವತಿಯ ಮಗನಾದ ಸ್ಕಂದ (ಷಣ್ಮುಖ)ನು ಅಪ್ರತಿಮ ಸೇನಾಪತಿ. ಅವನು ಕುವರನಿದ್ದಾಗಲೇ ಜಂಭ ಕುಂಭಜಾದಿ ಮಹಾಸೇನಾಪತಿಗಳ ಮುಖಂಡತ್ವ ವಹಿಸಿ ಘೋರ ಕದನ ಮಾಡಿ ತಾರಕಾಸುರನನ್ನು ಸಂಹರಿಸಿದ.

(೩) ಸರಸ್ಸು, ಸಾಗರ:-ಲೋಕದಲ್ಲಿರುವ ಸರೋವರಗಳಲ್ಲೆಲ್ಲ ಸಾಗರವೇ ದೊಡ್ಡದು. ಅದಕ್ಕೆ ಸೀಮೆಗಳೇ ಇಲ್ಲ, ಪೃಥ್ವಿಯನ್ನೇ ಸುತ್ತು ಹಾಕಿದೆ.

ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।
ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಣಾಂ ಹಿಮಾಲಯಃ ॥೨೫॥

ಭಾವ:-"ನಾನು ಮಹರ್ಷಿಗಳಲ್ಲಿ ಭೃಗು. ವೇದ ವಾಕ್ಯಗಳಲ್ಲಿ ಏಕಾಕ್ಷರ ಪ್ರಣವ. ಯಜ್ಞಗಳಲ್ಲಿ ಜಪಯಜ್ಞ. ಸ್ಥಾವರಗಳಲ್ಲಿ ಹಿಮಾಲಯ."

ವಿವರಣೆ:– (೧) ಮಹರ್ಷಿಗಳು: ದೇವ ದರ್ಶನಪಡೆದು ಋಕ್ ರಚಿಸುವವರೆಲ್ಲ ಮಹರ್ಷಿಗಳು. ಭೃಗು ಅಂಥ ಒಬ್ಬ ಋಷಿ; ಆತ್ಮಾನುಭಾವಿ; ವೇದ ವೇದಾಂಗಗಳ ಪ್ರವಕ್ತಾರ.

(೨) ಗಿರಾ ಮತ್ತು ಓಂಕಾರ: ಪದ ಲಕ್ಷಣಗಳಿಂದ ವಿಧಿವತ್ತಾಗಿ ನಿರ್ಮಾಣವಾದ ಅರ್ಥಯುಕ್ತ ವೇದವಾಕ್ಯವೇ ಗಿರಾ. ಈ ಗಿರಾ ಪರಮಾತ್ಮನ ಬಗೆಗೆ ಇದ್ದರೆ ಮಂತ್ರ ಎನ್ನುತ್ತಾರೆ. ಸರ್ವ ಮಂತ್ರಗಳಲ್ಲಿ ಪರಮಾತ್ಮನನ್ನೇ ನೇರವಾಗಿ ಲಕ್ಷಿಸುವ ಮಂತ್ರವು ಪ್ರಣವ. ಅದು ಮಂತ್ರಗಳ ರಾಜ!

(೩) ಯಜ್ಞಗಳು: ವೇದೋಕ್ತ ಯಜ್ಞಗಳು ಅನೇಕ. ಆ ಯಜ್ಞಗಳಲ್ಲಿ ಹಿಂಸೆಗೆ ಅವಕಾಶವಿದೆ; ಧನ ಧಾನ್ಯಾದಿಗಳ ವ್ಯಯವಿದೆ; ಗರ್ವ ಆಢ್ಯತೆಗಳಿಗೆ ಆಸ್ಪದವಿದೆ. ಯಜ್ಞಗಳ ಕೊನೆಯಲ್ಲಿ ಪ್ರಾಯಶ್ಚಿತ್ತ ವಿಧಿ ಹೇಳಿದುದರಿಂದ ಅವುಗಳಲ್ಲಿ ಪಾಪಕಾರ್ಯ ಜರಗುತ್ತದೆ ಎಂಬುದು ಸುಸ್ಪಷ್ಟ. ಅವುಗಳಿಂದ ಬರುವ ಫಲವೂ ಕಿಂಚಿತ್ ಮಾತ್ರ! ಕೇವಲ ಭೋಗೈಶ್ವರ್ಯ! ನಾಮಸಂಕೀರ್ತನಾ ರೂಪ ಜಪಯಜ್ಞವು ಹಾಗಲ್ಲ. ಅದರಲ್ಲಿ ಹಿಂಸೆ ಅಪವ್ಯಯ ಆಡಂಬರ ಏನೂ ಇಲ್ಲ. ಬಡವ ಬಲ್ಲಿದ ಎಲ್ಲರಿಗೂ ಸುಲಭ. ಕುಳಿತಾಗ ನಿಂತಾಗ ಎಲ್ಲಿ ಬೇಕಾದರೂ ಮಾಡಬಹುದು. ಇನ್ನು, ಈ ಜಪಯಜ್ಞವನ್ನು ಸಾಮೂಹಿಕವಾಗಿ ಮಾಡಿದರಂತೂ ಆಗುವ ಲಾಭ ಅಪಾರ. ಅದು ಜಾತ್ಯಾದಿ ಭೇದಭಾವನೆಯನ್ನು ಹೊಡೆದು ಹಾಕುವದು; ಸಕಲ ಜನರಲ್ಲಿ ಭಾವೈಕ್ಯ ಉಂಟು ಮಾಡುವದು. ಒಟ್ಟಿನಲ್ಲಿ ಇದು ವ್ಯಕ್ತಿಗೆ ಅಮರ ಮುಕ್ತಿಯನ್ನಿತ್ತರೆ, ಸಮಾಜಕ್ಕೆ ಶಾಂತಿಯನ್ನೀಯುವದು.

(೪) ಹಿಮಾಲಯ: ಜಗತ್ತಿನಲ್ಲಿ ಅನೇಕ ಅಚಲ ವಸ್ತುಗಳಿವೆ. ಅವುಗಳಲ್ಲೆಲ್ಲ ಹೆಚ್ಚು ಸ್ಥಿರವಾದುದು ಹಿಮಾಲಯ.

ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।
ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥೨೬॥

ಭಾವ:– ನಾನು ಸರ್ವ ವೃಕ್ಷಗಳಲ್ಲಿ ಅಶ್ವತ್ಥ. ದೇವರ್ಷಿಗಳಲ್ಲಿ ನಾರದ, ಗಂಧರ್ವರಲ್ಲಿ ಚಿತ್ರರಥ. ಸಿದ್ಧರಲ್ಲಿ ಕಪಿಲಮುನಿ.

ವಿವರಣೆ:– (೧) ಅಶ್ವತ್ಥ: ಅರಳೆಯ ಮರ. ಅನೇಕ–ಮಹಾನುಭಾವರು

ಈ ಮರದ ಅಡಿಯಲ್ಲಿಯೇ ತಪಸ್ಸು ಮಾಡಿದ್ದಾರೆ. ಹರವಾದ ಹಚ್ಚ ಹಸಿರೆಲೆಗಳುಳ್ಳ ಈ ವೃಕ್ಷದ ರೂಪಕವಿತ್ತು ಭಗವಂತನು ವಿಶ್ವವನ್ನು ಹದಿನೈದನೆಯ ಅಧ್ಯಾಯದಲ್ಲಿ ಬಹು ಸುಂದರವಾಗಿ ವರ್ಣಿಸಿದ್ದಾನೆ.

(೨) ನಾರದ: ದೇವಲೋಕದ ಋಷಿಗಳಲ್ಲಿ ಅಗ್ರಗಣ್ಯ. ಸತ್ಯವನ್ನರಿವ ಸಂತ. ಸದೈವ ದೇವ-ಕೀರ್ತನದಲ್ಲಿ ತಲ್ಲೀನನಾದ ಮಹಾನುಭಾವ.

(೩) ಗಂಧರ್ವರು: ದೇವಲೋಕದ ಗಾಯಕರು ಮತ್ತು ವೈದ್ಯರು. ಚಿತ್ರರಥನು ಇವರ ರಾಜ. ಇವನು ಗಾನವಿಹಾರಿ. ವಿಚಿತ್ರ-ವರ್ಣಚಿತ್ರ ರಚನಾ ಸಮರ್ಥ.

(೪) ಸಿದ್ಧರು : ಜನ್ಮತಃ ಧರ್ಮ, ವಿರಾಗ ಹಾಗು ಜ್ಞಾನಗಳನ್ನು ಪಡೆದವರು. ಕಪಿಲನು ಅಂಥ ಒಬ್ಬ ಸಿದ್ಧ. ಅವನು ಬಾಲಕನಾಗಿರುವಾಗಲೇ ತಾಯಿ ದೇವಹೂತಿಗೆ ಸಾಂಖ್ಯಸಿದ್ಧಾಂತವನ್ನು ಉಪದೇಶಿಸಿದ. ಇವನು ಸಾಂಖ್ಯ ದೃಷ್ಟಾರ.

ಉಚ್ಚೈಃ ಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।
ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ॥೨೭॥

ಭಾವ:– ಕುದುರೆಗಳಲ್ಲಿ (ಅಮೃತಕ್ಕಾಗಿ ಕ್ಷೀರ ಸಮುದ್ರವನ್ನು ಕಡೆಯುವಾಗ ಹುಟ್ಟಿದ) ಉಚ್ಚೈಃಶ್ರವಸ್ಸು, ಉತ್ತಮ ಆನೆಗಳಲ್ಲಿ ಐರಾವತ ಹಾಗು ಮನುಷ್ಯರಲ್ಲಿ ರಾಜ ನಾನೆಂದು ತಿಳಿದುಕೊ.

ವಿವರಣೆ:– (೧) ಉಚ್ಚೈಃಶ್ರವಸ್ : ಸಮುದ್ರ ಮಂಥನ ಮಾಡುವಾಗ ಹುಟ್ಟಿದ ಬಲಾಢ್ಯ ಕುದುರೆ. ಇಂದ್ರನ ಲಾಯದಲ್ಲಿದೆ. (೨) ಐರಾವತ: ಇದೂ ಮಂಥನ ಕಾಲದಲ್ಲಿ ಉದಿಸಿತು. ಇಂದ್ರನ ವಾಹನ. (೩) ನರಾಧಿಪ: ಧೈರ್ಯ ಶೌರ್ಯ ಸಾಹಸ ಬುದ್ಧಿ ನ್ಯಾಯ ನಿಷ್ಠೆಗಳುಳ್ಳ ನೇತಾರ.

ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।
ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕೀ ॥೨೮॥

ಭಾವ:- ನಾನು ಆಯುಧಗಳಲ್ಲಿ ವಜ್ರಾಯುಧ, ಗೋವುಗಳಲ್ಲಿ ಕಾಮಧೇನು. ಪ್ರಜೋತ್ಪಾದಕ ಕಾಮನು ನಾನೇ, ಸರ್ಪಗಳಲ್ಲಿ ವಾಸುಕಿಯು ನಾನು.

ವಿವರಣೆ:– (೧) ವಜ್ರಾಯುಧ: ದಧೀಚಿ ಮುನಿಯ ಅಸ್ಥಿಗಳಿಂದ ಸಿದ್ಧವಾದ ಆಯುಧ. ಹಿಮಾಲಯದಂಥ ಪರ್ವತಗಳನ್ನು ನಾಶ ಮಾಡಬಲ್ಲುದು. (೨) ಕಾಮಧೇನು: ಅಸಾಮಾನ್ಯ ಶಕ್ತಿಯ ಆಕಳು. ಇಚ್ಛಿತ ಪದಾರ್ಥಗಳನ್ನು ಈಯುತ್ತದೆ. (೩) ಕಾಮ: ಪ್ರಜೋತ್ಪಾದನೆಗೆ ಮಾತ್ರ ಅನುಕೂಲವಾದ ಮನಸ್ಸಿನ ಇಚ್ಛೆಯು.(೪) ವಾಸುಕೀ: ಕ್ಷೀರಸಾಗರ ಮಥನ ಮಾಡುವಾಗ ಹಗ್ಗದಂತೆ ಈ ಹಾವನ್ನು ಉಪಯೋಗಿಸಲಾಗಿತ್ತು. ಇದು ಸರ್ಪಗಳ ರಾಜ.

ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।

ಪಿತೃಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥೨೯॥

ಭಾವ:– "ನಾನು ನಾಗಗಳಲ್ಲಿ ಅನಂತ. ಜಲವಾಸಿಗಳಲ್ಲಿ (ಯಾದಸಾಂ) ವರುಣ. ಪಿತೃಗಳಲ್ಲಿ ಅರ್ಯಮ, ಮತ್ತು ದಂಡಿಸುವವರಲ್ಲಿ ಯಮ."

ವಿವರಣೆ:– (೧) ಅನಂತ: ಕದ್ರುವಿನಲ್ಲಿ ಹುಟ್ಟಿದ ವಿಷರಹಿತ ಸರ್ಪರಾಜ. (೨) ವರುಣ: ಜಲಾಧಿಪತಿ, ಪಶ್ಚಿಮದಿಕ್ಕಿನ ಅಧಿದೇವತಾ. (೩) ಅರ್ಯಮ: ಪಿತೃಗಳ ಒಡೆಯ. (೪) ಯಮ: ದಕ್ಷಿಣ ದಿಕ್ಕಿನ ಅಧಿದೇವತಾ. ಸೂರ್ಯನ ಮಹಾನ್ ಶಾಸಕ,

ಪ್ರಲ್ಹಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।
ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್॥೩೦॥

ಭಾವ:– ನಾನು ದೈತ್ಯರಲ್ಲಿ ಪ್ರಹ್ಲಾದ. ಗಣಕರಲ್ಲಿ ಕಾಲ. ಮೃಗಗಳಲ್ಲಿ ಸಿಂಹ. ಪಕ್ಷಿಗಳಲ್ಲಿ ಗರುಡ.

ವಿವರಣೆ– (೧) ಪ್ರಹ್ಲಾದ: ಹಿರಣ್ಯ ಕಶ್ಯಪನ ಮಗ. ತಪಸ್ವಿ. ವಿಷ್ಣು ಭಕ್ತ. 'ದೈತ್ಯಾನಾಂ ದಿತಿವಂಶ್ಯಾನಾಂ ಮಧ್ಯೇ ಪ್ರಕರ್ಷೇಣ ಹ್ಲಾದಯತಿ ಆನಂದ ಯತಿ ಪರಮಂ ಸಾತ್ವಿಕತ್ವೇನ ಸರ್ವಾನಿತಿ ಪ್ರಹ್ಲಾದಃ' ದಿತಿವಂಶದವರಾದ ದೈತ್ಯರ ಮಧ್ಯದಲ್ಲಿ ಅತಿಶಯ ಸಾತ್ವಿಕ ಭಾವದಿಂದ ಸರ್ವರಿಗೂ ಆನಂದ ಕೊಡುವದರಿಂದ ಪ್ರಹ್ಲಾದ. (೨) ಗಣಕ: ಸಂಖ್ಯಾಗಣಕ, ಪರಿಮಾಣ ಗಣಕ, ವಿಸ್ತಾರಗಣಕ ಹೀಗೆ ಗಣಕಗಳು ಅನೇಕ. ಅವುಗಳಲ್ಲಿ ಮಹಾನ್ ಗಣಕವೆಂದರೆ ಕಾಲ. ಅದು ವಿಶ್ವವನ್ನೇ ಗಣಿಸುತ್ತಿದೆ. ಅದರ ಗಣಿಕೆಗೆ ಸಿಗದ ವಸ್ತುವೇ ಇಲ್ಲ. (೩) ವೈನತೇಯ: ಗರುಡ, ವಿಷ್ಣುವಾಹನ. (೪) ಸಿಂಹ: ಮೃಗಗಳ ರಾಜ.

ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।
ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥೩೧॥

ಭಾವ:– ನಾನು ಗಮನಶಕ್ತಿಯಿರುವವರಲ್ಲಿ (ಪವತಾಂ) ವಾಯು. ಶಸ್ತ್ರಧಾರಿಗಳಲ್ಲಿ ಶ್ರೀ ರಾಮ, ಜಲಜಂತುಗಳಲ್ಲಿ ಮಕರ, ನದಿಗಳಲ್ಲಿ ಗಂಗೆ.

ವಿವರಣ:– (೧) ವಾಯು: ಸದಾ ಚಲಿಸುವ ನಿಸರ್ಗ ದೇವತೆ. ಅವನು ಭೂಮಿಯನ್ನೆಲ್ಲ ದಿನನಿತ್ಯ ಸ್ವಚ್ಛಗೊಳಿಸುತ್ತಾನೆ. ಅವನಷ್ಟು ಬಲಾಢ್ಯಶಕ್ತಿಯಿಂದ ಚಲಿಸುವ ಮತ್ತೊಂದು ವಸ್ತುವೇ ಇಲ್ಲ. (೨) ರಾಮ: ಅಜೇಯ ಯೋದ್ಧಾ. (೩) ಮಕರ: ಜಲಜಂತುಗಳಲ್ಲಿ ಇದು ಬಲಿಷ್ಠ. (೪) ಗಂಗೆ: ಶಿವನ ಜಡೆಯಿಂದ ಇಳಿದು ಬಂದ ನದಿ, ಬತ್ತುವದಿಲ್ಲ. ಜಲ ಸ್ವಚ್ಛ-ಶೀತಲ, ರೋಗಾಪಹಾರಿ.

ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।
ಅಧ್ಯಾತ್ಮ ವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥೩೨॥

ಭಾವ:- ಸೃಷ್ಟಿಗಳ (ಸರ್ಗಾಣಾಂ) ಉತ್ಪತ್ತಿ ಸ್ಥಿತಿ ಲಯಗಳು ನಾನೇ. ವಿದ್ಯೆ

ಗಳಲ್ಲಿ ಅಧ್ಯಾತ್ಮವಿದ್ಯೆಯೂ, ಚರ್ಚೆ ಮಾಡುವವರಲ್ಲಿ ವಾದವೂ ನಾನು.

ವಿವರಣ:-(೧)ಸರ್ಗಗಳು: ಹುಟ್ಟಿದ ಅಸಂಖ್ಯ ವಸ್ತುಗಳು. (೨) ಅಧ್ಯಾತ್ಮ ವಿದ್ಯಾ: ಲೋಕದಲ್ಲಿ ಅನೇಕ ವಿದ್ಯೆಗಳಿವೆ; ಆತ್ಮನ ಬಗೆಗಿರುವ ಅಧ್ಯಾತ್ಮವಿದ್ಯೆ ಮಾತ್ರ ಅವುಗಳಲ್ಲಿ ಪರಮೋತ್ತಮ. ಇತರ ವಿದ್ಯೆಗಳು ದುಃಖನಾಶಕವಲ್ಲ. ಆತ್ಮ ವಿದ್ಯೆ ದುಃಖ ನಾಶಕವೂ ಅಹುದು. ಪರಮಸುಖ ಪ್ರಾಪಕವೂ ಅಹುದು. (೩) ವಾದ: ಚರ್ಚೆ. ಇದು ಮೂರು ಪ್ರಕಾರ– (ಅ) ಜಲ್ಪವಾದ (ಬ) ವಿತಂಡ ವಾದ (ಕ) ಸಂವಾದ. 'ಯಥೋಕ್ತ ಉಪಪನ್ನಃ ಛಲ ಜಾತಿ ನಿಗ್ರಹಸ್ಥಾನ ಸಾಧನೋಪಲಂಭಃ ಜಲ್ಪಃ' ವಾದಿಯು ಪ್ರಮಾಣಾದಿಗಳ ಮೂಲಕ ತನ್ನ ಪಕ್ಷ ಮಂಡಿಸಿದರೆ ಅದನ್ನು ಛಲಜಾತಿ ನಿಗ್ರಹ ಸ್ಥಾನಾದಿಗಳಿಂದ ದೂಷಿತಗೊಳಿಸು ವದು ಜಲ್ಪ. 'ಸಪಕ್ಷ ಸ್ವಪಕ್ಷ ಸ್ಥಾಪನಾಹೀನಃ ವಿತಂಡಃ' ಪ್ರಮಾಣಾದಿಗಳ ಮೂಲಕ ಸಿದ್ಧವಾದ ಸಪಕ್ಷವನ್ನು ಒಪ್ಪಿಕೊಳ್ಳದಿರುವದು ಮತ್ತು ತನ್ನ ಪಕ್ಷ ವನ್ನು ಸ್ಥಾಪಿಸದಿರುವದು ವಿತಂಡ. 'ಪ್ರಮಾಣ ತರ್ಕ ಸಾಧನ ಉಪಾಲಂಬ ಸಿದ್ಧಾಂತಾವಿರುದ್ಧ ಪಂಚಾವಯವೋಪಪನ್ನಃ ಪಕ್ಷ ಪ್ರತಿಪಕ್ಷ ಪರಿಗ್ರಹಃ ಸಂವಾದಃ' ಪ್ರತ್ಯಕ್ಷಾದಿ ಪ್ರಮಾಣ, ಕಾರ್ಯ-ಕಾರಣ ಸಿದ್ಧಾಂತಾಧಾರಿತ ತರ್ಕ, ದೃಷ್ಟಾಂತಾದಿ ಸಾಧನ, ದೋಷ ದರ್ಶಕವಾದ ಉಪಾಲಂಬ ಮತ್ತು ಸಮ್ಮತ ಸಿದ್ಧಾಂತಗಳಿಗೆ ಅವಿರುದ್ಧ ರೀತಿಯಲ್ಲಿ ಅಭಿಪ್ರಾಯ ಮಂಡನೆ ಈ– ಐದು ಅಂಗ ಗಳಿಂದ ಉದಿಸುವ, ವಾದಿ ಪ್ರತಿವಾದಿ ಸಮ್ಮತವಾದ ಚರ್ಚೆಯು ಸಂವಾದ.

ಜಲ್ಪ ಮತ್ತು ವಿತಂಡಗಳು ಕೇವಲ ಬೌದ್ಧಿಕ ಕದನಗಳು. ಅವುಗಳಿಂದಾ ಗುವ ಪ್ರಯೋಜನ ಅಷ್ಟಕ್ಕಷ್ಟೇ. ಸಂವಾದವು ತದ್ವಿಲಕ್ಷಣ. ಅದು ತತ್ತ್ವವಿಜ್ಞಾ ನಕ್ಕೆ ಹಾಗು ತತ್ತ್ವ ಶೋಧನಗೆ ಸಾಧನವಾಗಿದೆ. ಗುರು ಶಿಷ್ಯರ ಮಧ್ಯ, ಅನು ಭಾವಿ ಅನುಭಾವಿಗಳ ಮಧ್ಯ, ಸಾಧಕ ಸಾಧಕರ ಮಧ್ಯ ನಡೆಯುವ ತಾತ್ವಿಕ ವಾದವು ಈ ಸಂವಾದ. ಇದು ಸರ್ವ ಸಂತಜನಮಾನ್ಯ. 'ವಾದೇ ವಾದೇ ಜಾಯತೇ ತತ್ತ್ವಬೋಧಃ' ಎಂಬಗಾದೆಯ ಮಾತು ಸಂವಾದಕ್ಕೆ ಸಂಬಂಧಿಸಿದೆ.

ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।
ಅಹಮೇವಾಕ್ಷಯಃ ಕಾಲೋ ಧಾತಾಽಹಂ ವಿಶ್ವತೋಮುಖಃ ॥೩೩॥

ಭಾವ:– ನಾನು ಅಕ್ಷರಗಳಲ್ಲಿ ಅಕಾರ. ಸಮಾಸ ಸಮೂಹದಲ್ಲಿ ದ್ವಂದ್ವಸಮಾಸ. ನಾನೇ ಅಕ್ಷಯವಾದ ಕಾಲ, ಸರ್ವತೋಮುಖವಾದ ಧಾತೃ (ಪರಿಪಾಲಕ).

ವಿವರಣೆ:– ಅಕಾರ:– ೧)'ಅಕಾರೋ ವೈ ಸರ್ವಾವಾಕ್' (ಐ ಉ ೩-೬) ಎಲ್ಲ ವಾಣಿಯು ಅಕಾರವೇ. ಏಕೆಂದರೆ, ಅದು ಸಕಲ ಸ್ವರ, ವ್ಯಂಜನಗಳ ಉಗಮಸ್ಥಾನ. ಅದನ್ನು ಆಧಾರವಾಗಿಟ್ಟುಕೊಂಡೇ ಉಳಿದ ಅಕ್ಷರಗಳು ಜೀವಿಸು ತ್ತವೆ; ಸಪ್ತಸ್ವರಗಳ ತುಂಬ ಅಕಾರವು ವ್ಯಾಪಿಸಿದೆ. ಅಕಾರದ ಹಿರಿಮೆ ಅಗಾಧ.

೨) ಸಮಾಸ:– ಭಿನ್ನ ಪದಗಳ ವಿಶಿಷ್ಟ ಜೋಡಣೆಯು ಸಮಾಸ.

ಅವ್ಯಯೀಭಾವ, ತತ್ಪುರುಷ, ಬಹುವ್ರೀಹಿ ಹಾಗು ದ್ವಂದ್ವ. ಇವು ಸಮಾಸದ ನಾಲ್ಕು ಪ್ರಕಾರಗಳು. (ಅ) 'ಪೂರ್ವ ಪದಾರ್ಥ ಪ್ರಧಾನೋ ಅವ್ಯಯೀಭಾವಃ' ಪೂರ್ವಪದದ ಅರ್ಥವು ಪ್ರಧಾನವಿದ್ದರೆ ಅದು ಅವ್ಯಯೀಭಾವ. ಉದಾ: ಕೃಷ್ಣಸ್ಯ ಸಮೀಪಂ ಉಪಕೃಷ್ಣ. ಇಚ್ಛಾಂ ಅನುಸೃತ್ಯ ಯಥೇಚ್ಛಮ್. (ಬ) 'ಉತ್ತರ ಪದಾರ್ಥ ಪ್ರಧಾನಃ ತತ್ಪುರುಷಃ' ಉತ್ತರ ಪದದ ಅರ್ಥವು ಪ್ರಧಾನ ವಿದ್ದರೆ ಅದು ತತ್ಪುರುಷ. ಉದಾ:- ಚೋರಾತ್ ಭಯಂ ಚೋರಭಯಂ. (ಕ) ' ಅನ್ಯ ಪದಾರ್ಥ ಪ್ರಧಾನೋ ಬಹುವ್ರೀಹಿ' ಎರಡೂ ಪದ ಬಿಟ್ಟು ಅನ್ಯ ಪದಕ್ಕೆ ಪ್ರಾಧಾನ್ಯತೆ ಇದ್ದರೆ ಅದು ಬಹುವ್ರೀಹಿ. ಉದಾ: ಕುತ್ಸಿತಂ ರೂಪಂ ಯಸ್ಯ ಸಃ ಕುರೂಪಃ. ಡ) 'ಉಭಯ ಪದ ಪ್ರಧಾನಃ ದ್ವಂದ್ವಃ' ಎರಡೂ ಪದ ಪ್ರಧಾನ ವಿದ್ದರೆ ಅದು ದ್ವಂದ್ವ. ಉದಾ: ಹರಿಶ್ಚ ಹರಶ್ಚ ಹರಿಹರೌ.

ಮೊದಲಿನ ಮೂರು ಸಮಾಸಗಳಲ್ಲಿ ವಿಷಮ ದೃಷ್ಟಿಯಿದೆ; ಅಂದರೆ ತಮ್ಮ ಲ್ಲಿರುವ ಸರ್ವ ಪದಗಳಿಗೆ ಅವು ಸಮ ಪ್ರಾಧಾನ್ಯತೆಯನ್ನು ನೀಡುವದಿಲ್ಲ. ದ್ವಂದ್ವ ಸಮಾಸ ಮಾತ್ರ ಸಮದೃಷ್ಟಿ ಪಡೆದಿದೆ. ಅದು ಎಲ್ಲ ಘಟಕಗಳಿಗೆ ಸರಿಸಮ ಸ್ಥಾನ ವಿತ್ತು ಗೌರವಿಸುತ್ತದೆ. 'ವಿದ್ಯಾವಿನಯಸಂಪನ್ನ ಬ್ರಾಹ್ಮಣ, ಗವಿ, ಹಸ್ತಿನಿ, ಶುನಿ, ಶ್ವಪಚ' ರಲ್ಲಿ ಒಂದೇ ಭಾವವಿಡುವದು ಸಮದರ್ಶಿತ್ವ. ಈ ಸಮದರ್ಶನದ ಸಂಕೇತವಾಗಿದೆ ದ್ವಂದ್ವ ಸಮಾಸ. ಆದ್ದರಿಂದ ಇದು ಸಮಾಸಗಳ ರಾಜ!

ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।
ಕೀರ್ತಿಃಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃಕ್ಷಮಾ ॥೩೪॥

ಭಾವ:- " ನಾನು ಸರ್ವ ಜೀವಿಗಳ ಪ್ರಾಣ ಹರಣ ಮಾಡುವ ಮೃತ್ಯು ಮತ್ತು ಮುಂದೆ ಬರಲಿರುವ ಜೀವಿಗಳ ಉದ್ಭವನು. ನಾರಿಯರಲ್ಲಿ ನಾನು ಕೀರ್ತಿ ಶ್ರೀ ವಾಕ್ ಸ್ಮೃತಿ ಮೇಧಸ್ಸು ಧೃತಿ ಮತ್ತು ಕ್ಷಮಾರೂಪನಾಗಿದ್ದೇನೆ."

ವಿವರಣೆ: (೧)ಮೃತ್ಯು:- ಧನಾಪಹಾರಿಯು ಕಳ್ಳ; ಪ್ರಾಣಾಪಹಾರಿಯು ಕೊಲೆಪಾತಕ; ಅದೇ ರೀತಿ ಜೀವಿಯ ಧನ, ದೇಹ, ಇಂದ್ರಿಯ ಎಲ್ಲವನ್ನು ಅಪ ಹರಿಸುವವ ಮೃತ್ಯು ದೇವತೆ.

(೨) ನಾರಿಯರ ಗುಣಸಂಪದ:- ಅ) ಕೀರ್ತಿ- 'ಧಾರ್ಮಿಕತ್ವ ನಿಮಿತ್ತಾ ಪ್ರಶಸ್ತತ್ವೇನ ನಾನಾ ದಿಗ್ದೇಶೀಯ ಲೋಕ ಜ್ಞಾನ ವಿಷಯತಾರೂಪಾ ಖ್ಯಾತಿಃ' ದಾನ, ಸೇವೆ ಮುಂತಾದ ಧಾರ್ಮಿಕ ಕಾರ್ಯಗಳ ಮೂಲಕ ನಾನಾ ದಿಗ್ದೇಶಗಳ ಜನತೆಗೆ ಚಿರ ಪರಿಚಿತನಾಗಿರುವದು ಕೀರ್ತಿ. (ಬ)ಶ್ರೀ- 'ಧರ್ಮಾರ್ಥಕಾಮ ಸಂಪಚ್ಛರೀರ ಶೋಭಾ ವಾ ಕಾಂತಿಃ ವಾ' ಧರ್ಮ, ಅರ್ಥ, ಕಾಮ, ಶರೀರ ಕಾಂತಿ ಈ ನಾಲ್ಕರ ಸಮೂಹ ಸಂಪತ್ತು. ಕ) ವಾಕ್- 'ಸರಸ್ವತೀ ಸರ್ವ ಸ್ಯಾರ್ಥಸ್ಯ ಪ್ರಕಾಶಿಕಾ ಸಂಸ್ಕೃತಾ ವಾಣೀ' ಸರ್ವ ಅರ್ಥಗಳನ್ನು ಪ್ರಕಾಶ ಪಡಿ ಸುವ ಸುಸಂಸ್ಕೃತವಾದ ವಾಣಿಯು. (ಡ) ಸ್ಮೃತಿ- 'ಚಿರಾನುಭೂತಾರ್ಥ ಸ್ಮರಣ

ಶಕ್ತಿಃ' ಬಹುಹಿಂದೆ ಅನುಭವಿಸಿದ ವಿಷಯುಗಳ ಸ್ಮರಣ ಶಕ್ತಿಯು. ಇ) ಮೇಧಾ– 'ಅನೇಕ ಗ್ರಂಥಾರ್ಥಧಾರಣಾಶಕ್ತಿಃ' ಅನೇಕ ಗ್ರಂಥಗಳ ಅಂತರ್ಯವನ್ನು ಗ್ರಹಿಸುವ ಶಕ್ತಿಯು. ಫ) ಧೃತಿಃ– 'ಅವಸಾದೇಽಪಿ ಶರೀರೇಂದ್ರಿಯ ಸಂಘಾತ ಉತ್ತಂಭನ ಶಕ್ತಿಃ' ಕಷ್ಟಕಾಲ ಬಂದಾಗ ಶರೀರ ಇಂದ್ರಿಯಗಳ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳುವ ಬಲ, ಗ) ಕ್ಷಮಾ– 'ಹರ್ಷವಿಷಾದಯೋರವಿಕೃತ ಚಿತ್ತತಾ' ಹರ್ಷವಿಷಾದಗಳು ಪ್ರಾಪ್ತವಾದಾಗ ಚಿತ್ತವಿಕಾರವಾಗದಿರುವದು ಕ್ಷಮಾ. ಈ ಗುಣಗಳನ್ನು ಹೊಂದಿದ ನಾರಿಯರು ಸರ್ವಶ್ರೇಷ್ಠರು.

ಬೃಹತ್ಸಾಮ ತಥಾ ಸಾಮ್ನಾಂ ಗಾಯಿತ್ರೀ ಛಂದಸಾಮಹಮ್।
ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ ॥೩೫॥

ಭಾವ:– "ನಾನು ಸಾಮಗಳಲ್ಲಿ ಬೃಹತ್ಸಾಮ. ಛಂದಸ್ಸುಗಳಲ್ಲಿ ಗಾಯತ್ರೀ. ಮಾಸಗಳಲ್ಲಿ ಮಾರ್ಗಶೀರ್ಷ, ಋತುಗಳಲ್ಲಿ ವಸಂತ."

ವಿವರಣ:–(೧) ಬೃಹತ್ಸಾಮಃ–ಸಂಗೀತಕ್ಕೆ ಯೋಗ್ಯವಾದ ವೇದಮಂತ್ರಗಳು ಸಾಮ. ರಾಜವಿದ್ಯೆಯನ್ನು ಬಿತ್ತರಿಸುವ ಸಾಮವು ಬೃಹತ್ಸಾಮ.

(೨) ಗಾಯತ್ರೀಃ– ಪದ್ಯ ಲಕ್ಷಣಗಳ ವಿಶಿಷ್ಟ ಮಾಪನವು ಛಂದಸ್ಸು. ಛಂದಸ್ಸುಗಳು ಅನೇಕ. ೨೪ ಮಾತ್ರೆಯ ಛಂದಸ್ಸಿಗೆ ಗಾಯತ್ರೀ ಎಂದು ನಾಮ. ದೇವೀ ಗಾಯತ್ರೀ, ರುದ್ರಗಾಯತ್ರೀ, ಬ್ರಹ್ಮಗಾಯತ್ರಿ– ಹೀಗೆ ಹಲವಾರು ಗಾಯತ್ರೀ ಮಂತ್ರಗಳಿವೆ. "ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್" ಇದು ಬ್ರಹ್ಮಗಾಯತ್ರಿ. ಇದೇ ರೀತಿ ಉಳಿದ ಗಾಯತ್ರಿಗಳಿವೆ. ಗಾಯತ್ರೀ ಮಂತ್ರವು ಪವಿತ್ರ; ವಿಧಿ ವಿಧಾನೋಕ್ತವಾಗಿ ಇದನ್ನು ಜಪಿಸಿದರೆ ಮುಕ್ತಿ ನಿಶ್ಚಿತ.

(೩) ಮಾರ್ಗಶೀರ್ಷ:–ಇದು ಒಂಬತ್ತನೆಯ ತಿಂಗಳು. ಮಳೆ ಸರಿದು ಸುನೀಲಾಕಾಶವು ತನ್ನ ಅಂತರಾಳವನ್ನು ತೋರಿಸುವ ಸಮಯ. ಈ ತಿಂಗಳ ನಿಸರ್ಗವು ನಯನಮನೋಹರ.

(೪) ವಸಂತ:– ~~ಆರು ತಿಂಗಳಲ್ಲಿ~~ ವಸಂತವು ಋತುರಾಜ. ಹೇಮಂತ ಶಿಶಿರಗಳಲ್ಲಿ ಚಳಿ; ವರ್ಷಾ ಶರತ್ತಿನಲ್ಲಿ ಸುರಿವ ಮಳೆ; ಗ್ರೀಷ್ಮದಲ್ಲಿ ಉರಿ ಬಿಸಿಲು. ವಸಂತ ಮಾತ್ರ ರಮಣೀಯ ಋತು. ನಿಸರ್ಗವು ಅರಳುವ ಈ ಸಮಯದಲ್ಲಿ ಭಾವುಕನು ಭಾವ ಸಮಾಧಿ ಹೊಂದಬಲ್ಲ.

ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।
ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ವಂ ಸತ್ವವತಾಮಹಮ್ ॥೩೬॥

ಭಾವ:– "ಮೋಸಗಾರರಲ್ಲಿ ನಾನು ದ್ಯೂತ. ತೇಜಸ್ವಿಗಳಲ್ಲಿ ನಾನು ತೇಜಸ್ಸು. ಜಯಶೀಲರಲ್ಲಿ ನಾನು ಜಯ. ವ್ಯವಸಾಯಿಗಳಲ್ಲಿ ನಾನು ವ್ಯವಸಾಯ. ಸಾತ್ವಿಕರಲ್ಲಿ ನಾನು ಸತ್ವ."

ವಿವರಣೆ:– (೧) ದ್ಯೂತ:– ಕಳವು ದರೋಡೆ ಮುಂತಾದ ಹೇಯ

ಕೃತ್ಯಗಳಲ್ಲಿ ತೊಡಗಿದವರು ಮೋಸಗಾರರು. ಅವರ ಕೃತ್ಯಗಳೆಲ್ಲೆಲ್ಲ ಮನ ರಂಜನೀಯ ಹಾಗು ದುಷ್ಪರಿಣಾಮಶೀಲವಾದುದು ದ್ಯೂತ. ಅದು ಪಾಂಡವರನ್ನು ಕಾಡಿಗೆ ಅಟ್ಟಿತು. ನಳ ಮಹಾರಾಜನನ್ನು ಅಡವಿ ಪಾಲು ಮಾಡಿತು. ಲೋಕದವರ ದೃಷ್ಟಿಗೆ ಅತಿ ನಿಂದ್ಯವಾದ ಈ ಜೂಜು ದೇವನ ಒಂದು ಲೀಲೆ.

(೨) ತೇಜಸ್ಸು:– ಮಹಾತ್ಮರ ದೇಹದ ಸುತ್ತೆಲ್ಲ ಒಂದು ಬಗೆಯ ರಹಸ್ಯ ಕಾಂತಿ ವ್ಯಾಪಿಸಿರುತ್ತದೆ. ಅದೇ ತೇಜಸ್ಸು. ಅದು ಸಾಮಾನ್ಯರ ಕಣ್ಣಿಗೆ ಕಾಣದು. ಶುದ್ಧಹೃದಯಿಗಳಿಗೆ ಅದು ಕಾಣುತ್ತದೆ.

(೩) ಜಯ:- ಹೇರಳ ಧನ ಸಂಪಾದಿಸಿದವ ಜಯಶೀಲ, ಯುದ್ಧದಲ್ಲಿ ಗೆದ್ದವ ಜಯಶೀಲ, ಇಂದ್ರಿಯಗಳನ್ನು ನಿರೋಧಿಸಿದವ ಜಯಶೀಲ. ಅಷ್ಟೇ ಅಲ್ಲ ಪ್ರಕೃತಿಯನ್ನು ಮೆಟ್ಟಿನಿಂತವನೂ ಜಯಶೀಲ. ಈ ಎಲ್ಲರಲ್ಲಿರುವ ಯಶವು ಜಯ.

(೪) ವ್ಯವಸಾಯ:– ಶ್ರಮ ಮಾಡಿ ಧಾನ್ಯಬೆಳೆಯುವವರು, ವ್ಯಾಪಾರೋದ್ಯಮಗಳಿಂದ ವಸ್ತುಗಳ ಉತ್ಪಾದನೆ ಮಾಡುವವರು, ಏಕಾಗ್ರತಾ ವೃತ್ತಿಯಿಂದ ಆತ್ಮವಿಜ್ಞಾನರೂಪ ಫಲ ಪಡೆಯುವರು ವ್ಯವಸಾಯಿಗಳು. ಅವರಲ್ಲಿರುವ ದುಡಿಮೆಯೇ ವ್ಯವಸಾಯ.

(೫) ಸತ್ವ:– ಧರ್ಮದರ್ಶಿಗಳು, ವಿರಾಗಿಗಳು, ಜ್ಞಾನಿಗಳು ಸತ್ವಶೀಲರಾಗಿದ್ದಾರೆ. ಅವರಲ್ಲಿರುವ ಪಾವಿತ್ರ್ಯತೆಯೇ ಸತ್ವ.

ವೃಷ್ಣೀನಾಂ ವಾಸುದೇವೋऽಸ್ಮಿ ಪಾಂಡವಾನಾಂ ಧನಂಜಯಃ ।
ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥೩೭॥

ಭಾವ:– "ಅರ್ಜುನ, ನಾನು ಯಾದವರಲ್ಲಿ ವಾಸುದೇವ, ಪಾಂಡವರಲ್ಲಿ ಧನಂಜಯ. ಮುನಿಗಳಲ್ಲಿ ವೇದವ್ಯಾಸ. ಕವಿಗಳಲ್ಲಿ ಉಶನ ಕವಿ."

ವಿವರಣ:– (೧) ವಾಸುದೇವ= ಕೃಷ್ಣ. ಧನಂಜಯ= ಅರ್ಜುನ. (೨) ಮುನಿಗಳು: 'ವೇದಾರ್ಥಮನನಶೀಲಃ ಮುನಿಃ' ವೇದೋಪದೇಶವನ್ನು ಮನನ ಮಾಡುವವರು ಮುನಿಗಳು. ವ್ಯಾಸನು ಮಹಾಮುನಿ. ಮಹಾಭಾರತ, ಹದಿನೆಂಟು ಪುರಾಣ ಹಾಗು ಬ್ರಹ್ಮಸೂತ್ರಗಳನ್ನು ವಿರಚಿಸಿದ ಅಸಾಮಾನ್ಯ ಅಧ್ಯಾತ್ಮಸಾಹಿತಿ. ಅವನು ದ್ವಾಪರ. (೩) ಉಶನ ಕವಿ: ಶುಕ್ರಾಚಾರ್ಯ. ಅವನು ಕವಿ ಪುಂಗವ. ಸಂಜೀವಿನಿ ವಿದ್ಯಾಧರ. ಸಕಲ ವೇದಶಾಸ್ತ್ರ ಸಂಪನ್ನನಾದ ಮಹಾ ಪಂಡಿತ.

ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।
ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥೩೮॥

ಭಾವ:– "ನಾನು ದಂಡನಶೀಲರ ದಂಡೋಪಾಯ. ಜಯಾಭಿಲಾಷಿಗಳಲ್ಲಿ ಸಾಮದಾನಾದಿ ನೀತಿ. ನಾನು ರಹಸ್ಯಗಳಲ್ಲಿ ಮೌನ. ಜ್ಞಾನಿಗಳಲ್ಲಿ ದಿವ್ಯ ಜ್ಞಾನ."

ವಿವರಣ:- (೧) ಉಪಾಯಗಳು: ಸಾಮ, ದಾನ, ಭೇದ, ದಂಡ ಎಂದು

ನಾಲ್ಕು. ಕ್ಷಮೆ, ಕಾರುಣ್ಯ, ಅಕ್ರೋಧ ಹಾಗು ಪ್ರೇಮಭಾವದಿಂದ ವಿರೋಧಿ ವ್ಯಕ್ತಿಯ ಮನಸ್ಸನ್ನು ಪರಿವರ್ತಿಸುವದು ಸಾಮೋಪಾಯ. ತಿಂಡಿ ತಿನಿಸುಗಳನ್ನಿತ್ತು, ಮಾನಗೌರವಗಳ ಕೊಟ್ಟು, ಆದರ ಸತ್ಕಾರಗಳ ಮಾಡಿ ಮನದ ಪರಿವರ್ತನ ಸಾಧಿಸುವದು ದಾನೋಪಾಯ. ವಿರೋಧಿಯು ನಂಬಿದ ವ್ಯಕ್ತಿ ಮತ್ತು ವಸ್ತುಗಳ ಬಗ್ಗೆ ದ್ವೇಷ ಭಾವನೆ ಹುಟ್ಟಿಸಿ ಅವುಗಳಿಂದ ಅವನನ್ನು ದೂರ ಮಾಡುವದು ಭೇದೋಪಾಯ. ದೇಹದಂಡನಾದಿ ಕಠೋರ ಉಪಾಯಗಳಿಂದ ವಿರೋಧಿಯನ್ನು ದಾರಿಗೆ ತರುವದು ದಂಡೋಪಾಯ.

(೨) ಮೌನ:– 'ಸನ್ಯಾಸ ಶ್ರವಣ ಮನನ ಪೂರ್ವಕಂ ಆತ್ಮನಃ ನಿಧಿಧ್ಯಾಸ ಲಕ್ಷಣಂ ಮೌನಂ' ರಾಗ ದ್ವೇಷಗಳನ್ನು ತ್ಯಜಿಸಿ ಆತ್ಮೋಪದೇಶ ಶ್ರವಣ ಮಾಡಿ ಮನನ (ಚಿಂತನ) ಹಾಗು ನಿದಿಧ್ಯಾಸಗಳಲ್ಲಿ ಮುಳುಗಿದಾಗ ಮಾತು ನಿಲ್ಲುವದು. ಇದೇ ಮೌನ, ಗೌಪ್ಯ ಸಂಗತಿಗಳಲ್ಲೆಲ್ಲ ಇದು ಗೌಪ್ಯ. ಈ ಮೌನವು ಆತ್ಮದರ್ಶಕವಾಗಿದೆ. ಈ ಮೌನಕ್ಕೆ ಸಹಕಾರಿಯಾದ ಶಬ್ದಮೌನವು ಕೂಡ ಶ್ರೇಷ್ಠವಾಗಿದೆ.

ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।
ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥೩೯॥

ಭಾವ:– "ಅರ್ಜುನ, ಸರ್ವ ಭೂತಗಳ ಸೃಷ್ಟಿ ಸ್ಥಿತಿ ಲಯಗಳಿಗೆ ಯಾವುದು ಕಾರಣವಾಗಿದೆಯೋ ಆ ದೇವಾತ್ಮಶಕ್ತಿಯೂ ನಾನೇ. ನಾನಿಲ್ಲದೆ ಯಾವ ಚರಾಚರ ಭೂತವೂ ಇಲ್ಲ."

ನಾಂತೋsಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ।
ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥೪೦॥

ಭಾವ:–"ಅರ್ಜುನ, ನನ್ನ ದಿವ್ಯ ವಿಭೂತಿಗಳಿಗೆ ಕೊನೆಯೇ ಇಲ್ಲ. ಆದುದರಿಂದ ಅತಿ ಸಂಕ್ಷೇಪತಃ ಹೇಳಿದೆನು."

ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋsಂಶಸಂಭವಮ್ ॥೪೧॥

ಭಾವ:– "ಯಾವ ಯಾವ ವಸ್ತುವು ವಿಭೂತಿಯುಳ್ಳುದೋ ಶ್ರೀಯುಕ್ತವೋ, ಉತ್ಸಾಹದಿಂದ ಕೂಡಿದೆಯೋ ಅದೆಲ್ಲ ನನ್ನ ಮಹಾ ಚೈತನ್ಯದ ಒಂದಂಶದಿಂದ ಉಂಟಾದುದೆಂದು ತಿಳಿ."

ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।
ವಿಷ್ಟಭ್ಯಾಹಮಿದಂ ಕೃತ್ಸ್ನ ಮೇಕಾಂಶೇನ ಸ್ಥಿತೋ ಜಗತ್ ॥೪೨॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ವಿಭೂತಿಯೋಗೋ ನಾಮ ದಶಮೋsಧ್ಯಾಯಃ.

ಭಾವ:– "ಅರ್ಜುನ, ಈ ವಿಭೂತಿಯನ್ನು ನಿನಗೆ ಹೀಗೆ ಹೆಚ್ಚು ಹೇಳಿ ಯಾವ ಪ್ರಯೋಜನ? ಈ ಬೃಹದ್ವಿಶ್ವವನ್ನೇ ನನ್ನ ಒಂದು ಅಂಶದಲ್ಲಿ ಧರಿಸಿದ್ದೇನೆಂಬುದನ್ನು ತಿಳಿದಿರು"

ವಿವರಣೆ:-"ಪಾರ್ಥ, ವಿಶ್ವದ ಕಣ ಕಣದಲ್ಲಿ ನಾನು ನೆಲೆಸಿದ್ದೇನೆ. ಮನೋಗತ ವೃತ್ತಿ ವೃತ್ತಿಗಳಲ್ಲೆಲ್ಲ ವ್ಯಾಪಿಸಿದ್ದೇನೆ. ನೀನು ಬೇಕಾದ ವಸ್ತುವನ್ನು ಕೈಯಿಂದ

ಎತ್ತಿಕೊ. ಅದು ನನ್ನ ವಿಭೂತಿ; ಅದು ಪೂಜಾಯೋಗ್ಯ. ದಾರಿಯಲ್ಲಿ ಹೋಗುವ ಯಾವ ವ್ಯಕ್ತಿಯನ್ನಾದರು ಮಾತನಾಡಿಸು, ಆತನಲ್ಲಿ ಕುಳಿತು ನಾನೇ ಉತ್ತರಿಸುತ್ತೇನೆ. ಹೀಗಿರುವಾಗ, ಇದು ಶಿವಲಿಂಗ ಇದು ಸಾಲಿಗ್ರಾಮ ಇದು ಮೂರ್ತಿ ಇದನ್ನೇ ಉಪಾಸಿಸು ಎಂದು ಹೇಗೆ ಹೇಳಲಿ? ಧನಂಜಯ, ನೀನು ಕಾಣುವದೆಲ್ಲ ನಾನೇ, ಭಾವಿಸುದೆಲ್ಲ ನಾನೇ. ಪಾಪಿ ಪುಣ್ಯವಂತ, ದುಷ್ಕೃತಿ ಸುಕೃತಿ, ಅಜ್ಞಾನಿ ಜ್ಞಾನಿ, ಕಳ್ಳ ಸತ್ಯಸಂಧ, ನಿಂದಕ ವಂದಕ, ನಾಸ್ತಿಕ ಆಸ್ತಿಕ– ಈ ಬಗೆಯ ಭೇದ ಮಾಡದಿರು. ಎಲ್ಲರಿಗೂ ವಂದಿಸು. ಎಲ್ಲರನ್ನು ಕೊಂಡಾಡು. ಅದೇ ವಿಶ್ವಧರ್ಮ. ಅದೇ ವಿಶ್ವತೋಮುಖ ದರ್ಶನ!

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಹತ್ತನೆಯ ಬಿಂದುವು.

* † *

# ಹನ್ನೊಂದನೆಯ ಅಧ್ಯಾಯ

## ವಿಶ್ವರೂಪ ದರ್ಶನಯೋಗ

### ಅರ್ಜುನ ಉವಾಚ

ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮ ಸಂಜ್ಞಿತಮ್ ।
ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥೧॥

ಭಾವ:– ಅರ್ಜುನ:– ನನ್ನ ಮೇಲಿನ ಅನುಗ್ರಹಕ್ಕಾಗಿ ಪರಮಗುಹ್ಯವೂ ಅಧ್ಯಾತ್ಮ ಸಂಜ್ಞಿತವೂ ಆದ ಯಾವ ಉಪದೇಶವು (ಯದ್ವಚಃ) ನಿನ್ನಿಂದ ಹೇಳಲ್ಪಟ್ಟಿತೋ ಅದರಿಂದ ನನ್ನ ಈ ಸಾಂಸಾರಿಕ ವ್ಯಾಮೋಹವು ನಾಶವಾಯಿತು."

ವಿವರಣ:– ರಣಾಂಗಣದ ಮಧ್ಯ ನಿಂತಾಗ ಅರ್ಜುನನಲ್ಲಿ ಸ್ವಜನ ವ್ಯಾಮೋಹ ಉದಿಸಿತು. ತನ್ನ ಕರ್ತವ್ಯ ಬಿಟ್ಟು ತಲೆಗೆ ಕೈಹಚ್ಚಿ ಕುಳಿತ. ಯುದ್ಧದಲ್ಲಿ ತನ್ನ ಜನ ಸಾಯುವರಲ್ಲ ಎಂದು ಮರುಗಿದ. ಕಣ್ಣೀರು ಸುರಿಸಿದ. ಅವನ ವ್ಯಾಮೋಹವ ನಾಶಮಾಡಿ ದುಃಖದ ಕಣ್ಣೀರನೊರಿಸಲೆಂದೇ ಕರುಣಾಮಯಿ ಭಗವಂತನು ಬಹು ದೀರ್ಘವಾದ ಆತ್ಮಬೋಧೆಗೆ ಕೈಹಾಕಿದ. ಆತ್ಮ ಅನಾತ್ಮಗಳನ್ನು ಪೃಥಃಕರಿಸಿದ. ಜೀವಭಾವವ ತೊಡೆದು ಹಾಕುವ ಮಾರ್ಗವನ್ನು ತಿಳಿಸಿದ. ಸಮಾಧಿಗಳ ಸುಂದರ ಬಣ್ಣನೆ ಮಾಡಿದ. ಜೀವನ್ಮುಕ್ತನಾಗಿ ಇರುವ ಹಿರಿಮೆಯನ್ನು ಮನಂಬುಗುವಂತೆ ಚಿತ್ರಿಸಿದ. ಕಡೆಯಲ್ಲಿ ತನ್ನ ವಿಭೂತಿ ವೈಭವವನ್ನು ಸಾರವತ್ತಾಗಿ ನಿರೂಪಿಸಿದ. ಇಲ್ಲಿಗೆ ಹತ್ತು ಅಧ್ಯಾಯ ಕೊನೆಗೊಂಡವು. ಈ ಸುದೀರ್ಘ ಉಪದೇಶದ ಪರಿಣಾಮವೇನಾಯ್ತು? ಅದರ ಬಗ್ಗೆ ಪ್ರಸ್ತುತ ಮಂತ್ರವು ಹೇಳಿದೆ.

ಅರ್ಜುನ:– "ಜನಾರ್ದನ, ಯುದ್ಧದ ಘೋರ ಪರಿಣಾಮಗಳ ನೆನೆದು ಶೋಕ ಸಂತಪ್ತನಾದೆ; ನಿನ್ನ ಪಾದದ ಎಡೆಯಲ್ಲಿ ಕುಸಿದು ಕುಳಿತೆ. ನೀನು ಶಾಪ ಅಥವಾ ಶರದ ಭಯ ತೋರಿಸಿ ನನ್ನನ್ನು ಯುದ್ಧಕ್ಕೆ ಅಣಿಗೊಳಿಸಬಹುದಿತ್ತು. ಆದರೆ ನೀನು ಅತ್ಯಂತ ಬುದ್ಧಿಮಂತ; ಶಾಪ, ಶರ ಉಪಾಯಗಳು ಅಸುಸ್ಕೃತ

ನಾಲ್ಕು. ಕ್ಷಮೆ, ಕಾರುಣ್ಯ, ಅಕ್ರೋಧ ಹಾಗು ಪ್ರೇಮಭಾವದಿಂದ ವಿರೋಧಿ ವ್ಯಕ್ತಿಯ ಮನಸ್ಸನ್ನು ಪರಿವರ್ತಿಸುವದು ಸಾಮೋಪಾಯ. ತಿಂಡಿ ತಿನಿಸುಗಳನ್ನಿತ್ತು, ಮಾನಗೌರವಗಳ ಕೊಟ್ಟು, ಆದರ ಸತ್ಕಾರಗಳ ಮಾಡಿ ಮನದ ಪರಿವರ್ತನ ಸಾಧಿಸುವದು ದಾನೋಪಾಯ. ವಿರೋಧಿಯು ನಂಬಿದ ವ್ಯಕ್ತಿ ಮತ್ತು ವಸ್ತುಗಳ ಬಗ್ಗೆ ದ್ವೇಷ ಭಾವನೆ ಹುಟ್ಟಿಸಿ ಅವುಗಳಿಂದ ಅವನನ್ನು ದೂರ ಮಾಡುವದು ಭೇದೋಪಾಯ. ದೇಹದಂಡನಾದಿ ಕಠೋರ ಉಪಾಯಗಳಿಂದ ವಿರೋಧಿಯನ್ನು ದಾರಿಗೆ ತರುವದು ದಂಡೋಪಾಯ.

(೨) ಮೌನ:– 'ಸನ್ಯಾಸ ಶ್ರವಣ ಮನನ ಪೂರ್ವಕಂ ಆತ್ಮನಃ ನಿಧಿಧ್ಯಾಸ ಲಕ್ಷಣಂ ಮೌನಂ' ರಾಗ ದ್ವೇಷಗಳನ್ನು ತ್ಯಜಿಸಿ ಆತ್ಮೋಪದೇಶ ಶ್ರವಣ ಮಾಡಿ ಮನನ (ಚಿಂತನ) ಹಾಗು ನಿದಿಧ್ಯಾಸಗಳಲ್ಲಿ ಮುಳುಗಿದಾಗ ಮಾತು ನಿಲ್ಲುವದು. ಇದೇ ಮೌನ, ಗೌಪ್ಯ ಸಂಗತಿಗಳಲ್ಲೆಲ್ಲ ಇದು ಗೌಪ್ಯ. ಈ ಮೌನವು ಆತ್ಮದರ್ಶಕವಾಗಿದೆ. ಈ ಮೌನಕ್ಕೆ ಸಹಕಾರಿಯಾದ ಶಬ್ದಮೌನವು ಕೂಡ ಶ್ರೇಷ್ಠವಾಗಿದೆ.

ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।
ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥೩೯॥

ಭಾವ:– "ಅರ್ಜುನ, ಸರ್ವ ಭೂತಗಳ ಸೃಷ್ಟಿ ಸ್ಥಿತಿ ಲಯಗಳಿಗೆ ಯಾವುದು ಕಾರಣವಾಗಿದೆಯೋ ಆ ದೇವಾತ್ಮಶಕ್ತಿಯೂ ನಾನೇ. ನಾನಿಲ್ಲದೆ ಯಾವ ಚರಾಚರ ಭೂತವೂ ಇಲ್ಲ."

ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ।
ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥೪೦॥

ಭಾವ:–"ಅರ್ಜುನ, ನನ್ನ ದಿವ್ಯ ವಿಭೂತಿಗಳಿಗೆ ಕೊನೆಯೇ ಇಲ್ಲ. ಆದುದರಿಂದ ಅತಿ ಸಂಕ್ಷೇಪತಃ ಹೇಳಿದೆನು."

ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥೪೧॥

ಭಾವ:– "ಯಾವ ಯಾವ ವಸ್ತುವು ವಿಭೂತಿಯುಳ್ಳುದೋ ಶ್ರೀಯುಕ್ತವೋ, ಉತ್ಸಾಹದಿಂದ ಕೂಡಿದೆಯೋ ಅದೆಲ್ಲ ನನ್ನ ಮಹಾ ಚೈತನ್ಯದ ಒಂದಂಶದಿಂದ ಉಂಟಾದುದೆಂದು ತಿಳಿ."

ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥೪೨॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ವಿಭೂತಿಯೋಗೋ ನಾಮ ದಶಮೋಽಧ್ಯಾಯಃ.

ಭಾವ:– "ಅರ್ಜುನ, ಈ ವಿಭೂತಿಯನ್ನು ನಿನಗೆ ಹೀಗೆ ಹೆಚ್ಚು ಹೇಳಿ ಯಾವ ಪ್ರಯೋಜನ? ಈ ಬೃಹದ್ವಿಶ್ವವನ್ನೇ ನನ್ನ ಒಂದು ಅಂಶದಲ್ಲಿ ಧರಿಸಿದ್ದೇನೆಂಬುದನ್ನು ತಿಳಿದಿರು"

ವಿವರಣೆ:-"ಪಾರ್ಥ, ವಿಶ್ವದ ಕಣ ಕಣದಲ್ಲಿ ನಾನು ನೆಲೆಸಿದ್ದೇನೆ. ಮನೋಗತ ವೃತ್ತಿ ವೃತ್ತಿಗಳಲ್ಲೆಲ್ಲ ವ್ಯಾಪಿಸಿದ್ದೇನೆ. ನೀನು ಬೇಕಾದ ವಸ್ತುವನ್ನು ಕೈಯಿಂದ

ಎತ್ತಿಕೊ. ಅದು ನನ್ನ ವಿಭೂತಿ; ಅದು ಪೂಜಾಯೋಗ್ಯ. ದಾರಿಯಲ್ಲಿ ಹೋಗುವ ಯಾವ ವ್ಯಕ್ತಿಯನ್ನಾದರು ಮಾತನಾಡಿಸು, ಆತನಲ್ಲಿ ಕುಳಿತು ನಾನೇ ಉತ್ತರಿಸುತ್ತೇನೆ. ಹೀಗಿರುವಾಗ, ಇದು ಶಿವಲಿಂಗ ಇದು ಸಾಲಿಗ್ರಾಮ ಇದು ಮೂರ್ತಿ ಇವನ್ನೇ ಉಪಾಸಿಸು ಎಂದು ಹೇಗೆ ಹೇಳಲಿ? ಧನಂಜಯ, ನೀನು ಕಾಣುವದೆಲ್ಲ ನಾನೇ, ಭಾವಿಸುದೆಲ್ಲ ನಾನೇ. ಪಾಪಿ ಪುಣ್ಯವಂತ, ದುಷ್ಕೃತಿ ಸುಕೃತಿ, ಅಜ್ಞಾನಿ ಜ್ಞಾನಿ, ಕಳ್ಳ ಸತ್ಯಸಂದ, ನಿಂದಕ ವಂದಕ, ನಾಸ್ತಿಕ ಆಸ್ತಿಕ– ಈ ಬಗೆಯ ಭೇದ ಮಾಡದಿರು. ಎಲ್ಲರಿಗೂ ವಂದಿಸು. ಎಲ್ಲರನ್ನು ಕೊಂಡಾಡು. ಅದೇ ವಿಶ್ವಧರ್ಮ. ಅದೇ ವಿಶ್ವತೋಮುಖ ದರ್ಶನ!

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಹತ್ತನೆಯ ಬಿಂದುವು.

* † *

# ಹನ್ನೊಂದನೆಯ ಅಧ್ಯಾಯ

## ವಿಶ್ವರೂಪ ದರ್ಶನಯೋಗ

### ಅರ್ಜುನ ಉವಾಚ

ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮ ಸಂಜ್ಞಿತಮ್ ।
ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥೧॥

ಭಾವ:– ಅರ್ಜುನ:– ನನ್ನ ಮೇಲಿನ ಅನುಗ್ರಹಕ್ಕಾಗಿ ಪರಮಗುಹ್ಯವೂ ಅಧ್ಯಾತ್ಮ ಸಂಜ್ಞಿತವೂ ಆದ ಯಾವ ಉಪದೇಶವು (ಯದ್ವಚಃ) ನಿನ್ನಿಂದ ಹೇಳಲ್ಪಟ್ಟಿತೋ ಅದರಿಂದ ನನ್ನ ಈ ಸಾಂಸಾರಿಕ ವ್ಯಾಮೋಹವು ನಾಶವಾಯಿತು."

ವಿವರಣ:– ರಣಾಂಗಣದ ಮಧ್ಯ ನಿಂತಾಗ ಅರ್ಜುನನಲ್ಲಿ ಸ್ವಜನ ವ್ಯಾಮೋಹ ಉದಿಸಿತು. ತನ್ನ ಕರ್ತವ್ಯ ಬಿಟ್ಟು ತಲೆಗೆ ಕೈಹಚ್ಚಿ ಕುಳಿತ. ಯುದ್ಧದಲ್ಲಿ ತನ್ನ ಜನ ಸಾಯುವರಲ್ಲ ಎಂದು ಮರುಗಿದ. ಕಣ್ಣೀರು ಸುರಿಸಿದ. ಅವನ ವ್ಯಾಮೋಹದ ನಾಶಮಾಡಿ ದುಃಖದ ಕಣ್ಣೀರನೊರಿಸಲೆಂದೇ ಕರುಣಾಮಯಿ ಭಗವಂತನು ಬಹು ದೀರ್ಘವಾದ ಆತ್ಮಬೋಧೆಗೆ ಕೈಹಾಕಿದ. ಆತ್ಮ ಅನಾತ್ಮಗಳನ್ನು ಪೃಥಃಕರಿಸಿದ. ಜೀವಭಾವದ ತೊಡೆದು ಹಾಕುವ ಮಾರ್ಗವನ್ನು ತಿಳಿಸಿದ. ಸಮಾಧಿಗಳ ಸುಂದರ ಬಣ್ಣನೆ ಮಾಡಿದ. ಜೀವನ್ಮುಕ್ತನಾಗಿ ಇರುವ ಹಿರಿಮೆಯನ್ನು ಮನಂಬುಗುವಂತೆ ಚಿತ್ರಿಸಿದ. ಕಡೆಯಲ್ಲಿ ತನ್ನ ವಿಭೂತಿ ವೈಭವವನ್ನು ಸಾರವತ್ತಾಗಿ ನಿರೂಪಿಸಿದ. ಇಲ್ಲಿಗೆ ಹತ್ತು ಅಧ್ಯಾಯ ಕೊನೆಗೊಂಡವು. ಈ ಸುದೀರ್ಘ ಉಪದೇಶದ ಪರಿಣಾಮವೇನಾಯ್ತು? ಅದರ ಬಗ್ಗೆ ಪ್ರಸ್ತುತ ಮಂತ್ರವು ಹೇಳಿದೆ.

ಅರ್ಜುನ:– "ಜನಾರ್ದನ, ಯುದ್ಧದ ಘೋರ ಪರಿಣಾಮಗಳ ನೆನೆದು ಶೋಕ ಸಂತಪ್ತನಾದೆ; ನಿನ್ನ ಪಾದದ ಎಡೆಯಲ್ಲಿ ಕುಸಿದು ಕುಳಿತೆ. ನೀನು ಶಾಪ ಅಥವಾ ಶರದ ಭಯ ತೋರಿಸಿ ನನ್ನನ್ನು ಯುದ್ಧಕ್ಕೆ ಅಣಿಗೊಳಿಸಬಹುದಿತ್ತು. ಆದರೆ ನೀನು ಅತ್ಯಂತ ಬುದ್ಧಿವಂತ; ಶಾಪ, ಶರ ಉಪಾಯಗಳು ಅಸುಸ್ಕೃತ

ಮತ್ತು ತಾತ್ಪೂರ್ತಿಕ ಎಂಬುದು ನಿನಗೆ ಗೊತ್ತು; ಎಂತಲೇ ಅವೆರಡನ್ನು ಬಿಟ್ಟು ರಹಸ್ಯ-ತತ್ತ್ವೋಪದೇಶಕ್ಕೆ ತೊಡಗಿದೆ. ನನ್ನನ್ನು ಸಮೂಲಾಗ್ರವಾಗಿ ಪರಿವರ್ತನಗೊಳಿಸಬೇಕೆಂಬ ನಿನ್ನ ಅನುಗ್ರಹಕ್ಕಾಗಿ ನಾನು ಕೃತಜ್ಞನಾಗಿದ್ದೇನೆ. ನೀನು ಹೃದಯ ತುಂಬಿ ಅಧ್ಯಾತ್ಮ ವಿದ್ಯೆಯನ್ನು ತಂತೋತಂತವಾಗಿ ವಿಶ್ಲೇಷಿಸಿದಿ. 'ಅಶೋಚ್ಯಾನ್' ಎಂಬುದರಿಂದ ಪ್ರಾರಂಭವಾದ ನಿನ್ನ ಅಮರ ನುಡಿಗಳನ್ನು ಬಹು ಏಕಾಗ್ರತೆಯಿಂದ ಆಲಿಸಿದ್ದೇನೆ. ನಿನ್ನ ವಚನ–ವಿಮಾನವೇರಿ ಆ ಪರಬ್ರಹ್ಮನವರೆಗೂ ಸಂಚರಿಸಿದೆ. ದೇವ, ನನ್ನ ಮೋಹವೀಗ ಅಶೇಷವಾಗಿದೆ. ಶೋಕ ನಿಂತಿವೆ. ನಿನ್ನ ಕೃಪೆಯಿಂದ ನಾನು ಪುನೀತನಾಗಿದ್ದೇನೆ. "

ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।
ತ್ವತ್ತಃ ಕಮಲಪತ್ರಾಕ್ಷ ಮಹಾತ್ಮ್ಯಮಪಿ ಚಾವ್ಯಯಮ್ ॥೨॥

ಭಾವ:– ಕಮಲದಳನಯನ, ಭೂತಗಳ ಉತ್ಪತ್ತಿ ಲಯಗಳು ನನ್ನಿಂದ ವಿಸ್ತಾರವಾಗಿ ಕೇಳಲ್ಪಟ್ಟವು. ನಿನ್ನ ಅವ್ಯಯವಾದ ಮಹಾತ್ಮೆಯು ಕೂಡ ಶ್ರುತವಾಯ್ತು.

ವಿವರಣ:- ಅರ್ಜುನ:- "ದೇವ, ನಿನ್ನ ವಚನಗಳನ್ನೆಂತು ಮರೆಯಲಿ? ನೀನು ಸಂಪೂರ್ಣ ಜಗತ್ತಿನ ಉತ್ಪತ್ತಿ ಸ್ಥಿತಿ ಹಾಗು ಲಯಸ್ಥಾನ (೭-೬). ನೀನು ವಿಶ್ವರೂಪದಲ್ಲಿ ವ್ಯಕ್ತನಾದರೂ ಅವ್ಯಕ್ತ (೭-೨೮). ನಿನ್ನಿಂದ ಸರ್ವವೂ ವ್ಯಾಪಿಸಿದೆ (೯-೪). ಆದರೆ ವಿಶ್ವದ ಕರ್ಮಗಳು ನಿನಗೆ ಅಂಟಲಾರವು; ಏಕೆಂದರೆ ನೀನು ಕೇವಲ ಸಾಕ್ಷಿ. ನಿನ್ನ ಆಶ್ರಯದಲ್ಲಿ ಯೋಗಮಾಯೆಯು ಎಲ್ಲವನ್ನು ಮಾಡುತ್ತಿದೆ. ನೀನು ಮಾತ್ರ ಸರ್ವ ಜಡಾಜಡ ಪದಾರ್ಥಗಳಲ್ಲಿ ಸಮರೂಪ, ಅಸಂಗ, ಅವಿಕಾರಿ. ನೀನು ಅವ್ಯಯ, ಅವೇದ್ಯ ಹಾಗು ಅನಂತ. ಪ್ರಭುವೆ, ಇದು ನಿನ್ನ ಮಹಾತ್ಮೆ. ವಿಶ್ವವೆಲ್ಲ ನಿನ್ನ ಪಾವನ ಲೀಲೆ. "

ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥೩॥

ಭಾವ:– ಅರ್ಜುನ:- ಭಗವಂತನೆ, ನಿನ್ನ ಮಾತು ಶತಶಃ ಸತ್ಯ. ವಿಶ್ವದಾದ್ಯಂತ ಹರಡಿದ ಏನೆಲ್ಲವೂ ನೀನೇ ಎಂಬ ವಿಷಯದಲ್ಲಿ ನನಗೆ ಸಂದೇಹ ಉಳಿದಿಲ್ಲ. ಆದರೂ ಒಂದು ಇಚ್ಛೆ ನನಗಿದೆ. ಜ್ಞಾನ ಐಶ್ವರ್ಯ ಶಕ್ತಿ ಬಲ ವೀರ್ಯ ಹಾಗು ತೇಜಸ್ ಎಂಬ ಷಡ್ವಿಧ ಐಶ್ವರ್ಯದಿಂದ ಕೂಡಿದ ನಿನ್ನನ್ನು ಕಣ್ಣಾರೆ ಕಾಣುವ ಆಶೆ ನನ್ನದು. ದೇವಾ, ನಿನ್ನ ವಿಶ್ವರೂಪವನ್ನು ಕರುಣಿಸು. "

ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।
ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥೪॥

ಭಾವ:- "ದಾಮೋದರ, ನಿನ್ನ ಸಮಗ್ರ ವಿಸ್ತಾರದ ದರ್ಶನದ ಯೋಗ್ಯತೆ ನನ್ನಲ್ಲಿದೆಯೆಂದು ತಿಳಿಯುವಿಯಲ್ಲವೆ? ನಾನು ಸಾಮಾನ್ಯ ವ್ಯಕ್ತಿ. ಆ ಯೋಗ್ಯತೆ ನನಗೆಲ್ಲಿ ಬಂದೀತು? ನೀನೇ ಅಂಥ ಶಕ್ತಿಯನ್ನು ಕರುಣಿಸು. ನಾನು ನಿನಗೆ

ಎಂದೋ ಶರಣು ಬಂದಿದ್ದೇನೆ. ಮುಕ್ತ ಹೃದಯದಿಂದ ನಿನ್ನನ್ನು ಗಾಢವಾಗಿ ಪ್ರೀತಿಸಿದ್ದೇನೆ. ನನಗೆ ಅಂತಶ್ಚಕ್ಷುವನ್ನಿತ್ತು ನಿನ್ನ ಮಹಾನ್ ರೂಪವನ್ನು ತೋರಿಸು."

**ಸಂಬಂಧ:**-ಅರ್ಜುನನ ಸವಿನಯ ಪ್ರಾರ್ಥನೆಯನ್ನು ಕೇಳಿದ ಭಗವಂತನಲ್ಲಿ ವಿರಾಟ ದರ್ಶನವೀಯಬೇಕೆಂಬ ಇಚ್ಛೆ ಉದಿಸಿತು. ಅರ್ಜುನನ ಮನಸ್ಸನ್ನು ತನ್ನತ್ತ ಎಳೆದುಕೊಳ್ಳುವ ಉದ್ದೇಶದಿಂದ ಭಗವಂತನು ಮುಂದಿನ ನಾಲ್ಕು ಮಂತ್ರಗಳಲ್ಲಿ ತಾನು ತೋರಿಸಲಿರುವ ವಿಶ್ವರೂಪದ ಬಗ್ಗೆ ವರ್ಣಿಸುವನು.

**ಶ್ರೀ ಭಗವಾನುವಾಚ**

ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥೫॥

**ಭಾವ:**- ಭಗವಂತ:- "ಅರ್ಜುನ, ನೀನು ನನ್ನವ, ನನ್ನಭಕ್ತ, ನಿನಗಾಗಿ ನನ್ನ ವಿರಾಟರೂಪವನ್ನು ತೋರಿಸುವೆ. ನನ್ನ ರೂಪುಗಳು ಒಂದೆರಡಲ್ಲ, ಅಸಂಖ್ಯಾತ. ಅವುಗಳ ಆಕಾರ, ರಚನೆ, ಕಾರ್ಯ, ಗುಣ, ವರ್ಣ ಎಲ್ಲವೂ ಭಿನ್ನ ಭಿನ್ನ. ಅವುಗಳನ್ನು ನೋಡಲು ಸಿದ್ಧನಾಗು."

ಪಶ್ಯಾದಿತ್ಯಾನ್ವಸೂನ್ರುದ್ರಾನಶ್ವಿನೌ ಮರುತಸ್ತಥಾ ।
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥೬॥

**ಭಾವ:**- "ಭಾರತ, ಆದಿತ್ಯ ವಸು ರುದ್ರ ಅಶ್ವಿನಿದೇವತೆ ಮರುದ್ಗಣ ಮತ್ತು ಹಿಂದೆಂದೂ ನೋಡದಿರುವ ಅನೇಕ ಅಚ್ಚರಿಗಳನ್ನು ನೋಡು."

ಇಹೈಕಸ್ಥಂ ಜಗತ್ ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।
ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥೭॥

**ಭಾವ:**- "ಗುಡಾಕೇಶ, ನನ್ನ ದೇಹದ ಒಂದು ಅಂಶದಲ್ಲಿ ಚರಾಚರ ಜಗತ್ತು ನೆಲೆಸಿರುವದನ್ನು ಈಗ ಕಾಣುವಿ. ನಿನಗೇನು ನೋಡಬೇಕೆನಿಸಿದೆಯೋ ಅದನ್ನೆಲ್ಲ ಈಕ್ಷಿಸು."

ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥೮॥

**ಭಾವ:**-"ಆದರೆ, ಕೌಂತೇಯ, ಈ ನಿನ್ನ ಬಾಹ್ಯ ಚಕ್ಷುವಿನಿಂದ ನನ್ನ ವಿಶ್ವರೂಪವನ್ನು ನೋಡಲಾರೆ. ಇದೊ, ನಿನಗೆ ದಿವ್ಯ ಚಕ್ಷುವನ್ನು ನೀಡುವೆ. ನನ್ನ ಯೋಗಮಾಯಾಸಂಘಟಿತವಾದ ಸೃಷ್ಟಿಯ ರಚನಾ ವಿಸ್ತಾರವನ್ನು ಮತ್ತು ಸೃಷ್ಟಿ ರಮಣೀಯತೆಯನ್ನು ಆ ಚಕ್ಷುವಿನಿಂದ ಅವಲೋಕಿಸು."

**ಸಂಜಯ ಉವಾಚ**

ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ।
ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥೯॥

ಭಾವ:– ಸಂಜಯ:– "ಧೃತರಾಷ್ಟ್ರ ಮಹಾರಾಜನೆ, ಮಹಾಯೋಗೀಶ್ವರನಾದ ಹರಿಯು ಅರ್ಜುನನಿಗೆ ಹೀಗೆ ಹೇಳಿ, ಅನಂತರ ದಿವ್ಯ ದೃಷ್ಟಿ ಕೊಟ್ಟು ತನ್ನ ದೈವೀ ವಿಶ್ವರೂಪವನ್ನು ತೋರಿಸಿದನು."

ಸಂಬಂಧ:- ಪ್ರಣ್ಯಾತ್ಮನಾದ ಸಂಜಯನು ತಾನು ಕಂಡಂತೆಯೇ ವಿಶ್ವರೂಪವನ್ನು ಚಿತ್ರಿಸುತ್ತಾನೆ.

ಅನೇಕ ವಕ್ತ್ರನಯನಮನೇಕಾದ್ಭುತ ದರ್ಶನಮ್।
ಅನೇಕ ದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥೧೦॥

ಭಾವ:– "ರಾಜನೆ, ನಾನು ಈ ಕ್ಷಣ ನೋಡುತ್ತಿರುವ ಹರಿಯ ರೂಪವನ್ನು ಏನೆಂದು ವರ್ಣಿಸಲಿ? ಭೂಮ್ಯಾಕಾಶವನ್ನೇ ವ್ಯಾಪಿಸಿ ನಿಂದ ಅವನಿಗೆ ಅಸಂಖ ಮುಖಗಳು, ಅಗಣಿತ ನೇತ್ರಗಳು! ಅನೇಕ ಅದ್ಭುತ ದೃಶ್ಯಗಳು ಅವನಲ್ಲಿ ತೋರುತ್ತಿವೆ. ಅವನ ಮೂರ್ತಿ ದಿವ್ಯಾಭರಣಾಲಂಕೃತ. ಎತ್ತಿ ಹಿಡಿದ ದಿವ್ಯ ಆಯುಧಗಳಿಂದ ಅವನು ಶೋಭಿಸುತ್ತಿದ್ದಾನೆ. ಅಂಥ ಅವನನ್ನು ಅರ್ಜುನನು ನೋಡಿದ."

ದಿವ್ಯ ಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।
ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್ ॥೧೧॥

ಭಾವ:– "ಅವನು(ದೇವನು) ದಿವ್ಯ ಮಾಲೆಗಳನ್ನು ವಸ್ತ್ರಗಳನ್ನು ಧರಿಸಿದ್ದಾನೆ. ಅವನ ದೇಹ ದಿವ್ಯಗಂಧ ಲಿಪ್ತವಾಗಿದೆ. ಅವನು ಸರ್ವಾಶ್ಚರ್ಯಮಯ ಅನಂತ ಹಾಗು ವಿಶ್ವತೋಮುಖ."

ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯಮಹಾತ್ಮನಃ ॥೧೨॥

ಭಾವ:–"ಕೌರವೇಂದ್ರ, ಸಹಸ್ರ ಸೂರ್ಯರ ಪ್ರಭೆಯು ಒಮ್ಮೆಲೆ ಆಕಾಶದಲ್ಲಿ ಉಂಟಾದರೆ ಅದು ಆ ಭಗವಂತನ ಪ್ರಭೆಗೆ ಸದೃಶವಾದೀತು."

ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।
ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥೧೩॥

ಭಾವ:– "ಮಹಾರಾಜ, ಅನೇಕ-ಪ್ರಕಾರವಾಗಿ ಅಂದರೆ ದೇವತೆಗಳು ಪಿತೃಗಳು ಮನುಷ್ಯರು ಮುಂತಾದ ರೂಪದಿಂದ ವಿಭಾಗವಾಗಿರುವ ಜಗತ್ತೆಲ್ಲವೂ ದೇವನ ಆ ದಿವ್ಯ ದೇಹದ ಒಂದು ಭಾಗದಲ್ಲಿ ಇರುವದನ್ನು ಅರ್ಜುನನು ನೋಡಿದ."

ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।
ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥೧೪॥

ಭಾವ:– "ಅನಂತರ ಆಶ್ಚರ್ಯಭರಿತನಾದ ಹಾಗು ಹರ್ಷದಿಂದ ರೋಮಾಂಚನಗೊಂಡ ಅರ್ಜುನನು ಶ್ರೀಕೃಷ್ಣ ಭಗವಂತನಿಗೆ ತಲೆಬಾಗಿ ವಂದಿಸಿ

ಕೈಮುಗಿದು ಹೀಗೆ ನುಡಿದನು."

ಅರ್ಜುನ ಉವಾಚ

ಪಶ್ಯಾಮಿ ದೇವಾಂಸ್ತವ ದೇವ ದೇಹೇ
ಸರ್ವಾಂಸ್ತಥಾ ಭೂತವಿಶೇಷ ಸಂಘಾನ್ ॥
ಬ್ರಹ್ಮಾಣಮೀಶಂ ಕಮಲಾಸನಸ್ಥ–
ಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥೧೫॥

ಭಾವ:– ಅರ್ಜುನ:– "ದೇವ, ನಿನ್ನ ಮಂಗಲ ದೇಹದಲ್ಲಿ ಆದಿತ್ಯಾದಿ ದೇವತೆಗಳನ್ನು, ಉದ್ಭಿಜಾದಿ ಪ್ರಾಣಿ ಸಮುದಾಯಗಳನ್ನು, ಕಮಲಾಸನದ ಮೇಲೆ ಕುಳಿತು ಜಗತ್ತನ್ನೇ ಆಳುವ ಚತುರ್ಮುಖ ಬ್ರಹ್ಮನನ್ನು, ವಸಿಷ್ಠಾದಿ ಸರ್ವ ಋಷಿಗಳನ್ನು, ವಾಸುಕಿ ಮುಂತಾದ ಸರ್ಪಗಳನ್ನು ನೋಡುತ್ತಿದ್ದೇನೆ.

ಅನೇಕ ಬಾಹೂದರವಕ್ತ್ರ ನೇತ್ರಂ
ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ॥
ನಾಂತಂ ನ ಮಧ್ಯಂ ನ ಪುನಸ್ತವಾದಿಂ
ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥೧೬॥

ಭಾವ:- ವಿಶ್ವೇಶ್ವರ, ಅನೇಕ ಬಾಹು ಉದರ ಮುಖ ನೇತ್ರಗಳುಳ್ಳ, ಹಾಗು ಅನಂತರೂಪನಾದ ನಿನ್ನನ್ನು ಎಲ್ಲೆಲ್ಲಿಯೂ ನೋಡುತ್ತಿದ್ದೇನೆ. ವಿಶ್ವರೂಪನೆ, ನೀನು ಸರ್ವವ್ಯಾಪಿ. ನಿನ್ನ ಆದಿ ಮಧ್ಯ ಅಂತಗಳನ್ನು ನಾನಂತು ಕಾಣಲಾರೆ.

ಕಿರೀಟಿನಂ ಗದಿನಂ ಚಕ್ರಿಣಂ ಚ
ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ ॥
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾ
ದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥೧೭॥

ಭಾವ:– "ಕಿರೀಟ ಗದೆ ಚಕ್ರ ಧರಿಸಿದ, ತೇಜೋರಾಶಿಯಾದ, ಸರ್ವತ್ರ ಪ್ರಕಾಶ ಬೀರುವ ನಿನ್ನ ಅಪರಿಮಿತ ರೂಪವನ್ನು ಸಮಗ್ರವಾಗಿ ನೋಡುವದು ನನಗೆ ಸಾಧ್ಯವಿಲ್ಲ. ನೀನು ಪ್ರಜ್ವಲಿಸುವ ಅಗ್ನಿ, ಸೂರ್ಯರಂತೆ ಪ್ರಭಾಪುಂಜ. ಅಪ್ರಮೇಯ. ಇಂಥ ನಿನ್ನನ್ನು ನೋಡುತ್ತಿದ್ದೇನೆ.

ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ॥
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋ ಮತೋ ಮೇ ॥೧೮॥

ಭಾವ:– "ಕೇವಲ ಜೀವನ್ಮುಕ್ತರಿಗೆ ಕಾಣುವ ಅವಿನಾಶಿ ಪರಬ್ರಹ್ಮ ನೀನು. ಮುಮುಕ್ಷು ಅಭ್ಯಾಸಿ ಅನುಭವಿಗಳಿಂದ ತಿಳಿಯಲು ಯೋಗ್ಯನಾದ ಸಲ್ಲಕ್ಷಣಾತ್ಮ ಪ್ರಭು ನೀನು. ನೀನು ವಿಶ್ವದ ಸರ್ವೋತ್ತಮ ಆಧಾರ, ಅವ್ಯಯ,

ಶಾಶ್ವತ ಮತ್ತು ಧರ್ಮರಕ್ಷಕ. ನೀನೇ ಸನಾತನ ಪುರುಷ ಎಂದು ನನ್ನ ಮತ.

ಅನಾದಿಮಧ್ಯಾಂತಮನಂತವೀರ್ಯ–
ಮನಂತಬಾಹುಂ ಶಶಿಸೂರ್ಯನೇತ್ರಮ್ ॥
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ
ಸ್ವತೇಜಸಾ ವಿಶ್ವಮಿದಂ ತಪಂತಮ್ ॥೧೯॥

ಭಾವ:– "ನೀನು ಆದಿ–ಮಧ್ಯ–ಅಂತರಹಿತ. ಅನಂತವೀರ್ಯ ಅನಂತ ಬಾಹುವು; ಸೂರ್ಯಚಂದ್ರರು ನಿನ್ನ ನೇತ್ರಗಳು. ಪ್ರದೀಪ್ತಾಗ್ನಿ ಕಾರುವ ಮುಖ ನಿನ್ನದು. ನಿನ್ನ ತೇಜದಿಂದ ವಿಶ್ವವನ್ನೇ ತಪಿಸುತ್ತಿರುವಿ.

ದ್ಯಾವಾಪೃಥಿವ್ಯೋರಿದಮಂತರಂ ಹಿ
ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ॥
ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ
ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥೨೦॥

ಭಾವ:-"ದ್ಯುಲೋಕ ಭೂಲೋಕಗಳ ಈ ಮಧ್ಯಭಾಗ ಹಾಗು ಎಲ್ಲ ದಿಕ್ಕುಗಳು ನಿನ್ನೊಬ್ಬನಿಂದಲೇ ವ್ಯಾಪಿಸಲ್ಪಟ್ಟಿವೆ. ಮಹಾತ್ಮನೆ, ಅದ್ಭುತ ಹಾಗು ಅತ್ಯುಗ್ರವಾದ ನಿನ್ನ ಈ ರೂಪವನ್ನು ನೋಡಿ ಮೂರು ಲೋಕಗಳು ಭಯಗೊಂಡಿವೆ.

ಅಮೀ ಹಿ ತ್ವಾಂ ಸುರಸಂಘಾ ವಿಶಂತಿ
ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ॥
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ
ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥೨೧॥

ಭಾವ:– "ಈ ದೇವತೆಗಳ ಸಂಘಗಳು ನಿನ್ನನ್ನೇ ಪ್ರವೇಶಿಸುತ್ತಿವೆ. ಕೆಲವರು ಭಯಭೀತರಾಗಿ ಕೈಮುಗಿದು ನಿನ್ನನ್ನೇ ಪ್ರಾರ್ಥಿಸುತ್ತಿದ್ದಾರೆ. ಋಷಿಗಳ ಮತ್ತು ಸಿದ್ಧಮಹಾತ್ಮರ ಸಂಘಗಳು 'ಸ್ವಸ್ತಿ' ಎಂದು ಹೇಳಿ ನಿನ್ನ ಅನಂತ ರೂಪವನ್ನು ಕೊಂಡಾಡುತ್ತಿವೆ.

ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ
ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ॥
ಗಂಧರ್ವಯಕ್ಷಾಸುರಸಿದ್ಧಸಂಘಾ
ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥೨೨॥

ಭಾವ:– " ರುದ್ರರು ಆದಿತ್ಯರು ವಸುಗಳು ಸಾಧ್ಯರು ವಿಶ್ವೇದೇವತೆಗಳು ಅಶ್ವಿನಿಕುಮಾರರು ಮರುದ್ಗಣಗಳು ಪಿತೃಗಳು ಗಂಧರ್ವ ಯಕ್ಷ ಅಸುರ ಸಿದ್ಧರ ಸಂಘಗಳು–ಇವರೆಲ್ಲರು ಅಚ್ಚರಿಯಿಂದ ನಿನ್ನನ್ನೇ ನೋಡುತ್ತಿದ್ದಾರೆ.

(ಟಿ:– ವಿಶ್ವೇದೇವತೆಗಳು= ವಿಶ್ವಾ ಸತಿಯಲ್ಲಿ ಹುಟ್ಟಿದ ಧರ್ಮ ಮಹರ್ಷಿಯ ಸಂತಾನ. ಹವ್ಯ ಕವ್ಯಗಳಲ್ಲಿ ಪೂಜ್ಯರಾದ ಇವರ ಹೆಸರು ಹೀಗಿವೆ: ಕ್ರತು ದಕ್ಷ ವಸು ಸತ್ಯ ಕಾಲಕಾಮ ಮುನಿ ಕುರಜ ಮನುಜ ವೀಜ ಹಾಗು ರೋಚಮಾನ).

ರೂಪಂ ಮಹತ್ತೇ ಬಹುವಕ್ತ್ರನೇತ್ರಂ
ಮಹಾಬಾಹೋ ಬಹುಬಾಹೂರುಪಾದಮ್ ॥
ಬಹೂದರಂ ಬಹುದಂಷ್ಟ್ರಾಕರಾಲಂ
ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥೨೩

ಭಾವ:– "ನಿನಗೆ ಅಸಂಖ್ಯ ಮುಖ ಕಣ್ಣು ಬಾಹು ತೊಡೆ ಪಾದ ಹೊಟ್ಟೆಗಳಿವೆ. ಅನೇಕ ಕೋರೆದಾಡೆಗಳಿಂದ ಕರಾಳವಾದ ನಿನ್ನ ಭಯಾನಕ ರೂಪವನ್ನು ನೋಡಿ ಲೋಕಗಳೂ ನಾನೂ ಭಯಗೊಂಡಿದ್ದೇವೆ.

ನಭಃ ಸ್ಪೃಶಂ ದೀಪ್ತಮನೇಕವರ್ಣಂ
ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ॥
ದೃಷ್ಟ್ವಾಹಿ ತ್ವಾಂ ಪ್ರವ್ಯಥಿತಾಂತರಾತ್ಮಾ
ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥೨೪॥

ಭಾವ:– "ನೀನು ಆಕಾಶ ತಲುಪಿರುವಿ; ನಿನ್ನ ರೂಪು ತೇಜೋಮಯ; ನಿನ್ನ ದೇಹದ ವರ್ಣಗಳು ಅನೇಕ. ನಿನ್ನ ವಿಸ್ತಾರವಾದ ಮುಖ ತೆರೆದಿದೆ. ನಿನ್ನ ಕಣ್ಣು ಉಜ್ವಲ ಹಾಗು ವಿಶಾಲ. ನಿನ್ನಕಂಡು ನನ್ನ ಮನಸ್ಸು ಭೀತವಾಗಿದೆ. ನನ್ನ ಧೈರ್ಯ ಮತ್ತು ಶಾಂತಿಗಳು ಕದಡಿವೆ.

ದಂಷ್ಟ್ರಾ ಕರಾಲಾನಿ ಚ ತೇ ಮುಖಾನಿ
ದೃಷ್ಟ್ವೈವ ಕಾಲಾನಲಸನ್ನಿಭಾನಿ॥
ದಿಶೋ ನ ಜಾನೇ ನ ಲಭೇ ಚ ಶರ್ಮ
ಪ್ರಸೀದ ದೇವೇಶ ಜಗನ್ನಿವಾಸ ॥೨೫॥

ಭಾವ:– "ದೇವೇಶ, ಕೋರೆಯ ಹಲ್ಲುಗಳಿಂದ ಕೂಡಿದ ನಿನ್ನ ಮುಖ ಕರಾಳ; ಅದು ಪ್ರಳಯಾಗ್ನಿಯಂತೆ ಭಯಂಕರ. ಅದನ್ನು ಕಂಡು ನನಗೆ ದಿಕ್ಕು ತೋಚದಂತಾಗಿದೆ. ಸುಖದ ಭಾವ ಮರೆಯಾಗಿದೆ. ಜಗನ್ನಿವಾಸ ಪ್ರಸನ್ನನಾಗು."

ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ
ಸರ್ವೇ ಸಹೈವಾವನಿಪಾಲ ಸಂಘೈಃ॥
ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ
ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥೨೬॥
ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ
ದಂಷ್ಟ್ರಾಕರಾಲಾನಿ ಭಯಾನಕಾನಿ॥

ಕೇಚಿದ್ವಿಲಗ್ನಾ ದಶನಾಂತರೇಷು
ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥೨೭॥

ಭಾವ:– "ಯದುವರ, ವೀರ ರಾಜ ಮಹಾರಾಜರಿಂದ ಕೂಡಿದ ಕೌರವರು, ಭೀಷ್ಮ ದ್ರೋಣ ಕರ್ಣರು, ನಮ್ಮ ಪ್ರಮುಖ ಯೋಧರು ಹರಿತ ಕೋರೆಯ ಹಲ್ಲುಗಳಿಂದ ಭೀಕರವಾದ ನಿನ್ನ ಮುಖವನ್ನು ಬೇಗ ಬೇಗನೆ ಪ್ರವೇಶಿಸುತ್ತಿದ್ದಾರೆ. ನಿನ್ನ ಹಲ್ಲುಗಳ ಸಂದುಗಳಲ್ಲಿ ಸಿಕ್ಕ ಕೆಲವರ ತಲೆಗಳು ಚೂರು ಚೂರಾಗಿವೆ."

ಯಥಾ ನದೀನಾಂ ಬಹವೋಽಬುವೇಗಾಃ
ಸಮುದ್ರಮೇವಾಭಿಮುಖಾ ದ್ರವಂತಿ॥
ತಥಾ ತವಾಮೀ ನರಲೋಕವೀರಾ
ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥೨೮॥

ಭಾವ:– "ವಿಪುಲ ಜಲಪ್ರವಾಹದ ನದಿಗಳು ಸಮುದ್ರಾಭಿಮುಖವಾಗಿ ಹರಿಯುವಂತೆ ಈ ನರಲೋಕವೀರರು ಭೀಕರವಾದ ಅಗ್ನಿಕಾರುವ ನಿನ್ನ ಮುಖಗಳಲ್ಲಿ ಪ್ರವೇಶಿಸುತ್ತಿದ್ದಾರೆ."

ಯಥಾ ಪ್ರದೀಪ್ತಂ ಜ್ವಲನಂ ಪತಂಗಾ
ವಿಶಂತಿ ನಾಶಾಯ ಸಮೃದ್ಧವೇಗಾಃ ॥
ತಥೈವ ನಾಶಾಯ ವಿಶಂತಿ ಲೋಕಾ
ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥೨೯॥

ಭಾವ:– "ಪತಂಗಗಳು ಅತಿ ವೇಗದಿಂದ ಹಾರಿ ಬಂದು ಉರಿಯುವ ದೀಪವನ್ನು ತಮ್ಮ ವಿನಾಶಕ್ಕಾಗಿಯೇ ಪ್ರವೇಶಿಸುವಂತೆ ಈ ಜನರೂ ಅಗ್ನಿ ಕಾರುವ ನಿನ್ನ ಮುಖಗಳಲ್ಲಿ ಪ್ರವೇಶಿಸುತ್ತಿದ್ದಾರೆ."

ಲೇಲಿಹ್ಯಸೇ ಗ್ರಸಮಾನಃ ಸಮಂತಾ
ಲ್ಲೋಕಾನ್ಸಮಗ್ರಾನ್ವದನೈರ್ಜ್ವಲದ್ಭಿಃ॥
ತೇಜೋಭಿರಾಪೂರ್ಯ ಜಗತ್ಸಮಗ್ರಂ
ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥೩೦॥

ಭಾವ:– "ವಿಷ್ಣುವೆ, ನಿನ್ನ ಪ್ರಜ್ವಲಿಸುವ ಮುಖಗಳಿಂದ ಸರ್ವ ದಿಕ್ಕಿನಲ್ಲಿ ಹರಡಿದ ಸಮಸ್ತ ಲೋಕಗಳನ್ನು ನುಂಗಿ ಬಾಯಿ ಚಪ್ಪರಿಸುತ್ತಿದ್ದೀಯೆ. ನಿನ್ನ ಉಗ್ರಕಾಂತಿ ಜ್ವಾಲೆಗಳು ಜಗತ್ತನ್ನೆಲ್ಲ ತಪಿಸುತ್ತಿವೆ."

ಆಖ್ಯಾಹಿ ಮೇ ಕೋ ಭವಾನುಗ್ರರೂಪೋ
ನಮೋಽಸ್ತು ತೇ ದೇವವರ ಪ್ರಸೀದ॥

ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ
ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥೩೧॥

ಭಾವ:– "ಉಗ್ರರೂಪನಾದ ನೀನು ಯಾರು? ಹೇಳು ಪ್ರಭೋ, ದೇವ ದೇವತೆಗಳ ಒಡೆಯನೆ, ನಿನಗೆ ಪ್ರಣಾಮ. ಪ್ರಸನ್ನನಾಗು. ಆದಿ ಪುರುಷನಾದ ನಿನ್ನನ್ನು ತಿಳಿಯಲಿಚ್ಛಿಸುತ್ತೇನೆ. ಈ ರೀತಿ ವರ್ತಿಸುವಲ್ಲಿ ನಿನ್ನ ಉದ್ದೇಶವೇನಿದೆ? ನಾನಂತು ತಿಳಿಯಲಾರೆ. ನಿನ್ನ ರೂಪವು ಇಷ್ಟೇಕೆ ಭಯಾನಕ? ಹೇಳು ಪ್ರಭುವೆ."

ಸಂಬಂಧ:– ಇಷ್ಟು ಹೇಳಿ ಅರ್ಜುನನು ಸುಮ್ಮನಾದ. ಅವನ ಕುತೂಹಲ ವನ್ನು ಶಮನ ಮಾಡುವ ಇಚ್ಛೆಯಿಂದ ಭಗವಂತನು ಮೂರು ಪದ್ಯಗಳಲ್ಲಿ ಉತ್ತರ ನೀಡುತ್ತಾನೆ. ಈ ಎಲ್ಲ ಮಾತುಗಳನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಿದ್ದಾನೆ.

ಶ್ರೀ ಭಗವಾನುವಾಚ

ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ
ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ ॥
ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ
ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥೩೨॥

ಭಾವ:– ಭಗವಂತ:– "ಧನಂಜಯ, ಲೋಕವಿನಾಶಕನಾದ ಹಾಗು ಅತ್ಯುಗ್ರವಾಗಿ ವೃದ್ಧಿ ಹೊಂದಿದ ಮಹಾಕಾಲನು ನಾನು. ಪ್ರಾಣಿಗಳನ್ನು ಸಂಹ ರಿಸುವ ಭೀಷಣ ಕೃತ್ಯದಲ್ಲಿ ತೊಡಗಿದ್ದೇನೆ. ನೀನು ಕೊಲ್ಲದಿದ್ದರೂ ಇವರು ಉಳಿಯಲಾಲರು. ಈ ಶತ್ರು ಸೈನ್ಯದಲ್ಲಿರುವ ಒಬ್ಬ ಯೋಧನೂ ಬದುಕಲಾರ.

ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ
ಜಿತ್ವಾ ಶತ್ರೂನ್ಭುಂಕ್ಷ್ವ ರಾಜ್ಯಂ ಸಮೃದ್ಧಮ್॥
ಮಯೈವೈತೇ ನಿಹತಾಃ ಪೂರ್ವಮೇವ
ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥೩೩॥

ಭಾವ:– "ಆದುದರಿಂದ, ಅರ್ಜುನ ಏಳು. ಯುದ್ಧಮಾಡು. ದೇವತೆಗ ಳಿಗೂ ಅಜೇಯರಾದ ಭೀಷ್ಮ ದ್ರೋಣಾದಿ ವೀರರನ್ನು ಅರ್ಜುನ ಸೋಲಿಸಿದ ಎಂಬ ಯಶೋದುಂದುಬಿ ಮೊಳಗಲಿ. ಜಯಪಡೆದು ಸಮೃದ್ಧ ರಾಜ್ಯವನ್ನು ಅನುಭವಿಸು. ಈ ನಿನ್ನ ಶತ್ರುಗಳು ಯುದ್ಧಪೂರ್ವದಲ್ಲಿಯೇ ಸತ್ತಿದ್ದಾರೆ. ನೀನೀಗ ನಿಮಿತ್ಯಮಾತ್ರನಾಗು. ಕಾಲಪ್ರವಾಹವು ಆಯುಷ್ಯವೆಂಬ ಮಣ್ಣನ್ನೆಲ್ಲ ಕೊಚ್ಚಿ ಒಯ್ದಿದೆ. ಜೀವ ವೃಕ್ಷಗಳು ಅಭದ್ರವಾಗಿ ನಿಂತಿವೆ. ನೀನು ಸುಳಿಗಾಳಿಯಂತೆ ನುಗ್ಗು. ಅವು ತಮ್ಮಷ್ಟಕ್ಕೆ ತಾವೇ ಉರುಳಿ ಬೀಳುತ್ತವೆ.

ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ
ಕರ್ಣಂ ತಥಾನ್ಯಾನಪಿ ಯೋಧವೀರಾನ್॥

ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ
ಯುದ್ಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥೩೪॥

ಭಾವ:– "ನನ್ನಿಂದ ಹತರಾದ ದ್ರೋಣ ಭೀಷ್ಮ ಜಯದ್ರಥ ಕರ್ಣ ಹಾಗು ಇತರ ವೀರರನ್ನು ಕೊಲ್ಲು. ವ್ಯಥೆ ಪಡಬೇಡ ಯುದ್ಧದಲ್ಲಿ ಶತ್ರುವನ್ನು ಜಯಿಸುವೆ. ಆದ್ದರಿಂದ ಯುದ್ಧಮಾಡು."

ಸಂಜಯ ಉವಾಚ–

ಏತಚ್ಛ್ರುತ್ವಾ ವಚನಂ ಕೇಶವಸ್ಯ
ಕೃತಾಂಜಲಿರ್ವೇಪಮಾನಃ ಕಿರೀಟಿ ॥
ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ
ಸಗದ್ಗದಂ ಭೀತಭೀತಃ ಪ್ರಣಮ್ಯ ॥೩೫॥

ಭಾವ:– ಸಂಜಯ:– "ಧೃತರಾಷ್ಟ್ರ, ಕೃಷ್ಣನ ಈ ಮಾತುಗಳ ಕೇಳಿದ ಅರ್ಜುನನು ಕೈಜೋಡಿಸಿ, ನಡಗುತ್ತ, ಪುನಃ ಪುನಃ ನಮಿಸುತ್ತ ಅತ್ಯಂತ ಭಯ ದಿಂದ ತಲೆಬಾಗಿಸಿ ಪ್ರಭುವನ್ನು ಕುರಿತು ಗದ್ಗದ ಕಂಠದಿಂದ ನುಡಿದ."

ಅರ್ಜುನ ಉವಾಚ

ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ
ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।
ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ
ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥೩೬॥

ಭಾವ:– ಅರ್ಜುನ- "ನಿನ್ನ ಮಹಾತ್ಮ್ಯ-ಕೀರ್ತನೆಯಿಂದ ಜಗತ್ತು ಸಂತೋಷ ಪಡುತ್ತಲಿದೆ. ರಾಕ್ಷಸರು ಭೀತರಾಗಿ ದಿಕ್ಕು ದಿಕ್ಕುಗಳಲ್ಲಿ ಓಡುತ್ತಿದ್ದಾರೆ. ಸಿದ್ಧರ ಸಂಘಗಳು ನಮಸ್ಕರಿಸುತ್ತಿವೆ. ಇದೆಲ್ಲ ಯುಕ್ತವೇ ಸರಿ."

ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್
ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ॥
ಅನಂತ ದೇವೇಶ ಜಗನ್ನಿವಾಸ
ತ್ವಮಕ್ಷರಂ ಸದಸತ್ತತ್ಪರಂ ಯತ್ ॥೩೭॥

ಭಾವ:- "ಮಹಾತ್ಮನೆ, ಬ್ರಹ್ಮನಿಗೂ ಆದಿಕಾರಣನಾದ ಮತ್ತು ಉತ್ಕೃಷ್ಟನಾದ ನಿನಗೆ ಅವರು ಅದೆಂತು ನಮಸ್ಕಸರಿದೆ ಇದ್ದಾರು? ದೇವಾ, ಅನಂತರೂಪನೆ, ಜಗನ್ನಿವಾಸನೆ ನೀನು ಪರಮಾಕ್ಷರ. ನೀನೇ 'ಸತ್' ರೂಪ; ನೀನೇ 'ಅಸತ್' ರೂಪ ಮತ್ತು ನೀನೇ ಪರಾತ್ಪರ.

ತ್ವಮಾದಿದೇವಃ ಪುರುಷಃಪುರಾಣ
ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ॥
ವೇತ್ತಾಽಸಿ ವೇದ್ಯಂ ಚ ಪರಂ ಧಾಮ
ತ್ವಯಾ ತತಂ ವಿಶ್ವಮನಂತರೂಪ ॥೩೮॥

ಭಾವ:– "ನೀನು ಆದಿದೇವನು, ಪುರಾಣ ಪುರುಷನು. ಈ ವಿಶ್ವಕ್ಕೆ ಉತ್ಕೃಷ್ಟವಾದ ಆಶ್ರಯವು ನೀನು. ಸರ್ವಜ್ಞ, ಸುಜ್ಞೇಯ ಹಾಗು ಪರಂಧಾಮ. ಅನಂತನಾದ ನಿನ್ನಿಂದಲೇ ವಿಶ್ವವು ತುಂಬಿದೆ.

ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ॥
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ
ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥೩೯॥

ಭಾವ:– "ವಾಯುವು ಯಮ ಅಗ್ನಿ ವರುಣ ಚಂದ್ರ ಪ್ರಜಾಪತಿ ಮತ್ತು ಪ್ರಪಿತಾಮಹ– ಇವರೆಲ್ಲ ನೀನೇ. ನಿನಗೆ ಸಾವಿರ ಸಲ ವಂದನ. ಪುನಃ ವಂದನ. ಇದೋ, ಮತ್ತೊಮ್ಮೆ ಪ್ರಣಾಮ!

ನಮಃ ಪುರಸ್ತಾದಥ ಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ ॥
ಅನಂತವೀರ್ಯಾ ಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥೪೦॥

ಭಾವ:– "ಸರ್ವಾತ್ಮನೆ, ನಿನಗೆ ಹಿಂದೆ ಮುಂದೆ ಮತ್ತು ಎಲ್ಲ ಕಡೆಯಲ್ಲಿ ವಂದನೆ. ಅನಂತ ವೀರ್ಯನೆ, ನೀನು ಅಮಿತ ಪರಾಕ್ರಮಿ. ಎಲ್ಲವನ್ನು ವ್ಯಾಪಿಸಿದೆಯಾಗಿ ನೀನು ಸರ್ವ-ಸ್ವರೂಪ.

ಸಖೇತಿ ಮತ್ವಾ ಪ್ರಸಭಂ ಯದುಕ್ತಂ
ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।
ಅಜಾನತಾ ಮಹಿಮಾನಂತವೇದ
ಮಯಾ ಪ್ರಮಾದಾತ್ ಪ್ರಣಯೇನ ವಾಪಿ ॥೪೧॥
ಯಚ್ಚಾವಹಾಸಾರ್ಥಮಸತ್ಕೃತೋಽಸಿ
ವಿಹಾರಶಯ್ಯಾಸನಭೋಜನೇಷು ।
ಏಕೋಽಥವಾಪ್ಯಚ್ಯುತ ತತ್ಸಮಕ್ಷಂ
ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ॥೪೨॥

ಭಾವ:– "ಅಚ್ಯುತ, ನಿನ್ನ ಈ ಅಗಾಧ ಮಹಿಮೆಯನ್ನೂ ವಿಶ್ವರೂಪವನ್ನೂ ಅರಿಯದೆ ನೀನು ನನ್ನ ಸ್ನೇಹಿತನೆಂದು ತಿಳಿದು ಪ್ರಮಾದದಿಂದಲೋ ಪ್ರೀತಿಯಿಂದಲೋ 'ಎಲೈ ಕೃಷ್ಣ, ಎಲೈ ಯಾದವ, ಎಲೈ ಸಖನೆ' ಹೀಗೆ ಬಹು ದಿಟ್ಟತನದಿಂದ ಕರೆದಿದ್ದೇನೆ. ವಿಹಾರ ಶಯನ ಆಸನ ಭೋಜನ ಸಮಯದಲ್ಲಿ ನೀನೊಬ್ಬನೇ ಇರುವಾಗ ಅಥವಾ ಅನೇಕರ ಎದುರಿನಲ್ಲಿ ಅವಮರ್ಯಾದೆ ಮಾಡಿದ್ದೇನೆ. ಅದನ್ನೆಲ್ಲ ಕ್ಷಮಿಸು. ಹೀಗೆ ಅಪ್ರಮೇಯನಾದ ನಿನಗೆ ಬಿನ್ನವಿಸುತ್ತೇನೆ.

ಪಿತಾಸಿ ಲೋಕಸ್ಯ ಚರಾಚರಸ್ಯ
ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ॥
ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ
ಲೋಕತ್ರಯೇಽಪ್ಯಪ್ರತಿಮಪ್ರಭಾವ ॥೪೩॥

ಭಾವ:- " ಅಪ್ರತಿಮ ಪ್ರಭಾವನೆ, ಈ ಸ್ಥಾವರ ಜಂಗಮಾತ್ಮಕ ಲೋಕಕ್ಕೆ ನೀನೇ ತಂದೆ, ಪೂಜ್ಯ ಗುರು, ಪರಮ ಪ್ರಭು. ಲೋಕತ್ರಯದಲ್ಲಿ ನಿನಗೆ ಸಮಾನನಾದವನು ಯಾವನೂ ಇಲ್ಲ. ಹೀಗಿರುವಾಗ ನಿನಗಿಂತ ದೊಡ್ಡವನಾದವನೆಲ್ಲಿ ಬರಬೇಕು?

ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ
ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ॥
ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥೪೪॥

ಭಾವ: "ದೇವ, ಆದುದರಿಂದ, ನನ್ನ ದೇಹವನ್ನು ದಂಡದಂತೆ ಭೂಮಿಯ ಮೇಲೆ ಒರಗಿಸಿ ನಮಸ್ಕರಿಸುತ್ತೇನೆ. ಸ್ತುತಿಯೋಗ್ಯನೂ ಈಶ್ವರನೂ ಆದ ನಿನ್ನನ್ನು ಪ್ರಸನ್ನನಾಗೆಂದು ಪ್ರಾರ್ಥಿಸುತ್ತೇನೆ. ತಂದೆಯು ಮಗನ ಅಪರಾಧವನ್ನು, ಸ್ನೇಹಿತನು ಸ್ನೇಹಿತನ ಅಪರಾಧವನ್ನು, ಪ್ರಿಯನು ಪ್ರಿಯಳ ಅಪರಾಧವನ್ನು ಸಹಿಸುವಂತೆ ದೇವಾ, ನನ್ನ ಎಲ್ಲ ಅಪರಾಧಗಳನ್ನು ಸಹಿಸು.

ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ
ಭಯೇನ ಚ ಪ್ರವ್ಯಥಿತಂ ಮನೋ ಮೇ ॥
ತದೇವ ಮೇ ದರ್ಶಯ ದೇವ ರೂಪಂ
ಪ್ರಸೀದ ದೇವೇಶ ಜಗನ್ನಿವಾಸ ॥೪೫॥

ಭಾವ:- " ಹಿಂದೆ ಎಂದಿಗೂ ನೋಡದಿದ್ದ ವಿಶ್ವರೂಪವನ್ನು ನೋಡಿ ಹರ್ಷಿತನಾಗಿದ್ದೇನೆ; ಆದರೂ ಭಯದಿಂದ ನನ್ನ ಮನಸ್ಸು ಕ್ಲೇಶಗೊಂಡಿದೆ. ದೇವೇಶ, ಆ ಮುಂಚಿನ ಶಾಂತರೂಪವನ್ನೇ ನನಗೆ ತೋರಿಸು. ಜಗನ್ನಿವಾಸ ಪ್ರಸನ್ನನಾಗು.

ಕಿರೀಟಿನಂ ಗದಿನಂ ಚಕ್ರಹಸ್ತ
ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ॥
ತೇನೈವ ರೂಪೇಣ ಚತುರ್ಭುಜೇನ
ಸಹಸ್ರ ಬಾಹೋ ಭವ ವಿಶ್ವಮೂರ್ತೇ ॥೪೬॥

ಭಾವ:- " ಸಹಸ್ರಬಾಹುವೆ, ಮೊದಲಿನಂತೆ ಕಿರೀಟಧಾರಿಯೂ ಗದಾಧಾರಿಯೂ ಚಕ್ರಪಾಣಿಯೂ ಆಗಿರುವ ನಿನ್ನನ್ನು ನೋಡಲು ನಾನು ಬಯಸುತ್ತೇನೆ. ವಿಶ್ವಮೂರ್ತಿಯೆ, ಚತುರ್ಭುಜವುಳ್ಳ ಅದೇ ಪೂರ್ವರೂಪವನ್ನು

ತೋರಿಸು."

ಸಂಬಂಧ:– ಅರ್ಜುನನ ವಿನಂತಿಯನ್ನು ಆಲಿಸಿದ ಭಗವಂತನು ಮೂರು ಮಂತ್ರಗಳಲ್ಲಿ ತನ್ನ ವಿರಾಟರೂಪ ದರ್ಶನದ ಅಪೂರ್ವತೆಯನ್ನು ಹೇಳಿ ಶಾಂತ ರೂಪವನ್ನು ಧರಿಸುತ್ತಾನೆ.

ಶ್ರೀ ಭಗವಾನುವಾಚ

ಮಯಾ ಪ್ರಸನ್ನೇನ ತವಾರ್ಜುನೇದಂ
ರೂಪಂ ಪರಂ ದರ್ಶಿತಮಾತ್ಮಯೋಗಾತ್ ॥
ತೇಜೋಮಯಂ ವಿಶ್ವಮನಂತಮಾದ್ಯಂ
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥೪೭॥

ಭಾವ:- ಭಗವಂತ:- ಅರ್ಜುನ, ಪ್ರಸನ್ನನಾದ ನಾನು ತೇಜೋಮಯವೂ ಸಂಪೂರ್ಣವೂ ಅನಂತವೂ ಆದ್ಯವೂ ಆದ ಈ ವಿಶ್ವರೂಪವನ್ನು ನನ್ನ ಯೋಗ ಸಾಮರ್ಥ್ಯದಿಂದ ತೋರಿಸಿದೆ. ನಿನ್ನ ಹೊರತು ಬೇರಾರೂ ಈ ಮೊದಲು ಅದನ್ನು ನೋಡಿರಲಿಲ್ಲ."

ವಿವರಣೆ:– (೧) ಪ್ರತಿಜೀವಿಗೆ ಒಂದು ಹೃದಯವಿದೆ. ಆ ಜೀವಿಗೆ ಸಂಬಂಧಿಸಿದ ಅನೇಕ ಸಂಸ್ಕಾರಗಳು ಅದರಲ್ಲಿ ನೆಲೆಸಿವೆ. ಆ ಸಂಸ್ಕಾರಗಳೇ ಆ ವ್ಯಕ್ತಿಯ ವರ್ತಮಾನ ಮತ್ತು ಭವಿಷ್ಯ ಜೀವನವನ್ನು ರೂಪಿಸುತ್ತವೆ. ವ್ಯಕ್ತಿಯಂತೆ ವಿಶ್ವ. ಆ ವಿಶ್ವಕ್ಕೂ ಒಂದು ಅತ್ಯದ್ಭುತ ಹೃದಯವಿದೆ. ಅದರಲ್ಲಿ ವ್ಯಕ್ತಿಹೃದಯಗಳೆಲ್ಲ ನೆಲೆಸಿವೆ. ಅಸಂಖ್ಯ ಸಂಸ್ಕಾರಗಳು ರಾಶಿರಾಶಿಯಾಗಿ ಕೂಡಿ ಬಿದ್ದಿವೆ. ಹೀಗೆ ಎಲ್ಲವನ್ನೊಳಗೊಂಡ ಬೃಹದ್ ಹೃದಯವೇ 'ಯೋಗಮಾಯಾ ಶಕ್ತಿ' ಭಗವಂತನ 'ಯೋಗಸಾಮರ್ಥ್ಯ.' ಇದು ಅಪರಿಮಿತ. ಇದರ ಮೂಲಕವೇ ಪರಮಾತ್ಮನು ಅಭಿವ್ಯಕ್ತನಾಗಬಲ್ಲ, ವೈವಿಧ್ಯಪೂರ್ಣವಾದ ಸೃಷ್ಟಿಯನ್ನು ತೋರಬಲ್ಲ. ಈ ಮಾಯಾಶಕ್ತಿಯನ್ನು ಬಿಟ್ಟರೆ ಆ ದೇವನು ಕೇವಲ ನಿರಂಜನ ನಿರಾಮಯ ನಿಚ್ಚ ನಿಜರೂಪ!

(೨) ಅರ್ಜುನನು ನೋಡಿದುದು ಪರಮಾತ್ಮನ ನಿಜರೂಪವನ್ನಲ್ಲ, ಅವನ ಮಾಯಾವಿಶಿಷ್ಟ ಬೃಹದ್ರೂಪವನ್ನು. ವಿರಾಟರೂಪದ ಕರಾಳತೆ ಭಯಾನಕತೆ ದೇವನ ಸ್ವರೂಪಕ್ಕೆ ಸಂಬಂಧಿಸಿಲ್ಲ. ಭೀಷ್ಮ ದ್ರೋಣಾದಿ ವೀರರ ಜೀವ ಹೀರುವವ ವಾಸ್ತವಿಕವಾಗಿ ಭಗವಂತನಲ್ಲ; ಅವನ ಮಾಯಾಶಕ್ತಿಯು ಆಯಾ ಜೀವಾತ್ಮರ ಸಂಸ್ಕಾರಾನುಸಾರ ಜೀವ ಹೀರುತ್ತಾಳೆ. ಆಯಾ ವ್ಯಕ್ತಿಗಳ ಪುಣ್ಯ ಪಾಪಾನುಸಾರ ಅವರಿಗೆ ವಿಭಿನ್ನ ಗತಿಗಳನ್ನೀಯುತ್ತಾಳೆ.

(೩) ಪರಮಾತ್ಮನ ವಿರಾಟರೂಪು ಅಸಾಮಾನ್ಯ, ತೇಜೋಮಯ ಹಾಗು ಅನಂತ, ಅರ್ಜುನನಿಗಿಂತ ಮುಂಚೆ ಅದನ್ನು ಯಾರೂ ಕಂಡಿರಲಿಲ್ಲ.

ಅರ್ಜುನನ ಮೇಲೆ ಭಗವಂತನಿಗೆ ಬಹುಪ್ರೀತಿ. ಆ ಪ್ರೀತಿಯ ಪ್ರತೀಕವಾಗಿ ತನ್ನ ಭವ್ಯರೂಪದ ದರ್ಶನಮಾಡಿಸಿದ.

ನ ವೇದ ಯಜ್ಞಾಧ್ಯಯನೈರ್ನ ದಾನೈ-
ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ॥
ಏವಂ ರೂಪಃ ಶಕ್ಯ ಅಹಂ ನೃಲೋಕೇ
ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥೪೮॥

ಭಾವ:–ವೇದಾಧ್ಯಯನ ಯಜ್ಞ ಜ್ಞಾನ ದಾನಗಳು ಶ್ರೌತಕರ್ಮಗಳು ಮತ್ತು ಉಗ್ರವಾದ ತಪಸ್ಸುಗಳು-ಇವುಗಳಿಂದಲೂ ಈ ವಿಶ್ವರೂಪವುಳ್ಳ ನನ್ನನ್ನು ಮನುಷ್ಯ ಲೋಕದಲ್ಲಿ ನೋಡಲು ನಿನ್ನ ಹೊರತು ಬೇರೆಯಾರಿಗೂ ಸಾಧ್ಯವಿಲ್ಲ.

ವಿವರಣೆ:–ಭಗವಂತ:–"ಕುರುಪ್ರವೀರನೆ, ಜಗತ್ತಿನಲ್ಲಿ ನಾಲ್ಕೂ ವೇದಗಳನ್ನು ಕಂಠಸ್ಥ ಮಾಡಿದವರಿದ್ದಾರೆ; ವಿವಿಧ ಯಜ್ಞಯಾಗಗಳನ್ನು ಜೀವನಾವಧಿ ನಿರ್ವಹಿಸಿದವರಿದ್ದಾರೆ. ವೇದಾಂತವಿದ್ಯೆಯನ್ನು ಪ್ರವಚನಗಳ ಮೂಲಕ ನೀಡಿದವರಿಗೂ ಕೊರತೆಯಿಲ್ಲ. ಮಹಾದಾನಿಗಳು ಘೋರತಪಸ್ವಿಗಳು ಕರ್ಮನಿರತರು ಎಲ್ಲೆಡೆ ದೊರೆಯುತ್ತಾರೆ. ಆದರೆ ಅವರ ಹೃದಯದಲ್ಲಿ ಬಹುಸೂಕ್ಷ್ಮವಾಗಿ ಅಹುಕಾರ ತೆರೆ ಮುಸುಕಿದುದರಿಂದ ಅವರಿಗೆ ನನ್ನ ವಿರಾಟ-ದರ್ಶನವಾಗಲಿಲ್ಲ. ನೀನು ಸುದೈವಿ. ಪ್ರೇಮಜೀವಿ. ಭಕ್ತಿವಂತ. ಆದ್ದರಿಂದ ಈಭವ್ಯರೂಪವನ್ನು ತೋರಿಸಿದ್ದೇನೆ. ನಿನ್ನನ್ನು ಬಿಟ್ಟು ಇನ್ನೊಬ್ಬರು ಈ ರೂಪವನ್ನು ಎಂದೆಂದಿಗೂ ನೋಡಲಾರರು."

ಮಾತೇ ವ್ಯಥಾಮಾ ಚ ವಿಮೂಢಭಾವೋ
ದೃಷ್ಟ್ವಾರೂಪಂ ಘೋರಮೀದೃಙ್ಮಮೇದಮ್ ॥
ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ
ತದೇವ ಮೇ ರೂಪಮಿದಂ ಪ್ರಪಶ್ಯ ॥೪೯॥

ಭಾವ:– "ಕುರುನಂದನ, ಘೋರವಾದ ವಿರಾಟರೂಪವನ್ನು ಕಂಡು ಭಯಗೊಳ್ಳದಿರು, ಭ್ರಾಂತನಾಗದಿರು. ನೀನು ಈಕ್ಷಿಸಿದುದೆಲ್ಲ ನನ್ನ ಮಾಯಾರೂಪೆಂದು ತಿಳಿದುಕೊ. ಇದೋ, ನಿನಗಿತ್ತ ದಿವ್ಯಚಕ್ಷುವನ್ನು ಹಿಂದೆಗೆದುಕೊಳ್ಳುತ್ತೇನೆ. ಈಗ ಮೊದಲಿನ ಶಾಂತರೂಪದಲ್ಲಿರುವ ನನ್ನನ್ನು ನೋಡು ಪ್ರಸನ್ನ ಚಿತ್ತನಾಗು.

ಸಂಜಯ ಉವಾಚ–

ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ
ಸ್ವಕಂ ರೂಪಂ ದರ್ಶಯಾಮಾಸ ಭೂಯಃ ॥
ಆಶ್ವಾಸಯಾಮಾಸ ಚ ಭೀತಮೇನಂ
ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥೫೦॥

ಭಾವ:–ಸಂಜಯ:–"ಧೃತರಾಷ್ಟ್ರನೆ. ಭಗವಂತನು ಹೀಗೆ ಪುನಃ ತನ್ನ ಚತುರ್ಭುಜರೂಪವನ್ನು ತೋರಿಸಿದ. ಸೌಮ್ಯಶರೀರಧಾರಿಯಾಗಿ ಭೀತನಾದ ಅರ್ಜುನನನ್ನು ಸಂತೈಸಿದ."

ಅರ್ಜುನ ಉವಾಚ

ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।
ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥೫೧॥

ಭಾವ:– ಅರ್ಜುನ:– "ದೇವ, ನಿನ್ನ ಸೌಮ್ಯವಾದ ಮನುಷ್ಯ ರೂಪವನ್ನು ನೋಡಿ ಈಗ ನಾನು ಪ್ರಸನ್ನ ಚಿತ್ತವುಳ್ಳವನಾಗಿದ್ದೇನೆ. (ಸಚೇತಃ ಸಂವೃತ್ತಃ) ಚಿತ್ತಸ್ವಾಸ್ಥ್ಯವನ್ನು ಪಡೆದಿದ್ದೇನೆ."

ಶ್ರೀ ಭಗವಾನುವಾಚ

ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।
ದೇವಾ ಅಪ್ಯಸ್ಯ ನಿತ್ಯಂ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥೫೨॥

ಭಾವ:- ಭಗವಂತ:- "ಅರ್ಜುನ, ನನ್ನ ಈ ವಿರಾಟದರ್ಶನವು ದುರ್ಮಿಳ. ನೀನು ಮಾತ್ರ ಸುಕೃತಿಯಾದುದರಿಂದ ನೋಡಿದಿ. ದೇವತೆಗಳು ಇದನ್ನು ಪಡೆಯಲು ಸದಾ ಬಯಸುತ್ತಾರೆ; ಆದರೆ ಅವರ ಬಯಕೆ ಎಂದಿಗೂ ಪೂರ್ತಿಯಾಗಿಲ್ಲ."

ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂ ವಿಧೋದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥೫೩॥

ಭಾವ:– "ನೀನು ಯಾವ ಪ್ರಕಾರ ನನ್ನನ್ನು ನೋಡಿದೆಯೊ ಈ ರೂಪ ಉಳ್ಳ ನನ್ನನ್ನು ವೇದಾಧ್ಯಯನದಿಂದಲೂ ತಪಸ್ಸಿನಿಂದಲೂ ದಾನದಿಂದಲೂ ಯಜ್ಞದಿಂದಲೂ ನೋಡಲು ಸಾಧ್ಯವಿಲ್ಲ."

ವಿವರಣೆ:– (೧) ವೇದಾಧ್ಯಯನ ಮಾಡಿದ ಪಂಡಿತರೇ ಇರಲಿ, ಯಜ್ಞ, ಯಾಗ ದಾನ ತಪಗಳನ್ನಾಚರಿಸಿದ ವ್ಯಕ್ತಿಗಳೇ ಇರಲಿ ಅವರಲ್ಲಿ ದೇವಾನುರಾಗ, ವಿಶ್ವಪ್ರೇಮ ಹಾಗು ಸರ್ವಾತ್ಮ ದೃಷ್ಟಿಗಳಿರದಿದ್ದರೆ ಆ ವೇದಾಧ್ಯಯನಾದಿಗಳಿಂದ ಪ್ರಯೋಜನವಿಲ್ಲ. ಅಂಥ ಜನರಿಂದ ಜಗತ್ತಿಗೆ ಆಗಬಾರದಷ್ಟು ಹಾನಿಯಾಗಿದೆ. ಅವರ ಅಲಕ್ಷತನದ ಪರಿಣಾಮವಾಗಿ ವರ್ಣಾಶ್ರಮಾದಿ–ದ್ವೇಷಜ್ವಾಲೆ ಎಲ್ಲೆಲ್ಲೂ ಹಬ್ಬಿತು. ಆ ಜ್ವಾಲೆಗೆ ಅಸಂಖ್ಯ ದೀನ ದರಿದ್ರರು ಅಜ್ಞ ಪತಿತರು ಬಲಿಯಾದರು.

(೨) ದೇವದರ್ಶನವಾಗಬೇಕಾದರೆ ಪಾವನ ಪ್ರೇಮವೇ ಮುಖ್ಯ. ವ್ಯಕ್ತಿ ತನ್ನಂತೆ ಇತರರನ್ನು ಕಾಣಬೇಕು; ಸರಿಸಮಭಾವ ತಾಳಬೇಕು. ಜನಸೇವೆ ದೇವಸೇವೆಗಳಿಗಾಗಿ ಸರ್ವತ್ಯಾಗಕ್ಕೂ ಸಿದ್ಧನಾಗಿರಬೇಕು. ಅರ್ಜುನನು ಅಂಥ ವ್ಯಕ್ತಿತ್ವವುಳ್ಳವನಾಗಿದ್ದರೂ ದೇವನ ಬಗ್ಗೆ ಅವನಲ್ಲಿ ಅಪಾರ ಪ್ರೇಮವಿತ್ತು. ಆದುದ

ರಿಂದ ಅವನಿಗೆ ವಿರಾಟ ದರ್ಶನದ ಭಾಗ್ಯ ದೊರೆಯಿತು.

ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥೫೪॥

ಭಾವ:- "ಆದರೆ, ಪರಂತಪ, ಅನನ್ಯಭಕ್ತಿಯಿಂದ ಈ ವಿಶ್ವವಿರಾಟ ರೂಪವುಳ್ಳ ನನ್ನ ಯಥಾರ್ಥ ಸ್ವರೂಪವನ್ನು ತಿಳಿಯಲು, ಸಾಕ್ಷಾತ್ಕರಿಸಲು ಹಾಗು ಪ್ರವೇಶಿಸಲು ಸಾಧ್ಯವಿದೆ."

ವಿವರಣೆ:- (೧) ತನು ಮನ ಬುದ್ಧಿ ಭಾವಗಳನ್ನು ದೇವನಿಗಾಗಿ ಮೀಸಲಾಗಿಡುವದು ಅನನ್ಯಪ್ರೇಮ ಅಥವಾ ಏಕಾಂತಭಕ್ತಿ. ಈ ಭಕ್ತಿಯುಳ್ಳವನು ವಿಷಯ ವಿಮುಖ. ಅವನ ಹೃದಯ ನಿರ್ಮಲ ಆ ಹೃದಯದಲ್ಲಿ ದೇವನು ತಾನಾಗಿಯೇ ಅವತರಿಸಿ ತನ್ನ ಸ್ವರೂಪವನ್ನು ಸಾಕಾರ ನಿರಾಕಾರಗಳೆಂಬ ಎರಡೂ ವಿಧದಲ್ಲಿ ತೋರಿಸಿಕೊಳ್ಳುತ್ತಾನೆ.

(೨) ಭಕ್ತನು ಪ್ರಪಂಚಲಾಲಸಾಮುಕ್ತನಾದುದರಿಂದ ಆ ದೇವನಲ್ಲಿ ಪ್ರವೇಶಿಸುತ್ತಾನೆ; ಅವನ ಅನಂತ ವ್ಯಾಪ್ತಿಯಲ್ಲಿ ತಲ್ಲಯ ಹೊಂದಿ ಒಂದಾಗುತ್ತಾನೆ. ಅದು ಭಕ್ತಿಯ ಚರಮಫಲ.

ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥೫೫॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ವಿಶ್ವರೂಪ ದರ್ಶನಯೋಗೋ ನಾಮ ಏಕಾದಶೋಽಧ್ಯಾಯಃ

ಭಾವ:- "ಅರ್ಜುನ, ಯಾವನು ನನಗಾಗಿ ಕರ್ಮ ಮಾಡುವನೋ ನನ್ನನ್ನೇ ಪರಮ ಗತಿಯೆಂದು ತಿಳಿದಿರುವನೋ ನನ್ನ ಭಕ್ತನೋ ನಿಸ್ಸಂಗನೋ ಸರ್ವತ್ರ ಭೂತಗಳಲ್ಲಿ ನಿರ್ವೈರನೋ ಅವನು ನನ್ನನ್ನೇ ಸೇರುತ್ತಾನೆ."

ವಿವರಣ:- ಈ ಅಧ್ಯಾಯದ ಕೊನೆಯ ಮಂತ್ರವಿದು. ಇಲ್ಲಿ ಭಗವಂತನು ಜಗತ್ತಿಗೆ ನೀಡಿದ ಅಮರ ಸಂದೇಶವಿದೆ. ಅದನ್ನು ಅವನೇ ಹೇಳಬಹುದಾದ ರೀತಿಯಲ್ಲಿ ಕೇಳುವಾ.

"ಶಾಂತಿಗಾಗಿ ಹಾತೊರೆವ ಮನುಜರೆ, ನನ್ನ ಆದೇಶಗಳನ್ನು ಲಕ್ಷವಿಟ್ಟು ಕೇಳಿರಿ; ಅಚೂಕಾದ ರೀತಿಯಲ್ಲಿ ಅವುಗಳನ್ನು ಪಾಲಿಸಿರಿ. ನಾನು ಪರಮಪ್ರಭು. ವಿಶ್ವಾಂತರ್ಯಾಮಿ. ನೀವು ನನಗಾಗಿಯೇ ಸರ್ವ ಕರ್ಮಗಳನ್ನಾಚರಿಸಿರಿ. ಸರ್ವಾಶ್ರಯನಾದ ನನ್ನಲ್ಲಿಯೇ ನಿಮ್ಮೆಲ್ಲ ಪ್ರೇಮಜಲವನ್ನು ಧಾರೆಯೆರೆಯಿರಿ. ಧನ ಧಾನ್ಯಾದಿ ಭೌತವಸ್ತುಗಳಲ್ಲಿ ನಿರಾಸಕ್ತರಾಗಿರಿ. ಜೀವವುಳ್ಳ, ಜೀವವಿಲ್ಲದ ಯಾವ ವಸ್ತುವನ್ನೂ ದ್ವೇಷಿಸಬೇಡಿರಿ. ಸರ್ವ ಪ್ರಾಣಿ ಪಶು ಪಕ್ಷಿ ಮಾನವ ಎಲ್ಲರನ್ನು ಪ್ರೀತಿಸಿರಿ. ನಾನೇ ಪರಮಗತಿಯೆಂದು ದೃಢವಾಗಿ ನಂಬಿರಿ. ನಿಮ್ಮ ಬಾಳನ್ನೇ ನನಗಾಗಿ ಮುಡುಪಿಡಿರಿ. ಹಾಗಾದರೆ ಮಾತ್ರ ನನ್ನನ್ನೇ ಸೇರುವಿರಿ!

ಭವಬಂಧನದಿಂದ ವಿಮುಕ್ತರಾಗಿ ಸ್ವತಂತ್ರರಾಗಿ ಚಿದಾಕಾಶದಲ್ಲಿ ಬೆರೆತುಬಿಡು ವಿರಿ. ಅದೇ ಅಮರಶಾಂತಿ!"

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಹನ್ನೊಂದನೆಯ ಬಿಂದುವು.

* † *

# ಹನ್ನೆರಡನೆಯ ಅಧ್ಯಾಯ

## ಭಕ್ತಿಯೋಗ

ಪರಮಾತ್ಮನದು ಪವಿತ್ರ ಉಪದೇಶ; ಅದು ಸರ್ವಾಂಗಪೂರ್ಣ; ಸಗುಣ ನಿರ್ಗುಣ ಲಕ್ಷಣಗಳನ್ನು ಸಮನ್ವಯಗೊಳಿಸಿದ ಅಮೃತೋಪಮ ಬೋಧ! ಅದನ್ನು ಬಹು ಲಕ್ಷವಿತ್ತು ಆಲಿಸಿದ ಅನಸೂಯುವಂತನಾದ ಅರ್ಜುನನಿಗೆ ವಿಶ್ವ ವಿರಾಟದರ್ಶನದ ಭಾಗ್ಯವೂ ದೊರೆಯಿತು. ಅವನಲ್ಲಿದ್ದ ಅನುಭಾವಾಮೃತಸೇವಾ ಭಿಲಾಷೆಯು ಇಮ್ಮಡಿಸಿತು. ಆದುದರಿಂದ ಅಷ್ಟಕ್ಕೆಯೇ ಯುದ್ಧ ಸನ್ನದ್ಧನಾಗದೆ ಮತ್ತೆ ಭಗವಂತನ ಅನುಪಮ ವಚನಗಳನ್ನು ಕೇಳಲೆಳಸಿದ.

ಅರ್ಜುನ ಉವಾಚ

ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।
ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥೧॥

ಅರ್ಥ:– ಏವಂ=ಈ ರೀತಿಯಾಗಿ ಸತತಯುಕ್ತಾಃ=ಸಂತತ ಅನನ್ಯಭಾವ ಹೊಂದಿದ ಯೇ ಭಕ್ತಾಃ= ಯಾವ ಭಕ್ತರು ತ್ವಾಂ= ನಿನ್ನನ್ನು ಪರ್ಯುಪಾಸತೇ= ಉಪಾಸನೆ ಮಾಡು ತ್ತಾರೆಯೋ ಚ= ಮತ್ತು ಯೇ= ಯಾರು ಅವ್ಯಕ್ತಂ ಅಕ್ಷರಂ=ಅವ್ಯಕ್ತ, ಅಕ್ಷರನಾದ ನಿನ್ನನ್ನು (ಉಪಾಸನೆ ಮಾಡುತ್ತಾರೋ) ತೇಷಾಂ=ಅವರಲ್ಲಿ ಕೇ ಯೋಗವಿತ್ತಮಾಃ= ಶ್ರೇಷ್ಠಯೋಗ ವಿದರು ಯಾರು?

ವಿವರಣೆ:– (೧) ಪರಮಾತ್ಮನು ಅದ್ವಯ ಹಾಗು ಪರಿಪೂರ್ಣ. ಅವ ನನ್ನು ಬಲ್ಲವರು ಎರಡು ವಿಧವಾಗಿ ಬಣ್ಣಿಸುತ್ತಾರೆ. (ಅ) "ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ– ಅಸ್ಥೂಲಂ ಅನಣುಃ ಅಹ್ರಸ್ವಂ ಅದೀರ್ಘಂ ಅಪೂರ್ವಂ ಅನಪರಂ" ಪರಮ ದೇವನು ಅವಿನಾಶಿ, ಅಪೂರ್ವ ಹಾಗು ಅದ್ವಯ. ಗಾರ್ಗಿಯೆ, ಅವನು ಸ್ಥೂಲನಲ್ಲ, ಅಣುವಲ್ಲ, ಹ್ರಸ್ವನಲ್ಲ, ದೀರ್ಘನಲ್ಲ; ಹೀಗೆ ಅರಿತ ಬ್ರಾಹ್ಮಣರು ಹೇಳುತ್ತಾರೆ. ಅವನು ಇಂದ್ರಿಯ ಮನ ಬುದ್ಧಿಗಳಿಗೆ ಅತೀತ. ಭಾಷೆ ಹಾಗು ಭಾವಗಳಿಗೆ ಅಗೋಚರ. ಇದು ದೇವನ ನಿರ್ಗುಣಸ್ವರೂ ಪದ ಚಿತ್ರಣ. (ಬ) ಪ್ರಭುವು ಸರ್ವಜ್ಞ ಸರ್ವಕರ್ತಾರ ಸರ್ವನಿಯಾಮಕ ಜಗ ಜ್ಜನಕ. ಅವನು ಸಹಸ್ರಬಾಹು ಸಹಸ್ರಶೀರ್ಷ ಸಹಸ್ರಚಕ್ಷು. ಕೇಳಿಬರುವ ಶಬ್ದ ಸಾಗರ, ಕಾಣಬರುವ ರೂಪ ವಿಸ್ತಾರ, ಹೃದಯದಲ್ಲೇಳುವ ವಿವಿಧ ಭಾವರಸ ಗಳು– ಎಲ್ಲವೂ ಆತನೇ. ಇದು ದೇವನ ಸಗುಣಸ್ವರೂಪದ ಚಿತ್ರಣ.

೨) ವಿಮಲ ಅಂತಃಕರಣದ ಸಹಾಯದಿಂದ ಭೌತ, ಮಾನಸಿಕ, ಬೌದ್ಧಿಕ

ಹಾಗು ಅಹಂಕಾರಾತ್ಮಕ ಮಂಡಲಗಳನ್ನು ಮೀರಿ ಸಚ್ಚಿದಾನಂದ ಘನ ನಿರಾ ಮಯ ನಿರಂಜನ ದಿವ್ಯ ಚೈತನ್ಯದಲ್ಲಿ ಸಮರತಿ ಹೊಂದುವದು ನಿರ್ಗುಣೋ ಪಾಸನೆ. ತನ್ನ ಭಾವನಾನುಸಾರ ದೇವನಿಗೊಂದು ಮೂರ್ತರೂಪ ಕಲ್ಪಿಸಿ ಸದೈವ ಅನನ್ಯ ಭಾವದಿಂದ ಅದನ್ನೇ ಉಪಾಸಿಸುವದು ಸಗುಣೋಪಾಸನೆ. ಇವೆರಡರಲ್ಲಿ ಸಗುಣೋಪಾಸನೆಯು ಸುಲಭ. ನಿರ್ಗುಣೋಪಾಸನೆಯು ಕಠಿಣ. ತಾನು ಪ್ರಾಮಾ ಣಿಕನಾಗಿ ಸಂಪಾದಿಸಿದ ಸಂಪದವನ್ನು ದೇವನಿಗಾಗಿ ತ್ಯಜಿಸುವದು, ದೇಹಾದಿ ಗಳ ಭೋಗವನ್ನೆಲ್ಲ ಅವನಿಗೆ ನಿವೇದಿಸುವದು ಹಾಗು ಮನಸ್ಸಿನಿಂದ ಅವನ ಸಾಕಾರ ರೂಪಿನ ಚಿಂತನಮಾಡುವದು— ಈ ಮೂರರಿಂದ ಸಗುಣ ದೇವನ ದರ್ಶನ ಸಾಧ್ಯ. ನಿರ್ಗುಣ ಬ್ರಹ್ಮದ ಅನುಭೂತಿ ಸಮನಿಸಬೇಕಾದರೆ ಮಾತ್ರ ವಿಷಯ ವಿರಾಗ, ತತ್ತ್ವಗಳ ಪರಿಜ್ಞಾನ, ಹರಿತವಾದ ಮತಿ, ಚಿತ್ತದ ಅಪ್ರತಿಮ ಏಕಾಗ್ರತೆ— ಇವೆಲ್ಲ ಬೇಕು. ಮೀರಾಬಾಯಿ, ಕನಕದಾಸ, ಸೂರದಾಸ, ಮುಂತಾ ದವರು ಸಗುಣೋಪಾಸಕರು. ಋಷಿಗಳು, ಮುನಿಗಳು, ನಿರ್ಗುಣೋಪಾಸಕರು.

ಅರ್ಜುನ:—"ಭಗವಂತ, ಕೆಲವರು ತಮ್ಮದನ್ನೆಲ್ಲ ನಿನಗೆ ಅರ್ಪಿಸಿ, ಹಗಲು ರಾತ್ರಿ ನಿನ್ನನ್ನೇ ಭಜಿಸುತ್ತಾರೆ, ಇನ್ನು ಕೆಲವರು ವಿರಾಗ—ವಿವೇಕಗಳನ್ನು ಅಂಗ ವಿಸಿಕೊಂಡು ಅವ್ಯಕ್ತ ಅಕ್ಷರರೂಪನಾದ ನಿನ್ನನ್ನು ಚಿಂತಿಸುತ್ತಾರೆ. ಅವರಿಬ್ಬರಿಗೂ ನೀನು ಮುಕ್ತಿಯನ್ನೀಯುವೆ ಎಂಬುದನ್ನು ನಾನು ಬಲ್ಲೆ. ಆದರೆ, ಅವರಲ್ಲಿ ಯಾರು ಶ್ರೇಷ್ಠರು? ಎಂಬುದನ್ನು ತಿಳಿವ ಇಚ್ಛೆ."

### ಶ್ರೀ ಭಗವಾನ್ ಉವಾಚ

ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋಪೇತಾಸ್ತೇಮೇ ಯುಕ್ತತಮಾ ಮತಾಃ ॥೨॥

**ಅರ್ಥ:**— ಮಯಿ= ನನ್ನಲ್ಲಿ, ಯೇ= ಯಾರು, ಮನಃ ಆವೇಶ್ಯ ಮನಸ್ಸನ್ನು ನಿಲ್ಲಿಸಿ, ನಿತ್ಯಯುಕ್ತಾಃ= ಸರ್ವಕರ್ಮಾರ್ಪಣ ಮಾಡಿದವರಾಗಿ ಪರಯಾ ಶ್ರದ್ಧಯಾ= ಪರಮ ಶ್ರದ್ಧೆಯಿಂದ ಉಪೇತಾಃ = ಕೂಡಿದವರಾಗಿ ಮಾಂ= ನನ್ನನ್ನು ಉಪಾಸತೇ= ಉಪಾಸನೆ ಮಾಡುತ್ತಾರೆಯೋ ತೇ= ಅವರು ಯುಕ್ತತಮಾಃ= ಯುಕ್ತತಮರೆಂದು ಮೇ= ನನ್ನ ಮತಾಃ =ಅಭಿಮತವು.

**ವಿವರಣೆ:**— ಭಗವಂತ:— "ಧನಂಜಯ, ನಿನ್ನ ಪ್ರಶ್ನೆ ಸಮಯೋಚಿತ ವಾಗಿದೆ. ನಿಷ್ಪಕ್ಷಪಾತದಿಂದ ಉತ್ತರಿಸುತ್ತೇನೆ. ನನ್ನ ನಿಷ್ಕಲ್ಮಷ ಅಭಿಮತದಲ್ಲಿ ಭಕ್ತಿಯೇ ಅಧಿಕ. ಅದು ನನಗೆ ಅಚ್ಚು-ಮೆಚ್ಚು. ತಾಯಿ—ತಂದೆ ಗುರು-ಹಿರಿಯರು ಬಂಧು—ಬಾಂಧವರು ಅತಿಥಿಗಳು ದೀನ-ದಲಿತರು ದೇವನಿಗೆ ಸಮಾನರೆಂದು ಭಾವಿಸಿ ಅನುರಾಗ ಹಾಗು ಆದರ ತೋರುವದು ಭಕ್ತಿಯ ಪ್ರಥಮ ರೂಪು. ಮಾನವ ಕುಲಕೋಟಿಯೆಲ್ಲ ದೇವನ ಸಾಕಾರ-ವಿಸ್ತಾರವೆಂದು ತಿಳಿದು ಪ್ರೀತಿಸು ವದೂ ಸೇವಿಸುವದೂ ಭಕ್ತಿಯ ದ್ವಿತಿಯ ರೂಪು. ಮಾನವ ಕುಲವಷ್ಟೇ ಅಲ್ಲ,

ದಿಗ್ದಿಗಂತಗಳಲ್ಲಿ ಹರಡಿಕೊಂಡ ಜಡವಿಶ್ವವೆಲ್ಲ ಪರಮಾತ್ಮನಾದ ನನ್ನ ವಿರಾಟ ರೂಹೆಂದು ಅರಿತು ಪ್ರೀತಿಸುವದು ಭಕ್ತಿಯ ಅಂತಿಮ ರೂಪು! ಇದನ್ನು ರಕ್ತಗತ ಮಾಡಿಕೊಂಡವನು ಮಹಾತ್ಮ. ಅವನು ನಿರ್ಮೋಹಿ, ನಿಃಕಾಮಿ! ಅವನ ತನು, ಮನ, ಭಾವಗಳು ನನ್ನಲ್ಲಿ ಯೋಗಹೊಂದಿರುದರಿಂದ ಅವನು ನಿತ್ಯಯುಕ್ತ. ಅವನ ಮನಸ್ಸು ನನ್ನ ಅಸ್ತಿತ್ವಾಕಾಶದಲ್ಲಿ ಒಂದಾಗಿದೆ. ಪರಮಶ್ರದ್ಧೆ, ಅವಿಚಲ ನಿಷ್ಠೆಗಳಿಂದ ಕೂಡಿದ ಅವನು ತನ್ನ ದೇಹ, ಇಂದ್ರಿಯ, ಪ್ರಾಣ, ಮನಸ್ಸು ಎಲ್ಲವುಗಳಿಂದಲೂ ನನ್ನನ್ನು ಅರ್ಚಿಸುತ್ತಾನೆ. ಎಂದೇ ಅವನು ಯೋಗಯುಕ್ತತಮ!"

(೧) ಈ ಅಧ್ಯಾಯವು ಭಕ್ತಿಗಾಗಿ ಮೀಸಲು. ಇಲ್ಲಿರುವ ಉಪದೇಶವು ಬುದ್ಧಿಗ್ರಾಹ್ಯವಲ್ಲ, ಭಾವ ಗ್ರಾಹ್ಯ! ತರ್ಕವೇದ್ಯವಲ್ಲ, ಹೃದಯ ವೇದ್ಯ! ವಾದ ವಿವಾದಕ್ಕೆ ಇಲ್ಲಿ ತಿಲ ಮಾತ್ರವೂ ಅವಕಾಶವಿಲ್ಲ. ಈ ಉಪದೇಶದ ತುಂಬ ಪ್ರೇಮವು ಕಾರಂಜಿಯಾಗಿ ಚಿಮ್ಮಿದೆ.

(೨) ಮಾತಿಗಿಂತ ಭಾವ, ಅಭಿಮಾನಕ್ಕಿಂತ ಪ್ರೇಮ, ವಾದ ವಿವಾದಕ್ಕಿಂತ ಸೇವೆ ಸಹಸ್ರಕೋಟಿಪಾಲು ಮಿಗಿಲೆಂಬ ಸಂಗತಿಯನ್ನು ಗಮನಿಸಬೇಕು. ಇದು ಸಾಕ್ಷಾತ್ ಭಗವಂತನ ಅಭಿಪ್ರಾಯವಾಗಿದೆ. ಎಲ್ಲಿ ಭಕ್ತಿಯೋ, ಎಲ್ಲಿ ನಿಷ್ಕಲ್ಮಷ ಪ್ರೇಮವೋ ಅಲ್ಲಿ ಜಾತಿ ಸಂಪ್ರದಾಯ ಮತಧರ್ಮಗಳ ಗಾಳಿಯು ಸುಳಿಯದು; ರಾಗದ್ವೇಷಗಳ ಜ್ವಾಲೆ ಸುಗ್ಗದು; ಅಸೂಯೆ ಆಮಿಷಗಳ ಪ್ರವಾಹ ಪ್ರವೇಶಿಸದು.

(೩) ಭಕ್ತನು ಸಿದ್ಧಾಂತ ಪ್ರತಿಪಾದಕನಲ್ಲ, ಶಾಸ್ತ್ರ ಕೋವಿದನಲ್ಲ. ತಾರ್ಕಿಕ ಕದನಪ್ರೇಮಿಯಲ್ಲ. ದೇಶ ಭಾಷೆ ತತ್ತ್ವ ಸಿದ್ಧಾಂತ ಯಾವ ಅಭಿಮಾನವೂ ಅವನಲ್ಲಿಲ್ಲ. ಅವನಿಗೆ ಒಂದೇ ಒಂದು ಧ್ಯಾನ– ದೇವನನ್ನು ಕಣ್ತುಂಬ ನೋಡಬೇಕು, ಆರಾಧಿಸಬೇಕು ಎಂದು! ಅವನ ಒಳಹೊರಗೆಲ್ಲ ದೇವನೇ ತುಂಬಿಕೊಂಡಿದ್ದಾನೆ! ಭಕ್ತಿವಿಹೀನರಾದ ವೇದ ವೇದಾಂತ ಪಂಡಿತರು ಹಾಗಲ್ಲ. ಬೌದ್ಧಿಕ ತತ್ತ್ವಪರಿಶೀಲನೆಗೆ ತೊಡಗಿದ ಅವರು ಮೂಲ ದೇವನನ್ನೇ ಮರೆತು ತಮ್ಮ ತಮ್ಮ ಅಭಿಪ್ರಾಯಗಳ ಮಂಡನೆಗೆ ತೊಡಗಿದರು. ಸ್ವಾರ್ಥ ಮಾತ್ಸರ್ಯ ಹಾಗು ವ್ಯಾಮೋಹಗಳ ಬಲೆಗೆ ಬಿದ್ದರು. ಅವರಿಗೆ ದೇವ ದರ್ಶನ ಹೇಗೆ ಸಾಧಿಸೀತು? ಆದುದರಿಂದಲೇ ಭಕ್ತನು ಪರಮೋತ್ತಮ ಎಂದಿದ್ದಾನೆ ಭಗವಂತ.

ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।<br>
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥೩॥<br>
ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।<br>
ತೇ ಪ್ರಾಪ್ನುವಂತಿ ಮಾಮೇವ ಸರ್ವ ಭೂತಹಿತೇ ರತಾಃ ॥೪॥

ಅರ್ಥ:–ಸರ್ವತ್ರ ಸಮಬುದ್ಧಯಃ =ಸಾರ್ವಕಾಲಿಕ ಹಾಗು ಸಾರ್ವಸ್ಥಾನಿಕ ಸಮಬುದ್ಧಿಯುಳ್ಳವರು, (ಹಾಗು) ಸರ್ವಭೂತಹಿತೇ ರತಾಃ =ಸರ್ವ ಪ್ರಾಣಿಗಳ ಹಿತದಲ್ಲಿ ರತರಾದವರು, ಇಂದ್ರಿಯ ಗ್ರಾಮಂ ಸಂನಿಯಮ್ಯ =ಇಂದ್ರಿಯ ಸಮುದಾಯವನ್ನು ನಿಗ್ರಹಿಸಿ, ಅನಿ

ರ್ದೇಶ್ಯಂ= ನಿರ್ದೇಶಿಸಲು ಅಶಕ್ಯವಾದ, ಅವ್ಯಕ್ತಂ =ಅವ್ಯಕ್ತವಾದ, ಸರ್ವತ್ರಗಂ= ಸರ್ವ ವ್ಯಾಪಿಯಾದ ಅಚಿಂತ್ಯಂ =ಚಿಂತಿಸಲಸಾಧ್ಯವಾದ ಕೂಟಸ್ಥಂ =ಕೂಟಸ್ಥವಾದ, ಅಚಲಂ = ಸುಸ್ಥಿರವಾದ ಧ್ರುವಂ =ಶಾಶ್ವತವಾದ ಅಕ್ಷರಂ =ಅಕ್ಷರಬ್ರಹ್ಮನನ್ನು ಯೇ = ಯಾರು ಪರ್ಯು ಪಾಸತೇ= ಉಪಾಸನೆ ಮಾಡುತ್ತಾರೆಯೋ, ತೇ =ಅವರು. ಮಾಂ ಏವ= ನನ್ನನ್ನೇ. ಪ್ರಾಪ್ನು ವಂತಿ= ಹೊಂದುತ್ತಾರೆ.

ವಿವರಣೆ:– ಪರಮಾತ್ಮನು ಅಕ್ಷರ ಅನಿರ್ದೇಶ್ಯ ಅವ್ಯಕ್ತ ಅಚಿಂತ್ಯ ಅಚಲ ಸರ್ವತ್ರಗ ಕೂಟಸ್ಥ ಮತ್ತು ಧ್ರುವ. ಮೊದಲಿನ ಐದು ವರ್ಣನಾಪರ ಪದಗಳು ನಿಷೇಧಾತ್ಮಕವಾಗಿವೆ; ಉಳಿದ ಮೂರು ವಿಧೇಯಾತ್ಮಕವಾಗಿವೆ. ಅವುಗಳನ್ನು ಒಂದೊಂದಾಗಿ ಅರಿಯೋಣ.

(೧) ಅಕ್ಷರ:– ಕ್ಷರ ಎಂದರೆ ವಿನಾಶ. ವ್ಯಷ್ಟಿ ಮತ್ತು ಸಮಷ್ಟಿ ವಿಶ್ವಗಳು ಸಾದಿ ಸಾಂತವಾದುದರಿಂದ ಕ್ಷರ. ವ್ಯಷ್ಟಿಯಲ್ಲಿ ಪ್ರತ್ಯಗಾತ್ಮನಾಗಿ ಇರುವ, ಸಮ ಷ್ಟಿಯಲ್ಲಿ ನಿಯಂತಾರನಾಗಿರುವ ದೇವನು ಮಾತ್ರ ಅನಾದಿ ಅನಂತ. ಆದ್ದರಿಂದ ಅಕ್ಷರ.

(೨) ಅನಿರ್ದೇಶ್ಯ:– ಶಬ್ದ ಸಂಕೇತಕ್ಕೆ ನಿಲುಕುವಂಥದು ನಿರ್ದೇಶ್ಯ. ಜಾತಿ ಗುಣ ಕ್ರಿಯಾ ಮತ್ತು ಸಂಬಧವುಳ್ಳುದು ನಿರ್ದೇಶ್ಯ. ಉದಾ: ಪುಷ್ಪ. ಇದರಲ್ಲಿ ಪುಷ್ಪತ್ವಜಾತಿ, ನೀಲ ರಕ್ತಾದಿ ವರ್ಣರೂಪ ಗುಣ, ವಿಕಸನಾದಿ ಕ್ರಿಯಾ ಹಾಗು ಜಾತಿ ವ್ಯಕ್ತಿ, ಗುಣಗುಣಿ, ಕ್ರಿಯಾ ಕ್ರಿಯಾಯುಕ್ತಗಳ ಮಧ್ಯದಲ್ಲಿ ಸಮವಾಯ ಸಂಬಂಧ ಈ ನಾಲ್ಕು ಸಂಗತಿಗಳಿವೆ. ಆದ್ದರಿಂದ ಪುಷ್ಪವು ನಿರ್ದೇಶ್ಯ. ಅದೇ ರೀತಿ, ವಿಶ್ವವೆಲ್ಲ ಜಾತ್ಯಾದಿಯುಕ್ತವಾಗಿರುವ ಕಾರಣ ಅದು ನಿರ್ದೇಶ್ಯ. ಪರಮ ದೇವನು ಜಾತಿ, ಗುಣ, ಕ್ರಿಯಾ ಮತ್ತು ಸಂಬಂಧ ವಿರಹಿತನಾದುದರಿಂದ ಅನಿರ್ದೇಶ್ಯ.

೩)ಅವ್ಯಕ್ತ:– ಬಾಹ್ಯ ಮತ್ತು ಅಂತರ ಇಂದ್ರಿಯಗಳಿಗೆ ವೇದ್ಯವಾದುದು ವ್ಯಕ್ತ. ಜಾಗ್ರವು ಮನೋಯುಕ್ತ ಇಂದ್ರಿಯಗಳಿಗೆ ಗೋಚರ; ಸ್ವಪ್ನವು ವಾಸನಾ ಯುಕ್ತ ಮನಸ್ಸಿಗೆ ಗೋಚರ; ಸುಷ್ತಿಯು ತಮೋವೃತ್ತಿಗೆ ಗೋಚರ. ಆದ್ದ ರಿಂದ ಅವು ಮೂರೂ ವ್ಯಕ್ತ. ದೇವನು ಸರ್ವ ಇಂದ್ರಿಯಗಳಿಗೂ ಮನಸ್ಸಿಗೂ ಅಗೋಚರ ಹಾಗು ಸಕಲ ಅವಸ್ಥೆಗಳಿಗೆ ಅತೀತ. ಆದುದರಿಂದ ಅವನು ಅವ್ಯಕ್ತ.

(೪) ಅಚಿಂತ್ಯ:– ಪರಿಚ್ಛಿನ್ನವಾದ ವಸ್ತುಗಳು ಸುಚಿಂತ್ಯ, ಏಕೆಂದರೆ ಮನಸ್ಸು ಅವುಗಳನ್ನು ಚಿಂತಿಸಬಲ್ಲದು. ದೇವನು ಅಪರಿಚ್ಛಿನ್ನನಾದುದರಿಂದ ಮನಸ್ಸಿನ ಅಳವಿಗೆ ಸಿಕ್ಕಲಾರನಾಗಿ ಅಚಿಂತ್ಯ.

(೫) ಅಚಲ:– ಭೌತ ಪದಾರ್ಥಗಳು, ಪ್ರಾಣ ಇಂದ್ರಿಯ ಮನ ಬುದ್ಧಿ ಅಹಮುಗಳು, ಮಹತ್ತು ಪ್ರಕೃತಿಗಳು ಸದಾ ಪರಿಣಾಮ ಹೊಂದುತ್ತಿವೆಯಾಗಿ ಅವು ಸಚಲ. ದೇವನು ಎಂಥ ಪ್ರಸಂಗದಲ್ಲಿಯೂ ಪರಿಣಾಮ ಹೊಂದಲಾರನಾದು ದರಿಂದ ಅವನು ಅಚಲ.

(೬) ಸರ್ವತ್ರಗ:- ದೇವನು ಸರ್ವ ದೇಶ, ಕಾಲ, ವಸ್ತು ಅವಸ್ಥೆ ಹಾಗು ತತ್ತ್ವಗಳಲ್ಲಿ ಓತಪ್ರೋತನಾಗಿ ನೆಲೆಸಿದ್ದಾನೆ. ಅವನಿಲ್ಲದ ಅಣುವಿಲ್ಲ; ಅವನ ಸಾನಿಧ್ಯವಿಲ್ಲದ ಅಜಾಂಡವಿಲ್ಲ. ಅವನು ಅಮರ ಆಶ್ರಯ! ಆದುದರಿಂದ ಸರ್ವತ್ರಗ.

(೭) ಕೂಟಸ್ಥ:- ಕೂಟ ಎಂದರೆ ಗುಂಪು. ಗುಂಪಿನಲ್ಲಿ ವ್ಯಾಪಿಸಿದುದು ಕೂಟಸ್ಥ. ಇಂದ್ರಿಯ, ಮನ, ಬುದ್ಧಿ ಮುಂತಾದ ಅನೇಕ ತತ್ತ್ವಗಳ ಸುಂದರ ಕೂಟವೇ ದೇಹ. ಈ ದೇಹ-ಕೂಟದಲ್ಲಿ ಅಲಿಪ್ತನೂ ವ್ಯಾಪಕನೂ ಆಶ್ರಯನೂ ಸಾಕ್ಷಿಯೂ ಆಗಿ ವಾಸಿಸಿದ ಪ್ರತ್ಯಗಾತ್ಮರೂಪ ದೇವನು ಕೂಟಸ್ಥ. ಅವನ ಪ್ರಕಾಶದ ಅಡಿಯಲ್ಲಿ ಅವೆಲ್ಲ ತತ್ತ್ವಗಳು ಕಾಣುತ್ತವೆ ಹಾಗು ಕಾರ್ಯ ಮಾಡುತ್ತವೆ.

(೮)ಧ್ರುವ:- ಪಿಂಡಾಂಡಗಳೂ ಬ್ರಹ್ಮಾಂಡಗಳೂ ಉದಿಸಿ ಬಾಳಿ ಕೊನೆಗೆ ಅಳಿಯುತ್ತವೆ. ಪ್ರಕೃತಿಯು ವಿಕಾಸ ಸಂಕೋಚ ಸ್ವಭಾವವುಳ್ಳುದಾಗಿದೆ. ಆದರೆ ದೇವನು ಹುಟ್ಟುವ ವಸ್ತುಗಳೊಂದಿಗೆ ಹುಟ್ಟುವದಿಲ್ಲ, ಸಾಯುವ ಪದಾರ್ಥಗಳೊಂದಿಗೆ ಸಾಯುವದಿಲ್ಲ. ಅವನು ಸಂಕೋಚ ವಿಕಾಸಶೀಲನಲ್ಲ. ಆದ್ದರಿಂದ ಧ್ರುವ! ಬರೀ ಸಾಕ್ಷಿ!!

ಹೀಗೆ ಅಷ್ಟ ಲಕ್ಷಣಗಳಿಂದ ಸ್ತುತಿಗೊಳ್ಳುವ ದೇವನಲ್ಲಿ ಸಾಧಕನು ತನ್ನ ಸ್ವತ್ತು-ಸಂಪದವನ್ನು ಅಶೇಷವಾಗಿ ಸಮರ್ಪಿಸಬೇಕು; ಹಾಗು ಅವನಲ್ಲಿ ಬೆರೆತು ಒಂದಾಗಬೇಕು ಅಲ್ಲವೆ? ಆ ಸಾಮರಸ್ಯ ಸಿದ್ಧಿಸಬೇಕಾದರೆ ಭಗವಂತನು ಮೂರು ಉಪಾಯಗಳನ್ನು ಹೇಳುತ್ತಾನೆ. ಅವು (೧) ಇಂದ್ರಿಯ ನಿಗ್ರಹ. (೨) ಸಮ ಬುದ್ಧಿ. (೩) ಭೂತಹಿತರತಿ.

(೧) ಇಂದ್ರಿಯ ನಿಗ್ರಹ:- ಇಂದ್ರಿಯಗಳನ್ನು ಪೂರ್ಣವಾಗಿ ನಿಗ್ರಹಿಸುವದು ಇಂದ್ರಿಯ-ಸಂಯಮನ. ಅಂದರೆ ಅಹಿತಕಾರಿ ವಸ್ತುಗಳತ್ತ ಹರಿಬಿಡದೆ ಹಿತಶೀಲ ವಿಷಯಗಳಲ್ಲಿಯೇ ಇಂದ್ರಿಯಗಳು ವ್ಯವಹರಿಸುವಂತೆ ಮಾಡುವದು ನಿಗ್ರಹ. ಉದಾ: ಶೃಂಗಾರ ಪದಗಳನ್ನು ಕೇಳುವದ ಬಿಟ್ಟು ದೇವಕೀರ್ತನ ಆಲಿಸುವದು ಶ್ರವಣೇಂದ್ರಿಯ ನಿಗ್ರಹ. ಸ್ತ್ರೀ ಪುತ್ರಾದಿಗಳ ಆಸಕ್ತಿ ವರ್ಜಿಸಿ ಗುರು ದೇವತಾ ವೃಂದವನ್ನು ನೋಡುವದು ಚಕ್ಷುರಿಂದ್ರಿಯ ನಿಗ್ರಹ. ಬಸವಣ್ಣನವರು ಈ ನಿಗ್ರಹದ ಬಗ್ಗೆ ಹೇಳುತ್ತಾರೆ:

> "ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ. ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ. ಮತ್ತೊಂದು ಕೇಳದಂತೆ ಕಿವುಡನ ಮಾಡಯ್ಯ ತಂದೆ.
> ನಿಮ್ಮ ಶರಣರ ಪಾದವಲ್ಲದೆ ಅನ್ಯಕ್ಕೆಳಸದಂತೆ ಇರಿಸು ಕೂಡಲ ಸಂಗಮ ದೇವಾ."

ನಮ್ಮ ಸುತ್ತ ಧನ ಧಾನ್ಯಾದಿ ನೂರಾರು ವಸ್ತುಗಳು ಹರಡಿಕೊಂಡಿರುವದು ಸಹಜ. ಅವುಗಳ ಮಧ್ಯದಲ್ಲಿಯೇ ಇದ್ದರೂ ದೇವನಿಗೆ ಸಂಬಂಧಪಟ್ಟ ಶಬ್ದಾದಿ ವಿಷಯಗಳಲ್ಲಿಯೇ ಮನಸ್ಸನ್ನು ತನ್ಮಯಗೊಳಿಸುವದು ಬುದ್ಧಿವಂತಿಕೆ. ಇದು

ವಶೀಕಾರ ವಿರಾಗ. ವಿಷಯಗಳು ತನ್ನ ವಶ; ತಾನು ಅವುಗಳ ವಶನಲ್ಲ. ಒಟ್ಟಿನಲ್ಲಿ ಬಾಹ್ಯ ಮತ್ತು ಅಂತರಿಂದ್ರಿಯಗಳೆರಡೂ ಧರ್ಮಜೀವನಕ್ಕೆ ಹಿತವಾದ ರೀತಿಯಲ್ಲಿ ವ್ಯವಹರಿಸುವದು ಮುಖ್ಯ.

(೨) ಸಮಬುದ್ಧಿ:- ಬ್ರಾಹ್ಮಣ ಶೂದ್ರ, ಪಂಡಿತ ಪಾಮರ, ಧನಿಕ ದರಿದ್ರ ಎಲ್ಲರನ್ನು ಒಂದೇ ದೃಷ್ಟಿಯಿಂದ ನೋಡುವದು ಸಮಬುದ್ಧಿ. ಜಡ ಅಜಡಗಳ ಮಧ್ಯದ ಬೇದ ಭಾವನೆಯನ್ನು ಪರಿತ್ಯಜಿಸಿ ವಿಶ್ವಾಂತರ್ಯದಲ್ಲಿ ನೆಲೆಸಿದ ಭಗವಂತನನ್ನು ಕಾಣುವದು ಸಮಬುದ್ಧಿ! ಜಾತಿ ಕುಲ ಮತಗಳ ಕಲ್ಪನೆಯನ್ನೇ ಕಡೆಗಣಿಸಿ ಜಗತ್ತೇ ಭಗವಂತನ ಆನಂದ ನಿಲಯವೆಂದು ತಿಳಿಯುವದೇ ಸಮಬುದ್ಧಿ!!

(೩) ಭೂತಹಿತರತಿ:– ಸಕಲ ಜೀವಿಗಳನ್ನು ಹೃದಯತಃ ಪ್ರೀತಿಸುವದು. ಅವುಗಳ ಹಿತಕ್ಕಾಗಿ ಶ್ರಮಿಸುವದು ಹಾಗು ಅವುಗಳ ಉದ್ಧಾರಕ್ಕಾಗಿ ಚಿಂತಿಸುವದು ಸರ್ವ ಭೂತಹಿತರತಿಯಾಗಿದೆ.

ಭಗವಂತ:– "ಅರ್ಜುನ, ಯಾರು ಅಹಿತ ವಿಷಯಗಳಿಂದ ತಮ್ಮ ಕರಣಗಳನ್ನು ಪರಾವೃತಗೊಳಿಸಿದ್ದಾರೆಯೋ, ಯಾರು ಭಿನ್ನ–ಭೇದ ವ್ಯವಹಾರಕ್ಕೆ ಆಸ್ಪದವೀಯದೆ ಎಲ್ಲ ಜೀವಿಗಳನ್ನು ಸಮನಾಗಿ ಭಾವಿಸುತ್ತಾರೆಯೋ ಹಾಗು ವಿಶ್ವದ ಜಡಾಜಡ ವಸ್ತು ಮತ್ತು ವ್ಯಕ್ತಿಗಳೆಲ್ಲ ನನ್ನ ಸಾಕಾರ ರೂಪವೆಂದು ಭಾವಿಸಿ ಬಹು ಹೃದ್ಯವಾಗಿ ಅವುಗಳನ್ನು ಪ್ರೀತಿಸುತ್ತಾರೆಯೋ ಅವರು ನನ್ನನ್ನೇ ಹೊಂದುತ್ತಾರೆ. ಇದರಲ್ಲಿ ಸಂಶಯವಿಲ್ಲ."

ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥೫॥

ಅರ್ಥ:– ಅವ್ಯಕ್ತಾಸಕ್ತಚೇತಸಾಂ =ಅವ್ಯಕ್ತದಲ್ಲಿ ಆಸಕ್ತರಾದ ಚಿತ್ತವುಳ್ಳವರಿಗೆ, ಕ್ಲೇಶಃ =ಕಷ್ಟವು ಅಧಿಕತರಃ =ಹೆಚ್ಚು, ಹಿ= ಏಕೆಂದರೆ, ದೇಹವದ್ಭಿಃ= ದೇಹಾಭಿಮಾನಿಗಳಿಂದ, ಅವ್ಯಕ್ತಾ ಗತಿಃ=ಅವ್ಯಕ್ತ ಗತಿಯು, ದುಃಖಂ ಅವಾಪ್ಯತೇ= ದುಃಖದಿಂದ ಹೊಂದಲ್ಪಡುತ್ತದೆ.

ವಿವರಣೆ:- ೧)ಅವ್ಯಕ್ತಗತಿ–ಅವ್ಯಕ್ತಾಸಕ್ತಿ: ಮನಸ್ಸು ಮತ್ತು ಬುದ್ಧಿಗಳು ನಿಶ್ಚಲವಾದರೆ ಅಂತರಂಗದಲ್ಲಿ ಆತ್ಮದ ಬೆಳಗು ಆವಿರ್ಭವಿಸುತ್ತದೆ. ಅವಿದ್ಯಾದಿ ಕಾಲುಷ್ಯಗಳು ವಿನಷ್ಟವಾಗುತ್ತವೆ; ಅವುಗಳ ಸ್ಥಾನದಲ್ಲಿ ಶಾಂತಿ ಹಾಗು ದಿವ್ಯ ಸಂತಸಗಳು ಅವತರಿಸುತ್ತವೆ. ಸಾಧಕನು ಆ ಶಾಂತಿಯಲ್ಲಿ ತಲ್ಲೀನನಾಗುತ್ತಾನೆ. ಈ ತಲ್ಲೀನಾವಸ್ಥೆಯೇ ಅವ್ಯಕ್ತಗತಿ ಅಥವಾ ಜ್ಞಾನತೂರ್ಯ ಸ್ಥಿತಿ. (ಯೋಗತೂರ್ಯವು ಬೇರೆ. ಅದರಲ್ಲಿ ಒಂದು ಬಗೆಯ ಉನ್ಮಾದವಿದೆ. ಇಂದ್ರಿಯ ಹಾಗು ಮನಸ್ಸುಗಳು ನಿಶ್ಚೇಷ್ಟಿತವಾದುದರಿಂದ ವಿಚಿತ್ರವಾದ 'ಗುಂಗು' ಉಂಟಾಗಿದೆ. ಜ್ಞಾನ ತೂರ್ಯದಲ್ಲಿ ಉನ್ಮಾದವಿಲ್ಲ ಜಾಗ್ರತ ಪ್ರಜ್ಞೆ ಇದೆ).

ಜ್ಞಾನತೂರ್ಯರೂಪ ಅವ್ಯಕ್ತಗತಿಯನ್ನು ಪಡೆಯ ಬಯಸುವ ಜಾಣರೇ ಅವ್ಯಕ್ತಾಸಕ್ತರು. ಅವರ ಇಂದ್ರಿಯಗಳು ಸಂಯಮಿತ. ಮನಸ್ಸು ನಿರುದ್ಧ. ಬುದ್ಧಿ ಸಮ. ಕಾಣುವ ಜಗತ್ತನ್ನು ತ್ಯಜಿಸಿ ಕಾಣದ ಅದ್ಭುತ ಆತ್ಮತತ್ತ್ವದತ್ತ ಸಾಗುವ ಕಲೆ ಅವರಿಗೆ ಕರತಲಾಮಲಕ. ಅವರು ವಿಷಯಗಳನ್ನು ಅವಲೋಕಿಸುವ ಕ್ಷಣದಲ್ಲಿಯೇ ವಿಷಯಾವೃತ ನಾಮರೂಪಕ್ರಿಯೆಗಳ ಅಂತರ್ಯದಲ್ಲಿ ಅಡಗಿದ ದೇವನಲ್ಲಿ ತನ್ಮಯರಾಗಬಲ್ಲರು.

೨) ದೇಹಾಭಿಮಾನಿಗಳಿಗೆ ಮಾತ್ರ ಅವ್ಯಕ್ತಾಸಕ್ತರ ಅವ್ಯಕ್ತಗತಿಯು ಕಷ್ಟಸಾಧ್ಯ. ಏಕೆ? ಅವರು ಆಗಲೆ ವ್ಯಕ್ತವಾದ ವಿಷಯ–ಪ್ರಪಂಚದಲ್ಲಿ ಮನಸ್ಸನ್ನು ಪೂರ್ತಿ. ಮುಳುಗಿಸಿದ್ದಾರೆ. ಬಗೆ ಬಗೆಯ ರಾಗ–ನಾದ–ಮಾಧುರ್ಯ ಉಂಟಿದ ಕಿವಿ, ರೋಮಾಂಚನಕಾರಿ ಸ್ಪರ್ಶಸುಖ ಅನುಭವಿಸಿದ ಚರ್ಮ, ಚಿತ್ರ ವಿಚಿತ್ರ ವರ್ಣ ವೈಚಿತ್ರ್ಯಗಳ ಸೊಬಗ ಸವಿದ ಕಣ್ಣು, ಹತ್ತು ಬಗೆಯ ಮಿಶ್ರರಸಗಳ ರುಚಿನೋಡಿದ ನಾಲಿಗೆ, ವಿವಿಧ ಗಂಧಗಳ ಸ್ವೀಕರಿಸಿದ ಮೂಗು ಹಾಗು ಭಾವನೆ ಕಲ್ಪನೆಗಳ ಮೂಲಕ ಸುಂದರ ಮನೋರಾಜ್ಯ ಸೃಷ್ಟಿಸಿ ಆನಂದಿಸಿದ ಮನಸ್ಸು– ಇವೆಲ್ಲ ಒಮ್ಮೆಲೆಯೇ ಬಟ್ಟಬಯಲತ್ತ ಸುಗ್ಗಿ ನಿಸ್ತಬ್ಧವಾಗುವದೇನು ಸುಲಭವೆ? ಒಂದು ವೇಳೆ, ಅಂಥ ವಿಷಯಾರಾಮಿ ಜನರನ್ನು ಬಲವಂತವಾಗಿ ತತ್ತ್ವಶ್ರವಣ, ತತ್ತ್ವಚಿಂತನೆಗೆ ಹಚ್ಚಿದರೂ ಅವರ ಲಕ್ಷ್ಯ ಅಲ್ಲಿ ಉಳಿಯದು. ಅವರು ದೇವಾಲಯದಲ್ಲಿ ಕುಳಿತಿದ್ದರೇನು? ಮನೆ ಮಡದಿ ಮುಂತಾದ ಚಿತ್ರಗಳನ್ನೇ ಮನದಲ್ಲಿ ಕಾಣುತ್ತಾರೆ. ಇಂಥವರಿಗೆ ಅವ್ಯಕ್ತ ದೇವನ ದರ್ಶನವು ಸುಲಭವಾಗದು.

ಭಗವಂತ:–"ಅರ್ಜುನ, ಆದ್ದರಿಂದಲೇ ನಾನು ಹೇಳುವದು, ಪರಮ ಅವ್ಯಕ್ತಗತಿಯನಿಚ್ಛಿಸಿ, ಜ್ಞಾನಮಾರ್ಗವನ್ನವಲಂಬಿಸಿ, ನಿರಾಕಾರ ಬ್ರಹ್ಮಚೇತನವನ್ನು ಉಪಾಸಿಸುವದೆಂದರೆ ದೇಹಾಭಿಮಾನಿಗಳಿಗೆ ಅತೀವ ಕಷ್ಟ ಎಂದು. ಅವರಿಗೆ ಸಾಕಾರೋಪಾಸನೆಯು ಕ್ಲೇಶಕರವಾದರೆ, ನಿರಾಕಾರೋಪಾಸನೆಯು ಕ್ಲೇಶತರ. ಕ್ಲೇಶತರ ಎಂದ ಮಾತ್ರಕ್ಕೆ ಜ್ಞಾನ ಮಾರ್ಗವು ನಿಷ್ಪ್ರಯೋಜಕವೆಂದಲ್ಲ. ಜಾಣ ಸಾಧಕನಿಗೆ ಅವರಷ್ಟು ಸುಲಭ ಅದೇ. ಸಾಮಾನ್ಯ ಸಾಧಕರು ಆಧ್ಯಾತ್ಮಿಕ ದೃಷ್ಟಿಯಲ್ಲಿ ನಿರ್ಬಲರಾದುದರಿಂದ ಅವರು ಆ ಅವ್ಯಕ್ತದತ್ತ ಮುಖ ಕೊಡದೆ ಸಾಕಾರದಲ್ಲಿ ಸಂಯಮನ ಸಾಧಿಸಲಿ. ಅವರಿಗೆ ಅದೇ ಸುಲಭ."

ಸಂಬಂಧ:– ಭಕ್ತಿಯಿಂದ ದೇವನನ್ನು ಭಜಿಸುವವರಿಗೆ ಮುಕ್ತಿ ನಿಶ್ಚಿತ.

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ।
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥೬॥
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರ ಸಾಗರಾತ್ ।
ಭವಾಮಿ ನಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥೭॥

**ಅರ್ಥ:**- ತು= ಆದರೆ, ಯೇ =ಯಾರು. ಸರ್ವಾಣಿ ಕರ್ಮಾಣಿ= ಸರ್ವ ಕರ್ಮಗಳನ್ನು, ಮಯಿ=ನನ್ನಲ್ಲಿ, ಸಂನ್ಯಸ್ಯ = [illegible]ಸಿ, ಮತ್ಪರಾಃ= ಮತ್ಪರರಾಗಿ (ನಾನೇ ಶ್ರೇಷ್ಠನೆಂದು ತಿಳಿದವರಾಗಿ) ಅನನ್ಯೇನ ಯೋಗೇನ =ಅನನ್ಯ ಯೋಗದಿಂದಲೇ (ಅನನ್ಯ ಭಾವದಿಂದಲೇ), ಮಾಂ ಧ್ಯಾಯಂತಃ ಉಪಾಸತೇ =ನನ್ನನ್ನು ಧ್ಯಾನಿಸುತ್ತ ಇರುವವರಾಗಿ ಉಪಾಸನೆ ಮಾಡುತ್ತಾರೆಯೋ, ಮಯಿ= ನನ್ನಲ್ಲಿ ಆವೇಶಿತ ಚೇತಸಾಂ =ಮನಸಿಟ್ಟ ಅವರಿಗೆ, ನ ಚಿರಾತ್ = ಶೀಘ್ರವಾಗಿ. ಮೃತ್ಯು ಸಂಸಾರ ಸಾಗರಾತ್ =ಮೃತ್ಯು ಸಂಸಾರ ಸಾಗರದಿಂದ, ಅಹಂ = ನಾನು, ಸಮುದ್ಧರ್ತಾ ಭವಾಮಿ= ಉದ್ಧಾರ ಮಾಡುವವನಾಗುತ್ತೇನೆ.

**ವಿವರಣೆ:**- (೧)ಪರಮಾತ್ಮನಿಗೆ ಸಾಕಾರ ನಿರಾಕಾರ ಎಂದು ಎರಡು ರೂಪು. ಸಾಕಾರ ಪೂಜಕರು ಸಾಲಂಬೋಪಾಸಕರು. ನಿರಾಕಾರ ಪೂಜಕರು ನಿರಾಲಂಬ ಉಪಾಸಕರು, ಮೊದಲಿನವರಲ್ಲಿ ಭಕ್ತಿ ಅಧಿಕ. ಎರಡನೆಯವರಲ್ಲಿ ಜ್ಞಾನ ಅಧಿಕ. ಭಕ್ತಿವಂತರು ದೇವ ಕೃಪಾಛತ್ರದಲ್ಲಿ ಬದುಕುತ್ತಾರೆ. ಜ್ಞಾನವಂತರು ಜ್ಞಾನ ಪ್ರಕಾಶದಡಿಯಲ್ಲಿ ಬಾಳುತ್ತಾರೆ. ಇಬ್ಬರೂ ಪಡೆವ ಸ್ಥಿತಿ ಒಂದೇಯಾದರೂ ಭಕ್ತರ ಮಾರ್ಗ ಸುಲಭ. ಜ್ಞಾನ ಶೀಲರ ಸಾಧನೆ ಕಠಿಣ.

(೨) ಭಕ್ತರು ತಾವು ಆಚರಿಸುವ ಸಕಲ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸುತ್ತಾರೆ; ಅವನೇ ಪರಾತ್ಪರ ಚಿದ್ವಸ್ತು, ಅವನಿಗಿಂತ ಅಧಿಕ ತತ್ತ್ವವೇ ಇಲ್ಲ; ಎಂದು ಭಾವಿಸುತ್ತಾರೆ. ಅನನ್ಯ ಮನಸ್ಸಿನಿಂದ ಅವನನ್ನು ಧ್ಯಾನಿಸುತ್ತಾರೆ. ಭಕ್ತಿ ಪ್ರೇಮಿಯಾದ ದೇವನು ಅವರನ್ನು ಮೃತ್ಯುರೂಪ ಸಂಸಾರ-ಸಾಗರದಿಂದ ಪಾರುಮಾಡುತ್ತಾನೆ; ಅದೂ ಬಹು ಶೀಘ್ರವಾಗಿ!

ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥೮॥

**ಅರ್ಥ:**- ಮಯಿ ಏವ ಮನ ಆಧತ್ಸ್ವ= ನನ್ನಲ್ಲಿಯೇ ಮನಸ್ಸಿಡು. ಮಯಿ ಬುದ್ಧಿಂ ನಿವೇಶಯ= ನನ್ನಲ್ಲಿ ಬುದ್ಧಿಯನ್ನು ಸೇರಿಸು. ಅತ ಊರ್ಧ್ವಂ ಮಯಿ ಏವ ನಿವಸಿಷ್ಯಸಿ= ಲೋಕ ಬಿಟ್ಟಬಳಿಕ ನನ್ನಲ್ಲಿಯೇ ನಿವಾಸ ಮಾಡುವಿ. ನ ಸಂಶಯ= ಈ ಮಾತಿನಲ್ಲಿ ಸಂಶಯವಿಲ್ಲ.

**ಭಾವ:**- "ಅರ್ಜುನ, ಸಂಕಲ್ಪ-ವಿಕಲ್ಪಾತ್ಮಕವಾದ ನಿನ್ನ ಮನಸ್ಸನ್ನು ನನ್ನಲ್ಲಿ ಪ್ರತಿಷ್ಠಾಪಿಸು. . ವ್ಯವಸಾಯಾತ್ಮಿಕ ಮತ್ತು ನಿಶ್ಚಯಾತ್ಮಕವಾದ ನಿನ್ನ ಬುದ್ಧಿಯನ್ನು ನನಗೆ ಸಮರ್ಪಿಸು. ನೀನು ಸಂಪಾದಿಸಿದ ಸಿರಿ, ಶಕ್ತಿ ಹಾಗು ವಿದ್ಯೆಗಳನ್ನು ಮದ, ಪರಪೀಡನ ಹಾಗು ವಾದ-ವಿವಾದಕ್ಕಾಗಿ ವ್ಯಯಿಸಬೇಡ. ದೀನ ದಲಿತರಿಗಾಗಿ ಧನ ಬಳಿಸು. ಗುರು-ಹಿರಿಯರ ಪೋಷಣೆ-ಪಾಲನೆಗಾಗಿ ಶಕ್ತಿಯನ್ನು ಉಪಯೋಗಿಸು. ಆತ್ಮಜ್ಞಾನಕ್ಕಾಗಿ ವಿದ್ಯೆಯನ್ನು ವಿನಿಯೋಗಿಸು. ಕನಸು ಮನಸ್ಸಿನಲ್ಲಿ ನನ್ನ ಧ್ಯಾನ ಸಾಗಿರಲಿ! ಹೀಗೆ ಮಾಡಿದೆಯಾದರೆ ನಿಃಸಂಶಯವಾಗಿ ನನ್ನಲ್ಲಿಯೇ ಪ್ರವೇಶಿಸುವೆ."

ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।
ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥೯॥

**ಅರ್ಥ:**- ಅಥ=ಒಂದು ವೇಳೆ, ಮಯಿ ಚಿತ್ತಂ ಸ್ಥಿರಂ ಸಮಾಧಾತುಂ=ನನ್ನಲ್ಲಿ ಚಿತ್ತ

ವನ್ನು ಸ್ಥಿರವಾಗಿಡಲು, ನ ಶಕ್ನೋಷಿ=ಶಕ್ತನಾಗದಿದ್ದರೆ, ತತಃ= ಅಮೇಲೆ, ಅಭ್ಯಾಸಯೋಗೇನ ಮಾಂ ಆಪ್ತುಂ ಇಚ್ಛ= ಧ್ಯಾನಾಭ್ಯಾಸಯೋಗದಿಂದ ನನ್ನನ್ನು ಹೊಂದಲು ಇಚ್ಛಿಸು.

ಭಾವಃ– "ಪಾರ್ಥ, ನಿನ್ನ ಮನಸ್ಸನ್ನು ಸದಾ ನನ್ನಲ್ಲಿ ನೆಲೆಗೊಳಿಸಲು ಸಾಧ್ಯವಾಗದಿದ್ದರೆ, ಅಭ್ಯಾಸಯೋಗಕ್ಕೆ ಸಿದ್ಧನಾಗು. ಸಂಸಾರವೆಂಬ ಮರುಳು ಗಾಡಿನಲ್ಲಿ ನಡೆಯುತ್ತಿರುವ ನೀನು ನನ್ನ ಅಮೃತಮಯ ನಾಮವನ್ನು ನುಡಿ; ಪುನಃ ಪುನಃ ನನ್ನನ್ನು ನೆನೆಸಿಕೊ(ಅದು ಅಭ್ಯಾಸಯೋಗ). ಅಂದರೆ ಮಾತ್ರ, ಆ ದುರ್ಗಮ ಮರುಳ್ಗಾಡಿನಿಂದ ಪಾರಾಗುವಿ. ಶಾಂತಿಯನ್ನು ಹೊಂದುವಿ. ನನ್ನಲ್ಲಿ ಬೆರೆಯುವಿ."

ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।
ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ ॥೧೦॥
ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।
ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥೧೧॥

ಅರ್ಥ:-ಅಭ್ಯಾಸೇ ಅಪಿ= ಅಭ್ಯಾಸದಲ್ಲಿಯೂ ಅಸಮರ್ಥಃ ಅಸಿ= ನೀನು ಅಸಮರ್ಥನಾಗಿದ್ದರೆ ಮತ್ಕರ್ಮ ಪರಮಃ= ಮತ್ಕರ್ಮಪರನಾಗು (ನನಗಾಗಿ ಕರ್ಮಮಾಡುವಲ್ಲಿ ನಿರತನಾಗು). ಮದರ್ಥಃ=ನನಗಾಗಿ ಕರ್ಮಾಣಿ ಕುರ್ವನ್ನಪಿ= ಕರ್ಮಮಾಡುತ್ತಿದ್ದರೂ ಸಿದ್ಧಿಂ ಅವಾಪ್ಸ್ಯಸಿ= ಸಿದ್ಧಿಯನ್ನು ಹೊಂದುವಿ. ಅಥ= ಒಂದುವೇಳೆ ಏತತ್ ಅಪಿ ಕರ್ತುಂ ಅಶಕ್ತಃ ಅಸಿ= ಇದನ್ನುಕೂಡ ಮಾಡಲು ಅಶಕ್ತನಾದರೆ ಯತಾತ್ಮವಾನ್= ಯತಾತ್ಮನಾಗಿ (ಚಿತ್ತನಿಗ್ರಹಿಸಿದವನಾಗಿ) ಮದ್ಯೋಗಂ ಆಶ್ರಿತಃ= ನನ್ನ ಯೋಗವನ್ನು ಆಶ್ರಯಿಸಿದವನಾಗಿ (ಸರ್ವಕರ್ಮಾರ್ಪಣಾರೂಪ ಯೋಗವನ್ನು ಹೊಂದಿದವನಾಗಿ) ಸರ್ವಕರ್ಮ ಫಲತ್ಯಾಗಂ ಕುರು= ಸರ್ವಕರ್ಮ ಫಲಗಳನ್ನು ತ್ಯಾಗಮಾಡು.

ವಿವರಣೆ:- (೧) ಮನಸ್ಸು ಅದೆಷ್ಟುಸಲ ವಿಷಯಗಳತ್ತ ಹರಿದರೂ ಮತ್ತೆ ಮತ್ತೆ ಅದನ್ನು ಒಳಗೆ ಜಗ್ಗಿ ದೇವನ ನಾಮಸ್ಮರಣೆಗೆ ದೇವನ ಚರಣ ಚಿಂತನೆಗೆ ಹಚ್ಚುವದು ಅಭ್ಯಾಸ. ಪರಮಾತ್ಮ ವಿಷಯಕ ಶ್ರವಣ, ಕೀರ್ತನ, ಸ್ಮರಣ, ಪಾದ ಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಹಾಗು ಆತ್ಮನಿವೇದನ ಇಂಥ ಪವಿತ್ರ ಕಾರ್ಯಗಳಲ್ಲಿ ರತನಾಗುವದು ಮತ್ಕರ್ಮಪರತೆ. ಕರ್ಮಗಳೆಲ್ಲ ಪರಮಾತ್ಮನಿಗಾಗಿ ಎಂದು ಭಾವಿಸಿ ಆಚರಿಸುವದು ಮತ್ತು ದೇವನಿಗೆ ಪೂರ್ಣ ಶರಣಾಗುವದು ಮದ್ಯೋಗಾಶ್ರಮ. ಮನಸ್ಸನ್ನು ವಿಷಯಗಳತ್ತ ಹರಿಬಿಡದೆ ನಿಗ್ರಹಿಸುವದು ನಿಯತಾತ್ಮತಾ. ಕರ್ಮದಿಂದ ಪ್ರಾಪ್ತವಾಗುವ ಫಲಗಳನ್ನು ದೇವಚರಣದಲ್ಲಿ ಸಮರ್ಪಿಸುವದು ಕರ್ಮಫಲತ್ಯಾಗ.

ಭಗವಂತ:- "ಧನಂಜಯ, ಅಭ್ಯಾಸಮಾಡುವ ಸಾಮರ್ಥ್ಯ ನಿನಗಿಲ್ಲವಾದರೆ ಮತ್ಕರ್ಮಪರನಾಗು. ಅಂದರೆ ಪುರಾಣ ಪುಣ್ಯಕಥೆಗಳನ್ನಾಲಿಸು. ನನ್ನ ವಿವಿಧ ನಾಮಸಂಕೀರ್ತನೆ ಮಾಡು. ಎದ್ದರೂ ಕುಳಿತರೂ ನನ್ನನ್ನು ಸ್ಮರಿಸು. ನನ್ನ ಚರಣ ಸೇವೆಗೈ. ಬಗೆ ಬಗೆಯ ಉಪಚಾರಗಳಿಂದ ನನ್ನನ್ನು ಪೂಜಿಸು. ಹಾರ್ದಿಕವಾಗಿ

ನನಗೆ ತಲೆಬಾಗಿಸು. ಅಹಂಭಾವ ತಾಳದೆ ನನ್ನ ಹಾಗು ನನ್ನನ್ನರಿತ ಮಹಾತ್ಮರ ದಾಸನಾಗಿ ಬಾಳು, ನನ್ನೊಂದಿಗೆ ಸಹಜ ಸಖ್ಯಭಾವದಿಂದ ವರ್ತಿಸು. ಕೊನೆಯು ದಾಗಿ ನಿನ್ನದನ್ನೆಲ್ಲ ನನ್ನಲ್ಲಿ ನಿವೇದಿಸು. ಈ ನವವಿಧ ಕರ್ಮಪರತೆಯಿಂದ ನಿನ್ನ ಚಿತ್ತವು ಶುದ್ಧವಾಗುತ್ತದೆ. ಆ ಚಿತ್ತದಲ್ಲಿ ಆತ್ಮಪ್ರಭೆ ಬೆಳಗುತ್ತದೆ. ಆ ಪ್ರಭೆ ಯಲ್ಲಿ ನೀನು ಒಂದಾಗುವಿ. ಅದು ಅಂತಿಮ ಸಿದ್ಧಿ.

"ಪಾರ್ಥ, ನಾನೊಬ್ಬ ದೈವೀ ವ್ಯಾಪಾರಿ. ನಿನ್ನಂಥ ಗಿರಾಕಿಗಳು ಮುಕ್ತಿ ಬೇಡಲು ಬಂದಾಗ ಅವರಿಗೆ ಒಗ್ಗುವ ರೀತಿಯಲ್ಲಿ ಮುಕ್ತಿಯನ್ನು ಕೊಟ್ಟೇ ತೀರುವೆ. ಬರಿಗೈಯಿಂದ ಕಳಿಸುವ ಸ್ವಭಾವ ನನ್ನದಲ್ಲ. ಭಾರತ, ಮತ್ಕರ್ಮಪರತೆ ಕೂಡ ನಿನಗೆ ಸಾಧ್ಯವಾಗದಿದ್ದರೆ ಅದಕ್ಕಿಂತ ಬೇರಾದ ಹಾಗು ನಿನಗೆ ಸುಲಭವೆನಿಸಬಹುದಾದ ಪಥವನ್ನು ತೋರುವೆ."

"ಮದ್ಯೋಗಮಾಶ್ರಿತಃ, ನಾನು ವಿಶ್ವನಿಯಾಮಕ ದೇವನು; ನನಲ್ಲಿ ಪೂರ್ಣವಾದ ವಿಶ್ವಾಸವಿಡು. ನಾನೇ ಅಂತಿಮ ಶರಣ್ಯನೆಂದು ನಂಬು. ನಿನ್ನ ಮನಸ್ಸು ನಿಯತವೂ ನಿಷ್ಕಲ್ಮಷವೂ ಆಗಿರಲಿ. ಮಕ್ಕಳಂತೆ ಮುಗ್ಧಭಾವ ತಾಳು. ಬಳ್ಳಿ ಗಿಡವನ್ನಾಶ್ರಯಿಸಿದಂತೆ ಪತಿವ್ರತೆಯು ಪತಿಯನ್ನಾಶ್ರಯಿಸಿದಂತೆ ನೀನು ಗುರು ದೇವ ಶಾಸ್ತ್ರಗಳನ್ನು ಅವಲಂಬಿಸು. ಸದಾ ಬಲ್ಲವರ ಸೇವಾಸಂಗದಲ್ಲಿರು. ಅವರು ನಿನ್ನನ್ನು ನನ್ನೆಡೆಗೆ ಕರೆದು ತರುತ್ತಾರೆ. ನನ್ನ ಕಾರುಣ್ಯ ಕ್ಷೇತ್ರದಲ್ಲಿ ನೀನು ಕಾಲು ಹಾಕಿದೆಯಾದರೆ ನಿನ್ನನ್ನು ಕಾಪಾಡುವ ಹೊಣೆ ನನ್ನದು. ನಿನಗೆ ಸರಿ ಎನಿಸುವ ಯಾವ ಕರ್ಮ ಮಾಡಿದರೂ ಅದರ ಕರ್ತೃತ್ವಭಾವ ಇಟ್ಟುಕೊಳ್ಳದೆ ನಾನೇ ಕರ್ತೃವೆಂದು ಪರಿಭಾವಿಸು. ಕರ್ಮ ಫಲಗಳನ್ನು ನನ್ನ ಚರಣ ಕಮಲ ದಲ್ಲಿ ಇಟ್ಟುಬಿಡು. ಹೀಗೆ ಮಾಡಿದರೆ ನಿನಗೆ ಪರಮ ಮುಕ್ತಿಯನ್ನು ಕೊಟ್ಟೇ ತೀರುವೆ."

ಶ್ರೇಯೋಹಿ ಜ್ಞಾನಮಭ್ಯಾಸಾಜ್ಜ್ಞಾನಾಧ್ಯಾನಂ ವಿಶಿಷ್ಯತೇ ।
ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ॥೧೨॥

ಅರ್ಥ:- ಹಿ =ಏಕೆಂದರೆ, ಅಭ್ಯಾಸಾತ್ ಜ್ಞಾನಂ ಶ್ರೇಯಃ= ಅಭ್ಯಾಸಕಿಂತಲೂ ಜ್ಞಾನವು ಶ್ರೇಯಸ್ಕರವಾದುದು ಜ್ಞಾನಾತ್ ಧ್ಯಾನಂ ವಿಶಿಷ್ಯತೇ= ಜ್ಞಾನಕ್ಕಿಂತ ಧ್ಯಾನವು ಉತ್ತಮವಾಗಿದೆ. ಧ್ಯಾನಾತ್ಕರ್ಮಫಲ ತ್ಯಾಗಃ =ಧ್ಯಾನಕ್ಕಿಂತ ಕರ್ಮ ಫಲ ತ್ಯಾಗವು ಉತ್ತಮ ತ್ಯಾಗಾತ್ ಅನಂತರಂ ಶಾಂತಿಃ= ಆ ತ್ಯಾಗದಿಂದ ಕೂಡಲೇ ಶಾಂತಿಯು ಉಂಟಾಗುತ್ತದೆ.

ವಿವರಣೆ:-(೧) ಅಭ್ಯಾಸ-ಸ್ನಾನ, ಅರ್ಚನ, ಜಪ, ತಪ, ವೇದಾಧ್ಯಯನ ವೇದಪಠನ, ಗುರೂಪದೇಶ ಶ್ರವಣ ಈ ಪಾವನ ಕರ್ಮಗಳಿಗೆ ಅಭ್ಯಾಸ ಎಂಬ ನಾಮ. (೨) ಜ್ಞಾನ- ತಾನು ಅಧ್ಯಯನ ಮಾಡಿದ ವೇದಗಳ ಮರ್ಮ ಅರಿ ಯುವದು ಹಾಗು ಗುರುವಚನಗಳ ಅಂತರ್ಯ ಗ್ರಹಿಸುವದು ಜ್ಞಾನ. ಜ್ಞಾನಿಯು ಆತ್ಮ ಅನಾತ್ಮ ತತ್ತ್ವಗಳನ್ನು ವಿವೇಕದಿಂದ ಬೇರ್ಪಡಿಸುತ್ತಾನೆ.

ಅನಾತ್ಮ ವಸ್ತುಗಳ ಹಾಗು ಆತ್ಮ ವಸ್ತುವಿನ ಯಥಾರ್ಥ ಲಕ್ಷಣಗಳನ್ನು ಅವ ಧರಿಸುತ್ತಾನೆ. (೩) ಧ್ಯಾನ– ಅನಾತ್ಮ ಪ್ರಪಂಚದ ವ್ಯಾಮೋಹ ನೀಗಿ, ಮನೋ ಗತ ಆಶೆ-ಆಮಿಷಗಳನ್ನು ಪರಿತ್ಯಜಿಸಿ, ಗುರು–ಶ್ರುತಿ–ನಿರ್ದಿಷ್ಟ ಪಥಹಿಡಿದು ಪರಮ ಪವಿತ್ರವಾದ ಪ್ರತ್ಯಗಾತ್ಮಭಾಸ್ಕರನತ್ತ ಸಾಗುವದು ಹಾಗು ಮನ ಸ್ಸನ್ನು ಅವನಲ್ಲಿ ನೆಲೆಗೊಳಿಸುವದು ಧ್ಯಾನ. ಧ್ಯಾನದ ಪರಿಪಕ್ವ ಅವಸ್ಥೆಯೇ ಸಮಾಧಿ! ಅಲ್ಲಿ ಜೀವ-ದೇವರ ಭೇದವಿಲ್ಲ. ಜಡ ಅಜಡಗಳ ಭಾನವಿಲ್ಲ. ಕೇವಲ ಚೈತನ್ಯಾಸ್ತಿತ್ವದ ಅಖಂಡ ಪ್ರಜ್ಞೆಯೊಂದೇ ಬಾಳಿಕೊಂಡಿದೆ. (೪) ಕರ್ಮ ಫಲತ್ಯಾಗ – ಅಖಂಡ ಸಮಾಧಿಯಿಂದ ಉತ್ಥಾನನಾದ ಧ್ಯಾನಯೋಗಿಯು ದೇಹಧಾರಿಯಾಗಿ ಬದುಕುತ್ತಾನೆ; ಆದರೆ ಅವನಲ್ಲಿ ಕರ್ಮಕರ್ತೃತ್ವಭಾವ ಉಳಿ ಯದು; ಅವನು ತನ್ನ ದೇಹ, ಇಂದ್ರಿಯ, ಮನ, ಬುದ್ಧಿಗಳಿಂದ ನಿರ್ವಹಿಸಿದ ಲೋಕ ಹಿತಕರ್ಮಗಳನ್ನು ಆ ಕರ್ಮಗಳ ಫಲಗಳನ್ನು ವಿಶ್ವಾತ್ಮನಿಗೆ ಸಮರ್ಪಿ ಸುತ್ತಾನೆ. ಇದೇ ಕರ್ಮಫಲತ್ಯಾಗಯೋಗ! (೫) ಶಾಂತಿ–ನಂತರ (ಅಂದರೆ ಫಲ ತ್ಯಾಗಾನಂತರ) ಎಂದೆಂದಿಗೂ ಅಳಿಯದ ಅನಂತ ಶಾಂತಿಯನ್ನು ಆ ಯೋಗಿಯು ಅನುಭವಿಸುತ್ತಾನೆ.

ಭಗವಂತ:– " ಧರ್ಮಾನುಗ, ಅಭ್ಯಾಸ ಜ್ಞಾನ ಧ್ಯಾನ ಹಾಗು ಕರ್ಮ ಫಲತ್ಯಾಗಗಳು ಸಾಧನೆಯ ಉತ್ತರೋತ್ತರ ಹಂತಗಳು. ಅಭ್ಯಾಸಕ್ಕಿಂತ ಜ್ಞಾನವು ಶ್ರೇಷ್ಠ, ಜ್ಞಾನಕ್ಕಿಂತ ಧ್ಯಾನವು ಶ್ರೇಷ್ಠ, ಆ ಧ್ಯಾನಕ್ಕಿಂತ ಕರ್ಮ ಫಲತ್ಯಾಗವು ಶ್ರೇಷ್ಠ ಈ ನಾಲ್ಕನ್ನು ಅಂಗವಿಸಿಕೊಂಡರೆ ಚಿರಂತನ ಶಾಂತಿಯು ಕೈವಶ."

ಸಂಬಂಧ:- ಭಕ್ತನಲ್ಲಿ ಅತ್ಯವಶ್ಯವಾಗಿ ಇರಬೇಕಾದ ಹಾಗು ಪರಮಾತ್ಮನ ಅನುಗ್ರಹಪ್ರಾಪ್ತಿಗೆ ಕಾರಣವಾದ ಅಮೌಲ್ಯ ಧರ್ಮಗಳ ಬಗ್ಗೆ ಮುಂದಿನ ಎಂಟು ಮಂತ್ರಗಳಲ್ಲಿ ಹೇಳಲಾಗಿದೆ.

> ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।
> ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥೧೩॥
> ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।
> ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೪॥

ಅರ್ಥ:– ಯಃ =ಯಾವನು ಸರ್ವಭೂತಾನಾಂ= ಸರ್ವಭೂತಗಳಲ್ಲಿ ಅದ್ವೇಷ್ಟಾ= ದ್ವೇಷರಹಿತನೊ, ಮೈತ್ರಃ= ಮಿತ್ರಭಾವಿಯೋ, ಕರುಣಃ= ಕರುಣಾಮಯನೋ, ನಿರ್ಮಮಃ ನಿರಹಂಕಾರಃ= ನಿರ್ಮಮ ನಿರಹಂಕಾರಿಯೊ, ಸಮದುಃಖಸುಖಃ= ಸುಖದುಃಖಗಳಲ್ಲಿ ಸಮ ಬುದ್ಧಿಯುಳ್ಳವನೊ, ಕ್ಷಮೀ= ಕ್ಷಮಾಶೀಲನೊ, ಸತತಂ= ಸದಾ ಸಂತುಷ್ಟಃ= ಸಂತುಷ್ಟನೊ, ಯತಾತ್ಮಾ= ಸಂಯತಚಿತ್ತನೊ, ದೃಢನಿಶ್ಚಯಃ= ಸ್ಥಿರಬುದ್ಧಿಯವನೊ. ಮಯಿಅರ್ಪಿತ ಮನೋಬುದ್ಧಿಃ= ನನ್ನಲ್ಲಿ ಅರ್ಪಿತವಾದ ಮನ ಬುದ್ಧಿಯುಳ್ಳವನೊ, ಯೋಗೀ =ಅಪ್ರಮತ್ತ ಯೋಗಿಯೋ ಸಃ= ಅವನು ಮದ್ಭಕ್ತಃ= ನನ್ನ ಭಕ್ತ. ಮೇ ಪ್ರಿಯಃ= ನನಗೆ ಪ್ರಿಯ.

ವಿವರಣ: (೧) ಅದ್ವೇಷ್ಟಾ:- ಅಸಹನೆ ಹಾಗು ವೈರಭಾವನೆಯು ದ್ವೇಷ. ಅದು ಸರ್ವ ವಿನಾಶಕಾರಿ. ಅದರ ಭಯಾನಕ ಜ್ವಾಲೆಗೆ ತುತ್ತಾಗಿ ಕುರುವಂಶವೇ ನೆಲಕ್ಕುರುಳಿತು; ಸ್ವರ್ಗಸಮವಾದ ಲಂಕಾದೇಶವು ರುದ್ರಭೂಮಿಯಾಯ್ತು. ಜಾಗತಿಕ ಮಹಾಯುದ್ಧಗಳು ಅದರ ಘೋರ ಪರಿಣಾಮಗಳು! ಭಕ್ತನು ಈ ಕರಾಳ ರಾಕ್ಷಸನನ್ನು ತನ್ನ ಹೃನ್ಮಂದಿರದಿಂದ ಪಲಾಯನಗೊಳಿಸಿದ್ದಾನೆ. ಸರ್ವ ಜೀವಿಗಳನ್ನು ಪ್ರೀತಿಸುವ ಅವನು ವಿಶ್ವಬಂಧುವು. ಅದ್ವೇಷ್ಟಾ

(೨) ಮೈತ್ರಃ ಕರುಣಃ:- ವಿದ್ಯೆ, ಶಕ್ತಿ, ಮಾನ, ಸ್ಥಾನಗಳ ಸಂಬಂಧದಿಂದ ಮಾನವರಲ್ಲಿ ಭಿನ್ನತೆಗಳಿವೆ. ಕೆಲವರು ನಮಗಿಂತ ಹಿರಿಯರು; ಕೆಲವರು ಕಿರಿಯರು; ಕೆಲವರು ನಮಗೆ ಸರಿಸಮ. ಹಿರಿಯರಲ್ಲಿ ಪೂಜ್ಯ ಭಾವನೆ ತಾಳುವದು, ಕಿರಿಯರಲ್ಲಿ ಕರುಣ-ಭಾವನೆ ತಳೆಯುವದು ಹಾಗು ಸರಿಸಮರಲ್ಲಿ ಮೈತ್ರಿ ಭಾವನೆ ಹೊಂದಿರುವದು ಸಜ್ಜನಿಕೆಯಾಗಿದೆ. ಭಕ್ತನು ಸದ್ಗುಣಿ; ದಯಾಪರ. ದೀನ ದರಿದ್ರರನ್ನು, ಪಾಪಿ ಪಾಮರರನ್ನು ಕಂಡರೆ ಅವನ ಹೃದಯ ಕರುಣೆ-ಅನುರಾಗಗಳಿಂದ ತುಂಬಿಕೊಳ್ಳುತ್ತದೆ. ಅವರ ಸೇವೆಗಾಗಿ ತನ್ನ ವಿದ್ಯೆ ಶಕ್ತಿ ಸಂಪದವನ್ನೆಲ್ಲ ವಿನಿಯೋಗಿಸುತ್ತಾನೆ.

(೩) ನಿರ್ಮಮಃ:- ನಿರಹಂಕಾರಃ:- ಭಕ್ತನು ತಿಳಿವಿನ ಮನುಷ್ಯ; 'ವಿಶ್ವದ ಮಹಾ ಕಾರಣಿಕನು ಪರಮಾತ್ಮ; ಎಲ್ಲ ವಸ್ತುಗಳು ಅವನ ಒಡೆತನಕ್ಕೆ ಸಂಬಂಧಿಸಿವೆ.' ಎಂಬ ಭಾವ ಅವನಿಗಿದೆ. ಆದುದರಿಂದ ಅಹಂಕಾರವಾಗಲಿ ಮಮಕಾರವಾಗಲಿ ಅವನಲ್ಲಿ ಬದುಕಿಲ್ಲ. ಸದಾ ವಿನೀತ ಹಾಗು ನಿಸ್ಪೃಹಿ.

(೪) ಸಮದುಃಖ ಸುಖಃ:- ಸುಖ ದುಃಖಗಳು ಬದುಕಿರುವಷ್ಟು ಕಾಲ ಅನಿವಾರ್ಯ. ಅವೆರಡೂ ಪರಮಾತ್ಮನ ಕೊಡುಗೆಗಳೆಂದು ಬಗೆಯುವ ಭಕ್ತನು ಸುಖ ಬಂದಾಗ ಹಿಗ್ಗುವದಿಲ್ಲ, ದುಃಖ ಬಂದಾಗ ಕುಗ್ಗುವದಿಲ್ಲ. ಮನಸ್ಸಿನ ತೂಕವನ್ನು ಸದಾ ಕಾಪಾಡಿಕೊಂಡಿದ್ದಾನೆ.

(೫) ಕ್ಷಮೀ:- ವ್ಯಕ್ತಿಯು ಎಷ್ಟೇ ದೊಡ್ಡವನಾಗಿರಲಿ ನಿಂದೆ ಅವನ ಬೆನ್ನು ಬಿಡದು. ಅದು ನಮ್ಮ ಜನ್ಮದೊಂದಿಗೆ ಬಂದ ಬುತ್ತಿ. ಅದನ್ನು ಮೌನವಾಗಿ ಬರಮಾಡಿಕೊಳ್ಳಬೇಕು. ಸಂತೋಷದಿಂದ ಅನುಭವಿಸಬೇಕು. ಭಕ್ತನಲ್ಲಿ ಈ ಸಾಮರ್ಥ್ಯವಿದೆ. ನಿಂದಕರನ್ನು ದ್ವೇಷಿಸುವ ಬದಲು ಪ್ರೀತಿಸುತ್ತಾನೆ; ಅವರ ಅಪಚಾರವನ್ನು ಕ್ಷಮಿಸುತ್ತಾನೆ.

(೬) ಸಂತುಷ್ಟಃ:- ಭಕ್ತನಿಗೆ ಭೋಗವೈಭವಗಳಲ್ಲಿ ಆಶೆಯಿಲ್ಲ. ದೇವಕೃಪೆಯಿಂದ ಎಷ್ಟು ದೊರೆಯಿತೋ ಅಷ್ಟರಲ್ಲಿ ಸಂತುಷ್ಟನಾಗುವ ಸ್ವಭಾವ ಅವನದು.

(೭) ಯತಾತ್ಮಾ:- ಆತ್ಮಾ ಮನಸ್ಸು. ದೇವನಲ್ಲಿ ಅತುಲ ಅನುರಾಗ ಹೊಂದಿದ ಮಹಾನುಭಾವನು ತನ್ನ ಬಾಹ್ಯಾಂತರ ಕರಣಗಳನ್ನು ವಿಷಯಗಳತ್ತ ಹರಿಬಿಡದೆ ತನ್ನ ಅಂಕಿತಕ್ಕೆ ಒಳಪಡಿಸಿಕೊಂಡಿದ್ದಾನೆ.

೮) ದೃಢನಿಶ್ಚಯಃ– ಭಕ್ತನದು 'ಅಚಲ ಮನಸ್ಸು, ಅಕಂಪಿತಮತಿ, ದೇವನಿಗಾಗಿಯೇ ಬಾಳಬೇಕೆಂಬ ಅವನ ನಿರ್ಧಾರವನ್ನು ಯಾರೂ ಬದಲಿಸಲಾರರು. ಧನ ಕನಕ ಕಾಮಿನಿಗಳ ಆಕರ್ಷಣಾಮಾರುತ ಅವನ ಹೃದಯವನ್ನು ಅಲುಗಾಡಿಸಲಸಮರ್ಥ.

೯)ಅರ್ಪಿತ ಮನೋ ಬುದ್ಧಿಃ:–ಮನಸ್ಸು ಮತ್ತು ಬುದ್ಧಿಗಳೇ ನಮ್ಮ ನಿಜವಾದ ಸಂಪದ, ಅಮೌಲ್ಯ ಸಿರಿ. ಭಕ್ತನು ಅವೆರಡನ್ನು ದೇವನಡಿಗಳಲ್ಲಿ ನಿವೇದಿಸಿದ್ದಾನೆ

ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।
ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ೧೫

ಅರ್ಥ:–ಯಸ್ಮಾತ್ =ಯಾವನಿಂದ, ಲೋಕಃ =ಜನರು, ನ ಉದ್ವಿಜತೇ= ಉದ್ವೇಗಗೊಳ್ಳುವದಿಲ್ಲವೊ ಯಃ ಚ =ಯಾವನು ಲೋಕಾತ್= ಜನರಿಂದ, ನ ಉದ್ವಿಜತೇ= ಉದ್ವಿಗನಾಗುವದಿಲ್ಲವೋ, ಯಃ ಚ =ಯಾವನು, ಹರ್ಷಾಮರ್ಷಭಯೋದ್ವೇಗೈಃ ಮುಕ್ತಃ = ಅಸಹನೆ ಭಯುಗಳಿಂದ ಮುಕ್ತನೋ, ಸಃ ಮೇ ಪ್ರಿಯಃ =ಅವನು ನನಗೆ ಪ್ರಿಯ.

ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।
ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೬॥

ಅರ್ಥ:– ಯಃ= ಯಾವ, ಮದ್ಭಕ್ತಃ= ನನ್ನ ಭಕ್ತನು, ಅನಪೇಕ್ಷಃ= ನಿರಪೇಕ್ಷನೊ, ಶುಚಿಃ= ಶುಚಿಯೊ, ದಕ್ಷಃ= ಸಮರ್ಥನೊ, ಉದಾಸೀನಃ= ಉದಾಸೀನನೊ. ಗತವ್ಯಥಃ= ವ್ಯಥೆಯಿಲ್ಲದವನೊ, ಸರ್ವಾರಂಭ ಪರಿತ್ಯಾಗೀ= ಸಮಸ್ತ ಕರ್ಮಗಳನ್ನು ತ್ಯಾಗಮಾಡಿದವನೊ, ಸಃ ಮೇ ಪ್ರಿಯಃ= ಅವನು ನನಗೆ ಪ್ರಿಯ.

ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ
ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥೧೭॥

ಅರ್ಥ:-ಯಃ= ಯಾವನು, ನ ಹೃಷ್ಯತಿ= ಹರ್ಷಿಸುವದಿಲ್ಲವೊ ನ ದ್ವೇಷ್ಟಿ= ದ್ವೇಷಿಸುವದಿಲ್ಲವೋ ನ ಶೋಚತಿ= ಶೋಕಿಸುವದಿಲ್ಲವೋ ನ ಕಾಂಕ್ಷತಿ= ಇಚ್ಛಿಸುವದಿಲ್ಲವೋ ಶುಭಾಶುಭ ಪರಿತ್ಯಾಗೀ= ಶುಭಾಶುಭ ಕರ್ಮಗಳನ್ನು ಪರಿತ್ಯಾಗ ಮಾಡುತ್ತಾನೆಯೋ, ಸಃ ಭಕ್ತಿಮಾನ್ ಮೇ ಪ್ರಿಯಃ= ಅಂಥ ಭಕ್ತಿವಂತನು ನನಗೆ ಪ್ರಿಯ.

ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।
ಶೀತೋಷ್ಣ ಸುಖದುಃಖೇಷು ಸಮಃ ಸಂಗವಿವರ್ಜಿತಃ ॥೧೮॥

ಅರ್ಥ:– ಶತ್ರೌ ಮಿತ್ರೇ ಚ= ಶತ್ರುಮಿತ್ರರಲ್ಲಿ, ಸಮಃ= ಸಮಬುದ್ಧಿಯುಳ್ಳ, ಮಾನಾಪ ಮಾನಯೋಃ, ಚ ಶೀತೋಷ್ಣ ಸುಖದುಃಖೇಷು= ಮಾನಾಪಮಾನ ಶೀತೋಷ್ಣ ಹಾಗು ಸುಖ ದುಃಖಗಳಲ್ಲಿ, ಸಮಃ= ಸಮನಾಗಿರುವ, ಸಂಗ ವಿವರ್ಜಿತಃ= ನಿರಾಸಕ್ತನಾದ.

ತುಲ್ಯ ನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥೧೯॥

ಅರ್ಥ:- ತುಲ್ಯ ನಿಂದಾ ಸ್ತುತಿ=ಸ್ತುತಿ ನಿಂಧೆಗಳಲ್ಲಿ ಏಕ ಭಾವ ತಾಳಿದ, ಮೌನೀ=

ಮೌನಿಯಾದ, ಯೇನ ಕೇನ ಚಿತ್ ಸಂತುಷ್ಟಃ= ಯತ್ ಕಿಂಚಿತ್ ಲಾಭದಿಂದಲೂ ಸಂತುಷ್ಟನಾದ ಅನಿಕೇತಃ= ನಿರ್ದಿಷ್ಟ ಸ್ಥಾನವಿಲ್ಲದ, ಸ್ಥಿರಮತಿಃ= ಸ್ಥಿರ ಮತಿಯಾದ, ಭಕ್ತಿಮಾನ್ ನರಃ = ಭಕ್ತಿವಂತ ನರನು, ಮೇ ಪ್ರಿಯಃ= ನನಗೆ ಪ್ರಿಯ.

ವಿವರಣೆ:– (೧) ಅನುದ್ವಿಗ್ನ–ಭಕ್ತನು ಸರಳ ಜೀವಿ. ಅಹಿಂಸಾ ಮೂರ್ತಿ. ನಿಷ್ಕಲ್ಮಷ ಹೃದಯಿ. ಅವನಿಂದ ಜನರಾಗಲಿ, ಜನರಿಂದ ಅವನಾಗಲಿ ಉದ್ವೇಗಗೊಳ್ಳಲಾರರು. ಅವನ ಮಧುರ ನುಡಿಗಳು, ನಿಸ್ವಾರ್ಥ ಆಚರಣೆಗಳು ಲೋಕಕ್ಕೆ ಸಂತೋಷ ನೀಡುತ್ತವೆ. ಲೋಕದವರು ಏನೇ ಮಾಡಿದರೂ ಅವನಿಗದು ಕ್ಷಮ್ಯ.

(೨) ಹರ್ಷ ಅಮರ್ಷ ಭಯ ಉದ್ವೇಗರಹಿತ– ಇಷ್ಟ ವಸ್ತು ದೊರೆತಾಗ ಉಂಟಾಗುವ ಭಾವವು ಹರ್ಷ. ಸರಿಸಮರ ಬಗ್ಗೆ ಉಂಟಾಗುವ ಅಸಹನ ಭಾವವು ಅಮರ್ಷ. ತನ್ನ ಮೇಲೆ ಸಂಕಷ್ಟ ಬಂದಾಗ ಕಾಣಬರುವ ಮನೋವೃತ್ತಿಯು ಭಯ. ಮನದ ಪ್ರಕ್ಷುಬ್ಧತೆಯು ಉದ್ವೇಗ. ಭಕ್ತನಲ್ಲಿ ಈ ನಾಲ್ಕು ಗುಣಗಳು ಇಲ್ಲ. ಅವನು ನಿಃಕಾಮ! ಅಸೂಯೆಗೆ ಅವಕಾಶವೀಯದ ಮನುಕುಲ ಸುಹೃತ್! ಅವನ ಮನಸ್ಸು ನಿರ್ಭಯ, ಸುಸ್ಥಿರ ಮತ್ತು ನಿಷ್ಕಲಂಕಿತ!

(೩) ಅನಪೇಕ್ಷ– ಭಕ್ತನು ಅಪಾರ ಸಿರಿ ಸಂಪದದ ಮಧ್ಯ ಬಾಳುತ್ತಿರಬಹುದು. ಆದರೆ ಅವನ ಮನಸ್ಸು ಅಂತರ್ಮುಖ; ಭೋಗಗಳತ್ತ ಉದಾಸೀನ! ಸುರ ಸುಂದರ ರಮಣಿಯರು ಒಲಿದು ಸೇವಿಸಿದರೂ, ಪದವಿ ಕೀರ್ತಿ ಗೌರವಗಳು ತಾವಾಗಿಯೇ ಬಂದರೂ ಅವುಗಳಲ್ಲಿ ಅನಾಸಕ್ತ!

(೪) ಶುಚಿ– "ಕಳಬೇಡ ಕೊಲಬೇಡ ಹುಸಿಯ ನುಡಿಯಲಿ ಬೇಡ ತನ್ನ ಬಣ್ಣಿಸಬೇಡ, ಇದಿರು ಹಳಿಯಬೇಡ, ಮುನಿಯ ಬೇಡ, ಇದೇ ಅಂತರಂಗ ಶುಚಿ, ಇದೇ ಬಹಿರಂಗ ಶುಚಿ." ಭಕ್ತನು ಈ ಎರಡೂ ಬಗೆಯ ಶುಚಿತ್ವ ಉಳ್ಳವ.

(೫) ದಕ್ಷ, ಉದಾಸೀನ, ಗತವ್ಯಥ–ಅನಾಲಸಿಯಾಗಿರುವದು ದಕ್ಷತೆ;ಪಕ್ಷಪಾತ ರಹಿತನಾಗಿರುವದು ಉದಾಸೀನತೆ; ನಿಶ್ಚಿಂತತೆಯು ಗತವ್ಯಥಾ. ಭಕ್ತನು ಉತ್ಸಾಹಿ ಸೇವಕ. ದೇವನ ಹಾಗು ಸಮಾಜದ ವಿಷಯದಲ್ಲಿ ರವ ಮಾತ್ರವೂ ಬೇಜಾರುಗೊಳ್ಳದೆ ದುಡಿಯುತ್ತಾನೆ. ಭೇದ ಬುದ್ಧಿಯನ್ನು ಹುಟ್ಟಿಸುವ ಜಾತಿ ಮತ ಮುಂತಾದ ವಿಷಯಗಳಲ್ಲಿ ಅವನು ನಿರಭಿಮಾನಿ ಹಾಗು ಅಭಿನಿವೇಶ ರಹಿತ. ದೇವನಿಗೆ ಸರ್ವ ಸಮರ್ಪಣ ಬುದ್ಧಿಯಿಂದ ಮೊರೆಹೋದವನಾದುದರಿಂದ ಚಿಂತೆಯೇ ಅವನಲ್ಲಿಲ್ಲ.

(೬) ಸರ್ವಾರಂಭ ಪರಿತ್ಯಾಗೀ: ಹರ್ಷ ದ್ವೇಷ ಇತ್ಯಾದಿ ರಹಿತ– ಭಕ್ತನು ಭೋಗವಿಮುಖನಾದುದರಿಂದ ಸಕಾಮ ಕರ್ಮಗಳನ್ನು ಆಚರಿಸುವದಿಲ್ಲ. ಅಪ್ರಿಯ ವಸ್ತುವನ್ನು ಪಡೆದು ದ್ವೇಷಿಸುವದಿಲ್ಲ. ಪ್ರಿಯ ವಸ್ತುವನ್ನು ಪಡೆದು ಹರ್ಷಪಡುವದಿಲ್ಲ, ಇಷ್ಟ ವಸ್ತು ನಾಶವಾದಾಗ ಶೋಕಮಾಡುವದಿಲ್ಲ; ದೊರೆ

ತಿರದ ವಸ್ತುವನ್ನು ಬಯಸುವದಿಲ್ಲ.

(೭) ಶುಭಾಶುಭ ಪರಿತ್ಯಾಗೀ– ಸಕಾಮ ಕರ್ಮಗಳು ಶುಭ. ನಿಷಿದ್ಧ ಕರ್ಮಗಳು ಅಶುಭ. ಭಕ್ತನಿಗೆ ಇಹ ಪರ ವಿಷಯಗಳು ಬೇಕಾಗಿಲ್ಲವಾದ್ದರಿಂದ ಅವನು ಶುಭಕರ್ಮ ಪರಿತ್ಯಾಗಿ; ಮನಸ್ಸು ಸತ್ವಗುಣಾಧಿಕ್ಯ ಹೊಂದಿದುದರಿಂದ ಅವನು ಅಶುಭ ಕರ್ಮ ಪರಿತ್ಯಾಗಿ.

(೮) ಸಮದೃಷ್ಟಿಯುಕ್ತ– ಭಕ್ತನು ಶತ್ರು ಮಿತ್ರರನ್ನು ಒಂದೇ ದೃಷ್ಟಿ ಯಿಂದ ನೋಡುತ್ತಾನೆ. ಮಾನ ಅಪಮಾನ ಶೀತ ಉಷ್ಣ ಇಂಥ ದ್ವಂದ್ವಗಳಲ್ಲಿ ಅವನು ಸಮಬುದ್ಧಿ ಹೊಂದಿದ್ದಾನೆ.

(೯) ಸಂಗ ವರ್ಜಿತ– ನಿಂದಾ ಸ್ತುತಿಗಳಲ್ಲಿ ಸಮಭಾವೀ ವಿಯಾಸಕ್ತಿಯೇ ಸಂಗ. ಭಕ್ತನಲ್ಲಿ ಸಾಂಸಾರಿಕ ಪಡಿ ಪದಾರ್ಥಗಳ ಬಗ್ಗೆ ಮೋಹವಿಲ್ಲ. ಸ್ತುತಿ ನಿಂದೆಗಳ ಬಗ್ಗೆ ಪ್ರೇಮ ಹಾಗು ದ್ವೇಷಗಳಿಲ್ಲ. ಅವನಿಗೆ ಇರುವದೆಲ್ಲ ದೇವಕೃಪೆ.

(೧೦) ಮೌನಿ– ಸಂತುಷ್ಟ ಹಾಗು ಅನಿಕೇತನ. ಭಕ್ತನು ಮಿತವಾಗಿ ಮಾತಾಡುತ್ತಾನೆ; ಅವನ ನುಡಿ 'ಸ್ಫಟಿಕದ ಶಲಾಕೆ, ಮುತ್ತಿನ ಹಾರ, ಮಾಣಿಕ್ಯದ ದೀಪ್ತಿ!' ಆದುದರಿಂದ ಅವನಿಗೆ ಮೌನಿ ಎಂಬ ಅನ್ವರ್ಥಕ ಅಭಿಧಾನ. ದೊರೆತು ದನ್ನು ಧರಿಸುವದು, ಊಟಮಾಡುವದು, ಅನುಭವಿಸುವದು ಸಂತುಷ್ಟಿ. ಭಕ್ತನು ದೇವನತ್ತ ತ್ವರಿತಗತಿಯಿಂದ ಸಾಗಿದ ಯಾತ್ರಿಕ. ಮಾರ್ಗದಲ್ಲಿ ಆಗಾಗ ವಿಶ್ರಮಿಸುತ್ತಾನೆ; ದೇಹ ಇಂದ್ರಿಯಾದಿಗಳಂಥ ಧರ್ಮಶಾಲೆಗಳಲ್ಲಿ ವಸತಿ ಮಾಡುತ್ತಾನೆ. ಆದರೆ ಎಲ್ಲಿಯೂ ಅವನು ಸ್ಥಿರವಾಗಿ ನಿಲ್ಲುವದಿಲ್ಲ. ಆದ್ದರಿಂದ ಅನಿಕೇತನನು. ಮನೆ, ಹೊಲ, ಉದ್ಯಮಕ್ಷೇತ್ರ ಯಾವುದರಲ್ಲೂ ಅವನಿಗೆ ಆಸಕ್ತಿ ಇಲ್ಲ.

ಈ ಎಲ್ಲ ಲಕ್ಷಣಗಳಿಂದ ಕೂಡಿದ ಸ್ಥಿರಮತಿಯ ಭಕ್ತನು ಪರಮಾತ್ಮನಿಗೆ ಅತ್ಯಂತ ಪ್ರೀತಿಯುವ.

ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥೨೦॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾ ರ್ಜುನ ಸಂವಾದೇ ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ

ಭಾವ:– ಭಗವಂತ:– "ಅರ್ಜುನ, ನಾನು ವಿವರಿಸಿದ ಈ ಅಪೂರ್ವ ಗುಣಸಂಪದವೇ ಅಮೃತಧರ್ಮ. ಈ ಧರ್ಮವನ್ನು ಅಂಗವಿಸಿಕೊಳ್ಳುವವರೇ ನನ್ನ ಮೆಚ್ಚಿನ ಭಕ್ತರು. ಅವರ ಮನಸ್ಸು ನನ್ನಲ್ಲಿ, ಅವರ ಬದುಕು ನನಗಾಗಿ. ನೀನೂ ಹಾಗೆ ಭಕ್ತನಾಗು. ಈ ಮಂಗಲ ಧರ್ಮವನ್ನು ಅನುಷ್ಠಾನಿಸು."

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಹನ್ನೆರಡನೆಯ ಬಿಂದುವು.

* † *

# ಹದಿಮೂರನೆಯ ಅಧ್ಯಾಯ

## ಕ್ಷೇತ್ರ ಕ್ಷೇತ್ರಜ್ಞಯೋಗ

ದೇವಾಂಶಿಕನಾದ ಜೀವನು ತನ್ನ ಯಥಾರ್ಥ ಸ್ವರೂಪವನ್ನು ಮರೆತರೆ ದೇಹಾತ್ಮಭಾವ ತಾಳಿ ಸಂಸಾರ ಬದ್ಧನಾಗುತ್ತಾನೆ. ಸುಖ ದುಃಖಗಳ ಪ್ರಪಾತಕ್ಕೆ ಸಿಕ್ಕು ಕಷ್ಟಪಡುತ್ತಾನೆ; ಅವಿದ್ಯಾ ಅಸ್ಮಿತಾ ರಾಗ ದ್ವೇಷ ಅಭಿನಿವೇಶಗಳ ಕಾಳ್ಗಿಚ್ಚಿಗೆ ಬಿದ್ದು ಬಳಲುತ್ತಾನೆ. ಅಜ್ಞಾನವೆಂಬ ಘೋರ ಅಂಧಕಾರದಲ್ಲಿ ದಾರಿ ಕಾಣದೆ ಕಂಗೆಡುತ್ತಾನೆ. ಅಂಥ ಜೀವನು ಮುಕ್ತಿ ಪಡೆಯಬೇಕಾದರೆ ಒಂದೇ ಒಂದು ಉಪಾಯವಿದೆ, ಅದುವೇ ಸ್ವರೂಪಜ್ಞಾನ! ತತ್ತ್ವಾನುಭೂತಿ!! ಹದಿಮೂರನೆಯ ಅಧ್ಯಾಯವು ಈ ತತ್ತ್ವಜ್ಞಾನಕ್ಕೆ ಮೀಸಲಾಗಿದೆ.

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ।
ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥೧॥

ಅರ್ಥ:-ಇದಂ ಶರೀರಂ=ಈ ಶರೀರವು, ಕ್ಷೇತ್ರಂ ಇತಿ =ಕ್ಷೇತ್ರವೆಂದು, ಅಭಿಧೀಯತೆ = ಹೇಳಲ್ಪಡುತ್ತದೆ, ಯಃ ಏತತ್ ವೇತ್ತಿ= ಯಾವನು ಇದನ್ನು ತಿಳಿಯುತ್ತಾನೆಯೋ ತಂ= ಅವನನ್ನು, ಕ್ಷೇತ್ರಜ್ಞಃ ಇತಿ =ಕ್ಷೇತ್ರಜ್ಞನು ಎಂದು, ತದ್ವಿದಃ =ಎರಡರ ಸ್ವರೂಪ ತಿಳಿದವರು, ಪ್ರಾಹುಃ =ಹೇಳುತ್ತಾರೆ.

ವಿವರಣ:- (೧) ಪರಮಾತ್ಮನು ಸಚ್ಚಿದಾನಂದ ರೂಪ; ಅವಿಕಾರಿ, ಅವಿನಾಶಿ, ಅನಂತ. ಅವನ ಸನ್ನಿಧಾನದಲ್ಲಿ ಬೃಹಚ್ಛಕ್ತಿಯೊಂದು ಬಾಳಿದೆ. ಅದು ಗುಣಾತ್ಮಕ, ಪರಿಣಾಮಶೀಲ ಮತ್ತು ಜಡ. ಆ ಅಜಡ ಚೇತನ ಈ ಜಡ ಪ್ರಕೃತಿ ಎರಡರ ಸಮ್ಮಿಶ್ರಣದಲ್ಲಿ ನಿರ್ಮಾಣವಾದುದು ವಿಶ್ವ. ಇಲ್ಲಿರುವ ಅಸ್ತಿತ್ವ ಜ್ಞಾನ ಮತ್ತು ಆನಂದಗಳ ಅಂಶಗಳೆಲ್ಲ ಪರಮಾತ್ಮನವು, ಗುಣ ಕ್ರಿಯೆ ವಿಕಾರಗಳೆಲ್ಲ ಪ್ರಕೃತಿಯವು. ಜೀವನೆಂದರೆ ಪ್ರಕೃತಿಯ ಕೃತಿಯಾದ ಮನಸ್ಸಿನಲ್ಲಿ ಮೂಡಿದ ಚೈತನ್ಯ! ಈ ಎಲ್ಲ ಸತ್ಯಸಂಗತಿಗಳನ್ನು ಸಂಪೂರ್ಣವಾಗಿ ಅರಿತವರು 'ತದ್ವಿದಃ' ಸ್ವರೂಪ ಜ್ಞಾನಿಗಳು, ತತ್ತ್ವವೇತ್ತರು.

(೨) ಕ್ಷೇತ್ರ ಮತ್ತು ಕ್ಷೇತ್ರಜ್ಞ:- ಸಾಮಾನ್ಯವಾಗಿ ಕ್ಷೇತ್ರವೆಂದರೆ ಫಲವತ್ತಾದ ಭೂಮಿ. ಕ್ಷೇತ್ರಜ್ಞನೆಂದರೆ ಆ ಭೂಮಿಯ ಮಾಲಿಕ, ಒಕ್ಕಲಿಗ ಭೂಮಿಯನ್ನು ಹದಗೊಳಿಸಿ ಬೀಜ ಬಿತ್ತುವದು ಅವನ ಕಾರ್ಯ; ಬೀಜಗಳಿಗೆ ಜಲ ಹಾಗು ಸತ್ವಗಳನ್ನಿತ್ತು ಬೆಳೆಸುವದು ಭೂಮಿಯ ಕಾರ್ಯ. ಅದೇ ರೀತಿ ಪಂಚವಿಶಂತಿ ತತ್ತ್ವಪುಂಜವು ದೇಹ; ಜಡ ಪ್ರಕೃತಿಯ ವಿನ್ಯಾಸ. ಆ ವಿನ್ಯಾಸದಲ್ಲಿ ಪ್ರತಿಫಲಿಸಿದ ಬ್ರಹ್ಮಚೇತನವು ಜೀವಾತ್ಮ. ಅವನು ತನ್ನ ಇಚ್ಛಾನುಸಾರ ಭೋಗ ಅಥವಾ ಮೋಕ್ಷ ಬೀಜಗಳನ್ನು ಆ ದೇಹಾಂತರ್ಗತ ಅಂತಃಕರಣ ಭೂಮಿಯಲ್ಲಿ ಬಿತ್ತುತ್ತಾನೆ, ಆ ಭೂಮಿಯು ಆಯಾ ಬೀಜಗಳಿಗೆ ಅವಶ್ಯವಾದ ಸತ್ವವನ್ನು ಪೂರೈಸಿ ಬೆಳೆಸುತ್ತದೆ, ಭೋಗ ಅಥವಾ ಮೋಕ್ಷಫಲಗಳನ್ನು ನೀಡುತ್ತದೆ. ಭೋಗಫಲ ಪಡೆದವ ಮರುಳಜೀವ, ಮೋಕ್ಷ ಫಲ ಪಡೆವವ ಜಾಣ ಜೀವ.

ಭೋಗಫಲ ನೀಡಲು ಕಾರಣವಾದ ದೇಹವು ಕಲುಷಿತ; ಮೋಕ್ಷ ಫಲ ನೀಡಲು ಕಾರಣವಾದ ದೇಹವು ಪಾವನ! ಇದು ತತ್ತ್ವವೇತ್ತರ ಅಭಿಪ್ರಾಯ.

(೩) ಭೋಗಾಯತನಂ ಶರೀರಂ ಕ್ಷೇತ್ರಂ, ಸಂಸಾರಸ್ಯ ಪ್ರರೋಹ ಭೂಮಿಃ; ಏತತ್ ಯೋ ವೇತ್ತಿ ಅಹಂ ಮಮ ಇತಿ ಸಃ ಕ್ಷೇತ್ರಜ್ಞಃ.- ಶಾಸ್ತ್ರೀಯ ಭಾಷೆಯಲ್ಲಿ ಹೇಳುವದಾದರೆ, ಭೋಗೋಪಭೋಗಗಳ ತಾಣವಾದ ಸುಖ ದುಃಖ ಮಿಶ್ರರೂಪ ಸಂಸಾರೋತ್ಪತ್ತಿಯ ಸ್ಥಾನವಾದ ದೇಹವು ಕ್ಷೇತ್ರ. ಅದನ್ನು (ದೇಹವನ್ನು) ಯಾವನು ತಾನು ತನ್ನದೆಂದು ಅರಿಯುತ್ತಾನೆಯೊ ಅವನು ಕ್ಷೇತ್ರಜ್ಞ. ಕ್ಷೇತ್ರರೂಪ ದೇಹವು ದೃಶ್ಯ, ಅಶಾಶ್ವತ, ಪರಿಮಿತ. ಕ್ಷೇತ್ರಜ್ಞ ಜೀವನು ದ್ರಷ್ಟಾ, ಶಾಶ್ವತ ಹಾಗು ಅಪರಿಮಿತ. ಆದರೂ ಅವಿದ್ಯೆಯ ಸಂಗದಿಂದ ದೃಶ್ಯದೇಹವೇ ತಾನೆಂದು ಭ್ರಮಿಸಿದ್ದಾನೆ; ದೇಹದಲ್ಲಿ ತಲೆದೋರುವ ಸರ್ವ ವಿಕಾರಗಳು ತನಗೆಂದು ಭಾವಿಸಿದ್ದಾನೆ. ದೇಹದಿಂದ ಉಂಟಾಗುವ ಸುಖ ದುಃಖಗಳ ಭೋಕ್ತೃ ಭಾವ ಹೊಂದಿದ್ದಾನೆ. ಎಂತಲೇ ಜನ್ಮ ಮರಣಗಳ ದವಡೆಯಲ್ಲಿ ಸಿಲುಕಿ ಸಂತಪಿಸುತ್ತಿದ್ದಾನೆ.

ಅವಿದ್ಯಾಸಂಗದಿಂದ ಪಾರಾದ ಜೀವನು ದೇಹಾತ್ಮಬುದ್ಧಿಯನ್ನು ಬಿಟ್ಟು ದ್ರಷ್ಟಾಭಾವ ತಳೆಯುತ್ತಾನೆ. ದೇಹದ ಸರ್ವ ವಿಕಾರಗಳನ್ನು ಸಾಕ್ಷಿಯಾಗಿ ನಿಂತು ನೋಡುತ್ತಾನೆ. ಯಾವ ಕ್ಷೇತ್ರದಲ್ಲಿ ಅಜ್ಞಾನಿಯು ಬಂಧನಾತ್ಮಕ ಭೋಗ ಪೈರನ್ನು ಬೆಳೆಸಿದ್ದಾನೋ ಅದೇ ಮನೋಕ್ಷೇತ್ರದಲ್ಲಿ ವಿವೇಕಿಯು ವಿಮೋಚನಾತ್ಮಕ ಆನಂದ ಪೈರನ್ನು ಬೆಳೆಸುತ್ತಾನೆ; ಮಹಾದೇವನ ಸಚ್ಚಿದಾನಂದ ಘನರಸವನ್ನು ಆಸ್ವಾದಿಸುತ್ತಾನೆ.

ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವ ಕ್ಷೇತ್ರೇಷು ಭಾರತ ।
ಕ್ಷೇತ್ರ ಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥೨॥

**ಅರ್ಥ:**–ಸರ್ವಕ್ಷೇತ್ರೇಷು= ಸಮಸ್ತ ಕ್ಷೇತ್ರಗಳಲ್ಲಿ(ಇರುವ) ಕ್ಷೇತ್ರಜ್ಞಂ ಅಪಿ= ಕ್ಷೇತ್ರಜ್ಞನು (ವಾಸ್ತವಿಕವಾಗಿ) ಮಾಂ= ನಾನೇ ಎಂದು ವಿದ್ಧಿ= ತಿಳಿ. ಕ್ಷೇತ್ರ ಕ್ಷೇತ್ರಜ್ಞಯೋಃ=ಕ್ಷೇತ್ರ ಹಾಗು ಕ್ಷೇತ್ರಜ್ಞರ ಯತ್ ಜ್ಞಾನಂ= ಯಾವ ಜ್ಞಾನವಿದೆಯೋ ತತ್= ಅದು ಮಮ=ನನ್ನ ಜ್ಞಾನಂ= ಜ್ಞಾನವೆಂದೇ ಮತಂ= (ನನ್ನ) ಅಭಿಪ್ರಾಯ.

**ವಿವರಣೆ:**– ಕ್ಷೇತ್ರಗಳು ಅನೇಕ; ಅದೇ ರೀತಿ ಕ್ಷೇತ್ರಾಭಿಮಾನಿಗಳಾದ ಕ್ಷೇತ್ರಜ್ಞರೂ ಅನೇಕ. ಅವರು ಪ್ರಾಕೃತಿಕರಲ್ಲ; ಪರಮಾತ್ಮನ ಅಂಶರು. ಪರಿಪೂರ್ಣನಾದ ಅಮೃತ ದೇವನು ಆ ಕ್ಷೇತ್ರಜ್ಞರಲ್ಲಿ ಅನುಸ್ಯೂತವಾಗಿ ವ್ಯಾಪಿಸಿದ್ದಾನೆ. ತತ್ತ್ವಮಸಿ ಮಹಾವಾಕ್ಯದಲ್ಲಿರುವ ತ್ವಂ ಪದವು ಕ್ಷೇತ್ರಜ್ಞನಾದ ಜೀವಾತ್ಮವಾಚಕವಲ್ಲ, ಸಾಕ್ಷೀಪ್ರತ್ಯಗಾತ್ಮವಾಚಕ! ಪರಮಾತ್ಮನಿರ್ದೇಶಕ! ಹೀಗೆ ದೇಹದಲ್ಲಿರುವ ಜೀವಾತ್ಮರೆಲ್ಲ ವಾಸ್ತವಿಕವಾಗಿ ಪರಮಾತ್ಮನೇ ಸರಿ. ಈ ರೀತಿಯ ತಿಳಿವೇ ನಿಜವಾದ ಜ್ಞಾನ! ಅಮೃತವಿದ್ಯೆ! ಇದು ಭಗವಂತನ ಖಚಿತ ಅಭಿಪ್ರಾಯ.

ತತ್ಕರ್ಮ ಯನ್ನ ಬಂಧಾಯ। ಸಾ ವಿದ್ಯಾ ಯಾ ವಿಮುಕ್ತಯೇ॥
ಆಯಾಸಾಯಾಪರಂ ಕರ್ಮ । ವಿದ್ಯಾನ್ಯಾ ಶಿಲ್ಪನೈಪುಣಮ್॥"

ಬಂಧನಕಾರಕವಲ್ಲದುದೇ ನಿಜವಾದ ಕರ್ಮ; ಉಳಿದ ಕರ್ಮ ಬರಿ ಶ್ರಮ. ಮುಕ್ತಿಕರ ವಿದ್ಯೆಯೇ ನಿಜವಾದ ವಿದ್ಯೆ; ಉಳಿದ ವಿದ್ಯೆ ಕೇವಲ ಕಲಾಕೌಶಲ. (ವಿಷ್ಣು ಪುರಾಣ ೧-೧೯-೪೧). ಈ ಪ್ರಮಾಣ ವಚನವು ಗಮನಾರ್ಹ.

ತತ್ ಕ್ಷೇತ್ರಂ ಯಚ್ಚಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।
ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥೩॥

ಅರ್ಥ:–ತತ್ ಕ್ಷೇತ್ರಂ=ಆ ಕ್ಷೇತ್ರವು ಯತ್= ಯಾವುದು? ಚ= ಮತ್ತು ಯಾದೃಕ್ = ಎಂಥದು? ಯದ್ವಿಕಾರಿ= ಯಾವ ವಿಕಾರ ಉಳ್ಳದು? ಯತಃ= ಯಾವುದರಿಂದ ಹುಟ್ಟಿದೆ? ಯತ್ =ಯಾವ ರೂಪ–ಆಕಾರ ಉಳ್ಳದು? ಚ= ಮತ್ತು ಸಃ ಯಃ= ಆ ಕ್ಷೇತ್ರಜ್ಞನು ಯಾವನು? ಯತ್ಪ್ರಭಾವಃ=ಎಂಥ ಪ್ರಭಾವವುಳ್ಳವನು? ತತ್= ಅದೆಲ್ಲವನ್ನು ಸಮಾಸೇನ= ಸಂಕ್ಷೇಪವಾಗಿ ಮೇ ಶೃಣು= ನನ್ನಿಂದ ಕೇಳು.

ವಿವರಣೆ:– ಈ ಮಂತ್ರದಲ್ಲಿ ಬಹು ಸಂಕ್ಷೇಪವಾಗಿ ಕ್ಷೇತ್ರ ಕ್ಷೇತ್ರಜ್ಞರ ಹಲವಾರು ಲಕ್ಷಣಗಳನ್ನು ಹೇಳಲಾಗಿದೆ. ಮೊದಲನೆಯ ಸಾಲಿನಲ್ಲಿ ಕ್ಷೇತ್ರದ ರಚನೆ ಇದೆ. ಎರಡನೆಯ ಸಾಲಿನಲ್ಲಿ ಕ್ಷೇತ್ರಜ್ಞನ ಗುಣಶ್ರೀ ವರ್ಣನೆ ಇದೆ.

(೧) ತತ್ ಕ್ಷೇತ್ರಂ– ಈ ಹಿಂದೆ ವರ್ಣಿಸಲಾದ ಜೀವನಿಲಯವೇ ಕ್ಷೇತ್ರ. ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣ, ಉನ್ಮನಿ ದೇಹಗಳು ಕ್ಷೇತ್ರ ಪದದ ವ್ಯಾಪ್ತಿಯಲ್ಲಿವೆ. ಇವುಗಳಲ್ಲಿ ಜೀವ ಸಂಚರಿಸುತ್ತಾನೆ. ಅಂದರೆ, ಸ್ಥೂಲ ದೇಹಕ್ಕೆ ಬಂದು ಐಂದ್ರಿಯಕ ವ್ಯಾಪಾರದಲ್ಲಿ ತೊಡಗುತ್ತಾನೆ. ಸ್ವಪ್ನ, ಸುಪ್ತಿ ದೇಹಗಳಿಗೆ ಬಂದು ವಾಸನಾ ಹಾಗು ಅಜ್ಞಾನಗಳ ವ್ಯಾಪಾರದಲ್ಲಿ ತೊಡಗುತ್ತಾನೆ. ಮಹಾ ಕಾರಣ ಹಾಗು ಉನ್ಮನಿ ದೇಹಗಳಲ್ಲಿ ಪ್ರವೇಶಿಸಿ ದೈವೀ ದರ್ಶನ ಪಡೆಯುತ್ತಾನೆ.

(ಅ) ಯತ್– ಆ ಕ್ಷೇತ್ರದ ಸ್ವರೂಪವೇನು? ಅದು ಜಡ (ಜ್ಞಾನ ಹೀನ), ದೃಶ್ಯ (ಮನೋವೃತ್ತಿಗೆ ವಿಷಯ), ಪರಿಚ್ಛಿನ್ನ (ಕಾಲ ದೇಶ ವಸ್ತುಗಳಿಂದ ಖಂಡಿತ) ಹಾಗು ಭೂತಕಾರ್ಯ (ಪಂಚ ಭೂತಗಳಿಂದ ನಿರ್ಮಿತ).

(ಬ) ಯಾದೃಕ್– ಅದು ಎಂಥದು? ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಮಾನ ಅನಾಚಾರದೊಲುಮೆ ವಿಮತಿ ವಿಷಯಾಭಿಲಾಷೆ ಸುಖ ದುಃಖ ಚಿಂತೆ ಇಂಥ ಅನೇಕ ಗುಣಧರ್ಮಗಳಿಂದ ಕೂಡಿಕೊಂಡಿದೆ.

(ಕ) ಯದ್ವಿಕಾರಿ– ಯಾವ ವಿಕಾರಯುಕ್ತವಾಗಿದೆ? ಅದು ಪಂಚ ಕರ್ಮೇಂದ್ರಿಯ ಪಂಚ ಜ್ಞಾನೇಂದ್ರಿಯ ಎಂಬ ದಶವಿಧ ಐಂದ್ರಿಯಿಕ ವಿಕಾರಗಳ ಸ್ಥಾನವಾಗಿದೆ.

(ಡ) ಯತಃ– ಯಾವುದರಿಂದ ಹುಟ್ಟಿದೆ? ಮೂಲ ಪ್ರಕೃತಿ ಹಾಗು ಆತ್ಮ ಪುರುಷರ ತಾತ್ವಿಕ ಸಂಬಂಧದಿಂದ ಅದು ಉತ್ಪನ್ನವಾಗಿದೆ.

೩)ಯತ್–ಅದರ ವಿಭಿನ್ನ ರೂಪುಗಳು ಯಾವವು? ಕ್ಷೇತ್ರದ ರೂಪುಗಳು ಅಸಂಖ್ಯ. ಸ್ಥೂಲವಾಗಿ ಹೇಳುವದಾದರೆ ಕೆಲವು ಸ್ಥಾವರ, ಇನ್ನು ಕೆಲವು ಜಂಗಮ. ಉದಾ–ವೃಕ್ಷಗಳ ದೇಹವು ಸ್ಥಾವರ. ಪಶು ಪಕ್ಷಿಗಳ ದೇಹವು ಜಂಗಮ. ಕೆಲ ದೇಹಗಳ ಆಕಾರ ಅಣುವಿನಷ್ಟು, ಕೆಲ ದೇಹಗಳ ಆಕಾರ ಆನೆಗಳಷ್ಟು.

೨)ಸಃ –ಕ್ಷೇತ್ರವು ತಾನು ತನ್ನದೆಂದು ಅರಿಯುವ ಆ ಜೀವ ಪುರುಷನು ಕ್ಷೇತ್ರಜ್ಞ.

೮)ಯಃ– ಅವನ ಸ್ವರೂಪ ಲಕ್ಷಣಗಳೇನು? ಅವನು ವಾಸ್ತವಿಕವಾಗಿ ಸತ್ ಚಿತ್ ಆನಂದ ನಿತ್ಯ ಪರಿಪೂರ್ಣರೂಪ. ಅವನು ಜಡ ವಿಲಕ್ಷಣ, ದೃಶ್ಯ ಸಾಕ್ಷಿ ಹಾಗು ಸರ್ವಕಾರಣಗಳ ಮಹಾಕಾರಣ.

ಬ) ಯತ್ಪ್ರಭಾವಃ:- ಅವನ ಸಾಕಾರ ವೈಭವವೆಂಥದು? ಮಹಾಕಾರಣನಾದ ಆ ಆತ್ಮಪುರುಷನೇ ತನ್ನ ಯೋಗಮಾಯಾ ಶಕ್ತಿಸಂಬಂಧದಿಂದ ಅಸಂಖ್ಯ ರೂಪುಗಳನ್ನು ಹೊಂದುತ್ತಾನೆ. ಪಾತಾಳ ಮರ್ತ್ಯ ಹಾಗು ಸ್ವರ್ಗದಲ್ಲೆಲ್ಲ ಬಾಳುತ್ತಿರುವವ ಅವನೇ. ಪಾಪಿ, ಪಾಮರ, ಪುಣ್ಯವಂತ, ಪಂಡಿತ ಎಲ್ಲರೂ ಅವನ ಸಾಕಾರ ವೈಭವ–ವಲಯಕ್ಕೆ ಸೇರಿದ್ದಾರೆ.

ಭಗವಂತ:–"ಅರ್ಜುನ, ನೀನು ಬಹು ಜಾಣ; ತಾತ್ವಿಕ ಸಂಗತಿಗಳನ್ನು ಸುಲಭವಾಗಿ ತಿಳಿದುಕೊಳ್ಳುವಿ; ಆದುದರಿಂದ ಬಹು ಸಂಕ್ಷಿಪ್ತ ರೀತಿಯಲ್ಲಿ ಆ ಕ್ಷೇತ್ರಕ್ಷೇತ್ರಜ್ಞರ ಬಗ್ಗೆ ಉಪದೇಶಿಸುವೆ. ಲಕ್ಷವಿತ್ತು ಕೇಳು."

'ಎನ್ನೊಡನೆ ಸಮರಸವಿನ್ನು ಬೇಡೆಲೆ.........' ಎಂಬ ಪದದಲ್ಲಿ ಶ್ರೀ ನಿಜಗುಣ ಶಿವಯೋಗಿಗಳು ದೇಹ ಮತ್ತು ಜೀವಪುರುಷರ ಗುಣ ಲಕ್ಷಣ ಹೇಳಿದ್ದಾರೆ. ವಾಚಕರ ಗಮನಕ್ಕಾಗಿ ಇಲ್ಲಿ ಕೊಡಲಾಗಿದೆ.

ದೇಹ:–ಪುಸಿ, ತಾಯಿ ತಂದೆಯರ ಮಲಸಮೂಹ, ಕರ್ಮಕಾರಿ, ಬಂಧ, ಜಡ, ಬಹುರೂಪಿ, ಕ್ಷಯ ನಾಶ ಶೀಲ, ಮೃದ್ಗಾಮಿ! ಭೂತವಿಕಾರ, ಕುಂದು ಹೆಚ್ಚುಳ್ಳುದು, ಷಡ್ವಿಕಾರಯುಕ್ತ, ರುಜೆಗಳ ಆಗರ, ಹೇಯ, ಮಿಥ್ಯ ಮಾಯೆ.

ಜೀವ ಪುರುಷ:- ಸತ್ಯ, ಶುದ್ಧ, ಕರ್ಮಸಾಕ್ಷಿ, ಮೋಕ್ಷರೂಪ, ಅಜಡ, ಅದ್ವಯ, ನಿತ್ಯವಸ್ತು, ನಿರ್ವಿಕೃತಿ, ಸಮರೂಪ, ವಿಕಾರವಿರಹಿತ, ದೃಷ್ಟಾ, ಆನಂದಘನ ಹಾಗು ಮಾಯಾರಹಿತ.

ಸಂಬಂಧ:-ಕ್ಷೇತ್ರ ಕ್ಷೇತ್ರಜ್ಞರ ಬಗ್ಗೆ ಯಾರು ಯಾರು ಹೇಳಿದ್ದಾರೆ?

ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್।
ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥೪॥

ಅರ್ಥ:– (ಕ್ಷೇತ್ರ ಕ್ಷೇತ್ರಜ್ಞರ ವಿಷಯವು) ಋಷಿಭಿಃ = ಋಷಿಗಳಿಂದ, ಬಹುಧಾ = ಹಲವಾರು ಬಗೆಯಲ್ಲಿ, ಗೀತಂ= ಹಾಡಲ್ಪಟ್ಟಿದೆ. ವಿವಿಧೈಃ ಛಂದೋಭಿಃ=ವಿವಿಧ ವೇದಗಳಿಂದ

ಪೃಥಕ್ =ಬಗೆ ಬಗೆಯಾಗಿ (ಹೇಳಲ್ಪಟ್ಟಿದೆ,) ಚ =ಮತ್ತು ಹೇತುಮದ್ಭಿಃ = ಯುಕ್ತಿಗಳಿಂದಲೂ. ಬ್ರಹ್ಮಸೂತ್ರಪದೈಃ = ಬ್ರಹ್ಮಸೂತ್ರಪದಗಳಿಂದಲೂ, ವಿನಿಶ್ಚಿತೈಃ = ಶ್ರುತಿ ತಾತ್ಪರ್ಯ ನಿರ್ಣಾಯಕ ಷಡ್ಲಿಂಗ ವಿಧಾನಗಳಿಂದಲೂ (ನಿರೂಪಿತವಾಗಿದೆ).

ವಿವರಣೆ:- ೧)ಋಷಿಗಳು-- ಅನಾದ್ಯನಂತವಾದ ಸತ್ಯವನ್ನು ಅಪರೋಕ್ಷವಾಗಿ ಅರಿತವರು, ಅನುಭವಿಸಿದವರು ಋಷಿಗಳು. ವಸಿಷ್ಠ ವಾಮದೇವ ಪರಾಶರ ಮುಂತಾಗಿ ಅನೇಕ ಋಷಿಗಳು ಬಾಳಿಹೋಗಿದ್ದಾರೆ. ಉಪನಿಷತ್ತುಗಳು, ಯೋಗ ವಾಸಿಷ್ಠ, ಬ್ರಹ್ಮಸೂತ್ರ, ಯೋಗಸೂತ್ರ, ಸಾಂಖ್ಯಸೂತ್ರ ಇತ್ಯಾದಿ ಪವಿತ್ರ ಗ್ರಂಥಗಳು ಆ ಸತ್ಯದರ್ಶಿಗಳಿಂದ ರಚಿತವಾಗಿವೆ. ಅವುಗಳಲ್ಲಿ ದೇಹ, ಜೀವರ ಬಗ್ಗೆ ವಿವರವಾದ ವಿವರಣೆಗಳಿವೆ.

(೨) ಛಂದಗಳು:-- ಪರಮಾತ್ಮನ ನಿಶ್ವಾಸಗಳೆಂದು ಹೇಳಿಸಿಕೊಳ್ಳುವ ವೇದಗಳೇ ಛಂದಗಳು. ಅವುಗಳ ಪೂರ್ವಭಾಗದಲ್ಲಿಯೂ ಉತ್ತರಭಾಗದಲ್ಲಿಯೂ 'ದೇಹ, ದೇಹಿನ್' ಈ ಉಭಯ ವಸ್ತುಗಳ ಬಗೆಗೆ ಸಾಕಷ್ಟು ವಿವೇಚನೆ ಇದೆ.

(೩) ಬ್ರಹ್ಮಸೂತ್ರಗಳು:-- ವಿಶ್ವವನ್ನೇ ತನ್ನ ಗರ್ಭದಲ್ಲಿರಿಸಿಕೊಂಡ ಬೃಹದ್ ಮಾಯೆಯು ಯಾವ ನಿಸ್ಸೀಮ ಚಿದಾಕಾಶದ ಒಂದಂಶದಲ್ಲಿ ಅಡಗಿದೆಯೋ ಅದು ಬ್ರಹ್ಮ. ಅದನ್ನು ನಿರ್ದೇಶಿಸುವ ವಾಕ್ಯಗಳೇ ಬ್ರಹ್ಮಸೂತ್ರಗಳು. (ಉದಾ: ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ ತದ್ಬ್ರಹ್ಮ । ಯತ್ಪ್ರಯಂತಿ ಅಭಿಸಂವಿಶಂತಿ । ತದ್ವಿಜಿಜ್ಞಾಸಸ್ವ ॥). ಗೀರ್ವಾಣ ಸಾಹಿತ್ಯದಲ್ಲಿ ಅಸಂಖ್ಯ ಬ್ರಹ್ಮಸೂತ್ರಗಳಿವೆ. ಅವು ಕೂಡ ಶರೀರ ಹಾಗು ಶರೀರಾಂತರ್ಗತ ಜೀವಾತ್ಮನ ಬಗೆಗೆ ಪ್ರತಿಪಾದಿಸಿವೆ.

(೪) ಪದಗಳು:- 'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' 'ಅಯಮಾತ್ಮಾಬ್ರಹ್ಮ' 'ಪ್ರಜ್ಞಾನಮಾನಂದಂ ಬ್ರಹ್ಮ' ಇಂಥ ಮಹಾ ವಾಕ್ಯಗಳಿಗೆ ಪದಗಳೆನ್ನುತ್ತಾರೆ. ಇವೂ ಜಡ ಅಜಡ ತತ್ತ್ವಗಳ ಕುರಿತು ಸೂಚ್ಯವಾಗಿ ವಿವರಣೆ ನೀಡಿವೆ.

(೫) ಹೇತುಮದ್ವಾಕ್ಯಗಳು:-- ಯುಕ್ತಿ ಪ್ರಯುಕ್ತಿಗಳಿಂದ ಪರಮಾತ್ಮನ ಅಸ್ತಿತ್ವವನ್ನು ಪ್ರತಿಪಾದಿಸುವ ಪದಸಮುದಾಯಗಳು ಹೇತುಮದ್ವಾಕ್ಯಗಳು. ಉದಾ: 'ಕಥಮಸತಃ ಸಜ್ಜಾಯೇತ್?' ಅಸತ್ತಿನಿಂದ ಅದೆಂತು ಸತ್ತು ಹುಟ್ಟಿತು? (ಛಾ. ಉ. ೬-೨-೨). ಈ ಬಗೆಯ ವಾಕ್ಯಗಳಲ್ಲೂ ಪರಾಪರ ಪ್ರಕೃತಿಗಳ ವಿವರವನ್ನು ಕಾಣುತ್ತೇವೆ.

(೬) ವಿನಿಶ್ಚಿತ ವಾಕ್ಯಸಮುದಾಯಗಳು:-- ವಿಶೇಷ ರೂಪದಿಂದ ತತ್ತ್ವ ಪ್ರತಿಪಾದಿಸುವ ಶ್ರುತಿನಿರ್ಣಯಾತ್ಮಕ ವಾಕ್ಯಗಳಿಗೆ ವಿನಿಶ್ಚಿತ ವಾಕ್ಯಗಳೆಂದು ನಾಮ. ಈ ವಾಕ್ಯವೃಂದಗಳಿಗೆ ಲಿಂಗ ಎಂದು ಪಾರಿಭಾಷಿಕ ಅಭಿಧಾನ. ಆ ಲಿಂಗಗಳು ಆರು. (ಅ) ಉಪಕ್ರಮೋಪಸಂಹಾರಲಿಂಗ:- ಪರಮಾತ್ಮನೇ ವಿಶ್ವದ ಆದಿ

(ಉಪಕ್ರಮ) ಹಾಗು ಅಂತ್ಯ (ಉಪಸಂಹಾರ) ಎಂದು ಪ್ರತಿಪಾದಿಸುವ ವಾಕ್ಯ ವೃಂದಗಳು. (ಬ) ಅಭ್ಯಾಸಲಿಂಗ:– ಪರಮಾತ್ಮನನ್ನು ನೂರು ಸಾಸಿರ ವಿಧದಲ್ಲಿ ಸ್ಮರಿಸಬೇಕು, ಅವನ ರೂಪನ್ನೇ ಈಕ್ಷಿಸಬೇಕು, ಅವನ ಗುಣಗಳನ್ನೇ ಚಿಂತಿಸ ಬೇಕು. ಎಂದು ಬಿಂಬಿಸುವ ಪದ ಸಮುದಾಯುಗಳ ವೃಂದವು ಅಭ್ಯಾಸಲಿಂಗ. (ಕ) ಫಲಲಿಂಗ:– ಪರಮಾತ್ಮದರ್ಶನವೇ ಜೀವನದ ಅಂತಿಮ ಗುರಿ, ಆತ್ಮ ಲಾಭವೇ ಅಮೌಲ್ಯ ಗಳಿಕೆ; ಮನುಷ್ಯನು ಅದನ್ನೇ ಬಯಸಿ ಅದನ್ನೇ ಪಡೆಯ ಬೇಕು. ಹೀಗೆ ನಿರ್ದೇಶಿಸುವದು ಫಲಲಿಂಗ. (ಡ) ಅಪೂರ್ವತಾಲಿಂಗ:– ಪರ ಮಾತ್ಮನು ಅಪೂರ್ವ, ಅನುಪಮ, ಅಚಿಂತ್ಯ, ಅಪ್ರಮಾಣ, ಅದ್ವಯ, ಅತೀತ ಎಂದು ವರ್ಣಿಸುವದು ಅಪೂರ್ವತಾಲಿಂಗ. (ಇ) ಅರ್ಥವಾದಲಿಂಗ:- ಪ್ರಪಂಚ ವನ್ನು ಹೀಯಾಳಿಸಿ ಪರಮಾತ್ಮನನ್ನು ವರ್ಣಿಸಿ ಜೀವ ಪುರುಷನ ಲಕ್ಷ್ಯವನ್ನು ದೇವನತ್ತ ಎಳೆಯುವದು ಅರ್ಥವಾದಲಿಂಗ. (ಫ) ಉಪಪತ್ತಿಲಿಂಗ:– ವಿಶ್ವವು ಕಾರ್ಯ; ಪ್ರಕೃತಿಯು ಕಾರಣ; ಆ ಕಾರಣದ ಮಹಾನ್ ಕಾರಣನು ದೇವ. ಕಾರ್ಯದಲ್ಲಿ ಕಾರಣ ಅಡಗಿದೆ; ದೇವನು ಚರಾಚರ ವಿಶ್ವವೆಂಬ ಕಾರ್ಯದಲ್ಲಿ ಹಾಸುಹೊಕ್ಕಾಗಿ ನೆಲೆಸಿದ್ದಾನೆ. ಎಂದು ಹೇಳುವ ವಾಕ್ಯವೃಂದವು ಉಪಪತ್ತಿ ಲಿಂಗ. ಈ ಆರು ಬಗೆಯ ವಿನಿಶ್ಚಿತವಾಕ್ಯಗಳು ಕ್ಷೇತ್ರ–ಕ್ಷೇತ್ರಜ್ಞರ ಸುಸ್ಪಷ್ಟ ಚಿತ್ರಣವನ್ನು ರೇಖಿಸಿವೆ.

(೭) ಯಾರಿಗೆ ದೇಹ ಜೀವ, ಜಡ ಅಜಡ, ಪರ ಅಪರ, ಅನಿತ್ಯ ನಿತ್ಯ ತತ್ತ್ವಗಳ ಕುರಿತು ವಿಶೇಷವಾಗಿ ತಿಳಿಯಬೆಕೆನಿಸಿದೆಯೋ ಅವರು ಮೇಲಿನ ಆರು ಮೂಲಗಳನ್ನು ಅವಲೋಕಿಸಬೇಕು. ಅರಿತವರು ಮಾತ್ರ ಭಗವಂತನ ಸಂಕ್ಷೇಪ ವಿವರಣೆಯಿಂದಲೇ ಸಮಾಧಾನ ಹೊಂದಬಲ್ಲರು.

ಸಂಬಂಧ:– ಮುಂದಿನ ೨ ಮಂತ್ರಗಳಲ್ಲಿ ಕ್ಷೇತ್ರದ ಬಗ್ಗೆ ಹೇಳಿದೆ.

ಮಹಾಭೂತಾನ್ಯಹಂಕಾರೋ ಬುದ್ಧಿರವಕ್ತಮೇವ ಚ ।
ಇಂದ್ರಿಯಾಣಿ ದಶೈಕಂ ಚ ಪಂಚಚೇಂದ್ರಿಯ ಗೋಚರಾಃ ॥೫॥
ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।
ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥೬॥

ಭಾವ:– ಪಂಚ ಮಹಾಭೂತಗಳು, ಅಹಂಕಾರ, ಬುದ್ಧಿ, ಅವ್ಯಕ್ತಂ, ದಶೇಂದ್ರಿಯ ಗಳು, ಒಂದು ಮನಸ್ಸು, ಪಂಚೇಂದ್ರಿಯ ವಿಷಯಗಳು, ಇಚ್ಛೆ, ದ್ವೇಷ, ಸುಖ, ದುಃಖ, ಸಂಘಾತ, ಚೇತನ, ಧೃತಿ ಈ ಎಲ್ಲ ವಿಕಾರದಿಂದ ಕೂಡಿದುದು ಕ್ಷೇತ್ರ. ಇದು ಸಂಕ್ಷೇಪವಾಗಿ ಹೇಳಲ್ಪಟ್ಟಿತು.

ವಿವರಣೆ:- (೧) ಅವ್ಯಕ್ತ:– ಜಡಜಗತ್ತಿನ ಆದಿಜನನಿ, ಸತ್ವ ರಜ ತಮ ಗಳ ಸಾಮ್ಯಾವಸ್ಥೆಯಲ್ಲಿರುವ ಮಹಾನ್ ಪ್ರಕೃತಿ. ಮಾಯೆ, ಶಕ್ತಿ ಇವು ಅವ್ಯಕ್ತದ ಪರ್ಯಾಯ ನಾಮಗಳು. (೨) ಬುದ್ಧಿ:– ಪ್ರಕೃತಿಯು ವಿಕಾಸಮುಖ

ವಾದಾಗ ಕಂಡು ಬರುವ ಮಹಾನ್ ತತ್ತ್ವವು ಬುದ್ಧಿ ಅಥವಾ ಮಹತ್ತು. ಇಲ್ಲಿ ಗುಣಗಳ ಸಾಮ್ಯತೆಯು ಶಿಥಿಲವಾಗಿದೆ. (೩) ಅಹಂಕಾರ:- ಪ್ರಕೃತಿಯ ದ್ವಿತೀಯ ವಿಕಾರ. ಮಹತ್ತಿನ ಪರಿಣಾಮ. ಇಲ್ಲಿ ಮೂರೂ ಗುಣಗಳು ಉದ್ರೇಕಗೊಂಡಿವೆ. ಸತ್ವಗುಣೋದ್ರಿಕ್ತ ಅಹಂಕಾರವು ವೈಕಾರಿಕ. ರಜೋಗುಣೋದ್ರಿಕ್ತ ಅಹಂಕಾರವು ತೈಜಸ. ತಮೋಗುಣೋದ್ರಿಕ್ತ ಅಹಂಕಾರವು ಭೂತಾದಿ. (೪) ಪಂಚ ಮಹಾಭೂತಗಳು:– ಅಹಂಕಾರದ ಒಡಲಿನಿಂದ ಹುಟ್ಟುವ ಪಂಚ ತನ್ಮಾತ್ರೆಗಳೇ ಪಂಚಮಹಾಭೂತಗಳು. ಇವು ಅಹಂಕಾರದ ವಿಕೃತಿಗಳು. ಈ ತನ್ಮಾತ್ರೆಗಳಿಂದ ಹುಟ್ಟಿದವು ಪಂಚಭೂತಗಳು.

(೫) ದಶೇಂದ್ರಿಯಗಳು:– ಪಂಚಭೂತಗಳ ವಿವಿಧ ಸಮ್ಮಿಶ್ರಣದಿಂದ ನಿರ್ಮಾಣವಾಗಿವೆ. ವಾಕ್ ಪಾಣಿ ಪಾದ ಪಾಯು ಉಪಸ್ಥ ಇವು ಕರ್ಮೇಂದ್ರಿಯಗಳು. ಶ್ರೋತ್ರ ತ್ವಚ ನೇತ್ರ ರಸನ ಘ್ರಾಣ ಇವು ಜ್ಞಾನೇಂದ್ರಿಯಗಳು.

(೬) ಪಂಚ ವಿಷಯಗಳು:– ಶಬ್ದ ಸ್ಪರ್ಶ ರೂಪ ರಸ ಗಂಧ ಶ್ರೋತ್ರಾದಿ ಇಂದ್ರಿಯ ವೇದ್ಯವಾಗುವ ಈ ಐದು ಗುಣಗಳೇ ಪಂಚ ವಿಷಯಗಳು.

(೭) ಮನಸ್ಸು:– ಇದೂ ಭೂತಪಂಚೀಕರಣದಲ್ಲಿ ತೋರಿಬಂದ ತತ್ತ್ವ. ಬಹು ಸೂಕ್ಷ್ಮವಾಗಿದೆ. ಮನನ, ಚಿಂತನ, ಕಲ್ಪನೆಗಳು ಇದರ ವ್ಯವಹಾರಗಳು.

(೮) ಇಚ್ಛಾ:- ಹಿತವಸ್ತುಗಳ ಬಯಕೆಯು ಇಚ್ಛಾ. (೯) ದ್ವೇಷ:- ಅಹಿತ ವಸ್ತುಗಳ ಬಗೆಗಿರುವ ಭಾವನೆಯು ದ್ವೇಷ. (೧೦) ಸುಖ–ದುಃಖ:– ಅನುದ್ವೇಗಕರ ಮನೋತರಂಗವು ಸುಖ. ಉದ್ವೇಗಕರ ಮನೋತರಂಗವು ದುಃಖ.

(೧೧) ಸಂಘಾತ– ಇಪ್ಪತ್ನಾಲ್ಕು ಜಡ ತತ್ತ್ವಗಳಿಂದ ಕೂಡಿದ ದೇಹವು ಸಂಘಾತ. (೧೨) ಚೇತನಾ– ವಸ್ತು ಪ್ರಕಾಶಕವಾದ ಜಿಜ್ಞಾಸಾ ಮನೋವೃತ್ತಿ ವಿಶೇಷವು ಚೇತನಾ. (೧೩)ಧೃತಿ–ದುಃಖಗಳು ಬಂದಾಗ ಹತಾಶನಾಗದೆ ಪ್ರಸನ್ನ ಭಾವದಿಂದ ಎದುರಿಸುವದು ಧೃತಿ. ಈ ಹದಿಮೂರು ಘಟಕಗಳಿಂದ ಸಮ್ಮಿಶ್ರಿತವಾದ ದೇಹವು ಕ್ಷೇತ್ರ.

ಸಂಬಂಧ:– ದೇಹವಿಲಕ್ಷಣನಾದವ ಕ್ಷೇತ್ರಜ್ಞ. ಅವನ ಸ್ವರೂಪವನ್ನು ಅರಿಯಲು ಜ್ಞಾನಸಾಧನಗಳೇ ಅವಶ್ಯ. ಮುಂದಿನ ಐದು ಮಂತ್ರಗಳಲ್ಲಿ ಅವುಗಳ ಬಗೆಗೆ ಹೇಳಲಾಗಿದೆ.

ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥೭॥

ಅರ್ಥ:– ಅಮಾನಿತ್ವ, ಅದಂಭಿತ್ವ, ಅಹಿಂಸಾ, ಕ್ಷಾಂತಿ, ಆರ್ಜವ, ಆಚಾರ್ಯೋಪಾಸನೆ, ಶೌಚ, ಸ್ಥೈರ್ಯ, ಆತ್ಮನಿಗ್ರಹ ॥೭॥

ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।
ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥೮॥

ಭಾವ:–ಇಂದ್ರಿಯಗಳ ವಿಷಯಗಳಲ್ಲಿ ವೈರಾಗ್ಯ, ಅನಹಂಕಾರ, ಜನ್ಮಮೃತ್ಯು ಜರಾ ವ್ಯಾಧಿ ದುಃಖ–ಈ ದೋಷಗಳನ್ನು ನೋಡುವುದು

ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।

ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥೯॥

ಭಾವ:-ಪುತ್ರದಾರ ಗೃಹಗಳಲ್ಲಿ ಆಸಕ್ತಿ ಹಾಗು (ಅನಭಿಷ್ವಂಗಃ) ತನ್ಮಯತೆ ಇಲ್ಲದಿರುವದು, ಇಷ್ಟಾನಿಷ್ಟಗಳು ಪ್ರಾಪ್ತವಾದಾಗ ಸದಾಸಮಚಿತ್ತನಾಗಿರುವದು.

ಮಯಿ ಚಾನನ್ಯ ಯೋಗೇನ ಭಕ್ತಿರವ್ಯಭಿಚಾರಿಣೀ ।

ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥೧೦॥

ಭಾವ:– ಮಯಿ= ನನ್ನಲ್ಲಿ ಅನನ್ಯಯೋಗೇನ= ಅನನ್ಯಯೋಗದಿಂದ ಅವ್ಯಭಿಚಾರಿಣೀ= ಅವ್ಯಭಿಚಾರಿಯಾಗಿರುವ ಭಕ್ತಿಃ= ಭಕ್ತಿ ವಿವಿಕ್ತದೇಶಸೇವಿತ್ವಂ= ನಿರ್ಜನ ಪ್ರದೇಶವನ್ನು ಸೇವಿಸುವದು, ಜನಸಂಸದಿ= ಜನಸಮೂಹದಲ್ಲಿ ಅರತಿಃ= ಅರತಿಯು

ಅಧ್ಯಾತ್ಮಜ್ಞಾನನಿತ್ಯತ್ವಂ ತತ್ವಜ್ಞಾನಾರ್ಥದರ್ಶನಮ್ ।

ಏತಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥೧೧॥

ಭಾವ:–ಅಧ್ಯಾತ್ಮಜ್ಞಾನನಿತ್ಯತ್ವಂ= ಅಧ್ಯಾತ್ಮಜ್ಞಾನನಿಷ್ಠೆ, ತತ್ವಜ್ಞಾನಾರ್ಥದರ್ಶನಂ = ತತ್ತ್ವಜ್ಞಾನದ ಅರ್ಥದ ಆಲೋಚನೆ; ಏತತ್= ಇದು ಜ್ಞಾನಮಿತಿ = ಜ್ಞಾನವೆಂದು ಪ್ರೋಕ್ತಂ= ಹೇಳಲ್ಪಟ್ಟಿದೆ. ಯತ್ = ಯಾವುದು, ಅತಃ ಅನ್ಯಥಾ= ಇದಕ್ಕಿಂತ ಭಿನ್ನವಾಗಿದೆಯೋ, (ಅದು), ಅಜ್ಞಾನಂ= ಅಜ್ಞಾನ ॥೧೧॥

ವಿವರಣೆ:– (೧) ಅಮಾನಿತ್ವ- ಆತ್ಮಸ್ತುತಿ ಮಾಡಿಕೊಳ್ಳುವದು ಮಾನಿತ್ವ. ಬಹು ಜನರು ಇದರ ದಾಸರಾಗಿದ್ದಾರೆ. ತಮ್ಮ ಜಾತಿ, ಮತ, ಸಿರಿವಂತಿಕೆ, ವಂಶ, ವಿದ್ಯೆ, ಸ್ಥಾನ, ಮಾನ, ಧರ್ಮ, ಪಂಥ, ಸಂಪ್ರದಾಯ, ಕುಲ, ಸೌಂದರ್ಯ ಮಾತುಗಾರಿಕೆ, ಬುದ್ಧಿ ಕಾರ್ಯಕೌಶಲ್ಯಗಳನ್ನು ಹೊಗಳುವದೆಂದರೆ ಅವರಿಗೆ ಎಲ್ಲಿಲ್ಲದ ಉತ್ಸಾಹ. ತಮ್ಮನ್ನು ಹೊಗಳುವ ಜನ ಸಿಕ್ಕರಂತೂ ಅವರ ಹಸಿವು ಹಾರುವದು, ಮನಸ್ಸು ಅರಳುವದು. ಸ್ತುತಿಪ್ರಿಯ ಮರುಳರನ್ನು ಕೊಂಡಾಡಿಯೇ ಕೆಲವು ಜಾಣರು ತುಪ್ಪದಲ್ಲಿ ಕೈತೊಳೆದುಕೊಳ್ಳುತ್ತಾರೆ. ಮಾನಿತ್ವ ಎನ್ನುವದು ಅಂಟುರೋಗ. ಒಮ್ಮೆ ಇದಕ್ಕೆ ತುತ್ತಾದರೆ ಸಾಯುವವರೆಗೂ ಗುಣವಾಗದು. ಯೋಗಿ, ತಪಸ್ವಿ, ಮುನಿ ಮುಂತಾದ ಮಹಾ ವ್ಯಕ್ತಿಗಳನ್ನೂ ಮೋಹಗೊಳಿಸಬಲ್ಲ ಮೋಡಿ ಪ್ರಶಂಸೆಯಲ್ಲಿದೆ.

ಮಾನಿತ್ವದ ಇನ್ನೊಂದು ಅರ್ಥ, ಗೌರವ, ಪ್ರತಿಷ್ಠೆ, ಮಾನ. ಹಣ,ಭೂಮಿ, ಜಾತಿ,ಪದವಿ, ಪಾಂಡಿತ್ಯಗಳ ಮೇಲೆ ತಮ್ಮ ಮಾನಸೌಧ ರಚಿಸಿಕೊಂಡವರಿಗೇನೂ ಕೊರ್ರತೆಯಿಲ್ಲ. ಅವರು ಮಾನವೆಂಬ ಕಾಜಿನ-ಕವಚ ಹೊತ್ತು ಬದುಕುವ ಅವಿಶ್ವತರು. ಕ್ಷುಲ್ಲಕ ಸಂಗತಿಗಳಿಂದಲೂ ಮಾನಭಂಗವಾಗುವ ಅಂಜಿಕೆ ಅವರನ್ನು ಸದಾಮುಸುಕಿದೆ. ದಕ್ಷಬ್ರಹ್ಮನು ಬಂದಾಗ ಶಿವನು ಎದ್ದು ಸ್ವಾಗತಿಸಲಿಲ್ಲ. ಅದು ತನ್ನ ಅಪಮಾನ ಎಂದು ಬಗೆದ ದಕ್ಷ-ಬ್ರಹ್ಮನು ಅಳಿಯನ ವಿರುದ್ಧ ವೈದಿಕ

ಯುದ್ಧವನ್ನೇ ಸಾರಿದ. ಕೊನೆಗೆ ಸರ್ವನಾಶದಲ್ಲಿ ಅವಸಾನವಾಯ್ತು.

ಆತ್ಮಪ್ರಶಂಸಾವಿಮುಖನಾಗಿರುವದು ಹಾಗು ವ್ಯವಹಾರಿಕ ಗೌರವಗಳಿಗೆ ತಿಲಮಾತ್ರ ಬೆಲೆಯನ್ನು ಕೊಡದಿರುವದು ಹಾಗು ಜನ ಮಾನವೀಯಲಿ ಬಿಡಲಿ ಸ್ತುತಿಸಲಿ ನಿಂದಿಸಲಿ ಅದರತ್ತ ಲಕ್ಷವಿಲ್ಲದಿರುವದು ಅಮಾನಿತ್ವ. ಗಾಂಧೀಜಿಯು ವರು ಒಂದು ದಿನವೂ ತಾವು ಮಾಡಿದ ಮಹಾನ್ ಕಾರ್ಯಗಳ ಬಗ್ಗೆ ಪ್ರಶಂಸಾತ್ಮಕ ಮಾತನಾಡಲಿಲ್ಲ. ಅಪಮಾನ ಮಾಡಿದವರಿಗೆ ಪ್ರೇಮ–ಪುಷ್ಪಗಳನ್ನಿತ್ತರು; ಮಾನವೀಯುವವರನ್ನು ಉಪೇಕ್ಷಿಸಿದರು. ಅವರಲ್ಲಿ ಅಮಾನಿತ್ವವಿತ್ತು

೨) ಅದಂಭಿತ್ವ– ತಮ್ಮಲ್ಲಿಲ್ಲದ ಸಂಗತಿಗಳು ಇವೆ ಎನ್ನುವ ಹಾಗೆ ತೋರಿಸಿಕೊಳ್ಳುವದು ದಂಭಿತ್ವ. ಆಡಂಬರ ಜೀವಿಗಳ ಮಾತು ಕೃತ್ರಿಮ, ವೇಷ ಕೃತಕ. ಆಚಾರ ಕಪಟ. ಸದಾ ಸಹಜ ಭಾವದಿಂದಿರುವದು ಅದಂಭಿತ್ವ.

೩) ಕ್ಷಾಂತಿ-ಸೇಡಿನ ಭಾವನೆ ಸರ್ವ ವಿನಾಶಕಾರಿ. ಸೇಡಿಗಾಗಿ ಪ್ರಾಣ ತೆತ್ತವರದೆಷ್ಟೋ ಜನ; ಧನ ಭೂಮಿ ಮಾನ ಕಳೆದುಕೊಂಡವರಿಗೆ ಎಣಿಕೆಯಿಲ್ಲ. ತನಗಾದ ಅನ್ಯಾಯವನ್ನು ಮರೆತು ಬಿಡುವದು ಕ್ಷಾಂತಿ. ಭಕ್ತನು ಹೃದಯವಂತ, ಸರ್ವಭೂತಹಿತೈಷಿ. 'ಎಡಗಾಲಿಲೊದ್ದರೆ ಬಲಗಾಲ ಹಿಡಿವುದು, ಬಲಗಾಲಿಲೊದ್ದರೆ ಎಡಗಾಲ ಹಿಡಿವುದು' 'ತನಗೆ ಮುನಿವರಿಗೆ ತಾ ಮುನಿಯಲೇಕಯ್ಯಾ' ಇದು ಅವನ ತತ್ತ್ವ. ಕ್ರಿಸ್ತ, ಬುದ್ಧ, ಬಸವಣ್ಣ, ಕ್ಷಾಂತಿಯ ಮೂರ್ತಿಗಳಾಗಿದ್ದರು.

೪) ಆರ್ಜವ– ಆಚರಣೆ ಮಾತು ಹಾಗು ಮನಸ್ಸುಗಳ ಮಧ್ಯ ಕ್ರಮಬದ್ಧವಾದ ಹೊಂದಾಣಿಕೆ ಇದ್ದರೆ ಅದು ಆರ್ಜವ. ಕಾಪಟ್ಯವಿಲ್ಲದ ಪ್ರಾಮಾಣಿಕತೆಯು ಆರ್ಜವ.

೫) ಆಚಾರ್ಯೋಪಾಸನ– ಆಚಿನೋತಿ ಶಾಸ್ತ್ರಾರ್ಥಾನ್, ಆಚಾರೇಸ್ಥಾಪಯತಿ, ಸ್ವಯಮಾಚರತೇ ಯಃ ಸಃ ಆಚಾರ್ಯಃ' ಯಾವನು ಉಪನಿಷದ್ವಚನಗಳನ್ನು ಸಂಗ್ರಹಿಸುತ್ತಾನೆಯೋ, ಆ ವಚನಗಳ ಅನುಸಾರ ಆಚರಿಸುತ್ತಾನೆಯೋ ಹಾಗು ಶಿಷ್ಯನನ್ನು ಆಚಾರದಲ್ಲಿ ತೊಡಗಿಸುತ್ತಾನೆಯೋ ಅವನು ಆಚಾರ್ಯ, ಗುರು, ತನ್ನ ತಾನರಿತ ಅನುಭವಿ, ದೇವನೊಂದಿಗೆ ಸಾಮರಸ್ಯ ಹೊಂದಿದ ಕೃತಕೃತ್ಯ! ಅಂಥ ಗುರುವಿನನ್ನು ವಿವಿಧ ರೀತಿಯಲ್ಲಿ ಅಮಿತ ಭಕ್ತಿಯಿಂದ ಸೇವಿಸುವದು ಆಚಾರ್ಯೋಪಾಸನ.

೬) ಶೌಚ– ಸ್ವಚ್ಛತೆಯು ಶೌಚ. ಭಕ್ತನು ನಡತೆ, ಮಾತು, ಮನಸ್ಸುಗಳಲ್ಲಿ ನಿರ್ಮಲನಾಗಿರುತ್ತಾನೆ. ಅವನ ದುಡಿಮೆ ಪರಹಿತಕಾರಿ. ಅವನ ಮಾತು ಸತ್ಯ ಹಾಗು ಪ್ರೇಮಪೂರ್ಣ. ಅವನ ಮನಸ್ಸು ಕಾಮಾದಿ ವಿರಹಿತ.

೭) ಸ್ಥೈರ್ಯ– ಎಂಥ ತೊಂದರೆಗಳು ಬಂದರೂ ಸನ್ಮಾರ್ಗದಲ್ಲಿ ಸಾಗಿಯೇ ತೀರುವೆನೆಂಬ ಮನೋ ದಾರ್ಢ್ಯವು ಸ್ಥೈರ್ಯ. ತಾಯಿ ತಂದೆ, ಬಂಧು ಬಳಗ, ನೆರೆ ಹೊರೆಯು ಜನ ಎಷ್ಟು ಆತಂಕ ಒಡ್ಡಿದರೂ ಅವುಗಳನ್ನೆಲ್ಲಾ ಕಡೆ

ಗಣಿಸಿ ದೇವಪಥವಿಡಿದು ಸಾಗುವದು ಸ್ಥೈರ್ಯ.

೮) ಆತ್ಮನಿಗ್ರಹ ಹಾಗು ಅಹಿಂಸಾ:–ಹಸಿವು ತೃಷೆ ರೋಗ ರುಜಿನಗಳನ್ನು ಸಂತೋಷದಿಂದ ತಡೆದುಕೊಳ್ಳುವದು ಆತ್ಮ ವಿನಿಗ್ರಹ. ಇತರ ಜೀವಿಗಳಿಗೆ ಕಷ್ಟ ಕೊಡದೆ ಪ್ರೀತಿಸುವದು ಅಹಿಂಸಾ.

೯) ವೈರಾಗ್ಯ–ಶಬ್ದ ಸ್ಪರ್ಶ ರೂಪ ರಸ ಗಂಧಗಳು ಇಂದ್ರಿಯಾರ್ಥಗಳು. ಅವುಗಳಿಂದ ವಿಮುಖನಾಗಿರುವದು ವಿರಾಗ.

೧೦) ಅನಹಂಕಾರ–ಕರ್ತೃಭಾವ, ಭೋಕ್ತೃಭಾವಗಳನ್ನು ತಾಳದಿರುವದು ಅನಹಂಕಾರ. 'ಎನಗಿಂತ ಕಿರಿಯರಿಲ್ಲ' 'ಸದುವಿನಯವೇ ಸದಾಶಿವನೊಲುಮೆ ಯಯ್ಯಾ' ಇವು ಅನಹಂಕಾರದ ಭಾವಗಳು.

೧೧)ದೋಷದರ್ಶನ–ಜನ್ಮ ಮರಣ ವೃದ್ಧಾಪ್ಯ ವ್ಯಾಧಿಗಳು ದುಃಖದಿಂದ ಕೂಡಿವೆ. ಜೀವನವೆಂಬುದೇ ದುಃಖಗಳ ಸಾಕಳಿ. ಹೀಗೆ ತಿಳಿದುಕೊಂಡರೆ ಅದು ದೋಷದರ್ಶನ, ಅದರಿಂದ ವಿರಕ್ತಿ. ಶ್ರೀ ನಿಜಗುಣ ಶಿವಯೋಗಿಗಳು ಕಷ್ಟಕರ ಬದುಕಿನ ಹೃದಯಸ್ಪರ್ಶಿಯಾದ ವರ್ಣನೆ ಮಾಡಿದ್ದಾರೆ:

ಆರು ತರಹರಿಸಬಹುದಡಿಗಡಿಗೆ ತೋರುವತಿ ।
ಘೋರ ಸಂಸಾರದನುತಾಪ ಸಂತತಿಯು ॥ಪಲ್ಲ॥

ಮಾತೆಯುದರದೊಳು ಮೊಗವಿಡದ ಮುನ್ನಸುವಳಿವ ।
ಪೂತಿ ಗಂಧದ ಹೇಯವನು ಹಿಡಿಲ ಸಮುದಾ ॥
ಘಾತಿ ವಿೀಗೆ ಪೊಡೆದು ಕೆಡಪುವ ಸೂತಿ ವಾಯುವನು ।
ಯಾತನೆಯ ನಡುಗಡಲದೆನಿಪ ಜನನವನು ॥೧॥

ನಿರಯದೋಕುಳಿಯನಾಡುವ ಪರಿಯ ಬಾಲ್ಯವನು ।
ದುರುಳತೆಯೋಳೀನನರಿಯದ ಶಿಶುತ್ವವನು॥
ಮರುಳಗೊಳಿಸುವ ಕಂತುವಿನ ಕಾಟ ಮೊದಲಾದ ।
ದುರಿತ ಕುಲ ಬಂಧುವೆನಿಸುವ ಯೌವನವನು ॥೨॥

ನುಡಿಯಬಾರದ ಲಜ್ಜೆಗೊಡುವ ಜರೆಯನು ತನ್ನ ।
ನಡಸಿ ತೀರದ ಬಾಧೆಗೊಳಿಪ ಮರಣವನು ॥
ಜಡಿವ ಯಮಭಟರ ಕೋಪವನಿಂತು ಭವಭವದೋ ।
ಳೆಡೆವಿಡದೆ ಶಂಭುಲಿಂಗವೆ ಬಿಡಿಸು ನೀನಿದನು ॥೩॥

(೧೨) ಅಸಕ್ತಿ–ಅನಭಿಷ್ವಂಗ:– ಪುತ್ರ ದಾರಾದಿ ವಿಷಯಗಳಲ್ಲಿ ಮಮ ಬುದ್ಧಿಯು ಆಸಕ್ತಿ; ತಾದಾತ್ಮ್ಯ ಬುದ್ಧಿಯು ಅಭಿಷ್ವಂಗ. ಜಗವೆಲ್ಲ ಈ ಎರಡು ಭಾವನೆಗಳ ಜಾಲದಲಿ ಬಂಧಿತವಾಗಿದೆ.

"ಗುಬ್ಬಿ ಹೆರವರ ಮನೆಯ ತನ್ನ ಮನೆಯೆಂಬಂತೆ ಧರೆ ಧನ ವನಿತೆಯರು ಎನ್ನವರು ತನ್ನವರೆಂದು ಹೋರಿ ಹೋರಿ ಸಾಯುತ್ತಿದೆ ಜೀವ. ಸರ್ವಕರ್ತೃ ಕೂಡಲಸಂಗಯ್ಯನೊಬ್ಬ ನೆಂದರಿಯದೆ ಕೆಟ್ಟರು."

ಪರಮಾತ್ಮನೇ ಜಗದೊಡೆಯ ಜಗತ್ಕರ್ತ; ಜಗದಾತ್ಮ ಜಗನ್ನಿಯಾಮಕ

ಎಂದು ಪರಿಭಾವಿಸಿ ವಿಷಯಗಳಲ್ಲಿ ಮಮತ್ವ ಇಲ್ಲದಿರುವದು ಅಸಕ್ತಿ. ಜಡವಾದ ದೇಹಾದಿಗಳು ತಾನಲ್ಲ ತಾನು ಪರಮಾತ್ಮನ ಅಂಶ ಎಂದು ತಿಳಿದುಕೊಳ್ಳುವದು ಅನಭಿಷ್ವಂಗ.

(೧೩) ಸಮಚಿತ್ತತ್ವ:– ಸಾಮಾನ್ಯವಾಗಿ ಇಷ್ಟವಸ್ತುಪ್ರಾಪ್ತಿಯಿಂದ ಸುಖ ಸಂವೇದನೆ, ಅನಿಷ್ಟವಸ್ತುಪ್ರಾಪ್ತಿಯಿಂದ ದುಃಖ ಸಂವೇದನೆ ಉಂಟಾಗುತ್ತವೆ. ಹಾಗೆ ಸುಖ ದುಃಖಗಳು ಏಳದಂತೆ ಮನಸ್ಸಿನ ಸಮತೋಲವನ್ನೂ ಅಚಲತೆಯನ್ನೂ ಕಾಪಾಡಿಕೊಂಡು ಹೋಗುವದು ಸಮಚಿತ್ತತ್ವ.

(೧೪) ಅವ್ಯಭಿಚಾರಿಣಿ ಭಕ್ತಿ ಹಾಗು ಅನನ್ಯಯೋಗ:- ದೇವನಿಗಾಗಿಯೇ ತನು ಮನಗಳನ್ನು ಮೀಸಲಾಗಿಡುವದು ಅವ್ಯಭಿಚಾರಿಣಿ ಭಕ್ತಿ. ಸರ್ವವೂ ದೇವನೆಂದು ನೋಡುವದು ಅನನ್ಯಯೋಗ. ಹನುಮಂತನು ಅವ್ಯಭಿಚಾರಭಕ್ತಿಯ ಆದರ್ಶ. ಈಶಾವಾಸ್ಯಮಿದಂ ಎಂದು ಸಾರಿದ ದಧ್ಯಂಗ ಋಷಿಯು ಅನನ್ಯ ಯೋಗದ ಮಹಾತ್ಮ.

(೧೫) ವಿವಿಕ್ತದೇಶವಾಸ:– 'ಸ್ವಭಾವತಃ ಸಂಸ್ಕಾರತಃ ವಾ ಶುದ್ಧಃ ಸರ್ಪ ವ್ಯಾಘ್ರಾದಿಭಿಃ ವಿವಿಕ್ತಃ ರಹಿತಃ । ಯತಃ ವಿವಿಕ್ತಾತ್ಮಭಾವನಾ' ಸ್ವಾಭಾವಿಕವಾಗಿ ಅಥವಾ ಸಂಸ್ಕಾರದ ಮೂಲಕ ಶುದ್ಧವಾದ, ಸರ್ಪ ವ್ಯಾಘ್ರಾದಿಗಳಿಲ್ಲದ ಸ್ಥಾನವು ವಿವಿಕ್ತದೇಶ. ಏಕೆಂದರೆ ಅಲ್ಲಿ ಪವಿತ್ರಾತ್ಮಭಾವನೆಯು ಉಂಟಾಗುತ್ತದೆ. ಈ ಪ್ರಮಾಣವಚನಾನುಸಾರ ಪರ್ವತಶಿಖರ ನದೀತಟ ಸುಂದರವನ ಸಮುದ್ರದಂಡೆ ಮುಂತಾದ ನಿರ್ಜನ ಹಾಗು ಸೃಷ್ಟಿಸೌಂದರ್ಯಯುಕ್ತ ಪ್ರದೇಶಗಳು ಪವಿತ್ರ. ಅಲ್ಲಿ ವಾಸಮಾಡುವದು ವಿವಿಕ್ತದೇಶಸೇವಿತ್ವ.

(೧೬) ಅರತಿಃ ಜನಸಂಸದಿ:– ಅನೀತಿ ಹಾಗು ಅನಾಚಾರಗಳಲ್ಲಿ ತೊಡಗಿದ ಪ್ರಾಕೃತ ಜನರ ಸಭೆಗಳಲ್ಲಿ ಪ್ರೇಮವಿಲ್ಲದಿರುವದು.

(೧೭) ಅಧ್ಯಾತ್ಮಜ್ಞಾನನಿತ್ಯತ್ವ:– 'ಆತ್ಮಾನಂ ಅಧಿಕೃತ್ಯ ಪ್ರವೃತ್ತಂ ಆತ್ಮಾನಾತ್ಮ ವಿವೇಕಜ್ಞಾನಂ ಅಧ್ಯಾತ್ಮಜ್ಞಾನಂ । ತಸ್ಮಿನ್ನೇವ ನಿಷ್ಠತ್ವಂ' ಆತ್ಮನನ್ನು ಕುರಿತು ಇರುವ ಆತ್ಮಾನಾತ್ಮವಿವೇಕವು ಅಧ್ಯಾತ್ಮಜ್ಞಾನ. ಅದರಲ್ಲಿ ನಿಷ್ಠೆ ತಾಳುವದು ಅಧ್ಯಾತ್ಮಜ್ಞಾನನಿತ್ಯತ್ವಂ.

(೧೮) ತತ್ತ್ವಜ್ಞಾನಾರ್ಥದರ್ಶನ:- ಪರಮಾತ್ಮನು ತತ್ತ್ವ. ಅವನು ಸತ್ಯ, ಜ್ಞಾನ, ಅನಂತರೂಪ ಬ್ರಹ್ಮ ಎಂಬ ತಿಳಿವು ತತ್ತ್ವಜ್ಞಾನ. ಈ ಜ್ಞಾನದ ಪುರುಷಾರ್ಥವೆಂದರೆ ಮುಕ್ತಿ. ಆ ಮುಕ್ತಿಸೌಖ್ಯದ ಅಪರೋಕ್ಷಾನುಭವವೇ ತತ್ತ್ವಜ್ಞಾನಾರ್ಥದರ್ಶನ. ಅಥವಾ ಇನ್ನೊಂದು ಬಗೆಯಾಗಿ ಹೇಳುವದಾದರೆ, ಬ್ರಹ್ಮ, ಪ್ರತ್ಯಗಾತ್ಮ, ಜೀವಾತ್ಮ ಹಾಗು ಅವರೆಲ್ಲ ಒಂದೇ ಎಂಬ ಜ್ಞಾನ– ಈ ನಾಲ್ಕು ಸಂಗತಿಗಳನ್ನು ಪುನಃ ಪುನಃ ಚಿಂತಿಸುವದು ತತ್ತ್ವಜ್ಞಾನಾರ್ಥದರ್ಶನ.

ಭಗವಂತ:– "ಪಾರ್ಥ, ಈ ಸರ್ವ ಸುಗುಣಗಳಿಗೆ ಜ್ಞಾನವೆಂದು ಬಲ್ಲವರ

ಅಭಿಮತ. ವಿಶ್ವಾತ್ಮನಾದ ನನ್ನನ್ನು ದರ್ಶಿಸಲು, ನನ್ನಲ್ಲಿ ಸಾಮರಸ್ಯ ಹೊಂದಲು ಈ ಪವಿತ್ರ ಜ್ಞಾನವು ಸಾಧನವಾಗಿದೆ. ಈ ಜ್ಞಾನಕ್ಕೆ ವಿರುದ್ಧವಾದ ಗುಣ ಸಮೂಹವೇ ಅಜ್ಞಾನ. ಅಂದರೆ, ಅಭಿಮಾನ, ಆಡಂಬರ, ಹಿಂಸೆ, ಸೇಡಿನ ಮನೋಭಾವ, ವಕ್ರತೆ, ಪ್ರಪಂಚೋಪಾಸನೆ, ಅಶುಚಿ, ಚಂಚಲತೆ, ವಿಷಯ ಚಾಪಲ್ಯ, ವಿಷಯ ರತಿ, ಅಹಂಕಾರ, ಪ್ರಪಂಚಜೀವನವು ಸುಖವೆಂಬ ಬುದ್ಧಿ, ಸತಿಸುತಾದಿಗಳಲ್ಲಿ ಆಸಕ್ತಿ, ಅನಾತ್ಮದಲ್ಲಿ ಆತ್ಮಭಾವ, ಸುಖ ದುಃಖಗಳಲ್ಲಿ ಅಸಮ ದೃಷ್ಟಿ, ಅನ್ಯಯೋಗ, ವ್ಯಭಿಚಾರ ಭಕ್ತಿ, ಅಪವಿತ್ರದೇಶವಾಸ, ದುರ್ಜನ ಸಂಗತಿ, ಅನಾತ್ಮಜ್ಞಾನನಿಷ್ಠೆ, ಹಾಗು ವಿಷಯಭೋಗದ ಚಿಂತೆ, ಇವು ಅಜ್ಞಾನ. ಇದ ರಿಂದ ಭವಬಂಧನ."

ಭಗವಂತನು ಕೊಂಡಾಡಿದ ಜ್ಞಾನ–ಗುಣಗಳನ್ನು ನಾಲ್ಕು ವಿಭಾಗಗಳಲ್ಲಿ ವಿಂಗಡಿಸಬಹುದು: (೧) ತತ್ತ್ವಜ್ಞಾನಾರ್ಥದರ್ಶನ (೨) ಅಧ್ಯಾತ್ಮಜ್ಞಾನನಿತ್ಯತ್ವ (೩) ಅನನ್ಯಯೋಗ, ಅವ್ಯಭಿಚಾರಭಕ್ತಿ, (೪) ಉಳಿದ ಗುಣಗಳು. ನಾಲ್ಕ ನೆಯ ವಿಭಾಗದ ಗುಣಶ್ರೇಯಿಂದ ಪ್ರಕೃತಿಶುದ್ಧಿ. ಮೂರನೆಯ ವಿಭಾಗದ ಗುಣಶ್ರೇಯಿಂದ ಭಾವಶುದ್ಧಿ. ಎರಡನೆಯ ಗುಣಶ್ರೇಯಿಂದ ಮತಿಶುದ್ಧಿ. ಮೊದಲನೆಯದರಿಂದ ಸತ್ಯಸಾಕ್ಷಾತ್ಕಾರ! ರೂಪಕದಿಂದ ಹೇಳುವದಾದರೆ ಚತುರ್ಥ ಗುಣಸಂಪದವು ಹಣತೆ. ಶುದ್ಧ ಭಕ್ತಿಯು ತೈಲ. ಆತ್ಮಜ್ಞಾನ ನಿಷ್ಠೆಯು ಬತ್ತಿ. ತತ್ತ್ವವಿಜ್ಞಾನವು ಜ್ಯೋತಿ! ಜ್ಞಾನದೀಪ ಬೆಳಗಲು ನಾಲ್ಕೂ ಅವಶ್ಯ ವಾದುದರಿಂದ ಅವುಗಳಿಗೆ ಜ್ಞಾನವೆಂದಿದ್ದಾನೆ ಪ್ರಭು.

ಸಂಬಂಧ:–ಮುಂದಿನ ಆರು ಮಂತ್ರಗಳಲ್ಲಿ ಜ್ಞೇಯದ ಬಗ್ಗೆ ಹೇಳಲಾಗಿದೆ.

ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ ।
ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥೧೨॥

ಅರ್ಥ:– ಯತ್ ಜ್ಞೇಯಂ=ಯಾವುದು ಜ್ಞೇಯವೋ, ಯತ್ ಜ್ಞಾತ್ವಾ= ಯಾವು ದನ್ನು ತಿಳಿದುಕೊಂಡು ಅಮೃತಂ= ಅಮೃತತ್ವವನ್ನು ಅಶ್ನುತೇ= ಹೊಂದುತ್ತಾನೆಯೋ ತತ್ =ಅದನ್ನು ಪ್ರವಕ್ಷ್ಯಾಮಿ= ಹೇಳುವೆ. ತತ್=ಅದು ಅನಾದಿ ಮತ್= ಆದಿ ಇಲ್ಲದ್ದು.(ಅದು) ಪರಂ ಬ್ರಹ್ಮ= ಪರಮ ಬ್ರಹ್ಮ. ನ ಸತ್ ನ ಅಸತ್= ಸತ್ ಅಸತ್ ಅಲ್ಲ, ಎಂದು ಉಚ್ಯತೇ= ಹೇಳಲ್ಪಟ್ಟಿದೆ.

ವಿವರಣೆ:– ಭಗವಂತ– "ಧನಂಜಯ, ಯಾವುದನ್ನು ನೀನು ನಿಖರವಾಗಿ ತಿಳಿದುಕೊಂಡರೆ, ಯಾವುದರ ದಿವ್ಯ ದರ್ಶನ ಪಡೆದರೆ ಹಾಗು ಯಾವುದರಲ್ಲಿ ನೀನು ಒಂದುಗೂಡಿದರೆ ಅಮರನಾಗುವಿಯೋ ಅಂಥ ವಿನಿರ್ಮಲ ಜ್ಞೇಯ ವಸ್ತುವಿನ ಬಗ್ಗೆ ಬೋಧಿಸುವೆ. ನಿನ್ನ ಮನಸ್ಸನ್ನು ನನ್ನ ಮಾತುಗಳಲ್ಲಿ ಕೇಂದ್ರೀ ಕರಿಸು. ಅರ್ಜುನ, ಆ ವಸ್ತುವು ಅನಾದಿ ಪರಬ್ರಹ್ಮ, ಸದಸತ್ತುಗಳಿಗೆ ವಿಲಕ್ಷ ಣವಾದ ಸರ್ವಾಶ್ರಯ!"

(೧) ಪರಂಬ್ರಹ್ಮ- ಜ್ಞೇಯತತ್ತ್ವವೆಂದರೆ ಪರಬ್ರಹ್ಮ. ಅವನು ಸೀಮೆ ಯಿಲ್ಲದ ಅನಂತದೇವ. ವಿಶ್ವವೆಲ್ಲ ಒಂದು ಸದನವಾದರೆ ಅವನು ಅದರ ಒಳ ಒಳಹೊರಗೂ ವ್ಯಾಪಿಸಿದ ಅಚಲ ಅಂತರಿಕ್ಷ, ಪರಾತ್ ಪರವಾದ ಸತ್ಯ.

೨)ಅನಾದಿ ಮತ್-ಉಪಾದಾನ, ನಿಮಿತ್ಯ ಹಾಗು ಸಹಕಾರಿ ಕಾರಣಗಳಿಂದ ಘುಟ್ಟಿ ಬಂದುದು ಆದಿಮತ್ ಪದಾರ್ಥ. ಉದಾ: ಈ ಶಿವಾನುಭವ ಮಂಟಪ, ಕಬ್ಬಿಣ ಸಿಮೆಂಟು ಕಲ್ಲುಗಳು ಉಪಾದಾನ ಕಾರಣ. ರಚನಾಕುಶಲನು ನಿಮಿತ್ಯ ಕಾರಣ. ಕುಲುಮೆ, ಕ್ರೇನು, ಯಂತ್ರಗಳು ಸಹಕಾರಿ ಕಾರಣಗಳು. ಈ ಕಾರಣಗಳ ಸಂಘಟನೆಯಿಂದ ಮಂಟಪ ಕೆಲ ವರುಷಗಳ ಹಿಂದೆ ರಚನೆಗೊಂಡಿತು. ಈ ಮಂಟಪದ ಒಳಗೆ ಹೊರಗೆ ವಿಸ್ತರಿಸಿದ ಆಕಾಶ ಮಾತ್ರ ಸೃಷ್ಟವಾಗಿಲ್ಲ, ಅನಾದಿ ಮತ್. ಅದರಂತೆ ದೇಹ ಮತ್ತು ಜಗತ್ತುಗಳು ಆದಿಮತ್. ಪ್ರಕೃತಿಯಿಂದ ಹುಟ್ಟಿವೆ. ಪರಮಾತ್ಮನು ಅನಾದಿ. ಕಾಲಮಿತಿಯಿಲ್ಲದವ.

೩)ಸತ್ ನ, ಅಸತ್ ನ-ವಿಧಿಮುಖ ಪ್ರತೀತಿಗೆ(ಇದೆ ಎಂಬ ಬುದ್ಧಿವೃತ್ತಿಗ) ವಿಷಯವಾದುದು ಸತ್. ನಿಷೇಧಮುಖ (ಇಲ್ಲ ಎಂಬ ಬುದ್ಧಿವೃತ್ತಿಗೆ) ವಿಷಯ ವಾದುದು ಅಸತ್. ಉದಾ:- ಜಾಗ್ರ ಅವಸ್ಥೆಯಲ್ಲಿ ಸ್ಥೂಲ ದೇಹವು ಸತ್. ಸುಪ್ತಿಯಲ್ಲಿ ಆ ದೇಹವು ಅಸತ್. ಅದೇ ರೀತಿ ವಿಶ್ವ. ಅದು ಪ್ರಕೃತಿಯ ವಿಕಸನ ಕಾಲದಲ್ಲಿ ಸತ್. ಪ್ರಕೃತಿಯ ಅವಿಕಸನಕಾಲದಲ್ಲಿ ಅಸತ್. ಪರಮಾತ್ಮನು ಮಾತ್ರ ಸರ್ವ ಅವಸ್ಥೆಗಳಿಗೆ ಮೀರಿದವ. ಪ್ರಕೃತಿಯ ಮಂಡಲದಾಚೆ ಅವನ ವ್ಯಾಪ್ತಿ. ಕಾಲ ಪ್ರವಾಹದಲ್ಲಿ ಅವನು ಸಿಲುಕಿಲ್ಲ. ಭೂಮ್ಯಾದಿ ಪ್ರಕೃತ್ಯಂತ ವಾದ ಸರ್ವ ತತ್ತ್ವಗಳು ಅವನ ದಿವ್ಯ ಆಧಾರದಲ್ಲಿಯೇ ತೋರುತ್ತವೆ ಹಾಗು ಅಳಿಯುತ್ತವೆ. ಆ ತೋರುವಿಕೆ ಹಾಗು ಅಳಿಯುವಿಕೆಗಳು ಅವನಿಗಿಲ್ಲ. ಅವನು ಸತ್ ಅಲ್ಲ ಅಸತ್ ಅಲ್ಲ. ಅವೆರಡನ್ನೂ ಸಾಕ್ಷಿಯಾಗಿ ಪ್ರಕಾಶಿಸುವ ಅಖಂಡ ಭಾನು. ವಿಧಿಮುಖ ಅಥವಾ ನಿಷೇಧಮುಖ ಹೊಂದಬಲ್ಲ ನಮ್ಮ ಬುದ್ಧಿಯು ಆತನ ಪರಮಾಶ್ರಯದಲ್ಲಿ ಕಾರ್ಯಮಾಡುತ್ತದೆ. ಅವನನ್ನು ಕಾಣುವ ಸಾಮರ್ಥ್ಯ ಅದಕ್ಕಿಲ್ಲ. ಇದು ಬಲ್ಲವರ ಅಭಿಪ್ರಾಯ.

ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥೧೩॥

ಅರ್ಥ:-ತತ್= ಅದು ಸರ್ವತಃ ಪಾಣಿಪಾದಂ, ಸರ್ವತೋಽಕ್ಷಿಶಿರೋಮುಖಂ ಸರ್ವ ತಃ ಶ್ರುತಿಮತ್=ಎಲ್ಲೆಲ್ಲಿಯೂ ಕೈ ಕಾಲು ಕಣ್ಣು ತಲೆ ಮುಖ ಕಿವಿಗಳುಳ್ಳದ್ದು. ಲೋಕೇ= ಲೋಕದಲ್ಲಿ ಸರ್ವಂ= ಎಲ್ಲವನ್ನು ಆವೃತ್ಯ= ಆವರಿಸಿಕೊಂಡು ತಿಷ್ಠತಿ=ಇರುತ್ತದೆ.

ವಿವರಣೆ:- ಭಗವಂತ:- "ಪಾರ್ಥ, ಪರಮಾತ್ಮನು ಪರಿಪೂರ್ಣ, ಎಲ್ಲ ವನ್ನು ವ್ಯಾಪಿಸಿದ್ದಾನೆ. ವಿಶ್ವದಲ್ಲಿ ಇರುವ ಹಸ್ತ ಪಾದಾದಿ ಸರ್ವ ಅವಯವಗಳು; ಮನ ಬುದ್ಧ್ಯಾದಿ ಅಂತಃಕರಣಗಳು ಅವನವು. ಜಾಗ್ರಾದಿ ಅವಸ್ಥೆಗಳಲ್ಲಿ ಪ್ರಕೃತಿ

ವಿಕಾಸದ ವಿವಿಧ ಹಂತಗಳಲ್ಲಿ ಅವನೇ ತುಂಬಿಕೊಂಡಿದ್ದಾನೆ."

ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಮ್ ।
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥೧೪॥

ಭಾವ:–ಜ್ಞೇಯವು ಸರ್ವೇಂದ್ರಿಯಗುಣಾಭಾಸ, ಸರ್ವೇಂದ್ರಿಯ ವಿವರ್ಜಿತ, ಅಸಕ್ತ, ಸರ್ವಭೃತ್, ನಿರ್ಗುಣ ಹಾಗು ಗುಣಭೋಕ್ತೃ.

(೧)ವಿವರಣೆ:– ಸರ್ವೇಂದ್ರಿಯಗುಣಾಭಾಸ– ಇಂದ್ರಿಯಗಳು ಹದಿನಾಲ್ಕು. (1) ವಾಕ್: ನುಡಿಯುವದು ಅದರ ಕಾರ್ಯ, ಶಬ್ದಗಳು ವಿಷಯ. (2) ಪಾಣಿ; ಹಿಡಿಯುವದು ಕಾರ್ಯ, ಮೂರ್ತವಸ್ತುಗಳು ವಿಷಯ. (3)ಪಾದ; ನಡೆಯುವದು ಕಾರ್ಯ, ಸ್ಥಾನಾಂತರವು ವಿಷಯ (4) ಪಾಯು; ವಿಸರ್ಜನವು ಕಾರ್ಯ, ಮಾಲಿನ್ಯವು ವಿಷಯ (5) ಉಪಸ್ಥ; ವಿಸರ್ಜನೆಯು ಕಾರ್ಯ, ಮೂತ್ರ ರೇತಗಳು ವಿಷಯ. (6) ಶ್ರೋತ್ರ; ಕೇಳುವದು ಕಾರ್ಯ, ಶಬ್ದಗಳು ವಿಷಯ. (7) ತ್ವಚ; ಮುಟ್ಟುವದು ಕಾರ್ಯ, ಸ್ಪರ್ಶವು ವಿಷಯ. (8) ನೇತ್ರ; ನೋಡುವದು ಕಾರ್ಯ, ರೂಪ ವರ್ಣ ಆಕಾರಗಳು ವಿಷಯ. (9) ರಸನ; ಆಸ್ವಾದಿಸುವದು ಕಾರ್ಯ, ರಸಗಳು ವಿಷಯ. (10) ಘ್ರಾಣ; ಮೂಸಿಸುವದು ಕಾರ್ಯ, ಗಂಧಗಳು ವಿಷಯ. (11) ಮನಸ್ಸು; ಸಂಕಲ್ಪ ವಿಕಲ್ಪಮಾಡುವದು ಕಾರ್ಯ, ಸುಖ ದುಃಖ ಮುಂತಾದ ಭಾವನೆಗಳು ವಿಷಯ. (12) ಬುದ್ಧಿ; ನಿರ್ಧರಿಸುವದು ಕಾರ್ಯ, ನಿರ್ಣಯಗಳು ವಿಷಯ. (13) ಚಿತ್ತು; ಅವಧಾರಣೆಯು ಕಾರ್ಯ, ಸಂಸ್ಕಾರಗಳು ವಿಷಯ. (14) ಅಹಂ; ಅಭಿಮಾನಿಸುವದು ಕಾರ್ಯ, ದೇಹ ಪ್ರಾಣ ಮನಸ್ಸು ಜೀವರುಗಳು ವಿಷಯ. ಈ ಹದಿನಾಲ್ಕು ಇಂದ್ರಿಯ, ಅವುಗಳ ಕಾರ್ಯ ಹಾಗು ವಿಷಯ (ಗುಣ) ಗಳನ್ನು ಪ್ರಕಾಶಿಸುವ ಮಹಾ ಬೆಳಗೇ ಜ್ಞೇಯರೂಪ ಪರಮಾತ್ಮ. ಒಂದು ರೂಪಕದಿಂದ ಹೇಳುವದಾದರೆ, ದೇಹವು ದೀಪಮಾಲಾಸ್ತಂಭ. ಇಂದ್ರಿಯಗಳು ಆ ದೀಪಸ್ತಂಭದ ಸುತ್ತಲಿರುವ ದೀಪದ ಕೈಗಳು. ಪರಮಾತ್ಮನ ಚೈತನ್ಯ ಕಿರಣಗಳೆಂದರೆ ಆ ಕೈಗಳ ಮೇಲೆ ಹೊಳೆಯುವ ದೀಪಮಾಲೆಗಳು. ಸಿದ್ಧಾಂತ ಶಾಸ್ತ್ರಕಾರರು ಆ ಇಂದ್ರಿಯಗತ ಚೈತನ್ಯದೀಪಗಳಿಗೆ ಲಿಂಗ ಎಂದು ಹೆಸರು ಕೊಟ್ಟಿದ್ದಾರೆ. ಉದಾ–ನಾಸಿಕದಲ್ಲಿ ನೆಲೆಸಿದ ಚೈತನ್ಯ ಪ್ರಭೆಯು ಆಚಾರಲಿಂಗ. ರಸನದಲ್ಲಿ ನೆಲೆಸಿದುದು ಗುರುಲಿಂಗ. ನೇತ್ರದಲ್ಲಿ, ಶಿವಲಿಂಗ. ತ್ವಚದಲ್ಲಿ, ಜಂಗಮಲಿಂಗ. ಶ್ರೋತ್ರದಲ್ಲಿ, ಪ್ರಸಾದಲಿಂಗ. ಕೊನೆಯದಾಗಿ ಮನದಲ್ಲಿ ಪ್ರಕಾಶಿಸುವ ದೇವಪ್ರಭೆಯು ಮಹಾಲಿಂಗ.

(೨) ಸರ್ವೇಂದ್ರಿಯ ವಿವರ್ಜಿತ:– ಇಂದ್ರಿಯಗಳು ಗುಣಾತ್ಮಕ, ಜಡ, ಪ್ರಕೃತಿಜನ್ಯ. ಪರಮಾತ್ಮನು ನಿರ್ಗುಣ, ಅಜಡ ಹಾಗು ಸ್ವಯಂಭು. ಆದ್ದರಿಂದ ಅವನು ಇಂದ್ರಿಯಗಳಿಲ್ಲದವ.

"ಅಪಾಣಿ ಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ।

ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿ ವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಂತಮ್॥"
ಪರಮಾತ್ಮನು ಕೈಕಾಲುಗಳಿಲ್ಲದವನಾದರೂ ಹಿಡಿಯುತ್ತಾನೆ. ಹಾಗು ನಡೆಯು ತ್ತಾನೆ; ನೇತ್ರವಿಲ್ಲದಿದ್ದರೂ ನೋಡುತ್ತಾನೆ. ಕಿವಿಯಿಲ್ಲದಿದ್ದರೂ ಕೇಳುತ್ತಾನೆ. ತಿಳಿಯಬೇಕಾದುದನ್ನೆಲ್ಲ ತಿಳಿಯುತ್ತಾನೆ. ಅವನನ್ನು ತಿಳಿಯುವವನು ಯಾವನೂ ಇಲ್ಲ. ಅವನಿಗೆ ಆದಿಪುರುಷ ಎನ್ನುತ್ತಾರೆ. (ಶ್ವೇ. ಶ್ವ. ೩-೧೯)

(೩) ಅಸಕ್ತ– ದೇವನು ಚಿದಾಕಾಶ. ನಿರ್ಲಿಪ್ತ. ಅವಿದ್ಯೆ ಅಜ್ಞಾನ ತಮಂಧಕಾರ ಯಾವುದೂ ಅವನನ್ನು ಮುಚ್ಚಿಹಾಕಲಾರದು. ವಸ್ತುಗಳ ವ್ಯಾಮೋಹ ಅವನನ್ನು ಬಾಧಿಸದು. ಆದ್ದರಿಂದ ಅಸಕ್ತ.

(೪) ಸರ್ವಭೃತ್– ದೇಹಗತ ಹಾಗು ವಿಶ್ವಗತ ತತ್ತ್ವಗಳು ಸ್ವತಂತ್ರ ವಲ್ಲ. ಪರಮಾತ್ಮನ ಮೇಲೆ ಅವಲಂಬಿಸಿವೆ. ಅವನೇ ಅವುಗಳಿಗೆ ಅಸ್ತಿತ್ವ ನೀಡು ತ್ತಾನೆ, ಅವುಗಳನ್ನು ಪರಿಪಾಲಿಸುತ್ತಾನೆ.

(೫) ನಿರ್ಗುಣ– ಸತ್ತ್ವ ರಜ ತಮ ಇವು ವಿಶ್ವಗತಗುಣಗಳು; ಪ್ರಕೃತಿಯೇ ಇವುಗಳ ಜನನಿ. ಪರಮಾತ್ಮನು ಪ್ರಕೃತಿಗೆ ಪರ! ಅತೀತ. ಆದ್ದರಿಂದ ಆ ತ್ರಿಗುಣ ಗಳ ಸೋಂಕು ಅವನಿಗಿಲ್ಲ.

(೬) ಗುಣಭೋಕ್ತೃ– ಜಲತರಂಗಗಳೊಂದಿಗೆ ಸೂರ್ಯಪ್ರತಿಬಿಂಬವೇ ತೇಲಿದಂತೆ ತೋರುವದಿಲ್ಲವೆ? ಹಾಗೆ, ಪರಮಾತ್ಮನು ಸತ್ತ್ವಪ್ರಧಾನಮನೋ ವೃತ್ತಿಯಲ್ಲಿ ಪ್ರತಿಬಿಂಬಿಸಿ ಸುಖವನ್ನು ಉಪಭೋಗಿಸಿದಂತೆ, ರಜಃಪ್ರಧಾನ ಮನೋವೃತ್ತಿಯಲ್ಲಿ ಪ್ರತಿಬಿಂಬಿಸಿ ಸುಖದುಃಖ ಭೋಗಿಸಿದಂತೆ, ತಮಃಪ್ರಧಾನ ಮನೋವೃತ್ತಿಯಲ್ಲಿ ಪ್ರತಿಬಿಂಬಿಸಿ ದುಃಖ ಭೋಗಿಸಿದಂತೆ ಕಾಣುತ್ತಾನೆ. ಆದ್ದ ರಿಂದ ಅವನನ್ನು ಗುಣಭೋಕ್ತೃ ಎಂದು ವರ್ಣಿಸಲಾಗಿದೆ. ವಾಸ್ತವಿಕವಾಗಿ ಮಾತ್ರ ಅವನು ಭೋಕ್ತೃವಲ್ಲ, ಗುಣಬಂಧಿತನಲ್ಲ.

ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।
ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥೧೫॥

ಅರ್ಥ:– ತತ್ =ಅದು ಭೂತಾನಾಂ= ಪ್ರಾಣಿಗಳ ಬಹಿರಂತಶ್ಚ= ಹೊರಗೂ ಒಳಗೂ (ಇದೆ); ಚರಂ ಅಚರಂ ಏವ= ಚರವೂ ಅಚರವೂ (ಆಗಿದೆ). ತತ್= ಅದು ಸೂಕ್ಷ್ಮ ತ್ವಾ ತ್= ಸೂಕ್ಷ್ಮವಾಗಿರುವದರಿಂದ ಅವಿಜ್ಞೇಯಂ= ಅರಿಯಲಸಾಧ್ಯವಾದ ತತ್= ಅದು ದೂರಸ್ಥಂ ಅಂತಿಕೇ ಚ= ದೂರವೂ ಇದೆ, ಸಮೀಪವೂ ಇದೆ.

ವಿವರಣೆ:– ಬಹಿರಂತಃ: ವ್ಯಷ್ಟಿವಿಶ್ವದಲ್ಲಿ ಅಂತಃಕರಣವು ಅಂತರಂಗ, ದೇಹ ಇಂದ್ರಿಯ ಪ್ರಾಣಗಳು ಬಹಿರಂಗ. ಸಮಷ್ಟಿವಿಶ್ವದಲ್ಲಿ ಪ್ರಕೃತಿ, ಮಹತ್ತು, ಅಹಂಕಾರ ಹಾಗು ತನ್ಮಾತ್ರೆಗಳು ಅಂತರಂಗ, ಭೂತಗಳು ದೇಹಗಳು ಅಸಂಖ್ಯ ಪದಾರ್ಥಗಳು ಬಹಿರಂಗ. ಪರಮಾತ್ಮನು ಎರಡೂ ವಿಶ್ವಗಳ ಬಹಿರಂತರದಲ್ಲಿ ನೆಲೆಸಿದ್ದಾನೆ. ಜಡವಸ್ತುಗಳ ಅಣು ಅಣುಗಳಲ್ಲಿ ಅವನ ಅಸ್ತಿತ್ವವು ವ್ಯಾಪಿಸಿದೆ

ಮನಸ್ಸಿನ ತೆರೆ ತೆರೆಗಳಲ್ಲಿಯೂ ಅವನ ಜ್ಞಾನಪ್ರಭೆ ಹರಡಿದೆ. ಆದರೆ ಅವನನ್ನು ನೋಡಲು, ಗುರುತಿಸಲು ಗುರುದತ್ತ ದೃಷ್ಟಿಬೇಕು; ದೀರ್ಘಕಾಲದ ಸಾಧನ ಬೇಕು.

(೨) ಚರ.ಅಚರ– ಸ್ವ-ಇಚ್ಛೆಯಿಂದ ಸ್ಥಾನಾಂತರ ಮಾಡಲಾರದ ವಸ್ತುಗಳು ಅಚರ. ಸ್ವ-ಇಚ್ಛೆಯಿಂದ ಚಲಿಸಬಲ್ಲ ವ್ಯಕ್ತಿಗಳು ಜೀವರುಗಳು ಚರ. ಚರ ಅಚರಗಳೆರಡೂ ಪರಮಾತ್ಮನ ರೂಪುಗಳು; ಅವನ ಸಮಬ್ಧಿಯಲ್ಲಿ ಕಾಣಬುವ ತೆರೆಗಳು. ಕಲ್ಲು ಮಣ್ಣು ವೃಕ್ಷ ಮನೆ ಮಠ ಏನೆಲ್ಲವು ಪರಮಾತ್ಮ. ಕಲ್ಲಿನಲಿ ಕಲೆಯ ಅರಳಿಸುವ ಶಿಲ್ಪಿ. ಮಣ್ಣಿನಲಿ ಆಕಾರ ತೀಡುವ ಕಲೆಗಾರ, ವೃಕ್ಷಸ್ಥ ಪಕ್ಷಿಗಳು, ವನಚರ ಪ್ರಾಣಿಗಳು, ಮನುಷ್ಯರು ಚರಿಸುವ ದೇವರ್ಕಳು! ಗುಡ್ಡ ಗವ್ಹರದಲ್ಲಿ ಘೋರ ತಪಮಾಡುವ ತಪಸ್ವಿ, ದಾರಿಯ ಧೂಳಿನಲಿ ಉರುಳಾಡಿ ನಲಿಯುವ ಬಾಲಕ, ಮಹಾ ಪೀಠವೇರಿ ಆಶೀರ್ವದಿಸುವ ಗುರು, ಭಯ ಭಕ್ತಿಯಿಂದ ಫಲ ಪುಷ್ಪಗಳನರ್ಪಿಸುವ ಭಕ್ತ, ಸುಖದ ಸುಪ್ಪತ್ತಿಗೆಯ ಮೇಲೆ ಹೊರಳಾಡುವ ಸಿರಿವಂತ, ದುಃಖದ ಉರಿಯಲ್ಲಿ ಹೊರಳಾಡುವ ಬಡವ, ಪಾಪಿ ಪುಣ್ಯವಂತ ಎಲ್ಲರೂ ದೇವನ ಪ್ರತಿರೂಪ!! ಅಜ್ಞಾನಿಯ ಕಣ್ಣಲ್ಲಿ ನೂರೆಂಟು ಭೇದಗಳಿವೆ. ಆ ದೇವನ ಲೀಲಾವಿಲಾಸವು ಈ ಸಕಲವಿಶ್ವ ಎಂಬ ಅರಿವು ಅವನಿಗೆ ಬರುವದು ಕಷ್ಟ.

(೩) ಅವಿಜ್ಞೇಯ– ಭೂತಗಳಿಗಿಂತ ತನ್ಮಾತ್ರೆ, ತನ್ಮಾತ್ರೆಗಳಿಗಿಂತ ಅಹಂಕಾರ, ಅಹಂಕಾರಕ್ಕಿಂತ ಮಹತ್ತು, ಅದಕ್ಕಿಂತ ಅವ್ಯಕ್ತ ಪ್ರಕೃತಿಯು ಸೂಕ್ಷ್ಮ. ಆ ಪ್ರಕೃತಿಗಿಂತಲೂ ಪರಮಾತ್ಮನು ಪರಮ ಸೂಕ್ಷ್ಮ. ಆದುದರಿಂದ ಪ್ರಾಕೃತಿಕ ವಸ್ತುಗಳನ್ನು ಅರಿಯಬಲ್ಲ ಮನಸ್ಸು ದೇವನನ್ನು ಅರಿಯದು. ಮನಸ್ಸಿನ ಓಟ ಪ್ರಯಾಸಪಟ್ಟರೆ ಅವ್ಯಕ್ತದವರೆಗೆ ಮಾತ್ರ. ಅಲ್ಲಿ ತಲುಪಿದ ನಂತರ ಅದು ಇಲ್ಲದಾಗುತ್ತದೆ. ಆದುದರಿಂದ ದೇವನು ಮನಸ್ಸಿಗೆ ಅವಿಜ್ಞೇಯ ಎನಿಸುತ್ತಾನೆ.

(೪) ದೂರ, ಅಂತಿಕ–ಅವಿದುಷರಿಗೆ ಅಂದರೆ ಜಡಪ್ರಪಂಚದ ವ್ಯಾಮೋಹಿಗಳಿಗೆ ದೇವನು ಬಹುದೂರ. ಅವರು ಕಾಶಿ ರಾಮೇಶ್ವರ ಕೇದಾರ ಕೈಲಾಸಪರ್ವತ ಹೀಗೆ ಭೂಮಂಡಲದ ತುಂಬ ಪ್ರಯಾಣಮಾಡಿದರೂ ಅವನು ಸಿಗಲಾರ. ಅವರು ನಡೆದಷ್ಟೂ ಅವನು ದೂರ ದೂರ ಸರಿಯುತ್ತಾನೆ. ವಿದುಷರಿಗೆ ಅಂದರೆ ನಿರ್ಮೋಹಿ ಮಹಾನುಭಾವರಿಗೆ ದೇವನು, ತನಗೆ ತಾನು ಎಷ್ಟು ಸಮೀಪವೋ ಅಷ್ಟು ಸಮೀಪ. ತಾನು ಎನ್ನುವ ಭಾವ ಅಳಿದಾಗ ಉಳಿವ ನಿಜವೇ ಆ ದೇವ!

ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।
ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥

ದೇವನು ಉಪಾಧಿಯ ಸಂಬಂಧದಿಂದ ಚಲಿಸುತ್ತಾನೆ. ಪೂರ್ಣನಾದುದರಿಂದ ಚಲಿಸುವದಿಲ್ಲ. ಮರೆತ ಮಾನವನಿಗೆ ಬಹು ದೂರ. ಅರಿತವನಿಗೆ ಬಹು ಸನಿಹ.

ಸರ್ವ ನಾಮರೂಪಾತ್ಮಕ ವಸ್ತುಗಳ ಒಳಗೆ ನೆಲೆಸಿದ್ದಾನೆ. ಸರ್ವ ವಿಶ್ವದಾಚೆಗೂ ವ್ಯಾಪಿಸಿದ್ದಾನೆ. (ಈಶಾವಾಸ್ಯ, ಉ. ೫.)

ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್।
ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥೧೬॥

**ಅರ್ಥ:**- ಜ್ಞೇಯವು ಅವಿಭಕ್ತ (ಆದರೂ) ಭೂತಗಳಲ್ಲಿ ವಿಭಕ್ತವಾಗಿರುವಂತೆ ಕಾಣುತ್ತವೆ, ಅದು ಭೂತಭರ್ತೃ ( ಭೂತಪಾಲಕ ) , ಗ್ರಸಿಷ್ಣು ( ಸಂಹಾರಕ ) ಮತ್ತು ಪ್ರಭವಿಷ್ಣು (ಸೃಷ್ಟಾರ ).

**ವಿವರಣೆ:**- (೧) ಅವಿಭಕ್ತ:- ಯಾವುದು ಸರ್ವವ್ಯಾಪಿಯೋ ಅಪರಿಚ್ಛಿನ್ನವೋ ಪರಿಪೂರ್ಣವೋ ಅದನ್ನು ವಿಭಜನ ಮಾಡಬರದು, ಅವಿಭಕ್ತ. ಪರಮಾತ್ಮನು (ಜ್ಞೇಯವು) ಅದ್ವಯ, ಅನಂತ, ಅಖಂಡ! ಕಾಲ ದೇಶ ವಸ್ತು ಪರಿಚ್ಛಿನ್ನತೆ ಇಲ್ಲದವ. ಆದುದರಿಂದ ಅವನು ಅವಿಭಕ್ತ. ಆದರೂ ವಿವಿಧ ಅಂತಃಕರಣಗಳ ಸಂಬಂಧದಿಂದ ವಿಭಕ್ತನಾದಂತೆ ಕಾಣುತ್ತಾನೆ. ಅಸಂಖ್ಯ ಜೀವರಾಗಿ ತೋರುತ್ತಾನೆ. ಪೂರ್ಣವಾದ ಆಕಾಶವು ಘಟಗಳ ಸಂಗದಿಂದ ಅಸಂಖ್ಯ ಘಟಾಕಾಶಗಳಾಗಿ ಭಾಸವಾಗುತ್ತದೆ ನಿಜ; ಆದರೆ ಆ ವಿಭಜನೆ ಕೇವಲ ಕಾಲ್ಪನಿಕ. ಅದರಂತೆ, ಹೃದಯ-ಘಟಗಳ ಸಂಗದಿಂದ ಅಸಂಖ್ಯ ಜೀವಾತ್ಮರಾಗಿ ತೋರಿದರೂ ವಾಸ್ತವಿಕವಾಗಿ ಪರಮಾತ್ಮನು ಅವಿಭಕ್ತ!

(೨) ಭೂತಭರ್ತೃ,ಗ್ರಸಿಷ್ಣು, ಪ್ರಭವಿಷ್ಣು- ಪರಮಾತ್ಮನು ಜಗತ್ತಿನ ಪ್ರಭವ-ಮೂಲ; ಭರ್ತಾ-ಪೋಷಕರ ಹಾಗು ಗ್ರಸಿಷ್ಣು-ಸಂಹಾರಕ. ಅವನ ಮಹಾನ್ ಸಂಕಲ್ಪಗರ್ಭದಿಂದ ಹೊರಹೊಮ್ಮಿದೆ ವಿಶ್ವ; ಜೀವರೆಲ್ಲ ಅವನ ಚೈತನ್ಯದ ಹೊಂಗಿರಣಗಳು! ಬದುಕಿರುವ ಚರಾಚರ ಜೀವಿಗಳಿಗೆ ಅನ್ನ ನೀರು ಗಾಳಿ ಬೆಳಕುಗಳನ್ನಿತ್ತು ಸಂರಕ್ಷಿಸುವ ಜಗತ್ಪಿತನು ಆ ದೇವ. ಒಂದಿಲ್ಲ ಒಂದು ದಿನ ಬಾಳಿರುವದೆಲ್ಲ ಅಳಿಯಲೇಬೇಕು; ಎಲ್ಲಿ? ದೇವನಲ್ಲಿಯೇ ವಿಲೀನವಾಗಬೇಕು! ಅವನ ಬಿಟ್ಟು ಬೇರೆ ತಾವೆಲ್ಲಿದೆ ?

ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥೧೭॥

**ಅರ್ಥ:**- ತತ್= ಅದು ಜ್ಯೋತಿಷಾಮಪಿ ಜ್ಯೋತಿಃ= ಜೋತಿಗಳಿಗೂ ಜ್ಯೋತಿ, ತಮಸಃ ಪರಂ= (ಅದು) ತಮಸ್ಸಿನ ಆಚೆಗಿದೆ. (ಎಂದು) ಉಚ್ಯತೇ= ಹೇಳಲ್ಪಟ್ಟಿದೆ. (ಅದು) ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ=ಜ್ಞಾನ, ಜ್ಞೇಯ, ಜ್ಞಾನಗಮ್ಯ, (ಎಲ್ಲವೂ ಆಗಿದೆ). ಹೃದಿ ಸರ್ವಸ್ಯ ವಿಷ್ಠಿತಂ= ಸರ್ವ ಪ್ರಾಣಿಗಳ ಹೃದಯದಲ್ಲಿ ನೆಲೆಸಿರುತ್ತದೆ.

**ವಿವರಣ:**- ೧)ಜ್ಯೋತಿಷಾಮಪಿ ಜ್ಯೋತಿಃ-ಬಾಹ್ಯ ಜಗತ್ತನ್ನು ಪ್ರಕಾಶಿಸುವ ಸೂರ್ಯ ಚಂದ್ರ ವಿದ್ಯುತ್ತು ಅಗ್ನಿಗಳು ಭೌತಿಕ ಜ್ಯೋತಿಗಳು. ಜಾಗ್ರ-ಸ್ವಪ್ನ-ಸೃಷ್ಟಿಗಳನ್ನು ಅರಿಯುವ ಮನಸ್ಸು ಅಭೌತಿಕ ಜ್ಯೋತಿ. ಮನಸ್ಸು ಶುದ್ಧ

ವಾದರೆ ತನ್ಮಾತ್ರೆ ಅಹಂಕಾರ ಮಹತ್ತು ಅವ್ಯಕ್ತ ಪ್ರಕೃತಿಗಳನ್ನು ಪರಿಗ್ರಹಿಸಬಲ್ಲದು. ಆದರೆ ಭೌತ ಜ್ಯೋತಿಯಾಗಲಿ ಅಭೌತದೀಪವಾಗಲಿ ಸ್ವತಂತ್ರವಲ್ಲ. ಅವೆರಡಕ್ಕೂ ಬೆಳಗ ನೀಡುವ ಮಹಾನ್ ಅಮರ ರವಿಯು ಪರಮಾತ್ಮ! ಅವನು ಸರ್ವ ಜ್ಯೋತಿಗಳ ಜ್ಯೋತಿ.

೨) ತಮಸಃ ಪರಂ–ಪ್ರಕೃತಿಯ ಜಡ ವಿಸ್ತಾರವೆಲ್ಲ ತಮಸ್ಸು, ಪ್ರಾಕೃತಿಕ ತತ್ತ್ವ ಹಾಗು ವಸ್ತುಗಳಿಗೆಲ್ಲ ಹುಟ್ಟು, ಬಾಳು, ಅಳಿವು, ಇದೆ. ಈ ಪ್ರಕೃತಿಯನ್ನು ದಾಟಿ ಪರಮಾತ್ಮನಿದ್ದಾನೆ; ಆದುದರಿಂದ 'ತಮಸಃ ಪರಃ'. ಅವನಿಗೆ ಆದಿ ಅಂತ ಮಧ್ಯಗಳಿಲ್ಲ. ತಮಸ್ಸಿನಲ್ಲಿ ರಮಿಸಿದ ಮನಸ್ಸಿಗೆ ಆತ ಕಾಣುವದೂ ಇಲ್ಲ.

೩) ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಂ–ಅಮಾನಿತ್ವಾದಿ ಗುಣರೂಪ ಜ್ಞಾನ, ಆ ಜ್ಞಾನ ವೇದ್ಯನಾದ ಜ್ಞೇಯ ಹಾಗು ಆ ಜ್ಞಾನ ಸಾಧನೆಯಿಂದ ಸಿದ್ಧಿಸುವ ಜ್ಞಾನಗಮ್ಯ–ಎಲ್ಲವೂ ಆ ದೇವನೇ. ಮತ್ತೊಂದುವಿಧವಾಗಿ ಹೇಳುವದಾದರೆ, ಬುದ್ಧಿ ವಿಶಿಷ್ಟಚೇತನವು ಜ್ಞಾನ, ಬುದ್ಧಿಗೆ ವಿಷಯವಾಗಬಲ್ಲ ಜಗದ್ವಿಶಿಷ್ಟ ಚೇತನವು ಜ್ಞೇಯ, ವಿಮಲ ಬುದ್ಧಿಯ ಮೂಲಕ ಗಮ್ಯವಾದ ನಿರ್ವಿಶಿಷ್ಟ ಚೇತನವುಜ್ಞಾನಗಮ್ಯ–ಈ ಮೂರೂ ದೇವನ ರೂಪು. ಅವನು ಸರ್ವ ವ್ಯಾಪಿಯಾದುದರಿಂದ ಚರಾಚರ ಜೀವಿಗಳ ಹೃದಯದಲ್ಲಿ ವಾಸಿಸಿದ್ದಾನೆ.

ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ।
ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥೧೮॥

**ಅರ್ಥ:**–ಇತಿ = ಹೀಗೆ, ಕ್ಷೇತ್ರಂ ಜ್ಞಾನಂ ತಥಾ ಜ್ಞೇಯಂ =ಕ್ಷೇತ್ರ, ಜ್ಞಾನ ಹಾಗು ಜ್ಞೇಯಗಳು (ಕ್ರಮವಾಗಿ ೫–೬,೭–೧೦,೧೧, ೧೨ ರಿಂದ ೧೭ ಮಂತ್ರಗಳಲ್ಲಿ),ಉಕ್ತಂ =ಹೇಳಲ್ಪಟ್ಟವೆ. ಮದ್ಭಕ್ತಃ= ನನ್ನ ಭಕ್ತನು, ಏತತ್ ಇದನ್ನು, ವಿಜ್ಞಾಯ = ತಿಳಿದುಕೊಂಡು, ಮದ್ಭಾವಾಯ = ನನ್ನಲ್ಲಿ ಸಾಮರಸ್ಯ ಹೊಂದಲು, ಉಪಪದ್ಯತೇ =ಸಮರ್ಥನಾಗುತ್ತಾನೆ.

**ವಿವರಣೆ:**– ಭಗವಂತ:– " ಕ್ಷೇತ್ರ, ಜ್ಞಾನ ಜ್ಞೇಯಗಳ ಕುರಿತು ಸಂಕ್ಷೇಪವಾಗಿ ವಿವರಿಸಿದೆ. ಇವನ್ನು ತಿಳಿದುಕೊಂಡ ನನ್ನ ಭಕ್ತನು ನನ್ನಲ್ಲಿ ಒಂದಾಗುತ್ತಾನೆ."

**ಸಂಬಂಧ:**- ಮೂರನೆಯ ಮಂತ್ರದಲ್ಲಿ ಪ್ರಕೃತಿಗೆ ಸಂಬಂಧಿಸಿದ ದು ಹಾಗೂ ಪುರುಷನಿಗೆ ಸಂಬಂಧಿಸಿದ ಎರಡು ಪ್ರಶ್ನೆಗಳನ್ನು ಸೂಚಿಸಲಾಗಿದೆ. ಇಲ್ಲಿಯವರೆಗೆ ಯತ್ ಯಾದೃಕ್ ಎಂಬೆರಡು ಪದಗಳು ನಿರ್ದೇಶಿಸುವ ಪ್ರಶ್ನೆಗಳಿಗೆ ಉತ್ತರ ನೀಡಲಾಗಿದೆ. ಇನ್ನು ಮುಂದೆ ಯದ್ವಿಕಾರಿ, ಯತ್, ಯತಃ, ಯಃ ಯತ್ಪ್ರಭಾವಃ, ಈ ಐದು ಪ್ರಶ್ನೆಗಳಿಗೆ ಸಮಾಧಾನ ನೀಡಲಾಗುವದು.

ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥೧೯॥

**ಅರ್ಥ:**– ಪ್ರಕೃತಿ ಹಾಗು ಪುರುಷ ಈ ಎರಡನ್ನೂ ಎದಿಗಳೆಂದು ತಿಳಿ. ವಿಕಾರ

ಗಳನ್ನು ಹಾಗು ಗುಣಗಳನ್ನು ಪ್ರಕೃತಿಯಿಂದ ಹುಟ್ಟಿದವುಗಳೆಂದು ತಿಳಿ.

ವಿವರಣೆ:– (೧) ಪ್ರಕೃತಿ–ಇದು ತ್ರಿಗುಣಾತ್ಮಿಕ, ಜಡ, ವಿಕಾರಶೀಲ ಹಾಗು ವಿಶ್ವದ ಉಪಾದಾನ ಕಾರಣ. ಪುರುಷ–ಇವನು ಸ್ವರೂಪತಃ ಅಜಡ, ಅವಿಕಾರ, ನಿರ್ಗುಣ ಹಾಗು ವಿಶ್ವದ ನಿಮಿತ್ಯ ಕಾರಣ. ಅವಿದ್ಯೆಯಿಂದ ಈ ಪುರುಷನೇ ಜೀವಾತ್ಮನೆನಿಸುತ್ತಾನೆ. ಪರಮಾತ್ಮ–ಅನಂತ, ಪರಿಪೂರ್ಣ! ಪ್ರಕೃತಿ ಹಾಗು ಪುರುಷರಿಬ್ಬರಿಗೂ ಪರಮಾಧಾರ! ಅವನು ಅದ್ವಯ, ಅತೀತ ಹಾಗು ಅವಿದ್ಯೆಯಿಂದ ಅಸಂಸ್ಪೃಷ್ಟ.

ಪ್ರಕೃತಿಯು ಕ್ಷೇತ್ರ, ಪುರುಷನು ಕ್ಷೇತ್ರಜ್ಞ. ಪರಮಾತ್ಮನು ಸರ್ವಸಾಕ್ಷಿ. ಪ್ರಕೃತಿಗೆ ಭಿನ್ನವಾಗಿ ಮತ್ತೊಂದು ಉಪಾದಾನ ಕಾರಣವಿಲ್ಲವಾದುದರಿಂದ, ಪುರುಷನಿಗೆ ಭಿನ್ನವಾಗಿ ಮತ್ತೊಂದು ನಿಮಿತ್ಯ ಕಾರಣವಿಲ್ಲವಾದುದರಿಂದ ಅವೆರಡು ಅನಾದಿ. ಪರಮಾತ್ಮನಂತು ಸ್ವರೂಪತಃ ಕಾಲಾತೀತ!

(೨) ಶಬ್ದಾದಿ ವಿಷಯ ಪಂಚಭೂತ, ದಶವಿಧ ಇಂದ್ರಿಯ, ಮನಸ್ಸು, ಅಹಂಕಾರ ಮತ್ತು ಬುದ್ಧಿ ಈ ಇಪ್ಪತ್ತೂರು ತತ್ತ್ವಗಳಿಗೆ ವಿಕಾರ ಎಂದು ನಾಮ. ಸತ್ವ ರಜ ತಮ ಈ ಮೂರಕ್ಕೆ ಗುಣವೆಂದು ನಾಮನಿರ್ದೇಶ. ವಿಕಾರಗಳೂ ಗುಣಗಳೂ ಪ್ರಕೃತಿಯ ಮಡಿಲಿನಿಂದ ಹೊರಬಂದಿವೆಯಾಗಿ ಅವು ಪ್ರಕೃತಿ ಜನ್ಯ.

ಕಾರ್ಯಕರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।
ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥೨೦॥

ಅರ್ಥ:- ಕಾರ್ಯ ಕಾರಣ ಕರ್ತೃತ್ವೇ=ಕಾರ್ಯ ಕಾರಣಗಳ ಉತ್ಪತ್ತಿಗೆ ಪ್ರಕೃತಿಃ ಹೇತುಃ ಉಚ್ಯತೇ= ಪ್ರಕೃತಿಯು ಕಾರಣವು ಎಂದು ಹೇಳಲ್ಪಡುತ್ತದೆ. ಪುರುಷಃ= ಪುರುಷನು ಸುಖದುಃಖಾನಾಂ= ಸುಖ ದುಃಖಗಳ ಭೋಕ್ತೃತ್ವೇ= ಅನುಭವಕ್ಕೆ ಹೇತುಃ= ಕಾರಣವು ಎಂದು ಉಚ್ಯತೇ= ಹೇಳಲ್ಪಡುತ್ತಾನೆ.

ವಿವರಣೆ:– (೧) ಏಕಾದಶ ಇಂದ್ರಿಯುಗಳು ಮತ್ತು ಪಂಚ ವಿಷಯುಗಳು ಕಾರ್ಯ. ಅವುಗಳ ಉತ್ಪತ್ತಿಗೆ ಹೇತುವಾದುದರಿಂದ ಪಂಚತನ್ಮಾತ್ರೆ ಅಹಂಕಾರ ಮತ್ತು ಮಹತ್ತುಗಳು ಕಾರಣ. ಕಾರ್ಯಗಳಿಗೂ ಕಾರಣಗಳಿಗೂ ಮೂಲಜನನಿ ಎಂದರೆ ಪ್ರಕೃತಿ! ಆಕೆ ಆದಿ ಕಾರಣ! ಅಖಂಡ ವಿಶ್ವದ ಉಪಾದಾನ!

(೨) ಇಂದ್ರಿಯುಗಳೂ ಮನಸ್ಸೂ ಜಡ. ವಸ್ತುಪ್ರಕಾಶಕ ಸಾಮರ್ಥ್ಯ ಅವುಗಳಲ್ಲಿಲ್ಲ. ಪರಮ ಪುರುಷ ನಚೈತನ್ಯ ಬೆಳಕು ಮನಸ್ಸಿನಲ್ಲಿ ಮೂಡಿದಾಗ ಜೀವ ಪುರಷನು ಕಾಣಬರುತ್ತಾನೆ. ಇಂದ್ರಿಯುಗಳ ಮೂಲಕ ಮನೋವೃತ್ತಿಯನ್ನು ವಿಷಯುಗಳವರೆಗೆ ಹರಿಸಿ ಆ ವಿಷಯುಗಳ ಜ್ಞಾನ ಮಾಡಿಕೊಳ್ಳುತ್ತಾನೆ; ಅವು ತನಗೆ ಅನಕೂಲವಿದ್ದರೆ ಸುಖದ ಭಾವವನ್ನೂ ಪ್ರತಿಕೂಲವಿದ್ದರೆ ದುಃಖಭಾವನೆಯನ್ನೂ ಹೊಂದುತ್ತಾನೆ. ಇಂತಃ ಸುಖದುಃಖಗಳಿಗೆ ಜೀವ ಪುರುಷನೇ ಕಾರಣ.

ಈ ಸಂಗತಿಯನ್ನು ಸ್ಪಷ್ಟಪಡಿಸುವ ಒಂದು ಸೂಚ್ಯಾರ್ಥದ ಕಥೆ ಇದೆ.

ಆರು ಯಾತ್ರಿಕರ ಒಂದು ಗುಂಪು ಹೊರಟಿತ್ತು. ಅವರಲ್ಲಿ ಒಂದನೆಯುವ ದಾರಿಯು ಮಗ್ಗುಲದ ಮಾವಿನ ಮರವನ್ನು ಕಂಡ. ಎರಡನೆಯುವ ಆ ಗಿಡದವರೆಗೆ ಹೋದ. ಮೂರನೆಯುವ ಕಾಯಿ ಹರಿದ. ನಾಲ್ಕನೆಯುವ ತಿಂದ. ಐದನೆಯುವ ತೋಟದ ಮಾಲಿಕನಿಂದ ಏಟು ತಿಂದ. ಆರನೆಯುವ ನರಳಿದ. ಅರ್ಥ– ಇಂದ್ರಿಯಗಳೊಂದಿಗೆ ಸಾಗಿದ ಜೀವ ಪುರುಷನೇ ಯಾತ್ರಿಕ. ಪ್ರಪಂಚವು ತೋಟ. ನೇತ್ರೇಂದ್ರಿಯವು ವಿಷಯವೆಂಬ ಹಣ್ಣನ್ನು ನೋಡುತ್ತದೆ. ಕಾಲು ವಿಷಯುದವರೆಗೆ ನಡೆಯುತ್ತದೆ. ಕೈ ವಿಷಯವನ್ನು ಎತ್ತಿಕೊಳ್ಳುತ್ತದೆ. ಮುಖ ಅದನ್ನು ತಿನ್ನುತ್ತದೆ (ಉಪಭೋಗಿಸುತ್ತದೆ). ರೋಗ ರುಜಿನಗಳಿಂದ ದೇಹ ಗಾಸಿಗೊಳುತ್ತದೆ. ಕೊನೆಯಲ್ಲಿ ಜೀವನು ನರಳುತ್ತಾನೆ. ಕಾರ್ಯ ಮಾಡಿದ ಇಂದ್ರಿಯಗಳಿಗಾಗಲಿ, ಪೆಟ್ಟು ತಿಂದ ದೇಹಕ್ಕಾಗಲಿ ದುಃಖವಿಲ್ಲ; ಏನೂ ಮಾಡದ ಜೀವ ಮಾತ್ರ ದುಃಖಿಯಾಗುತ್ತಾನೆ. ಏಕೆಂದರೆ ಅವನಲ್ಲಿ ಅವುಗಳ ಬಗ್ಗೆ ಅಭಿಮಾನವಿದೆ; ಕರ್ತೃತ್ವ ಭಾವನೆಯಿದೆ! ಇದು ಸಂಸರ್ಗಾಧ್ಯಾಸ!

ಪುರಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ಗುಣಾನ್ ।
ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥೨೧॥

**ಅರ್ಥ:**– ಪುರುಷಃ= ಪುರುಷನು ಪ್ರಕೃತಿಸ್ಥಃ ಹಿ= ಪ್ರಕೃತಿಯಲ್ಲಿದ್ದುಕೊಂಡೇ ಪ್ರಕೃತಿಜಾನ್= ಪ್ರಕೃತಿಜನ್ಯ ಗುಣಾನ್= ಗುಣಗಳನ್ನು ಭುಂಕ್ತೇ= ಅನುಭವಿಸುತ್ತಾನೆ. ಅಸ್ಯ= ಇವನಿಗೆ ಸದಸದ್ಯೋನಿ ಜನ್ಮಸು= ಒಳ್ಳೆಯ ಹಾಗು ಕೆಟ್ಟ ಯೋನಿಗಳಲ್ಲಿ ಹುಟ್ಟುವದಕ್ಕೆ ಗುಣಸಂಗಃ= ಗುಣಸಂಗವೇ ಕಾರಣಂ=ಕಾರಣ.

**ವಿವರಣೆ:**– (೧) ಜಡ ತತ್ತ್ವಗಳ ಪುಂಜವಾದ ದೇಹವು ಪ್ರಕೃತಿ. ಈ ಪ್ರಕೃತಿಯ ಅಂತರ್ಯದಲ್ಲಿ ಜೀವಪುರುಷನು ವಾಸಮಾಡಿದ್ದಾನೆ; ಅದರೊಂದಿಗೆ ತಾದಾತ್ಮ್ಯಭಾವ ತಾಳಿದ್ದಾನೆ; ದೇಹದ ಗುಣದೋಷಗಳನ್ನೆಲ್ಲ ತನ್ನ ಮೇಲೆ ಆರೋಪಿಸಿಕೊಂಡಿದ್ದಾನೆ. ಹೀಗಾಗಿ, ದೇಹದ ಮೂಲಕ ವೈಷಯಿಕ ಸುಖದುಃಖಗಳನ್ನು ಉಣ್ಣುತ್ತಿದ್ದಾನೆ. ಇದುವೇ ಸಂಸಾರ. ಜೀವನೇ ಸಂಸಾರಿ.

(೨) ಸತ್ತ್ವಾದಿ ಗುಣಗಳಲ್ಲಿ ಹಾಗು ಆ ಗುಣಸೃಷ್ಟವಾದ ಇಂದ್ರಿಯಗಳಲ್ಲಿ ಅಭಿಮಾನ ಹಾಗು ಅನುರಾಗ ತಾಳುವದು ಗುಣಸಂಗ. ಈ ಸಂಗ ಹೊಂದಿದ ಜೀವನು ದೇವ ಹಾಗು ದಾನವ ಯೋನಿಗಳನ್ನು ಪಡೆಯುತ್ತಾನೆ. ಏಕೆಂದರೆ, "ಸ ಯಥಾಕಾಮೋಭವತಿ ತತ್ಕ್ರತುರ್ಭವತಿ॥ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮಕುರುತೇ ತದಭಿಸಂಪದ್ಯತೇ॥" ಆ ಜೀವ ಪುರುಷನು ಯಾವ ರೀತಿ ಬಯಸುತ್ತಾನೆಯೋ ಅದೇ ರೀತಿ ಕರ್ತೃವಾಗುತ್ತಾನೆ. ಅಂಥದೇ ಕರ್ಮ ಮಾಡುತ್ತಾನೆ. ಆ ಕರ್ಮಾನುಸಾರ ಜನ್ಮಗಳನ್ನು ಪಡೆಯುತ್ತಾನೆ. ಇದು ಬಲ್ಲವರ ನುಡಿ.

ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ಪುರುಷಃ ಪರಃ ॥೨೨॥

**ಅರ್ಥ:-** ಅಸ್ಮಿನ್ ದೇಹೇ= ಈ ಶರೀರದಲ್ಲಿ ಪರಃ ಪುರುಷಃ= ಪರಮ ಪುರುಷನು ಉಪದ್ರಷ್ಟಾ= ಸಾಕ್ಷಿಯು, ಅನುಮಂತಾ= ಅನುಮೋದಿಸುವವನು ಭರ್ತಾ= ಭರ್ತೃವು (ಆಧಾರನು), ಭೋಕ್ತಾ= ಭೋಕ್ತೃವು (ಸಂರಕ್ಷಕ), ಚ=ಮತ್ತು ಮಹೇಶ್ವರಃ= ಮಹೇಶ್ವರನು, ಇತಿ= ಎಂದು ಉಕ್ತಃ= ಹೇಳಲ್ಪಟ್ಟಿದ್ದಾನೆ.

**ವಿವರಣೆ:-** ಪ್ರಕೃತಿ ನಿರ್ಮಿತ ದೇಹವು ಜಡ ದೃಶ್ಯ ಪರಿಮಿತ ಮತ್ತು ಪರಿಣಾಮಶೀಲ. ಈ ದೇಹದಲ್ಲಿ ಅರಿವಿನ ವಸ್ತುವಿದೆ; ಅದುವೇ ಜೀವಪುರುಷ. ಅವನು ದೇಹಮಿತನಾಗಿ ಕಂಡರೂ ವಾಸ್ತವಿಕವಾಗಿ ಅಜಡ ಅದೃಶ್ಯ ಅಪರಿಮಿತ ಮತ್ತು ಅಪರಿಣಾಮಶೀಲ. ಅವನನ್ನು ಭಗವಂತನು ಹಲವಾರು ಉಚಿತ ಶಬ್ದಗಳಿಂದ ಕೊಂಡಾಡಿದ್ದಾನೆ.

(೧) ಉಪದ್ರಷ್ಟಾ- ಅತ್ಯಂತ ನಿಕಟವರ್ತಿಯಾಗಿ ನೋಡುವವ. ಆತ್ಮನು ಎಲ್ಲ ವಸ್ತುಗಳ ಅಂತರದಲ್ಲಿ ನೆಲೆಸಿದ್ದಾನೆ. ಅವನು ಅಣುಗಳಲ್ಲಿ ಅಣು, ಮಹತ್ತುಗಳಲ್ಲಿ ಮಹತ್ತು. ಭೌತವಸ್ತುಗಳಿಗೆ ಆಕಾಶವು ಎಷ್ಟು ಸನಿಹವೋ ಆತ್ಮನು ಸಕಲ ತತ್ತ್ವಗಳಿಗೆ ಅಷ್ಟು ಸಮೀಪ. ಹೆಚ್ಚೇನು? ಅವನಲ್ಲಿಯೇ ಅವು ವಾಸಿಸಿವೆ. ಅಷ್ಟೇ ಅಲ್ಲ, ತನ್ನ ಪ್ರಕಾಶ-ಪ್ರಭೆಯನ್ನು ಅವುಗಳ ಒಳಹೊರಗೆ ಪಸರಿಸಿ ನೆಲೆಸಿದ್ದಾನೆ. ಆ ತತ್ತ್ವಗಳು ದೃಶ್ಯ, ಅವನು ಉಪದ್ರಷ್ಟಾರ! ಸಾಕ್ಷಿ!

(೨) ಅನುಮಂತ- ಕೃತ ಕಾರ್ಯಕ್ಕೆ ಮೂವರು ಹೊಣೆಗಾರರು: ಕರ್ತಾ ಕಾರಯಿತಾ ಹಾಗು ಅನುಮೋದಕ. (ಮಾಡುವವ, ಮಾಡಿಸುವವ, ಹಾಗು ಸಮ್ಮತಿಸುವವ). ಕಾರ್ಯದ ಪ್ರತಿಫಲ ಎಂಥದಿದ್ದರೂ ಸರಿ ಈ ಮೂವರು ಅನುಭವಿಸಬೇಕಾಗುತ್ತದೆ. ಸರ್ವ ವ್ಯಾಪಕನಾದ ಪರಮ ಪುರುಷನು ಮಾತ್ರ ಸರ್ವಾಧಾರನಾಗಿದ್ದರೂ ಕರ್ತನಲ್ಲ, ಕಾರಯಿತನಲ್ಲ, ಅನುಮೋದಕನಲ್ಲ! ಅವನು ಬರೀ ಸಾಕ್ಷಿ! ಕೇವಲ ಸನ್ನಿಧಾನ-ಅನುಗ್ರಾಹಕ, ಅನುಮಂತ!

(೩) ಭರ್ತಾ, ಭೋಕ್ತಾ- ಧಾರಣೆ ಪೋಷಣೆ ಮಾಡುವವ ಭರ್ತೃ ಹಾಗು ಭೋಕ್ತೃ. ಪರಮ ಪುರುಷನು ಸಕಲ ತತ್ತ್ವಗಳ ನಿತ್ಯಾಶ್ರಯನಾದುದರಿಂದ ಭರ್ತಾ; ಸರ್ವ ಚರಾಚರ ಜೀವ ಜಂತುಗಳ ಲೋಕಾದಿ ಲೋಕಂಗಳ ಸಂರಕ್ಷಕನಾದುದರಿಂದ ಭೋಕ್ತಾ.

(೪) ಮಹೇಶ್ವರಃ, ಪರಮಾತ್ಮಾ- ಪುರುಷನೇ ವಿಶ್ವದ ಒಡೆಯ, ಸಾರ್ವಭೌಮ ಈಶ. ವ್ಯಷ್ಟಿ ಸಮಷ್ಟಿ ವಿಶ್ವಗಳೆರಡೂ ಅವನ ಆಧಿಪತ್ಯದಲ್ಲಿ ಬಾಳುತ್ತಿವೆ; ಆದ್ದರಿಂದ ಆತ ಮಹೇಶ್ವರ. ಪ್ರಾಕೃತಿಕ ವಿಸ್ತಾರವಾದ ಜಗತ್ತಿನ ಅಂತರ್ಯಾಮಿ ಅವನಾದುದರಿಂದ ಪರಮಾತ್ಮ!

ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।
ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥೨೩॥

**ಅರ್ಥ:-** ಯಃ= ಯಾವನು ಏವಂ= ಹೀಗೆ ಪುರುಷಂ= ಪುರುಷನನ್ನೂ ಗುಣೈಃ

ಸಹ=ಗುಣಗಳೊಂದಿಗೆ ಪ್ರಕೃತಿಂ ಚ= ಪ್ರಕೃತಿಯನ್ನು ವೇತ್ತಿ= ಅರಿತುಕೊಳ್ಳುತ್ತಾನೆಯೊ ಸಃ =ಅವನು ಸರ್ವಥಾ ವರ್ತಮಾನಃ ಅಪಿ= ಹೇಗೆ ಇದ್ದರೂ ಭೂಯಃ= ಪುನಃ ನ ಅಭಿಜಾಯತೇ= ಹುಟ್ಟುವದಿಲ್ಲ.

ವಿವರಣೆ:- ಭಗವಂತ:– "ಅರ್ಜುನ, ದೇಹ ಇಂದ್ರಿಯ ಮನ ಬುದ್ಧಿಗಳು ಪುರುಷನಿಗೆ ಸಂಬಂಧಿಸಿಲ್ಲ. ಅವು ಪ್ರಕೃತಿಯ ಸತ್ವಾದಿ ಗುಣಗಳಿಂದ ರೂಪುಗೊಂಡಿವೆ. ಪುರುಷನು ಮಾತ್ರ ಪ್ರಕೃತಿಯಾಚೆಗೆ ನಿಶ್ಚಲವಾಗಿ ನಿಂತ ಚೈತನ್ಯ ವಸ್ತು. ಹೀಗೆ ಅರಿತು ದೇಹಾದಿಗಳನ್ನೂ, ಅವುಗಳಿಂದ ಉಂಟಾಗುವ ಸುಖ ದುಃಖಾದಿಗಳನ್ನು ಆ ಪ್ರಕೃತಿಗೆ ಅರ್ಪಿಸಿ ತಾನು ಪರಮಾತ್ಮಸ್ಥಾನದಲ್ಲಿ ನಿಲ್ಲುವ ಮನುಷ್ಯನು ಬಹುಜಾಣ. ಅವನು ಪುಣ್ಯಾತ್ಮ, ವಿಮುಕ್ತ. ಅಮಾನಿತ್ವಾದಿ ದೈವೀ ಗುಣಸಂಪನ್ನನಾದ ಅವನು .ಎಂದಿಗೂ ಅನೀತಿ–ಅನ್ಯಾಯ ಕಾರ್ಯಗಳಲ್ಲಿ ತೊಡಗಲಾರ. ಸದ್ಗುಣಗಳು ಅವನ ಉಸಿರು. ಮನೆ ಮಡದಿ ಮುಂತಾದ ಆಕುಂಚಿತಭಾವಶೂನ್ಯನಾದ ಅವನು ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಸನ್ಯಾಸಿಯಾಗಿಯೇ ಇರಲಿ ಮಾನವಸೇವೆಯಲ್ಲಿಯೇ ಜೀವನ ವ್ಯಯಿಸುತ್ತಾನೆ. ಆದುದರಿಂದ ಜನ್ಮ ಮರಣ ರೂಪ ಬಂಧನ ಅವನಿಗಿಲ್ಲ. ಅಮೃತ ಸಿದ್ಧಿಯು ಅವನಿಗೆ ಕೈವಶವಾಗಿದೆ.

ಸರ್ವಥಾ ವರ್ತಮಾನಃ ಅಪಿ– ಈ ಪದಪ್ರಯೋಗವು ಸ್ವೇಚ್ಛಾಚಾರಕ್ಕೆ ಪುಷ್ಟಿಕೊಡುವದಿಲ್ಲ. ಯಾವದೇ ಆಶ್ರಮದಲ್ಲಿದ್ದರೂ ಸರಿಯೇ ಎಂಬುದು ಅದರ ಸಮಂಜಸಾರ್ಥ.

ಸಂಬಂಧ:– ಅಮೃತ ಸಿದ್ಧಿಯ ಚತುಸ್ಸಾಧನೆಗಳನ್ನು ಮುಂದಿನ ಎರಡು ಮಂತ್ರಗಳಲ್ಲಿ ಉಪದೇಶಿಸಲಾಗಿದೆ.

ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನಚಾಪರೇ ॥೨೪॥

ಅರ್ಥ:– ಕೇಚಿತ್=ಕೆಲವರು, ಧ್ಯಾನೇನ= (ಆತ್ಮಾಕಾರ ಪ್ರತ್ಯಯರೂಪ) ಧ್ಯಾನದಿಂದ ಆತ್ಮನಿ=ದೇಹದಲ್ಲಿ ಅಥವಾ ಅಂತರಂಗದಲ್ಲಿ, ಆತ್ಮನಾ= ಮನಸ್ಸಿನ ಮೂಲಕ ಆತ್ಮಾನಂ= ಪರಮ ಆತ್ಮನನ್ನು ಪಶ್ಯಂತಿ= ನೋಡುತ್ತಾರೆ. ಅನ್ಯೇ= ಇನ್ನು ಕೆಲವರು, ಸಾಂಖ್ಯೇನ= (ಪ್ರಕೃತಿ ಪುರುಷರು ಪರಸ್ಪರ ವಿಲಕ್ಷಣ ಎಂಬ ಆಲೋಚನಾರೂಪ)ಜ್ಞಾನಯೋಗದಿಂದ ಚ= ಮತ್ತು ಅಪರೇ= ಇನ್ನು ಕೆಲವರು ಯೋಗೇನ= ಅಷ್ಟಾಂಗಯೋಗದಿಂದ, ಕರ್ಮಯೋಗೇನ= (ಕೆಲವರು) ಕರ್ಮಯೋಗದಿಂದ(ನಿಷ್ಕಾಮಕರ್ಮಾನುಷ್ಠಾನದಿಂದ) ದೇವನನ್ನು ನೋಡುತ್ತಾರೆ.

ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥೨೫॥

ಅರ್ಥ:_ಅನ್ಯೇ ತು=ಮತ್ತೆ ಕೆಲವರು, ಏವಂ ಅಜಾನಂತಃ= ಹೀಗೆ ಮಾಡಲರಿಯದವರು ಅನ್ಯೇಭ್ಯಃ = ಇತರರಿಂದ (ಆಚಾರ್ಯರಿಂದ) ಶ್ರುತ್ವಾ= ಕೇಳಿ ಉಪಾಸತೇ= ಉಪಾಸನೆ ಮಾಡುತ್ತಾರೆ. ತೇಽಪಿ ಶ್ರುತಿಪರಾಯಣಾಃ= ಅವರೂ ಶ್ರುತಿಯಲ್ಲಿ ನಿಷ್ಠೆಯುಳ್ಳವರು ಮೃತ್ಯುಂ

—ಮೃತ್ಯುವನ್ನು ಅತಿತರಂತಿ ಏವ= ದಾಟಿಯೇ ದಾಟುತ್ತಾರೆ. ॥೨೫॥

**ವಿವರಣೆ:**— ಸಂಸಾರ ಸಾಗರದಲ್ಲಿ ತೊಳಲಾಡುವ ಜೀವಾತ್ಮನು ಮುಕ್ತನಾಗಲು ಐದು ಯೋಗಗಳಿವೆ. (೧) ಧ್ಯಾನಯೋಗ (೨) ಸಾಂಖ್ಯಯೋಗ (೩) ಅಷ್ಟಾಂಗ ಯೋಗ (೪) ಕರ್ಮಯೋಗ (೫) ಶ್ರವಣ ಯೋಗ.

೧) **ಧ್ಯಾನಯೋಗ**— ಸರೂಪ ಶಿಖೆಗಳ ಅವ್ಯಾಹತ ಪ್ರವಾಹವು ದೀಪ. ಅದರಂತೆ, ಆತ್ಮರೂಪ ವೃತ್ತಿಗಳ ಅವಿಚ್ಛಿನ್ನ ಪ್ರವಾಹವು ಧ್ಯಾನ. ಧ್ಯಾನದ ಪರಿಪೂರ್ಣ ಸ್ಥಿತಿಗೆ ಸಮಾಧಿ ಎನ್ನುತ್ತಾರೆ. ಇಲ್ಲಿ ವೃತ್ತಿಗಳ ಪ್ರವಾಹ ನಿಂತಿದೆ. ಮನಸ್ಸು ದಿವ್ಯ ಆತ್ಮನಲ್ಲಿ ಸಾಮರಸ್ಯ ಹೊಂದಿದೆ; ಅಂದರೆ ಅದರ ತುಂಬ ಆತ್ಮ ಪ್ರಭೆ ಅಭಿವ್ಯಕ್ತವಾಗಿದೆ. ಈ ಪರಿಸ್ಥಿತಿಯಲ್ಲಿ ಉಂಟಾಗುವ ಆನಂದಾನುಭವ ಅವರ್ಣನೀಯ!

೨) **ಸಾಂಖ್ಯಯೋಗ**— ಪ್ರಕೃತಿಯಿಂದ ನಿರ್ಮಾಣವಾದ ದೇಹ, ಪ್ರಾಣ, ಇಂದ್ರಿಯ, ಮನ, ಬುದ್ಧಿಗಳೆಲ್ಲ ಜಡ, ಅಶಾಶ್ವತ. ಅವುಗಳಿಗೆ ವಿಲಕ್ಷಣನಾದ ಜ್ಞಾನರೂಪ ಆತ್ಮನು ಅಜಡ, ಶಾಶ್ವತ! ಆ ಆತ್ಮನೇ ನಾನು, ಜಡವಸ್ತುಗಳು ನಾನಲ್ಲ. ನಿರ್ಲಿಪ್ತ ದೇವನಾದ ನನಗೆ ಜಡ ವಸ್ತುಗಳ ವಿಕಾರವಿಲ್ಲ. ನಾನು ಅಮೃತ, ಪರಿಪೂರ್ಣ! ಸುಖ ದುಃಖಾದಿ ಭಾವನೆಗಳ ಸಂಬಂಧವಿಲ್ಲದ ನಿರಾಲಂಬ ತತ್ತ್ವ! ಹೀಗೆ ತಿಳಿಯುವದು ಜ್ಞಾನ, ಇದನ್ನು ಗಳಿಸಿದಾಗ ಮುಕ್ತಿ, ಸಾಂಖ್ಯಸಿದ್ಧಿ!

೩) **ಅಷ್ಟಾಂಗಯೋಗ**— ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಹಾಗು ಸಮಾಧಿ— ಇವು ಅಷ್ಟ ಅಂಗಗಳು. ಯಮ-ನಿಯಮದಿಂದ ಆಚಾರಶುದ್ಧಿ. ಆಸನದಿಂದ ದೇಹಸಂಯಮನ. ಪ್ರಾಣಾಯಾಮದಿಂದ ಇಂದ್ರಿಯ ಹಾಗು ಪ್ರಾಣಶುದ್ಧಿ. ಪ್ರತ್ಯಾಹಾರದಿಂದ ಮನಸ್ಸಂಯಮನ. ಧಾರಣದಿಂದ ಚಿತ್ತನಿರೋಧದ ಅಭ್ಯಾಸ. ಧ್ಯಾನದಿಂದ ಧ್ಯೇಯಾಕಾರ ಚಿತ್ತವೃತ್ತಿಗಳ ಅವಿಚ್ಛಿನ್ನ ಪ್ರವಾಹ: ಕೊನೆಗೆ ಸಮಾಧಿಸಿದ್ಧಿ, ಚಿತ್ತವೃತ್ತಿಗಳ ಸಂಪೂರ್ಣ ನಿರೋಧ! ಅಲ್ಲಿ ಜೀವಾತ್ಮ ಪರಮಾತ್ಮರ ವಿಲಯ; ಅಮೃತಯೋಗ!

೪) **ಕರ್ಮಯೋಗ**— ದೇಹ ವಾಣಿ ಮತ್ತು ಮನಸ್ಸಿನಿಂದ ಫಲಾಪೇಕ್ಷೆ ಇಲ್ಲದೆ ದೇವ ಪ್ರೀತ್ಯರ್ಥವಾಗಿ ಕರ್ಮ ಮಾಡುವದು ಕರ್ಮಯೋಗ. ಇದರಿಂದ ವಿಷಯವಾಸನಾ ಹಾನಿ, ಸರ್ವತತ್ತ್ವಶುದ್ಧಿ, ಆತ್ಮವಿದ್ಯಾಪ್ರಾಪ್ತಿ. ಅದರಿಂದ ಧ್ಯಾನವೃತ್ತಿಯು ಅಳವಡುತ್ತದೆ. ಅದರ ಅಂತಿಮ ಫಲವೇ ದೇವ ಸಾಕ್ಷಾತ್ಕಾರ.

೫) **ಶ್ರವಣಯೋಗ**—ಸದ್ಗುರುವಿನ ದಿವ್ಯ ಉಪದೇಶವನ್ನು ಪರಮಶ್ರದ್ಧೆಯಿಂದ ಆಲಿಸುವದು ಶ್ರವಣ. ಅದು ಸಾಧಕನನ್ನು ಸತ್ಪಥದಲ್ಲಿ (ವೇದ ನಿರ್ದಿಷ್ಟ ಪಥದಲ್ಲಿ) ನಡೆಸುತ್ತದೆ. ಮುಕ್ತಿಮಂದಿರದ ದರ್ಶನಮಾಡಿಸುತ್ತದೆ.

ಐದು ಬಗೆಯ ಯೋಗಗಳ ಸಾಧನಾಕ್ರಮ ಭಿನ್ನವಾಗಿದ್ದರೂ ಅವುಗಳ ಗುರಿ ಒಂದೇ—ದೇವದರ್ಶನ ಹಾಗು ದೇವನೊಂದಿಗೆ ಸಮರತಿ. ಅವುಗಳ ಮೂಲ

=ಮೃತ್ಯುವನ್ನು ಅತಿತರಂತಿ ಏವ= ದಾಟಿಯೇ ದಾಟುತ್ತಾರೆ. ॥೨೫॥

ವಿವರಣೆ:– ಸಂಸಾರ ಸಾಗರದಲ್ಲಿ ತೊಳಲಾಡುವ ಜೀವಾತ್ಮನು ಮುಕ್ತನಾಗಲು ಐದು ಯೋಗಗಳಿವೆ. (೧) ಧ್ಯಾನಯೋಗ (೨) ಸಾಂಖ್ಯಯೋಗ (೩) ಅಷ್ಟಾಂಗ ಯೋಗ (೪) ಕರ್ಮಯೋಗ (೫) ಶ್ರವಣ ಯೋಗ.

೧) ಧ್ಯಾನಯೋಗ– ಸರೂಪ ಶಿಖೆಗಳ ಅವ್ಯಾಹತ ಪ್ರವಾಹವು ದೀಪ. ಅದರಂತೆ, ಆತ್ಮರೂಪ ವೃತ್ತಿಗಳ ಅವಿಚ್ಛಿನ್ನ ಪ್ರವಾಹವು ಧ್ಯಾನ. ಧ್ಯಾನದ ಪರಿಪೂರ್ಣ ಸ್ಥಿತಿಗೆ ಸಮಾಧಿ ಎನ್ನುತ್ತಾರೆ. ಇಲ್ಲಿ ವೃತ್ತಿಗಳ ಪ್ರವಾಹ ನಿಂತಿದೆ. ಮನಸ್ಸು ದಿವ್ಯ ಆತ್ಮನಲ್ಲಿ ಸಾಮರಸ್ಯ ಹೊಂದಿದೆ; ಅಂದರೆ ಅದರ ತುಂಬ ಆತ್ಮ ಪ್ರಭೆ ಅಭಿವ್ಯಕ್ತವಾಗಿದೆ. ಈ ಪರಿಸ್ಥಿತಿಯಲ್ಲಿ ಉಂಟಾಗುವ ಆನಂದಾನುಭವ ಅವರ್ಣನೀಯ!

೨)ಸಾಂಖ್ಯಯೋಗ– ಪ್ರಕೃತಿಯಿಂದ ನಿರ್ಮಾಣವಾದ ದೇಹ, ಪ್ರಾಣ, ಇಂದ್ರಿಯ, ಮನ, ಬುದ್ಧಿಗಳೆಲ್ಲ ಜಡ, ಅಶಾಶ್ವತ. ಅವುಗಳಿಗೆ ವಿಲಕ್ಷಣನಾದ ಜ್ಞಾನರೂಪ ಆತ್ಮನು ಅಜಡ, ಶಾಶ್ವತ! ಆ ಆತ್ಮನೇ ನಾನು, ಜಡವಸ್ತುಗಳು ನಾನಲ್ಲ. ನಿರ್ಲಿಪ್ತ ದೇವನಾದ ನನಗೆ ಜಡ ವಸ್ತುಗಳ ವಿಕಾರವಿಲ್ಲ. ನಾನು ಅಮೃತ, ಪರಿಪೂರ್ಣ! ಸುಖ ದುಃಖಾದಿ ಭಾವನೆಗಳ ಸಂಬಂಧವಿಲ್ಲದ ನಿರಾಲಂಬ ತತ್ತ್ವ! ಹೀಗೆ ತಿಳಿಯುವದು ಜ್ಞಾನ, ಇದನ್ನು ಗಳಿಸಿದಾಗ ಮುಕ್ತಿ, ಸಾಂಖ್ಯಸಿದ್ಧಿ!

೩) ಅಷ್ಟಾಂಗಯೋಗ– ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಹಾಗು ಸಮಾಧಿ– ಇವು ಅಷ್ಟ ಅಂಗಗಳು. ಯಮ-ನಿಯಮದಿಂದ ಆಚಾರಶುದ್ಧಿ. ಆಸನದಿಂದ ದೇಹಸಂಯಮನ. ಪ್ರಾಣಾಯಾಮದಿಂದ ಇಂದ್ರಿಯ ಹಾಗು ಪ್ರಾಣಶುದ್ಧಿ. ಪ್ರತ್ಯಾಹಾರದಿಂದ ಮನಸ್ಸಂಯಮನ. ಧಾರಣದಿಂದ ಚಿತ್ತನಿರೋಧದ ಅಭ್ಯಾಸ. ಧ್ಯಾನದಿಂದ ಧ್ಯೇಯಾಕಾರ ಚಿತ್ತವೃತ್ತಿಗಳ ಅವಿಚ್ಛಿನ್ನ ಪ್ರವಾಹ: ಕೊನೆಗೆ ಸಮಾಧಿಸಿದ್ಧಿ, ಚಿತ್ತವೃತ್ತಿಗಳ ಸಂಪೂರ್ಣ ನಿರೋಧ! ಅಲ್ಲಿ ಜೀವಾತ್ಮ ಪರಮಾತ್ಮರ ವಿಲಯ; ಅಮೃತಯೋಗ!

೪) ಕರ್ಮಯೋಗ– ದೇಹ ವಾಣಿ ಮತ್ತು ಮನಸ್ಸಿನಿಂದ ಫಲಾಪೇಕ್ಷೆ ಇಲ್ಲದೆ ದೇವ ಪ್ರೀತ್ಯರ್ಥವಾಗಿ ಕರ್ಮ ಮಾಡುವದು ಕರ್ಮಯೋಗ. ಇದರಿಂದ ವಿಷಯವಾಸನಾ ಹಾನಿ, ಸರ್ವತತ್ತ್ವಶುದ್ಧಿ, ಆತ್ಮವಿದ್ಯಾಪ್ರಾಪ್ತಿ. ಅದರಿಂದ ಧ್ಯಾನವೃತ್ತಿಯು ಅಳವಡುತ್ತದೆ. ಅದರ ಅಂತಿಮ ಫಲವೇ ದೇವ ಸಾಕ್ಷಾತ್ಕಾರ.

೫)ಶ್ರವಣಯೋಗ–ಸದ್ಗುರುವಿನ ದಿವ್ಯ ಉಪದೇಶವನ್ನು ಪರಮಶ್ರದ್ಧೆಯಿಂದ ಆಲಿಸುವದು ಶ್ರವಣ. ಅದು ಸಾಧಕನನ್ನು ಸತ್ಪಥದಲ್ಲಿ (ವೇದ ನಿರ್ದಿಷ್ಟ ಪಥದಲ್ಲಿ) ನಡೆಸುತ್ತದೆ. ಮುಕ್ತಿಮಂದಿರದ ದರ್ಶನಮಾಡಿಸುತ್ತದೆ.

ಐದು ಬಗೆಯ ಯೋಗಗಳ ಸಾಧನಾಕ್ರಮ ಭಿನ್ನವಾಗಿದ್ದರೂ ಅವುಗಳ ಗುರಿ ಒಂದೇ–ದೇವದರ್ಶನ ಹಾಗು ದೇವನೊಂದಿಗೆ ಸಮರತಿ. ಅವುಗಳ ಮೂಲ

ಆಧಾರವೂ ಒಂದೇ-ಶ್ರದ್ಧೆ; ಅಚಲ ನಿಷ್ಠೆ. ಶ್ರದ್ಧಾರಹಿತ ಸಾಧನೆಯು ಬರಡು. ವೇದ ವೇದಾಂಗಗಳಲ್ಲಿ ಪರಿಣತೆ ಪಡೆದಿರಬಹುದು, ಧರ್ಮ ನೀತಿ ತತ್ತ್ವಗಳನ್ನು ಸುಲಿದ ಬಾಳೆಯಷ್ಟು ಸಲೀಸಾಗಿ ವಿವೇಚಿಸಬಹುದು. ತಾನು ಬೋಧಿಸುವ ಮಾತಿನಲ್ಲಿ ತನಗೇ ವಿಶ್ವಾಸವಿರದಿದ್ದರೆ, ಆ ಮಾತು ಶಬ್ದಜಾಲ. ಮಹಾಭಾರತದ ಒಂದು ಕಥೆಯಲ್ಲಿ ಇಂಥ ಬೋಧಕರನ್ನು ಮಂತ್ರರೇಖಿತ ದೇಹವುಳ್ಳ ಹೆಣ ತಿನ್ನುವ ಪಕ್ಷಿಗೆ ಹೋಲಿಸಿದ್ದಾರೆ. ಅರ್ಥವತ್ತಾದ ಆ ಕಥೆಯ ಸಾರಾಂಶ ಹೀಗಿದೆ:

ಭಗವಂತನ ಆದೇಶದಂತೆ ಬೇರೆ ಬೇರೆ ದಿಕ್ಕಿನಲ್ಲಿ ವಿಹಾರಮಾಡುತ್ತಿದ್ದ ಪಾಂಡವರು ಐದು ಅದ್ಭುತ ದೃಶ್ಯಗಳನ್ನು ನೋಡುತ್ತಾರೆ. ಅವು ೧)ಆನೆ. ಮುಂದೆ ಹಿಂದೆ ಎರಡೂ ಕಡೆ ಸೊಂಡಿಲು. ಎರಡರಿಂದಲೂ ಹುಲ್ಲು ತಿನ್ನುತ್ತಿದೆ. ಇದನ್ನು ನೋಡಿದವ ಧರ್ಮ. ೨) ಪಕ್ಷಿ. ಮೈತುಂಬ ವೇದಮಂತ್ರಗಳಿವೆ. ಮಾಂಸ ಹರಿದು ತಿನ್ನುತ್ತಿದೆ. ಇದನ್ನು ನೋಡಿದವ ಭೀಮ. ೩) ಬಾವಿ. ಒಂದರ ಪಕ್ಕದಲ್ಲೊಂದು ಸಾಲಾಗಿ ಇರುವ ಮೂರು ಬಾವಿಗಳಲ್ಲಿ ನಡುವಿನದು ಒಣಗಿದೆ. ಉಳಿದೆರಡರಲ್ಲಿ ಸಾಕಷ್ಟು ನೀರಿದೆ. ಅಲ್ಲದೆ ಒಂದನೆಯ ಬಾವಿಯ ನೀರು ಪುಟಿದು ಮೂರನೆಯದರಲ್ಲಿ ಮೂರನೆಯ ಬಾವಿಯ ನೀರು ಪುಟಿದು ಮೊದಲನೆಯದರಲ್ಲಿ ಬೀಳುತ್ತಿದೆ. ನಡುವಿನ ಬಾವಿಗೆ ತಪ್ಪಿಕೂಡ ಒಂದು ಹನಿ ನೀರು ಬೀಳುತ್ತಿಲ್ಲ. ಇದನ್ನು ಕಂಡವ ಅರ್ಜುನ. ೪) ಆಕಳು. ಕರುವಿನ ಹಾಲು ಕುಡಿಯುತ್ತಿದೆ. ನಕುಲ ನೋಡಿದ. ೫) ಬಂಡೆಗಲ್ಲು. ಗುಡ್ಡದ ತುದಿಯಿಂದ ಉರುಳಿದ ಅದು ರಭಸದಿಂದ ಕೆಳನುಗ್ಗಿತು. ಹುಲ್ಲುಕಡ್ಡಿಗೆ ತಾಕಿ ನಿಂತಿತು. ಸಹದೇವನು ಕಂಡ ಚಮತ್ಕಾರವಿದು.

ಈ ದೃಶ್ಯಗಳ ಸಾಂಕೇತಿಕ ಅರ್ಥಗಳು: (೧)ಮಾರುವವರಿಂದಲೂ ಕೊಳ್ಳುವವರಿಂದಲೂ ಹಣ ಹಿರಿಯುವ ದಲಾಲ, ವಾದಿ ಪ್ರತಿವಾದಿ ಇಬ್ಬರಿಂದಲೂ ಧನ ದೋಚುವ ವಕೀಲ, ಸರಕಾರ ಹಾಗು ಪ್ರಜೆಗಳಿಬ್ಬರಿಂದಲೂ ದುಡ್ಡು ಸುಲಿಯುವ ಅಧಿಕಾರಿ, ಪಿತ್ರಾರ್ಜಿತ ಹಾಗು ಸ್ತ್ರೀಆಸ್ತಿ ಎರಡಕ್ಕೂ ಕೈಯೊಡ್ಡುವ ಅಳಿಯ ಮುಂತಾದವರೆಲ್ಲರ ಸಂಕೇತವು ಆನೆ. (೨) ದೇಹದ ಮೇಲೆ ಧರ್ಮದ ಚಿಹ್ನ, ನಾಲಿಗೆಯಲ್ಲಿ ವೇದಮಂತ್ರ, ಮನಸ್ಸು ಮಾತ್ರ ವಿಷಯಗಳ ನೆನಹಿನಲ್ಲಿ- ಇಂಥ ಪಂಡಿತರ ಸಂಕೇತ ಪಕ್ಷಿ. (೩) ಅರೆಹೊಟ್ಟೆಯ ಸಮೀಪದವರನ್ನು ಉಪೇಕ್ಷಿಸಿ ಹೊಟ್ಟೆ ತುಂಬಿದ ದೂರಿನವರಿಗೆ ಸಹಾಯ ಮಾಡುವ ಧನಿಕರ ಸಂಕೇತವು ಬಾವಿ. (೪) ವಿದ್ಯಾರ್ಥಿಗಳಿಂದ ರೊಕ್ಕ ಹಿರಿಯುವ ಅಧ್ಯಾಪಕರ, ಭಕ್ತರಿಂದ ದಕ್ಷಿಣೆ ಪಡೆಯುವ ಗುರುಗಳ, ಬಡವರಿಂದ ವಂತಿಗೆ ಕೂಡಿಸುವ ಸಿರಿವಂತ ಸುಧಾರಕರ ಸಂಕೇತವು ಆಕಳ. (೫) ಎಲ್ಲರನ್ನು ನಾಶಮಾಡುವ ಕಾಲವು ಸದ್ಧರ್ಮವನ್ನು ನಾಶಮಾಡದು. ಇದರ ಸಂಕೇತ ಹುಲ್ಲುಕಡ್ಡಿ.

ಸಂಬಂಧ:– ಐದು ಯೋಗಗಳಲ್ಲಿ ಒಂದಾದ ಸಾಂಖ್ಯಯೋಗವನ್ನೇ ಈ ಅಧ್ಯಾಯದಲ್ಲಿ ... ವಿಸ್ತರಿಸಲಾಗಿದೆ.

ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಮ್ ।
ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥೨೬॥

ಅರ್ಥ:– ಸ್ಥಾವರ ಜಂಗಮಮ್= ಸ್ಥಾವರ ಜಂಗಮ ರೂಪವಾದ ಯಾವತ್ ಕಿಂಚಿತ್ ಯಾವದೊಂದು ವಸ್ತುವು ಸಂಜಾಯತೇ= ಉತ್ಪನ್ನವಾಗುವದೋ ತತ್= ಅದು ಕ್ಷೇತ್ರ ಕ್ಷೇತ್ರಜ್ಞ ಸಂಯೋಗಾತ್= ಕ್ಷೇತ್ರ ಕ್ಷೇತ್ರಜ್ಞರ ಸಂಯೋಗದಿಂದ (ಉತ್ಪನ್ನವಾಗಿದೆ) ಎಂದು ವಿದ್ಧಿ= ತಿಳಿ.

ವಿವರಣೆ:– (೧) ಕಲ್ಲು ಮಣ್ಣು ಗುಡ್ಡ ನದಿ ಸಾಗರ ಮುಂತಾದವು ಸ್ಥಾವರ. ಪಶು ಪಕ್ಷಿ ಕ್ರಿಮಿ ಕೀಟ ಮನುಷ್ಯ ಮುಂತಾದವು ಜಂಗಮ. ಸ್ಥಾವರ ಜಂಗಮಾತ್ಮಕ ಜಗತ್ತು ಅನಾದಿಯಲ್ಲ, ಸಾದಿ, ಸೃಷ್ಟ. ಅದರ ಸೃಷ್ಟಿಗೆ ಕಾರಣ ವೇನು? ಪ್ರಕೃತಿ (ಕ್ಷೇತ್ರ) ಹಾಗು ಪುರುಷ (ಕ್ಷೇತ್ರಜ್ಞ)ರ ಸಂಬಂಧ! ದೇಹ ಜೀವರ ಬೆಸುಗೆ!

(೨) ಸಂಬಂಧ ಒಂದೇ ಒಗೆಯಲ್ಲ, ಮೂರು ಬಗೆಯಾಗಿದೆ. ಸಂಯೋಗ, ಸಮವಾಯ, ತಾದಾತ್ಮ್ಯ ಎಂದು. ಎರಡು ಸಾವಯವ ಪದಾರ್ಥಗಳ ಮಧ್ಯದ ಸಂಬಂಧವು ಸಂಯೋಗ. ಉದಾ:– ಹಗ್ಗ ಕೊಡ, ನೀರು ತಂಬಿಗೆ ಇತ್ಯಾದಿ. ಕಾರ್ಯ ಕಾರಣಗಳ, ಗುಣ ಗುಣಿಗಳ, ಕ್ರಿಯಾ ಕ್ರಿಯಾವತಗಳ, ಜಾತಿ ವ್ಯಕ್ತಿಗಳ ಮಧ್ಯದಲ್ಲಿರುವ ಬಹು ಸೂಕ್ಷ್ಮಸಂಬಂಧವು ಸಮವಾಯ. ಉದಾ: ಪಟ ತಂತು (ಕಾರ್ಯ ಕಾರಣ), ರಕ್ತ ಗುಲಾಬಿ (ಗುಣ ಗುಣಿ), ಪ್ರವಾಹ ಜಲ (ಕ್ರಿಯಾ ಕ್ರಿಯಾವತ), ಮನುಷ್ಯತ್ವ ಮನುಷ್ಯ (ಜಾತಿ ವ್ಯಕ್ತಿ). ವಸ್ತುವು ತಾನು ತನ್ನಲ್ಲಿ ರುವದು ತಾದಾತ್ಮ್ಯ ಸಂಬಂಧ. ಉದಾ:– ಸೂರ್ಯ, ಅಗ್ನಿ.

ಕ್ಷೇತ್ರ ಕ್ಷೇತ್ರಜ್ಞರ ನಡುವೆ ಯಾವ ಸಂಬಂಧವಿದೆ? ಕ್ಷೇತ್ರವು ಪರಿಮಿತ ಹಾಗು ಸಾಕಾರ. ಕ್ಷೇತ್ರಜ್ಞನು ಅಪರಿಮಿತ ಹಾಗು ನಿರಾಕಾರ. ಆದ್ದರಿಂದ ಎರಡಕ್ಕೆ ಸಂಯೋಗ ಸಂಬಂಧ ಉಂಟಾಗದು! ಕ್ಷೇತ್ರವು ಕ್ಷೇತ್ರಜ್ಞನಿಗೆ ಗುಣ ವಲ್ಲ, ಕ್ರಿಯೆ ಅಲ್ಲ, ಜಾತಿಯಲ್ಲ. ಆದ್ದರಿಂದ ಎರಡಕ್ಕೆ ಸಮವಾಯ ಸಂಬಂಧ ವಿಲ್ಲ. ಕೊನೆಯದಾಗಿ ಜಡವಾದ ಕ್ಷೇತ್ರ, ಅಜಡವಾದ ಕ್ಷೇತ್ರಜ್ಞಗಳು ಒಂದೇ ಅಲ್ಲವಾಗಿ ಅವುಗಳಿಗೆ ತಾದಾತ್ಮ್ಯ ಸಂಬಂಧವಿಲ್ಲ. ಹಾಗಾದರೆ ಅವೆರಡರ ನಡು ವಿನ ಸಂಬಂಧ ಎಂಥದಿರಬೇಕು? ನಮ್ಮ ವ್ಯಾವಹಾರಿಕ ಮಾತಿಗೆ, ಮತಿಗೆ ನಿಲು ಕದ ಸಂಬಂಧವದು. ಎಂತಲೇ ಅದಕ್ಕೆ ಅನಿರ್ವಚನೀಯ ಎನ್ನೋಣ! ಭಗ ವಂತನು ಈ ಮಂತ್ರದಲ್ಲಿ ಬಳಸಿದ ಸಂಯೋಗ ಎಂಬ ಪದವು ಅನಿರ್ವಚನೀಯ ಸಂಬಂಧವನ್ನು ನಿರ್ದೇಶಿಸುತ್ತದೆ.

ದೇಹ ಜೀವರ ಸಂಬಂಧವನ್ನು ಶರಣರು ತಮ್ಮದೇ ಆದ ವಿಶಿಷ್ಟ ಶೈಲಿ ಯಲ್ಲಿ ರೇಖಿಸಿದ್ದಾರೆ.

"ಜಗತ್ತೆಂಬ ಯಂತ್ರದ ಹಾಹೆಗೆ ಅಜ್ಞಾನವೆಂಬ ತುಷವ ತೊಡಿಸಿ ಅಹಂ ಮಮತೆ

ಯೆಂಬ ಸೊಕ್ಕನಿಕ್ಕಿ ಬಾರದ ಬಟ್ಟೆಯಲ್ಲಿ ಬರಿಸಿ ಕಾಣದ ದುಃಖವ ಕಾಣಿಸಿ, ಉಣ್ಣದ ಆಪ್ಯಾಯನವನುಣಿಸಿ ಮಾರಾರಿ ವಿನೋದಿಸಿದೆ, ನೀ ಕೂಡಲ ಸಂಗಮ ದೇವ."

ಪರಮಾತ್ಮನ ವಿನೋದ ವಿಲಾಸರೂಪ ಮಹಾಶಕ್ತಿಯು ಜಗತ್ತನ್ನು ರಚಿಸಿದಳು. ಅಜ್ಞಾನದ ಆವರಣ ಹಾಕಿ ನಾನು ನನ್ನದೆಂಬ ಭಾವಗಳನ್ನು ಅದರಲ್ಲಿ ತುಂಬಿದಳು. ಆಗ ಆ ಭಾವಗಳ ಮಧ್ಯದಿಂದ ಜೀವಪುರುಷನು ಉದಿಸಿದ. ಪಾಪ ಪುಣ್ಯ, ಕಾರ್ಯ ಅಕಾರ್ಯಗಳನ್ನು ಅಭಿಮಾನದಿಂದ ಆಚರಿಸಿದ. ಉಣ್ಣಬಾರದ ಭೋಗಗಳನುಂಡ; ಪಡಬಾರದ ದುಃಖಗಳನ್ನು ಅನುಭವಿಸಿದ. ಅನೇಕ ಜನ್ಮಗಳನ್ನು ಸುತ್ತಿದ.

"ಎನ್ನೊಡಲಾದರೆ ಎನ್ನಿಚ್ಛೆಯೊಳಿಹುದು. ನಿನ್ನೊಡಲಾದರೆ ನಿನ್ನಿಚ್ಛೆಯೊಳಿಹುದು. ಅದು ಎನ್ನೊಡಲೂ ಅಲ್ಲ, ನಿನ್ನೊಡಲೂ ಅಲ್ಲ. ನೀ ಮಾಡಿದ ಬಿನ್ನಾಣದೊಡಲು ಕಾಣಾ ರಾಮನಾಥ."

ದೇಹವು ಜೀವನ ಸ್ವತ್ತೂ ಅಲ್ಲ, ದೇವನ ಸಂಪದವೂ ಅಲ್ಲ. ಏಕೆಂದರೆ ಅದು ಜೀವನ ಇಚ್ಛೆಯಂತೆಯೂ ಇರದು, ದೇವನ ಆದೇಶದಂತೆಯೂ ಬಾಳದು. ಅದು ಪರಮಾತ್ಮನ ಚಮತ್ಕಾರಿಕ ಮಾಯಾ ಶಕ್ತಿಯ ಕೃತಿಯಾಗಿದೆ.

ಭಗವಂತ:– "ಅರ್ಜುನ, ಜಗತ್ತು ಬಹು ದೊಡ್ಡದು. ಅದರಲ್ಲಿ ಸ್ಥಾವರ ಜಂಗಮ ರೂಪದಿಂದ ಅಸಂಖ್ಯ ಜೀವರಿದ್ದಾರೆ, ಅಗಣಿತ ವಸ್ತುಗಳಿವೆ. ಅವು ತಮ್ಮಿಂದ ತಾವೇ ನಿರ್ಮಾಣವಾಗಿಲ್ಲ. ಕ್ಷೇತ್ರ ಕ್ಷೇತ್ರಜ್ಞರ, ಪ್ರಕೃತಿ ಪುರುಷರ ಅನಿರ್ವಚನೀಯ ಸಂಬಂಧ ಏರ್ಪಟ್ಟಾಗ ಅವೆಲ್ಲ ತೋರಿದವು. ಹೀಗೆ ಖಚಿತವಾಗಿ ತಿಳಿದುಕೊ."

ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥೨೭॥

ಅರ್ಥ:– ಯಃ=ಯಾವನು ಸರ್ವೇಷು ಭೂತೇಷು= ಸರ್ವ ಪ್ರಾಣಿಗಳಲ್ಲಿ ಸಮಂ ತಿಷ್ಠಂತಂ= ಸಮನಾಗಿ ಇರುವ ವಿನಶ್ಯತ್ಸು= ನಶ್ವರವಸ್ತುಗಳಲ್ಲಿ ಅವಿನಶ್ಯಂತಂ= ಅವಿನಾಶಿಯಾಗಿ ಇರುವ ಪರಮೇಶ್ವರಂ= ಪರಮೇಶ್ವರನನ್ನು ಪಶ್ಯತಿ= ನೋಡುತ್ತಾನೆಯೋ ಸಃ ಪಶ್ಯತಿ = ಅವನು ನಿಜವಾಗಿ ನೋಡುತ್ತಾನೆ.

ವಿವರಣೆ:– ಭಗವಂತ:– "ಪಾರ್ಥ, ಸರ್ವ ಪ್ರಾಣಿ ಪ್ರಪಂಚವು ನಶ್ವರ, ಕಾಲಪ್ರವಾಹದಲ್ಲಿ ಸಿಕ್ಕು ಮುಳುಗಿ ಏಳುತ್ತಿರುವ ಹುಲ್ಲುಕಡ್ಡಿ. ಪರಮಾತ್ಮನು ಅವಿನಾಶಿ. ಕ್ಷಣಬಾಳಿನ ಸರ್ವಜೀವಿಗಳಲ್ಲಿ ಸಮನಾಗಿ ನೆಲೆಸಿದ್ದಾನೆ. ಅವನು ದೇವರು, ಅವೆಲ್ಲ ಗುಡಿಗಳು. ಅವನು ಆಕಾಶ, ಅವು ಮೇಘಗಳು. ಯಾವ ಮನುಷ್ಯನು ತನ್ನ ಸುತ್ತಲಿರುವ ಜೀವಿಗಳನ್ನು ನೋಡುವಾಗ ದೇಹ ಮಾತು ವಿಚಾರಗಳತ್ತ ಲಕ್ಷ ಕೊಡದೆ ಆ ಜೀವಿಗಳ ಅಂತರ್ಯದಲ್ಲಿರುವ ಶಾಶ್ವತ ಪರಮಾತ್ಮನನ್ನು ನೋಡುವನೋ ಅವನೇ ಕಣ್ಣುಳ್ಳವ, ದೃಷ್ಟಾರ! ಅವನದು ಸತ್ಯ ದರ್ಶನ!"

ಸಮಂ ಪಶ್ಯನ್ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।
ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥೨೮॥

**ಅರ್ಥ:**— ಹಿ= ಏಕೆಂದರೆ, ಸರ್ವತ್ರ= ಎಲ್ಲ ಕಡೆಯಲ್ಲಿ ಸಮವಸ್ಥಿತಂ= ಸಮನಾಗಿರುವ ಈಶ್ವರಂ= ಈಶ್ವರನನ್ನು ಸಮಂ ಪಶ್ಯನ್= ಸಮನಾಗಿ ನೋಡುತ್ತಿರುವವನು ಆತ್ಮನಾ =ತನ್ನಿಂದ ಆತ್ಮಾನಂ= ತನ್ನನ್ನು ನ ಹಿನಸ್ತಿ= ನಾಶ ಮಾಡಿಕೊಳ್ಳುವದಿಲ್ಲ. ತತಃ= ಆದ್ದರಿಂದ ಪರಾಂಗತಿಂ= ಪರಮಗತಿಯನ್ನು ಯಾತಿ= ಹೊಂದುತ್ತಾನೆ.

**ವಿವರಣೆ:**— (೧) ಪರಮಾತ್ಮನು ಪರಿಪೂರ್ಣ. ಸರ್ವ ಅವಸ್ಥೆ ಕಾಲ ದೇಶ ಹಾಗು ವಸ್ತುಗಳಲ್ಲಿ ಅವನು ಸಚ್ಚಿದಾನಂದ ರೂಪದಿಂದ ಸಮನಾಗಿ ನೆಲೆಸಿದ್ದಾನೆ. ಅಂಥ ಪ್ರಭುವನ್ನು ತನ್ನಲ್ಲಿಯೂ, ಸರ್ವ ಜೀವರಲ್ಲಿಯೂ ಹಾಗು ಜಡ ಪದಾರ್ಥಗಳಲ್ಲಿಯೂ ಕಾಣುವ ಮಹಾಪುರುಷನೇ ಸಮ್ಯಗ್ದರ್ಶಿ! ಅವನ ದೃಷ್ಟಿಯಲ್ಲಿ ಜಾತ್ಯಾದಿ ಭೇದಗಳು ಅರ್ಥಹೀನ; ಮೇಲು, ಕೀಳು ಭಾವನೆಗಳು ಅನಾಧಾರಿತ.

೨) ಸಮದರ್ಶಿಯು ಆತ್ಮನಾ: ತನು ಇಂದ್ರಿಯ ಕರಣಗಳ ಮೂಲಕ ಆತ್ಮಾನಂ: ಉಪದ್ರಷ್ಟಾ ಅನುಮಂತಾ ಭರ್ತಾ ಭೋಕ್ತಾ ಎನಿಸುವ ದೇವನನ್ನು ಪರಿಚ್ಛಿನ್ನಗೊಳಿಸುವದಿಲ್ಲ; ಆತ್ಮನ ಅಮೃತಮಯ ಸ್ವಾತಂತ್ರ್ಯವನ್ನು ಭಗ್ನಗೊಳಿಸುವದಿಲ್ಲ. ಅವನು ವಿಮುಕ್ತ!

೩)ಸತ್ಯದರ್ಶಿಯು ಶಬ್ದಾದಿ ಗುಣಗಳಲ್ಲಿಯೂ ಕಾಮಾದಿ ಭಾವನೆಗಳಲ್ಲಿಯೂ ದೇವನ ಚೈತನ್ಯರಸ ಹರಿಯುವದನ್ನು ಕಾಣುತ್ತಾನೆ. ಸುತ್ತಲಿರುವ ಜೀವಿಗಳನ್ನು ಆತ್ಮವತ್ ಪ್ರೀತಿಸುತ್ತಾನೆ. ಪಾಪಿ ಕುಹಕ ಕಪಟಿ ದ್ರೋಹಿ ನಾಸ್ತಿಕ ದೀನ ದರಿದ್ರ ಅಜ್ಞ—ಹೀಗೆ ಎಂಥ ಕೀಳು ಜನರನ್ನೇ ನೋಡಲಿ ಅವರ ಮೇಲೆ ತನ್ನ ಹೃದ್ಗತ ಸ್ನೇಹ-ಸಿಂಚನ ಮಾಡುತ್ತಾನೆ. ಪುಣ್ಯವಂತ, ಸತ್ಯವಾದಿ, ಪ್ರಾಮಾಣಿಕ, ಆಸ್ತಿಕ, ಧನಿಕ, ಸುಜ್ಞ—ಇಂಥ ಶ್ರೇಷ್ಠರನ್ನು ಕಂಡಾಗ ಅವರನ್ನು ಹೃದಯಾರೆ ಮೆಚ್ಚುತ್ತಾನೆ. ಒಟ್ಟಿನಲ್ಲಿ ಅವನಿಗೆ ಭೇದ-ಭ್ರಾಂತಿ ಇಲ್ಲ. ಜೀವಿಗಳ ಸೇವೆಯು ಅವನಿಗೆ ಪೂಜೆ. ಅವರ ಸಾನಿಧ್ಯವು ಅವನಿಗೆ ಪಾವನ. ಅವನೊಬ್ಬ ತಾತ್ತ್ವಿಕ ಸಾಮ್ಯವಾದಿ. ರಾಜಕೀಯ ಸಾಮ್ಯವಾದಿಗಳು ಅವನಿಗೆ ತಿಲ ಮಾತ್ರವೂ ಸರಿ-ಸಮರಲ್ಲ.

೪) ಸಮದರ್ಶಿಯು ಪರಾಂ ಗತಿಂ— ಸರ್ವಶ್ರೇಷ್ಠವಾದ ವಿಮುಕ್ತಿಗತಿಯನ್ನು ಹೊಂದುತ್ತಾನೆ. ಇತರರು ಹೀನ ಗತಿಯನ್ನು ಹೊಂದುತ್ತಾರೆ.

"ಅಸೂರ್ಯಾನಾಮ ತೇ ಲೋಕಾ ಅಂಧೇನ ತಮಸಾವೃತಾಃ।
ತಾನ್ಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ॥" (ಈಶಾವಾಸ್ಯ-೩)

ಪ್ರಖ್ಯಾತವಾದ ಆ ಅಸುರ ಲೋಕಗಳು ತಮಂಧಕಾರದಿಂದ ತುಂಬಿವೆ. ಯಾರು ಆತ್ಮಘಾತಿಗಳೋ ಅವರು ಮರಣಾ ನಂತರ ಆ ಲೋಕಗಳಿಗೆ ಹೋಗುತ್ತಾರೆ. ಆತ್ಮಘಾತಿ ಜನರಿಗೆ ಪತ್ತದ ಅರಿವಿಲ್ಲ. ಅವರು ಜಾತಿ ವರ್ಣಾದಿಗಳ ಕಟ್ಟಿ, ಅಭಿ

ಮಾನ ಹುಟ್ಟಿಸಿ ಜನತೆಯನ್ನು ಕದನಕ್ಕೆ ಎಳೆಯುತ್ತಾರೆ. ಸಾಮಾಜಿಕ ಶಾಂತಿಯನ್ನು ನಾಶಗೊಳಿಸಿ ಅಶಾಂತಿ-ಅಗ್ನಿಗೆ ಪುಟ ಇಕ್ಕುತ್ತಾರೆ.

ಭಗವಂತ:– "ಕುರುಪ್ರವೀರ, ನಾನು ವಿಶ್ವದ ಪರಮಾಧಾರ. ಆಕಾಶದಂತೆ ಸರ್ವಗ. ಪರಮಸೂಕ್ಷ್ಮನಾದುದರಿಂದ ಸಕಲಪದಾರ್ಥಗಳಲ್ಲಿ ಮನ ವಾಣಿ-ಹಾಗು ನೇತ್ರಗಳಿಗ ಅದೃಶ್ಯನಾಗಿ ನೆಲೆಸಿದ್ದೇನೆ. ಜಾಣನಾದ ಸಾಧಕನು ವಿನಿರ್ಮಲ ಮನಶ್ಚಕ್ಷುವಿನಿಂದ ನನ್ನನ್ನು ನೋಡುತ್ತಾನೆ; ಎಲ್ಲೆಡೆಗೂ ಇರುವ ನನ್ನ ಅಸ್ತಿತ್ವವನ್ನು ಗುರುತಿಸುತ್ತಾನೆ. ಅವನಲ್ಲಿ ಆತ್ಮದರ್ಶನವು ಇಂತು ನೆಲೆಗೊಂಡುದರಿಂದ ಯಾವ ಮೋಹಕ ಪದಾರ್ಥದಿಂದಲೂ ಆಕರ್ಷಿತನಾಗುವದಿಲ್ಲ; ತನ್ನನ್ನೇ ತಾನು ಸಂಸಾರ ಪಂಕದಲ್ಲಿ ಸಿಲುಕಿಸಿ ಘಾಸಿಗೊಳಿಸುವದಿಲ್ಲ. ಕಾಮಾದಿಗಳ ಬಲೆಗೆ ಬಿದ್ದು ಆತ್ಮಪ್ರಜ್ಞೆಯನ್ನು ಕಳೆದುಕೊಳ್ಳುವದಿಲ್ಲ. ಆದುದರಿಂದಲೇ ಅವನಿಗೆ ಪರಮಗತಿಯ ಪ್ರಾಪ್ತಿಯು ಖಚಿತ."

ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।
ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥೨೯॥

ಅರ್ಥ:– ಪ್ರಕೃತ್ಯಾ ಏವ= ಪ್ರಕೃತಿಯಿಂದಲೇ ಕರ್ಮಾಣಿ= ಕರ್ಮಗಳು ಸರ್ವಶಃ = ಸರ್ವವಿಧದಲ್ಲಿ ಕ್ರಿಯಮಾಣಾನಿ= ಮಾಡಲ್ಪಡುವವೆಂದೂ ತಥಾ= ಮತ್ತು ಆತ್ಮಾನಂ = ತನ್ನನ್ನು ಅಕರ್ತಾರಂ=ಅಕರ್ತೃವೆಂದೂ ಯಃ= ಯಾವನು ಪಶ್ಯತಿ= ನೋಡುತ್ತಾನೆಯೋ ಸಃ ಪಶ್ಯತಿ= ಅವನು(ನಿಜವಾಗಿ) ನೋಡುತ್ತಾನೆ.

ಭಗವಂತ:– "ಧನಂಜಯ, ಪ್ರಕೃತಿಯು ನನ್ನ ಸಾನಿಧ್ಯದಲ್ಲಿ ಬದುಕಿದ ಅನಾದ್ಯನಂತಶಕ್ತಿ. ಆಕೆ ವೈವಿಧ್ಯಪೂರ್ಣವಾದ ಜಗತ್ತನ್ನು ನಿರ್ಮಿಸಿದ್ದಾಳೆ; ಜಗತ್ತಿನಲ್ಲಿ ನಡೆಯುವ ಎಲ್ಲ ವ್ಯವಹಾರಗಳಿಗೂ ಆಕೆಯೇ ಕಾರಣ. ನಾನು ಕೇವಲ ಸಾಕ್ಷಿ, ಅಕರ್ತಾ ಅಭೋಕ್ತಾ. ಹೀಗೆ ತಿಳಿದ ಮಹಾತ್ಮನು ಸತ್ಯದರ್ಶಿ. ಅವನು ಪ್ರಪಂಚದಲ್ಲಿ ಬಾಳುತ್ತಾನೆ, ವಿವಿಧ ಕಾರ್ಯಗೈಯುತ್ತಾನೆ, ಆದರೆ ಅವುಗಳ ಅಭಿಮಾನ ತಾಳುವದಿಲ್ಲ. ಎಂತಲೇ ಅವನು ಬಳಸಿ ಬ್ರಹ್ಮಚಾರಿ, ಉಂಡು ಉಪವಾಸಿ."

ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥೩೦॥

ಅರ್ಥ:– ಯದಾ= ಯಾವಾಗ ಭೂತಪೃಥಗ್ಭಾವಂ= ಭೂತಗಳ ವಿವಿಧತೆಯು ಏಕಸ್ಥಂ= ಅದ್ವಯಾತ್ಮನಲ್ಲಿಯೇ ನೆಲೆಸಿದೆ ಎಂದು ತತಃ ಏವ ಚ= ಮತ್ತು ಆತ್ಮನಿಂದಲೇ ವಿಸ್ತಾರಂ ಅನುಪಶ್ಯತಿ= ವಿಕಾಸಗೊಳ್ಳುವದು ಎಂದು ನೋಡುತ್ತಾನೆಯೋ ತದಾ= ಆಗ ಬ್ರಹ್ಮ= ಬ್ರಹ್ಮನನ್ನು ಸಂಪದ್ಯತೇ= ಹೊಂದುತ್ತಾನೆ.

ವಿವರಣೆ:– (೧) ಪರಮಾತ್ಮನು ಅದ್ವಯ, ಸನಾತನ. ಅವನ ಪರಮ ಆಶ್ರಯದಲ್ಲಿಯೇ ಅಸಂಖ್ಯ ಪದಾರ್ಥಗಳು ಹಾಗು ಜೀವಿಗಳು ಹುಟ್ಟುತ್ತವೆ; ಅವನಲ್ಲಿಯೇ ಬಾಳುತ್ತವೆ; ಕಡೆಗೆ ಅವನಲ್ಲಿಯೇ ಅಡಗುತ್ತವೆ. ಅವುಗಳ ಉದಯ,

ಬದುಕು ಹಾಗು ವಿನಾಶದಿಂದ ಅವನು ಪೂರ್ಣ ಅಬಾಧಿತ!

(೨) ಕೆಲವು ಶ್ರುತಿ ಪ್ರಮಾಣ ವಚನಗಳು ಇಲ್ಲಿ ಗಮನೀಯ. "ಸದೇವ ಸೌಮ್ಯ ಇದಮಗ್ರೇ ಆಸೀತ್" ಸೌಮ್ಯನೆ, ಪೂರ್ವದಲ್ಲಿ ಇದೆಲ್ಲ ಸತ್ತೆ ಆಗಿತ್ತು. "ಸರ್ವಂ ಖಲ್ವಿದಂ ಬ್ರಹ್ಮ, ನೇಹ ನಾನಾಸ್ತಿ ಕಿಂಚನ" ಈ ಎಲ್ಲವೂ ಬ್ರಹ್ಮ! ನಾನಾ ಎನ್ನುವದೇ ಇಲ್ಲ. "ಆನಂದಾತ್ ಹಿ ಏವ ಖಲು ಇಮಾನಿ ಭೂತಾನಿ ಜಾಯಂತೇ" ಆನಂದರೂಪ ಬ್ರಹ್ಮನಿಂದಲೇ ಈ ಎಲ್ಲ ಜೀವಿಗಳು ಹುಟ್ಟುತ್ತವೆ. ದೇವನು ಚೈತನ್ಯದ ನಿತಾಂತ ಸಾಗರ! ಭೂತಗಳು ಆ ಸಾಗರದ ಮೇಲೆ ಅಗಣಿತ ಸಂಖ್ಯೆಯಲ್ಲಿ ತಲೆದೋರುತ್ತವೆ. ಅಭಿವೃದ್ಧಿ ಹೊಂದಿ ಕೊನೆಗೆ ಮಾಯವಾಗುತ್ತವೆ.

(೩) ಬ್ರಹ್ಮನ ಈ ನಿಜ ಸ್ವರೂಪವನ್ನು ಅರಿತವನು ಜ್ಞಾನಿ. "ಬ್ರಹ್ಮವಿತ್ ಬ್ರಹ್ಮೈವ ಭವತಿ" ಎಂಬ ಪ್ರಮಾಣದಂತೆ ಬ್ರಹ್ಮಜ್ಞಾನವನುಳ್ಳ ಅವನು ಬ್ರಹ್ಮನೇ ಸರಿ!

ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ ।
ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥೩೧॥

**ಅರ್ಥ:**- ಅನಾದಿತ್ವಾತ್= ಅನಾದಿಯಾದುದರಿಂದ, ನಿರ್ಗುಣತ್ವಾತ್= ನಿರ್ಗುಣನಾದುದರಿಂದ ಅಯಂ= ಈ ಅವ್ಯಯಃ= ಅವ್ಯಯನಾದ ಪರಮಾತ್ಮಾ= ಪರಮಾತ್ಮನು ಶರೀರಸ್ಥಃ ಅಪಿ= ಶರೀರದಲ್ಲಿದ್ದರೂ ನ ಕರೋತಿ= ಕರ್ಮ ಮಾಡುವದಿಲ್ಲ, ನ ಲಿಪ್ಯತೇ= ಲಿಪ್ತನಾವಗುವದಿಲ್ಲ.

**ವಿವರಣೆ:**- (೧) ವ್ಯಯ, ಅವ್ಯಯ- ಯಾವುದು ಹುಟ್ಟಿದೆಯೋ, ಗುಣಯುಕ್ತವಾಗಿದೆಯೋ ಅದು ವ್ಯಯಶೀಲ. ಉದಾ- ಹೂ, ದೇಹ ಇತ್ಯಾದಿ. ಪರಮಾತ್ಮನು ಹುಟ್ಟಿಲ್ಲ; ಅವನಲ್ಲಿ ಗುಣಗಳಿಲ್ಲ. ಆದ್ದರಿಂದ ಅವ್ಯಯ. ಇದೇ ಮಾತನ್ನು ತಾರ್ಕಿಕ ಭಾಷೆಯಲ್ಲಿ ಹೇಳಬಹುದು.

ಅ) ಪರಮಾತ್ಮನು ಅವ್ಯಯ. ಬ) ಅನಾದಿತ್ವ ಹಾಗು ನಿರ್ಗುಣತ್ವ ಉಳ್ಳವನಾದುದರಿಂದ. ಕ) ಎಲ್ಲಿ ಎಲ್ಲಿ ಅನಾದಿತ್ವ ನಿರ್ಗುಣತ್ವಗಳಿವೆಯೋ ಅಲ್ಲಿ ಅವ್ಯಯತ್ವವಿದೆ. (ಡ) ಆಕಾಶವೇ ಉದಾಹರಣೆ.

(೨) ಈ ಅವ್ಯಯನಾದ ದೇವನು ಪರಿಪೂರ್ಣ, ನಿತ್ಯ, ನಿರಂಜನ. ವಿಶ್ವದಲ್ಲಿ ಅಂತರ್ಯಾಮಿ, ದೇಹದಲ್ಲಿ ಪ್ರತ್ಯಗಾತ್ಮ! ವಿಶ್ವವ್ಯಾಪಕವಾದ ಮಹಾಗ್ನಿಯು ಕಾಷ್ಠದಲ್ಲಿ ವಿಶೇಷವಾಗಿ ವ್ಯಕ್ತವಾಗುವಂತೆ, ಸರ್ವಗನಾದ ಪರಮಾತ್ಮನು ಶರೀರದಲ್ಲಿ ವಿಶೇಷವಾಗಿ ವ್ಯಕ್ತವಾಗುತ್ತಾನೆ. ಜ್ಞಾನರವಿಯಾಗಿ ಹೊಳೆಯುತ್ತಾನೆ. ಅವನ ಬೆಳಕಿನಲ್ಲಿಯೇ ಜಗತ್ತು, ದೇಹ, ಇಂದ್ರಿಯ, ಪ್ರಾಣ, ಮನ, ಬುದ್ಧಿ ಹಾಗು ಅಹಂಭಾವಗಳು ತೋರುತ್ತವೆ. ಅವನ ಸಾನಿಧ್ಯದ ಪ್ರಭಾವದಿಂದಲೇ ಅವೆಲ್ಲ ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತವೆ. ಆದರೆ ಆ ಕಾರ್ಯಗಳಿಂದ ದೇವನು ಲಿಪ್ತನಾಗುವದಿಲ್ಲ. ಅವನು ಮಾಡುವದೂ ಇಲ್ಲ, ಬದ್ಧ

ನಾಗುವದೂ ಇಲ್ಲ. ಅಜ್ಞ ಜೀವನು ಮಾತ್ರ ತಾನೇ ಕರ್ತೃ ಭೋಕ್ತೃವೆಂದು ಭ್ರಮಿಸುತ್ತಾನೆ. ಹಾಕಿದ ಅಂಗಿಯಲ್ಲಿ ಕೋರಿಹುಳ ಸೇರಿದ ವ್ಯಕ್ತಿ ಉರಿತದಿಂದ ಹುಚ್ಚೆದ್ದು ಕುಣಿಯುವಂತೆ, ಕರ್ತಾದಿ ಭಾವಗಳಿಗೆ ಮನಸ್ಸಿನಲ್ಲಿ ಆಸ್ಪದವಿತ್ತ ಸಂಸಾರಿ ಜೀವನು ಸುಖ ದುಃಖಗಳ ಘೋರ ತಾಪದಿಂದ, ತುರಿತದಿಂದ ತಲ್ಲಣಿಸುತ್ತಾನೆ.

ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।
ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥೩೨॥

ಅರ್ಥ:– ಯಥಾ=ಹೇಗೆ ಸರ್ವಗತಂ= ಸರ್ವವ್ಯಾಪಿಯಾದ ಆಕಾಶಂ= ಆಕಾಶವು ಸೌಕ್ಷ್ಮ್ಯಾತ್= ಸೂಕ್ಷ್ಮವಾಗಿರುವದರಿಂದ ನ ಉಪಲಿಪ್ಯತೇ= ಲಿಪ್ತವಾಗುವದಿಲ್ಲವೋ ತಥಾ= ಹಾಗೆ ಸರ್ವತ್ರ= ಎಲ್ಲೆಡೆಗೂ ದೇಹೇ= ಎಲ್ಲ ದೇಹಗಳಲ್ಲೂ (ಇರುವ) ಆತ್ಮಾ= ಆತ್ಮನು ನ ಉಪಲಿಪ್ಯತೇ= ಲಿಪ್ತನಾಗುವದಿಲ್ಲ.

ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥೩೩॥

ಅರ್ಥ:– ಯಥಾ= ಹೇಗೆ ಏಕಃ ರವಿಃ= ಒಬ್ಬನೇ ಆದ ಸೂರ್ಯನು ಇಮಂ= ಈ ಕೃತ್ಸ್ನಂ= ಸಮಸ್ತ ಲೋಕಂ ಪ್ರಕಾಶಯತಿ=ಲೋಕವನ್ನು ಪ್ರಕಾಶಗೊಳಿಸುತ್ತಾನೆಯೋ ತಥಾ ಹಾಗೆ ಕ್ಷೇತ್ರೀ= ಕ್ಷೇತ್ರಜ್ಞನು ಕೃತ್ಸ್ನಂ= ಸಮಸ್ತ ಕ್ಷೇತ್ರಂ= ಕ್ಷೇತ್ರವನ್ನು ಪ್ರಕಾಶಯತಿ= ಪ್ರಕಾಶಗೊಳಿಸುತ್ತಾನೆ.

ವಿವರಣೆ:– ಭಗವಂತ:–"ಧನಂಜಯ, ಆಕಾಶವು ಸರ್ವತ್ರ ವ್ಯಾಪಿಸಿದೆ. ಭೂಮ್ಯಾದಿ ವಾಯ್ವಾಂತ ಸಕಲ ಭೂತಗಳ ಒಳ ಹೊರಗೆ ನೆಲಸಿದೆ. ಆದರೆ ಆ ಭೂತಗಳ ವಿವಿಧ ಮಾಲಿನ್ಯವು ಅದಕ್ಕೆ ಅಂಟದು. ಅಂದರೆ ಅದು ಭೂಮಿಯಂತೆ ದುರ್ಗಂಧ ಬೀರದು, ಜಲದಂತೆ ಮಲೆಯದು, ಅಗ್ನಿಯಂತೆ ನಂದದು, ವಾಯು ವಿನಂತೆ ಕಣಮಿಶ್ರಿತವಾಗದು. ಅದೇ ರೀತಿ ಪರಮಾತ್ಮ. ಅವನೂ ಸರ್ವವ್ಯಾಪಿ, ಸರ್ವಭೂತಾಂತರಾತ್ಮ, ಸರ್ವಭೂತಾಧಿವಾಸ, ಸೂಕ್ಷ್ಮಾತಿ ಸೂಕ್ಷ್ಮ. ದೇಹ ಮನಸ್ಸುಗಳ ತುಂಬ ವಾಸಿಸಿದ್ದರೂ ಆ ದೇಹ ಮಾಲಿನ್ಯ, ಮನಸ್ಸಿನ ಕಾಮಾದಿ ಕಾಲುಷ್ಯ ಅವನಿಗೆ ತಗುಲವು! ನಿರ್ಲಿಪ್ತ! ಆಕಾಶಕ್ಕೂ ಅವನಿಗೂ ಒಂದೇ ಅಂತರ; ಅವನು ಚಿನ್ಮಯರೂಪ, ಅದು ಜಡಭೂತ.

"ಸೂರ್ಯನು ಏಕೈಕ. ಸರ್ವ ಜಗತ್ತನ್ನು ಪ್ರಕಾಶ ಮಾಡುತ್ತಾನೆ. ಕಿಂತು ಪ್ರಕಾಶಿತ ವಸ್ತುವಿನ ದೋಷ ಅವನಿಗಿಲ್ಲ. ಹಾಗೆಯೇ ಪರಮಾತ್ಮ. ಅವನು ಜ್ಞಾನ ಭಾಸ್ಕರ. ಭೂಮಿಯಿಂದ ಪ್ರಕೃತಿಯವರೆಗೆ ಇರುವ ಸಕಲ ತತ್ತ್ವಗಳನ್ನೂ ಬೆಳಗುತ್ತಾನೆ. ಕಿಂತು ಆ ಪ್ರಕಾಶಿತ ತತ್ತ್ವಗಳಿಂದ ಶಿಲಾಂಶವೂ ಲಿಪ್ತನಾಗುವದಿಲ್ಲ."

ಕ್ಷೇತ್ರ ಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ।
ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ॥೩೪॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಕ್ಷೇತ್ರ ಕ್ಷೇತ್ರಜ್ಞಯೋಗೋನಾಮ ತ್ರಯೋದಶೋಽಧ್ಯಾಯಃ

**ಅರ್ಥ:**– ಯೇ=ಯಾರು, ಏವಂ=ಹೀಗೆ, ಕ್ಷೇತ್ರ ಕ್ಷೇತ್ರಜ್ಞಯೋಃ = ಕ್ಷೇತ್ರ ಕ್ಷೇತ್ರಜ್ಞರ, ಅಂತರಂ= ಭೇದವನ್ನು, ಚ = ಮತ್ತು, ಭೂತಪ್ರಕೃತಿಮೋಕ್ಷಂ= ಭೂತಗಳಿಗೆ ಕಾರಣವಾದ ಪ್ರಕೃತಿಯಿಂದ ಮೋಕ್ಷವನ್ನು, ಜ್ಞಾನಚಕ್ಷುಷಾ= ಜ್ಞಾನಚಕ್ಷುವಿನಿಂದ, ವಿದುಃ= ತಿಳಿಯುತ್ತಾರೆಯೋ, ತೇ =ಅವರು, ಪರಂ =ಬ್ರಹ್ಮನನ್ನು, ಯಾಂತಿ= ಹೊಂದುತ್ತಾರೆ.

**ಭಗವಂತ:**– ಅರ್ಜುನ, ಪ್ರಕೃತಿಯು ಕ್ಷೇತ್ರ; ಪರಮ ಪುರುಷನು ಕ್ಷೇತ್ರಜ್ಞ. ಪ್ರಾಕೃತಿಕ ದೇಹವು ಕ್ಷೇತ್ರ; ದೇಹಿಯಾದ ಜೀವ ಪುರುಷನು ಕ್ಷೇತ್ರಜ್ಞ. ಕ್ಷೇತ್ರವು ಸಗುಣ; ಸಾವಯವ, ಸವಿಕಾರ, ಪರಿಚ್ಛಿನ್ನ, ಮತ್ತು ವಿನಾಶ ಶೀಲ. ಕ್ಷೇತ್ರಜ್ಞನು ನಿರ್ಗುಣ, ನಿರವಯವ, ನಿರ್ವಿಕಾರಿ, ಅಪರಿಚ್ಛಿನ್ನ ಮತ್ತು ಅವಿನಾಶಿ. ಹೀಗೆ ಎರಡೂ ವಸ್ತುಗಳ ಸಂಪೂರ್ಣ ಜ್ಞಾನ ಮಾಡಿಕೊಂಡವನು ವಿವೇಕಿ. ಭೂತಗಳ ಪ್ರಕೃತಿಯಾದ ಅವ್ಯಕ್ತ ಶಕ್ತಿಯ ಆಕರ್ಷಣಾ ಬಲೆಯಿಂದ ಪಾರಾಗುವ ಕಲೆ ಅವನಿಗೆ ಅವಗತವಾಗಿದೆ. ಆದ್ದರಿಂದ ಅವನು ಸಂಸಾರತಮಂಧಕಾರದಿಂದ ಪಾರಾಗುತ್ತಾನೆ. ಅಮೃತರೂಪ ಬ್ರಹ್ಮನನ್ನು ಹೊಂದುತ್ತಾನೆ.

"ಅರ್ಜುನ, ನೀನೂ ವಿವೇಕಿಯಾಗು. ಆತ್ಮಾನಾತ್ಮಗಳನ್ನು ಪೃಥಃಕರಿಸು. ಅನಾತ್ಮ ವಸ್ತುವಿನ ಮೋಹತ್ಯಾಗಮಾಡಿ ಆತ್ಮ ಸಾಗರದಲ್ಲಿ ತೇಲು. ದಿವ್ಯ ಆನಂದವನ್ನು ಅನುಭವಿಸು! ಆಗ ಕೃತಾರ್ಥನಾಗುವಿ."

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಹದಿಮೂರನೆಯ ಬಿಂದುವು.

* † *

# ಹದಿನಾಲ್ಕನೆಯ ಅಧ್ಯಾಯ

## ಗುಣತ್ರಯವಿಭಾಗಯೋಗ

ಹಿಂದಿನ ಅಧ್ಯಾಯದ ೨೬ ನೆಯ ಮಂತ್ರದಲ್ಲಿ ಕ್ಷೇತ್ರ ಕ್ಷೇತ್ರಜ್ಞರ ಸಂಯೋಗದಿಂದ ಸ್ಥಾವರ ಜಂಗಮಾತ್ಮಕ ಜೀವಕೋಟಿಯು ಉದಿಸುತ್ತದೆ ಎಂದು ಹೇಳಲಾಗಿದೆ. ಈ ಅಭಿಪ್ರಾಯವು ನಿರೀಶ್ವರ ಸಾಂಖ್ಯ ಮತಕ್ಕೆ ಬೆಂಬಲ ನೀಡುವ ಸಂಭವವಿದೆ. ಈ ಪ್ರಸಂಗವನ್ನು ತಪ್ಪಿಸುವ ಉದ್ದೇಶದಿಂದ ಹಾಗು ತತ್ತ್ವಗಳ ವಿಶೇಷ ವಿವರಣೆ ಈಯುವ ಇಚ್ಛೆಯಿಂದ ಪ್ರಸ್ತುತ ಅಧ್ಯಾಯವು ಪ್ರಾರಂಭವಾಗಿದೆ.

ಇಲ್ಲಿ ಉಪದಿಷ್ಟವಾಗುವ ವಿಷಯಗಳು ಮೂರು. ೧) ಈಶ್ವರ, ಪ್ರಕೃತಿ, ಪುರುಷ. ೨) ಸತ್ವ ರಜ ತಮ ಗುಣಗಳು. ೩) ತ್ರಿಗುಣಾತೀತ ಅನುಭೂತಿ ಪಡೆದ ಅನುಭಾವಿ. ಸಾಮಾನ್ಯವಾಗಿ ಈ ವಿಷಯಗಳು ಹೊಚ್ಚ ಹೊಸವಲ್ಲ ನಿಜ; ಹೇಳುವ ರೀತಿ ಮತ್ತು ಕ್ರಮ ಭಿನ್ನವಾದುದರಿಂದ ಅವುಗಳಿಗೆ ಹೊಸಕಳೆ ಬಂದಿದೆ. ಪಾಕ ಪರಿಣತನು ಅದೇ ಗೋದಿ ಸಕ್ಕರೆ ತುಪ್ಪಗಳಿಂದ ನೂರಾರು ತರಹದ

ಪಾದ್ಯಗಳನ್ನು ತಯಾರಿಸುವಂತೆ ಭಗವಂತನು ಅದೇ ದೈವೀ ತತ್ತ್ವವನ್ನು ಹಲವಾರು ವಿಧದಲ್ಲಿ ಉಪದೇಶಿಸುತ್ತಿದ್ದಾನೆ.

ಶ್ರೀ ಕೃಷ್ಣ ಉವಾಚ

ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।
ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥೧॥

**ಅರ್ಥ:**- ಯತ್ ಜ್ಞಾತ್ವಾ= ಯಾವುದನ್ನು ಅರಿತುಕೊಂಡು. ಸರ್ವೇ ಮುನಯಃ= ಎಲ್ಲ ಮುನಿಗಳು, ಇತಃ= ಇಲ್ಲಿಂದ (ಸಂಸಾರ ಮಂಡಲದಿಂದ), ಪರಾಂ ಸಿದ್ಧಿಂ = ಪರಮ ಸಿದ್ಧಿಯನ್ನು, ಗತಾಃ= ಹೊಂದಿದರೋ, ಜ್ಞಾನಾನಾಂ= ಜ್ಞಾನಗಳಲ್ಲಿ, ಉತ್ತಮಂ= ಉತ್ತಮವಾದ ಪರಂ= ಶ್ರೇಷ್ಠವಾದ, ಜ್ಞಾನಂ= (ಅಂಥ) ಜ್ಞಾನವನ್ನು, ಭೂಯಃ ಪ್ರವಕ್ಷ್ಯಾಮಿ =ಪುನಃ ಹೇಳುವೆನು.

**ವಿವರಣೆ:**– ಭಗವಂತ:–"ಅರ್ಜುನ, ನಾನು ಪ್ರಕೃತಿಯ ಆಧಾರ, ವಿಶ್ವದ ಸನ್ನಿಧಾನ ಕಾರಣ, ಸರ್ವ ತತ್ತ್ವಪ್ರಕಾಶಕ ದಿವ್ಯಜ್ಯೋತಿ! ನಾನು ದೇಹ ಮನ ಮಾತುಗಳಲ್ಲೆಲ್ಲ ವ್ಯಾಪಿಸಿದ್ದೇನೆ; ಆದರೆ ಅತ್ಯಂತ ಗುಹ್ಯನಾದುದರಿಂದ ಅವುಗಳಿಗೆ ಅಗೋಚರ. ನಿಸ್ಸೀಮ ನಿರಾಮಯನಾದ ನನ್ನ ಸ್ವರೂಪದ ಅನುಭೂತಿಯೇ ದಿವ್ಯಜ್ಞಾನ! ಗುಹ್ಯತಮವಿದ್ಯೆ! ಇದು ಉಳಿದೆಲ್ಲ ವಿದ್ಯೆಗಳಿಗಿಂತ ಉತ್ಕೃಷ್ಟ ಹಾಗು ಪವಿತ್ರ. ಆ ವಿದ್ಯೆಗಳು ಅವಿದ್ಯಾ ಪೋಷಕವಾಗಿವೆ; ಈ ರಾಜವಿದ್ಯೆ ಅವಿದ್ಯಾ ವಿಲಕ್ಷಣವಾಗಿದೆ. ಅಂದರೆ ಅದರ ಸಾನಿಧ್ಯದಲ್ಲಿ ಅವಿದ್ಯೆಗೆ ಅವಕಾಶವೇ ಇಲ್ಲ. ಗರ್ವ ಅಹಂಕಾರ ಅಭಿನಿವೇಶಾದಿ ವಿಕೃತ ಭಾವಗಳು ಆ ವಿದ್ಯೆಯ ಪ್ರಕಾಶದಲ್ಲಿ ಮಂಜಿನಂತೆ ಕರಗಿ ಹೋಗುತ್ತವೆ. ಅನೇಕ ಋಷಿ ಮುನಿಗಳು ಈ ಜ್ಞಾನವನ್ನು ಪಡೆದೇ ಸಂಸಾರ ಬಂಧನದಿಂದ ಪಾರಾದರು; ಎಂದಿಗೂ ತಿರುಗಿಬಾರದ ಪರಮ ಗತಿಯನ್ನು ಹೊಂದಿದರು."

"ನೀನೂ ಈ ವಿದ್ಯೆಯನ್ನು ರಕ್ತಗತಗೊಳಿಸಿಕೊ; ಪ್ರಾಪಂಚಿಕ ವ್ಯಾಮೋಹ ನೀಗು. ದೇಹದ ಅಭಿಮಾನ ತೊರೆ. ನನ್ನ ಅಮೃತೋಪಮ ಸ್ವರೂಪದ ದರ್ಶನ ಪಡೆ. ನೀನು ಆಗ ವಿಶ್ವಸಂತನಾಗುವಿ. ಲೋಕವು ನಿನ್ನ ಮನೆ, ಮನುಕುಲವು ನಿನ್ನಾತ್ಮವಾಗುವದು. ನೀನು ಮಾಡುವ ಸೇವೆಯಿಂದ ಲೋಕವೇ ಪಾವನವಾಗುವದು."

ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಯಂತಿ ಚ ॥೨॥

**ಅರ್ಥ:**– ಇದಂ= ಈ ಜ್ಞಾನಂ= ಜ್ಞಾನವನ್ನು ಉಪಾಶ್ರಿತ್ಯ= ಆಶ್ರಯಿಸಿ ಮಮ = ನನ್ನ ಸಾಧರ್ಮ್ಯಂ= ಸಾಧರ್ಮ್ಯವನ್ನು ಆಗತಾಃ= ಹೊಂದಿದವರು ಸರ್ಗೇ ಅಪಿ= ಸೃಷ್ಟಿ ಕಾಲದಲ್ಲಿಯೂ ನ ಉಪಜಾಯಂತೇ– ಹುಟ್ಟುವದಿಲ್ಲ. ಚ= ಮತ್ತು ಪ್ರಲಯೇ= ಪ್ರಳಯ ಕಾಲದಲ್ಲಿ ನ ವ್ಯಥಯಂತಿ= ವ್ಯಥೆ ಪಡುವದಿಲ್ಲ.

ವಿವರಣೆ:- ಭಗವಂತ:- "ಪಾರ್ಥ, ಪ್ರಾಕೃತಿಕ ಸೃಷ್ಟಿಕಾಲದಲ್ಲಿ ವಸ್ತುಗಳು ಹಾಗು ಜೀವರು ಅಷ್ಟೇ ಅಲ್ಲ, ಬ್ರಹ್ಮಾದಿದೇವತೆಗಳು ಕೂಡ ಹುಟ್ಟಿ ಬರುತ್ತಾರೆ; ಪ್ರಳಯಕಾಲದಲ್ಲಿ ಅವರು ದುಃಖಿಸಿಯೂ ದುಃಖಿಸುತ್ತಾರೆ. ಆದರೆ ಯಾವ ಮಹಾನುಭಾವರು ಆತ್ಮವಿದ್ಯೆಯನ್ನು ಅಂಗವಿಸಿಕೊಳ್ಳುತ್ತಾರೆಯೋ, ನನ್ನ ಸ್ವರೂಪದಲ್ಲಿ ಒಂದಾಗುತ್ತಾರೆಯೋ ಅವರು ಲಯಕಾಲದಿಂದ ಭಯಪಡರು ಸೃಷ್ಟಿಕಾಲದಲ್ಲಿ ಹುಟ್ಟರು. ಅವರು ಕಾಲಾತೀತಭಾವಿಗಳು ನಿರ್ಭೀಕ ಸುಖಿಗಳು."

ಸಂಬಂಧ:– ಪ್ರಾಣಿಗಳು ಹೇಗೆ ಹುಟ್ಟುತ್ತವೆ?

ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಮ್ ।
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥೩॥

ಅರ್ಥ:– ಮಹದ್ಬ್ರಹ್ಮ= ಮಹತ್ತಾದ ಪ್ರಕೃತಿಯು ಮಮ ಯೋನಿಃ= ನನ್ನ ಯೋನಿಯು. ತಸ್ಮಿನ್– ಅದರಲ್ಲಿ ಅಹಂ= ನಾನು ಗರ್ಭಂ= ಗರ್ಭವನ್ನು ದಧಾಮಿ= ಇಡುತ್ತೇನೆ. ತತಃ= ಅದರಿಂದ ಸರ್ವಭೂತಾನಾಂ= ಸರ್ವಪ್ರಾಣಿಗಳ ಸಂಭವಃ ಭವತಿ= ಉತ್ಪತ್ತಿಯಾಗುತ್ತದೆ.

ವಿವರಣೆ: ಭಗವಂತ:– "ಭಾರತ, ಮಹದ್ಬ್ರಹ್ಮ ಎಂದರೆ ಪ್ರಕೃತಿ, ವಿಶ್ವ ಜನನಿ. ಆಕೆ ನಿತ್ಯ ಹಾಗು ಪೂರ್ಣ. ಇಂಗಡಲಲ್ಲಿ ಇಂಪು, ಬೆಳದಿಂಗಳಲ್ಲಿ ತಂಪು, ಕುಸುಮಂಗಳಲ್ಲಿ ಕಂಪು ಬೆರೆದಂತೆ ನನ್ನಲ್ಲಿ ಅವಳು ಅವಿನಾಭಾವ ಸಂಬಂಧದಿಂದ ವಾಸಿಸಿದ್ದಾಳೆ. ಎಂದೇ "ನನ್ನ ಪ್ರಕೃತಿ" ಎಂದು ವರ್ಣಿಸಿದ್ದೇನೆ. ನಾನು ಪತಿ; ಅವಳು ಪತಿಪರಾಯಣೆಯಾದ ಸಹಧರ್ಮಿಣಿ! ಸಮಯ ಸನ್ನಿಹಿತವಾದಾಗ, ನಾನು ಅವಳ ಗರ್ಭದಲ್ಲಿ ಜೀವಾತ್ಮ ಎಂಬ ಬೀಜಗಳನ್ನು ಪ್ರತಿಷ್ಠಾಪಿಸುತ್ತೇನೆ. ಆ ಜೀವ ಬೀಜಗಳು ವರ್ಧಿಸಿ ಪಕೃತಿ-ಗರ್ಭದಿಂದ ಹೊರ ಹೊಮ್ಮುತ್ತವೆ. ವಿಶ್ವದಲ್ಲಿ ಬಾಳಿದ, ಬಾಳುತ್ತಿರುವ ಸಕಲ ಭೂತಗಳು ಅವಳ ಮಹಾನ್ ಗರ್ಭದಿಂದಲೇ ಹೊರಬಂದವುಗಳೆಂದು ಖಚಿತವಾಗಿ ತಿಳಿದುಕೊ."

ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥೪॥

ಅರ್ಥ:– ಸರ್ವಯೋನಿಷು= ಸರ್ವಯೋನಿಗಳಲ್ಲಿ ಯಾಃ= ಯಾವ ಮೂರ್ತಯಃ ಸಂಭವಂತಿ= ಶರೀರಗಳು ಹುಟ್ಟುತ್ತಿರುವವೋ ತಾಸಾಂ= ಅವುಗಳ ಯೋನಿಃ= ಯೋನಿಯು ಮಹತ್ ಬ್ರಹ್ಮ= ಮಹತ್ತಾದ ಪ್ರಕೃತಿ. ಅಹಂ= ನಾನು ಬೀಜಪ್ರದಃ= ಬೀಜಪ್ರದನಾದ ಪಿತಾ= ತಂದೆ.

ವಿವರಣೆ:– ಭಗವಂತ:– "ಧರ್ಮಾನುಗ, ಜಗತ್ತಿನಲ್ಲಿ ದೇವ ಪಿತೃ ನಾಗ ಯಕ್ಷ ರಾಕ್ಷಸ ಕಿನ್ನರ ಕಿಂಪುರುಷ ಪಿಂಡಜ ಅಂಡಜ ಸ್ವೇದಜ ಉದ್ಭಿಜ ಎಂಬ ಅಸಂಖ್ಯ ಯೋನಿಗಳಿವೆ. ಅವುಗಳಿಂದ ಪ್ರತಿದಿನ ಲಕ್ಷಾಂತರ ಕೋಟ್ಯಂತರ ದೇಹಗಳು ಹುಟ್ಟುತ್ತವೆ. ಆ ಎಲ್ಲ ದೇಹಗಳ ಮಹಾ ಯೋನಿಯು ಪ್ರಕೃತಿ! ಆಯಾ ದೇಹಗಳಲ್ಲಿ ಜೀವಚೇತನಾಂಶವನ್ನು ನೆಲೆಗೊಳಿಸುವ ನಾನು ಪಿತ.

(೧) ಪ್ರಕೃತಿ – ಪರಮಾತ್ಮ:– ಪ್ರಕೃತಿಯು ಪ್ರಭೆ, ಪರಮಾತ್ಮನು ಚೈತನ್ಯಭಾನು. ಆಕೆ ಮಾತರಿಶ್ವಾ, ಅವನು ಆಕಾಶ. ಅವಳು ಕ್ಷೇತ್ರ, ಅವನು ಕ್ಷೇತ್ರಪಾಲ. ಅವರಿಬ್ಬರಲ್ಲಿ ಅಳಿಯದ ಸಂಬಂಧ! ಪ್ರಕೃತಿಯು ಅಸಂಖ್ಯ ಮುಖ ದಿಂದ ವಿಕಾಸಗೊಳ್ಳುತ್ತಾಳೆ; ಪರಮಾತ್ಮನು ಪೂರ್ಣನಾದುದರಿಂದ ಆ ವಿಕಾಸದ ಲ್ಲೆಲ್ಲ ಅಭಿವ್ಯಕ್ತನಾಗುತ್ತಾನೆ.

(೨) ವಿಕಾಸ:– ದೇವನ ಪವಿತ್ರ ಸಾನಿಧ್ಯದಲ್ಲಿ ಪ್ರಕೃತಿಮಾತೆಯು ವಿಕಾಸ ಗೊಳ್ಳುತ್ತಾಳೆ; ಅವಳ ಗರ್ಭದಲ್ಲಿದ್ದ ಸತ್ವಗುಣವು ಅರಳಿ ಮಹತ್ತತ್ತ್ವವಾಗು ತ್ತದೆ; ರಜೋಗುಣವು ಅರಳಿ ಅಹಂಕಾರ ತತ್ತ್ವವು ಉದಿಸುತ್ತದೆ; ತಮೋ ಗುಣವು ಅರಳಿ ತನ್ಮಾತ್ರೆಗಳು ಕಾಣಬರುತ್ತವೆ! ಈ ಮೂರು ತತ್ತ್ವಗಳು ಇನ್ನಷ್ಟು ಸ್ಥೂಲವಾದರೆ ಕ್ರಮವಾಗಿ ಅಂತಃಕರಣಗಳು, ಇಂದ್ರಿಯಗಳು ಹಾಗು ಭೂತ ವಿಷಯ ಮತ್ತು ದೇಹಗಳು ಸೃಷ್ಟವಾಗುತ್ತವೆ. ಇಂತು ಮಹದಾದಿ ದೇಹಾಂತ್ಯವಾದ ಸಕಲ ವಸ್ತುಗಳು ಗುಣಕ್ರಿಯಾಸಂಯುತ!

ಪರಮಾತ್ಮನು ಪರಿಪೂರ್ಣನು; ಚೈತನ್ಯಘನ; ಅನಾದ್ಯನಂತ. ಅವನ ವಿಮಲ ಚೇತನವು ಮಹದಾದಿ ವಿಕಸಿತ ತತ್ತ್ವಗಳಲ್ಲೆಲ್ಲ ಪ್ರತಿಫಲಿಸುತ್ತದೆ; ಆ ಪ್ರತಿಫಲನಗಳಿಗೆ ವಿಭಿನ್ನ ನಾಮಗಳಿವೆ. ಉದಾ: ಮಹತ್ತಿನಲ್ಲಿ ಮೂಡಿದ ಚೇತನವು ಹಿರಣ್ಯಗರ್ಭ. ಅಹಂಕಾರದಲ್ಲಿ ಮೂಡಿದ ಚೇತನವು ಸೂತ್ರಾತ್ಮ. ತನ್ಮಾತ್ರೆಗಳಲ್ಲಿ ಮೂಡಿದ ಚೇತನವು ವಿರಾಡಾತ್ಮ. ಅಂತಃಕರಣದಲ್ಲಿ ಮೂಡಿದ ಚೇತನವು ಜೀವಾತ್ಮ. ಜಡ ವಸ್ತುಗಳಲ್ಲಿ ಮೂಡಿದ ಚೇತನವೇ ಜಡಾತ್ಮ.

ಇಂತು ವಿಶ್ವವೆಲ್ಲ ಪ್ರಕೃತಿ ಪುರುಷರ ಲೀಲಾಸೃಷ್ಟಿ! ಅಲ್ಲಿರುವ ಪ್ರತಿಜೀವಿ ಪರಮಾತ್ಮ! ಅಲ್ಲಿರುವ ಪ್ರತಿ ಅಣುವು ಪ್ರಕೃತಿ! ಒಳಿತು ಕೆಡುಕು, ಬಂಧನ ಮೋಚನ ಏನೆಲ್ಲವೂ ಬರಿ ಆಟ!

ಸಂಬಂಧ:- ಪ್ರಕೃತಿಯ ಗುಣಗಳಾದ ಸತ್ವ ರಜ ತಮಗಳ ಕಾರ್ಯವೇನು?

ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥೫॥

ಅರ್ಥ:– ಸತ್ವಂ ರಜಃ ತಮಃ ಇತಿ=ಸತ್ವ ರಜಸ್ಸು ತಮಸ್ಸು ಎಂಬ ಪ್ರಕೃತಿ ಸಂಭವಾಃ=ಪ್ರಕೃತಿಯಿಂದುಂಟಾದ ಗುಣಾಃ=ಗುಣಗಳು ಅವ್ಯಯಂ= ಅವ್ಯಯನಾದ ದೇಹಿನಂ =ಆತ್ಮನನ್ನು ದೇಹೇ ನಿಬಧ್ನಂತಿ=ದೇಹದಲ್ಲಿ ಬಂಧಿಸುತ್ತವೆ.

ವಿವರಣ:– (೧) ಜ್ಞಾನಾಭಿವ್ಯಕ್ತಿಕರವಾದ ಸತ್ವ, ಕ್ರಿಯಾರೂಪವಾದ ರಜ ಹಾಗು ಜಡತತ್ತ್ವವಾದ ತಮ – ಈ ಮೂರು ವಿಶ್ವರಚನಾಶೀಲವಾದ ಗುಣ ಗಳು ಪ್ರಕೃತಿಯ ಮಹಾನ್ ಗರ್ಭದಿಂದ ತಲೆದೋರಿವೆ; ದೇಹ ಇಂದ್ರಿಯ ಮನ ಬುದ್ಧಿ ಅಹಂಕಾರ ಹಾಗು ಬಾಹ್ಯ ವಿಷಯಗಳನ್ನೆಲ್ಲ ಆ ಗುಣಗಳೇ ನಿರ್ಮಿಸಿ

(೨) ದೇಹಿನ್:- ಪ್ರಾಕೃತಿಕ ಅಥವಾ ಗುಣಾತ್ಮಕ ದೇಹದಲ್ಲಿ ಪ್ರತಿಫಲಿಸಿದ ಚೈತನ್ಯಪುರುಷನೇ ಆತ್ಮ. ಅವನು ದೇವಾಂಶನಾದುದರಿಂದ ಅವ್ಯಯ, ನಿತ್ಯ ಅವಿಕಾರಿ! ಸತ್ವಾದಿ ಗುಣಗಳು ಸುಂದರವಾದ ಮನೋರಮವಾದ ಅಸಂಖ್ಯ ಭೋಗಗಳನ್ನು ನಿರ್ಮಿಸಿ ಆ ಆತ್ಮನ ಸುತ್ತ ಮೋಹಕ ಬಲೆಯನ್ನು ಹೆಣೆದು ಅವನನ್ನು ದೇಹದಲ್ಲಿ ಬಂಧಿಸಿವೆ. ಅವನ ಮೂಲ ಪ್ರಜ್ಞೆಯನ್ನು ಮರೆಮಾಡಿ ದೇಹವೇ ತಾನು ಎನ್ನುವ ಭ್ರಮೆಯನ್ನುಂಟುಮಾಡಿವೆ.

ಇಂತು ಗುಣಗಳ ಸಂಗದಿಂದ ಭ್ರಮಿತನಾದ ದೇಹಿಯು ಬದ್ಧನಾದ. ಸಾರಾಸಾರ ವಿವೇಕ ಕಳೆದುಕೊಂಡ. ಸತಿಸುತಾದಿಯುಕ್ತ ಪ್ರಪಂಚದಲ್ಲಿ ಮುಳುಗಿಬಿಟ್ಟ. ತಾನಾರು? ಎಂದು ನೋಡಲು ಒಂದು ನಿಮಿಷದ ಬಿಡುವಿಲ್ಲ. ಅವನ ಬಾಲ್ಯಕಾಲವೆಲ್ಲ ಕ್ರೀಡೆಗೆ, ತಾರುಣ್ಯಸಮಯವು ಕಾಮುಕ್ಕೆ, ಮುಪ್ಪಿನ ಅವಧಿಯು ಚಿಂತೆಗೆ ಕಳೆದು ಹೋಗುತ್ತಿದೆ. ಸಾಮಾನ್ಯ ಜೀವಾತ್ಮನಷ್ಟೇ ಹೀಗೆಂದಲ್ಲ, ಪಂಡಿತರಾದ ಮಹಾನುಭಾವರ ಪರಿಸ್ಥಿತಿಯೂ ಇದೆ. ಅವರಲ್ಲಿ ಕೆಲವರಿಗೆ ವಿದ್ಯೆಯ ಗರ್ವ. ಕೆಲವರಿಗೆ ಸರಸ ಮಾತಿನ ಆಢ್ಯತೆ. ಕೆಲವರಿಗೆ ಪೂಜ್ಯತೆ ಗೌರವ ಕೀರ್ತಿಗಳ ಲಾಲಸೆ. ಬ್ರಹ್ಮಾದಿ ದೇವತೆಗಳು ಕೂಡ ಕಾಮಾದಿಗಳಿಗೆ ದಾಸರು. ತ್ರಿಗುಣಗಳ ಲೀಲೆ ಹೇಳತೀರದು. ಮೋಹಕವಾದ ಈ ಗುಣತ್ರಯಕ್ಕೆ ಮಾಯೆ ಎಂಬ ನಾಮ.

ಸಂಬಂಧ:- ಮುಂದಿನ ಮೂರು ಮಂತ್ರಗಳಲ್ಲಿ ಗುಣಗಳ ಸ್ವರೂಪ ವಿವರಣೆ ಇದೆ.

ತತ್ರ ಸತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಮ್ ।
ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥೬॥

ಅರ್ಥ:- ತತ್ರ= ಅವುಗಳಲ್ಲಿ ಸತ್ವಂ=ಸತ್ವಗುಣವು ನಿರ್ಮಲತ್ವಾತ್= ನಿರ್ಮಲವಾದುದರಿಂದ ಪ್ರಕಾಶಕಂ=ಪ್ರಕಾಶಕವೂ ಅನಾಮಯಂ= ಅನಾಮಯವೂ (ಶಾಂತರೂಪವೂ) ಆಗಿದೆ. ಸುಖಸಂಗೇನ= (ಅದು ಜೀವನನ್ನು) ಸುಖಸಂಗದಿಂದ ಮತ್ತು ಜ್ಞಾನಸಂಗೇನ= ಜ್ಞಾನಸಂಗದಿಂದ ಬಧ್ನಾತಿ= ಬಂಧಿಸುತ್ತದೆ.

ವಿವರಣೆ:- (೧) ಸತ್ವದ ಸ್ವರೂಪ:- ಈ ಗುಣವು ಸ್ಫಟಿಕದಂತೆ ನಿರ್ಮಲ, ಮೋಹ ದುಃಖ ಎಂಬ ಮಾಲಿನ್ಯರಹಿತ; ಬಾಹ್ಯಾಂತರ ವಸ್ತುಗಳ ಪ್ರಕಾಶಕ; ಕೊನೆಯದಾಗಿ ಪ್ರಶಾಂತ!

(೨) ಸತ್ವವು ಸದಾ ಸಾಧಕವೇ ಆದೀತೆಂದಲ್ಲ. ಆತ್ಮಮುಖವಾಗದೆ ಅನಾತ್ಮವಸ್ತುಮುಖವಾದರೆ ಅದು ವಿಷಯಸುಖ ಹಾಗು ವಿಷಯ-ಜ್ಞಾನ ಎಂಬೆರಡು ಸೂಕ್ಷ್ಮ ಪಾಶಗಳಿಂದ ಜೀವನನ್ನು ಸಂಸಾರದಲ್ಲಿ ಕಟ್ಟಿ ಹಾಕುತ್ತದೆ, ಗೂಟಕ್ಕೆ ದನ ಕಟ್ಟಿಹಾಕಿದಂತೆ! ಜಗತ್ತಿನ ಬಹುಜನ ಜಾಣರು ಸುಶಿಕ್ಷಿತರು ನಿಗ್ರಹಿಗಳು ಉಪಹಾರಾದಿಗಳಲ್ಲಿ ತನ್ಮಯರಾಗಿದ್ದಾರೆ. ಧನ ಯೌವನ ಪ್ರಭಾವ ಶಕ್ತಿ ವಾಕ್ಚಾತುರ್ಯ ಸೌಂದರ್ಯ ಈ ಷಷ್ಟವಿಧ ಪ್ರಪಂಚ ಪ್ರವಾಹಗಳಲ್ಲಿ ಮುಳುಗಿ

ಹೋಗಿದ್ದಾರೆ. ಸಾಂಸಾರಿಕ ಸೌಖ್ಯವು ನಂಜು ಬೆರಸಿದ ಭೋಜನ, ಸಾಂಸಾರಿಕ ಜ್ಞಾನವು ಅಜ್ಞಾನದ ಪ್ರತಿರೂಪ! ಎಂಬ ಪ್ರಜ್ಞೆಯನ್ನೇ ಬಲ್ಲಿದರೆನ್ನುವವರು ಕಳೆದುಕೊಂಡಿದ್ದಾರೆ. ಸಕಲೈಶ್ವರ್ಯವುಳ್ಳ ಸಿರಿವಂತರು ಸದಾ ದುಃಖಿಸುತ್ತಾರೆ, ಚಿಂತಿಸುತ್ತಾರೆ. ಸಕಲ ಶಾಸ್ತ್ರ ಕೋವಿದರಾದ ಪಂಡಿತರು ಗರ್ವ ದರ್ಪಗಳಿಂದ ಮಲೆತಿದ್ದಾರೆ. ಸಾಮಾನ್ಯ ನೀತಿ-ಆಚಾರಗಳೂ ಅವರಿಗೆ ಅಪಥ್ಯವಾಗಿವೆ. ಅವರ ಮನಸ್ಸು ಹಣದ ಮೇಲೆ, ಅವರ ಯತ್ನ ಮಾನ ಕೀರ್ತಿಗಳಿಗಾಗಿ! ಇಂತು ಸತ್ವವು ಅಧೋಮುಖವಾದಾಗ ಜಗತ್ತನ್ನೇ ವಿಷಯಸ್ತಂಭಗಳಿಗೆ ಕಟ್ಟಿಬಿಡುತ್ತದೆ. ಅದನ್ನು ಊರ್ಧ್ವಮುಖಗೊಳಿಸಿದರೆ ದೇವಜ್ಞಾನ ದೇವಸೌಖ್ಯಗಳನ್ನಿತ್ತ ಜೀವ ನನ್ನು ಸಂಸಾರದಿಂದ ಮುಕ್ತಮಾಡುತ್ತದೆ.

ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾ ಸಂಗಸಮುದ್ಭವಮ್ ।
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥೭॥

**ಅರ್ಥ:–** ರಜೋ ರಾಗಾತ್ಮಕಂ= ರಜೋಗುಣವು ರಾಗಾತ್ಮಕ (ರಾಗೋತ್ಪಾದಕ) ವೆಂದು ವಿದ್ಧಿ= ತಿಳಿ. ತೃಷ್ಣಾ ಸಂಗ ಸಮುದ್ಭವಂ= (ಅದು) ತೃಷ್ಣೆ ಮತ್ತು ಸಂಗಗಳನ್ನು ಉಂಟುಮಾಡುತ್ತದೆ. ತತ್=ಅದು ಕರ್ಮ ಸಂಗೇನ=ಕರ್ಮಸಂಗದಿಂದ ದೇಹಿನಂ=ಆತ್ಮನನ್ನು ನಿಬಧ್ನಾತಿ= ಬಂಧಿಸುತ್ತದೆ.

**ವಿವರಣೆ:–**(೧)ರಜೋಗುಣದ ಸ್ವರೂಪ– ಇದು ಜ್ಞಾನ-ಅಜ್ಞಾನಗಳ, ಪ್ರಕಾಶ-ಅಂಧಕಾರಗಳ, ಸುಖ-ದುಃಖಗಳ ಸಮ್ಮಿಶ್ರ ತತ್ತ್ವ. ಇದು ರಾಗಾತ್ಮಕ ಅಸತ್ಯ ವಿಷಯಗಳೇ ಸತ್ಯ-ಸುಖಾತ್ಮಕ ಎಂಬ ಭಾವನೆ, ತೃಷ್ಣಾ ಸಂಗ ಸಮುದ್ಭ ವಕಾರಿ; ಹೆಚ್ಚು ಹೆಚ್ಚು ವಿಷಯಗಳಿಗಾಗಿ ಆಶೆ ಪಡುವದು ತೃಷ್ಣೆ. ತನ್ನ ಆಧೀನ ದಲ್ಲಿರುವ ಸಂಪದವನ್ನು ಪ್ರಾಣ ಹೋದರೂ ಬಿಟ್ಟುಕೊಡಲಾರೆನೆಂಬ ಛಲವು ಸಂಗ. ಈ ಎರಡು ಗುಣಗಳ ಜನನಿ ರಜಸ್ಸು.

(೨)ರಜೋಗಣವು ವಿಷಯ ಪ್ರಾಪ್ತವಾದ ಕರ್ಮಾಸಕ್ತಿರೂಪ ಪಾಶದಿಂದ ಜೀವಾತ್ಮನನ್ನು ಭವಸ್ತಂಭಕ್ಕೆ ಬಂಧಿಸುತ್ತದೆ. ಜಗತ್ತೇ ರಜೋಗುಣದ ನೃತ್ಯಾಂ ಗಣ ಮಾನವಕುಲವೆಲ್ಲ ಅದರ ಪಾದಾಘಾತಕ್ಕೆ ಸಿಕ್ಕು ತಳಮಳಿಸುತ್ತಿದೆ. ನ್ಯಾಯ ಅನ್ಯಾಯ, ನೀತಿ ಅನೀತಿಗಳನ್ನು ಲೆಕ್ಕಿಸದೆ ಬಹು ಜನರು ಧನ ಸಂಗ್ರಹದಲ್ಲಿ ಅಧಿಕಾರ ಸ್ಪರ್ಧೆಯಲ್ಲಿ ತೊಡಗಿದ್ದಾರೆ; ಸುಟ್ಟರೂ ಸುಡದಷ್ಟು ಧನವಿದ್ದರೂ ಬಡವರ ರಕ್ತಹೀರುವ ಆಸುರೀ ಕೃತ್ಯದಲ್ಲಿ ತಲ್ಲೀನರಾಗಿದ್ದಾರೆ. ಧರ್ಮದ ಹೆಸರಿ ನಲ್ಲಿ ನರಬಲಿ, ಪಶುಬಲಿ, ಧಾನ್ಯನಾಶ ಏನೆಲ್ಲ ನಡೆಯುತ್ತಿದೆ. ಬಡವರ ಕಾಸು ಕಾಸನ್ನು ದಕ್ಷಿಣೆ ಪಡೆದ ಪಡೆಯುತ್ತಿರುವ ಧಾರ್ಮಿಕರು ವಿಲಾಸೀ ಜೀವನ ಸಾಗಿ ಸುತ್ತಿದ್ದಾರೆ. ಅವರು ಮಾಡುವ ಜಪ ತಪ ಜ್ಞಾನ ದಾನ ಧ್ಯಾನ ವಚನ ವಾಚನ ಎಲ್ಲ ಕಾರ್ಯಗಳ ಹಿಂದೆಯೂ ಸ್ವಾರ್ಥ ತಾಂಡವಿಸುತ್ತಿದೆ. ಇದೆಲ್ಲ ರಜದ ಕ್ರೀಡೆ!

ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।

ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥೮॥

**ಅರ್ಥ:-** ೨ =ಆದರೆ, ತಮಃ ಅಜ್ಞಾನಜಂ= ತಮೋಗುಣವು ಅಜ್ಞಾನದಿಂದ ಹುಟ್ಟಿದುದೆಂದೂ, ಸರ್ವದೇಹಿನಾಂ= ಸರ್ವ ಪ್ರಾಣಿಗಳ ಕುರಿತು ಮೋಹನಂ= ಮೋಹಿತಗೊಳಿಸುವದೆಂದೂ, ವಿದ್ಧಿ= ತಿಳಿ, ತತ್ =ಅದು. ಪ್ರಮಾದಾಲಸ್ಯ ನಿದ್ರಾಭಿಃ =ಪ್ರಮಾದ ಆಲಸ್ಯ ನಿದ್ರೆಗಳಿಂದ ಆತ್ಮನನ್ನು ನಿಬಧ್ನಾತಿ =ಬಂಧಿಸುತ್ತದೆ.

**ವಿವರಣೆ:-** (೧)ತಮದ ಸ್ವರೂಪ- ಸತ್ಯವಸ್ತುವಿನ ಅರಿವಿಲ್ಲದಿರುವಿಕೆಯು ಅಜ್ಞಾನ; ಅಜ್ಞಾನದ ಒಂದುರೂಪ ತಮಸ್ಸು. ಅಜ್ಞಾನವು ರಾತ್ರಿ, ತಮಸ್ಸು ಕತ್ತಲೆ. ಸರ್ವಪ್ರಾಣಿಗಳನ್ನು ಮೋಹಪಂಕದಲ್ಲಿ ದೂಡುವ ಅದ್ಭುತ ಸಾಮರ್ಥ್ಯ ಇದಕ್ಕಿದೆ.

(೨) ತಮೋಗುಣವು ವಿವೇಕ,ವಿಮರ್ಶೆ ಮುಂತಾದ ಬೌದ್ಧಿಕ ಶಕ್ತಿಗಳ ಮೇಲೆ ಗಾಢವಾಗಿ ಆಚ್ಛಾದನವಾಗುತ್ತದೆ. ಪ್ರಮಾದ–ಕಾರ್ಯಾಂತರಾಸಕ್ತಿಯಿಂದ ಇಚ್ಛಿತ ಕಾರ್ಯ ಮಾಡದಿರುವದು. ಆಲಸ್ಯ–ನಿಷ್ಕ್ರಿಯ ಪ್ರವೃತ್ತಿ. ನಿದ್ರೆ– ಜಡ ಅವಸ್ಥೆ. ಈ ಮೂರು ಪಾಶಗಳಿಂದ ತಮವು ಜೀವಾತ್ಮನನ್ನು ಬಂಧಿಸುತ್ತದೆ, ಪ್ರಪಂಚಕ್ಕೆ !

ತಾಮಸಿಕ ಜನಾಂಗವು ಪ್ರಜ್ಞಾಹೀನ, ಪ್ರಮತ್ತ. ಇವರಲ್ಲಿರುವ ದೈಹಿಕ ಬೌದ್ಧಿಕ ಸಾಮರ್ಥ್ಯಗಳು ನಿರರ್ಥಕ. ದುಡಿಮೆ ಆಲೋಚನೆಗಳೆಂದರೆ ಇವರಿಗೆ ಬೇಡ. ಧ್ಯಾನ, ಉಪಾಸನೆ, ಅರ್ಚನೆ ಯಾವುದರಲ್ಲೂ ಅಭಿರುಚಿ ಇಲ್ಲದವರು. ಇವರು ಕಣ್ಣಿದ್ದೂ ಕುರುಡರು; ಬಲವಿದ್ದೂ ನಿರ್ಬಲರು; ಬದುಕಿಯೂ ಭೂಭಾರರು.

**ತಾತ್ಪರ್ಯ:–** ಜೀವಾತ್ಮನು ಅನಂತ ಶಾಂತಿಯನ್ನು ಅನುಭವಿಸಬೇಕಾದರೆ ಸತ್ವ ರಜ ತಮ ಈ ಮೂರೂ ಗುಣಗಳ ಅಭಿಮಾನ ನೀಗಬೇಕು. ದೇವಮಂಡಲದಲ್ಲಿ ಹೆಜ್ಜೆ ಇಡಬೇಕು.

"ಕಣ್ಣಿಂಗೆ ಸತ್ವರಜತಮವೆಂಬ ತಿಮಿರ ಕವಿದು ಅಜ್ಞಾನವಶನಾದಲ್ಲಿ ಸದ್ಗುರುವನುಪಧಾವಿಸಿ ಔಷಧಿಯ ಬೇಡಲೊಡನೆ ಶಿವಜ್ಞಾನವೆಂಬ ಅಂಜನವನೆಚ್ಚಿ ಎನ್ನ ಕಣ್ಣ ಹುಸುಕಿಹ ಅಜ್ಞಾನ ಕಾಳಿಕೆಯ ಬೇರ್ಪಡಿಸಿ ತನ್ನ ಪಾದವನು ಅರುಹಿಕೊಂಡನಯ್ಯಾ ಎನ್ನಕಪಿಲಸಿದ್ಧ ಮಲ್ಲಿಕಾರ್ಜುನ."

**ಸಂಬಂಧ:–** ತ್ರಿಗುಣಗಳ ಕಾರ್ಯಕುರಿತು ಐದು ಮಂತ್ರಗಳಲ್ಲಿ ಹೇಳಲಾಗಿದೆ.

ಸತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ । ॥೯॥
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ

**ಅರ್ಥ:–** ಸತ್ವಂ= ಸತ್ವಗುಣವು ಸುಖೇ= ಸುಖದಲ್ಲಿ ಸಂಜಯತಿ= ಸಂಗವನ್ನುಂಟುಮಾಡುತ್ತದೆ. ( ಸಂಗ = ಪ್ರೇಮ. ) ಉತ= ಮತ್ತು ರಜಃ ರಜೋಗುಣವು ಕರ್ಮಣಿ ಕರ್ಮದಲ್ಲಿ (ಪ್ರೀತಿಯನ್ನು ಉಂಟುಮಾಡುತ್ತದೆ.) ತು= ಆದರೆ ತಮಃ= ತಮೋಗು

ಣವು ಜ್ಞಾನಂ= (ಆತ್ಮ)ಜ್ಞಾನವನ್ನು ಆವೃತ್ಯ =ಆವರಿಸಿ ಪ್ರಮಾದೇ= ಪ್ರಮಾದದಲ್ಲಿ ಸಂಜಯತಿ= (ರತಿಯನ್ನು ) ಹುಟ್ಟಿಸುತ್ತದೆ.

ವಿವರಣೆ:-(೧)ಸತ್ವಗುಣದ ಕಾರ್ಯ:-ಈಗುಣವು ಜೀವಾತ್ಮನಲ್ಲಿ ಸುಖದ ಭಾವನೆಯನ್ನು ಹುಟ್ಟಿಸುತ್ತದೆ; ಧೈರ್ಯ ಸ್ಥೈರ್ಯ ಸಂಯಮಗಳನ್ನು ನೆಲೆ ಗೊಳಿಸುತ್ತದೆ. ಎಂತಲೇ, ಸಾತ್ವಿಕ ಮನುಷ್ಯನು ಸಂಕಷ್ಟಗಳನ್ನು ಪ್ರಸನ್ನಭಾವ ದಿಂದ ಎದುರಿಸುತ್ತಾನೆ. ದುಃಖ ಶೋಕ ಸಂತಾಪಗಳ ಮಧ್ಯೆ ಸಮಾಧಾನಿ ಯಾಗಿ ವರ್ತಿಸುತ್ತಾನೆ. ಸಂತರ ಜೀವನವು ನಿದರ್ಶನವಾಗಿದೆ, ಈ ವಿಷಯದಲ್ಲಿ. ಉದಾ: ಹರಿಶ್ಚಂದ್ರ. ರಾಜ್ಯವನ್ನು ದಾನವಿತ್ತ. ಮಡದಿಯನ್ನು ನಾಲ್ಕುಕಾಸಿಗೆ ಮಾರಿಕೊಂಡ. ಚಾಂಡಾಲನ ಆಳಾಗಿ ಸ್ಮಶಾನ ಕಾಯ್ದ.ಅವನು ಪಟ್ಟ ಬವಣೆಯ ಕಥೆ ಕೇಳಿದರೆ ಹೃದಯವೇ ನೀರಾಗಿ ಹರಿಯುತ್ತದೆ! ಸತ್ಯ ಪಕ್ಷಪಾತಿಯಾದ ಅವನು ಅಷ್ಟೆಲ್ಲ ಸಂಕಟಗಳನ್ನು ಸಮಾಧಾನದಿಂದ ಅನುಭವಿಸಿದ. ತುಕಾರಾ ಮನು ಕೆಲವೇ ನೂರು ವರುಷಗಳ ಹಿಂದೆ ಬದುಕಿದ್ದ ಸಂತ. ಮನೆಯಲ್ಲಿ ಒಂದು ಕಾಳು ಇಲ್ಲ; ಹೆಂಡತಿ ಕಠೋರ ಭಾಷಿಣಿ! ಎದುರಿನಲ್ಲಿಯೇ ಸಿಕ್ಕಂತೆ ಬೈಯುವ ನೆರೆಯ ಜನ, ಇಷ್ಟು ಆತಂಕಗಳಿದ್ದರೂ ಸಂತನು ದೇವ ಧ್ಯಾನದಲ್ಲಿ ತಲ್ಲೀನ ನಾಗುತ್ತಿದ್ದ. ಬಸವನ ಬದುಕೂ ಹಾಗೆಯೇ. ಸಹಸಚಿವರ ಅಸೂಯೆ, ರಾಜನ ಸಂದೇಹ, ಅನೇಕ ಜಂಗಮರ ಅಟಾಟೋಪ, ಗುರುಗಳ ಕ್ರೋಧ, ಸಹಶರಣರ ಟೀಕೆ ಏನಿದ್ದರೂ ಅವನು ಶಾಂತನಾಗಿಯೇ ಉಳಿದ. ಆತನ ಒಂದು ವಚನವು ಈ ಸಂದರ್ಭದಲ್ಲಿ ಅವಲೋಕನೀಯ.

> "ಅರ್ಥವ ಅನರ್ಥವ ಮಾಡುತಿರಲಿ. ಹುಟ್ಟಿದ ಮಕ್ಕಳ ನವಖಂಡ ಮಾಡುತಿರಲಿ. ಮುಟ್ಟುವಸ್ತ್ರೀಯ ಕಣ್ಣಮುಂದೆ ಅಭಿಮಾನಗೊಂಡು ನೆರೆಯುತಿರಲಿ. ಈತ್ರಿವಿಧವು ಹೊರಗಣವು. ಇನ್ನು ಎನ್ನಂಗದ ಮೇಲೆ ಬರಲಿ.ಹಿಡಿಖಂಡವ ಕೊಯ್ಯಲಿ. ಇಕ್ಕುವಶೂಲ ಪ್ರಾಪ್ತಿಸಲಿ. ಹಾಕೊಂದೆಸೆ ಹಸ್ನೊಂದೆಸೆ ಮಾಡುತಿರಲಿ. ಮತ್ತೆಯೂ ಲಿಂಗಾರಾಧನೆ ಮಾಡುವೆ. ಜಂಗಮಾರಾಧನೆ ಮಾಡುವೆ. ಪ್ರಸಾದಕ್ಕೆ ತಪ್ಪೆ. ಈ ಭಾಷೆ ಕಿಂಚಿತ್ತು ಹುಸಿಯಾದಡೆ ನೀನಂದೇ ಮೂಗಕೊಯ್ಯ. ಕೂಡಲ ಸಂಗಮ ದೇವ."

(೨) ರಜೋಗುಣದ ಕಾರ್ಯ : ಈ ಗುಣವು ಜೀವನಲ್ಲಿ ಕಾರ್ಯಶಕ್ತಿ ಯನ್ನು ಹುಟ್ಟಿಸುತ್ತದೆ. ಮನುಷ್ಯ ಎಷ್ಟೇ ಜಾಣನಿದ್ದರೂ ಸರಿ, ಅವನಲ್ಲಿ ಕಾಮಾ ದಿಗಳ ಕಾವ ಹೆಚ್ಚಿಸಿ ಕಲಹಾದಿ ಕರ್ಮಗಳಲ್ಲಿ ತೊಡಗಿಸುತ್ತದೆ. "ನೂರನೋದಿ ನೂರ ಕೇಳಿದರೇನಯ್ಯಾ, ಆಶೆ ಹರಿಯದು ರೋಷ ಬಿಡದು." ಪಂಡಿತ ಪಂಡಿತ ರೆಲ್ಲ ರಜದ ಗೊಂಬೆಗಳಾಗಿದ್ದಾರೆ. ಧರ್ಮ ಪೀಠಗಳಲ್ಲಿ, ಆಶ್ರಮ ತಪೋವನಗ ಳಲ್ಲಿ, ವಿದ್ಯಾ ಮಂದಿರಗಳಲ್ಲಿ ಹರಡಿರುವ ಮನಸ್ತಾಪವೇ ಆ ಮಾತಿಗೆ ತಕ್ಕ ನಿದ ರ್ಶನ. ಗುರು-ಗುರುಗಳ ಮಧ್ಯೆ. ಗುರು ಶಿಷ್ಯರಮಧ್ಯೆ, ಸ್ವಾಮಿ ಸ್ವಾಮಿಗಳ ಮಧ್ಯೆ ಕೋವಿದ ಕೋವಿದರ ಮಧ್ಯೆ ತಿಳುವಳಿಕೆಯೇ ಇಲ್ಲವಾಗಿದೆ. ಇನ್ನು ಸಾಮಾನ್ಯರ ಪಾಡೇನು? ಅವರಂತು ಕಾಮ ಕ್ರೋಧಗಳಿನಾಗಿ ಬದುಕನ್ನೇ ಬಲಿ ಈಯಲು

ಸಿದ್ಧರು! "ಹಗಲು ಹಸಿವಿಗೆ, ಇರುಳು ನಿದ್ರೆಗೆ ಹಾಗು ಉಳಿದಾದ ಹೊತ್ತೆಲ್ಲ ಅಶನ ವ್ಯಸನಕ್ಕೆ" ಕುದಿಯುವ ಅವರಿಗೆ ಎಲ್ಲಿ ವಿಶ್ರಾಮ? ಎಲ್ಲಿ ಮನಶ್ಶಾಂತಿ?

(೩) ತಮೋಗುಣದ ಕಾರ್ಯ:– ಇದು ಜೀವನನ್ನು ಮೋಹಾಂಧಕಾರದಲ್ಲಿ ನೂಕುವದು. ದೀರ್ಘಕಾಲದಿಂದ ಸಂಪಾದಿಸಿದ ಆತ್ಮವಿದ್ಯೆಯನ್ನು ಸಹಜವಾಗಿ ಮರೆಮಾಡುವ ಬಲ ಇದರಲ್ಲಿದೆ. ನ್ಯಾಯ ಅನ್ಯಾಯ. ಧರ್ಮ ಅಧರ್ಮ, ಕಾರ್ಯ ಅಕಾರ್ಯಗಳ ಪ್ರಜ್ಞೆಯನ್ನೇ ಮಂಕುಗೊಳಿಸುವ ಈ ಗುಣವು ಜಗದ್ವ್ಯಾಪಿ. ಲೋಕಪಾಲಕರಾಗಬೇಕಾದವರು ಲೋಕಶೋಷಕರಾದುದು, ಧರ್ಮಪ್ರತಿಷ್ಠಾಪಕರಾಗಬೇಕಾದವರು ಅಧರ್ಮಪೋಷಕರಾದುದು, ಆತ್ಮತತ್ತ್ವಪ್ರಚಾರಕರಾಗಬೇಕಾದವರು ಅನಾತ್ಮವಿಷಯವ್ಯಾಮೋಹಿಗಳಾದುದು ತಮದ ಪ್ರಭಾವ! ವೇದವಿದನಾದ ರಾವಣ ಪರಸ್ತ್ರೀ ಅಪಹರಣ ಮಾಡಿದ. ದೇವತೆಗಳ ಒಡೆಯನಾದ ಇಂದ್ರನು ಅಹಲ್ಯೆಯ ಪಾತಿವ್ರತ್ಯ ಕೆಡಿಸಿದ. ಬ್ರಹ್ಮಾದಿ ದೇವತೆಗಳು ಅನಸೂಯೆಯ ಸತ್ವಹರಣ ಮಾಡಲು ಯತ್ನಿಸಿದರು. ಮನುಷ್ಯರು ದೇವತೆಗಳು, ಅಸುರರು ಮಾಡಿದ ಸರ್ವಪ್ರಮಾದಗಳಿಗೆ ಮೂಲ ಸ್ರೋತವೆಂದರೆ ತಮಸ್ಸೇ.

ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ।
ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥೧೦॥

**ಅರ್ಥ**-ಸತ್ತ್ವಂ= ಸತ್ತ್ವಗುಣವು, ರಜಃ= ರಜೋಗುಣವನ್ನು. ಚ= ಮತ್ತು ತಮಃ= ತಮೋಗುಣವನ್ನು, ಅಭಿಭೂಯ= ತಿರಸ್ಕರಿಸಿ, ಭವತಿ= ಪ್ರಬಲವಾಗುತ್ತದೆ. ರಜಃ= ರಜೋಗುಣವು, ಸತ್ತ್ವಂ ಚ ತಮಃ ಏವ= ಸತ್ತ್ವ ಹಾಗು ತಮೋ ಗುಣಗಳನ್ನು, (ತಿರಸ್ಕರಿಸಿ ಪ್ರಬಲವಾಗುತ್ತದೆ), ತಮಃ= ತಮೋಗುಣವು. ಸತ್ತ್ವಂ ರಜಃ =ಸತ್ತ್ವ ಹಾಗು ರಜೋಗುಣಗಳನ್ನು (ತಿರಸ್ಕರಿಸಿ ಪ್ರಬಲವಾಗುತ್ತದೆ).

ವಿವರಣ:– (೧) ಸತ್ತ್ವ ರಜ ತಮ- ಇವು 'ಅವ್ಯಕ್ತ'ದ ಮೂರು ಘಟಕಗಳು. ಅತಿ ಸೂಕ್ಷ್ಮವಾದ ಅಣು ಅತಿ ಬೃಹತ್ತಾದ ಬ್ರಹ್ಮಾಂಡ ಹಾಗು ಅದೃಶ್ಯವಾದ ಮನಸ್ಸು ಎಲ್ಲ ವಸ್ತುಗಳಲ್ಲಿಯೂ ಹಾಸು-ಹೊಕ್ಕಾಗಿ ನಿಂತಿವೆ. ಮೂರರ ಸ್ವರೂಪ ಹಾಗು ಸ್ವಭಾವಗಳು ಪರಸ್ಪರ ಭಿನ್ನವಾಗಿದ್ದರೂ ಒಂದರೊಳಗೊಂದು ಬೆರೆತುಕೊಂಡಿವೆ. ಕೇವಲ ಸತ್ತ್ವ, ಕೇವಲ ರಜ, ಕೇವಲ ತಮ–ಹೀಗೆ ವಿಭಜಿಸುವದು ಸಾಧ್ಯವಿಲ್ಲ. ಸತ್ತ್ವವು ರಜತಮಗಳನ್ನೊಳಗೊಂಡಿದೆ; ರಜಸ್ಸು ಸತ್ತ್ವತಮಗಳನ್ನೊಳಗೊಂಡಿದೆ; ತಮಸ್ಸು ಸತ್ತ್ವರಜಗಳನ್ನೊಳಗೊಂಡಿದೆ. ಎಂತಲೇ ಅನುಭವಿಗಳು ಸಾತ್ವಿಕ ರಜ, ಸಾತ್ವಿಕ ತಮ, ರಾಜಸಿಕ ಸತ್ತ್ವ, ರಾಜಸಿಕ ತಮ, ತಾಮಸಿಕ ಸತ್ತ್ವ, ತಾಮಸಿಕ ರಜ ಎಂದು ಗುಣ ವಿಭಾಗ ಮಾಡುತ್ತಾರೆ.

೨) ಗುಣಗಳು ಸಾಮಾನ್ಯವಾಗಿ ವಿಕಾರಶೀಲ:ಯಾವಾಗಲೂ ಅವು ಒಂದೇ ಸ್ಥಿತಿಯಲ್ಲಿ ಇರಲಾರವು. ಕೆಲವು ಕಾಲ ರಜ ತಮಗಳನ್ನು ಕೆಳಗೆ ನೂಕಿ ಸತ್ತ್ವವು ರಾಜ್ಯವಾಳುತ್ತದೆ; ಕೆಲವು ಕಾಲ ಸತ್ತ್ವ ತಮಗಳನ್ನು ತುಳಿದು ಹಾಕಿ ರಜಸ್ಸು

ತನ್ನ ಆಧಿಪತ್ಯ ಸ್ಥಾಪಿಸುತ್ತದೆ. ಇನ್ನು ಕೆಲವು ಕಾಲ ಸತ್ವ ರಜಗಳನ್ನು ದಬ್ಬಿ ತಮಸ್ಸು ಆಳ್ವಿಕೆ ನಡೆಸುತ್ತದೆ. ಸತ್ವ ಪ್ರಧಾನವಾದಾಗ ಶಾಂತಿ, ರಜಸ್ಸು ಪ್ರಧಾನ ವಾದಾಗ ಕ್ರಿಯಾಶಕ್ತಿ, ತಮವು ಪ್ರಧಾನವಾದಾಗ ಮೋಹ ಕಾಣ ಬರುತ್ತವೆ.

(೩) ಸಾಧಕನಾದವನು ತನ್ನ ಅಂತರಂಗದಲ್ಲಿ ತಮ ಹಾಗು ರಜಸ್ಸುಗಳಿಗೆ ಆಸ್ಪದವೀಯದೆ ಸತ್ವಗುಣದ ಆಧಿಪತ್ಯ ಉಂಟಾಗುವಂತೆ ನೋಡಿಕೊಳ್ಳಬೇಕು. ಸತ್ವದ ಆಡಳಿತವು ಪ್ರಾರಂಭವಾದೊಡನೆಯೇ ಸಂಸಾರಾಸಕ್ತಿಯು ಹಿಂಗುತ್ತದೆ. ಇಂದ್ರಿಯ ವೃತ್ತಿಗಳು ಅಂತರ್ಮುಖಿಗೊಳ್ಳುತ್ತವೆ. ಮನಸ್ಸು ನಿಸ್ತರಂಗವಾಗು ತ್ತದೆ. ಧಾರಣ ಧ್ಯಾನ ವೃತ್ತಿಗಳು ಅಭಿವೃದ್ಧಿಹೊಂದುತ್ತವೆ. ಅವಿದ್ಯಾದಿ ಕ್ಲೇಶಗಳು ಪೂರ್ತಿ ಕರಗಿ ಆತ್ಮಸಾಕ್ಷಾತ್ಕಾರ ಸಮನಿಸುತ್ತದೆ. ಪರಮ ಶಾಂತಿ ಅಂಗವಿಸುತ್ತದೆ.

ಸಂಬಂಧ:- ಗುಣವೃದ್ಧಿಯ ಲಕ್ಷಣಗಳೇನು? ಮುಂದಿನ ಮೂರು ಮಂತ್ರಗಳಲ್ಲಿ ಹೇಳಲಾಗಿದೆ.

ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।
ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ವಮಿತ್ಯುತ ॥೧೧॥

ಅರ್ಥ:- ಯದಾ= ಯಾವಾಗ ಅಸ್ಮಿನ್= ಈ ದೇಹೇ= ದೇಹದಲ್ಲಿ (ಇರುವ) ಸರ್ವದ್ವಾರೇಷು= ಸರ್ವದ್ವಾರಗಳಲ್ಲಿ ಜ್ಞಾನಂ ಪ್ರಕಾಶಂ= ಜ್ಞಾನ ಪ್ರಕಾಶವು ಉಪಜಾಯತೇ = ಉಂಟಾಗುತ್ತದೆಯೋ ತದಾ= ಆಗ ಸತ್ವಂ= ಸತ್ವಗುಣವು ವಿವೃದ್ಧಂ ಇತಿ= ವಿವೃದ್ಧ ವಾಗಿದೆಯೆಂದು ವಿದ್ಯಾತ್= ತಿಳಿಯಬೇಕು.

ವಿವರಣೆ:- (೧) ಶ್ರೋತ್ರ, ತ್ವಚ, ನೇತ್ರ, ರಸನ ಹಾಗು ಘ್ರಾಣ ಈ ಐದು ದೇಹದಲ್ಲಿರುವ ಜ್ಞಾನ-ದ್ವಾರಗಳು. ಪರಮ ದೇವನ ಚೈತನ್ಯ ಪ್ರಕಾಶವು ಶ್ರೋತ್ರದಲ್ಲಿ ಪ್ರಸಾದಲಿಂಗವಾಗಿ, ತ್ವಚದಲ್ಲಿ ಜಂಗಮಲಿಂಗವಾಗಿ, ನೇತ್ರದಲ್ಲಿ ಶಿವಲಿಂಗವಾಗಿ, ರಸನದಲ್ಲಿ ಗುರುಲಿಂಗ ಹಾಗು ಘ್ರಾಣದಲ್ಲಿ ಆಚಾರಲಿಂಗವಾಗಿ ನೆಲೆಸಿದೆ. ಪ್ರಸಾದಲಿಂಗದ ಪ್ರಕಾಶದಡಿಯಲ್ಲಿ ಶಬ್ದವು ವೇದ್ಯ. ಜಂಗಮಲಿಂಗದ ಪ್ರಕಾಶದಡಿಯಲ್ಲಿ ಸ್ಪರ್ಶವು ವೇದ್ಯ. ಶಿವಲಿಂಗದ ಪ್ರಕಾಶದಡಿಯಲ್ಲಿ ರೂಪವು ವೇದ್ಯ. ಗುರುಲಿಂಗದ ಪ್ರಕಾಶದಡಿಯಲ್ಲಿ ರಸವು ವೇದ್ಯ. ಆಚಾರಲಿಂಗದ ಪ್ರಕಾಶದಡಿಯಲ್ಲಿ ಗಂಧವು ವೇದ್ಯ. ಶಬ್ದಾದಿಗಳನ್ನು ಕೇಳುವಾಗ ಆ ಚೈತನ್ಯ ಲಿಂಗಗಳ ಭಾನ ಬರುತ್ತಿದ್ದರೆ ಸತ್ವವು ಅಭಿವರ್ಧನಗೊಂಡಿದೆ ಎಂದು ಅರ್ಥ.

(೨) ಸಾತ್ವಿಕ ಮನೋಭಾವದ ಪುರುಷನಿಗೆ ಕನಕ ಕಾಮಿನಿ ಕಾಂಚನಗಳ ನೋಡಿ ಮೋಹ ಉಂಟಾಗುವದಿಲ್ಲ; ವಿಷಯಗಳಲ್ಲಿ ಅವನು ದೋಷವನ್ನೇ ಕಾಣುತ್ತಾನೆ; ವಸ್ತುಗಳೆಲ್ಲ ಕ್ಷಣಿಕ, ದುಃಖಪೂರ್ಣ, ಜಡ ಎಂಬ ಯಥಾರ್ಥ ಜ್ಞಾನ ಪಡೆಯುತ್ತಾನೆ. ಇದರ ಪರಿಣಾಮವಾಗಿ ವಿರಕ್ತಿ ಉದಿಸುತ್ತದೆ; ಅದು ಪಕ್ವಗೊಂಡಂತೆ ಮನಸ್ಸು ಆತ್ಮಧ್ಯಾನರತವಾಗುತ್ತದೆ.

ಸಿದ್ಧರು! "ಹಗಲು ಹಸಿವಿಗೆ, ಇರುಳು ನಿದ್ರೆಗೆ ಹಾಗು ಉಳಿದಾದ ಹೊತ್ತೆಲ್ಲ ಅಶನ ವ್ಯಸನಕ್ಕೆ" ಕುದಿಯುವ ಅವರಿಗೆ ಎಲ್ಲಿ ವಿಶ್ರಾಮ? ಎಲ್ಲಿ ಮನಶ್ಶಾಂತಿ?

(೩) ತಮೋಗುಣದ ಕಾರ್ಯ:- ಇದು ಜೀವನನ್ನು ಮೋಹಾಂಧಕಾರದಲ್ಲಿ ನೂಕುವದು. ದೀರ್ಘಕಾಲದಿಂದ ಸಂಪಾದಿಸಿದ ಆತ್ಮವಿದ್ಯೆಯನ್ನು ಸಹಜವಾಗಿ ಮರೆಮಾಡುವ ಬಲ ಇದರಲ್ಲಿದೆ. ನ್ಯಾಯ ಅನ್ಯಾಯ. ಧರ್ಮ ಅಧರ್ಮ, ಕಾರ್ಯ ಅಕಾರ್ಯಗಳ ಪ್ರಜ್ಞೆಯನ್ನೇ ಮಂಕುಗೊಳಿಸುವ ಈ ಗುಣವು ಜಗದ್ವ್ಯಾಪಿ. ಲೋಕಪಾಲಕರಾಗಬೇಕಾದವರು ಲೋಕಶೋಷಕರಾದುದು, ಧರ್ಮಪ್ರತಿಷ್ಠಾಪಕರಾಗಬೇಕಾದವರು ಅಧರ್ಮಪೋಷಕರಾದುದು, ಆತ್ಮತತ್ತ್ವಪ್ರಚಾರಕರಾಗಬೇಕಾದವರು ಅನಾತ್ಮವಿಷಯವ್ಯಾಮೋಹಿಗಳಾದುದು ತಮದ ಪ್ರಭಾವ! ವೇದವಿದನಾದ ರಾವಣ ಪರಸ್ತ್ರೀ ಅಪಹರಣ ಮಾಡಿದ. ದೇವತೆಗಳ ಒಡೆಯನಾದ ಇಂದ್ರನು ಅಹಲ್ಯೆಯ ಪಾತಿವ್ರತ್ಯ ಕೆಡಿಸಿದ. ಬ್ರಹ್ಮಾದಿ ದೇವತೆಗಳು ಅನಸೂಯೆಯ ಸತ್ವಹರಣ ಮಾಡಲು ಯತ್ನಿಸಿದರು. ಮನುಷ್ಯರು ದೇವತೆಗಳು, ಅಸುರರು ಮಾಡಿದ ಸರ್ವಪ್ರಮಾದಗಳಿಗೆ ಮೂಲ ಸ್ರೋತವೆಂದರೆ ತಮಸ್ಸೇ.

ರಜಸ್ತಮಶ್ಚಾಭಿಭೂಯ ಸತ್ವಂ ಭವತಿ ಭಾರತ।
ರಜಃ ಸತ್ವಂ ತಮಶ್ಚೈವ ತಮಃ ಸತ್ವಂ ರಜಸ್ತಥಾ ॥೧೦॥

ಅರ್ಥ-ಸತ್ವಂ= ಸತ್ವಗುಣವು, ರಜಃ= ರಜೋಗುಣವನ್ನು. ಚ= ಮತ್ತು ತಮಃ= ತಮೋಗುಣವನ್ನು, ಅಭಿಭೂಯ= ತಿರಸ್ಕರಿಸಿ, ಭವತಿ= ಪ್ರಬಲವಾಗುತ್ತದೆ. ರಜಃ= ರಜೋಗುಣವು, ಸತ್ವಂ ಚ ತಮಃ ಏವ= ಸತ್ವ ಹಾಗು ತಮೋ ಗುಣಗಳನ್ನು, (ತಿರಸ್ಕರಿಸಿ ಪ್ರಬಲವಾಗುತ್ತದೆ), ತಮಃ= ತಮೋಗುಣವು. ಸತ್ವಂ ರಜಃ =ಸತ್ವ ಹಾಗು ರಜೋಗುಣಗಳನ್ನು (ತಿರಸ್ಕರಿಸಿ ಪ್ರಬಲವಾಗುತ್ತದೆ).

ವಿವರಣ:- (೧) ಸತ್ವ ರಜ ತಮ- ಇವು 'ಅವ್ಯಕ್ತ'ದ ಮೂರು ಘಟಕಗಳು. ಅತಿ ಸೂಕ್ಷ್ಮವಾದ ಅಣು ಅತಿ ಬೃಹತ್ತಾದ ಬ್ರಹ್ಮಾಂಡ ಹಾಗು ಅದೃಶ್ಯವಾದ ಮನಸ್ಸು, ಎಲ್ಲ ವಸ್ತುಗಳಲ್ಲಿಯೂ ಹಾಸು-ಹೊಕ್ಕಾಗಿ ನಿಂತಿವೆ. ಮೂರರ ಸ್ವರೂಪ ಹಾಗು ಸ್ವಭಾವಗಳು ಪರಸ್ಪರ ಭಿನ್ನವಾಗಿದ್ದರೂ ಒಂದರೊಳಗೊಂದು ಬೆರೆತುಕೊಂಡಿವೆ. ಕೇವಲ ಸತ್ವ, ಕೇವಲ ರಜ, ಕೇವಲ ತಮ—ಹೀಗೆ ವಿಭಜಿಸುವದು ಸಾಧ್ಯವಿಲ್ಲ. ಸತ್ವವು ರಜತಮಗಳನೊಳಗೊಂಡಿದೆ; ರಜಸ್ಸು ಸತ್ವತಮಗಳನೊಳಗೊಂಡಿದೆ; ತಮಸ್ಸು ಸತ್ವರಜಗಳನ್ನೊಳಗೊಂಡಿದೆ. ಎಂತಲೇ ಅನುಭವಿಗಳು ಸಾತ್ವಿಕ ರಜ, ಸಾತ್ವಿಕ ತಮ, ರಾಜಸಿಕ ಸತ್ವ, ರಾಜಸಿಕ ತಮ, ತಾಮಸಿಕ ಸತ್ವ, ತಾಮಸಿಕ ರಜ ಎಂದು ಗುಣ ವಿಭಾಗ ಮಾಡುತ್ತಾರೆ.

೨) ಗುಣಗಳು ಸಾಮಾನ್ಯವಾಗಿ ವಿಕಾರಶೀಲ:ಯಾವಾಗಲೂ ಅವು ಒಂದೇ ಸ್ಥಿತಿಯಲ್ಲಿ ಇರಲಾರವು. ಕೆಲವು ಕಾಲ ರಜ ತಮಗಳನ್ನು ಕೆಳಗೆ ನೂಕಿ ಸತ್ವವು ರಾಜ್ಯವಾಳುತ್ತದೆ; ಕೆಲವು ಕಾಲ ಸತ್ವ ತಮಗಳನ್ನು ತುಳಿದು ಹಾಕಿ ರಜಸ್ಸು

ತನ್ನ ಆಧಿಪತ್ಯ ಸ್ಥಾಪಿಸುತ್ತದೆ. ಇನ್ನು ಕೆಲವು ಕಾಲ ಸತ್ವ ರಜಗಳನ್ನು ದಬ್ಬಿ ತಮಸ್ಸು ಆಳ್ವಿಕೆ ನಡೆಸುತ್ತದೆ. ಸತ್ವ ಪ್ರಧಾನವಾದಾಗ ಶಾಂತಿ, ರಜಸ್ಸು ಪ್ರಧಾನ ವಾದಾಗ ಕ್ರಿಯಾಶಕ್ತಿ, ತಮವು ಪ್ರಧಾನವಾದಾಗ ಮೋಹ ಕಾಣ ಬರುತ್ತವೆ.

(೩) ಸಾಧಕನಾದವನು ತನ್ನ ಅಂತರಂಗದಲ್ಲಿ ತಮ ಹಾಗು ರಜಸ್ಸುಗಳಿಗೆ ಆಸ್ಪದವೀಯದೆ ಸತ್ವಗುಣದ ಆಧಿಪತ್ಯ ಉಂಟಾಗುವಂತೆ ನೋಡಿಕೊಳ್ಳಬೇಕು. ಸತ್ವದ ಆಡಳಿತವು ಪ್ರಾರಂಭವಾದೊಡನೆಯೇ ಸಂಸಾರಾಸಕ್ತಿಯು ಹಿಂಗುತ್ತದೆ. ಇಂದ್ರಿಯ ವೃತ್ತಿಗಳು ಅಂತರ್ಮುಖಿಗೊಳ್ಳುತ್ತವೆ. ಮನಸ್ಸು ನಿಸ್ತರಂಗವಾಗು ತ್ತದೆ. ಧಾರಣ ಧ್ಯಾನ ವೃತ್ತಿಗಳು ಅಭಿವೃದ್ಧಿಹೊಂದುತ್ತವೆ. ಅವಿದ್ಯಾದಿ ಕ್ಲೇಶಗಳು ಪೂರ್ತಿ ಕರಗಿ ಆತ್ಮಸಾಕ್ಷಾತ್ಕಾರ ಸಮನಿಸುತ್ತದೆ. ಪರಮ ಶಾಂತಿ ಲಾಗವಿಸುತ್ತದೆ.

ಸಂಬಂಧ:– ಗುಣವೃದ್ಧಿಯ ಲಕ್ಷಣಗಳೇನು? ಮುಂದಿನ ಮೂರು ಮಂತ್ರಗಳಲ್ಲಿ ಹೇಳಲಾಗಿದೆ.

ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।
ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ವಮಿತ್ಯುತ ॥೧೧॥

ಅರ್ಥ:– ಯದಾ= ಯಾವಾಗ ಅಸ್ಮಿನ್= ಈ ದೇಹೇ= ದೇಹದಲ್ಲಿ (ಇರುವ) ಸರ್ವದ್ವಾರೇಷು= ಸರ್ವದ್ವಾರಗಳಲ್ಲಿ ಜ್ಞಾನಂ ಪ್ರಕಾಶಂ= ಜ್ಞಾನ ಪ್ರಕಾಶವು ಉಪಜಾಯತೇ = ಉಂಟಾಗುತ್ತದೆಯೋ ತದಾ= ಆಗ ಸತ್ವಂ= ಸತ್ವಗುಣವು ವಿವೃದ್ಧಂ ಇತಿ= ವಿವೃದ್ಧ ವಾಗಿದೆಯೆಂದು ವಿದ್ಯಾತ್= ತಿಳಿಯಬೇಕು.

ವಿವರಣೆ:– (೧) ಶ್ರೋತ್ರ, ತ್ವಚ, ನೇತ್ರ, ರಸನ ಹಾಗು ಘ್ರಾಣ ಈ ಐದು ದೇಹದಲ್ಲಿರುವ ಜ್ಞಾನ-ದ್ವಾರಗಳು. ಪರಮ ದೇವನ ಚೈತನ್ಯ ಪ್ರಕಾಶವು ಶ್ರೋತ್ರದಲ್ಲಿ ಪ್ರಸಾದಲಿಂಗವಾಗಿ, ತ್ವಚದಲ್ಲಿ ಜಂಗಮಲಿಂಗವಾಗಿ, ನೇತ್ರದಲ್ಲಿ ಶಿವಲಿಂಗವಾಗಿ, ರಸನದಲ್ಲಿ ಗುರುಲಿಂಗ ಹಾಗು ಘ್ರಾಣದಲ್ಲಿ ಆಚಾರಲಿಂಗವಾಗಿ ನೆಲೆಸಿದೆ. ಪ್ರಸಾದಲಿಂಗದ ಪ್ರಕಾಶದಡಿಯಲ್ಲಿ ಶಬ್ದವು ವೇದ್ಯ. ಜಂಗಮಲಿಂಗದ ಪ್ರಕಾಶದಡಿಯಲ್ಲಿ ಸ್ಪರ್ಶವು ವೇದ್ಯ. ಶಿವಲಿಂಗದ ಪ್ರಕಾಶದಡಿಯಲ್ಲಿ ರೂಪವು ವೇದ್ಯ. ಗುರುಲಿಂಗದ ಪ್ರಕಾಶದಡಿಯಲ್ಲಿ ರಸವು ವೇದ್ಯ. ಆಚಾರಲಿಂಗದ ಪ್ರಕಾಶದಡಿಯಲ್ಲಿ ಗಂಧವು ವೇದ್ಯ. ಶಬ್ದಾದಿಗಳನ್ನು ಕೇಳುವಾಗ ಆ ಚೈತನ್ಯ ಲಿಂಗಗಳ ಭಾನ ಬರುತ್ತಿದ್ದರೆ ಸತ್ವವು ಅಭಿವರ್ಧನಗೊಂಡಿದೆ ಎಂದು ಅರ್ಥ.

(೨) ಸಾತ್ವಿಕ ಮನೋಭಾವದ ಪುರುಷನಿಗೆ ಕನಕ ಕಾಮಿನಿ ಕಾಂಚನಗಳ ನೋಡಿ ಮೋಹ ಉಂಟಾಗುವದಿಲ್ಲ; ವಿಷಯಗಳಲ್ಲಿ ಅವನು ದೋಷವನ್ನೇ ಕಾಣುತ್ತಾನೆ; ವಸ್ತುಗಳೆಲ್ಲ ಕ್ಷಣಿಕ, ದುಃಖಪೂರ್ಣ, ಜಡ ಎಂಬ ಯಥಾರ್ಥ ಜ್ಞಾನ ಪಡೆಯುತ್ತಾನೆ. ಇದರ ಪರಿಣಾಮವಾಗಿ ವಿರಕ್ತಿ ಉದಿಸುತ್ತದೆ; ಅದು ಪಕ್ವಗೊಂಡಂತೆ ಮನಸ್ಸು ಆತ್ಮಧ್ಯಾನರತವಾಗುತ್ತದೆ.

(೩) ಸತ್ವವು ಯಾವದೇ ಕ್ಷಣ ವೃದ್ಧಿಯಾಗಬಲ್ಲದು; ಇಷ್ಟೇ ಅದಕ್ಕೆ ಪೂರ್ವಸುಕೃತ ಮತ್ತು ಗುರುಕೃಪೆ ಬೇಕು. ವಾಲ್ಮೀಕಿಯು ಬೇಡನಾಗಿದ್ದ. ನಾರದರ ಒಂದು ನಿಮಿಷದ ಉಪದೇಶ ಅವನನ್ನು ದೇವನತ್ತ ಹೊರಳಿಸಿತು. ಹೆಂಡತಿಯ ದಾಸನಾಗಿದ್ದ ತುಳಸೀದಾಸನು ಆಕೆಯ ಒಂದೇ ಒಂದು ಮಾತ ಕೇಳಿ ವಿರಕ್ತಿ ತಾಳಿ ದೇವನತ್ತ ನಡೆದ.

ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥೧೨॥

ಭಾವ:– ಲೋಭ, ಪ್ರವೃತ್ತಿ, ಕರ್ಮಾರಂಭ, ಅಶಮ, ಸ್ಪೃಹೆ – ಇವು ರಜೋಗುಣವು ಅಭಿವೃದ್ಧಿಹೊಂದಿದಾಗ ಉಟಾಗುತ್ತವೆ.

ವಿವರಣ:– ರಜೋಗುಣವು ವರ್ಧಿಸಿದಾಗ ಕಾಣಬರುವ ಗುಣಗಳು ಐದು:

(೧) ಲೋಭ:– ಧನ ಮುಂತಾದ ಸಂಪತ್ತುಗಳನ್ನು ಹೇರಳವಾಗಿ ಸಂಪಾದಿಸಿ ಇನ್ನೊಬ್ಬರಿಗೆ ಕೊಡದಿರುವ ಭಾವವು ಲೋಭ. ಇದು ದುರ್ಗುಣಗಳ ರಾಜ! "ಲೋಭಶ್ಚೇದಗುಣೇನ ಕಿಂ?" ಲೋಭವೊಂದಿದ್ದರೆ ಬೇರೆ ಅವಗುಣ ವೇಕೆ? ಒಂದಿಲ್ಲ ಒಂದು ದಿನ ಜಗತ್ತನ್ನೇ ನಿರ್ನಾಮಮಾಡಬಲ್ಲ ಆಸುರೀ ಸಾಮರ್ಥ್ಯ ಇದರಲ್ಲಿದೆ.

ವಿಶ್ವವೆಲ್ಲ ದೇವನ ಕೊಡುಗೆ ಎಂಬ ತಾತ್ತ್ವಿಕ ಸತ್ಯವು ಲೋಭಿಗೆ ಅಮಾನ್ಯ. ಕೋಟಿ ಕೋಟಿ ಪ್ರಮಾಣದಲ್ಲಿ ಗಳಿಸಿದರೂ ಮತ್ತಷ್ಟು ಬೇಕು ಎನ್ನುವ ಕೀಳುಬುದ್ಧಿ ಅವನಿಗಿದೆ. ದೇಶ ದೇಶಗಳ ಬಹುಜನ ಲೋಭಿಯ ವರ್ಗಕ್ಕೆ ಸೇರಿದ್ದಾರೆ. ಇಷ್ಟೇ, ಕೆಲವರು ಧನಲೋಭಿಗಳು, ಕೆಲವರು ವಿದ್ಯಾ ಲೋಭಿಗಳು, ಇನ್ನು ಕೆಲವರು ಶಕ್ತಿ, ಕಲಾಕೌಶಲ್ಯ, ಸಾಹಸ ಮುಂತಾದ ವಿಷಯ ಗಳಲ್ಲಿ ಜಿಪುಣತನ ವ್ಯಕ್ತಮಾಡುತ್ತಾರೆ. ಕೆಲವು ಉದಾಹರಣೆಗಳಿಂದ ಸ್ಪಷ್ಟವಾಗಿ ತಿಳಿಯುವಾ.

(ಅ) ಸಂಸ್ಕೃತ ಭಾಷೆ ನಮ್ಮ ಜ್ಞಾನಭಾಂಡಾರ! ದೇವನ ಕೃಪಾಪೋಷಿತ ವಾದ ಅದು ಪವಿತ್ರ. ಅದರಲ್ಲಿ ಆತ್ಮವಿದ್ಯೆ ಇದೆ; ಸಾಹಿತ್ಯ ಸೌಂದರ್ಯವಿದೆ, ಧರ್ಮ-ನೀತಿ-ಪಾಠಗಳಿವೆ. ಹಲವಾರು ಪಂಡಿತರು ಇಂಥ ದೈವೀ ಭಾಷೆಯನ್ನು ಸ್ವಕೀಯ ಸಂಪತ್ತೆಂದು ಭಾವಿಸಿದರು. ಅನ್ಯ ಜನರು ಈ ಭಾಷೆಯನ್ನು ಕೇಳು ವದೂ ಪಾಪಕಾರಿ ಎಂದು ಘೋಷಿಸಿದರು! ಇದರ ಪರಿಣಾಮ? ವಿಶ್ವವಿಸ್ತಾರ ಗೊಂಡು ಮಾನವನಲ್ಲಿ ದೇವತ್ವದ ಅಭಿವ್ಯಕ್ತಿಗೊಳಿಸಬೇಕಾದ ಅಮರ ವಾಣಿ ಶ್ರೀಯು ಮೂಲೆಗುಂಪಾಯ್ತು. ಇಂದು ಅದು ದುರ್ದೈವದಿಂದ ಅಂತಿಮ ಉಸಿರೆಳೆಯುವ ಸ್ಥಿತಿಯಲ್ಲಿದೆ. ಅದನ್ನು ನುಡಿವವರಿಲ್ಲ, ಅದರಲ್ಲಿಯ ಸಾಹಿತ್ಯ ವನ್ನು ಓದುವವರಿಲ್ಲ. ಅದರಲ್ಲಿದ್ದ ಜ್ಞಾನರಾಶಿ ಹುಳುಹತ್ತಿ ಹಾಳಾಗುತ್ತಿದೆ!

(ಬ) ಪುರಾತನ ಭಾರತವು ಅನೇಕ ವಿದ್ಯೆಗಳ ತವರಾಗಿತ್ತು. ಪಾಶುಪತ

ನಾಗಪಾಶ ಶಕ್ತ್ಯಾಯುಧ ಮುಂತಾದ ಬಲಾಢ್ಯ ಅಸ್ತ್ರ ತಯಾರಿಸುವ ಶಸ್ತ್ರ ವಿದ್ಯಾವಿಶಾರದರು, ಪುಷ್ಪಕ ವಿಮಾನದಂಥ ಆಕಾಶರಥ ನಡೆಸಬಲ್ಲ ಯಾಂತ್ರಿಕರು ಸ್ಮರಣ ದರ್ಶನ ಸ್ಪರ್ಶನಮಾತ್ರದಿಂದ ಸರ್ವರೋಗ ಕಳೆಯಬಲ್ಲ ವನಸ್ಪತಿ-ಶಾಸ್ತ್ರಜ್ಞರು, ಮಂತ್ರವಾದಿಗಳು, ತಮ್ಮ ಇಚ್ಛಾಮಾತ್ರದಿಂದ ಅಣಿಮಾ ಮಹಿಮಾ ಲಘಿಮಾ ಗರಿಮಾ ಪ್ರಾಕಾಮ್ಯ ಪ್ರಾಪ್ಯ ವಶತ್ವ ಈಶತ್ವ ಸಿದ್ಧಿಗಳನ್ನು ಪಡೆಯಬಲ್ಲ ಸಿದ್ಧಿಗಾರರು ಅಂದು ಬದುಕಿದ್ದರು. ಲೋಭ ಗುಣದ ಪ್ರಭಾವಕ್ಕೆ ಸಿಕ್ಕುಬಿದ್ದ ಅವರು ಆ ಅಪಾರ್ಲ್ಯ ವಿದ್ಯೆಗಳನ್ನು ಯಾರಿಗೂ ನೀಡಲಿಲ್ಲ, ಗ್ರಂಥ ಗಳಲ್ಲೂ ರೇಖಿಸಲಿಲ್ಲ.

(ಕ) ವೇದೋಪನಿಷತ್ತುಗಳು ನಮ್ಮ ಪೂರ್ವಜರಿಂದ ರಚಿತವಾದ ಆತ್ಮ ವಿದ್ಯಾಶರಧಿಗಳು. ಕಾಮಕ್ರೋಧಾದಿಗಳನ್ನು ಲೀಲಾಜಾಲವಾಗಿ ನಿವಾರಿಸುವ ವಿಧಾನಗಳನ್ನು, ಪ್ರಾಪಂಚಿಕ ಬಂಧನ ಹರಿದು ಮುಕ್ತಿ ಕ್ಷೇತ್ರ ಪ್ರವೇಶಿಸುವ ಕಲೆ ಯನ್ನು, ಜೀವಶಿವರನ್ನೊಂದುಗೂಡಿಸುವ ಕೌಶಲ್ಯವನ್ನು ಅವುಗಳಲ್ಲಿ ವಿವರಿಸಲಾ ಗಿದೆ. "ಈಶಾವಾಸ್ಯಮಿದಂ ಸರ್ವಂ" "ಸಹನಾವವತು ಸಹನೌಭುನಕ್ತು ..." "ಸರ್ವಂ ಖಲ್ವಿದಂ ಬ್ರಹ್ಮ" "ಅಣೋರಣೀಯಾಃ ಮಹತೋ ಮಹೀಯಾಃ" ಇಂಥ ಸಾವಿರಾರು ತಾರಕ ಹಾಗು ಚಿರಶಾಂತಿಪ್ರದಾಯಕ ವಚನಗಳಿಂದ ಕೂಡಿದ ಆ ಪಾವನ ಗ್ರಂಥಗಳನ್ನು ಕೆಲವು ಲೋಭೀಜನ ಬಚ್ಚಿಟ್ಟರು.!

ಒಟ್ಟಿನಲ್ಲಿ ಲೋಭವು ಸಂಸ್ಕೃತಿಯ ಭಂಜಕ. ದೇಶವನ್ನೇ ಹಾಳುಗೆಡುಹುವ ರಕ್ಕಸ. ಅದು ಯಾರ ಮನದಲ್ಲಿ ನೆಲೆಯೂರಿತೋ ಅವರು ದೈತ್ಯರಂತೆ ವರ್ತಿ ಸುತ್ತಾರೆ.

(೨) ಪ್ರವೃತ್ತಿ:- "ಪ್ರವೃತ್ತಿಃ ಪ್ರವರ್ತನಂ ಸಾಮಾನ್ಯ ಚೇಷ್ಟಾ" ಸದಾ ಏನಾದರೊಂದು ಕಾರ್ಯ ಮಾಡುತ್ತಲೇ ಇರಬೇಕೆಂಬ ಆಸಕ್ತಿ. "ಅಗ್ನಿಹೋ ತ್ರಾದೌ ಪ್ರವೃತ್ತಿಃ" ಪೂರ್ವವೇದೋಕ್ತವಾದ ಯಜ್ಞ ಯಾಗ ಅರ್ಚನ ಅಗ್ನಿ ಹೋತ್ರ ಮುಂತಾದ ಕರ್ಮಗಳನ್ನು ಆಡಂಬರದಿಂದ ಆಚರಿಸುವಲ್ಲಿ ಸಂತೋಷ ಪಡುವ ಗುಣ. "ಪ್ರಯತಮಾನತಾ" ವಿಷಯಗಳಿಗಾಗಿ ಜೀವ ಪಣಕ್ಕಿಟ್ಟಾದರೂ ಪ್ರಯತ್ನಿಸುವ ಛಲ. ಪ್ರವೃತ್ತಿಯ ಮನುಷ್ಯನು ವ್ಯವಹಾರ ಜೀವಿ. ಹಗಲು ರಾತ್ರಿ ಬಿಡದೆ ದುಡಿಯುತ್ತಾನೆ. ಹೆಂಡತಿ ಮಕ್ಕಳಿಗಾಗಿ ಸಾಹಸಪೂರ್ಣ ಹಾಗು ಗಂಡಾಂತರಕಾರಿ ಕಾರ್ಯಕ್ಕೂ ಕೈ ಹಾಕುತ್ತಾನೆ.

(೩) ಕರ್ಮಾರಂಭ:- ನಿಲುಕಡೆಯಿಲ್ಲದೆ ಒಂದರ ನಂತರ ಒಂದು ಕಾರ್ಯ ಪ್ರಾರಂಭಿಸುತ್ತ ಹೋಗುವದು. ಜೀವನದಲ್ಲಿ ಈ ಹವ್ಯಾಸ ಮನೆ ಮಾಡಿದೆ. ಅವನ ಆಶೆಗಳಿಗೂ ಕೊರತೆಯಿಲ್ಲ, ಆ ಆಶಾಪೂರ್ತಿಕರವಾದ ಉದ್ಯಮ ಗಳಿಗೂ ಅಂತವಿಲ್ಲ. ಇಂದು ಮದುವೆ, ನಾಳೆ ಗೃಹನಿರ್ಮಾಣ, ಮರುದಿನ ಮಗನ ಮುಂಜಿವೆ, ನಂತರ ಭೂಮಿ ಸಂಪಾದನೆಗಾಗಿ ಪರದಾಟ-ಈ ಕರ್ಮಾ

ರಂಭ ಪ್ರವಾಹಕ್ಕೆ ಕೊನೆಯೆಲ್ಲಿದೆ ? ಸಾವಿನ ಹಾಸಿಗೆಯಲ್ಲಿಯೂ ಕರ್ಮಾ ರಂಭದ ಕನಸನ್ನೇ ಕಾಣುತ್ತಾನೆ.

ಅಶಮಃ:"ಸಂಕಲ್ಪವಿಕಲ್ಪಾನಾಮನುಪರವಃ" ಏನಾದರೊಂದು ಸಂಕಲ್ಪ ವಿಕಲ್ಪ ಮಾಡುತ್ತಲೇ ಇರುವದು. "ಹರ್ಷರಾಗಾದಿ ಪ್ರವೃತ್ತೇರನುಪರಮಃ" ಹರ್ಷರಾಗ ಮುಂತಾದ ಭಾವನೆಗಳನ್ನು ಬಿಟ್ಟೂ ಬಿಡದೆ ಹೊಂದಿರುವದು ಅಶಮ. ಈ ಅಶಮವ್ಯಕ್ತಿಯ ಮನಸ್ಸು ಅಸ್ಥಿರ; ಪ್ರತಿಕ್ಷಣ ಹೊಯ್ದಾಡುತ್ತಿದೆ.

(೫) ಸ್ಪೃಹಾ : ಬದುಕಿನ ಕಾಲಾವಧಿಯಲ್ಲಿ ಸುಖವಾಗಿ ಕುಳಿತು ನಿಶ್ಚಿಂತೆಯಿಂದ ಬ್ರಹ್ಮಜಿಜ್ಞಾಸೆ ಮಾಡುವಷ್ಟು ಅನುಕೂಲತೆಗಳಿದ್ದರೂ ಮತ್ತೆ ಮತ್ತೆ ಗಳಿಸಬೇಕೆಂದು ಆಶಿಸುವದು ಸ್ಪೃಹಾ.

ಈ ಐದು ವೃತ್ತಿಗಳು ರಜೋವೃದ್ಧಿಯ ಚಿಹ್ನಗಳಾಗಿವೆ.

ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।
ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥೧೩॥

ಭಾವ- ಅಪ್ರಕಾಶ (ಅವಿವೇಕ), ಅಪ್ರವೃತ್ತಿ (ಕಾರ್ಯವಿಮುಖತಾ), ಪ್ರಮಾದ (ಕರ್ತವ್ಯಚ್ಯುತಿ) ಹಾಗು ಮೋಹ (ವಿಷಯಾಭಿರತಿ) ಇವು ತಮೋಗುಣದ ಅಭಿವರ್ಧನೆಯಿಂದ ಉಂಟಾಗುತ್ತವೆ.

ವಿವರಣೆ:– ಮನೋರಂಗದ ಮೇಲೆ ತಮೋ ಗುಣವು ತನ್ನ ಆಧಿಪತ್ಯ ಸ್ಥಾಪಿಸಿದರೆ ನಾಲ್ಕು ವೃತ್ತಿಗಳು ತಲೆದೋರುತ್ತವೆ. ಅವು (೧) ಅಪ್ರಕಾಶ: ಸಾರಾಸಾರ ವಿವೇಕಶೂನ್ಯತೆ, ತತ್ತ್ವಗ್ರಹಣ ಶಕ್ತಿಯ ಕೊರತೆ ಹಾಗು ಬುದ್ಧಿ ಮಾಂದ್ಯತೆ. ದೇವಾಲಯದಲ್ಲಿ ಕುಳಿತು ಸದ್ಗುರುವಿನ ಉಪದೇಶ ಆಲಿಸುತ್ತಿದ್ದರೂ ಏನೊಂದು ಅರ್ಥವಾಗದಷ್ಟು ಮೌಢ್ಯತೆ. (೨) ಅಪ್ರವೃತ್ತಿ: ಧರ್ಮಶಾಸ್ತ್ರೋಕ್ತ ಕ್ರಿಯೆಗಳಲ್ಲಿ, ಯೋಗಶಾಸ್ತ್ರೋಕ್ತ ಸಾಧನೆಗಳಲ್ಲಿ ಮತ್ತು ಬ್ರಹ್ಮಶಾಸ್ತ್ರೋಕ್ತಜಿಜ್ಞಾಸೆಯಲ್ಲಿ ಪ್ರವೃತ್ತನಾಗದಿರುವದು. (೩) ಪ್ರಮಾದ: ಕರ್ತವ್ಯಪರಾಯಣತೆಯಲ್ಲಿ ಶೈಥಿಲ್ಯ ಉಂಟಾಗುವಿಕೆ. ಮುಂದೆ ಧನುರ್ಧಾರಿರಾಮ, ಹಿಂದೆ ವೀರಾಧಿವೀರ ಲಕ್ಷ್ಮಣ ನಡೆಯುತ್ತಿರುವಾಗಲೇ ವಿರಾಧರಾಕ್ಷಸನು ಅವರಿಬ್ಬರ ಮಧ್ಯದಿಂದ ಸೀತೆಯನ್ನು ಅಪಹರಿಸಿದ. ಇದು ಪ್ರಮಾದದ ನಿದರ್ಶನ. ಮುಂದೆ ಗುರು, ಹಿಂದೆ ಶಾಸ್ತ್ರ, ಮಧ್ಯದಲ್ಲಿ ಜೀವ. ಅವನಿಗೆ ಸ್ವಲ್ಪ ಪ್ರಮಾದ ಆವರಿಸುತ್ತದೆ. ಅದೇ ಕ್ಷಣ ಪ್ರಪಂಚರಾಕ್ಷಸ ಅವನನ್ನು ಕದ್ದೊಯ್ಯುತ್ತಾನೆ! (೪) ಮೋಹ:– ಅಸತ್ಯ ಅನಿತ್ಯ ಮತ್ತು ಅಪೂರ್ಣವಾದ ಅನಾತ್ಮ ವಿಷಯಗಳ ಅಭಿರತಿ ಹಾಗು ಅಭಿನಿವೇಶ ಹೊಂದಿರುವದು.

ಸಂಬಂಧ:– ಮರಣ ಸಮಯದಲ್ಲಿ ಆಯಾ ಗುಣಗಳು ವೃದ್ಧಿಯಾದರೆ ಏನಾಗುತ್ತದೆ ?

ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।

ತದೋತ್ತಮವಿದಾಂ ಲೋಕಾನಮಲಾನ್ಪ್ರತಿಪದ್ಯತೇ ॥೧೪॥
ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।
ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥೧೫॥

ಅರ್ಥ:–ಯದಾತು= ಯಾವಾಗ ಸತ್ವೇಪ್ರವೃದ್ಧೇ= ಸತ್ವಗುಣವು ಅಭಿವೃದ್ಧಿಯಾಗಲಾಗಿ ದೇಹಭೃತ್= ದೇಹಧಾರಿ ಜೀವನು ಪ್ರಲಯಂ= ಪ್ರಲಯ ಯಾತಿ=ಹೊಂದುವನೋ ತದಾ= ಆಗ, ಉತ್ತಮವಿದಾಂ= ಉತ್ತಮ ಜ್ಞಾನಿಗಳ ಅಮಲಾನ್= ಅಮಲ ಲೋಕಾನ್= ಲೋಕಗಳನ್ನು ಪ್ರತಿಪದ್ಯತೇ= ಹೊಂದುತ್ತಾನೆ ॥೧೪॥ ರಜಸಿಪ್ರವೃದ್ಧೇ= ರಜೋಗುಣದ ಅಭಿವೃದ್ಧಿ ಹೊಂದಿರುವಾಗ ಪ್ರಲಯಂ ಗತ್ವಾ =ಪ್ರಲಯಹೊಂದಿ ಕರ್ಮಸಂಗಿಷು= ಕರ್ಮ ಸಂಗಿಗಳಲ್ಲಿ ಜಾಯತೇ = ಹುಟ್ಟುತ್ತಾನೆ, ತಥಾ= ಅದೇ ರೀತಿ ತಮಸಿ ಪವೃದ್ಧೇ= ತಮೋಗುಣವು ವರ್ಧಿಸಿದಾಗ ಪ್ರಲೀನಃ= ಪ್ರಲಯಹೊಂದಿದವನು ಮೂಢಯೋನಿಷು= ಪಶ್ವಾದಿ ಯೋನಿಗಳಲ್ಲಿ ಜಾಯತೇ= ಹುಟ್ಟುತ್ತಾನೆ, ॥೧೫॥

ವಿವರಣೆ:–೧) ದೇಹ ತ್ಯಾಗಮಾಡುವಾಗ ಉಳಿದೆಲ್ಲ ಸಂಸ್ಕಾರಗಳು ಅಡಗಿ ಸಾತ್ವಿಕ ಸಂಸ್ಕಾರಗಳಷ್ಟೇ ಉದ್ಭವವಾದರೆ ಆ ಜೀವಾತ್ಮನು ಅತ್ಯಂತ ಪವಿತ್ರವಾದ ಸರ್ವ ಶ್ರೇಷ್ಠವಾದ ಜ್ಞಾನಿಗಳಿಗೆ ಮೀಸಲಾದ ಹಿರಣ್ಯಗರ್ಭಾದಿ ಲೋಕಗಳಿಗೆ ಹೋಗುತ್ತಾನೆ. "ಅಹಂ ಬ್ರಹ್ಮಾಸ್ಮಿ" ಎಂಬ ಅದ್ವಯಭಾವಸ್ಫುರಣೆ ಹೊಂದಿ ಅಲ್ಲಿಂದ ದೇವಸಾಮ್ರಾಜ್ಯ ಸೇರಿ ಸಾಮರಸ್ಯ ಪಡೆಯುತ್ತಾನೆ.

೨) ದೇಹಾವಸಾನ -ಸಮಯದಲ್ಲಿ ಕರ್ಮವಾಸನಾರೂಪ ರಾಜಸಿಕ ಸಂಸ್ಕಾರಗಳಷ್ಟೇ ಉಲ್ಬಣಿಸಿದರೆ ಆ ಜೀವನು ಕೆಲವು ಕಾಲ ಸ್ವರ್ಗ ಅಥವಾ ಪಾತಾಳ ಲೋಕದಲ್ಲಿದ್ದು ಮತ್ತೆ ಭೂಲೋಕಕ್ಕೆ ಬರುತ್ತಾನೆ. ಶ್ರೀಮಂತರ ಅಥವಾ ಬಡವರ ಮಧ್ಯ ಹುಟ್ಟಿ ಅವಿಶ್ರಾಂತವಾಗಿ ದುಡಿಯಲು ಪ್ರಾರಂಭಿಸುತ್ತಾನೆ.

೩) ಸಾಯುವಾಗ ಅಜ್ಞಾನರೂಪ ತಮೋಗುಣವು ವರ್ಧಿಸಿದರೆ ಆ ಜೀವನು ಪಶು ಪಕ್ಷಿಗಳಂಥ ಹೀನಯೋನಿಗಳಲ್ಲಿ ಜನಿಸುತ್ತಾನೆ. ಪಡಬಾರದ ಕಷ್ಟಪಡುತ್ತಾನೆ. ಆತ್ಮಪ್ರಜ್ಞಾಹೀನನಾದ ಅವನಲ್ಲಿ ಜಡಪ್ರಜ್ಞೆ ನೆಲೆಯಾಗುತ್ತದೆ. ಅವನು ಕಣ್ಣು ತೆರದರೆ ವಿಷಯಗಳ ಆಶೆ. ಕಣ್ಣು ಮುಚ್ಚಿದರೆ ನಿದ್ರೆ. ಇದು ತಾಮಸಿಕನ ಜೀವನ!

ಸಂಬಂಧ: ತ್ರಿಗುಣಗಳ ಫಲಗಳು ಯಾವವು?

ಕರ್ಮಣಃ ಸುಕೃತಸ್ಯಾಹುಃ ಸಾತ್ವಿಕಂ ನಿರ್ಮಲಂ ಫಲಮ್।
ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥೧೬॥

ಅರ್ಥ:– ಸುಕೃತಸ್ಯ= ಸಾತ್ವಿಕವಾದ, ಕರ್ಮಣಃ= ಕರ್ಮದ, ಫಲಂ= ಫಲವು, ನಿರ್ಮಲಂ ಸಾತ್ವಿಕಂ =ನಿರ್ಮಲ ಹಾಗು ಸಾತ್ವಿಕ, ರಜಸಃ= ರಜಸ್ಸಿನ, ಫಲಂ= ಫಲವು, ದುಃಖಂ =ದುಃಖ, ತಮಸಃ= ತಮಸ್ಸಿನ. ಫಲಂ= ಫಲ, ಅಜ್ಞಾನಂ =ಅಜ್ಞಾನ (ಎಂದು) ಆಹುಃ= ಹೇಳುತ್ತಾರೆ.

ವಿವರಣೆ:–ದಾನ ಧರ್ಮ, ಅರ್ಚನ ಅರ್ಪಣ,ಧ್ಯಾನ ಜ್ಞಾನ ಮುಂತಾದವು

ಸಾತ್ವಿಕ ಕರ್ಮಗಳು. ಅವುಗಳನ್ನು ನಿರ್ವಹಿಸಿದಾಗ ದೊರೆಯುವ ಗಳಿಕೆಯೆಂದರೆ ಮನಶ್ಶುದ್ಧಿಯ ಮೂಲಕ ದಿವ್ಯಶಾಂತಿ! ಆ ಶಾಂತಿಯು ನಿರ್ಮಲ ಹಾಗು ಪವಿತ್ರ. ವಿಷಯ ಪ್ರಾಪ್ತಿಗಾಗಿ ಹಾಗು ವಿಷಯ ರಕ್ಷಣೆಗಾಗಿ ಮಾಡಲಾಗುವ ಕರ್ಮಗಳು ರಾಜಸಿಕ. ಅವುಗಳ ಫಲ ದುಃಖ. ಅವಿಚಾರದಿಂದ ಮಾಡಲಾದ ಕರ್ಮಗಳು ತಾಮಸಿಕ; ಅವುಗಳ ಫಲ ಆತ್ಮವಿಸ್ಮರಣ, ಅಜ್ಞಾನ, ಅಶಾಂತಿ.

ಸತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।
ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥೧೭॥

ಅರ್ಥ:– ಸತ್ವಾತ್= ಸತ್ವಗುಣದಿಂದ ಜ್ಞಾನಂ= ಜ್ಞಾನ, ಸಂಜಾಯತೇ= ಉಂಟಾಗುತ್ತದೆ. ರಜಸಃ ಲೋಭಃ= ರಜೋಗುಣದಿಂದ ಲೋಭ ಚ= ಮತ್ತು ತಮಸಃ= ತಮೋಗುಣದಿಂದ ಪ್ರಮಾದಮೋಹೌ= ಪ್ರಮಾದ, ಮೋಹ ಚ= ಹಾಗು ಅಜ್ಞಾನಂ= ಅಜ್ಞಾನಗಳು (ಉಂಟಾಗುತ್ತವೆ).

ವಿವರಣ:– ಜ್ಞಾನವು ಎರಡು ವಿಧ: ಭೌತಜ್ಞಾನ ಹಾಗು ಆತ್ಮಜ್ಞಾನ. ಮನಸ್ಸು, ಇಂದ್ರಿಯ ಹಾಗು ವಿಷಯ (ಬಾಹ್ಯ ವಸ್ತು) ಗಳು ಸಂಬಂಧ ಗೊಂಡಾಗ ಭೌತಜ್ಞಾನ. ಮನಸ್ಸು ಅತೀವ ನಿರ್ಮಲವಾಗಿ, ತುರಿಯಾತೀತಾ ವಸ್ಥೆ ಪಡೆದು, ಪ್ರತ್ಯಗಾತ್ಮಪ್ರಕಾಶವನ್ನು ತನ್ನಲ್ಲಿ ಪ್ರಕೃಷ್ಟರೀತಿಯಿಂದ ಪ್ರತಿ ಫಲನಗೊಳಿಸಿದಾಗ ಆತ್ಮಜ್ಞಾನ! ಈ ಎರಡೂ ವಿಧ ಜ್ಞಾನಗಳು ಉಂಟಾಗಲು ಕಾರಣವೆಂದರೆ ಮನಸ್ಸರಸ್ಸಿನಲ್ಲಿ ಸತ್ವಗುಣದ ಪ್ರತಿಷ್ಠಾಪನೆ!

ಒಂದು ವೇಳೆ, ಅಂತರಂಗದಲ್ಲಿ ರಜೋಗುಣವು ಕಾಣಬಂದರೆ ಇಂದ್ರಿಯ ಚಾಪಲ್ಯ, ವೈಷಯಿಕ ಆಸಕ್ತಿ ಹಾಗು ಜಿಪುಣತನ ಉಂಟಾಗುತ್ತವೆ. ರಜದ ಬದಲು ತಮೋಗುಣವೇ ಹೃದಯದಲ್ಲಿ ಬೀಡುಬಿಟ್ಟರೆ ಅಜ್ಞಾನ, ಪ್ರಮಾದ ಮತ್ತು ಮೋಹಗಳು ತಲೆ ಎತ್ತುತ್ತವೆ.

ಊರ್ಧ್ವಂ ಗಚ್ಛಂತಿ ಸತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥೧೮॥

ಅರ್ಥ– ತ್ವಸ್ಥಾಃ= ಸತ್ವದಲ್ಲಿರುವವರು ಊರ್ಧ್ವಂಗಚ್ಛಂತಿ= ಮೇಲಕ್ಕೆ (ದೇವ ಲೋಕಕ್ಕೆ) ಹೋಗುತ್ತಾರೆ. ರಾಜಸಾಃ= ರಜೋಗುಣಿಗಳು ಮಧ್ಯೇ= ಮಧ್ಯದಲ್ಲಿ (ಮರ್ತ್ಯದಲ್ಲಿ) ತಿಷ್ಠಂತಿ= ನಿಲ್ಲುತ್ತಾರೆ. ಜಘನ್ಯಗುಣವೃತ್ತಿಸ್ಥಾಃ= (ನಿದ್ರಾಲಸ್ಯಾದಿ) ನಿಕೃಷ್ಟ ಗುಣದ ವಲಯದಲ್ಲಿರುವ ತಾಮಸಾ = ತಾಮಸಿಕರು ಅಧಃ= ಪಶ್ವಾದಿ ಕೀಳು ಯೋನಿ ಗಳಿಗೆ ಗಚ್ಛಂತಿ= ಹೋಗುತ್ತಾರೆ.

ವಿವರಣೆ:– (೧) ತಾತ್ವಿಕ ದೃಷ್ಟಿಯಿಂದ ಹೇಳಬಹುದಾದರೆ ಸತ್ವಮನ ಸ್ಸಿನ ಸುಕೃತಿಗಳು ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣ ಮುಂತಾದ ದೇಹ ಮಂಡಲಗಳ ದಾಟಿ ಅದರಾಚೆ ಮಿನುಗುವ ಸಾಕ್ಷೀಪ್ರತ್ಯಗಾತ್ಮನಲ್ಲಿ ಹೋಗಿ ಬೆರೆ ಯುತ್ತಾರೆ, ಪೌರಾಣಿಕ ದೃಷ್ಟಿಯಿಂದ ಹೇಳುವದಾದರೆ ಸಾತ್ವಿಕರು ದೇಹ ಬಿಟ್ಟ ಬಳಿಕ ಉತ್ತರೋತ್ತರ ಸುಖ–ಸಮೃದ್ಧಿಯ ಲೋಕಗಳಿಗೆ ಹೋಗುತ್ತಾರೆ. ಅಲ್ಲಿ

ಸಾತ್ವಿಕ ಭೋಗ ಉಂಡು ವಿಮಲಾತ್ಮನಲ್ಲಿ ಬೆರೆಯುತ್ತಾರೆ.

(೨) ರಾಜಸಿಕರು ಇದೇ ಮಧ್ಯಲೋಕದಲ್ಲಿ ಬಾಳುತ್ತಾರೆ; ದೇಹೇಂದ್ರಿಯಗಳ ವಿಲಾಸಿಗಳಾಗಿ ವ್ಯವಹರಿಸುತ್ತಾರೆ. ನಿರರ್ಥಕ ದುಡಿತದಲ್ಲಿ ಜೀವನ ವ್ಯಯಿಸುತ್ತಾರೆ. ತಾಮಸಿಕರಂತು ಪಶು ಪಕ್ಷ್ಯಾದಿ ಕ್ಷುದ್ರ ಜೀವಿಗಳಾಗಿ ಜನ್ಮಿಸಿ ದುಃಖ, ಮೋಹ, ಅಂಧಕಾರಗಳನ್ನು ಅನುಭವಿಸುತ್ತಾರೆ.

ಇಲ್ಲಿಯವರೆಗೆ ತ್ರಿಗುಣಗಳ ಬಗ್ಗೆ ಕೂಲಂಕಷವಾಗಿ ಹೇಳಲಾಗಿದೆಯಷ್ಟೆ? ಅದನ್ನೆಲ್ಲ ಒಳಗೊಳ್ಳುವ ತ್ರಿಗುಣ ಸ್ವರೂಪದ ಕೋಷ್ಟಕವನ್ನು ಈ ಕೆಳಗೆ ಕೊಡಲಾಗಿದೆ.

| | ಸತ್ವ | ರಜ | ತಮ |
|---|---|---|---|
| ೧ | ಜ್ಞಾನ,ಪ್ರಕಾಶ | ಕರ್ಮ,ಚಪಲತೆ | ಮೋಹ, ಅಂಧಕಾರ |
| ೨ | ಯಥಾರ್ಥ ದರ್ಶನ | ಸಂದಿಗ್ಧದರ್ಶನ | ಭ್ರಮಾತ್ಮಕ ದರ್ಶನ |
| ೩ | ವಿಮರ್ಶಾ ದೃಷ್ಟಿ | ಅಭಿನಿವೇಶಯುಕ್ತ ದೃಷ್ಟಿ | ವಿಪರೀತ ದೃಷ್ಟಿ |
| ೪ | ಶಾಂತತೆ | ಕಾಮಾದಿವಿಕಾರ | ಮೌಢ್ಯ |
| ೫ | ದೇವನತ್ತ ಒಲವು | ವಿಷಯದತ್ತ ಒಲವು | ಆಲಸ್ಯಪರತೆ |
| ೬ | ನಿಶ್ಚಿಂತತೆ | ಸಚಿಂತತೆ | ಭ್ರಾಂತಿ |
| ೭ | ಪ್ರತ್ಯಗಾತ್ಮಭಾವ | ಜೀವಾತ್ಮಭಾವ | ದೇಹಭಾವ |
| ೮ | ಶುದ್ಧ ಹೃದಯ | ಮಿಶ್ರಹೃದಯ | ಅಶುದ್ಧ ಹೃದಯ |
| ೯ | ದೇವ–ಬದುಕು | ಮಾನವೀ ಜೀವನ | ನಾರಕೀ ಬಾಳು |
| ೧೦ | ವಿವೇಕಶೀಲ ಜೀವಹಂಸ | ರಾಮ ರಾಮ ಎನ್ನುತ ಮಲವ ತಿನ್ನುವ ಗಿಳಿ | ಮಲ ತಿನ್ನುವಲ್ಲಿ ಸ್ವರ್ಗಸುಖ ಅನುಭವಿಸುವ ಸೂಕರ |
| ೧೧ | ಜ್ಞಾನಿ, ಅನುಭಾವಿ | ಸುಶಿಕ್ಷಿತ, ಅವಿಪಶ್ಚಿತ | ಅಜ್ಞಾನಿ |

ಸಂಬಂಧ:– ಗುಣಾತೀತನಾದ ಪರಮಾತ್ಮನ ಜ್ಞಾನದಿಂದ ಮುಕ್ತಿ.

ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥೧೯॥

ಅರ್ಥ:–ಯದಾ= ಯಾವಾಗ ದ್ರಷ್ಟಾ= ದ್ರಷ್ಟೃವು ಗುಣೇಭ್ಯಃ= (ಸತ್ವಾದಿ) ಗುಣಗಳಿಗಿಂತ ಅನ್ಯಂ= ಬೇರೆಯಾದ ಕರ್ತಾರಂ= ಕರ್ತಾರನನ್ನು ನ ಅನುಪಶ್ಯತಿ= ಪರಿಗಣಿಸುವದಿಲ್ಲವೋ ಚ= ಮತ್ತು ಗುಣೇಭ್ಯಃ = ಗುಣಗಳಿಗಿಂತ ಪರಂ= ವ್ಯತಿರಿಕ್ತನಾದ (ದೇವನನ್ನು)

ವೇತ್ತಿ= ತಿಳಿಯುತ್ತಾನೆಯೋ (ಆಗ) ಸಃ= ಅವನು ಮದ್ಭಾವಂ= ನನ್ನ ಭಾವವನ್ನು ಅಧಿಗಚ್ಛತಿ= ಹೊಂದುತ್ತಾನೆ.

**ವಿವರಣೆ:**– (೧) ದ್ರಷ್ಟಾ:– "ನಾನು ದೇಹವಲ್ಲ, ಇಂದ್ರಿಯ ಮನ ಬುದ್ಧಿ ಅಹಂಕಾರಗಳೂ ಅಲ್ಲ. ಅವೆಲ್ಲ ಜಡ, ಅನಾತ್ಮ. ವಿಕಾರಶೀಲ, ಕ್ಷಣ ಭಂಗುರ ಮತ್ತು ಪರಿಚ್ಛಿನ್ನ. ಅವುಗಳಿಗಿಂತ ಬೇರೆಯಾದ, ಸಾಕ್ಷಿಯಾದ ಆತ್ಮ ಚೈತನ್ಯವೇ ನಾನು. ಅಜಡ, ಅವಿಕಾರ, ನಿತ್ಯ, ಪೂರ್ಣ– ಇವೆಲ್ಲ ನನ್ನ ಲಕ್ಷಣಗಳು!"– ಈಬಗೆಯ ತಿಳಿವು ಉಳ್ಳ ವಿವೇಕಿಯೇ ದ್ರಷ್ಟಾ ಪುರುಷ, ಸತ್ಯಾಸತ್ಯದ ಪ್ರಜ್ಞೆಯುಳ್ಳ ಸತ್ಯದರ್ಶಿ!

(೨) ಗುಣೇಭ್ಯಃ ಅನ್ಯಂ ಕರ್ತಾರಂ ನ ಅನುಪಶ್ಯತಿ:– ಸತ್ವ ರಜ ತಮ ಗುಣಗಳೇ ವಿಕಾಸ ಹೊಂದಿ ವಿಶ್ವವನ್ನು ರೂಪಿಸುತ್ತವೆ; ಪ್ರಕೃತ್ಯಾದಿ ಪೃಥ್ವ್ಯಂತವಾದ ಸರ್ವ ತತ್ತ್ವಗಳ ಗುಣ ಕ್ರಿಯೆಗಳಿಗೆ ಗುಣಗಳೇ ಕಾರಣ. ಇಂದ್ರಿಯಗಳ ವ್ಯವಹಾರ, ಮನ ಬುದ್ಧ್ಯಾದಿಗಳ ವಿವಿಧ ಕರ್ಮಗಳು ಗುಣನಿರ್ದಿಷ್ಟವಾಗಿವೆ. ಗುಣಗಳಿಗಿಂತ ಬೇರೆಯಾದ ಆತ್ಮಪುರುಷನು ಕರ್ತೃವಲ್ಲ; ಅವನು ನಿಷ್ಕ್ರಿಯ, ನಿರ್ಲಿಪ್ತ, ನಿರಂಜನ. ಹೀಗೆ ವಿವೇಕಿಯು ನೋಡುತ್ತಾನೆ.

(೩) ಗುಣೇಭ್ಯಃ ಪರಂ ವೇತ್ತಿ:– ಪರಮ ದೇವನು ಪರಿಪೂರ್ಣನಾದುದರಿಂದ ಗುಣಗಳ ಒಳಹೊರಗೆಲ್ಲ ವ್ಯಾಪಿಸಿದ್ದಾನೆ; ನಿರ್ಗುಣನಾದುದರಿಂದ ಗುಣಗಳ ಪರಿಧಿಗೆ ಸಿಲುಕಿಲ್ಲ. ಅವನು ಅತೀತ, ಮನ ಮುಂತಾದ ಪ್ರಾಕೃತಿಕ ಹಾಗು ಗುಣಾತ್ಮಕ ಸಾಧನಗಳಿಗೆ ಅವನು ಅಗಮ್ಯ! ಅವೇದ್ಯ! ಸರ್ವ ತತ್ತ್ವಾಶ್ರಯ ಹಾಗು ಪರಮ ಸಾಕ್ಷಿಯಾದ ಅವನನ್ನು ಸತ್ಯದರ್ಶಿಯು ಅನುಭವತಃ ತಿಳಿಯುತ್ತಾನೆ; ಅಂದರೆ ತನ್ನ ಸಾಕ್ಷಾತ್‌ರೂಪು ಎಂದೇ ಜಾನಿಸುತ್ತಾನೆ.

(೪) ಸಃ ಮದ್ಭಾವಂ ಅಧಿಗಚ್ಛತಿ:– "ಅರ್ಜುನ, ಅಂಥ ದ್ರಷ್ಟಾರನು ಪರಮಾತ್ಮನಾದ ನನ್ನೊಂದಿಗೆ ಸಾಮರಸ್ಯ ಪಡೆಯುತ್ತಾನೆ."

ಗುಣಾನೇತಾನತೀತ್ಯ ತ್ರೀನ್ದೇಹೀ ದೇಹಸಮುದ್ಭವಾನ್ ।
ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥೨೦॥

**ಅರ್ಥ:**- ದೇಹೀ=ದೇಹಿಯು ದೇಹಸಮುದ್ಭವಾನ್= ದೇಹೋತ್ಪತ್ತಿಗೆ ಕಾರಣವಾಗಿರುವ ಏತಾನ್ ತ್ರೀನ್‌ಗುಣಾನ್= ಈ ಮೂರು ಗುಣಗಳನ್ನು ಅತೀತ್ಯ= ದಾಟಿ, ಜನ್ಮಮೃತ್ಯುಜರಾದುಃಖೈಃ= ಜನ್ಮಮೃತ್ಯುಜರಾದುಃಖಗಳಿಂದ ವಿಮುಕ್ತಃ= ಬಿಡಲ್ಪಟ್ಟವನಾಗಿ ಅಮೃತಂ = ಅಮೃತತ್ವವನ್ನು ಅಶ್ನುತೇ= ಹೊಂದುತ್ತಾನೆ.

**ವಿವರಣೆ:**– ಭಗವಂತ:– "ಸತ್ವಾದಿ ತ್ರಿಗುಣಗಳು ದೇಹ, ಇಂದ್ರಿಯ, ಪ್ರಾಣ ಮುಂತಾದ ಸಕಲ ತತ್ತ್ವಗಳ ಸೃಷ್ಟಿಗೆ ಕಾರಣವಾಗಿವೆ. ಪೃಥ್ವಿಯ ಸುತ್ತೆಲ್ಲ ಹರಡಿದ ಅಸಂಖ್ಯ ಅಜಾಂಡಗಳೂ ಗುಣಜನ್ಯ. ಇಂಥ ಮಹಾನ್ ಗುಣಗಳ ವಲಯಗಳನ್ನು ಸಾಕ್ಷಿಭಾವದಿಂದ ದೇಹದಲ್ಲಿ ನೆಲೆಸಿರುವ ಸತ್ಯ

ದರ್ಶಿಯು ದಾಟುತ್ತಾನೆ. ಆತ್ಮನ ಚೈತನ್ಯ ಮಂಡಲವನ್ನು ಪ್ರವೇಶಿಸುತ್ತಾನೆ. ಆಗ ಅವನು ಜನ್ಮ, ಮುಪ್ಪು, ಮರಣಗಳಿಂದ ಮುಕ್ತ; ಅಮೃತರೂಪ!"

**ಸಂಬಂಧ:–** ಜಿಜ್ಞಾಸೆಯಿಂದ ಅರ್ಜುನನು ಪ್ರಶ್ನಿಸುತ್ತಾನೆ.

**ಅರ್ಜುನ ಉವಾಚ**

ಕೈರ್ಲಿಂಗೈಸ್ತ್ರೀನ್ಗುಣಾನೇತಾನತೀತೋ ಭವತಿ ಪ್ರಭೋ ।
ಕಿಮಾಚಾರಃ ಕಥಂ ಚೈತಾಂಸ್ತ್ರೀನ್ಗುಣಾನತಿವರ್ತತೇ ॥೨೧॥

**ಭಾವ:–** ಅರ್ಜುನ:– "ಭಗವಂತನೆ, ಪ್ರಾಕೃತಿಕವಾದ ಸತ್ವಾದಿ ಗುಣಗಳ ಪರಿಧಿಯಿಂದ ಪಾರಾದ ಸತ್ಯದರ್ಶಿಯು ಯಾವ ಚಿಹ್ನೆಗಳಿಂದ ಯುಕ್ತನಾಗಿದ್ದಾನೆ? ಅವನ ಆಚಾರ ಎಂಥದು? ಹೇಗೆ ಈ ಗುಣಗಳನ್ನು ಅತಿಕ್ರಮಿಸಿದ್ದಾನೆ.

**ಸಂಬಂಧ:–** ಭಗವಂತನು ಉತ್ತರಿಸುತ್ತಾನೆ. ಮುಂದಿನ ಮಂತ್ರಗಳನ್ನು ಓದುವಾಗ ೨ನೇ ಅಧ್ಯಾಯದಲ್ಲಿಯ ಸ್ಥಿತಪ್ರಜ್ಞಲಕ್ಷಣಗಳನ್ನು ನೆನೆಸಿಕೊಳ್ಳಬೇಕು. ಅವು ಸಿದ್ಧನ ಲಕ್ಷಣಗಳಾದರೂ ಸಾಧಕನ ಸಾಧನೆಗೆ ಪ್ರಚೋದಕವಾಗಿವೆ.

**ಶ್ರೀ ಭಗವಾನುವಾಚ**

ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।
ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥೨೨॥

**ಭಾವ:–** ಪ್ರಕಾಶ, ಪ್ರವೃತ್ತಿ ಹಾಗು ಮೋಹಗಳು ಬಂದಾಗ ಯಾವನು ದ್ವೇಷಿಸುವದಿಲ್ಲವೋ, ಹೋದಾಗ ಯಾವನು ಬಯಸುವದಿಲ್ಲವೋ (ಅವನು ಗುಣಾತೀತನಾದ ಸತ್ಯದರ್ಶಿಯು).

**ವಿವರಣೆ:–** (೧) ಸತ್ವ ರಜ ತಮಗಳು ಗುಣಗಳು: ವಸ್ತುದರ್ಶಕವಾದ ಪ್ರಕಾಶ, ಕಾರ್ಯ ಪ್ರಚೋದಕವಾದ ಪ್ರವೃತ್ತಿ, ವಿಷಯಾಸಕ್ತಿರೂಪ ಮೋಹ ಈ ಮೂರು ಕ್ರಮವಾಗಿ ಆ ಗುಣಗಳ ಕಾರ್ಯಗಳಾಗಿವೆ. ಗುಣಾತೀತ (ಸತ್ಯದರ್ಶಿ) ಮಹಾತ್ಮನಲ್ಲಿ ಆ ಗುಣಗಳ ಬಗೆಗಾಗಲಿ, ಆ ಕ್ರಿಯೆಗಳ ಬಗೆಗಾಗಲಿ ಅಭಿಮಾನವಿಲ್ಲದ್ದರಿಂದ ಅವು ಒದಗಿ ಬಂದಾಗ ಅವನು ಅವುಗಳನ್ನು ದ್ವೇಷಿಸುವದಿಲ್ಲ; ಬಾರದಿದ್ದರೆ ಅವುಗಳಿಗಾಗಿ ಬಯಸುವದಿಲ್ಲ. ಸುಜ್ಞಾನಿ ಸುಕರಾತ, ಸಂತ ತುಕಾರಾಮ, ರಮಣ ಮಹರ್ಷಿ, ರಾಮಕೃಷ್ಣ ಪರಮಹಂಸ ಮುಂತಾದವರ ಜೀವನವು ನಿದರ್ಶನ.

(೨) ಯಾರು ಆ ಗುಣಗಳ ಅಭಿಮಾನ ಉಳ್ಳವರೋ ಅವರು ಅನುಕೂಲ ಕ್ರಿಯೆಗಳಿಂದ ಸಂತುಷ್ಟಿ ಹೊಂದುತ್ತಾರೆ; ಪ್ರತಿಕೂಲ ಕ್ರಿಯೆಗಳಿಂದ ಅಸಂತುಷ್ಟಿ ಹೊಂದುತ್ತಾರೆ. ಕಾಮ ಕ್ರೋಧ, ಲೋಭ ಮೋಹ, ಮದ ಮತ್ಸರ ಇವು ಅವರನ್ನು ಕಾಡುತ್ತವೆ.

ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।
ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥೨೩॥

ಅರ್ಥ:-ಯಃ= ಯಾವನು, ಉದಾಸೀನವತ್ ಆಸೀನಃ= ಉದಾಸೀನನಂತೆ ಇರುವವನಾಗಿ, ಗುಣೈಃ= ಗುಣಗಳಿಂದ ನ ವಿಚಾಲ್ಯತೇ =ವಿಚಲಿತನಾಗುವದಿಲ್ಲವೋ, ಯಃ= ಯಾವನು ಗುಣಾಃ= ಗುಣಗಳು, ವರ್ತಂತೇ=. ವರ್ತಿಸುತ್ತವೆ, ಇತಿ ಏವ =ಎಂದು(ತಿಳಿದು) ಅವತಿಷ್ಠಂತಿ = ಇರುವನೋ ನ ಇಂಗತೇ= (ಆತ್ಮಸ್ವರೂಪದಿಂದ) ಚಲಿಸುವದಿಲ್ಲವೋ ಅವನು ಗುಣಾತೀತ.

ವಿವರಣೆ:-(೧)ಗುಣಾತೀತನು 'ನ ಇಂಗತೇ' ಸ್ವಸ್ವರೂಪದಿಂದ ಚಲಿಸುವದಿಲ್ಲ; ಸದಾ ಅಹಂ ಬ್ರಹ್ಮಾಸ್ಮಿ ಪ್ರಜ್ಞೆ ಅವನಲ್ಲಿ ಸ್ಪಂದಿಸುತ್ತದೆ. ತಾನು ಸಕಲ ತತ್ವಾತೀತ, ನಿರ್ಗುಣ, ಪರಾತ್ಪರ ಎಂದು ನಿರ್ಧರಿಸಿದ ಅವನು ದೇಹೇಂದ್ರಿಯ ಕಾರ್ಯಗಳೆಲ್ಲ ಗುಣಗಳ ಕಾರ್ಯಗಳೆಂದು ಬಗೆಯುತ್ತಾನೆ. ತಾನು ಮಾತ್ರ ಸದಾ ಸಾಕ್ಷಿಭಾವ ತಾಳುತ್ತಾನೆ. ಉದಾಸೀನನಂತೆ ಬಾಳುತ್ತಾನೆ.

(೨) ಸ್ವರೂಪದಿಂದ ಚಲಿಸಿದ ಜನರು ಅವನಂತೆ ಉದಾಸೀನರಲ್ಲ ಅಭಿಮಾನಿಗಳು! ವಿಷಯ ಪಕ್ಷಪಾತಿಗಳು! ಧರ್ಮ, ಮತ, ಪಂಥ, ಸಾಂಪ್ರದಾಯಿಕ ಪಕ್ಷ ಪಂಗಡ ಇವುಗಳಲ್ಲಿ ಪೂರ್ತಿ ಬಂಧಿತರಾಗಿದ್ದಾರೆ. ಗುಣಕಾರ್ಯವಾದ ಇಂದ್ರಿಯ, ಮನ, ಬುದ್ಧಿ ಮಂಡಲಗಳಾಚೆ ನೋಡುವ ದೃಷ್ಟಿಯನ್ನು ಕಳೆದುಕೊಂಡಿದ್ದಾರೆ. ಚಕ್ರಾಕಾರವಾಗಿ ಸುತ್ತುತ್ತಿರುವ ಗುಣಾತ್ಮಕ ಸಂಸಾರ ಮಡುವಿನಲ್ಲಿ ಸಿಕ್ಕು ಅನವರತವಾಗಿ ತಿರುಗುತ್ತಿದ್ದಾರೆ!

ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।
ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥೨೪॥

ಅರ್ಥ:- ಸಮ ದುಃಖ ಸುಖಃ= ಸುಖ ದುಃಖಗಳಲ್ಲಿ ಸಮನಾದ, ಸಮಲೋಷ್ಟಾಶ್ಮ ಕಾಂಚನಃ= ಲೋಷ್ಟ (ಮಣ್ಣಿನ ಹೆಂಟೆ) ಅಶ್ಮ (ಕಲ್ಲು) ಕಾಂಚನಗಳಲ್ಲಿ ಸಮನಾದ, ತುಲ್ಯ ಪ್ರಿಯಾ ಪ್ರಿಯಃ= ಪ್ರಿಯಅಪ್ರಿಯಗಳಲ್ಲಿ ಸಮನಾದ, ತುಲ್ಯನಿಂದಾತ್ಮಸ್ತುತಿಃ= ಆತ್ಮಸ್ತುತಿ ನಿಂದೆಗಳಲ್ಲಿ ಸಮನಾದ (ಯಃ) ಸ್ವಸ್ಥಃ= ಯಾವ ಆತ್ಮಸ್ಥನಾದ ಧೀರಃ= ಧೀರ ಪುರುಷನಿರುವನೋ(ಅವನು ಗುಣಾತೀತ).

ವಿವರಣೆ:-(೧)ಸ್ವಸ್ಥ:- ಗುಣಾತೀತನು ತನ್ನಲ್ಲಿಯೇ ತಾನು ಇದ್ದಾನೆ; ತನ್ನ ದಿವ್ಯ ಆತ್ಮದೇವನಲ್ಲಿ ನೆಲೆಸಿದ್ದಾನೆ. ಆದ್ದರಿಂದ ಪತನದ ಭೀತಿ ಅವನನ್ನು ಸ್ಪರ್ಶಿಸದು. ಅವನು ಧೀರ. ಅವನ ದೃಷ್ಟಿಯಲ್ಲಿ ಸುಖ ದುಃಖಗಳು, ಲೋಷ್ಟ ಅಶ್ಮ ಕಾಂಚನಗಳು, ಪ್ರಿಯ ಅಪ್ರಿಯ ವಸ್ತುಗಳು ಹಾಗು ಸ್ತುತಿ ನಿಂದೆಗಳು ಸಮ!

(೨)ತಮ್ಮ ಮೂಲಸ್ಥಾನದಿಂದ ಪತನ ಹೊಂದಿದ ಪ್ರಾಪಂಚಿಕರಿಗೆ ಸುಖ, ಸ್ತುತಿ, ಸ್ವರ್ಣಗಳು ಪ್ರಿಯ; ದುಃಖ ನಿಂದೆ ಅಶ್ಮಗಳು ಅಪ್ರಿಯ. ಎಂತಲೇ ಅವರು ಸುಖಕ್ಕಾಗಿ ಹೆಣಗುತ್ತಾರೆ, ಸ್ತುತಿಗಾಗಿ ಬಾಯಿಬಿಡುತ್ತಾರೆ, ಸುವರ್ಣಕ್ಕಾಗಿ ಸಾಹಸ ಪಡುತ್ತಾರೆ. ದುಃಖ ನಿಂದೆಗಳನ್ನು ದ್ವೇಷಿಸುತ್ತಾರೆ.

ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।
ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥೨೫॥

ಅರ್ಥ:- (ಯಾವನು), ಮಾನಾಪಮಾನಯೋಃ =ಮಾನಾಪಮಾನಗಳಲ್ಲಿ, ಮಿತ್ರಾರಿ

ಪಕ್ಷಯೋಃ= ಶತ್ರುಮಿತ್ರ ಪಕ್ಷಗಳಲ್ಲಿ, ತುಲ್ಯಃ =ಸಮನೋ, ಸರ್ವಾರಂಭ ಪರಿತ್ಯಾಗೀ= ಸರ್ವ ಸಕಾಮ ಕರ್ಮಾರಂಭ ಪರಿತ್ಯಾಗಿಯೋ, ಸಃ= ಅವನು ಗುಣಾತೀತಃ= ಗುಣಾತೀತನೆಂದು ಉಚ್ಯತೇ = ಹೇಳಲ್ಪಡುತ್ತಾನೆ.

ವಿವರಣೆ:– ಭಗವಂತ- "ಪಾರ್ಥ, ಸ್ವಲ್ಪದರಲ್ಲಿ ಹೇಳುವದಾದರೆ ಗುಣಾತೀತನು ಭೇದಭಾವನೆಯ ಜಾಲ ಹರಿದ ವೀರ, ಗುಣಗಳ ಕೋಟೆ ಕೆಡುಹಿದ ಧೀರ, ಪ್ರಕೃತಿಯ ವಲಯ ದಾಟಿದ ಸಾಹಸಿ, ವಿಶ್ವಾತ್ಮಚೇತನದಲ್ಲಿ ರಮಿಸುವ ಮಹಾತ್ಮ! ಅವನಿಗೆ ಮಾನ ಅಪಮಾನಗಳು ಒಂದೇ; ವೈರಿ ಮಿತ್ರರು ಅಭಿನ್ನ; ಸ್ವ ಪರ ಭಾವನೆಗಳು ಕಾಲ್ಪನಿಕ! ತಾನೇ ವಿಶ್ವದ ಹಾಸುಹೊಕ್ಕಾದುದರಿಂದ ಅವನು ಸರ್ವಫಲಾಶಾರಹಿತ. ಕರ್ತೃತ್ವಭಾವನೆಯೇ ಇಲ್ಲವಾಗಿ ಅವನು ಸಕಾಮ ಕರ್ಮಗಳನ್ನೆಂದಿಗೂ ಆಚರಿಸುವದಿಲ್ಲ. ಅವನು ಮುಕ್ತ!"

ಸಂಬಂಧ:– ಗುಣಾತೀತನಾಗುವ ಬಗೆ?

ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।
ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥೨೬॥

ಅರ್ಥ:– ಯಃ= ಯಾವನು ಮಾಂ= ನನ್ನನ್ನು ಅವ್ಯಭಿಚಾರೇಣ ಭಕ್ತಿಯೋಗೇನ= ಅವ್ಯಭಿಚಾರ (ಅನನ್ಯ ಪ್ರೇಮರೂಪ) ಭಕ್ತಿಯೋಗದಿಂದ ಸೇವತೇ= ಸೇವಿಸುತ್ತಾನೆಯೋ ಸಃ = ಅವನು ಏತಾನ್ ಗುಣಾನ್= ಈ ಗುಣಗಳನ್ನು ಅತೀತ್ಯ= ದಾಟಿ ಬ್ರಹ್ಮಭೂಯಾಯ= ಬ್ರಹ್ಮಭಾವವನ್ನು ಕಲ್ಪತೇ= (ಹೊಂದಲು) ಸಮರ್ಥನಾಗುತ್ತಾನೆ.

ವಿವರಣೆ:–ಭಗವಂತ:–"ಧನಂಜಯ, ಅವ್ಯಭಿಚಾರ ಅಂದರೆ ಮದೇಕ ನಿಷ್ಠ ಭಕ್ತಿಯಿಂದ ನನ್ನ ಅಮೃತಸ್ವರೂಪವನ್ನು ತನ್ನ ಸ್ವರೂಪವೆಂದೇ ಬಗೆದು ಸೇವಿಸುವ ಮಹಾತ್ಮನು ಅತಿ ಸಹಜವಾಗಿಯೇ ಸತ್ತ್ವ ರಜ ತಮಗಳ ಆಕರ್ಷಣಾ ವಲಯವನ್ನು ದಾಟುತ್ತಾನೆ. ಗುಣಗಳು ತಲುಪಲಾರದ ಉನ್ನತ ಅಂತರಾಲ ದಲ್ಲಿ ನಿಲ್ಲುತ್ತಾನೆ. ಅವನೇ ಬ್ರಹ್ಮಭಾವ ಹೊಂದಲು ಸಮರ್ಥ; ನನ್ನ ಮಹಾನ್ ಹೃದಯದಲ್ಲಿ ಚಿರಸ್ಥಿರವಾಗಿ ನೆಲೆಸಲು ಅರ್ಹ!"

ಜಗತ್ತಿನ ಜನರು ಮಾತ್ರ ಅಜ್ಞರು. ಅಭಿಮನ್ಯುವಿನಂತೆ ಸತ್ತ್ವಗುಣಸೃಷ್ಟ ಜಾಗ್ರವ್ಯೂಹ, ರಜೋಗುಣಸೃಷ್ಟ ಸ್ವಪ್ನವ್ಯೂಹ, ತಮೋಗುಣಸೃಷ್ಟ ಸುಷುಪ್ತಿವ್ಯೂಹ ಗಳನ್ನು ಪ್ರವೇಶಿಸುತ್ತಾರೆಯೇನೋ ನಿಜ, ಆದರೆ ಅವುಗಳಿಂದ ಹೊರಬರುವ ಮಾರ್ಗ ಅರಿಯದೆ ಆ ಸಾಂಸಾರಿಕ ಚಕ್ರವ್ಯೂಹಗಳಲ್ಲಿಯೇ ಗಾಸಿಗೊಳ್ಳುತ್ತಾರೆ!

ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ।
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥೨೭॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಗುಣತ್ರಯ ವಿಭಾಗಯೋಗೋನಾಮ ಚತುರ್ದಶೋಽಧ್ಯಾಯಃ

ಅರ್ಥ:_ಅಹಂ= ನಾನು, ಬ್ರಹ್ಮಣಃ= ಪರ ಬ್ರಹ್ಮನ, ಪ್ರತಿಷ್ಠಾ= ಪ್ರತಿಮಾ; ಅಮೃತಸ್ಯ = ಅಮೃತ(ಮೋಕ್ಷದ)ದ, ಅವ್ಯಯಸ್ಯ= ಅವ್ಯಯದ, ಶಾಶ್ವತಸ್ಯ= ಶಾಶ್ವತ

ಧರ್ಮದ, ಚ= ಮತ್ತು, ಐಕಾಂತಿಕಸ್ಯ= ಏಕಾಂತಿಕಸುಖ(ಪರಮಾನಂದ)ದ, ಪ್ರತಿಷ್ಠಾ = ಸ್ಥಾನವು ನಾನೇ.

ವಿವರಣೆ:- ಭಗವಂತ: "ಅರ್ಜುನ, ನಾನು ಸಾಕ್ಷಾತ್ ಪರಬ್ರಹ್ಮನ ಪ್ರತಿರೂಪ! ದೇಹಗಳಲ್ಲಿ ಪ್ರತ್ಯಗಾತ್ಮನಾಗಿ ವಿಶ್ವದಲ್ಲಿ ಬ್ರಹ್ಮನಾಗಿ ವಾಸಿಸಿದ್ದೇನೆ. ವ್ಯಷ್ಟಿ ಅಭಿಮಾನಿಯಾದ ಜೀವಾತ್ಮನಾಗಲಿ ಸಮಷ್ಟಿ ಅಭಿಮಾನಿಯಾದ ಈಶ್ವರನಾಗಲಿ ನನ್ನ ಸದಂಶರೆಂದೇ ಪರಿಭಾವಿಸು. ನಾನು ಮುಕ್ತಿಯ ಸ್ಥಾನ; ಅವ್ಯಯದ ನೆಲೆ; ಶಾಶ್ವತ ಧರ್ಮದ ಗೊತ್ತು ಹಾಗು ಪರಮ ಆನಂದದ ನಿಲಯ!"

"ಭಾರತ, ನನ್ನ ವಿಸ್ತಾರವನ್ನು ಗ್ರಹಿಸು. ನಿನ್ನೊಳು ಪರಿಕಿಸು. ನನ್ನ ವಿಮಲ ಜ್ಞಾನಮೂರ್ತಿಯನ್ನು ಅಲ್ಲಿ ಕಾಣುವಿ. ಅದೇ ನೀನು. ದೇಹಾದಿಗಳು ನೀನಲ್ಲ. ಅವುಗಳ ಬಂಧನ ನಿನಗಲ್ಲ. ಸದೈವ ನೀನು ಸ್ವತಂತ್ರ. ಈ ಜ್ಞಾನ ನೀಡಲೆಂದೇ ನಾನು ಮೂರ್ತರೂಪ ತಾಳಿಬಂದೆ. ನಿನ್ನಮೇಲೆ ನನಗೆ ಅಪಾರ ಅಸುರಾಗ. ಇದೋ ನನ್ನಾಜ್ಞೆಯಂತೆ ಸಾಗು. ಗುಣಗಳ ಭಾವಬಿಟ್ಟು ನನ್ನ ನಿರಾಲಂಬ ಸ್ವರೂಪದಲ್ಲಿ ಹೆಜ್ಜೆ ಹಾಕು."

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಹದಿನಾಲ್ಕನೆಯ ಬಿಂದುವು.

* † *

# ಹದಿನೈದನೆಯ ಅಧ್ಯಾಯ

## ಪುರುಷೋತ್ತಮಯೋಗ

ದೇಹಾದಿ ಜಡ ವಸ್ತುಗಳು ಕ್ಷರ ಪುರುಷ; ಜೀವನು ಅಕ್ಷರ ಪುರುಷ. ಅವೆರಡಕ್ಕೂ ಆಶ್ರಯನಾದ ಸ್ವಯಂಭುವು ಪುರುಷೋತ್ತಮ. ಅವನು ಸ್ವತಂತ್ರ, ಅಪರಿಚ್ಛಿನ್ನ ಮತ್ತು ಅಲಿಪ್ತ. ಜೀವಭಾವ ಹೋಗಿ ಪುರುಷೋತ್ತಮನಲ್ಲಿ ಸಮರತಿ ಹೊಂದಬೇಕಾದರೆ ಜ್ಞಾನ, ಭಕ್ತಿ, ಹಾಗು ವಿರಾಗ ಮೂರೂ ಅವಶ್ಯ. ಹಿಂದಿನ ಅಧ್ಯಾಯಗಳಲ್ಲಿ ಹೆಚ್ಚಾಗಿ ಜ್ಞಾನ ಭಕ್ತಿಗಳ ಬಗ್ಗೆ ಹೇಳಲಾಗಿದೆ. ಪ್ರಸ್ತುತ ಅಧ್ಯಾಯವು ವಿರಾಗಕ್ಕೆ ಮೀಸಲು! ಭಗವಂತನು ಮೊದಲು ವಿಶ್ವದ ಸಮಗ್ರ ಚಿತ್ರವನ್ನು ರೂಪಕವಿತ್ತು ರಚಿಸಿ, ಈ ವಿಶ್ವದಲ್ಲಿ ಯಾವುದು ಗ್ರಾಹ್ಯ? ಯಾವುದು ಅಗ್ರಾಹ್ಯ? ಎಂಬುದನ್ನು ನಿರ್ದೇಶಿಸುತ್ತಾನೆ.

ಶ್ರೀ ಭಗವಾನುವಾಚ

ಉರ್ಧ್ವಮೂಲಮಧಃ ಶಾಖಮಶ್ವತ್ಥಂ ಪ್ರಾಹುರವ್ಯಯಮ್ ।
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥೧॥

ಅರ್ಥ:-ಊರ್ಧ್ವಮೂಲಂ =ಊರ್ಧ್ವಮೂಲವುಳ್ಳ ಅಧಃಶಾಖಂ= ಅಧೋ ಶಾಖೆಗಳುಳ್ಳ ಅಶ್ವತ್ಥಂ= ಅಶ್ವತ್ಥ ವೃಕ್ಷವು ಅವ್ಯಯಂ= ಅವ್ಯಯವಾಗಿರುವದೆಂದು, ಪ್ರಾಹುಃ= (ಶಾಸ್ತ್ರಗಳು) ಹೇಳುತ್ತವೆ, ಯಸ್ಯ= ಯಾವುದರ, ಪರ್ಣಾನಿ= ಎಲೆಗಳು, ಛಂದಾಂಸಿ= ಛಂದಸ್ಸುಗಳು, ತಂ= ಅದನ್ನು, ಯಃ= ಯಾವನು, ವೇದ =ತಿಳಿಯುತ್ತಾನೆಯೋ, ಸಃ= ಅವನು, ವೇದವಿತ್= ವೇದವಿತ್ತನು.

ವಿವರಣ:–೧) ಅಶ್ವತ್ಥವೃಕ್ಷ:- "ಶ್ವ ಪ್ರಭಾತ ಪರ್ಯಂತಮಪಿ ನ ಸ್ಥಾಸ್ಯತೀತಿ ವಿಶ್ವಾಸಾನರ್ಹತ್ವಾದಶ್ವತ್ಥಂ ಪ್ರಾಹುಃ" ನಾಳೆ ಬೆಳಗಿನವರೆಗಾದರೂ ಇದ್ದೀತೆಂಬ ಭರವಸೆ ಇಲ್ಲದಿರುವದರಿಂದ ಅಶ್ವತ್ಥ ಎಂದು ಬಲ್ಲವರ ಮತ. ವಿಶ್ವೋಪಾದಾನ ಕಾರಣವಾದ ಪರಾತ್ಪರ ದೇವಾತ್ಮಶಕ್ತಿಯಾಗಲಿ, ಅಖಂಡ ಚೇತನವಾದ ಪರಮ ಪುರುಷನಾಗಲಿ ಅಶ್ವತ್ಥರಲ್ಲ; ಅವ್ಯಯ ಅನಂತ ಅಮೃತರು! ಅವರ ದಿವ್ಯ ಅಸ್ತಿತ್ವದಿಂದ ಚಿಗುರಿಬಂದು ಬೆಳೆದು ನಿಂತ ಭವ್ಯ ವಿಶ್ವ ವೃಕ್ಷವು ಮಾತ್ರ ಅಶ್ವತ್ಥ! ಏಕೆಂದರೆ ಅದೆಲ್ಲವೂ ಕಾಲ ಮಿತವಾಗಿದೆ.

ವಿಶ್ವವೃಕ್ಷದ ಮೂಲವು ಊರ್ಧ್ವ, ಅಂದರೆ ಕ್ಷರಾಕ್ಷರಗಳಿಗೆ ಉತ್ಕೃಷ್ಟವಾದ ಪರಮ ಪುರುಷೋತ್ತಮ; ಅವನಲ್ಲಿ ದೇವಾತ್ಮಶಕ್ತಿಯು ಅವಿನಾಭಾವದಿಂದ ನೆಲೆಸಿದೆ, ಅಧಃಶಾಖಂ– ಊರ್ಧ್ವಮೂಲವುಳ್ಳ ಆ ಮಹಾನ್ ವೃಕ್ಷದ ಶಾಖೆಗಳು ಮಾತ್ರ ಕೆಳಮುಖವಾಗಿವೆ. ದೇವಾತ್ಮಶಕ್ತಿಯ ವಿಭಿನ್ನ ರೂಪುಗಳಾದ ಪ್ರಕೃತಿ,' ಮಹತ್ತು, ಅಹಂಕಾರ, ತನ್ಮಾತ್ರೆ, ಪಂಚಭೂತ, ಆ ಭೂತನಿರ್ಮಿತ ದೇಹ ಮತ್ತು ಅಯಾ ತತ್ತ್ವಗಳಲ್ಲಿ ಪುರುಷೋತ್ತಮ ಚೇತನವು ಪ್ರತಿಫಲಿಸಿದಾಗ ಕಾಣಬರುವ ಹಿರಣ್ಯಗರ್ಭ. ಸೂತ್ರಾತ್ಮ, ವಿರಾಡಾತ್ಮ, ಬ್ರಹ್ಮಾದಿ ದೇವತೆಗಳು, ಅಗಣಿತ ಜೀವರುಗಳು ಅಧೋಶಾಖೆಗಳು! ಮೂಲವೊಂದನ್ನು ಬಿಟ್ಟರೆ ಉಳಿದೆಲ್ಲ ವಿನಾಶ ಹೊಂದುತ್ತವೆ. ಯಾವ ಕ್ಷಣ ಕಾಲಪುರುಷನು ಯಾವುದನ್ನು ಕಬಳಿಸುವನೋ ಹೇಳಬರದು. ಇದಂ ಪ್ರತ್ಯಯವೇದ್ಯವಾದುದೆಲ್ಲ ನೀರ್ಗುಳ್ಳೆ, ಕೊಲ್ ಮಿಂಚು, ಕಾಮನಬಿಲ್ಲು, ಗಾಳಿಯ ದೀಪ! ಮೃತ್ಯು ದೇವತೆಯ ರಣಾಂಗಣವೀ ಜಗ. ಅವಳು ಸುಳಿದರೆ ಭೂಮಿ ಕಂಪಿಸುವದು. ಅವಳು ಉಸಿರಿಟ್ಟರೆ ಪರ್ವತಗಳು ಕುಸಿಯುವವು, ಗ್ರಹಗಳು ಛಿನ್ನವಿಚ್ಛಿನ್ನವಾಗುವವು, ಸೂರ್ಯನಂಥ ಮಹಾ ನಕ್ಷತ್ರಗಳು ನಂದುವವು; ಹೆಚ್ಚೇನು, ಆಕಾಶವೇ ಅಲಗುವದು! ಹೀಗೆ ಸದಾ ಮೃತ್ಯುವಿನ ನೆರಳಲ್ಲಿ ಬಾಳುತ್ತದೆಯೆಂದೇ ವಿಶ್ವಕ್ಕೆ ಅಶ್ವತ್ಥವೃಕ್ಷದ ರೂಪಕ ಅನ್ವರ್ಥಕವಾಗಿದೆ.

೨) ಅವ್ಯಯಂ, ಛಂದಾಂಸಿ ತಸ್ಯ ಪರ್ಣಾನಿ:– ವಿಶ್ವವೃಕ್ಷದ ಪರ್ಣಗಳು ವೇದಗಳು! ಋಕ್ಕುಗಳು! ಹೇಗೆ ಎಲೆಗಳು ಶರ್ಕರಾರಸ ನಿರ್ಮಿಸಿ ಶಾಖೆ, ಪುಷ್ಪ, ಮಿಡಿ ಕಾಯಿಗಳಿಗೆ ಹಂಚಿ ಕಾಪಾಡುವವೋ ಹಾಗೆ ವೇದಮಂತ್ರಗಳು ಸಾಂಸಾರಿಕ ಜೀವರಿಗೆ ಭೋಗ ಭಾಗ್ಯಪ್ರದಾಯಕ ಯಜ್ಞ ವಿದ್ಯೆಯನ್ನಿತ್ತು, ಪಾರಮಾರ್ಥಿಕ ಜೀವರಿಗೆ ಶಾಂತಿದಾಯಕವಾದ ಜ್ಞಾನಸಾಧನೆಯ ಕರುಣಿಸಿ, ತತ್ತ್ವಜಿಜ್ಞಾಸುಗಳಿಗೆ ಮುಕ್ತಿಪ್ರದಾಯಕ ಆತ್ಮವಿದ್ಯೆ ನೀಡಿ ಅವರನ್ನೆಲ್ಲ ಕಾಪಾಡುತ್ತಿವೆ. ಹಿರಣ್ಯಗರ್ಭ ಮೊದಲು ಮಾಡಿ ಸರ್ವ ದೇವ ದೇವತೆಗಳು ವೇದವಿದ್ಯಾ ಪೀಯೂಷ ಕುಡಿದೇ ಬಾಳುತ್ತಾರೆ. ವೇದಗಳಿಂದಲ್ಲದೆ ವಿಶ್ವವೃಕ್ಷಕ್ಕೆ ಶೋಭೆ ಎಲ್ಲಿಯದು?

ಇಂಥ ಬೃಹದ್ವಿಶ್ವವೃಕ್ಷವು 'ಅವ್ಯಯ' ಎಂದಿದ್ದಾರೆ ಅನುಭವಿಗಳು.

ಅವರ ವರ್ಣನೆ ಸಮಂಜಸವಿದೆ, ಏಕೆಂದರೆ ವಿಶ್ವದ ಮೂಲವು ಅವ್ಯಯ; ಆ ಅವ್ಯಯದಿಂದ ಹೊರಹೊಮ್ಮುತ್ತಿರುವ ವಿಶ್ವರಚನಾ ಪ್ರವಾಹವೂ ಅವ್ಯಯ. ಇಂದಿನ ಫಲ ಪುಷ್ಪ ಪತ್ರಗಳು ನಾಳೆ ನಾಶವಾಗುತ್ತವೆ; ಹೊಸ ಫಲ ಪುಷ್ಪಾದಿಗಳು ಮತ್ತೆ ಉಗಮಿಸುತ್ತವೆ. ಈ ನಾಶ ನಿರ್ಮಾಣಗಳ ಪ್ರವಾಹ ಅವ್ಯಯ! ಯಾವನು ಇಂದಿನ ದೇಹೇಂದ್ರಿಯ ಹಾಗು ಭೋಗ ಪಡಿಪದಾರ್ಥಗಳೇ ಸತ್ಯವೆಂದು ಬಗೆಯುತ್ತಾನೆಯೋ ಅವನು ಮಾತ್ರ ತಿಳಿವಿಲ್ಲದ ಅಜ್ಞ!

(೩) ಯಃ ತಂ ವೇದ ಸ ವೇದವಿತ್:– ಮೇಲೆ ವರ್ಣಿಸಲಾದ ಅಶ್ವತ್ಥ ವೃಕ್ಷದ ನೈಜ ಸ್ವರೂಪವನ್ನು ಅರಿತವನು ವೇದವಿದ, ಜ್ಞಾನಿ. ಅವನು ನಶ್ವರ ವಸ್ತುಗಳಲ್ಲಿ ವ್ಯಾಮೋಹ ಹೊಂದದೆ ಅವ್ಯಯ ಅನಂತ ಅಖಂಡವಾದ ಪುರುಷೋತ್ತಮನನ್ನೇ ಆಶ್ರಯಿಸುತ್ತಾನೆ. ನಶ್ವರ ವಸ್ತುವ್ಯಾಮೋಹತ್ಯಾಗವೇ ವಿರಾಗ; ಆತ್ಮಾಶ್ರಯವೇ ಆ ವಿರಾಗದ ಫಲ!

ಈ ಮಂತ್ರದಂಥಹದೇ ಮಂತ್ರ ಕಠೋಪನಿಷತ್ತಿನಲ್ಲಿದೆ ಎಂಬುವದನ್ನು ಪ್ರಾಸಂಗಿಕವಾಗಿ ಗಮನಿಸಬೇಕು. "ಊರ್ಧ್ವ ಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ" (೨–೩–೧) ಊರ್ಧ್ವ ಮೂಲವುಳ್ಳ, ಅಧೋಶಾಖೆಗಳುಳ್ಳ ಈ ಪ್ರಪಂಚವೆಂಬ ಅಶ್ವತ್ಥ ವೃಕ್ಷವು ಸನಾತನವಾಗಿದೆ.

> ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ
> ಗುಣಪ್ರವೃದ್ಧಾ ವಿಷಯಪ್ರವಾಲಾಃ ।
> ಅಧಶ್ಚ ಮೂಲಾನ್ಯನುಸಂತತಾನಿ
> ಕರ್ಮಾನುಬಂಧೀನಿ ಮನುಷ್ಯಲೋಕೇ ॥೨॥

ಅರ್ಥ:– ತಸ್ಯ=ಅದರ, ಗುಣಪ್ರವೃದ್ಧಾಃ= ಗುಣಗಳಿಂದ ಪ್ರವೃದ್ಧವಾದ ವಿಷಯಪ್ರವಾಲಾಃ= ವಿಷಯಗಳೆಂಬ ಚಿಗುರುಗಳುಳ್ಳ ಶಾಖಾಃ ಶಾಖೆಗಳು ಅಧಃ= ಕೆಳಕ್ಕೂ ಊರ್ಧ್ವಂ= ಮೇಲಕ್ಕೂ ಪ್ರಸೃತಾಃ= ಹರಡಿಕೊಂಡಿವೆ. ಮನುಷ್ಯ ಲೋಕೇ= ಮನುಷ್ಯ ಲೋಕದಲ್ಲಿ ಕರ್ಮಾನುಬಂಧೀನಿ= ಕರ್ಮಸಂಬಂಧವುಳ್ಳ ಮೂಲಾನಿ= ಬೇರುಗಳು ಅಧಃ ಚ = ಕೆಳಗಡೆ ಅನುಸಂತಾನಿ= ಹರಡಿಕೊಂಡಿವೆ.

ವಿವರಣೆ:– (೧) ತಸ್ಯ ಶಾಖಾಃ ಅಧಃ ಊರ್ಧ್ವಂ ಪ್ರಸೃತಾಃ; ಗುಣಪ್ರವೃದ್ಧಾಃ:-ಪ್ರಕೃತಿಮಾತೆಯ ಮಹಾನ್ಗರ್ಭದಿಂದ ಮಹತ್ತು ಅಹಂಕಾರ ಪಂಚತನ್ಮಾತ್ರೆಗಳೆಂಬ ಸಪ್ತ ಕಾರಣೋಪಾಧಿತತ್ತ್ವಗಳೂ ಪಂಚಭೂತ ಏಕಾದಶೇಂದ್ರಿಯ ಎಂಬ ಷೋಡಶ ಕಾರ್ಯೋಪಾಧಿತತ್ತ್ವಗಳೂ ಮೂಡಿಬಂದವು. ಕಾರಣೋಪಾಧಿಗಳಲ್ಲಿ ಪುರುಷೋತ್ತಮಚೈತನ್ಯ ಪ್ರತಿಫಲಿಸಿದಾಗ ಹಿರಣ್ಯಗರ್ಭ ಸೂತ್ರಾತ್ಮ ವಿರಾಡಾತ್ಮರು ತೋರಿದರು. ಕಾರ್ಯೋಪಾಧಿಗಳಲ್ಲಿ ಆ ಚೈತನ್ಯವು ಪ್ರತಿಬಿಂಬಿಸಿದಾಗ ಮನುಷ್ಯ ಹಾಗು ಇತರ ಅಸಂಖ್ಯ ಜೀವರುಗಳು ಉದಿಸಿದರು. ಪ್ರಕೃತಿಯು ಅಶ್ವತ್ಥ ವೃಕ್ಷದ ಬುಡ; ಹಿರಣ್ಯಗರ್ಭಾದಿ ದೇವತೆಗಳು ಊರ್ಧ್ವಸ್ಥರ

ದಲ್ಲಿ ಹಬ್ಬಿದ ಶಾಖೆಗಳು. ಮನುಷ್ಯಜೀವಿಗಳು ಮಧ್ಯಸ್ತರದಲ್ಲಿ ಹಬ್ಬಿದ ಶಾಖೆಗಳು. ಪಶು ಪಕ್ಷಿ ಕ್ರಿಮಿ ಕೀಟಾದಿಗಳೆಲ್ಲ ಅಧಃಸ್ತರದಲ್ಲಿ ಹಬ್ಬಿದ ಶಾಖೆಗಳು. ಸತ್ವ ರಜ ತಮ ಈ ಮೂರು ಪ್ರಾಕೃತಿಕ ಗುಣಗಳಿಂದ ಈ ಶಾಖೆಗಳು ವರ್ಧಿಸಿವೆ, ವರ್ಧಿಸುತ್ತವೆ. ಊರ್ಧ್ವಶಾಖೆಗಳಲ್ಲಿ ಸತ್ವರಸ ಹರಿಯುತ್ತಿದೆ; ಮಧ್ಯ ಶಾಖೆಗಳಲ್ಲಿ ರಜೋ ರಸ ಹರಿಯುತ್ತಿದೆ; ಅಧಶ್ಶಾಖೆಗಳಲ್ಲಿ ತಮೋ ರಸ ಹರಿಯುತ್ತಿದೆ. ಸತ್ವರಸವನೀಂಟಿದ ದೇವತೆಗಳ ಅಂತರಂಗವೆಲ್ಲ ದೇವಬೆಳಗಿನಿಂದ ತುಂಬಿಹೋಗಿದೆ. ರಜೋರಸವನೀಂಟಿದ ಮಾನವರ ಅಂತರಂಗವು ಕಾಮಾದಿ ಭಾವನೆಗಳಿಂದ ಕೂಡಿಕೊಂಡಿದೆ. ತಮೋರಸವನೀಂಟಿದ ಇತರ ಜೀವಿಗಳ ಅಂತರಂಗವು ಅಜ್ಞಾನಾಂಧಕಾರದಿಂದ ಮುಚ್ಚಿದೆ. ಸಂಕ್ಷೇಪವಾಗಿ ಹೇಳಬೇಕಾದರೆ, ಅಶ್ವತ್ಥ ವೃಕ್ಷದ ಯಾವ ಯಾವ ಭಾಗಗಳಲ್ಲಿ ಪರಿಶುದ್ಧಿ ಪ್ರಕಾಶ ಸೌಂದರ್ಯ ಸಂತೋಷಗಳು ವ್ಯಕ್ತವಾಗುತ್ತಿವೆಯೋ ಅವೆಲ್ಲ ಸತ್ವಗುಣವರ್ಧಿತ; ಯಾವ ಭಾಗಗಳಲ್ಲಿ ಮದ, ಲೋಭ, ಕಾಮ, ಕೋಪ, ಕದನ ಭಾವನೆಗಳು ಏಳುತ್ತವೆಯೋ ಅವು ರಜೋಗುಣವರ್ಧಿತ; ಯಾವ ಭಾಗಗಳಲ್ಲಿ ಮಂದತೆ ಮಾಲಿನ್ಯತೆ ಕಾಠಿಣ್ಯತೆ ನಿದ್ರೆ ಆಲಸ್ಯಗಳಿವೆಯೋ ಆ ಭಾಗಗಳು ತಮೋವರ್ಧಿತ; ಎಂದು ತಿಳಿಯಬೇಕು.

(೨) ವಿಷಯಪ್ರವಾಲಾಃ:– ಅಶ್ವತ್ಥ ವೃಕ್ಷದ ಶಾಖಾಂತ್ಯದಲ್ಲಿ ಮುತ್ತಿಕೊಂಡ ಎಲೆ ಚಿಗುರು ಮುಗುಳುಗಳೇ ಶಬ್ದಾದಿ ಪಂಚವಿಷಯಗಳು. ಅವು ಶ್ರೋತ್ರಕ್ಕೆ ಮಂಜುಳ, ಸ್ಪರ್ಶಕ್ಕೆ ಮೃದು, ಕಣ್ಣಿಗೆ ಅಂದ, ರಸನೆಗೆ ರುಚಿ, ಘ್ರಾಣಕ್ಕೆ ಪರಿಮಳ. ಅವು ಕ್ಷಣಿಕ ಸಂತೋಷ ನೀಡುತ್ತವೆ: ಮತ್ತೊಂದು ಕ್ಷಣ ಇವೇ ಪ್ರವಾಲಗಳು ದುಃಖ ಈಯುತ್ತವೆ. ಮಗುದೊಂದು ಕ್ಷಣ ಮೋಹ ಉಂಟುಮಾಡುತ್ತವೆ. ಸತ್ವಗುಣದ ಪರಿಣಾಮವು ಸಂತೋಷ; ರಜೋಗುಣದ ಪರಿಣಾಮ ದುಃಖ; ತಮಸ್ಸಿನ ಪರಿಣಾಮವು ಜಾಡ್ಯತಾ. ಈ ಮೂರು ಗುಣಗಳನ್ನುಂಡೇ ಪ್ರವಾಲಗಳು ಬೆಳೆದುಕೊಂಡಿವೆ.

(೩) ಅಧಶ್ಚ ಮೂಲಾನ್ಯನುಸಂತತಾನಿ, ಕರ್ಮಾನುಬಂಧೀನಿ ಮನುಷ್ಯಲೋಕೇ:- ಮನುಷ್ಯಲೋಕದ ಜೀವರು ಸದಾ ಕರ್ಮಗಳನ್ನು ಮಾಡುತ್ತಾರೆ. ಆ ಕರ್ಮಗಳು 'ವಾಸನಾ'ರೂಪದಿಂದ ಮನಸ್ಸಿನಲ್ಲಿ ಉಳಿದುಕೊಳ್ಳುತ್ತವೆ. ಈ ವಾಸನೆಗಳಿಗೆ 'ಕರ್ಮಾನುಬಂಧೀನಿ' ಎನ್ನುತ್ತಾರೆ. ಇವೇ 'ಮೂಲಾನಿ', ಉಪಬೇರುಗಳು (ಆಗಂತುಕ ಬೇರುಗಳು) ಇವು ಅಧೋಮುಖವಾಗಿವೆ; ಅಂದರೆ ಈ ವಾಸನೆಗಳು ವಿಷಯ–ಮುಖವಾಗಿವೆ. ಜೀವಿಗಳನ್ನೆಲ್ಲ ವಿಷಯ ಪ್ರವಾಲಗಳತ್ತ ಎಳೆದೊಯ್ಯುತ್ತವೆ.

ನ ರೂಪಮಸ್ಯೇಹ ತಥೋಪಲಭ್ಯತೇ
ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।

ಅಶ್ವತ್ಥಮೇನಂ ಸುವಿರೂಢಮೂಲ
ಮಸಂಗಶಸ್ತ್ರೇಣ ದೃಢೇನ ಛಿತ್ತ್ವಾ ॥೩॥
ತತಃ ಪದಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ಗತಾ ನ ನಿವರ್ತಂತಿ ಭೂಯಃ ॥
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥೪॥

ಅರ್ಥ:- ಇಹ=ಈ ಸಂಸಾರದಲ್ಲಿ ಅಸ್ಯ= ಇದರ ರೂಪಂ= ರೂಪವು ತಥಾ= ಹಿಂದೆ ಹೇಳಿದ ಪ್ರಕಾರ ನ ಉಪಲಭ್ಯತೇ=ಕಾಣುವದಿಲ್ಲ. ಅಂತಃ ಆದಿಃ ಚ ಸಂಪ್ರತಿಷ್ಠಾ= ಇದರ ಅಂತ ಆದಿ ಮತ್ತು ಮಧ್ಯವು ನ ಉಪಲಭ್ಯತೇ= ಕಾಣುವದಿಲ್ಲ.ಏನಂ= ಈ ಸುವಿರೂಢ ಮೂಲಂ= ಚೆನ್ನಾಗಿ ಬೇರೂರಿರುವ ಅಶ್ವತ್ಥಂ= ಅಶ್ವತ್ಥವನ್ನು ದೃಢೇನ= ದೃಢವಾದ ಅಸಂಗ ಶಸ್ತ್ರೇಣ= ಅಸಂಗವೆಂಬ ಶಸ್ತ್ರದಿಂದ ಛಿತ್ವಾ= ಕತ್ತರಿಸಿ ತತಃ=ಅನಂತರ ಯಸ್ಮಿನ್ ಗತಾಃ= ಯಾವುದನ್ನು ಸೇರಿದವರು ಭೂಯಃ ನ ನಿವರ್ತಂತಿ= ಪುನಃ ಹಿಂತಿರುಗುವದಿಲ್ಲವೋ ತತ್ ಪದಂ=ಆ ಪದವು ಪರಿಮಾರ್ಗಿತವ್ಯಂ= ಹುಡುಕಲ್ಪಡತಕ್ಕದ್ದು. ಯತಃ= ಯಾವನಿಂದ ಪುರಾಣೀ= ಈ ಪುರಾತನವಾದ ಪ್ರವೃತ್ತಿಃ= ಸಂಸಾರ ಪ್ರವೃತ್ತಿಯು ಪ್ರಸೃತಾ= ಉದ್ಗಮಿಸಿ ದೆಯೋ ತಂ=ಆ ಆದ್ಯಂ ಪುರುಷಂ ಏವ ಆದ್ಯನಾದ ಪುರುಷನನ್ನೇ ಪ್ರಪದ್ಯೇ=ಶರಣು ಹೋಗುತ್ತೇನೆ.

ವಿವರಣೆ:- (೧) ಇಹ ಅಸ್ಯ ರೂಪಂ ತಥಾ ನ ಉಪಲಭ್ಯತೇ:- ಅಜ್ಞಾನಾಂಧಕಾರದಲ್ಲಿ ಮುಳುಗಿದ ಮನುಷ್ಯನಿಗೆ ಸಂಸಾರವೃಕ್ಷವು ಅತ್ಯಂತ ಸತ್ಯ ಸುಂದರ ಸುಖಾತ್ಮಕವಾಗಿ ತೋರುತ್ತದೆ. ಆದರೆ, ಆ ಅಜ್ಞಾನರಜನಿ ಸರಿದು ಅಮಲ ಜ್ಞಾನನೇಸರನು ಉದಿಸಿದ ತತ್‌ಕ್ಷಣದಲ್ಲಿಯೇ ಈ ಸಂಸಾರರೂಪ ಅಶ್ವತ್ಥವೃಕ್ಷದ ಮೋಹಕರೂಪವು ಮೊದಲಿನಂತೆ (ತಥಾ) ಕಾಣಬರುವದಿಲ್ಲ. ಅದರ ನಾಮರೂಪಗಳ ಮರೆಯಲ್ಲಿ ನೆಲೆಸಿದ ಅಮೃತಾತ್ಮಚೈತನ್ಯವು ಮಾತ್ರ ಗೋಚರಿಸುತ್ತದೆ.

(೨) ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ:- ನಿಜವಾಗಿ ನೋಡಿದರೆ, ಸಂಸಾರಕ್ಕೆ ಯಾವ ಅರ್ಥವಿದೆ? ಅದಕ್ಕೆ ಆದಿ ಮಧ್ಯ ಅಂತಗಳೇ ಇಲ್ಲ. ಅದು ಮಲಿನ ಮನಸ್ಸಿನಲ್ಲಿ ಮೂಡಿದ ಕನಸು! ಮಾಯಾವೃತ ಕಣ್ಣಿಗೆ ಭಾಸವಾದ ಕಣ್ಕಟ್ಟು! ಆದರೇನು, ಭ್ರಮಾತ್ಮಕವಾದ ಈ ಅನಾಧಾರಿತ ಸಂಸಾರವೃಕ್ಷ ಅಜ್ಞರ ಹೃದಯದಲ್ಲಿ ಸಂಪ್ರತಿಷ್ಠಗೊಂಡಿದೆ; ಆಳವಾಗಿ ಬೇರು ಬಿಟ್ಟಿದೆ; ಬಲ್ಲಿದ ಬಲ್ಲಿದರನ್ನೆಲ್ಲ ದಿಗ್ಭ್ರಮೆಗೊಳಿಸಿದೆ. ಇದರ ಆಕರ್ಷಣೆಗೆ ಸಿಗದವರಾರು?

(೩) ಅಶ್ವತ್ಥಮೇನಂ ಸುವಿರೂಢಮೂಲಂ ಅಸಂಗಶಸ್ತ್ರೇಣ ದೃಢೇನ ಛಿತ್ವಾ:- ಚೆನ್ನಾಗಿ ಬೇರೂರಿದ ಈ ಸಂಸಾರವೆಂಬ ಅಶ್ವತ್ಥವೃಕ್ಷವನ್ನು ಸಾಧಕನು ಆಮೂಲವಾಗಿ ಕಡಿದು ಹಾಕಬೇಕು; ಬಲಿಷ್ಠವಾದ ಅಸಂಗ ಶಸ್ತ್ರದಿಂದ! 'ನಾನು, ನನ್ನದು' ಎಂಬ ಭಾವದ್ವಯವಿಲ್ಲದ ನಿರ್ಮಲಬುದ್ಧಿ-ಅಸ್ತ್ರದಿಂದ! 'ನಾನು

ತಾಯಿ ತಂದೆಯಲ್ಲ, ಗುರು ಶಿಷ್ಯನಲ್ಲ, ಗೃಹಸ್ಥ ಸನ್ಯಾಸಿಯಲ್ಲ; ಅವೆಲ್ಲ ನಿರಾಧಾರ ಕಲ್ಪನೆಗಳು; ನಾನು ನಿರಂಜನ ಪ್ರಭು' ಎಂಬ ವಿಚಾರಧಾರಾರೂಪ ಹರಿತ ಖಡ್ಗದಿಂದ!!

(೪) ತತಃ ಪದಂ....:– ಹಾಗೆ ಸಂಸಾರ ವ್ಯಾಮೋಹವನ್ನು ಛೇದಿಸಿದ ಬಳಿಕ, ಆ ಪರಮ ಪದವನ್ನು ಅನ್ವೇಷಿಸಬೇಕು; ಯಾವುದನ್ನು ಪಡೆದರೆ ಪುನರಾವರ್ತನೆಯಿಲ್ಲವೋ ಅಂಥ ಮುಕ್ತಿಯನ್ನು ಅರಸಬೇಕು! ಯಾವನ ಸಾನಿಧ್ಯದಿಂದ ವಿಶ್ವವೃಕ್ಷವು ಹಾಗು ಸಂಸಾರ ಪ್ರವೃತ್ತಿಯು ಉಗಮಿಸಿತೋ ಅಂಥ ಆದಿ ಪುರುಷನಿಗೆ ಸಂಪೂರ್ಣ ಶರಣಾಗಬೇಕು. ಹಾಗೆ ಮಾಡಿದರೆ ವಿನಿರ್ಮುಕ್ತಿ ಕೈವಶ.

ಒಂದು ಸಮಾನಾರ್ಥದ ಸ್ಮೃತಿವಚನವಿಲ್ಲಿ ಗಮನೀಯ.

"ಅವ್ಯಕ್ತಮೂಲಪ್ರಭವಸ್ತಸ್ಯೈವಾನುಗ್ರಹೋತ್ಥಿತಃ ।
ಬುದ್ಧಿಸ್ಕಂಧಮಯಶ್ಚೈವ ಇಂದ್ರಿಯಾಂತರ ಕೋಟರಃ ॥
ಮಹಾಭೂತವಿಶಾಖಶ್ಚ ವಿಷಯೈಃ ಪತ್ರವಾಂಸ್ತಥಾ ।
ಧರ್ಮಾಧರ್ಮಸುಪುಷ್ಪಶ್ಚ ಸುಖದುಃಖಫಲೋದಯಃ ॥
ಆಜೀವ್ಯಃ ಸರ್ವಭೂತಾನಾಂ ಬ್ರಹ್ಮವೃಕ್ಷಸ್ಸನಾತನಃ ।
ಏತದ್ಬ್ರಹ್ಮವನಂಚೈವ ಬ್ರಹ್ಮವೃಕ್ಷಸ್ಯ ತಸ್ಯ ತತ್ ॥
ಏತಚ್ಛಿತ್ವಾಚ ಭಿತ್ವಾ ಚ ಜ್ಞಾನೇನ ಪರಮಾಸಿನಾ ।
ತತಶ್ಚಾತ್ಮಗತಿಂ ಪ್ರಾಪ್ಯ ತಸ್ಮಾನ್ನಾವರ್ತತೇ ಪುನಃ" ॥

ಅರ್ಥ– ಅವಕ್ತಶಕ್ತಿವಿಶಿಷ್ಟ ಪುರುಷೋತ್ತಮನು ಈ ಅಶ್ವತ್ಥ ವೃಕ್ಷದ ಪ್ರಭವ; ಅವನ ಅನುಗ್ರಹದಿಂದಲೇ ಇದು ಹುಟ್ಟಿಬಂದಿದೆ. ಬುದ್ಧಿರೂಪ ಸ್ಕಂಧಗಳಿಂದ ಕೂಡಿದೆ. ವೃಕ್ಷಕ್ಕೆ ಇಂದ್ರಿಯಗಳು ಕೋಟರ; ಮಹಾಭೂತಗಳು ವಿವಿಧ ಶಾಖೆಗಳು; ವಿಷಯಗಳು ಪತ್ರಗಳು; ಧರ್ಮಾಧರ್ಮಗಳು ಸುಗಂಧ ಪುಷ್ಪಗಳು; ಸುಖದುಃಖಗಳು ಫಲಗಳು; ಸನಾತನವಾದ ಈ ಬೃಹದ್ವೃಕ್ಷವು ಸರ್ವಭೂತಗಳ ಆಶ್ರಯಸ್ಥಾನ. ಇಂಥ ವೃಕ್ಷದಿಂದ ಕೂಡಿದುದು ಬಹ್ಮವನ; ಬ್ರಹ್ಮನ ಆಸ್ತಿ. ಈ ವನವನ್ನು ಜ್ಞಾನಖಡ್ಗದಿಂದ ಛಿನ್ನ ವಿಚ್ಛಿನ್ನವಾಗಿ ಕಡಿದು, ಸಾಧಕನು ಆ ಅಂತಗತಿಯಾದ ಪುರುಷೋತ್ತಮನನ್ನು ಹೊಂದಿ ಬಳಿಕ ಮತ್ತೆ ಸಂಸಾರಕ್ಕೆ ಬರುವದಿಲ್ಲ.

ಸಂಬಂಧ:– ಅಶ್ವತ್ಥ ವೃಕ್ಷಚ್ಛೇದದಿಂದ ಮುಕ್ತಿ ಸಾಧ್ಯ ಎಂದು ಹೇಳಿದ ಭಗವಂತನು ಮುಂದಿನ ಮಂತ್ರದಲ್ಲಿ ಮುಕ್ತಿಯ ಬೇರೆ ಉಪಾಯವನ್ನು ಸೂಚಿಸುತ್ತಾನೆ.

ನಿರ್ಮಾನ ಮೋಹಾ ಜಿತಸಂಗದೋಷ
ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಃ ॥
ದ್ವಂದ್ವೈರ್ವಿಮುಕ್ತಾಃ ಸುಖದುಃಖ ಸಂಜ್ಞೈ
ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥೫॥

**ಅರ್ಥ:**— ನಿರ್ಮಾನಮೋಹಾಃ= ಮಾನ-ಮೋಹವಿಲ್ಲದವರೂ, ಜಿತಸಂಗದೋಷಾಃ = ವಿಷಯಾಸಕ್ತಿದೋಷ ಜಯಿಸಿದವರೂ, ಅಧ್ಯಾತ್ಮನಿತ್ಯಾಃ= ಆತ್ಮಜ್ಞಾನದಲ್ಲಿ ಪರಿನಿಷ್ಠರೂ, ವಿನಿವೃತ್ತಕಾಮಾಃ= ಸರ್ವ ಕಾಮನಾರಹಿತರೂ, ಸುಖದುಃಖಸಂಜ್ಞೈಃ ದ್ವಂದ್ವೈ= ಸುಖ ದುಃಖಗಳೆಂಬ ದ್ವಂದ್ವಗಳಿಂದ ವಿಮುಕ್ತಾಃ= ವಿಮುಕ್ತರೂ(ಆದ) ಅಮೂಢಾಃ= ಅಮೂಢರು (ಜ್ಞಾನಿಗಳು)ತತ್= ಆ ಅವ್ಯಯ ಪದಂ= ಅವ್ಯಯ ಪದವನ್ನು ಗಚ್ಛಂತಿ= ಹೊಂದುತ್ತಾರೆ.

**ವಿವರಣೆ:**— ಭಗವಂತ:— "ಪಾರ್ಥ, ನಿನಗೆ ಮೋಕ್ಷ ಪಡೆವ ಬಯಕೆ ಇದೆಯಲ್ಲವೆ? ಅದಕ್ಕೊಂದು ಉಪಾಯಾಂತರವನ್ನು ಸೂಚಿಸುತ್ತೇನೆ. ಅಭಿಮಾನ ಹಾಗು ವ್ಯಾಮೋಹರೂಪ ಪಂಕದಿಂದ ಹೊರಗೆ ಬಾ. ಸಾಂಸಾರಿಕ ಆಸಕ್ತಿಯನ್ನು ಬಿಟ್ಟುಕೊಡು. ಸದಾ ಪರಮಾತ್ಮನಾದ ನನ್ನ ಚಿಂತನೆಯಲ್ಲಿ ಮುಳುಗು. ಅನಾತ್ಮ ಕಾಮನೆಗಳನ್ನು ಮನಸ್ಸಿನಿಂದ ಹೊರದಬ್ಬು. ಸುಖದುಃಖಾದಿಗಳು ಬಂದಾಗ ಪ್ರಶಾಂತನಾಗಿರು. ಹೀಗೆ ಮಾಡಿದೆಯಾದರೆ ನೀನೇ ವಿವೇಕಿ; ನಿಶ್ಚಿತವಾಗಿಯೂ ಮುಕ್ತಿಪದ ಪಡೆಯುವಿ."

(೧) ಅಮೂಢಾಃ:— ಅವಿವೇಕವಿಲ್ಲದ ಜಾಣರು; ಸಾರಾಸಾರ ವಸ್ತು ವಿವೇಚನಾ ಕುಶಲರು; ಜಾಗ್ರುತ ಪ್ರಜ್ಞರು ಹಾಗು ಸತ್ಯದರ್ಶಿಗಳು.

(೨) ನಿರ್ಮಾನ ಮೋಹಾಃ:— ಅಂತಸ್ಸತ್ವವಿಲ್ಲದ ಜನರು ಜಗತ್ತಿನ ಜನತೆಯಿಂದ ಮಾನ ಮರ್ಯಾದೆ ಪ್ರಶಂಸೆ ಕೀರ್ತಿಗಳನ್ನು ಆಶಿಸುತ್ತಾರೆ. ಆಲೋಚನಾಪರರಲ್ಲದ ಅವರು ಕಂಡಕಂಡ ಪದಾರ್ಥಗಳಲ್ಲಿ ವ್ಯಾಮೋಹಗೊಳ್ಳುತ್ತಾರೆ. ಅಮೂಢರು ಅರಿತ ಅನುಭಾವಿಗಳು; ಅವರ ಹೃದಯದಲ್ಲಿ ಆತ್ಮಜ್ಞಾನ ಸಂಪದ ಸೇಖರಿತವಾಗಿದೆ. ಆದುದರಿಂದ ಬಾಹ್ಯ ಮಾನದ ಆಶೆ ಅವರಲ್ಲಿಲ್ಲ; ವಿಷಯ ವ್ಯಾಮೋಹದ ಜಾಡ್ಯ ಅವರಿಗಿಲ್ಲ!

(೩) ಜಿತಸಂಗದೋಷಾಃ:— ಸಂಗ= ವಿಷಯಪ್ರೇಮ; ಅದು ಮನೋದೋಷ; ಅಮೂಢರು ಅದನ್ನು ಜಯಿಸಿದ್ದಾರೆ; ಅಂದರೆ ಪುತ್ರ ದಾರಾ ಗೃಹಾದಿ ಸಾಂಸಾರಿಕ ವಿಷಯಗಳ ಆಕರ್ಷಣಾಜಾಲದಿಂದ ಅವರು ಪಾರಾಗಿದ್ದಾರೆ.

(೪) ಅಧ್ಯಾತ್ಮನಿತ್ಯಾಃ:— ಜಾಗ್ರುತಪ್ರಜ್ಞರು ಆತ್ಮಜ್ಞಾನನಿಷ್ಠರು. ಅವರ ಮಾತು, ಮನ, ಬುದ್ಧಿ, ಭಾವಗಳ ತುಂಬ ಆತ್ಮವಿದ್ಯಾ ರಸ ತುಂಬಿಕೊಂಡಿದೆ.

(೫) ವಿನಿವೃತ್ತಕಾಮಾಃ, ದ್ವಂದ್ವೈರ್ವಿಮುಕ್ತಾಃ:— ವಿವೇಕಿಗಳ ಹೃದಯದಲ್ಲಿ ಅನಾತ್ಮಕಾಮನಾತರಂಗಗಳು ಏಳುವದೇ ಇಲ್ಲ; ಬೇಕು ಬೇಡೆಂಬ ಭಾವವನ್ನೇ ಬಿಟ್ಟ ಆ ಧೀರರು ಸುಖದುಃಖಾದಿ ವಿವಿಧ ದ್ವಂದ್ವಗಳ ಬಂಧನದಿಂದ ಪಾರಾಗಿದ್ದಾರೆ.

(೬) ಗಚ್ಛಂತಿ ತತ್ ಅವ್ಯಯ ಪದಂ:— ಅವರು ಎಂದೆಂದಿಗೂ ಚಿರಸ್ಥಾಯಿಯಾದ, ನಿತ್ಯ ನಿರಾಮಯವಾದ ಪವಿತ್ರ ಪದವನ್ನು ಹೊಂದುತ್ತಾರೆ; ಪುರುಷೋತ್ತಮನ ದಿವ್ಯಾಕಾಶದಲ್ಲಿ ಬೆರೆತು ಹೋಗುತ್ತಾರೆ.

ಸಂಬಂಧ:– ಅಮೂಢರು ಪಡೆದ 'ಪರಮಪದ'ದ ವಿಶೇಷ ವರ್ಣನೆ.

ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥೬॥

ಅರ್ಥ:– ಸೂರ್ಯಃ= ಸೂರ್ಯನು ತತ್= ಅದನ್ನು ನ ಭಾಸಯತೇ= ಬೆಳಗುವದಿಲ್ಲ. ಶಶಾಂಕಃ= ಚಂದ್ರನು ಪಾವಕಃ= ಅಗ್ನಿಯು (ಅದನ್ನು) ನ ಭಾಸಯತೇ= ಪ್ರಕಾಶಿಸುವದಿಲ್ಲ. ಯದ್ಗತ್ವಾ= ಯಾವದನ್ನು ಹೊಂದಿ ನ ನಿವರ್ತಂತೇ= ಹಿಂತಿರುಗುವದಿಲ್ಲವೋ ತತ್= ಅದೇ ಮಮ= ನನ್ನ ಪರಮಂ= ಶ್ರೇಷ್ಠವಾದ ಧಾಮ= ಸ್ಥಾನವು.

ವಿವರಣೆ:– ಭಗವಂತ:– "ಭಾರತ, ಜಾಗ್ರದ ಒಲವ ನೀಗಿ, ಸ್ವಪ್ನದ ಸಂಗ ಬಿಟ್ಟು, ಸುಷುಪ್ತಿಯ ಮೇರೆ ಮೀರಿ, ಆತ್ಮಬೆಳಗಿನ ಹೊಳಹನೀವ ತುರಿಯ ಮಂಡಲ ದಾಂಟಿ ಅನಂತತೆಯಲ್ಲಿ ಹೆಜ್ಜೆ ಹಾಕಿದ ಮಹಾತ್ಮರು ಮತ್ತೆಂದೂ ಬಾಹ್ಯಪ್ರಪಂಚದ ಬಲೆಗೆ ಬೀಳರು! ಇನ್ನೆಂದೂ ವಿಷಯಭೋಗಿಸಲು ಹಿಂತಿರುಗಿ ಬಾರರು! ಅರ್ಜುನಾ, ಅವರು ಪ್ರವೇಶಿಸಿದ ಆ ಅನಂತತೆಯೇ ಪರಮಪದ, ನನ್ನ ಪರಂಧಾಮ! ಅಲ್ಲಿ ಭೇದವಿಲ್ಲ; ವಿಕಾರ ವೀಚಿಗಳಿಲ್ಲ. ಅವರ್ಣನೀಯವಾದ ಚೈತನ್ಯ ಪ್ರಭೆಯೊಂದೇ ಅಖಂಡವಾಗಿ ವ್ಯಾಪಿಸಿದೆ. ಅದನ್ನು ಸೂರ್ಯ ಚಂದ್ರ ಅಗ್ನಿ ನಕ್ಷತ್ರ ಯಾವುದೂ ಬೆಳಗಲಾರದು! ಅದು ಅತೀತ ತತ್ತ್ವ! ನಿನ್ನ ಬಾಳಿನ ಗುರಿ ಆ ತತ್ತ್ವಸಿದ್ಧಿ! ಅದಕ್ಕಾಗಿ ಸನ್ನದ್ಧನಾಗು."

ಪ್ರಮಾಣವಚನ:– "ಯತ್ರ ನ ಸೂರ್ಯಸ್ತಪತಿ ಯತ್ರ ನ ವಾಯುರ್ವಾತಿ ಯತ್ರ ನ ಚಂದ್ರಮಾ ಭಾತಿ ಯತ್ರ ನ ನಕ್ಷತ್ರಾಣಿ ಭಾಂತಿ ಯತ್ರ ನಾಗ್ನಿರ್ದಹತಿ ಯತ್ರ ನ ಮೃತ್ಯುರ್ಪ್ರವಿಶತಿ ಯತ್ರ ನ ದುಃಖಾನಿ ಪ್ರವಿಶಂತಿ ಸದಾನಂದಂ ಪರಮಾನಂದಂ ಶಾಂತಂ ಶಾಶ್ವತಂ ಸದಾಶಿವಂ ಬ್ರಹ್ಮಾದಿವಂದಿತಂ ಯೋಗಿಧ್ಯೇಯಂ ಪರಂಪದಂ ಯತ್ರ ಗತ್ವಾ ನ ನಿವರ್ತಂತೇ ಯೋಗಿನಃ" (ಬೃ. ಜಾ. ಉ. ೮–೬).

ಎಲ್ಲಿ ಸೂರ್ಯನು ಪ್ರಕಾಶಿಸುವದಿಲ್ಲವೋ, ಎಲ್ಲಿ ವಾಯುವು ಬೀಸುವದಿಲ್ಲವೋ ಎಲ್ಲಿ ನಕ್ಷತ್ರ ಚಂದ್ರ ಅಗ್ನಿಗಳು ಪ್ರಕಾಶಿಸಲಾರವೋ, ಎಲ್ಲಿ ಮೃತ್ಯುವಿಗೆ ಪ್ರವೇಶವಿಲ್ಲವೋ, ಎಲ್ಲಿ ಸುಖ ದುಃಖಗಳು ಒಳಸೇರವೋ (ಆ ಪರಂಧಾಮವು ಭಗವಂತನ ಸ್ವರೂಪ), ಆ ಪರಮ ಪದವು ಸದಾನಂದ ಪರಮಾನಂದ ಶಾಂತ ಶಾಶ್ವತ ಸದಾಶಿವ ಬ್ರಹ್ಮಾದಿ ದೇವತಾವಂದಿತ, ಯೋಗಿಗಳ ಧ್ಯೇಯ. ಅದನ್ನು ಅರಿತ ಬಳಿಕ ಯೋಗಿಗಳು ಮರವೆಯ ಲೋಕಕ್ಕೆ ಮತ್ತೆ ಬರಲಾರರು.

ಸಂಬಂಧ:- ಜೀವಾತ್ಮನ ಸ್ವರೂಪವೇನು?

ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ ।
ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥೭॥

ಅರ್ಥ:– ಜೀವಲೋಕೇ =ಸ್ಥೂಲಾದಿ ಪಂಚದೇಹಗಳಲ್ಲಿ, ಜೀವಭೂತ= ಜೀವನಾಗಿ ಇರುವವನು, ಮಮ ಏವ = ನನ್ನದೇ ಆದ, ಸನಾತನಃ ಅಂಶಃ =ಸನಾತನ ರೂಪು(ಆ ಜೀವನು) ಪ್ರಕೃತಿಸ್ಥಾನಿ =ಪ್ರಕೃತಿಯಲ್ಲಿರುವ, ಮನಃಷಷ್ಠಾನೀಂದ್ರಿಯಾಣಿ =ಮನಯುಕ್ತ ಷಡಿಂದ್ರಿಯ

ಗಳನ್ನು ಕರ್ಷತಿ= (ತನ್ನ ವ್ಯವಹಾರಕ್ಕಾಗಿ), ಸೆಳೆದುಕೊಳ್ಳುತ್ತಾನೆ.

ವಿವರಣೆ:- ಭಗವಂತ:- "ಸ್ಥೂಲ ಸೂಕ್ಷ್ಮ ಕಾರಣ ಮಹಾಕಾರಣ ಹಾಗು ನಿರ್ಮಲ ಇವು ಪಂಚ ದೇಹಗಳು. ಈ ದೇಹಗಳೆಂಬ ಲೋಕಗಳಲ್ಲಿ ವಿಶ್ವ ತೈಜಸ ಪ್ರಾಜ್ಞ ಪಾರಮಾರ್ಥಿಕ ಹಾಗು ಉನ್ಮನಿ ಎಂಬ ನಾಮ ಧರಿಸಿ ವಾಸಿಸುವವನು ಜೀವನು. ಭರತೋತ್ತಮ, ಈ ಜೀವನು ಯಾರೆಂದು ಭಾವಿಸಿರುವಿ? ಅವನು ಪ್ರಕೃತಿಯ ಅಂಶನಲ್ಲ. ಭಗವಂತನಾದ ನನ್ನ ಚಿದಂಶ! ಆದರೂ ಮಹಾಮಾಯಾ ಮಲದ ಸಂಗದಿಂದಾಗಿ ನನ್ನಿಂದ ತಾನು ಭಿನ್ನ ಎಂಬ ಭಾವ ಪಡೆದ. ಪ್ರಕೃತಿಯ ಮಹಾಗರ್ಭದಿಂದ ಮೂಡಿಬರುವ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಮನ, ಬುದ್ಧಿ, ಚಿತ್ತ, ಅಹಂಕಾರ ಎನ್ನೆಲ್ಲ ಸಾಧನಗಳನ್ನು ಸೆಳೆದುಕೊಂಡು ವಿಷಯ ಪ್ರಪಂಚದಲ್ಲಿ ಮಗ್ನನಾದ. ಭೋಗೋಪಭೋಗಗಳಲ್ಲಿ ಮುಳುಗಿಬಿಟ್ಟ."

"ಅರ್ಜುನ, ತಾತ್ವಿಕ ಸತ್ಯದ ತಿಳಿವು ನಿನಗಿರಲಿ. ಜೀವರು ಹೇಗಿದ್ದರೂ ಸರಿಯೇ. ಪಾಪಿ ಪುಣ್ಯವಂತ, ಯೋಗಿ ಭೋಗಿ, ರಾಗಿ ವಿರಾಗಿ, ಪಂಡಿತ ಪಾಮರ, ಬ್ರಾಹ್ಮಣ ಶೂದ್ರ, ಪಶು ಪಕ್ಷಿ ಏನಾದರೂ ಅಷ್ಟೇ. ಅವರೆಲ್ಲ ನನ್ನ ಸಾಕ್ಷಾತ್ ಚಿತ್‌ಸ್ಫುರಣೆಗಳು. ನಾನು ವಿಶ್ವಜನಕ, ಅವರು ನನ್ನ ಮಕ್ಕಳು. ಅವರ ಅಂತರಂಗದಲ್ಲಿ ಹರಿಯುತ್ತಿರುವ ಚೈತನ್ಯರಕ್ತ ನನ್ನದು! ಇದನ್ನು ದೃಢವಾಗಿ ಅರಿತೆಯಾದರೆ ಜೀವ ಜೀವಭೇದ, ಜಾತಿ ವರ್ಣಭೇದ, ವರ್ಣಾಶ್ರಮಭೇದ, ಶ್ರೇಷ್ಠ ಕನಿಷ್ಠಭೇದ ಮಾಯವಾಗುತ್ತವೆ. ಸರ್ವಜೀವದಯಾಸಾಗರ ನೀನಾಗುವಿ. ಅಂಥ ನಿನಗೆ ಮಹಾತ್ಮ ಎಂದು ಅನ್ವರ್ಥಕ ನಾಮ."

ಸಂಬಂಧ:- ಆರೂ ಇಂದ್ರಿಯಗಳನ್ನು ಜೀವನು ಸದಾ ತನ್ನೊಂದಿಗೆ ಇಟ್ಟುಕೊಳ್ಳುತ್ತಾನೆ.

ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥೮॥

ಅರ್ಥ:- ಈಶ್ವರಃ= ಜೀವನು (ದೇಹದ ಅಧಿಪತಿ) ಯತ್= ಯಾವಾಗ ಶರೀರಂ = ಹೊಸ ಶರೀರವನ್ನು ಅವಾಪ್ನೋತಿ= ಹೊಂದುತ್ತಾನೆಯೋ, ಯತ್ ಚ ಅಪಿ= ಯಾವಾಗ ಉತ್ಕ್ರಾಮತಿ= ಹಳೆಯದನ್ನು ಬಿಟ್ಟು ಹೋಗುತ್ತಾನೆಯೋ ತದಾ ಆಗ ವಾಯುಃ= ಗಾಳಿಯು ಗಂಧಾನ್= ಗಂಧಗಳನ್ನು ಆಶ್ರಯಾತ್=(ಅವುಗಳ ಆಶ್ರಯ) ಸ್ಥಾನದಿಂದ ಇವ= (ಒಯ್ಯುವ) ಹಾಗೆ ಏತಾನಿ = ಈ ಷಡಿಂದ್ರಿಯಗಳನ್ನು ಗೃಹೀತ್ವಾ= ತೆಗೆದುಕೊಂಡು ಸಂಯಾತಿ=ಹೋಗುತ್ತಾನೆ.

ವಿವರಣೆ:- (೧) ಶರೀರ, ಅಂತಃಶರೀರ:- ಕಣ್ಣಿಗೆ ಕಾಣುವ, ಕೈಗೆ ನಿಲುಕುವ ದೇಹವು ಸ್ಥೂಲಶರೀರ. ದೃಷ್ಟಿಗೆ ಗೋಚರಿಸದ, ಕೈಗೆ ಸಿಲುಕದ ಸೂಕ್ಷ್ಮ ಮನಸ್ಸು ಅಂತಃಶರೀರ; ಪಂಚ ಸೂಕ್ಷ್ಮಜ್ಞಾನೇಂದ್ರಿಯಗಳು ಕೂಡ ಅಂತಃ ಶರೀರದ ಘಟಕಗಳು. ಸ್ಥೂಲದೇಹವು ಕಾಲಕ್ರಮದಲ್ಲಿ ನಾಶವಾಗುತ್ತದೆ. ಸೂಕ್ಷ್ಮದೇಹ ಮಾತ್ರ ಬ್ರಹ್ಮಸಾಕ್ಷಾತ್ಕಾರವಾಗುವವರೆಗೂ ಬಾಳಿಕೊಂಡಿರುವದು.

(೨) ಈಶ್ವರ:- ಎರಡೂ ಬಗೆಯ ದೇಹಗಳಲ್ಲಿ ವಾಸಿಸುವ ಜೀವಾತ್ಮನೇ ಈಶ್ವರ. ಅವನ ಅಂತರ್ನಿಲಯವು ಸೂಕ್ಷ್ಮದೇಹ; ಬಾಹ್ಯ ನಿಲಯವು ಸ್ಥೂಲ ದೇಹ. ಅವನು ಅಂತರ್ನಿಲಯದಲ್ಲಿರುವ ಅಹಂಕಾರಸ್ಥಾನದಲ್ಲಿ ನಿಂತು ಅಸಂಖ್ಯ ವಿಷಯಗಳ ಅನುಭವವನ್ನು ಮೆಲುಕು ಹಾಕುತ್ತಾನೆ; ಮನಸ್ಥಾನದಲ್ಲಿ ನಿಂತು ಸಂಕಲ್ಪ ವಿಕಲ್ಪಗಳ ಮಧ್ಯೆ ಸುತ್ತಾಡುತ್ತಾನೆ: ಚಿತ್ತ ಸ್ಥಾನದಲ್ಲಿ ನಿಂತು ಸ್ಮರಣ ಗಳ ಸುಳಿಯಲ್ಲಿ ಸುಳಿಯುತ್ತಾನೆ; ಬುದ್ಧಿಯಲ್ಲಿ ನಿಂತು ತರ್ಕ ವಿತರ್ಕ ಮಾಡು ತ್ತಾನೆ; ನಿಶ್ಚಯ-ನಿರ್ಣಯಗಳಿಗಾಗಿ ಯತ್ನಿಸುತ್ತಾನೆ. ಅದೇ ಜೀವನು ಬಾಹ್ಯ ನಿಲಯದಲ್ಲಿ ನಿಂತು ಅನ್ನ ನೀರುಗಳಿಗಾಗಿ, ಆರೋಗ್ಯ ಆದರಗಳಿಗಾಗಿ, ಸೌಂದರ್ಯ ಸಂಪದಗಳಿಗಾಗಿ ಹಾತೊರೆಯುತ್ತಾನೆ; ರೋಗ ಮುಪ್ಪು ಮರಣ ಗಳಿಗೆ ಭಯಪಡುತ್ತಾನೆ.

(೩) ಎರಡು ದೇಹಗಳಲ್ಲಿ ಸ್ಥೂಲದೇಹವು ಕ್ಷಣಿಕವಾದುದರಿಂದ ಮೇಲಿಂದ ಮೇಲೆ ನಾಶವಾಗುತ್ತದೆ; ಸೂಕ್ಷ್ಮದೇಹ ಒಂದೇ; ಜೀವಾತ್ಮನು ಪೂರ್ವದ ದೇಹ ವನ್ನು ಬಿಟ್ಟು ಹೊಸ ದೇಹವನ್ನು ಪಡೆಯುವಾಗ ಆ ಸೂಕ್ಷ್ಮದೇಹವನ್ನು ಎತ್ತಿ ಕೊಂಡು ಹೋಗುತ್ತಾನೆ. ಅಂದರೆ ವಾಯುವು ಪುಷ್ಪದಿಂದ ಗಂಧವನ್ನಷ್ಟೇ ಗ್ರಹಿಸಿ ಮುಂದೆ ಸಾಗುವಂತೆ, ಜೀವಾತ್ಮನು ಸ್ಥೂಲದೇಹವೆಂಬ ಪುಷ್ಪದಿಂದ ಮನೋಮಯ ಸೂಕ್ಷ್ಮಮಕರಂದವನ್ನಷ್ಟೇ ತೆಗೆದುಕೊಂಡು ಮತ್ತೊಂದು ಸ್ಥೂಲದೇಹದತ್ತ ಪ್ರಯಾಣ ಮಾಡುತ್ತಾನೆ.

ಸಂಬಂಧ:- ಜೀವಾತ್ಮನಿಗೆ ಮನಸ್ಸು ಹಾಗು ಜ್ಞಾನೇಂದ್ರಿಯಗಳಿಂದ ಯಾವ ಪ್ರಯೋಜನ ಇದೆ.?

ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥೯॥

ಭಾವ:- (ಅಯಂ) ಈ ಜೀವನು ಶ್ರೋತ್ರ ಚಕ್ಷು ಸ್ಪರ್ಶನ ರಸನ ಘ್ರಾಣ ಮತ್ತು ಮನಸ್ಸನ್ನು ಆಶ್ರಯಿಸಿ ವಿಷಯಗಳನ್ನು ಅನುಭವಿಸುತ್ತಾನೆ.

ವಿವರಣ:- (೧) ವಿಷಯಗಳು:- ಮೂರು ಪ್ರಕಾರ (ಅ) ಲೌಕಿಕ: ಶಬ್ದ ಸ್ಪರ್ಶ ರೂಪ ರಸ ಗಂಧ ಇತ್ಯಾದಿ. (ಆ) ವೈದಿಕ: ಪುಣ್ಯಕರ್ಮಗಳಿಂದ ದೊರೆಯ ಬಹುದಾದ ಸ್ವರ್ಗೀಯ ಭೋಗ ಭಾಗ್ಯಗಳು. (ಇ) ಪಾರಮಾರ್ಥಿಕ: ಧ್ಯಾನ ಸಾಧನೆಯಿದ ಸಮನಿಸುವ ದಿವ್ಯ ದರ್ಶನ. ದಿವ್ಯ ಆನಂದ ಹಾಗು ದಿವ್ಯಸಮರತಿ.

(೨) ಜೀವಾತ್ಮನು ಷಡೀಂದ್ರಿಯಗಳಿಂದ ಆ ಮೂರು ವಿಧ ವಿಷಯ ಗಳನ್ನು ಅನುಭವಿಸುತ್ತಾನೆ. ಪ್ರಾಪಂಚಿಕ ಭೋಗೋಪಭೋಗಗಳಲ್ಲಿಯೇ ಮುಳುಗಿದವ ಲೌಕಿಕಜೀವ; ಇವನು ಅಜ್ಞ, ಅವಿಚಾರಿ, ಸಂಸಾರಬದ್ಧ; ಇವನಿಗೆ ನ್ಯಾಯ-ನೀತಿ, ಧರ್ಮ ಧ್ಯೇಯ, ತತ್ತ್ವ ಸತ್ವ ಯಾವುದರ ಕಲ್ಪನೆಯೇ ಇಲ್ಲ. ಪಾಪ, ದಿನ ರಾತ್ರಿ ಕಷ್ಟ ಸ್ವಾರ್ಥಾದಿಗಳಿಗಾಗಿ ಜೀವ ತೇಯುತ್ತಿದ್ದಾನೆ. ಎರಡನೇ

ಯದಾಗಿ, ಸ್ವರ್ಗೀಯ ಭೋಗಗಳಲ್ಲಿ ಮುಳುಗಿದವ ವೈದಿಕಜೀವ; ಇವನು ಸುಸಂಸ್ಕೃತ ಅಜ್ಞ; ಸತ್ಯದರ್ಶನವಿಲ್ಲದ ಇವನು ಬದುಕಿರುವಷ್ಟು ಕಾಲ ಯಜ್ಞ ಯಾಗ ಮಾಡುತ್ತಾನೆ; ದೇಹಾಂತ್ಯದಲ್ಲಿ ಸ್ವರ್ಗಸೇರಿ ಯಥೇಷ್ಟವಾಗಿ ಸ್ವರ್ಗೀಯ ಸುಖಗಳನ್ನು ಆಸ್ವಾದಿಸುತ್ತಾನೆ. ಇವನೂ ಬದ್ಧನೆ. ಮೂರನೆಯದಾಗಿ, ಪಾರಮಾರ್ಥಿಕಸೌಖ್ಯದಲ್ಲಿ ಮನಬೆರೆಸಿದವ ಪಾರಮಾರ್ಥಿಕ ಜೀವ. ಇವನು ಇಹ ಪರ ಸೌಖ್ಯಗಳಿಂದ ಪರಾಙ್ಮುಖನಾಗಿ ಅಂತಸ್ಥ ಚಿಲ್ಲಿಂಗದ ದರ್ಶನ ಪಡೆಯುತ್ತಾನೆ; ಬಾಹ್ಯ ನಾಮ ರೂಪ ಕ್ರಿಯೆಗಳ ಪರದೆ ಹರಿದು ಅಲ್ಲಿ ನೆಲೆಸಿರುವ ವಿಶ್ವಾತ್ಮನ ಸಾಕ್ಷಾತ್ಕಾರ ಹೊಂದುತ್ತಾನೆ. ತನ್ನ ಇಂದ್ರಿಯಗಳಿಂದ ಆ ಭಗವಂತನ ದಿವ್ಯಶಬ್ದ ಸ್ಪರ್ಶ ರೂಪಾದಿಗಳನ್ನು ಅನುಭವಿಸುತ್ತಾನೆ. ಇವನು ವಿಮುಕ್ತ. ಇಂತು ಷಡಿಂದ್ರಿಯಗಳು ಜೀವನಿಗೆ ಭೋಗ ಮೋಕ್ಷ ಸಾಧನಗಳಾಗಿವೆ.

ಸಂಬಂಧ:– ಆತ್ಮನು ಸ್ಥೂಲ ಸೂಕ್ಷ್ಮ ದೇಹಗಳಿಗಿಂತ ಭಿನ್ನ; ಇದು ಸತ್ಯ. ಆದರೆ ಎಲ್ಲರಿಗೂ ಇದರ ಅರಿವು ಆಗುತ್ತಿಲ್ಲವೇಕೆ?

ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್
ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥೧೦॥

ಅರ್ಥ:– ಉತ್ಕ್ರಾಮಂತಂ = ಶರೀರವನ್ನು ಬಿಡುತ್ತಿರುವ, ಸ್ಥಿತಂ = ಶರೀರದಲ್ಲೇ ಇದ್ದು ಕೊಂಡಿರುವ, ವಾ =ಅಥವಾ ಭುಂಜಾನಂ =ವಿಷಯಗಳನ್ನು ಅನುಭವಿಸುತ್ತಿರುವ, ವಾ =ಅಥವಾ, ಗುಣಾನ್ವಿತಂ= ಗುಣಗಳಿಂದ ಕೂಡಿರುವ(ಇವನನ್ನು) ವಿಮೂಢಾಃ= ಮೂಢರು, ನಾನು ಪಶ್ಯಂತಿ= ನೋಡರು, ಜ್ಞಾನಚಕ್ಷುಷಃ =ಜ್ಞಾನಚಕ್ಷುವುಳ್ಳವರು, ಪಶ್ಯಂತಿ= ನೋಡುತ್ತಾರೆ.

ವಿವರಣೆ:– ಭಗವಂತ:– "ಅರ್ಜುನ, ಜೀವಾತ್ಮನು ಸಾಕ್ಷಾತ್ ನನ್ನ ಅಂಶ. ನನ್ನಂತೆ ಅವನು ನಿತ್ಯ ಪರಿಪೂರ್ಣ! ಜ್ಞಾನಾನಂದ ಸಾಗರ! ಇಷ್ಟೇ, ಅವನು ಬಾಹ್ಯಾಂತರೇಂದ್ರಿಯಗಳ ಸಹಾಯದಿಂದ ಸ್ಥೂಲ ದೇಹದಲ್ಲಿ ವಾಸಿಸುತ್ತಾನೆ; ಸಮಯ ಬಂದಾಗ ಈ ದೇಹಬಿಟ್ಟು ಮತ್ತೊಂದು ದೇಹಕ್ಕೆ ಹೋಗುತ್ತಾನೆ; ವಿವಿಧ ವಿಷಯಗಳನ್ನು ಅನುಭವಿಸುತ್ತಾನೆ; ಸತ್ವಾದಿ ಗುಣಗಳಿಂದೊಡಗೂಡಿ ಶುಭಾಶುಭಾದಿ ಕಾರ್ಯಗೈಯುತ್ತಾನೆ. ಹಾಗಿದ್ದರೂ ಅವನು ಅಲಿಪ್ತನೇ ಸರಿ. ಮೂಢ ಮನುಜರಿಗೆ ಈ ಸತ್ಯವು ಕಾಣದು. ಜ್ಞಾನನೇತ್ರವುಳ್ಳ ಮಹಾನುಭಾವರು ಮಾತ್ರ ಜೀವಾತ್ಮನ ನೈಜ ಸ್ವರೂಪವನ್ನು ನೋಡುತ್ತಾರೆ."

ಸಂಬಂಧ:-ಆತ್ಮತತ್ತ್ವ ದುರ್ವಿಜ್ಞೇಯವಾಗಿದೆ.

ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।
ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥೧೧॥

ಅರ್ಥ:-ಯತಂತಃ= ಪ್ರಯತ್ನ ಮಾಡುತ್ತಿರುವ, ಯೋಗಿನಃ= ಯೋಗಿಗಳು, ಏನಂ =ಈ ಆತ್ಮನನ್ನು, ಆತ್ಮನಿ ಅವಸ್ಥಿತಂ= ತಮ್ಮ ಹೃದಯದಲ್ಲಿರುವವನೆಂದು, ಪಶ್ಯಂತಿ=

ನೋಡುತ್ತಾರೆ, ಅಕೃತಾತ್ಮನಃ= ಅಸಂಸ್ಕೃತರಾದ, ಅಚೇತಸಃ= ಅವಿವೇಕಿಗಳು, ಯತಂತಃ ಅಪಿ= ಪ್ರಯತ್ನ ಮಾಡಿದರೂ, ಏನಂ =ಇವನನ್ನು, ನ ಪಶ್ಯಂತಿ= ಕಾಣಲಾರರು,

**ವಿವರಣೆ:-** ೧) ಯೋಗಿಗಳು ಹಾಗು ಅಕೃತಾತ್ಮರು: ಸತಿ ಸುತ, ಧನ ಧಾನ್ಯಾದಿ ಭೌತ ಭೋಗಗಳನ್ನು ಪರಿತ್ಯಜಿಸಿ, ಮನೋಗತ ಕಾಮ ಕ್ರೋಧ ಗಳನ್ನು ಹೊರದೂಡಿ, ಧಾರಣ ಧ್ಯಾನಗಳನ್ನು ಸಾಧಿಸಿ ಪಾರಮಾರ್ಥಿಕ ಕ್ಷೇತ್ರ ದಲ್ಲಿ ಪ್ರವೇಶಿಸಿದ ಮಹಾನುಭಾವರು ಯೋಗಿಗಳು. ಸಂತತ ಯತ್ನಶೀಲರಾದ ಅವರು ಧೀರಸಂತರು, ತ್ಯಾಗ ತಪ, ನಿಯಮ ಸಂಯಮ, ಧ್ಯಾನ ಚಿಂತನಗಳಿಲ್ಲದ ಸಂಸಾರಾಸಕ್ತರು ಅಕೃತಾತ್ಮರು, ನಿಜ ದರ್ಶನವಿಲ್ಲದ ಅಂಧರು.

೨) ದೇಹದಲ್ಲಿ, ವಿವಿಧ ತತ್ತ್ವಗಳಲ್ಲಿ, ಜಗತ್ತಿನ ಆದ್ಯಂತಗಳಲ್ಲಿ ವ್ಯಾಪಿಸಿ ರುವ ಈ ಪರಮ ಆತ್ಮನನ್ನು ಯೋಗಿಗಳು ನೋಡುತ್ತಾರೆ; ಅವಿವೇಕಿಗಳು (ಅಕೃತಾತ್ಮರು) ಅದೆಷ್ಟು ಯತ್ನಿಸಿದರೂ ಇವನನ್ನು ಕಾಣರು. ಏಕೆಂದರೆ ಅವರ ಮನಸ್ಸು ಮೋಹಧೂಮ್ರದಿಂದ ಆವೃತವಾಗಿದೆ.

**ಸಂಬಂಧ:** ಪರಮಾತ್ಮನ ವರ್ಣನೆಯು ಮುಂದಿನ ನಾಲ್ಕು ವಚನಗಳಲ್ಲಿದೆ.

ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥೧೨॥

**ಅರ್ಥ:-** ಆದಿತ್ಯಗತಂ= ಆದಿತ್ಯನಲ್ಲಿರುವ, ಯತ್= ಯಾವ, ತೇಜಃ= ತೇಜಸು ಅಖಿಲಂ ಜಗತ್= ಜಗತ್ತನ್ನೆಲ್ಲ, ಭಾಸಯತೇ= ಬೆಳಗುತ್ತಿದೆಯೋ ಯತ್= ಯಾವ ತೇಜಸ್ಸು ಚಂದ್ರಮಸಿ= ಚಂದ್ರನಲ್ಲಿದೆಯೋ, ಯತ್= ಯಾವ ತೇಜಸ್ಸು ಅಗ್ನೌ ಚ ಅಗ್ನಿಯಲ್ಲಿದೆಯೋ ತತ್ ತೇಜಃ= ಆ ತೇಜಸ್ಸು, ಮಾಮಕಂ = ನನ್ನದು, ವಿದ್ಧಿ= ತಿಳಿ.

**ವಿವರಣೆ:** ಭಗವಂತ:- "ಪಾರ್ಥ, ನಾನು ವಿಶ್ವವ್ಯಾಪಿವಿದ್ಯುಚ್ಚೇತನ. ನನ್ನ ಚೈತನ್ಯಶಕ್ತಿ ಯಾವ ವಸ್ತುವಿನಲ್ಲಿ ಅಭಿವ್ಯಕ್ತವಾಗುವದೋ ಆ ವಸ್ತುವು ಪ್ರಕಾಶಕ ಗುಣ ಪಡೆಯುತ್ತದೆ. ನನ್ನ ಅಮರ ಪ್ರಭೆಯಿಂದಲೇ ಸೂರ್ಯ ಪ್ರಚಂಡ ಪ್ರಕಾಶ ಬೀರುತ್ತಾನೆ; ಚಂದ್ರನು ಶಾಂತ ಶೀತಲ ಬೆಳಗನ್ನು ಹೊಮ್ಮಿ ಸುತ್ತಾನೆ; ತಾರೆಗಳು ಮಂದ ಮಂದವಾಗಿ ಮಿನುಗುತ್ತವೆ; ಅಗ್ನಿ ಉಗ್ರವಾಗಿ ದಹಿಸುತ್ತದೆ; ಮನಸ್ಸು ಹಾಗು ಇಂದ್ರಿಯಗಳು ವಸ್ತುಗಳನ್ನು ತೋರಿಸುತ್ತವೆ; ಬುದ್ಧಿ ಜ್ಞಾನ ರಶ್ಮಿಗಳನ್ನು ಹರಡುತ್ತದೆ. ಎಲ್ಲಿ ಜ್ಞಾನವಿದೆ, ಎಲ್ಲಿ ಕಾಂತಿಯಿದೆ, ಎಲ್ಲಿ ಬೆಳಗಿದೆ ಅದೆಲ್ಲ ನನ್ನ ಪ್ರಕಾಶದಿಂದಲೇ ಎಂದು ಪರಿಭಾವಿಸು."

ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।
ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥೧೩॥

**ಅರ್ಥ:-** ಅಹಂ =ನಾನು, ಗಾಂ =(ಸಮಗ್ರ) ಭೂಮಿಯನ್ನು, ಆವಿಶ್ಯ= ವ್ಯಾಪಿಸಿ (ಪ್ರವೇಶಿಸಿ), ಓಜಸಾ= (ನನ್ನ)ಓಜಸ್ ಶಕ್ತಿಯಿಂದ ಭೂತಾನಿ ಧಾರಯಾಮಿ= ಪ್ರಾಣಿಗಳನ್ನು ಧರಿಸುತ್ತೇನೆ (ರಕ್ಷಿಸುತ್ತೇನೆ) ರಸಾತ್ಮಕಃ= ರಸಸ್ವರೂಪನಾದ, ಸೋಮಃ ಭೂತ್ವಾ =ಚಂದ್ರ,

ನಾಗಿ ಸರ್ವಾಃ ಔಷಧೀಃ =ಎಲ್ಲ ವನಸ್ಪತಿಗಳನ್ನು, ಪುಷ್ಣಾಮಿ= ಪೋಷಿಸುತ್ತೇನೆ.

**ವಿವರಣ:–** ಭಗವಂತ– "ಧನಂಜಯ, ಪರಿಪೂರ್ಣನಾದ ನಾನು ಅಸಂಖ್ಯ ಆಕಾಶಕಾಯಗಳ ಬಾಹ್ಯಾಂತರದಲ್ಲೆಲ್ಲ ವ್ಯಾಪಿಸಿದ್ದೇನೆ. ಪೃಥ್ವಿಯ ಅಣು ಅಣು ಗಳ ಅಂತರ್ಯದಲ್ಲಿ ತುಂಬಿನಿಂದ ನಾನು ನನ್ನ ಅಪ್ರತಿಮ ಓಜಸ್ಸಾಮರ್ಥ್ಯದಿಂದ ಕ್ರಿಮಿ ಕೀಟ, ಪಶು, ಪಕ್ಷಿ, ಮನುಷ್ಯ ಇಂಥ ಸಕಲ ಜೀವಿಗಳನ್ನು ಧರಿಸುತ್ತೇನೆ. ಶೀತಲ ಅಮೃತರಸಾತ್ಮಕನಾದ ಸೋಮನಾಗಿ ಸರ್ವ ವಿಧದ ವನಸ್ಪತಿಗಳನ್ನು ಪೋಷಿಸುತ್ತೇನೆ."

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥೧೪॥

**ಅರ್ಥ:** ಅಹಂ= ನಾನು ಪ್ರಾಣಿನಾಂ ದೇಹಂ= ಪ್ರಾಣಿಗಳ ದೇಹವನ್ನು ಆಶ್ರಿತಃ= ಆಶ್ರಯಿಸಿದ ವೈಶ್ವಾನರಃ ಭೂತ್ವಾ= ಜಠರಾಗ್ನಿಯಾಗಿ ಪ್ರಾಣಾಪಾನ ಸಮಾಯುಕ್ತಃ= ಪ್ರಾಣ ಅಪಾನಗಳೊಂದಿಗೆ ಕೂಡಿದವನಾಗಿ ಚತುರ್ವಿಧಂ =ನಾಲ್ಕುವಿಧವಾದ ಅನ್ನಂ= ಅನ್ನವನ್ನು ಪಚಾಮಿ= ಜೀರ್ಣಮಾಡುತ್ತೇನೆ.

**ವಿವರಣೆ:–** ಚತುರ್ವಿಧ ಅನ್ನ– ನಾವು ಭುಂಜಿಸುವ ಆಹಾರ ನಾಲ್ಕು ವಿಧ. (ಅ) ಭಕ್ಷ್ಯ: ಹಲ್ಲಿನಿಂದ ಕಡಿದು ತಿನ್ನುವಂಥದು, ಉದಾ– ರೊಟ್ಟಿ ಬೇಳೆ ಇತ್ಯಾದಿ. (ಆ) ಭೋಜ್ಯ- ಕಡಿಯದೆ ತುಟಿ ನಾಲಿಗೆಗಳ ಸಹಾಯದಿಂದ ಸ್ವೀಕರಿಸಬೇಕಾದುದು. ಉದಾ- ಹಾಲು, ಮೊಸರು ಇತ್ಯಾದಿ. (ಇ) ಲೇಹ್ಯ: ನಾಲಿಗೆ ಮೇಲಿಟ್ಟು ರುಚಿಸುವಂಥದು. ಉದಾ- ಬೆಲ್ಲ, ಸಕ್ಕರೆ, ಜೇನು ಇತ್ಯಾದಿ. (ಈ) ಚೋಷ್ಯ: ಹಲ್ಲಿನಿಂದ ಕಡಿದು ನುರಿಸಿ ಸಿಪ್ಪೆ ಉಗುಳಿ ರಸ ಹೀರುವಂಥದು. ಉದಾ:- ಕಬ್ಬು ದಾಡಿಂಬ ಸೀತಾಫಲ, ಇತ್ಯಾದಿ.

(೨) **ವೈಶ್ವಾನರ:–** ಅಗ್ನಿ. ಅರಣ್ಯವನ್ನೇ ದಹಿಸುವ ದಾವಾಗ್ನಿ, ಸಮುದ್ರ ವನ್ನು ಪ್ರಕ್ಷುಬ್ಧಗೊಳಿಸುವ ವಡವಾಗ್ನಿ, ಅನ್ನವನ್ನು ಜೀರ್ಣಿಸುವ ಜಠರಾಗ್ನಿ ಮುಂತಾದವುಗಳು ಅಗ್ನಿಯ ಪ್ರಕಾರಗಳು. ಪ್ರಸ್ತುತ ಪ್ರಸಂಗದಲ್ಲಿ ಜಠರಾಗ್ನಿ ಎಂದೇ ಅರ್ಥಯಿಸಬೇಕು. ಜಠರಾಗ್ನಿಯ ಸ್ಥಾನ ಜಠರ, ದೇಹ ಮಧ್ಯ. ದೇಹ ವನ್ನು ಸುಡದಂತೆ ಅದು ನೆಲೆಸಿದೆ. ಅದರ ಶಾಖ ದೇಹದ ತುಂಬ ವ್ಯಾಪಿಸಿದೆ. ನಾವು ಸ್ವೀಕರಿಸಿದ ನಾಲ್ಕೂ ಬಗೆಯ ಆಹಾರ ಪದಾರ್ಥಗಳನ್ನು ಆ ಅಗ್ನಿಯು ಪಚನಗೊಳಿಸಿ ರಕ್ತದಲ್ಲಿ ಬೆರೆಸುತ್ತದೆ. ಜಠರಾಗ್ನಿಗೆ ಸಹಾಯಕವೆಂದರೆ ಪ್ರಾಣಾ ಪಾನಗಳು.

**ಭಗವಂತ:–** "ಭಾರತ, ದೇಹದಲ್ಲಿ ನಾನು ವೈಶ್ವಾನರನಾಗಿದ್ದೇನೆ. ಪ್ರಾಣ ಅಪಾನಗಳಿಂದ ಒಡಗೂಡಿ ಎಲ್ಲ ಬಗೆಯ ಅನ್ನವನ್ನು ಕರಗಿಸುತ್ತೇನೆ."

ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ
ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।

ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತ ಕೃದ್ವೇದ ವಿದೇವ ಚಾಹಮ್ ॥೧೫॥

**ಅರ್ಥ:**– ಅಹಂ= ನಾನು ಸರ್ವಸ್ಯ= ಎಲ್ಲರ ಹೃದಿ= ಹೃದಯದಲ್ಲಿ ಸಂನಿವಿಷ್ಟಃ= ಇದ್ದೇನೆ ಮತ್ತಃ= ನನ್ನಿಂದಲೇ ಸ್ಮೃತಿಃ =ಸ್ಮೃತಿ ಜ್ಞಾನಂ= ಜ್ಞಾನ ಚ= ಮತ್ತು ಅಪೋಹನಂ = ಲೋಪ (ಉಂಟಾಗುತ್ತವೆ). ಸರ್ವೈಃ ವೇದೈಃ= ಎಲ್ಲ ವೇದಗಳಿಂದ ಅಹಮೇವ ವೇದ್ಯ = ನಾನೇ ವೇದ್ಯ, ಅಹಮೇವ= ನಾನೇ ವೇದಾಂತಕೃತ್= ವೇದ ವೇದಾಂತ ನಿರ್ಮಾಪಕ ಹಾಗು ಪ್ರಸಾರಕ ಗುರು; ಅಹಮೇವ= ನಾನೇ ವೇದವಿತ್ = ವೇದ ವಿಜ್ಞಾನಿ.

**ವಿವರಣೆ:**–ಭಗವಂತ– "ಅರ್ಜುನ, ಅಪರಿಚ್ಛಿನ್ನನಾದ ನಾನು ಸರ್ವ ಜೀವರ ಹೃದಯ ಗುಹೆಯಲ್ಲಿ ಚೈತನ್ಯ ಜ್ಯೋತಿಯಾಗಿ ನೆಲೆಸಿದ್ದೇನೆ. ನನ್ನಲ್ಲಿ ಎರಡು ಶಕ್ತಿಗಳಿವೆ– ಅಲುಪ್ತ, ಲುಪ್ತ. ಪೂರ್ವಾನುಭೂತ ವಿಷಯಗಳ ಸ್ಮೃತಿ ಮತ್ತು ಬಾಹ್ಯಾಂತರ ವಸ್ತುಗಳ ಜ್ಞಾನ ಇವೆರಡು ಅಲುಪ್ತಶಕ್ತಿಯಿಂದ ಹುಟ್ಟುತ್ತವೆ. ಸ್ಮೃತಿ ಮತ್ತು ಜ್ಞಾನಗಳ ಲಯ ಅಥವಾ ಲೋಪವೇ ಅಪೋಹನ; ಅದು ಲುಪ್ತಶಕ್ತಿಯಿಂದಾಗಿ ತಲೆದೋರುತ್ತದೆ. ಸ್ಮೃತಿ, ಜ್ಞಾನ, ಅಪೋಹನ ಈ ಮೂರು ನಾನೇ ಎಂದು ಭಾವಿಸು. ಸಕಲ ವೇದ ಉಪನಿಷತ್ತುಗಳ ಮುಖ ನನ್ನತ್ತ. ಅವುಗಳ ಪರಮ ಧ್ಯೇಯನು ನಾನೇ. ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ ಇತ್ಯಾದಿ ಮಂತ್ರಗಳು ನನ್ನತ್ತಲೇ ಪ್ರವಹಿಸುತ್ತಿವೆ; ನನ್ನ ನೈಜಸ್ವರೂಪವನ್ನು ತಿಳಿಯಲು ತಿಳಿಸಲು ಯತ್ನಿಸುತ್ತಿವೆ. ಅಷ್ಟೇ ಅಲ್ಲ, ವೇದಾಂತವನಿಸಿದ ಉಪ ನಿಷದ್ವಿದ್ಯೆಯನ್ನು ಶಬ್ದರೂಪಕಳಿಸಿದವ ನಾನು; ಆ ವಿದ್ಯೆಯನ್ನು ಜಗತ್ತಿನಾದ್ಯಂತ ಹರಡುವ ಆಚಾರ್ಯನು ನಾನು. ವೇದ ವಿದ್ಯೆಯನ್ನು ಅಂಗವಿಸಿಕೊಂಡ ವೇದ ವಿದನೂ ನಾನೇ"

**ಸಂಬಂಧ:**– ಪರಂಧಾಮನೆನಿಸಿದ ದೇವನು ಸರ್ವೋತ್ತಮ-ಹೀಗೆ ಮುಂದಿನ ಮಂತ್ರಗಳು ಹೇಳಿವೆ.

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥೧೬॥

**ಅರ್ಥ:**– ಲೋಕೇ= ಈ ಲೋಕದಲ್ಲಿ ಕ್ಷರಃ ಚ ಅಕ್ಷರಃ= ಕ್ಷರ ಮತ್ತು ಅಕ್ಷರ ಎಂಬ ಇಮೌ ದ್ವೌ= ಈ ಇಬ್ಬರು ಪುರುಷೌ ಏವ= ಪುರುಷರು (ಪ್ರಸಿದ್ಧರಾಗಿದ್ದಾರೆ). ಸರ್ವಾಣಿ ಭೂತಾನಿ= ಎಲ್ಲ ದೇಹಗಳು ಕ್ಷರಃ= ಕ್ಷರ. ಕೂಟಸ್ಥಃ= ಕೂಟಸ್ಥನಾದ ಜೀವನು ಅಕ್ಷರ= ಅಕ್ಷರ (ಎಂದು) ಉಚ್ಯತೇ= ಹೇಳಲ್ಪಟ್ಟಿದ್ದಾನೆ.

**ವಿವರಣೆ:**– ಭಗವಂತ– "ಅರ್ಜುನ, ಲೋಕದಲ್ಲಿ ಕ್ಷರ ಅಕ್ಷರ ಎಂದು ಇಬ್ಬರು ಪುರುಷರಿದ್ದಾರೆ. ಪಂಚಭೂತಗಳಿಂದ ನಿರ್ಮಾಣವಾದ ಸಕಲ ದೇಹಗಳು ಕ್ಷರ ಪುರುಷ. ಆ ದೇಹಗಳಲ್ಲಿ ಕೇವಲ ಸಾಕ್ಷಿಯಾಗಿ ಕೂಟಸ್ಥ ಚೇತನವಾಗಿ ಇರುವ ಪುರಷನು ಅಕ್ಷರ . ಹೀಗೆ ಬಲ್ಲವರು ಹೇಳಿದ್ದಾರೆ. ಕ್ಷರ ಪುರುಷನು ಕಾಲಾಂತರದಲ್ಲಿ ನಾಶವಾಗುತ್ತಾನೆ. ಅಕ್ಷರ ಪುರುಷನು ತ್ರಿಕಾಲಾಬಾಧ್ಯ.

ಮಾಯೆಯ ಸಂಗದಿಂದ ಜೀವಭಾವ ತಳೆದರೂ ಅವನು ಮುಕ್ತ! ಜರಾ ಮರಣಗಳ ಕಲ್ಪನೆ ಹೊಂದಿದ್ದರೂ ಅವನು ಅನಶ್ವರ!"

ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥೧೭॥

ಭಾವ:– ತು= ಆದರೆ ಅನ್ಯಃ= (ಆ ಕ್ಷರ ಅಕ್ಷರ ಪುರುಷರಿಗಿಂತ) ಬೇರೆಯಾದ ಉತ್ತಮಃ ಪುರುಷಃ =ಪುರುಷೋತ್ತಮನು ಪರಮಾತ್ಮಾ ಇತಿ=ಪರಮಾತ್ಮನೆಂದು ಉದಾಹೃತಃ = ಹೇಳಲ್ಪಟ್ಟಿದ್ದಾನೆ. ಯಃ= ಯಾವ ಅವ್ಯಯಃ= ಅವ್ಯಯನಾದ ಈಶ್ವರಃ= ಈಶ್ವರನಿದ್ದಾನೆಯೋ (ಅವನು) ಲೋಕತ್ರಯಂ= ಲೋಕತ್ರಯವನ್ನು ಆವಿಶ್ಯ= ವ್ಯಾಪಿಸಿ (ಪ್ರವೇಶಿಸಿ) (ಅದನ್ನು) ಭಿಭರ್ತಿ= ಧರಿಸುತ್ತಾನೆ.

ವಿವರಣ:– ವಿಕಾಸಗೊಂಡ ಪ್ರಾಕೃತಿಕ ತತ್ತ್ವಗಳಲ್ಲಿ ಎರಡು ವಿಭಾಗ (೧) ಮಹತ್ತು, ಅಹಂಕಾರ, ತನ್ಮಾತ್ರೆ. (೨) ಭೂತ ಹಾಗು ಏಕಾದಶೇಂದ್ರಿಯ. ಮೊದಲನೆಯ ವಿಭಾಗವು ಶುದ್ಧ ಪ್ರಕೃತಿ; ಎರಡನೆಯ ವಿಭಾಗವು ಅಶುದ್ಧ ಪ್ರಕೃತಿ. ಶುದ್ಧ ಪ್ರಕೃತಿಪ್ರತಿಫಲಿತ ಚೇತನವು ಅಂತರಾತ್ಮ. ಅಶುದ್ಧಪ್ರಕೃತಿ ಪ್ರತಿಫಲಿತ ಚೇತನವು ಜೀವಾತ್ಮ. ಅಂತರಾತ್ಮನು ಕಾರಣತತ್ತ್ವಾಭಿಮಾನಿ; ಜೀವಾತ್ಮನು ಕಾರ್ಯತತ್ತ್ವಪುಂಜವಾದ ದೇಹಾಭಿಮಾನಿ. ಅವನು ಉಪಾಸ್ಯ, ಇವನು ಉಪಾಸಕ.

ಈ ಮೇಲಿನ ನಾಲ್ಕು ತತ್ತ್ವಗಳಲ್ಲಿ ಶುದ್ಧ ಅಶುದ್ಧಪ್ರಕೃತಿಗಳೆರಡೂ ಕ್ಷರ. ಅಂತರಾತ್ಮ ಜೀವಾತ್ಮರು ಅಕ್ಷರ. ಕ್ಷರಾಕ್ಷರಗಳೆರಡೂ ಸ್ವತಂತ್ರವಲ್ಲ; ಅವುಗಳಿಂದ ಭಿನ್ನವಾದ, ಅವುಗಳಿಗೆ ಪರಮ ಆಶ್ರಯವಾದ ಒಂದು ಅಮೃತ ಸತ್ಯವಸ್ತುವಿದೆ; ಅದೇ ಪುರುಷೋತ್ತಮ ಅಥವಾ ಪರಮಾತ್ಮ! ಆತ್ಮಪದ ಕ್ಷರವೈಲಕ್ಷಣ್ಯ ದರ್ಶಕವಾಗಿದೆ; ಪರಮಪದ ಅಕ್ಷರವೈಲಕ್ಷಣ್ಯ ದರ್ಶಕವಾಗಿದೆ! ಅಂದರೆ ಅವನು ಕ್ಷರ ಸೃಷ್ಟಿಗೂ ಅಲಿಪ್ತ. ಅಕ್ಷರ ಪುರುಷನಿಗೂ ಸಾಕ್ಷಿ! ಅವನು ಅವ್ಯಯ, ಅನಂತ, ಅಖಂಡ.

ಅಂಥ ಪುರುಷೋತ್ತಮನೇ ತನ್ನ ಸ್ವರೂಪನಿಷ್ಠ ದಿವ್ಯ ಶಕ್ತಿಯ ಮೂಲಕ ಲೋಕಾದಿ ಲೋಕಂಗಳನ್ನು ಸೃಷ್ಟಿಸಿದ; ದೇಹೇಂದ್ರಿಯಗಳನ್ನು ರೂಪಿಸಿದ. ಜೀವರೆಲ್ಲ ಅವನ ನಿಸ್ಸೀಮ ವಿಸ್ತಾರದಲ್ಲಿ ತೆರೆಗಳಂತೆ ತೇಲಿಬಂದರು. ಅವನ ಪರಮ ಆಧಿಪತ್ಯದಲ್ಲಿಯೇ ಲೋಕಗಳು ಬಾಳುತ್ತಿವೆ; ಜೀವರು ವ್ಯವಹರಿಸುತ್ತಾರೆ; ದೇವ ದೇವತೆಗಳು ಬದುಕಿದ್ದಾರೆ. ಅವನು ಸರ್ವೇಶ! ಸರ್ವನಿಯಂತಾರ!!

ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥೧೮॥

ಅರ್ಥ:– ಯಸ್ಮಾತ್= ಯಾವ ಕಾರಣದಿಂದ ಅಹಂ= ನಾನು ಕ್ಷರಂ= ಕ್ಷರವನ್ನು ಅತೀತಃ= ಮೀರಿದವನೋ ಅಕ್ಷರಾತ್ ಅಪಿ= ಅಕ್ಷರಕ್ಕಿಂತಲೂ ಉತ್ತಮಃ = ಉತ್ತಮನೋ ಅತಃ= ಅದೇ ಕಾರಣದಿಂದ ಅಹಂ= ನಾನು ಲೋಕೇ =ಲೋಕದಲ್ಲಿಯೂ ವೇದೇ ಚ=

ವೇದದಲ್ಲಿಯೂ ಪುರುಷೋತ್ತಮಃ =ಪುರುಷೋತ್ತಮನೆಂದು ಪ್ರಥಿತಃ ಅಸ್ಮಿ = ಪ್ರಸಿದ್ಧ ನಾಗಿದ್ದೇನೆ.

ವಿವರಣೆ:– ಭಗವಂತ:– " ನಾನು ಅಜಡನಾದುದರಿಂದ ಜಡವಾದ. ಕ್ಷರಸೃಷ್ಟಿಯನ್ನು ಮೀರಿದ್ದೇನೆ; ಸರ್ವಸಾಕ್ಷಿ ಹಾಗು ಸರ್ವ ನಿಯಂತೃವಾದು ದರಿಂದ ಅಜಡವಾದ ಅಕ್ಷರವರ್ಗಕ್ಕಿಂತ ಶ್ರೇಷ್ಠನಾಗಿದ್ದೇನೆ. ಎಂತಲೇ ಸಕಲ ದೇಹಗಳಲ್ಲಿಯೂ ಸರ್ವ ವೇದಗಳಲ್ಲಿಯೂ ಪುರುಷೋತ್ತಮನೆಂದು ನನ್ನ ಪ್ರಸಿದ್ಧಿ ಇದೆ ! "

ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥೧೯॥

ಅರ್ಥ:– ಯಃ= ಯಾವನು ಅಸಮ್ಮೂಢಃ= ಅಸಮ್ಮೂಢನಾಗಿ ಏವಂ= ಹೀಗೆ ಮಾಂ= ನನ್ನನ್ನು ಪುರುಷೋತ್ತಮಂ= ಪುರುಷೋತ್ತಮನೆಂದು ಜಾನಾತಿ=ತಿಳಿಯುವನೋ ಸಃ ಸರ್ವವಿತ್= ಆ ಸರ್ವಜ್ಞನು ಸರ್ವಭಾವೇನ = ಸರ್ವಭಾವದಿಂದ ಮಾಂ ಭಜತಿ= ನನ್ನನ್ನು ಭಜಿಸುತ್ತಾನೆ,

ವಿವರಣೆ:– ಭಗವಂತ:– "ನಿರ್ಮೋಹಿಯಾದ ವಿವೇಕಿಯು ಅಸಮ್ಮೂಢ. ಅವನು ಕ್ಷರಾಕ್ಷರ ವಿಲಕ್ಷಣನಾದ ನನ್ನ ಸತ್ಯ ಸ್ವರೂಪವನ್ನು ಅರಿಯುತ್ತಾನೆ; ನಾನು ನಿರ್ಲಿಪ್ತ ನಿರಾಮಯ ಪ್ರಭುವೆಂದು ಜಾನಿಸುತ್ತಾನೆ; ನಾನು ಪ್ರಕೃತಿ ಯಾಚೆಗೆ ಅನಂತವಾಗಿ ವ್ಯಾಪಿಸಿರುವ ಪುರುಷೋತ್ತಮನೆಂದು ತಿಳಿಯುತ್ತಾನೆ. ಅರ್ಜುನ, ಸರ್ವವಿಶ್ವದ ಆತ್ಮನಾದ ನನ್ನನ್ನೇ ಗ್ರಹಿಸಿದುದರಿಂದ ಆ ವಿವೇಕಿಯು ಸರ್ವಜ್ಞನಲ್ಲದೆ ಮತ್ತೇನು? ಅವನು ಎಲ್ಲ ರೀತಿಯಿಂದ ನನ್ನನ್ನೇ ಭಜಿಸುತ್ತಾನೆ. ಮನ ಬುದ್ಧಿ ಭಾವಗಳಿಂದ ನನ್ನನ್ನೇ ಅರ್ಚಿಸುತ್ತಾನೆ. ಆಶ್ರಯಿಸುತ್ತಾನೆ."

ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।
ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ ॥೨೦॥

ಇತಿಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾ ರ್ಜುನ ಸಂವಾದೇ ಪುರುಷೋತ್ತಮ ಯೋಗೋನಾಮ ಪಂಚದಶೋಽಧ್ಯಾಯಃ

ಅರ್ಥ:–ಇತಿ=ಇಂತು ಇದಂ= ಈ ಗುಹ್ಯತಮಂ ಶಾಸ್ತ್ರಂ=ರಹಸ್ಯತಮಶಾಸ್ತ್ರವು ಮಯಾ= ನನ್ನಿಂದ ಉಕ್ತಂ= ಹೇಳಲ್ಪಟ್ಟಿತು ಏತತ್= ಇದನ್ನು ಬುದ್ಧ್ವಾ= ಅರಿತುಕೊಂಡು (ಮನುಷ್ಯನು) ಬುದ್ಧಿಮಾನ್= ಬುದ್ಧಿವಂತನೂ ಕೃತಕೃತ್ಯಃ ಚ= ಕೃತಕೃತ್ಯನೂ ಸ್ಯಾತ್= ಆಗುವನು.

ವಿವರಣೆ:– ಭಗವಂತ:– "ಪಾಪರಹಿತನಾದ ಅರ್ಜುನ, ನಿನ್ನ ಜ್ಞಾನ ಪಿಪಾಸೆ ಕಂಡು ಸಂತುಷ್ಟನಾದ ನಾನು ಇಲ್ಲಿಯವರೆಗೆ ಕ್ಷರಪ್ರಕೃತಿವಿವೇಚನಾತ್ಮಕ ಗುಹ್ಯ, ಅಕ್ಷರರಾದ ಜೀವೇಶವಿವೇಚನಾತ್ಮಕ ಗುಹ್ಯತರ, ಕ್ಷರಾಕ್ಷರಸಾಕ್ಷಿಪುರು ಷೋತ್ತಮವಿವೇಚನಾತ್ಮಕ ಗುಹ್ಯತಮ ಎಂಬ ಮೂರು ಘಟಕಗಳಿಂದ ಕೂಡಿದ ಪರಮರಹಸ್ಯ ಶಾಸ್ತ್ರವನ್ನು ವಿವರಿಸಿದೆ. ಯಾವನು ಈ ಪವಿತ್ರಶಾಸ್ತ್ರವನ್ನು

ಅಂಗವಿಸಿಕೊಳ್ಳುತ್ತಾನೆಯೋ ಅವನೇ ಬುದ್ಧಿವಂತ! ಕೃತಕೃತ್ಯ!"

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಹದಿನೈದನೆಯ ಬಿಂದುವು.

* † *

# ಹದಿನಾರನೆಯ ಅಧ್ಯಾಯ

## ದೈವಾಸುರ ಸಂಪದ್ವಿಭಾಗಯೋಗ

"ಏತದ್ಬುಧ್ವಾ ಬುದ್ಧಿಮಾನ್ಸ್ಯಾತ್ಕೃತಕೃತ್ಯಶ್ಚ ಭಾರತ" (೧೫-೨೦) ಈ ಪರತತ್ತ್ವವನ್ನು ತಿಳಿದು ಮನುಷ್ಯನು ಬುದ್ಧಿವಂತನೂ ಕೃತಕೃತ್ಯನೂ ಆಗುವನು. ಭಗವಂತನ ಈ ಮಾತನ್ನು ಆಲಿಸಿದಾಗ ಒಂದು ಜಿಜ್ಞಾಸೆ ಉಂಟಾಗುತ್ತದೆ; ಪರತತ್ತ್ವವನ್ನು ಅರಿತುಕೊಳ್ಳಲು ಯಾವ ಅರ್ಹತೆ ಬೇಕು? ಸಾಧಕನು ಎಂಥ ಗುಣಸಂಪದವನ್ನು ಮೈಗೂಡಿಸಿಕೊಳ್ಳಬೇಕಾದೀತು? ಪ್ರಸ್ತುತ ಅಧ್ಯಾಯವು ಆ ಅರ್ಹತಾರೂಪ ಗುಣಸಂಪತ್ತಿನ ವರ್ಣನೆಗಾಗಿ ಮೀಸಲಾಗಿದೆ.

"ಭಾರೋ ಯೋ ಯೇನ ವೋಢವ್ಯಃ ಸ ಪ್ರಾಗಾಂದೋಲಿತೋ ಯದಾ।
ತದಾ ಕಸ್ತಸ್ಯ ವೋಢೇತಿ ಶಕ್ಯಂ ಕರ್ತುಂ ನಿರೂಪಣಮ್॥"

ಯಾವ ಭಾರವು ಯಾವನಿಂದ ಎತ್ತಲ್ಪಟ್ಟೀತು ಎಂಬುವದನ್ನು ತಿಳಿಯಬೇಕಾದರೆ ಆ ಭಾರವು ಮೊದಲು ಅಲುಗಾಡಿಸಲ್ಪಡಬೇಕು; ಆಗ ಯಾವನು ಅದನ್ನು ಎತ್ತಬಲ್ಲ ಎಂಬುದನ್ನು ನಿರೂಪಿಸುವದು ಶಕ್ಯ. ಅದೇ ರೀತಿ, ಪರಮಾತ್ಮಪ್ರಾಪ್ತಿ ಎನ್ನುವದೊಂದು ನಾವು ಎತ್ತಬೇಕಾದ ಭಾರ. ಅದಕ್ಕೆ ಪ್ರಯತ್ನಿಸುವ ಮುಂಚೆ ನಮ್ಮ ಮನಸ್ಸಾಮರ್ಥ್ಯವನ್ನು ಅಲುಗಿಸಿ ನೋಡಬೇಕು; ಆತ್ಮಪರೀಕ್ಷಣಮಾಡಿ ನಮ್ಮ ಆಂತರಿಕ ಯೋಗ್ಯತೆಯನ್ನು ಅಳತೆ ಮಾಡಬೇಕು. ಆಗ ಮಾತ್ರ ನಮಗೆ ಪಾರಮಾರ್ಥಿಕಸಿದ್ಧಿ ಸಮನಿಸೀತೊ ಇಲ್ಲವೋ ಎನ್ನುವದನ್ನು ಹೇಳಬಹುದು, ನಿರ್ಣಯಿಸಬಹುದು. ಹೀಗೆ ಮಾಡುವದಕ್ಕೆ 'ಅಧಿಕಾರ ನಿರ್ಣಯ' ಎನ್ನುತ್ತಾರೆ. ಕ್ರಮ ಕ್ರಮವಾಗಿ ಭಗವಂತನು ಅಧಿಕಾರದ ಗುಣಲಕ್ಷಣಗಳನ್ನು ವಿವರಿಸಲಿದ್ದಾನೆ.

### ಶ್ರೀ ಭಗವಾನುವಾಚ

ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ।
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥೧॥
ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್।
ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ ॥೨॥
ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋನಾತಿಮಾನಿತಾ।
ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥೩॥

ಭಾವ:- ಅಭಯ, ಸತ್ತ್ವಸಂಶುದ್ಧಿ, ಜ್ಞಾನಯೋಗ ವ್ಯವಸ್ಥಿತಿ, ದಾನ, ದಮ, ಯಜ್ಞ, ಸ್ವಾಧ್ಯಾಯ, ತಪ, ಆರ್ಜವ, ಅಹಿಂಸಾ, ಸತ್ಯ, ಅಕ್ರೋಧ,

ತ್ಯಾಗ, ಶಾಂತಿ, ಅಪೈಶುನ, ಭೂತದಯಾ, ಅಲೋಲುಪ್ತ್ವ, ಮಾರ್ದವ, ಹ್ರೀ, ಅಚಾಪಲ, ತೇಜ, ಕ್ಷಮಾ, ಧೃತಿ, ಶೌಚ, ಅದ್ರೋಹ, ನಾತಿಮಾನಿತಾ–ಈ ಗುಣ ಗಳು ದೈವೀ ಸಂಪತ್ತಿಗಾಗಿಯೇ ಜನಿಸಿದ ಮನುಷ್ಯನಲ್ಲಿ ಇರುತ್ತವೆ.

ವಿವರಣೆ:– ವಿಶ್ವದಲ್ಲಿ ಎರಡು ಸಂಪತ್ತುಗಳಿವೆ. (೧) ಆಸುರೀ ಸಂಪದ, (೨) ದೈವೀ ಸಂಪದ. ಯಾವುದು ಭೋಗಲಾಲಸೆಗೆ ಅವಕಾಶ ನೀಡುತ್ತದೆಯೋ, ರಾಗ ದ್ವೇಷ ಹಿಂಸೆ ಅಸೂಯೆಗಳಿಗೆ ಪ್ರಚೋದನ ಈಯುತ್ತದೆಯೋ ಹಾಗು ಸತ್ಯದೃಷ್ಟಿಯನ್ನು ಮುಚ್ಚಿಹಾಕುತ್ತದೆಯೋ ಅದು ಆಸುರೀ ಸಂಪದ. ಯಾವುದು ಹೃದಯ ಮಾಲಿನ್ಯವನ್ನು ಕಳೆದು ಜ್ಞಾನ ಹಾಗು ಶಾಂತಿಗಳನ್ನು ನೀಡುವದೋ ಅದು ದೈವೀ ಸಂಪದ. ಆಸುರೀ ಪ್ರಕೃತಿಯವರು ಆಸುರೀ ಸಂಪದವನ್ನು ಸೇಖರಿಸುತ್ತಾರೆ. ದೈವೀ ಪ್ರಕೃತಿಯವರು ದೈವೀ ಸಂಪದವನ್ನು ಸಂಚಯಿಸುತ್ತಾರೆ. ಆಸುರೀ ಸಂಪದವು ಸಂಸಾರಕ್ಕೆ ಸಾಧಕ, ಮುಕ್ತಿಗೆ ಬಾಧಕ. ದೈವೀಸಂಪದವು ಸಂಸಾರಕ್ಕೆ ಬಾಧಕ, ಮುಕ್ತಿಗೆ ಸಾಧಕ. ದೈವೀಸಂಪದವುಳ್ಳವನು ಮಾತ್ರ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪ್ರವೇಶಿಸಲು ಯೋಗ್ಯ ಅಧಿಕಾರಿ ಎಂದು ತಿಳಿ ಯಬೇಕು. ಮೂರು ಮಂತ್ರಗಳು ದೈವೀ ಸಂಪದದ ವಿಸ್ತಾರವನ್ನು ಬಣ್ಣಿಸಿವೆ.

### ದೈವೀ ಗುಣಸಂಪದ

(೧) ಅಭಯ:– ಧೀರ ಮನೋಭಾವ. ಭಯ ಉಂಟುಮಾಡುವ ವಸ್ತು ಗಳಲ್ಲಿರುವ ಧೀರ ವಿರಾಗ. ಭರ್ತೃಹರಿಯು ಭಯ ಅಭಯ ವಸ್ತುಗಳ ಸುಸ್ಪಷ್ಟ ವಿವರಣೆಯನ್ನಿತ್ತಿದ್ದಾನೆ.

ಭೋಗೇ ರೋಗಭಯಂ ಕುಲೇ ಚ್ಯುತಿಭಯಂ ವಿತ್ತೇ ನೃಪಾಲಾದ್ಭಯಮ್ ।
ಮಾನೇ ದೈನ್ಯಭಯಂ ಬಲೇ ರಿಪುಭಯಂ ರೂಪೇ ಜರಾಯಾ ಭಯಮ್ ॥
ಶಾಸ್ತ್ರೇ ವಾದಭಯಂ ಗುಣೇ ಖಲಭಯಂ ಕಾಯೇ ಕೃತಾಂತಾದ್ಭಯಮ್ ।
ಸರ್ವಂ ವಸ್ತು ಭಯಾನ್ವಿತಂ ಭುವಿ ನೃಣಾಂ ವೈರಾಗ್ಯಮೇವಾಭಯಮ್ ॥

ಭೋಗಕ್ಕೆ ರೋಗದ ಭಯ. ಕುಲಕ್ಕೆ ಚ್ಯುತಿಯಾಗುವ ಭಯ. ಸಂಪತ್ತಿಗೆ ರಾಜಭಯ. ಮಾನಕ್ಕೆ ದೈನ್ಯತೆಯ ಭಯ. ಬಲಕ್ಕೆ ರಿಪುವಿನ ಭಯ. ರೂಪಕ್ಕೆ ಮುಪ್ಪಿನ ಭಯ. ಶಾಸ್ತ್ರಕ್ಕೆ ವಾದದ ಭಯ. ಗುಣಕ್ಕೆ ದುರ್ಜನರ ಭಯ. ದೇಹಕ್ಕೆ ಮರಣದ ಭಯ. ಇಂತು, ಲೋಕದಲ್ಲಿರುವ ಸರ್ವ ವಸ್ತುಗಳು ಭಯದಿಂದ ಕೂಡಿವೆ. ಮನುಷ್ಯರನ್ನು ಉದ್ದೇಶಿಸಿ ಹೇಳುವದಾದರೆ ಈ ಭೂಮಂಡಲದಲ್ಲಿ ವೈರಾಗ್ಯವೊಂದೇ ಅಭಯವಾಗಿದೆ!

೨)ಸತ್ವ ಸಂಶುದ್ಧಿ:ನಿರ್ಮಲ ಮನಸ್ಸು, ಕಾಮ ಕ್ರೋಧಾದಿ ಕಲುಷವಿಲ್ಲದ ಹೃದಯ. ದುಃಖ ಚಿಂತೆಗಳ ಲವಲೇಶವಿಲ್ಲದ ಮನೋ ಪ್ರಸನ್ನತೆ.

೩) ಜ್ಞಾನ ಯೋಗ ವ್ಯವಸ್ಥಿತಿ: ಉಪನಿಷತ್ ವಾಕ್ಯಗಳ ಶ್ರವಣ ಮನನ ನಿದಿಧ್ಯಾಸಗಳಿಂದ ಹುಟ್ಟಿದ ಆತ್ಮವಿದ್ಯೆಯು ಜ್ಞಾನ. ಆ ಜ್ಞಾನದ ಪರಮ ಅರ್ಥ

ದಲ್ಲಿ ಮನಸ್ಸನ್ನು ಕೇಂದ್ರೀಕರಿಸುವದು ಯೋಗ. ಆ ಜ್ಞಾನ ಹಾಗು ಈ ಯೋಗ ಎರಡರಲ್ಲಿಯೂ ಪರಮ ನಿಷ್ಠೆ ಹೊಂದಿರುವದು ಜ್ಞಾನಯೋಗವ್ಯವಸ್ಥಿತಿ.

೪) ದಾನ: "ಯಥಾಶಕ್ತಿ ಸಂವಿಭಾಗಃ ಸ್ವಾರ್ಜಿತಸ್ಯ ಅನ್ನಾದಿನಾಮ್" ತಾನು ಸಂಪಾದಿಸಿದ ಅನ್ನ ವಸ್ತ್ರ ಧನ ಮುಂತಾದವುಗಳನ್ನು ಯಥಾಶಕ್ತಿ ನೀಡುವದು ದಾನ. ದಾನದಲ್ಲಿ ಮೂರು ಬಗೆ: ಅ)ಸೋಪಾಧಿಕ- ಪ್ರತಿಫಲಾಪೇಕ್ಷೆಯಿಂದ ಮಾಡಿದುದು. ಬ)ನಿರುಪಾಧಿಕ- ನಿಷ್ಕಾಮ ಭಾವದಿಂದ ಮಾಡಿದುದು. ಕ)ಸಹಜ- ದಾತೃ ದಾನ ಧ್ಯೇಯಗಳು ಪರಮಾತ್ಮನೇ ಎಂದು ಈಯುವದು;

೫) ದಮ: ವಿಷಯುಗಳತ್ತ ಹರಿದುಹೋಗುವ ಬಾಹ್ಯೇಂದ್ರಿಯಗಳನ್ನು ತನ್ನ ಅಂಕಿತದಲ್ಲಿಟ್ಟುಕೊಳ್ಳುವದು. ಅಂದರೆ ಇಂದ್ರಿಯ ಹಾಗು ಅಹಿತ ವಿಷಯ ಇವುಗಳ ಮಧ್ಯದ ಸಂಪರ್ಕ ತಪ್ಪಿಸುವದು.

" ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ. ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ. ಮತ್ತೊಂದು ಕೇಳದಂತೆ ಕಿವುಡನ ಮಾಡಯ್ಯಾ ತಂದೆ, ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲ ಸಂಗಮದೇವ".

ಬಸವಣ್ಣನವರ ಈ ವಚನದಲ್ಲಿ ದಮದ ರೂಹಿದೆ.

೬)ಯಜ್ಞ: ಭಯ ಭಕ್ತಿಗಳಿಂದ ಆಚರಿಸುವ ಸೇವೆ ಹಾಗು ಅರ್ಪಣಗಳಿಗೆ ಯಜ್ಞ ಎನ್ನುತ್ತಾರೆ. ಇದರಲ್ಲಿ ಐದು ಬಗೆಗಳು: ಕ)ಪಿತೃ ಯಜ್ಞ: ಮಾತಾ ಪಿತರನ್ನು ದೇವರೆಂದು ಭಾವಿಸಿ ಉಪಚರಿಸುವದು. ಖ)ಅತಿಥಿ ಯಜ್ಞ: ತಾವಾಗಿಯೆ ಮನೆಯವರೆಗೆ ಬಂದ ಸಂತ ಸಜ್ಜನರನ್ನು ದೀನ. ದಲಿತರನ್ನು ಆದರದಿಂದ ಸ್ವಾಗತಿಸಿ ಉಪಚರಿಸುವದು.

"ಅಡವಿಯಲೊಬ್ಬಕಡು ನೀರಡಿಸಿ ಎಡೆಯಲ್ಲಿ ನೀರ ಕಂಡಂತಾಯಿತಯ್ಯಾ. ಕುರುಡ ಕಣ್ಣ ಪಡೆದಂತಾಯಿತಯ್ಯಾ, ಬಡವ ನಿಧಾನವ ಕಂಡಂತಾಯಿತಯ್ಯಾ. ನಮ್ಮ ಕೂಡಲ ಸಂಗನ ಶರಣರ ಬರವೆನ್ನ ಪ್ರಾಣಕಂಡಯ್ಯಾ." "ಇಂದೆನ್ನ ಮನೆಗೆ ಪ್ರಮಥರು ಬಂದಹರೆಂದು ಗುಡಿ ತೋರಣವ ಕಟ್ಟಿ, ಷಡು ಸಮ್ಮಾರ್ಜನೆಯ ಮಾಡಿ, ರಂಗವಾಲಿಯನಿಕ್ಕಿ ಉಘೇ ಚಾಂಗ ಭಲಾ ಎಂದುಪಚರಿಸುವೆ." "...ಆನಂದದಿಂದ ನಲಿ ನಲಿವಾಡುವೆ. ಆನಂದದಿಂದ ಕುಣಿ ಕುಣಿದಾಡುವೆ... ಉಬ್ಬಿ ಕೊಬ್ಬಿ ಹರುಷದಲಿ ಸೇವಿಸುವೆ." ಇದು ಅತಿಥಿ

ಯಜ್ಞದ ರೀತಿ. ಗ)ಭೂತ ಯಜ್ಞ- ಪಶು ಪಕ್ಷಿ ಮುಂತಾದ ಸರ್ವ ಜೀವಿಗಳ ಮೇಲೆ ದಯೆತೋರುವದು, ಅವುಗಳನ್ನು ಸಾಕಿ ಸಲುಹುವದು ಭೂತ ಯಜ್ಞ. ಘ)ಋಷಿಯಜ್ಞ-ಆತ್ಮವಿದ್ಯಾ ಮೂರ್ತಿಗಳಾದ ಋಷಿ ಮುನಿಗಳನ್ನು ಹೃದಯತಃ ವಂದಿಸುವದು, ಅವರ ಜ್ಞಾನ ಪ್ರಸಾರ ಕಾರ್ಯಕ್ಕೆ ಅನುಕೂಲತೆಗಳನ್ನು ಒದಗಿಸುವದು ಹಾಗು ಅವರಂತೆ ಜ್ಞಾನಪ್ರಸಾರ ಮಾಡುವದು ಋಷಿಯಜ್ಞ. ಚ) ದೇವ ಯಜ್ಞ- ದೇವಚಿಂತನ ದೇವತಾರ್ಚನಗಳಲ್ಲಿ ಮಗ್ನನಾಗಿರುವದು.

"ವಾರವೆಂದರಿಯೆ, ದಿನವೆಂದರಿಯೆ, ಏನೆಂದರಿಯೆನಯ್ಯಾ. ನಿಮ್ಮುವ ಪೂಜಿಸುವಲ್ಲಿ ಎನ್ನುವ ಮರೆವೆ. ಕೂಡಲಸಂಗಮ ದೇವಾ." "ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ.

ಅಂಬುಧಿಗೆ ಭಾಸುಹಿನ ಉದಯದ ಚಿಂತೆ. ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ.
ಎನಗೆ ನಮ್ಮ ಕೂಡಲ ಸಂಗಮ ದೇವರ ನೆನೆವ ಚಿಂತೆ."

ಹೀಗೆ ದಿನ ರಾತ್ರಿಗಳನ್ನೆಲ್ಲ ದೇವನಿಗಾಗಿ ಮೀಸಲಿರಿಸುವದು ದೇವಯಜ್ಞ.

(೭)ತಪ: ಆತ್ಮೋನ್ನತಿಗಾಗಿ ವ್ರತ ನಿಯಮಗಳನ್ನಾಚರಿಸುವದು. ಇದು ಮೂರು ಪ್ರಕಾರ: ಅ)ಶಾರೀರಿಕ- ಬ್ರಹ್ಮಚರ್ಯ, ಶೌಚ ಹಾಗು ಅಹಿಂಸೆಗಳ ಪರಿಪಾಲನ ಹಾಗು ದೇವ ಗುರು ಸಂತ ಸಜ್ಜನರ ಸೇವೆ. ಬ) ವಾಚಿಕ: ಸತ್ಯ ಪ್ರಿಯ ನುಡಿ, ಶಾಸ್ತ್ರ ಪಠಣ ಹಾಗು ಮಂತ್ರಜಪ. ಕ)ಮಾನಸಿಕ- ಮೌನ, ಚಿಂತನ, ಆತ್ಮನಿರೀಕ್ಷಣ ಹಾಗು ದೇವಧ್ಯಾನ.

(೮) ಸ್ವಾಧ್ಯಾಯ: ಅಧ್ಯಯನ. ಉಪ ವಿಭಾಗಗಳು (ಅ) ಶಾಸ್ತ್ರ ಸ್ವಾಧ್ಯಾಯ: ಋಷಿ ಮುನಿ ಮಹಾತ್ಮರ ವಚನ ಸಂಗ್ರಹಗಳೇ ಶಾಸ್ತ್ರ. ಪವಿತ್ರ ವಾದ ಆ ಶಾಸ್ತ್ರಗಳನ್ನು ದಿನ ನಿತ್ಯ ಪಠಿಸುವದು. (ಬ) ನಾದ ಸ್ವಾಧ್ಯಾಯ: ಏಕಾಂತದಲ್ಲಿ ಕುಳಿತು ಅನಾಹತ ನಾದದ ಅನುಸಂಧಾನ ಮಾಡುವದು. (ಕ) ಮಂತ್ರ ಸ್ವಾಧ್ಯಾಯ: ತನ್ನ ಗುರುವಿತ್ತ ಮಂತ್ರವನ್ನು ವಿಧಿವತ್ತಾಗಿ ಪಠಿಸು ವದು. (ಡ) ಆತ್ಮ ಸ್ವಾಧ್ಯಾಯ: ಸರ್ವಸಾಕ್ಷಿಯಾದ ಆತ್ಮವಸ್ತುವಿನ ಸ್ವರೂಪ ವನ್ನು ತಿಳಿದುಕೊಳ್ಳುವದು ಹಾಗು ಆ ನಿರ್ಮಲಾತ್ಮನಲ್ಲಿ ಮನ ಮುಳುಗಿಸು ವದು.

(೯) ಆರ್ಜವ: ಸರಳತೆ, ಸತ್ಯಸಂಧತೆ, ಮನ ವಚನ ಕಾಯದಲ್ಲಿ ಏಕೋ ಭಾವ ಉಂಟಾದರೆ ಅದು ಆರ್ಜವ. ಆರ್ಜವವಿಲ್ಲದ ಪೂಜೆ, ಸೇವೆ, ಜ್ಞಾನಗಳು ಡಾಂಭಿಕ. "ಲೌಕಿಕರ ಕಂಡು ಆಡುವೆ ಹಾಡುವೆ. ಲೌಕಿಕರ ಕಂಡು ಆಡುವೆ ಪಾಡುವೆ. ಸಹಜಗುಣ ನಿಜಭಕ್ತಿ ಇದಲ್ಲವಯ್ಯಾ. ಏಕೋ ಭಾವವುಳ್ಳರೆ ನೀ ಕರು ಣಿಸುವೆ ಕೂಡಲ ಸಂಗಮದೇವ." ನಡೆಯಂತೆ ನುಡಿ, ನುಡಿಯಂತೆ ಮನ ಉಳ್ಳ ರದು ಆರ್ಜವ. ವಂಚನೆ ಕಪಟ ಆಡಂಬರಗಳಿಲ್ಲದ ನಿಷ್ಕಪಟ ಭಾವವು ಆರ್ಜವ.

(೧೦) ಅಹಿಂಸಾ: ದೇಹ ಮಾತು ಮನಸ್ಸಿನಿಂದ ಯಾವ ಜೀವಿಯನ್ನೂ ಹಿಂಸಿಸದಿರುವದು ಅಹಿಂಸಾ. ಇದು ಪರಮ ಧರ್ಮ; ಸಕಲ ಧರ್ಮಗಳ ಸಾರ. ಜಗತ್ತಿನ ಸಂತ ಮಹಾಂತರೆಲ್ಲ ಈ ಗುಣವನ್ನು ಕೊಂಡಾಡಿದ್ದಾರೆ. ಕೆಲವು ಸಂತರ ವಚನಗಳನ್ನಿಲ್ಲಿ ನೋಡಬೇಕು.

"ದಯವಿಲ್ಲದ ಧರ್ಮವದೇವುದಯ್ಯಾ?" (ಬಸವಣ್ಣ). "ಒಂದಾಗಿಹವು ಐದುಭೂತ. ಚಂದ್ರ ಸೂರ್ಯರು ನಂದಿವಾಹನ ನಿಮ್ಮ ತನುವಲ್ಲವೇ? ನಿಂದು ನೋಡಲು ಜಗಭರಿತನಾಗಿಪ್ಪೆ. ಇನ್ನು ನೋವಿಸುವೆನಾರನಯ್ಯಾ ರಾಮ ನಾಥಾ?" (ದೇವರ ದಾಸಿಮಯ್ಯ). "ಇರಿವುದು ಕಡಿವುದು ಕೊಲುವುದು ಮಲ ದೇಹಿಗಳಿಗಲ್ಲದೆ ನಿರ್ಮಲ ದೇಹಿಗಳಿಗುಂಟೆ?...ತಪ್ಪನರಸಿ ಶಿಕ್ಷಿಸುವನ್ನಬರ ನರ ದೈತ್ಯಕುಲಕ್ಕೆ ಪರಶಿವ ರೂಪುಂಟೆ?..." (ಘಟ್ಟಿವಾಳಯ್ಯ). "ಕೊಲುವಧರ್ಮ

ವನೊಯ್ದು ಒಲೆಯೊಳಗಿಕ್ಕು" (ಸರ್ವಜ್ಞ). "ಜೀವ ಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯಾ?" (ಅಕ್ಕ). "ಯತ್ರ ಜೀವಃ ತತ್ರಶಿವಃ ಎಂದು ಸರ್ವ ಜೀವದಯಾಪಾರಿಯಾವಲ್ಲಿ ಕೂಡಲ ಸಂಗಮದೇವನು ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೆ?" ಸರ್ವಕಾಲ ದೇಶ ಸಮಯ ಹಾಗು ಜೀವರ ವಿಷಯದಲ್ಲಿ ಅಹಿಂಸೆಯನ್ನಾಚರಿಸಿದರೆ ಅದಕ್ಕೆ ಸಾರ್ವಭೌಮ ಮಹಾವ್ರತ ಎನ್ನುತ್ತಾರೆ. "ಅಹಿಂಸಾ ಪ್ರತಿಷ್ಠಾಯಾಂ ತತ್ಸನ್ನಿಧೌ ಸರ್ವವೈರತ್ಯಾಗಃ" ಯಾವ ಪುರುಷನಲ್ಲಿ ಸಾರ್ವಭೌಮ ಅಹಿಂಸಾ ಮಹಾವ್ರತವು ಪ್ರತಿಷ್ಠಿತವಾಗಿದೆಯೋ ಅವನ ಸಾನಿಧ್ಯ ದಲ್ಲಿ ಸರ್ವಪ್ರಾಣಿಗಳು ಸರ್ವವೈರತ್ಯಾಗಭಾವ ಹೊಂದುತ್ತವೆ. ಹೀಗೆ ಪತಂಜಲ ಮಹರ್ಷಿಗಳು ಹೇಳಿದ್ದಾರೆ.

(೧೧) ಸತ್ಯ: ವಸ್ತುಸ್ಥಿತಿಯ ಯಥಾರ್ಥ ಕಥನವು ಸತ್ಯ. ಸತ್ಯವು ಸದಾ ಪ್ರಿಯ ಹಾಗು ಪರಹಿತಕಾರಿಯಾಗಿರುವದು ಅಗತ್ಯ. "ಸತ್ಯ ವ ನುಡಿವುದೇ ದೇವ ಲೋಕ" "ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯಾ!" (ಬಸವಣ್ಣ). "ಸತ್ಯದ ಮನೆಯಲ್ಲಿ ಶಿವನಿರ್ಪನಲ್ಲದೆ ಅಸತ್ಯದ ಮನೆಯಲ್ಲಿ ಶಿವನಿರ್ಪನೆ? ಇಲ್ಲಿಲ್ಲ ನೋಡಿರೋ. ಇದು ಕಾರಣ ನಮ್ಮ ಅಖಂಡೇಶ್ವರಲಿಂಗವನೊಲಿಸಬೇಕಾ ದಡೆ ಸತ್ಯವನೇ ಸಾಧಿಸಬೇಕು ಕಾಣಿರೋ!" (ಷಣ್ಮುಖ ಸ್ವಾಮಿ). "ಸತ್ಯವಿಲ್ಲ ದವರೊಡನೆ ಸಹಸ್ರಕ್ಕೊಮ್ಮೆ ನುಡಿಯಲಾಗದು, ಲಕ್ಷಕ್ಕೊಮ್ಮೆ ನುಡಿಯಲಾ ಗದು, ಕೋಟಿಗೊಮ್ಮೆ ನುಡಿಯಲಾಗದು." (ಅಲ್ಲಮ ಪ್ರಭು). "ಹುಸಿಯ ನುಡಿವವರಿಗೆ ಗುರುವಿಲ್ಲ, ಜಂಗಮವಿಲ್ಲ ಲಿಂಗವಿಲ್ಲ. ಅವರಿಗೆ ಮೋಕ್ಷವಿಲ್ಲ. ಕಾರಣ ನಮ್ಮ ಕೂಡಲ ಚೆನ್ನ ಸಂಗಯ್ಯನ ಶರಣರು ಹುಸಿಯ ಬಿಟ್ಟು ಸತ್ಯ ವಿಡಿದು ನಿಜಲಿಂಗೈಕ್ಯರಾಗುವರು." (ಚೆನ್ನ ಬಸವಣ್ಣ). ಸರ್ವಕಾಲ ಸರ್ವದೇಶ ಸರ್ವಸಮಯ ಹಾಗು ಸರ್ವಜಾತಿಯ ಜೀವರಲ್ಲಿ ಸತ್ಯವನ್ನು ಆಚರಿಸಿದರೆ ಅದಕ್ಕೆ ಸತ್ಯ ಮಹಾವ್ರತವೆನ್ನುತ್ತಾರೆ. "ಸತ್ಯ ಪ್ರತಿಷ್ಠಾಯಾಂ ಕ್ರಿಯಾಫಲಾಶ್ರಯ ತ್ವಮ್" ಸಾರ್ವಭೌಮ ಸತ್ಯಮಹಾವ್ರತವು ಅವಗತವಾದರೆ ಅಂಥ ಮಹಾತ್ಮನ ಸನ್ನಿಧಿಯಲ್ಲಿ ಸರ್ವಕ್ರಿಯಾ (ಧರ್ಮಾದಿ ಕ್ರಿಯಾ) ಫಲಗಳು ಸಮನಿಸುತ್ತವೆ.

(೧೨) ಅಕ್ರೋಧ:— ತನಗೆ ಅಹಿತ ಬಗೆದವರ ಮೇಲೆ ಕೋಪಗೊಳ್ಳದೆ ಶಾಂತನಾಗಿರುವದು. "ತನಗೆ ಮುನಿವರಿಗೆ ತಾ ಮುನಿಯಲೇಕಯ್ಯಾ? ತನಗಾದ ಆಗೇನು? ಅವರಿಗಾದ ಚೇಗೇನು? ತನುವಿನ ಕೋಪ ತನ್ನ ಹಿರಿತನದ ಕೇಡು! ಮನದ ಕೋಪ ತನ್ನರುಹಿನ ಕೇಡು! ಮನೆಯೊಳಗಣ ಕಿಚ್ಚು ತನ್ನ ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡುವುದೆ ಕೂಡಲ ಸಂಗಮ ದೇವಾ?" "ಹೊಯಿದ ವರೆನ್ನ ಹೊರೆದವರೆಂಬೆ. ಬಯಿದವರೆನ್ನ ಬಂಧುಗಳೆಂಬೆ. ನಿಂದಿಸಿದವರೆನ್ನ ತಾಯಿ ತಂದೆಗಳೆಂಬೆ, ಆಳಿಗೊಂಡವರೆನ್ನ ಆಳ್ದರೆಂಬೆ. ಜರಿದವರೆನ್ನ ಜನ್ಮ ಬಂಧು ಗಳೆಂಬೆ. ಕೊಂಡಾಡಿದವರೆನ್ನ ಹೊನ್ನಶೂಲದಲ್ಲಿಕ್ಕಿದವರು ಕೂ. ಸಂ. ದೇವ."

"ಕ್ರೋಧವೇಕೊ ಶರಣ ವೇದ್ಯನೆನಿಸುವಂಗೆ?" (ಬಸವಣ್ಣ).

(೧೩) ತ್ಯಾಗ:– ಸತ್ಯಶುದ್ಧ ಕಾಯಕದಿಂದ ಸಂಪಾದಿಸಿದ ತನ್ನ ಗಳಿಕೆಯು ನ್ನೆಲ್ಲ ಜನಾರ್ದನನ ಸೇವೆಯಲ್ಲಿ ಸಮರ್ಪಿಸುವದು ಹಾಗು ಸತ್ಯ ಅಹಿಂಸಾದಿ ಮಹಾ ತತ್ತ್ವಗಳ ಪಾಲನೆಗಾಗಿ ತನ್ನ ದೇಹವನ್ನೂ ತ್ಯಜಿಸಲು ಸಿದ್ಧನಾಗಿರು ವದು ತ್ಯಾಗ. "ಎನ್ನ ತನು ನಿಮಗರ್ಪಿತ. ಎನ್ನ ಮನ ನಿಮಗರ್ಪಿತ. ಎನ್ನ ಧನ ನಿಮಗರ್ಪಿತ!"(ಬಸವಣ್ಣ) "ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರಿಯೆ ಮಾಡೆನು. ನಿಮ್ಮ ಸೊಮ್ಮಿಂಗೆ ಸಲಿಸುವೆನು. ನಿಮ್ಮಾಣೆ ಕೂ. ಸಂ. ದೇವಾ."

(೧೪) ಶಾಂತಿ:– ಜಯ ಅಪಜಯ, ಲಾಭ ಹಾನಿ, ಮಾನ ಅಪಮಾನ ಯಾವುದೇ ಬರಲಿ ಮನಸ್ಸಿನ ಸಾವಧಾನತೆಯನ್ನು ಸುಭದ್ರವಾಗಿ ಕಾಪಾಡಿ ಕೊಂಡಿರುವದು ಶಾಂತಿ. " ಕಿಡಿ ಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿ ತೆಂಬೆನು. ಮುಗಿಲು ಹರಿದು ಬಿದ್ದಡೆ ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದಡೆ ಎನಗೆ ಪುಷ್ಪವೆಂಬೆನು. ಚನ್ನಮಲ್ಲಿಕಾರ್ಜುನಯ್ಯ ಶಿರಹರಿದು ಬಿದ್ದಡೆ ಪ್ರಾಣ ನಿಮಗರ್ಪಿತವೆಂಬೆನು." "ಅರ್ಥವನರ್ಥವಮಾಡಿ ಕೋಳಾಹಳಂ ಗೆಯ್ಯುತ್ತಿರಲಿ. -ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿಯುತ್ತಿರಲಿ. ಮುಟ್ಟುವ ಸ್ತ್ರೀಯ ಕಣ್ಣ ಮುಂದೆ ಅಭಿಮಾನಗೊಂಡು ನೆರೆಯುತ್ತಿರಲಿ– ಇಂತೀ ತ್ರಿವಿಧವು ಹೊರಗಣವು. ಇನ್ನೆನ್ನಂಗವ ಮೇಲೆ ಬರಲಿ. ಹಿಡಿಗಂಡಂಗೊಯ್ಯಲಿ, ಇಕ್ಕುವಶೂಲ ಪ್ರಾಪ್ತಿಸಲಿ ಹಾಕೊಂದೆಸೆ ಹನ್ನೊಂದೆಸೆಯಾಗಿ ಮಾಡುತ್ತಿರಲಿ ಮತ್ತೆಯೂ ಲಿಂಗಾರಾಧನೆ ಮಾಡುವೆ, ಜಂಗಮಾರಾಧನೆ ಮಾಡುವೆ" ಎಂದು ಹೇಳುವ ಅಣ್ಣನ ಮನೋಭಾವ ಶಾಂತಿಯ ದ್ಯೋತಕವಾಗಿದೆ,

(೧೫)ಅಪೈಶುನ-ಮುಂದೆ ಭಲಾ ಎಂದು ಹಿಂದೆ ನಿಂದಿಸುವ ಪ್ರವೃತ್ತಿಯು ಪೈಶುನತೆ. ಹಿಂದೆ ಮುಂದೆ ಎಂಬ ಭೇದ ಬಿಟ್ಟು ಎಲ್ಲರಲ್ಲಿ ಒಳ್ಳೆಯದನ್ನೇ ಕಾಣುವ ಬುದ್ಧಿಯು ಅಪೈಶುನ. "ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ; ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ನಮ್ಮ ಕೂಡಲ ಸಂಗಮ ದೇವ." ಇತರರ ದೋಷದೆಣಿಕೆಯ ಬಿಟ್ಟು ಆತ್ಮಶುದ್ಧಿಗಾಗಿ ಯತ್ನಿಸುವದು ಸಜ್ಜನಿಕೆ.

(೧೬) ದಯಾ–ಕಷ್ಟದಲ್ಲಿರುವ ಜೀವಿಗಳ ಕಂಡು ಅನುತಾಪ ಪಡುವದು ಹಾಗು ಜೀವಕೋಟಿಯನ್ನೆಲ್ಲ ಪ್ರೀತಿಸುವದು ದಯೆ. ,"ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು – ಕೊಂದಹರೆಂಬುದನರಿಯದೆ! ಅಂದಂದೇ ಹುಟ್ಟಿತ್ತು. ಅಂದಂದೇ ಹೊಂದಿತ್ತು. ಕೊಂದವರುಳಿದರೆ? ಕೂಡಲ ಸಂಗಮ ದೇವಾ?" " ಮಾರಿಯ ಪೂಜಿಸಿ ಮಸಣಕ್ಕೆ ಹೋಗಿ ಗೋರಿ... ಳಿಸಿ ಕುರಿಯ ಕೊರಳನ್ನೇ ಕೊಯ್ದುಂಬ ಕ್ರೂರ ಕರ್ಮಿಗಳನವರ ಶಿವಭಕ್ತ ರೆನ್ನಬಹುದೆ? ಆಸಯ್ಯದೆ ಅವರ ಮನೆಯಲುಂಡ ಭಕ್ತನು ಅಘೋರ ನರ

ಕಕ್ಕಿಳಿವ ಕಾಣಾ ರಾಮನಾಥಾ" ಸ್ವಾರ್ಥಿಗಳ ಕೈಯಲ್ಲಿ ಬಲಿಯಾಗುವ ನಿಷ್ಪಾಪಿ ಜೀವಿಗಳ ಕಂಡು ಆಡಿದ ಶರಣರ ಕರುಣಾಭರಿತ ನುಡಿಗಳಿವು. "ಸರ್ವೇ ಜನಾಃ ಸುಖಿನೋ ಭವಂತು। ಸರ್ವೇ ಸಂತು ನಿರಾಮಯಾಃ॥ ಸರ್ವೇ ಭದ್ರಾಣಿ ಪಶ್ಯಂತು। ಮಾ ಕಶ್ಚಿದ್ದುಃಖಮಾಪ್ನುಯಾತ್॥" ಸರ್ವರೂ ಸುಖಿಗಳಾಗಲಿ. ಸರ್ವರೂ ನಿರೋಗಿಗಳಾಗಲಿ. ಸರ್ವರೂ ಕಲ್ಯಾಣವನ್ನು ಹೊಂದಲಿ. ಒಂದು ಜೀವಿಕೂಡ ದುಃಖ ಪಡುವದು ಬೇಡ. ಎಂಬ ಉದಾತ್ತ ಭಾವನೆ ದಯೆಯಲ್ಲಿದೆ.

(೧೭)ಅಲೋಲುಪ್ತ್ವ–ಮಿತಿ ಮೀರಿದ ವಿಷಯಾಸಕ್ತಿ ಹಾಗು ಸಂಪತ್ತಿನ ವ್ಯಾಮೋಹ ಇಲ್ಲದಿರುವದು ಅಲೋಲುಪ್ತಿ: ಅಭಿನಿವೇಶದ ಅಭಾವ. "ಊರ ಸೀರೆಗೆ ಅಗಸ ತಡ ಬಡಿ ಹಡೆದಂತೆ ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ" "ಸಂಸಾರವೆಂಬ ತೆರೆ ಕೊಬ್ಬಿ ಮಬುಖದ ಮೇಲಾಡುತಿದೆ." "ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತಯ್ಯಾ." "ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ." ಈ ಮಾತುಗಳಲ್ಲಿ ಲೋಲುಪ್ತಿಯು ವ್ಯಕ್ತವಾಗಿದೆ. "ಹಣ ಬಂಗಾರ ವಸ್ತ್ರ ಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟಿ ಎತ್ತದ ಭಾಷೆ. ಕೊಟ್ಟಡೆ ಮುಟ್ಟದ ಭಾಷೆ. ಪರಧನ ಪರಸತಿಗೆ ಅಳುಪದ ಭಾಷೆ, ಇಂತಿದಕ್ಕಳುಪಿದೆನಾಡಡೆ ಸೌರಾಷ್ಟ್ರ ಸೋಮೇಶ್ವರಾ ನಿಮ್ಮಾಣೆ, ನಿಮ್ಮ ಪ್ರಮಥರಾಣೆ" (ಆದಯ್ಯ). "ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ." "ಕೂಡಲ ಸಂಗಮ ದೇವಸುಳ್ಳನ್ನಕ್ಕ ಬಿಜ್ಜಳನ ಭಂಡಾರವೆನಗೇಕೆ? (ಬಸವಣ್ಣ). ಈ ಮಾತುಗಳಲ್ಲಿ ಅಲೋಲುಪತೆ ವ್ಯಕ್ತವಾಗಿದೆ.

(೧೮)ಮಾರ್ದವ- ಮೃದುತನ. ಜನರು ತನ್ನನ್ನೆಷ್ಟೇ ಪೀಡಿಸಿದರೂ ಅವರೊಂದಿಗೆ ಬಹು ನಯ ವಿನಯವಾಗಿ ವ್ಯವಹರಿಸುವದು, ಮಧು ಮಧುರವಾಗಿ ಮಾತನಾಡುವದು ಮಾರ್ದವತೆ. "ಕಂಡ ಭಕ್ತರಿಗೆ ಕೈ ಮುಗಿಯುವಾತನೇ ಭಕ್ತ. ಮೃದು ವಚನವೇ ಸಕಲ ಜಪಂಗಳಯ್ಯಾ. ಮೃದು ವಚನವೇ ಸಕಲ ತಪಂಗಳಯ್ಯಾ. ಸದುವಿನಯವೇ ಸದಾಶಿವನೊಲಿಮೆಯಯ್ಯಾ" "ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ" "ಬಾಗಿದ ತಲೆಯ ಮುಗಿದ ಕೈಯ್ಯಾಗಿರಿಸು" (ಬಸವಣ್ಣ).

(೧೯) ಹ್ರೀ–ಲಜ್ಜೆ, ನಾಚಿಕೆ. ಗುರು ಶಾಸ್ತ್ರಗಳು ತೊರೆ ಎಂದು ಹೇಳಿದ ವಿಷಯಗಳನ್ನು ಸಹಸೈವ ತೊರೆದು ಬಿಡುವದು ಹ್ರೀ. ಒಮ್ಮೆ ಮಾಡಿದ ಪಾಪ ಕಾರ್ಯಕ್ಕೆ ಮತ್ತೊಮ್ಮೆ ಕೈ ಹಾಕದಿರುವದು ಹ್ರೀ. ಒಮ್ಮೆ ಶುಕ್ಲ ಶೋಣಿತದ ಸಂಗದಿಂದ ಹುಟ್ಟಿ ಬಂದ ಬಳಿಕ ಇನ್ನೆಂದೂ ಹುಟ್ಟಿ ಬರಲಾರೆನೆಂಬ ಮನೋನಿರ್ಧಾರವೂ ಹ್ರೀ. "ಅರಿಯುದೆ ಜನನಿಯ ಜಠರದಲ್ಲಿ, ಬಾರದ ಭವಂಗಳಲ್ಲಿ ಬಂದೆ.

ತಂದೆ, ಹುಟ್ಟಿದ್ದೇ ತಪ್ಪಾಯಿತೆ ಎಲೆ ಲಿಂಗವೆ. ಮುನ್ನ ಹುಟ್ಟಿದುದಕ್ಕೆ ಕೃಪೆ ಮಾಡಾ ಲಿಂಗವೆ. ಇನ್ನು ಹುಟ್ಟಿದೆನಾದರೆ ನಿಮ್ಮಾಣೆ" (ಬಸವಣ್ಣ). ಇದು ಹ್ರೀ ಯುಳ್ಳ ನುಡಿ.

(೨೦) ಅಚಾಪಲ:– ನಿರರ್ಥಕವಾದ ಕಾರ್ಯಗಳನ್ನು ಮಾಡದಿರುವದು, ಅಪ್ರಯೋಜಕ ಮಾತುಗಳನ್ನು ಆಡದಿರುವದು ಹಾಗು ಮನಸ್ಸನ್ನು ಸಾಧ್ಯವಾದಷ್ಟು ನಿಶ್ಚಲಗೊಳಿಸುವದು ಅಚಾಪಲ.

(೨೧) ತೇಜ:– ಇದೊಂದು ಮಹಾನುಭಾವರಲ್ಲಿರುವಂಥ ವಿಶಿಷ್ಟ ಶಕ್ತಿ; ಪ್ರಭಾವಲಯ! ಈ ವಲಯದಲ್ಲಿ ಯಾವುದೇ ವ್ಯಕ್ತಿ ಬರಲಿ ಅವನು ತನ್ನ ಹೀನ ಗುಣಗಳ ತ್ಯಜಿಸಿ ಸಜ್ಜನನಾಗುತ್ತಾನೆ.

(೨೨) ಕ್ಷಮಾ:– ಅಪಕಾರಕ್ಕೆ ಪ್ರತಿಯಾಗಿ ಅಪಕಾರವೆಸಗದೆ ಸಹಾನುಭೂತಿ ತೋರುವದು; ಅಪಕಾರ ಬಗೆದವರಿಗೆ ಕಲ್ಯಾಣವನ್ನೇ ಬಯಸುವದು ಕ್ಷಮೆ. "ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ ನಿಮ್ಮ ಧರ್ಮ. ಆಡದಿರಿಂ ಭೋ ನಿಮ್ಮ ಧರ್ಮ. ಅಲ್ಲಿ ಉಂಬರೆ ಸಂಗ ! ಇಲ್ಲಿ ಉಂಬರೆ ಸಂಗ ! ಕೂಡಲ ಸಂಗಮ ದೇವಯಿಕೋ ಭಾವ!" "ಎಡದಪಾದದಲೊದ್ದರೆ ಬಲದ ಪಾದವ ಹಿಡಿವೆ; ಬಲದ ಪಾದದಲೊದ್ದರೆ ಎಡದ ಪಾದವ ಹಿಡಿವೆ! ತ್ರಾಹಿ, ತ್ರಾಹಿ; ತಪ್ಪೆನ್ನದು, ಕ್ಷಮೆ ನಿಮ್ಮದು! ಕೂಡಲ ಸಂಗಮ ದೇವಾ ನಿಮ್ಮ ಕರುಣದ ಕಂದ ನಾನು!" ಈ ಎರಡು ವಚನಗಳಲ್ಲಿ ಕ್ಷಮಾ ಗುಣವು ಎದ್ದು ತೋರುತ್ತಿದೆ.

(೨೩) ಧೃತಿ:– ಪರ್ವತಪ್ರಾಯದ ಆಪತ್ತುಗಳು ಬಂದಾಗಲೂ ಅವಿಚಲನಾಗಿರುವ ಮನೋದಾರ್ಢ್ಯವೇ ಧೃತಿ. "ಜಗವೆಲ್ಲ ಮುನಿದಡಂಜೆ. ಆಧಿವ್ಯಾಧಿಗಳು ಬಂದು ತನುವನಂಡಲೆದಡಂಜೆ. ರಾಜಭಯ ಚೋರಭಯ ಮೃಗಭಯ ಗ್ರಹಭಯಂಗಳು ಬಂದು ನಾಲ್ದೆಸೆಯಲ್ಲಿ ಮುಸುಕಿದಡಂಜೆ; ಅಖಂಡೇಶ್ವರಾ ನೀ ಸಾಕ್ಷಿಯಾಗಿ!" (ಷಣ್ಮುಖ ಸ್ವಾಮಿ). "ಎನಿಸೆನಿಸಾಪತ್ತು ಬಂದರೂ ನಾ ಧೃತಿಗೆಡೆನಯ್ಯಾ. ಎಲುದೋರಿದರೆ, ನರ ಹರಿದು ಬಿದ್ದಡೆ, ಕರುಳು ಕುಪ್ಪಳಿಸಿದರೆ ನಾ ಧೃತಿಗೆಡೆನಯ್ಯಾ. ಸಿರ ಹರಿದು ಅಟ್ಟೆ ನೆಲಕ್ಕೆ ಬಿದ್ದರೆ ನಾ ಧೃತಿಗೆಡೆನಯ್ಯಾ." ಎಂದು ಹೇಳುವ ಅಣ್ಣನವರ ಮಾತಿನಲ್ಲಿ ಧೃತಿ ಸ್ಫುಟಗೊಂಡಿದೆ.

(೨೪) ಶೌಚ:–ನಿರ್ಮಲತೆ. ಎರಡು ವಿಧ-(ಅ) ವಾಸಸ್ಥಾನ, ವಸ್ತು, ದೇಹ, ಇಂದ್ರಿಯಗಳನ್ನು ನಿರ್ಮಲವಾಗಿ ಇಟ್ಟುಕೊಳ್ಳುವದು ಬಾಹ್ಯಶೌಚ. (ಬ) ಮನಸ್ಸನ್ನು ನಿರ್ಮಲಗೊಳಿಸುವದು ಅಂತಃಶೌಚ. ಸರ್ವಕಾಲ, ದೇಶ, ಸಮಯಗಳಲ್ಲಿ ಆಚರಿಸುವ ಶೌಚವು ಸಾರ್ವಭೌಮ ಮಹಾವ್ರತ. "ಶೌಚಾತ್ಸ್ವಾಂಗ ಜುಗುಪ್ಸಾ ಪರೈರಸಂಸರ್ಗಃ" ಶೌಚ ಮಹಾವ್ರತವು ಪ್ರತಿಷ್ಠಿತವಾದರೆ ತನ್ನ ದೇಹದಲ್ಲಿ ಜುಗುಪ್ಸೆ (ನಿರ್ಮೋಹ) ಮತ್ತು ಅನ್ಯರ ದೇಹಗಳಿಂದ ಅಸಂಸರ್ಗ (ಅಂದರೆ ಪರರ ದೇಹಗಳ ವಿಷಯದಲ್ಲಿ ವ್ಯಾಮೋಹವಿಲ್ಲದಿರುವದು) ಉಂಟಾಗುತ್ತವೆ.

ಇದು ಪಂತಜಲ ಋಷಿಗಳ ಅಭಿಪ್ರಾಯ.

(೨೫) ಅದ್ರೋಹ:– ಯಾರ ಬಗೆಗೂ ದ್ವೇಷ ತಾಳದಿರುವದು." ಕಾಣದ ಠಾವಿನಲ್ಲಿ ಜರಿದರೆಂದರೆ ಕೇಳಿ ಪರಿಣಾಮಿಸಬೇಕು, ಅದೇನು ಕಾರಣ? ಕೊಳ್ಳದೆ ಕೊಡದೆ ಅವರಿಗೆ ಸಂತೋಷವಹುದಾಗಿ. ಎನ್ನಮನದ ತದ್ದ್ವೇಷವಳಿದು ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು ಕೂಡಲ ಸಂಗಮ ದೇವಾ". ಎಲ್ಲರಿಗೂ ಒಳ್ಳೆಯದಾಗಲಿ, ಎಲ್ಲರೂ ಮಿತ್ರರು ಎಂಬ ಭಾವ ಅದ್ರೋಹದಲ್ಲಿದೆ.

(೨೬) ನಾತಿಮಾನಿತಾ:– ತಾನು ಶ್ರೇಷ್ಠ ಎಂದು ತಿಳಿಯುವದು ಅತಿ ಮಾನಿತಾ. ತನ್ನಲಿರುವ ಶಕ್ತಿ, ಸಂಪದ, ವಿದ್ಯೆ, ಬುದ್ಧಿ, ಅಧಿಕಾರಗಳ ಅಭಿಮಾನ ಬಿಟ್ಟು ವಿನೀತನಾಗಿರುವದು ನಾತಿಮಾನಿತಾ. "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಂದ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ. ಎನ್ನ ಮನ ಸಾಕ್ಷಿ. ಸಂಗಮದೇವ ಎನಗಿದೇ ದಿಬ್ಬ" "ಮೇಲಾಗಲೊಲ್ಲೆನು ಕೀಳಾಗಲಲ್ಲದೆ. ಕೀಳಂಗಲ್ಲದೆ ಹಯನ ಕರೆವುದೆ? ಮೇಲಾಗಿ ನರಕದೋಳೋಲಾಡಲಾರೆನು. ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು, ಮಹಾದಾನಿ ಕೂಡಲ ಸಂಗಮ ದೇವ." ಅಣ್ಣನವರ ಇವೆರಡು ನುಡಿಗಳು ನಾತಿಮಾನಿತದ ಪ್ರತೀಕಗಳು.

ಈ ಇಪ್ಪತ್ತಾರು ಅಮೌಲ್ಯ ಗುಣಗಳು ದೈವೀ ಸಂಪದವೆನಿಸಿವೆ. ಇವುಗಳನ್ನು ಅಂಗವಿಸಿಕೊಂಡ ಸಾಧಕನು ಸುಕೃತಿ. ಅವನ ಜೀವನ ಸಾರ್ಥಕ. ಅವನಿಗೆ ಆತ್ಮಜ್ಞಾನ ಹಾಗು ಮುಕ್ತಿಪದವು ಸಹಜ ಸಿದ್ಧ. ಪ್ರಾಸಂಗಿಕವಾಗಿ ನಿಜಗುಣ ಶಿವಯೋಗಿಗಳ ಒಂದು ಪದವನ್ನು ಅವಲೋಕಿಸಬೇಕು. ಅದರಲ್ಲೂ ದೈವೀ ಸಂಪತ್ತಿನ ವರ್ಣನೆಯಿದೆ.

" ಬೇಡುವೆನಭವ ನಿಮ್ಮನು ಭವ ಭವದೊಳು
ಮಾಡೆನಗೊಲಿದು ಸುಗಣ ಸಂತತಿಯನಿಂತು ॥ಪ॥

ಎಡರಡಸಿದ ವೇಳೆಯೊಳು ಧೈರ್ಯವನು ಸಿರಿ
ವಡೆದು ಜೀವಿಸುವೆಡೆಯೊಳು ವಿನಯುವನು ॥
ಕಡು ಜವ್ವನದೊಳು ವಿಕೃತಿ ದೋರದಿಹುದನು
ಪಿಡಿದ ನೇಮವನೆಡೆವಿಡದದತಿ ಛಲವನು ॥೧॥

ಅಸುವಳಿಯಲು ದೇಹಿಯೆನಲೊಲ್ಲದಧಟನು
ಪುಸಿಯನೆಲ್ಲಿಯು ನುಡಿಯದ ಸತ್ಯವಿದನು ॥
ಮಸಳಿಸದಿಹ ಪುಣ್ಯಮಯ ಕೀರ್ತಿಯನು ಶಾಂತ
ರೊಸೆದಹುದೆಂದು ಬಣ್ಣಿಸುವ ವರ್ತನವನು ॥೨॥

ವಿತರಣದೊಡನೆ ಭೋಗಿಸುವರ್ಥದೊದವನು
ಹಿತವಚನವೆ ತೊಡವೆನಿಪ ದಾನವನು ॥
ಶ್ರುತಿಬೋಧನೆಯೊಳುಪರತಿಯಿಲ್ಲದಿಹುದನು
ನುತಿವೆತ್ತ ಕೈಸಾರುತಿಹ ಮನೋರಥವನು ॥೩॥

ಕೋಪವಂಟಿದ ತಪವನು ಪರವಧುವಿನ
ರೂಪುಗಂಡೆಳಸದ ಕರಣವಿಜಯುವನು ॥
ತಾಪವಡರಿ ಕೆಡಿಸದ ಸಾರಸುಖವನು
ಕಾಪಟ್ಯವಿಲ್ಲದಾಶ್ರಮ ಧರ್ಮರತಿಯುನು ॥೪॥
ಧರೆಯೊಳತ್ಯಧಿಕವೆನಿಪ ಶಾಂತಿಮತವನು
ಕರುಣವಿದ್ಯೆಗಳುಳ್ಳ ಗುರುಭಜನೆಯುನು ॥
ಪರತರ ಮುಕುತಿದೋರುವ ಶಾಸ್ತ್ರವನು ಕಂತು
ಹರ ಶಂಭುಲಿಂಗ ನಿಮ್ಮಡಿಯ ಭಕ್ತಿಯುನು ॥೫॥

ಸಂಬಂಧ:–ಮೂರು ಮಂತ್ರಗಳಲ್ಲಿ ದೈವೀ ಸಂಪದವನ್ನು ವಿವರಿಸಿದ ಭಗವಂತನು ಮುಂದಿನ ಮಂತ್ರದಲ್ಲಿ ಆಸುರೀ ಸಂಪದವನ್ನು ವರ್ಣಿಸುತ್ತಾನೆ.

ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವಚ ।
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥೪॥

ಭಾವ:-ಪಾರ್ಥ, ದಂಭ ದರ್ಪ ಅತಿಮಾನ ಕ್ರೋಧ ಪಾರುಷ್ಯ ಹಾಗು ಅಜ್ಞಾನ ಈ (ಆರು) ಗುಣಗಳು ಆಸುರೀ ಸಂಪತ್ತಿಗಾಗಿ ಹುಟ್ಟಿದವನಿಗೆ ಉಂಟಾಗುತ್ತವೆ.

ಆಸುರೀ ಗುಣಸಂಪದ

ವಿವರಣೆ:(೧)ದಂಭ:–ತಾನು ಸಜ್ಜನ ಸದ್ಭಕ್ತ, ಸುಗಣಿ ಸುಜ್ಞಾನಿ ಎಂದು ಲೋಕದೆದುರು ತೋರಿಸಿಕೊಳ್ಳುವದು ದಂಭ. ಆತ್ಮಸ್ತುತಿ, ಆಡಂಬರದ ಅರ್ಚನೆ, ತೋರಿಕೆಯ ತಪ. ಡಂಗುರ ಸಾರಿ ಮಾಡುವ ದಾನ, ಪ್ರತಿಷ್ಠೆಗಾಗಿ ಆಚರಿಸುವ ಯಜ್ಞ–ಯಾಗ, ಮಾತಿನ ಬಳಿಕೆಗಾಗಿ ಇರುವ ಜ್ಞಾನ, ಕೀರ್ತಿಗಾಗಿ ವರಿಸುವ ಆಶ್ರಮಧರ್ಮ ಇವೆಲ್ಲ ದಂಭದ ರೂಪುಗಳು.

"ಜನ ಮೆಚ್ಚುಗೆ ಶುದ್ಧನಲ್ಲದೆ ಮನಮೆಚ್ಚುಗೆ ಶುದ್ಧನಲ್ಲವಯ್ಯ.
ನುಡಿಯಲ್ಲಿ ಜಾಣನಲ್ಲದೆ ನಡೆಯಲ್ಲಿ ಜಾಣನಲ್ಲವಯ್ಯಾ.
ವೇಷದಲ್ಲಿ ಅಧಿಕನಲ್ಲದೆ ಭಾಷೆಯಲ್ಲಿ ಅಧಿಕನಲ್ಲವಯ್ಯ,
ಧನ ದೊರಕದೆ ನಿಸ್ಪೃಹನಲ್ಲದೆ ಧನದೊರಕಿ ನಿಸ್ಪೃಹನಲ್ಲವಯ್ಯ .
ಏಕಾಂತ ದ್ರೋಹಿ ಗುಪ್ತಪಾತಕಿ ಯುಕ್ತಿ ಶೂನ್ಯಂಗೆ ಸಕಳೇಶ್ವರ ದೇವರು ಒಲಿ ಒಲಿ ಎಂದರೆ ಎಂತೊಲಿವನಯ್ಯಾ?" (ಸಕಳೇಶ ಮಾದರಸ.)

ಬಿಡುಬಾಹ್ಯದೊಳು ಡಂಭವ ಮಾನಸದೊಳ ।
ಗೆಡವಿಡದಿರು ಶಂಭುವ ಒಡಲೊಳು ವಂಚಿಸಿ ಹೊರಗೆ
ನೀಕೀರ್ತಿಯ। ಪಡೆದರೆ ಶಿವನಿನಗೊಲಿವನೆ ಮರುಳೆ ॥ಪಲ್ಲ॥
ಜನಮೆಚ್ಚಿ ನಡಕೊಂಡರೇನುಂಟುಲೋಕದಿ ।
ಮನಮೆಚ್ಚಿ ನಡಕೊಂಬುದೆ ಚಂದವು ।
ಜನರೇನು ಬಲ್ಲರು ವಳಗಾಗೊ ಕೃತ್ಯವ ।
ಮನವರಿಯದ ಕಳ್ಳತನವಿಲ್ಲವಲ್ಲ ॥೧॥

ಜನರು ಮೆಚ್ಚುತೆ ನಿನ್ನ ಕೈಲಾಸಕೊಯ್ವುರೆ ।
ಜನಮೆಚ್ಚದಿರೆ ಶಿವಬಿಡುತಿಹನೆ ।
ಜನರಲ್ಲಿ ನಿನ್ನನು ದೊಡ್ಡಾತನೆಂದರೆ ।
ಚಿನುಮಯ ಶಿವನೆಲ್ಲನರಿಯನೆ ಮರುಳೆ ॥೨॥
ಮನದೊಳು ಶಿವತಾನೆ ಮನೆಮಾಡಿಕೊಂಡಿಪ ।
ಮನಮೆಚ್ಚಿನಡೆದರೆ ಶಿವಮೆಚ್ಚುವ ।
ಮನಕಂಜಿ ನಡೆಯದೆ ಜನಕಂಜಿ ನಡೆದರೆ ।
ಮನದಾಣ್ಮ ಗುರುಸಿದ್ಧ ಮರೆಯಾಗುವನಲ್ಲಾ ॥೩॥

(೨) ದರ್ಪ : ಧನ, ಕನಕ, ಕೀರ್ತಿ, ಕುಲ, ಅಧಿಕಾರ, ವಿದ್ಯೆ ಮುಂತಾದ ವುಗಳಿಂದ ತಲೆದೋರುವ ಗರ್ವ ! ದರ್ಪ ಎನ್ನುವದೊಂದು ಅಮಲು; ಅದನ್ನು ಆಕಂಠವಾಗಿ ಕುಡಿದ ಮನುಷ್ಯನಿಗೆ ನೀತಿ, ಧರ್ಮ, ಗುರು, ದೇವ, ದೀನ, ದಲಿತ ಯಾರೂ ಕಾಣರು. ಅವನದು ಮಲೆತ ಬಾಳು, ಮದೋನ್ಮತ್ತ ವರ್ತನೆ.

(೩) ಅತಿಮಾನ :– ಅಹಮಹಮಿಕೆ. ತನ್ನ ಕುಲ, ಜಾತಿ, ಸಂಪ್ರದಾಯ ಗಳ ಬಗ್ಗೆ ಮಿತಿ ಮೀರಿದ ಅಭಿಮಾನ. ತನ್ನ ರೂಪ ಯೌವನ ಸಿರಿ ಸಂಪದ ಗಳ ಬಗ್ಗೆ ಹುಚ್ಚು ಹೆಮ್ಮೆ. ಉಳಿದವರನ್ನೆಲ್ಲ ಕೀಳಾಗಿ ಭಾವಿಸಿ ತಾನೇ ಶ್ರೇಷ್ಠ ನೆಂದು ಬಗೆಯುವದು ಕೂಡ ಅತಿಮಾನಿತವೇ. ಶಾಂತಿ, ಸೌಹಾರ್ದತೆ, ತಾಳ್ಮೆ, ಬಂಧುಭಾವ, ನಿಸ್ವಾರ್ಥಸೇವೆ, ವಿನಯ, ಸೌಜನ್ಯ ಇವುಗಳಿಗೆ ಅತಿಮಾನಿತ ಪುರುಷನಲ್ಲಿ ಲವಲೇಶವೂ ಸ್ಥಾನವಿಲ್ಲ.

(೪) ಕ್ರೋಧ :– ತನಗೆ ಅನುಕೂಲವಲ್ಲದ ವ್ಯಕ್ತಿಗಳ ವಿಷಯದಲ್ಲಿ ಉಂಟಾಗುವ ಮನೋದ್ರೇಕ, ಸಹನಶೀಲತೆಯ ಕೊರತೆಯಿಂದಾಗಿ ಕಾಣ ಬರುವ ಭಾವೋದ್ವೇಗ. ಕ್ರೋಧ ಜಗತ್ತಿನ ಬಹು ಜನರ ಹೃದಯದಲ್ಲಿ ಮನೆ ಮಾಡಿದೆ. ಎಲ್ಲೆಲ್ಲೂ ನಡೆಯುವ ಕಲಹ, ಹೋರಾಟ, ವಂಚನ, ಯುದ್ಧಗಳಿಗೆ ಇದುವೇ ಮೂಲ. ವಿವೇಕ ದೃಷ್ಟಿಯನ್ನು ಮುಚ್ಚಿಹಾಕಿ ಜೀವನನ್ನು ದ್ವೇಷಾ ಗ್ನಿಗೆ ನೂಕುವ ದುಷ್ಟ ಶಕ್ತಿಯಿದು ಕೋಪ ! ರಾಮ ರಾವಣರ ಕೋಪಕ್ಕೆ ಲಂಕೆ ಬಲಿಯಾಯ್ತು. ಕೌರವ ಪಾಂಡವರ ಕೋಪಕ್ಕೆ ಕುರುವಂಶ ಮಣ್ಣುಗೂಡಿತು! ಹಿಟ್ಲರನ ಕೋಪಕ್ಕೆ ಯುರೋಪಿನ ಹಲವಾರು ರಾಷ್ಟ್ರಗಳು ಜರ್ಜರಿಸಿದವು.

(೫) ಪಾರುಷ್ಯ :– ಕಠೋರ ಮಾತು; ಕೇಳುವವರ ಮನಸ್ಸು ಗಾಯ ಗೊಳ್ಳುವಂಥ ಹರತ ನುಡಿ; ಅನ್ಯರ ಜೀವನವನ್ನು ರೂಪುಗೆಡಿಸುವ ಕುಹಕ ವಚನ, ನಿಂದೆ, ಚಾಡಿ, ಅವಹೇಳನ, ಅಪಮಾನ, ವೈಯಕ್ತಿಕ ಟೀಕೆ, ಚುಚ್ಚನುಡಿ ಇವೆಲ್ಲ ಪಾರುಷ್ಯವೆನಿಸುತ್ತವೆ.

(೬) ಅಜ್ಞಾನ:– ಹೃದಯದಲ್ಲಿ ವ್ಯಾಪಿಸಿರುವ ಕತ್ತಲೆ. ಸತ್ಯ ಅಸತ್ಯ, ಧರ್ಮ ಅಧರ್ಮ, ನಿತ್ಯ ಅನಿತ್ಯ, ಆತ್ಮ ಅನಾತ್ಮಗಳ ಪರಿಜ್ಞಾನವಿಲ್ಲದಿರುವಿಕೆ,

ಇದಕ್ಕೆ ಮಾಯೆ ಎಂದೂ ಅಭಿಧಾನವಿದೆ. ಎಲ್ಲಿ ಅಜ್ಞಾನವೋ ಅಲ್ಲಿ ವಿಷಯ ಲಾಲಸೆ, ಅಲ್ಲಿ ಹಮ್ಮು ಬಿಮ್ಮು, ಅಲ್ಲಿ ಸಂಸಾರ. ಅಜ್ಞಾನಿಯ ಬದುಕು ಕೆಳಗಿನ ವಚನದಲ್ಲಿ ಚಿತ್ರಿತವಾಗಿದೆ. "ಹಗಲು ಹಸಿವೆಗೆ ಕುದಿದು, ಇರುಳು ನಿದ್ರೆಗೆ ಕುದಿದು, ಉಳಿದಾದ ಹೊತ್ತೆಲ್ಲ ಅಶನ ವ್ಯಸನಕ್ಕೆ ಕುದಿದು ಅಯ್ಯ ನಿಮ್ಮನರಿಯದ ಪಾಪಿ ನಾನಯ್ಯ. ಅಯ್ಯ ನಿಮ್ಮನರಿಯದ ಕರ್ಮಿ ನಾನಯ್ಯ. ಮಹಾಲಿಂಗ ಕಲ್ಲೇಶ್ವರ, ಅಸಗ (ಅಗಸ) ನೀರಡಿಸಿ ಸತ್ತ ತೆರನಂತಾಯಿತ್ತು ಎನ್ನಯುಕ್ತಿ."

ಈ ಆರು ದುರ್ಗುಣಗಳು ಆಸುರೀ ಮನುಷ್ಯನಲ್ಲಿ ಕಾಣಸಿಗುತ್ತವೆ.

**ಸಂಬಂಧ:**– ದೈವೀ ಹಾಗು ಆಸುರೀ ಸಂಪತ್ತುಗಳಿಂದ ಯಾವ ಫಲ?

ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।
ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ ॥೫॥

**ಅರ್ಥ:**– ದೈವೀ ಸಂಪತ್= ದೈವೀ ಸಂಪತ್ತು ವಿಮೋಕ್ಷಾಯ=ಮೋಕ್ಷಕ್ಕಾಗಿ ಹಾಗು ಆಸುರೀ= ಆಸುರೀ ಸಂಪತ್ತು ನಿಬಂಧಾಯ= ಬಂಧನೆಗಾಗಿ (ಇವೆ). ಮತಾ= ಇದು ನನ್ನ ಅಭಿಮತ. ಪಾಂಡವ=ಅರ್ಜುನ ಮಾ ಶುಚಃ= ಶೋಕ ಮಾಡಬೇಡ; ದೈವೀಂ ಸಂಪದಂ= ದೈವೀ ಸಂಪತ್ತನ್ನು ಪಡೆಯಲೆಂದೇ ಅಭಿಜಾತಃ ಅಸಿ= ನೀನು ಹುಟ್ಟಿರುವಿ.

**ವಿವರಣ:**– ಭಗವಂತ:– "ಪಾರ್ಥ, ಅಹಿಂಸಾದಿ ಸದ್ಗುಣಸಮ್ಮಿಲಿತವಾದ ಪವಿತ್ರ ದೈವೀ ಸಂಪದವು ಮುಕ್ತಿಗೆ ಕಾರಣ; ದಂಭಾದಿ ದುರ್ಗುಣ ಸಮ್ಮಿಲಿತ ತವಾದ ಆಸುರೀ ಸಂಪದವು ಸಾಂಸಾರಿಕ-ಬಂಧನಕ್ಕೆ ಹೇತು. ಒಂದು ದೇವನತ್ತ ಕರೆದೊಯ್ಯುತ್ತದೆ; ಮತ್ತೊಂದು ಪ್ರಪಂಚವೆಂಬ ಭಯಾನಕ ಕಂದರದತ್ತ ಎಳೆ ದೊಯುತ್ತದೆ. ಒಂದರಿಂದ ಶಾಂತಿ ಸಿದ್ಧಿ; ಎರಡನೆಯದರಿಂದ ಅಶಾಂತಿ ವರ್ಧನೆ. ಅರ್ಜುನ, ಚಿಂತಿಸದಿರು. ನಿನ್ನ ಹೃದಯದಲ್ಲಿ ದೈವೀ ಸಂಪದಕ್ಕೆ ಮಾತ್ರ ಅವಕಾಶವಿದೆ; ಆಸುರೀ ಗುಣಗಳು ನಿನ್ನತ್ತ ಸುಳಿಯಲರಿಯವು.

**ಸಂಬಂಧ:**– ಆಸುರೀ ಸಂಪತ್ತಿನ ವಿಶದ ವಿವರಣೆಯನ್ನು ಮುಂದಿನ ಹದಿ ಮೂರು ಮಂತ್ರಗಳಲ್ಲಿ ಮಾಡಲಾಗಿದೆ.

ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।
ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥೬॥

**ಅರ್ಥ:**– ಅಸ್ಮಿನ್ ಲೋಕೇ= ಈ ಲೋಕದಲ್ಲಿ ದೈವಃ ಆಸುರಃ ಚ= ದೈವ ಮತ್ತು ಆಸುರ ಎಂದು ದ್ವೌ= ಎರಡು ಭೂತಸರ್ಗೌ= ಭೂತಸೃಷ್ಟಿಗಳು (ಈಗ) ದೈವಃ= ದೈವ ಭೂತ ಸೃಷ್ಟಿಯು ವಿಸ್ತರಶಃ= ವಿಸ್ತಾರವಾಗಿ ಪ್ರೋಕ್ತಃ= ಹೇಳಲ್ಪಟ್ಟಿದೆ. ಆಸುರಂ= ಆಸುರೀ ಭೂತಸೃಷ್ಟಿಯನ್ನುಮೇ ಶೃಣು= ನನ್ನಿಂದ ಆಲಿಸು.

**ವಿವರಣೆ:**– ಪ್ರಜಾಪತಿಯು ಅಸಂಖ್ಯ ವರುಷಗಳ ಹಿಂದೆ ಮನುಕುಲಕ್ಕೆ ಜನ್ಮ ನೀಡಿದ. ಆಯಾ ವ್ಯಕ್ತಿಯ ಕರ್ಮ, ಸ್ವಭಾವ, ಆಕಾಂಕ್ಷೆ ಹಾಗು ಬುದ್ಧಿಗಳು ಭಿನ್ನವಾದುದರಿಂದ ಸಮಸ್ತ ಮನುಷ್ಯಕುಲ ಎರಡು ವರ್ಗಗಳಲ್ಲಿ ವಿಭಜಿಸಲ್ಪಟ್ಟಿತು (೧) ದೈವೀ (೨) ಆಸುರೀ ವರ್ಗ.

(೧) ದೈವೀವರ್ಗ:ಈ ವರ್ಗಕ್ಕೆ ಸೇರಿದ ಮನುಷ್ಯನ ಹೃದಯ ನಿರ್ಮಲ, ಭಾವ ಶುದ್ಧ, ಬುದ್ಧಿ ವಿವೇಕಯುಕ್ತ. ಈತನ ಮುಖ ದೇವನತ್ತ. ದೇವಾರ್ಚನ, ದೇವರನಾಮ ಸಂಕೀರ್ತನ, ದೇವಚಿಂತನಗಳಲ್ಲಿ ಇವನಿಗೆ ಅಮಿತಾಸಕ್ತಿ. ಅಹಿಂಸಾ ಸತ್ಯ ದಯೆ ನಿಸ್ವಾರ್ಥಗಳು ಇವನ ರಕ್ತಗತವಾಗಿವೆ. ಎರಡನೆಯ ಅಧ್ಯಾಯದ ಸ್ಥಿತಪ್ರಜ್ಞ, ಹನ್ನೆರಡನೆಯ ಅಧ್ಯಾಯದ ಭಕ್ತ, ಹದಿಮೂರನೆಯ ಅಧ್ಯಾಯದ ಜ್ಞಾನಿ, ಹದಿನಾಲ್ಕನೆಯ ಅಧ್ಯಾಯದ ವಿವೇಕಿ; ಅಷ್ಟೇ ಅಲ್ಲದೆ ಆರ್ತ, ಅರ್ಥಾರ್ಥಿ, ಜಿಜ್ಞಾಸು, ಜ್ಞಾನಿ; ಕರ್ಮಯೋಗಿ, ಅಷ್ಟಾಂಗಸಾಧಕ, ನಿಷ್ಕಾಮನಾ ಸನ್ಯಾಸಿ – ಇವರೆಲ್ಲ ದೈವೀ ವರ್ಗಕ್ಕೆ ಸೇರಿದ್ದಾರೆ.

(೨) ಆಸುರೀ ವರ್ಗ: ಈ ವರ್ಗದ ಮನುಷ್ಯನ ಅಂತರಂಗ ಅಪರಿಶುದ್ಧ; ಕಾಮಕ್ರೋಧಗಳಿಂದ ಲೋಭ ಮೋಹಗಳಿಂದ ತುಂಬಿಹೋಗಿದೆ. ಮನೆ ಮಡದಿ ಮಕ್ಕಳು ಮಾನ ಮುಂತಾದ ಸಾಂಸಾರಿಕ ವಿಷಯಗಳಲ್ಲಿ ಇವನ ಮನಸ್ಸು ಮುಳುಗಿದೆ. ಸದಾ ಇವನದು ವಿಷಯಚಿಂತನ ವಿಷಯಧ್ಯಾನ! ಇವನು ಸ್ವಾರ್ಥಿ, ಹಿಂಸಾರತ, ಧನ ಸಂಪಾದನಾಶೀಲ.

ಈ ಎರಡೂ ವರ್ಗಗಳಲ್ಲಿ ಮತ್ತೆ ಮೂರು ಮೂರು ಉಪವರ್ಗಗಳಿವೆ. ಆಸುರೀ ವರ್ಗದ ಭೇದಗಳು ೧) ವಿಷಯೋಪಭೋಗದಲ್ಲಿ ತಲ್ಲೀನರಾದವರು ಆಸುರೀ ದೇವತೆಗಳು. ೨) ಹಿಂಸಾಕೃತ್ಯಗಳಲ್ಲಿ ತೊಡಗಿದವರು ಆಸುರೀ ದಾನವರು. ೩)ತ್ಯಾಗಹೀನರಾಗಿ ಧನಾದಿಗಳ ಸಂಪಾದನೆಯಲ್ಲಿ ಆಸಕ್ತರಾದ ಲೋಭಿಗಳು ಆಸುರೀ ಮಾನವರು. ದೈವೀ ವರ್ಗದ ಭೇದಗಳು ೧) ಭೋಗಗಳಿಂದ ಪರಾಙ್ಮುಖರಾಗಿ ದಿವ್ಯಶಬ್ದ ದಿವ್ಯಸ್ಪರ್ಶ ದಿವ್ಯರೂಪ ದಿವ್ಯರಸ ದಿವ್ಯಗಂಧಗಳನ್ನು ಆಸ್ವಾದಿಸಲು ಕಲಿತವರು ದೈವೀ ದೇವತೆಗಳು. ೨) ಹಿಂಸೆಯ ಬಿಟ್ಟು ಭೂತದಯೆ ಪ್ರೇಮ ಕರುಣೆ ಕ್ಷಮೆ ಮುಂತಾದ ಮಧುರ ಗುಣಗಳನ್ನು ಮೈಗೂಡಿಸಿಕೊಂಡವರು ದೈವೀ ದಾನವರು. ೩) ಸಂಪಾದನೆ ಹಾಗು ಶೋಷಣೆಗಳ ಬಿಟ್ಟು ದಾನ ಧರ್ಮಗಳಲ್ಲಿ ಮಗ್ನರಾದವರು ದೈವೀ ಮಾನವರು.

ಭಗವಂತ:– "ಧನಂಜಯ, ನನ್ನಿಂದ ಸೃಷ್ಟವಾದ ಮನುಕುಲ ದೈವೀ ಆಸುರೀ ಎಂದು ಎರಡು ವಿಧವಷ್ಟೆ? ಅವರಲ್ಲಿ ದೈವೀ ಸ್ವಭಾವದವರ ಬಗ್ಗೆ ಬಹು ವಿಸ್ತಾರವಾಗಿ ವರ್ಣಿಸಿದ್ದೇನೆ. ಇನ್ನುಮೇಲೆ ಆಸುರೀ ಮನುಜರ ಬಗ್ಗೆ ಕೇಳು.

ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ।
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥೭॥

ಅರ್ಥ:–ಆಸುರಾ ಜನಾಃ=ಆಸುರೀ ಸ್ವಭಾವದ ಜನರು, ಪ್ರವೃತ್ತಿಂ ಚ ನಿವೃತ್ತಿಂ ಚ = ಪ್ರವೃತ್ತಿ ನಿವೃತ್ತಿಗಳನ್ನು, ನ ವಿದುಃ= ಅರಿಯರು, ತೇಷು =ಅವರಲ್ಲಿ, ಶೌಚಂ = ಶೌಚ, ಆಚಾರಃ=ಆಚಾರ, ಅಪಿ ಚ= ಹಾಗು, ಸತ್ಯಂ ನ= ಸತ್ಯಗಳಿಲ್ಲ.

ವಿವರಣೆ–ಭಗವಂತ:– "ಧನಂಜಯ, ಮನುಷ್ಯನಿಗೆ ಮುಕ್ತಿಯೇ ಪರಮ ಪುರುಷಾರ್ಥ. ಸಜ್ಜನರ ಸಂಗ, ಗುರುವಿನ ಸೇವೆ, ಶಾಸ್ತ್ರಾಧ್ಯಯನ, ಇಂದ್ರಿಯ ಸಂಯಮನ, ಮನೋನಿಗ್ರಹ, ಆತ್ಮಚಿಂತನ. ಇವು ಆ ಪರಮುಕ್ತಿಗೆ ಸಾಧನಗಳು. ಸತಿ ಸುತಾದಿಯರ ಸೇವೆ, ಕಾಮಾದಿ ದುರ್ಗುಣ ಪ್ರಚೋದಕ ಪುಸ್ತಕಗಳ ಅಧ್ಯಯನ, ಧನ ಸಂಚಯ, ಇಂದ್ರಿಯ ಸ್ವೇಚ್ಛೆ, ವಿಷಯೋಪಭೋಗಲಾಲಸೆ, ಅನಾತ್ಮಚಿಂತನ ಇವೆಲ್ಲ ಆ ಪುರುಷಾರ್ಥಕ್ಕೆ ಬಾಧಕಗಳು. ವಿವೇಕಿಯಾದ ಮನುಷ್ಯನು ಮುಕ್ತಿಸಾಧಕ ಸಾಧನೆಗಳಲ್ಲಿ ಪ್ರವೃತ್ತನಾಗಬೇಕು. ಆದರೆ, ದುರ್ದೈವದಿಂದ ಆಸುರೀ ಪ್ರಕೃತಿಯ ಜನರಿಗೆ ಪರಮಾರ್ಥ, ಪ್ರವೃತ್ತಿ, ನಿವೃತ್ತಿಗಳ ಪರಿಜ್ಞಾನವೇ ಇಲ್ಲ. ವಿಷಯ ಜನ್ಯ ಸುಖವೇ ಪರಮಾರ್ಥವೆಂದು ಅವರ ಭ್ರಮೆ. ಅದನ್ನು ಪಡೆಯಲು ಜೀವನವಿಡೀ ಶ್ರಮಿಸುತ್ತಾರೆ. ದೇಹ ಇಂದ್ರಿಯ ಮನ ಬುದ್ಧಿಗಳ ಶಕ್ತಿಯನ್ನೆಲ್ಲ ಭೋಗಕ್ಕಾಗಿ ವ್ಯಯಿಸುತ್ತಾರೆ. ಅವರ ಹೃದಯ ಅಶುಚಿ. ಅವರ ನಡತೆಯಲ್ಲಿ ಸದಾಚಾರವಿಲ್ಲ, ಅವರ ಮಾತಿನಲ್ಲಿ ಸತ್ಯವಿಲ್ಲ. ಅವರದು ಹೀನ ಬದುಕು!"

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್ ॥೮॥

ಅರ್ಥ:– ಅಸತ್ಯಂ= (ವೇದಗಳು ಪ್ರಮಾಣವಾಗಿವೆ ಎಂಬ ಮಾತು) ಅಸತ್ಯ ಅಪ್ರತಿಷ್ಠಿತಂ=(ಧರ್ಮಾಧರ್ಮಾದಿ ಕಲ್ಪನೆಗಳು)ಅಪ್ರತಿಷ್ಠಿತ ನಿರಾಧಾರಿತ, ಅನೀಶ್ವರಂ=ಜಗದ್ವ್ಯಾಪಕನಾದ) ಈಶ್ವರನಿಲ್ಲ. ಅಪರಸ್ಪರ ಸಂಭೂತಂ= (ಜಗತ್ತೆಲ್ಲ) ಸ್ತ್ರೀ ಪುರುಷರ ಸಂಯೋಗ ಜನ್ಯ. ಕಿಂ ಅನ್ಯತ್ =ಇನ್ನೇನು? ಕಾಮ ಹೈತುಕಂ=ಕಾಮವೇ ಜಗದ ಹೇತು. ಆಹುಃ= ಹೀಗೆ ಆಸುರೀ ಜನ ಹೇಳುತ್ತಾರೆ.

ವಿಮರ್ಶೆ: (೧) ವೇದಗಳು ಸನಾತನ; ಸರ್ವ ಸಮಾನತ್ವ, ವಿಶ್ವಬಂಧುತ್ವ, ನಿಸ್ವಾರ್ಥಪ್ರೇಮ ಮುಂತಾದ ಅಮೃತೋಪಮ ತತ್ತ್ವಗಳನ್ನು ಸಾರುತ್ತಿವೆ. ಹಲವಾರು ಸಂತ ಮಹಾತ್ಮರು ವೇದನಿರ್ದಿಷ್ಟ ಪಥದಲ್ಲಿ ಸಾಗಿ ಆ ಅಮರ ವಿಶ್ವ–ತತ್ತ್ವಗಳನ್ನು ಬೋಧಿಸಿದರು. ಆದರೆ ದುರ್ದೈವದಿಂದ ಬಹುಜನ ಪಂಡಿತರು ವೇದಗಳನ್ನು ಕಂಠಸ್ಥ ಮಾಡಿಕೊಂಡರಾದರೂ ವೇದೋಕ್ತ ಜೀವನ ಸಾಗಿಸಲಿಲ್ಲ. ಈಶಾವಾಸ್ಯಮಿದಂ ಸರ್ವಂ, ಎಲ್ಲವೂ ಪರಮಾತ್ಮನ ರೂಪು ಎಂಬ ವೇದ ಬೋಧನೆಯನ್ನು ತುಳಿದು ಹಾಕಿದ ಆ ಪಂಡಿತರು ವೇದಸಮ್ಮತವಲ್ಲದ ಜಾತಿ ಗೋತ್ರಗಳನ್ನು ಸೃಷ್ಟಿಸಿದರು. ಮನುಕುಲವನ್ನೆಲ್ಲ ಛಿದ್ರವಿಚ್ಛಿದ್ರವಾಗಿ ವಿಭಾಗಿಸಿದರು. ವೇದವರಿಯದ ಸಾಮಾನ್ಯ ಜನರ ಅಜ್ಞಾನದ ಮೇಲೆ ತಮ್ಮ ವಿಲಾಸೀ ಜೀವನದ ಕಟ್ಟಡ ನಿರ್ಮಿಸಿದರು. ಆ ಜನ ಬರೀ ಶ್ರಮಿಸಬೇಕು; ಈ ಪಂಡಿತರು ಕುಳಿತು ವಿಷಯೋಪಭೋಗಮಾಡಬೇಕು! ಅವರು ಭಕ್ತಿ ಭಯದಿಂದ ನೀಡಬೇಕು; ಇವರು ಅಧ್ಯಾತ್ಮತೆಯಿಂದ ದಾನ ಪಡೆದು ಮೆರೆಯಬೇಕು! ಎಂಥ ಅಪಚಾರ! ಮುಖ

(೧) ದೈವೀವರ್ಗ: ಈ ವರ್ಗಕ್ಕೆ ಸೇರಿದ ಮನುಷ್ಯನ ಹೃದಯ ನಿರ್ಮಲ, ಭಾವ ಶುದ್ಧ, ಬುದ್ಧಿ ವಿವೇಕಯುಕ್ತ. ಈತನ ಮುಖ ದೇವನತ್ತ. ದೇವಾರ್ಚನ, ದೇವರನಾಮ ಸಂಕೀರ್ತನ, ದೇವಚಿಂತನಗಳಲ್ಲಿ ಇವನಿಗೆ ಅಮಿತಾಸಕ್ತಿ. ಅಹಿಂಸಾ ಸತ್ಯ ದಯೆ ನಿಸ್ವಾರ್ಥಗಳು ಇವನ ರಕ್ತಗತವಾಗಿವೆ. ಎರಡನೆಯ ಅಧ್ಯಾಯದ ಸ್ಥಿತಪ್ರಜ್ಞ, ಹನ್ನೆರಡನೆಯ ಅಧ್ಯಾಯದ ಭಕ್ತ, ಹದಿಮೂರನೆಯ ಅಧ್ಯಾಯದ ಜ್ಞಾನಿ, ಹದಿನಾಲ್ಕನೆಯ ಅಧ್ಯಾಯದ ವಿವೇಕಿ; ಅಷ್ಟೇ ಅಲ್ಲದೆ ಆರ್ತ, ಅರ್ಥಾರ್ಥಿ, ಜಿಜ್ಞಾಸು, ಜ್ಞಾನಿ; ಕರ್ಮಯೋಗಿ, ಅಷ್ಟಾಂಗಸಾಧಕ, ನಿಷ್ಕಾಮನಾ ಸನ್ಯಾಸಿ – ಇವರೆಲ್ಲ ದೈವೀ ವರ್ಗಕ್ಕೆ ಸೇರಿದ್ದಾರೆ.

(೨) ಆಸುರೀ ವರ್ಗ: ಈ ವರ್ಗದ ಮನುಷ್ಯನ ಅಂತರಂಗ ಅಪರಿಶುದ್ಧ; ಕಾಮಕ್ರೋಧಗಳಿಂದ ಲೋಭ ಮೋಹಗಳಿಂದ ತುಂಬಿಹೋಗಿದೆ. ಮನೆ ಮಡದಿ ಮಕ್ಕಳು ಮಾನ ಮುಂತಾದ ಸಾಂಸಾರಿಕ ವಿಷಯಗಳಲ್ಲಿ ಇವನ ಮನಸ್ಸು ಮುಳುಗಿದೆ. ಸದಾ ಇವನದು ವಿಷಯಚಿಂತನ ವಿಷಯಧ್ಯಾನ! ಇವನು ಸ್ವಾರ್ಥಿ, ಹಿಂಸಾರತ, ಧನ ಸಂಪಾದನಾಶೀಲ.

ಈ ಎರಡೂ ವರ್ಗಗಳಲ್ಲಿ ಮತ್ತೆ ಮೂರು ಮೂರು ಉಪವರ್ಗಗಳಿವೆ. ಆಸುರೀ ವರ್ಗದ ಭೇದಗಳು ೧) ವಿಷಯೋಪಭೋಗದಲ್ಲಿ ತಲ್ಲೀನರಾದವರು ಆಸುರೀ ದೇವತೆಗಳು. ೨) ಹಿಂಸಾಕೃತ್ಯಗಳಲ್ಲಿ ತೊಡಗಿದವರು ಆಸುರೀ ದಾನವರು. ೩) ತ್ಯಾಗಹೀನರಾಗಿ ಧನಾದಿಗಳ ಸಂಪಾದನೆಯಲ್ಲಿ ಆಸಕ್ತರಾದ ಲೋಭಿಗಳು ಆಸುರೀ ಮಾನವರು. ದೈವೀ ವರ್ಗದ ಭೇದಗಳು ೧) ಭೋಗಗಳಿಂದ ಪರಾಙ್ಮುಖರಾಗಿ ದಿವ್ಯಶಬ್ದ ದಿವ್ಯಸ್ಪರ್ಶ ದಿವ್ಯರೂಪು ದಿವ್ಯರಸ ದಿವ್ಯಗಂಧಗಳನ್ನು ಆಸ್ವಾದಿಸಲು ಕಲಿತವರು ದೈವೀ ದೇವತೆಗಳು. ೨) ಹಿಂಸೆಯ ಬಿಟ್ಟು ಭೂತದಯೆ ಪ್ರೇಮ ಕರುಣೆ ಕ್ಷಮೆ ಮುಂತಾದ ಮಧುರ ಗುಣಗಳನ್ನು ಮೈಗೂಡಿಸಿಕೊಂಡವರು ದೈವೀ ದಾನವರು. ೩) ಸಂಪಾದನೆ ಹಾಗು ಶೋಷಣೆಗಳ ಬಿಟ್ಟು ದಾನ ಧರ್ಮಗಳಲ್ಲಿ ಮಗ್ನರಾದವರು ದೈವೀ ಮಾನವರು.

ಭಗವಂತ:– "ಧನಂಜಯ, ನನ್ನಿಂದ ಸೃಷ್ಟವಾದ ಮನುಕುಲ ದೈವೀ ಆಸುರೀ ಎಂದು ಎರಡು ವಿಧವಷ್ಟೆ? ಅವರಲ್ಲಿ ದೈವೀ ಸ್ವಭಾವದವರ ಬಗ್ಗೆ ಬಹು ವಿಸ್ತಾರವಾಗಿ ವರ್ಣಿಸಿದ್ದೇನೆ. ಇನ್ನುಮೇಲೆ ಆಸುರೀ ಮನುಜರ ಬಗ್ಗೆ ಕೇಳು.

ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ।
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥೭॥

ಅರ್ಥ:–ಆಸುರಾ ಜನಾಃ = ಆಸುರೀ ಸ್ವಭಾವದ ಜನರು, ಪ್ರವೃತ್ತಿಂ ಚ ನಿವೃತ್ತಿಂ ಚ = ಪ್ರವೃತ್ತಿ ನಿವೃತ್ತಿಗಳನ್ನು, ನ ವಿದುಃ = ಅರಿಯರು, ತೇಷು = ಅವರಲ್ಲಿ, ಶೌಚಂ = ಶೌಚ, ಆಚಾರಃ = ಆಚಾರ, ಅಪಿ ಚ = ಹಾಗು, ಸತ್ಯಂ ನ = ಸತ್ಯಗಳಿಲ್ಲ.

ವಿವರಣೆ–ಭಗವಂತ:– "ಧನಂಜಯ, ಮನುಷ್ಯನಿಗೆ ಮುಕ್ತಿಯೇ ಪರಮ ಪುರುಷಾರ್ಥ. ಸಜ್ಜನರ ಸಂಗ, ಗುರುವಿನ ಸೇವೆ, ಶಾಸ್ತ್ರಾಧ್ಯಯನ, ಇಂದ್ರಿಯ ಸಂಯಮನ, ಮನೋನಿಗ್ರಹ, ಆತ್ಮಚಿಂತನ. ಇವು ಆ ಪರಮುಕ್ತಿಗೆ ಸಾಧನ ಗಳು. ಸತಿ ಸುತಾದಿಯರ ಸೇವೆ, ಕಾಮಾದಿ ದುರ್ಗುಣ ಪ್ರಚೋದಕ ಪುಸ್ತಕಗಳ ಅಧ್ಯಯನ, ಧನ ಸಂಚಯ, ಇಂದ್ರಿಯ ಸ್ವೇಚ್ಛೆ, ವಿಷಯೋಪಭೋಗಲಾಲಸೆ, ಅನಾತ್ಮಚಿಂತನ ಇವೆಲ್ಲ ಆ ಪುರುಷಾರ್ಥಕ್ಕೆ ಬಾಧಕಗಳು. ವಿವೇಕಿಯಾದ ಮನುಷ್ಯನು ಮುಕ್ತಿಸಾಧಕ ಸಾಧನೆಗಳಲ್ಲಿ ಪ್ರವೃತ್ತನಾಗಬೇಕು. ಆದರೆ, ದುರ್ದೈವದಿಂದ ಆಸುರೀ ಪ್ರಕೃತಿಯ ಜನರಿಗೆ ಪರಮಾರ್ಥ, ಪ್ರವೃತ್ತಿ, ನಿವೃತ್ತಿ ಗಳ ಪರಿಜ್ಞಾನವೇ ಇಲ್ಲ. ವಿಷಯ ಜನ್ಯ ಸುಖವೇ ಪರಮಾರ್ಥವೆಂದು ಅವರ ಭ್ರಮೆ. ಅದನ್ನು ಪಡೆಯಲು ಜೀವನವಿಡೀ ಶ್ರಮಿಸುತ್ತಾರೆ. ದೇಹ ಇಂದ್ರಿಯ ಮನ ಬುದ್ಧಿಗಳ ಶಕ್ತಿಯನ್ನೆಲ್ಲ ಭೋಗಕ್ಕಾಗಿ ವ್ಯಯಿಸುತ್ತಾರೆ. ಅವರ ಹೃದಯ ಅಶುಚ. ಅವರ ನಡತೆಯಲ್ಲಿ ಸದಾಚಾರವಿಲ್ಲ, ಅವರ ಮಾತಿನಲ್ಲಿ ಸತ್ಯವಿಲ್ಲ. ಅವ ರದು ಹೀನ ಬದುಕು!"

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್ ॥೮॥

ಅರ್ಥ:– ಅಸತ್ಯಂ= (ವೇದಗಳು ಪ್ರಮಾಣವಾಗಿವೆ ಎಂಬ ಮಾತು) ಅಸತ್ಯ ಅಪ್ರ ತಿಷ್ಠಿತಂ=(ಧರ್ಮಾಧರ್ಮಾದಿ ಕಲ್ಪನೆಗಳು)ಅಪ್ರತಿಷ್ಠಿತ ನಿರಾಧಾರಿತ, ಅನೀಶ್ವರಂ=ಜಗದ್ವ್ಯಾಪ ಕನಾದ) ಈಶ್ವರನಿಲ್ಲ. ಅಪರಸ್ಪರ ಸಂಭೂತಂ= (ಜಗತ್ತೆಲ್ಲ) ಸ್ತ್ರೀ ಪುರುಷರ ಸಂಯೋಗ ಜನ್ಯ. ಕಿಂ ಅನ್ಯತ್ =ಇನ್ನೇನು? ಕಾಮ ಹೈತುಕಂ=ಕಾಮವೇ ಜಗದ ಹೇತು. ಆಹುಃ= ಹೀಗೆ ಆಸುರೀ ಜನ ಹೇಳುತ್ತಾರೆ.

ವಿಮರ್ಶೆ: (೧) ವೇದಗಳು ಸನಾತನ; ಸರ್ವ ಸಮಾನತ್ವ, ವಿಶ್ವಬಂಧುತ್ವ, ನಿಸ್ವಾರ್ಥಪ್ರೇಮ ಮುಂತಾದ ಅಮೃತೋಪಮ ತತ್ತ್ವಗಳನ್ನು ಸಾರುತ್ತಿವೆ. ಹಲವಾರು ಸಂತ ಮಹಾತ್ಮರು ವೇದನಿರ್ದಿಷ್ಟ ಪಥದಲ್ಲಿ ಸಾಗಿ ಆ ಅಮರ ವಿಶ್ವ–ತತ್ತ್ವಗಳನ್ನು ಬೋಧಿಸಿದರು. ಆದರೆ ದುರ್ದೈವದಿಂದ ಬಹುಜನ ಪಂಡಿ ತರು ವೇದಗಳನ್ನು ಕಂಠಸ್ಥ ಮಾಡಿಕೊಂಡರಾದರೂ ವೇದೋಕ್ತ ಜೀವನ ಸಾಗಿಸ ಲಿಲ್ಲ. ಈಶಾವಾಸ್ಯಮಿದಂ ಸರ್ವಂ, ಎಲ್ಲವೂ ಪರಮಾತ್ಮನ ರೂಪು ಎಂಬ ವೇದ ಬೋಧನೆಯನ್ನು ತುಳಿದು ಹಾಕಿದ ಆ ಪಂಡಿತರು ವೇದಸಮ್ಮತವಲ್ಲದ ಜಾತಿ ಗೋತ್ರಗಳನ್ನು ಸೃಷ್ಟಿಸಿದರು. ಮನುಕುಲವನ್ನೆಲ್ಲ ಛಿದ್ರವಿಚ್ಛಿದ್ರವಾಗಿ ವಿಭಾಗಿಸಿ ದರು. ವೇದವರಿಯದ ಸಾಮಾನ್ಯ ಜನರ ಅಜ್ಞಾನದ ಮೇಲೆ ತಮ್ಮ ವಿಲಾಸೀ ಜೀವನದ ಕಟ್ಟಡ ನಿರ್ಮಿಸಿದರು. ಆ ಜನ ಬರೀ ಶ್ರಮಿಸಬೇಕು; ಈ ಪಂಡಿತರು ಕುಳಿತು ವಿಷಯೋಪಭೋಗಮಾಡಬೇಕು! ಅವರು ಭಕ್ತಿ ಭಯದಿಂದ ನೀಡಬೇಕು; ಇವರು ಅಧ್ಯತೆಯಿಂದ ದಾನ ಪಡೆದು ಮೆರೆಯಬೇಕು! ಎಂಥ ಅಪಚಾರ! ಮುಖ

ದಲ್ಲಿ ವೇದಮಂತ್ರ, ನಡತೆಯಲ್ಲಿ ಆಸುರೀ ತಂತ್ರ! ಮಾತು ಆಸ್ತಿಕ! ಬದುಕು ನಾಸ್ತಿಕ! ಬೋಧನೆ ದೇವಪರ, ಭಾವನೆ ಕಾಮಪರ! ಇಂತು ಪಥಭ್ರಷ್ಟರಾದ ವೇದಪಂಡಿತರೆ ಆಸುರೀ ಅಭಿಪ್ರಾಯಗಳಿಗೆ ಎಡೆಗೊಟ್ಟು ಬೆಳಸಿದರೆಂದು ಸ್ಪಷ್ಟ ವಾಗಿ ಹೇಳಬಹುದು.

(೨) ವೇದಪಾರಂಗತ ವಿದುಷರು ವೇದಮಂತ್ರಗಳನ್ನು ನಾಲಿಗೆಯ ಮೇಲೆ ರೂಢಿಸುವ ಬದಲು ಜೀವನದಲ್ಲಿ ರೂಢಿಸಿದ್ದರೆ, ವಿಭಿನ್ನ ಮತ ಪಂಥಗಳನ್ನು ರಚಿಸಿ ಸಮಾಜವನ್ನು ಕೃತಕವಾಗಿ ವಿಭಜಿಸುವ ಬದಲು ಈಶಾವಾಸ್ಯ ತತ್ತ್ವ ವನ್ನು ಬಳಕೆಯಲ್ಲಿ ತಂದಿದ್ದರೆ, ಸಮಾಜವನ್ನೆಲ್ಲ ಶೋಷಿಸುವ ಬದಲು ಅದರ ಸೇವೆಯಲ್ಲಿ ತೊಡಗಿದ್ದರೆ ದೇವ ಧರ್ಮ ನೀತಿ ಜರೆಯುವ ಆಸುರೀವಾದ ಉಂಟಾಗುತ್ತಲೇ ಇರಲಿಲ್ಲ. ಹಾಗಾಗಲಿಲ್ಲ. 'ಮಾತಿನಂತೆ ಮನವಿಲ್ಲದ ಜಾತಿ ಡೊಂಬ'ತನ ಮಿತಿಮೀರಿ ಬೆಳೆದು ಬಂತು. ಎಂತಲೇ ಇಂದು ಎಲ್ಲೆಲ್ಲೂ ಆಸುರೀ ನಾಟ್ಯ ಸಾಗಿದೆ.

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥೯॥

ಅರ್ಥ:- ನಷ್ಟಾತ್ಮಾನಃ= ನಷ್ಟಾತ್ಮರೂ, ಅಲ್ಪಬುದ್ಧಯಃ= ಅಲ್ಪಬುದ್ಧಿಯವರೂ, ಉಗ್ರಕರ್ಮಾಣಃ= ಕ್ರೂರಕರ್ಮಿಗಳೂ ಅಹಿತಾಃ= ಲೋಕಶತ್ರುಗಳೂ(ಆದ ಆಸುರರು)ಏತಾಂ ದೃಷ್ಟಿಂ= ಈ (ನಾಸ್ತಿಕ) ದೃಷ್ಟಿಯನ್ನು ಅವಷ್ಟಭ್ಯ= ಆಶ್ರಯಿಸಿ ಜಗತಃ ಕ್ಷಯಾಯ= ಜಗ ತ್ತಿನ ವಿನಾಶಕ್ಕೆ ಪ್ರಭವಂತಿ= ಕಾರಣರಾಗುತ್ತಾರೆ.

ವಿವರಣ:- ಭಗವಂತ:- "ಕುರುನಂದನ, ಅಸುರರು ನಷ್ಟಾತ್ಮರು; ಅಂದರೆ ಆತ್ಮಜ್ಞಾನವಿಹೀನರು. ಅವರ ಬುದ್ಧಿ ಅಲ್ಪ, ನಿತ್ಯಾನಿತ್ಯ ವಸ್ತು ವಿವೇಚನಾ ರಹಿತ. ಅವರ ಕೃತಿಗಳೆಲ್ಲ ಕ್ರೂರ, ಹಿಂಸಕ ಹಾಗು ವಿನಾಶಕ. ಅವರ ಹೃದಯ ಮಲಿನವಾದುದರಿಂದ ಲೋಕಕ್ಕೆಲ್ಲ ಅಹಿತವನ್ನೇ ಬಗೆಯುತ್ತಾರೆ. ಅರ್ಜುನ, ಆ ಅಸುರರಿಂದಾಗಿ ಲೋಕವೇ ಹಾಳಾಗುವದೆಂದು ಖಚಿತವಾಗಿ ತಿಳಿ."

ಅಸುರರ ದೃಷ್ಟಿ ಹೊರಮುಖ. ಆದ್ದರಿಂದ ಅನಾತ್ಮವಸ್ತುವನ್ನು ನೋಡು ವಲ್ಲಿ ಮುಟ್ಟುವಲ್ಲಿ ಭೋಗಿಸುವಲ್ಲಿ ಸಂತೋಷಪಡುತ್ತಾರೆ. ಆತ್ಮವಸ್ತುವೇ ಇಲ್ಲೆಂಬ ಅಭಿಪ್ರಾಯ ತಳೆದು ಜಡಭಾವಿಗಳಾದ ಅವರು ಪ್ರಾಣಿಹಿಂಸೆ ನರಹತ್ಯ ಮುಂತಾದ ಕ್ರೂರ ಕರ್ಮಗಳಲ್ಲಿ ರತರಾಗಿದ್ದಾರೆ. ಕಲಹ ಕೊಲೆ ಯುದ್ಧಗಳೇ ಅವರ ಮೆಚ್ಚಿನ ಕ್ರೀಡೆಗಳು. ನ್ಯಾಯ ನೀತಿ ಆಚಾರ ಧರ್ಮಗಳನ್ನು ನಿರ್ದಾಕ್ಷಿ ಣ್ಯವಾಗಿ ತುಳಿಯುವ ಅವರ ಅಂತರಂಗ ಸೈತಾನನ ಕಾರ್ಯಾಗಾರ. ಒಂದೇ ಮಾತಿ ನಲ್ಲಿ ಹೇಳುವವದಾದರೆ ಮನುಕುಲದ ವಿನಾಶಕ್ಕಾಗಿಯೇ ಆ ಜನ ಹುಟ್ಟಿದ್ದಾರೆ!

ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।
ಮೋಹಾದ್ಗೃಹೀತ್ವಾಸದ್ಗ್ರಾಹಾನ್ಪ್ರವರ್ತಂತೇಽಶುಚಿವ್ರತಾಃ ॥೧೦॥

**ಅರ್ಥ:**- ದುಷ್ಪೂರಂ= ತೃಪ್ತಿಪಡಿಸಲಾಗದ ಕಾಮಂ= ಕಾಮವನ್ನು, ಆಶ್ರಿತ್ಯ= ಆಶ್ರಯಿಸಿ ದಂಭಮಾನಮದಾನ್ವಿತಾಃ= ದಂಭಮಾನ ಮದಗಳಿಂದ ಕೂಡಿದವರಾಗಿ ಮೋಹಾತ್ =ಮೋಹದಿಂದ ಅಸದ್ಗ್ರಾಹಾನ್= ಅಸದ್ಗ್ರಾಹಗಳನ್ನು ಗ್ರಹೀತ್ವಾ= ಹಿಡಿದು ಅಶುಚಿವ್ರತಾಃ =ಅಶುಚಿಯಾದ ನಿಯಮಗಳುಳ್ಳವರಾಗಿ ಪ್ರವರ್ತಂತೇ= ಪ್ರವರ್ತಿಸುತ್ತಾರೆ. (ಅಸದ್ಗ್ರಾಹ =ಅಸತ್ಯ ಹಾಗು ಅಸಾಧುವಾದ ವಿಚಾರಸರಣಿ ಅಥವಾ ಹೇಯ ಸಾಂಸಾರಿಕ ವಿಷಯ).

**ವಿವರಣೆ:**- ಭಗವಂತ:- "ಪಾರ್ಥ, ಕಾಮವು ಸದಾ ಅತೃಪ್ತ; ಮಾನವಾರೆ ವಿಷಯಗಳನ್ನು ಪಡೆದು ಉಪಭೋಗಿಸಿ ಅದನ್ನು ಸಂತುಷ್ಟಗೊಳಿಸುವದು ಬರಿ ಮಾನವನಿಗಷ್ಟೇ ಅಲ್ಲ ದೇವ ದೇವತೆಗಳಿಗೂ ಅಸಾಧ್ಯ. ಇಂಥ ಅಶಾಮ್ಯ ಕಾಮವನ್ನು ಆಶ್ರಯಿಸಿದವರು ಅಸುರರು. ದಂಭ, ಮಾನ, ಮದಗಳಿಂದ ಉನ್ಮತ್ತರಾದ ಇವರು ಪರಮ ವ್ಯಾಮೋಹಿಗಳು. ಅಸತ್ಯವಾದ ಧನ ಕನಕ ಕಾಮಿನಿ ಕೀರ್ತಿಗಳಿಗಾಗಿ ಹಪಾಹಪಿಸುತ್ತಾರೆ. ಕೊನೆಯ ಉಸಿರಿನವರೆಗೂ ಈ ಲಾಲಸೆ ಆಸಕ್ತಿ ಎಂಬ ಭೂತ ಇವರ ಬೆನ್ನ ಬಿಡದು. ಇವರ ವಿಚಾರ ಅಸಾಧು, ಇವರ ಭಾವ ಅಶುದ್ಧ. ವೇದನಿಷಿದ್ಧವಾದ ವ್ರತ ನಿಯಮಗಳನ್ನು ಆಚರಿಸುತ್ತಾರೆ; ಮಾರಿ ಮಸಣಿ ಇತ್ಯಾದಿ ಕ್ಷುದ್ರ ಹಾಗು ರೌದ್ರ ದೇವತೆಗಳಿಗೆ ನರಬಲಿ, ಪಶುಬಲಿ. ಮಲ ಭಕ್ಷಣ, ವಿಕಟನಗ್ನನಾಟ್ಯ ಮುಂತಾದ ವಿಚಿತ್ರ ವಿಪರೀತ ಚಟುವಟಿಕೆಗಳಲ್ಲಿ ಮುಳುಗುತ್ತಾರೆ."

ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।
ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥೧೧॥
ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।
ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥೧೨॥

**ಅರ್ಥ:**- ಅಪರಿಮೇಯಾಂ=ಅಪರಿಮಿತವಾದ ಹಾಗು ಪ್ರಲಯಾಂತಾಂ= ಪ್ರಲಯಾಂತವಾದ ಚಿಂತಾಂ= ಚಿಂತೆಯನ್ನು ಉಪಾಶ್ರಿತಾಃ= ಆಶ್ರಯಿಸಿದವರಾಗಿ ಕಾಮೋಪಭೋಗಪರಮಾಃ= ಕಾಮೋಪಭೋಗ ಪರಾಯಣರಾಗಿ, ಏತಾವದಿತಿ= ಇಷ್ಟೇ ಪರಮ ಪುರುಷಾರ್ಥವೆಂದು ನಿಶ್ಚಿತಾಃ =ನಿಶ್ಚಯಿಸಿದವರಾಗಿ ಆಶಾಪಾಶ ಶತೈಃ=ನೂರಾರು ಆಶಾಪಾಶಗಳಿಂದ ಬದ್ಧಾಃ = ಬದ್ಧರಾದವರಾಗಿ, ಕಾಮಕ್ರೋಧ ಪರಾಯಣಾಃ= ಕಾಮಕ್ರೋಧ ಪರಾಯಣರಾಗಿ ಕಾಮಭೋಗಾರ್ಥಂ= ಕಾಮಭೋಗಾರ್ಥಕ್ಕಾಗಿಯೇ ಅನ್ಯಾಯೇನ= ಅನ್ಯಾಯದಿಂದ ಅರ್ಥಸಂಚಯಾನ್ ಈಹಂತೇ= ಧನಸಂಚಯ ಮಾಡಲು ಬಯಸುತ್ತಾರೆ. ಯತ್ನಿಸುತ್ತಾರೆ.

**ವಿವರಣೆ:**- ಭಗವಂತ:- "ಧನಂಜಯ, ಕಾಮೋಪಭೋಗವೇ ಅಸುರರಿಗೆ ಪುರುಷಾರ್ಥ. ತಮ್ಮ ಸಂಪೂರ್ಣ ಜೀವನವನ್ನು ಅದಕ್ಕಾಗಿ ಬಲಿಕೊಡುತ್ತಾರೆ. ಅನ್ಯಾಯ ಅತ್ಯಾಚಾರಗಳಿಂದ ಹೇರಳ ಧನ ಸಂಪಾದಿಸಲು ತುಂಬ ಹೆಣಗುತ್ತಾರೆ. ನೂರಾರು ಆಶಾ ಪಾಶಗಳಿಂದ ಬಿಗಿಯಲ್ಪಟ್ಟು ಈ ದುರ್ಜನರು ಅಪರಿಮಿತವೂ ಪ್ರಲಯಾಂತಕವೂ ಆದ ಚಿಂತೆಯನ್ನು ಆಶ್ರಯಿಸಿ ಕ್ಷಯ ಹೊಂದುವರು."

ಇದಮದ್ಯ ಮಯಾ ಲಬ್ಧಮಿದಂ ಪ್ರಾಪ್ಸ್ಯೇ ಮನೋರಥಮ್ ।

ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥೧೩॥

ಅರ್ಥ:- ಅದ್ಯ= ಇಂದು ಮಯಾ= ನನ್ನಿಂದ ಇದಂ= ಇದು ಲಬ್ಧಂ= ಹೊಂದ ಲ್ಪಟ್ಟಿತು; ಇದಂ= ಈ ಮನೋರಥಂ= ಮನೋರಥವನ್ನು ಪ್ರಾಪ್ಸ್ಯೇ= ಪಡೆಯುವೆನು (ಪೂರೈಸುವೆನು); ಇದಂ= ಈ ಧನವು ಅಸ್ತಿ= ಇದೆ. ಪುನಃ=ಪುನಃ ಮೇ ಇದಂ ಧನಮಪಿ= ನನಗೆ ಈ ಧನವು ಕೂಡ ಭವಿಷ್ಯತಿ= ಪ್ರಾಪ್ತವಾಗುವದು, (ಹೀಗೆ ಅಸುರರು ಭಾವಿಸುತ್ತಾರೆ ).

ವಿವರಣೆ:- ಭಗವಂತ:- "ಅರ್ಜುನ, ಆಸುರೀ ಮನುಷ್ಯನ ಆಶೆ ಅಪರಿ ಮಿತ. 'ಇಂದು ನಾನು ಇದನ್ನು ಗಳಿಸಿದ್ದೇನೆ; ನಾಳೆ ಇದಕ್ಕಿಂತಲೂ ಹೆಚ್ಚು ಗಳಿ ಸುವೆ. ಈಗ ನನ್ನ ಹತ್ತಿರ ಇರುವ ಸಂಪದವು ಇಷ್ಟು; ಮುಂದೆ ಇದು ಹತ್ತು, ನೂರು, ಸಾವಿರ ಪಾಲು ಬೆಳೆಯಲಿದೆ' ಹೀಗೆ ಆ ಲೋಭಿಯು ಸದಾ ಗೇಣಿಕೆ ಹಾಕುತ್ತಾನೆ. ಸಂಪಾದನೆಯು ಬರಿ ಸಂಪಾದನೆಗಾಗಿ ಅಲ್ಲ, ಉಪಭೋಗಕ್ಕಾಗಿ- ಎಂಬ ಸತ್ಯವೇ ಅವನಿಗೆ ತಿಳಿದಿಲ್ಲ. ಹೊಟ್ಟೆ ಕಟ್ಟಿ, ಹರಿದರಿವೆಯ ಉಟ್ಟು, ಮಾನ ಬಿಟ್ಟು ಧನದ ಹಿಂದೆ ಧಾವಿಸುತ್ತಾನೆ. ಆ ಧನವಾದರೋ ಮಾಯೆ-ಮಾಟ. ಲೋಭಿಯ ಜೀವ ತೇಯ್ದು ಮರೆಯಾಗಿ ಬಿಡುವದು."

ಒಂದು ದೃಷ್ಟಾಂತ- ಒಬ್ಬ ಬಡ ಕ್ಷೌರಿಕ. ದೈವವಶಾತ್ ಅವನ ಮನೆ ಯಲ್ಲಿ ಏಳು ಕೊಡಗಳು ಕಾಣಬಂದವು. ಆರು ಕೊಡಗಳು ಸ್ವರ್ಣ ನಾಣ್ಯಗಳಿಂದ ಪೂರ್ತಿ ತುಂಬಿದ್ದವು; ಏಳನೆಯದು ಮಾತ್ರ ಅಪೂರ್ಣವಾಗಿತ್ತು. ಅದನ್ನು ನೋಡಿದ ತಕ್ಷಣವೇ ಕ್ಷೌರಿಕ ದುಃಖಿಯಾದ. ಹೇಗಾದರೂ ಏಳನೆಯ ಕೊಡ ವನ್ನು ಪೂರ್ತಿ ಮಾಡಬೇಕೆಂಬ ಆಶೆ ಅವನಲ್ಲಿ ಮೂಡಿತು, ಹಗಲು ರಾತ್ರಿ ದುಡಿದೇ ದುಡಿದ. ಹನ್ನೆರಡು ವರುಷಗಳ ದೀರ್ಘ ಶ್ರಮದಿಂದ ದೇಹ ಬಳಲಿತು. ಒಂದು ದಿನ ಇನ್ನೂ ತುಂಬದಿದ್ದ ಏಳನೆಯ ಕೊಡ ನೋಡುತ್ತ ಪ್ರಾಣಬಿಟ್ಟ! ಆ ಅಪಾರ ಸಂಪತ್ತಿನ ಒಂದು ದುಡ್ಡನ್ನೂ ಆತ ತಿನ್ನಲಿಲ್ಲ. ಇದು ಜಿಪುಣರ ಬದುಕು.

ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ ॥೧೪॥

ಅರ್ಥ:- ಅಸೌ ಶತ್ರುಃ =ಈ ಶತ್ರುವು, ಮಯಾ= ನನ್ನಿಂದ ಹತಃ= ಕೊಲ್ಲಲ್ಪ ಟ್ಟನು, ಅಪರಾನ್ ಅಪಿ ಚ= ಇತರ ಶತ್ರುಗಳನ್ನೂ, ಹನಿಷ್ಯೇ =ಕೊಲ್ಲುವೆನು, ಅಹಂ=ನಾನು ಈಶ್ವರಃ =ಈಶ್ವರನು, ಭೋಗೀ= ಭೋಗಿಯು, ಸಿದ್ಧಃ= ಸಿದ್ಧನು, ಬಲವಾನ್= ಬಲ ವಂತನು, ಹಾಗು ಸುಖೀ =ಸುಖಿ.

ವಿವರಣ:- ಭಗವಂತ- "ಪಾರ್ಥ, ಅಸುರನ ಮನಸ್ಸು ಯಾವಾಗಲು ಅಶಾಂತ, ಪ್ರಕ್ಷುಬ್ಧ. ಅವನ ರಕ್ತದಲ್ಲೆಲ್ಲ ದ್ವೇಷ ವೈರ ವಿಷಮತೆಗಳು ತುಂಬಿವೆ. 'ನಾನು ಬಲಾಢ್ಯ! ನನಗೆ ಎದುರಾಗಿ ನಿಲ್ಲುವ ಎದೆಗಾರಿಕೆ ಯಾರಿಗಿದೆ? ನನ್ನ

ಶತ್ರುಗಳನ್ನು ಕ್ಷಣಾರ್ಧದಲ್ಲಿ ಯಮಪುರಕ್ಕಟ್ಟಬಲ್ಲೆ! ಈಗಾಗಲೆ ಅದೆಷ್ಟೋ ಜನರ ರಕ್ತ ಹೀರಿದ್ದೇನೆ. ಇತರ ಶತ್ರುಗಳನ್ನು ಬಹು ಬೇಗನೆ ಮಣ್ಣುಗೂಡಿಸುವೆ! ಜನ ಸ್ಪಷ್ಟವಾಗಿ ತಿಳಿದು ಕೊಳ್ಳಲಿ–'ನಾನೇ ಈಶ್ವರ ಜನಾಧಿಪ; ನಾನೇ ಸಕಲ ವಿಷಯ ಗಳನ್ನು ಭೋಗಿಸುವ ಭೋಗಿ; ನನ್ನದು ಸಿದ್ಧಹಸ್ತ; ಸೋಲು ಎನ್ನುವದೇ ನನ ಗಿಲ್ಲ. ನಾನು ಪರಮ ಸುಖಿ' – ಹೀಗೆ ಆತ ಅಧ್ಯತೆಯ ಮಾತನಾಡುತ್ತಾನೆ, ಬುದ್ಧಿಹೀನನಾದ ಅವನಿಗೆ ಎಲ್ಲಿ ಪ್ರಶಾಂತಿ?"

ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯೇ ಇತ್ಯಜ್ಞಾನವಿಮೋಹಿತಾಃ ॥೧೫॥

ಅರ್ಥ:-(ನಾನು)ಆಢ್ಯಃ= ಪ್ರತಿಷ್ಠಿತನು ಹಾಗು ಅಭಿಜನವಾನ್ ಅಸ್ಮಿ= ಕುಲೀನನಾಗಿ ದ್ದೇನೆ. ಮಯಾ ಸದೃಶಃ = ನನಗೆ ಸಮನಾದವನು ಅನ್ಯಃ ಕಃ ಅಸ್ತಿ ಬೇರೆ ಯಾವನಿದ್ದಾನೆ? ಯಕ್ಷ್ಯೇ= ಯಾಗ ಮಾಡುವೆ, ದಾಸ್ಯಾಮಿ =ದಾನ ಮಾಡುವೆ, ಮೋದಿಷ್ಯೇ= ಆಮೋದಿಸುವೆ ಇತಿ =ಹೀಗೆ, ಅಜ್ಞಾನ ವಿಮೋಹಿತಾಃ= ಅಜ್ಞಾನ ಮೋಹಿತರು(ನುಡಿಯುತ್ತಾರೆ).

ವಿವರಣ:– ಭಗವಂತ– "ಅರ್ಜುನ, ಅಸುರನು ಅಜ್ಞಾನಿ, ತನ್ನ ತಾನರಿ ಯದ ಮರುಳ. ಐಂದ್ರಿಕ ವಿಷಯಗಳಿಂದ ಮೋಹಿತ. 'ನಾನು ಅಪಾರ ಧನ ಸಂಗ್ರಹಿಸಿದ ಧನಿಕ, ಅತ್ಯಂತ ಶ್ರೇಷ್ಠ ವಂಶದಲ್ಲಿ ಹುಟ್ಟಿದ ಕುಲೀನ! ನನಗೆ ಸರಿ ಸಮನಾಗಿ ನಿಲ್ಲಬಲ್ಲ ಇನ್ನೊಬ್ಬ ವ್ಯಕ್ತಿ ಈ ಜಗತ್ತಿನಲ್ಲಿಯೇ 'ಇಲ್ಲ. ನಾನು ಅಭೂತ ಪೂರ್ವ ವೈಭವದಿಂದ ಯಜ್ಞ– ಯಾಗಮಾಡುವೆ; ಯಥೇಚ್ಛವಾಗಿ ಋತ್ವಿಕ ಬ್ರಾಹ್ಮಣರಿಗೆ ದಾನ ನೀಡುವೆ. ದೇವ - ಪೂಜೆಗಳನ್ನೇರ್ಪಡಿಸಿ ನೃತ್ಯಗೀತಗಳ ಜರುಗಿಸಿ ಆನಂದಿಸುವೆ' – ಹೀಗೆಲ್ಲ ಆತ ಮಾತನಾಡಿಕೊಳ್ಳುತ್ತಾನೆ. ಜಗತ್ತಿನ ಅನಂತ ವಿಸ್ತಾರ, ಪರಮಾತ್ಮನ ಪ್ರಚಂಡ ಜ್ಞಾನಪ್ರಕಾಶ ಹಾಗು ತನ್ನ ಅವಿರ ಳಾಸ್ತಿತ್ವಗಳ ಪರಿವೆಯೇ ಅವನಿಗಿಲ್ಲ."

ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ।
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥೧೬॥

ಅರ್ಥ– ಅನೇಕ ಚಿತ್ತವಿಭ್ರಾಂತಾಃ =ಅನೇಕ ಚಿಂತೆಗಳಿಂದ ಭ್ರಾಂತರಾದ, ಮೋಹ ಜಾಲ ಸಮಾವೃತಾಃ= ಮೋಹಜಾಲದಿಂದ ಆವೃತರಾದ, ಕಾಮಭೋಗೇಷು ಪ್ರಸಕ್ತಾಃ= ಕಾಮ ಭೋಗಗಳಲ್ಲಿ ಆಸಕ್ತರಾದ(ಅಸುರರು), ಅಶುಚೌ ನರಕೇ– ಅಶುಚಿಯಾದ ನರಕದಲ್ಲಿ ಪತಂತಿ= ಬೀಳುತ್ತಾರೆ.

ವಿವರಣ:– ಭಗವಂತ:– "ಕುರುನಂದನ, ಅಸುರರು ಮಂದಮತಿಗಳು; ಭ್ರಮಿತರು, ಚಿಂತಾರತರು. ಪ್ರಾಪಂಚಿಕ ಮೋಹಜಾಲದಲ್ಲಿ ಬದ್ಧರಾದ ಅವರು ಕಾಮಭೋಗಗಳಲ್ಲಿ ತಲ್ಲೀನರು. ದೇಹ ಬಿಟ್ಟನಂತರ ನರಕದಲ್ಲಿ ಬಿದ್ದು ಅಸಂಖ್ಯ ವರುಷಗಳವರೆಗೆ ಯಾತನೆ ಅನುಭವಿಸುವರು".

**ಸಂಬಂಧ:–** ಅಸುರರು ಮಾಡುವ ಯಜ್ಞ ಅರ್ಚನಾದಿಗಳಲ್ಲಿ ಕೇವಲ ದಂಭ ಅಹಂಕಾರ ಮುಂತಾದವುಗಳೇ ಪ್ರಧಾನವಾಗಿವೆ; ಸಾತ್ವಿಕ ಭಾವಕ್ಕೆ ಆಸ್ಪದವಿಲ್ಲ. ಎಂಬ ಮಾತನ್ನು ಮುಂದಿನ ಎರಡು ಮಂತ್ರಗಳಲ್ಲಿ ಭಗವಂತನು ಹೇಳಿದ್ದಾನೆ.

ಆತ್ಮಸಂಭಾವಿತಾಃ ಸ್ತಬ್ಧಾಃ ಧನಮಾನಮದಾನ್ವಿತಾಃ ।
ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ॥೧೭॥

**ಅರ್ಥ:–** ಆತ್ಮಸಂಭಾವಿತಾಃ= ಆತ್ಮಪ್ರಶಂಸಕರಾದ ಸ್ತಬ್ಧಾಃ=ಅವಿನೀತರಾದ ಧನಮಾನಮದಾನ್ವಿತಾಃ= ಧನ ಮಾನ ಮದಗಳಿಂದ ಕೂಡಿದವರಾದ ತೇ= ಆ ಅಸುರರು ದಂಭೇನ =ದಂಭದಿಂದಲೂ ಅವಿಧಿಪೂರ್ವಕಂ= ವಿಧಿಯನನುಸರಿಸದೆಯೂ ನಾಮಯಜ್ಞೈಃ= ಕೇವಲ ತೋರಿಕೆಗಾಗಿಯೂ ಯಜಂತೇ=ಯಜ್ಞ ಮಾಡುತ್ತಾರೆ. (ನಾಮಯಜ್ಞ= ನಾಮಮಾತ್ರ ಯಜ್ಞ).

**ವಿವರಣೆ:–** ಅಸುರರು ಆತ್ಮಪ್ರಶಂಸಕರು. ತಮ್ಮ ಜಾಣ್ಮೆ ಶಕ್ತಿ ಸಂಪದ ಅಧಿಕಾರ ಗೌರವಗಳನ್ನು ತಾವೇ ಹೊಗಳಿಕೊಳ್ಳುತ್ತಾರೆ. ಅವರು ಅವಿನೀತರು, ಅವಿಧೇಯರು, ಧನ-ಮಾನ-ಮದೋನ್ಮತ್ತರು. ಇತರರೊಂದಿಗೆ ಬಹು ಅಧ್ಯತೆಯಿಂದ ವರ್ತಿಸುತ್ತಾರೆ. ಗುರು-ಹಿರಿಯರು, ಸಂತ-ಮಹಾತ್ಮರು, ದೀನ ದಲಿತರು ಅವರ ಕಣ್ಣಿಗೆ ಕಾಣುವದೇ ಇಲ್ಲ! ಅಷ್ಟು ಜಂಭ! ಅಷ್ಟು ದರ್ಪ!

ಅಸುರರು ಬಹು ವೈಭವದಿಂದ ಯಾಗ ಯಜ್ಞಗಳನ್ನು ಆಚರಿಸುತ್ತಾರೇನೋ ನಿಜ, ಆದರೆ ಮುಕ್ತಿದಾಯಕ ನಿಷ್ಕಾಮಭಾವದಿಂದಲ್ಲ, ಭವಕಾರಕ ಸಕಾಮಭಾವನೆಯಿಂದ. 'ತಾವು ದೀಕ್ಷಿತರು, ಸೋಮಯಾಜಿಗಳು' ಎಂದು ಜನ ಹೊಗಳಿದರೆ ಸಾಕು ಅವರು ಉಬ್ಬಿಹೋಗುತ್ತಾರೆ. ಅವರಿಗೆ ಮಾಡಿದ ಕ್ರಿಯೆ ಮುಖ್ಯವಲ್ಲ ಪ್ರಚಾರ ಮುಖ್ಯ. ಪೇಪರ, ರೆಡಿಯೋ, ಟೆಲಿವ್ಹಿಜನ್‌ಗಳಲ್ಲಿ ತಮ್ಮ ಹೆಸರು ಹಾಗು ಚಿತ್ರ ಕಾಣಿಸಿಕೊಂಡರೆ ಸಾಕು. ಕಾರ್ಯ ಸಾರ್ಥಕವೆಂದು ಭಾವಿಸುತ್ತಾರೆ.

ಅಹಂಭಾವದಿಂದ ಆಚರಿಸಲ್ಪಡುವ ಅವರ ಯಜ್ಞಾದಿ ಕ್ರಿಯೆಗಳು ವೇದ ವಿಧಿವಿಹೀನ, ಬರೀ ಆಡಂಬರದ ಪ್ರದರ್ಶನ. ಹೀಗಾಗಿ ನೂರಾರು ಧಾರ್ಮಿಕ ಕೃತ್ಯಗಳನಾಚರಿಸಿಯೂ ಅವರ ಮನಸ್ಸು ನಿರ್ಮಲವಾಗದು; ವಿವೇಕ ಉದಿಸದು; ಆತ್ಮಸಾಕ್ಷಾತ್ಕಾರ ಸಮನಿಸದು!

ಅಹಂಕಾರಂ ಬಲಂ ದರ್ಪಂ,ಕಾಮಂ ಕ್ರೋಧಂ ಚ ಸಂಶ್ರಿತಾಃ ।
ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥೧೮॥

**ಅರ್ಥ:–** ಅಹಂಕಾರಂ= ಅಹಂಕಾರ ಬಲಂ= ಬಲ ದರ್ಪಂ= ದರ್ಪ ಕಾಮಂ= ಕಾಮ ಕ್ರೋಧಂ ಚ= ಕ್ರೋಧಗಳನ್ನು ಸಂಶ್ರಿತಾಃ= ಆಶ್ರಯಿಸಿ ಆತ್ಮಪರದೇಹೇಷು= ತಮ್ಮ

ಮತ್ತು ಇತರ ದೇಹಗಳಲ್ಲಿರುವ ಮಾಂ = ನನ್ನನ್ನು ಪ್ರದ್ವಿಷಂತಃ= ದ್ವೇಷಿಸುವ ಅಸುರರು ಅಭ್ಯಸೂಯಕಾಃ= ಅಸೂಯಾಪರರಾಗಿದ್ದಾರೆ.

ವಿವರಣೆ:–ನಾನೇ ಸರ್ವಮಾನ್ಯನೆಂಬ ಭಾವವು ಅಹಂಕಾರ. ಪರಪೀಡನೆಗೆ ಸಾಧನವಾದ ದೈಹಿಕ ಸಾಮರ್ಥ್ಯವು ಬಲ. ಇನ್ನೊಬ್ಬರನ್ನು ತಿರಸ್ಕಾರದೃಷ್ಟಿಯಿಂದ ನೋಡಲು ಪ್ರೇರಿಸುವ ಚಿತ್ತದೋಷವಿಶೇಷವು ದರ್ಪ. ಇಷ್ಟ ವಿಷಯಾಭಿಲಾಷೆಯು ಕಾಮ. ಅನಿಷ್ಟವಿಷಯದ ದ್ವೇಷವು ಕ್ರೋಧ. ಅಸುರರು ಈ ಐದೂ ದುರ್ಗುಣಗಳನ್ನು ಆಶ್ರಯಿಸುತ್ತಾರೆ. ಆದ್ದರಿಂದ ತಮ್ಮ ಅಂತರಂಗದಲ್ಲಿಯೂ ಸಕಲ ಶರೀರಗಳ ಹೃದ್ಗುಹೆಗಳಲ್ಲಿಯೂ ವ್ಯಾಪಿಸಿರುವ ಪರಮಾತ್ಮನ ಅಮರ ಜ್ಞಾನಪ್ರಕಾಶವು ಅವರಿಗೆ ಕಾಣದು. ಎಂತಲೇ ಅವರ ಮನಸ್ಸಿನಲ್ಲಿ ಭೇದ ಕಲ್ಪನೆ ಸ್ಥಿರಗೊಂಡಿದೆ; ತಾವು ಬೇರೆ, ಉಳಿದ ಜೀವರು ಬೇರೆ ಎಂಬ ದ್ವಂದ್ವಭ್ರಮೆ ನೆಲೆಸಿದೆ. ಹೀಗಾಗಿ, ಅವರು ಸರ್ವರನ್ನು ದ್ವೇಷಿಸುತ್ತಾರೆ. ಹಾಗೆ ದ್ವೇಷ ಮಾಡುವದೆಂದರೆ ತಮ್ಮನ್ನು ತಾವೇ ದ್ವೇಷಿಸಿದಂತೆ ಎಂಬ ತಾತ್ವಿಕ ತಿಳಿವು ಅವರಿಗಿಲ್ಲ!

ಭಗವಂತ:– "ಧರ್ಮಾನುಗ, ನಾನು ವಿಶ್ವವ್ಯಾಪಿ; ಅಣುರೇಣು ತೃಣ ಕಾಷ್ಟಗಳಲ್ಲೆಲ್ಲಾ ನಿತ್ಯ ವಾಸಿಸಿದ್ದೇನೆ. ಬಡಗುಡಿಸಲು ಮೊದಲು ಮಾಡಿ ರಾಜ ಸೌಧ ಕಡೆಯಾಗಿ ಇರುವ ಸರ್ವನಿವಾಸಗಳಲ್ಲಿ ಹರವಿದ ಪ್ರಕಾಶವೆಲ್ಲ ಸೂರ್ಯನದಾದಂತೆ ಸಜ್ಜನ ದುರ್ಜನ, ಸುಜ್ಞ ಅಜ್ಞ, ಧನಿಕ ದರಿದ್ರ ಎಲ್ಲರಲ್ಲಿಯೂ ಹರವಿದ ಚೈತನ್ಯ ಪ್ರಭೆಯು ನನ್ನದೇ. ಅಸುರರಿಗೆ ಅದರ ಪ್ರಜ್ಞೆಯಿಲ್ಲವಾಗಿ ನನ್ನನ್ನು ಜರೆಯುತ್ತಾರೆ; ಇತರ ಜೀವಿಗಳನ್ನು ಪೀಡಿಸುತ್ತಾರೆ. ಅಭಿನ್ನತೆಯ ಬೋಧ ಅವರಿಗೆ ಅಪಥ್ಯ. ವಿಶ್ವಬಾಂಧವ್ಯ ವಿಶ್ವಾತ್ಮಭಾವಗಳು ಅವರಿಗೆ ಒಗ್ಗವು. ಅವರ ಜೀವನದ ತುಂಬ ಕರಾಳ ಕತ್ತಲೆ ಆವರಿಸಿದೆ. ಅವರಿಗೆಲ್ಲಿ ಶಾಂತಿ? ಅಸುಯಾಪರರಾದ ಅವರಿಗೆಲ್ಲಿ ಸಮಾಧಾನ? ಇನ್ನೊಂದು ಜೀವಿಯ ಉತ್ಕರ್ಷ ಕಂಡು ಕುದಿಯುವ ಅವರಿಗೆಂತು ಮುಕ್ತಿಸೌಖ್ಯ ಸಮನಿಸೀತು?"

ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥೧೯॥

ಅರ್ಥ:– ದ್ವಿಷತಃ= ದ್ವೇಷಿಸುತ್ತಿರುವ ತಾನ್ ಕ್ರೂರಾನ್ ಅಶುಭಾನ್ ನರಾಧಮಾನ್ = ಆ ಕ್ರೂರ ಪಾಪಿ ನರಾಧಮರನ್ನು ಅಹಂ= ನಾನು ಸಂಸಾರೇಷು= ಸಂಸಾರಗಳಲ್ಲಿ ಆಸುರೀಷು ಯೋನಿಷು ಏವ= ಆಸುರೀ ಯೋನಿಗಳಲ್ಲಿಯೇ ಅಜಸ್ರಂ= ಸದಾ ಕ್ಷಿಪಾಮಿ= ಒಗೆಯುತ್ತೇನೆ.

ವಿವರಣ:– ಭಗವಂತ:– "ಅಸುರರು ನನ್ನನ್ನು, ನನಗೆ ಪ್ರೀತಿಯವರಾದ ಸಂತರನ್ನು ಮನಸೋಕ್ತ ದ್ವೇಷಿಸುತ್ತಾರೆ. ಅವರು ಕ್ರೂರರು, ಹಿಂಸಕರು, ಪಾಪಿಗಳು ಅಷ್ಟೇ ಅಲ್ಲ ನರಾಧಮರು! ಸರ್ವಕರ್ಮಫಲದಾತೃವಾದ ನಾನು ಅವರನ್ನು ಆಸುರೀ ಯೋನಿಗಳಲ್ಲಿ ದೂಡುತ್ತೇನೆ, ಸಂಸಾರ ಚಕ್ರದಲ್ಲಿ ನೂಕುತ್ತೇನೆ.

ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥೨೦॥

**ಅರ್ಥ:**— ಜನ್ಮನಿ ಜನ್ಮನಿ= ಪ್ರತಿ ಜನ್ಮದಲ್ಲಿ ಆಸುರೀಂ ಯೋನಿಂ ಆಪನ್ನಾಃ= ಆಸುರೀ ಯೋನಿಯನ್ನು ಹೊಂದಿದ ಮೂಢಾಃ= ಮೂಢರು ಮಾಂ= ನನ್ನನ್ನು ಅಪ್ರಾಪ್ಯ ಏವ= ಹೊಂದದೆ ತತಃ= ಅದಕ್ಕಿಂತಲೂ ಅಧಮಾಂ= ಅಧಮವಾದ ಗತಿಂ= ಗತಿಯನ್ನು ಯಾಂತಿ = ಹೊಂದುತ್ತಾರೆ.

**ವಿವರಣೆ:-** ಭಗವಂತ:- "ಕೌಂತೇಯ, ಅಸುರರು ಪ್ರತಿಸಲವೂ ಆಸುರೀ ಯೋನಿಯಲ್ಲಿ ಹುಟ್ಟುತ್ತಾರೆ. ಅಪ್ಪಿತಪ್ಪಿ ಕೂಡ ನನ್ನತ್ತ ಮುಖ ಮಾಡದ ಅವರು ಮುಕ್ತಿರೂಪವಾದ ನನ್ನ ಪರಂಧಾಮವನ್ನು ಹೊಂದದೆ ನಾರಕೀಯ ಜೀವನ ಸಾಗಿಸಿ ಅಧಮ ಗತಿಗಳನ್ನೇ ಪಡೆಯುತ್ತಾರೆ. ಮಾನವಜನ್ಮ ಪ್ರಾಪ್ತ ವಾದಾಗಲೇ ಧರ್ಮ ಆಚರಿಸಿ ಭವರೋಗ ಮುಕ್ತನಾಗಬೇಕು; ಇಲ್ಲವಾದರೆ ವಿನಾಶ ಕಟ್ಟಿಟ್ಟದ್ದು."

ಭಗವಂತನ ನುಡಿಗಳನ್ನು ಬೆಂಬಲಿಸುವ ಶ್ರುತಿ ಪ್ರಮಾಣ:

"ಇಹೈವ ನರಕವ್ಯಾಧೇಃ ಚಿಕಿತ್ಸಾಂ ನ ಕರೋತಿ ಯಃ ।
ಗತ್ವಾ ನಿರೌಷಧಂ ಸ್ಥಾನಂ ಸರುಜಃ ಕಿಂ ಕರಿಷ್ಯತಿ?"

ಯಾವನು ತನ್ನ ನರಕದಾಯಕವ್ಯಾಧಿಗೆ (ಭವರೋಗಕ್ಕೆ) ಈ ಮಾನವಜನ್ಮದಲ್ಲಿ ಚಿಕಿತ್ಸೆ ಮಾಡಲು ಯತ್ನಿಸುವದಿಲ್ಲವೋ ಆ ರೋಗಿಯು ನಿರೌಷಧ ಸ್ಥಾನವಾದ ಅಧಮ ಯೋನಿಗಳಿಗೆ ಹೋಗಿ ಏನು ಮಾಡಿಯಾನು?

"ಯ ಇಹ ಕಪೂಯ ಚರಣಾ ಅಭ್ಯಾಸೋ ಹಿ ಯತ್ತೇ ಕಪೂಯಾಂ ಯೋನಿಮಾಪದ್ಯೇ ರನ್, ಶ್ವಯೋನಿಂ ವಾ ಸೂಕರ ಯೋನಿಂ ವಾ ಚಾಂಡಾಲ ಯೋನಿಂ ವಾ"

ಯಾರು ಇಹದಲ್ಲಿ ದುರಾಚರಣದ ಅಭ್ಯಾಸ ಮಾಡುತ್ತಾರೆಯೋ ಅವರು ಶ್ವಾನ ಸೂಕರ ಅಥವಾ ಚಾಂಡಾಲ ಜನ್ಮವನ್ನು ಪಡೆಯುತ್ತಾರೆ.

**ಸಂಬಂಧ:**— ಕಾಮಾದಿ ದುರ್ಗುಣಗಳನ್ನು ತ್ಯಜಿಸಿದಲ್ಲದೆ ಆತ್ಮೋದ್ಧಾರ ಅಸಾಧ್ಯ ಎಂಬ ಮಾತು ಮುಂದಿನ ಮಂತ್ರದಲ್ಲಿ ಉಕ್ತವಾಗಿದೆ.

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥೨೧॥

**ಅರ್ಥ:**— ಕಾಮಃ ಕ್ರೋಧಃತಥಾ ಲೋಭಃ= ಕಾಮ ಕ್ರೋಧ ಲೋಭ ಇದಂ ತ್ರಿವಿಧಂ= ಈ ಮೂರರ ಗುಂಪು ನರಕಸ್ಯ= ನರಕದ ದ್ವಾರಂ= ದ್ವಾರವು. ಇದಂ, = ಇದು ಆತ್ಮನಃ ನಾಶನಂ= ಆತ್ಮನಾಶಕ. ತಸ್ಮಾತ್= ಆದ್ದರಿಂದ ಏತತ್ ತ್ರಯಂ= ಈ ಮೂರನ್ನು ತ್ಯಜೇತ್= ಬಿಡಬೇಕು.

**ವಿವರಣೆ:**— ಭಗವಂತ:— "ಭಾರತ, ಅಸುರರಲ್ಲಿರುವ ದುರ್ಗುಣಗಳಂ ಅಸಂಖ್ಯ. ಅವುಗಳಲ್ಲಿ ಅತ್ಯಂತ ಪ್ರಧಾನವೆಂದರೆ ಕಾಮ,ಕ್ರೋಧ ಹಾಗು ಲೋಭ. ಸಮಗ್ರ ಮನಕುಲವನ್ನೇ ಕಂಗೆಡಿಸಿದ್ದ ಈ ದುರ್ಗುಣಗಳು ನರಕದ ಭವ್ಯ ದ್ವಾರ ಗಳಾಗಿವೆ! ಈ ದ್ವಾರಗಳಲ್ಲಿ ಪ್ರವೇಶಿಸಿದ ಮನುಷ್ಯ ಧರ್ಮ ಅರ್ಥ ಕಾಮ ಮೋಕ್ಷ

ಎಂಬ ನಾಲ್ಕೂ ಪುರುಷಾರ್ಥಗಳನ್ನು ಕಳೆದುಕೊಳ್ಳುತ್ತಾನೆ. ಎಂದೆಂದಿಗೂ ಮುಗಿಯದ ದುಃಖ ಕೂಪದಲ್ಲಿ ಹೊರಳುತ್ತಾನೆ, ನರಳುತ್ತಾನೆ. ಹೀಗೆ ಜೀವನ ಸಕಲ ಬಹಿರಂತಶ್ಶಕ್ತಿಗಳನ್ನು ವಿನಷ್ಟಗೊಳಿಸುವ ಕಾಮಾದಿಗಳು ಆತ್ಮನಾಶಕವಾಗಿವೆ ಎಂದು ಭಾವಿಸು. ಈ ಮೂರು ದ್ವಾರಗಳ ಸನಿಹದಲ್ಲೂ ಸುಳಿಯಬೇಡ. ರಾಜ್ಯ, ಭೋಗ ಜಯ ಯಾವುದನ್ನೂ ಕಾಮಿಸಬೇಡ; ಹೃದಯದಿಂದ ದ್ವೇಷಭಾವನೆಯನ್ನು ಹೊರದೂಡು; ಧನ, ರಾಜ್ಯ, ವೈಭವ ಮಂತಾದವುಗಳನ್ನು ಸಂಗ್ರಹಿಸಿ ಅವುಗಳಲ್ಲಿ ಅಭಿನಿವೇಶತಾಳಿಕೊಂಡಿರಬೇಡ. ಹೆಚ್ಚೇನು? ನೀನೊಬ್ಬ ಶಾಂತ-ಸಂತನಾಗಿ ಬಾಳು!"

(೧) ಕಾಮ:– ಪವಿತ್ರವಾದ ಬ್ರಹ್ಮಚರ್ಯಸ್ಥಿತಿಯನ್ನು ಕೆಡಿಸಿ, ದೈಹಿಕ ಮಾನಸಿಕ ಆರೋಗ್ಯವನ್ನು ಹಾಳುಮಾಡಿ ಒಂದು ವ್ಯಕ್ತಿಯನ್ನು ಇನ್ನೊಂದು ವ್ಯಕ್ತಿಯ ಗುಲಾಮನನ್ನಾಗಿಸುವದು ಕಾಮ. ಕಾಮಜ್ವರ ಏರಿತೆಂದರೆ ವಿವೇಕ ದೃಷ್ಟಿಯು ಮುಚ್ಚಿಕೊಳ್ಳುತ್ತದೆ; ನೀತಿ ಧರ್ಮ ನ್ಯಾಯ ಲಜ್ಜೆ ಮುಂತಾದ ಸುಗುಣಗಳು ಪಲಾಯನ ಮಾಡುತ್ತವೆ. ಆಗ ವ್ಯಕ್ತಿಯು ಎಂಥ ಹೀನ ಕೃತ್ಯಕ್ಕೂ ಕೈ ಹಾಕುತ್ತಾನೆ. ಉದಾ: ಕಾಮಾಂಧನಾದ ಇಂದ್ರ ಸ್ವರ್ಗಲೋಕ ಬಿಟ್ಟು ಮರ್ತ್ಯಕ್ಕೆ ಬಂದ. ವೇಷ ಮರೆಸಿ ಗೌತಮ ಋಷಿಯ ಸುಶೀಲ ಹೆಂಡತಿಯಾದ ಅಹಲ್ಯೆಯನ್ನು ಕೆಡಿಸಿದ. ಗೌತಮನ ಶಾಪಕ್ಕೆ ಸಿಕ್ಕು ಯೋನಿದೇಹಿಯಾದ. ದ್ರೌಪದಿಯ ಸೌಂದರ್ಯಕ್ಕೆ ಮನಸೋತ ಕೀಚಕ ಜೀವ ಕಳೆದುಕೊಂಡ. ಕಾಮಾತುರನಾದ ಇಂದ್ರ (ನಹುಷರಾಜ)ನು ಋಷಿಯ ಶಾಪದಿಂದ ಸರ್ಪವಾದ. ಚಂದ್ರನು ಗುರುಪತ್ನಿಗಮನ ಮಾಡಿ ವೃದ್ಧಿ-ಕ್ಷಯ-ಕ್ಲೇಶಹೊಂದಿದ.

(೨) ಕ್ರೋಧ:- ಅಹಿಂಸೆ ದಯೆ ಕರುಣೆ ಇಂಥ ಕುಸುಮ-ಕೋಮಲ ಗುಣಗಳಿಗೆ ತದ್ವಿರುದ್ಧವಾದ ಮನೋದ್ರೇಕವೇ ಕ್ರೋಧ. ವ್ಯಕ್ತಿಯನ್ನೂ ಸಮಾಜವನ್ನೂ ಅಸ್ತವ್ಯಸ್ತಗೊಳಿಸುವ ಈ ಕ್ರೋಧಕ್ಕೆ ತಮ್ಮ ಹೃದಯದಲ್ಲಿ ಅವಕಾಶ ವೀಯದವರೇ ಕಡಿಮೆ. ಸಾಮಾನ್ಯ ಕೂಲಿಕಾರನಿಂದ ಘೋರತಪಸ್ವಿಯವರೆಗೆ ಇದರ ಕ್ರೀಡಾರಂಗ ವ್ಯಾಪಿಸಿದೆ. ಸ್ವರ್ಗ ಮರ್ತ್ಯ ಪಾತಾಳ ಲೋಕಗಳಲ್ಲಿ ಕ್ರೋಧಜ್ವಾಲೆ ಹರವಿಕೊಂಡಿದೆ. ವ್ಯಕ್ತಿ ದೊಡ್ಡವನಾದಷ್ಟು ಅವನಲ್ಲಿ ಸಿಟ್ಟು ಛಲಗಳು ಹೆಚ್ಚುತ್ತವೆ. ಏರಾಗ ಜ್ಞಾನ ತಪಸ್ಸುಗಳು ಬೆಳದಂತೆಲ್ಲ ಆ ಮಹಾನುಭಾವರಲ್ಲಿ ಕ್ಷುಲ್ಲಕ ವಿಷಯಗಳಿಗಾಗಿಯೂ ಉದ್ರೇಕಗೊಳ್ಳುವ ಸ್ವಭಾವ ಬೆಳೆದು ಬರುತ್ತದೆ. ಶಾಂತಿ ಸೈರಣೆ ಕ್ಷಮೆ ಸಹನೆಗಳೆಂಬ ದೈವೀ ಗುಣಗಳನ್ನು ಬದಿಗೆ ಸರಿಸಿ 'ಶಾಪ' ಕೊಡಲು ತವಕಿಸುವ ಸಿದ್ಧರೂ, ತಮ್ಮ ಮಾತಿಗೆ ಪ್ರತಿಮಾತು ಹಾಗು ತಮ್ಮ ವಿಚಾರಕ್ಕೆ ಪ್ರತಿ ವಿಚಾರಗಳನ್ನು ಸಹಿಸಲಾಗದೆ ಉರಿದೇಳುವ ಹಿರಿಯರೂ ಕ್ರೋಧದ ದಾಸರು. ಕ್ರೋಧವು ಅಸಂಖ್ಯ ಜೀವಿಗಳ ಬಲಿ ತೆಗೆದುಕೊಂಡಿದೆ. ಜಗತ್ತಿನಲ್ಲಿ ನಡೆದ ನರಹತ್ಯಾಕಾಂಡಗಳೆಲ್ಲ ಕ್ರೋಧದ ಪರಿಣಾಮ.

(೩) ಲೋಭ:- ನ್ಯಾಯ ಹಾಗು ಧರ್ಮದೇವತೆಯ ಕಣ್ಣಲ್ಲಿ ಮಣ್ಣು ಎರಚಿ ಅನವಶ್ಯಕವಾಗಿ ಅಪಾರ ದ್ರವ್ಯ ಸಂಪಾದಿಸಬೇಕೆಂಬ ಭಾವವಿಶೇಷವೇ ಲೋಭ. ಧನ ಲೋಭ ಕೆಲವರಿಗೆ; ಭೂಮಿಯ ಲೊಭ ಕೆಲವರಿಗೆ, ಅಧಿಕಾರ ಮಾನ ಮನ್ನಣೆಗಳ ಲೋಭ ಹಲವರಿಗೆ. ಇನ್ನೊಬ್ಬರಿಗೆ ಒಂದಕ್ಕರ ಕಲಿಸದ ಪಂಡಿತರು, ಮತ ಪಂಥ ಸಂಪ್ರದಾಯಗಳಲ್ಲಿ ಅಭಿನಿವಿಷ್ಟರಾದ ಗುರುಗಳು, ಕೀರ್ತಿಗಾಗಿ ಹಪಾಪಿಸುವ ಮಹತ್ವಾಕಾಂಕ್ಷಿಗಳು ಲೋಭಿಗಳ ವರ್ಗಕ್ಕೆ ಸೇರಿದ್ದಾರೆ.

ಈ ಮೂರು ದುರ್ಗುಣಗಳು ಬಹು ಅನ್ಯೋನ್ಯ. ಶಕ್ತಿಯಲ್ಲಿ ಕಾಮಕ್ಕಿಂತ ಕ್ರೋಧ, ಕ್ರೋಧಕ್ಕಿಂತ ಲೋಭ ಬಲಿಷ್ಟ. ಕಾಮ ದೇಹ ವಿನಾಶಕ. ಕ್ರೋಧ ಸಮಾಜ ವಿನಾಶಕ. ಲೋಭ ಜಗದ್ವಿನಾಶಕ! ಈ ಮೂರರ ಸೆಳವಿಗೆ ಸಿಕ್ಕುವನು ಅಸುರ! ಅವನಿಗೆ ನರಕ ನಿಶ್ಚಿತ; ಏಕೆಂದರೆ ಈ ಕಾಮಾದಿಗಳೇ ನರಕಕ್ಕಿರುವ ಭಯಾನಕ ಹೆಬ್ಬಾಗಿಲಗಳು!

ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।
ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥೨೨॥

ಅರ್ಥ:- ಏತೈಃ ತ್ರಿಭಿಃ ತಮೋದ್ವಾರೈಃ= ಈ ಮೂರು ತಮೋದ್ವಾರಗಳಿಂದ ವಿಮುಕ್ತಃ= ಪಾರಾದ ನರಃ= ಮನುಷ್ಯನು ಆತ್ಮನಃ= ತನ್ನ ಶ್ರೇಯಃ= ಶ್ರೇಯಸ್ಸನ್ನು ಆಚರತಿ= ಮಾಡಿಕೊಳ್ಳುತ್ತಾನೆ. ತತಃ= ಅದರಿಂದ ಪರಾಂಗತಿಂ= ಪರಮ ಗತಿಯನ್ನು ಯಾತಿ= ಹೊಂದುತ್ತಾನೆ.

ವಿವರಣೆ:- ಭಗವಂತ:- "ಕೌಂತೇಯ, ಕಾಮ ಕ್ರೋಧ ಲೋಭಗಳು ಗಾಢ ತಮಸ್ಸಿನ ದ್ವಾರಗಳು. ಅವುಗಳಲ್ಲಿ ಪ್ರವೇಶಿಸದ ಜಾಣ ಮನುಷ್ಯನು ಸತ್ಯ ಪ್ರೇಮ ಹಾಗು ತ್ಯಾಗಗಳ ಸಹಾಯದಿಂದ ದೇವ ಪಥದಲ್ಲಿ ನಡೆಯುತ್ತಾನೆ. ಪರಮ ಶ್ರೇಯಸ್ಸಾದ ಪರಂಧಾಮವನ್ನು ಸೇರುತ್ತಾನೆ. ಅಲ್ಲಿ ಆತನ ಆತ್ಮ ಚೇತನವು ಪರಮಾತ್ಮಚೇತನದೊಂದಿಗೆ ಸಮರಸ್ಯ ಹೊಂದುತ್ತದೆ. ಅದೇ ಮುಕ್ತಿ, ಪರಿಪೂರ್ಣತೆಯ ಸಿದ್ಧಿ."

ಸಂಬಂಧ:- ಕಾಮಾದಿಗಳಿಂದ ಪಾರಾಗದವನ ಗತಿ ಏನು?

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥೨೩॥

ಅರ್ಥ:- ಯಃ= ಯಾವನು ಶಾಸ್ತ್ರ ವಿಧಿಂ ಉತ್ಸೃಜ್ಯ= ವೇದಶಾಸ್ತ್ರ ವಿಧಿಯನ್ನು ಬಿಟ್ಟು ಕಾಮಕಾರತಃ= ಸ್ವೇಚ್ಛೆಯಾಗಿ ವರ್ತತೇ= ವರ್ತಿಸುತ್ತಾನೆಯೋ ಸಃ= ಅವನು ಸಿದ್ಧಿಂ = ಹೃದಯ ಶುದ್ಧಿಯನ್ನು ನ ಅವಾಪ್ನೋತಿ= ಹೊಂದುವದಿಲ್ಲ. ಸುಖಂ= ಸುಖವನ್ನು ನ= ಪಡೆಯುವದಿಲ್ಲ. ಪರಾಂ ಗತಿಂ= ಪರಮ ಗತಿಯನ್ನೂ ನ= ಸಾಧಿಸುವದಿಲ್ಲ.

ವಿವರಣೆ:- (೧) ಶಾಸ್ತ್ರ- 'ಶಿಷ್ಯತೇ ಅನುಶಿಷ್ಯತೇ, ಬೋಧ್ಯತೇ ಅಜ್ಞಾತಃ ಅರ್ಥಃ ಯೇನ ತತ್ ಶಾಸ್ತ್ರಂ' ಯಾವುದರಿಂದ ದೇವ ಧರ್ಮಾಚರ

ಣೆಯು ಅನುಶಾಸನಮಾಡಲ್ಪಡುತ್ತದೆಯೋ ಹಾಗು ಯಾವುದರಿಂದ ಅಜ್ಞಾತ ವಾದ ಪರಮ ಅರ್ಥವು (ಪರಮಾತ್ಮನು) ಬೋಧಿಸಲ್ಪಡುತ್ತದೆಯೋ ಅದು ಶಾಸ್ತ್ರ. ವೇದಗಳು, ಉಪನಿಷತ್ತುಗಳು, ಮತ್ತು ಸಕಲ ಸತ್ಪುರುಷರ ನುಡಿಗಳು ಶಾಸ್ತ್ರ ಎನಿಸುತ್ತವೆ. ಈ ಶಾಸ್ತ್ರಗಳು ನಮಗೆ ನೀಡುವ ಆಜ್ಞೆಗಳೇ 'ವಿಧಿಗಳು'. ಇವು ಮೂರು ಪ್ರಕಾರ: ವಿಹಿತ ವಿಧಿ, ನಿಷಿದ್ಧ ವಿಧಿ ಮತ್ತು ತಾತ್ವಿಕ ವಿಧಿ.

(ಅ) ವಿಹಿತ ವಿಧಿ:— ಹೀಗೆಯೇ ಮಾಡು ಎಂದು ಸುಸ್ಪಷ್ಟವಾಗಿ ನಿರ್ದೇಶಿಸುವ ಆಜ್ಞೆಗಳು. ಉದಾಹರಣೆ: "ಸತ್ಯಂ ವದ। ಧರ್ಮಂ ಚರ। ಮಾತೃ ದೇವೋ ಭವ ಪಿತೃ ದೇವೋ ಭವ। ಆಚಾರ್ಯ ದೇವೋ ಭವ। ಶ್ರದ್ಧಯಾ ದೇಯಂ। ಸಂವಿದಾ ದೇಯಂ ಸತ್ಯಾತ್ ಮಾ ಪ್ರಮದಿತವ್ಯಂ। ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ॥" ಸತ್ಯ ನುಡಿ. ಧರ್ಮ ಆಚರಿಸು. ತಾಯಿ ದೇವರೆಂದು ಭಾವಿಸು. ತಂದೆ ದೇವರೆಂದು ಭಾವಿಸು. ಗುರುವು ದೇವರೆಂದು ಭಾವಿಸು. ಶ್ರದ್ಧೆಯಿಂದ ಕೊಡಬೇಕು. ತಿಳಿದು ದಾನಮಾಡಬೇಕು. ಸತ್ಯದಿಂದ ದೂರಾಗಬಾರದು. ಸ್ವಾಧ್ಯಾಯ ಪ್ರವಚನಗಳನ್ನು ತಪ್ಪಿಸಬಾರದು. ಇತ್ಯಾದಿ ವಾಕ್ಯಗಳು ವಿಧ್ಯರ್ಥಕವಾಗಿರುವದರಿಂದ ವಿಹಿತ ವಿಧಿ ಎನಿಸಿವೆ.

(ಬ) ನಿಷಿದ್ಧ ವಿಧಿ:— ಹೀಗೆ ಮಾಡಬಾರದು ಎಂದು ಕಟ್ಟಾಜ್ಞೆ ಮಾಡುವ ಮಾತುಗಳು ನಿಷಿದ್ಧ ವಿಧಿಯಾಗಿವೆ. ಉದಾಹರಣೆ: "ಕಳಬೇಡ. ಕೊಲಬೇಡ. ಹುಸಿಯ ನುಡಿಯ ಬೇಡ. ತನ್ನ ಬಣ್ಣಿಸಬೇಡ. ಮುನಿಯ ಬೇಡ. ಇದಿರ ಹಳಿಯ ಬೇಡ."

(ಕ) ತಾತ್ತ್ವಿಕ ವಿಧಿ:ಆತ್ಮಾನಾತ್ಮ ತತ್ತ್ವಗಳನ್ನು ವಿಂಗಡಿಸಿ, ಆತ್ಮತತ್ತ್ವವನ್ನು ಅವಜಾನಿಸು ಎಂದು ಹೇಳುವ ನುಡಿಗಳು ತಾತ್ತ್ವಿಕವಿಧಿಗಳಾಗಿವೆ. ಉದಾ: "ಯತೋವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ಪ್ರಯಂತಿ ಅಭಿಸಂವಿಶಂತಿ ತತ್ ಬ್ರಹ್ಮ। ತತ್ ವಿಜಿಜ್ಞಾಸಸ್ವ॥" ಯಾವುದರಿಂದ ಈ ಸಕಲ ಭೂತಗಳು ಹುಟ್ಟುತ್ತವೆಯೋ, ಯಾವುದರಿಂದ ಹುಟ್ಟಿದ ಇವು ಬಾಳುತ್ತವೆಯೋ, (ಪ್ರಳಯ ಕಾಲದಲ್ಲಿ)ಯಾವುದನ್ನು ಪ್ರವೇಶಿಸುತ್ತವೆಯೋ ಹಾಗು (ಮೋಕ್ಷಕಾಲದಲ್ಲಿ) .ಯಾವುದರಲ್ಲಿ ಸಮಾವೇಶ ಹೊಂದುತ್ತವೆಯೋ ಅದುವೇ ಬ್ರಹ್ಮ! ಅದನ್ನು ತಿಳಿದುಕೊ.

ಈ ಮೂರು ಬಗೆಯ ವಿಧಿಗಳನ್ನು ಚಾಚೂ ತಪ್ಪದೆ ಅನುಸರಿಸಿದ ಧೀರ ಸಾಧಕನು ಹೃದಯ ಶುದ್ಧಿ ಹೊಂದಿ ಕೊನೆಗೆ ಬ್ರಹ್ಮನಿಷ್ಠನಾಗುತ್ತಾನೆ. ಮುಕ್ತಿ ಸೌಖ್ಯವನ್ನು ಅನುಭವಿಸುತ್ತಾನೆ,

೨)ಶಾಸ್ತ್ರವಿಧಿಮುತ್ಸೃಜ್ಯ...: ಪರಮ ಪವಿತ್ರವಾದ ವೇದ ಶಾಸ್ತ್ರಗಳ ವಿಧಿಗಳನ್ನು ಉಲ್ಲಂಘಿಸಿ ಕಾಮಾದಿಗಳ ದಾಸನಾಗಿ ಸ್ವೇಚ್ಛೆಯಿಂದ ವರ್ತಿಸುವವ ಅಸುರ. ಅವನ ಹೃದಯ ಶುದ್ಧವಾಗದು. ಅವನ ಮನಸ್ಸು ಏಕಾಗ್ರಗೊಳ್ಳದು. ಅವನ ಅಂತರಂಗದಲ್ಲಿ ಆತ್ಮಾನಾತ್ಮವಿವೇಚನಾರೂಪ ವಿವೇಕ ಉದಿಸದು. ಆದ್ದ

ರಿಂದ ಆತ್ಮದರ್ಶನವಾಗಲಿ ವಿಶ್ವಾತ್ಮನ ಕೃಪೆಯಾಗಲಿ ಅವನಿಗೆ ಲಭಿಸದು. ಅವನು ಸದಾ ದುಃಖಿ! ಅವನಿಗೆ ನಿಜ ಶಾಂತಿಹೇಗೆ ದೊರೆತೀತು?

ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥೨೪॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ದೈವಾಸುರಸಂಪದ್ವಿಭಾಗಯೋಗೋನಾಮಷೋಡಶೋಽಧ್ಯಾಯಃ

ಭಾವ:– ಆದುದರಿಂದ ಕಾರ್ಯಾಕಾರ್ಯಗಳನ್ನು ನಿರ್ಧರಿಸುವಲ್ಲಿ ,ನಿನಗೆ ಶಾಸ್ತ್ರವೇ, ಪ್ರಮಾಣ, ಶಾಸ್ತ್ರವಿಧಿಯಲ್ಲಿ ಹೇಳಿರುವುದನ್ನು ತಿಳಿದು , ಇಲ್ಲಿ, ಕರ್ಮಮಾಡಲು, ಅರ್ಹನಾಗುತ್ತಿ.

ವಿವರಣೆ: ಭಗವಂತ:–"ಭಾರತ, ವೇದವಿಧಿ ಮೀರಿದವನಿಗೆ ಸುಖವಿಲ್ಲ. ಆದ್ದರಿಂದ, ನೀನು ಕಾರ್ಯ-ಅಕಾರ್ಯ, ಧರ್ಮ – ಅಧರ್ಮಗಳನ್ನು ನಿರ್ಧರಿಸುವವಿಷಯದಲ್ಲಿ ವೇದಶಾಸ್ತ್ರಗಳೇ ಪ್ರಮಾಣವೆಂದು ಪರಿಭಾವಿಸು. ಅವುಗಳನ್ನು ಅಭ್ಯಸಿಸು, ಆ ಪ್ರಮಾಣಗಳ ಅಂತರ್ಯ ಅರಿತುಕೊ. ಅಂದರೆ ಮಾತ್ರ ಬಾಳಲು ಅರ್ಹನಾಗುವಿ.

"ಸಕಲ ಶಾಸ್ತ್ರಗಳ ಸಾರವನ್ನೇ ನಾನು ಬೋಧಿಸಿರುವೆ. ನನ್ನ ಅಮೃತೋಪಮ ವಚನಗಳನ್ನು ಮರೆಯಬೇಡ. ನಾನು ತೋರಿದ ಪಥದಲ್ಲಿ ಸಾಗು. ಬದುಕಿನಲ್ಲಿ ಸಮಸ್ಯೆಗಳು ಸಂದೇಹಗಳು ತಲೆದೋರಿದಾಗ ನನ್ನ ಉಪದೇಶಗಳನ್ನು ಸ್ಮರಿಸಿಕೊ. ನಾನು ಕರುಣೆಯಿಂದ ಅನುಗ್ರಹಿಸಿದ ವೇದ ವಿದ್ಯೆಯನ್ನು ಗಟ್ಟಿಯಾಗಿ ಹಿಡಿದು ಜೀವನವೆಂಬ ಸಾಗರದಲ್ಲಿ ಪ್ರವೇಶಿಸು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಏನಾದರು ಆಗಿ ಬಾಳು. ನೀನು ಮುಳುಗಲಾರೆ. ಕಾಮಾದಿಗಳ ತುತ್ತಾಗಲಾರೆ! ಅನಂತ ಸೌಖ್ಯ ನಿನಗೆ ಖಚಿತವೆಂದು ತಿಳಿ!"

ಶ್ರೀ ಮಲ್ಲಿಕಾರ್ಜುನ ಗೀತಾವಚನಾಮೃತದ ಹದಿನಾರನೆಯ ಬಿಂದುವು.

* † *

# ಹದಿನೇಳನೆಯ ಅಧ್ಯಾಯ

## ಶ್ರದ್ಧಾತ್ರಯ ವಿಭಾಗಯೋಗ

" ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ"

ವೇದ, ಶಾಸ್ತ್ರ, ಗುರು, ಸಂತ, ಮಹಾತ್ಮರ ಉಪದೇಶದಲ್ಲಿ ಪರಿಪೂರ್ಣ ನಂಬಿಗೆ ತಾಳಿದವನು ಶ್ರದ್ಧಾವಂತ. ನಿರ್ಮಲ ಹೃದಯಿಯಾದ ಅವನು ಇಂದ್ರಿಯಗಳನ್ನು ಸಂಯಮಗೊಳಿಸುತ್ತಾನೆ: ಮನಸ್ಸನ್ನು ಧ್ಯೇಯವಾದ ಆತ್ಮವಸ್ತುವಿನ ಚಿಂತನೆಗೆ ತೊಡಗಿಸುತ್ತಾನೆ. ಅದೆಲ್ಲದರ ಪರಿಣಾಮವಾಗಿ ದಿವ್ಯಜ್ಞಾನವನ್ನು ಹೊಂದುತ್ತಾನೆ. ಜೀವ-ಬ್ರಹ್ಮರ ಸಾಮರಸ್ಯದಿಂದ ಅಭಿವ್ಯಕ್ತವಾಗುವ ಪರಮ ಶಾಂತಿಯನ್ನು ಅನುಭವಿಸುತ್ತಾನೆ.

ಶ್ರದ್ಧೆ ಇದು ಸಾಧನೆಯ ಆಡಿಪಾಯ: ಸಿದ್ಧಿಯ ಏಕೈಕ ಸೂತ್ರ. ಶ್ರದ್ಧೆಯಿಂದ ಚಿತ್ತಶುದ್ಧಿ, ಬುದ್ಧಿವೃದ್ಧಿ! ಶ್ರದ್ಧೆಯು ಮುಕ್ತಿಮಂದಿರದ ಸುಭದ್ರ ಸೋಪಾನಶ್ರೇಣಿ! ಎಲ್ಲಿ ಶ್ರದ್ಧೆಯೋ ಅಲ್ಲಿ ನಿರ್ಭಯತೆ; ಅಲ್ಲಿ ನಿರ್ಮಾಲ್ಯ: ಅಲ್ಲಿ ವಿವೇಕ! ಶ್ರದ್ಧೆಯು ಕಾಲಂಗೆ ಕಾಲ! ತಮಂಧ ನಿವಾರಕ ಜ್ಯೋತಿ! ಭಗವಂತನು ಇಂಥ ಪಾವನ ಶ್ರದ್ಧೆಯ ಬಗೆಗೆ ಈ ಅಧ್ಯಾಯದ ತುಂಬ ವಿವರಿಸಿದ್ದಾನೆ.

ಅರ್ಜುನ ಉವಾಚ

ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ ।
ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ವಮಾಹೋ ರಜಸ್ತಮಃ ॥೧॥

ಅರ್ಥ:– ಯೇ= ಯಾರು ಶಾಸ್ತ್ರವಿಧಿಮುತ್ಸೃಜ್ಯ= ಶಾಸ್ತ್ರವಿಧಿ ಬಿಟ್ಟು ತು= ಆದರೆ ಶ್ರದ್ಧಯಾ ಅನ್ವಿತಾಃ= ಶ್ರದ್ಧೆಯಿಂದ ಕೂಡಿದವರಾಗಿ ಯಜಂತೇ =ಪೂಜಿಸುವರೋ ತೇಷಾಂ ನಿಷ್ಠಾ ಕಾ= ಅವರ ನಿಷ್ಠೆಯು ಎಂತಹದು? ಸತ್ವಂ= ಸಾತ್ವಿಕವೋ? ರಜಃ = ರಾಜಸಿಕವೋ: ಆಹೋ ತಮಃ= ಅಥವಾ ತಾಮಸಿಕವೋ?

ವಿವರಣೆ:–ದೇವನನ್ನು ಪೂಜಿಸುವ ಭಕ್ತರಲ್ಲಿ ಮೂರು ವಿಧ: ೧) ಅಜ್ಞ ಭಕ್ತರು- ವೇದ ಶಾಸ್ತ್ರಾದಿಗಳ ಪರಿಚಯವಿಲ್ಲವಾದರೂ ಅತ್ಯಂತ ಶ್ರದ್ಧೆಯಿಂದ ಇಷ್ಟದೇವನನ್ನು ಅರ್ಚಿಸುತ್ತಾರೆ. ಇವರ ಅರ್ಚನೆಯು ವಿಧಿವತ್ತಲ್ಲ, ನಿಯಮ ಬದ್ಧವೂ ಅಲ್ಲ. ಉದಾ– ರಾಮಭಕ್ತೆಯು ಶಬರಿ, ಶಿವಲಿಂಗ ಭಕ್ತನು ಕಣ್ಣಪ್ಪ.(೨) ಸಕಾಮ ಭಕ್ತರು- ವೇದಶಾಸ್ತ್ರಗಳಲ್ಲಿ ಶ್ರದ್ಧೆಯುಳ್ಳ ಇವರು ವಿಧಿವತ್ತಾಗಿ ಯಜ್ಞ ಯಾಗ ಅರ್ಚನ ಆರಾಧನಗಳನ್ನು ನೆರವೇರಿಸುತ್ತಾರೆ: ಇಹ ಪರ ಸುಖ ಸೌಭಾಗ್ಯಗಳನ್ನು ಕಾಮಿಸುತ್ತಾರೆ. ೩) ನಿಷ್ಕಾಮ ಭಕ್ತರು- ಗುರುಗಳಲ್ಲಿ ಅಚಲ ವಿಶ್ವಾಸವುಳ್ಳ ಇವರು ಗುರುದರ್ಶಿತ ಮಾರ್ಗದಲ್ಲಿ ನಡೆಯುತ್ತಾರೆ: ಶಾಸ್ತ್ರಶುದ್ಧವಾಗಿ ಹಾಗು ಗುರುಸಮ್ಮತವಾಗಿ ದೇವಾರಾಧನೆ ಮಾಡುತ್ತಾರೆ, ಆದರೆ ದೇವ ದರ್ಶನದ ವಿನಃ ಬೇರೆ ಏನನ್ನೂ ಕಾಮಿಸುವದಿಲ್ಲ.

ಈ ಮೂವರಲ್ಲಿ ನಿಷ್ಕಾಮ ಭಕ್ತರಂತೂ ಭೋಗಮಯ ಸಂಸಾರದಿಂದ ಬಿಡುಗಡೆ ಹೊಂದಿ ಪರಮ ಪಾವನವಾದ ಪರಂಧಾಮವನ್ನು ಸೇರುತ್ತಾರೆ. ಸಕಾಮ ಭಕ್ತರು ಇಹ ಪರ ಭೋಗ ಭಾಗ್ಯಂಗಳ ಪಡೆದು ಸುಖಿಸುತ್ತಾರೆ. ಅಜ್ಞ ಭಕ್ತರಲ್ಲಿ ಶ್ರದ್ಧೆ ಇದೆಯಾದರೂ ವಿಧಿಜ್ಞಾನವಿಲ್ಲ. ಮನಬಲ್ಲ ರೀತಿಯಲ್ಲಿ ಉಪಾಸನೆ ಮಾಡುವ ಇವರಿಗೆ ಮುಕ್ತಿಯೂ ಇಲ್ಲ ವೈದಿಕ ಭೋಗಗಳೂ ಇಲ್ಲ. ಇಂಥವರ ಗತಿ ಏನು? ನಿಷ್ಕಾಮ ಭಕ್ತರ ಶ್ರದ್ಧೆ ಮುಕ್ತಿಪ್ರದ; ಸಕಾಮಶೀಲರ ಶ್ರದ್ಧೆ ಭೋಗಪ್ರದ; ಹಾಗಾದರೆ ಅಜ್ಞ ಭಕ್ತರ ಶ್ರದ್ಧೆ ಎಂಥದು? ಅದಕ್ಕೆ ಫಲವಿದೆಯೊ ಇಲ್ಲವೊ? ಎಂಬ ಸಂದೇಹ ಉದಿಸುವದು ಸಹಜ. ಇದನ್ನೇ ಅರ್ಜುನ ವ್ಯಕ್ತ ಮಾಡಿದ.

ಅರ್ಜುನ:-"ಭಗವಂತನೆ,ಸರ್ವೋ ದ್ವಾರಗಳಾದ ಕಾಮ ಕ್ರೋಧ ಲೋಭ ಗಳಿಂದ ಮುಕ್ತರಾದ ಶ್ರದ್ಧಾನ್ವಿತ ಸಾಧಕರು ನಿನ್ನನ್ನೇ ಭಜಿಸಿ ನಿನ್ನಲ್ಲಿ ಒಂದಾ ಗುತ್ತಾರೆ. ಅಶ್ರದ್ಧರಾದ ಕಾಮಕಾರತ ಅಸುರರು ಸ್ವೈರ ವರ್ತನ ನಡೆಸಿ ನರಕ ಸೇರುತ್ತಾರೆ. ಎಂಬ ಸಂಗತಿಯನ್ನು ನಿನ್ನಿಂದ ಅರಿತೆ. ಆದರೆ ಆ ಎರಡೂ ವರ್ಗಕ್ಕೆ ಸೇರದ ಕೆಲವು ಜನರಿದ್ದಾರೆ. ಅವರಿಗೆ ಶಾಸ್ತ್ರವಿಧಿಗಳ ಜ್ಞಾನವಿಲ್ಲ, ನಿಜ; ಕಿಂತು, ನಿನ್ನಲ್ಲಿ ಅವರಿಗೆ ಅಪಾರ ಶ್ರದ್ಧೆ! ತಮ್ಮ ಮನಸ್ಸಿಗೆ ಹೊಳೆದ ರೀತಿಯಲ್ಲಿ ನಿನ್ನನ್ನು ಅರ್ಚಿಸುತ್ತಾರೆ. ಅಂಥವರ ಶ್ರದ್ಧೆ ಯಾವ ಬಗೆಯದು? ಅದು ಸಾತ್ವಿ ಕವೊ? ರಾಜಸಿಕವೊ? ಅಥವಾ ತಾಮಸಿಕವೊ? ವಿವರಿಸುವ ಕೃಪೆಯಾಗಬೇಕು."

ಶ್ರೀಭಗವಾನುವಾಚ

ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ।
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥೨॥

ಅರ್ಥ:-ದೇಹಿನಾಂ= ದೇಹಿಗಳ, ಸಾ ಸ್ವಭಾವಜಾ ಶ್ರದ್ಧಾ= ಸ್ವಭಾವದಿಂದಹುಟ್ಟಿದ ಆ ಶ್ರದ್ಧೆಯು. ಸಾತ್ವಿಕೀ= ಸಾತ್ವಿಕ, ರಾಜಸೀ=ರಾಜಸಿಕ, ತಾಮಸೀ= ತಾಮಸಿಕ, ಇತಿ= ಎಂದು, ತ್ರಿವಿಧಾ ಏವ ಭವತಿ= ಮೂರು ವಿಧವಾಗಿದೆ, ತಾಂ ಚ ಶೃಣು= ಅದನ್ನು ಕೇಳು.

ವಿವರಣೆ:-ಶ್ರದ್ಧೆ ಎರಡು ವಿಧ: ಸ್ವಭಾವಜ ಹಾಗು ಶಾಸ್ತ್ರಜ. ೧) ಸ್ವಭಾ ವಜ: ಪೂರ್ವಜನ್ಮದ ಅನುಭವಗಳು ಸಂಸ್ಕಾರರೂಪದಿಂದ ಅಂತಃಕರಣದಲ್ಲಿ ಉಳಿಯುತ್ತವೆ. ಆ ಸಂಸ್ಕಾರಗಳ ಪ್ರಭಾವ ಹಾಗು ಪ್ರವಾಹಕ್ಕೆ ಸ್ವಭಾವ ಎನ್ನು ತ್ತಾರೆ. ಹುಟ್ಟಿನೊಂದಿಗೆ ಈ ಸ್ವಭಾವ ಬೆಳೆದು ಬರುತ್ತದೆ. ಈ ಸಹಜ ಸ್ವಭಾ ವದ ಮೂಲಕ ಮೂಡಿಕೊಳ್ಳುವ ಶ್ರದ್ಧೆಯೇ ಸ್ವಭಾವಜ. ೨) ಶಾಸ್ತ್ರಜ: ವೇದಾ ಭ್ಯಾಸ, ಶಾಸ್ತ್ರಾಧ್ಯಯನ, ಗುರೂಪದೇಶ ಶ್ರವಣ – ಇವುಗಳ ಮೂಲಕ ಉಂಟಾಗುವ ಪವಿತ್ರ ಶ್ರದ್ಧೆಯೇ ಶಾಸ್ತ್ರಜ. ನಾರದರ ಉಪದೇಶ ಆಲಿಸಿದ ನಂತರ ವಾಲ್ಮೀಕಿ ಬೇಡನಲ್ಲಿ ಶಾಸ್ತ್ರಜಶ್ರದ್ಧೆ ಉದಿಸಿತು; ಅದು ಕೆಲವೇ ದಿನಗಳಲ್ಲಿ ಆ ಬೇಡನನ್ನು ಪರಿವರ್ತಿಸಿ ಮಹರ್ಷಿಯನ್ನಾಗಿ ಮಾಡಿತು.

ಶಾಸ್ತ್ರಜ ಶ್ರದ್ಧೆಯು ಸದಾ ಸಾತ್ವಿಕ. ಸ್ವಭಾವಜ ಶ್ರದ್ಧೆ ಮಾತ್ರ ಮೂವಿಧ- ಸಾತ್ವಿಕ, ರಾಜಸಿಕ, ಹಾಗು ತಾಮಸಿಕ. ಭಗವಂತನು ಈ ಮೂರು ವಿಧದ ಶ್ರದ್ಧೆ ಯನ್ನು ಕುರಿತು ಉಪದೇಶ ಮಾಡುತ್ತಾನೆ.

ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।
ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ॥೩॥

ಅರ್ಥ:- ಸರ್ವಸ್ಯ= ಸರ್ವ ಜೀವರ ಶ್ರದ್ಧಾ= ಶ್ರದ್ಧೆಯು ಸತ್ವಾನುರೂಪಾ ಭವತಿ = ಅವರವರ ಸ್ವಭಾವ ಗುಣರೂಪವಾಗಿರುತ್ತದೆ. ಅಯಂ ಪುರುಷಃ= ಈ ಜೀವವು ರುಪನು

ಶ್ರದ್ಧಾಮಯ= ಶ್ರದ್ಧಾಮಯನು. ಯಃ= ಯಾವನು ಯಚ್ಛ್ರದ್ಧಃ= ಎಂಥ ಶ್ರದ್ಧೆಯುಳ್ಳವನೋ ಸಃ ಸಃ ಏವ= ಅವನು ಅಂಥವನೇ.

ವಿವರಣ:-(೧) ಸರ್ವಸ್ಯ ಶ್ರದ್ಧಾ ಸತ್ತ್ವಾನುರೂಪಾ ಭವತಿ-ಘಟವು ಕಾರ್ಯ ಮಣ್ಣು ಅದರ ಉಪಾದಾನ ಕಾರಣ. ಕುಂಬಾರನು ಅದರ ನಿಮಿತ್ತ ಕಾರಣ. ಅದೇ ರೀತಿ, ಶ್ರದ್ಧೆಯು ಕಾರ್ಯ. ಸತ್ತ್ವಶಬ್ದ; ನಿರ್ದಿಷ್ಟವಾದ ಅಂತಃಕರಣವು ಆ ಶ್ರದ್ಧೆಯ ಉಪಾದಾನ ಕಾರಣ. ಸ್ವಭಾವವು ಅದರ ನಿಮಿತ್ತಕಾರಣ. ಅಂತಃಕರಣ ಹಾಗು ಸ್ವಭಾವಗಳು ಪ್ರತಿ ವ್ಯಕ್ತಿಗೂ ಭಿನ್ನ ಭಿನ್ನವಾಗಿವೆ. ಆದ್ದರಿಂದ ಕಾರ್ಯವಾದ ಶ್ರದ್ಧೆ ಕೂಡ ಭಿನ್ನ ಭಿನ್ನವಾಗಿದೆ. ಅಂದರೆ ಸತ್ತ್ವ ಹೃದಯ ಮತ್ತು ಸಾತ್ವಿಕ ಸ್ವಭಾವಗಳಿಂದ ಹುಟ್ಟಿದ ಶ್ರದ್ಧೆಯು ಸಾತ್ವಿಕ. ರಜೋ ಹೃದಯ ಮತ್ತು ರಾಜಸಿಕ ಸ್ವಭಾವಗಳಿಂದ ಹುಟ್ಟಿದ ಶ್ರದ್ಧೆಯು ರಾಜಸಿಕ. ತಮೋ ಹೃದಯ ಮತ್ತು ತಾಮಸಿಕ ಸ್ವಭಾವಗಳಿಂದ ಹುಟ್ಟಿದ ಶ್ರದ್ಧೆಯು ತಾಮಸಿಕ.

(೨) ಅಯಂ ಪುರುಷಃ ಶ್ರದ್ಧಾಮಯಃ:- ದೇಹಧಾರಿಯಾದ ಜೀವ ಪುರುಷನು ತನ್ನ ಹೃದಯ ಹಾಗು ಸ್ವಭಾವಾನುಸಾರವಾದ ಶ್ರದ್ಧೆಯನ್ನು ತಳೆಯುತ್ತಾನೆ. ಶ್ರದ್ಧೆ ಅವನ ಬದುಕಿನ ಉಸಿರು! ಶ್ರದ್ಧೆಗೆ ಅಧೀನನಾಗಿಯೇ ಬಾಳ ನಡೆಸುತ್ತಾನೆ.

(೩) ಯೋ ಯತ್ ಶ್ರದ್ಧಃ ಸಃ ಸಃ ಏವ:- ಯಾವನದು ಯಾವ ಶ್ರದ್ಧೆಯೋ ಅವನ ವ್ಯಕ್ತಿತ್ವವೂ ಅಂಥದೇ. ಸತ್ವಶ್ರದ್ಧೆಯ ಜೀವ ಪುರುಷನು ಸುಗುಣಿ ಸುಶೀಲ ಸುಜ್ಞ. ರಾಜಸಿಕ ಶ್ರದ್ಧೆಯ ಜೀವ ಪುರುಷನು ದುರ್ಗುಣಿ ದುಶ್ಶೀಲ ದುರಹಂಭಾವಿ. ತಾಮಸಿಕ ಶ್ರದ್ಧೆಯು ಜೀವ ಪುರುಷನು ಅಜ್ಞ ಆಲಸಿ ಮೂಢ.

(೪) ಸ್ವಾಭಾವಿಕವಾದ ಶ್ರದ್ಧೆಯನ್ನು ಪೂರ್ಣ ಬದಲಿಸುವ ಮಹಾ ಸಾಮರ್ಥ್ಯ ಶಾಸ್ತ್ರಶ್ರದ್ಧೆಯಲ್ಲಿದೆ. ಶಾಸ್ತ್ರ ಶ್ರದ್ಧೆಯು ಅಂತಕರಣವನ್ನೇ ಶುಚಿಗೊಳಿಸುವದರಿಂದ ವೈಷಯಿಕ ಆಸೆ ಆಮಿಷಗಳು ಕಮರುತ್ತವೆ; ವಿರಾಗ ವಿವೇಕ ಎಂಬ ಸೌರಭ ಅಲ್ಲಿ ತುಂಬಿಕೊಳ್ಳುತ್ತದೆ.ಆಗ ಆತ್ಮಚಂದ್ರೋದಯ ಸುಂದರ ದರ್ಶನ ಜೀವನಿಗಾಗುತ್ತದೆ. ಶಾಸ್ತ್ರಶ್ರದ್ಧೆ ಹುಟ್ಟದಿದ್ದರೆ ಮಾತ್ರ ಜೀವಪುರುಷನು ಎಂದಿಗೂ ಪ್ರಗತಿ ಹೊಂದಲಾರ. ಪ್ರಕೃತಿಯ ಬಂಧನೆಗಳಿಂದ ಬಿಡುಗಡೆ ಪಡೆಯಲಾರ.

ಸಂಬಂಧ:- ಮುಂದಿನ ಮಂತ್ರಗಳಲ್ಲಿ ತ್ರಿವಿಧ ಶ್ರದ್ಧೆಗಳ ಕಾರ್ಯವಿವೇಚನೆ ಮಾಡಲಾಗಿದೆ.

ಯಜಂತೇ ಸಾತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ।
ಪ್ರೇತಾನ್ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥೪॥

ಅರ್ಥ:- ಸಾತ್ವಿಕಾಃ=ಸಾತ್ವಿಕ ಶ್ರದ್ಧೆಯುವರು, ದೇವಾನ್ ದೇವತೆಗಳನ್ನು, ಯಜಂತೇ : ಪೂಜಿಸುತ್ತಾರೆ, ರಾಜಸಾಃ= ರಾಜಸಿಕರು ಯಕ್ಷರಕ್ಷಾಂಸಿ= ಯಕ್ಷ ರಾಕ್ಷಸರನ್ನು (ಪೂಜಿಸುತ್ತಾರೆ), ಅನ್ಯೇ = ಇತರ, ತಾಮಸಾಃ ಜನಾಃ ತಾಮಸಿಕರು, ಪ್ರೇತಾನ್ ಭೂತ ಗಣಾನ್= ಪ್ರೇತ ಭೂತಗಳನ್ನು..ಯಜಂತೇ =ಪೂಜಿಸುತ್ತಾರೆ

ವಿವರಣೆ:-ಪ್ರಕೃತಿಯ ಸತ್ವಾಂಶದಿಂದ ದೇವತೆಗಳು, ರಜಾಂಶದಿಂದ ಯಕ್ಷ ರಾಕ್ಷಸರು ಹಾಗು ತಮಾಂಶದಿಂದ ಭೂತ ಪ್ರೇತಗಳು ಹುಟ್ಟುತ್ತವೆ. ದೇವತೆ ಗಳಲ್ಲಿ ಶಾಂತಿ ಕರುಣೆ ಸಹಾನುಭೂತಿಗಳಿವೆ. ಯಕ್ಷ ರಾಕ್ಷಸರಲ್ಲಿ ಹಿಂಸೆ, ಕ್ರೌರ್ಯ, ದ್ವೇಷಗಳಿವೆ. ಭೂತ ಪ್ರೇತಗಳಲ್ಲಿ ಮೋಹ ಪ್ರಮಾದ ಆಲಸ್ಯಗಳಿವೆ. ದೇವತೆ ಗಳಿಗೆ ಸೌಮ್ಯ ಪೂಜೆಯು ಇಷ್ಟ. ರಾಕ್ಷಸರಿಗೆ ಉಗ್ರ ಪೂಜೆಯು ಇಷ್ಟ. ಭೂತ ಗಳಿಗೆ ಮಾದಕ ಪೂಜೆಯು ಇಷ್ಟ.

ಸಾತ್ವಿಕ ಶ್ರದ್ಧೆಯುವರು ಶಾಸ್ತ್ರ ವಿಧಿ ವಿಧಾನೋಕ್ತವಾಗಿ ಅಷ್ಟೋಪ ಚಾರ, ಶತೋಪಚಾರ, ಸಹಸ್ರೋಪಚಾರಗಳಿಂದ ದೇವತೆಗಳನ್ನು ಅರ್ಚಿಸುತ್ತಾರೆ, ರಾಜಸಿಕ ಶ್ರದ್ಧೆಯುವರು ಯಕ್ಷ ರಾಕ್ಷಸರನ್ನು ಅರ್ಚಿಸುತ್ತಾರೆ, ತಾಮಸಿಕ ಶ್ರದ್ಧೆ ಯುವರು ಸುರೆ, ಮಧು, ರಕ್ತ ಮುಂತಾದ ವಸ್ತುಗಳನ್ನರ್ಪಿಸಿ ಭೂತ ಪ್ರೇತ ಗಳನ್ನು ಆರಾಧಿಸುತ್ತಾರೆ.

ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋಜನಾಃ।
ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥೫॥
ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ
ಮಾಂ ಚೈವಾಂತಃ ಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ॥೬॥

ಅರ್ಥ:- ಯೇ ಜನಾಃ= ಯಾವ ಜನರು, ದಂಭಾಹಂಕಾರ ಸಂಯುಕ್ತಾಃ =ದಂಭ ಅಹಂಕಾರಯುಕ್ತರೊ, ಕಾಮರಾಗ ಬಲಾನ್ವಿತಾಃ= ಕಾಮರಾಗ ಬಲಾನ್ವಿತರೋ, ಅಚೇತಸಃ= ಅವಿವೇಕಿಗಳಾಗಿ, ಶರೀರಸ್ಥಂ ಭೂತಗ್ರಾಮಂ= ಶರೀರದಲ್ಲಿರುವ ಇಂದ್ರಿಯ ಸಮೂಹವನ್ನು, ಚ= ಮತ್ತು, ಅಂತಃಶರೀರಸ್ಥಂ= ಅಂತಶರೀರದಲ್ಲಿರುವ ಮಾಂ= ನನ್ನನ್ನು, ಕರ್ಷಯಂತಃ= ವ್ಯಥೆಪಡಿಸುತ್ತಿರುವರೊ, ಅಶಾಸ್ತ್ರ ವಿಹಿತಂ= ಶಾಸ್ತ್ರವಿಹಿತವಲ್ಲದ. ಘೋರಂ ತಪಃ ತಪ್ಯಂತೇ = ಘೋರ ತಪಸ್ಸನ್ನು ಮಾಡುತ್ತಾರೆಯೋ, ತಾನ್ ಅಸುರ ನಿಶ್ಚಯಾನ್ ವಿದ್ಧಿ= ಅಂಥ ಜನ ರನ್ನು ಆಸುರೀ ಬುದ್ಧಿಯುವರೆಂದು ತಿಳಿ.

ವಿವರಣ:-"ಅರ್ಜುನ, ರಾಜಸಿಕ ತಾಮಸಿಕ ಜನರು ಆಡಂಬರ ಪ್ರಿಯರು ಅಹಂಕಾರಿಗಳು, ಕಾಮುಕರು, ಕ್ರುದ್ಧರು. ಮದೋನ್ಮತ್ತರು, ಆತ್ಮಾನಾತ್ಮ ವಿವೇಕವಿಲ್ಲದ ಅಜ್ಞರು, ಅವಿಚಾರಿಗಳು. ವಿಷಯಗಳ ಅತಿಭೋಗದಿಂದ ಇಂದ್ರಿಯ ಸಮುದಾಯವನ್ನೇ ನಿಶ್ಶಕ್ತಗೊಳಿಸುವ ಅವರು ದೇಹಾಂತರಂಗದಲ್ಲಿ ಪರಂಜ್ಯೋತಿರಾತ್ಮನಾಗಿ ನೆಲೆಸಿದ ನನ್ನನ್ನು ಅರಿಯದೆ ತಮಂಧಕಾರದಲ್ಲಿ ಬಾಳು

ತ್ತಾರೆ. ಅವರು ಗೈಯುವ ತಪವು ದೇಹ ಹಾಗು ಆತ್ಮಗಳ ವಿನಾಶಕ, ಶಾಸ್ತ್ರಗಳಿಗೆ ಅಸಮ್ಮತ. ಪಂಚಾಗ್ನಿ, ಅಧೋಮುಖಿ. ಸೂರ್ಯವೀಕ್ಷಣ. ಅಂಗಬಂಧನ, ನಿರಾಹಾರ, ಪರ್ಣಾಶನ, ವಾಯುಸೇವನ ಮುಂತಾದ ಬಹು ಘೋರ ತಪಗಳಲ್ಲಿ ತಮ್ಮನ್ನೇ ತಾವು ಬಲಿಕೊಡುವ ಅವರು ಆಸುರೀ ಸ್ವಭಾವದವರೆಂದು ತಿಳಿ."

**ಸಂಬಂಧ:** ಮುಂದಿನ ಮೂರು ಮಂತ್ರಗಳಲ್ಲಿ ಆಹಾರ ಯಜ್ಞ ತಪ ದಾನಗಳ ವಿಭೇದಗಳನ್ನು ಹೇಳಲಾಗಿದೆ.

ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ।
ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ।೭॥

**ಅರ್ಥ:**-ಸರ್ವಸ್ಯ=ಎಲ್ಲ ಜನರ. ಆಹಾರಃ ಅಪಿ ತು= ಆಹಾರವೂ, ತ್ರಿವಿಧ ಪ್ರಿಯಃ ಭವತಿ =ಮೂರು ವಿಧದಿಂದ ಪ್ರಿಯವಾಗಿದೆ. ತಥಾ= ಅದೇ ರೀತಿ, ಯಜ್ಞಃ ತಪಃ ದಾನಂ =ಯಜ್ಞ ತಪ ದಾನಗಳು ಮೂರು ವಿಧ, ತೇಷಾಂ =ಅವುಗಳ, ಇಮಂ ಭೇದಂ ಶೃಣು= ಈ ಭೇದವನ್ನು ಕೇಳು.

**ವಿವರಣ:**–"ಪಾರ್ಥ, ಹೇಗೆ ಪೂಜೆಯು ತ್ರಿವಿಧವೋ ಹಾಗೆ ಆಹಾರ ಯಜ್ಞ ತಪ ದಾನಗಳೂ ತ್ರಿವಿಧ. ಸಾತ್ವಿಕ ಆಹಾರಾದಿಗಳು ಸಾಧನೆಗೆ ಸಹಕಾರಿ. ರಾಜಸಿಕ ತಾಮಸಿಕ ಆಹಾರಾದಿಗಳು ಸಾಧನೆಗೆ ಪ್ರತಿಕಾರಿ. ಸಾಧಕನು ಆತ್ಮ ಸಾಕ್ಷಾತ್ಕಾರ ಹೊಂದಬೇಕಾದರೆ ಸಾತ್ವಿಕ ಆಹಾರಾದಿಗಳನ್ನೇ ಸೇವಿಸಬೇಕು."

### ತ್ರಿವಿಧ ಆಹಾರ

ಆಯುಃಸತ್ತ್ವ ಬಲಾರೋಗ್ಯ ಸುಖಪ್ರೀತಿವಿವರ್ಧನಾಃ ।
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥೮॥

**ಅರ್ಥ** :–ಆಯುಸ್ಸತ್ವ ಬಲಾರೋಗ್ಯ ಸುಖಪ್ರೀತಿ ವಿವರ್ಧನಾಃ= ಆಯುಷ್ಯ ಸತ್ವ ಬಲ ಆರೋಗ್ಯ ಸುಖ ಪ್ರೀತಿ ಇವುಗಳನ್ನು ಹೆಚ್ಚಿಸುವ, ರಸ್ಯಾಃ =ಮಧುರ ರಸಯುಕ್ತವಾದ, ಸ್ನಿಗ್ಧಾಃ= ಸ್ನಿಗ್ಧವಾದ ಸ್ಥಿರಾಃ= ಸ್ಥಿರವಾದ ಹೃದ್ಯಾಃ= ಹೃದ್ಯವಾದ ಆಹಾರಾಃ= ಆಹಾರಗಳು ಸಾತ್ವಿಕ ಪ್ರಿಯಾಃ = ಸಾತ್ವಿಕನಿಗೆ ಪ್ರಿಯವಾಗಿವೆ.

**ವಿವರಣೆ:**– ಯಾವ ಆಹಾರ ರಸ ರಸಿತವಾಗಿದೆಯೋ (ರಸ್ಯಾಃ), ಹಾಲು ಮೊಸರು ಬೆಣ್ಣೆ ತುಪ್ಪಗಳಿಂದ ಕೂಡಿದೆಯೋ (ಸ್ನಿಗ್ಧಾಃ), ದೇಹ ಪೋಷಕವಾದ ಪ್ರೋಟೀನುಗಳನ್ನು ಒಳಗೊಂಡಿದೆಯೋ (ಸ್ಥಿರಾಃ), ಹಾಗು ಆಹ್ಲಾದಕರವಾಗಿದೆಯೋ ಅದು ಸಾತ್ವಿಕ. ಅದರ ಸೇವನೆಯಿಂದ ಆಯುಷ್ಯ ಹೆಚ್ಚುವದು. ಅಂತಸ್ಸತ್ವ ಧೈರ್ಯ ಚಿತ್ತಸ್ಥೈರ್ಯಗಳು ಮೈಗೂಡುವವು, ದೈಹಿಕ ಬಲ ವರ್ಧಿಸುವದು. ಆರೋಗ್ಯ ಸಮನಿಸುವದು. ಚಿತ್ತಪ್ರಸನ್ನತಾರೂಪ ಸುಖ ಹಾಗು ಇತರರಿಗೆ ಸಂತೋಷವನೀಯುವ ಪ್ರೇಮಲ ಸ್ವಭಾವ ಬೆಳೆದು ಬರುವದು. ಈ ಆಹಾರ ಸಾತ್ವಿಕ ಜನರಿಗೆ ಇಷ್ಟ.

ಕಟ್ವಮ್ಲಲವಣಾತ್ಯುಷ್ಣ ತೀಕ್ಷ್ಣರೂಕ್ಷವಿದಾಹಿನಃ ।
ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥೯॥

ಅರ್ಥ:– ಕಟು ಆಮ್ಲ ಲವಣ ಅತ್ಯುಷ್ಣ ತೀಕ್ಷ್ಣ ರೂಕ್ಷ ವಿದಾಹಿನಃ ಆಹಾರಾಃ= ಅತಿ ಕಹಿ ಹುಳಿ ಲವಣ ಉಷ್ಣ ಖಾರ ರುಕ್ಷ ಹಾಗು ದಾಹ ಉಂಟುಮಾಡುವ ಆಹಾರಗಳು ದುಃಖ ಶೋಕ ಆಮಯಪ್ರದಾಃ = ದುಃಖ ಶೋಕ ರೋಗಗಳನ್ನು ಉಂಟುಮಾಡುವಂಥವು. (ಅವು) ರಾಜಸಸ್ಯ ಇಷ್ಟಾಃ =ರಾಜಸಿಕನಿಗೆ ಪ್ರಿಯ.

ವಿವರಣ:– ಯಾವ ಆಹಾರವು ಅತಿ ಕಹಿ, ಅತಿ ಹುಳಿ, ಅತಿ ಉಪ್ಪು, ಅತಿ ಉಷ್ಣ, ಅತಿ ತೀಕ್ಷ್ಣ, ಅತಿ ರುಕ್ಷ, ಅತಿ ದಾಹಕರ ಆಗಿದೆಯೋ ಅದು ರಾಜಸಿಕ ಆಹಾರ. ಅದರ ಸೇವನೆಯಿಂದ ದುಃಖ ಶೋಕಗಳು ಹೆಚ್ಚುತ್ತವೆ: ರೋಗ ರುಜಿನ ಗಳು ಬೆಳೆಯುತ್ತವೆ; ಆಯುಷ್ಯ ಕ್ಷೀಣಿಸುತ್ತದೆ. ಈ ರಾಜಸಿಕ ಆಹಾರವು ರಾಜ ಸಿಕರಿಗೆ ಪ್ರಿಯ.

ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।
ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥೧೦॥

ಅರ್ಥ:– ಯತ್= ಯಾವ ಭೋಜನಂ =ಭೋಜನವು ಯಾತಯಾಮಂ ಅಪ ಕ್ವವೊ, ಗತರಸಂ= ರಸಹೀನವೊ, ಪೂತಿ= ದುರ್ಗಂಧಮಯವೊ, ಪರ್ಯುಷಿತಂ= ಹಳಸಿ ದುದೊ, ಉಚ್ಛಿಷ್ಟಂ= ಉಚ್ಛಿಷ್ಟವೊ, ಅಮೇಧ್ಯಃ= ಅಪವಿತ್ರವೋ ತತ್= ಅದು ತಾಮಸ ಪ್ರಿಯಂ= ತಾಮಸನಿಗೆ ಪ್ರಿಯ.

ವಿವರಣ:– ಸರಿಯಾಗಿ ಪಾಕಗೊಂಡಿರದ, ರಸಹೀನವಾದ, ದುರ್ಗಂಧ ಬೀರುವ, ಹಳಸಿದ, ಎಂಜಲಾದ ಹಾಗು ಮದ್ಯ ಮಾಂಸಾದಿಗಳಿಂದ ಕೂಡಿದ ಆಹಾರವು ತಾಮಸಿಕ. ಇದನ್ನು ಸೇವಿಸಿದರೆ ಆಲಸ್ಯ ಪ್ರಮಾದ ನಿದ್ರೆ ಮುಂತಾದ ತಮೋವೃತ್ತಿಗಳು ಬೆಳೆಯುತ್ತವೆ. ತಾಮಸಿಕ ಜನರಿಗೆ ಈ ಆಹಾರ ಪ್ರಿಯವಾಗಿದೆ

ತಾತ್ಪರ್ಯ:– ಯಾವ ಆಹಾರ ಸೇವನೆಯಿಂದ ಆರೋಗ್ಯ, ಪ್ರಸನ್ನತೆ, ಚಿತ್ತಶಾಂತಿ, ಸಂತೃಪ್ತಿ, ಸ್ನೇಹಭಾವ, ಕಾರ್ಯಶೀಲತೆ, ಬುದ್ಧಿವಿಕಾಸಗಳು ಸಾಧ್ಯವೋ ಅದು ಸಾತ್ವಿಕ. ಯಾವ ಆಹಾರದಿಂದ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳು ಉದ್ರೇಕಗೊಳ್ಳುತ್ತವೆಯೋ ಅದು ರಾಜಸಿಕ. ಯಾವ ಆಹಾರದಿಂದ ರೋಗ, ವ್ಯಾಮೋಹ, ಆಲಸ್ಯ, ಬುದ್ಧಿಮಾಂದ್ಯಗಳು ಉಂಟಾಗುತ್ತವೆಯೋ ಅದು ತಾಮಸಿಕ.

## ತ್ರಿವಿಧ ಯಜ್ಞ.

ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।
ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ವಿಕಃ ॥೧೧॥

ಅರ್ಥ:- ಅಫಲಾಕಾಂಕ್ಷಿಭಿಃ=ಫಲಾಕಾಂಕ್ಷೆ ಇಲ್ಲದವರಿಂದ, ಯಷ್ಟವ್ಯಮೇವ ಇತಿ= ಯಜ್ಞವು ಅವಶ್ಯ ಕರಣೀಯವೆಂದು ಭಾವಿಸಿ, ಮನಃ ಸಮಾಧಾಯ=ಮನಸ್ಸನ್ನು ಸ್ಥಿರಗೊಳಿಸಿ ವಿಧಿದೃಷ್ಟಃ=ಶಾಸ್ತ್ರಸಮ್ಮತವಾದ ಯಃ= ಯಾವ ಯಜ್ಞಃ= ಯಜ್ಞವು ಇಜ್ಯತೇ= ಆಚರಿಸ ಲ್ಪಡುತ್ತದೆಯೋ ಸಃ ಸಾತ್ತ್ವಿಕಃ= ಅದು ಸಾತ್ತ್ವಿಕವು.

ವಿವರಣೆ:- "ಧನಂಜಯ, ಐಹಿಕ ಆಮುಷ್ಮಿಕ ಭೋಗ ಭಾಗ್ಯಗಳನ್ನು ಆಶಿಸದೆ, ಕರ್ತವ್ಯಬುದ್ಧಿಯಿಂದ, ಶಾಸ್ತ್ರಸಮ್ಮತವಾಗಿ ತರ್ಪಣಾರೂಪ ಯಜ್ಞ ವನ್ನು ನಿರ್ವಹಿಸಿದರೆ ಅದು ಸಾತ್ತ್ವಿಕಯಜ್ಞ. ಈ ಯಜ್ಞದಲ್ಲಿ ಸರ್ವ ಸಮರ್ಪ ಣೆಗೆ ಪ್ರಪ್ರಥಮ ಪ್ರಾಶಸ್ತ್ಯವಿದೆ. ಈ ಯಜ್ಞದ ಫಲ ಚಿತ್ತಶಾಂತಿ ಹಾಗು ದೇವನ ಅನುಗ್ರಹ."

ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥೧೨॥

ಅರ್ಥ:- ತು=ಆದರೆ, ಫಲಂ= ಫಲವನ್ನು ಅಭಿಸಂಧಾಯ= ಉದ್ದೇಶಿಸಿ ದಂಭಾರ್ಥಮಪಿ ಏವ ಚ= ಮತ್ತು ದಂಭಕ್ಕಾಗಿಯೇ ಯಃ= ಯಾವದು ಇಜ್ಯತೇ= ಯಜಿಸ ಲ್ಪಡುತ್ತದೆಯೋ ತಂ ಯಜ್ಞಂ= ಆ ಯಜ್ಞವನ್ನು ರಾಜಸಂ ವಿದ್ಧಿ= ರಾಜಸವೆಂದು ತಿಳಿ.

ವಿವರಣೆ:- "ಭರತಶ್ರೇಷ್ಠ. ಇಹ ಪರ ಸಂಪದವನ್ನು ಪಡೆಯಬೇಕೆಂಬ ಇಚ್ಛೆಯಿಂದ ಆಡಂಬರ ಪೂರ್ಣವಾಗಿ ಮಾಡಲಾದ ಯಜ್ಞ ರಾಜಸಿಕ. ಇದರಲ್ಲಿ ವೇದ ವಿಧಿಗಳನ್ನು ಅಕ್ಷರಶಃ ಪಾಲಿಸಲಾಗಿದ್ದರೂ ಕಾಮ ಭಾವನೆ ಬೆರೆತುದರಿಂದ ದೇವದರ್ಶನವಾಗಲಿ ಆತ್ಮಜ್ಞಾನವಾಗಲಿ ಸಿದ್ಧಿಸದು."

ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥೧೩॥

ಅರ್ಥ:- ವಿಧಿಹೀನಃ= ವಿಧಿ ಇಲ್ಲದ, ಅಸೃಷ್ಟಾನ್ನಂ= ಅನ್ನದಾನವಿಲ್ಲದ, ಮಂತ್ರ ಹೀನಂ= ಮಂತ್ರವಿಲ್ಲದ, ಅದಕ್ಷಿಣಂ= ದಕ್ಷಿಣೆಯಿಲ್ಲದ, ಶ್ರದ್ಧಾವಿರಹಿತಂ= ಶ್ರದ್ಧಾಶೂನ್ಯ ವಾದ ಯಜ್ಞಂ= ಯಜ್ಞವನ್ನು ತಾಮಸಂ= ತಾಮಸವೆಂದು ಪರಿಚಕ್ಷತೇ= ಹೇಳುತ್ತಾರೆ.

ವಿವರಣೆ:- "ಭಾರತ, ವೇದವಿಧಿ ವಿಧಾನಗಳಿಲ್ಲದೆ, ಅನ್ನವಸ್ತ್ರ ಧನಗಳ ದಾನವಿಲ್ಲದೆ, ಶಾಸ್ತ್ರೋಕ್ತ ಮಂತ್ರ ಪಠಣವಿಲ್ಲದೆ, ಗುರುದಕ್ಷಿಣೆ ಹಾಗು ಶ್ರದ್ಧೆ ನಿಷ್ಠೆಗಳಿಲ್ಲದೆ ಮಾಡಲಾದ ಯಜ್ಞ ತಾಮಸಿಕ. ಇಂಥ ಯಜ್ಞದಿಂದ ಹೃದಯ ಶುದ್ಧಿಯಾಗಲಿ ವಿವೇಕ ಪ್ರಾಪ್ತಿಯಾಗಲಿ ಹೇಗೆ ಸಾಧ್ಯ?"

ತಾತ್ಪರ್ಯ:- ಯಜ್ಞ ಶಬ್ದದ ನಿಜವಾದ ಅರ್ಥ ಸಮರ್ಪಣೆ. ಮಂತ್ರ ತಂತ್ರ ವೇದವಿಧಿ ನಿಯಮಗಳಿಗಿಂತಲೂ ಸಮರ್ಪಣೆಯ ಹಿಂದಿರುವ ಭಾವಕ್ಕೆ ಬೆಲೆಯಿದೆ. ದೀನ ದರಿದ್ರರ, ಪತಿತ ಪಾಮರರ, ಸಕಲ ಜೀವರ ಹಿತಬಯಸಿ ಮಾಡಿದ ಯಜ್ಞ ಪರಮ ಸಾತ್ತ್ವಿಕ. ಸ್ವಾರ್ಥಸಾಧನೆಯ ಉದ್ದೇಶವಿಟ್ಟು ಆಚರಿ ಸಿದ ಯಜ್ಞ ರಾಜಸಿಕ. ಸಮರ್ಪಣೆಯ ಅರ್ಥ ಅರಿಯದೆ ಮನಬಲ್ಲಂತೆ ನಿರ್ವಹಿ ಸಿದ ಯಜ್ಞ ತಾಮಸಿಕ. ಆತ್ಮೋನ್ನತಿಗಾಗಿ ಹಂಬಲಿಸುವ ಪುರುಷನು ಸಾತ್ತ್ವಿಕ

ಯಜ್ಞವನ್ನೇ ಗೈಯಬೇಕು. ತನ್ನಲ್ಲಿರುವ ಸರ್ವವಿಧದ ಸಂಪದವನ್ನು ಲೋಕ ಕಲ್ಯಾಣಕ್ಕಾಗಿ ಅರ್ಪಿಸಬೇಕು.

ತ್ರಿವಿಧ ತಪ

ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥೧೪॥

ದೇವ ದ್ವಿಜ ಗುರು ಪ್ರಾಜ್ಞರ ಪೂಜನ, ಶೌಚ, ಆರ್ಜವ, ಬ್ರಹ್ಮಚರ್ಯ, ಅಹಿಂಸಾ ಇವು ಶಾರೀರತಪವೆಂದು ಹೇಳಲ್ಪಡುತ್ತದೆ.

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥೧೫॥

ಉದ್ವೇಗ ಉಂಟುಮಾಡದ ಸತ್ಯ ಪ್ರಿಯ ಹಿತವಾದ ನುಡಿಯು ಹಾಗು ಸ್ವಾಧ್ಯಾಯ ಅಭ್ಯಸನಗಳು ವಾಙ್ಮಯ ತಪಸ್ಸೆಂದು ಹೇಳಲ್ಪಡುತ್ತದೆ.

ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥೧೬॥

ಮನೋಪ್ರಸನ್ನತೆ, ಸೌಮ್ಯತೆ, ಮೌನ, ಆತ್ಮನಿಗ್ರಹ, ಭಾವಶುದ್ಧಿ, ಇದು ಮಾನಸತಪ ಎಂದು ಹೇಳಲ್ಪಡುತ್ತದೆ.

ವಿವರಣೆ: "ಅತಪ್ತ ತನುಃ ಅಮೃತಂ ನಾಶ್ನುತೇ" ತಪ ಮಾಡದ ದೇಹಿಯು ಅಮೃತತ್ವವನ್ನು ಪಡೆಯುವದಿಲ್ಲ. ತಪಸ್ಸೆಂದರೆ ಸಂಸ್ಕಾರ; ಶುದ್ಧೀಕರಣ ಸಾಧನೆ. ಅದನ್ನು ಆಚರಿಸಿದಾಗಲೇ ಜೀವನು ಪ್ರಾಪಂಚಿಕ ಬಂಧನ ನೀಗಬಲ್ಲ; ಸಂತ ಶರಣ ಋಷಿ ಮುನಿ ಮಹಾತ್ಮನೆನಿಸಬಲ್ಲ. ತಪಸ್ಸು ಮುಕ್ತಿಗೆ ಶ್ರೇಣಿ; ಸಾಧಕನಿಗೆ ಕೈಗೋಲು! ಈ ಸರ್ವಸಾಧಕವಾದ ತಪಸ್ಸು ಮೂರು ಬಗೆಯದು.

(೧) ಶಾರೀರಿಕ ತಪ: ಪರಮಾತ್ಮನ ಪೂಜೆ, ತಾಯಿ ತಂದೆ ಗುರು ಸಂತ ಮಹಾತ್ಮರ ಸೇವೆ, ಬ್ರಹ್ಮಚರ್ಯ ಪಾಲನ, ದೇಹ ಇಂದ್ರಿಯ ವಾಸಸ್ಥಾನಗಳ ಸ್ವಚ್ಛತೆ, ಅಹಿಂಸಾ ಪಾಲನ, ಹಾಗು ನಿರಾಡಂಬರವಾದ ಸರಳ ಜೀವನ ಇವು ಶಾರೀರಿಕ ತಪ.

(೨) ವಾಚಿಕ ತಪ: ಇನ್ನೊಬ್ಬರನ್ನು ಉದ್ವಿಗ್ನಗೊಳಿಸವ, ಸತ್ಯವಾದ, ಪ್ರೇಮಭರಿತವಾದ, ಸಕಲ ಜೀವರಿಗೆ ಹಿತಬಯಸುವ, ಸುಶೀಲ ಮಾತು ಹಾಗು ಸ್ವಾಧ್ಯಾಯ ಅಭ್ಯಾಸಗಳು ವಾಚಿಕತಪ ಎನಿಸಿವೆ.

(೩)ಮಾನಸಿಕ ತಪ: ಮನೋ ಪ್ರಸನ್ನತೆ, ಶಾಂತ ಸೌಮ್ಯತೆ, ಸಂಪ್ರಜ್ಞಾತ ಸಮಾಧಿರೂಪ ಮೌನ, ಸರ್ವವೃತ್ತಿವಿಲಯನರೂಪ ಆತ್ಮನಿಗ್ರಹ, ಕಾಮಾದಿ ವಿಕಾರ ವಿರಹಿತ ಭಾವಶುದ್ಧಿ – ಇವು ಮಾನಸಿಕ ತಪ.

ತಾತ್ಪರ್ಯ:– ತಪಸ್ವಿ ಎಂದರೆ ನಿರ್ವಿಕಲ್ಪ ಸಮಾಧಿ ಸ್ಥಿತಿಯನ್ನು ಅನುಭವಿಸಿದ ಮಹಾತ್ಮ. ಅವನ ಮನಸ್ಸು ಸ್ಫಟಿಕದಷ್ಟು ಸ್ವಚ್ಛ, ಮಲ್ಲಿಗೆಯಷ್ಟು

ಮೃದು ಮಧುರ, ನೀಲ ನೀರಜದಷ್ಟು ಸುಕೋಮಲ. ಅವನ ಮಾತು ಹಿತ ಮಿತ, ಸಕ್ಕರೆಯಷ್ಟು ಸಿಹಿ, ನಿಸ್ತರಂಗ ಸರಸ್ಸಿನಷ್ಟು ಶಾಂತ. ಅವನ ನುಡಿಯಲ್ಲೆಲ್ಲ ಕರುಣೆ ದಯೆ ಸೌಜನ್ಯಗಳು ತುಂಬಿವೆ. ಅವನ ದೇಹವಂತು ಮನುಕುಲದ ಸೇವೆಗಾಗಿ ಮೀಸಲು!

ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥೧೭॥

ಅರ್ಥ:– ಅಫಲಾಕಾಂಕ್ಷಿಭಿಃ= ಫಲಾಶಾರಹಿತರಾದ ಯುಕ್ತೈಃ =ಸಮಾಹಿತ ಪ್ರಜರಾದ ನರೈಃ= ನರರಿಂದ ಪರಮ ಶ್ರದ್ಧಯಾ= ರಮಶ್ರದ್ಧೆಯಿಂದ ತಪ್ತಂ= ಆಚರಿಸಲ್ಪಟ್ಟ ತತ್= ಆ ತ್ರಿವಿಧಂ= (ಶಾರೀರಿಕ, ವಾಚಿಕ, ಮಾನಸಿಕ ಎಂಬ) ತ್ರಿವಿಧ ತಪಃ=ತಪವು ಸಾತ್ತ್ವಿಕಮೆಂದು= ಸಾತ್ತ್ವಿಕವೆಂದು ಪರಿಚಕ್ಷತೇ= ಹೇಳುತ್ತಾರೆ.

ವಿವರಣ:– "ಪಾರ್ಥ, ಲೋಕೋತ್ತರ ಫಲ-ಪದವಿಗಳ ಆಶೆ-ಆಮಿಷವಿಲ್ಲದ, ವಿಷಯಗಳಿಂದ ಒಳ ಸೆಳೆದು ಮನಸ್ಸನ್ನು ಪರಮಾತ್ಮನಲ್ಲಿ ಏಕಾಗ್ರಗೊಳಿಸಿದ ನರರು ಅವಿಚಲ ಶ್ರದ್ಧೆಯಿಂದ ಶಾರೀರಿಕ ವಾಚಿಕ ಮಾನಸಿಕ ತಪವನ್ನು ಆಚರಿಸುತ್ತಾರೆ. ಅಂಥ ತಪವು ಸಾತ್ತ್ವಿಕ. ಅಹಿಂಸೆ, ಭಾವಶುದ್ಧಿ, ಸೌಮ್ಯತೆ ಮುಂತಾದ ಉತ್ಕೃಷ್ಟ ಸುಗುಣಗಳಿಂದ ಕೂಡಿದ ಆ ತಪವು ಸ್ವಹಿತ, ಪರಹಿತ, ಲೋಕಹಿತಗಳನ್ನು ಸಾಧಿಸಿಕೊಡುತ್ತದೆ. ಆತ್ಮದರ್ಶನ ಮತ್ತು ದೇವಸಾಕ್ಷಾತ್ಕಾರಗಳು ಆ ತಪದ ಪಾವನ ಫಲಗಳಾಗಿವೆ!"

ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥೧೮॥

ಅರ್ಥ:– ಸತ್ಕಾರ ಮಾನ ಪೂಜಾರ್ಥಂ=ಸತ್ಕಾರ ಗೌರವ ಪೂಜೆಗಳಿಗಾಗಿ ಯತ್ ತಪಃ= ಯಾವ ತಪಸ್ಸು ದಂಭೇನ ಏವ ಚ= ದಂಭದಿಂದಲೇ ಕ್ರಿಯತೇ= ಮಾಡಲ್ಪಡುತ್ತದೆಯೊ ಚಲಂ= ಚಲವೂ ಅಧ್ರುವಂ= ಅನಿತ್ಯವೂ ಆದ ತತ್= ಅದು ಇಹ= ಇಲ್ಲಿ ರಾಜಸಂ ಪ್ರೋಕ್ತಂ= ರಾಜಸವೆಂದು ಹೇಳಲ್ಪಡುತ್ತದೆ.

ವಿವರಣ:– "ಅರ್ಜುನ, ಕೆಲವು ಜನ ಆದರ-ಸತ್ಕಾರ, ಗೌರವ, ಪೂಜ್ಯತೆ, ಪ್ರತಿಷ್ಠೆ, ಕೀರ್ತಿಗಳನ್ನು ಬಯಸಿ ಆಡಂಬರ ಪೂರ್ಣವಾದ ಘೋರ ತಪಸ್ಸನ್ನು ಆಚರಿಸುತ್ತಾರೆ. ಅಂಥ ತಪ ರಾಜಸಿಕ. ಅದರ ಫಲವು ಕೂಡ ಚಲ-ಅಧ್ರುವ, ವಿನಾಶಿ, ಅಶಾಶ್ವತ!"

ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ
ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥೧೯॥

ಅರ್ಥ:– ಮೂಢಗ್ರಾಹೇಣ= ಅವಿವೇಕದಿಂದ ಆತ್ಮನಃ ಪೀಡಯಾ= ಆತ್ಮ ಪೀಡೆಯ ಮೂಲಕ ವಾ= ಅಥವಾ, ಪರಸ್ಯ= ಇತರರ ಉತ್ಸಾದನಾರ್ಥಂ= ನಾಶಕ್ಕಾಗಿ ಯತ್ ತಪಃ ಕ್ರಿಯತೇ= ಯಾವ ತಪಸ್ಸು ಮಾಡಲ್ಪಡುತ್ತದೆಯೋ ತತ್= ಅದು ತಾಮಸಂ= ತಾಮಸವೆಂದು ಉದಾಹೃತಂ= ಹೇಳಲ್ಪಡುತ್ತದೆ.

ವಿವರಣೆ:- "ಭಾರತ, ಇನ್ನು ಕೆಲವರು ಸತ್ಯವನ್ನರಿಯದ ಮೂಢ ಮತಿಗಳು; ತಮ್ಮ ದೇಹ ಇಂದ್ರಿಯಗಳಿಗೆ ಭಯಂಕರ ಪೀಡೆಯಿತ್ತು ಅತ್ಯುಗ್ರವಾದ ತಪಸ್ಸನ್ನಾಚರಿಸುತ್ತಾರೆ; ಅವರ ತಪಸ್ಸಿನ ಉದ್ದೇಶ ಇತರರ ನಾಶ. ಇಂಥ ಹಿಂಸಾತ್ಮಕ ತಪಸ್ಸು ತಾಮಸಿಕ!"

ತಾತ್ಪರ್ಯ: ಆತ್ಮಜ್ಞಾನ, ದೇವದರ್ಶನ, ಮನುಕುಲದ ಕಲ್ಯಾಣ- ಈ ತ್ರಿವಿಧ ಉದ್ದೇಶಗಳಿಗಾಗಿ ತಮ್ಮ ಜೀವನವನ್ನೇ ತೇಯುವವರು ಸಾತ್ವಿಕ ತಪಸ್ವಿಗಳು. ಅವರ ಮನಸ್ಸು ಸುಸಂಸ್ಕೃತ, ಭಾವ ಪ್ರಶಾಂತ ಹಾಗು ಬುದ್ಧಿ ಪರಿಶುದ್ಧ. ಸ್ವರ್ಗೀಯ ಭೋಗ ವೈಭವಗಳಾಗಲಿ ಇಹ ಲೋಕದ ಅಧಿಕಾರ ಐಶ್ವರ್ಯ ಕೀರ್ತಿಗಳಾಗಲಿ ಅವರ ಮನಸ್ಸನ್ನು ವಿಚಲಗೊಳಿಸವು.

ಧನ, ರಾಜ್ಯ, ಭೂಮಿ, ಸ್ತ್ರೀ, ಪದವಿ, ಪ್ರತಿಷ್ಠೆ, ಪೂಜ್ಯತೆ, ನಾಮ ಮುಂತಾದ ಭೌತಿಕ ವಿಷಯಗಳ ಸಂಪಾದನೆಯ ಉದ್ದೇಶದಿಂದ ಭಯಂಕರವಾದ ತಪಸ್ಸನ್ನು ಆಚರಿಸುವವರು ರಾಜಸಿಕ ತಪಸ್ವಿಗಳು. ಅವರ ಅಂತರಂಗವು ಅಹಂಕಾರದಿಂದ ತುಂಬಿದೆ. ಅವರು ಮೌನವನ್ನೇ ಪರಿಗ್ರಹಿಸಲಿ, ದೇಹೇಂದ್ರಿಯಾದಿಗಳ ಶೋಷಣೆಯನ್ನೇ ಮಾಡಲಿ, ಕಠೋರ ವಿರಕ್ತಿಯನ್ನೇ ಪತ್ಕರಿಸಲಿ ಲೋಕದ ಜನ ನೋಡಿ ಅಚ್ಚರಿ ಪಡಬೇಕು, ಕೊಂಡಾಡಬೇಕು ಎಂಬ ಬಯಕೆ ಅವರದು!

ಅನ್ಯರ ವಸ್ತುವಶೀಕರಣ, ಮಾರಣ, ಉಚ್ಚಾಟನ ಮುಂತಾದ ಹೀನ ಉದ್ದೇಶದಿಂದ ಅತ್ಯುಗ್ರ ತಪಗೈಯುವ ಜನರು ತಾಮಸಿಕ ತಪಸ್ವಿಗಳು. ಅವರ ಬುದ್ಧಿ ಮೂಢ; ಅವರ ಹೃದಯ ಕಲುಷಿತ; ಮನಸ್ಸು ಹಿಂಸಾತ್ಮಕ. ಅವರ ತಪಸ್ಸಿನ ಜ್ವಾಲೆ ದೇವ ದೇವತೆಗಳನ್ನು ನಡುಗಿಸುತ್ತದೆ, ಅಸಂಖ್ಯ ಜೀವಿಗಳನ್ನು ಹುರಿದು ಹಾಕುತ್ತದೆ.

ಸಮಗ್ರ ಮನುಕುಲಕ್ಕೆ ಹಿತಬಯಸಿ ಅಂತ್ಯ ಉಸಿರಿನ ವರೆಗೆ ಶ್ರಮಿಸುವವರು ಸಾತ್ವಿಕರು. ಸಮಾಜ ಕಲ್ಯಾಣಕ್ಕಾಗಿ ಕೆಲಕಾಲ ದುಡಿದು ಕೊನೆಗೆ ಧನ ಮಾನ ಸನ್ಮಾನಗಳಿಗಾಗಿ ಹಾತೊರೆವವರು ರಾಜಸಿಕ ತಪಸ್ವಿಗಳು. ಸಮಾಜ ಸೇವೆಯ ಸೋಗಿನಲ್ಲಿ ನಿಷ್ಪಾಪಿ ಜನರ ಜೀವಹೀರುವವರು ತಾಮಸಿಕ ತಪಸ್ವಿಗಳು.

## ತ್ರಿವಿಧ ದಾನಗಳು

ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।
ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ವಿಕಂ ಸ್ಮೃತಮ್ ॥೨೦॥

ಅರ್ಥ:- ದಾತವ್ಯಂ= ದಾನಮಾಡುವದು ಕರ್ತವ್ಯವೆಂದು ಭಾವಿಸಿ ಯದ್ದಾನಂ= ಯಾವ ದಾನವು ಅನುಪಕಾರಿಣೇ= ಪ್ರತ್ಯುಪಕಾರ ಮಾಡಲಸಮರ್ಥನಾದವನಿಗೆ ದೇಶೇ ಕಾಲೇ ಚ ಪಾತ್ರೇ ಚ= ಯೋಗ್ಯ ದೇಶ-ಕಾಲ-ಪಾತ್ರಗಳಲ್ಲಿ ದೀಯತೇ= ಕೊಡಲ್ಪಡುವದೋ ತತ್ ದಾನಂ= ಆ ದಾನವು ಸಾತ್ವಿಕಂ= ಸಾತ್ವಿಕವೆಂದು ಸ್ಮೃತಂ= ಹೇಳಲ್ಪಟ್ಟಿದೆ.

ವಿವರಣೆ:- ತನ್ನಲ್ಲಿ ಇರುವ ಅನ್ನ ವಸ್ತ್ರ ವಸತಿ ಧನ ವಿದ್ಯೆ ಮುಂತಾದವುಗಳನ್ನು ಇನ್ನೊಬ್ಬರಿಗೆ ನೀಡುವದು ದಾನ. ಇದು ಸಾತ್ವಿಕ ರಾಜಸಿಕ

ತಾಮಸಿಕ ಎಂದು ಮೂರುಬಗೆ.

ಭಗವಂತ:– "ಅರ್ಜುನ, ಪ್ರತ್ಯುಪಕಾರ ಮಾಡಲು ಅಸಮರ್ಥರಾದ ವ್ಯಕ್ತಿಗಳಿಗೆ ಯೋಗ್ಯ ಕಾಲ ಹಾಗು ದೇಶಗಳಲ್ಲಿ ಕರ್ತವ್ಯಬುದ್ಧಿಯಿಂದ ಧನ ಧಾನ್ಯಾದಿಗಳನ್ನು ಅರ್ಪಿಸಿದರೆ ಅದು ಸಾತ್ವಿಕ ದಾನ."

ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।
ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥೨೧॥

ಅರ್ಥ:– ಯತ್= ಯಾವುದು ಪ್ರತ್ಯುಪಕಾರಾರ್ಥಂ= ಪ್ರತ್ಯುಪಕಾರ ಪಡೆಯುವ ನಿರೀಕ್ಷೆಯಿಂದ ವಾ= ಅಥವಾ ಪುನಃ= ಪುನಃ ಫಲಮುದ್ದಿಶ್ಯ= ಫಲವನ್ನು ಉದ್ದೇಶಿಸಿ ಪರಿ ಕ್ಲಿಷ್ಟಂ= ಅಪ್ರಸನ್ನ ಭಾವದಿಂದ ದೀಯತೇ= ಕೊಡಲ್ಪಡುವದೋ ತದ್ದಾನಂ ರಾಜಸಂ= ಆ ದಾನವು ರಾಜಸವೆಂದು ಉದಾಹೃತಂ= ಹೇಳಲ್ಪಟ್ಟಿದೆ.

ವಿವರಣೆ:– "ಕೌಂತೇಯ, ಪ್ರತ್ಯುಪಕಾರವನ್ನು ಅಪೇಕ್ಷಿಸಿ, ಪ್ರತಿಫಲವನ್ನು ಪಡೆಯ ಬಯಸಿ ಮಾಡಲಾಗುವ ದಾನವು ರಾಜಸಿಕ. ಈ ದಾನ ಈಯುವಾಗಿನ ಭಾವವು ಪ್ರಸನ್ನತೆಯದಲ್ಲ, ಖಿನ್ನತೆಯದು."

ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।
ಅಸತ್ ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥೨೨॥

ಅರ್ಥ:– ಯದ್ದಾನಂ= ಯಾವ ದಾನವು ಅದೇಶ ಕಾಲೇ= ಅಯೋಗ್ಯ ದೇಶ ಕಾಲ ಗಳಲ್ಲಿ ಅಪಾತ್ರೇಭ್ಯಃ= ಅಪಾತ್ರರಿಗೆ ಅಸತ್ಕೃತಂ= ಸತ್ಕಾರವಿಲ್ಲದೆ ಅವಜ್ಞಾತಂ= ತಿರಸ್ಕಾರ ದಿಂದ ದೀಯತೇ= ಕೊಡಲ್ಪಡುತ್ತದೆಯೋ ತತ್ತಾಮಸಂ= ಅದು ತಾಮಸವೆಂದು ಉದಾ ಹೃತಂ= ಹೇಳಲ್ಪಟ್ಟಿದೆ.

ವಿವರಣೆ:– ಭಗವಂತ:– "ಭರತರ್ಷಭ, ಅಯೋಗ್ಯ ದೇಶ ಹಾಗು ಅಯುಕ್ತವಾದ ಸಮಯಗಳಲ್ಲಿ ಅಯೋಗ್ಯ ವ್ಯಕ್ತಿಗಳಿಗೆ ತಿರಸ್ಕಾರಭಾವದಿಂದ ಕೊಡುವ ದಾನವು ತಾಮಸಿಕ."

ತಾತ್ಪರ್ಯ:– ಮನುಷ್ಯರಲ್ಲಿ ಸಂಪಾದನಾ ಸಾಮರ್ಥ್ಯವಿದೆ. ಕೆಲವರು ಧನ, ಭೂಮಿಗಳನ್ನು ಗಳಿಸುತ್ತಾರೆ; ಇನ್ನು ಕೆಲವರು ವಿದ್ಯೆ ಕಲೆ ಶಕ್ತಿಗಳನ್ನು ಅಂಗವಿಸಿ ಕೊಳ್ಳುತ್ತಾರೆ; ಮತ್ತೆ ಕೆಲವರು ಅಧಿಕಾರ ಜನಬಲಗಳನ್ನು ಪಡೆಯುತ್ತಾರೆ; ಬೇರೆ ಕೆಲವರು ಅನುಭವ, ಆತ್ಮವಿದ್ಯೆಗಳನ್ನು ಸಾಧಿಸುತ್ತಾರೆ. ಹೀಗೆ ವಿವಿಧ ವಸ್ತುಗಳನ್ನು ಸಂಗ್ರಹಿಸಿದವರಿಗೆ ಸಿರಿವಂತರೆಂದು ಸಂಕೇತ. ಜಗತ್ತಿನಲ್ಲಿ ಈ ಸಿರಿ ವಂತರ ಸಂಖ್ಯೆ ಬಹು ಚಿಕ್ಕದು. ಉಳಿದ ಕೋಟ್ಯಂತರ ಜನರು ಬಡವರು, ನಿರ್ಭಾ ಸಿತರು ಅಜ್ಞರು, ಅಶಿಕ್ಷಿತರು, ಕಲಾವಿಹೀನರು, ನಿರ್ಬಲರು, ದಲಿತರು, ಪತಿ ತರು. ಆ ಉಳ್ಳ ಸಿರಿವಂತರು ಈ ಇಲ್ಲದ ಜನತೆಗೆ ತಮ್ಮಲ್ಲಿರುವ ಸಂಪದವನ್ನು ನೀಡಿ ಸಂತೋಷ ಪಡಿಸುವದಕ್ಕೆ ದಾನವೆನ್ನುತ್ತಾರೆ. ಈ ದಾನದಲ್ಲಿ ಕೊಡುವ ವಸ್ತುವಿಗಿಂತ ಕೊಡುವಾಗಿನ ಭಾವಕ್ಕೆ ಪ್ರಾಧಾನ್ಯತೆ ಇದೆ. ಜನತೆಗೆ ಹಿತವಾಗಲಿ ಎಂಬ ಸಹೃದಯತೆಯಿಂದ ಇತ್ತ ದಾನ ಸಾತ್ವಿಕ; ಮಾನ ಗೌರವ ಕೀರ್ತಿಗಳನ್ನು

ಗಳಿಸಬೇಕೆಂಬ ಸ್ವಾರ್ಥ ಬುದ್ಧಿಯಿಂದ ಇತ್ತ ದಾನ ರಾಜಸಿಕ; ಹೇಯ ತಿರಸ್ಕಾರ ಭಾವನೆಯಿಂದ ಅಯೋಗ್ಯ ವ್ಯಕ್ತಿಗಳಿಗೆ ಕೊಟ್ಟ ದಾನ ತಾಮಸಿಕ.

ಸಾತ್ವಿಕ ದಾನಿಗಳ ಹೃದಯ ಕೋಮಲ; ಜನತೆಯ ಸೇವೆ ಎಂದರೆ ಜನಾರ್ದನನ ಸೇವೆ ಎಂದವರ ಭಾವ. ಅವರ ದೃಷ್ಟಿಯಲ್ಲಿ ವಿಶ್ವದ ಸಂಪತ್ತೆಲ್ಲ ದೇವನದು; ವಿಶ್ವದ ದೀನ ದಲಿತರೆಲ್ಲ ಭಗವಂತನ ಸಾಕಾರರೂಪರು. ಆ ಸಾಕಾರ ದೇವನ ಅರ್ಚಕರಾದ ಅವರು ಪ್ರತಿಫಲದ ತಿಲಮಾತ್ರ ಆಶೆಯೂ ಇಲ್ಲದೆ ತಮ್ಮದನ್ನೆಲ್ಲ ನೀಡುತ್ತಾರೆ. ದುಃಖಿಗಳ ಸುಖ ಸಮೃದ್ಧಿಗಾಗಿ ಹೆಣಗುತ್ತಾರೆ. ಇಂಥ ದೇಶದಲ್ಲಿಯೇ ದಾನಮಾಡಬೇಕು, ಇಂಥ ಸಮಯದಲ್ಲಿಯೇ ನೀಡಬೇಕು, ಇಂಥ ಜಾತಿಯವರಿಗೆಯೇ ಕೊಡಬೇಕು ಎಂಬ ಭಾವ ಇವರದಲ್ಲ.

ರಾಜಸ ದಾನಿಯು ಸ್ವಾರ್ಥಸಾಧಕ. ಸಮಾಜದಲ್ಲಿ ಸ್ಥಾನ ಮಾನ ಘನತೆ ಗೌರವಗಳು ಹೆಚ್ಚುವಂತಿದ್ದರೆ ಮಾತ್ರ ಯಥೇಚ್ಛೆಯಾಗಿ ದಾನ ಧರ್ಮ ಮಾಡುತ್ತಾನೆ, ಬಾವಿ ಕೆರೆ ಕಾಲುವೆ ಗುಡಿ ಗೋಪುರಗಳನ್ನು ಕಟ್ಟಿಸುತ್ತಾನೆ. ಯಾಗ ಯಜ್ಞ ನೆರವೇರಿಸಿ ಬ್ರಾಹ್ಮಣಾದಿ ಉಚ್ಚವರ್ಣೀಯರಿಗೆ ಹೇರಳ ದ್ರವ್ಯವನ್ನು ದಕ್ಷಿಣೆ ಈಯುತ್ತಾನೆ. ದೊಡ್ಡವನೆನಿಸಿಕೊಳ್ಳಬೇಕು, ಪುಣ್ಯ ಸಂಚಯ ಮಾಡಿ ಸ್ವರ್ಗೀಯ ಭೋಗ ಪಡೆಯಬೇಕು ಎಂಬ ಉದ್ದೇಶದಿಂದ ತೀರ್ಥಕ್ಷೇತ್ರಾದಿ ದೇಶಗಳಲ್ಲಿ ಹಾಗು ಪರ್ವಕಾಲದಲ್ಲಿ ದ್ವಿಜ, ಗುರು, ಆಚಾರ್ಯ ಮುಂತಾದವರಿಗೆ ಧನ ಈಯುತ್ತಾನೆ.

ತಾಮಸ ದಾನಿಯಂತು ಅಪ್ರಬುದ್ಧ. ದುರ್ಭಿಕ್ಷ ಪ್ರದೇಶಗಳಲ್ಲಿ, ಕ್ಷಾಮ ಕಾಲದಲ್ಲಿ, ಕಂಗಾಲ ಜನತೆಗೆ ದಾನ ನೀಡಬೇಕೆಂಬ ತಿಳಿವೇ ಇವನಿಗಿಲ್ಲ. ದೇಶ ಸುಖ ಸಮೃದ್ಧವಾದಾಗ, ಎಲ್ಲೆಡೆ ಸುಭಿಕ್ಷೆ ಉಂಟಾದಾಗ, ತಿಂದು ತೇಗಿದ ಜನಾಂಗಕ್ಕೆ ಒತ್ತಾಯದಿಂದ ಅನ್ನ ಧನ ವಸನಗಳ ದಾನ ಕೊಡುವ ಈತ ದೀನ ದಲಿತರನ್ನು ಕಡೆಗಣಿಸುತ್ತಾನೆ. ಕಳ್ಳರಿಗೆ, ಕುಡುಕರಿಗೆ, ಜೂಜುಗಾರರಿಗೆ, ಮೂರ್ಖರಿಗೆ ಮನಬಂದಂತೆ ಧನ ಸುರಿಯುತ್ತಾನೆ.

ಈ ಮೂವರಲ್ಲಿ ಸಾತ್ವಿಕ ದಾನಿಯು ಶ್ರೇಷ್ಠ. ಅವನಿಂದಲೇ ಲೋಕಕ್ಕೆ ಹಿತ. ಅವನ ಕಾಸು ಕಾಸು ಕೂಡ ಧರ್ಮ ಪ್ರಚಾರಕ್ಕೆ, ದರಿದ್ರರ ಸೇವೆಗೆ, ಸಾಮಾಜಿಕ ಕಾರ್ಯಗಳಿಗೆ, ಜ್ಞಾನಾಭಿವೃದ್ಧಿಗೆ ಉಪಯೋಗವಾಗುತ್ತದೆ. ಗುರುಗಳ ಮಹಾತ್ಮರ ಸೇವೆಯಲ್ಲಿ ತನ್ನದನ್ನೆಲ್ಲ ಸಮರ್ಪಿಸಿಕೊಂಡ ಅವನೇ ಧರ್ಮಪ್ರತಿಪಾಲಕ, ನೀತಿ ನ್ಯಾಯಗಳ ರಕ್ಷಕ, ದೇವಕೃಪೆಗೆ ಪಾತ್ರ!

ಸಂಬಂಧ:—ತಾಮಸಿಕ ರಾಜಸಿಕ ಜನರ ಹೃದಯದಲ್ಲಿ ಅಹಂಭಾವ ತುಂಬಿಕೊಂಡುದರಿಂದ ಅವರು ಆಚರಿಸಿದ ಯಜ್ಞಾದಿಗಳು ದೋಷಯುಕ್ತವಾಗಿವೆ ಎಂಬುದಂತು ನಿಜ, ಆದರೆ ಸಾತ್ವಿಕ ಜನರ ಹೃದಯವೂ ಸಂಪೂರ್ಣ ನಿಷ್ಕಲಂಕವಾಗಿದೆ ಎಂದು ಹೇಳುವದು ಸಾಧ್ಯವಿಲ್ಲ. ಅವರಲ್ಲಿಯೂ ಅತಿ ಸೂಕ್ಷ್ಮವಾದ ಅಹಂ

ಭಾವವಿದೆ. ಅಹಂಭಾವವು ಸಾತ್ವಿಕವಾದರೇನಾಯ್ತು? ಅದು ಕಲಂಕವಲ್ಲವೆ? ಭಗವಂತನು ಮುಂದಿನ ಮಂತ್ರಗಳಲ್ಲಿ ಸಾತ್ವಿಕ ಯಜ್ಞಾದಿಗಳನ್ನು ಸಂಪೂರ್ಣ ನಿರ್ದುಷ್ಟಗೊಳಿಸುವ ತಾತ್ವಿಕ ಉಪಾಯವನ್ನು ವಿವರಿಸಿದ್ದಾನೆ.

ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ।
ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥೨೩॥

ಅರ್ಥ:– ಓಂ ತತ್ಸತ್ ಇತಿ= ಓಂ ತತ್ ಸತ್ ಎಂದು ಬ್ರಹ್ಮಣಃ= ಬ್ರಹ್ಮಕ್ಕೆ ತ್ರಿವಿಧಃ =ಮೂರು ವಿಧವಾದ ನಿರ್ದೇಶಃ=ನಾಮ ನಿರ್ದೇಶನವು ಸ್ಮೃತಃ=ಹೇಳಲ್ಪಟ್ಟಿದೆ ತೇನ=ಅದರ ಮೂಲಕ ಪುರಾ= ಹಿಂದೆ ಬ್ರಾಹ್ಮಣಾಃ ವೇದಾ ಚ ಯಜ್ಞಾ ಚ= ಬ್ರಾಹ್ಮಣರೂ ವೇದಗಳೂ ಯಜ್ಞಗಳೂ ವಿಹಿತಾಃ= ರಚಿತವಾಗಿವೆ.

ವಿವರಣೆ:- (೧)ಬ್ರಹ್ಮ:- ಅನಂತ ಚೇತನ! ವಿಶ್ವದ ಆದ್ಯಂತಗಳಲ್ಲಿ ವ್ಯಾಪಿಸಿದ ಚಿದಾಕಾಶ! ದೇಶ ಕಾಲ ವಸ್ತುಮಿತಿಗಳಿಲ್ಲದ ಅಖಂಡ ಚಿದ್ಘನವಸ್ತು! ಅದು ಪರಮ ಆತ್ಮ! ಪ್ರಶಾಂತ ಸಾಗರ ಶಿವ!

"ನಾಂತಃ ಪ್ರಜ್ಞಂ ನ ಬಹಿಃ ಪ್ರಜ್ಞಂ ನೋಽಭಯತಃ ಪ್ರಜ್ಞಮ್ ।
ನ ಪ್ರಜ್ಞಾನಘನಂ ನ ಪ್ರಜ್ಞಂ ನಾಪ್ರಜ್ಞಮ್ ॥
ಅದೃಷ್ಟಂ ಅವ್ಯವಹಾರ್ಯಂ ಅಗ್ರಾಹ್ಯಂ ಅಲಕ್ಷಣಮ್ ।
ಅಚಿಂತ್ಯಂ ಅವ್ಯಪದೇಶ್ಯಂ ಏಕಾತ್ಮಪ್ರತ್ಯಯಸಾರಮ್ ॥
ಪ್ರಪಂಚೋಪಶಮಂ ಶಾಂತಂ ಶಿವಂ ಅದ್ವೈತಮ್ ।
ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ ॥" (ಮಾಂಡೂಕ್ಯ)

(ಅ) ಬಹಿಃ ಪ್ರಜ್ಞ:– ಜಾಗ್ರ ಅವಸ್ಥೆಯಲ್ಲಿ ಶಬ್ದಾದಿ ವಿಷಯಗಳನ್ನು ಪ್ರಕಾಶಿಸುವ ವಿಶ್ವಜೀವ. (ಬ) ಅಂತಃ ಪ್ರಜ್ಞ: ಸ್ವಪ್ನಾವಸ್ಥೆಯಲ್ಲಿ ಸ್ವಾಪ್ನಿಕ ವಿಷಯಗಳನ್ನು ಪ್ರಕಾಶಿಸುವ ತೈಜಸಜೀವ. (ಕ) ಉಭಯ ಪ್ರಜ್ಞ: ಬಾಹ್ಯ ಹಾಗು ಅಂತರಿಕ ಸೃಷ್ಟಿಗಳನ್ನು ಪ್ರಕಾಶಿಸುವ ಚೇತನ. (ಡ) ಪ್ರಜ್ಞಾನ ಘನ: ನಿದ್ರಾವಸ್ಥೆಯಲ್ಲಿ ಸುಷುಪ್ತಿಗತ ವಿಷಯ ಪ್ರಕಾಶಿಸುವ ಪ್ರಾಜ್ಞಜೀವ. (ಇ) ಪ್ರಜ್ಞ: ಅಂತರಂಗಸ್ಥ ಜ್ಞಾನವನ್ನು ಪ್ರಕಾಶಿಸುವ ಚೇತನ. (ಫ) ಅಪ್ರಜ್ಞ: ಮನೋಗತ ಅಜ್ಞಾನವನ್ನು ಪ್ರಕಾಶಿಸುವ ಚೇತನ. ಪರಬ್ರಹ್ಮ ಪರಮಾತ್ಮನು ಈ ಆರೂ ಪ್ರಜ್ಞಗಳಲ್ಲ. ಅವನು ಅವುಗಳ ಪರಮ ಮೂಲ ಚೈತನ್ಯ! ಅವನು ಅದೃಷ್ಟ ('ಇಂದ್ರಿಯಾವೇದ್ಯ), ಅವ್ಯವಹಾರ್ಯ (ಅವಸ್ಥಾರಹಿತ), ಅಗ್ರಾಹ್ಯ (ಮನಸ್ಸಿಗೆ ಅಗೋಚರ), ಅಲಕ್ಷಣ (ಗುಣ ಲಕ್ಷಣಗಳಿಲ್ಲದ), ಅಚಿಂತ್ಯ (ಬುದ್ಧಿಗೆ ಅಗಮ್ಯ), ಅವ್ಯಪದೇಶ್ಯ (ಶಬ್ದಕ್ಕೆ ಅಗಮ್ಯ); ಅವನು ಅದ್ವಯಾತ್ಮ, ಜ್ಞಾನ ಸಾಗರ, ಪ್ರಪಂಚೋಪಶಮ (ಪ್ರಪಂಚ ಪ್ರವಾಹವು ಅವನಲ್ಲಿ ಶಾಂತವಾಗಿದ), ಪ್ರಶಾಂತ, ಕಲ್ಯಾಣರೂಪ, ಅದ್ವಯ, ಚತುರ್ಥ, (ಅವಸ್ಥಾ ತ್ರಯದಾಚೆ ನೆಲೆಸಿದವ); ಹೀಗೆ ಬ್ರಹ್ಮಜ್ಞಾನಿಗಳು ತಿಳಿಯುತ್ತಾರೆ, ಆ ಆತ್ಮನೇ ತಿಳಿದುಕೊಳ್ಳಲು ಯೋಗ್ಯ ವಸ್ತು!

(೨) ಓಂ ತತ್ ಸತ್:– ಆ ಅವರ್ಣನೀಯ ಪರಮ ಚೈತನ್ಯ ದೇವನಿಗೆ ಈ ಮೂರು ಅಭಿಧಾನಗಳು. ಇವುಗಳನ್ನು ಒಂದೊಂದಾಗಿ ತಿಳಿಯೋಣ.

(ಅ) ಓಂ:– ವೇದ ವೇದಾಂತ ಆಗಮ ಸಿದ್ಧಾಂತಗಳಲ್ಲೆಲ್ಲ ಕಾಣಬರುವ ಈ ಪ್ರಣವಾಕ್ಷರವು ಪವಿತ್ರವಾಗಿದೆ. ಋಷಿಗಳು ಈ ಅಕ್ಷರವನ್ನು ಹೃದಯ ತುಂಬಿ ಕೊಂಡಾಡಿದ್ದಾರೆ.

"ವಾಚ್ಯಃ ಸಃ ಈಶ್ವರಃ ಪ್ರೋಕ್ತಃ । ವಾಚಕಃ ಪ್ರಣವಃ ಸ್ಮೃತಃ ॥"

ಸರ್ವೇಶ್ವರನಾದ ಆ ಪ್ರಭುವು ವಾಚ್ಯನೆಂದು ಹೇಳಲ್ಪಟ್ಟಿದ್ದಾನೆ. ಪಾವನತಮವಾದ ಪ್ರಣವವು ಆ ದೇವನ ವಾಚಕವೆಂದು ವರ್ಣಿತವಾಗಿದೆ.

"ಸರ್ವೇ ವೇದಾ ಯತ್ಪದಮಾಮನಂತಿ
ತಪಾಂಸಿ ಸರ್ವಾಣಿ ಚ ಯದ್ವದಂತಿ ॥
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥" (ಕಠ ೧-೨-೧೫)

ಋಗಾದಿ ಸಕಲ ವೇದಗಳು ಯಾವ ಪದವನ್ನು ಪ್ರತಿಪಾದಿಸುತ್ತವೆಯೋ, ಸರ್ವ ವಿಧದ ತಪಗಳು ಯಾವುದನ್ನು ವರ್ಣಿಸುತ್ತವೆಯೋ, ಯಾವುದನ್ನು ಇಚ್ಛಿಸಿ ಬ್ರಹ್ಮಚರ್ಯವನ್ನು ಆಚರಿಸುತ್ತಾರೆಯೋ ಆ ಪದವನ್ನು ನಿನಗೆ ಸಂಕ್ಷೇಪದಲ್ಲಿ ಹೇಳುತ್ತೇನೆ. 'ಓಂ' ಎಂಬುದೇ ಈ ತತ್ತ್ವ!

"ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್
ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥" (ಕಠ ೧-೨-೧೬)

ಈ ಅಕ್ಷರವೇ ಶಿವಶಕ್ತಿಸಂಪುಟರೂಪ ಅಪರಬ್ರಹ್ಮ; ಈ ಅಕ್ಷರವೇ ನಿರುಪಾಧಿಕ ಪರಬ್ರಹ್ಮ. ಈ ಅಕ್ಷರವನ್ನು ತಿಳಿದರೆ ಯಾವನು ಯಾವುದನ್ನು ಇಚ್ಛಿಸುತ್ತಾನೆಯೋ ಅವನಿಗೆ ಅದು ದೊರೆಯುತ್ತದೆ.

ಓಂ ಪ್ರಣವವು ಕಾಲಪ್ರವಾಹದ ಆಧಾರಭೂಮಿ! ಭೌತದೇಹದಿಂದ ಸಾಕ್ಷಿದೇವನವರೆಗೂ ಸ್ಪಂದಿಸುವ ದಿವ್ಯಶಕ್ತಿ! ಬಾಹ್ಯಾಂತರವೆಂಬ ಭೇದ ಕಲ್ಪನೆ ಉದಿಸುವ ಮೊದಲು ಎಲ್ಲೆಲ್ಲೂ ತುಂಬಿನಿಂತ ಮಹಾನ್ ತತ್ತ್ವ! ಜೀವ ಶಿವರ ಸುಳುಹುದೋರುವ ಮುನ್ನ ನಿತಾಂತವಾಗಿ ವ್ಯಾಪಿಸಿದ ಅಮೃತವಸ್ತು! ಆದು ಆನಂದ ಸಾಗರ! ಅರಿವಿನ ಅನಂತ ಆಕಾಶ! ಸಾಧನೆಯ ಕೊನೆಯ ಹಂತವನೇರಿ ಪರಮಾತ್ಮನಲ್ಲಿ ಬೆರೆತು ನಿಬ್ಬೆರಗಾದ ಮಹರ್ಷಿಗಳು ಉತ್ಥಾನರಾದಾಗ ಉಚ್ಚರಿಸುವ ಪ್ರಪ್ರಥಮಾಕ್ಷರವೀ ಪವಿತ್ರ ಪ್ರಣವ!

(ಬ) ತತ್: ಇದು ಕೂಡ ಮುನಿಜನ ಮಾನ್ಯವಾದ ಪದ. ವೇದೋಪನಿಷತ್ತುಗಳಲ್ಲಿ ಮೇಲಿಂದ ಮೇಲೆ ಉಪಯೋಗಿಸಲ್ಪಡುವ ಈ ಪರಮ ಮಂಗಲ ರೂಪ. ಜೀವನನ್ನು ಬ್ರಹ್ಮಾನಂದ ಶರಧಿಯಲ್ಲಿ ಸಮಾವೇಶಗೊಳಿಸುವ ಬಲ ಇದಕ್ಕಿದೆ. ಕೆಳಗಿನ ಪ್ರಮಾಣ ವಚನಗಳಲ್ಲಿ ಈ ಶಬ್ದದ ಮಹತಿಯನ್ನು ಕಾಣಬೇಕು.

"ತದಿತಿ ವಾ ಏತಸ್ಯ ಮಹತಃ ಭೂತಸ್ಯ ನಾಮ ಭವತೀತಿ ।"

ಅಣುವಿಗೆ ಅಣು, ಮಹತ್ತಿಗೆ ಮಹತ್ತು ಯಾವುದೋ ಅಂಥ ನಿಸ್ಸೀಮ ಪರಿಪೂರ್ಣ ಪರಮಾತ್ಮನ ಪಾವನ ನಾಮವೇ 'ತತ್'.

"ತತ್ತ್ವಮಸಿ" (ಯಾವುದು ಸಮಷ್ಟಿ ವಿಶ್ವದಲ್ಲೆಲ್ಲ ಹಾಸು ಹೊಕ್ಕಾಗಿ ಅದ ರಾಚೆಗೂ ವ್ಯಾಪಿಸಿದೆಯೋ, ಯಾವುದರ ಆಶ್ರಯದಲ್ಲಿ ಅಸಂಖ್ಯ ಬ್ರಹ್ಮಾಂಡಗಳು ಅಂತರಾಳದಲ್ಲಿ ತೇಲುತ್ತಿವೆಯೋ, ಯಾವುದರಲ್ಲಿ ಕೊನೆಗೊಮ್ಮೆ ಎಲ್ಲವೂ ಅಡಗಿ ಬಿಡುವದೋ, ಯಾವುದು ಧರ್ಮ ಅಧರ್ಮ ಕೃತ ಅಕೃತಗಳಿಂದ ಬೇರೆಯೋ, ಯಾವುದು ಸಾಕಾರ ಸಗುಣ ಸಕ್ರಿಯವಲ್ಲವೋ ಅಂಥ) ಅಮರ ವಿಶ್ವಚೈತನ್ಯವು ತತ್. ವ್ಯಷ್ಟಿ ವಿಶ್ವದಲ್ಲಿ ಬೆಳಗುವ ಸಾಕ್ಷಿ ಚೈತನ್ಯವು ತ್ವಂ. ಆ ತತ್ ಈ ತ್ವಂ ಎರಡೂ ಒಂದೇ ಎಂದು ಬೋಧಿಸುವ ಶಬ್ದವೇ 'ಅಸಿ'. ಇದು ಛಾಂದೋಗ್ಯ ಉಪನಿಷತ್ತಿನ ನುಡಿ. "ತತ್ ವಿದ್ಧಿ" "ತತ್ ಬ್ರಹ್ಮ, ತದ್ವಿಜಿಜ್ಞಾಸಸ್ವ" ಅದು (ತತ್)ವೇ ಬ್ರಹ್ಮ; ಆ ತತ್ತ್ವನ್ನೇ ತಿಳಿದುಕೊ.

(ಕ) ಸತ್:— ಇದು ಪರಮಾತ್ಮನ ನಾಮ. ಕೇವಲ ಅಸ್ತಿತ್ವ ಎಂದು ಈ ತಾತ್ತ್ವಿಕ ಶಬ್ದದ ಅರ್ಥ. "ಸದೇವ ಸೌಮ್ಯ ಇದಮಗ್ರೇ ಆಸೀತ್", "ಏಕಮೇವಾ ದ್ವಿತೀಯಂ" ಸೌಮ್ಯನೆ, (ಚರಾಚರವು ರೂಪುಗೊಳ್ಳುವ, ಅಜಾಂಡ ಬ್ರಹ್ಮಾಂಡ ಗಳು ರಚನೆಗೆ ಬರುವ, ಭಾವ ಬುದ್ಧಿಗಳು ಸ್ಪಷ್ಟವಾಗುವ, ಜ್ಯೋತಿಃ ಕಾಯ ಗಳು ಮಿಂಚಿ ಮಿರುಗುವ) ಮುನ್ನ ಒಂದೇ ಒಂದು ಅದ್ವಯ ವಸ್ತುವು 'ಇತ್ತು'; ಇದೇ 'ಸತ್'! (ಛಾಂದೋಗ್ಯ). ಜಾಗ್ರ ಸ್ವಪ್ನ ಸುಷ್ಟಿಗಳು ಮಾಯವಾದಾಗ ಮನಸ್ಸು ನಿರ್ವಿಕಲ್ಪ ಸಮಾಧಿಯಲ್ಲಿ ಅಚಲಗೊಂಡಾಗ ಈ 'ಸತ್' ವಸ್ತುವಿನ ಅನುಭವ! ಅದರಲ್ಲಿ ಬೆರೆತಾಗ 'ಅಹಂ ಬ್ರಹ್ಮಾಸ್ಮಿ' ಎಂಬ ಅಪೂರ್ವ ಸ್ಫುರಣ.

'ಸತ್' ತ್ರಿಕಾಲಾಬಾಧಿತ! ಅವಿಕೃತವಾದ ಅದು ಸಮಗ್ರ ವಿಶ್ವದ ಪ್ರಭವ, ಪ್ರಳಯ, ಸ್ಥಾನ! ಸತ್ತು ಸಾಗರ, ವಿಶ್ವದ ವಸ್ತುಗಳೆಲ್ಲ ತೆರೆಗಳು! ತೆರೆಗಳ ನಾಮ ರೂಪುಗಳನ್ನು ಮರೆತು ಅಂತರ್ಯದಲ್ಲಿರುವ ಸತ್ತನ್ನು ನೋಡುವವರು ದಾರ್ಶ ನಿಕರು.

ದಿವ್ಯ 'ಸತ್' ವಸ್ತುವಿನ ಸಾಕ್ಷಾತ್ಕಾರ ಮಾಡಿಕೊಂಡ ಸತ್ಯದರ್ಶಿಯು ಅಸತ್ಯವಾದ ಸಾಂಸಾರಿಕ ವಿಷಯಗಳನ್ನು ಎಂದಿಗೂ ಆಶಿಸಲಾರ. ಅವನ ಮನ ಬುದ್ಧಿಗಳೆಲ್ಲ ಸತ್ಯದ ಅಡಿಯಲ್ಲಿ ಸಮರ್ಪಿತವಾಗಿವೆ.

(ಖ) ಬ್ರಾಹ್ಮಣಾಃ ವೇದಾಃ ಯಜ್ಞಾಃ...: ಪೂರ್ವದಲ್ಲಿ ಪ್ರಣವರೂಪ ಪರಬ್ರಹ್ಮನಿಂದ ಆತ್ಮಜ್ಞಾನಿಗಳಾದ ಬ್ರಾಹ್ಮಣರು, ತತ್‌ರೂಪ ಪರಬ್ರಹ್ಮದಿಂದ ಆತ್ಮವಿದ್ಯಾನಿಧಿಗಳಾದ ವೇದಗಳು ಹಾಗು ಸತ್‌ರೂಪ ಪರಬ್ರಹ್ಮದಿಂದ ಲೋಕ ಹಿತಕಾರಕ ಯಜ್ಞಯಾಗಗಳು ನಿರ್ಮಾಣಗೊಂಡವು.

ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ

(೨) ಓಂ ತತ್ ಸತ್:– ಆ ಅವರ್ಣನೀಯ ಪರಮ ಚೈತನ್ಯ ದೇವನಿಗೆ ಈ ಮೂರು ಅಭಿದಾನಗಳು. ಇವುಗಳನ್ನು ಒಂದೊಂದಾಗಿ ತಿಳಿಯೋಣ.

(ಅ) ಓಂ:– ವೇದ ವೇದಾಂತ ಆಗಮ ಸಿದ್ಧಾಂತಗಳಲ್ಲೆಲ್ಲ ಕಾಣಬರುವ ಈ ಪ್ರಣವಾಕ್ಷರವು ಪವಿತ್ರವಾಗಿದೆ. ಋಷಿಗಳು ಈ ಅಕ್ಷರವನ್ನು ಹೃದಯ ತುಂಬಿ ಕೊಂಡಾಡಿದ್ದಾರೆ.

"ವಾಚ್ಯಃ ಸಃ ಈಶ್ವರಃ ಪ್ರೋಕ್ತಃ । ವಾಚಕಃ ಪ್ರಣವಃ ಸ್ಮೃತಃ ॥"

ಸರ್ವೇಶ್ವರನಾದ ಆ ಪ್ರಭುವು ವಾಚ್ಯನೆಂದು ಹೇಳಲ್ಪಟ್ಟಿದ್ದಾನೆ. ಪಾವನತಮವಾದ ಪ್ರಣವವು ಆ ದೇವನ ವಾಚಕವೆಂದು ವರ್ಣಿತವಾಗಿದೆ.

"ಸರ್ವೇ ವೇದಾ ಯತ್ಪದಮಾಮನಂತಿ
ತಪಾಂಸಿ ಸರ್ವಾಣಿ ಚ ಯದ್ವದಂತಿ ॥
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥" (ಕಠ ೧-೨-೧೫)

ಋಗಾದಿ ಸಕಲ ವೇದಗಳು ಯಾವ ಪದವನ್ನು ಪ್ರತಿಪಾದಿಸುತ್ತವೆಯೋ, ಸರ್ವ ವಿಧದ ತಪಗಳು ಯಾವುದನ್ನು ವರ್ಣಿಸುತ್ತವೆಯೋ, ಯಾವುದನ್ನು ಇಚ್ಛಿಸಿ ಬ್ರಹ್ಮಚರ್ಯವನ್ನು ಆಚರಿಸುತ್ತಾರೆಯೋ ಆ ಪದವನ್ನು ನಿನಗೆ ಸಂಕ್ಷೇಪದಲ್ಲಿ ಹೇಳುತ್ತೇನೆ. 'ಓಂ' ಎಂಬುದೇ ಈ ತತ್ತ್ವ!

"ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್
ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥" (ಕಠ ೧-೨-೧೬)

ಈ ಅಕ್ಷರವೇ ಶಿವಶಕ್ತಿಸಂಪುಟರೂಪ ಅಪರಬ್ರಹ್ಮ; ಈ ಅಕ್ಷರವೇ ನಿರುಪಾಧಿಕ ಪರಬ್ರಹ್ಮ. ಈ ಅಕ್ಷರವನ್ನು ತಿಳಿದರೆ ಯಾವನು ಯಾವುದನ್ನು ಇಚ್ಛಿಸುತ್ತಾನೆಯೋ ಅವನಿಗೆ ಅದು ದೊರೆಯುತ್ತದೆ.

ಓಂ ಪ್ರಣವವು ಕಾಲಪ್ರವಾಹದ ಆಧಾರಭೂಮಿ! ಭೌತದೇಹದಿಂದ ಸಾಕ್ಷಿದೇವನವರೆಗೂ ಸ್ಪಂದಿಸುವ ದಿವ್ಯಶಕ್ತಿ! ಬಾಹ್ಯಾಂತರವೆಂಬ ಭೇದ ಕಲ್ಪನೆ ಉದಿಸುವ ಮೊದಲು ಎಲ್ಲೆಲ್ಲೂ ತುಂಬಿನಿಂತ ಮಹಾನ್ ತತ್ತ್ವ! ಜೀವ ಶಿವರ ಸುಳುಹುದೋರುವ ಮುನ್ನ ನಿತಾಂತವಾಗಿ ವ್ಯಾಪಿಸಿದ ಅಮೃತವಸ್ತು! ಅದು ಆನಂದ ಸಾಗರ! ಅರಿವಿನ ಅನಂತ ಆಕಾಶ! ಸಾಧನೆಯ ಕೊನೆಯ ಹಂತವನೇರಿ ಪರಮಾತ್ಮನಲ್ಲಿ ಬೆರೆತು ನಿಬ್ಬೆರಗಾದ ಮಹರ್ಷಿಗಳು ಉತ್ಥಾನರಾದಾಗ ಉಚ್ಚರಿಸುವ ಪ್ರಪ್ರಥಮಾಕ್ಷರವೇ ಪವಿತ್ರ ಪ್ರಣವ!

(ಬ) ತತ್: ಇದು ಕೂಡ ಮುನಿಜನ ಮಾನ್ಯವಾದ ಪದ. ವೇದೋಪನಿಷತ್ತುಗಳಲ್ಲಿ ಮೇಲಿಂದ ಮೇಲೆ ಉಪಯೋಗಿಸಲ್ಪಡುವ ಈ ಪರಮ ಮಂಗಲರೂಪ ಜೀವನನ್ನು ಬ್ರಹ್ಮಾನಂದ ಶರಧಿಯಲ್ಲಿ ಸಮಾವೇಶಗೊಳಿಸುವ ಬಲ ಇದಕ್ಕಿದೆ. ಕೆಳಗಿನ ಪ್ರಮಾಣ ವಚನಗಳಲ್ಲಿ ಈ ಶಬ್ದದ ಮಹತಿಯನ್ನು ಕಾಣಬೇಕು.

"ತದಿತಿ ವಾ ಏತಸ್ಯ ಮಹತಃ ಭೂತಸ್ಯ ನಾಮ ಭವತೀತಿ ।"

ಅಣುವಿಗೆ ಅಣು, ಮಹತ್ತಿಗೆ ಮಹತ್ತು ಯಾವುದೋ ಅಂಥ ನಿಸ್ಸೀಮ ಪರಿಪೂರ್ಣ ಪರಮಾತ್ಮನ ಪಾವನ ನಾಮವೇ 'ತತ್'.

"ತತ್ತ್ವಮಸಿ" (ಯಾವುದು ಸಮಷ್ಟಿ ವಿಶ್ವದಲ್ಲೆಲ್ಲ ಹಾಸು ಹೊಕ್ಕಾಗಿ ಅದ ರಾಚೆಗೂ ವ್ಯಾಪಿಸಿದೆಯೋ, ಯಾವುದರ ಆಶ್ರಯದಲ್ಲಿ ಅಸಂಖ್ಯ ಬ್ರಹ್ಮಾಂಡಗಳು ಅಂತರಾಳದಲ್ಲಿ ತೇಲುತ್ತಿವೆಯೋ, ಯಾವುದರಲ್ಲಿ ಕೊನೆಗೊಮ್ಮೆ ಎಲ್ಲವೂ ಅಡಗಿ ಬಿಡುವದೋ, ಯಾವುದು ಧರ್ಮ ಅಧರ್ಮ ಕೃತ ಅಕೃತಗಳಿಂದ ಬೇರೆಯೋ, ಯಾವುದು ಸಾಕಾರ ಸಗುಣ ಸಕ್ರಿಯವಲ್ಲವೋ ಅಂಥ) ಅಮರ ವಿಶ್ವಚೈತನ್ಯವು ತತ್. ವ್ಯಷ್ಟಿ ವಿಶ್ವದಲ್ಲಿ ಬೆಳಗುವ ಸಾಕ್ಷಿ ಚೈತನ್ಯವು ತ್ವಂ. ಆ ತತ್ ಈ ತ್ವಂ ಎರಡೂ ಒಂದೇ ಎಂದು ಬೋಧಿಸುವ ಶಬ್ದವೇ 'ಅಸಿ'. ಇದು ಛಾಂದೋಗ್ಯ ಉಪನಿಷತ್ತಿನ ನುಡಿ. "ತತ್ ವಿದ್ಧಿ" "ತತ್ ಬ್ರಹ್ಮ, ತದ್ವಿಜಿಜ್ಞಾಸಸ್ವ" ಅದು (ತತ್)ವೇ ಬ್ರಹ್ಮ; ಆ ತತ್ತ್ವನ್ನೇ ತಿಳಿದುಕೊ.

(ಕ) ಸತ್:– ಇದು ಪರಮಾತ್ಮನ ನಾಮ. ಕೇವಲ ಅಸ್ತಿತ್ವ ಎಂದು ಈ ತಾತ್ತ್ವಿಕ ಶಬ್ದದ ಅರ್ಥ. "ಸದೇವ ಸೌಮ್ಯ ಇದಮಗ್ರೇ ಆಸೀತ್", "ಏಕಮೇವಾ ದ್ವಿತೀಯಂ" ಸೌಮ್ಯನೆ, (ಚರಾಚರವು ರೂಪುಗೊಳ್ಳುವ, ಅಜಾಂಡ ಬ್ರಹ್ಮಾಂಡ ಗ್ಗಳು ರಚನೆಗೆ ಬರುವ, ಭಾವ ಬುದ್ಧಿಗಳು ಸೃಷ್ಟವಾಗುವ, ಜ್ಯೋತಿಃ ಕಾಯ ಗಳು ಮಿಂಚಿ ಮಿರುಗುವ) ಮುನ್ನ ಒಂದೇ ಒಂದು ಅದ್ವಯ ವಸ್ತುವು 'ಇತ್ತು'; ಇದೇ 'ಸತ್'! (ಛಾಂದೋಗ್ಯ). ಜಾಗ್ರ ಸ್ವಪ್ನ ಸುಪ್ತಿಗಳು ಮಾಯವಾದಾಗ ಮನಸ್ಸು ನಿರ್ವಿಕಲ್ಪ ಸಮಾಧಿಯಲ್ಲಿ ಅಚಲಗೊಂಡಾಗ ಈ 'ಸತ್' ವಸ್ತುವಿನ ಅನುಭವ! ಅದರಲ್ಲಿ ಬೆರೆತಾಗ 'ಅಹಂ ಬ್ರಹ್ಮಾಸ್ಮಿ' ಎಂಬ ಅಪೂರ್ವ ಸ್ಫುರಣ.

'ಸತ್' ತ್ರಿಕಾಲಾಬಾಧಿತ! ಅವಿಕೃತವಾದ ಅದು ಸಮಗ್ರ ವಿಶ್ವದ ಪ್ರಭವ, ಪ್ರಳಯ, ಸ್ಥಾನ! ಸತ್ತು ಸಾಗರ, ವಿಶ್ವದ ವಸ್ತುಗಳೆಲ್ಲ ತೆರೆಗಳು! ತೆರೆಗಳ ನಾಮ ರೂಪುಗಳನ್ನು ಮರೆತು ಅಂತರ್ಯದಲ್ಲಿರುವ ಸತ್ತನ್ನು ನೋಡುವವರು ದಾರ್ಶ ನಿಕರು.

ದಿವ್ಯ 'ಸತ್' ವಸ್ತುವಿನ ಸಾಕ್ಷಾತ್ಕಾರ ಮಾಡಿಕೊಂಡ ಸತ್ಯದರ್ಶಿಯು ಅಸತ್ಯವಾದ ಸಾಂಸಾರಿಕ ವಿಷಯಗಳನ್ನು ಎಂದಿಗೂ ಆಶಿಸಲಾರ. ಅವನ ಮನ ಬುದ್ಧಿಗಳೆಲ್ಲ ಸತ್ಯದ ಅಡಿಯಲ್ಲಿ ಸಮರ್ಪಿತವಾಗಿವೆ.

(ಖ) ಬ್ರಾಹ್ಮಣಾಃ ವೇದಾಃ ಯಜ್ಞಾಃ...: ಪೂರ್ವದಲ್ಲಿ ಪ್ರಣವರೂಪ ಪರಬ್ರಹ್ಮನಿಂದ ಆತ್ಮಜ್ಞಾನಿಗಳಾದ ಬ್ರಾಹ್ಮಣರು, ತತ್‌ರೂಪ ಪರಬ್ರಹ್ಮದಿಂದ ಆತ್ಮವಿದ್ಯಾನಿಧಿಗಳಾದ ವೇದಗಳು ಹಾಗು ಸತ್‌ರೂಪ ಪರಬ್ರಹ್ಮದಿಂದ ಲೋಕ ಹಿತಕಾರಕ ಯಜ್ಞಯಾಗಗಳು ನಿರ್ಮಾಣಗೊಂಡವು.

ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ

ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥೨೪॥

ಅರ್ಥ:- ತಸ್ಮಾತ್= ಆದುದರಿಂದ ಓಂ ಇತಿ= ಓಂ ಎಂದು ಉದಾಹೃತ್ಯ= ಉಚ್ಚ ರಿಸಿ ಬ್ರಹ್ಮವಾದಿನಾಂ= ಬ್ರಹ್ಮವಾದಿಗಳ ವಿಧಾನೋಕ್ತಾಃ= ಶಾಸ್ತ್ರವಿಧಾನೋಕ್ತವಾದ ಯಜ್ಞ ದಾನ ತಪಃಕ್ರಿಯಾಃ= ಯಜ್ಞ ದಾನ ತಪಕ್ರಿಯೆಗಳು ಸತತಂ= ಯಾವಾಗಲೂ ಪ್ರವರ್ತಂತೇ= ಪ್ರಾರಂಭವಾಗುತ್ತವೆ.

ವಿವರಣೆ:- ಭಗವಂತ:- "ಅರ್ಜುನ, ಪ್ರಣವದ ಮಹದರ್ಥವನ್ನು ಅರಿತು ಪರಬ್ರಹ್ಮದಲ್ಲಿ ಸಾಮರಸ್ಯ ಹೊಂದಿದ ಬ್ರಹ್ಮವಾದಿಗಳು ಓಂ ಎಂಬ ಮಂತ್ರ ಉಚ್ಚರಿಸುತ್ತಲೇ ಸಾತ್ವಿಕ ಯಜ್ಞದಾನಾದಿ ಕ್ರಿಯೆಗಳನ್ನು ಪ್ರಾರಂಭಿಸು ತ್ತಾರೆ. ಆದುದರಿಂದ ಅವರ ಕ್ರಿಯೆಗಳು ಅಹಂಕಾರವೆಂಬ ಕಲ್ಮಷರಹಿತವಾಗಿರು ತ್ತವೆ. ಮುಮುಕ್ಷುಗಳು ಕೂಡ ಆ ಬ್ರಹ್ಮವಾದಿಗಳಂತೆಯೇ ಪ್ರಣವದ ಉಚ್ಚಾರ ದೊಂದಿಗೆ ಯಾಗಾದಿಗಳೆನ್ನು ಆಚರಿಸಬೇಕು."

ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।
ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥೨೫॥

ಅರ್ಥ:- ತದಿತಿ ಉದಾಹೃತ್ಯ=ತತ್ ಎಂದು ಉಚ್ಚರಿಸಿ ಫಲಂ ಅನಭಿಸಂಧಾಯ= ಫಲವನಪೇಕ್ಷಿಸದೆ ಮೋಕ್ಷಕಾಂಕ್ಷಿಭಿಃ =ಮೋಕ್ಷಕಾಂಕ್ಷಿಗಳಿಂದ ವಿವಿಧಾಃ ಯಜ್ಞ ತಪಃಕ್ರಿಯಾಃ ದಾನಕ್ರಿಯಾಃ= ವಿವಿಧ ಯಜ್ಞ ತಪ ದಾನಕ್ರಿಯೆಗಳು ಕ್ರಿಯಂತೇ= ಮಾಡಲ್ಪಡುತ್ತವೆ.

ವಿವರಣೆ:- "ಭರತರ್ಷಭ, ಸಾಂಸಾರಿಕ ಭೋಗಗಳ ಬಯಕೆಯ ನೀಗಿ ಮುಕ್ತಿಯನ್ನೇ ಬಯಸುವ ಮುಮುಕ್ಷುಗಳು ಹಾಗು ಸಾಧಕರು ಪ್ರತಿಫಲದ ಆಶೆ ಇಲ್ಲದೆ 'ತತ್' ಎಂಬ ಪವಿತ್ರ ನಾಮವನ್ನುಚ್ಚರಿಸುತ್ತ ಯಜ್ಞ ದಾನ ತಪಗಳನ್ನು ನಿರ್ವಹಿಸಬೇಕು. ಹಾಗೆ ಮಾಡಿದರೆ ಆ ಕ್ರಿಯೆಗಳು ನಿರ್ದೋಷವಾಗುತ್ತವೆ."

ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।
ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥೨೬॥

ಅರ್ಥ:- ಸದ್ಭಾವೇ ಸಾಧು ಭಾವೇ ಚ= ಸತ್(ಎಂದರೆ ಇರುವದು) ಹಾಗು ಸಾಧು (ಎಂದರೆ ಒಳ್ಳೆಯದು) ಈ ಎರಡು ಅರ್ಥದಲ್ಲಿ ಸತ್ ಇತಿ ಏತತ್= ಸತ್ ಎಂಬ ಈ ಪದವು ಪ್ರಯುಜ್ಯತೇ= ಉಪಯೋಗಿಸಲ್ಪಡುತ್ತದೆ. ತಥಾ= ಅದೇ ರೀತಿ ಪ್ರಶಸ್ತೇ ಕರ್ಮಣಿ= ಪ್ರಶಸ್ತ ಕರ್ಮ ಎಂಬ ಅರ್ಥದಲ್ಲಿಯೂ ಸಚ್ಛಬ್ದಃ= ಸತ್ ಶಬ್ದ ಯುಜ್ಯತೇ= ಉಪಯೋಗಿ ಸಲ್ಪಡುತ್ತದೆ.

ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।
ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥೨೭॥

ಅರ್ಥ:- ಯಜ್ಞೇ ದಾನೇ ತಪಸಿ ಚ= ಯಜ್ಞ ದಾನ ಹಾಗು ತಪಸ್ಸಿನಲ್ಲಿ ಯತ್= ಯಾವ ಸ್ಥಿತಿಃ= ಇರುವಿಕೆ ಇದೆಯೋ ಅದು ಸತ್ ಇತಿ= ಸತ್ ಎಂದು ಉಚ್ಯತೇ= ಹೇಳಲ್ಪ ಡುತ್ತದೆ. ಚ= ಮತ್ತು ತದರ್ಥೀಯಂ ಕರ್ಮ ಏವ ಚ= ಅದಕ್ಕಾಗಿ ಮಾಡುವ ಕರ್ಮವೂ ಸತ್ ಇತಿ ಏವ= ಸತ್ ಎಂದೇ ಅಭಿಧೀಯತೇ= ಹೇಳಲ್ಪಡುತ್ತದೆ.

ವಿವರಣೆ:- ಭಗವಂತ:- "ಕೌಂತೇಯ, ಅಸ್ತಿತ್ವ ಶ್ರೇಷ್ಠತೆ ಸಾಧುತ್ವ

ಮುಂತಾದ ಅರ್ಥಗಳು ಸತ್ ಶಬ್ದಕ್ಕಿವೆ. ಮದುವೆ ಮುಂಜಿವೆ ಇತ್ಯಾದಿ ಪ್ರಶಸ್ತ ಕಾರ್ಯಗಳಲ್ಲಿಯೂ ಸತ್ ಶಬ್ದವನ್ನು ಬಳಸುತ್ತಾರೆ. ಸತ್ ವಸ್ತುವು ಪರಮ ಸತ್ಯ, ಅಮರ ಅಸ್ತಿತ್ವ. ಅದು ಇಲ್ಲದ ತಾಣವಿಲ್ಲ. ಅದು ಸಕಲ ಪದಾರ್ಥಗಳ ಆತ್ಮ! ಸರ್ವ ಪ್ರಾಣಿಗಳ ಆಶ್ರಯ! ಯಜ್ಞ ದಾನ ತಪಸ್ಸುಗಳಲ್ಲೆಲ್ಲ ಅದು ಚಿರ ಸ್ಥಾಯಿಯಾಗಿ ನೆಲೆಸಿದೆ. ಅಂಥ ಸರ್ವಭರಿತ 'ಸತ್' ವಸ್ತುವನ್ನು ಸ್ಮರಿಸುತ್ತ ಕರ್ಮ ಮಾಡು. ಆ ಕರ್ಮಗಳು ಪವಿತ್ರ ಎನಿಸುತ್ತವೆ."

ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।
ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥೨೮॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಶ್ರದ್ಧಾತ್ರಯ ವಿಭಾಗಯೋಗೋ ನಾಮ ಸಪ್ತದಶೋಽಧ್ಯಾಯಃ

**ಅರ್ಥ:**- ಅಶ್ರದ್ಧಯಾ= ಅಶ್ರದ್ಧೆಯಿಂದ ಯತ್= ಯಾವುದು, ಹುತಂ= ಹವನ ಮಾಡಲ್ಪಟ್ಟಿದೆಯೋ, ದತ್ತಂ= ದಾನ ಮಾಡಲ್ಪಟ್ಟಿದೆಯೊ, ತಪಃ ತಪ್ತಂ= ತಪಸ್ಸು ಮಾಡಲ್ಪಟ್ಟಿದೆಯೋ, ಚ= ಹಾಗು, ಕೃತಂ= ಕರ್ಮ ಮಾಡಲ್ಪಟ್ಟಿದೆಯೋ, ಅದೆಲ್ಲ, ಅಸದಿತಿ= ಅಸತ್ ಎಂದು ಉಚ್ಯತೇ= ಹೇಳಲ್ಪಟ್ಟಿದೆ. ತತ್= ಅದು ಪ್ರೇತ್ಯ= ಸತ್ತ ಮೇಲಾಗಲಿ, ಇಹ= ಇಲ್ಲಿಯಾಗಲಿ, ನ= ಇಲ್ಲ.

**ವಿವರಣೆ:**– ಭಗವಂತ:–"ಪರಂತಪ, ನಾನು ವಿಶ್ವಂಭರ! ಲೋಕ ಲೋಕಂಗಳ ಪರಮಾಶ್ರಯ! ನನ್ನ ಅಸ್ತಿತ್ವವಿಡಿದೇ ಏನೆಲ್ಲ ಬದುಕುತ್ತಿದೆ; ನನ್ನ ವಿಮಲ ಪ್ರಕಾಶದಲ್ಲಿ ಚರಾಚರ ಜಗತ್ತು ತೋರುತ್ತಿದೆ. ಇಂಥ ನನ್ನಲ್ಲಿ ಶ್ರದ್ಧೆ ತಾಳದೇ, ಧನ ಮಾನ ಕೀರ್ತಿ ಮುಂತಾದವುಗಳನ್ನು ನಂಬಿ ಮಾಡಿದ ಯಜ್ಞ ದಾನ ತಪಾದಿಗಳು ನಿಷ್ಪ್ರಯೋಜಕ. ಅವುಗಳಿಂದ ಇಹದಲ್ಲೂ ಸುಖವಿಲ್ಲ ಪರದಲ್ಲೂ ಸುಖವಿಲ್ಲ.

"ಭಾರತ, ನೀನು ಅಶ್ರದ್ಧೆಯುಳ್ಳವನಾಗದಿರು. ಓಂ ತತ್ ಸತ್ ಅಭಿಧಾನವುಳ್ಳ ನನ್ನನ್ನೇ ನಂಬು, ಆಶ್ರಯಿಸು; ನನ್ನಲ್ಲಿ ನಿನ್ನ ಅಹಂ ಮಮ ಭಾವಗಳನ್ನು ನೀಡಿಬಿಡು. ಸದಾ ನನ್ನನ್ನು ನೆನೆಯುತ್ತ ನನ್ನ ನಾಮಗಳನ್ನು ಜಪಿಸುತ್ತ ಧಾರ್ಮಿಕ ಕರ್ಮಗಳನ್ನು ಎಸಗು. ಆ ಕರ್ಮಗಳು ನಿನ್ನ ಮನಸ್ಸನ್ನು ನಿರ್ಮಲಗೊಳಿಸುತ್ತವೆ. ದಿವ್ಯ ಸೌಖ್ಯವನ್ನು ನೀಡುತ್ತವೆ. ಮುಕ್ತಿಯು ನಿನಗೆ ಖಚಿತವೆಂದೇ ಭಾವಿಸು. ಕೊನೆಯಲ್ಲಿ ನಿನ್ನ ಜೀವಭಾವವು ಪರಬ್ರಹ್ಮನಾದ ನನ್ನಲ್ಲಿ ವಿಲಯನ ಹೊಂದುವದು!"

ಶ್ರೀಮಲ್ಲಿಕಾರ್ಜುನ ಗೀತಾವಚನಾಮೃತದ ಹದಿನೇಳನೆಯ ಬಿಂದುವು.

* † *

# ಹದಿನೆಂಟನೆಯ ಅಧ್ಯಾಯ

## ಮೋಕ್ಷಸಂನ್ಯಾಸಯೋಗ

ಮಾನವರಲ್ಲಿ ನಾಲ್ಕು ಪ್ರಕಾರದ ಜನರಿದ್ದಾರೆ: (೧) ಅಧಮರು:– 'ಕರ್ಮವು ಬೇಡ, ಫಲ ಬೇಕು' 'ತ್ಯಾಗ ಬಲಿದಾನಗಳು ಬೇಡ ಘನತೆ ಗೌರವಗಳು

ಬೇಕು' ಎಂಬ ವಿಪರೀತ ಸೂತ್ರವಿಡಿದು ಬದುಕುವ ಜನರು. ಉದಾ: ಮೈ ಮುರಿದು ದುಡಿಯದೆ ಕೈತುಂಬ ವೇತನ ಬೇಡುವ ಕಾರ್ಮಿಕರು, ಲೋಡಿನ ಮೇಲೆ ಒಡಗಿ ದ್ರವ್ಯಸಂಪಾದನೆಯು ಗೇಣಿಕೆ ಹಾಕುವ ಮಾಲಿಕರು; ಮನವಿಟ್ಟು ಓದದೆ ಪದವಿ ಪಡೆದ ಪದವೀಧರರು, ಭಕ್ತರ ಏಳ್ಗೆಗಾಗಿ ಚಿಂತಿಸದೆ ಮಾನ ಮರ್ಯಾದೆಯನ್ನಿಚ್ಛಿಸುವ ಸ್ವಾಮಿಗಳು, ಸೇವೆ ಗೈಯದೆ ದೇವರಾಗಿ ಮೆರೆಯ ಬಯಸುವ ಮಹತ್ವಾಕಾಂಕ್ಷಿಗಳು, ಮುಂ. (೨) ಕರ್ಮ ಭೋಗಿಗಳು:– 'ಕರ್ಮವೂ ಇರಲಿ, ಅದಕ್ಕೆ ತಕ್ಕ ಪ್ರತಿಫಲವೂ ಬರಲಿ'– ಈ ಸಿದ್ಧಾಂತಕ್ಕೆ ಅಂಟಿಕೊಂಡು ಬದುಕುವ ಜನರು. ಉದಾ: ದುಡಿದು ಧಾನ್ಯ ಒಕ್ಕುವ ಒಕ್ಕಲಿಗ, ಕಷ್ಟಪಟ್ಟು ದುಡ್ಡು ಸಂಪಾದಿಸುವ ವ್ಯವಸಾಯಿ, ಬೆವರ ಹರಿಸಿ ವೇತನ ಪಡೆಯುವ ಕಾರ್ಮಿಕ, ರಕ್ತ ಸುಟ್ಟು ವಿದ್ಯೆ ಸಂಪಾದಿಸುವ ಪಂಡಿತ ಮುಂತಾದವರು. (೩) ಕರ್ಮಯೋಗಿಗಳು:– 'ಕರ್ಮವಂತೂ ಅವಶ್ಯ ಬೇಕು, ಆದರೆ ತತ್ಕರ್ಮದ ಪ್ರತಿಫಲವು ಬೇಡ'– ಈ ಉದಾತ್ತವಾದ ತತ್ತ್ವಕ್ಕೆ ಸರಿಯಾಗಿ ಬಾಳಿದ ಜನರು. ಉದಾ: ಜನಕ, ಅಶ್ವಪತಿ, ಹನುಮಂತ, ಭರತ, ಬಸವಣ್ಣ ಮುಂ. ಇವರ ದೃಷ್ಟಿಯಲ್ಲಿ ಪರಮಾತ್ಮನು ವಿಶ್ವಾಧಿಪ; ಮಾನವರೆಲ್ಲ ಅವನ ಅನುಜ್ಞೆಯಂತೆ ದುಡಿಯುವ ಸೇವಕರು. (೪) ಕರ್ಮಸಂನ್ಯಾಸಿಗಳು:– 'ಕರ್ಮವೂ ಬೇಡ, ಕರ್ಮಫಲವೂ ಬೇಡ'– ಎಂದು ಸರ್ವಪರಿತ್ಯಾಗ ಮಾಡಿದ ಸಹಜಯೋಗಿಗಳು. ಉದಾ: ಶುಕ, ವಾಮದೇವ, ಶಂಕರ, ರಮಣ ಮಹರ್ಷಿ ಮುಂ. ಇವರು ಆತ್ಮಾರಾಮರಾಗಿರುವ ದೇವ ಮಾನವರು! ಜೀವ ಶಿವ ಎಂಬ ದ್ವಂದ್ವ ನೀಗಿದ ಅದ್ವಯಾನುಭಾವಿಗಳು!

ಈ ನಾಲ್ವರಲ್ಲಿ ಮೊದಲಿನವರಾದ ಅಧಮರು ಅಜ್ಞರು, ಅವಿವೇಕಿಗಳು, ಅಸುರರು. ಅವರಿಂದ ಜಗತ್ತಿಗೆ ಮಿತಿ ಮೀರಿದ ಹಾನಿಯಿದೆ. ಎರಡನೆಯವರಾದ ಕರ್ಮಭೋಗಿಗಳು ಸಕಾಮಿಗಳಾದರೂ ನ್ಯಾಯ ನೀತಿವಂತರು; ಮಾನವ ಎಂಬ ಶಬ್ದ ಅವರಿಗೆ ಅನ್ವರ್ಥಕ. ಮೂರು ಮತ್ತು ನಾಲ್ಕನೆಯವರಾದ ಕರ್ಮ ಯೋಗಿಗಳು ಹಾಗು ಕರ್ಮತ್ಯಾಗಿ (ಸಾಂಖ್ಯಯೋಗಿ) ಗಳು ಪಾವನಾತ್ಮರು, ವಿಮಲ ಜ್ಞಾನಿಗಳು. ಜೀವಭಾವವಿಲ್ಲದ ದೈವೀ ಪುರುಷರು. ಅವರಿಂದ ಜಗತ್ತಿಗೆ ಅಪಾರ ಲಾಭ! ಅವರ ನೋಟ ಸ್ಪರ್ಶ ಹಾಗು ಶಬ್ದಗಳಿಂದ ಜನಾಂಗ ಪುನೀತವಾಗುತ್ತದೆ. ಕೃಷ್ಣ ಭಗವಂತನು ಅವರಿಬ್ಬರನ್ನು ಹಿಂದಿನ ಅಧ್ಯಾಯಗಳಲ್ಲಿ ಬಾಯ್ತುಂಬ ಕೊಂಡಾಡಿದ್ದಾನೆ. ಅನಸೂಯನಾದ ಅರ್ಜುನನಿಗೆ ಇನ್ನಷ್ಟು ಮತ್ತಷ್ಟು ಕೇಳಬೇಕೆಂಬ ಬಯಕೆ. ಆತ ಭಗವಂತನಿಗೆ ವಿನಮ್ರನಾಗಿ ಪ್ರಾರ್ಥಿಸುತ್ತಾನೆ.

ಅರ್ಜುನ ಉವಾಚ

ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।
ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥೧॥

ಅರ್ಥ:– ಮಹಾಬಾಹುವೆ, ಹೃಷೀಕೇಶನೆ, ಕೇಶಿನಿಷೂದನನೆ ಸನ್ನ್ಯಾಸಸ್ಯ= ಸನ್ನ್ಯಾಸದ ಚ= ಹಾಗು ತ್ಯಾಗಸ್ಯ= ತ್ಯಾಗ(ಕರ್ಮಫಲತ್ಯಾಗ)ದ ತತ್ತ್ವಂ= ತತ್ತ್ವವನ್ನು ಪೃಥಕ್= ಬೇರೆ ಬೇರೆಯಾಗಿ ವೇದಿತುಂ= ತಿಳಿದುಕೊಳ್ಳಲು= ಇಚ್ಛಾಮಿ= ಇಚ್ಛಿಸುತ್ತೇನೆ.

ವಿವರಣೆ:– ಅರ್ಜುನ:– "ಪ್ರಭುವೆ, ದೀರ್ಘ ಬಾಹುಗಳುಳ್ಳ ದೇವನೆ, ದೇಹ ಇಂದ್ರಿಯ ಮನ ಬುದ್ಧಿಗಳನ್ನು ಆಳುವ ಈಶನೇ (ಹೃಷೀಕನೇ), ಅಜ್ಞಾನ ರೂಪಿ ಕೇಶರಾಕ್ಷಸನನ್ನು ವಿನಾಶಗೊಳಿಸಿದ ಜ್ಞಾನಭಾಸ್ಕರನೆ ನಿನ್ನ ಅಮೃತರಸ ಮಯ ಉಪದೇಶವನ್ನು ಇಲ್ಲಿಗೆ ನಿಲ್ಲಿಸದಿರು. ನನ್ನಲ್ಲಿ ಮತ್ತೆಯೂ ಕೇಳ ಬೇಕೆಂಬ ಬಯಕೆ ಇದೆ. ಕರ್ಮತ್ಯಾಗ ಹಾಗು ಕರ್ಮಸನ್ನ್ಯಾಸಗಳ ಬಗ್ಗೆ ಸುದೀರ್ಘ ವಾದ ಬೋಧೆಯನ್ನು ಕರುಣಿಸು."

ಶ್ರೀ ಭಗವಾನ ಉವಾಚ

ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ನ್ಯಾಸಂ ಕವಯೋ ವಿದುಃ ।
ಸರ್ವ ಕರ್ಮ ಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥೨॥

ಅರ್ಥ:– ಕಾಮ್ಯಾನಾಂ ಕರ್ಮಣಾಂ ನ್ಯಾಸಂ= ಕಾಮ್ಯಕರ್ಮಗಳನ್ನು ಬಿಡುವದೇ ಸನ್ನ್ಯಾಸಂ= ಸನ್ನ್ಯಾಸ ಎಂದು ಕವಯಃ ವಿದುಃ= ಕವಿಗಳು ತಿಳಿಯುತ್ತಾರೆ. ಸರ್ವ ಕರ್ಮಫಲ ತ್ಯಾಗಂ= ಸರ್ವಕರ್ಮಫಲಗಳನ್ನು ಬಿಡುವದೇ ತ್ಯಾಗಂ= ತ್ಯಾಗ ಎಂದು ವಿಚಕ್ಷಣಾಃ ಪ್ರಾಹುಃ = ಬಲ್ಲ ಪಂಡಿತರು ಹೇಳುತ್ತಾರೆ.

ವಿವರಣೆ:–ಕರ್ಮಗಳಲ್ಲಿ ಮೂರು ಬಗೆ (೧) ನಿತ್ಯಕರ್ಮ:– ದಿನಂಪ್ರತಿ ಮಾಡಬೇಕಾದ ಸ್ನಾನ ಸಂಧ್ಯಾವಂದನಾದಿಗಳು. (೨) ನೈಮಿತ್ತಿಕ ಕರ್ಮ:– ಕಾಲ ದೇಶಾದಿ ನಿಮಿತ್ತದಿಂದ ಆಚರಿಸಲಾಗುವ ಏಕಾದಶಿ ಇತ್ಯಾದಿ ಧಾರ್ಮಿಕ ವ್ರತ ಗಳು. (೩) ಕಾಮ್ಯಕರ್ಮ:–ಧನ ಪುತ್ರ ರಾಜ್ಯ ಭೂಮಿ ಮುಂತಾದ ವಿಷಯಗಳಿ ಗಾಗಿ ಮಾಡಲಾಗುವ ಪುತ್ರಕಾಮೇಷ್ಟಿ, ರಾಜಸೂಯ, ಅಶ್ವಮೇಧ ಇತ್ಯಾದಿಗಳು. ಈ ಮೂರರಲ್ಲಿ ಮೊದಲಿನ ಎರಡು ಅಹಿಂಸಾತ್ಮಕ ಮತ್ತು ಕಾಮನಾವಿರಹಿತ ಕೊನೆಯದು ಮಾತ್ರ ಕಾಮಪೂರಿತ ಮತ್ತು ಹಿಂಸಾತ್ಮಕ. ಆದ್ದರಿಂದ ನಿತ್ಯನೈಮಿ ತ್ತಿಕಗಳು ಸರ್ವಮಾನ್ಯ; ಕಾಮ್ಯವು ವರ್ಜ್ಯ.

"ಪಾಂಡವ, ಸಾಂಸಾರಿಕ ವಿಷಯವ್ಯಾಮೋಹ ತೊರೆದು ಸದೈವ ಆತ್ಮ ಚಿಂತನದಲ್ಲಿರುವದು ಸನ್ನ್ಯಾಸ. ಲೋಕಹಿತಕರವಾದ ಅನೇಕ ಕರ್ಮಗಳನ್ನು ನಿರ್ವಹಿಸಿಯೂ ಫಲವನ್ನು ಇಚ್ಛಿಸದಿರುವದು ತ್ಯಾಗ. ಹೀಗೆ ಬಲ್ಲ ಬಲ್ಲವರೆಲ್ಲರೂ ಹೇಳುತ್ತಾರೆ"

ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।
ಯಜ್ಞದಾನತಪಃ ಕರ್ಮ ನ ತ್ಯಾಜ್ಯಮಿತಿ ಚಾಪರೇ ॥೩॥

ಅರ್ಥ:– ಕರ್ಮ= ಕರ್ಮವು ದೋಷವತ್ ಇತಿ= ದೋಷಯುಕ್ತವೆಂದು (ಹಾಗು) ತ್ಯಾಜ್ಯಂ= (ಅದು) ಬಿಡಲ್ಪಡಬೇಕೆಂದು ಏಕೇ ಮನೀಷಿಣಃ ಪ್ರಾಹುಃ= ಕೆಲವು ವಿದುಷರು ಹೇಳುತ್ತಾರೆ. ಯಜ್ಞದಾನತಪಃ ಕರ್ಮ= ಯಜ್ಞ ದಾನ ತಪ ಕರ್ಮಗಳನ್ನು ನ ತ್ಯಾಜ್ಯಮಿತಿ=

ಎಂದೂ ಬಿಡಬಾರದೆಂದು ಅಪರೇ ಚ= ಅನ್ಯ ವಿದ್ವಾಂಸರು ಪ್ರಾಹುಃ= ಹೇಳುತ್ತಾರೆ.

ವಿವರಣೆ:– ಭಗವಂತ:– "ಧನಂಜಯ, ಕರ್ಮವು ನಿತ್ಯ ನೈಮಿತ್ತಿಕ ಯಾವುದಾದರೂ ಸರಿಯೇ ಅದು ಪೂರ್ಣ ನಿರ್ದೋಷವಲ್ಲ; ಅದರಲ್ಲಿ ಹಿಂಸೆಗೆ, ಅಹಂಭಾವಕ್ಕೆ ಆಸ್ಪದವಿದೆ. ಆದ್ದರಿಂದ ಅದು ಬಾಧಕ, ಜನ್ಮಕಾರಕ. ಅದನ್ನು ಪೂರ್ತಿಯಾಗಿ ಬಿಟ್ಟುಬಿಡಬೇಕು ಎಂದು ಕೆಲವು ವಿದುಷರು ಹೇಳುತ್ತಾರೆ. ಕರ್ಮಗಳು ಕಾಮನಾವಿರಹಿತವಾಗಿದ್ದರೆ ಬಾಧಕವಾಗವು. ಅವು ಮನಸ್ಸನ್ನು ಶುದ್ಧೀಕರಿಸುತ್ತವೆ; ಅಂತಃಪ್ರಜ್ಞೆಯನ್ನು ಜಾಗ್ರತಗೊಳಿಸುತ್ತವೆ; ಆತ್ಮಜ್ಞಾನಕ್ಕೆ ಅನುವಮಾಡಿಕೊಡುತ್ತವೆ. ಆದುದರಿಂದ ಯಜ್ಞ ದಾನ ತಪ ಮುಂತಾದ ಪವಿತ್ರ ಕರ್ಮಗಳನ್ನು ಎಂದಿಗೂ ಬಿಡಬಾರದು; ಜೀವಿಸಿರುವಷ್ಟೂ ಕಾಲ ಬಹು ಪ್ರೇಮಾದರಗಳಿಂದ ನಿರ್ವಹಿಸಬೇಕು. ಹೀಗೆ ಅನ್ಯ ವಿದುಷರು ಅಭಿಪ್ರಾಯ ಪಡುತ್ತಾರೆ."

ಸಂಬಂಧ:– ಈ ಎರಡು ಅಭಿಪ್ರಾಯಗಳನ್ನು ವಿವರಿಸಿದ ಭಗವಂತನು ಮುಂದಿನ ಮಂತ್ರಗಳಲ್ಲಿ ತನ್ನ ಸುನಿರ್ಣೀತ ಅಭಿಮತವನ್ನು ಮಂಡಿಸುತ್ತಾನೆ.

ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।
ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥೪॥

ಅರ್ಥ:-ತತ್ರ ತ್ಯಾಗೇ= ಆ ತ್ಯಾಗದ ವಿಷಯದಲ್ಲಿ ಮೇ= ನನ್ನ ನಿಶ್ಚಯಂ= ನಿರ್ಣಯವನ್ನು ಶೃಣು= ಕೇಳು. ತ್ಯಾಗಃ ಹಿ= ತ್ಯಾಗವು ತ್ರಿವಿಧಃ= ತ್ರಿವಿಧವೆಂದು ಸಂಪ್ರಕೀರ್ತಿತಃ = ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ.

ಭಾವ:– ಅರ್ಜುನ, ನೀನು ಪುರುಷಸಿಂಹ, ಅಧೀರತೆ ನಿರ್ಬಲತೆ ನಿಷ್ಕ್ರಿಯತೆಗಳಿಲ್ಲದ ವೀರ. ತ್ಯಾಗದ (ಕರ್ಮತ್ಯಾಗದ) ವಿಷಯದಲ್ಲಿ ನನ್ನ ನಿರ್ಣಯವನ್ನು ಉಪದೇಶಿಸುವೆ, ಏಕಾಗ್ರತೆಯಿಂದ ಆಲಿಸು. ತ್ಯಾಗವು ಸಾತ್ವಿಕ ರಾಜಸಿಕ ತಾಮಸಿಕವೆಂದು ತ್ರಿವಿಧ."

ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥೫॥

ಅರ್ಥ: ಯಜ್ಞದಾನ ತಪಃ ಕರ್ಮ= ಯಜ್ಞ ದಾನ ತಪ ಎಂಬ ಕರ್ಮವು ನ ತ್ಯಾಜ್ಯಂ = ಬಿಡಲ್ಪಡತಕ್ಕದ್ದಲ್ಲ. ತತ್ = ಅದು ಕಾರ್ಯಂ ಏವ= ಮಾಡಲ್ಪಡಬೇಕು. ಯಜ್ಞಃ ದಾನಂ ತಪಃ ಏವ ಚ= ಯಜ್ಞ ದಾನ ಹಾಗು ತಪಸ್ಸು ಮನೀಷಿಣಾಂ= ಬಲ್ಲವರಿಗೆ, ಪಾವನಾನಿ= ಪವಿತ್ರವಾಗಿವೆ.

ಭಾವ:-"ಪಾರ್ಥ, ಯಜ್ಞ ದಾನ ತಪ ಈ ಪವಿತ್ರಕರ್ಮಗಳನ್ನು ಕಡೆಗಣಿಸಬಾರದು; ಜೀವನಾದ್ಯಂತ ಆಚರಿಸಬೇಕು. ಏಕೆಂದರೆ ಯಜ್ಞ ದಾನ ತಪ ಇವು ಮನೀಷಿಗಳ ಚಿತ್ತಶುದ್ಧಿ ಮಾಡುತ್ತವೆ."

ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥೬॥

ಅರ್ಥ:– ತು= ಆದರೆ, ಏತಾನಿ ಕರ್ಮಾಣಿ= ಈ ಕರ್ಮಗಳು, ಸಂಗಂ ಫಲಾನಿ

ತ್ಯಕ್ತ್ವಾ= ಆಸಕ್ತಿ ಹಾಗು ಫಲ ಬಿಟ್ಟು, ಕರ್ತವ್ಯಾನಿ= ಮಾಡಲ್ಪಡತಕ್ಕವು, ಇತಿ= ಎಂದು ಮೇ= ನನ್ನ, ನಿಶ್ಚಿತಂ= ನಿಶ್ಚಯವಾದ, ಉತ್ತಮಂ ಮತಂ= ಶ್ರೇಷ್ಠವಾದ ಅಭಿಪ್ರಾಯವು.

ವಿವರಣೆ:- ಭಗವಂತ:- "ಕುರುನಂದನ, ಕರ್ಮದ ವಿಷಯವಾಗಿ ನಾನೀಗ ಸುನಿರ್ಣಿತ ಸರ್ವೋತ್ತಮ ಅಭಿಮತವನ್ನು ತಿಳಿಯುವೆ. ಹಿಂಸೆ ಕ್ರೌರ್ಯ ಸ್ವಾರ್ಥ ಗಳಿಂದ ರಂಜಿತವಾದ ಕಾಮ್ಯಕರ್ಮಗಳು ಸರ್ವಥಾ ವರ್ಜ್ಯ; ಸಾಮಾನ್ಯ ಮಾನವ ನಿಂದ ಹಿಡಿದು ಅನುಭವಿಯವರೆಗೆ ಇರುವ ಯಾವ ವ್ಯಕ್ತಿಯೂ ಈ ಕಾಮ್ಯ ಕರ್ಮಗಳನ್ನು ಮಾಡಬಾರದು.

"ಆದರೆ ನಿತ್ಯ ನೈಮಿತ್ತಿಕ ಕರ್ಮಗಳು ಮಾತ್ರ ಸದಾ ಆಚರಣೀಯ. ನಾನು ಮಾಡುತ್ತೇನೆ ಎಂಬ ಅಹಂಭಾವ ತೊರೆದು (ಸಂಗಂ ತ್ಯಕ್ತ್ವಾ), ಕರ್ಮ ಫಲಾಶೆಯನ್ನು ಬಿಟ್ಟು (ಫಲಾನಿ ಚ) ಈ ಎರಡು ವಿಧ ಧರ್ಮಾಚರಣೆಯನ್ನು ಅನುಷ್ಠಾನಕ್ಕೆ ತಂದರೆ ಮುಕ್ತಿಯು ಖಚಿತ."

ಸಂಬಂಧ:- ಮುಂದಿನ ಮೂರು ಮಂತ್ರಗಳಲ್ಲಿ 'ತ್ಯಾಗತ್ರಯ' ವನ್ನು ವರ್ಣಿಸಲಾಗಿದೆ.

ನಿಯತಸ್ಯ ತು ಸನ್ಯಾಸಃ ಕರ್ಮಣೋ ನೋಪಪದ್ಯತೇ ।
ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥೭॥

ಅರ್ಥ:- ನಿಯತಸ್ಯ ಕರ್ಮಣಃ ಸನ್ಯಾಸಃ= ನಿತ್ಯ ಕರ್ಮದ ತ್ಯಾಗವು ನ ಉಪ ಪದ್ಯತೇ= ಯುಕ್ತವಲ್ಲ. ಮೋಹಾತ್= ಅಜ್ಞಾನದಿಂದಾಗಿ ತಸ್ಯ ಪರಿತ್ಯಾಗಃ= ಅದರ ತ್ಯಾಗವು ತಾಮಸಃ ಪರಿಕೀರ್ತಿತಃ= 'ತಾಮಸ ತ್ಯಾಗ'ಎಂದು ಹೇಳಲ್ಪಟ್ಟದೆ.

ವಿವರಣ:- "ಭಾರತ, ನಿತ್ಯಕರ್ಮಗಳನ್ನು ಮಾಡುವದರಿಂದ ಕಾಮಾದಿ ರಿಪುಗಳು ಅಳಿಯುತ್ತವೆ; ಸತ್ಯ ಅಹಿಂಸಾದಿ ಸುಗುಣಗಳು ಅಭಿವರ್ಧಿಸುತ್ತವೆ; ಜೀವನನ್ನು ಬಂಧಿಸಿದ ವಾಸನಾಜಾಲವು ತನ್ನಷ್ಟಕ್ಕೆ ತಾನೆ ಸಿಥಿಲಗೊಳ್ಳುತ್ತದೆ. ಅದ್ದರಿಂದ ನಿತ್ಯಕರ್ಮಗಳನ್ನು ಬಿಡಬಾರದು; ಒಂದು ವೇಳೆ ಅಜ್ಞಾನದಿಂದಲೋ ವಿಷಯವ್ಯಾಮೋಹದಿಂದಲೋ ಬಿಟ್ಟರೆ ಅದು 'ತಾಮಸತ್ಯಾಗ' ಎನಿಸುತ್ತದೆ."

ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥೮॥

ಅರ್ಥ:- ಯತ್ ಕರ್ಮ= ಯಾವ ಕರ್ಮವನ್ನು, ದುಃಖಂ ಏವ ಇತಿ= ದುಃಖವೇ ಎಂದು (ಭಾವಿಸಿ), ಕಾಯಕ್ಲೇಶ ಭಯಾತ್= ಶರೀರಕ್ಕೆ ಕಷ್ಟಕರ ಎಂಬ ಭಯದಿಂದ, ತ್ಯಜೇತ್= ತ್ಯಜಿಸುತ್ತಾನೆಯೋ ಸಃ= ಅವನು ರಾಜಸಂ ತ್ಯಾಗಂ= ರಾಜಸ ತ್ಯಾಗವನ್ನು ಕೃತ್ವಾ= ಮಾಡಿ ತ್ಯಾಗಫಲಂ= ತ್ಯಾಗದ ಫಲವನ್ನು ನ ಲಭೇತ್= ಹೊಂದುವದಿಲ್ಲ.

ಭಾವ:- ದುಃಖದಾಯಕವಾಗಿದೆ, ದೇಹಕ್ಕೆ ಕಷ್ಟಕರವಾಗಿದೆ ಎಂಬ ಭಯ ದಿಂದ ಕರ್ಮಮಾಡುವದನ್ನು ಬಿಟ್ಟರೆ ಅದು 'ರಾಜಸ ತ್ಯಾಗ'ವು. ಅಂಥ ಕರ್ಮ ತ್ಯಾಗದಿಂದ ಎಂದಿಗೂ ಫಲ ದೊರೆಯದು.

ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।

ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥೯॥

ಅರ್ಥ:- ಕಾರ್ಯಮಿತಿ ಏವ=ಮಾಡಲ್ಪಡತಕ್ಕದ್ದೆಂದೇ (ಭಾವಿಸಿ) ಸಂಗಂ ಫಲಂಚ ಏವ ತ್ಯಕ್ತ್ವಾ= ಆಸಕ್ತಿ ಮತ್ತು ಫಲವನ್ನು ಬಿಟ್ಟು. ಯತ್ ನಿಯತಂ ಕರ್ಮ ಕ್ರಿಯತೇ= ಯಾವ ನಿತ್ಯ ಕರ್ಮವು ಮಾಡಲ್ಪಡುತ್ತದೆಯೋ, ಸಃ ತ್ಯಾಗಃ ಸಾತ್ವಿಕಃ ಮತಃ= ಆ ತ್ಯಾಗವು ಸಾತ್ವಿಕ ಎಂದು ಅಭಿಪ್ರಾಯ.

ಭಾವ:- "ಅರ್ಜುನ, ನಿತ್ಯ ನೈಮಿತ್ತಿಕ ಕರ್ಮಗಳನ್ನು (ವೇದನಿರ್ದಿಷ್ಟ ಕ್ರಮದಲ್ಲಿ ಮಾಡಲೇಬೇಕೆಂಬ) ಕರ್ತವ್ಯ ಬುದ್ಧಿಯಿಂದ ಹಾಗು ಆಸಕ್ತಿ ಫಲಾಪೇಕ್ಷೆ ಗಳಿಲ್ಲದೆ ಆಚರಿಸಿದರೆ ಅದು ಸಾತ್ವಿಕ ತ್ಯಾಗ."

ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।
ತ್ಯಾಗೀ ಸತ್ವಸಮಾವಿಷ್ಟೋ ಮೇಧಾವೀ ಛಿನ್ನ ಸಂಶಯಃ ॥೧೦॥

ಅರ್ಥ:- ಛಿನ್ನ ಸಂಶಯಃ= ಛಿನ್ನ ಸಂದೇಹಿಯಾದ (ಕರ್ಮದಿಂದ ಮುಕ್ತಿಯೋ, ಸನ್ಯಾಸದಿಂದ ಮುಕ್ತಿಯೋ ಎಂಬ ವಿಷಯದಲ್ಲಿ ಸಂಶಯವಿಲ್ಲದ) ಮೇಧಾವೀ= ಮೇಧಾವಿ ಯಾದ (ಆತ್ಮಜ್ಞಾನಿಯಾದ) ಸತ್ವ ಸಮಾವಿಷ್ಟಃ ತ್ಯಾಗೀ= ಸಾತ್ವಿಕ ತ್ಯಾಗಿಯು, ಅಕುಶಲಂ ಕರ್ಮ= ಕ್ಲೇಶಕರ ಕರ್ಮವನ್ನು ನ ದ್ವೇಷ್ಟಿ= ದ್ವೇಷಿಸುವದಿಲ್ಲ, ಕುಶಲೇ= ಸುಖಕರ ಕರ್ಮ ದಲ್ಲಿ ನ ಅನುಷಜ್ಜತೇ= ಆಸಕ್ತಿ ತಾಳುವದಿಲ್ಲ.

ವಿವರಣ:- ಸಾತ್ವಿಕ ತ್ಯಾಗಿಯು ಸಕಲ ಸಂದೇಹಗಳನ್ನು ನೀಗಿದ ಮಹಾ ನುಭಾವಿ; ವೇದ ಗುರು ಹಾಗು ದೇವವಚನಗಳಲ್ಲಿ ಅವನಿಗೆ ಅಚಲ ವಿಶ್ವಾಸ. ಆತ್ಮ ಅನಾತ್ಮಗಳನ್ನು ಸುಸ್ಪಷ್ಟವಾಗಿ ಅರಿತ ಅವನು ಮೇಧಾವಿ! ಅಕುಶಲವಾದ ನಿಷಿದ್ಧ ಮತ್ತು ಕಾಮ್ಯ ಕರ್ಮಗಳನ್ನು ಆಚರಿಸಬಾರದು ಎಂದು ಹೇಳುವ ಗುರು ದೇವತಾ ಮಾತುಗಳನ್ನಾತ ದ್ವೇಷಿಸುವದಿಲ್ಲ; ನಿತ್ಯ ನೈಮಿತ್ತಿಕಗಳನ್ನು ಆಚರಿಸು ಎಂದು ವೇದಾದಿಗಳು ಆಜ್ಞಾಪಿಸಿದಾಗ ಆ ಕರ್ಮಫಲಗಳಲ್ಲಿ ಅವನು ಆಸಕ್ತಿ ತಾಳು ವದಿಲ್ಲ. ಮತ್ತೊಂದು ರೀತಿಯಿಂದ ಹೇಳುವದಾದರೆ ಧಾರ್ಮಿಕ ಕರ್ಮಗಳು ಕಠಿಣ ವಾಗಿವೆ ದೇಹಕ್ಕೆ ಕ್ಲೇಶ ಉಂಟುಮಾಡುತ್ತವೆ ಎಂಬ ಕಾರಣಕ್ಕಾಗಿ ಅವುಗಳನ್ನು ಆ ಸಾತ್ವಿಕ ತ್ಯಾಗಿಯು ದ್ವೇಷಿಸುವದಿಲ್ಲ; ಕೆಲವು ಕರ್ಮಗಳು ಸುಖಕರವಾಗಿವೆ ಎಂದ ಮಾತ್ರಕ್ಕೆ ಅವನು ಅವುಗಳಲ್ಲಿ ಆಸಕ್ತನಾಗುವದಿಲ್ಲ. ಗುರು ಶ್ರುತಿಗಳು ವಿಧಿಸಿದ ಕರ್ಮಗಳು ಹೇಗಿದ್ದರೂ ಸರಿಯೇ, ಸಾತ್ವಿಕ ತ್ಯಾಗಿಯು ಅವುಗಳನ್ನು ಅನಾಸಕ್ತ ಮನಸ್ಸಿನಿಂದ ಫಲಾಭಿರತಿಯಿಲ್ಲದ ಭಾವದಿಂದ ನಿರ್ವಹಿಸುತ್ತಾನೆ.

ಸಂಬಂಧ:- ಕರ್ಮಗೈದು, ಫಲತ್ಯಾಗಮಾಡುವದಕ್ಕಿಂತ ಕರ್ಮವನ್ನೇ ಬಿಟ್ಟುಬಿಡುವದು ಒಳ್ಳೆಯದಲ್ಲವೇ?

ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।
ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥೧೧॥

ಅರ್ಥ:- ದೇಹಭೃತಾ= ದೇಹಧಾರಿಯಾದವನಿಂದ, ಕರ್ಮಾಣಿ= ಕರ್ಮಗಳನ್ನು, ಅಶೇಷತಃ= ಸಂಪೂರ್ಣವಾಗಿ, ತ್ಯಕ್ತುಂ= ತ್ಯಾಗಮಾಡಲು ನ ಶಕ್ಯಂ= ಅಶಕ್ಯ. ತು= ಆದರೆ

ಯಃ= ಯಾವನು ಕರ್ಮಫಲತ್ಯಾಗೀ= ಕರ್ಮಫಲದ ತ್ಯಾಗಿಯೋ ಸಃ= ಅವನು ತ್ಯಾಗೀ ಇತಿ ಅಭಿಧೀಯತೇ= ತ್ಯಾಗಿ ಎಂದು ಹೇಳಲ್ಪಡುತ್ತಾನೆ.

ವಿವರಣ:–(೧)ದೇಹ ಹಾಗು ಕರ್ಮ– ದೇಹಗಳೆಲ್ಲ ಕರ್ಮಾವಲಂಬಿಗಳು. ವಾಯು ಸೇವನ, ಅನ್ನ ಪಚನ, ರಕ್ತಾಭಿಸರಣ, ಚಲನ ಇತ್ಯಾದಿ ಕ್ರಿಯೆಗಳು ಸ್ಥೂಲ ದೇಹಕ್ಕೆ ಸಂಬಂಧಿಸಿವೆ. ವಿಷಯಪ್ರಕಾಶನ, ಭಾವನ, ಚಿಂತನ ವಿಚಾರ ವಿಮರ್ಶೆ ಇತ್ಯಾದಿ ಕ್ರಿಯೆಗಳು ಸೂಕ್ಷ್ಮ ದೇಹಕ್ಕೆ ಸಂಬಂಧಿಸಿವೆ. ಎಲ್ಲಿಯವರೆಗೆ ದೇಹಗಳು ಬದುಕುತ್ತವೆಯೋ ಅಲ್ಲಿಯವರೆಗೆ ಆಯಾ ಕರ್ಮಗಳು ಸಾಗಲೇ ಬೇಕು.

(೨) ದೇಹ-ದೇಹಿ-ಕರ್ಮ:– ಸ್ಥೂಲ ಹಾಗು ಸೂಕ್ಷ್ಮ ದೇಹಗಳಲ್ಲಿ ವಾಸ ಮಾಡಿದ ಜೀವನು ದೇಹಿ. ತನು ಮತ್ತು ಮನಸ್ಸುಗಳ ಭಾನ ಅವನಿಗಿರುವ ಪರ್ಯಂತ ಆ ದೇಹಿಯು ಆ ತನು ಮನಗಳಿಂದ ವಿವಿಧ ಕಾರ್ಯಗಳನ್ನು ನಿರ್ವ ಹಿಸಲೇ ಬೇಕು! ಅದು ವಿಶ್ವದ ನಿಯತಿ! ಆ ನಿಯತಿಯನ್ನು ಉಲ್ಲಂಘಿಸಿ ದೇಹಿಯು ದೇಹಧಾರಿಯಾಗಿರುವದು ಸಾಧ್ಯವಿಲ್ಲ.

(೩) ಸಾಧಕನು ದೇಹ ಧಾರಿಯು. ಆದ್ದರಿಂದ ನಿತ್ಯ ನೈಮಿತ್ತಿಕಾದಿ ವಿಹಿತ ಕರ್ಮಗಳನ್ನು ಮನಸೋಕ್ತ ಆಚರಿಸಲೇ ಬೇಕು. ಇಷ್ಟೇ, ಅವನು ಆ ಕರ್ಮ ಗಳ ಕರ್ತೃಭಾವವನ್ನಾಗಲಿ, ಕರ್ಮಫಲಪ್ರಾಪ್ತಿಯ ಆಶೆಯನ್ನಾಗಲಿ ಹೊಂದಿರ ಬಾರದು! ಎಲ್ಲವು ದೇವನ ಕೃಪೆ ಎಂದು ತಿಳಿದು ಅವನ ಪಾದಕ್ಕೆ ತನ್ನ ಸಕಲ ಕರ್ಮಗಳನ್ನು ನಿವೇದಿಸಬೇಕು. ಹೀಗೆ ಮಾಡಿದರೆ ಆ ಸಾಧಕನು (ಕರ್ಮ) ತ್ಯಾಗಿಯೆಂದೇ ಭಾವಿಸಬೇಕು.

(೪) ಲೌಕಿಕ ಜೀವಾತ್ಮನು ಅವಿಪಶ್ಚಿತ. ಕರ್ಮದ ಕೌಶಲ್ಯ ವಿಶ್ವದ ವೈಶಾಲ್ಯ ಹಾಗು ಪರಮಾತ್ಮನ ಸ್ವರೂಪ ಜ್ಞಾನ ಅವನಿಗಿಲ್ಲ. ಕಾಮ ಕ್ರೋಧ ಲೋಭ ಮೋಹಗಳಿಂದ ಕೂಡಿದ ಅವನು ಕರ್ಮಗೈಯುತ್ತಾನೆ, ಕರ್ಮಫಲಗಳ ಬಯಸುತ್ತಾನೆ, ಮಾನ ಕೀರ್ತಿಗಳಿಗಾಗಿ ಕಷ್ಟ ಪಡುತ್ತಾನೆ. ಆದ್ದರಿಂದ ಅವನ ಕರ್ಮಗಳು ಅವನನ್ನೇ ಬಂಧಿಸುತ್ತವೆ.

ಭಗವಂತ:– "ಭರತರ್ಷಭ, ಅತ್ಯಂತ ಹರುಷದಿಂದ ಕರ್ಮ ಮಾಡು; ದೇವ ಗುರು ಹಾಗು ದೀನ ದಲಿತರ ಸೇವೆ ಗೈ. ಸಮಸ್ತ ಮಾನವಕುಲದ ಏಳ್ಗೆ ಗಾಗಿ ಶ್ರಮಿಸು; ಜೀವನಾವಧಿ ಪೂಜೆ ಅರ್ಚನೆ ಆರಾಧನೆ ಉಪಾಸನೆ ಚಿಂತನೆಗಳು ಅವ್ಯಾಹತವಾಗಿ ಸಾಗಲಿ. ಒಂದು ಕಾಸಿನ ಪ್ರತಿಫಲದ ಆಶೆಯನ್ನೂ ಮಾಡದಿರು. ಹೀಗೆ ಬದುಕುವದೇ ಸನ್ಯಾಸ ಜೀವನ; ಕರ್ಮಗಳ ತ್ಯಾಗವು ತ್ಯಾಗವಲ್ಲ;ಕರ್ಮಫಲ ತ್ಯಾಗವೇ ನಿಜವಾದ ತ್ಯಾಗ. ಸಂಸಾರಿಯು ಕೂಡ ಹೆಂಡಿರು ಮಕ್ಕಳಿಗಾಗಿ ತನ್ನ ಜೀವ ತೇಯುತ್ತಾನೆ; ಅದು ತ್ಯಾಗವೆಂದು ತಿಳಿಯಬೇಡ. ಅವನಲ್ಲಿ ಆಶೆಯಿದೆ, ವಿಷಯ ವ್ಯಾಮೋಹವಿದೆ, ಅಷ್ಟೇ ಅಲ್ಲ ಸ್ವಾರ್ಥಭಾವನೆ ಮನೆಮಾಡಿದೆ."

ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।
ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ । ॥೧೨॥

ಅರ್ಥ:– ಅತ್ಯಾಗಿನಾಂ= ಸಕಾಮಿಗಳಿಗೆ ಅನಿಷ್ಟಂ ಇಷ್ಟಂ ಮಿಶ್ರಂಚ= ಅನಿಷ್ಟ ಇಷ್ಟ ಮಿಶ್ರ ಎಂಬ ತ್ರಿವಿಧಂ ಕರ್ಮಣಃ ಫಲಂ= ತ್ರಿವಿಧ ಕರ್ಮದ ಫಲವು ಪ್ರೇತ್ಯ ಭವತಿ=ಮರಣಾನಂತರ ಆಗುವದು. ಸನ್ಯಾಸಿನಾಂ= ಸನ್ಯಾಸಿಗಳಿಗೆ ಕ್ವಚಿತ್ ನ= ಎಂದಿಗೂ ಆಗುವದಿಲ್ಲ.

ವಿವರಣೆ:- ಭಗವಂತ:–"ಪಾಂಡವ, ಫಲ ಬೇಕೆನ್ನುವ ಸಕಾಮಿಗಳು ಪುಣ್ಯ, ಪಾಪ ಹಾಗು ಸಮ್ಮಿಶ್ರ ಕರ್ಮಗಳ ಎಸಗಿ ಇಷ್ಟ, ಅನಿಷ್ಟ ಮತ್ತು ಸಮ್ಮಿಶ್ರ ಫಲ ಪಡೆಯುತ್ತಾರೆ. ದೇಹಬಿಟ್ಟನಂತರ ಪುಣ್ಯಕರ್ಮಹೆಚ್ಚಿದ್ದರೆ ಸುಖೋಪಭೋಗಗಳ ಸ್ವರ್ಗಕ್ಕೆ, ಪಾಪಕರ್ಮ ಹೆಚ್ಚಿದ್ದರೆ ಕಷ್ಟಕಾರ್ಪಣ್ಯಗಳ ನರಕಕ್ಕೆ, ಸಮ್ಮಿಶ್ರ ಕರ್ಮ ಹೆಚ್ಚಿದ್ದರೆ ಸುಖದುಃಖಸಮ್ಮಿಶ್ರದ ಮರ್ತ್ಯಕ್ಕೆ ಗಮಿಸುತ್ತಾರೆ. ಅಲ್ಲಿರುವ ಸುಖ, ದುಃಖ, ಸಮ್ಮಿಶ್ರಫಲಗಳನ್ನು ಅನುಭವಿಸುತ್ತಾರೆ. ನಿಷ್ಕಾಮಭಾವದಿಂದ ಕರ್ಮಗೈಯುವ ಮಹಾನುಭಾವರಿಗೆ ಮಾತ್ರ ಆ ತ್ರಿವಿಧ ಫಲಗಳು ದೊರೆಯುವದಿಲ್ಲ; ಅವರು ತ್ಯಾಗಿಗಳು, ಸನ್ಯಾಸಿಗಳು, ಸದಾ ನಿಶ್ಚಿಂತರು."

ನಿಷ್ಕಾಮಿಗಳಿಗೆ ಪಾಪಾದಿಗಳ ಲೇಪವಿಲ್ಲ ಎಂಬ ಭಗವಂತನ ಮಾತಿಗೆ ಒಂದೆರಡು ಸಾಕ್ಷಿ ವಚನಗಳು ಹೀಗಿವೆ:

"ತದಧಿಗಮೇ ಉತ್ತರ ಪೂರ್ವ ಅಘಯೋರಶ್ಲೇಷ ವಿನಾಶೌ ತದ್ವ್ಯಪದೇಶಾತ್" (ಬ್ರಹ್ಮಸೂತ್ರ ೪-೧-೧೩). ತ್ಯಾಗದ ಮೂಲಕ ಆ ಪರಮಾತ್ಮನ ಸಾಕ್ಷಾತ್ಕಾರವಾಗಲಾಗಿ ವರ್ತಮಾನ ಹಾಗು ಭಾವೀ ಪಾಪಗಳು ನಿರವಶೇಷವಾಗಿ ನಾಶವಾಗುತ್ತವೆ.ಈ ಮಾತು ಸರ್ವಬುಧಜನವಿದಿತ.

"ಭಿದ್ಯತೇ ಹೃದಯ ಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ದೃಷ್ಟೇ ಪರಾವರೇ ॥"

ನಿಷ್ಕಾಮಕರ್ಮಾನುಷ್ಠಾನರೂಪ ತ್ಯಾಗದಿಂದ ಸರ್ವೋತ್ಕೃಷ್ಟ ದೇವನ ದರ್ಶನವಾಗಲಾಗಿ ಅಹಂ ಮಮಾತ್ಮಕ ಹೃದಯ ಗ್ರಂಥಿಯು ಸಿಥಿಲವಾಗುತ್ತದೆ; ಸಾಧ್ಯ-ಸಾಧನಗಳ ಬಗೆಗಿರುವ ಸಕಲ ಸಂದೇಹಗಳು ಅಡಗುತ್ತವೆ; ಮತ್ತು ಸಾಧಕನ ಕರ್ಮವಾಸನೆಗಳೂ ಕರ್ಮಫಲಗಳೂ ಇಲ್ಲದಾಗುತ್ತವೆ.

ತಾತ್ಪರ್ಯ:– ಸಂಸಾರ ಸಾಗರದಿಂದ ದಾಟಲು ಇಚ್ಛಿಸುವ, ರಾಗ ದ್ವೇಷಾದಿ ಆಸುರೀ ವೃತ್ತಿಗಳ ಆಘಾತದಿಂದ ಪಾರಾಗಲು ಯತ್ನಿಸುವ, ಸುಖ ದುಃಖಗಳ ಜ್ವಾಲೆಯಿಂದ ಹೊರಬಂದು ಪರಮ ಶಾಂತಿಯನನುಭವಿಸಲು ಹಾತೊರೆವ ಮನುಷ್ಯನು ಈ ಕರ್ಮ ಭೂಮಿಯಲ್ಲಿ ಬದುಕಿರುವಷ್ಟು ಕಾಲ ತನ್ನ ದೇಹ ಮನಸ್ಸುಗಳನ್ನು ದುಡಿಮೆಗೆ ಹಚ್ಚಬೇಕು; ಮನೆ ಮಡದಿ ಮಕ್ಕಳು ಮಾನ ಧನಗಳ ಆಶೆ ನೀಗಿ ದೇವ-ಗುರುಗಳನ್ನು ಪತಿತ-ಪಾಮರರನ್ನು ಉಪಚರಿಸಬೇಕು. ಒಂದು ಕವಡೆಯ ಪ್ರತಿಫಲವನ್ನೂ ನಿರೀಕ್ಷಿಸಬಾರದು.

ಸಂಬಂಧ:– ಕರ್ಮ ಮಾಡಿದರೂ ನಿಷ್ಕಾಮಿಗೆ ಅದೇಕೆ ಫಲ ಲಭಿಸದು? ಅನಾಸಕ್ತ ಕರ್ಮಯೋಗಿಗಳಲ್ಲಿ ಅಹಂಕಾರವೇ ಇಲ್ಲದ್ದರಿಂದ ಅವರಿಗೆ ಕರ್ಮ ಫಲವು ಲೇಪಗೊಳ್ಳದು – ಎಂಬ ಉತ್ತರ ಮುಂದಿನ ಐದು ಮಂತ್ರಗಳಲ್ಲಿದೆ.

ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥೧೩॥
ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।
ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥೧೪॥

ಅರ್ಥ:– ಸರ್ವಕರ್ಮಣಾಂ=ಎಲ್ಲ ಕರ್ಮಗಳ ಸಿದ್ಧಯೇ=ಸಿದ್ಧಿಗಾಗಿ ಏತಾನಿ ಪಂಚ ಕಾರಣಾನಿ=ಈ ಕೆಳಗಿನ ಐದು ಕಾರಣಗಳು ಅವಶ್ಯವೆಂದು ಸಾಂಖ್ಯೇ ಕೃತಾಂತೇ= ಸಾಂಖ್ಯ ಗ್ರಂಥಗಳಲ್ಲಿ ಪ್ರೋಕ್ತಾನಿ= ಹೇಳಲ್ಪಟ್ಟಿವೆ. (ಅವುಗಳನ್ನು) ಮೇ=ನನ್ನಿಂದ ನಿಬೋಧ = ತಿಳಿದುಕೊ. ಅವು ಹೀಗಿವೆ: ಸ್ಥಾನ, ಕರ್ತಾ, ಬಹುವಿಧ ಸಾಧನ, ವಿವಿಧ ಯತ್ನ ಮತ್ತು ದೈವ.

ವಿವರಣ:– ಸೃಜನ ರಕ್ಷಣ ನಾಶ, ಯಜ್ಞ ದಾನ ತಪ, ಶ್ರವಣ ಮನನ ನಿಧಿಧ್ಯಾಸ ಇಂಥ ಅಸಂಖ್ಯ ಕಾರ್ಯಗಳು ಸಾಗಬೇಕಾದರೆ ಐದು ಪ್ರಮುಖ ಕಾರಣಗಳು ಅಗತ್ಯ ಎಂದು ಸಾಂಖ್ಯ ಶಾಸ್ತ್ರಜ್ಞರು ಹೇಳುತ್ತಾರೆ. ಅವು ಹೀಗಿವೆ:

(೧) ಅಧಿಷ್ಠಾನ: ಪಂಚವಿಂಶತಿ ತತ್ತ್ವಗಳಿಗೆ ಆಶ್ರಯಸ್ಥಾನವಾದ ದೇಹ. (೨) ಕರ್ತಾ: ದೇಹಾದಿಗಳಲ್ಲಿ ನಾನು ನನ್ನದು ಎಂಬ ಭಾವವಿಡಿದ ಜೀವಾತ್ಮ. (೩) ಕರಣ: ಬಾಹ್ಯಾಂತರೇಂದ್ರಿಯಗಳು. (೪) ಚೇಷ್ಟೆ: ಪ್ರಾಣಾದಿವಾಯುವಿನ ವಿವಿಧ ಚಲನವಲನಗಳು. (೫) ದೈವ: ಹೃದಯಾಂತರ್ಗತವಾಗಿ ಮಿನುಗುವ ಆತ್ಮಚೇತನ.

ಯಾವುದೇ ಕಾರ್ಯಕ್ಕೆ ಈ ಪಂಚಕಾರಣಗಳು ಅಗತ್ಯ ಎಂಬುದನ್ನು ಒಂದು ಉದಾಹರಣೆಯಿಂದ ಸ್ಪಷ್ಟಪಡಿಸಬಹುದು: ಪುಷ್ಪದರ್ಶನ– ಇದು ಕ್ರಿಯೆ. ಈ ಕ್ರಿಯೆ ನಡೆಯಬೇಕಾದರೆ ದೇಹ, ಜೀವ, ಇಂದ್ರಿಯ, ಪ್ರಾಣ ಹಾಗು ಅಂತಸ್ಥ ದೇವಚೇತನ ಬೇಕು. ಅಂದರೆ, ಪರಮಾತ್ಮನ ಸಾನಿಧ್ಯದಲ್ಲಿ ಜೀವಪುರುಷನು ಪ್ರಾಣಚೇಷ್ಟಾಯುಕ್ತ ದೇಹದಲ್ಲಿ ಕುಳಿತು ಮನಸ್ಸು ಹಾಗು ನೇತ್ರದ ಮೂಲಕ ಪುಷ್ಪವನ್ನು ನೋಡುತ್ತಾನೆ. ಐದು ಕಾರಣಸಾಮಗ್ರಿಗಳಲ್ಲಿ ಒಂದು ಕಡಿಮೆಯಾದರೂ ಕಾರ್ಯವಿಲ್ಲ. ಬರೀ ಜೀವಪುರುಷ ತಾನೊಬ್ಬನೆ ಏನು ಮಾಡಬಲ್ಲ? ನಾನೇ ಸರ್ವ ಕಾರ್ಯಗಳ ಕರ್ತ ಎಂದು ಅವನು ತಿಳಿದು ಕೊಂಡಿದ್ದರೆ ಅವನೊಬ್ಬ ಅವಿಪಶ್ಚಿತ. ಅವನು ಮಾಡಿದ ಕರ್ಮಗಳಿಂದ ಬಂಧಿತ ನಾಗುತ್ತಾನೆ. ಗರ್ವ ದರ್ಪ ಕ್ರೋಧಗಳು ಅವನನ್ನು ಮುತ್ತಿಕೊಳ್ಳುತ್ತವೆ. ದೈಹಿಕ ಹಾಗು ಸಾಮಾಜಿಕ ಜಾತಿ ಗೋತ್ರ ಪಂಥ ಪಂಗಡಗಳ ಜಾಲದಲ್ಲಿ ಬಿದ್ದು ಬಳಲುತ್ತಾನೆ.

ಜಾಣನು ಅರಿತವ, ಕಾರ್ಯ ಕಾರಣ ಮೀಮಾಂಸೆಯ ಪರಿಜ್ಞಾನ ಉಳ್ಳವ.

ಯಾವ ಕಾರ್ಯ ಮಾಡಿದರೂ ಅದಕ್ಕೆ ಪಂಚ ಕಾರಣಗಳೇ ಕಾರಣ ವಿನಃ ತಾನು ಕಾರಣನಲ್ಲ ಎಂಬ ದೃಢವಾದ ತಿಳಿವು ಅವನಿಗಿದೆ. 'ನಾನು ಕರ್ತನಲ್ಲ, ಸಾಕ್ಷಿ!' 'ನಾನು ಭೋಕ್ತೃವಲ್ಲ, ನಿತ್ಯತೃಪ್ತ!' 'ನಾನು ಜ್ಞಾತೃವಲ್ಲ, ಜ್ಞಾನಸಾಗರ!' ಇವು ಅವನ ಅನುಭವ ವಚನಗಳು. ಅವನು ವರ್ಣಾಶ್ರಮಗಳ ಭಾವವಿಲ್ಲದ ಸಾಮ್ಯವಾದಿ! ನಿರಭಿಮಾನಿಯಾದ ಕರ್ಮಯೋಗಿ! ಕಾಮಾದಿ ವೃತ್ತಿಗಳಿಲ್ಲದ ಪ್ರಶಾಂತಾತ್ಮ!

"ಭರತರ್ಷಭ, ಕಾರ್ಯ ಕಾರಣ ಸಿದ್ಧಾಂತವನ್ನು ನಿಖರವಾಗಿ ಜಾನಿಸು. ನೀನು ವಿಮಲ ಚೇತನ! ನಿನ್ನ ಪರಮಾಧಿಷ್ಠಾನದಲ್ಲಿ ಪ್ರಕೃತಿಯ ಕೈಚಳಕದಿಂದ ಸಹಸ್ರಾರು ಕಾರ್ಯಗಳು ಘಟಿಸುತ್ತವೆಯಾದರೂ ನಿನಗೆ ಅವುಗಳ ಸಂಬಂಧ ವಿಲ್ಲ. ನೀನು ನಿರ್ಲಿಪ್ತ ನಿರಂಜನ."

ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥೧೫॥

ಅರ್ಥ:— ನರಃ= ಮನುಷ್ಯನು, ಶರೀರವಾಙ್ಮನೋಭಿಃ= ಶರೀರ ವಾಕ್ಕು ಹಾಗು ಮನಸ್ಸಿನಿಂದ ಯತ್= ಯಾವ ನ್ಯಾಯ್ಯಂ ವಾ= ನ್ಯಾಯವಾದ ಅಥವಾ ವಿಪರೀತಂ ವಾ= ವಿಪರೀತವಾದ ಕರ್ಮ= ಕರ್ಮವನ್ನು ಪ್ರಾರಭತೇ= ಪ್ರಾರಂಭಿಸುತ್ತಾನೆಯೋ ಏತೇ ಪಂಚ = ಈ ಐದು ತಸ್ಯ= ಅದರ ಹೇತವಃ= ಕಾರಣಗಳು.

ಭಾವ:— "ಪುರುಷರ್ಷಭ, ಮನುಷ್ಯನು ತನ್ನ ದೇಹ ವಾಣಿ ಹಾಗು ಮನಸ್ಸಿನಿಂದ ಹಲವಾರು ಕರ್ಮ ಆಚರಿಸುತ್ತಾನೆ; ಆ ಕರ್ಮ ನ್ಯಾಯಸಮ್ಮತ ವಿರಲಿ ಅಥವಾ ಅಧರ್ಮಪರವಾಗಿರಲಿ ಅದಕ್ಕೆ ಮೇಲೆ ಹೇಳಿದ ಪಂಚಕಾರಣ ಗಳು ಮಾತ್ರ ಅತ್ಯವಶ್ಯ."

ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।
ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥೧೬॥

ಅರ್ಥ:— ಏವಂ ಸತಿ= ಹೀಗಿರಲಾಗಿ (ಸಕಲ ಕರ್ಮಗಳಿಗೆ ಪಂಚಕಾರಣಗಳು ಅವಶ್ಯ ಎಂಬ ಮಾತು ಸತ್ಯವಿರಲಾಗಿ) ಯಃ= ಯಾವನು, ಅಕೃತ ಬುದ್ಧಿತ್ವಾತ್= ಅಸಂಸ್ಕೃತ ಬುದ್ಧಿಯ ಮೂಲಕ ಕೇವಲಂ ಆತ್ಮಾನಂ ಕರ್ತಾರಂ ಪಶ್ಯತಿ= ತಾನೇ ಕರ್ತನೆಂದು ನೋಡು ತ್ತಾನೆಯೋ. ಸಃ ದುರ್ಮತಿಃ= ಆ ಅಸಂಸ್ಕೃತ ಬುದ್ಧಿಯವನು, ನ ಪಶ್ಯತಿ= ನೋಡುವದಿಲ್ಲ.

ವಿವರಣ:- ಭಗವಂತ:- "ಭಾರತ, ನಾನು ಆಗಲೇ ಹೇಳಿದಂತೆ ಪ್ರಾಪಂಚಿಕ ಕರ್ಮಗಳಿಗೆ ಮತ್ತು ಯಜ್ಞಾದಿ ಧಾರ್ಮಿಕ ಕರ್ಮಗಳಿಗೆ ಜೀವಾತ್ಮನು ಕಾರಣ ನಲ್ಲ, ದೇಹ ಇಂದ್ರಿಯ ಪ್ರಾಣ ಅಹಂಕಾರ ಮತ್ತು ಆಂತರಿಕ ಪ್ರಭುಶಕ್ತಿಯು ಕಾರಣ. ಆದರೆ ಶ್ರವಣ ಸ್ವಾಧ್ಯಾಯ ಚಿಂತನಗಳಿಂದ ಸುಸಂಸ್ಕೃತವಾಗದ ಬುದ್ಧಿ ಯವರು ಮಾತ್ರ ನನ್ನ ಮಾತಿನ ಮರ್ಮ ತಿಳಿಯದೆ ತಾವೇ ಕರ್ಮಕರ್ತೃಗಳೆಂದು ಭಾವಿಸಿ ಪ್ರಪಂಚದಲ್ಲಿ ಬದ್ಧರಾಗುತ್ತಾರೆ. ಇವರು ದುರ್ಮತಿಗಳು."

(೧) ಜೀವಾತ್ಮನು ವಾಸ್ತವಿಕವಾಗಿ ಪರಮಾತ್ಮನೇ. ಅವನು ಅರಿವು ಆನಂದ

ಗಳ ಅಪ್ರತಿಮ ಘನವಸ್ತು, ನಿತ್ಯ ನಿಸ್ಸೀಮ ಚೈತನ್ಯಭಾನು! ಅವನ ಪ್ರಕಾಶದ ಲ್ಲಿಯೇ ಜಡವಿಶ್ವ, ಮಹದಾದಿ ರೂಪದಿಂದ ವಿಕರಿಸುವ ಪ್ರಕೃತಿ ಹಾಗು ಮನ ಬುದ್ಧಿ ಅಹಂಕಾರಗಳು ತೋರುತ್ತವೆ. ನಿಷೇಧಾತ್ಮಕ ಶಬ್ದಗಳಲ್ಲಿ ಹೇಳುವದಾದರೆ ಅವನು ದೇಹೇಂದ್ರಿಯಾದಿ ಕಾರ್ಯ-ಕಾರಣಗಳಲ್ಲ, ಭೂಮಿ, ಜಲಾದಿ ಭೂತಗ ಳಲ್ಲ, ದೇವ ದಾನವ ಮಾನವ ಜೀವಿಯಲ್ಲ; ಅವನು ಸಾಂಖ್ಯ ಶಾಕ್ತನಲ್ಲ, ಶುಕ್ಲ ಕೃಷ್ಣನಲ್ಲ, ಹ್ರಸ್ವ ದೀರ್ಘನಲ್ಲ! ಅವನಿಗೆ ಭಿನ್ನವಾಗಿ ವೇದ ಯಜ್ಞ ತೀರ್ಥಕ್ಷೇತ್ರ ಗಳಲ್ಲ. ಅವನು ದ್ವೈತ ಅದ್ವೈತನಲ್ಲ, ಶೈವ ವೈಷ್ಣವನಲ್ಲ! ಪುಣ್ಯ ಪಾಪ ಸುಖ ದುಃಖ ಬಂಧ ಮೋಕ್ಷ ಅಂತರ ಬಾಹ್ಯ ಸಾಕಾರ ನಿರಾಕಾರ ಯಾವುದೂ ಅವನಿಗೆ ಸಂಬಂಧವಿಲ್ಲ. ಅವನು ಸರ್ವಾವಸ್ಥಾಶ್ರಯನಾದ ಮಹಾದೇವ.

(೨) ಅಂಥ ಜೀವಾತ್ಮನ ಅಂದರೆ ಪರಮ ಚೈತನ್ಯ ಪ್ರಭುವಿನ ಸನ್ನಿಧಾನ ದಲ್ಲಿ ಪಂಚ ಕಾರಣಗಳು (ದೇಹ, ಇಂದ್ರಿಯ, ಅಹಂಭಾವ, ಪ್ರಾಣ ಮತ್ತು ಅಂತ ಶ್ಚೇತನ) ಕಾರ್ಯ ನಿರ್ವಹಿಸುತ್ತವೆ. ಆ ಕಾರ್ಯಗಳ ಮತ್ತು ಕಾರಣಗಳ ಸಂಪ ರ್ಕವು ದೇವನಿಗಿಲ್ಲ. ಅವನು ಅಕರ್ತ, "ತತ್ತ್ವಮಸಿ." ಅಂಥ ಪರಮ ಚೈತನ್ಯ ಪ್ರಭುವೇ ನೀನಿರುತ್ತಿ–ಹೀಗೆ ಅನುಭಾವಿ ಗುರುಗಳು ಉಪದೇಶಿಸುತ್ತಾರೆ. ಮನ ಶುದ್ಧಿವುಳ್ಳ ವಿವೇಕಿಯು ಗುರುವಿನ ಅಂತರ್ಯವನ್ನು ಗ್ರಹಿಸಿ ತಾನೇ ದೇವ; ತನಗೆ ಕರ್ತೃತ್ವ ಭೋಕ್ತೃತ್ವಾದಿಗಳಿಲ್ಲವೆಂದು ಅನುಭವತಃ ತಿಳಿದುಕೊಳ್ಳುತ್ತಾನೆ.

(೩)ಮತಿಗೆಟ್ಟ ಮಾನವನಿಗೆ ಗುರೂಪದೇಶ ತಿಳಿಯದು. ಅವನು ತನ್ನ ನಿಜ ರೂಪವನ್ನು ಮರೆಯುತ್ತಾನೆ. ದೇಹಾದಿಗಳೇ ತಾನೆಂದು, ಕಾರ್ಯಗಳಿಗೆಲ್ಲ ತಾನೇ ಕರ್ತೃವೆಂದು ಭಾವಿಸುತ್ತಾನೆ. ಆಶೆ ಆಮಿಷಗಳಿಗೆ ಬಲಿಯಾದ ಅವನು ವಿಷಯ ಪ್ರಾಪ್ತಿಗಾಗಿ ಹಗಲು ರಾತ್ರಿ ಚಿಂತಿಸುತ್ತಾನೆ. ಬಾಯಿಯಲ್ಲಿರುವ ರೊಟ್ಟಿ ಜಲ್ಲಿ ಪ್ರತಿಬಿಂಬಿತವಾದ (ಜಲಸ್ಥ)ರೊಟ್ಟಿಗಾಗಿ ನದಿಯ ಜಿಗಿದ ನಾಯಿಯಂತೆ ಅಜ್ಞಾ ನಿಯ ಬದುಕು; ಅಂತರಂಗದಲ್ಲಿರುವ ಆತ್ಮಾನಂದವನ್ನು ಮರೆತು ವಿಷಯ ಸುಖ ಕ್ಕಾಗಿ ಪ್ರಪಂಚ ಪ್ರಪಾತಕ್ಕೆ ಆತ ಜಿಗಿದ! ಆ ಕಡೆ ಆತ್ಮಾನಂದವೂ ಇಲ್ಲ, ಈ ಕಡೆ ವಿಷಯಸುಖವೂ ಇಲ್ಲ! ಕಂಗೆಟ್ಟ ಅವನು ಕಂಡ ಕಂಡವರಿಗೆ ಸುಖಕ್ಕಾಗಿ ಕೈಚಾಚ ತೊಡಗಿದ! ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥ ಸನ್ಯಾಸ ಆಶ್ರಮಗಳನ್ನು ಸ್ವೀಕರಿಸಿ ಅರಸಿದ; ಆದರೆ ಅಭಿನಿವೇಶ ತಾಳಿದ ಅವನಿಗೆ ಸುಖವು ಕನಸಿನ ಸಿಧಿ ಯಾಯಿತ್ತು. ಏನು ಮಾಡಿದರೂ ಸುಖ ದೊರೆಯದ್ದರಿಂದ 'ಹುಚ್ಚಾದ', ಬುದ್ಧಿ ಕಳೆದುಕೊಂಡ, ದುರ್ಮತಿ ಎನಿಸಿದ.

ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।
ಹತ್ವಾಪಿ ಸ ಇಮಾಂಲ್ಲೋಕಾನ್ನ ಹಂತಿ ನ ನಿಬಧ್ಯತೇ ॥೧೭॥

ಭಾವ:–ಯಾವನಿಗೆ ಅಹಂಕಾರದ ಭಾವನೆಯಿಲ್ಲವೋ ಯಾವನ ಬುದ್ಧಿಯು ಕರ್ಮಗಳಿಂದ ಅಲಿಪ್ತವೋ ಅವನು ಈ ಜನರನೆಲ್ಲ ಸಂಹರಿಸಿದರೂ ತತ್ತ್ವತಃ

ಸಂಹರಿಸಿಸುವದಿಲ್ಲ; ಬದ್ಧನಾಗುವದೂ ಇಲ್ಲ.

ವಿವರಣೆ:– 'ನಾನು' ಎಂಬ ಭಾವವು ಯಾವ ಮನುಷ್ಯನ ಹೃದಯದಿಂದ ಮರೆಯಾಗಿದೆಯೋ ಆತ ನಿರಹಂಕಾರಿ; ಅಕರ್ತ; ಅಲಿಪ್ತ. ನೀರತಾವರೆಯಂತೆ ಅವನ ಬದುಕು. ಯಾರ ಸಾವಿನಿಂದಲೂ ಅವನಿಗೆ ದುಃಖವಾಗದು; ಯಾರ ಸಾವೂ ಅವನನ್ನು ಬಾಧಿಸದು. ಏಕೆಂದರೆ ಕರ್ಮಗಳನ್ನು ಜೀವಾತ್ಮನಿಗೆ ಅಂಟಿಸುವ ಅಭಿಮಾನವು ಅವನಲ್ಲಿ ಇಲ್ಲವೇ ಇಲ್ಲ.

ಸಂಬಂಧ:– ಕರ್ಮಪ್ರೇರಕಗಳ ಹಾಗು ಕರ್ಮಸಂಗ್ರಾಹಕಗಳ ಬಗ್ಗೆ ಹೇಳಲಾಗುವದು.

ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ।
ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥೧೮॥

ಭಾವ:–ಜ್ಞಾನ(ಬುದ್ಧಿವೃತ್ತಿ), ಜ್ಞೇಯ (ಬುದ್ಧಿಗಮ್ಯವಿಷಯ),ಜ್ಞಾತಾ (ಜ್ಞಾನ ಮಾಡಿಕೊಳ್ಳುವ ಜೀವ) ಈ ಮೂರು ಕರ್ಮಪ್ರೇರಕಗಳು. ಕರಣ (ಇಂದ್ರಿಯ), ಕರ್ಮ (ಕಾರ್ಯವಿಷಯ), ಕರ್ತಾ (ಜೀವ) ಈ ಮೂರು ಕರ್ಮ ನಿರ್ವಾಹಕಗಳು.

ವಿವರಣ:– (೧) ಒಂದು ಕರ್ಮವು ಜರುಗಬೇಕಾದರೆ ಎರಡು ಸಾಮಗ್ರಿಗಳು ಅವಶ್ಯ- (ಅ) ಕರ್ಮಪ್ರೇರಕ ಸಾಮಗ್ರಿ (ಬ) ಕರ್ಮನಿರ್ವಾಹಕ ಸಾಮಗ್ರಿ. ಜ್ಞೇಯ (ಜ್ಞಾನಕ್ಕೆ ವಿಷಯವಾದ ವಸ್ತು), ಜ್ಞಾನ (ವಸ್ತು ಪ್ರಕಾಶಕ ಬುದ್ಧಿವೃತ್ತಿ) ಮತ್ತು ಜ್ಞಾತಾ (ಬುದ್ಧಿವೃತ್ತಿಯ ಮೂಲಕ ವಸ್ತುವಿನ ಜ್ಞಾನ ಮಾಡಿಕೊಳ್ಳುವ ಜೀವಾತ್ಮ) ಈ ಮೂರು ಕರ್ಮ ಪ್ರೇರಕ ಸಾಮಗ್ರಿಯ ಘಟಕಗಳು. ಕರ್ಮ (ಇಂದ್ರಿಯಗಳ ವಿಷಯ) ಕರಣ (ವಾಗಾದಿ ಪಂಚ ಕರ್ಮೇಂದ್ರಿಯ, ಶ್ರೋತ್ರಾದಿ ಪಂಚ ಜ್ಞಾನೇಂದ್ರಿಯ ಹಾಗು ಮನ ಬುದ್ಧಿ ಚಿತ್ತ ಅಹಂಕಾರ ಎಂಬ ಹದಿನಾಲ್ಕು ಇಂದ್ರಿಯಗಳು) ಮತ್ತು ಕರ್ತಾ (ಜೀವಾತ್ಮನು) ಈ ಮೂರು ಕರ್ಮನಿರ್ವಾಹಕ ಸಾಮಗ್ರಿಯ ಘಟಕಗಳು. ಜೀವಾತ್ಮನು ಬುದ್ಧಿವೃತ್ತಿಯ ಮೂಲಕ ಜ್ಞೇಯವಸ್ತುವನ್ನು ಅರಿಯುತ್ತಾನೆ. ಆಗ ಆ ಜ್ಞಾತ ವಸ್ತುವನ್ನು ಪಡೆಯಬೇಕೆಂಬ ಬಯಕೆ ಅವನಲ್ಲಿ ಉದಿಸುತ್ತದೆ. ಆ ಬಯಕೆಯಿಂದ ಪ್ರಚೋದನೆ ಹೊಂದಿದ ಜೀವಾತ್ಮನು ಇಂದ್ರಿಯಗಳ ಸಹಾಯದಿಂದ ಆ ಇಚ್ಛಿತ ವಸ್ತುಪ್ರಾಪಕ ಕರ್ಮವನ್ನು ಆಚರಿಸುತ್ತಾನೆ. ಒಂದು ವೇಳೆ ಜ್ಞಾತ ವಸ್ತುವು ಅಹಿತವಾಗಿದ್ದರೆ ಜೀವಾತ್ಮನು ಆ ವಸ್ತುನಿವಾರಕ ಕರ್ಮ ಮಾಡುತ್ತಾನೆ.

(೨) ಜಗತ್ತಿನಲ್ಲಿ ಮೂರು ಬಗೆಯ ವಸ್ತುಗಳಿವೆ: ಭೌತವಸ್ತು (ಧನ, ಕನಕ ಇತ್ಯಾದಿ), ವೈದಿಕ ವಸ್ತು (ಸ್ವರ್ಗ ಇತ್ಯಾದಿ) ಮತ್ತು ಪಾರಮಾರ್ಥಿಕ ವಸ್ತು (ಪರಮಾತ್ಮ). (ಅ) ಜ್ಞಾತೃವಾದ ಜೀವಾತ್ಮನ ಸಾನಿಧ್ಯದಿಂದ ಹೊರಟ ಬುದ್ಧಿವೃತ್ತಿಯು ನೇತ್ರಾದಿಗಳ ಮೂಲಕ ಹೊರಗೆ ಹೋಗಿ ಭೌತವಸ್ತುವಿನ ಆಕಾರ

ವಾಗುತ್ತದೆ. ಆಗ ಆ ನಿರಾವೃತ ಭೌತವಸ್ತುಗತ ಸುಪ್ತಚೇತನ ಮತ್ತು ಬುದ್ಧಿ ಗತ ಚೇತನಗಳೆರಡೂ ಒಂದಾಗುವದರಿಂದ ಭೌತವಸ್ತುವಿನ ಜ್ಞಾನವು ಜೀವನು ನಿಗೆ ಉಂಟಾಗುತ್ತದೆ. ಈ ಜ್ಞಾನವಾದ ಬಳಿಕ ಆ ವಸ್ತುವನ್ನು ಪಡೆಯುವ ಇಚ್ಛೆ ಉದಿಸುತ್ತದೆ. ಆಗ ಜೀವಾತ್ಮನು ಜ್ಞಾನ-ಇಚ್ಛೆಗಳಿಂದ ಪ್ರೇರಿತನಾಗಿ ಆ ವಸ್ತುವನ್ನು ಸಂಪಾದಿಸುವಂತೆ ಮನಸ್ಸಿಗೆ ಪ್ರೇರಣೆ ನೀಡುತ್ತಾನೆ; ಮನಸ್ಸು ಹಸ್ತಕ್ಕೆ ಪ್ರಚೋದನೆ ಕೊಡುತ್ತದೆ; ಹಸ್ತವು ಭೌತವಸ್ತುವನ್ನು ಗ್ರಹಿಸುತ್ತದೆ. ಇದು ಭೌತವಸ್ತುಪ್ರಾಪ್ತಿಯ ಕ್ರಮ. (ಬ) ಜೀವಪುರುಷನು ಶ್ರೋತ್ರೇಂದ್ರಿಯ ದಿಂದ ವೈದಿಕ ಶಬ್ದಗಳನ್ನು ಆಲಿಸಿ ಸ್ವರ್ಗದ ಜ್ಞಾನ ಮಾಡಿಕೊಳ್ಳುತ್ತಾನೆ. ಸ್ವರ್ಗ ವನ್ನು ಪಡೆಯಬೇಕೆಂಬ ಬಲವಾದ ಇಚ್ಛೆ ತಾಳುತ್ತಾನೆ. ಇಂದ್ರಿಯಗಳ ಮೂಲಕ ಯಜ್ಞಾದಿ ಕ್ರಿಯೆಗಳನ್ನಾಚರಿಸಿ ಪುಣ್ಯ ಸಂಚಯಿಸಿ ಮರಣಾನಂತರ ಸ್ವರ್ಗಕ್ಕೇರು ತ್ತಾನೆ. ಇದು ವೈದಿಕ ವಸ್ತುಪ್ರಾಪ್ತಿಯ ಕ್ರಮ. (ಕ) ಜೀವಪುರುಷನು ಶ್ರುತಿ ಗುರುಗಳಿಂದ ಉಪದಿಷ್ಟನಾಗಿ ಪರಮಾತ್ಮನ ಪರೋಕ್ಷ ಜ್ಞಾನ ಗಳಿಸುತ್ತಾನೆ. ಆಗ ಆ ದೇವನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂಬ ಇಚ್ಛೆ ತಲೆದೋರುತ್ತದೆ. ದೇವನ ಪರೋಕ್ಷ ಜ್ಞಾನ ಹಾಗು ದೇವಸಾಕ್ಷಾತ್ಕಾರದ ಪ್ರಬಲೇಚ್ಛೆಗಳಿಂದ ಪ್ರಚೋದನೆ ಪಡೆದ ಜೀವನು ದೇವ ಚಿಂತನದಲ್ಲಿ ತನ್ನ ಅಂತರಿಂದ್ರಿಯವನ್ನು ತೊಡಗಿಸುತ್ತಾನೆ; ಪರಿಶುದ್ಧವಾದ ಅಂತರಿಂದ್ರಿಯವು ವೈಷಯಿಕ ಲಾಲಸೆಯನ್ನು ತೊರೆದು ವೈದಿಕ ಸುಖದ ಅಭಿಲಾಷೆನೀಗಿ ಬಹು ಗಾಢವಾದ ದೇವಧ್ಯಾನದಲ್ಲಿ ರತವಾಗು ವದು. ಈ ಧ್ಯಾನವು ಕ್ರಮವಾಗಿ ಪಕ್ವ, ಪಕ್ವತರ, ಪಕ್ವತಮಗೊಂಡು ಸಮಾಧಿಯ ರೂಪ ತಳೆಯುವದು. ಆಗ ಅಂತರಿಂದ್ರಿಯವಾದ ಮನಸ್ಸು ಧ್ಯೇಯ ದೇವನಲ್ಲಿ ಸಾಮರಸ್ಯ ಹೊಂದುವದು. ಮನೋಗತ ಜೀವಾತ್ಮನು ತಕ್ಷಣ ದೇವನಲ್ಲಿ ಒಂದಾ ಗುವನು! ಆಗ ಉಂಟಾಗುವ ಅಮೃತೋಪಮ ಅನುಭವವೇ ದೇವಸಾಕ್ಷಾತ್ಕಾರ! ಇದು ಪಾರಮಾರ್ಥಿಕ ವಸ್ತುಪ್ರಾಪ್ತಿಯ ಕ್ರಮ.

(೩) ಒಟ್ಟಿನಲ್ಲಿ ಭೌತಿಕ ವೈದಿಕ ಮತ್ತು ಪಾರಮಾರ್ಥಿಕ ವಸ್ತುಗಳನ್ನು ಸಂಪಾದಿಸಬೇಕಾದರೆ ಆ ವಸ್ತುವಿನ ಜ್ಞಾನ, ಆ ವಸ್ತುವನ್ನು ಗಳಿಸಬೇಕೆಂಬ ಇಚ್ಛೆ ಮತ್ತು ಪ್ರಯತ್ನಗಳು ಅತ್ಯಗತ್ಯ. ಜ್ಞಾನ ಹಾಗು ಇಚ್ಛೆಗಳು ಸಂಪಾದನಾ ಕರ್ಮಕ್ಕೆ ಪ್ರೇರಕ-ಸಾಮಗ್ರಿಯಾಗಿವೆ; ಪ್ರಯತ್ನವು ಸಂಪಾದನಾಕರ್ಮದ ನಿರ್ವಾ ಹಕ ಸಾಮಗ್ರಿಯಾಗಿದೆ.

ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।
ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥೧೯॥

ಭಾವ:– ಸತ್ವ ರಜ ತಮ ಈ ಗುಣಭೇದದಿಂದ ಜ್ಞಾನ ಕರ್ಮ ಕರ್ತೃ ಇವುಗಳಲ್ಲಿ ಮೂರು ಪ್ರಕಾರಗಳಿವೆ, ಎಂದು ಸಾಂಖ್ಯ ಶಾಸ್ತ್ರದಲ್ಲಿ ಹೇಳಲಾಗಿದೆ. ಅದರಲ್ಲಿದ್ದಂತೆಯೇ ಹೇಳುತ್ತೇನೆ ಕೇಳು.

ಸಂಬಂಧ:– ತ್ರಿವಿಧ ಜ್ಞಾನಗಳ ವಿವರಣೆ ಮೂರು ಮಂತ್ರಗಳಲ್ಲಿದೆ.

ಸಾತ್ವಿಕ ಜ್ಞಾನ

ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।
ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಮ್ ॥೨೦॥

ಭಾವ:– ಭಿನ್ನ ಭಿನ್ನವಾದ ಸಕಲ ಭೂತಗಳಲ್ಲಿ ಏಕೈಕವಾದ ಅಖಂಡ (ಅವಿಭಕ್ತ) ಅವ್ಯಯ (ಭಗವಂತನ) ರೂಪು ಯಾವ ಜ್ಞಾನದಿಂದ ಗೋಚರವಾಗುತ್ತದೆಯೋ ಆ ಜ್ಞಾನವು ಸಾತ್ವಿಕವೆಂದು ತಿಳಿ.

ವಿವರಣೆ:– ಪರಮಾತ್ಮನು ಅವ್ಯಯ, ಅಖಂಡ, ಅಪರಿಮಿತ ಹಾಗು ಅವಿಕೃತ. ಅದ್ವಯನಾದ ಅವನೇ ವಿಭಿನ್ನವಾದ ಪದಾರ್ಥಗಳಲ್ಲಿ ನೆಲೆಸಿದ್ದಾನೆ. ಅಸಂಖ್ಯ ಘಟಗಳಲ್ಲಿ ಮೃತ್ತಿಕೆಯೊಂದೇ ವ್ಯಾಪಿಸಿರುವಂತೆ, ದೇವನು ಅಗಣಿತ ಪಿಂಡಾಂಡ ಬ್ರಹ್ಮಾಂಡಗಳಲ್ಲಿ ತುಂಬಿಕೊಂಡಿದ್ದಾನೆ.

ಅವನ ಶಾಂತ ಪ್ರಕಾಶವು ಭೌತವಿಶ್ವದಲ್ಲಿ ಮನೋಮಂಡಲದಲ್ಲಿ ಹಾಗು ಅಲೌಕಿಕ ಮಹಾಕಾಶದಲ್ಲಿ ಹರಡಿದೆ. ಕುಲಜ ಅಂತ್ಯಜ, ಪಂಡಿತ ಅಜ್ಞ, ಧನಿಕ ದರಿದ್ರ ಎಲ್ಲರ ಹೃದಯ ಮಂದಿರದಲ್ಲಿ ಅವನ ವಾಸ! ಜಾಗ್ರ ಸ್ವಪ್ನ ಸುಪ್ತಿ ತುರಿಯ ತುರಿಯಾತೀತವೆಂಬ ಎಲ್ಲ ಅವಸ್ಥೆಗಳಲ್ಲಿ ಅವನ ನೆಲೆ! ವಿಶ್ವಜನನಿಯಾದ ಪ್ರಕೃತಿಮಾತೆಯೇ ಅವನ ಪ್ರಭೆ. ವಿರಾಡಾತ್ಮ ಅಂತರಾತ್ಮ ಹಾಗು ಹಿರಣ್ಯಗರ್ಭರು ಅವನ ಆಶ್ರಯದಲ್ಲಿ ಮೂಡಿದ ಮೂರ್ತಿಗಳು!

ದೇವನ ಲೀಲೆ ಅವರ್ಣನೀಯ. ಅವನು ಅಶಬ್ದ ಅಸ್ಪರ್ಶ ಅರೂಪ ಅರಸ ಅಗಂಧ ಹಾಗು ಮನಸ್ಸಿನ ಮನನಕ್ರಿಯೆ, ಬುದ್ಧಿಯ ನಿಶ್ಚಯಕ್ರಿಯೆ, ಚಿತ್ತದ ಅವಧಾರಣಕ್ರಿಯೆ, ಅಹಂಕಾರದ ಅಹಮಿಸುವ ಕ್ರಿಯೆ ಮತ್ತು ಜ್ಞಾತೃವಿನ ತಿಳುವಳಿಕೆಯ ಭಾವ – ಇವು ಅವನನ್ನೇ ಅವಲಂಬಿಸಿವೆ. ವೈವಿಧ್ಯಮಯವಾದ ವಿಶ್ವದ ಅಣು ಅಣುಗಳಲ್ಲಿ ಚಿರಂತನವಾಗಿ ನೆಲೆಸಿದ ಭಗವಂತನ ಅಗಾಧ ಸ್ವರೂಪವನ್ನು ಏನೆಂದು ಚಿತ್ರಿಸುವದು?

"ಮೃತ್ತಿಕೆಯೊಂದರಲ್ಲಾದ ಭಾಂಡದಂತೆ, ಚಿನ್ನವೊಂದರಲ್ಲಾದ ಆಭರಣದಂತೆ, ಉದಕವೊಂದರಲ್ಲಾದ ವಾರಿಕಲ್ಲಂತೆ, ಬ್ರಹ್ಮದಿಂದಲಾದ ಜಗವು ಭಿನ್ನವಲ್ಲಯ್ಯದು ಸಕಳೇಶ್ವರಯ್ಯಾ?"

"ವಿಶ್ವದೊಳಗೆಲ್ಲ ನೀನೇ ದೇವಾ. ವಿಶ್ವಭರಿತನು ನೀನೇ ದೇವಾ. ವಿಶ್ವರೂಪನು ನೀನೇ ದೇವಾ. ವಿಶ್ವಪತಿ ನೀನೇ ದೇವಾ. ವಿಶ್ವಾತೀತನು ನೀನೇ ದೇವಾ. ಅಖಂಡೇಶ್ವರಾ."

ಈ ಶರಣರ ನುಡಿಗಳು ದೇವನ ವಿಶ್ವವಿಸ್ತಾರವಾದ ಸ್ವರೂಪಕ್ಕೆ ಪ್ರಮಾಣಗಳು. ಹೀಗೆ, ವಿಭಿನ್ನವಾದ ಜಗತ್ತಿನಲ್ಲಿ ಅದ್ವಯನಾದ ಪರಮಾತ್ಮನನ್ನು ಗುರುತಿಸುವ ಜ್ಞಾನವೇ ಸಾತ್ವಿಕಜ್ಞಾನ. ಈ ಜ್ಞಾನ ಉಳ್ಳವನು ಸಾತ್ವಿಕಜ್ಞಾನಿ. ಅವನು ಜಗತ್ತನ್ನು ಹೇಗೆ ಕಾಣುತ್ತಾನೆ?

"ಘನ ಗಂಭೀರ ಮಹಾ ವಾರಿಧಿಯಲ್ಲಿ ನೊರೆ ತೆರೆ ಬುದ್ಬುಧ ಫೇನ ತರಂಗಗಳು

ತೋರಿತ್ತಲ್ಲಾ ಎಂದಡೆ ಅವು ಬೇರಾಗಬಲ್ಲವೆ? ಪರಶಿವನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡಗಳಾದುವಲ್ಲದೆ ಬೇರಾಗಬಲ್ಲವೇ? ಇದ ಬೇರೆಂಬ ಅರೆ ಮರುಳರ ನಾನೇ ನೆಂಬೆ? ವಿಶ್ವವ ತಿಳಿದು ನೋಡಲು ಚಿಮ್ಮಲಿಗೆಯ ಚನ್ನರಾಮನೆಂಬ ಲಿಂಗವು ತಾನೆ?"

ಏನಿರುವದೆಲ್ಲ ಸತ್ಯದೇವ. ವರ್ಣ ಆಶ್ರಮಗಳು, ದ್ವೈತಾದ್ವೈತಾದಿ ಸಿದ್ಧಾಂತಗಳು ತೋರಿಕೆ ಮಾತ್ರ! ವಾಸ್ತವಿಕವಾಗಿ ಎಲ್ಲವೂ ಚಿರಂತನಸತ್ಯ! ಸುಸ್ಪಷ್ಟವಾಗಿ ಹೇಳಬೇಕಾದರೆ, ವಿಶ್ವದ ಅಂತರಂಗದಲ್ಲಿ ಆತ್ಮರೂಪಾಗಿರುವ ಚೈತನ್ಯ ದೇವನು ಅದ್ವೈತ! ವಿಶ್ವರೂಪದಿಂದ ಅಭಿವ್ಯಕ್ತನಾದ ಪರಮೇಶನು ದ್ವೈತ!! ವಿಶ್ವಕ್ಕೂ ದೇವನಿಗೂ ಅಂತರವಿಲ್ಲವಾಗಿ, ಬೇರ್ಪಡಿಸಲು ಬಾರದಾಗಿ ವಿಶಿಷ್ಟಾದ್ವೈತ! ಒಂದು ಎರಡು ಹಲವು ಏನೆಲ್ಲವೂ ಸತ್ಯ. ಸುಳ್ಳು ಎಂಬುದೇ ಇಲ್ಲ. ಇದೇ ಸಾತ್ವಿಕ ದೃಷ್ಟಿ.

## ರಾಜಸ ಜ್ಞಾನ

ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।
ವೇತ್ತಿ ಸರ್ವೇಷು ಭೂತೇಷು ತಜ್ಞಾನಂ ವಿದ್ಧಿ ರಾಜಸಂ ॥೨೧॥

ಅರ್ಥ:– ಯತ್ ಜ್ಞಾನಂ=ಯಾವ ಜ್ಞಾನವು ಸರ್ವೇಷು ಭೂತೇಷು= ಸರ್ವ ಪ್ರಾಣಿಗಳಲ್ಲಿ ಪೃಥಗ್ವಿಧಾನ್ ನಾನಾ ಭಾವಾನ್= ಭಿನ್ನ ಲಕ್ಷಣದ ನಾನಾ ಜೀವಾತ್ಮರನ್ನು ಪೃಥಕ್ತ್ವೇನ= ಬೇರೆಯಾಗಿ ವೇತ್ತಿ= ತಿಳಿಯುತ್ತದೆಯೋ ತತ್ ಜ್ಞಾನಂ= ಆ ಜ್ಞಾನವು ರಾಜಸಂ ವಿದ್ಧಿ= ರಾಜಸವೆಂದು ತಿಳಿ.

ವಿವರಣೆ:- ಜೀವ–ಜೀವ, ಜೀವ–ಈಶ, ಜೀವ–ಜಡ, ಜಡ –ಜಡ ಹಾಗು ಜಡ – ಈಶ ಇವುಗಳಲ್ಲಿ ಆತ್ಯಂತಿಕ ಭೇದವಿದೆ ಎಂಬ ಭಾವ ಹುಟ್ಟಿಸುವ ಜ್ಞಾನವು ರಾಜಸಿಕ. ಈ ಜ್ಞಾನವುಳ್ಳವರು ರಾಜಸಿಕ ಜ್ಞಾನಿಗಳು. ಇವರ ಬುದ್ಧಿ ಹಾಗು ದೃಷ್ಟಿಗಳು ಅತಿ ಪರಿಚ್ಛಿನ್ನ. ಜಡವಸ್ತು ಮತ್ತು ಅನ್ಯ ಜೀವಜಂತುಗಳಲ್ಲಿ ಅದ್ವೈತ ಭಾವ ತಾಳುವದಂತು ದೂರವಿರಲಿ. ತಮ್ಮಂತೆ ಬಾಳಿದ ಮಾನವರಲ್ಲಿ ಕೂಡ ಸಮಸ್ನೇಹ ತೋರಲಾರರು. ಇವರ ಮನಸ್ಸು ಅಭಿಮಾನದಿಂದ ಆಕ್ರಮಿಸಲ್ಪಟ್ಟವಾಗಿದೆ. ಪಕ್ಷ ಪಂಗಡಗಳಲ್ಲಿ ಆಸಕ್ತರಾದ ಈ ಜನರು ಧರ್ಮಕ್ಕೆ ಪ್ರತಿಧರ್ಮ, ಮತಕ್ಕೆ ಪ್ರತಿಮತ, ಸಂಪ್ರದಾಯಕ್ಕೆ ಪ್ರತಿಸಂಪ್ರದಾಯಗಳನ್ನು ಕಟ್ಟಿ ಬೆಳೆಸುತ್ತಾರೆ. ಇಂದು ಮನೆಗೊಂದು ಧರ್ಮ, ಹತ್ತು ಜನರಿಗೊಂದು ದೇವತೆ, ಚಿತ್ರ ವಿಚಿತ್ರವಾದ ಆಚಾರ ವಿಚಾರ ಮತ್ತು ಕುರುಹುಗಳು ಕಾಣಬರುತ್ತಿವೆಯಲ್ಲವೆ? ಇದಕ್ಕೆಲ್ಲ ರಾಜಸಿಕ ಜ್ಞಾನಿಗಳೇ ಕಾರಣ. ತಾವು ಜಾಗತಿಕ ಮನುಕುಲವನ್ನೆಲ್ಲ ಛಿದ್ರವಿಚ್ಛಿದ್ರಗೊಳಿಸುತ್ತಿದ್ದೇವೆಂಬ ಅರಿವೇ ಅವರಿಗಿಲ್ಲ. ವಿಶ್ವದ ಮಹಾಮೂಲವಾದ ಚೈತನ್ಯಘನ ವಸ್ತುವಿನ ವಿಮಲ ದರ್ಶನ ಪಡೆಯದ ಅವರ ಮನಸ್ಸು ಧನ ಕನಕಾದಿ ವಿಷಯಗಳ ಮೇಲೆ ಕೇಂದ್ರಿತವಾಗಿದೆ!

## ತಾಮಸಿಕ ಜ್ಞಾನ

ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।

ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ।।೨೨।।

ಭಾವ:– ಯಾವ ಜ್ಞಾನವು ಇದೇ ಪರಿಪೂರ್ಣವೆಂಬಂತೆ ಒಂದೇ ಕಾರ್ಯ (ದೇಹ) ದಲ್ಲಿ ಆಸಕ್ತವಾಗಿದೆಯೊ ಅದು ತಾಮಸ ಜ್ಞಾನ. ಅದು ಹೇತುಶೂನ್ಯ, ಅಯಥಾರ್ಥ ಹಾಗು ಅಲ್ಪ.

ವಿವರಣೆ:– ಭೂತಗಳ ಕಾರ್ಯವಾದ ದೇಹವೇ ಆತ್ಮ ಎಂಬ ತಿಳುವಳಿಕೆಯೇ ತಾಮಸಿಕಜ್ಞಾನ. ಇದು ಅಯಥಾರ್ಥ! ಅನುಭವಕ್ಕೆ ಅಸಮ್ಮತ! ಪುರುಷಾರ್ಥ ಬಾಧಕ! ಅಷ್ಟೇ ಅಲ್ಲ, ಈ ಜ್ಞಾನವು ಅತಿ ಕ್ಷುಲ್ಲಕ.

ಈ ಜ್ಞಾನವುಳ್ಳವರು ತಾಮಸಿಕ ಜ್ಞಾನಿಗಳು. ಇವರಲ್ಲಿ ಕೆಲವರಿಗೆ ಧನ ಧಾನ್ಯಗಳೇ ದೈವತ, ಇನ್ನು ಕೆಲವರಿಗೆ ಸತಿ ಪುತ್ರರೇ ದೇವರು. ಮತ್ತೆ ಕೆಲವರಿಗೆ ದೇಹ ಇಂದ್ರಿಯ ಅಥವಾ ಪ್ರಾಣವೇ ದೈವ! ಇವರು ಅಸಂಯುತ ಚಿತ್ತರು, ಅವ್ಯವಸಾಯಿಗಳು, ಅವಿಪಶ್ಚಿತರು. ವಿಷಯ ವ್ಯಾಮೋಹದಿಂದ ಕೂಡಿದ ಇವರ ಜೀವನಕ್ಕೆ ಒಂದು ಗುರಿಯಿಲ್ಲ; ಒಂದು ಹೇತುವಿಲ್ಲ. ಅತ್ಯಂತ ಹೇಯ ಬಾಳ ನಡೆಸುತ್ತಾರೆ.

ಸಾರಾಂಶ : ಔಪನಿಷದಿಕ ಜ್ಞಾನವು ಸಾತ್ವಿಕ; ಭೇದಭಾವನಾ ಪ್ರಚೋದಕ ಜ್ಞಾನವು ರಾಜಸಿಕ. ದೇಹಾದಿ ಪ್ರಾಕೃತಿಕ ವಸ್ತುಗಳೇ ದೇವನೆಂಬ ಜ್ಞಾನವು ತಾಮಸಿಕ. ಸಾತ್ವಿಕ ಜ್ಞಾನಿಗೆ ಜಗತ್ತೆಲ್ಲ ಶಿವರೂಪ. ರಾಜಸ ಜ್ಞಾನಿಗೆ ಜಗತ್ತೆಲ್ಲ ಭೇದಮಯ. ತಾಮಸ ಜ್ಞಾನಿಗೆ ವಿಷಯಗಳೇ ಪರಮಾರ್ಥ !

ಸಂಬಂಧ:– ತ್ರಿವಿಧ ಕರ್ಮದ ವಿವರಣೆ ಮುಂದಿನ ಮೂರು ಮಂತ್ರಗಳಲ್ಲಿದೆ.

### ಸಾತ್ವಿಕ ಕರ್ಮ

ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್।
ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ।।೨೩।।

ಭಾವ:– ಫಲಾಕಾಂಕ್ಷಾರಹಿತನು ಸಂಗ (ಆಸಕ್ತಿ), ರಾಗ, ದ್ವೇಷಗಳಿಲ್ಲದೆ ಮಾಡುವ ನಿಯತ ಕರ್ಮವು ಸಾತ್ವಿಕ ಎನಿಸುತ್ತದೆ.

ವಿವರಣೆ:– ಅತ್ಯಂತ ನಿರಪೇಕ್ಷ ಭಾವನೆಯಿಂದ ದೇವ ಪ್ರೀತ್ಯರ್ಥವಾಗಿ ಆಚರಿಲಾದ ಕರ್ಮವು ಸಾತ್ವಿಕ. ಸಾತ್ವಿಕ ಕರ್ಮಯೋಗಿಯು ಪವಿತ್ರ ಹೃದಯಿ. ಅವನಲ್ಲಿ ವರ್ಣಾಶ್ರಮಾದಿಗಳ ಅಹಂಕಾರವಿಲ್ಲ, ಸತಿ ಸುತ ಸಿರಿ ಸದನಗಳ ಸಂಗ (ಆಸಕ್ತಿ)ವಿಲ್ಲ, ರಾಗದ್ವೇಷಾದಿಗಳ ಕೀಟಲೆ ಇಲ್ಲ, ಫಲಾಭಿಲಾಶೆಯ ಲವಲೇಶವೂ ಇಲ್ಲ. ಸರ್ವ ಸಮರ್ಪಣ ಬುದ್ಧಿಯಿಂದ ಜೀವನಾವಧಿ ಕರ್ಮ ಆಚರಿಸುತ್ತಾನೆ. ದೇವದರ್ಶನ ಹಾಗು ಲೋಕಸಂಗ್ರಹಗಳೇ ಆ ಪಾವನ ಕರ್ಮದ ದಿವ್ಯಫಲಗಳು.

### ರಾಜಸ ಕರ್ಮ

ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ।

ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥೨೪॥

ಭಾವ:– ಫಲಾಕಾಂಕ್ಷಾಸಹಿತನು ಅಹಂಕಾರದಿಂದ ಪ್ರಯಾಸಪಟ್ಟು ಮಾಡುವ ಕರ್ಮವು ರಾಜಸಿಕ ಎನಿಸುತ್ತದೆ.

ವಿವರಣೆ:– ವಿಶಿಷ್ಟ ಫಲ ಬಯಸಿ, ನಾನೇ ಕರ್ತಾ ಎಂಬ ಭಾವ ತಾಳಿ, ಅತಿಶಯ ಆಯಾಸದಿಂದ ಮಾಡಲಾದ ಕರ್ಮವು ರಾಜಸಿಕ. ಪುತ್ರಕಾಮೇಷ್ಟಿ, ರಾಜಸೂಯ, ಅಶ್ವಮೇಧ ಇತ್ಯಾದಿಗಳು ಈ ಕರ್ಮದ ಉದಾಹರಣೆಗಳು.

ರಾಜಸಿಕ ಕರ್ಮಕರ್ತನು ಕಾಮನಾಜೀವಿ, ಸ್ವಾರ್ಥಿ ಹಾಗು ಭೋಗಪರನು. ಹೆಂಡತಿ ಮಕ್ಕಳಿಗಾಗಿ ಜೀವ ಪಣಕ್ಕಿಟ್ಟು ದುಡಿಯುತ್ತಾನೆ. ಆದರೆ ಪರರಿಗಾಗಿ ಒಂದು ನಿಮಿಷ ಕೂಡ ಶ್ರಮಿಸಲಾರ. ಈತ ಉಪನ್ಯಾಸವನ್ನೀಯುತ್ತಾನೆ, ಸಾಮಾಜಿಕ ಸೇವೆ ಮಾಡುತ್ತಾನೆ, ಧರ್ಮ ನೀತಿ ತತ್ತ್ವಗಳ ಮೇಲೆ ಭಾಷ್ಯ ಬರೆಯುತ್ತಾನೆ, ಗುರುವಾಗಿ ಭಕ್ತರನ್ನು ಆಶೀರ್ವದಿಸುತ್ತಾನೆ; ಧನ ಕನಕ ಕೀರ್ತಿ ಮನ್ನಣೆಗಳನ್ನು ಪಡೆಯಬೇಕೆಂಬ ಏಕೈಕ ಉದ್ದೇಶದಿಂದ!

ಈತ ಮೈ ಹಣ್ಣಾಗುವಷ್ಟು ದುಡಿಯುತ್ತಾನೇನೋ ನಿಜ, ಆ ದುಡಿತದ ಪರಿಣಾಮ ಮಾತ್ರ ಶೂನ್ಯ. ಇವನ ಹೃದಯದ ತುಂಬ ಅಹಂಕಾರ ತೆರೆಯಾಡುತ್ತಿದೆ? 'ನಾನು ಧನಿಕ, ನಾನು ತಪಸ್ವಿ, ನಾನು ಜ್ಞಾನಿ, ನಾನು ಲೋಕಸೇವಕ' ಈ ಬಗೆಯ ಗರ್ವದ ಭಾವನೆಗಳು ಇವನಲ್ಲಿ ಲಾಸ್ಯವಾಡುತ್ತಿವೆ.

### ತಾಮಸಿಕ ಕರ್ಮ

ಅನುಬಂಧಂ ಕ್ಷಯಂ ಹಿಂಸಾಮನವೇಕ್ಷ್ಯ ಚ ಪೌರುಷಮ್।
ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥೨೫॥

ಭಾವ:– ಪರಿಣಾಮ, ಕ್ಷಯ, ಹಿಂಸೆ, ಸ್ವಸಾಮರ್ಥ್ಯ ಇವುಗಳನ್ನು ವಿಚಾರಿಸದೆ ಮೂಢತನದಿಂದ ಆಚರಿಸಿದ ಕರ್ಮವು ತಾಮಸಿಕ ಎನಿಸುತ್ತದೆ.

ವಿವರಣೆ:– ಪರಿಣಾಮದ ಪರಿವೆಯಿಲ್ಲದೆ, ಸ್ವಶಕ್ತಿ-ಸಾಮರ್ಥ್ಯಗಳ ತಿಳಿವು ಇಲ್ಲದೆ ಅಹಿಂಸಾ ಭಾವನೆಯನ್ನು ಕಡೆಗಣಿಸಿ, ಅಜ್ಞಾನವಶದಿಂದ ಮಾಡಲಾದ ಕರ್ಮವು ತಾಮಸಿಕ. ಈ ಕರ್ಮದಲ್ಲಿ ಶಕ್ತಿ ಧನ ವಿದ್ಯೆಗಳ ದುರುಪಯೋಗವಾಗುತ್ತದೆ. ರಾವಣನು ಗೈದ ಸೀತಾಪಹರಣ, ಧರ್ಮರಾಜನ ಲೆತ್ತದಾಟ, ದ್ರೌಪದಿಯ ವಸ್ತ್ರಾಪಹರಣ ಮುಂತಾದವು ತಾಮಸಿಕ ಕರ್ಮದ ಉದಾಹರಣೆಗಳು.

ತಾಮಸ ಕರ್ಮಿಯು ಅವಿಚಾರಿ; ದೂರ ದೃಷ್ಟಿಯೇ ಇಲ್ಲದ ಮೂಢ; ಅಸಹನಶೀಲ; ಸ್ವೇಚ್ಛಾಜೀವಿ. ತನ್ನ ಶಾರೀರಿಕ ಶಕ್ತಿ ಸೌಂದರ್ಯ, ತನ್ನ ಧನ ಕನಕ, ತನ್ನ ವಿದ್ಯೆ ಬುದ್ಧಿ ಎಲ್ಲವನ್ನು ಕ್ಷುಲ್ಲಕ ಕಾರಣಗಳಿಗಾಗಿ ಹಾಳು ಮಾಡುತ್ತಾನೆ. ಇವನ ಜೀವನದಲ್ಲಿ ಇತಿ ಮಿತಿ ಯಾವುದೂ ಇಲ್ಲ. ಇವನ ಹೃದಯದಲ್ಲಿ ದಯೆ ಕರುಣೆ ಶಾಂತಿಗಳಿಗೆ ಎಡೆಯೇ ಇಲ್ಲ. ಯಾರಿಗೆ ಎಂಥ ಪೆಟ್ಟು ಬಿದ್ದರೂ ಸರಿ, ತನ್ನ ಕಾರ್ಯ ಆದರೆ ಸಾಕು ಎನ್ನುವ ಪ್ರವೃತ್ತಿ ಇವನದು. ಈತ ಹಿಂಸಕ,

ಶೋಷಕ!

ಈತನದು ಹುಚ್ಚು-ಸಾಹಸಕ್ಕೆ ಕೈಹಾಕುವ ಸ್ವಭಾವ. ಹಿಡಿದ ಕಾರ್ಯ ವನ್ನು ಪೂರ್ತಿಮಾಡುವ ಸಾಮರ್ಥ್ಯ ತನಗಿದೆಯೆ? ಎಂದು ಎಂದಿಗೂ ಕೇಳಿ ಕೊಳ್ಳಲಾರ. ಮೇಲಾಗಿ ಇವನ ಇಂದ್ರಿಯಗಳು ಇವನ ಹಿಡಿತದಲ್ಲಿಲ್ಲ. ಹತ್ತು ಮಾರ್ಗದಿಂದ ಅವು ಹರಿದು ಹೋಗುತ್ತವೆ. ವಿಷಯಗಳ ಮೋಹಜಾಲದಲ್ಲಿ ಇವನನ್ನು ಬಂಧಿಸುತ್ತವೆ.

ಇಂಥ ಜನರು ಜಗತ್ತಿನ ತುಂಬ ತುಂಬಿದ್ದಾರೆ. ನಾಲ್ಕು ದಿನದ ಕೀಳುಸುಖ ಕ್ಕಾಗಿ ವಿಷಯ ಲಂಪಟನಾಗುವ ತರುಣ, ಬ್ರಹ್ಮಚರ್ಯದ ತೇಜಸ್ಸನ್ನು ಕಾಮಾ ಗ್ನಿಯಲ್ಲಿ ಸುರಿದು ಪರಿತಪಿಸುವ ಸಾಂಸಾರಿಕ, ಪತ್ನಿ ಪುತ್ರರಿಗಾಗಿ ಸಮಾಜವನ್ನೇ ಸುಲಿದು ಕೊನೆಯಲ್ಲಿ ತುತ್ತು ಅನ್ನಕ್ಕೂ ದಿಕ್ಕಿಲ್ಲದೆ ಚರಿಸುವ ಮುದುಕ, ನಾಲಿ ಗೆಯ ರುಚಿಗಾಗಿ ಅಪಥ್ಯವನ್ನೇ ತಿಂದು ನರಳುವ ರೋಗಿ, ಗೆಳೆಯರ ಸಂತೋ ಷಕ್ಕೆಂದು ಚಟಗಳಿಗೆ ಮಾರುಹೋದ ಅಜ್ಞರು. ಪ್ರಾಪಂಚಿಕ ಚಿಂತೆ ನೀಗಲು ಸುರಾದೇವತೆಗೆ ಶರಣಾಗಿ ಆಸ್ತಿಪಾಸ್ತಿಗಳ ಕಳೆದುಕೊಂಡ ಕುಡುಕ, ವಿಶಾಲ ಮನೋಭಾವನೆಯ ತ್ಯಜಿಸಿ ಪರಿಮಿತ ಧರ್ಮಾದಿಗಳಿಗೆ ಅಂಟಿಕೊಂಡ ಧಾರ್ಮಿಕ ಮಂಖಂಡ— ಇವರೆಲ್ಲ ತಾಮಸಿಕ ಕರ್ಮಿಗಳೇ ಸರಿ!

ಸಂಬಂಧ:— ತ್ರಿವಿಧ ಕರ್ತೃವಿನ ಬಗ್ಗೆ ಮುಂದಿನ ಮೂರು ಮಂತ್ರಗಳು ಹೇಳಿವೆ.

### ಸಾತ್ವಿಕ ಕರ್ತ

ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹ ಸಮನ್ವಿತಃ ।
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ವಿಕ ಉಚ್ಯತೇ ॥೨೬॥

ಭಾವ:— ನಿಸ್ಸಂಗನೂ (ಫಲಸಂಗರಹಿತನು), ನಿರಹಂಕಾರಿಯೂ ಧೈರ್ಯೋತ್ಸಾಹ ಸಮನ್ವಿತನೂ ಹಾಗು ಸಿದ್ಧಿ ಅಸಿದ್ಧಿಗಳಿಂದ ವಿಕಾರ ಹೊಂದ ದವನೂ ಆದ ಕರ್ತನು ಸಾತ್ವಿಕನು.

ವಿವರಣೆ:— ಅಹಂಕಾರವಿಲ್ಲದೆ, ಪ್ರತಿಫಲವನ್ನು ಬಯಸದೆ, ಜಯ ಅಪ ಜಯಗಳತ್ತ ಲಕ್ಷ ಹರಿಸದೆ ಪರಹಿತಕ್ಕಾಗಿ ಶ್ರಮಿಸುವ ಪುಣ್ಯಾತ್ಮನೇ ಸಾತ್ವಿಕ ಕರ್ತನು. ಅವನ ಅಂತಃಪ್ರಜ್ಞೆಯು ಜಾಗ್ರತವಾಗಿದೆ, ಹೃದಯವು ಪಕ್ವವಾಗಿದೆ, ಇಂದ್ರಿಯಗಳೆಲ್ಲ ಸತ್ಕಾರ್ಯಗಳಿಂದ ಪುನೀತವಾಗಿವೆ.

ಗುರು ಶ್ರುತಿ ಹಾಗು ಅಂತರಾತ್ಮನಿಗೆ ಸಮ್ಮತವಾದುದನ್ನೇ ಆಚರಿಸು ತ್ತಾನೆ; ದೀನ ದರಿದ್ರರ ಬಗ್ಗೆ ಅವನಲ್ಲಿ ಅಪಾರ ಅನುಕಂಪ ಇದೆ. ನಾಡೂ, ನಾಡಿನ ಸಕಲ ಜನತೆಯೂ ಧರ್ಮವರ್ಷಾವದಿಂದ ತೋಯಬೇಕೆನ್ನುವದು ಅವನ ಸದಿಚ್ಛೆ. ದಿನವಿಡೀ ಸೇವೆಗೈದರೂ ತಾನು ಗೈದೆ ಎಂಬ ಭಾವವಿಲ್ಲ. ದೇವ ನಿಂದಲ್ಲದೆ ತೃಣವು ಕೂಡ ಚಲಿಸದು ಇದು ಅವನ ಪೂರ್ಣ ನಂಬಿಕೆ. ಅವನು

ನಿರ್ಭೀಕ; ಧೈರ್ಯ ಸಾಹಸಗಳ ಮೂರ್ತಿ; ಉತ್ಸಾಹದ ಚಿಲುಮೆ! ಯಶ ಅಪ ಯಶ, ಲಾಭ ಹಾನಿ ಏನಾದರೂ ಸರಿ ಅವನು ವಿಕಾರ ಹೊಂದುವದಿಲ್ಲ!

**ರಾಜಸಿಕ ಕರ್ತ**

ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋಹಿಂಸಾತ್ಮಕೋಽಶುಚಿಃ।
ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥೨೭॥

**ಅರ್ಥ:**– ರಾಗೀ= ವಿಷಯ ಲೋಲುಪನೂ, ಕರ್ಮ ಫಲಪ್ರೇಪ್ಸುಃ= ಕರ್ಮ ಫಲಾ ಪೇಕ್ಷಿಯೂ, ಲುಬ್ಧಃ= ಸತ್ಪಾತ್ರದಲ್ಲಿ ಕೂಡ ಧನ ವ್ಯಯ ಮಾಡದವನೂ, ಹಿಂಸಾತ್ಮಕಃ= ಪರ ಪೀಡಾರತನೂ, ಅಶುಚಿಃ= ಬಾಹ್ಯಾಂತರದಲ್ಲಿ ಅಶುದ್ಧನೂ, ಹರ್ಷಶೋಕಾನ್ವಿತಃ= ಇಷ್ಟಾ ನಿಷ್ಟ ವಸ್ತುಗಳು ಪ್ರಾಪ್ತವಾದಾಗ ಹರ್ಷ ಶೋಕ ಪಡುವವನೂ (ಆದ) ಕರ್ತಾ= ಕರ್ತನು ರಾಜಸಃ ಪರಿಕೀರ್ತಿತಃ= ರಾಜಸಿಕ ಎನಿಸುತ್ತಾನೆ.

**ವಿವರಣ:**– ಶಬ್ದಾದಿ ವಿಷಯಗಳ ಲಾಲಸೆಯಿಂದ ಕರ್ಮಮಾಡುವವ ರಾಜಸಿಕ. ತಾನು ಮಾಡಿದ ಕರ್ಮಗಳಿಂದ ಫಲ ದೊರೆಯಲೇ ಬೇಕೆಂಬ ಬಯಕೆ ಅವನದು. ಕಷ್ಟಪಟ್ಟು ದುಡಿದು ಅಪಾರ ಹಣ ಗಳಿಸುತ್ತಾನೇನೋ ನಿಜ, ಆದರೆ ಒಂದು ಕಾಸನ್ನೂ ಸತ್ಪಾತ್ರಕ್ಕಾಗಿ ವಿನಿಯೋಗಿಸಲಾರ. ಸ್ವಾರ್ಥಸಾಧನೆಯನ್ನೇ ಧ್ಯೇಯವಾಗಿಟ್ಟುಕೊಂಡು ಅವನು ಜೀವಿಗಳಿಗೆ ಪೀಡೆ ಈಯುತ್ತಾನೆ, ನೆರೆಹೊರೆ ಯವರನ್ನು ಶೋಷಿಸುತ್ತಾನೆ. ಅವನ ಮನಸ್ಸು ಅಶುದ್ಧ, ಅವನ ಆಚಾರ ಅಪ ವಿತ್ರ, ಅವನು ಹಿತ ಪ್ರಸಂಗದಲ್ಲಿ ಹರ್ಷಪಡುತ್ತಾನೆ; ಅಹಿತ ಪ್ರಸಂಗದಲ್ಲಿ ದುಃಖ ಪಡುತ್ತಾನೆ.

**ತಾಮಸಿಕ ಕರ್ತ**

ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ ।
ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥೨೮॥

**ಅರ್ಥ:**–ಅಯುಕ್ತಃ =ಕರ್ತವ್ಯ ಪರಾಙ್ಮುಖನೂ, ಪ್ರಾಕೃತಃ= ಅಸಂಸ್ಕೃತ ಬುದ್ಧಿ ಯುವನೂ, ಸ್ತಬ್ಧಃ =ಅವಿನೀತನೂ, ಶಠಃ= ವಂಚಕನೂ, ನೈಷ್ಕೃತಿಕಃ= ಪರಜೀವಾಪಹಾರ ಕನೂ, ಅಲಸಃ=ಆಲಸಿಯೂ, ವಿಷಾದೀ =ಚಿಂತಾಪರನೂ, ಚ =ಮತ್ತು, ದೀರ್ಘಸೂತ್ರೀ= ಕಾರ್ಯವಿಲಂಬಿಯೂ (ಆದ), ಕರ್ತಾ= ಕರ್ತನು, ತಾಮಸ ಉಚ್ಯತೇ= ತಾಮಸಿಕ ಎನಿಸು ತ್ತಾನೆ,

**ವಿವರಣೆ:**– ವಿಷಯಗಳ ಚಿಂತನೆಯಲ್ಲಿ ಮೈಮರೆದು ಕರ್ತವ್ಯ ಪ್ರಜ್ಞೆ ಯನ್ನೇ ಕಳೆದುಕೊಂಡವನು ತಾಮಸಿಕ ಕರ್ತ. ಅವನ ಮನಸ್ಸು ನೀತಿ ಧರ್ಮ ತತ್ತ್ವ ಶಾಸ್ತ್ರಗಳಿಂದ ಪರಿಶುದ್ಧವಾಗಿಲ್ಲ. ದೇಹಗತ ದೇವನನ್ನು ಉಪೇಕ್ಷಿಸಿ ದೇಹವೇ ಆತ್ಮವೆಂದು ಬಗೆದಿದ್ದಾನೆ. ಮಾತೃ ಪಿತೃ ಗುರು ದೇವತೆ ಯಾರಲ್ಲಿಯೂ ವಿನಯದಿಂದ ವರ್ತಿಸುವದಿಲ್ಲ. ಅವನು ವಂಚಕ, ಸದಾ ಇನ್ನೊಬ್ಬರ ಜೀವನ ವನ್ನು ಹಾಳು ಮಾಡುವ ಗೇನಿಕೆಯಲ್ಲಿರುತ್ತಾನೆ. ಅವನು ಆಲಸಿ, ಚಿಂತಾರತ ಹಾಗು ಕಾರ್ಯವಿಲಂಬಿ.

ಸಂಬಂಧ:-ತ್ರಿವಿಧ ಬುದ್ಧಿ ಮತ್ತು ತ್ರಿವಿಧ ಧೃತಿಗಳ ಬಗ್ಗೆ ಹೇಳಲಾಗುವದು.

ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು
ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥೨೯॥

ಭಾವ:-ಗುಣಭೇದದಿಂದ ಬುದ್ಧಿ ಹಾಗು ಧೃತಿಗಳಲ್ಲಿ ಆಗುವ ಮೂರು ಪ್ರಕಾರಗಳನ್ನು ನಾನು ವಿಂಗಡಿಸಿ ಅಶೇಷವಾಗಿ ಹೇಳುವೆ, ಕೇಳು.

ಸಾತ್ವಿಕ ಬುದ್ಧಿ

ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।
ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಕೀ॥೩೦॥

ಭಾವ:- ಪ್ರವೃತ್ತಿ ನಿವೃತ್ತಿ, ಕಾರ್ಯ ಅಕಾರ್ಯ, ಭಯ ಅಭಯ, ಬಂಧ ಮೋಕ್ಷ ಇವುಗಳನ್ನು ಚನ್ನಾಗಿ ತಿಳಿಯುವ ಬುದ್ಧಿಯು ಸಾತ್ವಿಕ.

ವಿವರಣೆ:-ಯಾವುದನ್ನು ಹಿಡಿಯಬೇಕು, ಯಾವುದನ್ನು ಬಿಡಬೇಕು? ಯಾವುದನ್ನು ಮಾಡಬೇಕು, ಯಾವುದನ್ನು ಮಾಡಬಾರದು? ಯಾವುದು ಭಯ? ಯಾವುದು ಅಭಯ? ಯಾವುದು ಬಂಧನ, ಯಾವುದು ವಿಮೋಚನ? ಈ ಎಲ್ಲ ಸಂಗತಿಗಳನ್ನು ಸಮೂಲಾಗ್ರವಾಗಿ ವಿವೇಚಿಸುವ ಮತಿಯೇ ಸಾತ್ವಿಕ ಬುದ್ಧಿ.

ಸಾತ್ವಿಕ ಬುದ್ಧಿವಂತನು ವಸ್ತುಗಳ ಸತ್ಯದರ್ಶನ ಮಾಡಿಕೊಳ್ಳುತ್ತಾನೆ. ಸಂಸಾರಮುಖಿವಾಗಿ ಜೀವರನ್ನು ಕರೆದೊಯ್ಯುವ ಪ್ರವರ್ತಕ ಮಾರ್ಗದಿಂದ ನಿವೃತ್ತನಾಗಿ, ದೇವನತ್ತ ಕರೆದೊಯ್ಯುವ ನಿವರ್ತಕ ಮಾರ್ಗದಲ್ಲಿ ಪ್ರವೃತ್ತನಾಗುತ್ತಾನೆ; ಕಾರ್ಯ (ಸ್ವಪರಹಿತಕರ್ಮ) ಮತ್ತು ಅಕಾರ್ಯ ( ಸ್ವಪರ ಅಹಿತ ಕರ್ಮ) ಗಳ ಸ್ವರೂಪ ತಿಳಿದ ಅವನು ಅಕಾರ್ಯಗಳನ್ನು ಬಿಟ್ಟು ಕಾರ್ಯಗಳನ್ನು ನಿರ್ವಹಿಸುತ್ತಾನೆ. ರಾಗ ದ್ವೇಷಗಳು ಬಂಧನಕಾರಿ; ನಿಸ್ಪೃಹ ನಿರಾಶೆ ನಿರಹಂಕಾರಗಳು ಮುಕ್ತಿಕಾರಿ; ಇದನ್ನೆಲ್ಲ ತಿಳಿದು ಅಭಯನೂ ಮುಕ್ತಿರೂಪನೂ ಆದ ದೇವನನ್ನೇ ತನ್ನ ಹೃನ್ಮಂದಿರದಲ್ಲಿ ಸ್ಥಾಪಿಸಿ ಅರ್ಚಿಸುತ್ತಾನೆ, ಆರಾಧಿಸುತ್ತಾನೆ.

ರಾಜಸಿಕ ಬುದ್ಧಿ

ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।
ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥೩೧॥

ಭಾವ:- ಧರ್ಮ ಅಧರ್ಮ, ಕಾರ್ಯ ಅಕಾರ್ಯ ಇವುಗಳನ್ನು ಯಥಾರ್ಥವಾಗಿ ತಿಳಿಯದ ಬುದ್ಧಿಯು ರಾಜಸ.

ವಿವರಣ:- ಧರ್ಮ ಅಧರ್ಮ, ಕಾರ್ಯ ಅಕಾರ್ಯಗಳನ್ನು ತಪ್ಪಾಗಿ ಗ್ರಹಿಸುವ ಬುದ್ಧಿಯು ರಾಜಸಿಕ. ಈ ಬುದ್ಧಿಯುಳ್ಳ ಮನುಷ್ಯನು ಸದಾ ಸತ್ಯ-ಅಸತ್ಯದ ಮಧ್ಯದಲ್ಲಿ ಹೊಯ್ದಾಡುತ್ತಾನೆ. ಗುರುಗಳು ನೀತಿ ಧರ್ಮ ತತ್ತ್ವ

ಗಳ ಬಗ್ಗೆ ನೂರು ಬಗೆಯಿಂದ ಉಪದೇಶಿಸಿದರೂ ರಾಜಸಿಕರು ಹಲವಾರು ಶಂಕೆ – ಸಂದೇಹಗಳ ತಾಳಿ ಬಳಲುತ್ತಾರೆ.

### ತಾಮಸಿಕ ಬುದ್ಧಿ

ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ।
ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥೩೨॥

ಭಾವ:–ಅಜ್ಞಾನಾವೃತವಾದ ಯಾವ ಬುದ್ಧಿಯು ಅಧರ್ಮಕ್ಕೆ ಧರ್ಮ ವೆಂದು ತಿಳಿಯುತ್ತದೆಯೋ ಹಾಗು ಎಲ್ಲ ಸಂಗತಿಗಳನ್ನು ವಿಪರೀತವಾಗಿ ಅರಿಯುತ್ತದೆಯೋ ಆ ಬುದ್ಧಿಯು ತಾಮಸ,

ವಿವರಣ:– ಮೋಹಾಂಧಕಾರದಿಂದ ಆಚ್ಛಾದಿತವಾದ ಬುದ್ಧಿಯು ತಾಮಸಿಕ. ಈ ಬುದ್ಧಿಯುಳ್ಳ ವ್ಯಕ್ತಿಯು ಅನಾತ್ಮವೂ ಅನಿತ್ಯವೂ ದುಃಖರೂಪವೂ ಆದ ದೇಹದಲ್ಲಿ ಆತ್ಮಭಾವ, ನಿತ್ಯಭಾವ ಹಾಗು ಸುಖದ ಭಾವಗಳನ್ನು ತಾಳುತ್ತಾನೆ. ಅವನಿಗೆ ಪ್ರಪಂಚವೇ ಪರಮಾರ್ಥ; ಅಧರ್ಮವೇ ಧರ್ಮ, ಅನೀತಿ – ಅನ್ಯಾಯಂಗಳೇ ನೀತಿ ನ್ಯಾಯಂಗಳು!

ಸಾರಾಂಶ: ರಜ್ಜುವಿನಲ್ಲಿ ರಜ್ಜುವನ್ನೇ ಕಾಣುವದು ಸಾತ್ವಿಕ ಬುದ್ಧಿ. ರಜ್ಜುವೋ ಸರ್ಪವೋ ಎಂದು ಸಂದಿಗ್ಧ ಪರಿಸ್ಥಿತಿಗೆ ಒಳಗಾಗುವದು ರಾಜಸಿಕ ಬುದ್ಧಿ. ಸರ್ಪವೇ ಎಂದು ವಿಪರೀತ ನಿರ್ಣಯ ಮಾಡುವದು ತಾಮಸಿಕ ಬುದ್ಧಿ. ಅದೇ ರೀತಿ, ಕೇವಲ ಪರಮಾತ್ಮನನ್ನು ನೋಡುವವರು ಸಾತ್ವಿಕ ಮತಿಗಳು; ಪರಮಾತ್ಮನು ಸತ್ಯವೋ ಪ್ರಪಂಚವು ಸತ್ಯವೋ ಎಂಬ ಸಂದೇಹ ತಾಳುವವರು ರಾಜಸ ಮತಿಗಳು. ಪರಮಾತ್ಮನು ಇಲ್ಲ, ಪ್ರಪಂಚವೊಂದೇ ಇದೆ ಎಂದು ತಿಳಿಯುವವರು ತಾಮಸಿಕ ಮತಿಗಳು.

ಸಂಬಂಧ:– ಧೃತಿ–ತ್ರಿವಿಧಿಯನ್ನು ವಿವರಿಸಲಾಗುವದು.

### ಸಾತ್ವಿಕ ಧೃತಿ

ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ ।
ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ವಿಕೀ ॥೩೩॥

ಭಾವ:– ಯೋಗದ ಮೂಲಕ ಯಾವ ಪರಿಶುದ್ಧ ಧೃತಿಯಿಂದ ಮನ ಪ್ರಾಣ ಇಂದ್ರಿಯಗಳ ಕ್ರಿಯೆಗಳನ್ನು ತಡೆಹಿಡಿಯಲಾಗುತ್ತಿದೆಯೋ (ಧಾರಣ ಮಾಡಲಾಗುತ್ತಿದೆಯೋ) ಆ ಧೃತಿಯು ಸಾತ್ವಿಕವು.

ವಿವರಣೆ: ಅವ್ಯಭಿಚಾರವೆಂದರೆ ಅನನ್ಯಾಸಕ್ತಿ. ಯೋಗವೆಂದರೆ ಚಿತ್ತವೃತ್ತಿಗಳ ನಿರೋಧ. ವಿಷಯಗಳ ಲಾಲಸೆ ಬಿಟ್ಟು, ಭೋಗ ವಸ್ತುಗಳ ಕಾಮನಾ ತ್ಯಜಿಸಿ ಸದೈವ ಪರಮಾತ್ಮನನ್ನು ಚಿಂತಿಸುವದು ಧ್ಯಾನಿಸುವದು ಅವ್ಯಭಿಚಾರಯೋಗ. ಈ ಯೋಗದ ಮೂಲಕ ಬಹಿರ್ಮುಖವಾದ ಮನ ಪ್ರಾಣ ಇಂದ್ರಿಯಗಳನ್ನು ಸಂಯಮನಗೊಳಿಸುವದಕ್ಕೆ ಸಾತ್ವಿಕ ಧೃತಿ ಎಂದು ನಾಮ. ಈ ಧೃತಿಯನ್ನು ಸಾಧ

ಸಿದ ಪುಣ್ಯಪುರುಷನು ದೇವನಿಗಾಗಿ ಬದುಕುತ್ತಾನೆ. ಅವನ ಪ್ರಾಣ ಇಂದ್ರಿಯ ಮತ್ತು ಅಂತಃಕರಣದ ಸಕಲ ಕ್ರಿಯೆಗಳು ವಿಶ್ವಾತ್ಮನಿಗಾಗಿ ಮೀಸಲಾಗಿವೆ.

**ರಾಜಸಿಕ ಧೃತಿ**

ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।
ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥೩೪॥

ಭಾವ:– ಫಲಾಭಿಲಾಷಿಯು ಅತ್ಯಾಸಕ್ತಿಯಿಂದ ಯಾವ ಧೃತಿಯ ಮೂಲಕ ಧರ್ಮ ಅರ್ಥ ಕಾಮಗಳನ್ನು ಸಂಪಾದಿಸುತ್ತಾನೆಯೊ ಆ ಧೃತಿಯು ರಾಜಸಿಕ.

ವಿವರಣೆ:– ಮೋಕ್ಷದ ಆಶೆ ಬಿಟ್ಟು ಧರ್ಮ ಅರ್ಥ ಕಾಮಗಳಲ್ಲಿ ಅತ್ಯಾಸಕ್ತಿ ತಾಳಿ, ಐಹಿಕ ಆಮುಷ್ಮಿಕ ಸುಖೋಪಭೋಗ ಪಡೆಯುವ ಉದ್ದೇಶದಿಂದ ತನ್ನ ಇಂದ್ರಿಯ, ಪ್ರಾಣ, ಮನಸ್ಸುಗಳನ್ನು ಬಳಸುವದು ರಾಜಸಿಕ ಧೃತಿ. ಈ ಧೃತಿವಂತನು ಆಡಂಬರ–ಅಟ್ಟಹಾಸಗಳಿಂದ ಪೂಜಾರ್ಜನಾದಿ ಧಾರ್ಮಿಕ ಕಾರ್ಯಗಳನ್ನು ಆಚರಿಸುತ್ತಾನೆ; ಅಪಾರ ಸಂಪತ್ತನ್ನು ಶ್ರಮಪಟ್ಟು ಗಳಿಸುತ್ತಾನೆ. ಸುಂದರವಾದ ಕೌಟುಂಬಿಕ ಬದುಕನ್ನು ನಡೆಸುತ್ತಾನೆ. ಭೋಗವೇ ಅವನ ಬಾಳಿನ ಜೀವಾಳ ಮುಕ್ತಿಯ ಇಚ್ಛೆ ಅವನಿಗಿಲ್ಲ.

**ತಾಮಸಿಕ ಧೃತಿ**

ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।
ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥೩೫॥

ಭಾವ:– ದುರ್ಬುದ್ಧಿಯ ಮನುಷ್ಯನು ಯಾವ ಧೃತಿಯ ಮೂಲಕ ನಿದ್ರೆ ಭಯ ಶೋಕ ಖೇದ ಮದಗಳನ್ನು ಬಿಡುವದಿಲ್ಲವೋ ಅದು ತಾಮಸ.

ವಿವರಣೆ:– ನಿದ್ರೆಯೆಂದರೆ ಅಜ್ಞಾನಾಂಧಃಕಾರದಲ್ಲಿ ಮನಸ್ಸಿನ ಪ್ರವೇಶ. ಭಯವೆಂದರೆ ಜೀವಕ್ಕೆ ಅಪಾಯ ಒದಗಿದಾಗ ಉಂಟಾಗುವ ಮನೋದ್ರೇಕ. ತನಗೆ ಇಷ್ಟವಾದ ವಸ್ತುಗಳು ಕೈಬಿಟ್ಟರೆ ತಲೆದೋರುವ ಮನದ ಕಳವಳವೇ ಶೋಕ. ತನ್ನ ದೈಹಿಕ ಬೌದ್ಧಿಕ ಶಕ್ತಿಗಳು ಕ್ಷಯವಾದಾಗ ಕಾಣಬರುವ ಮನಸ್ಥಿತಿಯೇ ಖೇದ. ಧನ ಕನಕ ಕಾಮಿನಿ ಮುಂತಾದ ಭೌತ ಸಂಪತ್ತುಗಳ ಸಂಬಂಧದಿಂದ ತೋರಿಬರುವ ಉನ್ಮಾದವು ಮದ. ಈ ಐದನ್ನು ಗಟ್ಟಿಯಾಗಿ ಹಿಡಿದು ಬದುಕುವದಕ್ಕೆ ತಾಮಸಿಕ ಧೃತಿ ಎನ್ನುತ್ತಾರೆ. ಈ ಧೃತಿಯುಳ್ಳ ವ್ಯಕ್ತಿಯು ಅವಿದ್ಯಾ ನಿಶೆಯಲ್ಲಿ ವಾಸಮಾಡಿದ್ದಾನೆ. ಇಂದ್ರಿಯ ಪ್ರಾಣ ಮನಸ್ಸುಗಳನ್ನು ನಿರರ್ಥಕವಾಗಿ ವ್ಯಯಿಸುತ್ತಾನೆ.

ಸಂಬಂಧ: ತ್ರಿವಿಧ ಸುಖಗಳ ವಿವರಣೆ ಮುಂದಿನ ನಾಲ್ಕು ಮಂತ್ರಗಳಲ್ಲಿದೆ.

**ಸಾತ್ವಿಕ ಸುಖ**

ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।

ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥೩೬॥
ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।
ತತ್ಸುಖಂ ಸಾತ್ವಿಕಂ ಪ್ರೋಕ್ತಮಾತ್ಮ ಬುದ್ಧಿಪ್ರಸಾದಜಮ್ ॥೩೭॥

ಭಾವ:– ಅರ್ಜುನ ಸುಖವು ಕೂಡ ಮೂರು ವಿಧ. ಅದನ್ನು ಕುರಿತು ಹೇಳುವೆ, ಕೇಳು. ದೀರ್ಘ ಅಭ್ಯಾಸದ ಮೂಲಕ ಯಾವ ಸುಖದಲ್ಲಿ ರಮಿಸುತ್ತಾನೆಯೊ, ದುಃಖದ ಅವಸಾನವನ್ನು ಹೊಂದುತ್ತಾನೆಯೊ, ಯಾವ ಸುಖವು ಮೊದಲು ವಿಷದಂತೆ ಕೊನೆಯಲ್ಲಿ ಅಮೃತದಂತೆ ಇರುವದೊ, ಯಾವುದು ಆತ್ಮ ನಿಷ್ಠವಾದ ಬುದ್ಧಿಯ ಪ್ರಸನ್ನತೆಯಿಂದ ದೊರೆಯುವದೋ ಅದು ಸಾತ್ವಿಕ ಸುಖ.

ವಿವರಣ: ಆಧಿದೈವಿಕ, ಆಧಿಭೌತಿಕ ಮತ್ತು ಆಧ್ಯಾತ್ಮಿಕ ಎಂದು ದುಃಖಗಳು ಮೂರು ಪ್ರಕಾರ. ಈ ದುಃಖಗಳ ಮೂಲ ಕಾರಣವು ಅವಿದ್ಯೆ. ಈ ಅವಿದ್ಯೆಯು ಸಮೂಲಾಗ್ರವಾಗಿ ನಾಶವಾದ ನಂತರ ಅನುಭವಕ್ಕೆ ಬರುವ ಅಮೃತೋಪಮ ಸುಖವೇ ಸಾತ್ವಿಕ ಸುಖ. ಸುದೀರ್ಘವಾದ ಯೋಗಾಭ್ಯಾಸ, ಅಮಿತ ಪ್ರಯತ್ನ ಮತ್ತು ಆತ್ಮಜ್ಞಾನದ ಸಂಪಾದನೆಗಳಿಂದ ಮಾತ್ರ ಈ ಸುಖವು ಸಮನಿಸಬಲ್ಲದು. ಇದು ಆರಂಭದಲ್ಲಿ ವಿಷದಷ್ಟು ಕಹಿ. ಪರಿಣಾಮದಲ್ಲಿ ಅಮೃತದಷ್ಟು ಸುರಸ. ನಾವು ಮೆಚ್ಚಿದ ವಿಷಯಗಳನ್ನು ಪೂರ್ತಿಯಾಗಿ ತ್ಯಾಗಮಾಡುವಲ್ಲಿಯೇ ಈ ಸುಖದ ಆರಂಭ! ರುಚಿ ರುಚಿಯಾದ ಖಾದ್ಯಗಳು ಎಡೆಯಲ್ಲಿದ್ದೂ ಅವುಗಳನ್ನು ತಿನ್ನಬಾರದು! ಸುರ ಸುಂದರಿಯಾದ ಮಡದಿ ಹಾಗು ವಿಧೇಯರಾದ ಮಕ್ಕಳು ಇರುವಾಗಲೇ ಅವರತ್ತ ಬೆನ್ನು ತಿರುಗಿಸಬೇಕು! ಲಕ್ಷಾಂತರ ದ್ರವ್ಯ ಸಂಪಾದಿಸಬೇಕು, ಬಳಿಕ ಯೋಗ್ಯ ವ್ಯಕ್ತಿಗಳಿಗೆ ಅದನ್ನು ದಾನವೀಯಬೇಕು! ಸ್ವೇಚ್ಛೆಯಾಗಿ ತಿರುಗುವ ಮನಸ್ಸನ್ನು ಒಳ ಸೆಳೆದು ವಿಚಾರ ಮಂಥನಕ್ಕೆ ತೊಡಗಿಸಬೇಕು! ಈ ಸಾಧನೆಗಳು ಕಠಿಣವಾದರೂ ಫಲವು ಮಾತ್ರ ಸುಧೆಯಷ್ಟು ಮಧುರ! ಶ್ರೀ ನಿಜ ಗುಣ ಶಿವಯೋಗಿಗಳು ಇದನ್ನು ಹೃದಯತುಂಬಿ ಬಣ್ಣಿಸಿದ್ದಾರೆ.

"ಆವ ಪರಿಯ ಸುಖವ ಭಾವಿಸಿ ಬೇರೆಣಿಸಿದೊಡೆ ।
ಜೀವ ಪರಮ ಯೋಗದ ನಿಜವರಿದನುಭವಿಯ ಸುಖಕೆ ಸರಿಗಾಣೆ ॥ಪ॥
ಕವಿ ಜನರುಪಮೆಗೆ ಹವಣಿಸಬಾರದ । ನವ ಲಾವಣ್ಯದ ಜವ್ವನೆಯ ॥
ತವಕದ ರತಿಗನುಕೂಲ ಸುಸಾಧನ । ನಿವಹದೆಸೆವ ಸುಖ ಮೊದಲಾದ ॥೧॥
ಮೇರು ಸಿಂಹಾಸನವಖಿಳ ದೇವ ಪರಿ । ಚಾರಕರಣಿಮಾದಿಗಳೊಡನೆ ॥
ಭೂರಿ ಭುವನವನಾಳುವ ತನುವಿದು । ಕೈಸಾರಿರಲೊದಗುವ ಸುಖವಿಡಿದು
ಸಾಕೆನಿಸದೆ ಸವೆಯದೆ ಬೇರೊಂದನು । ಬೇಕೆನಿಸದೆ ಕಡೆಯೊಳು ತನ್ನ ॥
ಜೋಕೆಗುಂದದೆ ನಿರುಪಮ ಶಂಭುಲಿಂಗ ದೊಳೇಕಮೆನಿಪ ಸುಖವೊಂದಲ್ಲದೆ

ರಾಜಸಿಕ ಸುಖ

ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।

ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥೩೮॥

ಭಾವ:- ವಿಷಯ ಹಾಗು ಇಂದ್ರಿಯಗಳ ಸಂಯೋಗದಿಂದ ಯಾವ ಸುಖವು ದೊರೆಯುವದೊ, ಯಾವುದು ಮೊದಲು ಅಮೃತದಂತೆ ಕೊನೆಯಲ್ಲಿ ವಿಷದಂತೆ ಇರುವದೊ ಅದು ರಾಜಸಿಕ ಸುಖ.

ವಿವರಣ:- ಶಬ್ದಾದಿ ವಿಷಯಗಳೊಂದಿಗೆ ಮನಸ್ಸಂಯುಕ್ತ ಇಂದ್ರಿಯಗಳು ಸಂಧಿಸಿದಾಗ ಅನುಭವಕ್ಕೆ ಬರುವದು ರಾಜಸಿಕ ಸುಖ. ಇದು ಮೊದಲ ಕ್ಷಣದಲ್ಲಿ ಮಧು! ಕೊನೆಯ ಕ್ಷಣದಲ್ಲಿ ವಿಷ! ಹೊಸದಾಗಿ ವಿವಾಹಿತನಾದ ಯುವಕ ಒಂದೆರಡು ವರುಷ ಜಗತ್ತನ್ನೇ ಮರೆತು ಕಾಮೋಪಭೋಗ ನಡೆಸುತ್ತಾನೆ; ಅತ್ಯಂತ ಮಾದಕವಾದ ಸುಖವನ್ನು ಅನುಭವಿಸುತ್ತಾನೆ. ಆದರೆ, ಆ ನಂತರ ಆ ಕಾಮದ ದುಷ್ಪರಿಣಾಮಗಳಿಂದ ದುಃಖಿಸುತ್ತಾನೆ; ಬಲ (ದೇಹಬಲ) ವೀರ್ಯ (ಯಶಸ್ಸು) ರೂಪ (ಸೌಂದರ್ಯ) ಪ್ರಜ್ಞಾ (ಶ್ರುತ್ಯರ್ಥಗ್ರಹಣ ಸಾಮರ್ಥ್ಯ) ಮೇಧಾ (ಸ್ಮರಣಶಕ್ತಿ) ಹಾಗು ಧನ ಇವುಗಳನೆಲ್ಲ ಕಳೆದುಕೊಂಡು ನರಳುತ್ತಾನೆ. ಈ ರಾಜಸಿಕ ಸುಖಾನುಭವವೆಂದರೆ ಹರಿತ ಖಡ್ಗದ ಅಲುಗಿಗೆ ಹತ್ತಿದ ಮಧುವನ್ನು ನೆಕ್ಕಿದಂತೆ. ಶರಣ ಸಂತರು ಈ ಸುಖವನ್ನು ಬಯಸದಿರಲು ಎಚ್ಚರಿಕೆ ಇತ್ತಿದ್ದಾರೆ.

"ಜೇನು ತುಪ್ಪದಲ್ಲಿ ಬಿದ್ದು ಸಾವ ನೊಣದಂತೆ, ಕೀಳು ಮಾಂಸದ ಸವಿಗೆ ಗಂಟಲ ಗಾಣದಲ್ಲಿ ಸಿಕ್ಕಿ ಸಾವ ಮೀನಿನಂತೆ, ಹೀನ ವಿಷಯವ ನೆಚ್ಚಿ ಮೆಚ್ಚದಿರಾ ಎಲೆಲೆ ಹುಚ್ಚು ಮನವೆ! ಅಲ್ಪ ಸುಖಕ್ಕೆ ಮೆಚ್ಚಿ ಅನಂತ ಭವ ಭಾರಕ್ಕೆ ಒಳಗಾಗಿ ದುರ್ಗತಿಗಿಳಿಯದಿರಯ್ಯೊ, ಬೆಂದ ಮನವೆ. ಶಿವ ಶಿವಾ, ಹರ ಹರಾ ಎಂಬುವದನು ಮರೆಯದಿರು. ಮರೆದು ಒರಗದಿರು. ನೀ ಮರೆದರೆ ನಾಯ ಸಾವ ಸಾವೇ ಗತಿ! ಬಿಡು ಕಂಡಾ ಎಲೆ ಮನವೆ. ಈ ಮರುಳತನವ ಬಿಟ್ಟು, ಎನ್ನ ಒಡೆಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವಿಗೆ ಶರಣು ಶರಣೆನ್ನ ಕಲಿಯಾ, ನೀನಂ ಸುಖಿಯಾಗಬಲ್ಲರೆ!"

(ಯೆಡೆಯೂರ ಸಿದ್ಧಲಿಂಗಯತಿಗಳು).

"ಬೇಡ ಬೇಡ ಭೋಗದೊಡನಾಟ ।
ನೋಡು ನಂಜುವೆರಸಿದ ಸವಿಯೂಟ ॥ ॥ಪ॥
ಕೇಡು ಕಡೆಯೊಳಿಹುದದು ಮಾಯೆಯ ಕೈಮಾಟ
ಮೊದಲು ಸಾಹಸದೊಳತಿ ದುಃಖವನುಭವಿಸಿ ।
ಮುದವಣುಮಾತ್ರವನಿತ್ತು ನಡುವಿಹುದು ತವಿಸಿ ॥
ಒದವಿ ಕಾಣಿಪುದದು ಕಡೆಯೊಳು ಹೇಸಿಕೆಯುವಗಡಿಸಿ ।
ಹದನಿದಂ ವಿಷಯುವನೆಳಸಲಹುದೆ ಲವಲವಿಸಿ ॥೧॥
ಕನಸು ಬಿಸಿಲುದೊರೆ ಸುರಧನು ಸುಳಿಗಾಳಿ ।

ಘನತತಿ ಮಿಂಚಿನ ಪರಿಯಂತಿರೆ ವಿಷಯಾಳಿ ॥
ಜನಿಸಿ ಕೆಡುತಿಹುದಿದನಿಳೆಯೊಳು ಕಂಡು ಕೇಳಿ ।
ಮನವಿಡೆ ಫಲವೇ ಭಸಿತದೊಳು ಹವಿಯನು ಬೀಳೆ ॥೨॥
ಈ ತೆರದಿಂದಖಿಳದ ನಿರಸವನು ತಿಳಿದು ।
ಭೀತಿಸದವರಳಿಯಾಸೆಗಳನು ಮಿಗೆ ಪಳಿದು ॥
ಖ್ಯಾತಿ ಮಿಗಿಲು ಶಂಭುಲಿಂಗದೆ ನಿಜವಾಗುಳಿದು ।
ನೇತಿಗಳೆಯದಾನಂದದೊಳಿರು ಮೋಹವಳಿದು ॥೩॥"

(ಶ್ರೀ ನಿಜಗುಣ ಶಿವಯೋಗಿಗಳು).

ಭೋಗ ಸುಖವು ವಿಷ ಬೆರೆತ ಊಟ, ಮಾಯೆಯ ಮೋಸದ ನಳ ಪಾಕ! ಭೂರಿ ಯತ್ನದಿಂದ ಗಳಿಸಿದ ಅದು ನಿಮಿಷಾರ್ಧ ಮುದವನಿತ್ತು ಕೊನೆಗೆ ಜೀವನನ್ನೇ ದುಃಖ ಕಂದರದಲ್ಲಿ ನೂಕಿ ಬಿಡುವದು. ಅದು ಕನಸು, ಬಿಸಿಲ್ಗುದುರೆ, ಕಾಮನ ಬಿಲ್ಲು, ಸುಳಿಗಾಳಿ, ಮಿಂಚಿನ ಮಾಲೆ! ಅಷ್ಟು ಕ್ಷಣಿಕ!

ತಾಮಸ ಸುಖ

ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।
ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥೩೯॥

ಭಾವ:– ಯಾವ ಸುಖವು ಕೊನೆಗೂ ಮೊದಲೂ ಮೋಹವನ್ನುಂಟು ಮಾಡುವದೋ, ಯಾವುದು ನಿದ್ರಾ ಆಲಸ್ಯ ಪ್ರಮಾದ ಮುಂತಾದವುಗಳಿಂದ ಉದ್ಭವಿಸುವದೊ ಅದು ತಾಮಸ ಸುಖ.

ವಿವರಣ:– ನಿದ್ರಾ, ಆಲಸ್ಯ ಪ್ರಮಾದಗಳಿಂದ ಉಂಟಾಗುವ ಸುಖವು ತಾಮಸಿಕ. ಅದು ಆದ್ಯಂತಗಳಲ್ಲಿಯೂ ಮೋಹಕ! ಮನ ಬುದ್ಧಿಗಳು ಪೂರ್ಣ ನಿಷ್ಕ್ರಿಯವಾದಾಗ, ಕರ್ತವ್ಯಪ್ರಜ್ಞೆ ಅಳಿದು ಆಲಸ್ಯವು ಮೈಯುಂಡಾಗ, ಸಾರಾಸಾರ ವಿವೇಚನಾ ಬಲವು ಕುಂದಿದಾಗ ತೋರುವ ಈ ಸುಖವು ಜೀವಾತ್ಮನ ಆಯುಷ್ಯವನ್ನೇ ಕಬಳಿಸುತ್ತದೆ!

ತಾತ್ಪರ್ಯ : ಮನುಷ್ಯನು ಅನುಭವಿಸುವ ಸುಖ ಅಥವಾ ಆನಂದವು ಸಾಮಾನ್ಯವಾಗಿ ಎಂಟು ವಿಧ. (೧)ವಿಷಯಾನಂದ: ವನಿತಾದಿ ವಿಷಯ ಹಾಗು ಇಂದ್ರಿಯಗಳ ಸನ್ನಿಕರ್ಷದಿಂದ ಕಾಣಬರುತ್ತದೆ. (೨) ಬ್ರಹ್ಮಾನಂದ : ನಿದ್ರಾ ಸುಖ. (೩) ವಾಸನಾನಂದ: ತಿಳಿ ನಿದ್ರೆಯಲ್ಲಿ ತೋರುವ ಸುಖ. (೪) ಮುಖ್ಯಾನಂದ: ಬೇಕು ಬೇಡೆಂಬ ಎರಡೂ ಭಾವಗಳು ಅಡಗಿ ಉದಾಸೀನವೃತ್ತಿ ತೋರಿದಾಗ ಅನುಭವಕ್ಕೆ ಬರುವ ಸುಖ. (೫) ನಿಜಾನಂದ: ಯೋಗಾಭ್ಯಾಸದ ಬಲದಿಂದ ಮನೋಲಯವಾದಾಗ ತೋರುತ್ತದೆ. (೬) ಆತ್ಮಾನಂದ: ವಿಷಯಗಳಲ್ಲೆಲ್ಲ ತಾನೇ ಪ್ರಿಯತಮ ಎಂಬ ಬುದ್ಧಿ ದೃಢಗೊಂಡಾಗ ಉಂಟಾಗುವ ಸುಖ. (೭) ಅದ್ವೈತಾನಂದ: ನಾಮ ರೂಪ ಪ್ರಪಂಚವು ಮಿಥ್ಯ, ಆತ್ಮನೊಬ್ಬನೇ

ಸತ್ಯ: ಎಂಬ ವಿವೇಕದಲ್ಲಿ ತೋರುವ ಸುಖ. (೮) ವಿದ್ಯಾನಂದ: ತತ್ತ್ವಮಸ್ಯಾದಿ ಮಹಾ ವಾಕ್ಯಗಳಿಂದ ಹುಟ್ಟಿದ ಅಪರೋಕ್ಷ ಜ್ಞಾನದಲ್ಲಿ ತೋರುವ ಸುಖ.

ಈ ಎಂಟು ಆನಂದಗಳಲ್ಲಿ ಕೊನೆಯ ನಾಲ್ಕು ಸಾತ್ವಿಕ ಸುಖಗಳು. ಒಂದು ಮೂರು ಹಾಗು ನಾಲ್ಕು ರಾಜಸಿಕ ಸುಖಗಳು. ಎರಡನೆಯದು ತಾಮಸಿಕ ಸುಖ.

ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।
ಸತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ರಿಭಿರ್ಗುಣೈಃ ॥೪೦॥

ಭಾವ:–ಪ್ರಾಕೃತಿಕ ಈ ಮೂರು ಗುಣಗಳಿಂದ ಮುಕ್ತವಾದ ವಸ್ತುವೇ ಈ ಪೃಥ್ವಿಯಲ್ಲಿಲ್ಲ. ಇಷ್ಟೇ ಅಲ್ಲ, ಸ್ವರ್ಗದಲ್ಲಿ ಹಾಗು ದೇವತೆಗಳಲ್ಲಿ ಕೂಡ ಅಂಥ ಪದಾರ್ಥವಿಲ್ಲ.

ವಿವರಣ:– ಮಣ್ಣಿನಿಂದಾದ ಗಡಿಗೆ ಮೃಣ್ಮಯ. ಹಾಗೆ ತ್ರಿಗುಣಗಳಿಂದಾದ ವಿಶ್ವವು ತ್ರಿಗುಣಮಯ! ನಾರಕೀಯ ಜೀವಿಗಳು ಮರ್ತ್ಯದ ಮಾನವರು, ಸ್ವರ್ಗದ ದೇವತಗಳು ಹಾಗು ಅವರ ಭೋಗಗಳು ಗುಣಸೃಷ್ಟವಾಗಿವೆ. ಇಷ್ಟೇ, ಕೆಲವು ವಸ್ತುಗಳಲ್ಲಿ ಸತ್ವ ಹೆಚ್ಚು, ಕೆಲವು ವಸ್ತುಗಳಲ್ಲಿ ರಜೋಗುಣ ಹೆಚ್ಚು. ಉಳಿದವುಗಳಲ್ಲಿ ತಮಸ್ಸು ಅಧಿಕ. ಗುಣಮುಕ್ತವಾಗಿ ಯಾವುದೂ ಇಲ್ಲ,

ಸಂಬಂಧ:– ಮುಂದಿನ ನಾಲ್ಕು ಮಂತ್ರಗಳಲ್ಲಿ ಗುಣಾವಲಂಬಿಯಾದ ಚಾತುರ್ವರ್ಣಗಳ ವಿವರಣೆ ಇದೆ.

ಬ್ರಾಹ್ಮಣ ಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ।
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥೪೧॥

ಭಾವ:– ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರ ಕರ್ಮಗಳು ಅವರವರ ಸ್ವಾಭಾವಿಕ (ಸ್ವಭಾವ ಪ್ರಭವೈಃ) ಗುಣಗಳಿಂದ ವಿಭಜಿಸಲ್ಪಟ್ಟಿವೆ.

ವಿವರಣೆ:– ಸ್ವಭಾವ ಪ್ರಭವಾಃ ಗುಣಾಃ:– ನಾವು ಮಾಡಿದ ವಿವಿಧ ಕರ್ಮಗಳು ಸಂಸ್ಕಾರ ರೂಪದಿಂದ ಅಂತಃಕರಣದಲ್ಲಿ ಉಳಿಯುತ್ತವೆ. ಅಂಥ ಅಸಂಖ್ಯ ಸಂಸ್ಕಾರಗಳ ಪರಿಣಾಮವಾಗಿ ಒಂದು ವಿಶಿಷ್ಟ ಮನೋಭಾವ ನಿರ್ಮಾಣಗೊಳ್ಳುತ್ತದೆ. ಅದುವೇ 'ಸ್ವಭಾವ'. ಆ ಸ್ವಭಾವಕ್ಕೆ ಅನುಗುಣವಾಗಿ ಸತ್ವ ರಜ ತಮೋ ಗುಣಗಳು ಅಭಿವ್ಯಕ್ತವಾಗುವದರಿಂದ ಆ ಗುಣಗಳಿಗೆ ಸ್ವಭಾವ ಪ್ರಭವಾಃ ಎಂಬ ವರ್ಣಾತ್ಮಕ ಶಬ್ದ ಈಯಲಾಗಿದೆ.

ಸ್ವಭಾವ ಪ್ರಭವೈಃ...ಕರ್ಮಾಣಿ ಪ್ರವಿಭಕ್ತಾನಿ :–ಅಧ್ಯಯನ ಅಧ್ಯಾಪನಾದಿಗಳು ಬ್ರಾಹ್ಮಣನ ಕರ್ಮ. ಅಂಗಸಾಧನ ಪ್ರಜಾ ರಕ್ಷಣಾದಿಗಳು ಕ್ಷತ್ರಿಯನ ಕರ್ಮ. ಕೃಷಿ ಉದ್ಯಮ ವ್ಯಾಪಾರಾದಿಗಳು ವೈಶ್ಯನ ಕರ್ಮ. ಸೇವಾದಿಗಳು ಶೂದ್ರನ ಕರ್ಮ. ಈ ನಾಲ್ವಿಧದ ಕರ್ಮಗಳು ಸ್ವಭಾವಜನ್ಯವಾದ ಆಯಾ ಗುಣಗಳಿಂದ ವಿಭಾಗಿಸಲ್ಪಟ್ಟಿವೆ. ಅಂದರೆ, ಸತ್ವಗುಣ ಪ್ರಧಾನ ಉಳ್ಳ ಮನು

ಷ್ಯನು ಬ್ರಾಹ್ಮಣ ವರ್ಣದ ಕರ್ಮಗಳನ್ನು ಆಚರಿಸುತ್ತಾನೆ. ಸತ್ವಮಿಶ್ರಿತ ರಜೋಗುಣಪ್ರಧಾನ ಉಳ್ಳ ಮನುಷ್ಯನು ಕ್ಷತ್ರಿಯ ವರ್ಣದ ಕರ್ಮಗಳನ್ನು ಆಚರಿಸುತ್ತಾನೆ. ರಜೋಗುಣ ಪ್ರಧಾನ ಉಳ್ಳ ಮನುಷ್ಯನು ವೈಶ್ಯವರ್ಣದ ಕರ್ಮಗಳನ್ನು ನಿರ್ವಹಿಸುತ್ತಾನೆ. ತಮೋಗುಣ ಪ್ರಧಾನ ಉಳ್ಳ ಮನುಷ್ಯನು ಶೂದ್ರ ವರ್ಣದ ಕರ್ಮಗಳನ್ನು ನಿರ್ವಹಿಸುತ್ತಾನೆ.

### ಬ್ರಾಹ್ಮಣ

ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥೪೨॥

**ಭಾವ:**– ಶಮ, ದಮ, ತಪ, ಶೌಚ, ಕ್ಷಾಂತಿ, ಆರ್ಜವ, ಜ್ಞಾನ, ವಿಜ್ಞಾನ ಮತ್ತು ಆಸ್ತಿಕಭಾವ ಇವು ಸ್ವಾಭಾವಿಕವಾದ ಬ್ರಾಹ್ಮಣರ ಕರ್ಮಗಳು.

**ವಿವರಣೆ:**– ಮನಸ್ಸಂಯಮನರೂಪ ಶಮ, ನೇತ್ರಾದಿ ಇಂದ್ರಿಯ ಸಂಯಮನರೂಪ ದಮ, ಶರೀರಶ್ರಮ ಹಾಗು ದಂಡನಾರೂಪ ತಪ, ಬಾಹ್ಯಾಂತರ ನಿರ್ಮಲತೆ ಎಂಬ ಶುಚಿ, ನಿಷ್ಕಾಪಟ್ಯರೂಪ ಆರ್ಜವ, ಕ್ಷಮಾರೂಪ ಕ್ಷಾಂತಿ, ಶಾಸ್ತ್ರಗಳ ಆಳವಾದ ಜ್ಞಾನ, ಆತ್ಮಾನುಭೂತಿಯೆಂಬ ವಿಜ್ಞಾನ ಹಾಗು ದೇವ ಗುರು ಧರ್ಮಗಳಲ್ಲಿ ವಿಶ್ವಾಸ–ಈ ಒಂಭತ್ತು ಗುಣರತ್ನಗಳು ಯಾವ ವ್ಯಕ್ತಿಯಲ್ಲಿ ವೆಯೋ ಅವನೇ ಬ್ರಾಹ್ಮಣ.

ಎಲ್ಲ ಮನುಷ್ಯರು ಶೂದ್ರರಾಗಿಯೇ ಹುಟ್ಟುತ್ತಾರೆ; ಆದರೆ ಅವರಲ್ಲಿ ಕೆಲವರು ಗಾಯತ್ರೀಮಂತ್ರಸಂಸ್ಕಾರ ಮತ್ತು ಗುರೂಪದೇಶ ಪಡೆದು ಶೂದ್ರ ಭಾವ ನೀಗುತ್ತಾರೆ; ಅವರೇ ದ್ವಿಜರು. ಆ ದ್ವಿಜರಲ್ಲಿ ಕೆಲವರು ವೇದಾಧ್ಯಯನ ಮಾಡುತ್ತಾರೆ. ಅವರು ವಿಪ್ರರು. ಅಂಥ ವಿಪ್ರರಲ್ಲಿ ಯಾವನೋ ಒಬ್ಬ ತನ್ನ ತಾ ತಿಳಿದು ಆತ್ಮದರ್ಶಿಯಾಗುತ್ತಾನೆ. ಅವನೇ ಬ್ರಾಹ್ಮಣ.

### ಕ್ಷತ್ರಿಯ

ಶೌರ್ಯಂ ತೇಜೋಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥೪೩॥

**ಭಾವ:**– ಶೌರ್ಯ, ತೇಜ, ಧೃತಿ, ದಾಕ್ಷ್ಯ, ಯುದ್ಧದಲ್ಲಿ ಅಪಲಾಯನ (ಓಡದಿರುವದು). ದಾನ ಹಾಗು ಈಶ್ವರಭಾವಗಳು ಸ್ವಾಭಾವಿಕವಾದ ಕ್ಷತ್ರಿಯ ಕರ್ಮಗಳು.

**ವಿವರಣೆ:**– ವೈರಿಯನ್ನು ನಿರ್ಭೀತಿಯಿಂದ ಎದುರಿಸುವ ಮನೋ ದಾರ್ಢ್ಯವು ಶೌರ್ಯ. ನ್ಯಾಯ ನೀತಿ ಧರ್ಮಗಳನ್ನು ಪಾಲಿಸುವಲ್ಲಿ ತೋರಿಸುವ ಪ್ರಾಗಲ್ಭ್ಯ ಹಾಗು ನೈಪುಣ್ಯವು ತೇಜ. ಪ್ರಾಣವನ್ನು ಬಲಿಯಿತ್ತಾದರೂ ಕರ್ತವ್ಯವನ್ನು ನಿರ್ವಹಿಸಿಯೇ ತೀರುವೆನೆಂಬ ಧೈರ್ಯವು ಧೃತಿ. ಕಾರ್ಯ ಗೈಯುವಲ್ಲಿ ತೋರುವ ಜಾಗರೂಕತೆಯು ದಾಕ್ಷ್ಯ. ಯುದ್ಧದಲ್ಲಿ ಪಲಾಯನ ಸೂತ್ರ ಹಿಡಿ

ಯದೆ ದಿಟ್ಟತನದಿಂದ ಪ್ರಾಣಾಂತ್ಯದವರೆಗೂ ಕಾದುವದು ವೀರತನ. ತಾನು ಸಂಪಾದಿಸಿದ ಸಂಪತ್ತನ್ನು ಯೋಗ್ಯ ವ್ಯಕ್ತಿಗಳಿಗೆ ನೀಡುವದು ದಾನ. ನ್ಯಾಯ ವಾದ ರೀತಿಯಲ್ಲಿ ಪ್ರಜೆಗಳನ್ನು ಆಳುವ ಸಾಮರ್ಥ್ಯವು ಈಶ್ವರಭಾವ. ಈ ಎಲ್ಲ ಗುಣಗಳು ಯಾವನಲ್ಲಿವೆಯೋ ಅವನು ಕ್ಷತ್ರಿಯ. ಅವನ ಬದುಕು ಜನಸೇವೆ ಗಾಗಿ, ನಾಡ ರಕ್ಷಣೆಗಾಗಿ ಮೀಸಲು. ದೇಶಪ್ರೇಮ ಅವನಲ್ಲಿ ಮೂರ್ತಿಮಂತ ವಾಗಿದೆ. ದೇಶಕ್ಕಾಗಿ ಮಡದಿ ಮಕ್ಕಳನ್ನು ತ್ಯಜಿಸಬಲ್ಲ, ಭೋಗೈಶ್ವರ್ಯಗಳನ್ನು ಬಿಟ್ಟುಕೊಡಬಲ್ಲ. ಜೂಜು ಲೆತ್ತ ಸುರಾಪಾನಾದಿ ಚಟಗಳಿಗೆ ಬಲಿ ಬೀಳದ ಅವನು ನೀತಿವಂತ, ನಿಸ್ವಾರ್ಥಿ!

ವೈಶ್ಯ, ಶೂದ್ರ

ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।
ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥೪೪॥

ಭಾವ:— ಕೃಷಿ (ವ್ಯವಸಾಯ), ಗೋಪಾಲನ ಹಾಗು ವಾಣಿಜ್ಯ (ವ್ಯಾಪಾರ)ಗಳು ಸ್ವಾಭಾವಿಕವಾದ ವೈಶ್ಯ ಕರ್ಮಗಳು. ಪರರ ಸೇವೆ ಮಾಡು ವದು ಸ್ವಾಭಾವಿಕವಾದ ಶೂದ್ರ ಕರ್ಮವು.

ವಿವರಣೆ:— ಒಕ್ಕಲುತನ, ಪಶುಸಂಗೋಪನ, ಉದ್ಯಮ, ವ್ಯಾಪಾರ ಮತ್ತು ಸಾಗಾಣಿಕೆಗಳಲ್ಲಿ ಅಭಿರುಚಿಯುಳ್ಳವನೇ ವೈಶ್ಯ. ಅವನು ದುಡಿಮೆಗಾರ, ಬುದ್ಧಿವಂತ, ಪರೋಪಕಾರಿ. ಅವನು ಜನಾಂಗದ ಸುಖಕ್ಕಾಗಿ ದೇಶದ ಸಮೃದ್ಧಿ ಗಾಗಿ ಜೀವನದ ತುಂಬ ಶ್ರಮಿಸುತ್ತಾನೆ. ಸಂಚಯಗುಣ ಅವನದಲ್ಲ; ಶೋಷಣೆ ವಂಚನೆ ಅವನಿಗೆ ಸಲ್ಲವು. ಅವನು ದಾನ-ಧರ್ಮಗಳ ಮೂರ್ತಿ.

ವಿವರಣೆ:—ವಿನಯ, ವಿಧೇಯತೆ, ಪ್ರಾಮಾಣಿಕತೆ, ಕರ್ತವ್ಯನಿಷ್ಠೆ ಹಾಗು ಸೌಜನ್ಯಗಳನ್ನು ರಕ್ತಗತಗೊಳಿಸಿಕೊಂಡವನು ಶೂದ್ರ. ಇವನ ಬದುಕು ಸೇವೆ ಗಾಗಿ ಮುಡುಪು. ಇವನು ಮೌನವಾಗಿ ಬಾಳುವ ಕರ್ಮಯೋಗಿ! ಎಲೆಯ ಮರೆಯ ಹೂವು. ಸ್ವಾರ್ಥ ಎಂಬ ಸೈತಾನನ ಸ್ಪರ್ಶಕೂಡ ಇವನಿಗಾಗಿಲ್ಲ. ಪರರ ಹಿತವೇ ಇವನ ಹಿತ. ಪರರ ಏಳ್ಗೆಯೇ ಈತನ ಏಳ್ಗೆ! ನಾಡ ಜನರ ಸುಖಕ್ಕಾಗಿ ತನ್ನ ಜೀವ ತೇಯುತ್ತಾನೆ! ವಿಮಲಾತ್ಮನಾದ ಇವನು ಇದ್ದ ಊರು ಪವಿತ್ರ, ದೇಶ ಪಾವನ!

ತಾತ್ಪರ್ಯ:— (೧) ಭಗವಂತನ ಮಾತುಗಳು ಅತ್ಯಂತ ಸ್ಪಷ್ಟವಾಗಿವೆ. ವ್ಯಕ್ತಿಯ ವರ್ಣವನ್ನು ಅವನ ಸ್ವಭಾವ ಗುಣ ಮತ್ತು ಕಾಯಕಗಳು ನಿರ್ಧರಿಸು ತ್ತವೆಯೇ ವಿನಃ ಅವನ ಮನೆತನವಲ್ಲ, ರಕ್ತವಲ್ಲ. ವಾಲ್ಮೀಕಿ ಮನೆತನದಿಂದ ಬೇಡ; ಆದರೆ ದೀರ್ಘ ಸಾಧನೆಯ ನಂತರ ಮಹರ್ಷಿ ಎನಿಸಿದ. ವ್ಯಾಸ ಅಂಬಿಗರ ಸಮಾಜಕ್ಕೆ ಸಂಬಂಧಿಸಿದವ; ಧ್ಯಾನ ಚಿಂತನೆಗಳಿಂದಾಗಿ ಪರಮಾಚಾರ್ಯನಾದ. ಬ್ರಾಹ್ಮಣ ತಂದೆಯಿಂದ ಹುಟ್ಟಿದ ಮಕ್ಕಳು ಶೌರ್ಯ ಧೈರ್ಯಗಳನ್ನು ಪ್ರದರ್ಶಿ

ಸಿದರೆ ಅವರು ಕ್ಷತ್ರಿಯರೇ ಸರಿ; ಸೇವಾದಲ ಸೇರಿದರೆ ಅವರು ಶೂದ್ರರೆಂದೇ ಪರಿಗಣಿಸಲ್ಪಡಬೇಕು.

(೨) ಜೀವವರ್ಗಗಳಲ್ಲಿ ಎರಡು ಪ್ರಕಾರ: (ಅ) ಸ್ವಾಭಾವಿಕ ಅಥವಾ ನೈಸರ್ಗಿಕ: ಉದಾ: ಪಿಂಡಜ ಅಂಡಜ ಶ್ವೇದಜ ಹಾಗು ಉದ್ಭಿಜ. ಇವು ಬ್ರಹ್ಮ ನಿರ್ಮಿತ. ಹುಟ್ಟಿನಿಂದ ಉದ್ಭಿಜ ವರ್ಗಕ್ಕೆ ಸೇರಿದ ಮಾವಿನ ಮರ ಎಷ್ಟೇ ಶ್ರಮಿಸಿದರೂ ಪಿಂಡಜ ವರ್ಗಕ್ಕೆ ಪರಿವರ್ತನೆ ಹೊಂದಲಾರದು. (ಬ) ಅನೈಸರ್ಗಿಕ ಅಥವಾ ಕೃತ್ರಿಮ: ಉದಾ: ಬ್ರಾಹ್ಮಣ ಕ್ಷತ್ರಿಯಾದಿ, ಯಾವುದೇ ವ್ಯಕ್ತಿ ತನ್ನ ಮನೋಬಲದ ಸಾಮರ್ಥ್ಯದಿಂದ ಬೇಕಾದ ವರ್ಗಕ್ಕೆ ಸೇರಬಲ್ಲ. ಇದಕ್ಕೆ ಪುರಾವೆಗಳು ಲಕ್ಷ ಲಕ್ಷ. ಹಿಂದಿನ ಕ್ಷತ್ರಿಯರು ಇಂದು ವೈಶ್ಯರಾಗಿದ್ದಾರೆ. ಹಿಂದಿನ ಶೂದ್ರರು ಇಂದು ಬ್ರಾಹ್ಮಣರಾಗಿ ಅಧ್ಯಯನ-ಅಧ್ಯಾಪನ ಮಾಡುತ್ತಿದ್ದಾರೆ.

(೩) ವರ್ಣ ವ್ಯವಸ್ಥೆಯ ಅಪಾರ್ಥ: ಗುಣ ಕರ್ಮಗಳ ಮೇಲೆ ವರ್ಣವು ಅವಲಂಬಿಸಿದೆ ಎಂಬ ಭಗವಂತನ ಅಭಿಮತವನ್ನು ಅಲಕ್ಷಿಸಿದ ಕೆಲ ಸ್ವಾರ್ಥಿಗಳು ವರ್ಣಪದ್ಧತಿಗೆ ರಕ್ತದ ಲೇಪ ಕೊಟ್ಟರು. ವರ್ಣವೆನ್ನುವದು ಹುಟ್ಟಿನೊಂದಿಗೆ ಪಡೆದು ಬರುವ ಬಳುವಳಿ ಎಂದು ಸಾರಿದರು. ವರ್ಣ ವರ್ಣಗಳ ಮಧ್ಯ ಉಕ್ಕಿನ ಗೋಡೆ ನಿರ್ಮಿಸಿದರು. ವ್ಯಕ್ತಿಯು ತನ್ನ ಸ್ವಭಾವ ಹಾಗು ಸಾಮರ್ಥ್ಯಗಳ ಅನುಸಾರ ಆಯಾ ವರ್ಣಗಳಲ್ಲಿ ಪ್ರವೇಶಿಸುವ ಅವಕಾಶವನ್ನೇ ಆ ವರ್ಣಾಂಧರು ತೆಗೆದು ಹಾಕಿದರು. ವಿದ್ಯೆಯನ್ನೇ ಬದುಕಿನ ಉಸಿರನ್ನಾಗಿ ಮಾಡಿಕೊಳ್ಳಬೇಕಾದ ಬ್ರಾಹ್ಮಣ ಕೇವಲ ಭೋಜನೋಪಚಾರಾದಿ ವಿಲಾಸದಲ್ಲಿ ರತನಾದ. ರಾಮರಾಜ್ಯ ಕಟ್ಟಲು ಶ್ರಮಿಸಬೇಕಾದ ಕ್ಷತ್ರಿಯನು ಸುರಾಸೇವನ ಕಾಮಕ್ರೀಡೆ ಅತ್ಯಾಚಾರಗಳಲ್ಲಿ ಮಗ್ನನಾದ. ರಾಷ್ಟ್ರದ ಸಮೃದ್ಧಿಗಾಗಿ ಹೆಣಗಬೇಕಾದ ವೈಶ್ಯನು ದೀನ ದರಿದ್ರರ ದೇಶ-ಕೋಶಗಳ ಶೋಷಣೆಗೆ ತೊಡಗಿದ. ವಿನಮ್ರ ಭಾವದಿಂದ ಸೇವೆ ಸಲ್ಲಿಸಬೇಕಾದ ಶೂದ್ರ ಹೀನಾಚಾರ, ಕೊಲೆ-ಸುಲಿಗೆ ಮುಂತಾದ ಕುಕೃತ್ಯಗಳಿಗಿಳಿದ! ನಿಜವಾದ ಬುದ್ಧಿವಂತರು, ಶಕ್ತಿಶಾಲಿಗಳು, ಪರಹಿತೈಷಿಗಳು, ಸಮಾಜಸೇವಕರು ಮೂಲೆಗುಂಪಾದರು. ಪ್ರಜ್ಞೆಗಳ ಸರ್ವತೋಮುಖ ಉನ್ನತಿ ಸಾಧಿಸಬೇಕಾದ ರಾಷ್ಟ್ರವು ಜರ್ಜರಿತವಾಯಿತು.

(೪) ವರ್ಣಗಳಲ್ಲಿ ತಾರತಮ್ಯ:– ವರ್ಣಗಳಿಗೆ ರಕ್ತದ ಮುಖವಾಡ ಹಾಕಿದ ಜನರೇ ವರ್ಣತಾರತಮ್ಯ-ಸಿದ್ಧಾಂತವನ್ನು ಬಳಕೆಗೆ ತಂದರು. ಬ್ರಾಹ್ಮಣರು ಶ್ರೇಷ್ಠತಮ, ಕ್ಷತ್ರಿಯರು ಶ್ರೇಷ್ಠತರ, ವೈಶ್ಯರು ಶ್ರೇಷ್ಠ, ಶೂದ್ರರು ಕನಿಷ್ಠ! ಎಂಬ ಭಾವ ಉಂಟು ಮಾಡಿದರು. ಸಮಾಜದ ಸೇವಾಸ್ತಂಭರೆನಿಸಿದ, ಕರ್ಮಯೋಗಿಗಳನ್ನು ಶೂದ್ರರೆಂದು ಗ್ರಾಮಗಳಾಚೆ ದೂಡಿದರು; ಜ್ಞಾನ, ಆಡಳಿತ, ವ್ಯವಸಾಯ ಕ್ಷೇತ್ರಗಳಿಂದ ಉಚ್ಚಾಟನೆಗೊಳಿಸಿದರು. ಅಸ್ಪೃಶ್ಯ-ಸಿದ್ಧಾಂತವನ್ನು ಜನಜನಿತ ಮಾಡಿದರು. ಶೂದ್ರನೆಂಬ ಜೀವ ಮೂವರ ಕಾಲ್ಕೆಳಕ್ಕೆ

ಸಿಕ್ಕು ನರಳಿದ, ಸಾವಿರಾರು ವರುಷ! ಆತ ನಾಡವರ ಕಸಗೂಡಿಸಿದ, ಅವರ ಬೇಗಾವಲಾಗಿ ಪ್ರಾಣ ನೀಡಿದ, ಬಿಸಿಲು ಮಳೆ ಚಳಿ ಎನ್ನದೆ ಹೊರೆಹೊತ್ತ; ಆದರೇನು, ಅವನ ಹಸಿದ ಹೊಟ್ಟೆ ತುಂಬಲಿಲ್ಲ, ಬಳಲಿದ ಮೈಗೆ ವಿಶ್ರಾಮ ದೊರೆಯಲಿಲ್ಲ. ದೊಡ್ಡವರ ಬಿರುನುಡಿ, ಅಪಹಾಸ್ಯ, ಶಿಕ್ಷೆಗಳನ್ನೆಲ್ಲ ತುಟಿ ಎರಡು ಮಾಡದೆ ಸಹಿಸಿದ! ಅವನಲ್ಲಿದ್ದ ಬುದ್ಧಿ ಕಮರಿತು; ಶಕ್ತಿ ಕುಂದಿತು, ಕಲಾದೃಷ್ಟಿ ಮುದುಡಿತು!

(೫) ವರ್ಣತಾರತಮ್ಯ: ಇದು ನಿರಾಧಾರವಾಗಿದೆ; ಗಿಡದ ಬೇರು, ಕಾಂಡ ಶಾಖೆ, ಎಲೆ, ಹೂ, ಕಾಯಿಗಳಲ್ಲಿ ಯಾವುದು ಶ್ರೇಷ್ಠ? ಯಾವುದು ಕನಿಷ್ಠ? ಒಂದಿಲ್ಲದಿದ್ದರೂ ಉಳಿದವುಗಳಿಗೆ ಅಸ್ತಿತ್ವವಿಲ್ಲ, ಬೆಲೆಯಿಲ್ಲವಾಗಿ ಅವೆಲ್ಲ ಸಮ; ಅಲ್ಲವೇ? ಅದೇ ರೀತಿ ಸಮಾಜವೃಕ್ಷ. ಆ ವೃಕ್ಷದ ವಿಭಿನ್ನ ಭಾಗಗಳಾದ ಬ್ರಾಹ್ಮಣ್ಯಾದಿ ಕರ್ಮಗಳು ಗುಣಗಳು ಸರಿಸಮ! ವ್ಯಕ್ತಿ ಹಾಗು ಸಮಾಜಗಳು ಸೌಷ್ಠವಾಗಿ ಬದುಕಲು ವಿದ್ಯೆ, ಶಕ್ತಿ, ವ್ಯವಸಾಯ, ಸೇವೆ ಎಲ್ಲವೂ ಅವಶ್ಯ. ಅವುಗಳಲ್ಲಿ ಎಲ್ಲಿ ಹಿರಿದು ಕಿರಿದು? ಅಧ್ಯಯನ, ರಕ್ಷಣ, ಉತ್ಪಾದನ ಹಾಗು ಸೇವೆ ಈ ನಾಲ್ಕೂ ಕಾಯಕಗಳು! ನಾಲ್ಕೂ ಶ್ರೇಷ್ಠ! ಈ ಕಾಯಕದಲ್ಲಿ ತೊಡಗಿದ ನಾಲ್ವರೂ ಕಾಯಕಯೋಗಿಗಳು!!

ತಾತ್ವಿಕ ದೃಷ್ಟಿಯಿಂದಲೂ ಈ ಮಾತು ಸತ್ಯ. ವಿಶ್ವವೆಲ್ಲ ಪರಮಾತ್ಮನ ಟಂಕಶಾಲೆ, ಜೀವಜಂತುಗಳು, ಮನುಷ್ಯ ಮನುಷ್ಯರು ಅವನ ಶಿಲ್ಪ ಕೃತಿಗಳು. ಅಷ್ಟೇ ಅಲ್ಲ, ಅವರಲ್ಲೆಲ್ಲ ಅವನೇ ವಾಸಿಸಿದ್ದಾನೆ, ಎಂದಾಗ ಒಂದು ಜೀವ ಶ್ರೇಷ್ಠ ಮತ್ತೊಂದು ಜೀವ ಕನಿಷ್ಠ ಹೇಗಾದೀತು?

ನಮ್ಮ ದೇಶದಲ್ಲಿಯಂತೆ ಇತರ ನೂರಾರು ದೇಶಗಳಲ್ಲಿಯೂ ಬುದ್ಧಿವಂತರು ರಣಸಿಂಹರು, ಪ್ರಬುದ್ಧ ಉದ್ಯಮದಾರರು, ಸೇವಾಸಕ್ತರು ವಾಸಿಸಿದ್ದಾರೆ. ರಕ್ತಗತ ವರ್ಣ ವ್ಯವಸ್ಥೆಯು ದೇವನಿಂದ ಆಗಿದ್ದರೆ ಆ ನಾಡುಗಳಲ್ಲಿಯೂ ಚಾತುರ್ವರ್ಣವು ಬಳಕೆಯಲ್ಲಿರಬೇಕಲ್ಲವೆ? ಆದರೆ ಹಾಗಿಲ್ಲ. ಅಲ್ಲಿ ತರತಮಭಾವ ಕೂಡ ಬೆಳೆದು ಬಂದಿಲ್ಲ. ದುಡಿಮೆಗಳಲ್ಲಿ ಸಮದರ್ಶನ ಅವರಿಗಿದೆ.

(೬) (ಅ) ದಿವ್ಯಜ್ಞಾನ ಪಡೆದು ಬ್ರಾಹ್ಮಣನಾದವನು ಕ್ಷತ್ರಿಯ, ವೈಶ್ಯ ಅಥವಾ ಶೂದ್ರ ವರ್ಣದವರ ಕಾರ್ಯಗಳನ್ನು ಸುಲಭವಾಗಿ ನಿರ್ವಹಿಸಬಲ್ಲ. ಉದಾ: ರಾಮನು ಆತ್ಮದರ್ಶಿಯಾದ ಬ್ರಾಹ್ಮಣ; ರಾಜನಾಗಿ ಆಳಿದ. ನಾರದನು ಸತ್ಯವನ್ನರಿತ ಬ್ರಾಹ್ಮಣ; ಗಾನಲೋಲನಾಗಿ ಬಾಳಿದ. ಹನುಮಂತನು ದೇವನಲ್ಲಿ ಸಾಮರಸ್ಯ ಹೊಂದಿದ ಬ್ರಾಹ್ಮಣ; ಸೇವಕನಾಗಿ ದುಡಿದ. ರಾಮನು ರಾಜ್ಯ ವಾಳಿದರೂ ಕ್ಷತ್ರಿಯನಲ್ಲ; ನಾರದನು ಗಾಯಕನಾದರೂ ವೈಶ್ಯನಲ್ಲ; ಹನುಮಂತನು ದಾಸನಾಗಿ ಸೇವಿಸಿದರೂ ಶೂದ್ರನಲ್ಲ. ಏಕೆಂದರೆ ಪರಮಾತ್ಮನ ಅನಂತತೆಯ ಪರಿಜ್ಞಾನ ಹೊಂದಿದ ಬ್ರಾಹ್ಮಣರಲ್ಲಿ ಗುಣ ಕರ್ಮಗಳ ಅಭಿಮಾನವೇ

ಇರುವದಿಲ್ಲ. ಗುಣ ಕರ್ಮಗಳ ಅಭಿಮಾನ ಹಿಡಿದು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಾದವರು ಮಾತ್ರ ಆಯಾ ವರ್ಣಗಳ ಅಭಿನಿವೇಶ ಪಂಕದಲ್ಲಿ ಆಕಂಠ ಮುಳುಗಿದ್ದಾರೆ. ಅವರು ಇತರ ವರ್ಣಗಳ ಕರ್ಮ ಮಾಡಲು ಹಿಂಜರಿಯುತ್ತಾರೆ.

(ಬ)ನಿಜವಾದ ಬ್ರಾಹ್ಮಣತ್ವವಿಲ್ಲದೇ ಶೂದ್ರ, ವೈಶ್ಯ, ಕ್ಷತ್ರಿಯರಾದವರು ತಮ್ಮ ತಮ್ಮ ವರ್ಣಗಳಿಗಿಂತ ಮೇಲ್ವರ್ಣದವರ ಕಾರ್ಯ ಮಾಡಲು ಅಸಮರ್ಥರು. ಆದರೆ, ಒಬ್ಬ ಶೂದ್ರನು ಉಳಿದ ಮೂವರ ಕಾರ್ಯ ಮಾಡಲಾರ. ಒಬ್ಬ ಬ್ರಾಹ್ಮಣ ಮಾತ್ರ ಉಳಿದೆಲ್ಲ ವರ್ಣದವರ ಕಾರ್ಯ ಮಾಡಬಲ್ಲ.

(೭) ಭಗವಂತನ ವಚನವೇ ಸತ್ಯ: ಗುಣ ಕರ್ಮ ಹಾಗು ಸ್ವಭಾವಗಳೇ ವರ್ಣಗಳ ಆಧಾರ, ವ್ಯಕ್ತಿಯು ತನ್ನ ಸ್ವಭಾವಕ್ಕನುಗುಣವಾಗಿ ತಾನೇ ತನ್ನ ವರ್ಣವನ್ನು ನಿರ್ಧರಿಸಿಕೊಳ್ಳಬೇಕು, ಎಲ್ಲ ವರ್ಣೀಯರು ಸರಿಸಮ; ಎಂಬ ಭಗವಂತನ ನುಡಿ ನೂರಕ್ಕೆ ನೂರು ಸತ್ಯ. ಅವನು ಇತ್ತ ವರ್ಣವ್ಯವಸ್ಥೆಯ ರೂಪುರೇಷೆಗಳನ್ನು ಬಹುಕಾಲ ಕಡೆಗಣಿಸಲಾಯಿತೇನೋ ನಿಜ, ಆದರೆ ಇಂದು ಅವನ ಆದೇಶ ಕಾರ್ಯಗತವಾಗಿದೆ, ಆಗುತ್ತಿದೆ. ಇಂದು ರಕ್ತ ಸಂಬಂಧಿತ ಕೃತ್ರಿಮ ವರ್ಣಗಳು ಕುಸಿದಿವೆ. ಎಲ್ಲರಿಗೆ ಎಲ್ಲ ವಿಧದ ಅವಕಾಶಗಳು ಕೊಡಲ್ಪಟ್ಟಿವೆ. ವಿದ್ಯಾ ಮಂದಿರಗಳು, ಉದ್ಯಮ–ವ್ಯವಸಾಯರಂಗಗಳು, ಲೋಕಸೇವಾ ಸಂಘಗಳು ಅಷ್ಟೇ ಅಲ್ಲ, ದೇಶ ಸಂರಕ್ಷಕ ದಳಗಳು ಇಷ್ಟವಿದ್ದವರಿಗೆಲ್ಲ ತೆರೆದುಕೊಂಡಿವೆ. ಯಾವನಲ್ಲಿ ಯಾವ ಯೋಗ್ಯತೆ ಇದೆಯೋ ಅವನು ಆ ಕ್ಷೇತ್ರವನ್ನು ಪ್ರವೇಶಿಸಬಲ್ಲ! ಸಾವಿರಾರು ವರುಷಗಳಿಂದ ಅಸ್ಪೃಶ್ಯರೆಂದು ಕಡೆಗಣಿಸಲ್ಪಟ್ಟವರು ಇಂದು ರಾಜಪೀಠವೇರಿ ಆಳುತ್ತಿದ್ದಾರೆ, ಗುರುವಿನ ಗದ್ದುಗೆಯ ಮೇಲೆ ಕುಳಿತು ಉಪದೇಶಿಸುತ್ತಿದ್ದಾರೆ, ದೇಶದ ಮಹಾ ಸೈನ್ಯದಲ್ಲಿ ಸೇನಾನಾಯಕರಾಗಿ ಕಾರ್ಯ ಮಾಡುತ್ತಿದ್ದಾರೆ, ಆಂತರಿಕ ಹಾಗು ಅಂತರ್‌ರಾಷ್ಟ್ರೀಯ ವ್ಯಾಪಾರೋದ್ಯಮಗಳನ್ನು ನಿರ್ವಹಿಸುತ್ತಿದ್ದಾರೆ! ಭಗವಂತನ ಇಚ್ಛೆ ಸಫಲವಾಗಿದೆ! ಅರ್ಹತೆ ಇದ್ದ ವ್ಯಕ್ತಿ ಯಾವ ಮನೆತನದಲ್ಲಿ ಜನಿಸಿದರೂ ಸರಿಯೇ, ಅವನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಅಥವಾ ಶೂದ್ರನಾಗಬಲ್ಲ. ಅದೂ ಅಲ್ಲದೆ, ಸಾಮರ್ಥ್ಯವಿದ್ದರೆ ಒಬ್ಬನೇ ನಾಲ್ಕೂ ವರ್ಣಗಳ ಕರ್ಮಗಳನ್ನು ಹಾರ್ದಿಕವಾಗಿ ಆಚರಿಸಬಲ್ಲ!! ಇದುವೇ ಭಗವಂತನು ಕಲ್ಪಿಸಿದ ಮುಕ್ತ ಸಮಾಜ! ಇದರಲ್ಲಿ ಎಲ್ಲರೂ ಸಮ!

ಸಂಬಂಧ:– ಸ್ವಕರ್ಮರತನು ಸಿದ್ಧಿಯನ್ನು ಪಡೆಯುತ್ತಾನೆ. ಅದರ ವರ್ಣನೆ ಸಾಗಿದೆ.

ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।
ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥೪೫॥

ಭಾವ:– ತನ್ನ ಸ್ವಕರ್ಮದಲ್ಲಿ ನಿರತನಿದ್ದವನು ಸಿದ್ಧಿಯನ್ನು ಪಡೆಯುವದು ನಿಶ್ಚಿತ. ತನ್ನ ಸ್ವಾಭಾವಿಕ ಕರ್ಮದಲ್ಲಿ ನಿರತನಾದವನು ಸಿದ್ಧಿಯನ್ನು ಹೇಗೆ

ಪಡೆಯುಂವನೆಂಬುದನ್ನು ಕೇಳು.

ವಿವರಣ:–(೧) ಸ್ವಕರ್ಮ: ತನ್ನ ದೇಹಕ್ಕೆ ಒಗ್ಗುವ, ಮನಸ್ಸಿಗೆ ರುಚಿಸುವ, ಬುದ್ಧಿಗೆ ಅಳವಡುವ ಹಾಗು ಸ್ವ ಪರಹಿತ ಸಾಧಿಸುವ ಸ್ವಕರ್ಮದಿಂದ ಹೃದಯ ಶುದ್ಧಿ, ನೀತಿ ಸಿದ್ಧಿ; ಅದರಿಂದ ಆತ್ಮಜ್ಞಾನಪ್ರಾಪ್ತಿ. ಮುಕ್ತಿಯನ್ನು ಇಚ್ಛಿಸುವ ಸಾಧಕನು ತನ್ನ ಸ್ವಕರ್ಮದಲ್ಲಿ ಸದಾ ನಿರತನಾಗಿರಬೇಕು.

(೨)ಅತ್ಯಂತ ಬುದ್ಧಿವಂತರು, ನೀತಿಕೋವಿದರು, ಧರ್ಮದರ್ಶಿಗಳು ಅನುಭಾವಿಗಳು ಏನೇ ಮಾಡಲಿ ಅದೇ ಅವರ ಸ್ವಕರ್ಮ. ಉದಾ: ಪಾಠ ಪ್ರವಚನಗಳಲ್ಲಿ ಜೀವನವನ್ನು ವ್ಯಯಿಸುವ ಬ್ರಾಹ್ಮಣನು ಪ್ರಸಂಗ ಬಂದಾಗ ದೇಶ ರಕ್ಷಣೆಗೆ ನಿಲ್ಲುತ್ತಾನೆ; ದೀನ ದಲಿತರ ಸೇವೆ ಮಾಡುತ್ತಾನೆ. ಅವನ ಸಾಮರ್ಥ್ಯ ಅಮಿತವಾದುದರಿಂದ ಎಲ್ಲ ಕಾರ್ಯಗಳನ್ನು ತೃಪ್ತಿಕರವಾಗಿ ನಿರ್ವಹಿಸುತ್ತಾನೆ. ಆದುದರಿಂದ ಅವನಲ್ಲಿ ವರ್ಣಾಭಿಮಾನವಿಲ್ಲ; ಸರ್ವ ಕರ್ಮಗಳನ್ನು ಸಮನಾಗಿ ಕಾಣುತ್ತಾನೆ.

(೩) ಸಮಾಜದ ಬದುಕಿಗೆ, ವ್ಯಕ್ತಿಯ ಉನ್ನತಿಗೆ ನಾಲ್ಕು ವರ್ಣಗಳ ಕರ್ಮಗಳು ಅವಶ್ಯ. ಒಬ್ಬನೇ ವ್ಯಕ್ತಿ ಬ್ರಾಹ್ಮಣನಾಗಿ ಅಧ್ಯಯನ ಮಾಡುತ್ತಾನೆ; ಕ್ಷತ್ರಿಯನಾಗಿ ಮನೆ ಹಾಗು ಭೂಮಿಗಳನ್ನು ಸಂರಕ್ಷಿಸುತ್ತಾನೆ; ವೈಶ್ಯನಾಗಿ ಕೃಷಿ ಮಾಡುತ್ತಾನೆ; ಶೂದ್ರನಾಗಿ ಕೃಷಿಗೆ ಸಹಾಯಕವಾದ ದನಕರುಗಳ ಸೇವೆ ಗೈಯ್ಯುತ್ತಾನೆ. ಹೀಗಾಗಿ, ನಾಲ್ಕು ವರ್ಣಗಳ ಕರ್ಮಗಳು ಪ್ರತಿಯೊಬ್ಬನ ಸ್ವಕರ್ಮಗಳೆನಿಸುತ್ತವೆ. ಸ್ವಕರ್ಮದ ಪರಿಪೂರ್ಣ ಅರ್ಥ ಅರಿತು ಸಮಯಾನುಸಾರ ಆ ಕರ್ಮವನ್ನು ಮನಸೋಕ್ತ ಆಚರಿಸುವದರಿಂದ ಖಂಡಿತವಾಗಿಯೂ ಮನುಷ್ಯನು ಇಚ್ಛಿತ ಸಿದ್ಧಿಯನ್ನು ಹೊಂದುತ್ತಾನೆ.

ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್।
ಸ್ವ ಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥೪೬॥

ಭಾವ:– ಯಾವನಿಂದ ಭೂತಗಳ ಉದ್ಭವವೋ, ಯಾವನಿಂದ ಇದೆಲ್ಲ ವ್ಯಾಪಿಸಲ್ಪಟ್ಟಿದೆಯೋ ಅವನನ್ನು ಸ್ವಕರ್ಮದಿಂದ ಪೂಜಿಸಿ ಮನುಷ್ಯನು ಸಿದ್ಧಿಯನ್ನು ಪಡೆಯುತ್ತಾನೆ.

ವಿವರಣ:-(೧)ಯತಃ ಪ್ರವೃತ್ತಿಃ ...:–ಮಹದಾದಿ ಭೂಮ್ಯಂತ ತತ್ತ್ವಗಳು ಹಾಗು ಚರಾಚರ ದೇಹಗಳು ಪರಮಾತ್ಮನ ಮಹಾ ಸಾನಿಧ್ಯದಿಂದ ಮೂಡಿ ಬಂದಿವೆ. ಅವನು ಪರಿಪೂರ್ಣ! ಸರ್ವ ವ್ಯಾಪಿ. ಅಣ್ವಾದಿ ಪ್ರಕೃತ್ಯಂತವಾದ ಪ್ರಚಂಡ ವಿಶ್ವದಲ್ಲಿ ಅವನು ಚಿರಂತನವಾಗಿ ನೆಲೆಸಿದ್ದಾನೆ.

(೨) ತಮಭ್ಯರ್ಚ್ಯ...:–ನಿಷ್ಕಾಮ ಕರ್ಮರೂಪ ಸ್ವಕರ್ಮಗಳಿಂದ ಅಂಥ ಪರಾತ್ಪರ ದೇವನನ್ನು ಹೃದಯಾರೆ ಪೂಜಿಸಬೇಕು. ಅಧ್ಯಯನ - ಅಧ್ಯಾಪನ, ರಕ್ಷಣ, ಉತ್ಪಾದನ, ಸೇವೆಗಳನ್ನು ನಿರ್ಮಲ ಭಾವದಿಂದ ಆಚರಿಸಿ ಕರ್ತೃತ್ವ

ಬುದ್ಧಿ ಹಾಗು ಫಲಗಳನ್ನು ಆ ಪ್ರಭುವಿಗೆ ನಿವೇದಿಸಬೇಕು. ಹಾಗೆ ಮಾಡಿದ್ದಾದರೆ ಆತ್ಮಜ್ಞಾನದ ಸಿದ್ಧಿ ಉಂಟಾಗುವದು.

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಭಾವ ನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥೪೭॥

ಅರ್ಥ:- = ಚೆನ್ನಾಗಿ ಅನುಷ್ಠಾನ ಮಾಡಲ್ಪಟ್ಟ, ಪರಧರ್ಮಾತ್ = ಪರಧರ್ಮಕ್ಕಿಂತ, ವಿಗುಣಃ =ಸುಲಭ ಅನುಷ್ಠಾನೀಯವಲ್ಲದ, ಸ್ವಧರ್ಮಃ= ಸ್ವಧರ್ಮವು, ಶ್ರೇಯಾನ್ ಶ್ರೇಯಸ್ಕರವಾಗಿದೆ, ಸ್ವಭಾವನಿಯತಂ= ಸ್ವಭಾವದಿಂದ ನಿಯಮಿತವಾದ, ಕರ್ಮ= ಕರ್ಮವನ್ನು, ಕುರ್ವನ್ = ಮಾಡುತ್ತ(ಇದ್ದರೆ) ಕಿಲ್ಬಿಷಂ ನ ಆಪ್ನೋತಿ= ಪಾಪವನ್ನು ಹೊಂದುವದಿಲ್ಲ.

ವಿವರಣ-(೧) ಸ್ವಧರ್ಮ ಪರಧರ್ಮ: ತನ್ನ ಸ್ವಭಾವಕ್ಕೆ ಹಿಡಿಸುವ ಸತ್ಯಧರ್ಮವು ಸ್ವಧರ್ಮ; ತನ್ನ ಸ್ವಭಾವಕ್ಕೆ ಆಗಿಬರದ ಧರ್ಮವು ಪರಧರ್ಮ. ಪರಧರ್ಮವು ಅತ್ಯಂತ ಸುಲಭವಾಗಿರಬಹುದು; ಸ್ವಧರ್ಮವು ಅತ್ಯಂತ ಕಠಿಣವಿರಬಹುದು. ಅಷ್ಟೇದ ಮಾತ್ರಕ್ಕೆ ಪರಧರ್ಮವು ವರಣೀಯವಲ್ಲ. ಸ್ವಧರ್ಮವೇ ಶ್ರೇಯಸ್ಕರ. ವೇದ ವೇದಾಂತಗಳನ್ನು ಕಲಿತು, ಗುರು ಸಾನಿಧ್ಯದಲ್ಲಿ ಆತ್ಮಸಾಧನೆಮಾಡಿ ಬ್ರಾಹ್ಮಣನಾದ ಮನುಷ್ಯನು ತನ್ನ ಕರ್ತವ್ಯವಾದ ಅಧ್ಯಾಪನವನ್ನು ತೊರೆದು ಅತಿ ಸುಲಭವಾದ ಚಿಕ್ಕ ಪುಟ್ಟ ಕೆಲಸಗಳಲ್ಲಿ ತೊಡಗಿದರೆ, ಹತ್ತೆಂಟು ವರುಷ ಅಂಗಸಾಧನೆ ಹಾಗು ಶಸ್ತ್ರಸಾಧನೆ ಮಾಡಿ ಕ್ಷತ್ರಿಯನಾದ ಕಲಿಯು ಯುದ್ಧದಿಂದ ಪರಾವೃತ್ತನಾಗಿ ಸಾಮಾನ್ಯ ಸೇವಾ ಕಾರ್ಯದಲ್ಲಿ ಮಗ್ನನಾದರೆ, ಉದ್ಯಮ ವ್ಯವಸಾಯಗಳಲ್ಲಿ ತರಬೇತಿ ಹೊಂದಿ ವೈಶ್ಯನಾದ ವ್ಯಕ್ತಿ ತನ್ನ ಕರ್ತವ್ಯ ಕರ್ಮ ಬಿಟ್ಟು ಹಗುರಾದ ಕಾರ್ಯಗಳತ್ತ ಮನ ಹರಿಸಿದರೆ, ಹಾಗು ಸೇವಾ ಕಲೆಯನ್ನು ರಕ್ತಗತಗೊಳಿಸಿಕೊಂಡು ಶೂದ್ರನಾದ ಪುಣ್ಯಾತ್ಮನು ಕ್ಷುಲ್ಲಕ ಕಾರ್ಯಗಳತ್ತ ಲಕ್ಷ ಹಾಕಿದರೆ, ಸಮಾಜಕ್ಕೂ ಅಹಿತ, ವೈಯಕ್ತಿಕ ಪ್ರಗತಿಯೂ ಇಲ್ಲ. ಎಂದೇ ಭಗವಂತನು ಸುಸ್ಪಷ್ಟವಾಗಿ ನಿರ್ದೇಶನವಿತ್ತಿದ್ದಾನೆ. ವ್ಯಕ್ತಿಯು ಯಾವುದರಲ್ಲಿ ಅಭಿರುಚಿ ತಾಳಿದ್ದಾನೆಯೋ ಹಾಗು ಯಾವುದರ ತರಬೇತಿ ಪಡೆದಿದ್ದಾನೆಯೋ ಅಂಥ ಸ್ವಧರ್ಮಪರ ಕರ್ತವ್ಯಕರ್ಮಗಳನ್ನೇ ಹೃದಯಾರೆ ಆಚರಿಸಬೇಕು. ಸುಲಭವೆಂಬ ಏಕೈಕ ಕಾರಣದಿಂದ ತನ್ನ ಶಕ್ತಿ ಸಾಮರ್ಥ್ಯಗಳಿಗೆ ಯುಕ್ತವಲ್ಲದ ಪರಧರ್ಮಪರ ಕರ್ಮಗಳನ್ನು ಮಾಡಲು ಬಯಸಬಾರದು. ಸ್ವಧರ್ಮಾಚರಣೆಯಿಂದಲೇ ಸರ್ವಸಿದ್ಧಿ!

(೨)ಪರಿಚಿತವಾದ ಸ್ವಕರ್ಮದಲ್ಲಿ ದೋಷ ಕಾಣುವದು ಹಾಗು ಅಪರಿಚಿತವಾದ ಅನ್ಯರ ಕರ್ಮದಲ್ಲಿ ಶ್ರೇಯಸ್ಸನ್ನು ಕಾಣುವದು ಮನುಷ್ಯನ ಸಹಜ ದೃಷ್ಟಿ. ಒಕ್ಕಲಿಗನಿಗೆ ಅಧ್ಯಾಪಕನ ಜೀವನ ಆಕರ್ಷಕವಾಗಿ ತೋರುತ್ತದೆ; ಅಧ್ಯಾಪಕನಿಗೆ ಡಾಕ್ಟರನ ಜೀವನ ಮೆಚ್ಚಿನದಾಗಿ ತೋರುತ್ತದೆ. ನಿಜವಾಗಿ ನೋಡಿದರೆ ಎಲ್ಲ

ವಿಧದ ಜೀವನದ ಧರ್ಮಗಳು ಸರಿಸಮ. ವಿಮಲ ಭಾವದಿಂದ ತನಗೆ ಸರಿಬರುವ ಯಾವ ಧರ್ಮ ಆಚರಿಸಿದೂ ಸರಿ; ಅದೇ ಸ್ವಧರ್ಮ. ಅದರ ಆಚರಣೆಯಿಂದ ಪಾಪ ಅಂಟದು, ಮನಸ್ಸು ವಿಮಲಗೊಂಡು ದೇವ ದರ್ಶನಕ್ಕೆ ಆಸ್ಪದ ಮಾಡಿ ಕೊಡುತ್ತದೆ.

ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥೪೮॥

ಭಾವ:– ಸ್ವಾಭಾವಿಕ ಕರ್ಮವು ಸದೋಷವಿದ್ದರೂ ತ್ಯಾಜ್ಯವಲ್ಲ. ಯಾಕೆಂದರೆ ಅಗ್ನಿಯು ಹೊಗೆಯಿಂದ ಆವೃತವಾದಂತೆ ಎಲ್ಲ ಕರ್ಮಗಳು ದೋಷ ಯುಕ್ತವಾಗಿವೆ.

**ವಿವರಣೆ:– (೧) ಸಹಜಂ ಕರ್ಮ ಸದೋಷಮಪಿ ನ ತ್ಯಜೇತ್:**–ಸ್ವಭಾವಕ್ಕೆ ಒಪ್ಪಿತವಾದ ಕರ್ಮವು ಅಲ್ಪ ಸ್ವಲ್ಪ ದೋಷದಿಂದ ಕೂಡಿದ್ದರೂ ಅದನ್ನು ತ್ಯಜಿಸಬಾರದು. ಏಕೆಂದರೆ ಅಗ್ನಿಯು ಧೂಮದಿಂದ ಆವೃತವಾದಂತೆ ಮನುಷ್ಯನು ಆಚರಿಸುವ ಸಕಲ ಕರ್ಮಗಳು ಒಂದಿಲ್ಲೊಂದು ದೋಷದಿಂದ ಕೂಡಿವೆ. ಉದಾಹರಣೆಗಾಗಿ–

"ರೂಪಂ ರೂಪ ವಿವರ್ಜಿತಸ್ಯ ಭವತೋ ಧ್ಯಾನೇನ ಯತ್ಕಲ್ಪಿತಮ್ ॥
ಸ್ತುತ್ಯಾಽನಿರ್ವಚನೀಯತಾಽಖಿಲ ಗುರೋ ದೂರೀಕೃತಾ ಯನ್ಮಯಾ ॥
ವ್ಯಾಪಿತ್ವಂ ಚ ನಿರಾಕೃತಂ ಭಗವತೋ ಯತ್ತೀರ್ಥ ಯಾತ್ರಾದಿನಾ ॥
ಕ್ಷಂತವ್ಯೋ ಜಗದೀಶ ತದ್ವಿಕಲಿತಾ ದೋಷತ್ರಯಂ ಮತ್ಕೃತಮ್ ॥"

'ಜಗದೀಶನೆ, ರೂಪಿಲ್ಲದ ನಿನಗೆ ಧ್ಯಾನಸಾಧನೆಗಾಗಿ ರೂಪವನ್ನು ಕಲ್ಪಿಸಿದೆ; ಸ್ತುತಿಮಾಡಿ ನಿನ್ನ ಸರ್ವತೋಮುಖ ಅನಿರ್ವಚನೀಯತೆಯನ್ನು ಭಂಗಪಡಿಸಿದೆ; ತೀರ್ಥ ಯಾತ್ರೆಗಳ ಮಾಡಿ ನಿನ್ನ ವ್ಯಾಪಿತ್ವವನ್ನೇ ನಿರಾಕರಿಸಿದೆ. ಆದ್ದರಿಂದ, ಭಗವಂತನೆ, ನನ್ನಿಂದಾದ ಈ ಮೂರು ದೋಷಗಳನ್ನು ಕ್ಷಮಿಸು.' ಹೀಗೆ ದೇವ ಧ್ಯಾನ, ದೇವ ನುತಿ ಹಾಗು ದೇವಯಾತ್ರೆಗಳೇ ಸದೋಷ ಎಂದ ಬಳಿಕ ಉಳಿದ ಕರ್ಮಗಳು ಪೂರ್ಣ ನಿರ್ದೋಷ ಹೇಗಾದಾವು?

(೨) ಪರಮಾತ್ಮನು ಮೂಲತಃ ಅಪ್ರಮೇಯ, ಅನಿರ್ದೇಶ್ಯ ಹಾಗು ವಾಙ್ಮನಾತೀತ. ಸತ್ತು ಚಿತ್ತು ಆನಂದ ನಿತ್ಯ ಪರಿಪೂರ್ಣಗಳ ಭಾವ-ತೆರೆಯೇ ಇಲ್ಲದ ದಿವ್ಯ ಬಯಲು! ಅಲ್ಲಿ ಇಚ್ಛಾ ಜ್ಞಾನ ಕ್ರಿಯೆಗಳಿಲ್ಲ! ಮನ ಬುದ್ಧಿ ಅಹಮುಗಳಿಲ್ಲ! ಅಂಥ ಪರಾತ್ಪರ ಪ್ರಭುವಿನ ದಿವ್ಯ ಸಾನಿಧ್ಯದಲ್ಲಿ ಮಾಯಾ ದೋಷದಿಂದಾಗಿ ಜೀವ ಜಗತ್ತು ಇಂದ್ರಿಯಗಳು ಕರಣಗಳು ರೂಪಗೊಂಡವು; ವೇದ ವೇದಾಂತಗಳೆಂಬ ಶಬ್ದ ಸಂಪದಗಳು ನಿರ್ಮಾಣವಾದವು. ಅವರ್ಣನೀಯ. ವಾದ ಪರಮಾತ್ಮನನ್ನು ನಾವು ರೂಪಗಳಲ್ಲಿ ಹಿಡಿದಿಡಲು ವೇದಗಳು ಯತ್ನಿಸಿದರೆ, ಸದಾದಿ ಲಕ್ಷಣಗಳ ಸಹಾಯದಿಂದ ಆ ಮಹಾ ವಸ್ತುವನ್ನು ವರ್ಣಿಸಲು

ವೇದಾಂತಶಾಸ್ತ್ರಗಳು ಶ್ರಮಿಸಿದವು. ಜೀವನು ಕರಣೇಂದ್ರಿಯಗಳ ಮೂಲಕ ಅಸಂಖ್ಯ ಕರ್ಮಗಳನ್ನು ಎಸಗಿದ; ಬ್ರಾಹ್ಮಣಾದಿ ವರ್ಣಗಳ ಭಾವ ತಾಳಿ ಆಯಾ ವರ್ಣಯೋಗ್ಯವಾದ ಧರ್ಮಾಚರಣೆಗೆ ತೊಡಗಿದ. ಇಂತು ಮಾಯೆ ಎಂಬ ಮೂಲ ದೋಷದ ಆಧಾರದ ಮೇಲೆ ನೂರಾರು ಸಾವಿರಾರು ದೋಷಗಳು ಘಟಿಸಿದವು! ಒಟ್ಟಿನಲ್ಲಿ ಮಾಡಿದ ಕ್ರಿಯೆಗಳೆಲ್ಲ ಸದೋಷ: ನೆನೆಸಿದ ಭಾವನೆಗಳೆಲ್ಲ ಸದೋಷ; ಚಿಂತಿಸಿದ ವಿಚಾರಗಳೆಲ್ಲ ಸದೋಷ. ಆದುದರಿಂದ ತನಗೆ ಸ್ವಾಭಾವಿಕ ವಾದ ಕರ್ಮವು ದೋಷಯುಕ್ತವಾಗಿದೆ ಎಂಬ ಕಾರಣವಿತ್ತು ಆ ಕರ್ಮಾಚರಣೆ ಯನ್ನು ಬಿಟ್ಟು ಕೊಡಲೇ ಬಾರದು.

(೩) ಪರಮಾತ್ಮನೊಬ್ಬನೇ ನಿರ್ದೋಷ! ಅವನನ್ನು ಅರಿತು ನಿರಭಿ ಮಾನಿಗಳಾಗಿ ನಮ್ಮ ನಮ್ಮ ಸಹಜ ಕಾರ್ಯಗಳನ್ನು ಮನಸೋಕ್ತ ಆಚರಿಸಿದರೆ ದಿವ್ಯಾನಂದವನ್ನು ಹೊಂದುವೆವು; ಅಹಂ ಮಮರೂಪ ದೋಷಧೂಮ್ರವು ನೇತ್ರಕ್ಕೆ ತಾಗದಂತೆ ಬಹು ಯುಕ್ತಿಯಿಂದ ಆತ್ಮದರ್ಶನರೂಪ ಪವಿತ್ರ ಪಾಕ ವನ್ನು ಸಿದ್ಧಗೊಳಿಸಿಕೊಳ್ಳುವೆವು.

ಸಂಬಂಧ:— ದೋಷದ ಸಂಪರ್ಕವಾಗದಂತೆ ಕರ್ಮ ಮಾಡುವ ರೀತಿ ಯಾವುದು? ಮುಂದಿನ ಮಂತ್ರದಲ್ಲಿ ಉತ್ತರವಿದೆ.

ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।
ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥೪೯॥

ಭಾವ:— ಸಕಲ ಪ್ರಾಪಂಚಿಕ ವಿಷಯಗಳಲ್ಲಿ ನಿರಾಸಕ್ತ ಬುದ್ಧಿಯವನೂ ಮನೋವಿಜಯಿಯೂ ನಿಸ್ಪೃಹನೂ ಆದ ಮನುಷ್ಯನು ಸನ್ಯಾಸದಿಂದ (ಕಾಮ್ಯ ಕರ್ಮಗಳ ತ್ಯಾಗರೂಪ ಸನ್ಯಾಸದಿಂದ ಅಥವಾ ಕರ್ತೃತ್ವಾಭಿಮಾನ ಮತ್ತು ಫಲಾಪೇಕ್ಷೆಗಳ ತ್ಯಾಗದಿಂದ) ಶ್ರೇಷ್ಠವಾದ ಹೃದಯಶುದ್ಧಿಯನ್ನು (ನೈಷ್ಕರ್ಮ್ಯ ಸಿದ್ಧಿಂ) ಹೊಂದುತ್ತಾನೆ.

ವಿವರಣೆ:— (೧) ಅಸಕ್ತ ಬುದ್ಧಿಃ:— ವಿಷಯಗಳನ್ನು ಜೀವ ಹೋದರೂ ಬಿಟ್ಟು ಕೊಡಲಾರೆನೆಂಬ ವ್ಯಾಮೋಹವು ಆಸಕ್ತಿ. ಈ ಆಸಕ್ತಿಯುಳ್ಳವ ಅವಿವೇಕಿ. ಪದಾರ್ಥಗಳನ್ನು ವಿವೇಚನಾ ಬುದ್ಧಿಯಿಂದ ವಿಮರ್ಶಿಸಿ ಅಸಾರಭೂತ ಪದಾರ್ಥ ಗಳ ಮೇಲಿನ ಮೋಹವನ್ನು ಸಂಪೂರ್ಣ ತ್ಯಜಿಸಿದವನು ವಿವೇಕಿ. ಅವನು ದೇವ ನಲ್ಲಿ ಆಸಕ್ತ, ಪ್ರಪಂಚದಲ್ಲಿ ಅನಾಸಕ್ತ.

(೨) ಜಿತಾತ್ಮ:— ಆ ಅನಾಸಕ್ತ ಪುರುಷನು ತನ್ನ ಮನಸ್ಸನ್ನು ವಶಪಡಿಸಿ ಕೊಂಡಿದ್ದಾನೆ. ಅವನ ಸುತ್ತ ಆತ್ಯಾಕರ್ಷಕ ವಿಷಯಗಳು ಹರಡಿದ್ದರೂ ಅವುಗ ಳತ್ತ ಅಪ್ಪಿ ತಪ್ಪಿಕೂಡ ಮನವೆಳಸಲಾರ.

(೩) ವಿಗತಸ್ಪೃಹಃ:— ಅವನ ಹೃದಯದಿಂದ ಸ್ಪೃಹೆ ಅಥವಾ ಆಶೆ ಸಂಪೂರ್ಣವಾಗಿ ಮಾಯವಾಗಿದೆ; ವಿಷಯ ವಿತೃಷ್ಣಾ ತ್ಯಾಗರೂಪ ವಿರಾಗವು

ಬಲಿತು ನಿಂತಿದೆ. ಅವನ ಚಿತ್ತವೀಗ ಸುಸ್ಥಿರ.

(೪) ಸನ್ಯಾಸೇನ ಪರಮಾಂ ನೈಷ್ಕರ್ಮ್ಯ ಸಿದ್ಧಿಂ ಅಧಿಗಚ್ಛತಿ:- ಕಾಮ್ಯ ಕರ್ಮಗಳ ತ್ಯಾಗವು ಸನ್ಯಾಸ; ನಾನು ಮಾಡಿದೆನೆಂಬ ಕರ್ತೃತ್ವಾಭಿಮಾನ ಮತ್ತು ಕೃತಕರ್ಮದ ಫಲಾಕಾಂಕ್ಷೆ ಈ ಎರಡನ್ನು ಬಿಟ್ಟುಕೊಡುವದು ನೈಜ ಸನ್ಯಾಸ. ಅನಾಸಕ್ತ ಮಹಾನುಭಾವನು ಇಂಥ ಪವಿತ್ರ ಸನ್ಯಾಸಯೋಗವನ್ನು ಆಚರಿಸಿ ಹೃದಯ ನಿರ್ಮಾಲ್ಯರೂಪ ನೈಷ್ಕರ್ಮಸಿದ್ಧಿಯನ್ನು ಹೊಂದುತ್ತಾನೆ, ಪರ ಮಾತ್ಮನ ಸಚ್ಚಿದಾನಂದ ಸ್ವರೂಪವನ್ನು ತನ್ನಂತರಂಗದಲ್ಲಿ ಪ್ರತಿಫಲಿಸಿಕೊಳ್ಳುವ ಅಪ್ರತಿಮ ಸಾಮರ್ಥ್ಯವನ್ನು ಸಂಪಾದಿಸುತ್ತಾನೆ.

ಸಂಬಂಧ:– ಅವನು ಬ್ರಹ್ಮನಲ್ಲಿ ಸಮರಸವಾಗುವ ಸಂಗತಿಯನ್ನು ಮುಂದಿನ ಆರು ಮಂತ್ರಗಳಲ್ಲಿ ವರ್ಣಿಸಲಾಗಿದೆ.

ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ।
ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥೫೦॥

ಭಾವ:– ಹೃದಯಶುದ್ಧಿರೂಪ ಸಿದ್ಧಿಯನ್ನು ಪಡೆದ ಸಾಧಕ ಶ್ರೇಷ್ಠನು ಹೇಗೆ ಬ್ರಹ್ಮಪದವನ್ನು ಪಡೆಯುತ್ತಾನೆ? ಮತ್ತು ಯಾವುದು ವಿಮಲ ಜ್ಞಾನದ ಪರಮೋತ್ತಮ ಅರ್ಥವಾಗಿದೆ? ಅದನ್ನೆಲ್ಲ ಸಂಕ್ಷೇಪವಾಗಿ ನನ್ನಿಂದ ಕೇಳು.

ವಿವರಣೆ:– (೧) 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಯಾವದು ತ್ರಿಕಾಲಾ ಬಾಧಿತವಾದ ಸತ್ಯವೋ, ನಿರ್ವಿಕಲ್ಪವಾದ ಜ್ಞಾನವೋ ಹಾಗು ಸೀಮಾತೀತವೋ ಅದುಬ್ರಹ್ಮ. ಅದು ಸರ್ವವ್ಯಾಪಕ, ಸರ್ವ ಸಾಕ್ಷಿಕ ಮತ್ತು ಏಕೈಕ! ಅದಕ್ಕೆ ಭಿನ್ನ ವಾಗಿ ಸಜಾತೀಯ ಅಥವಾ ವಿಜಾತೀಯ ವಸ್ತುಗಳೇ ಇಲ್ಲ; ಅಷ್ಟೇ ಅಲ್ಲ, ಸ್ವಗತ ಭೇದಕ್ಕೂ ಬ್ರಹ್ಮದಲ್ಲಿ ಅವಕಾಶವಿಲ್ಲ.

(೨) ಜ್ಞಾನಸ್ಯ ಪರಾ ನಿಷ್ಠಾ:– ವೃತ್ತ್ಯಾತ್ಮಕವಾದ ಸಕಲ ಜ್ಞಾನ ಪ್ರವಾ ಹಗಳ ಅಂತಿಮ ಪರ್ಯವಸಾನ ಸ್ಥಾನವೇ ಆ ಬ್ರಹ್ಮ! ಅಲ್ಲಿ ದೃಷ್ಟಾ, ದರ್ಶನ ದೃಶ್ಯ ಎಂಬ ತ್ರಿಪುಟಿಯ ಮಿಸುಗಿಲ್ಲ. ಗುಣ ಕ್ರಿಯೆಗಳ ಸ್ಪಂದನವಿಲ್ಲ, ಮನ ಬುದ್ಧಿಗಳಿಗೆ ಅತೀತವಾದ ಆ ಬ್ರಹ್ಮವು ಪರಾತ್ಪರ ಸತ್ಯವಾಗಿದೆ! ಅದು ಅಚಿಂತ್ಯ, ಅವರ್ಣನೀಯ ಹಾಗು ಅವೇದ್ಯ. ವೃತ್ತಿ ತರಂಗಗಳೆಲ್ಲ ಶಾಂತವಾ ದಾಗ ಆ ಬ್ರಹ್ಮದ ಅನುಭವ!

(೩)ಭಗವಂತ:– "ಅರ್ಜುನ, ನಿರ್ಮಲಾಂತಃಕರಣರೂಪ ದಿವ್ಯ ಪ್ರಸಾದ (ಸಿದ್ಧಿ) ಪಡೆದ ಸಾಧಕನು ಬ್ರಹ್ಮವಸ್ತುವನ್ನು ಪಡೆದೇ ಪಡೆಯುತ್ತಾನೆ. ಅದ ರಲ್ಲಿ ಸಂಶಯವಿಲ್ಲ. ಅತಿ ಸಂಕ್ಷೇಪವಾಗಿ ಆ ಪಾರಮಾರ್ಥಸಂಪಾದನೆಯ ಬಗ್ಗೆ ಹೇಳುವೆ ಆಲಿಸು."

ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।
ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥೫೧॥

ಭಾವ:– ವಿಶುದ್ಧ ಬುದ್ಧಿಯುಕ್ತನಾಗಿ, ಧೈರ್ಯದಿಂದ ಮನಸ್ಸನ್ನು ಸಂಯಮನಮಾಡಿ, ಶಬ್ದಾದಿ ವಿಷಯಗಳನ್ನು ತ್ಯಜಿಸಿ, ರಾಗ ದ್ವೇಷಗಳನ್ನು ಬಿಟ್ಟು,

ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥೫೨॥

ಭಾವ:– ಏಕಾಂತವಾಸಿಯಾಗಿ, ಮಿತಾಹಾರಿಯಾಗಿ, ಶರೀರ ವಾಣಿ ಮನಗಳ ನಿಗ್ರಹಿಯಾಗಿ, ಧ್ಯಾನಯೋಗ ನಿರತನಾಗಿ, ನಿತ್ಯ ವೈರಾಗ್ಯವಂತನಾಗಿ,

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।
ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥೫೩॥

ಭಾವ : ಅಹಂಕಾರ ಬಲ ದರ್ಪ ಕಾಮ ಕ್ರೋಧ ಪರಿಗ್ರಹಗಳನ್ನು ಬಿಟ್ಟು, ನಿರ್ಮಮನೂ ಶಾಂತನೂ ಆದ ಸಾಧಕನು ಬ್ರಹ್ಮಪದ ಪಡೆಯಲು ಸಮರ್ಥನಾಗುತ್ತಾನೆ.

ವಿವರಣ:-(೧) ವಿಶುದ್ಧಬುದ್ಧಿ: ಭೋಗ ವೈಭವ, ಮಾನ ಮರ್ಯಾದೆಗಳನ್ನು ಅಪೇಕ್ಷಿಸದೆ ಪರಮಾತ್ಮನನ್ನೇ ಶೋಧಿಸುವ ಮತಿ. (೨) ಆತ್ಮ ನಿಯಮನ: ಬಲಾಢ್ಯವಾದ ನಿಗ್ರಹ-ಸಾಮರ್ಥ್ಯವನ್ನು ಉಪಯೋಗಿಸಿ ಸಾಧಿಸಿದ ಮನಸ್ಸಂಯಮನ. (೩) ವಿಷಯತ್ಯಾಗ: ಶಬ್ದಸ್ಪರ್ಶಾದಿ ವಿಷಯಗಳಲ್ಲಿ ನಿರಾಸಕ್ತನಾಗಿರುವಿಕೆ. (೪) ರಾಗದ್ವೇಷ ನಿರಾಕರಣ: ಆಸನ ಪ್ರಾಣಾಯಾಮಗಳನ್ನು ಅನುಷ್ಠಾನ ಮಾಡಿ, ರಾಗ ದ್ವೇಷ ಭಾವನೆಗಳನ್ನು ನಿರಸ್ತಗೊಳಿಸಿ ಮನಸ್ಸಿನಲ್ಲಿ ಪಾವಿತ್ರ್ಯ ನೆಲೆಸುವಂತೆ ಮಾಡುವದು.

(೫) ವಿವಿಕ್ತಸೇವಿತ್ವ: ಜನವಸತಿಯಿಂದ ಬಹುದೂರವಾದ ಅರಣ್ಯ ಸಮುದ್ರತಟ, ಪರ್ವತಶ್ರೇಣಿ, ಗವಿ ಮುಂತಾದ ನಿರ್ಜನ ಸ್ಥಾನಗಳಲ್ಲಿರುವದು. (೬) ಲಘ್ವಶನ: ಹಿತಮಿತವಾಗಿ ಅನ್ನ ಸ್ವೀಕರಿಸುವದು, (೭) ಪ್ರತ್ಯಾಹಾರ: ಕಠೋರ, ಅಸತ್ಯ, ಅವಹೇಳನಾತ್ಮಕ ಮಾತುಗಳನ್ನಾಡದಿರುವದು ವಾಣಿಪ್ರತ್ಯಾಹಾರ. ಭೋಗ ವಿಷಯಗಳಲ್ಲಿ ವ್ಯವಹರಿಸದಿರುವದು ಇಂದ್ರಿಯ ಪ್ರತ್ಯಾಹಾರ, ಹೊರಮುಖವಾಗದಂತೆ ಮನಸ್ಸನ್ನು ತಡೆಹಿಡಿಯುವದು ಮಾನಸಪ್ರತ್ಯಾಹಾರ. (೮) ಧ್ಯಾನಪರತೆ: ದೇವಚಿಂತನ ಮತ್ತು ದೇವಸಾಮರಸ್ಯಗಳಲ್ಲಿ ಮುಳುಗಿರುವದು ಧ್ಯಾನಯೋಗಪರಾಯಣತೆ. (೯) ನಿತ್ಯವೈರಾಗ್ಯ: ಭೋಗವ್ಯಾಮೋಹ ರೂಪಧೂಮ್ರವು ಮನಸ್ಸಿನಲ್ಲಿ ಹರಡದಂತೆ ಜಾಗರೂಕನಾಗಿರುವದು.

(೧೦) ಅಹಂಕಾರ ವಿಮೋಚನ; ನಾನು ವಿರಕ್ತ, ನಾನು ಪಂಡಿತ, ನಾನು ತಪಸ್ವಿ, ನಾನು ಜನಸೇವಕ. ಎಂಬ ಭಾವ ತೋರದಿರುವದು. (೧೧) ಬಲವಿಮೋಚನ: ಛಲ ಹಾಗು ದುರಾಗ್ರಹಗಳಿಲ್ಲದಿರುವದು, (೧೨) ದರ್ಪವಿಮೋಚನ: ಜನತೆಯೊಂದಿಗೆ ಗರ್ವದಿಂದ ನಡೆಯದೆ ಸ್ನೇಹಶೀಲನಾಗಿ ವರ್ತಿಸುವದು. (೧೩) ಕಾಮವಿಮೋಚನ: ಪ್ರಾರಬ್ಧವಶದಿಂದ ದೊರೆತ ವಿಷಯಗಳಲ್ಲಿ ಆಸಕ್ತಿ ತಾಳದಿರು

ವದು. (೧೪) ಕ್ರೋಧವಿಮೋಚನ: ಪ್ರತಿಕೂಲ ವಿಷಯಗಳು ಬಂದಾಗ ಶಾಂತ ನಾಗಿರುವದು. (೧೫)ಪರಿಗ್ರಹ ವಿಮೋಚನ: ತನ್ನ ಪರಮಾರ್ಥ ಸಾಧನೆಗೆ ಅನ ವಶ್ಯವಾದ ವಸ್ತುಗಳನ್ನು ಸಂಗ್ರಹಿಸದಿರುವದು, (೧೬)ನಿರ್ಮಮ; ಲೌಕಿಕವಾದ ಯಾವ ವಿಷಯಗಳ ಬಗೆಗೂ ಮಮತ್ವ ಇಲ್ಲದಿರುವದು. (೧೭) ಶಾಂತಿ: ಲಯ ವಿಕ್ಷೇಪಾದಿ ದೋಷಗಳೇ ಇಲ್ಲದಿರುವ ಮನ ಸ್ಥಿತಿ.

ಭಗವಂತ:–"ಕುರುನಂದನ, ವಿಮಲ ಮತಿ ಮೊದಲು ಮಾಡಿ ಶಾಂತಿ ಕಡೆ ಯಾಗಿರುವ ಸಕಲ ದೈವೀ ಗುಣಗಳನ್ನು ಅಳವಡಿಸಿಕೊಂಡ ಸಾಧಕನು ನಿರಾಯಾಸ ವಾಗಿ ಬ್ರಹ್ಮಸಾಮರಸ್ಯ ಪಡೆಯುತ್ತಾನೆ. ಏಕೆಂದರೆ ಅವನ ಬಂಧನಗಳು ಕಳ ಚಿವೆ; ಮೋಹಾಂಧಕಾರ ಮರೆಯಾಗಿದೆ. ಅಂತರಂಗದಲ್ಲಿ ಶಾಂತಿ ನೆಲೆಸಿದೆ."

ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।
ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥೫೪॥

ಭಾವ:–ಬ್ರಹ್ಮಪದ ಹೊಂದಿದ ಪ್ರಸನ್ನಚಿತ್ತನು ಶೋಕ ಮಾಡುವ ದಿಲ್ಲ. ಏನನ್ನೂ ಬಯಸುವದಿಲ್ಲ: ಅವನು ಸಕಲ ಜೀವಿಗಳಲ್ಲಿ ಸಮಭಾವಿ. ಅವನು ನನ್ನಲ್ಲಿ ಪರಮ ಭಕ್ತಿಯನ್ನು ತಾಳುತ್ತಾನೆ.

ವಿವರಣೆ:– ಬ್ರಹ್ಮಭೂತಃ ಪ್ರಸನ್ನಾತ್ಮಾ: ಪಂಚಭೂತಗಳು, ಪಂಚ ತನ್ಮಾತ್ರೆಗಳು, ಅಹಂಕಾರ, ಮಹತ್ತು ಹಾಗು ಪ್ರಕೃತಿ – ಈ ತತ್ತ್ವಪುಂಜವೇ ವಿಶ್ವ. ಮನುಷ್ಯನ ಕಲ್ಪನಾಶಕ್ತಿಗೆ ಮೀರಿದಷ್ಟು ಈ ವಿಶ್ವದ ವಿಸ್ತಾರ! ಇಂಥ ಬೃಹತ್ ಸೃಷ್ಟಿಯು ಯಾವ ದಿವ್ಯ ಆಧಾರದಲ್ಲಿ ತೇಲಿ ಬಂದಿತೋ ಆ ಪರ ಮಾಶ್ರಯ ವಸ್ತುವು ಬ್ರಹ್ಮ. ಅದು ಅನಾದಿ, ಅನಂತ ಹಾಗು ಅಚಿಂತ್ಯ. ಅದು ಸತ್ತು, ಚಿತ್ತು ಆನಂದಗಳ ಅಖಂಡ ಸಾಗರ! ಅದರಲ್ಲಿ ಮನಸ್ಸನ್ನು ಸಮರಸ ಗೊಳಿಸಿದ ಮಹಾತ್ಮನೇ ಬ್ರಹ್ಮಭೂತ.

ಅವನ ಹೃದ್ಗತ ಕಾಮ ಕ್ರೋಧ ಲೋಭ ಮೋಹಗಳು ವಿನಷ್ಟವಾಗಿವೆ; ಆಶೆ ಆಮಿಷಗಳೆಂಬ ತೆರೆಗಳು ಶಾಂತವಾಗಿವೆ. ಅವನ ಮನಸ್ಸಿನ ತುಂಬ ಬ್ರಹ್ಮ ಪ್ರಕಾಶ ವ್ಯಾಪಿಸಿದೆ, ಶಿವಾನಂದ ಅಭಿವ್ಯಕ್ತವಾಗಿದೆ! ಆದ್ದರಿಂದ ಅವನು ಪ್ರಸ ನ್ನಾತ್ಮನು! ಸಾವು-ನೋವುಗಳು, ಕಷ್ಟ-ಕಾರ್ಪಣ್ಯಗಳು,ಅನ್ಯಾಯ-ಅಪಚಾರಗಳು ಅವನ ನಿಶ್ಚಲ ಮನಸ್ಸನ್ನು ಅಲುಗಿಸಲಾರವು. ಲಾಭ-ಹಾನಿ, ನಿಂದೆ-ವಂದನೆ, ಸುಖ-ದುಃಖ ಏನೇ ಬರಲಿ ಅವನು ಪ್ರಸನ್ನ ಭಾವದಿಂದಲೇ ಬದುಕುತ್ತಾನೆ; ಯಾವುದರ ಬಗೆಗೂ ಶೋಕ ಮಾಡುವದಿಲ್ಲ, ಯಾವುದನ್ನೂ ಆಶಿಸುವದಿಲ್ಲ.

ಸಮಃ ಸರ್ವೇಷು ಭೂತೇಷು:– ಸಕಲ ಜೀವಜಂತುಗಳನ್ನು ಆತ ಸಮ ದೃಷ್ಟಿಯಿಂದ ಕಾಣುತ್ತಾನೆ. ಅವನಿಗೆ ವೈರಿಗಳಿಲ್ಲ ಮಿತ್ರರಿಲ್ಲ, ದುಷ್ಟರಿಲ್ಲ, ಶಿಷ್ಟ ರಿಲ್ಲ; ಸ್ವಜನರಿಲ್ಲ, ಪರಜನರಿಲ್ಲ, ಎಲ್ಲರೂ ದೇವರ ರೂಪ!

ಮದ್ಭಕ್ತಿಂ ಲಭತೇ:– "ಅರ್ಜುನ, ಅಂಥ ಬ್ರಹ್ಮಜ್ಞಾನಿಯು ಪರಮೋ

ತ್ಕೃಷ್ಟವಾದ ನನ್ನ ಭಕ್ತಿಯನ್ನು ಹೊಂದುತ್ತಾನೆ. ಅಂದರೆ, ನನ್ನಲ್ಲಿ ಸಾಮರಸ್ಯ ಪಡೆಯುತ್ತಾನೆ."

ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।
ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥೫೫॥

ಭಾವ:– (ಯಃ) ನಾನು ಯಾರು? (ಯಾವಾನ್) ನಾನು ಎಂಥವನು? ಎಂಬುವದನ್ನು ಬ್ರಹ್ಮಜ್ಞಾನಿಯು ಯಥಾವತ್ತಾಗಿ ಅರಿಯುತ್ತಾನೆ. ನನ್ನ ನೈಜ ಸ್ವರೂಪವನ್ನು ತತ್ತ್ವತಃ ತಿಳಿದು ನನ್ನಲ್ಲಿ ಪ್ರವೇಶಿಸುತ್ತಾನೆ.

ವಿವರಣ:– ಭಗವಂತ:– "ಪಾರ್ಥ, ನಾನು ಅಖಂಡ, ಅಮರ, ಅನಂತ; ನಿರ್ಗುಣ, ನಿರಂಜನ, ನಿರ್ವಿಶೇಷ! ನನ್ನ ನಿಸ್ಸೀಮ ರೂಪವು ಶಬ್ದಕ್ಕೆ ನಿಲುಕದು, ಭಾವಕ್ಕೆ ಗೋಚರಿಸದು, ಬುದ್ಧಿಗೆ ಹೊಳೆಯದು. ನಾನು ಸರ್ವಾತೀತ! ದಿವ್ಯ ಮೌನ! (ಯಃ ಪದವು ಇಂಥ ನನ್ನ ಅವ್ಯಕ್ತ ರೂಪವನ್ನು ನಿರ್ದೇಶಿಸುತ್ತಿದೆ).

"ಭಾರತ, ನಿಷ್ಕಲನಾದ ನನ್ನ ಆಶ್ರಯದಲ್ಲಿ ನನ್ನದೇ ಆದ ಒಂದು ಬೃಹ ಚ್ಛಕ್ತಿಯಿದೆ. ಅದು ವಿಕಾರಗೊಂಡಾಗ ವ್ಯಷ್ಟಿ ಎನಿಸುವ ದೇಹಗಳೂ ಸಮಷ್ಟಿ ಎನಿಸುವ ಬ್ರಹ್ಮಾಂಡಗಳೂ ಕಾಣಬರುತ್ತವೆ. ನನ್ನ ದಿವ್ಯಚೈತನ್ಯ ಪ್ರಕಾಶವು ಆ ದೇಹಗಳಲ್ಲಿ ಪ್ರತಿಫಲಿಸಿದಾಗ ನಾನೇ ಜೀವಾತ್ಮನಾಗುತ್ತೇನೆ: ಬ್ರಹ್ಮಾಂಡಗ ಳಲ್ಲಿ ಪ್ರತಿಫಲಿಸಿದಾಗ ಈಶ್ವರನಾಗುತ್ತೇನೆ. ಜೀವಾತ್ಮನ ದೃಷ್ಟಿಯಿಂದ ನನಗೆ ಪ್ರತ್ಯಗಾತ್ಮನೆಂಬ ಸಾಕ್ಷಿಭಾವದ ನಾಮ ಉಂಟಾದರೆ, ಈಶ್ವರನ ದೃಷ್ಟಿಯಿಂದ ನನಗೆ ಪರಮಾತ್ಮನೆಂಬ ಸಾಕ್ಷಿಭಾವದ ಅಭಿಧಾನ ಉಂಟಾಗಿದೆ. ಒಟ್ಟಿನಲ್ಲಿ ದೇಹ-ಜೀವ-ಪ್ರತ್ಯಗಾತ್ಮ, ಜಗತ್ತು-ಈಶ್ವರ-ಪರಮಾತ್ಮ ಈ ಸಮಸ್ತ ತತ್ತ್ವಪುಂಜವು ನನ್ನಿಂದ ಭಿನ್ನವಲ್ಲ; ಅದೆಲ್ಲ ನನ್ನ ಅಭಿವ್ಯಕ್ತರೂಪ. (ಯಾವನ್ ಪದವು ನನ್ನ ಈ ಅಭಿವ್ಯಕ್ತ ರೂಪವನ್ನು ನಿರ್ದೇಶಿಸುತ್ತಿದೆ).

"ಬ್ರಹ್ಮಭೂತನಾದ ಪ್ರಸನ್ನಾತ್ಮನು ನನ್ನ ವ್ಯಕ್ತ ಹಾಗು ಅವ್ಯಕ್ತ ರೂಪ ಗಳೆರಡನ್ನೂ ಪೂರ್ಣವಾಗಿ ತಿಳಿದುಕೊಳ್ಳುತ್ತಾನೆ; ದೇಹ ಮನ ಬುದ್ಧಿ ಭಾವ ಗಳ ಮರೆತು, ಜಗತ್ತಿನ ಭಾನ ನೀಗಿ, ಜೀವ ಈಶ್ವರರೆಂಬ ವಿಕಲ್ಪನೆಗಳನಳಿದು ಪರಬ್ರಹ್ಮದಲ್ಲಿ ತತ್ತ್ವತಃ (ಅಪರೋಕ್ಷವಾಗಿ) ಸಾಮರಸ್ಯ ಹೊಂದುತ್ತಾನೆ. ಅಲ್ಲಿಗೆ ಭೇದ-ಮಂಜು ಮಾಯ! ಸುಖ ದುಃಖಾದಿ ದ್ವಂದ್ವಜಾಲ ವಿನಷ್ಟ! ಉಳಿ ದುದು ಕೇವಲ ಅನಂತತೆ!!"

ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।
ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥೫೬॥

ಭಾವ:– ನನ್ನನ್ನೇ ಆಶ್ರಯಿಸಿದವನು ಸದಾ ಸರ್ವಕರ್ಮಗಳ ಮಾಡುತ್ತಿ ದ್ದರೂ ನನ್ನ ಪ್ರಸಾದದಿಂದಾಗಿ ಅವ್ಯಯ ಹಾಗು ಶಾಶ್ವತವಾದ ಪದವನ್ನು ಹೊಂದುತ್ತಾನೆ.

ವಿವರಣ:– ಬ್ರಹ್ಮಜ್ಞಾನಿಯು ಜೀವಿಸಿರುವಷ್ಟು ಕಾಲ ಸರ್ವಕರ್ಮ ಗಳನ್ನು ಸದಾ ಆಚರಿಸುತ್ತಾನೆ; ಆದರೆ ಆ ಕರ್ಮಗಳು ಅವನನ್ನು ಬಂಧಿಸಲಾರವು. ಏಕೆಂದರೆ, ಅವನು ಪರಬ್ರಹ್ಮವಸ್ತುವನ್ನೇ ಆಶ್ರಯಿಸಿದ್ದಾನೆ. ಆ ದೇವನ ದಿವ್ಯದರ್ಶನವೆಂಬ ಅಮೃತಪ್ರಸಾದ ಪಡೆದಿದ್ದಾನೆ. ಅವ್ಯಯವಾದ ಚಿರಂತನದ ಮುಕ್ತಿ ಅವನಿಗೆ ನಿಶ್ಚಿತ.

ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।
ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥೫೭॥

ಅರ್ಥ:– ಚೇತಸಾ= ಸದಸದ್ವಿವೇಕಯುಕ್ತ ಬುದ್ಧಿಯಿಂದ, ಸರ್ವಕರ್ಮಾಣಿ= ಸರ್ವಕರ್ಮಗಳನ್ನು ಮಯಿ ಸನ್ನ್ಯಸ್ಯ= ನನ್ನಲ್ಲಿ ಅರ್ಪಿಸಿ, ಮತ್ಪರಃ= ಮತ್ಪರಾಯಣನಾಗಿ, ಬುದ್ಧಿಯೋಗಂ= ಸರ್ವಸಮತಾರೂಪ ಯೋಗವನ್ನು ಉಪಾಶ್ರಿತ್ಯ= ಆಶ್ರಯಿಸಿ ಸತತಂ= ಯಾವಾಗಲು ಮಚ್ಚಿತ್ತಃ ಭವ=ನನ್ನಲ್ಲಿ ಚಿತ್ತವುಳ್ಳವನಾಗು.

ವಿವರಣ:– ಭಗವಂತ:– "ಧನಂಜಯ, ಜೀವನು ನನ್ನ ಲೀಲಾತಂತ್ರಕ್ಕೆ ಒಳಪಟ್ಟಿದ್ದಾನೆ. ಅವನಿಗಾಗಿ ಈ ಬೃಹತ್ ಜಗತ್ತನ್ನು ನಿರ್ಮಿಸಿದೆ, ಅತ್ಯಂತ ಕ್ಲಿಷ್ಟರಚನೆಯ ದೇಹಗಳನ್ನು ರಚಿಸಿದೆ, ಮನ ಬುದ್ಧಿಗಳಂಥ ಸಬಲ ಸಾಧನ ಗಳನ್ನು ಸೃಷ್ಟಿಸಿದೆ. ಇವುಗಳ ಸಹಾಯದಿಂದ ಅವನು ನನ್ನತ್ತ ಮುಖಮಾಡಲಿ ಎಂಬುದು ನನ್ನ ಉದ್ದೇಶ. ಆದರೆ ದುರ್ದೈವದಿಂದ ಸರ್ವಕರ್ತನಾದ ನನ್ನ ಮರೆತ. ಚಿಕ್ಕ ಪುಟ್ಟ ಕಾರ್ಯಗಳ ಎಸಗಿ ಕರ್ತೃತ್ವ ಬುದ್ಧಿ ತಳೆದ. ಇದೇ ದುಃಖಕ್ಕೆ ನಾಂದಿಯಾಯ್ತು!

"ಧರ್ಮಾನುಜ, ನೀನು ಹಾಗಾಗಬೇಡ; ನೀನು ಗೊಂಬೆ, ನಾನು ಸೂತ್ರ ಧಾರಿ; ಈ ಸಮಗ್ರ ಭೂಮಿ, ರಾಜ್ಯ, ಸಮಾಜ, ನಿಸರ್ಗ ಎಲ್ಲವೂ ನನ್ನ ಸಂಪದ. ನಿನ್ನದಾವುದೂ ಇಲ್ಲ. ಹೀಗೆ ತಿಳಿದೆಯಾದರೆ ನಿನ್ನಲ್ಲಿ ಸದಸದ್ವಿವೇಕ ಬುದ್ಧಿ ಜಾಗ್ರತವಾದಂತೆಯೇ ಸರಿ.

"ನನ್ನ ಕೃಪಾಛತ್ರದಲ್ಲಿ ನೀನು ಅಸಂಖ್ಯ ಕರ್ಮಗಳನ್ನು ಎಸಗುತ್ತಿರುವಿ; ಧ್ಯಾನ-ಸಮಾಧಿಯಿಂದ ಮೊದಲುಮಾಡಿ ಊಟ-ನಿದ್ರೆವರೆಗಿರುವ ಪಾರ ಮಾರ್ಥಿಕ, ಧಾರ್ಮಿಕ, ಸಾಮಾಜಿಕ, ಕೌಟುಂಬಿಕ ಹಾಗು ದೈಹಿಕ-ಮಾನಸಿಕ ಕರ್ಮಗಳನ್ನು ಮಾಡುತ್ತಿರುವಿ. ಅವುಗಳ ಅಭಿಮಾನವನ್ನು ನಿನ್ನ ಹೃದಯದ ದಲ್ಲಿಟ್ಟು ಕೊಳ್ಳಬೇಡ; ನನ್ನಲ್ಲಿ ಅರ್ಪಿಸಿಬಿಡು.

"ಅರ್ಜುನ, ದುಡಿಯಲು ಹೋದ ತಾಯಿಯ ಮನವೆಲ್ಲ ಮನೆಯ ಮಗು ವಿನತ್ತಲೇ ಅಲ್ಲವೇ? ಹಾಗೆ ನೀನು ಪ್ರಪಂಚರಂಗದಲ್ಲಿ ದುಡಿ, ಮನಸ್ಸು ಮಾತ್ರ ಮತ್ಪರಾಯಣವಾಗಿರಲಿ, ನನ್ನನ್ನೇ ಧೇನಿಸುತ್ತಿರಲಿ. ಬಾಳಿನಲ್ಲಿ ಲಾಭ ಹಾನಿ, ಸಿದ್ಧಿ ಅಸಿದ್ಧಿ, ಸುಖ ದುಃಖ ಏನಾದರೂ ಬರಲಿ ಅದು ನನ್ನ ಇಚ್ಛೆ ಎಂದು ತಿಳಿದುಕೊ. ಮನೋನಿಶ್ಚಲತೆಯನ್ನು ಕಳೆದುಕೊಳ್ಳಬೇಡ. ಅದೇ ಬುದ್ಧಿ

ಯೋಗ. ಅದನ್ನು ಅಂಗವಿಸಿಕೊಳ್ಳು.

"ಯಾವಾಗಲೂ ನಿನ್ನ ಅಂತಃಪ್ರಾಣಪ್ರವಾಹ ನನ್ನತ್ತ ಪ್ರವಹಿಸಲಿ (ಮತ್ಪರಾಯಣತೆ); ನಿನ್ನ ಬಾಳು ಪವಿತ್ರವಾಗುವದು; ನಿನ್ನ ಕರ್ಮಗಳು ದಿವ್ಯಾರಾಧನೆಗಳೆನಿಸುವವು!"

ಮಚ್ಚಿತ್ತಃ ಸರ್ವ ದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।
ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥೫೮॥

ಭಾವ:– ನನ್ನಲ್ಲಿಯೇ ಚಿತ್ತವಿರಿಸಿದವನಾದರೆ ನನ್ನ ಅನುಗ್ರಹದಿಂದ ನೀನು ಎಲ್ಲ ಸಂಕಷ್ಟಗಳನ್ನು ದಾಟುವಿ. ಆದರೆ, ಅಹಂಕಾರದ ಮೂಲಕ ನಾನು ಹೇಳಿದ್ದನ್ನು ಲಕ್ಷಿಸದಿದ್ದರೆ ಮಾತ್ರ ನೀನು ನಿಶ್ಚಿತವಾಗಿಯೂ ನಾಶವಾಗುವಿ.

ವಿವರಣೆ:– ಭಗವಂತ:– "ಪಾರ್ಥ, ನಿನ್ನ ಸಿರಿ ಅಧಿಕಾರ ರಾಜ್ಯ ಯಾವುದೂ ನನಗೆ ಬೇಕಿಲ್ಲ; ನಿನ್ನ ಪತ್ರಿ ಪುಷ್ಪ ನೈವೇದ್ಯ ತಾಂಬೂಲಗಳ ಅವಶ್ಯಕತೆ ನನಗಿಲ್ಲ. ನಿನ್ನ ಮನಸ್ಸನ್ನು ನನ್ನ ಪದತಲದಲ್ಲಿ ಸಮರ್ಪಿಸು; ನನ್ನ ಅನುಗ್ರಹಪ್ರಸಾದವನ್ನು ನಿನಗೀಯುವೆ. ಆದರ ಸಹಾಯದಿಂದ ಅವಿದ್ಯಾ ಅಸ್ಮಿತಾ ರಾಗ ದ್ವೇಷ ಅಭಿನಿವೇಶಾದಿ ಸಂಕಷ್ಟ (ದುರ್ಗಮ ಕಷ್ಟ)ಗಳ ಭಯಾನಕ ಶರಧಿಯನ್ನು ಸಹಜವಾಗಿ ದಾಂಟುವಿ.

"ನನ್ನ ಮಾತನ್ನು ಸಿರಸಾವಹಿಸು. ಒಂದುವೇಳೆ ನೀನು ಜಾಣ ಧನಿಕ ಶೂರ ರಾಜ ಲೋಕಮಾನ್ಯ ಎಂಬ ಅಹಂಕಾರದಿಂದ ನನ್ನ ಆದೇಶದಂತೆ ನಡೆಯದಿದ್ದರೆ ವಿನಷ್ಟನಾಗುವಿ! ಪ್ರಕೃತಿಯ ಕರಾಲ ಹಸ್ತಕ್ಕೆ ಸಿಕ್ಕು ಪರಿತಪಿಸುವಿ। ಎಚ್ಚರಿಕೆ!"

ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।
ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥೫೯॥
ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ ।
ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್ ॥೬೦॥

ಭಾವ:– ಅಹಂಕಾರವನ್ನು ಆಶ್ರಯಿಸಿ 'ನಾನು ಯುದ್ಧಮಾಡಲಾರೆ' ಎಂದು ನೀನು ನಿರ್ಣಯಿಸಿದರೆ, ಆ ನಿರ್ಣಯ ಅರ್ಥಹೀನ; ಏಕೆಂದರೆ ಪ್ರಾಕೃತಿಕ ಸ್ವಭಾವವು ನಿನ್ನನ್ನು ಯುದ್ಧಮಾಡಲು ಪ್ರೇರಿಸಿಯೇ ತೀರುವದು ॥೫೯॥ ನೀನು ನಿನ್ನ ಸ್ವಾಭಾವಿಕಕರ್ಮದಿಂದ ಬದ್ಧನಿರುವಿ. ಮೋಹವಶಾತ್ ಯಾವುದನ್ನು ನೀನು ಮಾಡಲಿಚ್ಛಿಸುವದಿಲ್ಲವೋ ಆದನ್ನು ಪ್ರಕೃತಿಯ ವಶನಾಗಿ ಮಾಡಿಯೇ ಮಾಡುವಿ ॥೬೦॥

ವಿವರಣೆ:– ಭಗವಂತ:– "ಅರ್ಜುನ, ಜನ್ಮತಃ ನೀನು ವೀರಕ್ಷತ್ರಿಯ; ರಣಾಂಗಣದಲ್ಲಿಯೇ ಬೆಳೆದು ಬಂದ ಧೀರ. ಯುದ್ಧ ನಿನ್ನ ಸ್ವಭಾವಜ ಕರ್ಮ; ನಿನ್ನ ಪ್ರಕೃತಿಗೆ ಅದೀಗ ಒಗ್ಗಿ ಹೋಗಿದೆ. ಮೂರೂ ಲೋಕಗಳು ನಿನ್ನ ವೀರ

ಗಾಥೆಯನ್ನು ಹಾಡುತ್ತಿವೆ. ವಸ್ತುಸ್ಥಿತಿ ಹೀಗಿರುವಾಗ, 'ನಾನು ಏನಾದರೂ ಮಾಡಲು ಸರ್ವಸ್ವತಂತ್ರನೆಂದು ಭ್ರಮಿಸಿ, ಯುದ್ಧಗೈಯಲಾರೆ'ನೆಂದು ಖಡಾ ಖಂಡಿತವಾಗಿ ಹೇಳಿದೆಯಾದರೆ ಆ ಹೇಳಿಕೆ ಅರ್ಥವಿಲ್ಲದ್ದು. ಯುದ್ಧದಿಂದ ಹಿಂದೆಗೆವ ನಿನ್ನ ವಿಚಾರ ಮೋಹಾಧಾರಿತವಾಗಿದೆ. ಅದು ಸ್ಥಿರವಲ್ಲ. ನೀನು ನಿನ್ನ ಪ್ರಕೃತಿಯ ವಶವರ್ತಿ. ಬಲಾಢ್ಯ ಸಾಮರ್ಥ್ಯವುಳ್ಳ ಅದು ನಿನ್ನನ್ನು ಯುದ್ಧಕ್ಕೆ ನಿಲ್ಲಿಸಿಯೇ ತೀರುವದು! ನಿನ್ನ ಪ್ರಜ್ಞಾವಾದವನ್ನು ಚೆಲ್ಲಿಕೊಡು. ನನ್ನ ನಿಜ ಹಾಗು ಹಿತವಚನಗಳನ್ನಾಲಿಸು; ಈ ಪ್ರಾಪಂಚಿಕ ವ್ಯಾಮೋಹದೊಂದಿಗೆ ಯುದ್ಧ ಪ್ರಾರಂಭಿಸು! ನಿನಗೆ ಜಯ ನಿಶ್ಚಿತ!"

ಸಂಬಂಧ:– ಭಗವಂತನು ಮುಂದಿನ ಮಂತ್ರಗಳಲ್ಲಿ ಸಾರಭೂತವಾದ ಅಂತಿಮ ಉಪದೇಶ ನೀಡುತ್ತಾನೆ. ಮನುಕುಲವೆಲ್ಲ ಸದಾ ಸ್ಮರಿಸಿಕೊಳ್ಳಬೇಕಾದ ಅಮೌಲ್ಯ ನುಡಿಗಳನ್ನಾಡುತ್ತಾನೆ.

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ।
ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥೬೧॥

ಭಾವ:– ಪರಮಾತ್ಮನು ತನ್ನ ಶಕ್ತಿಯಮೂಲಕ ಸಮಸ್ತ ಜೀವಿಗಳನ್ನು ಯಂತ್ರಾರೂಢ ಗೊಂಬೆಗಳಂತೆ ಆಡಿಸುತ್ತ ಆ ಜೀವರ ಹೃದಯ-ಪ್ರದೇಶದಲ್ಲಿ ವಾಸಿಸಿದ್ದಾನೆ.

ವಿವರಣೆ:– "ಧನಂಜಯ, ಸೂತ್ರಬದ್ಧವಾದ ಗೊಂಬೆಗಳನ್ನು ಸೂತ್ರಧಾರಿಯು ಆಡಿಸುವಂತೆ ನಾನು ನನ್ನ ಅಪ್ರತಿಮ ಶಕ್ತಿಯ ಮೂಲಕ ಸಮಸ್ತ ಜೀವಿಗಳನ್ನು ಆಡಿಸುತ್ತೇನೆ. ಆ ಜೀವಿಗಳ ಹೃದಯದಲ್ಲಿ ನೆಲೆಸಿದ ನಾನು ನನ್ನ ಸತ್ತು, ಚಿತ್ತು, ಆನಂದ ಸ್ಫುರಣಗಳನ್ನು ಎಲ್ಲೆಡೆಗೂ ಅಭಿವ್ಯಕ್ತಗೊಳಿಸುತ್ತೇನೆ. ನನ್ನ ಸನ್ನಿಧಾನದಲ್ಲಿಯೇ ಜೀವರು ನೋಡುತ್ತಾರೆ, ಕೇಳುತ್ತಾರೆ, ಭಾವಿಸುತ್ತಾರೆ, ವಿಚಾರಮಾಡುತ್ತಾರೆ; ಅವರ ಪ್ರಾಣದಾಟ ನಡೆದುದು ನನ್ನ ಪ್ರೇರಣೆಯಿಂದ!

"ಅರ್ಜುನ, ನೀನೂ ಒಬ್ಬ ಸಾಮಾನ್ಯ ಜೀವಪುರುಷ. ನೀನು ಯಂತ್ರ, ನಾನು ಯಂತ್ರವಾಹಕ; ನೀನು ಪಟ, ನಾನು ಪಟ-ಸೂತ್ರಧಾರಿ. ನಾನು ನಡಿಸಿದತ್ತ ನಡೆಯುವಿ, ನುಡಿಸಿದದನ್ನು ನುಡಿಯುವಿ, ಮಾಡಿಸಿದಂತೆ ಮಾಡುವಿ; ನಿನ್ನದೇನಿದೆ? ನಿರರ್ಥಕವಾಗಿ ಏಕೆ ಅಹಂಕರಿಸುವೆ? ಸುಮ್ಮನೆ ನನ್ನ ಇಚ್ಛೆಯಂತೆ ಸಾಗು."

ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ।
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥೬೨॥

ಭಾವ:– ಸಂಪೂರ್ಣ ಭಕ್ತಿಯಿಂದ ಅವನನ್ನೇ ಶರಣು ಹೋಗು. ಅವನ ಅನುಗ್ರಹದಿಂದ ಪರಮ ಶಾಂತಿಯನ್ನೂ, ಶಾಶ್ವತಸ್ಥಾನವನ್ನೂ ಹೊಂದುವಿ.

ವಿವರಣೆ:–"ಯಃ ಆತ್ಮನಿ ತಿಷ್ಠನ್ ಆತ್ಮಾನಂ ಅಂತರಃ ಯಮಯತಿ। ಯಮಾತ್ಮಾ

ನ ವೇದ। ಯಸ್ಯಾತ್ಮಾ ಶರೀರಂ। ಏಷ ತೇ ಆತ್ಮಾ ಅಂತರ್ಯಾಮಿ ಅಮೃತಃ।"

ಜೀವನೊಳಗೆ ನಿಂತು ಯಾವನು ಅವನನ್ನು ಆಳುತ್ತಾನೆಯೋ. ಯಾವನನ್ನು ಜೀವಾತ್ಮನು ತಿಳಿಯಲಾರನೋ. ಯಾವನಿಗೆ ಜೀವನೇ ಶರೀರವೋ ಅಂಥ ದಿವ್ಯಾತ್ಮಪುರುಷನು ಅಂತರ್ಯಾಮಿ ಹಾಗು ಅಮೃತ!

"ಕುರುಸತ್ತಮ, ನಿನ್ನ ಹೃದಯಾಂತರಾಳದಲ್ಲಿ ಶಾಶ್ವತವಾಗಿ ನೆಲೆಸಿದ ಭಗವಂತನಲ್ಲಿ ವಿಶ್ವದಾದ್ಯಂತ ವ್ಯಾಪಿಸಿದ ಪರಮದೇವನಲ್ಲಿ ಸಂಪೂರ್ಣ ಭಕ್ತಿ ಭಾವವಿಡು. ನಿನ್ನ ದೇಹ ಇಂದ್ರಿಯ ಮನ ಬುದ್ಧಿಗಳನ್ನು ಅವನಿಗೆ ಸಮರ್ಪಿಸು. ಹಾಗೆ ಮಾಡಿದರೆ ಆತನ ಕರುಣಾ ಪ್ರಸಾದ ಹೊಂದುವಿ. ಪರಮ ಶಾಂತಿಯನ್ನು ಗಳಿಸುವಿ. ಶಾಶ್ವತವಾದ ಬ್ರಹ್ಮಸ್ಥಾನವನ್ನು ಪಡೆಯುವಿ. ಅದುವೇ ಮುಕ್ತಿ!"

ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ।
ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥೬೩॥

ಭಾವ:- ಈ ಪ್ರಕಾರ ಗುಹ್ಯಕ್ಕಿಂತ ಗುಹ್ಯತರವಾದ ಜ್ಞಾನವನ್ನು ನಾನು ನಿನಗೆ ಹೇಳಿದೆ. ಇದನ್ನು ವಿಮರ್ಶಿಸಿ ನಿನ್ನ ಮನಸ್ಸಿಗೆ ತಿಳಿದಂತೆ ಮಾಡು.

ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ।
ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥೬೪॥

ಭಾವ:-ಅತೀ ರಹಸ್ಯವಾದ ನನ್ನ ಪರಮ ಶ್ರೇಷ್ಠ ವಚನಗಳನ್ನು ಪುನಃ ಕೇಳು. ನೀನು ನನಗೆ ಅತ್ಯಂತ ಮೆಚ್ಚಿಗೆಯುವನಾದುದರಿಂದ ನಿನ್ನ ಕಲ್ಯಾಣದ ಮಾತನ್ನು ಹೇಳುವೆ.

ವಿವರಣೆ:- "ಭಾರತ, ರಹಸ್ಯವಿದ್ಯೆಗಳಲ್ಲೆಲ್ಲ ರಹಸ್ಯತಮವಾದ ಆತ್ಮ ವಿದ್ಯೆಯನ್ನು ಇಲ್ಲಿಯುವರೆಗೆ ಬೋಧಿಸಿದೆ. ಅದನ್ನೆಲ್ಲ ಮತ್ತೆ ಮತ್ತೆ ಸ್ಮರಿಸಿಕೊ. ನಿನ್ನ ಕರ್ತವ್ಯ ಅಕರ್ತವ್ಯಗಳ ಬಗ್ಗೆ ಕೂಲಂಕಷವಾಗಿ ವಿಚಾರಮಾಡು. ಕೊನೆಗೆ, ನಿನ್ನ ಮನಸ್ಸಿಗೆ ಸರಿ ಎನಿಸಿದಂತೆ ವರ್ತಿಸು."

"ನೀನು ನನಗೆ ಅತೀ ಪ್ರೀತಿಯುವ. ನಿನ್ನ ಕಲ್ಯಾಣವನ್ನೇ ಸದೈವ ಚಿಂತಿಸುತ್ತೇನೆ. ನಿನ್ನ ಜೀವನ ಪವಿತ್ರಗೊಳ್ಳಬೇಕು, ನಿನ್ನನ್ನು ಬಾಧಿಸುವ ಶೋಕ ನಾಶವಾಗಬೇಕು, ನೀನೊಬ್ಬ ಮಹಾಪುರುಷನಾಗಬೇಕು- ಇದು ನನ್ನ ಮನೀಷೆ. ಆದ್ದರಿಂದಲೇ ಗುಹ್ಯವಿದ್ಯೆ (ಹೃದಯಶುದ್ಧಿಕರವಿದ್ಯೆ) ಹಾಗು ಗುಹ್ಯತರವಿದ್ಯೆ (ಆತ್ಮಸಾಕ್ಷಾತ್ಕಾರ ಸಾಧಕ ವಿದ್ಯೆ)ಗಳನ್ನು ಈಗ ಹೇಳಿದೆ. ಇನ್ನು ಮೇಲೆ ಗುಹ್ಯತಮವಾದ ವಿದ್ಯೆಯನ್ನು ನಾಲ್ಕಾರು ಮಾತುಗಳಲ್ಲಿ ವಿವರಿಸುವೆ. ಚಿತ್ತವಿಟ್ಟು ಕೇಳು. ಈ ಪ್ರಸಂಗದಲ್ಲಿ ಇದೇ ನನ್ನ ಅಂತಿಮ ಬೋಧ."

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥೬೫॥

ಭಾವ:-ನನ್ನಲ್ಲಿಯೇ ಮನಸ್ಸುಳ್ಳವನಾಗು. ನನ್ನ ಭಕ್ತನಾಗು. ನನ್ನನ್ನೇ

ಆರಾಧಿಸುವವನಾಗು, ನನ್ನನ್ನು ನಮಸ್ಕರಿಸು, ನನ್ನನ್ನೇ ಸೇರುವಿ. ಇದು ಸತ್ಯ ವೆಂದು ಪ್ರತಿಜ್ಞೆ ಮಾಡಿ ಹೇಳುತ್ತೇನೆ. ನೀನು ನನಗೆ ಪ್ರೀಯನಾಗಿರುವಿ.

ವಿವರಣೆ:- (೧) ೬೫ ನೆಯೆ ಹಾಗು ೬೬ ನೆಯಮಂತ್ರಗಳೆರಡು ಗೀತಾ ಸರಸ್ಸಿನಲ್ಲಿ ಅರಳಿನಿಂತ ಕಮಲ ಕುಸುಮಗಳು! ಭಗವಂತನು ಇಲ್ಲಿ ತನ್ನ ಅಂತ ರಂಗವನ್ನೇ ತೆರೆದು ತೋರಿಸಿದ್ದಾನೆ. ಧರ್ಮಾಚಾರ್ಯರಿಗೆ, ತತ್ತ್ವಜ್ಞಾನಿಗಳಿಗೆ, ಸಾಧಕರಿಗೆ ಅತ್ಯಂತ ಹೃದ್ಯವಾದ ಉಪದೇಶ ನೀಡಿದ್ದಾನೆ.

(೨) ಗೀತೆಯ ಸಿಂಹಾವಲೋಕನೆ ಮಾಡಿದಾಗ ಮೂರು ಪ್ರಮುಖ ವಿಷಯಗಳು ಕಾಣಬರುತ್ತವೆ (ಅ) ಕರ್ಮಯೋಗ: ಇದು ಸಾಂಸಾರಿಕ ವ್ಯಾಮೋ ಹವನ್ನು ನಾಶಮಾಡುತ್ತದೆ. (ಆ) ಭಕ್ತಿಯೋಗ : ಇದು ಅಹಂ – ಮಮ ಭಾವಗಳನ್ನು ಶಾಂತಗೊಳಿಸುತ್ತದೆ. (ಇ) ಜ್ಞಾನಯೋಗ: ಇದು ಜೀವ – ಬ್ರಹ್ಮರ ಪರಮ ಸಾಮರಸ್ಯವನ್ನು ಸಾಧಿಸಿಕೊಡುತ್ತದೆ. ಕರ್ಮಯೋಗದಲ್ಲಿ ಕರ್ಮಗಳ, ಕರ್ಮಫಲಗಳ ಹಾಗು ಕರ್ತೃ ಭಾವಗಳ ಸಮರ್ಪಣವಿದೆ. ಭಕ್ತಿ ಯೋಗದಲ್ಲಿ ಅಹಂಕಾರದ ಸಮರ್ಪಣವಿದೆ. ಜ್ಞಾನಯೋಗದಲ್ಲಿ ಸರ್ವವಿಧ ಭೇದಭಾವಗಳ ಸಮರ್ಪಣವಿದೆ. ಹದಿನೆಂಟೂ ಅಧ್ಯಾಯಗಳ ತುಂಬ ಈ ಮೂರು ಪ್ರಧಾನ ವಿಷಯಗಳು ಹರಡಿಕೊಂಡಿವೆ.

ಅರವತ್ತೈದನೆಯ ಮಂತ್ರವು ಆ ಮೂರು ಯೋಗಗಳನ್ನು ಸೂತ್ರ ರೂಪದಲ್ಲಿ ವಿವರಿಸಿದೆ. ಅದರಲ್ಲಿ ಬಂದ 'ಮದ್ಯಾಜಿ' ಎಂಬ ಪದವು ಕರ್ಮ ಯೋಗ - ನಿರ್ದೇಶಕ; 'ಮದ್ಭಕ್ತಃ' ಎಂಬ ಪದವು ಭಕ್ತಿಯೋಗ - ನಿರ್ದೇಶಕ; ಹಾಗು 'ಮನ್ಮನಾಃ' ಎಂಬ ಪದವು ಜ್ಞಾನಯೋಗ-ನಿರ್ದೇಶಕ! 'ಮಾಂ ನಮ ಸ್ಕುರು' ಎಂಬ ಪದದ್ವಯವು ಆ ಮೂರೂ ಯೋಗಗಳ ಅಂತಃಸಾರ!!

ಭಗವಂತ:- "ಅರ್ಜುನ, ನಾನು ಅವ್ಯಕ್ತ ದೇವ. ದೇಹ ಇಂದ್ರಿಯ ಮನ ಬುದ್ಧಿಗಳ ಆಚೆಗೆ ಅನಂತನಾಗಿ ವ್ಯಾಪಿಸಿದ ನಾನು ಜಾಗ್ರದಿ ಸರ್ವ ಅವಸ್ಥೆಗಳ ಪ್ರಕಾಶಕ, ಸಕಲ ತತ್ತ್ವಗಳ ಸಾಕ್ಷಿ. ನಿನ್ನ ಮನಸ್ಸನ್ನು ಬಾಹ್ಯ ವಿಷಯಗಳಿಂದ ಹಿಂದೆ ಸೆಳೆದುಕೊಂಡು ನನ್ನತ್ತ ಹರಿಬಿಡು; ಅದು ವಿಧಾನವಾಗಿ ಅನ್ನಮಯ, ಪ್ರಾಣಮಯ, ಮನೋಮಯ; ವಿಜ್ಞಾನಮಯ ಹಾಗು ಆನಂದಮಯ ಕೋಶಗಳನ್ನು ದಾಟಿ ವಿಮುಕ್ತ ಚಿದಾಕಾಶದತ್ತ ಪ್ರವೇಶಿಸಲಿ. ಆಗ ಆ ಮನೋ ಗತ ಸಕಲ ವೃತ್ತಿಗಳು ಅಡಗುತ್ತವೆ. ಮನಸ್ಸಿನಲ್ಲಿ ಪ್ರತಿಫಲಿಸಿದ ನಿನ್ನ ಜೀವ ಚೈತನ್ಯವು ಪರಮಾಕಾಶರೂಪನಾದ ನನ್ನಲ್ಲಿ ಒಂದಾಗುವದು! ಪರಮ ಶಾಂತಿ ಸಮನಿಸುವದು! ಇದೇ ಕ್ಷಣ ಆ ದಿವ್ಯಶಾಂತಿಸಿದ್ಧಿಗಾಗಿ ಸಿದ್ಧನಾಗು; ಅನಾತ್ಮ ವಿಷಯಗಳನ್ನು ಮರೆತು ಬಿಡು. ನಿನ್ನ ವಿಮಲ ಮನಸ್ಸನ್ನು ನನ್ನಲ್ಲಿ ನಿಶ್ಚಲ ಗೊಳಿಸು, 'ಮನ್ಮನಾ ಭವ'!

"ಪಾರ್ಥ, ನಿನ್ನ ಹೃದಯದಲ್ಲಿ ಪ್ರೇಮರಸ ತುಂಬಿದೆ. ಆ ಅಪೌರುಷ್ಯ ರಸ

ವನ್ನು ಕ್ಷುಲ್ಲಕ ವಿಷಯಗಳಿಗಾಗಿ ಚೆಲ್ಲಿ ಕೊಡಬೇಡ ಅಥವಾ ಇಂದ್ರ ಚಂದ್ರರಂಥ ಕ್ಷುದ್ರ ದೇವತೆಗಳಿಗೆ ಧಾರೆಯೆರೆಯಬೇಡ. ಸರ್ವವಿಶ್ವಾಧಾರನಾದ ನನ್ನನ್ನೇ ವರಿಸು, ಆ ಪ್ರೇಮರಸಾಮೃತವನ್ನು ನನಗೆ ನಿವೇದಿಸು. ನಿನ್ನ ಮಾತು ಮನ ಬುದ್ಧಿಗಳಲ್ಲಿ ನನ್ನ ರೂಪೇ ಸ್ಥಿರವಾಗಿ ನಿಲ್ಲಲಿ. ನಾನೇ ನಿನ್ನ ತಂದೆ ತಾಯಿ ಬಂಧು ಬಳಗ ಮಿತ್ರ ಸುಹೃದ ಎಂದು ಭಾವಿಸು. ಒಂದೇ ಶಬ್ದದಲ್ಲಿ ಹೇಳುವದಾದರೆ 'ಮದ್ಭಕ್ತೋ ಭವ'! ನನ್ನ ಭಕ್ತನಾಗು!

"ಕುರುಕುಲಭಾನುವೆ, ನೀನು ಬಾಳಿರುವಷ್ಟು ಕಾಲ ಎಲ್ಲ ರೀತಿಯಿಂದ ದುಡಿ. ದುಡಿತದ ಫಲ ಮತ್ತು ಕರ್ತೃಭಾವಗಳನ್ನು ನನ್ನಲ್ಲಿ ಹವನ ಮಾಡು 'ಮದ್ಯಾಜಿ'! ನಿನ್ನ ಜೀವನವೆಂಬುವದು ಯಜ್ಞ; ಜಗತ್ತು ಯಜ್ಞನಿಲಯ; ನಾನೇ ಸರ್ವಭಕ್ಷಕನಾದ ಚಿದಗ್ನಿ. ನಿನ್ನ ಮನಸ್ಸು ದರ್ವಿ. ದುಡಿದು ಪಡೆದ ಸಂಪದವೆಲ್ಲ ಹವ್ಯ, ಜೀವನಾವಧಿ. ಒಂದು ಕ್ಷಣ ಬಿಡದೆ ನನ್ನಲ್ಲಿ ಹವ್ಯಗಳನ್ನು ಹವಿಸು! ಅದು ಹವನ; ಅದು ನನಗೆ ಪ್ರಿಯ.

"ಮದ್ಯಾಜಿ, ಮದ್ಭಕ್ತೋ ಭವ, ಮನ್ಮನಾಭವ ಎಂಬ ನನ್ನ ಮೂರೂ ಆದೇಶಗಳನ್ನು ಪರಿಪಾಲಿಸಿದಿ ಎಂದೇ ತಿಳಿ, ಆಗ ನಿನ್ನಂತರಂಗದಲ್ಲಿ ಗರ್ವ ತಲೆ ಎತ್ತೀತು, ಜೋಕೆ. ಅಭಿಮಾನ ಅಭಿನಿವೇಶಗಳು ನಿನ್ನ ಬಳಿ ಸುಳಿಯದಂತೆ ನೋಡಿಕೊ. ಜನರ ಪ್ರಶಂಸೆಗೆ ಮಾರುಹೋಗಬೇಡ. ಪರಮಾತ್ಮನಾದ ನನ್ನೆದುರು ಸದಾ ಕೈ ಮುಗಿದಿರು; 'ಮಾಂ ನಮಸ್ಕುರು.' ನನ್ನ ಸಾಕಾರ ರೂಪಾದ ವಿಶ್ವಕ್ಕೆಲ್ಲ ನಮಿಸು. ನಿನ್ನ ತಲೆ ಬಾಗಿರಲಿ, ಮನಸ್ಸು ಮಣಿದಿರಲಿ!

"ಸವ್ಯಸಾಚಿಯೆ, ನೀನು ಈ ನಾಲ್ಕು ಆದೇಶಗಳನ್ನು ಚಾಚೂ ತಪ್ಪದೆ ಪಾಲಿಸಿದೆಯಾದರೆ, ಪ್ರತಿಜ್ಞೆ ಮಾಡಿ ಹೇಳುವೆ, ನನ್ನನ್ನೇ ಹೊಂದುವಿ! ಮಾಮೇವೈಷ್ಯಸಿ. ನನ್ನೊಂದಿಗೆ ಒಂದಾಗಿ ನಿಲ್ಲುವಿ."

ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥೬೬॥

ಭಾವ: ಉಳಿದೆಲ್ಲ(ಅನಾತ್ಮ) ಧರ್ಮಗಳನ್ನು ಪರಿತ್ಯಾಗ ಮಾಡಿ ನನಗೊಬ್ಬನಿಗೆಯೇ ಶರಣಾಗತನಾಗು. ನಾನು ನಿನ್ನನ್ನು ಸರ್ವ ಪಾಪಗಳಿಂದ ಬಿಡಿಸುವೆನು. ಶೋಕಿಸಬೇಡ.

ವಿವರಣ:–"ಅರ್ಜುನ, ಮಾನವನಿರ್ಮಿತವಾದ ಸಂಪ್ರದಾಯಗಳು, ಜಾತಿ ಮತ ಪಂಥಗಳು, ವರ್ಣ ಆಶ್ರಮಗಳು ಹಾಗು ವಿವಿಧ ಧರ್ಮಗಳು ಕಾಲ ದೇಶಗಳಿಂದ ಪರಿಮಿತವಾಗಿವೆ; ಭೇದಭಾವನೆಗೆ ಆಸ್ಪದವಿತ್ತಿವೆ; ವ್ಯಕ್ತಿ ಸಮಾಜಗಳನ್ನು ಆಕುಂಚನಗೊಳಿಸುವ ಆ ಎಲ್ಲ ಧರ್ಮಗಳನ್ನು ಪರಿತ್ಯಜಿಸು (ಸರ್ವ ಧರ್ಮಾನ್ ಪರಿತ್ಯಜ); ವಿಶ್ವಾತ್ಮನಾದ ನನನ್ನೇ ಆಶ್ರಯಿಸು. ನಾನು ಅದ್ವಯ ಚೇತನ, ಅಮರ ಹಾಗು ಅಪರಿಮಿತ ವಸ್ತು. ನನ್ನಲ್ಲಿಯೇ ನಿನ್ನ ಮನಸ್ಸನ್ನು ಸಂಪೂರ್ಣ

ವಾಗಿ ನಿಹಿತಗೊಳಿಸಿದೆಯಾದರೆ ನಿನ್ನೆಲ್ಲ ಪಾಪಗಳನ್ನು ತೊಳೆದು ಹಾಕುವೆ; ಚಿರಂತನವಾದ ಮುಕ್ತಿಯನ್ನೀಯುವೆ. ಸರ್ವಥಾ ಚಿಂತಿಸಬೇಡ; 'ಮಾ ಶುಚಃ' ನನ್ನ ಆದೇಶವಂತೆ ವರ್ತಿಸು!"

ಉಪಸಂಹಾರ:–'ಅಶೋಚ್ಯಾನ್, ಎಂಬ ಪದಪ್ರಯೋಗದಿಂದ ಪ್ರಾರಂಭ ವಾದ ಪವಿತ್ರ ಉಪದೇಶವು 'ಮಾ ಶುಚಃ' ಎಂಬಲ್ಲಿಗೆ ಪೂರ್ಣವಾಗಿದೆ. ಅಜ್ಞ ಜೀವನು ಶೋಕಮಾಡುತ್ತಾನೆ; ನಿಷ್ಕಾಮ ಕರ್ಮಯೋಗ, ಅವ್ಯಭಿಚಾರ ಭಕ್ತಿ ಯೋಗ ಹಾಗು ವಿನಿರ್ಮಲ ಜ್ಞಾನಯೋಗಗಳನ್ನು ಅಳವಡಿಸಿಕೊಂಡರೆ ಅದೇ ಜೀವನು ಶೋಕನೀಗಿ ವಿಶೋಕನಾಗುತ್ತಾನೆ, ಅಖಂಡ ಶಾಂತಿ ಪೊಂದುತ್ತಾನೆ; ಇದೇ ಭಗವಂತನು ಗೀತೆಯ ಮೂಲಕ ಜಗತ್ತಿಗಿತ್ತ ಮಹಾ ಸಂದೇಶ.

ಸಂಬಂಧ:– ತಾನಿತ್ತ ಅಮರ ವಿದ್ಯೆಯು ಉಳಿಯಬೇಕು, ಜಗದ ತುಂಬ ಹರಡಬೇಕು ಎಂದು ಬಯಸುವ ಭಗವಂತನು ಕೆಲವು ಸೂಚನೆಗಳನ್ನೀಯುತ್ತಾನೆ.

ಇದಂ ತೇ ನಾಪತಸ್ಕಾಯ ನಾಭಕ್ತಾಯ ಕದಾಚನ ।
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥೬೭॥

ಭಾವ:– ತಪಾಚರಣೆ ಮಾಡದ, ಭಕ್ತಿಯಿಲ್ಲದ, ಕೇಳಲಿಚ್ಛಿಸದ, ಸೇವೆ ಮಾಡಬಯಸದ ಹಾಗು ನನ್ನನ್ನು ದೂಷಿಸುವ ಯಾವನಿಗೂ ಎಂದಿಗೂ ಈ ನಿನಗೆ ಹೇಳಲಾದ ವಿದ್ಯೆಯನ್ನು ಹೇಳಕೂಡದು.

ವಿವರಣ:– ಹದವಾದ ಭೂಮಿಯಲ್ಲಿ ಬಿದ್ದ ಬೀಜಗಳು ಮಾತ್ರ ಸುಫಲ ನೀಡುತ್ತವೆ: ಹಾಗೆ ಹದಗೊಂಡ ಹೃದಯದಲ್ಲಿ ಪ್ರವೇಶಿಸಿದ ಜ್ಞಾನವಚನಗಳು ಮಾತ್ರ ಸತ್ಫಲ ಕೊಡಬಲ್ಲವು; ಈ ಸಂಗತಿಯನ್ನು ಲಕ್ಷ್ಯದಲ್ಲಿರಿಸಿ ಭಗವಂತನು ಅರ್ಜುನನಿಗೆ, ಆ ಮೂಲಕ ಸರ್ವ ಬೋಧಕ ಗುರುಗಳಿಗೆ, ಸೂಕ್ತ ಸಲಹೆ ನೀಡು ತ್ತಾನೆ.

"ಅರ್ಜುನ, ನಾನು ನಿನಗೆ ಕೊಟ್ಟ ಆತ್ಮವಿದ್ಯೆಯೊಂದು ಅಮೌಲ್ಯ ರತ್ನ. ಅದರ ಹಿರಿಮೆ ಅರಿಯದ ಅಜ್ಞರ ಉಡಿಗೆ ಅದನ್ನು ನೀಡಬೇಡ. ಅವರು ಅದನ್ನು ಪ್ರಾಪಂಚಿಕ ಕೊಳಚೆಯಲ್ಲಿ ಚೆಲ್ಲಿಬಿಟ್ಟಾರು. ಹೃದಯದಿಂದ ಹರಿದು ಬಂದ ನನ್ನ ಅಮೃತ ವಚನಗಳೆಲ್ಲ ಮಣ್ಣು ಪಾಲಾದಾವು.

" ಹಗಲು ರಾತ್ರಿ ವಿಷಯಗಳಲ್ಲಿ ಆಸಕ್ತರಾದ ಇಂದ್ರಿಯಾರಾಮಿಗಳು ಕಾಮುಕರು ಹಾಗು ವಿಲಾಸಿಗಳು ' ಅತಪಸ್ಕರು'. ಕಲಿತ ವಿದ್ಯೆ, ಮಾಡಿದ ತಪ, ಗಳಿಸಿದ ಭೌತ ಸಂಪತ್ತು ಇವುಗಳಿಂದ ಉನ್ಮತ್ತರಾದ ಅಹಂಕಾರಿಗಳು ' ಅಭಕ್ತರು'. ಶಾಬ್ದಿಕ ಜ್ಞಾನ ಮತ್ತು ಶಾಬ್ದಿಕ ಭಕ್ತಿಯನುಳ್ಳ ಆಡಂಬರ ಶೀಲರು ' ಅಶುಶ್ರೂಗಳು '; ಅವರಿಗೆ ಸೇವೆ ಎಂದರೆ ಮೈಮುಳ್ಳು; ಶಾಸ್ತ್ರ ಕೇಳುವಲ್ಲಿ ನಿರುತ್ಸಾಹಿಗಳು. ಹೃದಯದಲ್ಲಿ ಮಾತ್ಸರ್ಯ, ಮಾತಿನಲ್ಲಿ ಕಠೋ ರತೆ, ನಡತೆಯಲ್ಲಿ ದ್ವೇಷ ಉಳ್ಳವರು 'ಅಸೂಯಾಪರರು'. ಪಾರ್ಥ, ಈ ನಾಲ್ಕು

ದಲ್ಲಿ ಅಹಂ ಇದೆ, ಮೋಹ ಇದೆ, ಸ್ವಾರ್ಥಮತಿ ಇದೆ. ಇವರ ಅಂತರಂಗದಲ್ಲಿ ಕಲ್ಲು ಮುಳ್ಳುಗಳು ಹರಡಿಕೊಂಡಿವೆ. ಇವರಿಗೆ ನನ್ನ ಪವಿತ್ರ ವಿದ್ಯೆಯನ್ನು ನೀಡ ಲಾಗದು."

ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥೬೮॥

ಭಾವ:– ಯಾವನು ಶ್ರೇಷ್ಠ ಈ ರಹಸ್ಯವನ್ನು ನನ್ನ ಭಕ್ತರಿಗೆ ಹೇಳುತ್ತಾನೆಯೋ ಅವನು ನನ್ನಲ್ಲಿ ಪರಮಭಕ್ತಿಯನ್ನು ಮಾಡಿ ನನ್ನನ್ನೇ ಹೊಂದುತ್ತಾನೆ. ಇದರಲ್ಲಿ ಸಂದೇಹವಿಲ್ಲ.

ವಿವರಣೆ:– ಭಗವಂತ:– "ಪಾರ್ಥ, ಯಾವನು ನನ್ನ ಈ ಗುಹ್ಯತಮ ಆತ್ಮವಿದ್ಯೆಯನ್ನು ನನ್ನನ್ನು ಪ್ರೀತಿಸುವ ಭಕ್ತರಿಗೆ ಹೇಳುತ್ತಾನೆಯೋ ಅವನು ನನಗೆ ಬಹು ಮೆಚ್ಚಿನವ. ಅವನು ಮಾಯೆಯ ಭೋಗಜಾಲದಿಂದ ಪಾರಾಗಿ ನನ್ನಲ್ಲಿ ಸಾಮರಸ್ಯ ಹೊಂದುತ್ತಾನೆ."

ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥೬೯॥

ಭಾವ:– "ಅರ್ಜುನ, ನನ್ನ ಸಂದೇಶವನ್ನು ಲಕ್ಷವಿಟ್ಟು ಕೇಳುವವನು ಪ್ರಿಯಕೃತ್; ಕೇಳಿದುದನ್ನು ಸರಿಯಾಗಿ ತಿಳಿವವನು ಪ್ರಿಯಕೃತ್ತರ; ಕೇಳಿ ತಿಳಿದುದನ್ನು ಅನುಭವಿಸಿ, ಬಳಿಕ, ಭಕ್ತ ಜನಾಂಗದಲ್ಲಿ ಉಪದೇಶಿಸುವವನು ನನಗೆ ಪ್ರಿಯಕೃತ್ತಮ. ಈ ಲೋಕದಲ್ಲಿ ಅವನಿಗಿಂತ ಪ್ರಿಯರಾದವರು ನನಗಾರೂ ಇಲ್ಲ."

ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।
ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥೭೦॥

ಭಾವ:– ಯಾವನು ನಮ್ಮಿಬ್ಬರ ಈ ಪಾವನ–ಸಂವಾದವನ್ನು ಅಧ್ಯಯನ ಮಾಡುವನೋ ಅವನು ನನ್ನನ್ನು ಜ್ಞಾನಯಜ್ಞದ ಮೂಲಕ ಪೂಜಿಸಿದಂತೆಯೇ ಸರಿ. ಅವನಿಗೆ ನಾನು ಪ್ರೀತಿಯುವನಾಗುವೆನು. ಇದು ನನ್ನ ನಿಶ್ಚಯ.

ವಿವರಣೆ:– "ಭಾರತ, ನಮ್ಮಿಬ್ಬರ ಇಲ್ಲಿಯವರೆಗೆ ನಡೆದು ಬಂದ ಆಧ್ಯಾತ್ಮಿಕ ಸಂಭಾಷಣೆ ಪರಪಕ್ಷಖಂಡನಾತ್ಮಕ ಜಲ್ಪವಲ್ಲ, ಉಭಯಪಕ್ಷ ಖಂಡನಾತ್ಮಕ ವಿತಂಡವಲ್ಲ; ಆದರೆ ಅದು ಸತ್ಯದರ್ಶಕ ಸಂವಾದ, ಅನುಪಮ ತತ್ತ್ವ ಚಿಂತನ! ಅದನ್ನು ಬರೆದು ಓದುವವ, ಕೇಳಿ ತಿಳಿಯುವವ, ಹೇಳಿ ಸಂತೋಷಿಸುವವ ನನಗೆ ಆತ್ಮೀಯ. ಅವನಿಗೆ ನನ್ನ ಹೃದಯದಲ್ಲಿ ಸುಸ್ಥಿರ ಸ್ಥಾನವಿದೆ, ಈ ಮಾತು ಶತಶಃ ಖಚಿತ."

ಶ್ರದ್ಧಾವಾನನಸೂಯಶ್ಚ ಶ್ರುಣುಯಾದಪಿ ಯೋ ನರಃ ।

ವಾಗಿ ನಿಹಿತಗೊಳಿಸಿದೆಯಾದರೆ ನಿನ್ನೆಲ್ಲ ಪಾಪಗಳನ್ನು ತೊಳೆದು ಹಾಕುವೆ; ಚಿರಂತನವಾದ ಮುಕ್ತಿಯನ್ನೀಯುವೆ. ಸರ್ವಥಾ ಚಿಂತಿಸಬೇಡ; 'ಮಾ ಶುಚಃ' ನನ್ನ ಆದೇಶದಂತೆ ವರ್ತಿಸು!"

ಉಪಸಂಹಾರ:–'ಅಶೋಚ್ಯಾನ್, ಎಂಬ ಪದಪ್ರಯೋಗದಿಂದ ಪ್ರಾರಂಭ ವಾದ ಪವಿತ್ರ ಉಪದೇಶವು 'ಮಾ ಶುಚಃ' ಎಂಬಲ್ಲಿಗೆ ಪೂರ್ಣವಾಗಿದೆ. ಅಜ್ಞ ಜೀವನು ಶೋಕಪಡುತ್ತಾನೆ; ನಿಷ್ಕಾಮ ಕರ್ಮಯೋಗ, ಅವ್ಯಭಿಚಾರ ಭಕ್ತಿ ಯೋಗ ಹಾಗು ವಿನಿರ್ಮಲ ಜ್ಞಾನಯೋಗಗಳನ್ನು ಅಳವಡಿಸಿಕೊಂಡರೆ ಅದೇ ಜೀವನು ಶೋಕನೀಗಿ ವಿಶೋಕನಾಗುತ್ತಾನೆ, ಅಖಂಡ ಶಾಂತಿ ಪೊಂದುತ್ತಾನೆ; ಇದೇ ಭಗವಂತನು ಗೀತೆಯ ಮೂಲಕ ಜಗತ್ತಿಗಿತ್ತ ಮಹಾ ಸಂದೇಶ.

ಸಂಬಂಧ:– ತಾನಿತ್ತ ಅಮರ ವಿದ್ಯೆಯು ಉಳಿಯಬೇಕು, ಜಗದ ತುಂಬ ಹರಡಬೇಕು ಎಂದು ಬಯಸುವ ಭಗವಂತನು ಕೆಲವು ಸೂಚನೆಗಳನ್ನೀಯುತ್ತಾನೆ.

ಇದಂ ತೇ ನಾಪತಸ್ಕಾಯ ನಾಭಕ್ತಾಯ ಕದಾಚನ ।
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥೬೭॥

ಭಾವ:– ತಪಾಚರಣೆ ಮಾಡದ, ಭಕ್ತಿಯಿಲ್ಲದ, ಕೇಳಲಿಚ್ಛಿಸದ, ಸೇವೆ ಮಾಡಬಯಸದ ಹಾಗು ನನ್ನನ್ನು ದೂಷಿಸುವ ಯಾವನಿಗೂ ಎಂದಿಗೂ ಈ ನಿನಗೆ ಹೇಳಲಾದ ವಿದ್ಯೆಯನ್ನು ಹೇಳಕೂಡದು.

ವಿವರಣ:– ಹದವಾದ ಭೂಮಿಯಲ್ಲಿ ಬಿದ್ದ ಬೀಜಗಳು ಮಾತ್ರ ಸುಫಲ ನೀಡುತ್ತವೆ: ಹಾಗೆ ಹದಗೊಂಡ ಹೃದಯದಲ್ಲಿ ಪ್ರವೇಶಿಸಿದ ಜ್ಞಾನವಚನಗಳು ಮಾತ್ರ ಸತ್ಫಲ ಕೊಡಬಲ್ಲವು; ಈ ಸಂಗತಿಯನ್ನು ಲಕ್ಷದಲ್ಲಿರಿಸಿ ಭಗವಂತನು ಅರ್ಜುನನಿಗೆ, ಆ ಮೂಲಕ ಸರ್ವ ಬೋಧಕ ಗುರುಗಳಿಗೆ, ಸೂಕ್ತ ಸಲಹೆ ನೀಡು ತ್ತಾನೆ.

"ಅರ್ಜುನ. ನಾನು ನಿನಗೆ ಕೊಟ್ಟ ಆತ್ಮವಿದ್ಯೆಯೊಂದು ಅಪೌಲ್ಯ ರತ್ನ. ಅದರ ಹಿರಿಮೆ ಅರಿಯದ ಅಜ್ಞರ ಉಡಿಗೆ ಅದನ್ನು ನೀಡಬೇಡ. ಅವರು ಅದನ್ನು ಪ್ರಾಪಂಚಿಕ ಕೊಳಚೆಯಲ್ಲಿ ಚೆಲ್ಲಿಬಿಟ್ಟಾರು. ಹೃದಯದಿಂದ ಹರಿದು ಬಂದ ನನ್ನ ಅಮೃತ ವಚನಗಳೆಲ್ಲ ಮಣ್ಣು ಪಾಲಾದಾವು.

" ಹಗಲು ರಾತ್ರಿ ವಿಷಯಗಳಲ್ಲಿ ಆಸಕ್ತರಾದ ಇಂದ್ರಿಯಾರಾಮಿಗಳು ಕಾಮುಕರು ಹಾಗು ವಿಲಾಸಿಗಳು ' ಅತಪಸ್ಕರು'. ಕಲಿತ ವಿದ್ಯೆ. ಮಾಡಿದ ತಪ, ಗಳಿಸಿದ ಭೌತ ಸಂಪತ್ತು ಇವುಗಳಿಂದ ಉನ್ಮತ್ತರಾದ ಅಹಂಕಾರಿಗಳು ' ಅಭಕ್ತರು'. ಶಾಬ್ದಿಕ ಜ್ಞಾನ ಮತ್ತು ಶಾಬ್ದಿಕ ಭಕ್ತಿಯನುಳ್ಳ ಆಡಂಬರ ಶೀಲರು ' ಅಶುಶ್ರೂಗಳು '; ಅವರಿಗೆ ಸೇವೆ ಎಂದರೆ ಮೈಮುಳ್ಳು; ಶಾಸ್ತ್ರ ಕೇಳುವಲ್ಲಿ ನಿರುತ್ಸಾಹಿಗಳು. ಹೃದಯದಲ್ಲಿ ಮಾತ್ಸರ್ಯ, ಮಾತಿನಲ್ಲಿ ಕಠೋ ರತೆ, ನಡತೆಯಲ್ಲಿ ದ್ವೇಷ ಉಳ್ಳವರು 'ಅಸೂಯಾಪರರು'. ಪಾರ್ಥ, ಈ ನಾಲ್ವ

ದಲ್ಲಿ ಅಹಂ ಇದೆ, ಮೋಹ ಇದೆ, ಸ್ವಾರ್ಥಮತಿ ಇದೆ. ಇವರ ಅಂತರಂಗದಲ್ಲಿ ಕಲ್ಲು ಮುಳ್ಳುಗಳು ಹರಡಿಕೊಂಡಿವೆ. ಇವರಿಗೆ ನನ್ನ ಪವಿತ್ರ ವಿದ್ಯೆಯನ್ನು ನೀಡ ಲಾಗದು."

ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥೬೮॥

ಭಾವ:– ಯಾವನು ಶ್ರೇಷ್ಠ ಈ ರಹಸ್ಯವನ್ನು ನನ್ನ ಭಕ್ತರಿಗೆ ಹೇಳುತ್ತಾನೆಯೋ ಅವನು ನನ್ನಲ್ಲಿ ಪರಮಭಕ್ತಿಯನ್ನು ಮಾಡಿ ನನ್ನನ್ನೇ ಹೊಂದುತ್ತಾನೆ. ಇದರಲ್ಲಿ ಸಂದೇಹವಿಲ್ಲ.

ವಿವರಣೆ:– ಭಗವಂತ:– "ಪಾರ್ಥ, ಯಾವನು ನನ್ನ ಈ ಗುಹ್ಯತಮ ಆತ್ಮವಿದ್ಯೆಯನ್ನು ನನ್ನನ್ನು ಪ್ರೀತಿಸುವ ಭಕ್ತರಿಗೆ ಹೇಳುತ್ತಾನೆಯೋ ಅವನು ನನಗೆ ಬಹು ಮೆಚ್ಚಿನವ. ಅವನು ಮಾಯೆಯ ಭೋಗಜಾಲದಿಂದ ಪಾರಾಗಿ ನನ್ನಲ್ಲಿ ಸಾಮರಸ್ಯ ಹೊಂದುತ್ತಾನೆ."

ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥೬೯॥

ಭಾವ:– "ಅರ್ಜುನ, ನನ್ನ ಸಂದೇಶವನ್ನು ಲಕ್ಷವಿಟ್ಟು ಕೇಳುವವನು ಪ್ರಿಯಕೃತ್; ಕೇಳಿದುದನ್ನು ಸರಿಯಾಗಿ ತಿಳಿವವನು ಪ್ರಿಯಕೃತ್ತರ; ಕೇಳಿ ತಿಳಿದುದನ್ನು ಅನುಭವಿಸಿ, ಬಳಿಕ, ಭಕ್ತ ಜನಾಂಗದಲ್ಲಿ ಉಪದೇಶಿಸುವವನು ನನಗೆ ಪ್ರಿಯಕೃತ್ತಮ. ಈ ಲೋಕದಲ್ಲಿ ಅವನಿಗಿಂತ ಪ್ರಿಯರಾದವರು ನನಗಾರೂ ಇಲ್ಲ."

ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।
ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥೭೦॥

ಭಾವ:– ಯಾವನು ನಮ್ಮಿಬ್ಬರ ಈ ಪಾವನ–ಸಂವಾದವನ್ನು ಅಧ್ಯಯನ ಮಾಡುವನೋ ಅವನು ನನ್ನನ್ನು ಜ್ಞಾನಯಜ್ಞದ ಮೂಲಕ ಪೂಜಿಸಿದಂತೆಯೇ ಸರಿ. ಅವನಿಗೆ ನಾನು ಪ್ರೀತಿಯವನಾಗುವೆನು. ಇದು ನನ್ನ ನಿಶ್ಚಯ.

ವಿವರಣೆ:– "ಭಾರತ, ನಮ್ಮಿಬ್ಬರ ಇಲ್ಲಿಯವರೆಗೆ ನಡೆದು ಬಂದ ಆಧ್ಯಾತ್ಮಿಕ ಸಂಭಾಷಣೆ ಪರಪಕ್ಷಖಂಡನಾತ್ಮಕ ಜಲ್ಪವಲ್ಲ. ಉಭಯಪಕ್ಷ ಖಂಡನಾತ್ಮಕ ವಿತಂಡವಲ್ಲ; ಆದರೆ ಅದು ಸತ್ಯದರ್ಶಕ ಸಂವಾದ. ಅನುಪಮ ತತ್ತ್ವ ಚಿಂತನ! ಅದನ್ನು ಬರೆದು ಓದುವವ, ಕೇಳಿ ತಿಳಿಯುವವ, ಹೇಳಿ ಸಂತೋಷಿಸುವವ ನನಗೆ ಆತ್ಮೀಯ. ಅವನಿಗೆ ನನ್ನ ಹೃದಯದಲ್ಲಿ ಸುಸ್ಥಿರ ಸ್ಥಾನವಿದೆ, ಈ ಮಾತು ಶತಶಃ ಖಚಿತ."

ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।

ಸೋಽಪಿ ಮುಕ್ತಃ ಶುಭಾನ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಮ್॥೭೧॥

ಭಾವ:– "ದ್ವೇಷಭಾವನೆಯನ್ನು ಬಿಟ್ಟು, ನನ್ನಲ್ಲಿ ಪೂರ್ಣಶ್ರದ್ಧೆ ತಾಳಿ, ಬಹು ಪ್ರೇಮದಿಂದ ನನ್ನ ಉಪದೇಶಾಮೃತ ಸ್ವೀಕರಿಸುವ ಭಕ್ತನು ಹೀನ ಗುಣ ಧರ್ಮ–ಸಂಸ್ಕಾರಗಳಿಂದ ಮುಕ್ತನಾಗಿ ದೇಹಪಾತಾನಂತರ ಪುಣ್ಯಮಯ ದೇವ ಲೋಕಗಳಿಗೆ ಹೋಗುತ್ತಾನೆ. ಕಡೆಗೆ ನನ್ನತ್ತ ಬಂದು ಒಂದಾಗುತ್ತಾನೆ. "

ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।
ಕಚ್ಚಿದಜ್ಞಾನಸಂಮೋಹಃ ಪ್ರನಷ್ಟಸ್ತೇ ಧನಂಜಯ ॥೭೨॥

ಭಾವ:– " ಧನಂಜಯ ನಾನು ಇತ್ತ ದಿವ್ಯ ಆತ್ಮಜ್ಞಾನೋಪದೇಶವನ್ನು ಬಹು ಏಕಾಗ್ರ ಮನಸ್ಸಿನಿಂದ ಆಲಿಸಿದೆಯಲ್ಲವೆ(ಕಚ್ಚಿತ್)? ಈಗ ಹೇಳು, ಅಜ್ಞಾನ ಜನ್ಯವಾದ ನಿನ್ನ ಅನಾತ್ಮವ್ಯಾಮೋಹ ನಷ್ಟವಾಯಿತೆ? ಧರ್ಮ, ನೀತಿ, ಸತ್ಯ ಗಳ ದೀವಿಗೆ ನಿನ್ನಂತರಂಗದಲ್ಲಿ ಹತ್ತಿಕೊಂಡಿತೆ? ಸ್ಥಿತಪ್ರಜ್ಞ-ಸ್ಥಿತಿ ಅಂಗವಿಸಿತೆ? ಹೇಳು. ಪಾರ್ಥ, ಮನ ತೆರೆದು ಮಾತನಾಡು. ನಿನಗೆ ಬ್ರಾಹ್ಮೀ ಸ್ಥಿತಿ ದೊರೆಯ ಲೇಬೇಕೆಂದು ನನ್ನ ಮನೀಷೆ. ಅಲ್ಲಿಯವರೆಗೂ ಉಪದೇಶಿಸಲು ನಾನು ಸಿದ್ಧ."

ಅರ್ಜುನ ಉವಾಚ

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।
ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥೭೩॥

ಭಾವ:– ನಿನ್ನ ಅನುಗ್ರಹದಿಂದ (ಪ್ರಾಪಂಚಿಕ) ಮೋಹ ನಷ್ಟವಾ ಯಿತು, (ಆತ್ಮತತ್ತ್ವವಿಷಯಕ) ಸ್ಮರಣ ಲಭಿಸಿತು. ಸಂದೇಹ ಅಳಿಯಿತು. ನಿನ್ನ ಉಪದೇಶದಂತೆ ನಡೆಯುವೆ.

ವಿವರಣ:– ಅರ್ಜುನ– "ಭಗವಂತ, ನನ್ನ ಮೇಲೆ ಅಪಾರ ಕರುಣೆ ತೋರಿ ಪರಮ ಪವಿತ್ರವಾದ ಆತ್ಮವಿದ್ಯೆಯನ್ನು ಬೋಧಿಸಿದಿ. ವಿಶ್ವರೂಪವನ್ನು ಅನುಗ್ರಹಿಸಿ ನನ್ನನ್ನು ಪುನೀತಗೊಳಿಸಿದಿ. ನಿನಗೆ ಸಹಸ್ರ ವಂದನೆಗಳು.

" ದೇವ, ನಿನ್ನ ಕೃಪಾಪ್ರಸಾದದಿಂದ ನನ್ನ ಸಾಂಸಾರಿಕ ವ್ಯಾಮೋಹ ಅಶೇಷವಾಗಿ ಅಳಿದಿದೆ. ನಾನು ಅನಾತ್ಮವಸ್ತುಗಳಾದ ದೇಹ ಇಂದ್ರಿಯ ಮನ ಬುದ್ಧಿಗಳಲ್ಲ, ಅಖಂಡ ಚೇತನಾತ್ಮನು, ಪ್ರತ್ಯಗಾತ್ಮಾಭಿನ್ನ ಪರಬ್ರಹ್ಮನು ಎಂಬ ನೈಜ ಸ್ಮರಣ ಉಂಟಾಗಿದೆ. ನನ್ನ ತಲೆಯಲ್ಲಿ ಸುತ್ತುತ್ತಿದ್ದ ಸಂದೇಹಗಳೆಲ್ಲ ಮರೆಯಾಗಿವೆ. ಜಾತಿ ಮತ ಕುಲ ಗೋತ್ರ ವರ್ಣ ಆಶ್ರಮಾದಿ ಕೃತಕ ಭಾವ ಬಂಧನಗಳು ಕಳಚಿಬಿದ್ದಿವೆ. ದೇವ ನಾನೀಗ ಪೂರ್ಣ ಸ್ವತಂತ್ರ! ನಿರ್ಮುಕ್ತ! ನಾನು ಸಚ್ಚಿದಾನಂದ ಘನ! ನಿತ್ಯ ಪರಿಪೂರ್ಣ ಬ್ರಹ್ಮ !!

"ಪ್ರಭೊ, ಶೋಕಸಂತಪ್ತನಾದ ನನಗೆ ದಿವ್ಯಶಾಂತಿಯನ್ನಿತ್ತೆ; ಅಜ್ಞಾ ನಾಂಧಕಾರದಲ್ಲಿ ತೊಳಲುತ್ತಿದ್ದ ನನಗೆ ಚೈತನ್ಯಭಾನುವಿನ ದರ್ಶನ ಮಾಡಿಸಿದೆ. ನನ್ನ ಅಂತಶ್ಚಕ್ಷು ತೆರೆದಿದೆ; ನನ್ನ ಹೃದಯ ಪೀಠದ ಮೇಲೆ ನಿನ್ನ ಚರಣಕಮಲ

ಗಳನ್ನು ಕಾಣುತ್ತಿದ್ದೇನೆ. ನೀನು ಜ್ಞಾನಭಾಸ್ಕರ, ಆನಂದ ಸಾಗರ! ನನ್ನ ಪರಮಾರಾಧ್ಯ ಗುರು! ಇಗೋ, ನಾ ನಿನ್ನ ದಾಸ. ನೀನು ನಡೆಸಿದಂತೆ ನಡೆವೆ, ಮಾಡಿಸಿದಂತೆ ಮಾಡುವೆ."

ಸಂಜಯ ಉವಾಚ

ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।
ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥೭೪॥

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಕರ್ಮಸಂನ್ಯಾಸಯೋಗೋನಾಮ ಅಷ್ಟಾದಶೋಽಧ್ಯಾಯಃ

ಭಾವ:– ಸಂಜಯ:– "ಮಹಾರಾಜ, ಮಹಾತ್ಮನಾದ ವಾಸುದೇವನ ಹಾಗು ಕಲಿ ಪಾರ್ಥನ ನಡುವೆ ನಡೆದ ಅದ್ಭುತವೂ ರೋಮಾಂಚನಕಾರಿಯೂ ಆದ ಸಂವಾದವನ್ನು ಆಲಿಸಿದೆ.

ವ್ಯಾಸಪ್ರಸಾದಾಚ್ಛ್ರುತವಾನೇತದ್ ಗುಹ್ಯಮಹಂ ಪರಮ್ ।
ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಮ್ ॥೭೫॥

ಭಾವ:– ವೇದವ್ಯಾಸರ ಅನುಗ್ರಹದಿಂದ ದೂರದರ್ಶನ-ದೂರಶ್ರವಣ ಶಕ್ತಿಯನ್ನು ಪಡೆದು ಸಾಕ್ಷಾತ್ ಯೋಗೇಶ್ವರನಾದ ಭಗವಂತನೇ ಬೋಧಿಸಿದ ಪರಮೋತ್ತಮ ವಚನಗಳನ್ನು ಕೇಳಿದೆ; ಕೇಳಿದುದನ್ನೆಲ್ಲ ಇದ್ದುದಿದ್ದಂತೆ ತಮ್ಮಲ್ಲಿ ಅರುಹಿದೆ.

ರಾಜನ್ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।
ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥೭೬॥

ಭಾವ:– "ಕೌರವೇಂದ್ರ, ಕೇಶವಾರ್ಜುನರ ಸಂವಾದ ಅದ್ಭುತ ಮತ್ತು ಪುಣ್ಯಪ್ರದ. ಅದನ್ನು ಮತ್ತೆ ಮತ್ತೆ ಸ್ಮರಿಸಿ ಸಂತೋಷಪಡುತ್ತಿದ್ದೇನೆ.

ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ।
ವಿಸ್ಮಯೋ ಮೇ ಮಹಾನ್ರಾಜನ್ಹೃಷ್ಯಾಮಿ ಚ ಪುನಃ ಪುನಃ ॥೭೭॥

ಭಾವ:– ಆ ಮಹಾನ್ ವಿರಾಟದರ್ಶನವನ್ನು ನೆನೆಸಿಕೊಂಡರಂತು ಮೈನವಿರೇಳುತ್ತದೆ; ಮನಸ್ಸು ಹರ್ಷಾತಿರೇಕದಿಂದ ವಿಸ್ಮಯಗೊಳ್ಳುತ್ತದೆ.

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥೭೮॥

ಭಾವ:-"ಧೃತರಾಷ್ಟ್ರ, ಕೃಷ್ಣನು ಯೋಗೇಶ್ವರ; ಅರ್ಜುನನು ಆತ್ಮಜ್ಞಾನ ರಸವನೀಂಟಿದ ಪುಣ್ಯಾತ್ಮ. ಎಲ್ಲಿ ಶ್ರೀಕೃಷ್ಣನೋ ಎಲ್ಲಿ ಧನುರ್ಧಾರಿ ಪಾರ್ಥನೋ ಅಲ್ಲಿಯೇ ಶ್ರೀ, ವಿಜಯ, ವೈಭವ ಹಾಗು ನೀತಿಗಳು ಇರುವವೆಂದು ನನ್ನ ನಿಶ್ಚಿತ ಅಭಿಪ್ರಾಯ."

(ಕೃಷಿರ್ಭೂವಾಚಕಃ ಶಬ್ದಃ ಣಶ್ಚ ನಿರ್ವೃತಿ ವಾಚಕಃ ।
ತಯೋರೈಕ್ಯಂ ಪರಂಬ್ರಹ್ಮ ಕೃಷ್ಣ ಇತ್ಯಭಿಧೀಯತೇ ॥

ಕೃಷಿ ಶಬ್ದವು ಭೂವಾಚಕ(ಸತ್ ರೂಪ); ಣ ಶಬ್ದವು ನಿರ್ವೃತಿ ವಾಚಕ (ಆನಂದ ರೂಪ); ಅವೆರಡರ ಐಕ್ಯವೇ ಪರಬ್ರಹ್ಮನಾದ ಕೃಷ್ಣ ಎಂದು ಹೇಳಲ್ಪಡುತ್ತದೆ).

ಉಪಸಂಹಾರ:– 'ಜ್ಞಾನಂ ಲಬ್ಧ್ವಾ ಪರಾಂ ಶಾಂತಿಂ ನ ಚಿರೇಣಾಧಿಗಚ್ಛತಿ' 'ಗಚ್ಛಂತ್ಯಪುನರಾವೃತ್ತಿಂ ಜ್ಞಾನ ನಿರ್ಧೂತ ಕಲ್ಮಷಾಃ' ಇತ್ಯಾದಿ ನುಡಿಗಳು ಜ್ಞಾನವೇ ಕೈವಲ್ಯದ ಅತ್ಯಂತ ಸಾಧನ ಎಂದು ಪ್ರತಿಪಾದಿಸಿವೆ. 'ಪುರುಷಃ ಸಃ ಪರಃ ಪಾರ್ಥ ಭಕ್ತ್ಯಾಲಭ್ಯಸ್ತ್ವನನ್ಯಯಾ' 'ಮನ್ಮನಾಭವ ಮದ್ಭಕ್ತೋ ಭವ...ಮಾಮೇವೈಷ್ಯಸಿ' ಮುಂತಾದ ವಚನಗಳು ಭಕ್ತಿಯಿಂದ ಕೈವಲ್ಯ ಎಂದು ಬೋಧಿಸಿವೆ. 'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ' ಈ ಬಗೆಯ ಹಲವಾರು ಉಕ್ತಿಗಳು ಕರ್ಮದಿಂದ ಮೋಕ್ಷಸಿದ್ಧಿ ಎಂದು ಸ್ಪಷ್ಟಪಡಿಸಿವೆ. ಭಗವಂತನ ಈ ಮೂರು ಬಗೆಯ ಸೂಕ್ತಿಗಳಲ್ಲಿ ವಿರೋಧವಿಲ್ಲ. ಜ್ಞಾನ ಭಕ್ತಿ ಕರ್ಮಗಳು ಪರಸ್ಪರ ವಿರುದ್ಧ ಎಂದು ತಿಳಿಯುವದು ತಪ್ಪು. ಅವು ಪೂರಕವಾಗಿವೆ. ಅಂದರೆ ಅವುಗಳಲ್ಲಿ ಒಂದು ಇರದಿದ್ದರೂ ಮುಕ್ತಿ ಉಂಟಾಗದು. ಅನಾತ್ಮವ್ಯಾಮೋಹರೂಪ ಕತ್ತಲೆ ಕರಗಿ ಪುರುಷೋತ್ತಮನ ದರ್ಶನವಾಗಬೇಕಾದರೆ ಆತ್ಮಜ್ಞಾನ ಬೇಕು. ಆತ್ಮಜ್ಞಾನ ಉದಿಸಲು ದೇವಭಕ್ತಿ ಅವಶ್ಯ; ದೇವಭಕ್ತಿಗೆ ಚಿತ್ತಶುದ್ಧಿ ಅನಿವಾರ್ಯ. ಇನ್ನು ಚಿತ್ತಶುದ್ಧಿಯಾಗಬೇಕಾದರೆ ನಿಷ್ಕಾಮ ಕರ್ಮವು ಅತ್ಯಗತ್ಯ. ಸಾಧಕನು ಕರ್ತೃತ್ವಬುದ್ಧಿ ಮತ್ತು ಫಲಾಕಾಂಕ್ಷೆಗಳ ತೊರೆದು ಅನಾಸಕ್ತ ಕರ್ಮ ಆಚರಿಸಲಿ; ಆಗ ಅವನ ಅಂತರಂಗ ನಿರ್ಮಲಗೊಳ್ಳುವದು; ಪರಮಾತ್ಮನಲ್ಲಿ ಅನನ್ಯ ಭಕ್ತಿ ಹುಟ್ಟುವದು; ದೇವನ ಕೃಪಾ ಪ್ರಸಾದ ಲಭಿಸುವದು; ಆ ಪ್ರಸಾದಮಹಿಮೆಯಿಂದ ಅಹಂಬ್ರಹ್ಮಾಸ್ಮಿ ಎಂಬ ಜ್ಞಾನ ಸಮನಿಸುವದು. ಅಲ್ಲಿಗೆ ಸಾಧಕನು ಜೀವಭಾವ ನೀಗಿ ಅಖಂಡ ಪರಬ್ರಹ್ಮನಲ್ಲಿ ಸಮಾಲೀನಗೊಳ್ಳುವನು. ಅದುವೇ ನಿಜಕೈವಲ್ಯ! ಪರಮ ಮೋಕ್ಷ! ಇಂಥ ಮೋಕ್ಷವನ್ನು ಹೊಂದಿ ಸಕಲ ಜೀವಾತ್ಮರು ಸುಖಿಸಲಿ. ಎಂಬುದೇ ಭಗವಂತನ ಆಶಯು; ಇದೇ ಗೀತೆಯ ಸಾರಸಂಗ್ರಹ.

ಶ್ರೀಮಲ್ಲಿಕಾರ್ಜುನ ಗೀತಾವಚನಾಮೃತದ ಹದಿನೆಂಟನೆಯ ಬಿಂದುವು

* † *





